# ಇತಿಹಾಸ ದರ್ಶನ

## ಸಂಪುಟ ೨೬/೨೦೧೧

## (ರಜತೋತ್ಸವ ವರ್ಷ ಸಂಪುಟ)

೨೦೧೦ರ ನವೆಂಬರ್ ೧೩ ರಿಂದ ೧೫ ರವರೆಗೆ ಶ್ರೀ ಆದಿಚುಂಚನಗಿರಿ ಕ್ಷೇತ್ರದಲ್ಲಿ ಜ॥ ಆದಿಚುಂಚನಗಿರಿ ಸಂಸ್ಥಾನ ಮಠದ ಆಶ್ರಯದಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ.


ಸಂಪಾದಕರು

**ಡಾ॥ ಎಂ.ಜಿ. ನಾಗರಾಜ್**

**ಡಾ॥ ಪಿ.ವಿ. ಕೃಷ್ಣಮೂರ್ತಿ**



**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

**ITIHĀSA DARŚANA**

The Volume of the Scholarly papers presented and the General body Proceedings of the 24th Annual Conference of

**The Karnataka Ithihasa Academy** (Regd.,)
held at Adichunchanagiri Samstana Muṭṭ of Adichunchanagiri, Mandya Dist.
on 13th, 14th & 15th November 2010

**Volume 26 / 2011**

Pages : **504 + Lvi**

ಬೆಲೆ : ರೂ. ೪೦೦

ಪುಟಗಳು : ೫೦೪ + Lvi



Edited by : **Dr. M. G. Nagaraj**
**Dr. P. V. Krishna murthy**

ISBN No. 978-81-921255-0-3

Published by : Karnataka Itihasa Academy (Regd.)
B.M. Shri Kalabhavana premises
3rd Main, Narasimharaja Colony
Bangalore - 560 019

Price : ₹ **400/-**

### ಪ್ರಬಂಧಕಾರರ ಗಮನಕ್ಕೆ

೧. ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ **ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ.** ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ.

೨. ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಬರಹಗಳಿಗೆ 'ಇತಿಹಾಸ ದರ್ಶನ' ಮೀಸಲಾಗಿದೆ. ಅದರಲ್ಲಿ ವಿವಾದಾಸ್ಪದ ವಿಷಯಗಳಿಗೆ ಅವಕಾಶವಿಲ್ಲ.

೩. ಲೇಖನಗಳು **ಹಸ್ತಲಿಖಿತ** ೧೦ ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು **ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ.**

೪. ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕಳುಹಿಸುವಲ್ಲಿ, ಚಿತ್ರದ ಹಿಂಬದಿಯಲ್ಲಿ ಚಿತ್ರದ ಶೀರ್ಷಿಕೆ ಮತ್ತು ಲೇಖಕರ ಹೆಸರನ್ನು ಬರೆಯಬೇಕು. ಬರೆಯದೆ ಹೋದರೆ ಚಿತ್ರಗಳ ಪ್ರಕಟಣೆ ಕಷ್ಟವಾಗುತ್ತದೆ.

೫. ಈಗಿನ ೨೦ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ **ತಮ್ಮ ಪೂರ್ಣ ವಿಳಾಸದೊಡನೆ** ಸಮ್ಮೇಳನ ಮುಗಿದ ಎರಡು ತಿಂಗಳ ಒಳಗಾಗಿ, ಸಂಪಾದಕರು, **ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾದೆಮಿ, ಬಿ.ಎಂ.ಶ್ರೀ. ಕಲಾಭವನ ಆವರಣ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

೬. ಪ್ರಬಂಧದ ಲೇಖನದ ನಕಲು ಅಥವಾ ಜೆರಾಕ್ಸ್ ಪ್ರತಿಯ ಬದಲು ಲೇಖನದ ಮೂಲಪ್ರತಿಯನ್ನೆ ದಯವಿಟ್ಟು ಕಳುಹಿಸಬೇಕು. ಹಾಗೆಯೇ ಲೇಖನಗಳಲ್ಲಿ **ಲೇಖಕರು ತಮ್ಮ ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ.**

೭. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು ಬೇರೆಡೆ ಪ್ರಕಟ ಮಾಡಿದ್ದರೆ ಅಥವಾ ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ ದಯವಿಟ್ಟು ತಿಳಿಸಬೇಕೆಂದು ವಿನಂತಿ. ಮಂಡಿತ ಪ್ರಬಂಧಗಳು ಮೊದಲಿಗೆ ಅಕಾದೆಮಿಗೆ ಮೀಸಲು ಕಾಣಿಕೆ ಅಲ್ಲವೆ !

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



**ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠ**

ಬಾಳೇಹೊನ್ನೂರು–೫೭೭ ೧೧೨ ಚಿಕ್ಕಮಗಳೂರು ಜಿಲ್ಲೆ

**ಶ್ರೀಮದ್ ರಂಭಾಪುರಿ ವೀರಸಿಂಹಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು**
**ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು**

ದಿನಾಂಕ : ೨೦.೦೮.೨೦೧೧ ವಾಸ್ತವ್ಯ : ಬಾಳೆಹೊನ್ನೂರು

## ಶುಭಾಶೀರ್ವಾದ ಸಂದೇಶ

ಮಾನವ ಜೀವನ ಅಮೂಲ್ಯ. ಈ ಜೀವನ ವಿಶಾಲವು ಮತ್ತು ಸುಂದರವು ಆಗಬೇಕು. ವೈವಿಧ್ಯತೆಯಿಂದ ಕೂಡಿದ ಈ ಜಗತ್ತಿನಲ್ಲಿ ಮನುಷ್ಯ ಶಾಂತಿ ನೆಮ್ಮದಿಯಿಂದ ಬದುಕಿ ಬಾಳಬೇಕಾಗುತ್ತದೆ. ವಿದ್ಯೆ, ವಿವೇಚನೆ, ಚಿಂತನೆ, ಆತ್ಮವಿಶ್ಲೇಷಣೆ ಮತ್ತು ಧೈರ್ಯಗಳೇ ಈ ಗುರಿ ತಲುಪಿಸುವ ಮೆಟ್ಟಿಲುಗಳು. ಆತ್ಮ ವಿಶ್ವಾಸ, ನಿಶ್ಚಿತಗುರಿ ಮತ್ತು ಸಂಯಮ ಇವು ಮೂರು ಯಶದ ಹಾದಿಗೆ ಕರೆದೊಯ್ಯುವ ದಾರಿಗಳು. ಹರಿಯುವ ನೀರು ಸ್ವಚ್ಛವಾಗಿರುತ್ತದೆ. ಕೆರೆಕಟ್ಟಿ ಹೊಂಡದ ನೀರು ಬಹು ಬೇಗ ಕಲುಷಿತಗೊಳ್ಳುತ್ತದೆ. ನಿಜ ಜ್ಞಾನ ಎಂಬ ಶುದ್ಧನೀರು ಹೆಚ್ಚು ಹೆಚ್ಚು ಜನರಿಗೆ ಉಪಯೋಗವಾಗುತ್ತದೆ. ಇದರಿಂದ ಸಮಾಜ ಹಾಗೂ ಜನಕಲ್ಯಾಣ ಸಾಧ್ಯ. ನೀರಿಲ್ಲದ ನದಿ, ಅತಿಥಿ ಇಲ್ಲದ ಮನೆ, ಸ್ನೇಹ ಇಲ್ಲದ ಗೆಳತನ ವಿಶ್ವಾಸವಿಲ್ಲದ ಬಂಧುಬಳಗ ವ್ಯರ್ಥ. ಜೀವನದಲ್ಲಿ ಆದರ್ಶ ಮೌಲ್ಯಗಳ ಪರಿಪಾಲನೆ ಇಲ್ಲದೇ ಹೋದರೆ ಮಾನವ ಜೀವನ ವ್ಯರ್ಥವಾಗುತ್ತದೆ. ರಸ್ತೆಯಲ್ಲಿ ಬಿದ್ದ ಕಲ್ಲನ್ನು ಎಲ್ಲರೂ ತುಳಿಯುತ್ತಾರೆ. ಅದೇ ಕಲ್ಲನ್ನು ಒಬ್ಬ ಶಿಲ್ಪಿ ಸುಂದರ ಮೂರ್ತಿ ಮಾಡಿ ದೇವಾಲಯದಲ್ಲಿ ಪ್ರತಿಷ್ಠಾಪಿಸಿದರೆ ಎಲ್ಲರೂ ತಲೆಬಾಗುತ್ತಾರೆ ಮತ್ತು ಪೂಜಿಸುತ್ತಾರೆ. ಅಂತೆಯೇ **ಶ್ರೀಗುರು ಒಬ್ಬ ಶಿಲ್ಪಿಯಿದ್ದಂತೆ. ಮನುಷ್ಯನನ್ನು ಮಹಾದೇವನನ್ನಾಗಿ ಮಾಡುವ ಶಕ್ತಿ ಶ್ರೀಗುರುವಿಗೆ ಇದೆ.**

ಜೀವನದ ಶ್ರೇಯಸ್ಸಿಗೆ ಧರ್ಮ ಮತ್ತು ವಿಜ್ಞಾನ ಎರಡೂ ಅಗತ್ಯ. ಧರ್ಮದಿಂದ ಮಾರ್ಗ ಸಿಗುತ್ತದೆ. ವಿಜ್ಞಾನದಿಂದ ಪ್ರಗತಿ ಕಾಣುತ್ತೇವೆ. **ಧರ್ಮದ ಬಳಿ ಮಾರ್ಗವಿದೆ. ವೇಗವಿಲ್ಲ. ವಿಜ್ಞಾನದಲ್ಲಿ ವೇಗವಿದೆ; ಮಾರ್ಗವಿಲ್ಲ.** ಜೀವನದಲ್ಲಿ ವೇಗ ಹೋದರೆ ಜಡತ್ವ ಆವರಿಸುವುದು. ಧರ್ಮದ ಮಾರ್ಗ ಇಲ್ಲದೇ ವಿಜ್ಞಾನದ ವೇಗ ಎಂಬುದು ಜೀವನದಲ್ಲಿ ಸಂಕಷ್ಟವನ್ನು ತರಬಲ್ಲದು. ಆದ್ದರಿಂದ ಮನುಷ್ಯ ಜೀವನದಲ್ಲಿ ಬಹಳಷ್ಟು ಎಚ್ಚರಿಕೆಯಿಂದ ಹೆಜ್ಜೆ ಹಾಕಬೇಕು. ಧರ್ಮ ಮತ್ತು ವಿಜ್ಞಾನ ಪೂರಕ. ಅರಿತು ಆದರ್ಶಗಳನ್ನು ಪರಿಪಾಲಿಸುವುದರಿಂದ ಜೀವನದಲ್ಲಿ ಸುಖ ಶಾಂತಿ ಕಾಣಲು ಸಾಧ್ಯ.

ಭವಿಷ್ಯತ್ತಿನ ಬದುಕಿಗೆ ಇತಿಹಾಸ ಮತ್ತು ಪರಂಪರೆ ಸ್ಫೂರ್ತಿ. ಪ್ರಾಚೀನ ಇತಿಹಾಸದ ಕುರುಹುಗಳು ಭವಿಷ್ಯತ್ತಿನ ಬದುಕಿಗೆ ಭದ್ರ ಬುನಾದಿ. ವೈಚಾರಿಕ ಮತ್ತು ವೈಜ್ಞಾನಿಕ ಜಗತ್ತಿನಲ್ಲಿ ಪೂರ್ವಜರ ಆದರ್ಶ ಮತ್ತು ಅವರು ಕೊಟ್ಟ ಸಂದೇಶ ಸಕಲರಿಗೂ ದಾರಿದೀಪ. **ಇತಿಹಾಸ ಉಳಿಯಬೇಕು; ಬೆಳೆಯಬೇಕು**. ಬೆಳೆಯುತ್ತಿರುವ ಯುವ ಜನಾಂಗಕ್ಕೆ ಸಂಸ್ಕೃತಿಯ ಮತ್ತು ಇತಿಹಾಸದ ಅರಿವು ಉಂಟಾಗಬೇಕೆಂಬ ಸದುದ್ದೇಶದಿಂದ ಕರ್ನಾಟಕ ಇತಿಹಾಸ ಅಕಾದೆಮಿ ಪ್ರತಿವರುಷ ಮೂರು ದಿನಗಳ ಕಾರ್ಯಕ್ರಮ ಮುನ್ನಡೆಸಿಕೊಂಡು ಬರತ್ತಿದೆ. ಈ ವರುಷ ಬೆಂಗಳೂರು ಮಹಾನಗರದಲ್ಲಿ ಸೆಪ್ಟಂಬರ್ ೯,೧೦ ಮತ್ತು ೧೧ ರಂದು ಜರುಗಲಿರುವುದು ಸಂತೋಷವನ್ನುಂಟು ಮಾಡಿದೆ. ಇದೇ ಸಂದರ್ಭದಲ್ಲಿ **"ಇತಿಹಾಸ ದರ್ಶನ"** ಕೃತಿ ಹೊರಬರುತ್ತಿರುವುದು ಹೆಮ್ಮೆಯ ಸಂಗತಿ. ಈ ಅಮೂಲ್ಯ ಕೃತಿಯಲ್ಲಿ ಪ್ರಾಚೀನ ಇತಿಹಾಸ ಮತ್ತು ಸಂಸ್ಕೃತಿಯ ವಿಶಿಷ್ಟ ಬರಹಗಳು ಪ್ರಕಟಗೊಳ್ಳಲಿ.

ಪ್ರತಿವರುಷದಂತೆ ಈ ವರುಷವು ಸಹ ಶ್ರೀಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠದಿಂದ "ಇತಿಹಾಸ ದರ್ಶನ" ಕೃತಿ ಪ್ರಕಟಣೆಗಾಗಿ ಇಪ್ಪತ್ತೈದು ಸಾವಿರ (೨೫೦೦೦/–) ರೂಪಾಯಿಗಳನ್ನು ಆಶೀರ್ವಾದರೂಪದಲ್ಲಿ ಕಳಿಸಲಾಗಿದೆ. ಇದಕ್ಕಾಗಿ ಶ್ರಮಿಸಿದ ಸಂಪಾದಕ ಮಂಡಳಿಗೂ ಹಾಗೂ ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಸಂಸ್ಥೆಯ ಎಲ್ಲ ಸದಸ್ಯರಿಗೂ ಶುಭ ಹಾರೈಕೆಗಳು.

ಪರಮದಯಾಳು ಶ್ರೀ ಪಾರ್ವತಿ ಪರಮೇಶ್ವರರು ಹಾಗೂ ಶ್ರೀಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಶುಭಾಶೀರ್ವಾದಗಳೊಂದಿಗೆ
**ಶ್ರೀ ರಂಭಾಪುರೀ ಜಗದ್ಗುರುಗಳು**, ಬಾಳೆಹೊನ್ನೂರು

**'ಇತಿಹಾಸದರ್ಶನ' ಪ್ರಕಟಣೆಗೆ ಆಶೀರ್ವದಿತ ಪ್ರಪ್ರಥಮ**
**ನಿರಂತರ ವಾರ್ಷಿಕ ನಿಧಿ ಕೊಡುಗೆ ರೂ. ೨೫,೦೦೦**

★ **ಪ್ರತಿ ವಾರ್ಷಿಕನಿಧಿ ಕೊಡುಗೆ ಆರಂಭಿಸಿದ ವರ್ಷ : ೨೦೦೫** ★

ಕರ್ನಾಟಕ ಇತಿಹಾಸ ಅಕಾದೆಮಿಯ
ಇಪ್ಪತ್ತನಾಲ್ಕನೆಯ ವಾರ್ಷಿಕ ಸಮ್ಮೇಳನದ
ಪ್ರಾಯೋಜಕರು



ಜಾ॥ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮೀಜಿಯವರು
ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠ



ಪ್ರೊ|| ಕೆ. ಅಭಿಶಂಕರ್ ಅವರ ಸ್ಮರಣಾರ್ಥ ಸಮ್ಮೇಳನಾಧ್ಯಕ್ಷರಿಗೆ ನೀಡುವ ನೆನಪಿನ ಶಿಲ್ಪ ಕಾಣಿಕೆ. ಪ್ರತಿವರ್ಷ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷರಿಗೆ ಈ ಕಾಣಿಕೆ ನೀಡಲು ಶ್ರೀಮತಿ ವಿಶಾಲಾಕ್ಷಿ ಆಭಿಶಂಕರ್ ಅವರು ಪುದುವಟ್ಟು ಇಟ್ಟಿದ್ದಾರೆ. (ಶಿಲ್ಪ ಕಲಾವಿದೆ : ಶ್ರೀಮತಿ ಕನಕಮೂರ್ತಿ)

## ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಪೀಠದಲ್ಲಿ ನಡೆದ
## ಇಪ್ಪತ್ತನಾಲ್ಕನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಡಾ॥ ಎಂ.ಎಸ್. ಕೃಷ್ಣಮೂರ್ತಿ

ಕರ್ನಾಟಕ ಇತಿಹಾಸ ಅಕಾದೆಮಿಯ ೨೪ನೆಯ
ವಾರ್ಷಿಕ ಸಮ್ಮೇಳನದ ಉದ್ಘಾಟನಾ ಸಂದರ್ಭದಲ್ಲಿ
ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ
ಜ॥ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮೀಜಿಯವರು
ಸಮ್ಮೇಳನಾಧ್ಯಕ್ಷ ಡಾ. ಎಂ.ಎಸ್. ಕೃಷ್ಣಮೂರ್ತಿ,
ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ
ಡಾ. ಆರ್.ಕೆ. ನಲ್ಲೂರು ಪ್ರಸಾದ್,
ಡಾ. ಸೂರ್ಯನಾಥ್ ಕಾಮತ್,
ಡಾ. ಎಂ.ಜಿ. ನಾಗರಾಜ್,
ಡಾ. ಎಚ್.ಎಸ್. ಗೋಪಾಲರಾವ್,
ಡಾ. ಪಿ.ವಿ. ಕೃಷ್ಣಮೂರ್ತಿ





೨೪ನೆಯ ಕರ್ನಾಟಕ ಇತಿಹಾಸ ಅಕಾದೆಮಿಯ
ಸಮ್ಮೇಳನದ ಉದ್ಘಾಟನಾ ಸಮಾರಂಭದ
ಇನ್ನೊಂದು ದೃಶ್ಯ



ಕರ್ನಾಟಕ ಇತಿಹಾಸ ಅಕಾದೆಮಿಯ ೨೪ನೆಯ ವಾರ್ಷಿಕ
ಸಮ್ಮೇಳನಾಧ್ಯಕ್ಷರಿಗೆ ಪೂಜ್ಯ
ಸ್ವಾಮೀಜಿಯವರಿಂದ ಆಶೀರ್ವಾದ

ಆದಿಚುಂಚನಗಿರಿಯಲ್ಲಿ
ಕರ್ನಾಟಕ ಇತಿಹಾಸ ಅಕಾದೆಮಿ
ವಾರ್ಷಿಕ ಸಮ್ಮೇಳನದಲ್ಲಿ
ಡಾ॥ ಸೂರ್ಯನಾಥ ಕಾಮತರಿಗೆ
ಪೂಜ್ಯ ಸ್ವಾಮೀಜಿಯವರಿಂದ ಆಶೀರ್ವಾದ





ಸಮ್ಮೇಳನದಲ್ಲಿ
ಡಾ. ಪಿ.ವಿ. ಕೃಷ್ಣಮೂರ್ತಿಯವರಿಗೆ
ಪೂಜ್ಯ ಸ್ವಾಮೀಜಿಯವರಿಂದ ಆಶೀರ್ವಾದ

ಆದಿಚುಂಚನಗಿರಿಯಲ್ಲಿ
ಕರ್ನಾಟಕ ಇತಿಹಾಸ ಅಕಾದೆಮಿಯ
೨೪ನೆಯ ವಾರ್ಷಿಕ ಸಮ್ಮೇಳನದ
ವಿದ್ವತ್ ಸಭೆ



ಸರ್ವಸದಸ್ಯರ ಸಭೆಯಲ್ಲಿ
ಪದಾಧಿಕಾರಿಗಳು





ಗೋಷ್ಠಿಯಲ್ಲಿ
ಪ್ರಬಂಧ ಮಂಡಿಸುತ್ತಿರುವ
ವಿದ್ವಾಂಸರು



## ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಚಿತ್ರಗಳು



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ
ಕನ್ನಡ ಸಂಶೋಧನ ಸಂಸ್ಥೆ ಧಾರವಾಡ



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ
ನರಸಾಪು ಕಲಾ ಹಾಗೂ ಶಿರೂರ ವಾಣಿಜ್ಯ
ಮಹಾವಿದ್ಯಾಲಯ ಬಾಗಲಕೋಟೆ




ಕರ್ನಾಟಕ ಇತಿಹಾಸ ಅಕಾದೆಮಿಯ
ಗದಗ ಜಿಲ್ಲಾ ಘಟಕ ಉದ್ಘಾಟನೆ,
ಐತಿಹಾಸಿಕ ಪರಂಪರೆ ಉಳಿಸಿ
ವಿಶೇಷ ಉಪಾನ್ಯಾಸಕರು
ಡಾ. ಎಂ.ಎಸ್. ನರೇಗಲ್



ಐತಿಹಾಸಿಕ ಪರಂಪರೆ ಉಳಿಸಿ
ಕಾರ್ಯಕ್ರಮದ ಅಂಗವಾಗಿ
ದೇವಾಲಯ ಸಂರಕ್ಷಣೆ,
ಹಲಸಿ. ಬೆಳಗಾವಿ ಘಟಕ

# ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಚಿತ್ರಗಳು



ಉಜಿರೆಯ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜಿನ
ಇತಿಹಾಸ ವಿಭಾಗ ಐತಿಹಾಸಿಕ ಪರಂಪರೆ ಸಪ್ತಾಹ
ಕಾರ್ಯಕ್ರಮದ ಸಮಾರೋಪ ಸಮಾರಂಭ



ಐತಿಹಾಸಿಕ ಪರಂಪರೆ ಉಳಿಸಿ ಜಾತಾ ಹೊರಟಿರುವ
ವಿದ್ಯಾರ್ಥಿಗಳು ಹುಲ್ಲಹಳ್ಳಿ



ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ಉದ್ಘಾಟನೆ
ಕೆ.ಎಸ್.ಎನ್. ಕಲಾ ವಾಣಿಜ್ಯ ವಿಜ್ಞಾನ ಮಹಾವಿದ್ಯಾಲಯ ಗದಗ

# ಅಧ್ಯಕ್ಷರ ಮಾತು

ಕರ್ನಾಟಕ ಇತಿಹಾಸ ಅಕಾದೆಮಿಯು ಜನ್ಮತಾಳಿ ಇಂದಿಗೆ ೨೫ ವಸಂತಗಳು ಕಳೆದಿವೆ. ಸಣ್ಣದಾಗಿ ಕಾಣಿಸಿಕೊಂಡ ಸಂಶೋಧನೆಯೆಂಬ ನೀರಿನ ಸೆಲೆಯು ಸಾರ್ವಜನಿಕ ಹಾಗೂ ವಿದ್ವಾಂಸರ ಪ್ರೋತ್ಸಾಹದಿಂದ ಇಂದು ತೊರೆಯಾಗಿ ಹರಿಯ ತೊಡಗಿದೆ. ಅದರೊಂದಿಗೆ ಪ್ರಾರಂಭವಾದ 'ಇತಿಹಾಸ ದರ್ಶನ'ವು ಇಂದು ೨೬ನೆಯ ಸಂಪುಟವಾಗಿ ಹೊರಬರುತ್ತಿದೆ. ಕೆಲವೇ ಆಯ್ದ ಬರಹಗಾರರ ಲೇಖನಗಳಿಂದ ಆರಂಭವಾದ ಈ ಸಂಪುಟವು ಮುಂದೆ ತನ್ನ ವ್ಯಾಪ್ತಿಯಾನ್ನು ಹಿಗ್ಗಿಸುತ್ತಾ ಸಮಾಜದ ನಾನಾ ಸ್ತರದ ಸಂಶೋಧಕರ ಲೇಖನಗಳಿಂದ ಕೂಡಿ ಸಂಶೋಧನ ಕ್ಷೇತ್ರದಲ್ಲಿ ತನ್ನದೇ ಆದ ಸ್ಥಾನವನ್ನು ಹೊಂದಿದೆ. ಪ್ರತಿವರ್ಷವೂ ಅನೇಕ ಹೊಸ ಮುಖಗಳನ್ನು ಪರಿಚಯಿಸುತ್ತಿದೆ. ಆ ಮೂಲಕ ಸಂಶೋಧನ ಕ್ಷೇತ್ರದಲ್ಲಿ ಸಂಶೋಧನೆಯತ್ತ ಮುಖ ಮಾಡುವ ಯುವಕರಿಗೆ ಸ್ಫೂರ್ತಿಯ ಸೆಲೆಯಾಗಿದೆ. ಇದುವರೆವಿಗೆ ಸುಮಾರು ೫೦೦ ಜನರ ೧೭೦೦ಕ್ಕೂ ಅಧಿಕ ಲೇಖನಗಳನ್ನು ಪ್ರಕಟಿಸಿರುವ ಹಾಗೂ ಪರಿಚಯಿಸಿರುವ ಹೆಗ್ಗಳಿಕೆ ನಮ್ಮ **ಇತಿಹಾಸ ದರ್ಶನ**ದ್ದು.

ಈ ಸಂಪುಟದಲ್ಲಿ ಪ್ರಕಟವಾಗಿರುವ ಲೇಖನಗಳು ಆದಿಚುಂಚನಗಿರಿಯ ಆದಿಚುಂಚಗಿರಿ ಮಹಾ ಸಂಸ್ಥಾನಮಠದ ಆಶ್ರಯದಲ್ಲಿ ೨೦೧೧ರ ನವೆಂಬರ್ ತಿಂಗಳಲ್ಲಿ ನಡೆದ ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿತವಾದ ಪ್ರಬಂಧಗಳ ಸಂಕಲನ. ಇದನ್ನು ಡಾ. ಎಂ.ಜಿ. ನಾಗರಾಜ್ ಮತ್ತು ಡಾ. ಪಿ.ವಿ.ಕೃಷ್ಣಮೂರ್ತಿಯವರು ಅಚ್ಚು ಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ. ವಾರ್ಷಿಕ ಸಮ್ಮೇಳನ ನಡೆಸಲು ನೆರವಾದ ಆದಿಚುಂಚನಗಿರಿ ಮಠದ ಪೂಜ್ಯರಾದ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳಿಗೆ ಪ್ರಣಾಮಗಳು.

ಈ ಸಂಪುಟದ ಪ್ರಕಟಣೆಗೆ ೨೦೦೫ನೆಯ ಇಸವಿಯಿಂದ ರೂ.೨೫,೦೦೦/ಗಳ ನೆರವು ನೀಡಿ ಆಶೀರ್ವದಿಸುತ್ತಿರುವ ಶ್ರೀ ಶ್ರೀ ರಂಭಾಪುರೀ ಜಗದ್ಗುರುಗಳನ್ನು ಭಕ್ತಿ ಪೂರ್ವಕವಾಗಿ ನೆನೆಯುತ್ತೇನೆ. ಹಾಗೆಯೇ ಈ ವರ್ಷದಿಂದ ರೂ.೧,೦೦,೦೦೦/–ಗಳನ್ನು ನೀಡುತ್ತಿರುವ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶಕರ ಸಹಕಾರವನ್ನು ತುಂಬು ಹೃದಯದಿಂದ ನೆನೆಯುತ್ತೇನೆ. ಹಿಂದಿನ ಸಂಪುಟಗಳಂತೆ ಈ ಸಂಪುಟವನ್ನು ವಿದ್ವಾಂಸರು ತುಂಬು ಹೃದಯದಿಂದ ಸ್ವಾಗತಿಸುವರೆಂದು ಆಶಿಸುತ್ತೇನೆ.

**ಡಾ. ದೇವರಕೊಂಡಾರೆಡ್ಡಿ**

# ಸಂಪಾದಕೀಯ

ಬೆಂಗಳೂರು ಪ್ರದೇಶ ನವಶಿಲಾಯುಗದ ಮುನ್ನವೆ ಮಾನವನಿಗೆ ಬದುಕನ್ನು ಕಟ್ಟಿಕೊಟ್ಟಿತ್ತು. ದಿನನಿತ್ಯ ಬಸ್‌ಕಿಟಕಿಗಳಿಂದಲೂ ಕಾಣುತ್ತಿರುವ ರೇಸ್‌ಕೋರ್ಸ್ ಪ್ರದೇಶ, ಎಚ್.ಎ.ಎಲ್. ಪ್ರದೇಶದಲ್ಲಿ ಈ ಯುಗದ ಬಳಕೆಯ ಆಯುಧಗಳು, ನಮ್ಮ ಲಕ್ಷ್ಯವನ್ನು ಪ್ರಾಗೈತಿಹಾಸಿಕ ವೇದಿಕೆಯಲ್ಲಿ ಹಿಡಿದಿಟ್ಟಿವೆ. ಬಾಣಸವಾಡಿ, ಕಣ್ಣೂರು, ಜಾಲಹಳ್ಳಿ, ಜಡಿಗೇನಹಳ್ಳಿಯ ಬೃಹತ್‌ಶಿಲಾಯುಗದ ಸಮಾಧಿ ಸರಕುಗಳು, ನಮ್ಮ ನಿರ್ಲಕ್ಷ್ಯಕ್ಕೆ ಒಳಗಾಗಿಲ್ಲ. ಅಕ್ಷರ ಪೂರ್ವಕಾಲದ ಜನಜೀವನ ಇಲ್ಲಿನದಾಗಿದೆ. ಇತಿಹಾಸಪೂರ್ವವೆನ್ನುವುದಿದ್ದರೂ ಅದೂ ಇತಿಹಾಸ ಹೊಂದಿತ್ತಲ್ಲವೆ? ಅಕ್ಷರಲೋಕ ಕಂಗೊಳಿಸಿದಾಗ ಅವೆಲ್ಲ ದಾಖಲೆಗೆ ಒಳಗಾದುವು. ಬೆಂಗಳೂರು ಹೆಸರಿನ ಮೂಲವು ಬೆನ್ಗಾವಲು, ಬೆಂದಕಾಡು, ವೆಂಗಲು, ಬೇಂಗ, ಬೆಂದಕಾಳು ಇತ್ಯಾದಿ ಶಬ್ದಗಳ ಆಸರೆಯನ್ನು ಅವರವರ ಅಭಿಪ್ರಾಯದ ವೇದಿಕೆಯಲ್ಲಿ ಮಂಡಿತವಾಗಿದೆ. ಒಟ್ಟಿನಲ್ಲಿ ಬೆಂಗು ವೃಕ್ಷಗಳು–ನೆತ್ತರು ಹೊನ್ನೆ (=ಬಂಗೆ) ಮರಗಳಿಗೆ ಬೆಂಕಿ ಕೊಟ್ಟು ಕುಮ್ಮರಿ ಮಾಡಿದ್ದು ಬೆಂದಕಾಡು ಎಂಬ ನಿಷ್ಪತ್ತಿಗೂ ನೆರವಾಗಬಹುದು. ಐತಿಹಾಸಿಕವಾಗಿ ಕ್ರಿ.ಶ. ೯ನೇ ಶತಮಾನದ ಬೇಗೂರಿನ ನಾಗತ್ತರನ ಶಾಸನದಲ್ಲಿ 'ಬೆಂಗುಳೂರು' ಎಂದು ದಾಖಲೆಗೊಂಡಿದೆ. ಹಾಗೆಂದು ಅದಕ್ಕೆ ಐತಿಹಾಸಿಕವಾಗಿ ನೆಲೆ ಆ ಹಿಂದೆ ಇರಲಿಲ್ಲ ಎನ್ನಲಾದೀತೇ? ಇಂಥ ಬೆಂಗಳೂರು ಕಾಡುಮಲ್ಲೇಶ್ವರ ದೇಗುಲದ ಕ್ರಿ.ಶ. ೧೬೬೯ರ ಬಂಡೆಗಲ್ ಶಾಸನದಲ್ಲಿ ಬೆಂಗುಳೂರ 'ಮಹಾನಾಡು' ಎಂದು ಕರೆಯಲಾಗಿದೆ. ಈ ಮಹಾ ನಾಡುವಿಗೆ ಸಲುತ್ತಿದ್ದ ಸ್ಥಳಗಳು: ಹೊಸಕೋಟೆ, ಕೋಳಾಲ, ಆನೆಕಲ್ಲು, ಡೆಂಕಣಿಕೋಟೆ, ಆಂದೂರು, ಪೆರಂದೂರು, ಪೆಂನ್ನಾಗರ, ರತ್ನಗಿರಿ, ಹೊಸೂರು, ಕುರುಬರಹಟ್ಟಿ ಇತ್ಯಾದಿಗಳು ಗಡಿಗ್ರಾಮವಾಗಿಯೋ, ಜಿಲ್ಲೆಗೆ ಸೇರಿಯೋ, 'ಬೆಂಗುಳೂರು ಮಹಾನಾಡು' ಎಂದು ಹೆಸರಾಗಿತ್ತು.

ಈ 'ಮಹಾನಾಡು' ಇಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಾಗಿ ಸಂಸ್ಕೃತಿ, ಇತಿಹಾಸ, ಪುರಾಣ, ಐತಿಹ್ಯ, ಜಾನಪದ, ಧರ್ಮನಿರಪೇಕ್ಷಿತ, ಜಾಗತೀಕರಣದ ನೆಲೆಗಳಲ್ಲಿ ತನ್ನತನವನ್ನು ಉಳಿಸಿಕೊಂಡಿದೆ. ಇಲ್ಲವಾಗಿದ್ದರೆ, 'ಕಲ್ಯಾಣನಗರಿಯಲ್ಲಿ' ನಾಡದೇವತೆ ಅಣ್ಣಮ್ಮದೇವಿ ಉತ್ಸವ, ವೃಷಭಾವತಿಯ ಬಸವನಗುಡಿಯ ಹಾದಿ ಬಳಿ ಕಡಲೆಕಾಯಿ ಪರಿಷೆ, ಧರ್ಮರಾಯನ–ದ್ರೌಪದಿಯ ಕರಗಗಳು, ಅಲಸೂರು ಸೋಮೇಶ್ವರ ದೇಗುಲ, ಕೆಂಪೇಗೌಡ ಗೋಪುರ, ಕಾಡುಮಲ್ಲೇಶ್ವರ, ಗವಿಗಂಗಾಧರೇಶ್ವರ, ಸೆಂಟ್ ಮೇರಿಸ್ ಚರ್ಚ್, ಹಡ್ಸನ್ ದೇವಾಲಯ, ಕೋಟೆ ವೆಂಕಟರಮಣಸ್ವಾಮಿ, ಪ್ರಳಯ ಕಾಲದ ವೀರಭದ್ರ, ಕೆಂಪಾಂಬುಧಿ ಕೆರೆ, ಲಾಲ್‌ಬಾಗ್, ಹೈದರ್–ಟಿಪ್ಪು ಅರಮನೆ, ವಿಕ್ಟೋರಿಯಾ ಮತ್ತು ಬೌರಿಂಗ್ ಆಸ್ಪತ್ರೆ, ಇನ್ಫೋಸಿಸ್, ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ಸೈನ್ಸ್, ವೈಮಾಂತರಿಕ್ಷ ಮತ್ತು ಜೈವಿಕ ತಂತ್ರಜ್ಞಾನದ ಸಂಸ್ಥೆಗಳು, ಮಿಥಿಕ್ ಸೊಸೈಟಿ, ಕನ್ನಡ ಸಾಹಿತ್ಯ ಪರಿಷತ್ತು, ಕೆಂಪೇಗೌಡ ಬಸ್ ನಿಲ್ದಾಣ, ಸಿಟಿ ರೈಲ್ವೆ ನಿಲ್ದಾಣ, ವಿಧಾನಸೌಧ ಇತ್ಯಾದಿ ನೆಲೆಗಳು ಉಳಿದಿರುತ್ತಿರಲಿಲ್ಲ. ಮೆಟ್ರೋ ಮಾನೋ ರೈಲುಗಳ ಚಾಲನೆ ಈ ಸಿಲಿಕಾನ್ ಸಿಟಿಯಲ್ಲಿ ನೆಲೆಗೊಳ್ಳುವ ಅವಕಾಶವಾಗುತ್ತಿರಲಿಲ್ಲ. ಅಂತೂ ಹಿರಿಯ ಕೆಂಪೇಗೌಡ ಕ್ರಿ.ಶ. ಸುಮಾರು ೧೫೩೦ರಲ್ಲಿ ಬೆಂಗಳೂರು ಪುರವನ್ನು ನಿರ್ಮಿಸಲು ಆರಂಭಿಸಿ ಸುಮಾರು ೧೫೩೭ರ ವೇಳೆಗೆ ಮುಗಿಸಿ ಪುರಸ್ಥಾಪನೋತ್ಸವ ಮಾಡಿದನೆನ್ನಬಹುದಾದ ಬೆಂಗಳೂರು, ಸಂಸ್ಕೃತಿ ಜಾಗತೀಕರಣಗಳ ಸಾಮರಸ್ಯವನ್ನು ನೆಲೆಗೂಡಿಸಿದೆ ಎನ್ನಬೇಕು.

ಇಂಥ ಬೆಂಗಳೂರಿನಲ್ಲಿ ಇದೇ ಸೆಪ್ಟೆಂಬರ್ ೯, ೧೦ ಮತ್ತು ೧೧ನೇ ಶುಕ್ರವಾರ, ಶನಿವಾರ ಮತ್ತು ಭಾನುವಾರಗಳಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೇ ವಾರ್ಷಿಕ ಸಮ್ಮೇಳನವು ನಡೆಯುತ್ತಿದೆ. ಮಿಥಿಕ್ ಸೊಸೈಟಿಯ ಸಭಾಂಗಣ ಇದಕ್ಕೆ ಸಾಕ್ಷಿ ನೆಲೆಯಾಗಿ ಇತಿಹಾಸದ ಸಂತೋಷವನ್ನು ಕಾಣಲೆಳಸಿದೆ.

ಸದ್ಯ ಕರ್ನಾಟಕ ಇತಿಹಾಸ ಅಕಾದೆಮಿಯ ರಜತೋತ್ಸವ ವರ್ಷವಿದು. ೧೯೮೬ರಲ್ಲಿ ಡಾ. ಜಿ.ಎಸ್. ದೀಕ್ಷಿತ್ ಅವರ ಮಾರ್ಗದರ್ಶನದಲ್ಲಿ, ಡಾ. ಸೂರ್ಯನಾಥ ಕಾಮತ್, ಪ್ರೊ. ಲಕ್ಷ್ಮಣತೆಲಗಾವಿ ಮುಂತಾದ ಅನೇಕರು ಜೊತೆಗೂಡಿ ಸಂಘಟಿಸಿ ರೂಪಿಸಿದ ಈ ಸಂಸ್ಥೆ ಇಂದು ೧೫೦೦ಕ್ಕೂ ಮಿಕ್ಕಿ ಸದಸ್ಯರನ್ನು ಹೊಂದಿದೆ. ಯಶಸ್ವಿಯಾಗಿ ೨೫ರ ತಾರುಣ್ಯದ ಕ್ರಿಯಾಶೀಲ ಹೆಜ್ಜೆಗಳಲ್ಲಿ ಸಾಗಿದೆ.

ಈ ರಜತೋತ್ಸವದ ಸಂದರ್ಭ ಈ ೨೫ನೇ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷತೆಯು ಖ್ಯಾತ ಸಂಶೋಧಕ, ಶಾಸನತಜ್ಞ, ಸಾಹಿತಿ, ಡಾ. ಎಚ್.ಎಸ್. ಗೋಪಾಲರಾವ್ ಅವರದಾಗಿದೆ. ಶಾಸನತಜ್ಞರಾದ ಮೈಸೂರಿನ ಶ್ರೀ ಕೆ. ಮೊಹಮ್ಮದ್ ಷರೀಫ್ ಅವರು ಈ ಬಾರಿ ಡಾ. ಬಾ.ರಾ. ಗೋಪಾಲ್ ಶಾಸನ ಪ್ರಶಸ್ತಿಗೆ ಭಾಜನರಾಗಿದ್ದಾರೆ. ಈರ್ವ ವಿದ್ವಾಂಸರಿಗೂ ನಮ್ಮ ಹಾರ್ದಿಕ ಅಭಿನಂದನೆಗಳು.

ಕಳೆದ ವರ್ಷ ಶ್ರೀ ಆದಿಚುಂಚನಗಿರಿ ಕ್ಷೇತ್ರದಲ್ಲಿ ಶ್ರೀ ಆದಿಚುಂಚನಗಿರಿ ಸಂಸ್ಥಾನ ಶ್ರೀಮಠದ ಆಶ್ರಯದಲ್ಲಿ ನಡೆದ ಅಕಾದೆಮಿಯ ೨೪ನೇ ವಾರ್ಷಿಕ ಸಮ್ಮೇಳನದಲ್ಲಿ ೨೦೧೦ನೇ ನವೆಂಬರ್ ೧೩ ರಿಂದ ೧೫ರವರೆಗೆ ಮಂಡನೆ ಆದ ಪ್ರಬಂಧಗಳ ಪೈಕಿ (೧೦೩ + ೨) ಪ್ರಬಂಧಗಳನ್ನು ಸದ್ಯ **ಇತಿಹಾಸ ದರ್ಶನದ** ರಜತೋತ್ಸವ ವರ್ಷ ಸಂಪುಟವಾದ ೨೬ನೆಯ ಸಂಪುಟದಲ್ಲಿ ಪ್ರಕಟಿಸಲಾಗಿದೆ. ಸಂಪುಟಕ್ಕೆ ಬಂದ ಮಂಡಿತ ಪ್ರಬಂಧಗಳ ಸಂಖ್ಯೆ ಈ ಬಾರಿ ಶತಕ ಮೀರಿರುವುದು ಅಕಾದೆಮಿ ಸದಸ್ಯರ ಸಂಶೋಧನ ಕ್ರಿಯಾಶೀಲತೆಯ ಹೆಗ್ಗುರುತಾಗಿದೆ. ಒಂದೆರಡು ಪ್ರಬಂಧಗಳು ಸೂಕ್ತವಾಗಿ ಇತಿಹಾಸ ದರ್ಶನಕ್ಕೆ ಕಂಡುಬರದದ್ದರಿಂದ ಕೈಬಿಡಲಾಗಿದೆ.

'ಇತಿಹಾಸ ದರ್ಶನ'ದ ಮುದ್ರಣಕ್ಕೆ ಕಳೆದ ೨೦೦೫ನೇ ಸಾಲಿನಿಂದ ೨೫ ಸಾವಿರ ರೂ.ಗಳ ನಿಧಿ ನೆರವನ್ನು, ಅದರ ಸಾಂಸ್ಕೃತಿಕ ವಿಸ್ತಾರಕ್ಕೆ ಆಶೀರ್ವದಿಸುತ್ತಿರುವ ಶ್ರೀ ಮದ್ರಂಭಾಪುರಿ ವೀರಸಿಂಹಾಸನ ಜ॥ ಪ್ರಸನ್ನ ರೇಣುಕ ವೀರಸೋಮೇಶ್ವರರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸನ್ನಿಧಿಯವರಿಗೆ ಭಕ್ತಿಪೂರ್ವಕ ಪ್ರಣಾಮಗಳು. ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರಾದ ಡಾ. ಆರ್. ಗೋಪಾಲ್ ಅವರು ಇಲಾಖೆಯ ವತಿಯಿಂದ 'ಇತಿಹಾಸ ಪರಂಪರೆ ಉಳಿಸಿ' ಕಾರ್ಯಕ್ರಮ ಹಾಗೂ 'ಇತಿಹಾಸ ದರ್ಶನ' ಸಂಪುಟದ ಪ್ರಕಟನೆಗೆ ಉದಾರ ನಿಧಿ ಕೊಡುಗೆಯನ್ನು ನೀಡುತ್ತಿರುವುದಕ್ಕೆ ನಾವು ಕೃತಜ್ಞರು.

'ಇತಿಹಾಸ ದರ್ಶನ'ದ ಪ್ರಕಟನಾ ಕಾರ್ಯದಲ್ಲಿ ಸಹಕಾರವನ್ನು ಈವರೆಗೆ ನೀಡುತ್ತ ಬಂದಿರುವ ಅಕಾದೆಮಿಯ ಗೌರವಾಧ್ಯಕ್ಷ, ಕಾರ್ಯಾಧ್ಯಕ್ಷರಾದಿಯಾಗಿ ಕಾರ್ಯಕಾರಿ ಸಮಿತಿ ಪದಾಧಿಕಾರಿಗಳು ಹಾಗೂ ಸದಸ್ಯರಿಗೆ ಮತ್ತು ಅಕಾದೆಮಿಯ ಸರ್ವ ಸದಸ್ಯರಿಗೆ ನಾವು ಆಭಾರಿ. ಸದ್ಯದ ಸಂಪುಟದ ಕೆಲವು ಪ್ರಬಂಧಗಳನ್ನು ಪರಿಶೀಲಿಸಿ ಕರಡು ತಿದ್ದುಕೊಟ್ಟು ಸಂಪಾದನ ಕಾರ್ಯದಲ್ಲಿ ನೆರವಾದ 'ಕರ್ನಾಟಕ ಗ್ಯಾಸೆಟಿಯರ್'ನ ಸಂಪಾದಕರಲ್ಲೊಬ್ಬರಾದ ಶ್ರೀ ಎಸ್. ರಾಜೇಂದ್ರಪ್ಪ ಅವರಿಗೆ ನಮ್ಮ ಅಭಿಮಾನಗಳಿವೆ.

ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ.ಎಸ್. ಮಂಜು ಅವರು, ಅಕ್ಷರ ಜೋಡಣೆ ವಿನ್ಯಾಸ ಮಾಡಿದ ಸಿಬ್ಬಂದಿ ವರ್ಗದ ಪಿ.ಎಸ್. ಸುಬ್ರಮಣಿಬಾಬು, ವಿ.ಎಸ್. ಪ್ರಸನ್ನಕುಮಾರ್, ಶ್ರೀಮತಿ ಮಾಲಾ ಹಾಗೂ ಇತರ ಸಿಬ್ಬಂದಿ ವರ್ಗದವರಿಗೂ ನಮ್ಮ ಅಭಿಮಾನಗಳಿವೆ.

೧೯೮೬ರಿಂದಲೂ 'ಇತಿಹಾಸ ದರ್ಶನ'ದ ಮುದ್ರಣ ಕಾರ್ಯದಲ್ಲಿ ನೆರವಾಗಿರುವ ದಾನಿ ಶ್ರೀ ಅಶೋಕ್‌ಕುಮಾರ್ ಅವರಿಗೂ ನಮ್ಮ ಕೃತಜ್ಞತೆಗಳು.

ಬೆಂಗಳೂರು : ೦೭.೦೯.೨೦೧೧;
ಶ್ರೀ ಖರ ಸಂವತ್ಸರ ಭಾದ್ರಪದ ಶುದ್ಧ ದಶಮಿ
ಪೂರ್ವಾಷಾಢ ಬುಧವಾರ

**ಡಾ॥ ಎಂ.ಜಿ. ನಾಗರಾಜ್**
**ಡಾ॥ ಪಿ.ವಿ. ಕೃಷ್ಣಮೂರ್ತಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು

# ಪರಿವಿಡಿ

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ॥ ಎಂ. ಚಿದಾನಂದಮೂರ್ತಿ |  |
| ೨. | ೨೩-೨೪ ಅಕ್ಟೋಬರ್ ೧೯೮೮ | ತುಮಕೂರು | ಸಿದ್ಧಗಂಗಾಕ್ಷೇತ್ರ : ಡಾ। ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು | ಡಾ॥ ಜಿ. ಎಸ್. ಗಾಯಿ |  |
| ೩. | ೧೦-೧೧ ಜೂನ್ ೧೯೮೯ | ಗದಗ | ಶ್ರೀ ಮ. ನಿ. ಪ್ರ. ಜ॥ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ | ಡಾ॥ ಶ್ರೀನಿವಾಸ ರಿತ್ತಿ |  |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ | ಡಾ॥ ಎಸ್. ಆರ್. ರಾವ್ |  |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ | ಡಾ॥ ಬಾ. ರಾ. ಗೋಪಾಲ್ |  |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು | ಡಾ॥ ಕೆ. ವಿ. ರಮೇಶ್ |  |
| ೭. | ೨೩-೨೫ ಜುಲೈ ೧೯೯೩ | ಮೈಸೂರು | ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು | ಡಾ॥ ಅ. ಸುಂದರ |  |
| ೮. | ೯-೧೦ ಜುಲೈ ೧೯೯೪ | ಸೊಂಡೂರು | ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ, ಸೊಂಡೂರು | ಡಾ॥ ಎಂ. ಎಂ. ಕಲಬುರ್ಗಿ |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | *ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ* | **ಡಾ|| ಎ.ವಿ. ನರಸಿಂಹಮೂರ್ತಿ** |  |
| ೧೦. | ೭-೯ ಜೂನ್ ೧೯೯೬ | ಧಾರವಾಡ | *ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ* | **ಡಾ|| ಜಿ. ಎಸ್. ದೀಕ್ಷಿತ್** |  |
| ೧೧. | ೨೫-೨೭ ಅಕ್ಟೋಬರ್ ೧೯೯೭ | | *ಸಿರಸಿ ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ* | **ಪ್ರೊ|| ಕೆ. ಅಭಿಶಂಕರ್** |  |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | *ಕರ್ನಾಟಕ ಇತಿಹಾಸ ಅಕಾದೆಮಿ* | **ಡಾ|| ಎಸ್. ನಾಗರಾಜು** |  |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | *ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ* | **ಡಾ|| ಶ್ರೀನಿವಾಸ ಹಾವನೂರ** |  |
| ೧೪. | ೮-೧೦ ಜುಲೈ ೨೦೦೦ | ಹಂಪಿ | *ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ* | **ಶ್ರೀ ಸಿ. ಟಿ. ಎಂ. ಕೊಟ್ರಯ್ಯ** |  |
| ೧೫. | ೧೩-೧೫ ಅಕ್ಟೋಬರ್ ೨೦೦೧ | ಉಡುಪಿ | *ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ* | **ಡಾ|| ಜ್ಯೋತ್ಸ್ನಾ ಕಾಮತ್** |  |
| ೧೬. | ೨೨-೨೪ ಸೆಪ್ಟೆಂಬರ್ ೨೦೦೨ | ಹೊಸನಗರ | ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು ಶ್ರೀ ರಾಮಚಂದ್ರಾಪುರ ಮಠ | **ಡಾ. ಎ.ಕೆ. ಶಾಸ್ತ್ರಿ** |  |
| ೧೭. | ೧೩-೧೫ ಸೆಪ್ಟೆಂಬರ್ ೨೦೦೩ | | ಬಾದಾಮಿ ವಿಶ್ವಚೇತನ ಸಂಸ್ಥೆ ಬಾದಾಮಿ | **ಡಾ. ಎಸ್. ರಾಜಶೇಖರ್** |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|---|
| ೧೮. | ೨೪-೨೬ ಸೆಪ್ಟೆಂಬರ್ ೨೦೦೪ | | ಹೊನ್ನಾಳಿ, ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ | ಶ್ರೀ ಕೆಳದಿ ಗುಂಡಾ ಜೋಯಿಸ್ |  |
| ೧೯. | ೧೧-೧೩ ಸೆಪ್ಟೆಂಬರ್ ೨೦೦೫ | ಸೇಡಂ | ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆ | ಡಾ. ಬಿ.ವ್ಹಿ. ಶಿರೂರ |  |
| ೨೦. | ೯-೧೧ ಸೆಪ್ಟೆಂಬರ್ ೨೦೦೬ | ನಂಜನಗೂಡು | ಶ್ರೀ ರಾಘವೇಂದ್ರ ಸ್ವಾಮಿಗಳ ಮಠ | ಡಾ. ಸೂರ್ಯನಾಥ ಕಾಮತ್ |  |
| ೨೧. | ೮-೧೦ ಸೆಪ್ಟೆಂಬರ್ ೨೦೦೭ | ರಾಮನಗರ | ಹಗರಿಬೊಮ್ಮನಹಳ್ಳಿಯ ಶ್ರೀರಾಮ ಯುವಕ ಸಂಘ | ಪ್ರೊ. ಲಕ್ಷ್ಮಣ್ ತೆಲಗಾವಿ |  |
| ೨೨. | ೧೮-೨೧ ಸೆಪ್ಟೆಂಬರ್ ೨೦೦೮ | | ಧರ್ಮಸ್ಥಳ | ಡಾ. ವಸುಂಧರಾ ಫಿಲಿಯೋಜಾ |  |
| ೨೩. | ೧೦-೧೨ ಅಕ್ಟೋಬರ್ ೨೦೦೯ | | ಬಾಳೆಹೊನ್ನೂರು | ಡಾ. ಎಂ.ಜಿ. ನಾಗರಾಜ್ |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು | |
|---|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ<br>ಅಕ್ಟೋಬರ್ ೨೦೦೧ | ಉಡುಪಿ | *ಡಾ. ಕೆ.ವಿ. ರಮೇಶ* |  |
| ೨ | ೧೬ನೇ ವಾರ್ಷಿಕ ಸಮ್ಮೇಳನ<br>ಸೆಪ್ಟಂಬರ್ ೨೦೦೨ | ಹೊಸನಗರ | *ಡಾ. ಶ್ರೀನಿವಾಸ ರಿತ್ತಿ* |  |
| ೩ | ೧೭ನೇ ಸಮ್ಮೇಳನದ<br>ಸೆಪ್ಟಂಬರ್ ೨೦೦೩ | ಬಾದಾಮಿ | *ಡಾ. ದೇವರಕೊಂಡಾರೆಡ್ಡಿ* |  |
| ೪ | ೧೮ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೪ | ಹೊನ್ನಾಳಿ | *ಡಾ. ಬಿ. ರಾಜಶೇಖರಪ್ಪ* |  |
| ೫ | ೧೯ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೫ | ಸೇಡಂ | *ಡಾ. ಕೆ.ಆರ್. ಗಣೇಶ್* |  |
| ೬ | ೨೦ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೬ | ನಂಜನಗೂಡು | *ಡಾ. ಎಂ.ಜಿ. ನಾಗರಾಜ್* |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು | |
|---|---|---|---|---|
| ೭ | ೨೧ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೭ | ಹಗರಿಬೊಮ್ಮನಹಳ್ಳಿ | **ಡಾ. ಎಚ್.ಎಸ್. ಗೋಪಾಲರಾವ್** |  |
| ೮ | ೨೨ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೮ | ಧರ್ಮಸ್ಥಳ | **ಡಾ. ಪಿ.ಎನ್. ನರಸಿಂಹಮೂರ್ತಿ** |  |
| ೮ | ೨೩ನೇ ಸಮ್ಮೇಳನ<br>ಅಕ್ಟೋಬರ್ ೨೦೦೯ | ಬಾಳೇಹೊನ್ನೂರು | **ಶ್ರೀಮತಿ ಹನುಮಾಕ್ಷಿ ಗೋಗಿ** |  |
| ೯ | ೨೪ನೇ ಸಮ್ಮೇಳನ<br>ನವೆಂಬರ್ ೨೦೧೦ | ಆದಿಚುಂಚನಗಿರಿ | **ಡಾ. ಪಿ.ವಿ. ಕೃಷ್ಣಮೂರ್ತಿ** |  |
| ೧೦ | ೨೫ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೧೧ | ಬೆಂಗಳೂರು | **ಶ್ರೀ ಕೆ. ಮೊಹಮದ್ ಷರೀಫ್** |  |

# ಕರ್ನಾಟಕ ಇತಿಹಾಸ ಅಕಾದೆಮಿ ೨೪ನೆಯ ವಾರ್ಷಿಕ ಸಮ್ಮೇಳನ

ಸಮ್ಮೇಳನಾಧ್ಯಕ್ಷರು : ಡಾ॥ ಎಂ.ಎಸ್. ಕೃಷ್ಣಮೂರ್ತಿ*

## ಅಧ್ಯಕ್ಷ ಭಾಷಣ

ಪರಮಪೂಜ್ಯ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಪಾದ ಕಮಲಗಳಿಗೆ ವಂದಿಸಿ ನನ್ನ ಈ ಅಧ್ಯಕ್ಷ ಭಾಷಣವನ್ನು ತಮ್ಮೆಲ್ಲರ ಮುಂದಿಡುತ್ತಿದ್ದೇನೆ.

ಪೂಜ್ಯ ಗುರುವರ್ಯರೇ, ವೇದಿಕೆಯ ಮೇಲೆ ಉಪಸ್ಥಿತರಿರುವ ಗಣ್ಯರೇ, ಕರ್ನಾಟಕ ಇತಿಹಾಸ ಅಕಾದೆಮಿಯ ಗೌರವಾನ್ವಿತ ಅಧ್ಯಕ್ಷರಾದ ಡಾ. ಸೂರ್ಯನಾಥ ಕಾಮತ್ ರವರೇ, ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸದಸ್ಯರೇ, ನಾಡಿನ ವಿವಿಧ ಭಾಗಗಳಿಂದ ಬಂದು ನೆರೆದಿರುವ ನನ್ನ ನೆಚ್ಚಿನ ವಿದ್ವಾಂಸ ಮಿತ್ರರೇ, ಹಿರಿಯರೇ, ಕಿರಿಯರೇ, ನನ್ನನ್ನು ಕರ್ನಾಟಕ ಇತಿಹಾಸ ಅಕಾದೆಮಿಯ ೨೪ನೇ ವಾರ್ಷಿಕ ಸಮ್ಮೇಳನಕ್ಕೆ ಸಮ್ಮೇಳನಾಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆಮಾಡಿ ಗೌರವಿಸಿರುವುದಕ್ಕೆ ಕರ್ನಾಟಕ ಇತಿಹಾಸ ಅಕಾದೆಮಿಯ ಎಲ್ಲಾ ಸದಸ್ಯರಿಗೂ ಮತ್ತು ನಿಮ್ಮೆಲ್ಲರಿಗೂ ನನ್ನ ಹೃತ್ಪೂರ್ವಕ ನಮನಗಳನ್ನು ಸಲ್ಲಿಸುತ್ತೇನೆ.

ಪುರಾತತ್ವ ಕ್ಷೇತ್ರದಲ್ಲಿ ಇದುವರೆವಿಗೂ ನಾನು ಮಾಡಿರುವ ಕೆಲಸಕ್ಕೆ ನನಗೆ ಸೂಕ್ತ ತರಬೇತಿಯನ್ನು, ಸಲಹೆ ಸೂಚನೆಗಳನ್ನು, ಮಾರ್ಗದರ್ಶನವನ್ನು ನೀಡಿದ ನನ್ನ ಗುರುವೃಂದಕ್ಕೂ, ಈ ಕ್ಷೇತ್ರದಲ್ಲಿ ಸಂಶೋಧನೆ ನಡೆಸಲು ನನಗೆ ಸ್ಫೂರ್ತಿ ನೀಡಿರುವ ಪುರಾತತ್ವ ಕ್ಷೇತ್ರದ ಎಲ್ಲಾ ಪೂರ್ವ ಸೂರಿಗಳಿಗೂ ವಂದಿಸುವುದು ನನ್ನ ಇಂದಿನ ಆದ್ಯ ಕರ್ತವ್ಯವಾಗಿದೆ.

ಶ್ರೀ ಕ್ಷೇತ್ರ ಆದಿಚುಂಚನಗಿರಿ ಕರ್ನಾಟಕದ ಮಹತ್ವವಾದ ಒಂದು ಧಾರ್ಮಿಕ ಕ್ಷೇತ್ರ. ಪುರಾಣ ಪ್ರಸಿದ್ಧವಾದ ಈ ಕ್ಷೇತ್ರಕ್ಕೆ ದೀರ್ಘವಾದ ಇತಿಹಾಸವಿದೆ, ಮಹತ್ವವಿದೆ ಮತ್ತು ದೈವಶಕ್ತಿ ಇದೆ. ನಿಸರ್ಗ ಸೌಂದರ್ಯಕ್ಕೂ ಸಹ ಈ ಕ್ಷೇತ್ರ ಪ್ರಸಿದ್ಧ. ಇಂತಹ ಸುಂದರವಾದ ಪರಶಿವನ ಕ್ಷೇತ್ರದಲ್ಲಿ ಇತ್ತೀಚೆಗೆ ಭೈರವ ದೇವರಿಗಾಗಿ ಬೃಹತ್ ದೇವಾಲಯವೊಂದು ನಿರ್ಮಾಣವಾಗಿರುವುದು ಸಂತೋಷದ ವಿಷಯ. ಆದಿಚುಂಚನಗಿರಿಯ ಶ್ರೀ ಮಠದ ಎಪ್ಪತ್ತೊಂದನೆಯ ಯತಿಗಳೆನಿಸಿದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಯವರು ಈ ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಗೆ ಅವಿರತವಾಗಿ ಶ್ರಮಿಸುತ್ತಿದ್ದಾರೆ.

ಆದಿಚುಂಚನಗಿರಿಯಂತಹ ಪವಿತ್ರ ಧಾರ್ಮಿಕ ಕ್ಷೇತ್ರದಲ್ಲಿ ನಡೆಯುತ್ತಿರುವ, ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನದ ಅಧ್ಯಕ್ಷನಾಗಿ ಭಾಷಣ ಮಾಡುವುದಕ್ಕೆ ನನಗೆ ಅವಕಾಶ ಸಿಕ್ಕಿರುವುದು ನನ್ನ ಸುದೈವವೆಂದು ಭಾವಿಸಿದ್ದೇನೆ.

ನನ್ನ ಈ ಭಾಷಣದ ವಸ್ತು – ವಿಷಯ ಕನ್ನಡ ನೆಲದ, ಕನ್ನಡ ಜನರ ವಾಸ್ತು ಸ್ವಂತಿಕೆ, ವಾಸ್ತು ಮೂಲ, ವಾಸ್ತು ಆವಿಷ್ಕಾರ, ವಾಸ್ತು ವಿಶೇಷತೆ, ವಾಸ್ತು ಕುಶಲತೆ, ಹಿರಿಮೆ–ಗರಿಮೆಗಳ ಬಗ್ಗೆ ಹೊಸ ಹೊಸ ಮಾಹಿತಿ ನೀಡಿ, ಕನ್ನಡಿಗರ ಬುದ್ಧಿ ಕೌಶಲವನ್ನೂ, ಕನ್ನಡ ವಾಸ್ತು ಶ್ರೇಷ್ಠತೆಯನ್ನೂ ಎತ್ತಿ ತೋರಿಸುವುದೇ ಆಗಿದೆ.

ಪ್ರಸ್ತುತ ಭಾಷಣಕ್ಕಾಗಿ ನಾನು ಬಳಸಿಕೊಂಡಿರುವ ಬಹುತೇಕ ಮಾಹಿತಿಗಳು, ತಂಡದ ಮುಖ್ಯಸ್ಥನಾಗಿ ನಾನು ನಡೆಸಿದ ಪುರಾತತ್ವ ಉತ್ಖನನಗಳಿಂದ ಆರಿಸಿಕೊಂಡಂಥವು. ಪುರಾತತ್ವ ಉತ್ಖನನಗಳು, ನಿಮಗೆಲ್ಲ ತಿಳಿದಿರುವಂತೆ, ಒಬ್ಬ ವ್ಯಕ್ತಿ ಮಾಡಬಹುದಾದಂತಹ ಸಂಶೋಧನ ಪ್ರಕ್ರಿಯೆ ಅಲ್ಲ. ಇದಕ್ಕೆ ಸಂಘ–ಸಂಸ್ಥೆಗಳ, ಸಹೋದ್ಯೋಗಿಗಳ, ವಿದ್ವಾಂಸರ, ಸಂಶೋಧಕರ ಸಹಕಾರ – ನೆರವು ಅತ್ಯಗತ್ಯ. ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯದ ನಿರ್ದೇಶಕರಾಗಿದ್ದ ಶ್ರೀಯುತ ಚಿರಂಜೀವಿ ಸಿಂಗ್, ಡಾ. ಡಿ. ವಿ. ದೇವರಾಜು, ಹಾಲಿ ನಿರ್ದೇಶಕರಾದ ಡಾ. ಆರ್. ಗೋಪಾಲ್ ಮತ್ತು ಸಹಾಯಕ ನಿರ್ದೇಶಕರಾದ ಶ್ರೀಯುತ ಟಿ.ಎಸ್. ಗಂಗಾಧರ್ ಇವರುಗಳು, ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಪ್ರಾಧ್ಯಾಪಕರುಗಳಾದ ಡಾ. ಎ. ವಿ.

*(ನಿ) ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ವಿಭಾಗ, ಮಾನಸಗಂಗೋತ್ರಿ, ಮೈಸೂರು ವಿ.ವಿ. ಮೈಸೂರು–೫೭೦೦೦೬.

ನರಸಿಂಹಮೂರ್ತಿ (ನಿವೃತ್ತರು), ಡಾ. ಎಂ. ವಿ. ಕೃಷ್ಣಪ್ಪ ಮತ್ತು ಇತರ ಸಹೋದ್ಯೋಗಿಗಳು. ಇವರೆಲ್ಲರೂ ನನ್ನ ಸಂಶೋಧನೆಗೆ ವಿವಿಧ ರೀತಿಯಲ್ಲಿ ನೆರವು ನೀಡಿ ನನ್ನ ಸಂಶೋಧನೆ ಒಂದು ನಿರ್ದಿಷ್ಟ ಗುರಿ ಮುಟ್ಟುವುದರಲ್ಲಿ ಸಹಕಾರಿಯಾಗಿದ್ದಾರೆ. ಇವರೆಲ್ಲರಿಗೂ ನಾನು ಆಭಾರಿ ಯಾಗಿದ್ದೇನೆ.

ಕರ್ನಾಟಕದ ವಾಸ್ತು ಪರಂಪರೆಗೆ ಮಹತ್ವದ ಸ್ಥಾನವಿದೆ. ಈ ಪರಂಪರೆಯನ್ನು ಕರ್ನಾಟಕದ ಜನತೆ ಯಾವುದೇ ನೆರೆ – ಹೊರೆಯವರಿಂದ ಪಡೆದುದಲ್ಲ. ಈ ವಾಸ್ತು ವಿದ್ಯೆ ಕರ್ನಾಟಕದ ನೆಲದಲ್ಲಿ ಹುಟ್ಟಿದುದೂ, ಕರ್ನಾಟಕದ ಜನತೆ ಸ್ವಂತ ಬುದ್ಧಿಶಕ್ತಿಯಿಂದ ರೂಢಿಸಿ ಬೆಳೆಸಿದುದೂ ಆಗಿದೆ. ಇವೆಲ್ಲ ವಿಷಯಕ್ಕೂ ಸಾಕಷ್ಟು ಸಾಕ್ಷಿ, ಪುರಾವೆಗಳು ಕರ್ನಾಟಕದಲ್ಲೇ ದೊರಕಿವೆ. ಕನ್ನಡ ವಾಸ್ತುವಿನ ಸ್ವಂತಿಕೆಯನ್ನು ಅರಿಯದೇ ಇಷ್ಟೂ ವರ್ಷಗಳು ನಾವು ಕರ್ನಾಟಕದ ವಾಸ್ತು ಮೂಲವನ್ನು ಹುಡುಕಲು, ನೆರೆ ಪ್ರಾಂತ್ಯಗಳತ್ತ, ಅದರಲ್ಲೂ ತಮಿಳುನಾಡಿನತ್ತ ನೋಡುವ ಪರಿಸ್ಥಿತಿಯೊದಗಿತ್ತು. ಇತ್ತೀಚಿನ ಪುರಾತತ್ವ ಶೋಧನೆಗಳಿಂದ ಕರ್ನಾಟಕದ ವಾಸ್ತುಕಲೆ ನೆರೆ ಪ್ರಾಂತ್ಯಗಳ ವಾಸ್ತು ಕಲೆಗಿಂತಲೂ ಪ್ರಾಚೀನವಾದದ್ದು; ಗುಣಮಟ್ಟದಲ್ಲಿ, ಶ್ರೇಷ್ಠವಾದದ್ದು; ಮೂಲತಃ ಇದು ಸ್ಥಳೀಯ ಬುದ್ಧಿ ಶಕ್ತಿಯಿಂದ ಹುಟ್ಟಿದುದು; ಇದರ ಆಚರಣೆ / ಬಳಕೆ / ಉಪಯೋಗ ನೆರೆ ಪ್ರಾಂತ್ಯಗಳಿಗಿಂತಲೂ ಮುಂಚೆ ಕರ್ನಾಟಕದಲ್ಲೇ ಆಯಿತು ; ಈ ಪ್ರಚಂಡ ವಾಸ್ತು ಜ್ಞಾನ, ಕರ್ನಾಟಕದಲ್ಲೇ, ನಂತರದ ಕಾಲದ ವಾಸ್ತು ಜ್ಞಾನಕ್ಕೂ ಅಡಿಪಾಯವಾಯಿತು. ಇದರ ಪ್ರಭಾವ ಕ್ರಮೇಣ, ತಮಿಳುನಾಡೂ ಸೇರಿದಂತೆ, ನೆರೆ ಪ್ರಾಂತಗಳಿಗೂ ಹರಡಿತು ಎಂದು ತಿಳಿದು ಬಂದಿದೆ. ಕನ್ನಡಿಗರ ವಾಸ್ತು ಜ್ಞಾನ, ಅದರ ಶ್ರೇಷ್ಠತೆ, ಅದನ್ನು ಉಪಯೋಗಿಸಿದ ಕ್ರಮ, ಬಗೆಗಳು, ವಿಧಾನಗಳು ಈ ಎಲ್ಲಾ ವಿಷಯಗಳನ್ನೂ ಇಂದಿನ ವಿದ್ವತ್ಸಭೆಯ ಮುಂದಿಡುವುದೇ ನನ್ನ ಉದ್ದೇಶ. ಈ ಭಾಷಣದ ಸಾರವನ್ನು ತಿಳಿದ ಮೇಲೆ ಸರ್ವರಿಗೂ ವಿದಿತವಾಗುವ ಅಂಶ ಒಂದೇ. ಅದೇನೆಂದರೆ ಕನ್ನಡ ನೆಲದಲ್ಲಿ, ಕನ್ನಡಿಗರ ಚಾಣಾಕ್ಷತೆಯಲ್ಲಿ ಅರಳಿದ ವಾಸ್ತು ಆಲೋಚನೆಗಳು, ತಂತ್ರ ವಿಧಾನಗಳು, ನೆರೆ ಪ್ರಾಂತ್ಯಗಳ ಜನರಲ್ಲಿ ಅರಳಿದ ವಾಸ್ತು ಆಲೋಚನೆ ಗಳಿಗಿಂತ ಪ್ರಾಚೀನವಾದವು, ಭಿನ್ನವಾದವು, ವಿಶಿಷ್ಟವಾದವು ಮತ್ತು ಕೆಲವಂಶಗಳಲ್ಲಿ ಶ್ರೇಷ್ಠವಾದವೂ ಕೂಡ.

ಕನ್ನಡಿಗರ ವಾಸ್ತು ಜ್ಞಾನದ ಮಟ್ಟವನ್ನು ತಿಳಿಯುವುದಕ್ಕೆ ಮುಂಚೆ ಇದಕ್ಕೆ ಪೂರಕವಾಗಿ ಪ್ರಾಚೀನ ಕನ್ನಡ ಜನರ ಸಾಂಸ್ಕೃತಿಕ ಸಾಧನೆಗಳ ಅರಿವನ್ನು ಸ್ವಲ್ಪ ಮಟ್ಟಿಗೆ ನೀಡುವುದು ಅವಶ್ಯಕ ಎನಿಸುತ್ತದೆ. ನನ್ನ ಮುಂದಿರುವುದು ವಿದ್ವತ್ಸಭೆ. ತಾವೆಲ್ಲರೂ ಈ ಸಭೆಯ ವಿವಿಧ ಮುಖಗಳು. ನಾನು ಪರಿಚಯಾತ್ಮಕವಾಗಿ ತಿಳಿಯಪಡಿಸುತ್ತಿರುವ ಈ ಅಂಶಗಳು ನಿಮಗಾರಿಗೂ ಹೊಸತೇನಲ್ಲ. ಆದರೂ ಮುಖ್ಯ ವಿಷಯ ನಿರೂಪಣೆಗೆ ಹಿನ್ನೆಲೆಯಾಗಿ ಇದು ಅವಶ್ಯಕ ಎನ್ನುವ ದೃಷ್ಟಿಯಿಂದ ಕೆಲವೊಂದು ಸಾಮಾನ್ಯ ವಿಷಯಗಳನ್ನು ನಾನು ಇಲ್ಲಿ ನಿರೂಪಿಸುತ್ತಿದ್ದೇನೆ ಅಷ್ಟೆ.

ಕರ್ನಾಟಕದಲ್ಲಿ ಆದಿ ಶಿಲಾಯುಗದ ಕಾಲದಿಂದಲೇ ಜನವಸತಿ ಇದ್ದುದಕ್ಕೆ ಸಾಕಷ್ಟು ಪುರಾವೆಗಳು ದೊರೆತಿವೆ. ಪ್ರಪಂಚದ ಯಾವುದೇ ಭಾಗದಲ್ಲಿ ಕಾಣಬರುವ ಶಿಲಾಯುಗದ ಮಾನವನ ಬೆಳವಣಿಗೆಯ ವಿವಿಧ ಘಟ್ಟಗಳು ಅದೇ ಲಕ್ಷಣಗಳೊಂದಿಗೆ, ಅದೇ ಕಾಲಮಾನಗಳಿಗೆ ಹೆಚ್ಚೂ ಕಡಿಮೆ ಹೊಂದಿಕೊಂಡಂತೆ ಕರ್ನಾಟಕದಲ್ಲೂ ಕಾಣಬರುತ್ತದೆ. ಇದರಿಂದಾಗಿ ಕನ್ನಡ ನೆಲ ಆದಿ ಮಾನವನ ಕಾಲದಿಂದಲೂ ಜನವಸತಿಯಿಂದ ಕೂಡಿತ್ತು. ಇಲ್ಲಿಯೂ ಸಹ ಮಾನವನು ಸಾಂಸ್ಕೃತಿಕವಾಗಿ, ತಾಂತ್ರಿಕವಾಗಿ ಎಲ್ಲಾ ರೀತಿಯಿಂದಲೂ ಬೇರೆ ದೇಶದ, ಪ್ರಾಂತ್ಯದ, ತನ್ನಿತರ ಸಮಕಾಲೀನರಂತೆ ಪ್ರಗತಿ ಹೊಂದಿದ್ದನು ಎಂಬ ಅಂಶ ಸ್ಪಷ್ಟವಾಗುತ್ತದೆ.

ಇನ್ನು ವಾಸ್ತು ಪರಂಪರೆಯ ವಿಷಯಕ್ಕೆ ಬರುವುದಾದರೆ, ಬೃಹತ್ ಶಿಲಾಯುಗ ಸಂಸ್ಕೃತಿ ಅಥವಾ ಕಬ್ಬಿಣ ಯುಗದ ಸಂಸ್ಕೃತಿ ಕಾಲದಿಂದ, ಕರ್ನಾಟಕ ವಾಸ್ತು ಪರಂಪರೆ ಸ್ಪಷ್ಟವಾಗಿ ಪ್ರಾರಂಭವಾಗುತ್ತದೆ ಎನ್ನಬಹುದು. ಬೃಹದಾಕಾರದ ಕಲ್ಲುಗಳನ್ನು ಬಳಸಿ ನಿರ್ಮಿಸಿದ ಕಲ್ಮನೆಗಳು (ಡಾಲ್ಮೆನ್ಸ್) ಕರ್ನಾಟಕದ ಉದ್ದಗಲಕ್ಕೂ ದೊರೆಯುತ್ತವೆ. ಕಲ್ಲಿನ ಚಪ್ಪಡಿಗಳಿಂದ ನಿರ್ಮಿತವಾದ ಈ ಗೋರಿಗಳು, ಒಟ್ಟು ವಾಸ್ತು ಸೌಂದರ್ಯದ ದೃಷ್ಟಿಯಿಂದ, ತಾಂತ್ರಿಕ ಲಕ್ಷಣಗಳ ದೃಷ್ಟಿಯಿಂದ ವಿಶೇಷವಾದವು. ನಿರ್ಮಾಣದಲ್ಲಿ ಉಪಯುಕ್ತತೆ, ಆಯುಷ್ಯ, ಭದ್ರತೆಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಇವುಗಳನ್ನು ನಿರ್ಮಿಸಿದ್ದಾರೆ. ಇದರಿಂದಾಗಿ ಇವುಗಳು ಇಂದಿಗೂ ಸಹ ಅನೇಕ ಸಂಖ್ಯೆಯಲ್ಲಿ ಉಳಿದುಕೊಂಡು ಬಂದಿವೆ.

ಬೃಹತ್ ಶಿಲಾ ಸಂಸ್ಕೃತಿ ದಕ್ಷಿಣ ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಕ್ರಿ.ಶ.ಕದ ಪ್ರಾರಂಭದವರೆಗೂ ಮುಂದುವರೆದಿತ್ತು ಎಂಬುದು ಪುರಾತತ್ವಜ್ಞರ ಅಭಿಮತ. ಬೃಹತ್ ಶಿಲಾ ಸಂಸ್ಕೃತಿಯ ಜನರ ಬುದ್ಧಿವಂತಿಕೆ ಕೇವಲ ಕಲ್ಗೋರಿಗಳ ನಿರ್ಮಾಣಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಆ ಕಾಲಕ್ಕಾಗಲೇ ಅವರು ಪರಿಣಾಮಕಾರಿಯಾಗಿ ಬಳಸಬಹು ದಾದಂತಹ ಲೋಹದ ಶಸ್ತ್ರಾಸ್ತ್ರಗಳನ್ನು, ಸುಂದರ, ಸಾಲಂಕೃತ ಮಡಿಕೆ–ಕುಡಿಕೆಗಳನ್ನೂ ತಯಾರಿಸುವಂಥವರೂ, ಕೃಷಿ ಉತ್ಪಾದನೆ ಮಾಡುತ್ತಿದ್ದವರೂ, ಆಭರಣಾದಿಗಳನ್ನು ತಯಾರಿಸುತ್ತಿದ್ದವರೂ, ಊರು–ಕೇರಿಗಳಲ್ಲಿ ವಾಸ

ಮಾಡುವವರೂ, ಸಾಮಾಜಿಕ ಪ್ರಜ್ಞೆ ಉಳ್ಳವರೂ ಆಗಿದ್ದರು ಎಂಬುದು ನಿರ್ವಿವಾದಿತ ವಿಷಯ. ಇವಲ್ಲದೇ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮುಂತಾದ ಹಲವಾರು ಅಮೂರ್ತ ಭಾವನೆಗಳೂ, ಸಿದ್ಧಾಂತಗಳೂ, ನಂಬಿಕೆಗಳೂ ಮುಂತಾದವುಗಳನ್ನು ರೂಢಿಸಿಕೊಂಡಿದ್ದರು ಎಂಬ ವಿಚಾರ ಪುರಾತತ್ವಿಕವಾಗಿಯಲ್ಲದಿದ್ದರೂ, ಸಾಂಪ್ರದಾಯಿಕವಾಗಿ, ಪೌರಾಣಿಕವಾಗಿ ತಿಳಿದಿರುವ ವಿಚಾರ. ಏಕೆಂದರೆ ಕರ್ನಾಟಕದ ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಕ್ಕಾಗಲೇ ಉತ್ತರ ಭಾರತದಲ್ಲಿ ವೇದಯುಗ ಕಳೆದಿತ್ತು. ಮೌರ್ಯರ ಚಂದ್ರಗುಪ್ತ, ಚಾಣಕ್ಯರ ಕಾಲಕ್ಕೆ, ದಕ್ಷಿಣ ಭಾರತಕ್ಕೂ, ಉತ್ತರ ಭಾರತಕ್ಕೂ ಸಾಕಷ್ಟು ಪ್ರಮಾಣದಲ್ಲಿ, ಸಾಂಸ್ಕೃತಿಕ, ವ್ಯಾಪಾರಿಕ, ಸಂಬಂಧಗಳು ಏರ್ಪಟ್ಟಿದ್ದವು. ಈ ಅಂಶ ಪುರಾತತ್ವಿಕ ವಾಗಿಯೂ ರುಜುವಾತಾಗಿದೆ. ಆದರೆ ಬೃಹತ್ ಶಿಲಾಯುಗ ಸಂಸ್ಕೃತಿಯ ರೂಪ ನಮಗೆ ಕೇವಲ ಅವರ ಶವ ಸಂಸ್ಕಾರ ಪದ್ಧತಿ, ವಸ್ತು, ವಿಧಾನಗಳ ಭೌತಿಕ ರೂಪಗಳಿಂದ ಮಾತ್ರ ತಿಳಿದು ಬಂದಿದೆಯೇ ಹೊರತು, ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ, ವ್ಯಾವಹಾರಿಕವಾಗಿ ಇವರ ವಿಚಾರ ತಿಳಿದಿರುವುದು ತೃಣ ಮಾತ್ರ.

ಇಂತಹ ಬೃಹತ್ ಶಿಲಾಯುಗ ಸಂಸ್ಕೃತಿ ಕ್ರಿ. ಶ. ದ ಪ್ರಾರಂಭದ ಹಿಂದು ಮುಂದಿನ ಶತಮಾನಗಳಲ್ಲಿ, ದಕ್ಷಿಣ ಭಾರತದಲ್ಲಿ ಶಾತವಾಹನ ಸಂಸ್ಕೃತಿಯಾಗಿ, ಇದ್ದಕ್ಕಿದ್ದಂತೆ ಪ್ರವರ್ಧಮಾನಕ್ಕೆ ಬಂದು ರಾಜಕೀಯ, ಸಾಂಸ್ಕೃತಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಅಭೂತಪೂರ್ವ ಪ್ರಗತಿ ಸಾಧಿಸಿತು ಎಂಬ ವಿಚಾರ ನಿಜಕ್ಕೂ ಸೋಜಿಗವೆನಿಸುತ್ತದೆ. ಶಾತವಾಹನರು ಅವರ ಮಾಂಡಲಿಕರೊಡಗೂಡಿ ಉತ್ತರ ಕರ್ನಾಟಕದ ಮೇಲೆ ಅಧಿಪತ್ಯ ನಡೆಸಿದರು. ಚಿತ್ರದುರ್ಗ ಜಿಲ್ಲೆಯಿಂದ ದಕ್ಷಿಣಕ್ಕೆ ಶಾತವಾಹನರ ನಾಣ್ಯಗಳು ಸಿಗುವುದು ಅಪರೂಪ. ಹೀಗಾಗಿ ಅವರ ರಾಜ್ಯದ ದಕ್ಷಿಣ ಎಲ್ಲೆ ಅಲ್ಲಿಗೆ ನಿಂತಿರಬೇಕು. ಅಶೋಕನ ಬ್ರಹ್ಮಗಿರಿ ಶಾಸನ, ಚಿತ್ರದುರ್ಗ ಆತನ ಚಕ್ರಾಧಿಪತ್ಯದ ದಕ್ಷಿಣ ಎಲ್ಲೆಯಾಗಿತ್ತೆಂದು ಸೂಚಿಸುತ್ತದೆ. ಚಿತ್ರದುರ್ಗದಿಂದ ದಕ್ಷಿಣಕ್ಕೆ ಚೋಳ–ಪಾಂಡ್ಯರ ಆಳ್ವಿಕೆಯ ಪ್ರದೇಶವಿತ್ತೆಂದು ಅಶೋಕನೇ ಹೇಳುತ್ತಾನೆ. ಹಾಗಿದ್ದ ಪಕ್ಷದಲ್ಲಿ ದಕ್ಷಿಣ ಕರ್ನಾಟಕದಲ್ಲಿ, ಆ ಕಾಲದಲ್ಲಿ ಯಾವ ರಾಜಕೀಯ ಶಕ್ತಿ ಆಳ್ವಿಕೆ ನಡೆಸುತ್ತಿತ್ತು. ಚೋಳ–ಪಾಂಡ್ಯ ಪ್ರಭುತ್ವ ಈ ಭಾಗದ ಮೇಲೂ ವಿಸ್ತರಿಸಿತ್ತೇ, ಅಥವಾ ಈ ಭಾಗ ಒಂದು ಪ್ರಭುತ್ವ ಶೂನ್ಯ ತಾಣವಾಗಿತ್ತೇ, ಇಲ್ಲಿದ್ದ ಸಂಸ್ಕೃತಿ ಯಾವುದು, ಇಲ್ಲಿಯ ಆಗು–ಹೋಗು ಗಳನ್ನು ನಿಯಂತ್ರಿಸುತ್ತಿದ್ದವರು ಯಾರು ಎಂಬೆಲ್ಲ ಪ್ರಶ್ನೆಗಳು ಉದ್ಭವವಾಗುತ್ತವೆ.

ದಕ್ಷಿಣ ಕರ್ನಾಟಕದ ಇತಿಹಾಸ ಪ್ರಾರಂಭಕಾಲದ ಸಂಸ್ಕೃತಿ ಮತ್ತು ಅದಕ್ಕೆ ಮುಂಚಿನ ಸ್ಥಿತಿಗತಿ ಇವೆಲ್ಲವನ್ನೂ ಪುರಾತತ್ವಿಕ ಆಧಾರಗಳ ಮೇಲೆ ಆಲೋಚಿಸಿದಾಗ, ಈ ಭಾಗವೂ ಸಹ ಉತ್ತರ ಕರ್ನಾಟಕದ ಭಾಗಗಳಿಗೆ ಸಾಂಸ್ಕೃತಿಕ ವಾಗಿ ಸರಿಸಮಾನವಾಗಿತ್ತೆಂಬ ಅಂಶ ಸ್ಪಷ್ಟವಾಗುತ್ತದೆ. ದಕ್ಷಿಣ ಕರ್ನಾಟಕದಲ್ಲಿ ನಡೆದಿರುವ ಪುರಾತತ್ವ ಉತ್ಖನನಗಳು ಎಂದರೆ, (ಬ್ರಹ್ಮಗಿರಿ, ಚಂದ್ರವಳ್ಳಿಗಳನ್ನು ಬಿಟ್ಟು) ಜಡಿಗೇನಹಳ್ಳಿ, ತಿ. ನರಸೀಪುರ, ಹೆಮ್ಮಿಗೆ, ತಲಕಾಡು, ಬೂದಿತಿಟ್ಟು (ಚಾ. ನಗರ), ನಗರ, ಶಿವಮೊಗ್ಗ, ಹೆಗಡೆಹಳ್ಳಿ, ಕೊಪ್ಪ (ಕೊಡಗು), ಬನಹಳ್ಳಿ (ಕೋಲಾರ), ಮುತ್ತಲವಾಡಿ (ಮೈಸೂರು), ಕಲ್ಯಾಡಿ (ಹಾಸನ), ಕುಮಾರನಹಳ್ಳಿ (ಚಿತ್ರದುರ್ಗ), ರಾಜಘಟ್ಟ (ಬೆಂಗಳೂರು) ಮುಂತಾದ ಸ್ಥಳಗಳು. ಈ ಸ್ಥಳಗಳಲ್ಲಿ ದೊರೆತ ಪ್ರಾಕ್ಚಾರಿತ್ರಿಕ ಪುರಾವೆಗಳಿಂದ, ದಕ್ಷಿಣ ಕರ್ನಾಟಕದಲ್ಲೂ ಸಹ, ಮಾನವ ಸಂಸ್ಕೃತಿ ವಿಕಾಸ, ಅದರ ವಿವಿಧ ಘಟ್ಟಗಳು ಎಲ್ಲವೂ ದೇಶದ ಇತರ ಕಡೆಗಳಲ್ಲಿ ನಡೆದು ಬಂದಿರುವಂತೆಯೇ ಇವೆ. ಒಂದೇ ಒಂದು ಕೊರತೆ ಎಂದರೆ ಈ ಸ್ಥಳದಲ್ಲಿ ಇರಬೇಕಾಗಿದ್ದ ರಾಜ ಪ್ರಭುತ್ವದ ಅನುಪಸ್ಥಿತಿ.

ದಕ್ಷಿಣ ಕರ್ನಾಟಕದಲ್ಲಿ ಶಾತವಾಹನರ ಆಳ್ವಿಕೆಯ ಕುರುಹುಗಳು ಸ್ಪಷ್ಟವಾಗಿ ಗೋಚರಿಸದಿರುವುದರಿಂದ, ಅಶೋಕನೂ ಸಹ ಬ್ರಹ್ಮಗಿರಿಯ ದಕ್ಷಿಣಕ್ಕೆ ಚೋಳ–ಪಾಂಡ್ಯ ರಾಜ್ಯವಿದೆ ಎಂದು ಹೇಳುವುದರಿಂದ, ದಕ್ಷಿಣ ಕರ್ನಾಟಕ ಒಂದು, ಕನ್ನಡ–ತಮಿಳು ರಾಜ್ಯಗಳ ನಡುವಣ ಸೀಮೆ ಪ್ರದೇಶವಾಗಿತ್ತೆಂದು ಸ್ಪಷ್ಟವಾಗುತ್ತದೆ. ಈ ಗಡಿ ಪ್ರದೇಶ ಕ್ರಿ. ಶ.ದ ಮೊದಲೆರಡು ಶತಮಾನಗಳು ರಾಜಕೀಯ ನಿರ್ಲಕ್ಷಿತ ಪ್ರಾಂತವಾಗಿಯೇ ಇದ್ದಿರಬೇಕು. ಇಂತಹ ಪ್ರಾಂತ ಸಣ್ಣ–ಸಣ್ಣ ಪಾಳೆಯ ಪಟ್ಟುಗಳ ಹುಟ್ಟಿಗೆ ಸೂಕ್ತವಾದ ಸ್ಥಳ. ಹೀಗಾಗಿ ಈ ಪ್ರಾಂತ್ಯವು ಗಂಗರ, ಬಾಣರ ಮತ್ತು ಕದಂಬರ ಹುಟ್ಟಿಗೆ ಕಾರಣವಾಯಿತು. ಗಂಗರ ಪ್ರಾರಂಭ ಕಾಲದ (ಕ್ರಿ.ಶ.ಸು. ೩೦೦) ಆಳ್ವಿಕೆ, ಆಗ್ನೇಯ ಕರ್ನಾಟಕ ಮತ್ತು ಅದಕ್ಕೆ ಹೊಂದಿಕೊಂಡಂತಿರುವ ತಮಿಳುನಾಡಿನ ಪ್ರದೇಶಗಳ ಮೇಲೆಯೇ ಇತ್ತು. ಕಾವೇರಿ ನದಿಯ ಉತ್ತರ ದಂಡೆಯ ಮೇಲಿನ ತಲಕಾಡು ಇವರ ಒಂದು ಮುಖ್ಯ ಕೇಂದ್ರವಾಗಿತ್ತು. ಕೊಂಗುಣಿ ವರ್ಮ ಎಂಬ ಪ್ರಾಚೀನ ಗಂಗರಾಜರ ವಿಶಿಷ್ಟ ಬಿರುದು ಗಂಗರು ತಮಿಳು ನಾಡಿನ ಭಾಗಗಳ ಮೇಲೆ ಹೊಂದಿದ್ದ ಅಧಿಪತ್ಯದ ಕುರುಹು ಎಂದು ಭಾವಿಸಬಹುದು. ಮೇಲೆ ಹೇಳಿದ ಚಾರಿತ್ರಿಕ ಅಂಶಗಳಿಂದ, ಯಾವುದೇ ರಾಜಕೀಯ ಪ್ರಭುತ್ವವಿರಲಿ, ಇಲ್ಲದಿರಲಿ, ಮಾನವ ಸಂಸ್ಕೃತಿಯು ಇನ್ನಿತರ ಕಡೆಗಳಂತೆಯೇ, ಕರ್ನಾಟಕದ ಉದ್ದಗಲಕ್ಕೂ, ನಿರಂತರವಾಗಿ ಬೆಳೆದಿತ್ತು, ಬೆಳೆಯುತ್ತಿತ್ತು ಎಂಬ ಅಂಶ ಮಾತ್ರ ಸ್ಪಷ್ಟವಾಗುತ್ತದೆ.

ಕರ್ನಾಟಕ ಇತಿಹಾಸ ಅಕಾದೆಮಿಯ ಇದೇ ವೇದಿಕೆಯ ಮೇಲೆ ೧೯೯೩ನೇ ಇಸವಿಯಲ್ಲಿ, ಏಳನೆಯ ಸಮ್ಮೇಳನಾಧ್ಯಕ್ಷರಾಗಿ ಡಾ. ಅ. ಸುಂದರ ಅವರು ಮೈಸೂರಿನಲ್ಲಿ ಮಾಡಿದ ತಮ್ಮ ಅಧ್ಯಕ್ಷ ಭಾಷಣದಲ್ಲಿ "ಇಷ್ಟೆಲ್ಲಾ (ಸಂಶೋಧನೆಗಳು) ಆಗುತ್ತಿದ್ದರೂ ಕೂಡ, ಗಂಗ ಪೂರ್ವ ಮೈಸೂರು ಪ್ರದೇಶದ, ಅಷ್ಟೇ ಅಲ್ಲ ದಕ್ಷಿಣ ಕರ್ನಾಟಕದ ಇತಿಹಾಸವೇ ನಮಗೆ ತಿಳಿದಿಲ್ಲ. ಮೌರ್ಯ ಚಕ್ರವರ್ತಿ ಅಶೋಕನು ತನ್ನ ಸಾಮ್ರಾಜ್ಯದಿಂದ ದೂರವಿರುವ ಚೋಳ, ಪಾಂಡ್ಯ ಮೊದಲಾದ ರಾಜ್ಯಗಳನ್ನು ತನ್ನ ಶಾಸನದಲ್ಲಿ ಉಲ್ಲೇಖಿಸಿರುವಾಗ, ಇದರ ಪಕ್ಕದಲ್ಲಿಯೇ ಇದ್ದ ದಕ್ಷಿಣ ಕರ್ನಾಟಕದ ಬಗ್ಗೆ ಏನನ್ನೂ ಏಕೆ ಹೇಳಿಲ್ಲ ?" ಎಂದು ತಮ್ಮ ಅಳಲನ್ನು ವ್ಯಕ್ತಪಡಿಸಿದ್ದಾರೆ. ಆದರೆ ಇತ್ತೀಚೆಗೆ ನಡೆದಿರುವ ಪುರಾತತ್ವ ಉತ್ಖನನಗಳಿಂದ ದಕ್ಷಿಣ ಕರ್ನಾಟಕದ ದಕ್ಷಿಣ ತುದಿಯುವರೆಗೂ ಪ್ರವರ್ಧಮಾನವಾದ ಸಂಸ್ಕೃತಿಯು ನೆಲೆಸಿತ್ತು. ಈ ಭಾಗ ಕ್ರಿ. ಶ. ದ ಪ್ರಾರಂಭದ ಶತಮಾನಗಳಲ್ಲಿ ತಮಿಳು ರಾಜಪ್ರಭುತ್ವದ ಸೀಮೆಯಂಚಿನಲ್ಲಿತ್ತು. ಅಶೋಕನು ಈ ಗಡಿ ಭಾಗದ ಪಾಳೆಯ ಪಟ್ಟುಗಳನ್ನು ಹೆಚ್ಚಿಗೆ ಗಮನಕ್ಕೆ ತೆಗೆದುಕೊಳ್ಳದೆ ಕೇವಲ ಪ್ರಬಲ ರಾಜಕೀಯ ಶಕ್ತಿಗಳನ್ನು ಮಾತ್ರ ತನ್ನ ಶಾಸನದಲ್ಲಿ ಉಲ್ಲೇಖಿಸಿದ್ದನೆನ್ನಬಹುದು. ಕ್ರಿ. ಶ. ೩ನೇ ಶತಮಾನದಲ್ಲಿ ಗಂಗರು ಉದಯಿಸಿದಾಗ ಈ ಪ್ರದೇಶದ ನಿಜವಾದ ರಾಜಕೀಯ ಬಣದ ಉದಯವಾಯಿತೆನ್ನಬಹುದು.

ಇದಕ್ಕೆ ಪೂರಕವಾಗಿ ತಲಕಾಡಿನ ಉತ್ಖನನದಲ್ಲಿ ಕ್ರಿ. ಶ. ೧–೨ನೇ ಶತಮಾನಕ್ಕೆ ಸೇರುವ ಪದರದಲ್ಲಿ ಅಕ್ಕಸಾಲಿಗನ ಕಾರ್ಯಾಗಾರ ಮತ್ತು ಅದಕ್ಕೆ ಸೇರಿದ್ದ ತಿದಿ ಒಲೆ, ಚಿನ್ನ ಕರಗಿಸುವ ಮೂಸೆಗಳು, ಕಾರ್ಯಾಗಾರಕ್ಕೆ ಸಂಬಂಧಿಸಿದ ಇತರ ಮಡಿಕೆ ಪಾತ್ರೆಗಳು, ಇಜ್ಜಲು, ಬೂದಿ, ರಿಫ್ರಾಕ್ಟರಿ ಮಣ್ಣು (ಒಂದು ರೀತಿಯ ಬಿರುಸು ಮಣ್ಣು), ಜೊತೆಗೆ ರೋಮನ್ ಚಕ್ರವರ್ತಿ ಅಗಸ್ಟಸ್‌ನ (ಒಂದನೆಯ ಶತಮಾನ) ಕಾಲಕ್ಕೆ ಸೇರುವ ಚಿನ್ನದ ನಾಣ್ಯವೊಂದರಿಂದ ತಯಾರಿಸಲಾದ ಮಣ್ಣಿನ ಮುದ್ರೆಯ ಒಂದು ಭಾಗ (ಹಿಂಭಾಗ) ಇವೆಲ್ಲವೂ ದೊರೆತಿದ್ದು, ಈ ಕಾರ್ಯಾಗಾರದಲ್ಲಿ ರೋಮನ್ ನಾಣ್ಯದ ನಕಲನ್ನು ತಯಾರಿಸುತ್ತಿದ್ದರು ಎಂಬ ಅಂಶ ರುಜುವಾತಾಗಿದೆ. ರೋಮನ್ ನಾಣ್ಯದ ನಕಲಿನ ತಯಾರಿಕೆ, ತಲಕಾಡಿನ ದಕ್ಷಿಣಕ್ಕೆ ಇರುವ (ಸು. ೧೫೦ ಮೈಲಿ) ಕೊಯಮತ್ತೂರು ಬಳಿ ಸಹಸ್ರಾರು ಸಂಖ್ಯೆಯಲ್ಲಿ ರೋಮನ್ ನಾಣ್ಯಗಳು ದೊರೆತಿರುವುದು, ಮುಂತಾದ ಅಂಶಗಳು ಇಡೀ ಪ್ರದೇಶದಲ್ಲಿ ರೋಮನ್ ನಾಣ್ಯಗಳೇ ಆ ಕಾಲದಲ್ಲಿ ಚಲಾವಣೆಯಲ್ಲಿತ್ತೇ ಎಂಬ ಸಂದೇಹಕ್ಕೆ ಎಡೆ ಮಾಡಿಕೊಡುತ್ತದೆ. ನಕಲಿ ನಾಣ್ಯ ಮತ್ತು ನಾಣ್ಯ ತಯಾರಕರ ಬಗ್ಗೆ ಎಚ್ಚರದಿಂದಿರಬೇಕು ಎಂಬ ಸಲಹೆಯನ್ನು ಕೌಟಿಲ್ಯನೇ ಅರ್ಥಶಾಸ್ತ್ರದಲ್ಲಿ ನೀಡಿದ್ದಾನೆ. ಪ್ರಭುತ್ವದ ಕೇಂದ್ರದಿಂದ ದೂರದ (ಉತ್ತರದ) ಅಂಚಿನಲ್ಲಿದ್ದ ತಲಕಾಡಿನಲ್ಲಿ ಇಂತಹ ಕಾನೂನು ಬಾಹಿರ ಚಟುವಟಿಕೆಗಳು ನಡೆಯುವುದು ಸರ್ವೇ ಸಾಮಾನ್ಯ. ಇಂತಹ ಕಾನೂನು ಬಾಹಿರ ಚಟುವಟಿಕೆಗಳನ್ನು ನಾಶ ಮಾಡುವುದು ಆಳುವ ದೊರೆಯ ಕರ್ತವ್ಯವೂ ಕೂಡ ಆಗಿತ್ತು. ತಲಕಾಡಿನ ಈ ತಿದಿ ಕುಲುಮೆ ಕಾರ್ಯಾಗಾರ ನಾಶವಾಗಿರುವ ರೀತಿ, ಅಲ್ಲಿಯ ಎಲ್ಲಾ ಪಾತ್ರೆಗಳೂ ಒಡೆದು ಚೂರಾಗಿ ಅಲ್ಲಲ್ಲೇ ಬಿದ್ದಿರುವ ರೀತಿ, ಅಲ್ಲಿಯ ತಿದಿ ಒಲೆ, ಬೂದಿ ರಾಶಿ, ಇಜ್ಜಲು ಇವುಗಳ ಮೇಲೆ ಮಣ್ಣು ಸುರಿದು ನಾಶಮಾಡಿರುವ ರೀತಿ, ಇದ್ದ ಸ್ಥಳದಲ್ಲಿಯೇ ಉಳಿದಿರುವ ಅಕ್ಕಸಾಲಿಯ ಮಣ್ಣಿನ ಮಣೆ, ಇತ್ಯಾದಿ, ಎಲ್ಲವೂ ಈ ಕಾರ್ಯಾಗಾರವನ್ನು ರಾಜಭಟರು ಅನಿರೀಕ್ಷಿತ ಧಾಳಿ ಮಾಡಿ, ನಾಶ ಮಾಡಿದಂತೆ ಸೂಚಿಸುತ್ತದೆ.

ಈ ಎಲ್ಲಾ ಕುರುಹುಗಳಿಂದ ತಿಳಿದು ಬರುವ ಅಂಶವೆಂದರೆ ದಕ್ಷಿಣ ಕರ್ನಾಟಕ ಕ್ರಿ. ಶ. ದ ಪ್ರಾರಂಭ ಕಾಲದಿಂದಲೂ ಸಕಲ ರಾಜಕೀಯ ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಿಂದ ಕೂಡಿದ್ದ ಪ್ರದೇಶವಾಗಿತ್ತು. ಈ ಸ್ಥಳದಲ್ಲಿ ಅನೇಕ ನಗರಗಳು ತಲೆ ಎತ್ತಿದ್ದವು. ಯಾವುದೋ ಒಂದು ತಿಳಿಯದ ರಾಜಕೀಯ ಬಣ ಈ ಪ್ರದೇಶದ ಆಗು–ಹೋಗುಗಳನ್ನು ನಿಯಂತ್ರಿಸುತ್ತಿತ್ತು. ಕಾನೂನು ಬಾಹಿರ ಚಟುವಟಿಕೆಗಳೂ ಇಲ್ಲಿ ನಡೆಯುತ್ತಿದ್ದವು. ಅಂತಹ ಚಟುವಟಿಕೆಗಳನ್ನು ಆಳುವ ಪ್ರಭು ನಾಶಮಾಡಿ ಸಮಾಜದ ಸ್ವಾಸ್ಥ್ಯವನ್ನು ಸಂರಕ್ಷಿಸುತ್ತಿದ್ದನು.

ನಾಗರಿಕತೆ ಉಗಮವಾದ ಕಾಲದಿಂದಲೇ, ದೇಶದ ಇತರೆಲ್ಲೆಡೆಗಳಂತೆ ಕರ್ನಾಟಕದ ಉದ್ದಗಲಕ್ಕೂ, ಸಂಮೃದ್ಧವಾದ ನಾಗರಿಕ ಜನಜೀವನ ನಡೆಯುತ್ತಿತ್ತು ಎಂಬ ಅಂಶ ಮೇಲೆ ತಿಳಿಸಿದ ವಿಷಯಗಳಿಂದ ವೇದ್ಯವಾಗುತ್ತದೆ. ಅಂದ ಮೇಲೆ ಕರ್ನಾಟಕ ಇತಿಹಾಸ, ಪರಂಪರೆ, ಪ್ರಾರಂಭಕಾಲದಿಂದಲೂ ನಾಗರಿಕತೆಯ ಸಮಸ್ತ ಲಕ್ಷಣಗಳಿಂದ ಕಂಗೊಳಿಸುತ್ತಿತ್ತು ಎಂದರ್ಥ. ಇಲ್ಲಿಯ ಜನ ಎಲ್ಲಾ ಕ್ಷೇತ್ರಗಳಲ್ಲೂ, ಒಳ್ಳೆಯದು–ಕೆಟ್ಟದ್ದು, ಎಲ್ಲದರಲ್ಲೂ ಹೆಸರು ಮಾಡಿದ್ದರು. ಇಂತಹ ಸಂಮೃದ್ಧ ಪರಂಪರೆಯನ್ನುಳ್ಳ ನಮ್ಮ ನಾಡಿನ ಹಿರಿಮೆ–ಗರಿಮೆಗಳನ್ನು ಸೂಕ್ತವಾಗಿ ಸಂಶೋಧಿಸಿ ಅಧ್ಯಯನ ಮಾಡಿದಲ್ಲಿ ಕನ್ನಡಿಗರು ಯಾರಿಗೂ ಯಾವ ರೀತಿಯಲ್ಲೂ, ಮೊದಲಿನಿಂದಲೂ ಕಡಿಮೆ ಇರಲಿಲ್ಲ ಎಂಬ ಅಂಶ ಮನವರಿಕೆಯಾಗುತ್ತದೆ.

ಪ್ರಸ್ತುತ, ಇಂತಹ ಶ್ರೀಮಂತ ಪರಂಪರೆಯಲ್ಲಿ ಬೆಳೆದ ಕನ್ನಡ ವಾಸ್ತು ವಿಜ್ಞಾನ ಎಷ್ಟು ಪ್ರಾಚೀನ, ಎಷ್ಟು ಶ್ರೇಷ್ಠ, ಎಷ್ಟು ವೈವಿಧ್ಯಮಯ, ಎಷ್ಟು ಸ್ವತಂತ್ರ ಹಾಗೂ ಎಷ್ಟು ವಿಶಿಷ್ಟವಾದದ್ದು

ಎಂದು ತಿಳಿಯುವ ಪ್ರಯತ್ನ ಮಾಡೋಣ. ಕನ್ನಡ ವಾಸ್ತುವಿನ ಪ್ರಾಚೀನತೆ, ವೈವಿಧ್ಯತೆ ಮಹತ್ವ ಇವುಗಳನ್ನರಿಯದೆ, ಕನ್ನಡ ನಾಡಿನ ದೇವಾಲಯಗಳು ತಮಿಳು ವಾಸ್ತುವಿನಿಂದ ಪ್ರಭಾವಿತವಾಗಿವೆ. ತಮಿಳು ಶಿಲ್ಪಿಗಳು ಇಲ್ಲಿಗೆ ಬಂದು ದೇವಾಲಯಗಳನ್ನು ನಿರ್ಮಿಸಿದ್ದಾರೆ. ವಿಜಯನಗರ ಕಾಲದಲ್ಲೂ ಕರ್ನಾಟಕ ಶಿಲ್ಪಿಗಳನ್ನು ಬಿಟ್ಟು, ತಮಿಳುಶಿಲ್ಪಿಗಳನ್ನು ತಮಿಳುನಾಡಿನಿಂದ ಹಂಪಿಗೆ ಕರೆಯಿಸಿ ಅಲ್ಲಿ ದೇವಾಲಯ ಗಳನ್ನು ನಿರ್ಮಿಸಿದರು, ಎಂಬೆಲ್ಲಾ ಅಭಿಪ್ರಾಯಗಳನ್ನು ನೀಡಿರುವ ವಿದ್ವಾಂಸರುಗಳನ್ನು ನಾವು ಕೇಳಿದ್ದೇವೆ. ಇತ್ತೀಚಿನ ಪುರಾತತ್ವ ಉತ್ಖನನಗಳ ಬೆಳಕಿನಲ್ಲಿ ಕನ್ನಡ ವಾಸ್ತುವಿನ ಅಧ್ಯಯನ ಮಾಡಿದಾಗ ಕನ್ನಡದ ನೆಲದಲ್ಲಿ ಹುಟ್ಟಿದ ವಾಸ್ತು ಜ್ಞಾನವೇ ತಮಿಳುವಾಸ್ತುವಿನ ಮೂಲವೂ ಏಕಾಗಿರಬಾರದು ಎಂಬ ಸಂದೇಹ ಮೂಡುತ್ತದೆ. ಕರ್ನಾಟಕದ ವಾಸ್ತು ಶಿಲ್ಪಿಗಳು ದೇವಾಲಯ ನಿರ್ಮಾಣದಲ್ಲಿ, ನಗರ ಯೋಜನೆಯಲ್ಲಿ, ಪೌರ ವಾಸ್ತುವಿನಲ್ಲಿ, ನೀರು ಸರಬರಾಜು ವ್ಯವಸ್ಥೆಯಲ್ಲಿ, ಅಂತಿಮವಾಗಿ ನೈಸರ್ಗಿಕ ಪ್ರಕೋಪ ವಿರೋಧಿ ವಾಸ್ತು ನಿರ್ಮಾಣದಲ್ಲೂ ಸಹ ಯಶಸ್ವಿಯಾಗಿದ್ದಾರೆ. ಅಲ್ಲದೆ, ಕೆಲವು ಸಂದರ್ಭಗಳಲ್ಲಿ ಸೋಲನ್ನೂ ಅನುಭವಿಸಿದ್ದಾರೆ. ಇಷ್ಟು ವೈವಿಧ್ಯಮಯವಾದ ವಾಸ್ತು ರೂಪಗಳು ಅತ್ಯಂತ ಪ್ರಾಚೀನವಾಗಿ ಹಾಗೂ ಮೊದಲ ಬಾರಿಗೆ ಕರ್ನಾಟಕದಲ್ಲಿ ಮಾತ್ರ ದೊರೆಯುತ್ತದೆ ಎಂದರೆ ಇದು ಕನ್ನಡ ವಾಸ್ತು ವಿಜ್ಞಾನದ ಶ್ರೇಷ್ಠತೆಗೆ ಸಾಕ್ಷಿಯಲ್ಲವೇ !

ಆಶ್ಚರ್ಯವೆಂದರೆ, ಯಾವ ದಕ್ಷಿಣ ಕರ್ನಾಟಕ ಕ್ರಿ. ಶಕದ ಪ್ರಾರಂಭ ಕಾಲದಲ್ಲಿ ನಾಗರಿಕತೆ ರಹಿತವಾಗಿತ್ತೆಂದು, ಇತಿಹಾಸ ರಹಿತವಾಗಿತ್ತೆಂದು ಭಾವಿಸಲಾಗಿತ್ತೋ ಅದೇ ದಕ್ಷಿಣ ಕರ್ನಾಟಕದ ದಕ್ಷಿಣ ತುದಿಯಲ್ಲಿರುವ ತಲಕಾಡು ಈ ಎಲ್ಲಾ ವಾಸ್ತು ರೂಪಗಳಿಗೂ ತವರೂರಾಗಿತ್ತು. ಹೀಗಾಗಿ ತಲಕಾಡಿನಲ್ಲಿ ನಡೆದಿರುವ ಉತ್ಖನನಗಳಲ್ಲಿ ಲಭ್ಯವಾಗಿರುವ ಮುಖ್ಯ ವಾಸ್ತು ರೂಪಗಳನ್ನು ಮೊದಲು ಗಮನಿಸಿ ತದನಂತರ ಇತರ ಸ್ಥಳಗಳಲ್ಲಿ ಕಾಣಬರುವ ಕನ್ನಡ ವಾಸ್ತುವಿನ ಇತರ ವಿಶೇಷತೆಗಳತ್ತ ಬರೋಣ.

ಹಿಂದೂ ಪರಂಪರೆಯಲ್ಲಿ ಅತ್ಯಂತ ಜಾಜ್ವಲ್ಯಮಾನವಾಗಿ ಶೋಭಿಸುತ್ತಿರುವ ವಾಸ್ತು ಕಲೆಯೆಂದರೆ ದೇವಾಲಯ ನಿರ್ಮಾಣ ಕಲೆ. ಈ ಕಲೆಯ ಪ್ರಾಚೀನತೆಯ ಬಗ್ಗೆ ಸಾಕಷ್ಟು ಜಿಜ್ಞಾಸೆಗಳಿವೆ. ಕರ್ನಾಟಕವೂ ಸಹ ಈ ವಾದ-ವಿವಾದಗಳಿಗೆ ಹೊರತಲ್ಲ. ಐಹೊಳೆ ಮತ್ತು ಪಟ್ಟದಕಲ್ಲಿನಲ್ಲಿ ನಡೆಸಲಾದ ಉತ್ಖನನಗಳಲ್ಲಿ ಚಾಳುಕ್ಯ ಪೂರ್ವ ದೇವಾಲಯ ವಾಸ್ತುವಿನ ನಿದರ್ಶನಗಳು ಗೋಚರಿಸಿವೆ. ಐಹೊಳೆಯ ಗೌಡರಗುಡಿ ದೇವಾಲಯ ಮತ್ತು ಅದರ ಪಕ್ಕದಲ್ಲಿರುವ ಲಾಡ್‌ಖಾನ್ ದೇವಾಲಯಗಳ ಆವರಣದಲ್ಲಿ ನಡೆಸಲಾದ ಉತ್ಖನನಗಳಿಂದ ಈ ದೇವಾಲಯಗಳು ಕ್ರಮವಾಗಿ ಕ್ರಿ. ಶ. ೫ನೇ ಶತಮಾನದ ಆದಿಭಾಗ ಮತ್ತು ೬ನೇ ಶತಮಾನದ ಪ್ರಾರಂಭದ ಕಾಲಕ್ಕೆ ಸೇರುತ್ತವೆಂದು ಡಾ. ಎಸ್. ಆರ್. ರಾವ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಪರ್ಸಿ ಬ್ರೌನ್ ಅವರು ಲಾಡ್ ಖಾನ್ ದೇವಾಲಯವನ್ನು, ಅದರ ಪ್ರಾಚೀನ ಲಕ್ಷಣಗಳ ಆಧಾರದ ಮೇಲೆ ಕ್ರಿ. ಶ. ಸು. ೫೦೦ರಲ್ಲಿ ಕಟ್ಟಿರಬಹುದೆಂದು ಊಹಿಸಿದ್ದಾರೆ. ಅಲ್ಲದೆ ಲಾಡ್ ಖಾನ್ ದೇವಾಲಯದ ವಾಸ್ತು ವಿನ್ಯಾಸದ ಆಧಾರದ ಮೇಲೆ, ಮರ-ಮುಟ್ಟುಗಳಿಂದ ಕಟ್ಟಿದ, ಅದರ ಪೂರ್ವರೂಪವನ್ನೂ ಸಹ ಕಲ್ಪಿಸಿಕೊಂಡು ಚಿತ್ರಿಸಿದ್ದಾರೆ. ಲಾಡ್ ಖಾನ್ ದೇವಾಲಯ, ಗೌಡರ್ ಗುಡಿ, ಇತ್ಯಾದಿ ಪ್ರಾಚೀನ ದೇವಾಲಯಗಳ ಇರುವಿಕೆಯ ಆಧಾರದ ಮೇಲೆ ಐಹೊಳೆಯನ್ನು 'ದಕ್ಷಿಣ ಭಾರತ ದೇವಾಲಯ ವಾಸ್ತುವಿನ ತೊಟ್ಟಿಲು' ಎಂದು ವಿದ್ವಾಂಸರುಗಳು ಕರೆದಿದ್ದಾರೆ. ಸಮಕಾಲೀನವಾಗಿ ದೊರಕಿದ ಆಧಾರದ ಮೇಲೆ ಈ ವಿದ್ವಾಂಸರುಗಳು ದೇವಾಲಯ ವಾಸ್ತು, ಕರ್ನಾಟಕದ ಐಹೊಳೆಯಲ್ಲಿ ಮೊದಲು ಪ್ರಾರಂಭವಾಯಿತು ಎಂದು ಹೇಳಿರುವುದು ಒಪ್ಪಬೇಕಾದ ಅಂಶ. ಆದರೆ ಇತ್ತೀಚೆಗೆ ತಲಕಾಡಿನ ಉತ್ಖನನಗಳಲ್ಲಿ ಲಾಡ್‌ಖಾನ್ ದೇವಾಲಯದ ಪೂರ್ವ ಮಾದರಿ ಎಂದು ಪರಿಗಣಿಸಬಹುದಾದ ಇಟ್ಟಿಗೆ ನಿರ್ಮಿತ ಒಂದು ದೇವಾಲಯದ ಜೀರ್ಣಾವಶೇಷಗಳು ದೊರೆತಿವೆ.

ಈ ದೇವಾಲಯ ಒಂದು ಚೌಕ ಮಂಟಪ ರೀತಿಯ ಪೂರ್ವಮುಖಿ ಕಟ್ಟಡ. ಈ ದೇವಾಲಯಕ್ಕೆ ಏರು ವಿನ್ಯಾಸದಲ್ಲಿ ಎತ್ತರವಾದ ಉಪಾನ, ಜಗತಿ, ತ್ರಿಪಟ್ಟ-ಕುಮುದ ಮತ್ತು ಪ್ರತಿಯನ್ನು ಹೊಂದಿರುವ ಅಧಿಷ್ಠಾನ, ಭಿತ್ತಿ ಮತ್ತು ಹೆಂಚಿನಿಂದ ಮುಚ್ಚಿದ್ದ ಮೇಲ್ಛಾವಣಿ ಮತ್ತು ಛಾವಣಿಯ ಮಧ್ಯದಂಕಣದ ಮೇಲೆ ಪ್ರಾಯಶಃ ಸುತ್ತಲೂ ತೆರವಾಗಿದ್ದ ಹರ್ಮ್ಯ ಅಥವಾ ಗವಾಕ್ಷ ಇತ್ತು. ಉತ್ತರ - ದಕ್ಷಿಣ ಭಿತ್ತಿಯ ಮಧ್ಯದಂಕಣದಲ್ಲಿ ಮರದ ಕಂಬಗಳ ನಡುವೆ ಕೂರಿಸಿದ್ದ ವಿಶಾಲ ಜಾಲಂಧ್ರಗಳಿದ್ದವು. ಪೂರ್ವದ ಗೋಡೆಯ ಮಧ್ಯದಂಕಣದಲ್ಲಿ ಪ್ರವೇಶ ದ್ವಾರವಿತ್ತು.

ತಳವಿನ್ಯಾಸದಲ್ಲಿ ಈ ಕಟ್ಟಡಕ್ಕೆ, ಸುತ್ತಲೂ ಗೋಡೆ, ಪೂರ್ವದಲ್ಲಿ ಪ್ರವೇಶ ದ್ವಾರ, ಉತ್ತರ ದಕ್ಷಿಣ ಭಿತ್ತಿಗಳ ಮಧ್ಯದಂಕಣದಲ್ಲಿ ಜಾಲಂಧ್ರಗಳು, ಮಂಡಪದ ಮಧ್ಯದಲ್ಲಿ ಸಮಾನಾಂತರಗಳಲ್ಲಿ ನಿಲ್ಲಿಸಿರುವ ನಾಲ್ಕು ಕಂಬಗಳು, ಅವುಗಳ ನೇರಕ್ಕೆ ಉತ್ತರ - ದಕ್ಷಿಣ ಗೋಡೆಗಳ ಜಾಲಂಧ್ರ ಗಳಿಗೆ ಹೊಂದಿಕೊಂಡಂತೆ ಎರಡೆರಡು ಕಂಬಗಳು ಇದ್ದವು. ಇಡೀ ಹಜಾರದ ನೆಲಕ್ಕೆ ಚಪ್ಪಡಿಯ ಹಾಸಿತ್ತು.

ಈ ವಿನ್ಯಾಸದಿಂದ ಹಜಾರವು, ಮಧ್ಯದಲ್ಲಿ ನಾಲ್ಕು ಕಂಬಗಳಿರುವ ಒಂದು ನವರಂಗದಂತೆ ನಿರ್ಮಾಣವಾಗಿತ್ತು. ಈ ಹಜಾರಕ್ಕೆ ಯಾವುದೇ ಪ್ರತ್ಯೇಕ ಗರ್ಭಗೃಹವಾಗಲೀ, ಪ್ರದಕ್ಷಿಣಪಥವಾಗಲೀ ಇರಲಿಲ್ಲ. ಬದಲಿಗೆ ನವರಂಗದ ಮಧ್ಯದಂಕಣದಲ್ಲೇ ದೇವತಾ ಪ್ರತಿಷ್ಠೆಯಾಗಿತ್ತು. ಸುತ್ತಲಿನ ಅಂಕಣಗಳು ಪ್ರದಕ್ಷಿಣಪಥವಾಗಿದ್ದವು. ಇದೇ ತಳವಿನ್ಯಾಸವನ್ನು, ಲಾಡ್‌ಖಾನ್ ದೇವಾಲಯದಲ್ಲಿ, ಸುತ್ತಲೂ ಒಂದಂಕಣ ವಿಸ್ತರಿಸಿದಂತೆ, ಬಳಸಲಾಗಿದೆ. ಪರ್ಸಿಬ್ರೌನ್ ಅವರು ಕಲ್ಪಿಸಿಕೊಂಡು ಚಿತ್ರಿಸಿರುವ ಲಾಡ್‌ಖಾನ್ ಪೂರ್ವವಾದರಿಗೂ ತಲಕಾಡಿನ ಈ ಗುಡಿಗೂ ಬಹಳ ಸಾಮ್ಯವಿರುವುದು ಒಂದು ವಿಶೇಷ.

ಈ ದೇವಾಲಯದ ನಿರ್ಮಾಣ ಕಾಲಕ್ಕೆ ಬರುವುದಾದರೆ, ಈ ಕಟ್ಟಡವನ್ನು ಕ್ರಿ.ಶ. ದ ಮೊದಲ ಮೂರು ಶತಮಾನಗಳಲ್ಲಿ ನಿರ್ಮಿಸಲಾಗಿದೆ ಎನ್ನುವುದಕ್ಕೆ ನಿಖರ ಆಧಾರಗಳು ದೊರೆತಿವೆ. ಅವುಗಳೆಂದರೆ ಅಲ್ಲಿ ದೊರೆತಿರುವ ವಿಶಿಷ್ಟ ಮಾದರಿಯ ಮಡಕೆಗಳು. ಮಂಡಪದ ಮಧ್ಯದಂಕಣದ ನೆಲಚಪ್ಪಡಿಗಳ ಕೆಳಗಿನ ಭರ್ತಿ ಮಣ್ಣಿನಲ್ಲಿ ಅತ್ಯಂತ ಕೆಳಗಡೆ, ಅಂದರೆ ಅಧಿಷ್ಠಾನದ ಪ್ರಥಮೇಷ್ಟಕಗಳ ಮಟ್ಟದಲ್ಲಿ, ಒಂದೇ ಒಂದು ವರಿಸೆಯಲ್ಲಿ, ಹಾಸು ಇಟ್ಟಿಗೆಗಳಿಂದ ನಿರ್ಮಿತವಾದ ಒಂದು ವಾಸ್ತುಚಕ್ರ ಅಥವಾ ಮಂಡಲ ಇತ್ತು. ಇದರ ವ್ಯಾಸ ೨.೦೦ ಮೀಟರ್. ಇದು ಮಧ್ಯದಂಕಣದ ಮಧ್ಯ ಭಾಗದಲ್ಲಿದೆ. ಇದರ ಮೇಲೆ ಮತ್ತು ನೆಲ ಚಪ್ಪಡಿಗಳ ನಡುವಿನ ಭರ್ತಿ ಮಣ್ಣಿನಲ್ಲಿ ನಾಲ್ಕು ಮಣ್ಣಿನ ವಾಸ್ತು ಪಾತ್ರೆಗಳನ್ನು ಕೂಡಿಸಿಡಲಾಗಿತ್ತು. ಮಣ್ಣಿನಿಂದ ಮಾಡಿದ ಈ ಮಡಕೆಗಳಲ್ಲಿ ಎರಡು ದೊಡ್ಡ ಜಾಡಿಗಳು, ಮತ್ತೆರಡು ಸಣ್ಣ ಲೋಟಗಳು. ಸುಂದರವಾದ ಕಪ್ಪು-ಕೆಂಪು ವರ್ಣದ ಈ ಮಡಕೆಗಳ ಮೇಲ್ಮೈಯಲ್ಲಿ ಸುದ್ದೆ ಮಣ್ಣಿನಿಂದ ಎಳೆದ ಬಿಳಿಗೆರೆಗಳ ವಿನ್ಯಾಸವಿದೆ. ಈ ರೀತಿಯ ಚಿತ್ರಿತ ಮಡಕೆಗಳನ್ನು ಪುರಾತತ್ವಜ್ಞರು, ರಸೆಟ್ ಕೋಟೆಡ್-ಕೆವಲಿನ್ ಪೇಂಟೆಡ್-ಬ್ಲಾಕ್ ಅಂಡ್ ರೆಡ್‌ವೇರ್, ಎಂದು ಕರೆಯುತ್ತಾರೆ. ಈ ರೀತಿಯ ಮಡಕೆಗಳು ಕರ್ನಾಟಕದ ಪುರಾತತ್ವಿಕ ಸಂದರ್ಭದಲ್ಲಿ ಕ್ರಿ.ಶ. ಒಂದರಿಂದ ಮೂರನೆಯ ಶತಮಾನಗಳಲ್ಲಿ ಕಾಣಬರುತ್ತವೆ. ತದನಂತರದ ಕಾಲದಲ್ಲಿ ಈ ರೀತಿಯ ಚಿತ್ರಿತ ಮಡಕೆಗಳ ಉಪಯೋಗ ಇರಲಿಲ್ಲವೆಂಬುದು ಪುರಾತತ್ವಜ್ಞರ ಅಭಿಮತ.

ಈ ರೀತಿಯ ಮಡಕೆಗಳು ಕಂಡು ಬಂದ ಸನ್ನಿವೇಶ ಮತ್ತು ಅವುಗಳ ಕಾಲಮಾನದ ಆಧಾರದ ಮೇಲೆ ಈ ಕಟ್ಟಡ ಕ್ರಿಶಕದ ಮೊದಲ ಮೂರು ಶತಮಾನಗಳಲ್ಲಿ ನಿರ್ಮಾಣವಾಗಿರಬೇಕು ಎಂಬ ಅಂಶ ಸ್ಪಷ್ಟವಾಗುತ್ತದೆ. ಕಟ್ಟಡದ ಮಧ್ಯದಂಕಣಕ್ಕೆ ಈ ವಿಶೇಷವಾದ ವಾಸ್ತು ಚಿಕಿತ್ಸೆ ಏಕೆ ಬೇಕಿತ್ತು ಎಂದು ತಿಳಿಯುವುದು ಇಲ್ಲಿ ಮುಖ್ಯ. ಇದಕ್ಕೆ ವಿವರಣೆ ಹೀಗೆ ನೀಡಬಹುದು. ದೇವಾಲಯ ವಾಸ್ತುವಿನ ಪ್ರಾರಂಭಿಕ ಘಟ್ಟದಲ್ಲಿ ಇಂದಿನ ದೇವಾಲಯದಲ್ಲಿ ಕಾಣುವ ಎಲ್ಲಾ ವಾಸ್ತು ಭಾಗಗಳೂ ಅಂದರೆ ಗರ್ಭಗೃಹ, ಅಂತರಾಳ, ಪ್ರದಕ್ಷಿಣ ಪಥ, ನವರಂಗ, ಇತ್ಯಾದಿ ಯಾವ ರೂಪರೇಷೆಗಳೂ ಸ್ಪಷ್ಟವಾಗಿ ಮೂಡಿರಲಿಲ್ಲ ಎಂಬುದು ತಿಳಿದ ವಿಚಾರ. ಲಾಡ್ ಖಾನ್ ದೇವಾಲಯದಲ್ಲೂ ಇದೇ ರೀತಿಯ ಅನಿಶ್ಚಿತತೆ ಇದೆ. ಆದ್ದರಿಂದ ಲಾಡ್‌ಖಾನ್ ಪೂರ್ವ ಈ ದೇವಾಲಯ ದಲ್ಲಿ ನವರಂಗದ ಮಧ್ಯದಂಕಣವೇ ಪೂಜಾ ಸ್ಥಳವಾಗಿತ್ತು. ಇಲ್ಲೇ ದೇವರ ಪ್ರತಿಷ್ಠೆಯಾಗಿತ್ತು. ಸುತ್ತಲಿನ ಜಾಗವೇ ಪ್ರದಕ್ಷಿಣ ಪಥವಾಗಿತ್ತು ಎಂಬುದು ಈ ನವರಂಗ ರೀತಿಯ ಕಟ್ಟಡದಿಂದ ರುಜುವಾತಾಗಿದೆ. ಈ ಕಟ್ಟಡದ ಇನ್ನೂ ಹೆಚ್ಚಿನ ವಿವರಗಳನ್ನು ಹೇಳುವದಾದರೆ ನವರಂಗದ ಮಧ್ಯದಂಕಣದಲ್ಲಿ ವಿಸ್ತಾರವಾದ ಒಂದು ಮರದ ಮಂಡಪವನ್ನು ಭದ್ರವಾಗಿ ಕೂಡಿಸಿದ್ದರು. ಈ ಮಂಡಪದ ಹಿಂಭಾಗದಲ್ಲಿ, ಅಂದರೆ ಪಶ್ಚಿಮದಲ್ಲಿ ನೆಲದಲ್ಲಿ ದೃಢವಾಗಿ ನೆಟ್ಟ ಯಷ್ಟಿಗಳ ಆಧಾರದ ಮೇಲೆ ಸಾಲು ಛತ್ರಗಳಿದ್ದವು. ದೇವರ ಈ ಮರದ ಮಂಡಪವನ್ನು ಕಬ್ಬಿಣದ ಪಟ್ಟಿಗಳು, ಅಲಂಕಾರಿಕ ಗುಬ್ಬಿ ಮೊಳೆಗಳು, ಕ್ಲಾಂಪ್‌ಗಳು, ಬೋಲ್ಟ್‌ಗಳು ಇತ್ಯಾದಿಗಳನ್ನು ಬಳಸಿ ನಿರ್ಮಿಸಿದ್ದರು. ನವರಂಗದ ಈ ಮಧ್ಯದಂಕಣದಲ್ಲೇ ದೇವರನ್ನು ಕೂರಿಸಿದ್ದರಿಂದ, ಅದರಡಿಯ ನೆಲದ ಕೆಳಗಡೆ ವಾಸ್ತು ಪೂಜೆ ಮಾಡಿ ವಾಸ್ತು ಕುಂಭಗಳನ್ನಿಟ್ಟಿದ್ದಾರೆ ಎಂದು ವಿವರಿಸಬಹುದು. ಸುತ್ತಲಿನ ಅಂಕಣಗಳೇ ಪ್ರದಕ್ಷಿಣ ಪಥವಾಗಿತ್ತು.

ಮೇಲಿನ ವಿವರಣೆಯಿಂದ ತಿಳಿದು ಬರುವ ಅಂಶಗಳೆಂದರೆ ಕ್ರಿಶಕದ ಪ್ರಾರಂಭದ ಒಂದೆರಡು ಶತಮಾನಗಳಲ್ಲಿ ಕನ್ನಡ ನೆಲದಲ್ಲಿ, ಕನ್ನಡ ದೇವಾಲಯ ವಾಸ್ತುವಿನ ಉಗಮವಾಗಿತ್ತು. ಇಟ್ಟಿಗೆ, ಗಾರೆ, ಮರ, ಹೆಂಚು ಮುಂತಾದವುಗಳಿಂದ ಗಟ್ಟಿ-ಮುಟ್ಟಾದ ದೇವಾಲಯಗಳು ನಿರ್ಮಾಣವಾಗುತ್ತಿದ್ದವು. ಇಟ್ಟಿಗೆಯದಾದರೂ ಈ ದೇವಾಲಯಗಳು ದೃಢವಾಗಿ ಇರುತ್ತಿದ್ದವು. ಇಟ್ಟಿಗೆ ಜೊತೆಗೆ ಮರವನ್ನು ಧಾರಾಳವಾಗಿ ಬಳಸುತ್ತಿದ್ದರು. ಛಾವಣಿಗೆ ಹೆಂಚನ್ನು ಉಪಯೋಗಿಸುತ್ತಿದ್ದರು. ಬಾಳಿಕೆ ಹಾಗೂ ಸೌಂದರ್ಯಕ್ಕಾಗಿ ಕಟ್ಟಡವನ್ನು ಗಾರೆಯಿಂದ ಗಿಲಾವ್ ಮಾಡುತ್ತಿದ್ದರು. ಅಲಂಕರಣಕ್ಕಾಗಿ ಅಧಿಷ್ಠಾನವನ್ನು ದಿಂಡು / ಕಾರ್ನಿಸುಗಳಿಂದ ಅಲಂಕರಿಸುತ್ತಿದ್ದರು. ವಿವಿಧಾಕಾರದ ಕಾರ್ನಿಸುಗಳಿಗೆ ಅದೇ ರೀತಿಯ ಇಟ್ಟಿಗೆಗಳನ್ನು ಅಚ್ಚುಗಳ ಮೂಲಕ ತಯಾರಿಸಿ ಬಳಸುತ್ತಿದ್ದರು. ಆ ಕಾಲಕ್ಕಾಗಲೇ ಪಾದಬಂಧ ಅಧಿಷ್ಠಾನದ ಲಕ್ಷಣಗಳು ಖಚಿತವಾಗಿ ರೂಪುಗೊಂಡಿದ್ದವು.

ದೇವಾಲಯದ ತಳ ವಿನ್ಯಾಸದ ಕಲ್ಪನೆ ಆ ಕಾಲದ ಪೂಜಾ ಅವಶ್ಯಕತೆಗಳಿಗೆ ಅನುಕೂಲವಾಗುವಂತೆ ಬದಲಾಗುತ್ತಿತ್ತು. ಆದರೆ ನಿರ್ಮಾಣ ತಂತ್ರಜ್ಞಾನ, ವಿಧಾನ ಇವುಗಳಲ್ಲಿ ಮಾತ್ರ ಅದು ಸಂಪೂರ್ಣ ಪರಿಪಕ್ವವಾದ ಕಟ್ಟಡವಾಗಿರುತ್ತಿತ್ತು. ಕಟ್ಟಡಕ್ಕೆ ಅಡಿಪಾಯದ ಆಳ ಮತ್ತು ಭದ್ರತೆ, ಗುಂಡಿಯ ಒಳಗಿನ ಆಧಾರಗೋಡೆ, ಅದರ ರಚನೆ, ಗಾತ್ರ, ಅಧಿಷ್ಠಾನದ ನಿರ್ಮಾಣ, ಅದರ ರಚನೆ, ಗಾತ್ರ, ಅಧಿಷ್ಠಾನದ ರೂಪ, ಪರಿಮಾಣ, ಗಾತ್ರ, ಎತ್ತರ, ಮರದ ಕಂಬಗಳ ಬಳಕೆ, ಅವುಗಳ ಸುಭದ್ರ ಸ್ಥಾಪನೆ, ಗಾಳಿ, ಬೆಳಕಿಗಾಗಿ ವಿಶಾಲ ಜಾಲಂಧ್ರಗಳ ಬಳಕೆ, ಸೌಂದರ್ಯ ಹಾಗೂ ಉಪಯೋಗಕ್ಕಾಗಿ ಹರ್ಮ್ಯ, ಗವಾಕ್ಷಗಳ ನಿರ್ಮಾಣ, ರಕ್ಷಣೆಗಾಗಿ, ಬಾಳಿಕೆಗಾಗಿ ಗಾರೆಯ ಗಿಲಾವ್ ಈ ಎಲ್ಲಾ ವಾಸ್ತು ಮತ್ತು ವಸ್ತುಗಳ ಸೂಕ್ತ ಪರಿಜ್ಞಾನ ಮತ್ತು ಪ್ರದರ್ಶನ ಈ ಕಟ್ಟಡದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಇಷ್ಟು ಪ್ರಾಚೀನವಾದ ದೇವಾಲಯವೊಂದು ಕನ್ನಡ ನೆಲದಲ್ಲಿ ಮಾತ್ರ ಸ್ಪಷ್ಟವಾಗಿ ಗೋಚರಿಸಿರುವುದು, ಕನ್ನಡ ವಾಸ್ತು, ಕನ್ನಡ ನೆಲದಲ್ಲಿಯೇ ಹುಟ್ಟಿತು ಎಂಬುದಕ್ಕೆ ಸಾಕ್ಷಿಯಾಗಿದೆ.

ಕೇವಲ ಒಂದು ವಾಸ್ತು ರೂಪ ಅಥವಾ ಉದಾಹರಣೆಯಿಂದ **ಕನ್ನಡ ವಾಸ್ತು, ಕನ್ನಡ ನೆಲದ ಕಂದ** ಎಂದು ಹೇಗೆ ಒಪ್ಪುವುದು ಎಂದು ಕೇಳುವ ಟೀಕಾಕಾರರೂ ಇರಬಹುದು. ಅದಕ್ಕೆ ತಲಕಾಡಿನಲ್ಲಿಯೇ ದೊರೆತ ಇನ್ನೊಂದು ವಾಸ್ತು ನಿದರ್ಶನವನ್ನು ನಿಮ್ಮ ಮುಂದಿಡುವೆ. ತಲಕಾಡು ಎಲ್ಲರಿಗೂ ತಿಳಿದಿರುವಂತೆ ಕಾವೇರಿ ನದಿಯ ಲಂಬ ತಿರುವೊಂದರ ಉತ್ತರ ದಂಡೆಯ ಮೇಲಿದೆ. ಈ ಲಂಬ ತಿರುವು ಈಗಿರುವ ಸ್ಥಾನದಲ್ಲಿ ಸಹಸ್ರಾರು ವರ್ಷಗಳ ಹಿಂದೆ ಇರಲಿಲ್ಲ. ಈ ತಿರುವು ಹೆಚ್ಚೂ ಕಡಿಮೆ ನೇರವಾಗಿ ತಲಕಾಡಿನ ಉತ್ತರಕ್ಕೆ, ಈಗಿನ ಮಾಧವ ಮಂತ್ರಿ ನಾಲೆ ಸಾಗಿದ್ದಲ್ಲೇ ಪೂರ್ವದತ್ತ ಹರಿಯುತ್ತಿತ್ತು. ಈ ಹರಿವು ಅದರ ದಕ್ಷಿಣ ದಂಡೆಯನ್ನು ಕ್ರಮೇಣವಾಗಿ ಕೊರೆಯುತ್ತಾ, ದಕ್ಷಿಣದತ್ತ ಚಲಿಸಿ, ಸ್ಪಷ್ಟವಾದ ಲಂಬವಾದ ತಿರುವಿನಲ್ಲಿ ಈಗ ಹರಿಯುತ್ತಿದೆ. ಅಂದರೆ ಈಗಿರುವ ಹಳೇ ತಲಕಾಡಿನ ಎಲ್ಲಾ ಭಾಗಗಳೂ ವಿವಿಧ ಕಾಲಗಳಲ್ಲಿ ನದಿ ಪಾತ್ರವಾಗಿತ್ತು. ನದಿ ಪಾತ್ರ ದಕ್ಷಿಣಕ್ಕೆ ಚಲಿಸಿದಂತೆ ತಲಕಾಡಿನ ಭೂ ಭಾಗವೂ ದಕ್ಷಿಣದತ್ತ ತೆರವಾಗುತ್ತಾ ಬಂದಿತು. ಇದರಿಂದ ತಲಕಾಡಿನಲ್ಲಿ ಮಾಧವ ಮಂತ್ರಿ ನಾಲೆಯ ದಕ್ಷಿಣಕ್ಕೆ ಎಲ್ಲಿ ಅಗೆದರೂ ಬರೀ ಜೇಡಿಮಣ್ಣು ಮರಳು ಮಾತ್ರ ಕಾಣ ಬರುತ್ತದೆಯೇ ಹೊರತು ಬಂಡೆ ಭೂಮಿಯಲ್ಲ.

ಇಂತಹ ಪರಿಸ್ಥಿತಿಯಲ್ಲಿ ತಲಕಾಡಿನ ಈಗಿನ ದಕ್ಷಿಣ ತುದಿ ಅಂದರೆ ಪಾತಾಳೇಶ್ವರ ಗುಡಿ ಮತ್ತು ಅದರ ಸುತ್ತಮುತ್ತಲಿನ ಭಾಗಗಳು ಪ್ರವಾಹ ಕಾಲದಲ್ಲಿ ಜಲಾವೃತವಾಗುತ್ತಿದ್ದವು. ಈ ಭಾಗದ ನೆಲ ಹೆಚ್ಚೂ ಕಡಿಮೆ ಒಂದು ಚದರ ಕಿ.ಮೀ. ಪ್ರದೇಶ. ಇಂತಹ ಸನ್ನಿವೇಶ ಕ್ರಿ.ಶ.ದ ಪ್ರಾರಂಭದ ಶತಮಾನಗಳಲ್ಲಿಯೂ ಇತ್ತೆಂದು ಉತ್ಖನನಗಳಲ್ಲಿ ದೊರೆತ ಪದರಗಳಿಂದ ವೇದ್ಯವಾಗುತ್ತದೆ. ಕ್ರಿ.ಶ.ದ ಪ್ರಾರಂಭದ ಶತಮಾನಗಳಲ್ಲಿ ತಲಕಾಡು ಜನಭರಿತವಾಗಿಯೂ, ಚುರುಕು ಸಾಮಾಜಿಕ–ಸಾಂಸ್ಕೃತಿಕ ಚಟುವಟಿಕೆಗಳಿಂದ ಕೂಡಿದ್ದ ಪಟ್ಟಣವಾಗಿತ್ತು ಎಂಬುದನ್ನು ಆಗಲೇ ತಿಳಿದಿದ್ದೇವೆ. ಇಂತಹ ನಗರಕ್ಕೆ ನೀರಿನ ಅವಶ್ಯಕತೆ ಹೆಚ್ಚು. ಕಾವೇರಿ ನದಿಯ ನೀರೇನೋ ಸಮೃದ್ಧವಾಗಿತ್ತು. ಆದರೆ ಅದು ಪ್ರವಾಹದ ಕಾಲದಲ್ಲಿ ದಕ್ಷಿಣ ತಲಕಾಡಿನ ಒಂದು ಚದರ ಕಿ.ಮೀ. ಪ್ರದೇಶವನ್ನು ಆಕ್ರಮಿಸಿಕೊಳ್ಳುತ್ತಿತ್ತು. ಹೀಗಾಗಿ ಆ ಪ್ರದೇಶದಲ್ಲಿ ಜನವಸತಿ ಸಾಧ್ಯವಿರಲಿಲ್ಲ. ಊರನ್ನು ಆ ದಿಕ್ಕಿಗೆ ವಿಸ್ತರಿಸುವ ಸಾಧ್ಯತೆ ಇರಲಿಲ್ಲ. ವಿಸ್ತರಣೆ ಕೇವಲ ಉತ್ತರ ಮತ್ತು ಈಶಾನ್ಯ ದಿಕ್ಕಿನತ್ತ ಮಾತ್ರ ಸಾಧ್ಯವಿತ್ತು. ಬೇಸಿಗೆಯಲ್ಲಿ ನದಿ ಪಾತ್ರವನ್ನು ತಲುಪಲು ಊರಿನಿಂದ ಕನಿಷ್ಠ ಪಕ್ಷ ಒಂದು ಕಿ.ಮೀ. ದೂರ ನಡೆಯಬೇಕಾದ ಪ್ರಸಂಗ ಬಂದಿತ್ತು. ಈ ಸಂಕಷ್ಟದಲ್ಲಿ ಬಿದ್ದಿದ್ದ ಜನತೆಗೆ ಈ ತೊಂದರೆ ನಿವಾರಿಸಲು ಒಂದು ಉಪಾಯವೂ ಕಾಣಿಸಿತು. ಅದನ್ನು ಸಮರ್ಥವಾಗಿ ಯೋಜಿಸಿ ನಿಯೋಜಿಸಿದರು. ಅದೇ ತಲಕಾಡಿನ ಉತ್ಖನನದಲ್ಲಿ ದೊರೆತಿರುವ ಬೃಹದಾಕಾರದ ಪ್ರವಾಹ ತಡೆಗೋಡೆ.

ನದಿ, ಪ್ರವಾಹ ಕಾಲದಲ್ಲಿ ಅಗಲವಾಗಿ ಹರಡುತ್ತದೆ. ಹೀಗೆ ಹರಡಿದಾಗ ಭೂಮಿಯ ಭೌತಿಕ ಲಕ್ಷಣಕ್ಕೆ ಅನುಗುಣವಾಗಿ ಕವಲು– ಕವಲಾಗಿ ಒಡೆದು ಹರಿಯುವ ನಿದರ್ಶನಗಳು ಎಲ್ಲಾ ಕಡೆ ಸಾಮಾನ್ಯ. ಹೀಗೆ ಕಾವೇರಿ ನದಿಯ ಒಂದು ಎಡಕವಲು ಈಗಿನ ಪಾತಾಳೇಶ್ವರ ಗುಡಿಯ ಭಾಗವನ್ನೆಲ್ಲಾ ಪ್ರವಾಹ ಕಾಲದಲ್ಲಿ ಜಲಾವೃತವನ್ನಾಗಿ ಮಾಡುತ್ತಿತ್ತು. ನದಿ ಕವಲೊಡೆಯುವ ಈ ತಗ್ಗಿನ ಭೂ ಭಾಗವನ್ನು, ಬೃಹತ್ ಗೋಡೆಯೊಂದನ್ನು ಕಟ್ಟುವುದರ ಮೂಲಕ ಮುಚ್ಚಿ ಪಾತಾಳೇಶ್ವರ ದೇವಾಲಯದ ಭೂ ಭಾಗವನ್ನು ಪ್ರವಾಹದಿಂದ ಮುಕ್ತಿಗೊಳಿಸಿ, ಜನವಸತಿಗೆ ಹೆಚ್ಚಿನ ಭೂ ಭಾಗವನ್ನು ಒದಗಿಸುವ ಕಾರ್ಯ ಮಾಡಿರುವುದು ಉತ್ಖನನದಲ್ಲಿ ಬೆಳಕಿಗೆ ಬಂದಿದೆ. ನದಿ ನೀರಿಗೆ ಸಮೀಪವಾದ ಹಾಗೂ ಪ್ರವಾಹ ಭೀತಿಯಿಲ್ಲದ ಭೂಮಿಗೆ ಎಲ್ಲೆಲ್ಲೂ ಹೆಚ್ಚು ಬೇಡಿಕೆ ಇದೆ. ಇಂತಹ ಬೇಡಿಕೆಯುಳ್ಳ ಭೂಮಿಯನ್ನು ಒದಗಿಸುವ ಕಾರ್ಯದಲ್ಲಿ ಸಫಲ ಪ್ರಯತ್ನ ನಡೆಸಿದ ತಲಕಾಡಿನ ವಾಸ್ತುಶಿಲ್ಪಿಗಳು ನಿಜಕ್ಕೂ ಅಭಿನಂದನಾರ್ಹರು.

ಈ ಬೃಹತ್ತಾದ ಪ್ರವಾಹ ತಡೆಗೋಡೆ ಮೂರು ಮೀಟರ್ ದಪ್ಪ ಇದ್ದು ಅಷ್ಟೇ ಎತ್ತರಕ್ಕೆ ಇದೆ. ಇದು ಇನ್ನೂ ಒಂದು ಮೀಟರ್ ಎತ್ತರ ಇದ್ದಿರಬಹುದೆಂದು ಅಂದಾಜು ಮಾಡಲಾಗಿದೆ. ಇದನ್ನು ೨೫ ಮೀಟರ್‌ಗೂ ಹೆಚ್ಚು ಉದ್ದಕ್ಕೆ ಬಿಡಿಸಲಾಗಿದೆ. ಇದೂ ಇನ್ನೂ ಮುಂದಕ್ಕೆ ಮರಳು ಗುಡ್ಡೆಯಡಿಯಲ್ಲಿ ಮುಂದುವರೆಯುತ್ತಿರುವುದನ್ನು ಕಾಣಬಹುದಾಗಿದೆ. ಬೃಹತ್ತಾದ ಇಟ್ಟಿಗೆಗಳನ್ನು ಬಳಸಿ ಈ ಗೋಡೆಯನ್ನು ನಿರ್ಮಿಸಲಾಗಿದೆ. ಉತ್ಖನನದಲ್ಲಿ ದೊರೆತ ಪದರ ವಿನ್ಯಾಸದ ಆಧಾರದ ಮೇಲೆ, ಪ್ರಾಚ್ಯವಸ್ತುಗಳ ಆಧಾರದ ಮೇಲೆ, ಗೋಡೆ ನಿರ್ಮಾಣದಲ್ಲಿ ಬಳಸಿರುವ ಇಟ್ಟಿಗೆಗಳ ಗಾತ್ರದ ಆಧಾರದ ಮೇಲೆ, ಈ ಗೋಡೆ ನಿರ್ಮಾಣ ಕಾರ್ಯ ಕ್ರಿ.ಶ.ದ ಮೂರು – ನಾಲ್ಕನೆಯ ಶತಮಾನಗಳಲ್ಲಿ ನಡೆದಿರಬಹುದೆಂದು ಊಹಿಸಬಹುದಾಗಿದೆ.

ಈ ಪ್ರವಾಹ ತಡೆಗೋಡೆ ಎಷ್ಟು ಸಮರ್ಪಕವಾಗಿ ಅದರ ಉದ್ದೇಶವನ್ನು ನಿರ್ವಹಿಸಿತು ಎಂದರೆ, ಅದರ ಒಳಭಾಗದಲ್ಲಿ ಊರು ಬೆಳೆದು, ಗೋಡೆಯ ಮೇಲ್ಮಟ್ಟದ ವರೆಗೂ ಊರಿನ ವಸತಿ ದಿಬ್ಬ ಬೆಳೆದು, ವಿಜಯನಗರದ ಕಾಲದ ಹೊತ್ತಿಗೆ ಗೋಡೆಯ ಮೇಲ್ತುದಿಯ ಮಟ್ಟದಲ್ಲೇ ಆ ಕಾಲದ ನೀರು ಸರಬರಾಜು ವ್ಯವಸ್ಥೆಯ ಕೊಳಾಯಿಗಳು ನಿರ್ಮಿತವಾಗಿರುವುದನ್ನು ಕಾಣಬಹುದು. ಈ ಅಂಶ ಗೋಡೆಯ ದೋಷರಹಿತ ಯೋಜನೆ, ಅದರ ನಿರ್ಮಾಣ ಕಾರ್ಯದ ಯಶಸ್ವೀ ನಿಯೋಜನೆ ಮತ್ತು ಅಂತಹ ನಿರ್ಮಾಣದ ಸಾಫಲ್ಯ ಇವುಗಳಿಗೆ ಉತ್ತಮ ನಿದರ್ಶನವಾಗಿದೆ. ನಗರ ವಿಸ್ತರಣೆಗಾಗಿ ಇಂತಹ ಬೃಹದಾಕಾರದ ಪ್ರವಾಹ ತಡೆಗೋಡೆ ನಿರ್ಮಿಸಿ, ಭೂಮಿ ಸ್ವಾಧೀನ ಮಾಡಿಕೊಳ್ಳುವ ಪ್ರಾಚೀನ ಕ್ರಮ, ಶ್ರಮ ಹಾಗೂ ಪ್ರಯತ್ನ ದಕ್ಷಿಣ ಭಾರತದ ಯಾವುದೇ ಸ್ಥಳದಲ್ಲಿ ಇದುವರೆಗೆ ಕಾಣದೆ ತಲಕಾಡಿನಲ್ಲಿ ಕಂಡು ಬಂದಿರುವುದು ಕನ್ನಡ ವಾಸ್ತುವಿನ ವೈಶಿಷ್ಟ್ಯವಲ್ಲವೇ!

ದೇವಾಲಯ ವಾಸ್ತು ವಿನ್ಯಾಸದಲ್ಲಿ, ತಳಪಾಯದ ರಚನೆಯಲ್ಲಿ ಮತ್ತೊಂದು ಮೈಲಿಗಲ್ಲು ತಲಕಾಡಿನಲ್ಲೇ ದೊರೆತಿದೆ. ತಲಕಾಡಿನ ಉತ್ಖನನದಲ್ಲಿ ೧೯೯೩ರಲ್ಲೇ ಜೈನ ಬಸದಿಯೊಂದರ ತಳಪಾಯವನ್ನು ಹುಡುಕಿ ತೆಗೆಯಲಾಗಿತ್ತು. ಈ ಬಗ್ಗೆ ಹಲವಾರು ಲೇಖನಗಳನ್ನು ಹಾಗೂ ಪ್ರಕಟ ವಾಗಿರುವ ವರದಿಯಲ್ಲಿ ಒಂದು ಸುದೀರ್ಘ ಅಧ್ಯಾಯವನ್ನೂ ಸಚಿತ್ರವಾಗಿ ಪ್ರಕಟಿಸಿದ್ದೇನೆ. ಈ ಬಸದಿ ಅಧಿಷ್ಠಾನದವರೆಗೆ ನಾಶವಾಗಿದ್ದರೂ ವಾಸ್ತು ಬೆಳವಣಿಗೆಯ ದೃಷ್ಟಿಯಿಂದ ಬಹಳ ಕುತೂಹಲಕಾರಿಯಾದ ಅಂಶಗಳು ಇಲ್ಲಿ ಕಾಣಬರುತ್ತವೆ. ಮೊದಲನೆಯದಾಗಿ ಈ ಬಸದಿಯ ಮೂಲಭಾಗದ ತಳವಿನ್ಯಾಸದಲ್ಲಿ ಪೂರ್ವಾಭಿಮುಖಿಯಾಗಿ ಸಾಲಾಗಿ ಕಟ್ಟಿದ ಮೂರು ಗರ್ಭಗೃಹಗಳು, ಇವೆಲ್ಲದರ ಮುಂದೆ ಒಂದು ಸಾಮಾನ್ಯ ಕೈಸಾಲೆ, ಮತ್ತು ಮೂಲಗುಡಿಗೆ ಮುಂದೆ ಸ್ವಲ್ಪ ಅಂತರದಲ್ಲಿ ನಿರ್ಮಿಸಿದ ಮಂಟಪ ಇದೆ. ಈ ತಳವಿನ್ಯಾಸದ ಅಂಶಗಳು ಮುಂಚೆ ಹೇಳಿರುವ ತಲಕಾಡಿನ ನವರಂಗ ರೀತಿಯ ೨-೩ನೇ ಶತಮಾನದ ಗುಡಿಗಿಂತ ವಿಕಸಿತ ವಾಸ್ತುರೂಪ. ೧೯೯೩ರಲ್ಲಿ ನಡೆದ ಉತ್ಖನನಗಳು ಕೆಲವಂಶಗಳಲ್ಲಿ ಅಪೂರ್ಣವಾಗಿದ್ದವು. ಹೀಗಾಗಿ ನಮ್ಮ ಹಲವಾರು ಅನುಮಾನಗಳು ತೀರ್ಮಾನಗಳು ಇತ್ತೀಚೆಗೆ ನಡೆದ ಉತ್ಖನನಗಳಿಂದ ಹೊರಬಂದ ಫಲಿತಾಂಶಗಳ ಬೆಳಕಿನಲ್ಲಿ ಪುನರ್ವಿಮರ್ಶಿತವಾಗಬೇಕಾಯಿತು. ಅಂತಹ ಒಂದು ಪ್ರಸಂಗ ಜೈನ ಬಸದಿಯ ಮೂಲ ಭಾಗದ ಕಾಲ ನಿಷ್ಕರ್ಷೆಯ ಬಗ್ಗೆಯೂ ಬಂದೊದಗಿತು.

ತಲಕಾಡಿನ ಬಸದಿಯ ಮೂಲ ಭಾಗದ ತಳವಿನ್ಯಾಸ ದಲ್ಲಿ ಗರ್ಭಗೃಹ ಮತ್ತು ಮುಂದಿನ ಮಂಡಪ ಪ್ರತ್ಯೇಕವಿದೆ ಎಂದು ವಿವರಿಸಿದೆ. ಇದೇ ರೀತಿಯ ತಳವಿನ್ಯಾಸ ಮಹಾಬಲಿ ಪುರಂನ ಕಡಲತೀರ ದೇವಾಲಯದಲ್ಲಿ ಮತ್ತು ಕಂಚಿಯ ಕೈಲಾಸನಾಥ ದೇವಾಲಯದಲ್ಲೂ ಇದೆ. ಈ ಮಾದರಿಯಲ್ಲಿ ದೇವಾಲಯ ನಿರ್ಮಾಣ, ಪ್ರಾಚೀನ ವಾಸ್ತು ನಿರ್ಮಾಣದ ಒಂದು ಲಕ್ಷಣ ಎಂದು ಪರ್ಸಿ ಬ್ರೌನ್ ಮುಂತಾದವರು ಹೇಳಿದ್ದಾರೆ. ಈ ಆಧಾರದ ಮೇಲೆ ತಲಕಾಡಿನ ಬಸದಿಯ ಮೂಲಭಾಗವನ್ನೂ, ಹೆಚ್ಚು ಪ್ರಾಚೀನ ಕಾಲಕ್ಕೆ ಒಯ್ಯದೆ ಕ್ಷೇಮವಾಗಿ ನಾವು ಕ್ರಿ.ಶ. ೬–೭ನೇ ಶತಮಾನದ ನಿರ್ಮಾಣ ವಿರಬಹುದೆಂದು ಅಂದಾಜು ಮಾಡಿದ್ದೆವು. ಆದರೆ ಈಚೆಗೆ ತಲಕಾಡಿನಲ್ಲೇ ಅತ್ಯಂತ ಪ್ರಾಚೀನ ಗುಡಿಗಳು ಸಿಕ್ಕಿರುವುದರಿಂದ ಹಾಗೂ ಪ್ರಾಚೀನ ಇಟ್ಟಿಗೆ ಮರದ ದೇವಾಲಯಗಳು ನಂತರದ ಕಲ್ಲಿನ ವಾಸ್ತುಗಳಿಗೆ ಮಾದರಿಯಾಯಿತೆಂದು ಸ್ಪಷ್ಟವಾಗಿ ಗೋಚರವಾಗಿರುವುದರಿಂದ ಮತ್ತು ಮಡಿಕೇರಿ ತಾಮ್ರ ಶಾಸನದಿಂದ ತಲಕಾಡಿನಲ್ಲಿ ಪಾರ್ಶ್ವನಾಥ ಬಸದಿ (ಕ್ರಿ.ಶ. ೪೬೬) ಇತ್ತೆಂಬ ಅಂಶ ತಿಳಿದು ಬರುವುದರಿಂದ, ಈ ಎಲ್ಲಾ ಆಧಾರಗಳನ್ನೂ ಕೂಡಿಸಿ ತಲಕಾಡಿನ ಬಸದಿಯ ಕಾಲವನ್ನು ಕ್ರಿ.ಶ. ೫ನೇ ಶತಮಾನವೆಂದು ಪರಿಗಣಿಸಲಾಗಿದೆ. ಇದರಿಂದಾಗಿ ತಲಕಾಡಿನಲ್ಲಿ ಕ್ರಿ.ಶ. ೨–೩ನೇ ಶತಮಾನ ದಲ್ಲಿ ಪ್ರಾರಂಭವಾದ ವಾಸ್ತುಕಲೆ, ವಿಕಸಿತಗೊಂಡು ವಿವಿಧ ವಿನ್ಯಾಸದ ದೇವಾಲಯ ರೂಪಗಳು ಬೆಳೆಯುವುದಕ್ಕೆ ಕಾರಣವಾಯಿತಲ್ಲದೆ, ಜೈನ ಬಸದಿಗಳೂ ಸಹ ಹೆಚ್ಚು ಕಡಿಮೆ ಇದೇ ರೂಪದಲ್ಲಿ ಬೆಳೆಯುವುದಕ್ಕೆ ಕಾರಣವಾಯಿತು ಎಂಬಂಶ ವಿದಿತವಾಗುತ್ತದೆ. ಇಂತಹ ವಾಸ್ತು ಮಾದರಿ ಗಳನ್ನು ಆಧರಿಸಿ ನಿರ್ಮಿತವಾಗಿರುವ ಐಹೊಳೆಯ ಗುಡಿಗಳನ್ನು ನಾವು ಆಗಲೇ ಗಮನಿಸಿದ್ದೇವೆ. ತಲಕಾಡಿನ

ಜೈನ ಬಸದಿಯ ತಳವಿನ್ಯಾಸದ ಆಧಾರದ ಮೇಲೆ ಶ್ರವಣ ಬೆಳ್ಗೊಳದ ಚಂದ್ರಗಿರಿಯ ಮೇಲಿನ ಚಂದ್ರಗುಪ್ತ ಬಸದಿಯೂ ಸಹ ಕಲ್ಲಿನಲ್ಲಿ ನಿರ್ಮಾಣವಾಗಿದೆ ಎನ್ನಬಹುದು.

ಪ್ರಾಚೀನ ಇಟ್ಟಿಗೆ, ಮರದ ವಾಸ್ತು ಮಾದರಿಗಳು ನಂತರದ ಕಲ್ಲಿನ ವಾಸ್ತು ರೂಪಗಳಿಗೆ ಮಾದರಿಯಾದವು ಎನ್ನುವ ವಿಚಾರ ಹಲವಾರು ಉದಾಹರಣೆಗಳಿಂದ ನಿರೂಪಿಸಬಹುದಾಗಿದೆ. ಇಂತಹ ಹಲವಾರು ಮಾದರಿಗಳು ಕರ್ನಾಟಕದಲ್ಲೇ ಮೊದಲ ಬಾರಿಗೆ ಕಾಣಬರುತ್ತವೆ ಎಂದು ತಲಕಾಡಿನ ನವರಂಗ ಮಾದರಿ ದೇವಾಲಯ, ತ್ರಿಕೂಟ (ಜೈನ ಬಸದಿ) ದೇವಾಲಯ ಇವುಗಳನ್ನು ನಾವು ಆಗಲೇ ವಿವರಿಸಿದ್ದೇವೆ. ಈಗ ಮತ್ತೊಂದು ಹೊಸ ರೀತಿಯ ತಳ ವಿನ್ಯಾಸದ ಮಾದರಿ ಬೆಂಗಳೂರಿಗೆ ಸಮೀಪದ, ದೊಡ್ಡಬಳ್ಳಾಪುರದಿಂದ ಏಳು ಕಿ.ಮೀ. ದೂರದಲ್ಲಿರುವ ರಾಜಘಟ್ಟದಲ್ಲಿ ದೊರಕಿದೆ. ರಾಜಘಟ್ಟದಲ್ಲಿ ೨೦೦೧ ಮತ್ತು ೨೦೦೪ರಲ್ಲಿ ನಡೆಸಿದ ಉತ್ಖನನಗಳಲ್ಲಿ ಪ್ರವರ್ಧಮಾನವಾಗಿ ನೆಲೆಯೂರಿದ್ದ ಬೌದ್ಧ ಸಮಾಜವೊಂದು ಇತ್ತೆಂದೂ, ಆ ಬೌದ್ಧರು ಅಲ್ಲಿ ಒಂದು ಸೊಗಸಾದ ಚೈತ್ಯಾಲಯ ಮತ್ತು ವಿಹಾರವನ್ನೊಳಗೊಂಡ ವಾಸ್ತು ಸಂಕೀರ್ಣವೊಂದನ್ನು ನಿರ್ಮಿಸಿದ್ದರೆಂದೂ ತಿಳಿದು ಬಂದಿದೆ. ಈ ವಾಸ್ತು ಸಂಕೀರ್ಣ ಕ್ರಿ.ಶ. ೫-೭ನೇ ಶತಮಾನಗಳಲ್ಲಿ ಬಾಳಿತೆಂದೂ ಹೇಳಬಹುದಾಗಿದೆ. ಈ ವಾಸ್ತು ಸಂಕೀರ್ಣ ನೆಲಮಟ್ಟದವರೆಗೂ ನಾಶವಾಗಿದೆ. ಆದರೆ ಇದರ ತಳವಿನ್ಯಾಸ ಬಹಳ ಮಹತ್ವವಾದದ್ದು. ಏಕೆಂದರೆ ಇದೇ ತಳವಿನ್ಯಾಸದಲ್ಲಿ ನಂತರದ ಕಲ್ಲಿನ ದೇವಾಲಯಗಳು ದಕ್ಷಿಣ ಭಾರತದೆಲ್ಲೆಡೆ, ವಿಜಯನಗರೋತ್ತರ ಕಾಲದವರೆಗೂ ನಿರ್ಮಾಣಗೊಂಡವು.

ಚೈತ್ಯ-ವಿಹಾರ ಸಂಕೀರ್ಣದ ವಾಸ್ತು ವಿವರಗಳಿಗೆ ಬರುವುದಾದರೆ, ಇದು ಇಟ್ಟಿಗೆ – ಗಾರೆಗಳಿಂದ ನಿರ್ಮಿತವಾದ ಒಂದು ಕಟ್ಟಡವಾಗಿತ್ತು. ದಕ್ಷಿಣಾಭಿಮುಖವಾಗಿದ್ದ ಈ ಕಟ್ಟಡ ವಿಶಾಲ ಅಂಗಳದ ಮಧ್ಯೆ ಚೈತ್ಯಾಲಯವನ್ನು ಹೊಂದಿತ್ತು. ಚೈತ್ಯಾಲಯದಲ್ಲಿ ಕುದುರೆ ಲಾಳಾಕಾರದ ಹಜಾರ, ಸುತ್ತಲೂ ಚೌಕಾಕಾರದ ಪ್ರದಕ್ಷಿಣ ಪಥ, ಮತ್ತು ದಕ್ಷಿಣ ಮುಖದಲ್ಲಿ ದ್ವಾರ ಮಂಟಪ ಇವಿಷ್ಟೂ ಇದ್ದವು. ಚೈತ್ಯಾಲಯದ ಸುತ್ತ ಕಲ್ಲು ಹಾಸಿನ ವಿಶಾಲ ಅಂಗಳ, ಅಂಗಳಕ್ಕೆ ಮುಖ ಮಾಡಿಕೊಂಡು ಪೂರ್ವದಲ್ಲಿ ಸಾಲಾಗಿ ನಿರ್ಮಿತ ವಾದ ವಿಹಾರದ ಕೊಠಡಿಗಳಿದ್ದವು. ಒಟ್ಟು ಏಳು ಕೊಠಡಿಗಳು ಮಾತ್ರ ಕಂಡು ಬಂದಿವೆ. (ಉತ್ಖನನ ಅಪೂರ್ಣವಾಗಿದೆ) ಉತ್ತರ ದಿಕ್ಕಿನಲ್ಲಿ ಎತ್ತರವಾದ ಪೌಳಿಗೋಡೆ ಮಾತ್ರ ಇತ್ತು. ಈ ಗೋಡೆಗೆ ಮಧ್ಯಭಾಗದಲ್ಲಿ ದ್ವಾರ ಮತ್ತು ದ್ವಾರ ಮಂಡಪಗಳಿದ್ದವು. ಗೋಡೆಯ ಒಳಮುಖಕ್ಕೆ ಒತ್ತಿನಿಂತಿರುವಂತೆ ಅನೇಕ ಕೋಷ್ಠ ಗುಡಿಗಳು ಇದ್ದವು. ಈ ಕೋಷ್ಠಗುಡಿಗಳು ಸಂಪೂರ್ಣ ಷಡ್ವರ್ಗದ ಗುಡಿಗಳ ರೀತಿ ಇದ್ದವೆಂದು ಹೇಳಬಹುದು. ಪಶ್ಚಿಮದ ಪ್ರಾಕಾರ ಭಾಗದಲ್ಲಿ ಇನ್ನೂ ಉತ್ಖನನವಾಗಬೇಕಿದೆ. ದಕ್ಷಿಣದ ಅಂಗಳ ಮತ್ತು ಪ್ರಾಕಾರ ಹಾಗೂ ಮಹಾದ್ವಾರದ ಭಾಗ ಸಂಪೂರ್ಣವಾಗಿ ನೆಲ ಮಟ್ಟದಿಂದ ಕೆಳಕ್ಕೂ ನಾಶವಾಗಿದೆ. ವಿಹಾರ ಸಂಕೀರ್ಣದ ಒಂದು ಗಮನಾರ್ಹ ಭಾಗವೆಂದರೆ, ಪ್ರಾಕಾರದ ಈಶಾನ್ಯ ಮೂಲೆಯಲ್ಲಿ ಹೊರಗಿನಿಂದ ಪ್ರವೇಶವುಳ್ಳ ಒಂದು ಚಿಕ್ಕ ಸ್ನಾನದ ಮನೆ. ವಿಶಾಲ ಅಂಗಳದ ನಾಲ್ಕು ಮೂಲೆಗಳಲ್ಲಿ ಒಂದೊಂದು ಆಯಕ ಸ್ತಂಭಗಳು, ಕಟ್ಟೆಗಳ ಮೇಲೆ ಸ್ಥಾಪಿತವಾಗಿದ್ದಂತೆ ತೋರುತ್ತದೆ. ಇಡೀ ಚೈತ್ಯಾಲಯವನ್ನು ಇಟ್ಟಿಗೆಯಲ್ಲಿ ನಿರ್ಮಿಸಿ ಸುಣ್ಣದ ಗಾರೆಯಿಂದ ಗಿಲಾವ್ ಮಾಡಿ, ವಿವಿಧ ಮಾದರಿಯ ಶಿಲ್ಪ, ಸಸ್ಯ, ಪ್ರಾಣಿಗಳ ಗಾರೆ ಶಿಲ್ಪಗಳಿಂದ ಅಲಂಕರಿಸಲಾಗಿತ್ತು.

ಈ ಎಲ್ಲಾ ವಾಸ್ತು ಲಕ್ಷಣಗಳೂ ನಂತರದ ಕಲ್ಲಿನ ದೇವಾಲಯ ನಿರ್ಮಾಣಗಳಿಗೆ ಸ್ಫೂರ್ತಿಯಾಗಿರುವುದಕ್ಕೆ ಅನೇಕ ನಿದರ್ಶನಗಳಿವೆ. ಚಾಳುಕ್ಯರ, ಪಲ್ಲವರ ಮತ್ತು ನಂತರದ ಬಹುತೇಕ ದಕ್ಷಿಣ ಭಾರತದ ದೇವಾಲಯಗಳಲ್ಲಿ ಈ ರೀತಿಯ ತಳವಿನ್ಯಾಸ ಕಾಣಬರುವುದು ಸರ್ವೇ ಸಾಮಾನ್ಯ. ಕಂಚಿಯ ಕೈಲಾಸನಾಥ ದೇವಾಲಯದಲ್ಲಿ ಪೌಳಿಗೋಡೆಯ ಒಳಮುಖದಲ್ಲಿ ಸಾಲಾಗಿ ಕೋಷ್ಠ ಗುಡಿಗಳ ನಿರ್ಮಾಣವಿದೆ. ಪಟ್ಟದಕಲ್ಲಿನ ವಿರುಪಾಕ್ಷ ಗುಡಿಯಲ್ಲಿ, ಅಂಗಳಕ್ಕೆ ಮುಖಮಾಡಿ, ಪೌಳಿಗೆ ಒರಗಿದಂತೆ ಕಟ್ಟಿರುವ ಪರಿವಾರ ದೇವತಾಗೃಹಗಳಿವೆ. ಹೀಗೆ ಉದಹರಿಸುತ್ತಾ ಹೋದರೆ ಅನಂತಾನಂತ ನಿದರ್ಶನಗಳು ಇದ್ದೇ ಇವೆ. ಹೀಗೆ **ಕರ್ನಾಟಕದಲ್ಲಿ ಕ್ರಿ.ಶ. ೫ನೇ ಶತಮಾನದಲ್ಲಿ ರೂಪಿಸಲ್ಪಟ್ಟ ದೇವಾಲಯ ತಳವಿನ್ಯಾಸ, ನಂತರದಲ್ಲಿ ದಕ್ಷಿಣ ಭಾರತದಲ್ಲಿನ, ದ್ರಾವಿಡ-ವೇಸರಾದಿ, ಬಹುತೇಕ ದೇವಾಲಯಗಳಿಗೆ ಮಾದರಿಯಾಯಿತು ಎಂದರೆ ಅದು ಕನ್ನಡ ವಾಸ್ತುವಿನ ಹಿರಿಮೆಯಲ್ಲವೇ!**

ಈಗ ಉತ್ಖನನದಿಂದ ದೊರೆತ ಅಂಶಗಳನ್ನು ಸ್ವಲ್ಪ ಕಾಲ ಬಿಟ್ಟು, ನೆಲದ ಮೇಲೇ ಕಾಣುತ್ತಿರುವ ಸ್ಮಾರಕಗಳ ವಿಚಾರಗಳಿಗೆ ಬರೋಣ. ಐಹೊಳೆ ಯನ್ನು 'ದಕ್ಷಿಣ ಭಾರತದ ದೇವಾಲಯ ವಾಸ್ತುವಿನ ತೊಟ್ಟಿಲು' ಎಂದು ಕಲಾ ವಿಮರ್ಶಕರು ಕರೆದಿದ್ದಾರೆ. ಕ್ರಿ.ಶ. ಸು ೪೫೦ ರಿಂದಲೇ ಕರ್ನಾಟಕದಲ್ಲಿ ಕಲ್ಲಿನಲ್ಲಿ ನಿರ್ಮಿತಿ ದೇವಾಲಯಗಳು ಪ್ರಾರಂಭವಾದವು ಎಂಬ ಅಂಶ ಐಹೊಳೆಯ ದೇವಾಲಯಗಳಿಂದ ಸ್ಪಷ್ಟವಾಗುತ್ತದೆ. ಐಹೊಳೆಯಲ್ಲಿ ಕಲ್ಲಿನ ದೇವಾಲಯ ನಿರ್ಮಾಣ ಪ್ರಾರಂಭವಾದ ಸುಮಾರು ಎರಡು ಶತಮಾನಗಳ ನಂತರ ಪಲ್ಲವರು ತಮಿಳುನಾಡಿನಲ್ಲಿ ಈ ಕೆಲಸಕ್ಕೆ ಕೈ

ಹಾಕಿದರು. ಅಷ್ಟು ಹೊತ್ತಿಗಾಗಲೇ ಚಾಳುಕ್ಯರು ಲಾಡ್‌ಖಾನ್, ದುರ್ಗಾ, ಹುಚ್ಚಿಮಲ್ಲಿ, ಮೇಗುತಿ, ಬಾದಾಮಿಯ ಮಾಲೆಗಿತ್ತಿ, ಪಟ್ಟದಕಲ್ಲಿನ ಪಾಪನಾಥ ಈ ಎಲ್ಲಾ ದೇವಾಲಯಗಳನ್ನು ಕಟ್ಟಿ ಮುಗಿಸಿದ್ದರು.

ಬಾದಾಮಿಯ ಮೂರನೆಯ ಗುಹಾಲಯ ದಕ್ಷಿಣ ಭಾರತದಲ್ಲೇ ಅತ್ಯಂತ ಶ್ರೇಷ್ಠವಾದ, ಸುಂದರವಾದ, ವಿಶಾಲವಾದ ವೈಷ್ಣವ ಆಲಯ. ಇದರ ನಿರ್ಮಾಣ ಕಾಲ ಕ್ರಿ.ಶ. ೫೭೮ಕ್ಕೆ ಸಮ. ಇದರ ನಿರ್ಮಾತೃ ಚಾಳುಕ್ಯ ಕೀರ್ತಿವರ್ಮ. ಕೀರ್ತಿವರ್ಮನ ಆದೇಶದ ಮೇರೆಗೆ, ಮಂಗಳೇಶನು, ಮಹಾವಿಷ್ಣುವಿಗಾಗಿ ಈ ಕಲ್ಮನೆಯನ್ನು ನಿರ್ಮಿಸಿದನೆಂದು ಅಲ್ಲಿನ ಕಂಬವೊಂದರ ಮೇಲಿನ ಶಾಸನ ಹೇಳುತ್ತದೆ. ಈ ಗುಹಾಲಯದ ಸೌಂದರ್ಯದ ಮುಂದೆ, ವಿಸ್ತೀರ್ಣದ ಮುಂದೆ, ಶಿಲ್ಪಗಳ ವೈಭವದ ಮುಂದೆ, ಈ ಗುಹಾಲಯ ನಿರ್ಮಾಣ ಕಾಲದ ಸುಮಾರು ೫೦ ವರ್ಷಗಳ ನಂತರ ಪಲ್ಲವ ರಾಜ್ಯದಲ್ಲಿ, ಪಲ್ಲವ ದೊರೆ ಮಹೇಂದ್ರವರ್ಮನಿಂದ ನಿರ್ಮಾಣವಾದ ಮಂಡಗಪಟ್ಟು ಗುಹಾಲಯ ಒಂದು ಯಃಕಶ್ಚಿತ್ ಸಣ್ಣ ಮಂಟಪ. ಅತೀ ಸರಳ ಮತ್ತು ನಿರಾಲಂಕೃತ. ಇಂತಹ ಒಂದು ಸಣ್ಣಗುಡಿಯನ್ನು ಬಾದಾಮಿಯ ೩ನೇ ಗುಹಾಲಯ ನಿರ್ಮಾಣವಾದ ೫೦ ವರ್ಷಗಳ ನಂತರ ನಿರ್ಮಿಸಿದ ಪಲ್ಲವ ಮಹೇಂದ್ರವರ್ಮನ ಬಡಾಯಿ ಹೇಳಿಕೆ ಏನು ಗೊತ್ತೇ?

**ಏತದನಿಷ್ಟಕಮದ್ರುಮಮಸುಧಂ ಅಲೋಹಜಂ ವಿಚಿತ್ರಚಿತ್ತೇನ ನಿರ್ಮಾಪಿತಮಿದಂ ಬ್ರಹ್ಮೇಶ್ವರವಿಷ್ಣುಲಕ್ಷಿತಾಯತನಂ ॥**

ಅಂದರೆ 'ಇಟ್ಟಿಗೆಯನ್ನು ಮರವನ್ನೂ ಸುಣ್ಣವನ್ನೂ (ಗಾರೆಯನ್ನೂ) ಲೋಹವನ್ನೂ ಬಳಸದೆ ಬ್ರಹ್ಮ, ಈಶ್ವರ, ವಿಷ್ಣುವಿಗಾಗಿ ಈ ದೇವಾಲಯವು ವಿಚಿತ್ರ ಚಿತ್ತನಿಂದ ನಿರ್ಮಿಸಲ್ಪಟ್ಟಿತು.'

ನೋಡಿ ಹೇಗಿದೆ ಈ ಸ್ವಪ್ರಶಂಸೆ. ಅತ್ಯಮೋಘವಾದ ಬಾದಾಮಿಯ ಮೂರನೆಯ ಗುಹಾಲಯದ ಸೌಂದರ್ಯದ ಮುಂದೆ ತೀರ ಕಳಪೆ ಎನಿಸುವ ಮಂಡಗಪಟ್ಟು ಗುಹಾಲಯದ ನಿರ್ಮಾತೃ, ಡಂಗುರಪ್ರಿಯ, ಮಹೇಂದ್ರವರ್ಮ ತನ್ನ ಅತ್ಯಲ್ಪವಾದ ಕಾರ್ಯವನ್ನೂ ಮಹತ್ಸಾಧನೆಯೆಂದು ಪ್ರಶಂಸಿಸಿಕೊಂಡಿದ್ದಾನೆ. ಆದರೆ ಬಾದಾಮಿಯ ಗುಹಾಲಯದ ಕರ್ತೃ ಮಂಗಲೇಶನು ಅತ್ಯಂತ ವಿನಯದಿಂದ ತನ್ನ ಅಣ್ಣನ ಆದೇಶದ ಮೇರೆಗೆ ವಿಷ್ಣುವಿಗಾಗಿ ಈ ಕಲ್ಮನೆಯನ್ನು ನಿರ್ಮಿಸಿದನೆಂದು ಮಾತ್ರ ಹೇಳಿಕೊಂಡಿದ್ದಾನೆ. ಈ ಹೇಳಿಕೆ ಕನ್ನಡಿಗನ ಸೌಜನ್ಯವೋ, ನಿರಭಿಮಾನದ ಪ್ರತೀಕವೋ ನೀವೇ ಹೇಳಿ.

ವೇಸರ ವಾಸ್ತುಶೈಲಿ ಕನ್ನಡ ನೆಲದ ಕಂದಮ್ಮ. ವೇಸರಶೈಲಿ ಒಂದು ಮಿಶ್ರ ವಾಸ್ತುಶೈಲಿ. ನಾಗರ ಮತ್ತು ದ್ರಾವಿಡ ವಾಸ್ತುಶೈಲಿಗಳ ಸಂಯೋಜನೆಯಿಂದ ಹುಟ್ಟಿದ ಶೈಲಿಯೇ ವೇಸರ ಶೈಲಿ ಎಂದು ಗ್ರಂಥಗಳು ಹೇಳುತ್ತವೆ. ವೇಸರ ಎಂಬುದು ಸಂಸ್ಕೃತ ಪದ. ವೇಸರ ಎಂದರೆ ಹೇಸರಗತ್ತೆ. ಹೇಸರಗತ್ತೆ ಒಂದು ಮಿಶ್ರತಳಿ. ಇದಕ್ಕಾಗಿಯೇ ಪ್ರಾಚೀನ ವಾಸ್ತುತಜ್ಞರು ವೇಸರ ಎಂಬ ಈ ಅನ್ವರ್ಥ ನಾಮವನ್ನು ಈ ಶೈಲಿಗೆ ಇಟ್ಟಿದ್ದಾರೆ. ನಾಗರ ಶೈಲಿಯ ಪ್ರಾರಂಭದ ದೇವಾಲಯಗಳನ್ನು ಪ್ರಮುಖವಾಗಿ ನಾವು ಒರಿಸ್ಸಾ ಪ್ರಾಂತದಲ್ಲಿ ಕಾಣುತ್ತೇವೆ. ಐಹೊಳೆ ಪ್ರಶಸ್ತಿ ಶಾಸನವು, ಇಮ್ಮಡಿ ಪುಲಿಕೇಶಿಯು ದಂಡಯಾತ್ರೆಯ ಸಮಯದಲ್ಲಿ ಕಳಿಂಗ, ಕೋಸಲ ರಾಜ್ಯವನ್ನು ಪ್ರವೇಶಿಸಿದ್ದನು ಎಂದು ಹೇಳುತ್ತದೆ. ಈ ದಂಡಯಾತ್ರೆಯ ಸಮಯದಲ್ಲಿ ಪುಲಿಕೇಶಿ ತನ್ನೊಡನೆ ಒರಿಸ್ಸಾದಿಂದ ನಾಗರಶೈಲಿಯ ವಾಸ್ತು ಶಿಲ್ಪಿಗಳನ್ನೋ ಅಥವಾ ಆ ವಾಸ್ತುಜ್ಞಾನವನ್ನೋ ತಂದಿರಬೇಕು. ಇದಲ್ಲದೇ ಗುಪ್ತರಿಗೂ ಬನವಾಸಿಯ ಕದಂಬರಿಗೂ ನಿಕಟ ವೈವಾಹಿಕ ಸಂಬಂಧಗಳು ಇತ್ತು ಎಂಬುದಕ್ಕೆ ತಾಳಗುಂದ ಶಾಸನವೇ ಸಾಕ್ಷಿ. ಗುಪ್ತರ ದೇವಾಲಯಗಳ ಅನೇಕ ಲಕ್ಷಣಗಳು ಚಾಳುಕ್ಯ ದೇವಾಲಯಗಳಲ್ಲಿ ಕಂಡು ಬಂದಿವೆ. ಹೀಗಾಗಿ ಮೂಲ ಯಾವುದೇ ಆಗಿರಲಿ ಉತ್ತರ ಭಾರತಕ್ಕೂ, ದಕ್ಷಿಣ ಭಾರತಕ್ಕೂ ನಿಕಟ ಸಂಬಂಧಗಳು ಆ ಕಾಲಕ್ಕಾಗಲೇ ಇತ್ತು ಎಂಬ ಅಂಶ ಮಾತ್ರ ನಿರ್ವಿವಾದವಾದದ್ದು.

ಇಂತಹ ಸಾಂಸ್ಕೃತಿಕ ಸಂಬಂಧದಿಂದಾಗಿ ಸಾಲಂಕೃತ ನಾಗರ ಪ್ರಾಸಾದವನ್ನು ಹೊಂದಿರುವ ಅನೇಕ ಗುಡಿಗಳು ಐಹೊಳೆ ಪಟ್ಟದಕಲ್ಲುಗಳಲ್ಲಿ ಕಾಣಬರುತ್ತವೆ. ನಾಗರಪ್ರಸಾದ, ದ್ರಾವಿಡ ದೇವಾಲಯ ಇವುಗಳ ಸೂಕ್ತ ವಾಸ್ತು ಸಂಯೋಜನೆ ಪರಿಪಕ್ವಗೊಂಡು, ಒಂದೆರಡು ಶತಮಾನಗಳ ನಂತರ, ಕನ್ನಡ ನೆಲದಲ್ಲಿ ವೇಸರ ಶೈಲಿಯ ಜನನವಾಯಿತು. ವೇಸರ ವಾಸ್ತು ಶೈಲಿ ಭಾರತೀಯ ವಾಸ್ತು ಪರಂಪರೆಗೆ ಕನ್ನಡ ನೆಲದ ಕೊಡುಗೆ. ಈ ವಾಸ್ತುಶೈಲಿ ಕ್ರಮೇಣವಾಗಿ ಅಭಿವೃದ್ಧಿಯಾಗಿ ನಕ್ಷತ್ರಾಕಾರದ ತಳವಿನ್ಯಾಸದ ಆವಿಷ್ಕಾರವಾಯಿತು. ದೇವಾಲಯದ ಏರುವಿನ್ಯಾಸದಲ್ಲಿ ಅನೇಕ ಬದಲಾವಣೆಗಳಾದವು. ಗ್ರಾನೈಟ್ ಬದಲು ಬಳಪದ ಕಲ್ಲಿನ ಬಳಕೆ ಪ್ರಾರಂಭವಾಯಿತು. ತತ್ಪರಿಣಾಮವಾಗಿ ತಿರುಗಣೆಯಲ್ಲಿ ಮಾಡಿದ ಕಂಬಗಳು (ಲೇತ್ ಟರ್ನ್ಡ್ ಪಿಲರ್ಸ್), ಮಿತಿಮೀರಿದ ಅಲಂಕರಣೆ, ಸೂಕ್ಷ್ಮಾತಿಸೂಕ್ಷ್ಮ ಕೆತ್ತನೆಗಳು, ಮದನಿಕೆಯ ಶಿಲ್ಪಗಳು, ಭುವನೇಶ್ವರಿಗಳು ಇವೆಲ್ಲವೂ ಚಾಳುಕ್ಯ–ಹೊಯ್ಸಳ ಕಾಲದಲ್ಲಿ ಆವಿಷ್ಕಾರಗೊಂಡ ವಾಸ್ತು–ವಿನ್ಯಾಸಗಳು. ಇವೆಲ್ಲಕ್ಕಿಂತಲೂ ಮಿಗಿಲಾಗಿ ಹೊಯ್ಸಳ

ಶಿಲ್ಪಿಗಳು ಆಲೋಚಿಸಿ ರೂಪಿಸಿದ ಭಿತ್ತಿಶಿಲ್ಪಗಳ ಮೇಲಿನ ನೆರಳು-ಬೆಳಕಿನ ವಿನ್ಯಾಸ.

ಕಲಾಕೃತಿಗಳಲ್ಲಿ, ಕಲಾ ಪ್ರದರ್ಶನದಲ್ಲಿ ನೆರಳುಬೆಳಕಿನ ಸೂಕ್ತ ಸಂಯೋಜನೆಯನ್ನು 'ಕ್ಯಾರೊಸ್‌ಕೂರೊ' (Chiar-oscuro) ಎಂದು ಇಟಾಲಿಯನ್ ಭಾಷೆಯಲ್ಲಿ ಕರೆಯುತ್ತಾರೆ. ಈ ಒಂದು ಕಲಾವಂತಿಕೆ ಯೂರೋಪಿನ ಪುನರುಜ್ಜೀವನ ಕಾಲದ (೧೫-೧೬ನೇ ಶತಮಾನಗಳು) ಮತ್ತು ನಂತರದ ಬರೋಕ್ ಕಲಾಶೈಲಿಯ (೧೭-೧೮ನೇ ಶತಮಾನಗಳು) ಒಂದು ಹೆಚ್ಚುಗಾರಿಕೆ ಹಾಗೂ ಹೆಮ್ಮೆಯ ವಿಷಯ. ಈ ಕಲೆಯ ಮುಖ್ಯ ಲಕ್ಷಣಗಳೆಂದರೆ ವಾಸ್ತು ನಿರೂಪಣೆಯಲ್ಲಿ ಮತ್ತು ಅಲಂಕರಣೆಯಲ್ಲಿ ಮಿತಿಮೀರಿದ, ಅದ್ಭುತವಾದ, ಸೂಕ್ಷ್ಮವಾದ ಅಲಂಕಾರಿಕ ಕೆತ್ತನೆಗಳು. ಹಾಗೆಯೇ ಇನ್ನೊಂದು ಮಹತ್ವದ ಲಕ್ಷಣವೆಂದರೆ ನೆರಳು-ಬೆಳಕುಗಳ ಪ್ರತಿಫಲನದಿಂದ ಕೂಡಿದ ವಿವಿಧ ವಿನ್ಯಾಸಗಳು.

ಈ ಎಲ್ಲಾ ಲಕ್ಷಣಗಳೂ ಹೊಯ್ಸಳ ಕಲೆಯಲ್ಲಿ, ಯುರೋಪಿಯನ್ ಕಲೆಗಿಂತ ೩-೪ ಶತಮಾನಗಳು ಮೊದಲೇ ಪ್ರವರ್ಧಮಾನವಾಗಿ ಬೆಳೆದು ಬಂದಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಆದರೆ ನಾವ್ಯಾರೂ ಅದರ ಶ್ರೇಷ್ಠತೆಯನ್ನು ಪರಿಗಣಿಸಿ ಪ್ರಚಾರ ನೀಡದಿರುವುದು ದುರಾದೃಷ್ಟದ ಸಂಗತಿಯೇ ಸರಿ.

ಕಲ್ಯಾಣ ಚಾಳುಕ್ಯ-ಹೊಯ್ಸಳ ಕಾಲ, ಕರ್ನಾಟಕ ಸಂಸ್ಕೃತಿಯ ಪರ್ವ ಕಾಲ. ಈ ಕಾಲದಲ್ಲಿ ನಡೆದಷ್ಟು ವಿಪುಲ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ, ಕಲಾ ಚಟುವಟಿಕೆಗಳು ಕರ್ನಾಟಕ ಇತಿಹಾಸದ ಬೇರೆ ಯಾವ ಕಾಲದಲ್ಲೂ ನಡೆದಿಲ್ಲ. ಈ ಕಾಲದ ದೇವಾಲಯ ವಾಸ್ತು ಮತ್ತು ಶಿಲ್ಪಕಲೆ, ಆ ಕಾಲದ ಸಂಸ್ಕೃತಿಯನ್ನರಿಯಲು ಇರುವ ಏಕೈಕ ಗೋಚರ ಸಾಕ್ಷಿಗಳು. ಈ ಭೌತಿಕ ಸಾಕ್ಷಿಗಳನ್ನು ಕೇವಲ ಅವುಗಳ ಬಾಹ್ಯರೂಪ ಹಾಗೂ ಸೌಂದರ್ಯವನ್ನು ವೀಕ್ಷಿಸಿ ಪ್ರಶಂಸಿಸಿ ದರೆ ಸಾಲದು, ಅದರೊಂದಿಗೆ ಆ ಕಲಾವಸ್ತುಗಳ ನಿರ್ಮಾಣ ಕಾರ್ಯದೊಳಕ್ಕೆ ಇಳಿದಿರುವ ಬುದ್ಧಿವಂತಿಕೆಯು, ಕಲಾವಂತಿಕೆಯ ಜ್ಞಾನದ ಒಳ ನೋಟವೂ ಅತ್ಯವಶ್ಯಕ. ಈ ಒಳನೋಟವನ್ನು ನಾವು ಬೆಳೆಸಿಕೊಂಡಲ್ಲಿ ಇಂತಹ ವಾಸ್ತು ಕೃತಿಗಳು ಇನ್ನೂ ಮಹತ್ವವಾದವು ಎನಿಸುವುದರಲ್ಲಿ ಸಂದೇಹವಿಲ್ಲ.

ಇಂತಹ ಒಳನೋಟ ಬೇಕಾಗುವ ವಾಸ್ತು ಅಂಗಗಳಲ್ಲಿ ಪ್ರಧಾನವಾದುದೆಂದರೆ ಚಾಳುಕ್ಯ-ಹೊಯ್ಸಳ ದೇವಾಲಯ ಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಕಾಣಬರುವ ತಿರುಗಣೆ ಯಂತ್ರದ ಮೇಲೆ ಕೊರೆದು, ಹೆರೆದು, ಹೊಳಪು ಮಾಡಲಾಗಿದೆ ಎಂದು ಹೇಳಲಾಗುವ ಕಂಬಗಳು ('ಲೇತ್ ಟರ್ನ್ಡ್' ಕಂಬಗಳು). ಈ ಕಂಬಗಳ ಮೇಲಿನ ಸಣ್ಣ ಸಣ್ಣ ದಿಂಡುಗಳು, ಅವುಗಳ ನಡುವಣ ಅತೀ ಕಿರಿದಾದ ಗಾಡಿಗಳು, ತೋಡುಗಳು, ಇವು ಎಷ್ಟು ಕಿರಿದಾಗಿವೆ, ಸೂಕ್ಷ್ಮವಾಗಿವೆ ಎಂದರೆ ಇವುಗಳ ನಿರೂಪಣೆ ಶಿಲ್ಪಿಯ ಕೈಯಿಂದ ಮಾಡಲು ಅಸಾಧ್ಯ ಎನಿಸುತ್ತದೆ. ಒಂದು ಪಕ್ಷ ಯಾರೋ ಒಬ್ಬ ಶಿಲ್ಪಿ ಬಹಳ ಕಷ್ಟಪಟ್ಟರೆ ಇದು ಸಾಧ್ಯ ಎಂದು ತೋರಿಸಬಹು ದೇನೋ, ಆದರೆ ಅಂತಹ ಶಿಲ್ಪಿಗಳಿಗೆ ಒಂದು ಕಂಬ ಮಾಡಬೇಕಾದರೆ ವಿಪರೀತ ಸಮಯ ಬೇಕಾಗುತ್ತದೆ. ಅಂದ ಮೇಲೆ ಅವರು ಎಷ್ಟು ಕಂಬಗಳನ್ನು ಮಾಡಿ ತೋರಿಸಿಯಾರು? ತಿರುಗಣೆಯಂತ್ರದ ಮೇಲೆ ಮಾಡಲಾಗಿದೆ ಎಂದು ಹೇಳಬಹುದಾದ ಚಾಳುಕ್ಯ-ಹೊಯ್ಸಳ ಕಂಬಗಳು ಸಹಸ್ರಾರು ಸಂಖ್ಯೆಯಲ್ಲಿವೆ. ಸೋಮನಾಥಪುರದ ಕೇಶವ ದೇವಾಲಯದ ಪ್ರಾಕಾರದಲ್ಲೇ, ಒಂದೇ ರೀತಿ, ಗಾತ್ರ, ಅಲಂಕರಣದ ನೂರು ಕಂಬಗಳು ಕಾಣುತ್ತವೆ.

ಅತ್ಯಧಿಕ ಸಂಖ್ಯೆಯ ಇಂತಹ ಅನೇಕ ಕಂಬಗಳನ್ನು ನೋಡಿ ಪರಿಶೀಲಿಸಿ ಮೆಡೋಸ್ ಟೇಲರ್ ಮೊದಲಾದ ಅನೇಕ ಪಾಶ್ಚಾತ್ಯ ವಿದ್ವಾಂಸರು ಈ ಕಂಬಗಳೆಲ್ಲವೂ 'ಲೇತ್ ಟರ್ನ್ಡ್' ಕಂಬಗಳು ಎಂದು ಅಭಿಪ್ರಾಯಪಟ್ಟಿದ್ದಾರೆ. ಪಾಶ್ಚಾತ್ಯ ವಿದ್ವಾಂಸರ ಪ್ರಕಾರ ಕಂಬಕ್ಕೆ ಬೇಕಾದ ಉದ್ದ-ಗಾತ್ರದ ಕಲ್ಲಿನ ದಿಂಡುಗಳನ್ನು, ತಿರುಗುವಂತಹ ಚಕ್ರವೊಂದರ ಮೇಲೆ ಭದ್ರವಾಗಿ ನಿಲ್ಲಿಸಿ, ಕಂಬವನ್ನು ವೇಗವಾಗಿ ತಿರುಗುವಂತೆ ಮಾಡಿ, ಹಾಗೆ ತಿರುಗುವ ಕಂಬದ ದಿಂಡಿಗೆ ಉಳಿ, ಬಾಚಿಗಳನ್ನು ಒತ್ತಿ ಹಿಡಿದು ಕಲ್ಲನ್ನು ಕೊರೆದು, ಸವೆದು, ಹೆರೆದು ಬೇಕಾದ ಆಕಾರಕ್ಕೆ ತರುತ್ತಿದ್ದರು. ಈ ತೀರ್ಮಾನಕ್ಕೆ ಬರುವುದಕ್ಕೆ ಈ ಉರುಳೆಯಾಕಾರದ ಕಂಬಗಳ ಮೇಲೆ ಕಾಣಬರುವ ವೃತ್ತಾಕಾರದ, ಸಮಾನಾಂತರವಾದ, ಏಕಕೇಂದ್ರದ ಸೂಕ್ಷ್ಮಗೆರೆ - ಗುರುತುಗಳೇ ಸಾಕ್ಷಿ. ಈಗಲೂ ಸಹ ಈ ರೀತಿಯ ಅನೇಕ ಗೆರೆಗಳನ್ನು ನಾವು ಕಾಣಬಹುದು.

ಈ ಅಭಿಪ್ರಾಯಕ್ಕೆ ವಿರುದ್ಧವಾಗಿ, ಹೊಯ್ಸಳರು ತಿರುಗಣೆ ಯಂತ್ರವನ್ನು ಬಳಸದೆ ತಮ್ಮ ಕರಕೌಶಲ್ಯದಿಂದಲೇ ಇಂತಹ ಸೂಕ್ಷ್ಮ ಕೆತ್ತನೆಗಳನ್ನು ಮಾಡಿದ್ದಾರೆ ಎಂದು ಅಭಿಪ್ರಾಯಪಟ್ಟಿರುವ ವಿದ್ವಾಂಸರೂ ಉಂಟು. ಹೊಯ್ಸಳರ ತಿರುಗಣೆಯಂತ್ರದ ಬಳಕೆಯ ವಿರುದ್ಧ ಅಭಿಪ್ರಾಯ ನೀಡಿರುವ ವಿದ್ವಾಂಸರಲ್ಲಿ ಡಾ. ಷ. ಶೆಟ್ಟರ್ ಅವರು ಪ್ರಮುಖರು. ಅವರು ಹೊಯ್ಸಳ ಶಿಲ್ಪಿಗಳು ತಮ್ಮ ಕೌಶಲ್ಯದಿಂದಲೇ ಇಂತಹ ಕಂಬಗಳನ್ನು ಕೆತ್ತಿದ್ದಾರೆಯೇ ಹೊರತು, ಲೇತ್ ಯಂತ್ರಗಳನ್ನು ಬಳಸಿ ಅಲ್ಲ. ಅಂತಹ ಬೃಹತ್ ಶಿಲಾ ದಿಂಡುಗಳನ್ನು ಮೇಲೆ ಹೊತ್ತು ತಿರುಗಬಲ್ಲ, ಕಬ್ಬಿಣದ ಚಕ್ರಗಳಾಗಲೀ, ಅದಕ್ಕೆ ಬೇಕಾದ ಯಂತ್ರ ಜ್ಞಾನವಾಗಲೀ ನಮ್ಮಲ್ಲಿ ಆ ಕಾಲದಲ್ಲಿ ಇರಲಿಲ್ಲ.

ಅಲ್ಲದೆ ನಕ್ಷತ್ರಾಕಾರದ ಕಂಬಗಳನ್ನು ಲೇತ್ ಯಂತ್ರದ ಮೇಲೆ ಮಾಡುವುದಕ್ಕೆ ಆಗುವುದಿಲ್ಲ ಮುಂತಾದ ಸಮರ್ಥನೆಗಳನ್ನು ನೀಡಿದ್ದಾರೆ.

ಈ ಜಿಜ್ಞಾಸೆಗಳನ್ನೆಲ್ಲಾ, ಈ ಅಧ್ಯಕ್ಷ ಭಾಷಣದಲ್ಲಿ ನಮ್ಮ ಮುಂದೆ ಏಕೆ ಇಡುತ್ತಿದ್ದಾರೆ ಎಂದು ನಿಮಗೆಲ್ಲಾ ಅನಿಸಬಹುದು. ಅದಕ್ಕೆ ಒಂದು ಕಾರಣವೂ ಇದೆ. ಏನೆಂದರೆ ನಾನು ವೈಯಕ್ತಿಕವಾಗಿ ಹೊಯ್ಸಳರು ಕಡೆತ ಯಂತ್ರದ ಮೂಲಕವೇ ಈ ಕಂಬಗಳನ್ನು ಮಾಡಿದ್ದಾರೆ ಎಂದು ದೃಢವಾಗಿ ನಂಬಿರುವ ವ್ಯಕ್ತಿ. ಪಾಶ್ಚಾತ್ಯ ವಿದ್ವಾಂಸರ ಅಭಿಮತವನ್ನು ಅನುಮೋದಿಸಿಸುವವನು. ಆದರೆ ಈ ವಿಚಾರದಲ್ಲಿ ನನ್ನದೇ ಆದ ಒಂದು ವಿಭಿನ್ನವಾದ ವಿವರಣೆ ಇದೆ. ದೀರ್ಘವಾಗಿ ಆಲೋಚಿಸಿ ಈ ವಿಷಯದ ಬಗ್ಗೆ ಈ ಸಾಧ್ಯತೆ ಇದೆಯೆಂದು ಹೇಳಬಯಸುತ್ತೇನೆ.

ನನ್ನ ಆಲೋಚನೆಯ ಪ್ರಕಾರ ಈ ಎಲ್ಲಾ ಕಂಬಗಳು ತಿರುಗಣೆ ಯಂತ್ರದ ತಂತ್ರದ ಮೇಲೆ ಮಾಡಿರುವ ಕಂಬಗಳೇ ಹೊರತು ನಿಜವಾದ ತಿರುಗಣೆ ಯಂತ್ರದ ಮೇಲೆ ನಿಲ್ಲಿಸಿ ಕಡೆದ ಕಂಬಗಳಲ್ಲ. ಇಷ್ಟು ಭಾರವಾದ ಕಂಬಗಳನ್ನು ಡಾ. ಶೆಟ್ಟರ್ ಅವರು ಕೂಡ ಹೇಳುವಂತೆ, ಬೃಹದಾಕಾರದ ಗಟ್ಟಿಮುಟ್ಟಾದ ಚಕ್ರದ ಮೇಲೆ, ಎಳ್ಳಷ್ಟೂ ಅಲುಗಾಡದಂತೆ ನಿಲ್ಲಿಸಿ, ವೇಗವಾಗಿ ತಿರುಗಿಸಿ, ಕೊರೆಯುವ ಯಂತ್ರಜ್ಞಾನ ನಮ್ಮಲ್ಲಿರಲಿಲ್ಲ. ಈಗಲೂ ಇಲ್ಲ. ಇಂದಿನ ಯಂತ್ರಯುಗದಲ್ಲಿ ಬೇಕಾದರೆ ಮಾಡಿಕೊಳ್ಳಬಹುದಷ್ಟೆ. ಆದರೆ ಹೊಯ್ಸಳ ಶಿಲ್ಪಿಗಳು ಬಹಳ ಚತುರರು. ಅವರು ಯಾವುದೇ ಯಂತ್ರದ ಸಹಾಯವಿಲ್ಲದೇ ಈ ಕೆಲಸ ಮಾಡಿದ್ದಾರೆ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ಆದರೆ ಈ ಯಂತ್ರದ ಸ್ವರೂಪವೇನು ಅದು ಹೇಗೆ ಕೆಲಸ ನಿರ್ವಹಿಸುತ್ತಿತ್ತು ಎಂಬ ವಿಚಾರವನ್ನು ಈಗ ಕೇವಲ ಊಹಿಸಿ ಹೇಳಬಹುದಷ್ಟೆ.

ಈ ಬಗ್ಗೆ ದೀರ್ಘ ಆಲೋಚನೆ, ಸಮಾಲೋಚನೆಯ ನಂತರ ನನಗೆ ಒಂದು ವಿಧಾನ ಹೊಳೆದಿದೆ. ಅನೇಕ ಎಂಜಿನಿಯರುಗಳ ಜೊತೆ ಸಮಾಲೋಚಿಸಿ ಈ ಒಂದು ಸಾಧ್ಯತೆ ಇದೆ ಎಂಬ ತೀರ್ಮಾನಕ್ಕೆ ಬಂದಿದ್ದೇನೆ. ಹೊಯ್ಸಳ ಶಿಲ್ಪಿಗಳೂ ಸಹ ಈ ಸರಳ ವಿಧಾನವನ್ನು ಅನುಸರಿಸಿರಬಹುದು ಎಂದು ನನ್ನ ಅನುಮಾನ. ಇದು ಬಹಳ ಸರಳ ವಿಧಾನ. ಇಲ್ಲಿ ಯಾವುದೇ ಬೃಹತ್ತಾದ ತಿರುಗಣೆ ಯಂತ್ರ ಜೋಡಣೆಯಾಗಲೀ, ಚಕ್ರವಾಗಲೀ ಇಲ್ಲಿ ಇರುವುದಿಲ್ಲ. ತಂತ್ರ ಮತ್ತು ವಿಧಾನ ತಿರುಗಣೆ ಯಂತ್ರದ್ದು, ಆದರೆ ಯಂತ್ರ ಮಾತ್ರ ಇಲ್ಲಿ ಇಲ್ಲ. ಎಷ್ಟಾದರೂ ಭಾರವನ್ನು ತಡೆಯುತ್ತದೆ, ಜೋರಾಗಿ ತಿರುಗುತ್ತದೆ. ಆದರೆ ಎಳ್ಳಷ್ಟೂ ಅಲುಗಾಟವಿಲ್ಲ. ಈ ರೀತಿ ತಿರುಗಣೆ ತಂತ್ರಜ್ಞಾನದಲ್ಲಿ ತಯಾರಿಸಬಹುದಾದ ವಸ್ತು ಮಾತ್ರ ನೀವೇ ನೋಡಿರುವಂತೆ ಅಮೋಘವಾದದ್ದು. ಇಂತಹ ಒಂದು ಸರಳ ವಿಧಾನದ ಮುಖ್ಯ ವಿವರಣೆಗಳನ್ನು ಇಲ್ಲಿ ನೀಡುತ್ತಿದ್ದೇನೆ.

ಈ ಸರಳ ವಿಧಾನದಲ್ಲಿ ಕಲ್ಲಿನ ಖನಿಯಲ್ಲೇ ಬೇಕಾದ ರೀತಿಯಲ್ಲಿ ಅಂದರೆ ಸುಮಾರು ೩–೪ ಅಡಿ ಆಳ ಮತ್ತು ತಯಾರಿಸಬೇಕಾದ ಕಂಬದ ಉದ್ದಕ್ಕೆ ಅನುಗುಣವಾಗಿ, ಅಗಲವಾದ ಹಾದಿ/ಮೋರಿಯನ್ನು ಕೊರೆಯುವುದು. ಈ ಮೋರಿ ರೀತಿಯ ಹಾದಿಗೆ ಮಧ್ಯಭಾಗದಲ್ಲಿ, ಪಾರ್ಶ್ವದ ಎರಡೂ ಗೋಡೆಗಳ ನೆತ್ತಿಯಲ್ಲಿ ಇಂಗ್ಲಿಷ್ ಅಕ್ಷರ U ಆಕಾರದ ಒಂದೊಂದು ಗಾಡಿ ಅಥವಾ ತೋಡುಗಳನ್ನು, ಎದುರು ಬದುರಾಗಿ ಕೊರೆಯುವುದು. ತಯಾರಿಸಬೇಕಾದ ಕಂಬದ ಉದ್ದಕ್ಕಿಂತಲೂ ಸ್ವಲ್ಪ ಹೆಚ್ಚು ಉದ್ದವಾದ ಕಲ್ಲಿನ ತೊಲೆಯನ್ನು ಆರಿಸಿ ಅದನ್ನು ಬೇಕಾದ ಕಡೆ ಸ್ವಲ್ಪ ದುಂಡು ಮಾಡುವುದು. ಕಂಬದ ಎರಡೂ ತುದಿಗಳನ್ನು ಮೋರಿಯ ನೆತ್ತಿಯ U ಆಕಾರದ ತೋಡುಗಳಲ್ಲಿ ಕೂರುವಂತೆ ಗುಂಡಗೆ ಮಾಡಿ ನುಣುಪು ಮಾಡುವುದು. ನಂತರ ಕಂಬದ ಕಲ್ಲನ್ನು ಎದುರು – ಬದುರಾಗಿರುವ ಈ ನೆತ್ತಿಯ ಎರಡೂ ತೋಡುಗಳಲ್ಲಿ ಇಳಿಸುವುದು. ಈಗ ಮೋರಿಗೆ ಅಡ್ಡಡ್ಡಲಾಗಿ ಮೋರಿಯ ನೆತ್ತಿಯಲ್ಲಿ ಕಂಬದ ದಿಂಡು, ತಿರುಗಿಸಬಹುದಾದ ತೊಲೆಯಂತೆ ಭದ್ರವಾಗಿ ಕುಳಿತಿರುತ್ತದೆ. ದಿಂಡಿಗೆ ಸೂಕ್ತ ಕಡೆ ಹಗ್ಗವನ್ನು, ಕಡಗೋಲಿಗೆ ಸುತ್ತಿದಂತೆ, ಸುತ್ತಿ ದಿಂಡನ್ನು ಬೇಕಾದ ವೇಗದಲ್ಲಿ ಎಳೆಯುತ್ತ ಸುತ್ತುವಂತೆ ಮಾಡುವುದು. ಸುಮಾರು ೩–೪ ಅಡಿ ಎತ್ತರದಲ್ಲಿ ನಮ್ಮೆದುರಿಗೆ ಅಡ್ಡಡ್ಡಲಾಗಿ ಕಂಬದ ದಿಂಡು ಸುತ್ತುತ್ತಿರುತ್ತದೆ. ಇದಕ್ಕೆ ಬೇಕಾದ ಕಡೆ ಬೇಕಾದ ರೀತಿಯಲ್ಲಿ ಉಳಿಯಿಂದ ಕೊರೆದು, ಉಜ್ಜಿ, ಸವೆಸಿ, ಹೆರೆದು ಬೇಕಾದ ಡಿಜೈನುಗಳನ್ನು ಮಾಡಬಹುದು. ನುಣುಪು ಹೊಳಪುಗಳನ್ನೂ ಸಹ ಮಾಡಬಹುದು.

ಈ ವಿಧಾನದಲ್ಲಿ ಕಂಬದ ದಿಂಡು ಎಷ್ಟೇ ಗಾತ್ರವಿರಲಿ, ಉದ್ದವಿರಲಿ, ಭಾರವಿರಲಿ ಅದನ್ನು ಹೊರಲು ಯಾವ ಚಕ್ರವಾಗಲೀ, ಯಂತ್ರವಾಗಲೀ, ಬೇಕಿಲ್ಲ–ತಿರುಗಿಸುವುದೂ ಸುಲಭ. ಉದ್ದವಾದ ಮೋರಿಯಲ್ಲಿ ಆ ಕಡೆ, ಈ ಕಡೆ ಆಳುಗಳು ಹಗ್ಗವನ್ನು ಹಿಂದಕ್ಕೆ–ಮುಂದಕ್ಕೆ ಎಳೆಯುತ್ತಿದ್ದರೆ ಸಾಕು, ಕಂಬದ ದಿಂಡು ಅಲುಗಾಡದೆ ಒಂದೇ ಅಕ್ಷದಲ್ಲಿ ತಿರುಗುತ್ತಿರುತ್ತದೆ. ಕೊರೆತಗಳು ನಿಖರವೂ, ಸೂಕ್ಷ್ಮವೂ ಆಗಿರುತ್ತದೆ. ಈ ರೀತಿಯ ಮೋರಿಗಳನ್ನು ಬೇಕಾದೆಡೆ ಬೃಹತ್ ಕಲ್ಲುಗಳನ್ನು ಬಳಸಿ ನಿರ್ಮಿಸಿಕೊಳ್ಳಬಹುದು ಕೂಡ. ಕಂಬದ ಗೂಟಗಳನ್ನು ಕೂಡಿಸುವ ತೋಡುಗಳಲ್ಲಿ ಗಟ್ಟಿ ಶಿಲೆಗಳಾದ ಗ್ರ್ಯಾನೈಟ್, ಡಾಲರೈಟ್ ಕಲ್ಲುಗಳನ್ನು ಬಳಸುವುದರಿಂದ ಬಳಪದ ಕಲ್ಲಿನ ಭಾರಕ್ಕೆ ಅವು ಸವೆಯುವುದಿಲ್ಲ. ಸುಲಭ

ಚಾಲನೆಗಾಗಿ ಕೊಬ್ಬಿನ/ಎಣ್ಣೆಯ ಪದಾರ್ಥಗಳನ್ನು ಬಳಸಬಹುದು.

ಈ ರೀತಿಯ ತಿರುಗಣೆ ತಂತ್ರ ವಿಧಾನದಲ್ಲಿ ತಯಾರಿಸಿದ ಕಂಬಗಳನ್ನು ಹಾಗೆಯೇ ಬಳಸಬಹುದು ಅಥವಾ ಶಿಲ್ಪಿಯ ಕಲ್ಪನಾ ಚಾತುರ್ಯಕ್ಕೆ ತಕ್ಕಂತೆ ಬೇರೆ-ಬೇರೆ ವಿನ್ಯಾಸ, ಅಲಂಕಾರ, ಕೆತ್ತನೆಗಳನ್ನು ಮಾಡಬಹುದು. ನಕ್ಷತ್ರಾಕಾರದ ಕಂಬಗಳಿಗೂ ಸಹ, ಮೂಲತಃ ಕಂಬಗಳನ್ನು ತಿರುಗಣೆ ತಂತ್ರದಲ್ಲಿ ತಯಾರಿಸಿ, ನಂತರ ಮೇಲಿನಿಂದ ಕೆಳಕ್ಕೆ ಗಾಡಿ-ತೋಡುಗಳನ್ನು ಬಹಳ ನಾಜೂಕಾಗಿ ಕೆತ್ತನೆ ಮಾಡುತ್ತಿದ್ದರು. 'ಲೇತ್ ಟರ್ನ್ಡ್' ಕಂಬಗಳು ಅಂದರೆ ತಿರುಗಣೆ ತಂತ್ರದ ಕಂಬಗಳು ಚಾಳುಕ್ಯ-ಹೊಯ್ಸಳ ಶಿಲ್ಪಿಗಳ ಒಂದು ಪ್ರಮುಖ ತಾಂತ್ರಿಕ ಆವಿಷ್ಕಾರ. ಈ ತಂತ್ರ ವಿನ್ಯಾಸದ ಹಿಂದೆ ಇರುವ ಆಲೋಚನೆ, ಸಮಕಾಲೀನ ಕೈಗಾರಿಕಾ ಯಂತ್ರಜ್ಞಾನವನ್ನು ಸೂಚಿಸುತ್ತದೆ ಎಂಬುದು ಇಲ್ಲಿ ಗಮನಾರ್ಹ.

ನಾನು ಹೇಳಿರುವ ವಿಧಾನದಲ್ಲಿ ಹೊಯ್ಸಳ ಶಿಲ್ಪಿಗಳು ಕಂಬಗಳನ್ನು ಕಡೆದು ನಿರ್ಮಿಸುವುದಕ್ಕೆ ಈ ರೀತಿಯ 'ಮೋರಿ'ಗಳನ್ನು ನಿರ್ಮಿಸಿಕೊಂಡಿದ್ದರೇ? ಹಾಗಾದರೆ ಅವು ನಿಮಗೆ ಎಲ್ಲಾದರೂ ದೊರಕಿದೆಯೇ? ಎಂದು ಪ್ರಶ್ನಿಸಿದರೆ ಅದಕ್ಕೆ ನನ್ನಲ್ಲಿ ಉತ್ತರವಿಲ್ಲ. ಏಕೆಂದರೆ ಅಂತಹ 'ಮೋರಿ'ಗಳು ಈಗ ನಾಶವಾಗಿರಬಹುದು ಅಥವಾ ನನ್ನ ಕಣ್ಣಿಗೆ ಬೀಳದಿರಬಹುದು. ಇದು ಘನ ವಿದ್ವತ್ಸಭೆ. ನೂರಾರು ಸಂಶೋಧಕರು, ವಿದ್ವಾಂಸರು ಇಲ್ಲಿ ನೆರೆದಿದ್ದೀರಿ, ನನ್ನ ಭಾಷಣವನ್ನು ಕೇಳಿದ್ದೀರಿ. ನಿಮಗೆಲ್ಲಾದರೂ, ನಿಮ್ಮ ಪುರಾತತ್ವ ಅನ್ವೇಷಣೆಗಳಲ್ಲಿ ಈ ರೀತಿಯಲ್ಲಿ ಕಂಬಗಳನ್ನು ತಯಾರಿಸಲು ಉಪಯೋಗಿಸಿರಬಹುದಾದಂತಹ ನಿವೇಶನಗಳು ಕಂಡಲ್ಲಿ ನನ್ನ ಈ ಅಭಿಪ್ರಾಯಕ್ಕೆ ಪುಷ್ಠಿ ದೊರಕುತ್ತದೆ. ಹಾಗೆಯೇ ಕಂಬ ತಯಾರಿಸಿರಬಹುದಾದ ಈ ವಿಧಾನ ನಿಮಗೆ ತಿಳಿದಿದ್ದರೆ, ನಿಮ್ಮ ಅನ್ವೇಷಣೆಯಲ್ಲಿ ಕಾಣಬಹುದಾದ ವಿಚಿತ್ರ ವಸ್ತು, ಸನ್ನಿವೇಶಗಳನ್ನು ಗುರುತಿಸಿ ಅರ್ಥೈಸಲು ಈ ವಿವರಣೆ ನಿಮಗೆ ಸಹಕಾರಿಯಾಗಬಹುದು.

ಈಗ ದ್ರಾವಿಡ ವಾಸ್ತುಶೈಲಿಗೆ ಬರೋಣ. ದ್ರಾವಿಡ ಶೈಲಿಯು ಇಡೀ ಕರ್ನಾಟಕ, ತಮಿಳುನಾಡು, ಆಂಧ್ರ ಹಾಗೂ ಕೇರಳ ರಾಜ್ಯಗಳಲ್ಲಿ ಜನಪ್ರಿಯವಾಗಿ ಬೆಳೆದು ಬಂದ ದೇವಾಲಯ ವಾಸ್ತುಶೈಲಿ. ಈ ಶೈಲಿ, ಈ ರಾಜ್ಯಗಳ ಭಾಗಗಳಲ್ಲೆಲ್ಲಾ ಹೆಚ್ಚೂ ಕಡಿಮೆ ಒಂದೇ ರೂಪಿನದ್ದಾದರೂ, ಸ್ಥಳೀಯ ಸಮಾಜದ ಅಭಿರುಚಿ, ಆಲೋಚನೆಗಳಿಗನುಗುಣವಾಗಿ ಕೆಲವು ವಿಶೇಷವಾದ ಸ್ವಂತಿಕೆಯ ವಾಸ್ತು ಅಲಂಕರಣಗಳನ್ನು ಬೆಳೆಸಿಕೊಂಡಿತ್ತು. ಈ ಸ್ವಂತಿಕೆಗಳು ಸಾಮಾನ್ಯ ನೋಟಕ್ಕೆ ಸುಲಭವಾಗಿ ಗೋಚರವಾಗುವುದಿಲ್ಲ. ಕೇವಲ ಸೂಕ್ಷ್ಮನೋಟಕ್ಕೆ ಮಾತ್ರ ಇವು ಗೋಚರ. ಇಂತಹ ಸ್ವಂತಿಕೆಯ ಅಲಂಕರಣಗಳನ್ನು ಕೋಷ್ಠಗಳ ವಿನ್ಯಾಸ, ಭಿತ್ತಿಯ ಅಲಂಕರಣ, ಕಂಬದ ದಿಂಡಿನ ವಿನ್ಯಾಸ ಇವುಗಳಲ್ಲಿ ಕಾಣಬಹುದಾಗಿದೆ. ಕನ್ನಡ ವಾಸ್ತು ಮತ್ತು ತಮಿಳು ವಾಸ್ತು ಇವುಗಳ ನಡುವಿನ ಸೂಕ್ಷ್ಮ ವ್ಯತ್ಯಾಸಗಳನ್ನು ತಿಳಿಯಲು ಸಹಕಾರಿಯಾಗುವ ಒಂದೆರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ನೀಡಬಯಸುತ್ತೇನೆ.

ದೇವಾಲಯ ಭಿತ್ತಿಯ ವಿನ್ಯಾಸದಲ್ಲಿ ಕೋಷ್ಠಗಳ ಅಲಂಕರಣೆ ಒಂದು ಪ್ರಮುಖ ಅಂಗ. ಈ ಕೋಷ್ಠಗಳಿಗೆ ಎರಡೂ ಬದಿಗಳಲ್ಲಿ ಒಂದೊಂದು ಸ್ತಂಭಿಕೆಗಳಿರುತ್ತವೆ. ಅದರ ಮೇಲೆ ಪ್ರಸ್ತರವಿರುತ್ತದೆ. ಈ ಸ್ತಂಭಿಕೆಗಳು ಕನ್ನಡ ವಾಸ್ತುವಿನಲ್ಲಿ ಸಂಪೂರ್ಣ ಸ್ತಂಭಗಳಂತೆ ಇರುತ್ತವೆ. ತಮಿಳು ವಾಸ್ತುವಿನಲ್ಲಿ ಸ್ತಂಭಿಕೆಯನ್ನು ಮೇಲಿನಿಂದ ಕೆಳಗಿನವರೆಗೂ ಮಧ್ಯಕ್ಕೆ ಸೀಳಿ ನಿಲ್ಲಿಸಿರುವಂತೆ ಕಂಡರಿಸಿರುತ್ತಾರೆ. ಈ ಲಕ್ಷಣ ಕನ್ನಡ-ತಮಿಳು ಸಂಪ್ರದಾಯಗಳ ನಡುವಣ ಮುಖ್ಯ ಪ್ರಭೇದ.

ಇದೇ ರೀತಿ ಭಿತ್ತಿಯ ಮೇಲಿನ ಅಲಂಕರಣವಾದ ಸ್ತಂಭಪಂಜರ ಮತ್ತು ಕುಂಭ ಪಂಜರಗಳ ಬಳಕೆ. ಕ್ರಿ.ಶ. ಸು. ೧೧ನೇ ಶತಮಾನದ ದ್ರಾವಿಡ ವಾಸ್ತುವಿನಲ್ಲಿ ಕಾಣಬರುವ ಈ ಅಲಂಕರಣೆ ಕನ್ನಡ -ತಮಿಳು ವಾಸ್ತುಶಿಲ್ಪಿಗಳಿಗೆ ಅತ್ಯಂತ ಪ್ರಿಯವಾಗಿದ್ದ ಅಲಂಕರಣೆ. ಕನ್ನಡ ಶಿಲ್ಪಿಗಳು ಯಾವಾಗಲೂ ಸ್ತಂಭ ಪಂಜರ ಪ್ರಿಯರು. ತಮಿಳು ಶಿಲ್ಪಿಗಳು ಕುಂಭ ಪಂಜರ ಪ್ರಿಯರು. ರಾಷ್ಟ್ರಕೂಟ, ಕಲ್ಯಾಣ-ಚಾಳುಕ್ಯ, ಹೊಯ್ಸಳ ಕಾಲದ ದೇವಾಲಯಗಳಲ್ಲಿ, ಕನ್ನಡ ನಾಡಿನಲ್ಲಿ ಎಲ್ಲೆಲ್ಲೂ ಸ್ತಂಭಪಂಜರಗಳು ಕಾಣುತ್ತವೆ. ಅದೇ ತಮಿಳುನಾಡಿನ ಎಲ್ಲಾ ದೇವಾಲಯಗಳಲ್ಲೂ ಹಾಗೂ ತಮಿಳು ಶಿಲ್ಪಿಗಳು ನಿರ್ಮಿಸಿದ ಆಗ್ನೇಯ ಕರ್ನಾಟಕದ ದೇವಾಲಯಗಳಲ್ಲಿ ಕುಂಭ ಪಂಜರಗಳು ಕಾಣಸಿಗುತ್ತವೆ. (ಈ ನಿಬಂಧನೆಗೆ ಒಂದೆರಡು ಅಪವಾದಗಳೂ ಇಲ್ಲದಿಲ್ಲ.)

ವಿಜಯನಗರ ಕಾಲದಲ್ಲಿ ತಮಿಳುನಾಡಿನ ಶಿಲ್ಪಿಗಳು ಮತ್ತು ಕನ್ನಡ ನಾಡಿನ ಶಿಲ್ಪಿಗಳು ಸೇರಿ ದೇವಾಲಯ ನಿರ್ಮಾಣ ಮಾಡಿದರು ಎಂಬುದು ತಿಳಿದ ವಿಷಯ. ಹೀಗಾಗಿ ಹಲವಾರು ಹಂಪಿಯ ದೇವಾಲಯಗಳಲ್ಲಿ ಕೆಲವು ಭಿತ್ತಿ ಕೋಷ್ಠಗಳಿಗೆ ಪೂರ್ಣಸ್ತಂಭಿಕೆಗಳನ್ನೂ, ಮತ್ತೆ ಕೆಲವು ಭಿತ್ತಿ ಕೋಷ್ಠಗಳಿಗೆ ಸೀಳು ಸ್ತಂಭಿಕೆಗಳನ್ನೂ ಒಂದೇ ದೇವಾಲಯ ಭಿತ್ತಿಯಲ್ಲಿ ಬಳಸಿರುವುದನ್ನು ಕಾಣಬಹುದು. ಹಾಗೆಯೇ ಕುಂಭಪಂಜರ, ಸ್ತಂಭ ಪಂಜರಗಳೂ ಹಂಪಿಯ ದೇವಾಲಯಗಳಲ್ಲಿ ಒಟ್ಟಿಗೆ ಕಾಣಸಿಗುತ್ತವೆ. ಇದೇ ರೀತಿ ಮುಷ್ಠಿ ಬಂಧ ಕಪೋತಗಳು ಕನ್ನಡ ಶಿಲ್ಪಿಗಳ ಒಂದು ಸ್ವಂತಿಕೆ.

ಸಣ್ಣ ಸಣ್ಣ ಗಮನಿಕೆಗಳು ಎನಿಸಿದರೂ, ಇಂತಹ ವಾಸ್ತು ಅಲಂಕರಣೆಗಳ ಜ್ಞಾನ, ದೇವಾಲಯ ನಿರ್ಮಾಣದ ಅನೇಕ ನಿಗೂಢ ವಿಷಯಗಳನ್ನು ತಿಳಿಯುವಲ್ಲಿ, ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಸಹಕಾರಿಯಾಗಬಲ್ಲವು.

ವಿಜಯನಗರ ಕಾಲದ, ಕನ್ನಡ ನೆಲದ ವಾಸ್ತು ವಿಶೇಷಗಳು ಸಂಖ್ಯೆಯಲ್ಲಿ ಅನೇಕ, ವೈವಿಧ್ಯತೆಯಲ್ಲಿ ಅನೇಕ. ಅವುಗಳ ಪಟ್ಟಿ ಮಾಡುತ್ತಾ ಹೋದರೆ ಅನೇಕ ಪುಟಗಳಾದಾವು. ದೇವಾಲಯ ಸ್ತಂಭ ನಿರೂಪಣೆಯಲ್ಲಿ, ಗೋಪುರ ನಿರ್ಮಾಣದಲ್ಲಿ, ಅಧಿಷ್ಠಾನದ ಅಲಂಕರಣೆಯಲ್ಲಿ, ವಿಶೇಷ ವಿನ್ಯಾಸದ ತೂಗು ಛಾವಣಿಯ ನಿರ್ಮಾಣದಲ್ಲಿ, ಸೇತು-ಕಾಲುವೆ ನಿರ್ಮಾಣದಲ್ಲಿ, ನೀರು ಸರಬರಾಜು ವ್ಯವಸ್ಥೆಯ ನಿರ್ಮಾಣದಲ್ಲಿ, ನಗರ ಯೋಜನೆಯಲ್ಲಿ ಆದ ವಾಸ್ತು ಆವಿಷ್ಕಾರಗಳು, ಅನೇಕವಾದವು. ಇವುಗಳಲ್ಲಿ ಬಹಳಷ್ಟು ವಿಚಾರಗಳು ನಿಮಗೆ ತಿಳಿದವುಗಳೇ ಆಗಿವೆ. ಆದರೆ ಇವುಗಳಲ್ಲೆಲ್ಲಾ ಅತ್ಯಂತ ಚಾಣಾಕ್ಷತೆಯ ನಿರ್ಮಾಣಗಳೆಂದು ಪರಿಗಣಿಸಬಹುದಾದ ಒಂದೆರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ಹೇಳ ಬಯಸುತ್ತೇನೆ.

ಮೊದಲನೆಯದಾಗಿ ಹಂಪಿಯ ಕೆಲವು, ಅಂದರೆ ವಿಜಯವಿಠಲ, ಅಚ್ಯುತರಾಯ, ಪಟ್ಟಾಭಿರಾಮ ಮತ್ತು ಮಾಲ್ಯವಂತ ರಘುನಾಥ ದೇವಾಲಯಗಳ ವಿಶಾಲ ರಂಗಮಂಟಪದಲ್ಲಿ ಕಾಣ ಬರುವ 'ತೂಗು ಛಾವಣಿಗಳು'. ಆಂಗ್ಲಭಾಷೆಯಲ್ಲಿ ಇಂತಹ ಛಾವಣಿಯನ್ನು 'ಸಸ್ಪೆಂಡೆಡ್ ರೂಫ್' ಎನ್ನುತ್ತಾರೆ. ಹಜಾರದ ಮಧ್ಯದ ವಿಶಾಲ ಅಂಕಣದ ಮೇಲೆ ಬೃಹದಾಕಾರದ ಅಡ್ಡ ತೊಲೆಗಳು, ಮತ್ತು ಆ ತೊಲೆಗಳ ಆಸರೆಯಲ್ಲಿ ನಿಂತಿರುವ ಸಾಲು ಚಪ್ಪಡಿಗಳು ಇವುಗಳೆಲ್ಲದರ ತಳಭಾಗವನ್ನು ಒಂದೇ ಮಟ್ಟದಲ್ಲಿ ಸಮವಾಗಿ ಕೂರುವಂತೆ ನಿರ್ಮಿಸಿರುವ ಮೇಲ್ಚಾವಣಿ. ಈ ರೀತಿಯ ಛಾವಣಿ ನಿರ್ಮಾಣವನ್ನು ನಾನು ಹಂಪಿಯ ನಾಲ್ಕು ದೇವಾಲಯಗಳಲ್ಲಿ ಮಾತ್ರ ಗಮನಿಸಿ ಪ್ರಕಟಿಸಿದ್ದೇನೆ. ಬೇರೆ ರಾಜ್ಯಗಳಲ್ಲಿ, ಅಂದರೆ ಮುಖ್ಯವಾಗಿ ತಮಿಳುನಾಡಿನಲ್ಲಿ, ಎಲ್ಲಾದರೂ ಇದ್ದು, ಅದನ್ನು ಯಾರಾದರೂ ಗಮನಿಸಿ ಪ್ರಕಟಿಸಿದ್ದಾರೋ ನನಗೆ ತಿಳಿಯದು. ಅದು ಏನೇ ಇರಲಿ ಈ ಛಾವಣಿಯ ನಿರ್ಮಾಣ ವಿಧಾನ, ಅದರ ಯಶಸ್ವೀ ಕಾರ್ಯ ನಿಯೋಜನೆ ಮಾತ್ರ ಇಡೀ ದ್ರಾವಿಡ ವಾಸ್ತು ವಿಜ್ಞಾನಕ್ಕೇ ಕಲಶಪ್ರಾಯವಾದ ಕಾರ್ಯವೆನ್ನಬಹುದು. ಈ ವಿನ್ಯಾಸದ ಆಲೋಚನೆ ಕರ್ನಾಟಕದ ಶಿಲ್ಪಿಗಳಿಗೆ ಹೇಗೆ ಬಂತು ಎಂಬುದು ತಿಳಿದಿಲ್ಲ. ಆದರೆ ಇದರ ವಿನ್ಯಾಸ ಮತ್ತು ಯಶಸ್ವೀ ಕಾರ್ಯ ನಿಯೋಜನೆ ಅನುಪಮವಾದದ್ದು ಹಾಗೂ ಶ್ಲಾಘನೀಯವಾದದ್ದು.

ಇದೇ ರೀತಿಯಲ್ಲಿ ಅತೀ ಸುಲಭವಾಗಿ, ಒಂದೇ ನಿರ್ಮಾಣ ವೆಚ್ಚದಲ್ಲಿ, ಒಂದೇ ನಿರ್ಮಾಣ ವಸ್ತುಗಳನ್ನು ಬೇರೆ ವಿಧದಲ್ಲಿ ಬಳಸಿ ಮಾಡಿರುವ ನೀರು ಸೋಸುವ ಕೊಳಾಯಿಯ ವಿನ್ಯಾಸ. ಈ ವಿಧಾನದಲ್ಲಿ ನಿರ್ಮಿಸಿರುವ ಕೊಳಾಯಿ ರೇಜಿಗೆ ರಹಿತವಾದ, ನಿರ್ವಹಣೆ ರಹಿತವಾದ, ಸೋಸು ಜಾಲರಿಯಾಗಿ ಕಾರ್ಯ ನಿರ್ವಹಿಸುತ್ತದೆ. ನದಿಯಿಂದ, ಕಾಲುವೆಯ ಮೂಲಕ ಹರಿದು ಬರುವ ನೀರನ್ನು ಸ್ನಾನದ ಕೊಳಕ್ಕೆ ಬಿಡುವುದಕ್ಕೆ ಮುಂಚೆ ಎಲ್ಲಾ ಕಲ್ಮಶಗಳನ್ನೂ, ನೀರಿನಲ್ಲಿ ಕರಗಿದ ಬದಿಯನ್ನೂ, ಸಂಪೂರ್ಣ ಸೋಸಿ, ಶುದ್ಧ ನೀರನ್ನು ಸ್ನಾನದ ಕೊಳದೊಳಕ್ಕೆ ಬಿಡುತ್ತಿದ್ದ ವ್ಯವಸ್ಥೆ ಇದು. ಈ ವಿಧಾನದಲ್ಲಿ ನೀರಿನಲ್ಲಿ ತೇಲಿಬಂದ ವಸ್ತುಗಳು, ಓಡಾಡುವ ಕ್ರಿಮಿಕೀಟಗಳು ಎಲ್ಲವೂ ಕೊಳದ ಹೊರಗೆ, ಕೊಳಾಯಿಯಲ್ಲಿ ತೇಲುತ್ತಾ ನಿಂತು, ಕ್ರಮೇಣ ಈ ತೇಲುವ ಕಲ್ಮಶಗಳೇ ಜರಡಿ ಕಾರ್ಯ ನಿರ್ವಹಿಸುವಂತೆ ರೂಪಿಸ ಲಾಗಿದೆ. ಈ ಕಾರ್ಯ ನಿರ್ವಹಣಾ ವಿಧಾನದ ವಿವರ ನೀಡಲು ಇಲ್ಲಿ ಸಮಯಾವಕಾಶ ವಿಲ್ಲ. ಆ ವಿವರಗಳೆಲ್ಲವೂ ಆಗಲೇ ಪ್ರಕಟವಾಗಿವೆ. ಆಸಕ್ತಿಯುಳ್ಳವರು ಓದಿ ತಿಳಿಯಬಹುದು.

ಇಂತಹ ಒಂದು ನೀರು ಸೋಸುವ ವಿಧಾನ ವಿಜಯನಗರ ಕಾಲದ ವಾಸ್ತುಶಿಲ್ಪಿಗಳ ಆವಿಷ್ಕಾರ. ತಲಕಾಡಿನ ಉತ್ಖನನಗಳಲ್ಲಿ ಈ ವಿಧಾನವನ್ನು ಶೋಧಿಸಲಾಗಿದೆ. ವಿಜಯನಗರ ಕಾಲದ ನಗರ ನೀರು ಸರಬರಾಜು ವ್ಯವಸ್ಥೆಯ ಒಂದು ಮುಖವನ್ನು ಈ ಶೋಧನೆ ಪರಿಚಯಿಸುತ್ತದೆ. ಆವಿಷ್ಕಾರ ಹೇಗಿರಬೇಕೆಂದರೆ ಅದು ಸರಳವಾಗಿರಬೇಕು. ಅದರ ಬಳಕೆ ಸುಲಭ ಸಾಧ್ಯವಾಗಿರಬೇಕು, ಕಡಿಮೆ ಖರ್ಚಿನ ದಾಗಿರಬೇಕು, ನಿಯೋಜನೆ ಸುಲಭವಾಗಿರಬೇಕು, ಗೋಜಿಲ್ಲದ ನಿರ್ವಹಣೆ ಇರಬೇಕು, ಇವೆಲ್ಲವು ಇದ್ದಲ್ಲಿ ಅಂತಹ ಆವಿಷ್ಕಾರಗಳು ಬುದ್ಧಿವಂತಿಕೆಗೆ ಹಿಡಿದ ಕನ್ನಡಿಯಂತಿರುತ್ತದೆ. ಇವೆಲ್ಲ ಗುಣಗಳುಳ್ಳ ನೀರು ಸೋಸುವ ವಿಧಾನ ಇದು. ಇದು ವಿಜಯನಗರ ಶಿಲ್ಪಿಗಳ ಚಾಣಾಕ್ಷತೆಗೆ ಒಂದು ಉತ್ತಮ ನಿದರ್ಶನ. ಇಂತಹ ಒಂದು ವಿಧಾನ ಇದುವರೆಗೆ ತಲಕಾಡಿನಲ್ಲಿ ಮಾತ್ರ ದೊರೆತಿರುವುದು ಕನ್ನಡ ವಾಸ್ತುವಿನ ಪ್ರಬುದ್ಧತೆಗೆ ಸಾಕ್ಷಿಯಲ್ಲವೇ!

ಕನ್ನಡ ವಾಸ್ತುವಿನ ಅಭೂತಪೂರ್ವ, ಅನುಪಮ ಕೃತಿ ಎಂದರೆ, ಕನ್ನಡ ವಾಸ್ತು ಶಿಲ್ಪಿಗಳು ನಿರ್ಮಿಸಿದ ಗಾಳಿತಡೆಗೋಡೆ. ಮಾನವನ ಇತಿಹಾಸದಲ್ಲಿಯೇ ಇಂತಹ ಒಂದು ಗಾಳಿತಡೆಗೋಡೆಯ ಕಲ್ಪನೆ ಯಾರೂ ಕಂಡಿಲ್ಲ, ಕೇಳಿಲ್ಲ. ಮಾನವ ತನ್ನನ್ನು ಶತ್ರುಗಳಿಂದ ರಕ್ಷಿಸಿಕೊಳ್ಳಲು ಕೋಟೆಯನ್ನು ಕಟ್ಟಿಕೊಂಡಿದ್ದಾನೆ. ಕಂದಕಗಳನ್ನು ಅಗೆದಿದ್ದಾನೆ.

ಜಲಪ್ರವಾಹದಿಂದ ರಕ್ಷಿಸಿಕೊಳ್ಳಲು ಕಟ್ಟೆ, ಏರಿ, ತಡೆಗೋಡೆಗಳನ್ನು ನಿರ್ಮಿಸಿದ್ದಾನೆ. ಆದರೆ ತಲಕಾಡಿನ ಜನ ೧೭ನೇ ಶತಮಾನದಲ್ಲಿ ಕಂಡು ಕೇಳಿರದ ಒಂದು ಹವಾಮಾನ ವೈಪರೀತ್ಯಕ್ಕೆ ತುತ್ತಾದರು. ಅದೇಂದರೆ ಜೋರಾಗಿ ಬೀಸುವ ನೈರುತ್ಯ ಮಾರುತವು, ಪಕ್ಕದಲ್ಲೇ ಇದ್ದ ವಿಶಾಲ, ಶುಷ್ಕ ನದೀಪಾತ್ರದಲ್ಲಿ ಅಗಾಧವಾಗಿ ಶೇಖರವಾಗಿದ್ದ, ಧೂಳು ಮರಳಿನ ಕಣಗಳನ್ನು ತನ್ನಲ್ಲಿ ಹೊತ್ತು ತಂದು ತಲಕಾಡಿನ ಮೇಲೆ ನಿರಂತರವಾಗಿ ಉದುರಿಸುತ್ತಾ ಮುಂದೆ ಸಾಗುವ ಸನ್ನಿವೇಶ. ಇಂತಹ ನಿರಂತರ ಮರಳಿನ ಮಾರುತದಿಂದಾಗಿ ತಲಕಾಡಿನಲ್ಲಿ ದೈನಂದಿನ ಜೀವನವೇ ದುರ್ಭರವಾಯಿತು. ಇಂತಹ ವಿಚಿತ್ರ ಸನ್ನಿವೇಶದಲ್ಲಿ ಜನರಿಗೆ ಹೊಳೆದ ಉಪಾಯವೆಂದರೆ ಗಾಳಿಯ ಬೀಸಿನ ದಿಕ್ಕಿಗೆ ಅಡ್ಡವಾಗಿ ತಲಕಾಡಿನ ನೈರುತ್ಯ ದಿಕ್ಕಿನಲ್ಲಿ ಎತ್ತರವಾದ ಪರದೆಗೋಡೆಯನ್ನು ನಿರ್ಮಿಸುವುದು. ಈ ಗೋಡೆಯ ತಡೆಯಿಂದಾಗಿ ಮರಳಿನ ಕಣಗಳು ತಲಕಾಡಿನ ನೈರುತ್ಯ ಅಂಚಿನಲ್ಲಿ ಉದುರಿ ಶೇಖರವಾಗುತ್ತದೆ. ತಲಕಾಡು ನಗರ ಮರಳು ಪ್ರವಾಹದಿಂದ ಪಾರಾಗುತ್ತದೆ.

ಇಂತಹ ಒಂದು ಪರದೆಗೋಡೆಯ ಅವಶೇಷಗಳು ತಲಕಾಡಿನ ನೈರುತ್ಯ ಮೂಲೆಯಲ್ಲಿ ಉತ್ಖನನದಲ್ಲಿ ದೊರೆತಿದೆ. ಸುಮಾರು ೨೦೦ ಅಡಿಗಳಿಗೂ ಮೀರಿ ಇದರ ಉತ್ಖನನವಾಗಿದೆ. ಗೋಡೆ ಇನ್ನೂ ಮರಳಿನ ರಾಶಿಯಡಿಯಲ್ಲಿ ಮುಂದುವರೆಯುತ್ತಿದೆ. ಈ ಗೋಡೆಯ ದಪ್ಪ ತಳದಲ್ಲಿ ೬–೯ ಅಡಿಗಳವರೆಗೂ ಇದೆ. ಅಂದರೆ ಇದರ ಎತ್ತರ ೧೫–೨೦ ಅಡಿಗಳವರೆಗೂ ಇದ್ದಿರಬಹುದು. ಈ ಗೋಡೆ ಮರಳಿನ ಪ್ರವಾಹವನ್ನು ಸ್ವಲ್ಪಕಾಲ ಮಾತ್ರ ತಡೆಯುವುದರಲ್ಲಿ ಯಶಸ್ವಿಯಾಯಿತು. ಮೊದಲಿಗೆ ಈ ಪರದೆಗೋಡೆಯೇ ಮರಳು ರಾಶಿಯಲ್ಲಿ ಮುಚ್ಚಿಕೊಂಡಿತು. ತದನಂತರ ಊರಿಗೆ ಊರೇ ಮರಳಿನ ದಿಬ್ಬದಡಿ ಕಣ್ಮರೆಯಾಯಿತು.

ಈ ಗಾಳಿ ತಡೆಗೋಡೆ ಎಷ್ಟರಮಟ್ಟಿಗೆ ಮರಳಿನ ಪ್ರವಾಹವನ್ನು ತಡೆಯುವುದರಲ್ಲಿ ಯಶಸ್ವಿಯಾಯಿತು ಎಂಬುದು ಇಲ್ಲಿ ಮುಖ್ಯವಲ್ಲ. ಇಂತಹ ಒಂದು ಗೋಡೆಯನ್ನು ನಿರ್ಮಿಸಿ ಪರಿಹಾರ ಕಂಡುಕೊಳ್ಳುವ ಅಪೂರ್ವವಾದ ಉಪಾಯ, ಅದರ ನಿರ್ಮಾಣ ವಿಧಾನ ಹಾಗೂ ಅದರ ನಿಯೋಜನೆ ಮುಖ್ಯವಾದದ್ದು, ಆದರಣೀಯವಾದದ್ದು. ಕಂಡು–ಕೇಳರಿಯದ ನಿಸರ್ಗ ವಿಕೋಪದ ವಿರುದ್ಧ ಮಾನವ ನಡೆಸಿದ ಸಮರ ಇದು. ಇಂತಹ ಅದ್ವಿತೀಯವಾದ ಗಾಳಿತಡೆಗೋಡೆ ಪ್ರಪಂಚದ ಯಾವುದೇ ಭಾಗದಲ್ಲಿ ಇದುವರೆಗೆ ಕಂಡು ಬಂದಿಲ್ಲ. ಇದು ಕನ್ನಡ ನೆಲದ ಶಿಲ್ಪಿಗಳ ಅನುಪಮ ರಚನೆ ಎಂಬುದೇ ಹೆಮ್ಮೆಯ ವಿಚಾರ.

ಮೇಲೆ ಹೇಳಿದಂತಹ ಅನುಪಮ, ಅದ್ವಿತೀಯ ವಾಸ್ತುಕೃತಿಗಳು, ವಾಸ್ತು ಆವಿಷ್ಕಾರಗಳು ಹಾಗೂ ಇನ್ನೂ ಹತ್ತು ಹಲವಾರು ನಮೂದಿಸದೆ ಇರುವ ವಾಸ್ತು ವಿಶೇಷತೆಗಳು ಕನ್ನಡ ನೆಲದಲ್ಲಿ ಹುಟ್ಟಿ, ಕನ್ನಡ ನೆಲದಲ್ಲಿ ಬೆಳೆದು, ಕನ್ನಡ ಧೀಶಕ್ತಿಯ ಪ್ರತೀಕಗಳೆನಿಸಿವೆ. ಇವುಗಳಲ್ಲಿ ಹಲವಾರು ಸರಿಸಾಟಿ ಇಲ್ಲದವು, ಅಸದೃಶವಾದವು, ಕೆಲವಾರು ದಕ್ಷಿಣ ಭಾರತಕ್ಕೇ ಪ್ರಪ್ರಥಮವೆನಿಸುವವು ಹಾಗೂ ಇನ್ನು ಕೆಲವಾರು ಸ್ವಂತಿಕೆಗಳಿಂದ ಕೂಡಿದವು. ಈ ಉದಾಹರಣೆಗಳಿಂದ, ಕನ್ನಡಿಗರು ಇತರೆ ಯಾವ ರಾಜ್ಯದ ಜನರಿಗಿಂತಲೂ ಜ್ಞಾನದಲ್ಲಿ, ಬುದ್ಧಿಮಟ್ಟದಲ್ಲಿ, ಚಾಣಾಕ್ಷತನದಲ್ಲಿ, ಆಲೋಚನೆಯಲ್ಲಿ, ಯಂತ್ರ–ತಂತ್ರ ಕುಶಲತೆಯಲ್ಲಿ, ಆವಿಷ್ಕಾರಗಳಲ್ಲಿ, ಯಾವ ರೀತಿಯಲ್ಲೂ ಕಡಿಮೆ ಇರಲಿಲ್ಲವೆಂಬ ಅಂಶ ರುಜುವಾತಾಗುತ್ತದೆ. ಆದರೆ **ಕನ್ನಡ ಜನ ಎಂದೂ ತಮ್ಮ ಪ್ರಗತಿಯ ಬಗ್ಗೆ, ಸಾಧನೆಗಳ ಬಗ್ಗೆ ಡಂಗುರ ಹೊಡೆದವರಲ್ಲ, ಬಡಾಯಿ ಕೊಚ್ಚಿ ಕೊಂಡವರಲ್ಲ**. ಕನ್ನಡಿಗರ ಈ ನಿರಭಿಮಾನ, ಅನ್ಯರ ಅತ್ಯಭಿಮಾನದ ಮುಂದೆ, ಹೊರಗಿನವರಿಗೆ, ಕನ್ನಡಿಗರು ಎಲ್ಲಾ ಕ್ಷೇತ್ರದಲ್ಲೂ ಹಿಂದುಳಿದವರೆಂಬ ಚಿತ್ರ ಮೂಡಿಸಿದೆ. ಅನ್ಯರ ಈ ತಪ್ಪುಗ್ರಹಿಕೆ ಸರಿಯಲ್ಲವೆಂಬ ಭಾವನೆ ಅವರಿಗೆ ಮೂಡಿಸಬೇಕು. ಕನ್ನಡ ಸಂಸ್ಕೃತಿ, ಕನ್ನಡ ಜನ, ದಕ್ಷಿಣ ಭಾರತದ ಇತರೆ ಸಂಸ್ಕೃತಿಯ ಜನಗಳಿಗಿಂತ ಬಹುತೇಕ ವಿಷಯಗಳಲ್ಲಿ ಶ್ರೇಷ್ಠ ಎಂಬ ಅರಿವು ಮೂಡಿಸುವುದು ಇಂದಿನ ಎಲ್ಲಾ ಕನ್ನಡಿಗರ ಕರ್ತವ್ಯವಾಗಿದೆ. ಈ ಪ್ರಯತ್ನದಲ್ಲಿ ನಿಮ್ಮೆಲ್ಲರಿಗೂ ಈ ಭಾಷಣದ ಮಾಹಿತಿಗಳು ಸಹಕಾರಿಯಾಗಲಿ ಎಂದು ಹಾರೈಸುತ್ತೇನೆ.

ಜೈ ಭಾರತ್, ಜೈ ಕರ್ನಾಟಕ

# CURRICULUM VITAE (brief)

| | | |
|---|---|---|
| Name and Designation | : | Dr. M.S. Krishna Murthy, M.A., Ph.D., Dip. in Epi.<br>UGC Emeritus Fellow, Former Professor and Chairman<br>DOS in Ancient History and Archaeology<br>University of Mysore, Manasagangotri, Mysore-570006. |
| Address | : | Residence : 2977/1-B, Rashmi, 5th Main Road, Vani Vilas Puram, Mysore-570002, INDIA. |
| E-Mail and Phone | : | pushpakrishna@yahoo.com, 0821/2512647<br>Mobile : 98453 76718 |
| Date of Birth | : | 24th May 1945 |
| Experience | : | Research - Since 1967<br>Teaching - Since 1971 (post-graduate)<br>Research giudance - Ten students have obtained Ph.D. Degree<br>Publications - Books : Five<br>Papers - Over one hundred |
| Area of Specialization | : | 1. Indian Temple Architecture and Sculputure<br>2. Archaeological Excavations (Early and Medieval periods) |
| Excavations Directed | : | 1. Excavations at Talakad, 1992-93, 1993-94, 2006-07, 2007-08, 2008-09 and 2009-10.<br>2. Excavation at Krishnapura, 1998-99.<br>3. Excavations at Rajaghatta, 2000-2001 and 2003-2004. |
| Professional Experience | : | Served in the Academic Council of Mysore University.<br>Chairman/Member of the Boards of Studies in various Universities.<br>Chairman/Member of the Board of Examinations of various Universities and Public Service Commissions of different States.<br>Member of the Board of Appointment of various Universities and the UPSC.<br>Member of the Peer Team of the N.A.A.C.<br>Member, Central Advisory Board of Archaeology (CABA)<br>Honorary Visiting Professor at The National Institute of Advanced Studies (NIAS), Bangalore. |
| Countries visited | : | U.S.A., Canada, Cambodia. |

# ಶಾಸನ ಅಧ್ಯಯನದಲ್ಲಿ ನನ್ನ ಹೆಜ್ಜೆ ಗುರುತುಗಳು ಮತ್ತು ಆಶಯಗಳು

ಡಾ. ಪಿ.ವಿ. ಕೃಷ್ಣಮೂರ್ತಿ*

(೨೦೧೦ರ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಪುರಸ್ಕೃತರ ಉದ್ದೇಶಿತ ಭಾಷಣದ ಲೇಖನ)

ಅಕಾದೆಮಿಯ ಸ್ಥಾಪಕ ಸದಸ್ಯರಲ್ಲಿ ಒಬ್ಬನಾಗಿ, ಕಳೆದ ಎಲ್ಲಾ ವಾರ್ಷಿಕ ಸಮ್ಮೇಳನಗಳಲ್ಲಿ ತಪ್ಪದೆ ಪಾಲ್ಗೊಳ್ಳುತ್ತಿರುವ ನನಗೆ ಈ ವರ್ಷದ ಅಧಿವೇಶನವು ಒಂದು ವಿಶೇಷ ಸಂದರ್ಭವಾಗಿದೆ. ಅದೆಂದರೆ : ಭಾರತದ ಹಿರಿಯ ಶಾಸನ ತಜ್ಞರಲ್ಲಿ ಒಬ್ಬರಾಗಿದ್ದ ಡಾ. ಬಾ.ರಾ. ಗೋಪಾಲ್ ಅವರ ಹೆಸರಿನಲ್ಲಿ ಅವರ ಕುಟುಂಬದವರು ಹಾಗೂ ಶಿಷ್ಯರು ಸ್ಥಾಪಿಸಿರುವ 'ಶಾಸನತಜ್ಞ' ಪ್ರಶಸ್ತಿಗೆ ಈ ವರ್ಷ ನಾನು ಆಯ್ಕೆಗೊಂಡಿರುವುದು ಬಹುಶಃ ನಾನು ಆ ಕ್ಷೇತ್ರದಲ್ಲಿ ಮಾಡಿರುವ 'ಅಳಿಲುಸೇವೆ' ಗೆ ಕಾರ್ಯಕಾರಿ ಸಮಿತಿ 'ರಾಮರಕ್ಷೆ' ನೀಡಿದೆ ಎಂದು ಭಾವಿಸುವೆ. ಆದರೂ ನಮ್ಮ ನಾಡಿನ ಹಿರಿಯ ಶಾಸನತಜ್ಞರಾದ ಡಾ. ಬಾ.ರಾ. ಗೋಪಾಲ್ ಅವರ ಹೆಸರಿನಲ್ಲಿರುವ ಈ ಪ್ರಶಸ್ತಿಯನ್ನು ಅವರ ಗೌರವ ಸ್ಮರಣೆಯೊಂದಿಗೆ, ಸಂತೋಷ, ಕೃತಜ್ಞತೆ ಮತ್ತು ವಿನಯದಿಂದ ಸ್ವೀಕರಿಸಿದ್ದೇನೆ. ನನ್ನನ್ನು ಈ ಪ್ರಶಸ್ತಿಗೆ ಸರ್ವಾನುಮತದಿಂದ ಆಯ್ಕೆ ಮಾಡಿದ ಅಕಾದೆಮಿಯ ಕಾರ್ಯಕಾರಿ ಸಮಿತಿಯ ಎಲ್ಲ ಪದಾಧಿಕಾರಿಗಳಿಗೂ ಹಾಗೂ ಈ ಪ್ರಶಸ್ತಿಯ ಸ್ಥಾಪಕರಾದ ಬಾ.ರಾ. ಗೋಪಾಲರ ಶಿಷ್ಯರೂ ಮತ್ತು ಕುಟುಂಬ ವರ್ಗದವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಈ ಸಂದರ್ಭದಲ್ಲಿ ನನ್ನನ್ನು ಈ ಕ್ಷೇತ್ರದಲ್ಲಿ ಗುರುತಿಸಿಕೊಳ್ಳಲು ಕಾರಣರು ಮತ್ತು ಗುರುವರ್ಯರಾದ ಡಾ. ಆರ್. ಶೇಷಶಾಸ್ತ್ರಿ, ಡಾ. ದೇವರಕೊಂಡಾರೆಡ್ಡಿ ಹಾಗೂ ಡಾ. ಕೆ.ಆರ್. ಗಣೇಶ ಅವರುಗಳಿಗೂ, ಕಳೆದ ಮೂವತ್ತು ವರ್ಷಗಳಿಂದ ನನ್ನೊಂದಿಗಿರುವ ಶಾಸನಶಾಸ್ತ್ರ ವಿದ್ಯಾರ್ಥಿ ಬಂಧುಗಳಿಗೂ, ಅದಕ್ಕೆ ವೇದಿಕೆಯನ್ನು ಒದಗಿಸಿರುವ ಕನ್ನಡ ಸಾಹಿತ್ಯ ಪರಿಷತ್ತಿಗೂ ನನ್ನ ಹೃತ್ಪೂರ್ವಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ. ನಾನು ಆಗಾಗ್ಗೆ ಕೈಕೊಳ್ಳುತ್ತಿದ್ದ ಕ್ಷೇತ್ರ ಕಾರ್ಯ ಪ್ರವಾಸಗಳಲ್ಲಿ ನನ್ನೊಂದಿಗಿರುತ್ತಿದ್ದ ಶಾಸನಶಾಸ್ತ್ರದ ನನ್ನ ಅನೇಕ ವಿದ್ಯಾರ್ಥಿ ಮಿತ್ರರಿಗೆ ಹಾಗೂ ನನ್ನ ಸಂಶೋಧನ ಬರಹಗಳನ್ನು ಗಮನಿಸಿ ಮೆಚ್ಚಿ, ಕಾಲಕಾಲಕ್ಕೆ ಸೂಕ್ತ ಸಲಹೆ, ಸೂಚನೆಗಳನ್ನು ನೀಡಿ ಪ್ರೋತ್ಸಾಹಿಸಿ ಪೋಷಿಸಿದ ಹಿರಿಯ ವಿದ್ವಾಂಸರಾದ ಡಾ. ಎಂ.ಎಂ. ಕಲಬುರ್ಗಿ, ಡಾ. ಎಂ. ಚಿದಾನಂದಮೂರ್ತಿ, ಪ್ರೊ. ಜಿ.ಎಸ್. ದೀಕ್ಷಿತ್, ಶ್ರೀನಿವಾಸ ಕುಮಾರ್, ಪ್ರೊ. ಎಂ.ವಿ. ಸೀತಾರಾಮಯ್ಯ, ಶ್ರೀ ಸೀತಾರಾಮ ಜಾಗೀರದಾರ್, ಡಾ. ಎಸ್. ನಾಗರಾಜು, ಡಾ. ಎಂ.ಜಿ. ನಾಗರಾಜ್, ಡಾ. ಸೂರ್ಯನಾಥ ಕಾಮತ್, ಡಾ. ಪಿ.ಎನ್. ನರಸಿಂಹಮೂರ್ತಿ, ಡಾ. ಬಿ. ರಾಜಶೇಖರಪ್ಪ, ಡಾ. ಎಚ್. ಚಂದ್ರಶೇಖರ್, ಡಾ. ಎಂ.ವಿ. ಶ್ರೀನಿವಾಸ್, ಡಾ. ಲಕ್ಷ್ಮಣ್ ತೆಲಗಾವಿ ಮೊದಲಾದ ಚೇತನಗಳಿಗೆ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಪ್ರಸ್ತುತ ಪ್ರಶಸ್ತಿಯು ಶಾಸನ ಕ್ಷೇತ್ರದ ಈ ಕಾರ್ಯದಲ್ಲಿ ನನ್ನ ಜವಾಬ್ದಾರಿಯನ್ನು ನಿಜವಾಗಿಯೂ ಹೆಚ್ಚಿಸಿದೆ ಎಂದು ಭಾವಿಸಿದ್ದೇನೆ.

ಪ್ರಸ್ತುತ ಶಾಸನ ಶೋಧನೆ ಮತ್ತು ಅಧ್ಯಯನ ಕ್ಷೇತ್ರಕ್ಕೆ ನಾನು ಹೆಜ್ಜೆ ಇಟ್ಟ ಸಂದರ್ಭದ ಕೆಲವು ನೆನಪುಗಳನ್ನು ಸಿಂಹಾವಲೋಕನ ಕ್ರಮದಲ್ಲಿ ಇಲ್ಲಿ ಹಂಚಿಕೊಂಡರೆ ತಪ್ಪಾಗಲಾರದೆಂದು ನನ್ನ ಅನಿಸಿಕೆ.

ಎನ್‌ಜಿಇಎಫ್ ಕಾರ್ಖಾನೆಯಲ್ಲಿ ೧೯೭೧-೭೪ರ ಅವಧಿಯಲ್ಲಿ ಕೈಗಾರಿಕಾ ವೃತ್ತಿ ತರಬೇತಿಯ ಅಭ್ಯರ್ಥಿಯಾಗಿದ್ದೆ. ಅಂತಿಮ ವರ್ಷದ (೧೯೭೪) ಶೈಕ್ಷಣಿಕ ಪ್ರವಾಸದ ಭಾಗವಾಗಿ ಗೋವಾ, ಕಾರವಾರ, ಗೋಕರ್ಣ, ಉಡುಪಿ, ಧರ್ಮಸ್ಥಳ, ಬೇಲೂರು, ಹಳೇಬೀಡುಗಳ ಸಂದರ್ಶನ ಮುಗಿಸಿ ಅಂತಿಮವಾಗಿ ಶ್ರವಣಬೆಳಗೊಳಕ್ಕೆ ಬಂದೆವು. ಅಲ್ಲಿನ ದೊಡ್ಡ ಬೆಟ್ಟದ ಒದೆಗಲ್ ಬಸದಿಯ ಸುತ್ತಮುತ್ತ ಇರುವ ಪ್ರದೇಶದ ಬಂಡೆಗಲ್ಲಿನ ಮೇಲಿನ ಬರಹಗಳು ಮೊದಲಿಗೆ ನನ್ನ ಗಮನವನ್ನು ಸೆಳೆದವು. ಅವುಗಳಲ್ಲಿ ಒಂದು ಕನ್ನಡ ಲಿಪಿಯಲ್ಲಿದ್ದು ಸ್ವಲ್ಪ ಓದಲು ಸಾಧ್ಯವಾಯಿತು. ಅದು ೧೧ನೆಯ ಶತಮಾನದ ಶಾಸನ. ಆದರೆ ಅಲ್ಲೇ ಇದ್ದ ಅನೇಕ ಶಾಸನಗಳ ಲಿಪಿಗಳು ನನಗೆ ಗೊತ್ತಾಗಲಿಲ್ಲ. ಅವುಗಳಲ್ಲಿ ಹಲವು ಪ್ರಾಚೀನ ಮತ್ತು ಅನ್ಯಭಾಷಾ ಲಿಪಿಗಳಾಗಿದ್ದವು. ಇದು ಮೊದಲಿಗೆ ಲಿಪಿಗಳ ಬಗ್ಗೆ ನನಗೆ ಆಸಕ್ತಿಯನ್ನು

* # ೩೭, 'ಶ್ರೀಕೃಷ್ಣ ಕೃಪ', ೩ನೆಯ ಅಡ್ಡರಸ್ತೆ, ಸುಬ್ಬಣ್ಣ ಲೇಔಟ್, ಹರಿನಗರಕ್ರಾಸ್, ಬೆಂಗಳೂರು-೫೬೦೦೬೨.

ಕೆರಳಿಸಿತು. ಮುಂದೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೧೯೭೪-೭೫ರಲ್ಲಿ ಶಾಸನಶಾಸ್ತ್ರ ತರಗತಿಯ ವಿದ್ಯಾರ್ಥಿಯಾಗಿ ಸೇರಿದಾಗ ನನಗೆ ಶಾಸನಲಿಪಿ, ಸಾಹಿತ್ಯ ಇತ್ಯಾದಿಗಳ ಪಾಠ ಹೇಳಿಕೊಟ್ಟು ಈ ಕ್ಷೇತ್ರದಲ್ಲಿ ಮುಂದುವರಿಯಲು ನೆರವಾದವರು ನನ್ನ ಪ್ರೀತಿಯ ಗುರುವರ್ಯರಾದ ಡಾ. ಆರ್. ಶೇಷಶಾಸ್ತ್ರಿ, ಡಾ. ದೇವರಕೊಂಡಾರೆಡ್ಡಿ ಮತ್ತು ಡಾ. ಕೆ.ಆರ್. ಗಣೇಶ ಅವರುಗಳು. ಅವರ ಮಾರ್ಗದರ್ಶನದಲ್ಲಿ ಆಗ ನಾವು ಕೈಗೊಂಡ ಶೈಕ್ಷಣಿಕ ಪ್ರವಾಸಗಳು ಶಾಸನಗಳ ಬಗ್ಗೆ ಇನ್ನೂ ಹೆಚ್ಚು ಆಸಕ್ತಿ ಕುತೂಹಲಗಳನ್ನು ಉಂಟು ಮಾಡಿತ್ತು. ಆಗ ಈಗಿನಂತೆ ಜೆರಾಕ್ಸ್ ಹೆಚ್ಚು ಪ್ರಚಲಿತವಿರಲಿಲ್ಲ. ಶಾಸನಗಳ ಚಿತ್ರಗಳನ್ನು ನೋಡಿ ಕಣ್‌ನಕಲುಗಳನ್ನು ತಯಾರಿಸಬೇಕಾಗಿತ್ತು. ಶಾಸನ ಲಿಪಿಗಳ ಅಭ್ಯಾಸಕ್ಕಾಗಿ ಅಂತಹ ಕಣ್‌ನಕಲುಗಳು ಅಗತ್ಯವಿದ್ದವು. ಅಂತಹ ಹಲವು ಶಾಸನಗಳ ನಕಲುಗಳನ್ನು ಶಾಸನಶಾಸ್ತ್ರ ಗುರುಗಳಾಗಿದ್ದ ಡಾ. ಆರ್. ಶೇಷಶಾಸ್ತ್ರಿ, ಡಾ. ದೇವರಕೊಂಡಾರೆಡ್ಡಿ ಅವರು ನಮಗೆ ಒದಗಿಸಿದ್ದರು. ಅಂತಹವೇ ನಕಲುಗಳನ್ನು ನಾನೂ ಏಕೆ ಮಾಡಿ ಶಾಸನಗಳ ಅಭ್ಯಾಸ ಮಾಡಬಾರದು ? ಅನಿಸಿತು. ನನ್ನ ಇಚ್ಛೆಯನ್ನು ಗುರುಗಳೊಂದಿಗೆ ತೋಡಿಕೊಂಡಾಗ ಅದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟರು. ಪ್ರತಿದಿನ ಸಂಜೆ ಕಾರ್ಖಾನೆಯ ಕೆಲಸದ ನಂತರ ಪರಿಷತ್ತಿಗೆ ಬಂದು ಆಯ್ದ ಶಾಸನಗಳ ಕಣ್‌ನಕಲು ತಯಾರಿಕೆಯ ಕೆಲಸದಲ್ಲಿ ನಿರತನಾದೆ. ಹಾಗೆ ತಯಾರಿಸಿದ ಶಾಸನದ ಕಣ್‌ನಕಲುಗಳು ನನ್ನ ಸಹಪಾಠಿಗಳಿಗೂ ಮುಂದಿನ ತಂಡದ ವಿದ್ಯಾರ್ಥಿಗಳಿಗೂ ಅಭ್ಯಾಸ ಸಾಮಗ್ರಿಯಾಗಿ ಮಾರ್ಪಟ್ಟಿತು. ನನ್ನ ಶ್ರಮದ ಕಾರಣ ಆ ವರ್ಷದ ಪರೀಕ್ಷೆಯಲ್ಲಿ ಮೊದಲಿಗನಾಗಿ ಉತ್ತೀರ್ಣನಾದೆ. ಅದೇ ವರ್ಷ ಡಾ. ಆರ್. ಶೇಷಶಾಸ್ತ್ರಿ ಅವರಿಗೆ ಸಂಜೆ ಕಾಲೇಜೊಂದರಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಲು ಅವಕಾಶ ಬಂದದ್ದರಿಂದ ಪರಿಷತ್ತಿನಲ್ಲಿ ಆ ಸ್ಥಾನವನ್ನು ತುಂಬಲು ಅವರು ನನ್ನನ್ನೇ ಸೂಚಿಸಿದರು. ಆ ಕಾರಣದಿಂದಾಗಿ ಸುಮಾರು ೧೯೮೦ ರಿಂದ ಶಾಸನಶಾಸ್ತ್ರದ ಗೌರವ ಉಪನ್ಯಾಸಕನಾಗಿ ಕಾರ್ಯ ನಿರ್ವಹಿಸುವ ಅವಕಾಶ ಲಭ್ಯವಾಯಿತು ಎಂಬುದಕ್ಕಿಂತ ಹೆಚ್ಚಾಗಿ ಆ ಕ್ಷೇತ್ರದ ನಿಷ್ಠಾವಂತ ಶ್ರೇಷ್ಠ ವಿದ್ವಾಂಸರಾದ ಡಾ. ದೇವರಕೊಂಡಾರೆಡ್ಡಿ, ಡಾ. ಕೆ.ಆರ್. ಗಣೇಶ ಅವರ ಮಾರ್ಗದರ್ಶನ, ಪ್ರೀತಿ ವಿಶ್ವಾಸಗಳು ಅವಿರತವಾಗಿ ಲಭ್ಯವಾಗಲು ಸಾಧ್ಯವಾಯಿತು.

ಸಹಪಾಠಿ ಮಿತ್ರರಾಗಿದ್ದ ವೇಮಗಲ್ ಸೋಮಶೇಖರ್, ಎಂ.ಜಿ. ನಾಗರಾಜ್, ರಾಮಶೇಷನ್, ನಾ. ಗೀತಾಚಾರ್ಯ, ಅ.ಲ. ನರಸಿಂಹನ್, ಮಾ. ಮಂಜುಳಾ ಹಾಗೂ ಹಿರಿಯ ಮಿತ್ರರಾದ ಆಳ್ಲ ಚಿರಂಜೀವಿ, ಎಂ.ಎನ್. ಪ್ರಭಾಕರ್ ಮೊದಲಾದವರೊಂದಿಗೆ ಶಾಸನಶಾಸ್ತ್ರ ವಿದ್ಯಾರ್ಥಿಗಳಿಂದಲೇ ಅವರ ಶಾಸನ ಶೋಧನೆ, ಶಾಸನ ಅಧ್ಯಯನ ಕುರಿತ ಮಾಸಿಕ ಉಪನ್ಯಾಸಗಳು ಏರ್ಪಾಟಾದವು. ಆಗ ಪರಿಷತ್ತಿನ ಅಧ್ಯಕ್ಷರಾಗಿದ್ದ ಮಾನ್ಯ ಜಿ. ನಾರಾಯಣ ಮತ್ತು ಹಂಪ ನಾಗರಾಜಯ್ಯನವರು ವಿಶೇಷ ಸಹಕಾರವನ್ನಿತ್ತರು. ಅಲ್ಲದೆ ಆ ಕಾರ್ಯಕ್ರಮಗಳಲ್ಲಿ ಅವರೂ ಸಕ್ರಿಯ ವಾಗಿ ಭಾಗವಹಿಸಿ ಪ್ರೋತ್ಸಾಹಿಸುತ್ತಿದ್ದರು. ಆ ಸಂದರ್ಭದಲ್ಲಿ ಡಾ. ಶೇಷಶಾಸ್ತ್ರಿ ಅವರ ಸೂಚನೆಯ ಮೇರೆಗೆ ಬೆಂಗಳೂರಿನ ಸಮೀಪದ ಆಗಿನ ಹೊಸಕೋಟೆ ತಾಲ್ಲೂಕಿನ ಎಲೆಮಲ್ಲಪ್ಪಸೆಟ್ಟರ ಕೆರೆಯ ಆವರಣದಲ್ಲಿನ ವೀರಗಲ್ಲುಗಳ ಪರಿಶೀಲನೆ ನಡೆಸಿದೆ. ಬೇಚಿರಾಕ್ ಎರೆಯಪಮಂಗಲದ ವೀರಗಲ್ಲು ಶಾಸನಗಳ ಶೋಧವಾದವು. ಅವನ್ನು ಮಾಸಿಕ ಉಪನ್ಯಾಸವಾಗಿ ಮೊದಲಿಗೆ ಪ್ರಬಂಧ ಮಂಡನೆ ಆಯಿತು. ಮುಂದೆ ಅದು ಆಗ್ಗೆ ತುಮಕೂರು ಇತಿಹಾಸ ಪರಿಷತ್ತಿನ ಇತಿಹಾಸ ಚಂದ್ರಿಕೆ ಪತ್ರಿಕೆಯಲ್ಲಿ ಪ್ರಕಟಗೊಳ್ಳಲು ಡಾ. ಎಂ.ವಿ. ಶ್ರೀನಿವಾಸ್ ಅವರು ಕಾರಣರಾದರು. ಇವು ಪರಿಷ್ಕೃತಗೊಂಡು ಮಿಥಿಕ್ ಸೊಸೈಟಿ ಪತ್ರಿಕೆಯಲ್ಲಿ ಪ್ರಕಟವಾದವು. ನನ್ನ ಶಾಸನ ಶೋಧನೆ, ಪರಿಷತ್ತಿನಲ್ಲಿ ಶಾಸನಶಾಸ್ತ್ರ ಬೋಧನೆ ಹಾಗೂ ಶಾಸನಶಾಸ್ತ್ರ ವಿದ್ಯಾರ್ಥಿಗಳಿಗೆ ಸಲಹೆ, ಮಾರ್ಗದರ್ಶನ-ಇದೇ ರೀತಿಯಾಗಿ ನನ್ನ ಕೆಲಸಗಳು ಅವಿರತವಾಗಿ ನಡೆಯುತ್ತಾ ಸಾಗಿವೆ. ಈ ಅವಧಿಯಲ್ಲಿ ನೂರಾರು ನವಶೋಧಿತ ಶಾಸನಗಳ ಪಾಠಗಳನ್ನು ವಿದ್ಯಾರ್ಥಿಗಳಿಗೆ, ಸ್ನೇಹಿತರಿಗಾಗಿ ಓದಿ ಕೊಟ್ಟಿದ್ದೇನೆ. ಶಾಸನಶಾಸ್ತ್ರದ ವಿದ್ಯಾರ್ಥಿ ಗಳೊಂದಿಗೆ ಶ್ರವಣಬೆಳಗೊಳದ ಪ್ರವಾಸಕ್ಕೆ ಹೋದಾಗ ಅಲ್ಲಿನ ಭಂಡಾರಿ ಬಸದಿಯ ಸರಸ್ವತಿ ಮಂಟಪವನ್ನು ಉಲ್ಲೇಖಿಸುವ ಚಂಗಾಳ್ವ ವಂಶದ ನಂಜುಂಡೊಡೆಯನ ಕಾಲದ ಏಕಮಾತ್ರ ಶಾಸನದ ಶೋಧ ಸಾಧ್ಯವಾಯಿತು. ಅದನ್ನು ಪರಿಷತ್ತಿನ ಮಾಸಿಕ ಗೋಷ್ಠಿಯಲ್ಲಿ ಓದಿ ಮುಂದೆ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟವಾಯಿತು. ಕೊಪ್ಪಳದ ಕೋಟೆ ಗೋಡೆ ಕುಸಿದು ಅನೇಕ ಜೈನಶಾಸನಗಳು ಅನಾವರಣ ಗೊಂಡಾಗ ಅಲ್ಲಿನ ಮಿತ್ರರಾದ ಬಿ.ಆರ್. ತುಬಾಕಿ ಮತ್ತು ಅವರ ಮಿತ್ರರ ಸಹಕಾರದೊಂದಿಗೆ ಅಲ್ಲಿನ ಬಹುತೇಕ ಶಾಸನಗಳನ್ನು ಪರಿಷತ್ತಿನ ಶಾಸನ ವಿದ್ಯಾರ್ಥಿಗಳಿಂದ ಪಡಿಯಚ್ಚು ತೆಗೆಸಿ ಅಲ್ಲೇ ಅವುಗಳನ್ನು ಓದಿಸಿ ಮುಂದೆ ಅವುಗಳಲ್ಲಿ ಹಲವನ್ನು ಇದೇ ಇತಿಹಾಸ ದರ್ಶನ ಸಂಪುಟದಲ್ಲಿ ಪ್ರಕಟವಾಗಲು ಕಾರಣನಾದೆನು ಎಂಬ ಹೆಮ್ಮೆ ನನಗಿದೆ. ಹೀಗೆ ನನ್ನ ಶಾಸನ ಶೋಧನ ಅಧ್ಯಯನಗಳು ಕನ್ನಡ ಸಾಹಿತ್ಯ ಪರಿಷತ್ತಿನ ನೆರಳಿನಲ್ಲೇ ಚಿಗುರೊಡೆದವು.

ಕರ್ನಾಟಕದ ಇತಿಹಾಸ ತಜ್ಞರಾದ ಡಾ. ಸೂರ್ಯನಾಥ ಕಾಮತ್ ಹಾಗೂ ಗ್ಯಾಸೆಟಿಯರ್ ಸಹೋದ್ಯೋಗಿ ಡಾ. ಲಕ್ಷ್ಮಣ್ ತೆಲಗಾವಿ, ಡಾ. ದೇವರಕೊಂಡಾರೆಡ್ಡಿ, ಡಾ. ಆರ್. ಶೇಷಶಾಸ್ತ್ರಿ, ಡಾ. ಅ.ಲ. ನರಸಿಂಹನ್, ಎಂ.ಬಿ. ಪಾಟೀಲ ಹಾಗೂ ಡಾ. ಎಂ.ಜಿ. ನಾಗರಾಜ್ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಶಾಸನ ಶಾಸ್ತ್ರದ ಜ್ಞಾನದಿಂದ ಪ್ರಚೋದಿತರಾಗಿದ್ದ ನನ್ನಂತಹ ಹಲವು ಮಿತ್ರರು ಕೂಡಿ ೧೯೮೬ರಲ್ಲಿ ಆರಂಭಗೊಂಡ ಪ್ರಸ್ತುತ ಕರ್ನಾಟಕ ಇತಿಹಾಸ ಅಕಾದೆಮಿಯ ಸ್ಥಾಪಕ ಸದಸ್ಯರಲ್ಲಿ ನಾನೂ ಒಬ್ಬನಾಗಿರುವುದು ನನಗೆ ಹೆಮ್ಮೆಯ ಸಂಗತಿ. ಕಳೆದ ೨೪-೨೫ ವರ್ಷಗಳಿಂದಲೂ ಅಕಾದೆಮಿಯ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿಯೇ ಪಾಲ್ಗೊಳ್ಳುತ್ತಾ ಬಂದಿದ್ದೇನೆ. ಇತಿಹಾಸ ಅಕಾದೆಮಿಯ ವಾರ್ಷಿಕ ಸಂಪುಟ 'ಇತಿಹಾಸ ದರ್ಶನ'ದ ಸಂಪಾದಕರಲ್ಲಿ ಒಬ್ಬನಾಗಿ ೧೯೯೫ರಿಂದ (೧೦ನೇ ಸಂಪುಟದಿಂದ) ಸೇವೆ ಸಲ್ಲಿಸುವ ಅವಕಾಶ ದೊರೆತದ್ದು ನನಗೆ ಸಂತೋಷವನ್ನು ತಂದಿದೆ. ೯ನೆಯ ಸಂಪುಟದವರೆಗೂ ಆ ಕೆಲಸವನ್ನು ಹಿರಿಯ ರಾದ ಡಾ. ಸೂರ್ಯನಾಥ ಕಾಮತ್‌ರೊಂದಿಗೆ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ದೇವರಕೊಂಡಾರೆಡ್ಡಿ ಹಾಗೂ ಎಸ್.ಎ. ಜಗನ್ನಾಥ್ ಅವರು ಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದರು. ಡಾ. ದೇವರಕೊಂಡಾರೆಡ್ಡಿ ಅವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಆಯ್ಕೆಯಾಗಿ ಬೆಂಗಳೂರನ್ನು ಬಿಟ್ಟ ನಂತರ ಆ ಜವಾಬ್ದಾರಿ ನನ್ನ ಪಾಲಿಗೆ ಬಂದಿತು. ಮೊದಲಿಗೆ ಡಾ. ಸೂರ್ಯನಾಥ ಕಾಮತ್ ಅವರೊಂದಿಗೆ ಹಾಗೂ ಅನಂತರದಲ್ಲಿ (೧೯೯೭ರಿಂದ) ಹಿರಿಯರಾದ ಡಾ. ಎಂ.ಜಿ. ನಾಗರಾಜ್ ಅವರೊಂದಿಗೆ ಕೂಡಿಕೊಂಡು ಪ್ರಸ್ತುತ ಬಿಡುಗಡೆಯಾಗಿರುವ ಇತಿಹಾಸ ದರ್ಶನ ಸಂಪುಟ ೨೫ರ ಬೆಳ್ಳಿಸಂಚಿಕೆಯವರೆಗೆ ಆ ಕೈಂಕರ್ಯ ಸಾಗಿ ಬಂದಿದೆ. ಅದು ನನ್ನ ಕರ್ನಾಟಕ ಇತಿಹಾಸ ಜ್ಞಾನವನ್ನು ಹೆಚ್ಚಿಸಿಕೊಳ್ಳಲು ಒಂದು ಅತ್ಯುತ್ತಮ ಅವಕಾಶವನ್ನು ಕಲ್ಪಿಸಿತಲ್ಲದೆ, ಇಂದು ನಾನು ನಿಮ್ಮ ಮುಂದೆ ಬಂದು ಈ ವಿಶಿಷ್ಟ ಪ್ರಶಸ್ತಿಗೆ ಭಾಜನನಾಗಲು ಕಾರಣವಾಗಿದೆ ಯೆಂದು ನಾನು ಭಾವಿಸಿದ್ದೇನೆ.

ಶಾಸನ ಕ್ಷೇತ್ರಕ್ಕೆ ಸಂಬಂಧಿಸಿದಂತೆ ನನ್ನ ಹೆಚ್ಚಿನ ಬರಹಗಳು ಸ್ಥಳೀಯ ಇತಿಹಾಸಕ್ಕೆ ಸಂಬಂಧಿಸಿದ್ದಾಗಿವೆ. ವಿಶೇಷವಾಗಿ ಕರ್ನಾಟಕದ ಕಿರು ಅರಸು ಮನೆತನಗಳ ಅಧ್ಯಯನ, ಸ್ಥಳನಾಮ ಹಾಗೂ ಚಾರಿತ್ರಿಕ ಭೂಗೋಳಕ್ಕೆ ಸಂಬಂಧಿಸಿದವಾಗಿವೆ.

ಬೆಂಗಳೂರಿನ ಮಿಥಿಕ್ ಸೊಸೈಟಿ ಸ್ಥಾಪನೆಯ ೭೫ನೇ ವರ್ಷದ ಕಾರ್ಯಕ್ರಮಗಳಲ್ಲಿ ಒಂದಾದ 'ಕರ್ನಾಟಕದ ವಿಜಯನಗರೋತ್ತರ ಪಾಳೆಯಗಾರರ ವಿಚಾರ ಗೋಷ್ಠಿಯಲ್ಲಿ' ನನಗೆ ಸುಗುಟೂರು ಪಾಳೆಯಗಾರರ ಬಗ್ಗೆ ಪ್ರಬಂಧ ಮಂಡಿಸಲು ಅವಕಾಶ ಲಭ್ಯವಾಗಿತ್ತು. ಇದರ ದಿಸೆಯಿಂದ ಆರಂಭಗೊಂಡ ಕಿರು ಅರಸು ಮನೆತನಗಳ ಬಗೆಗಿನ ನನ್ನ ಆಸಕ್ತಿ ಮುಂದುವರೆದು, ಬೆಂಗಳೂರು ಕೆಂಪೇಗೌಡ, ಚನ್ನಪಟ್ಟಣದ ಪಾಳೆಯಗಾರರು, ಮಧುಗಿರಿಯ ಮಹಾನಾಡ ಪ್ರಭುಗಳು, ಆವತಿನಾಡು ಪ್ರಭುಗಳು, ಪುಂಗನೂರು ಪ್ರಭುಗಳು, ಆನೆಗೊಂದಿ ಪ್ರಭುಗಳು ಅಲ್ಲದೆ ವಿಜಯನಗರಕ್ಕೂ ಪೂರ್ವದ ಹಲವು ಮಾಂಡಲಿಕ ಮನೆತನಗಳ ಬಗ್ಗೆಯು ಅಧ್ಯಯನ ನಡೆಸಲು ಸಾಧ್ಯವಾಯಿತು. ಬೆಂಗಳೂರು ಮತ್ತು ಕೋಲಾರ ಪ್ರದೇಶಕ್ಕೆ ಸಂಬಂಧಿಸಿದ ಕರಿಯಗಂಗ ಪೆರುಮಾಳ್, ಬ್ರಹ್ಮಾದಿ ರಾಯರು, ಇಳವಂಜಿರಾಯರು, ಕರ್ಕಡಮಹಾರಾಯರು, ಪೂರ್ವಾದಿರಾಯರು ಮೊದಲಾದ ಹೊಯ್ಸಳರ ಕಾಲದ ಪ್ರಬಲ ಮಾಂಡಲಿಕರ ಆಡಳಿತ ವೈಖರಿಗಳನ್ನು ತಿಳಿದು ಕೊಳ್ಳಲು ಪ್ರಚೋದನೆ ದೊರೆಯಿತು. ವಿಜಯನಗರೋತ್ತರ ಕಾಲದಲ್ಲಿ ಶಾಸನಗಳು ಕಡಿಮೆ. ಹಾಗೇ ಆ ಕಾಲದಲ್ಲಿ ತಲೆಯೆತ್ತಿ ಸ್ಥಳೀಯ ಪ್ರಭುಗಳು ತಮ್ಮ ತಮ್ಮ ಚರಿತ್ರೆಗಳನ್ನು ನುರಿತ ವಿದ್ವಾಂಸರಿಂದ ಸ್ಥಳೀಯ ಭಾಷೆ ಇಲ್ಲವೆ ಸಂಸ್ಕೃತದಲ್ಲಿ ಕಾವ್ಯಾತ್ಮಕವಾಗಿ ಬರೆಯಿಸಿಕೊಂಡಿರುವ ಸಾಧ್ಯತೆಗಳಿವೆ. ಉದಾ: ಮಹಾನಾಡಿನ ಪ್ರಭುಗಳ ಚಿಕ್ಕಭೂಪಾಲ ಸಾಂಗತ್ಯ, ಆವತಿನಾಡ ಪ್ರಭುಗಳ 'ಸೊಣ್ಣಭೈರೇಗೌಡನ ಚರಿತ್ರೆ' ಇತ್ಯಾದಿ. ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆಯಲ್ಲಿ ದಾಖಲಿಸಿರುವ ಅನೇಕ ಕೃತಿಗಳು ಇಂದು ನೋಡಲು ಕೂಡ ಅಲಭ್ಯವಾಗಿವೆ. ಈ ಕಿರು ಅರಸು ಮನೆತನಗಳವರ ಬಗೆಗಿನ ಅನೇಕ ಸಂಸ್ಕೃತ ಕೃತಿಗಳು ಶೋಧವಾಗಿ ಪ್ರಕಟವಾಗಬೇಕಾದ ಅಗತ್ಯವಿದೆ. ಈಗ ಕರ್ನಾಟಕದಲ್ಲಿ ಆರಂಭಗೊಂಡಿರುವ ಸಂಸ್ಕೃತ ವಿಶ್ವವಿದ್ಯಾಲಯವು ಇಂತಹ ಕೃತಿಗಳ ಶೋಧನೆ ಮತ್ತು ಪ್ರಕಟಣೆಗೆ ಅವಕಾಶ ಮಾಡಿಕೊಳ್ಳಬೇಕೆಂಬುದು ನನ್ನ ಆಶಯ. ವಿಜಯನಗರೋತ್ತರ ಕಾಲದ ಇಂತಹ ಅನೇಕ ವಿಷಯಗಳ ಶೋಧನೆಗೆ, ಶಾಸನಗಳಿಗಿಂತಲೂ ಸಮಕಾಲೀನ ಸಾಹಿತ್ಯ ಮತ್ತು ದಾಖಲೆಪತ್ರಗಳ ಅಧ್ಯಯನ ತೀರ ಅಗತ್ಯ. ಈ ನಿಟ್ಟಿನಲ್ಲೂ ನನ್ನ ಸಹ ಸಂಶೋಧಕರು ಕಾರ್ಯನಿರತ ರಾಗಬೇಕೆಂಬುದು ನನ್ನ ಒಂದು ಪ್ರಬಲ ಆಶಯವಾಗಿದೆ.

ಶಾಸನ ಶೋಧದ ಭಾಗವಾಗಿ ಆರಂಭಗೊಂಡ ನನ್ನ ಸ್ಥಳನಾಮ ಅಧ್ಯಯನವು ಚಾರಿತ್ರಿಕ ಭೂಗೋಳದ ಅಧ್ಯಯನಕ್ಕೆ ಕಾರಣವಾಯಿತು. ಆ ದಿಸೆಯಲ್ಲಿ ನಾನು ಮೊದಲಿಗೆ

ಚಿತ್ರದುರ್ಗ ಜಿಲ್ಲೆಯ ವಿಜಯನಗರ ಕಾಲದ ಚಾರಿತ್ರಿಕ ಭೂಗೋಳವನ್ನು ರಚಿಸಲು ಕಾರಣರಾದವರು ಪ್ರೊ. ಲಕ್ಷ್ಮಣ್ ತೆಲಗಾವಿ ಅವರು, ಹಾಗೇ ಅವರು ನನಗೆ ತಮಿಳುನಾಡಿನ ಕನ್ನಡ ಶಾಸನಗಳ ಬಗ್ಗೆ ಲೇಖನ ಬರೆಯಲು ಅವಕಾಶ ಕಲ್ಪಿಸಿಕೊಟ್ಟರು. ಆ ಕಾರಣದಿಂದಾಗಿ ಮುಂದೆ 'ತಮಿಳು ನಾಡಿನ ಕನ್ನಡ ಶಾಸನಗಳು' ಎಂಬ ಕೃತಿ ರೂಪುಗೊಳ್ಳಲು ಕಾರಣವಾಯಿತು.

ಜಗತ್ತಿನ ರಾಷ್ಟ್ರಗಳ ಸ್ವರೂಪ, ಸ್ವಭಾವ ಹಾಗೂ ವಿಶಿಷ್ಟ ಚಟುವಟಿಕೆ ಇತ್ಯಾದಿಗಳನ್ನು ನಿರ್ಧರಿಸುವ ಕಾರ್ಯದಲ್ಲಿ ಭೌಗೋಳಿಕಾಂಶಗಳು ಪ್ರಧಾನ ಪಾತ್ರವನ್ನು ವಹಿಸುತ್ತವೆ. ಉದಾ: ಸಿಂಧೂ, ಗಂಗಾ, ನರ್ಮದಾ, ಗೋದಾವರಿ, ಕಾವೇರಿ, ಕೃಷ್ಣಾ ಮುಂತಾದ ನದಿಗಳು ಭಾರತದ ಇತಿಹಾಸದಲ್ಲಿ ಅತ್ಯಂತ ಮುಖ್ಯವಾದ ಪಾತ್ರವನ್ನು ವಹಿಸುತ್ತಾ ಬಂದಿವೆ. ಭಾರತದ ಸಮಾಜ ಹಾಗೂ ಸಂಸ್ಕೃತಿಯನ್ನು ಅದ್ವಿತೀಯವಾದ ರೀತಿಯಲ್ಲಿ ರೂಪಿಸಿ ಅಪೂರ್ವವಾಗಿ ಬೆಳೆಸಿರುವುದರಲ್ಲಿ, ಭವ್ಯ ಹಿಮಾಲಯ ಪರ್ವತಗಳು ವಹಿಸಿರುವ ಪಾತ್ರ ಅನುಪಮವಾದುದಾಗಿದೆ. ಅಂತೆಯೇ ಯಾವುದೇ ಒಂದು ಪ್ರದೇಶದ ಚಾರಿತ್ರಿಕ ಭೂಗೋಳದ ಅಧ್ಯಯನವು ಆ ಒಂದು ಪ್ರದೇಶದ ನೈಜ ಗುಣಾವಗುಣಗಳನ್ನು ಗ್ರಹಿಸಲು ಸಹಾಯಕವಾಗಬಲ್ಲುದೆಂದರೆ, ಅದು ಅತಿಶಯೋಕ್ತಿಯಲ್ಲ. ಅಂತೆಯೇ ಈ ನಿಟ್ಟಿನ ಅಧ್ಯಯನಗಳು ಸುಗಮವಾಗಿ ಸಾಗಬೇಕಾದರೆ ನಮ್ಮ ಭೌಗೋಳಿಕ ವಿವೇಚನೆಗಳಿಗೆ ಸಂಬಂಧಿಸಿದಂತೆ ನಡೆಯಬೇಕಾದ ಮುಖ್ಯ ಕೆಲಸವೆಂದರೆ ಸಮಗ್ರ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು ಚಾರಿತ್ರಿಕ ಭೂಗೋಳದ ವಿಸ್ತೃತ ಕೃತಿಯೊಂದು ರೂಪುಗೊಳ್ಳುವ ಅಗತ್ಯವಿದೆ. ಸಂಶೋಧಕರು ಈ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಬೇಕಾದ ಅಗತ್ಯವಂತೂ ಬಹಳವಾಗಿ ಇದ್ದೇ ಇದೆ. ಈ ಕೆಲಸ ಸುಗಮವಾಗಿ ಆಗಬೇಕಾದರೆ ಮೊದಲಿಗೆ ವ್ಯಾಪಕ ಸ್ಥಳನಾಮಗಳ ಅಧ್ಯಯನ ನಡೆಯಬೇಕು. ಅದರ ಪೂರ್ವರೂಪಗಳನ್ನು ಗುರುತಿಸುವುದು. ಹಲವು ಸಲ ಆಧುನಿಕ ಸ್ಥಳನಾಮಗಳ ನಿಜವಾದ ರೂಪವನ್ನು ನಿರ್ಣಯಿಸುವಲ್ಲಿಯ ಕಷ್ಟವೆಂದರೆ, ಅದು ದೋಷಯುಕ್ತ ಫಲಿತಾಂಶಗಳಿಗೆ ನೇರವಾಗಿ ಕೊಂಡೊಯ್ಯುವುದು. ಆದ್ದರಿಂದ ಇಂತಹ ಅಚಾತುರ್ಯಗಳಿಗೆ ಅವಕಾಶವಾಗದಂತಹ ಅಧ್ಯಯನಗಳು ನಡೆಯಬೇಕಾದರೆ, ಪೂರ್ವಭಾವಿಯಾಗಿ ಕೆಲವು ಮೂಲಭೂತ ಕೆಲಸಗಳು ಆಗಬೇಕಾಗಿದೆ. ಅವೆಂದರೆ : ೧) ಭೌಗೋಳಿಕ ಮಾಹಿತಿಗಳನ್ನೊಳಗೊಂಡ ಕೋಶರಚನೆ. ೨) ರಾಷ್ಟ್ರೀಯ ಮತ್ತು ಪ್ರಾದೇಶಿಕ ಹಂತದಲ್ಲಿ ಚಾರಿತ್ರಿಕ ನಕ್ಷಾ ಸಂಪುಟಗಳ ತಯಾರಿಕೆ. ೩) ಚಾರಿತ್ರಿಕ ಭೂಗೋಳದ ಅಧ್ಯಯನಕ್ಕೆ ಪೂರಕವಾದ ಆಕರ ಸಾಮಗ್ರಿಗಳ ವಿಸ್ತೃತ ಸೂಚಿಗಳ ರಚನೆ ಇತ್ಯಾದಿ.

ಸ್ಥಳನಾಮ ವ್ಯಕ್ತಿನಾಮಗಳು ಈಗ ಭಾಷಾ ವಿಜ್ಞಾನದ ಭಾಗಗಳಾಗಿ ವಿಶೇಷವಾದ ಅಧ್ಯಯನ ಸಂಶೋಧನೆಗಳ ವಿಷಯಗಳೆಂದು ಪರಿಗಣಿತವಾಗುತ್ತಿವೆ. ಅವುಗಳನ್ನು ಸದ್ಯಕ್ಕೆ ವಿದ್ವಾಂಸರು ವರ್ಣನಾತ್ಮಕ ಪದ್ಧತಿಯಿಂದಲೂ ಸಾಮಾಜಿಕ ಭಾಷಿಕ ರೀತಿಯ ಚಾರಿತ್ರಿಕ ಪದ್ಧತಿಯಿಂದಲೂ ಅಭ್ಯಾಸ ಮಾಡುತ್ತಿದ್ದಾರೆ. ಇವುಗಳ ಅಧ್ಯಯನಕ್ಕೆ ಇತರ ಕೆಲವು ಮುಖಗಳೂ ಉಂಟು. ಸ್ಥಳನಾಮಗಳ ಅಧ್ಯಯನವಂತೂ ಈ ಎರಡರಲ್ಲಿ ಹೆಚ್ಚು ಜಟಿಲವಾದುದು ಮತ್ತು ಕರ್ನಾಟಕದ ಭೌಗೋಳಿಕ ಗಡಿರೇಖೆಗಳನ್ನು ಗುರುತಿಸುವ ಒಂದಲ್ಲ ಒಂದು ಕಾರಣದಿಂದ ಹೆಚ್ಚು ಪ್ರಸಿದ್ಧಿಯಾದ ಇಲ್ಲವೆ ಗಮನಾರ್ಹವಾಗಿರುವ ಆಕರಗಳಾಗಿವೆ. ಸ್ಥಳನಾಮ ಅಧ್ಯಯನಗಳ ಬಗೆಗೆ ಕೆಲವು ಸ್ವತಂತ್ರವಾದ ಲೇಖನಗಳೂ ಗ್ರಂಥಗಳೂ ಈಚಿನ ವರ್ಷಗಳಲ್ಲಿ ಪ್ರಕಟವಾಗಿವೆ. ಅವನ್ನು ಓದಿ ಮನನ ಮಾಡುವುದು ಅನಿವಾರ್ಯ.

ಒಂದೊಂದು ಸ್ಥಳವೂ ತನ್ನ ಭೌಗೋಳಿಕವಾದ ಗಡಿರೇಖೆಗಳನ್ನು ಅರಸು ಮನೆತನಗಳ ಸೋಲು ಗೆಲುವುಗಳನ್ನು ಅವಲಂಬಿಸಿ ಬದಲಾಯಿಸಿಕೊಳ್ಳುತ್ತ, ತನ್ನ ಹೆಸರನ್ನು ಹಲವು ಸಂದರ್ಭಗಳಲ್ಲಿ ಮರೆಯಿಸಿ ಹೊಸದು ಮಾಡಿಕೊಳ್ಳುತ್ತ ಮುನ್ನಡೆದಿರುವುದರಿಂದಾಗಿ ಕರ್ನಾಟಕ ಇತಿಹಾಸ ಕಥನದಲ್ಲಿ ಅವುಗಳ ಸ್ಥಾನ ನಿರ್ದೇಶನ ಸರಿಯಾಗಿ ಆಗಬೇಕಾಗುತ್ತದೆ, ನಕ್ಷೆಗಳು ಪುನಾರಚಿತವಾಗಬೇಕಾಗುತ್ತದೆ. ಸ್ಥಳನಾಮ ಕೋಶಗಳನ್ನು ರಚಿಸುವಾಗ ಕಾಲ ಕಾಲಕ್ಕೆ ಆದ ಪರಿವರ್ತನೆಗಳೊಂದಿಗೆ ಸ್ಥಳದ ನಿರ್ದೇಶನ ಮಾಡಬೇಕಾಗುತ್ತದೆ. ಸ್ಥಳದ ಇತಿಹಾಸದೊಂದಿಗೆ ಅರಸು ಮನೆತನಗಳ ಇತಿಹಾಸ ಕೂಡ ತಳುಕು ಹಾಕಿಕೊಂಡಿದ್ದು, ಸ್ಥಿತ್ಯಂತರದ ಕಾಲಘಟ್ಟದಲ್ಲಿ ಅದರ ಪಾತ್ರ ಪ್ರಭಾವಗಳು ಕೂಡ ಕೆಲಸ ಮಾಡುತ್ತಿರುತ್ತವೆ. ಒಟ್ಟಾರೆ ಈ ನಿಟ್ಟಿನಲ್ಲಿ ಆಗಬೇಕಾದ ಕೆಲಸಗಳು ಬಹಳಷ್ಟಿವೆ. ಅವುಗಳನ್ನು ಶಾಸನ ಸಂಶೋಧಕರು ಕೈಗೊಳ್ಳಬೇಕಾಗಿದೆ. ಆಂಧ್ರಪ್ರದೇಶದಲ್ಲಿ ತೆಲುಗು ಭಾಷೆಯಲ್ಲಿ ಕುಂದೂರಿ ಈಶ್ವರದತ್ ಅವರ ಪ್ರಾಚೀನಾಂಧ್ರ ಚಾರಿತ್ರಿಕ ಭೂಗೋಳಮು ಕೃತಿ ಪ್ರಕಟವಾಗಿದೆ. ಇದೇ ಮಾದರಿಯಲ್ಲಿ ಕರ್ನಾಟಕದಲ್ಲಿ ಇದರ ಕೆಲಸ ನಡೆಯಬೇಕಾಗಿದೆ.

ನನ್ನ ಬಹುತೇಕ ಸಂಶೋಧನೆಗಳು ವಿಶೇಷತಃ ಕೋಲಾರ, ಬೆಂಗಳೂರು ಜಿಲ್ಲೆಗಳ ವ್ಯಾಪ್ತಿಯಲ್ಲೇ ನಡೆದಿದ್ದು, ಆ ಸಂದರ್ಭದಲ್ಲಿ ಅನೇಕರ ನೆರವು ಅದರಲ್ಲೂ ಕನ್ನಡ

ಸಾಹಿತ್ಯ ಪರಿಷತ್ತಿನ ಶಾಸನಶಾಸ್ತ್ರ ವಿದ್ಯಾರ್ಥಿಗಳ ಸಹಕಾರ ಸ್ನೇಹ ದೊರೆತು ಬಹು ಉಪಕೃತನಾಗಿದ್ದೇನೆ. ಅವರೆಲ್ಲರನ್ನು ಸ್ಮರಿಸಿಕೊಳ್ಳುತ್ತಾ ನನ್ನ ಅಧ್ಯಯನದಲ್ಲಿ ಸ್ಥಾನ ಪಡೆದಿರುವ ಶ್ರೀ ಭೈರವೇಶ್ವರಸ್ವಾಮಿ ಕ್ಷೇತ್ರಗಳು ಹಾಗೂ ಅಂತಹ ಪವಿತ್ರ ಕ್ಷೇತ್ರಗಳಲ್ಲಿ ಒಂದಾದ ಆದಿಚುಂಚನಗಿರಿಯ ಈ ಸ್ಥಾನದಲ್ಲಿ ನನಗೆ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಪ್ರದಾನವಾಗಿರುವುದು ಯೋಗಾಯೋಗವೆಂದು ನಂಬಿದ್ದೇನೆ. ಇದು ಶ್ರೀ ಭೈರವೇಶ್ವರ ಸ್ವಾಮಿಯ ಕೃಪೆಯೊಂದಿಗೆ ನನ್ನ ಸಂಶೋಧನ ಕಾರ್ಯದಲ್ಲಿ ಸಹಕರಿಸಿ ಪ್ರೋತ್ಸಾಹಿಸುತ್ತಿರುವ ನನ್ನೆಲ್ಲಾ ಹಿತೈಷಿ ಮಿತ್ರರಿಗೆ ಸಂದ ಗೌರವ ಎಂದು ಭಾವಿಸುತ್ತೇನೆ. ನನಗೆ ಈ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಸಾಧನೆ ಮಾಡಲು ಬೇಕಾದ ಆಯುರಾರೋಗ್ಯಾದಿಗಳನ್ನು ಕರುಣಿಸಲೆಂದು ದೇವರಲ್ಲಿ ಬೇಡುತ್ತಾ ಎಲ್ಲರಿಗೂ ವಂದಿಸಿ ವಿರಮಿಸುತ್ತೇನೆ.

# ಡಾ. ಪಿ. ವಿ. ಕೃಷ್ಣಮೂರ್ತಿ ಅವರ ಜೀವನ ಪರಿಚಯ

**ಹೆಸರು** : **ಡಾ. ಪಿ. ವಿ. ಕೃಷ್ಣಮೂರ್ತಿ**

**ಜನ್ಮಸ್ಥಳ** : ಸಮಂದೂರು, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ, ಕರ್ನಾಟಕ ರಾಜ್ಯ.

**ಜನ್ಮದಿನಾಂಕ** : ೫-೧-೧೯೫೨

**ತಂದೆ** : ಜಿ.ಎನ್. ಪಿಳ್ಳಪ್ಪ **ತಾಯಿ** : ಶ್ರೀಮತಿ ಪಾಪಮ್ಮ

**ವಿಳಾಸ** : # ೩೭, ಶ್ರೀಕೃಷ್ಣ ಕೃಪ, ೩ನೆಯ ಅಡ್ಡರಸ್ತೆ, ಸುಬ್ಬಣ್ಣ ಲೇಔಟ್, ಹರಿನಗರಕ್ರಾಸ್, ಬೆಂಗಳೂರು-೫೬೦೦೬೨.

**ದೂರವಾಣಿ** : ೯೦೩೬೮೦೮೨೯೫, ೯೭೪೦೮೪೪೦೫೬

**ಇ ವಿಳಾಸ** : pvk.krishnamurthy@gmail.com

**ವಿದ್ಯಾಭ್ಯಾಸ**

**ಪ್ರಾಥಮಿಕ** : ಸಮಂದೂರು ಮತ್ತು ಅತ್ತಿಬೆಲೆ, ಆನೇಕಲ್ ತಾಲ್ಲೂಕು, ಬೆಂಗಳೂರು ಜಿಲ್ಲೆ, ಕರ್ನಾಟಕ ರಾಜ್ಯ

**ಪ್ರೌಢ** : ಬಿ.ಎ. (೧೯೭೫), ಎಂ.ಎ. [ಕನ್ನಡ] (೧೯೭೭) , ಮೈಸೂರು ವಿಶ್ವವಿದ್ಯಾನಿಲಯ

**ಡಾಕ್ಟೊರೇಟ್**: ಡಿ.ಲಿಟ್ (೨೦೦೦), **ಬಾಣರಸರ ಶಾಸನಗಳು-ಒಂದು ಅಧ್ಯಯನ**, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತಾಂತ್ರಿಕ** : ಎನ್.ಎ.ಸಿ (೧೯೭೪), ರಾಷ್ಟ್ರೀಯ ಅಪ್ರೆಂಟಿಸ್ ತರಬೇತಿ, ಎನ್.ಜಿ.ಇ.ಎಫ್, ಬೆಂಗಳೂರು

ಡಿ.ಎಂ.ಇ [ಮೆಕಾನಿಕಲ್ ಇಂಜಿನಿಯರಿಂಗ್ ಡಿಪ್ಲೊಮಾ] (೧೯೮೭), ಎಸ್.ಜೆ. ಪಾಲಿಟೆಕ್ನಿಕ್, ಬೆಂಗಳೂರು.

**ಉದ್ಯೋಗ** : **ಇಂಜಿನಿಯರ್**, ವೈಮಾಂತರಿಕ್ಷ ವಿಭಾಗ, ಎಚ್.ಎ.ಎಲ್. (ಬಿ,ಸಿ), ಬೆಂಗಳೂರು-೫೬೦೦೭೫

**ಹವ್ಯಾಸ** : **ಶಾಸನಶಾಸ್ತ್ರ ಗೌರವ ಉಪನ್ಯಾಸಕ**, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-೫೬೦೦೧೮

**ಕನ್ನಡ ಭಾಷಾ ಬೋಧಕ** (ಕನ್ನಡ ಬಾರದವರಿಗೆ ಕನ್ನಡ ಕಲಿಸುವ ತರಗತಿಗಳು), ಕರ್ನಾಟಕ ಸರ್ಕಾರ.

**ಕೃತಿಗಳು** : **ಸುಗುಟೂರು ವೀರಶೈವ ಅರಸುಮನೆತನ**, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೪.

**ತಮಿಳುನಾಡಿನ ಕನ್ನಡ ಶಾಸನಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೯೭ ; ಪರಿಷ್ಕೃತ ದ್ವಿತೀಯ ಮುದ್ರಣ-೨೦೦೪

**ವಿಂಧ್ಯ ನರ್ಮದೆಯರ ನಾಡಿನಲ್ಲಿ** [ಪ್ರವಾಸ ಕಥನ], ಕರ್ನಾಟಕ ಸಾಹಿತ್ಯ ಅಕಾದೆಮಿ, ಬೆಂಗಳೂರು-೧೯೯೯.

**ಬಾಣರಸರ ಶಾಸನಗಳು ಒಂದು ಅಧ್ಯಯನ**, ಸಿ ವಿ ಜಿ ಪಬ್ಲಿಕೇಷನ್ಸ್, ಬೆಂಗಳೂರು-೨೦೦೯

**ಶಾಸನ ಮಂಥನ** [ಸಂಶೋಧನ ಲೇಖನಗಳ ಸಂಕಲನ], ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು-೨೦೧೧.

**ಶಾಸನ ಇತಿಹಾಸ ಮಂಥನ** [ಸಂಶೋಧನ ಲೇಖನಗಳ ಸಂಕಲನ], ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು-೨೦೧೧.

**ಕೃತಿಗಳು : ಸಹಲೇಖಕ : ಶ್ರೀ ಭೈರವ ಕ್ಷೇತ್ರದ ಸೀತಿಬೆಟ್ಟ,** ಶ್ರೀ ಭೈರವೇಶ್ವರ ಮತ್ತು ಶ್ರೀಪತೇಶ್ವರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಪ್ರತಿಷ್ಠಾನ, ಸೀತಿ ಗ್ರಾಮ [ಕೋಲಾರ ತಾಲ್ಲೂಕು ಮತ್ತು ಜಿಲ್ಲೆ] –೧೯೯೬

**ಎಚ್.ಎ.ಇ.ಎ. ಹೆಜ್ಜೆ ಗುರುತುಗಳು,** ಎಚ್.ಎ.ಎಲ್. ಕಾರ್ಖಾನೆಯ ಕಾರ್ಮಿಕ ಸಂಘ, ಬೆಂಗಳೂರು–೧೯೯೮.

*Foot Prints of H.A.E.A.* , ಎಚ್.ಎ.ಎಲ್. ಕಾರ್ಖಾನೆಯ ಕಾರ್ಮಿಕ ಸಂಘ, ಬೆಂಗಳೂರು–೧೯೯೮.

**ಎಚ್.ಎ.ಇ.ಎ. ಯಿನ್ ಕಡಂದುವಂದ ಪಾದಸ್ಸುವಡುಗಳ್,** ಎಚ್.ಎ.ಎಲ್. ಕಾರ್ಖಾನೆಯ ಕಾರ್ಮಿಕ ಸಂಘ, ಬೆಂಗಳೂರು–೧೯೯೮ [ತಮಿಳು ಅವತರಣಿಕೆ]

**ಕರ್ನಾಟಕ ಲೋಚನ ಲೇಖನ ಸೂಚಿ,** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು–೧೯೯೯

**ಸಂಪಾದಿತ ಕೃತಿಗಳು : ಸೂರ್ಯಕೀರ್ತಿ** (ಡಾ ॥ ಸೂರ್ಯನಾಥ ಕಾಮತ್ ಅಭಿನಂದನ ಸಂಪುಟ), ಡಾ॥ ಸೂರ್ಯನಾಥ ಕಾಮತ್ ಅಭಿನಂದನ ಸಮಿತಿ. ಬೆಂಗಳೂರು–೨೦೦೦

**ಗುಣಮಧುರ** (ಡಾ॥ ದೇವರಕೊಂಡಾರೆಡ್ಡಿ ಅಭಿನಂದನ ಗ್ರಂಥ), ಡಾ॥ ದೇವರಕೊಂಡಾರೆಡ್ಡಿ ಅಭಿನಂದನ ಸಮಿತಿ, ಬೆಂಗಳೂರು–೨೦೧೦

**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೪** {ತಮಿಳುನಾಡಿನ ಕನ್ನಡ ಶಾಸನಗಳು}, ಕನ್ನಡ ವಿಶ್ವವಿದ್ಯಾಲಯ, ಹಂಪಿ–೨೦೦೦

**ಇತಿಹಾಸ ದರ್ಶನ,** ಸಂಪುಟ ೧೦ (೧೯೯೫) ರಿಂದ ಸಂಪುಟ ೨೬ (೨೦೧೧), **ಕರ್ನಾಟಕ** ಇತಿಹಾಸ ಅಕಾದೆಮಿ, ಬೆಂಗಳೂರು

**ಲೇಖನಗಳು** : ಸುಮಾರು ೧೫೦ ಕ್ಕೂ ಹೆಚ್ಚು ಸಂಶೋಧನ ಲೇಖನಗಳು ನಾಡಿನ ಹಲವು ವಿದ್ವತ್ ಪತ್ರಿಕೆ, ಅಭಿನಂದನ, ಸಂಸ್ಮರಣ, ಗೌರವ ಹಾಗೂ ಕೋಶ ಸಂಪುಟಗಳಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಕೆಲವು ಸಂಪ್ರಬಂಧಗಳ ಪಟ್ಟಿ ಈ ಕೆಳಗೆ ನೀಡಲಾಗಿದೆ :

೧. ಚೆಂಗಾಳ್ವ ನಂಜುಂಡೊಡೆಯನ ಶಾಸನ, **ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ,** ಸಂ ೬೮–೨, ಬೆಂಗಳೂರು, ೧೯೮೨.

೨. ಬೇಚಿರಾಕ್ ಎರೆಯಪಮಂಗಲದ ಎರಡು ವೀರಗಲ್ಲು ಶಾಸನಗಳು, **ಇತಿಹಾಸ ಚಂದ್ರಿಕೆ,** ತುಮಕೂರು, ೧೯೮೨.

೩. ಹೆಬ್ಬಾಳದ ದುರ್ಗಿಕಲ್ಲು ಶಾಸನ, **ಕ. ಸಾ. ಪ. ಪತ್ರಿಕೆ.** ಸಂ. ೭೩–೧, ಬೆಂಗಳೂರು, ೧೯೮೮.

೪. ಪುರಧರ್ಮ ಶಾಸನಗಳು ಒಂದು ಅವಲೋಕನ, **ಇತಿಹಾಸ ದರ್ಶನ,** ಸಂ.೩,(೧೯೮೮). ಬೆಂಗಳೂರು

೫. ಕೆಂಪೇಗೌಡ ಜಯಪ್ರಶಸ್ತಿ–ಒಂದು ಚಾರಿತ್ರಿಕ ಅವಲೋಕನ, **ಇತಿಹಾಸ ದರ್ಶನ,** ಸಂ.೪, ಬೆಂಗಳೂರು (೧೯೮೯).

೬. ತಮಿಳುನಾಡಿನ ಕನ್ನಡ ಶಾಸನಗಳು–ಅವಲೋಕನ, **ಸಂಶೋಧನೆ,** ಡಾ. ಎಂ. ಚಿದಾನಂದಮೂರ್ತಿ ಅವರ ಅಭಿನಂದನ ಗ್ರಂಥ, ಬೆಂಗಳೂರು, ೧೯೯೧.

೭. ಕುಕ್ಕಲನಾಡು ಒಂದು ಪ್ರಾಚೀನ ಪ್ರಾದೇಶಿಕ ವಿಭಾಗ, **ಇತಿಹಾಸ ದರ್ಶನ,** ಸಂ. ೬, ಬೆಂಗಳೂರು (೧೯೯೧).

೮. ಸೀತಿಬೆಟ್ಟದ ಭೂಸ್ಥಿತಿ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ., **ಇತಿಹಾಸ ದರ್ಶನ,** ಸಂ. ೮, ಬೆಂಗಳೂರು (೧೯೯೩).

೯. ಶಾಸನಗಳ ಹಿನ್ನೆಲೆಯಲ್ಲಿ ಎಲಹಂಕನಾಡು, **ಕರ್ನಾಟಕ ಲೋಚನ,** ಸಂ.

೧೦. ಕರ್ನಾಟಕ ಇತಿಹಾಸದಲ್ಲಿ ದಡಿಗಾವಳಿಯ ಸ್ಥಾನ-ಒಂದು ಪರಿಶೀಲನೆ., **ಇತಿಹಾಸ ದರ್ಶನ**, ಸಂ.೯, ಬೆಂಗಳೂರು (೧೯೯೪).

೧೧. ಸೀತಿಬೆಟ್ಟದ ಭೈರವ ದೇವರು, **ಅಮೃತ ವರ್ಷ**, ದೇ.ಜ.ಗೌ. ಅಭಿನಂದನ ಗ್ರಂಥ. ಪು. ೫೩೮-೫೪೭, ಬೆಂಗಳೂರು, (೧೯೯೫).

೧೨. ಮಹಾನಾಡು ಪ್ರಭುಗಳ ಸಾಮಾಜಿಕ ಅರ್ಥಿಕ ಕೊಡಿಗೆಗಳು., **ಸಾಧನೆ**, ಸಂ.೨೪-೧, ಬೆಂಗಳೂರು (೧೯೯೫).

೧೩. ಹೊಮ್ಮಳಿಗೆನಾಡು ಬನ್ನೇರುಘಟ್ಟ-ಸ್ಥಳನಾಮ ಪರಿಶೀಲನೆ., **ಸಾಧನೆ**, ಸಂ.೨೫-೧, ೨, ಜೂನ್-ಜುಲೈ, ಬೆಂಗಳೂರು (೧೯೯೬).

೧೪. ಭೈರವ ಭಕ್ತ ಗಂಗವಂಶಿಯರು., **ಶ್ರೀಭೈರವಕ್ಷೇತ್ರ ಸೀತಿಬೆಟ್ಟ**, ಸೀತಿ ಗ್ರಾಮ, ೧೯೯೬.

೧೫. ಪ್ರಾಚೀನ ಭೌಗೋಳಿಕ ಪ್ರಾದೇಶಿಕ ವಿಭಾಗಗಳಾಗಿ ಕಿಳಲೆ ಮತ್ತು ಕೆಳ್ಗಲಿನಾಡುಗಳು., **ಇತಿಹಾಸ ದರ್ಶನ**, ಸಂ.೧೨, ಬೆಂಗಳೂರು, (೧೯೯೭).

೧೬. ಸಿಗಲ್ ನಾಡು-ಒಂದು ನೈಜ ಭೌಗೋಳಿಕ ವಿಭಾಗ., **ಇತಿಹಾಸ ದರ್ಶನ**, ಸಂ೧೩, ಬೆಂಗಳೂರು (೧೯೯೮).

೧೭. ಪುಲಿನಾಡು ಒಂದು ಅಧ್ಯಯನ, **ಇತಿಹಾಸ ದರ್ಶನ**, ಸಂ. ೧೪. (೧೯೯೯).

೧೮. ಕೆಂಪೇಗೌಡನ ಯಶಃಪ್ರತಾಪ ಕೀರ್ತನೆಗಳು-ಚಾರಿತ್ರಿಕ ಪರಿಶೀಲನೆ, **ಕ.ಸಾ.ಪ. ಪತ್ರಿಕೆ**, ಸಂ. ೭೭-೨,೪, ಬೆಂಗಳೂರು ೧೯೯೯.

೧೯. ಆನೆಗೊಂದಿ ಪ್ರಭುಗಳ ಇತಿಹಾಸ, ಶಾಸನ ಮತ್ತು ಇತರ ಅಕರಗಳ ಹಿನ್ನೆಲೆಯಲ್ಲಿ, **ಸೂರ್ಯಕೀರ್ತಿ**, ಡಾ. ಸೂರ್ಯನಾಥ ಕಾಮತ್ ಅವರ ಅಭಿನಂದನ ಗ್ರಂಥ, ಬೆಂಗಳೂರು, ೨೦೦೦.

೨೦. ಮುಮ್ಮಡಿ ವೀರಬಲ್ಲಾಳನ ಕಾಲದ ಹೆಸರ್ ಕುಂದಾಣಿ ರಾಜ್ಯದ ನಾಡುಗಳು, **ಇತಿಹಾಸ ದರ್ಶನ**, ಸಂ.೧೫, ಬೆಂಗಳೂರು, (೨೦೦೦).

೨೧. ಕರ್ನಾಟಕದ ಚಾರಿತ್ರಿಕ ಭೂಗೋಳ ಅಧ್ಯಯನದ ಅವಲೋಕನ., **ಕ.ಸಾ.ಪ. ಪತ್ರಿಕೆ**, ಸಂ. ೭೮-೩, ಬೆಂಗಳೂರು, (೨೦೦೦).

೨೨. ಹೊಯ್ಸಳ ಮಹಾಮಂಡಲೇಶ್ವರ ಪೂರ್ವಾದಿಯರು., **ಇತಿಹಾಸ ದರ್ಶನ**, ಸಂ.೧೬, ಬೆಂಗಳೂರು, (೨೦೦೧).

೨೩. ಶಾಸನಗಳಲ್ಲಿ ಸಂಕೇತ ಮತ್ತು ಸಂಕ್ಷೇಪಗಳು., **ಇತಿಹಾಸ ದರ್ಶನ**, ಸಂ.೧೬, ಬೆಂಗಳೂರು, (೨೦೦೧).

೨೪. ಕಳವರನಾಡು-ಒಂದು ಪ್ರಾಚೀನ ಬುಡಕಟ್ಟು ಹಿನ್ನೆಲೆಯ ಪ್ರದೇಶ, **ಇತಿಹಾಸ ದರ್ಶನ**, ಸಂ. ೧೭, ಬೆಂಗಳೂರು, (೨೦೦೨).

೨೫. ಶಿವಗಂಗಾ ಕ್ಷೇತ್ರದ ಶಾಸನಗಳು-ಒಂದು ಅವಲೋಕನ, **ಮಂಗಳಗಂಗ**, ಪು. ೭೫-೮೨, ನೆಲಮಂಗಲ ತಾಲೂಕು ೩ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ತ್ಯಾಮಗೊಂಡ್ಲು, (೨೦೦೨).

೨೬. ಇಳವಂಜಿನಾಡು ಮತ್ತು ಇಳವಂಜಿರಾಯರು, **ಇತಿಹಾಸ ದರ್ಶನ** ಸಂ. ೨೨, ಬೆಂಗಳೂರು, (೨೦೦೭)

೨೭. ರಾಷ್ಟ್ರಕೂಟ ಅಕಾಲವರ್ಷದೇವ ಮುಮ್ಮಡಿ ಕೃಷ್ಣನ ಕುಣಿಗಲ್ ಕೆರೆ ಶಾಸನ **ಇತಿಹಾಸ ದರ್ಶನ**, ಸಂ. ೧೯. ಬೆಂಗಳೂರು, (೨೦೦೪).

೨೮. ವಿಜಯನಗರ ಸಾಮ್ರಾಜ್ಯದ ಆಡಳಿತ ಘಟಕಗಳಲ್ಲಿ 'ವಳಿತ'ದ ಸ್ಥಾನ – ಒಂದು ಪರಿಶೀಲನೆ, **ವಿಜಯನಗರ ಅಧ್ಯಯನ**, ಸಂ. ೧೩, ಮೈಸೂರು, ೨೦೦೮.

೨೯. ಕೊಪ್ಪಳ ಜಿಲ್ಲೆಯ ಪ್ರಾಚೀನ ಆಡಳಿತ ಘಟಕಗಳು, **ಕೊಪ್ಪಳ ಜಿಲ್ಲೆಯ ಪುರಾತತ್ತ್ವ ಮತ್ತು ಇತಿಹಾಸ**, ಮೈಸೂರು, ೨೦೧೧.

೩೦. ವಿಜಯನಗರ ಸಮ್ರಾಜ್ಯದ ಶಾಸನಗಳಲ್ಲಿ 'ಚಾವಡಿ' ಒಂದು ಪರಿಶೀಲನೆ, **ವಿಜಯನಗರ ಅಧ್ಯಯನ**, ಸಂ.೧೪, ಮೈಸೂರು, ೨೦೧೦.

೩೧. ನಂದಿದುರ್ಗ ಪರಿಸರದ ಶಾಸನಗಳು, **ಶಾಸನ ಅಧ್ಯಯನ,** ಸಂ. ೪-೧, ೨ (೨೦೦೭), ಹಂಪಿ ಕನ್ನಡ ವಿಶ್ವವಿದ್ಯಾಲಯ.

೩೨. ಕಪ್ಪೆ ಅರಭಟ್ಟನ ಶಾಸನ-ಒಂದು ಪುನರ್ ಅಧ್ಯಯನ, **ಶಾಸನ ಅಧ್ಯಯನ,** ಸಂ. ೫-೧, ೨ (೨೦೦೮), ಹಂಪಿ ಕನ್ನಡ ವಿಶ್ವವಿದ್ಯಾಲಯ.

೩೩. ಬನ್ನೇರುಘಟ್ಟದ ಭೌಗೋಳಿಕ ಪರಿಸರ ಮತ್ತು ಶಾಸನಗಳು ಒಂದು ಅಧ್ಯಯನ, **ಕ.ಸಾ.ಪ. ಪತ್ರಿಕೆ,** ಸಂ. ೮೮-೧, ೨ (೨೦೧೦).

೩೪. ತಮಿಳು ನಾಡಿನಲ್ಲಿ ಕರ್ನಾಟಕದ ಪ್ರಭುತ್ವ ಮತ್ತು ಪ್ರಭಾವ, **ಕ.ಸಾ.ಪ. ಪತ್ರಿಕೆ,** ಸಂ. ೮೭-೧-೪ (೨೦೦೯).

೩೫. ಕೆಂಪೇಗೌಡರು ಧರ್ಮಪ್ರಭು ಎಂಬ ಹೆಗ್ಗಳಿಕೆಗೆ ಪಾತ್ರರಾದ ಹಿನ್ನೆಲೆ, **ಕರ್ನಾಟಕಲೋಚನ,** ಸಂ. ೨೩-೧, ೨ (೨೦೦೯).

ಎನ್.ಎಸ್. ಮಹಂತೇಶ*

# ಹೊಸದುರ್ಗ ತಾಲೂಕಿನ ಕೆಲವು ಪ್ರಾಗೈತಿಹಾಸಿಕ ನೆಲೆಗಳ ಶೋಧ

ಪ್ರಾಗೈತಿಹಾಸಿಕ ಸಂಸ್ಕೃತಿ ಹಿನ್ನೆಲೆಯ ಅತ್ಯಂತ ಹಳೆಯ ಪ್ರದೇಶಗಳಲ್ಲಿ ಚಿತ್ರದುರ್ಗ ಜಿಲ್ಲೆಯು ಪ್ರಧಾನವಾದ ಸ್ಥಾನದಲ್ಲಿದೆ. ಕರ್ನಾಟಕದ ಪ್ರಾಗೈತಿಹಾಸಿಕ ಸಂಸ್ಕೃತಿಗೆ ಈ ಜಿಲ್ಲೆಯು ನೀಡಿರುವ ಕೊಡುಗೆ ಅತ್ಯಅಮೂಲ್ಯವಾದದ್ದು. ಈ ಜಿಲ್ಲೆಯ ಚಂದ್ರವಳ್ಳಿ ಹಾಗೂ ಬ್ರಹ್ಮಗಿರಿ ನೆಲೆಗಳ ವೈಜ್ಞಾನಿಕ ಉತ್ಖನನಗಳು ಪ್ರಾಗೈತಿಹಾಸಿಕ ಹಾಗೂ ಚಾರಿತ್ರಿಕ ಕಾಲಘಟ್ಟದ ಅಧ್ಯಯನಗಳ ಹಿನ್ನೆಲೆಯಲ್ಲಿ ಮಹತ್ವಪೂರ್ಣವಾಗಿವೆ. ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ಅಧ್ಯಯನ ಆರಂಭಗೊಂಡಿದುದು ರಾಬರ್ಟ್ ಬ್ರೂಸ್ ಫೂಟ್ (೧೮೭೩) ಅವರಿಂದ. ಅಲ್ಲಿಂದ ಇಲ್ಲಿಯವರೆಗೂ ಜಿಲ್ಲೆಯ ಹಲವು ಪ್ರದೇಶಗಳಲ್ಲಿ ಹಿರಿಯ ಹಾಗೂ ಯುವ ಸಂಶೋಧಕರು ಅನೇಕ ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆಹಚ್ಚಿ ಪ್ರಕಟಿಸುತ್ತಾ ಬರುತ್ತಿರುವುದು ಗಮನಾರ್ಹವಾದುದು.

ಚಿತ್ರದುರ್ಗ ಜಿಲ್ಲೆಯಲ್ಲಿ ಹೊಸದುರ್ಗ ತಾಲೂಕು ಭೌಗೋಳಿಕವಾಗಿ, ಪ್ರಾಗೈತಿಹಾಸಿಕವಾಗಿ, ಚಾರಿತ್ರಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ವಿಶಿಷ್ಟವಾಗಿದೆ. ಇತ್ತ ಬಯಲು ಸೀಮೆಯೂ ಅಲ್ಲದೇ ಅತ್ತ ಮಲೆನಾಡು ಅಲ್ಲದ ಈ ಪ್ರದೇಶವು ಅರೆಮಲೆನಾಡು ಭಾಗವಾಗಿದ್ದು, ಜನಜೀವನಕ್ಕೆ ಅತ್ಯಂತ ಉಪಯುಕ್ತ ಪ್ರದೇಶ. ಭೌಗೋಳಿಕವಾಗಿ ೧,೨೩,೮೩೪,೬೦ ಹೆಕ್ಟೇರ್ ಭೂಮಿ ಈ ತಾಲೂಕಿನಲ್ಲಿದೆ. ಇಲ್ಲಿನ ಭೂಮಿ ಫಲವತ್ತತೆಯಿಂದ ಕೂಡಿದ್ದು ಮರಳು ಮಿಶ್ರಿತ ಕೆಂಪು ಮಣ್ಣು, ಮರಬ ಮಣ್ಣು, ಕಬ್ಬಿಣದ ಅಂಶವನ್ನೊಳಗೊಂಡ ಮಣ್ಣು, ಕರಲು ಮಣ್ಣು, ಕಪ್ಪು ಮಣ್ಣು ಮುಂತಾದ ಮಣ್ಣಿನ ವೈವಿಧ್ಯಗಳನ್ನು ಕಾಣಬಹುದು. ಹೊಸದುರ್ಗ ತಾಲೂಕಿನಲ್ಲಿ ಕಸಬ, ಮತ್ತೋಡು, ಶ್ರೀರಾಂಪುರ ಹಾಗೂ ಮಾಡದಕೆರೆ ಎಂಬ ನಾಲ್ಕು ಹೋಬಳಿಗಳು, ೨೨೪ ಗ್ರಾಮಗಳು ಅವುಗಳಲ್ಲಿ ೧೮೭ ಚರಾಕ್ ಉಳಿದವು ಬೇಚರಾಕ್ ಆಗಿವೆ. ಈ ತಾಲೂಕು ಪರಿಸರದಲ್ಲಿ ಹರಿಯುವ ಪ್ರಮುಖವಾದ ನದಿ ವೇದಾವತಿ. ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್ ಗಿರಿ ಪರ್ವತ ಪ್ರದೇಶದಲ್ಲಿ ಹುಟ್ಟುವ ವೇದ ಮತ್ತು ಅವತಿ ಎಂಬ ಎರಡು ಪುಟ್ಟ ನದಿಗಳು ಸೇರಿ ವೇದಾವತಿ ನದಿಯಾಗಿ ಹರಿಯುತ್ತದೆ. ಹೊಸದುರ್ಗ ತಾಲೂಕಿನಲ್ಲಿ ವಾಯುವ್ಯದ ಕಡೆಯಿಂದ ಹರಿಯುವ ಹಳ್ಳವು ಹೆಗ್ಗೆರೆ, ಶ್ರೀರಾಂಪುರ (ಬೂದಿಹಾಳು), ಕೈನಡು, ಬುಕ್ಕಸಾಗರ, ದೊಡ್ಡತೇಕಲವಟ್ಟಿ, ಗಂಜಿಗೆರೆ ಕಡೆಯಿಂದ ಹರಿದು ನಿರುವುಗಲ್ ಹತ್ತಿರ ವೇದಾವತಿ ನದಿ ಸೇರುತ್ತದೆ.[೧] ಅದೇ ರೀತಿ ಇದೇ ತಾಲೂಕಿನ ಶೆಟ್ಟಿಹಳ್ಳಿ, ವೀರಾಪುರ, ಆಲದಹಳ್ಳಿ ಗ್ರಾಮಗಳ ನೀರು ನೀರಗುಂದ, ಶ್ರೀರಾಂಪುರ, ಬಾಗೂರು, ಕೋಡಿಹಳ್ಳಿ ಇನ್ನಿತರ ಹಳ್ಳಿಗಳಿಂದ ಬಂದ ಹಳ್ಳಗಳು ಸೇರಿ ಕಂಗುವಳ್ಳಿ ಹತ್ತಿರ ಕೂಡಿಕೊಂಡು ಬಲ್ಲಾಳಸಮುದ್ರ ಕಾವಲ್ ಇತರ ಹಳ್ಳಿಗಳ ಮುಖಾಂತರ ಮುತ್ತಾಗೊಂದಿ ಹತ್ತಿರ ವಾಣಿವಿಲಾಸ ಸಾಗರದ ಹಿನ್ನೀರಿಗೆ ಸೇರುತ್ತದೆ.[೨]

ಹೊಸದುರ್ಗ ತಾಲೂಕಿನಲ್ಲಿ ಹರಿಯುವ ವೇದಾವತಿ ನದಿ ಹಾಗೂ ಅದರ ಸುತ್ತಮುತ್ತಲಿನ ಹಳ್ಳ-ಕೊಳ್ಳಗಳು, ತೊರೆಗಳು ಅಪಾರ ಪ್ರಮಾಣದಲ್ಲಿ ಇದ್ದು ಪ್ರಾಕೃತಿಕ ಸಂಪತ್ತಿನಿಂದ ತುಂಬಿದೆ. ಈ ಪರಿಸರವು ಸಹಜವಾಗಿ ಮಾನವನ ವಾಸಕ್ಕೆ, ಜೀವನ ನಿರ್ವಹಣೆಗೆ ಅನುಕೂಲಕರವಾಗಿದೆ. ಈ ಪರಿಸರದಲ್ಲಿ ಪ್ರಾಗೈತಿಹಾಸ ಕಾಲದ ಮಾನವ ಬಾಳಿ ಬದುಕಿರುವ ಕುರುಹುಗಳು ಅಪಾರ ಪ್ರಮಾಣದಲ್ಲಿ ದೊರೆತಿವೆ. ಹೊಸದುರ್ಗ ತಾಲೂಕಿನ ಪ್ರಾಗೈತಿಹಾಸ ಅಧ್ಯಯನ ಪ್ರಾರಂಭವಾದದ್ದು ಡಾ॥ ಎಂ. ಶೇಷಾದ್ರಿ ಅವರಿಂದ. ಇವರು ಹೊಸದುರ್ಗ ತಾಲೂಕಿನ ಜಾನಕಲ್ಲು ಗ್ರಾಮದಲ್ಲಿ ೧೯೫೬ರಲ್ಲಿ ಆದಿ ಹಳೆಶಿಲಾಯುಗದ ಆಯುಧವನ್ನು ಪತ್ತೆಹಚ್ಚಿದರು.[೩] ಆದರೆ ಅಲ್ಲಿಂದ ಇಲ್ಲಿಯವರೆಗೆ ಈ ತಾಲೂಕಿನಲ್ಲಿ ಯಾವುದೇ ಪ್ರಾಗೈತಿಹಾಸಿಕ ನೆಲೆ ಪತ್ತೆಯಾಗಿ ಪ್ರಕಟವಾಗಿಲ್ಲ. ೨೦೦೮ ರಿಂದ ನಾನು ನಿರಂತರವಾಗಿ ಕೈಗೊಂಡ ಸಂಶೋಧನಾ ಕ್ಷೇತ್ರಕಾರ್ಯದ ಫಲವಾಗಿ ಈ ತಾಲೂಕಿನಲ್ಲಿ ಸು ೩೦ ಕ್ಕೂ ಹೆಚ್ಚಿನ ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆಹಚ್ಚಿದ್ದೇನೆ. ಅವುಗಳು ಹಳೇಶಿಲಾಯುಗ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಕಾಲಘಟ್ಟಕ್ಕೆ ಸೇರಿವೆ. ಪತ್ತೆ ಹಚ್ಚಿರುವ ಪ್ರಾಗೈತಿಹಾಸ ನೆಲೆಗಳಲ್ಲಿ ಕೆಲವನ್ನು ಈ ಮುಂದಿನಂತೆ ವಿವರಿಸಲಾಗಿದೆ.

* ಇತಿಹಾಸ ಉಪನ್ಯಾಸಕರು, ಶ್ರೀ ವೆಂಕಟೇಶ್ವರ ಪ್ರಥಮ ದರ್ಜೆ ಕಾಲೇಜು, ಚಳ್ಳಕೆರೆ ಟೋಲ್‌ಗೇಟ್ ಹತ್ತಿರ, ಚಿತ್ರದುರ್ಗ.

### ಗರಗ

ಹೊಸದುರ್ಗ ತಾಲೂಕಿನ ಶ್ರೀರಾಂಪುರ (ಬೂದಿಹಾಳು) ಹೋಬಳಿ ಕೇಂದ್ರದಿಂದ ಬೆಲಗೂರು ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೧೦ ಕಿ.ಮೀ ದೂರದಲ್ಲಿದೆ. ಈ ಗ್ರಾಮದ ಮುತ್ತಿನಗಿರಿ ಬೆಟ್ಟ ಪರಿಸರವು ಒಂದು ಬಹುಮುಖ್ಯವಾದ ಪ್ರಾಗೈತಿಹಾಸಿಕ ನೆಲೆಯಾಗಿದ್ದು ಬಿಳಿಕಣಶಿಲೆಗಳಿಂದ ಆವೃತವಾಗಿದೆ. ನಿಸರ್ಗದತ್ತವಾದ ಈ ಪರಿಸರದಲ್ಲಿ ಹಳ್ಳಗಳು, ಝರಿಗಳು ಹರಿಯುತ್ತವೆ. ಅಲ್ಲದೇ ಹಲವು ಕಲ್ಲಾಸರೆಗಳು, ಗವಿಗಳು ಕಂಡುಬರುತ್ತವೆ. ಈ ಪರಿಸರದಲ್ಲಿ ಆದಿ ಹಳೇ ಶಿಲಾಯುಗಕ್ಕೆ ಸೇರಿದ ಒಂದು ಶಿಲಾಯುಧ ದೊರೆತಿದೆ. ಇದನ್ನು ಕೆಂಪು ಬೆಣಚು ಕಲ್ಲಿ (Quartzite) ನಿಂದ ತಯಾರಿಸಲಾಗಿದ್ದು, ೮.೫ ಸೆಂ.ಮೀ. ಉದ್ದ, ೫.೫ ಸೆಂ.ಮೀ. ಅಗಲ ಹಾಗೂ ೩.೫ ಸೆಂ.ಮೀ. ದಪ್ಪವಾಗಿರುವ ಈ ಆಯುಧದ ಸುತ್ತಲೂ ಚಕ್ಕೆಗಳನ್ನು ಎಬ್ಬಿಸಿರುವ ಗುರುತುಗಳು ಗೋಚರಿಸುತ್ತವೆ.

### ಕಲ್ಲಾಸರೆ ವರ್ಣಚಿತ್ರಗಳು

ಗರಗ ಗ್ರಾಮದ 'ಮುತ್ತಿನಗಿರಿ' ಬೆಟ್ಟದ ಒಂದು ಕಲ್ಲಾಸರೆಯಲ್ಲಿ (ಇದು ಮುತ್ತಿನಗಿರಿ ರಂಗಪ್ಪನ ದೇವಾಲಯಕ್ಕೆ ಹೋಗುವ ಬಲಬದಿಯಲ್ಲಿ ಇದೆ.) ಪ್ರಾಗೈತಿಹಾಸಕಾಲದ ವರ್ಣಚಿತ್ರಗಳು ಪತ್ತೆಯಾದವು. ಇವುಗಳು ನೀಳವಾದ ಕೊಂಬುಗಳುಳ್ಳ ಗೂಳಿ ಚಿತ್ರಗಳಾಗಿದ್ದು ಇವುಗಳನ್ನು ಕೆಂಪು ಬಣ್ಣದಿಂದ ಬಿಡಿಸಲಾಗಿದೆ. ಒಂದು ಗೂಳಿ ೪೦ ಸೆಂ.ಮೀ. ಅಗಲ ೩೪ ಸೆಂ.ಮೀ ಉದ್ದವಿದೆ. ಮತ್ತೊಂದು ೬೭ ಸೆಂ.ಮೀ. ಉದ್ದ, ೬೫ ಸೆಂ.ಮೀ. ಅಗಲವಿದೆ. ಈ ವರ್ಣಚಿತ್ರಗಳು ಈ ಕಲ್ಲಾಸರೆಯಲ್ಲಿ ತುಂಬಾ ಇದ್ದು ಇತ್ತೀಚೆಗೆ ಇಲ್ಲಿನ ಹಳ್ಳಿಜನ ಅಡಿಗೆ ಮಾಡಿ ಅವುಗಳ ಹೊಗೆಯಿಂದ ಬಹುತೇಕ ವರ್ಣಚಿತ್ರಗಳು ಹಾಳಾಗಿ ಹೋಗಿವೆ. ಇವುಗಳ ಕಾಲಮಾನ ನೂತನ ಶಿಲಾಯುಗ ಸಂಸ್ಕೃತಿಯ ಕಾಲಘಟ್ಟ ಎಂದು ಹೇಳಬಹುದು.

### ಸೂಜಿಗಲ್ಲು

ಶ್ರೀರಾಂಪುರ (ಬೂದಿಹಾಳು) ಹೋಬಳಿ ಕೇಂದ್ರದಿಂದ ಪಶ್ಚಿಮಕ್ಕೆ ೨.೫ ಕಿ.ಮೀ. ಹತ್ತಿರದಲ್ಲಿದೆ. ಸೂಜಿಗಲ್ಲು ಗ್ರಾಮ. ಸೂಜಿಗಲ್ಲು ಎಂಬ ಸ್ಥಳನಾಮವು ಕುತೂಹಲವಾಗಿದೆ. ಇದನ್ನು ಕುರಿತು ಸ್ಥಳೀಯವಾದ ಪೌರಾಣಿಕ ಕಥೆಯೊಂದಿದೆ. ಈ ಗ್ರಾಮದ ಪಕ್ಕದಲ್ಲೇ 'ಮೈಲಾರಪುರ' ಎಂಬ ಪುಣ್ಯಕ್ಷೇತ್ರವಿದ್ದು ಮೈಲಾರಲಿಂಗೇಶ್ವರ ಸ್ವಾಮಿಯು ಸೂಜಿಗಳ ಮೇಲೆ ಕಾಲಿಟ್ಟು ಮೈಲಾರಪುರಕ್ಕೆ ಹೋಗಿ ನೆಲೆಸಿದನೆಂದು ಆ ಸೂಜಿಗಳು ಇದ್ದ ಸ್ಥಳವೇ ಸೂಜಿಗಲ್ಲು ಎಂದು ಸ್ಥಳೀಯರು ಹೇಳುತ್ತಾರೆ. ಆದರೆ ಈ ಸ್ಥಳನಾಮವು ಬಹುಶಃ ಪ್ರಾಗೈತಿಹಾಸ ಸಂಸ್ಕೃತಿ ಹಾಗೂ ಪ್ರದೇಶವಾಚಿ ಹಿನ್ನೆಲೆಯಿಂದ ಬಂದಿರುವ ಸಾಧ್ಯತೆ ಇದೆ. ಸೂಜಿಗಲ್ಲು ಎಂಬ ಪದದ ಉತ್ತರಪದ ಗಲ್ಲು ಎಂಬುದು ಕಲ್ಲು ಎಂಬುದರಿಂದ ಬಂದಿದೆ. ಕಲ್ಲಿನಿಂದ ಕೊನೆಗೊಳ್ಳುವ ಊರುಗಳು ಹೆಸರಿಡುವ ಮೊದಲನೇ ಘಟ್ಟವನ್ನು ಅಂದರೆ ಪ್ರಾಚೀನತೆಯನ್ನು ಸೂಚಿಸುತ್ತಾರೆ. ಕ > ಗ ಬದಲಾವಣೆಯಿಂದ ಕಲ್ಲು > ಗಲ್ಲು ಎಂದು ಬಳಕೆಯಾಗಿದೆ. ಅಂದರೆ ಸೂಜಿಕಲ್ಲು > ಸೂಜಿಗಲ್ಲು > ಸೂಜಿಗಲ್ ಆಗಿದೆ.[೪] ಸೂಜಿಗಳ ಆಕಾರದ ಕಲ್ಲುಗಳು ಇರುವ ಪ್ರದೇಶಕ್ಕೆ ಸೂಜಿಕಲ್ಲು ಎಂಬುದಾಗಿ ಹೆಸರು ಬಂದಿರುವ ಸಾಧ್ಯತೆ ಇದೆ.[೫]

ಸೂಜಿಗಲ್ಲು ಗ್ರಾಮದ ಪಶ್ಚಿಮ ದಿಕ್ಕಿನ ಹೊಲಗಳಲ್ಲಿ ಬೃಹತ್ ಶಿಲಾಸಮಾಧಿಗಳು ಕಂಡುಬರುತ್ತವೆ. ಪ್ರಸ್ತುತ ಕೃಷಿಯ ಚಟುವಟಿಕೆಗಳಿಂದಾಗಿ ನೂರಾರು ಬೃಹತ್ ಶಿಲಾ ಸಮಾಧಿಗಳು ಹಾಳಾಗಿವೆ. ಈಗ ಉಳಿದುಕೊಂಡಿರುವುದು ಕೇವಲ ೬ ಶಿಲಾಸಮಾಧಿಗಳು ಮಾತ್ರ. ಇವುಗಳು ಶಿಲಾವೃತ್ತ (Cist Circle) ಮಾದರಿಗೆ ಸೇರಿವೆ. ಈ ಸಮಾಧಿಗಳ ನಿರ್ಮಾಣಕ್ಕೆ ಸ್ಥಳೀಯವಾಗಿ ಲಭ್ಯವಿರುವ ಬಿಳಿಕಣ ಶಿಲೆಯನ್ನು ಬಳಸಲಾಗಿದೆ. ಮಧ್ಯದಲ್ಲಿ ಶವಸಂಸ್ಕಾರ ಮಾಡಿ ಅದರ ಸುತ್ತಲೂ ಈ ಬಿಳಿಕಣಶಿಲೆಯ ದುಂಡು ಕಲ್ಲುಗಳನ್ನು ಇಟ್ಟು ಸಮಾಧಿಗಳನ್ನು ಮಾಡಿದ್ದಾರೆ. ಇಲ್ಲಿ ದೊರೆತ ೬ ಶಿಲಾ ಸಮಾಧಿಗಳಲ್ಲಿ ಒಂದು ಶಿಲಾಸಮಾಧಿಯು ಸುಮಾರು ೬೫ ಅಡಿ ಸುತ್ತಳತೆಯನ್ನು ಹೊಂದಿದ್ದು ಅತ್ಯಂತ ದೊಡ್ಡದಾಗಿದೆ. ಕೆಲವು ಹಾಳಾದ ಶಿಲಾಸಮಾಧಿಗಳಲ್ಲಿ ಮಡಿಕೆ ಚೂರುಗಳು, ಲಭ್ಯವಾದವು. ಅವು ಬಟ್ಟಲು, ತಟ್ಟೆ ಮುಂತಾದವುಗಳ ಮಡಿಕೆ ಭಾಗಗಳು ಆಗಿದ್ದವು.

### ಗೂಳಿಹಳ್ಳಿ

ಈ ಗ್ರಾಮವು ಶ್ರೀರಾಂಪುರ (ಬೂದಿಹಾಳ್) ಹೋಬಳಿಯಿಂದ ಬೆಲಗೂರಿಗೆ ಹೋಗುವ ಮಾರ್ಗದಲ್ಲಿ ೧ ಕಿ.ಮೀ. ದೂರದಲ್ಲಿದೆ. ಇದರ ಸ್ಥಳನಾಮವು ಪ್ರಾಣಿವಾಚಿಯಾಗಿದೆ. ಅಲ್ಲದೆ ಇದು ಪ್ರಾಗೈತಿಹಾಸ ಸಂಸ್ಕೃತಿಯ ಹಿನ್ನೆಲೆಯಿಂದಲೂ ಬಂದಿರಬೇಕು ಎನಿಸುತ್ತದೆ.

### ಕಲ್ಲಾಸರೆಯಲ್ಲಿ ಕುಟ್ಟಿ ಮೂಡಿಸಿದ ಚಿತ್ರಗಳು

ಶ್ರೀರಾಂಪುರದಿಂದ ಗವಿರಂಗಾಪುರಕ್ಕೆ ಹೋಗುವ ಮಾರ್ಗದಲ್ಲಿ ಬಲಭಾಗಕ್ಕೆ ಹೊನ್ನರಾಜರಾಜೇಶ್ವರಿ ಗುಹಾದೇವಾಲಯವಿದ್ದು (ಇದನ್ನು ಸ್ಥಳೀಯರು ಹೊನ್ನತಮ್ಮ ದೇವಾಲಯ ಎಂದು ಕರೆಯುತ್ತಾರೆ ಹಾಗೂ ಈ ದೇವಾಲಯವು ಗೂಳಿಹಳ್ಳಿ (ಗ್ರಾಮಕ್ಕೆ ಸೇರಿದೆ) ಅದಕ್ಕೆ ಹೊಂದಿಕೊಂಡಂತೆ ಒಂದು ಕಲ್ಲಾಸರೆ ಇದೆ. ಈ ಕಲ್ಲಾಸರೆಯಲ್ಲಿ ಕಲ್ಲಿನಿಂದ ಕುಟ್ಟಿ ಮೂಡಿಸಿರುವ ಸುಮಾರು

೭ ಗೂಳಿ ಚಿತ್ರಗಳು ಕಂಡುಬರುತ್ತವೆ. ಅವುಗಳನ್ನು ಒಂದೇ ಸಾಲಿನಲ್ಲಿ ಚಿತ್ರಿಸಿದ್ದಾರೆ. ಅವುಗಳಲ್ಲಿ ಒಂದು ಗೂಳಿ ೬೪ ಸೆಂ.ಮೀ. ಉದ್ದ ೭೫ ಸೆಂ.ಮೀ. ಅಗಲವಿದೆ. ಮತ್ತೊಂದು ೫೫ ಸೆಂ.ಮೀ. ಉದ್ದ ೭೫ ಸೆಂ.ಮೀ. ಅಗಲವಿದೆ. ಈ ಗೂಳಿಚಿತ್ರಗಳು ಬಹುಶಃ ಬೃಹತ್ ಶಿಲಾಯುಗ ಕಾಲಘಟ್ಟಕ್ಕೆ ಸೇರಿದವುಗಳಾಗಿವೆ. ಈ ಗೂಳಿ ಚಿತ್ರಗಳ ಕಾರಣವಾಗಿ ಈ ಗ್ರಾಮಕ್ಕೆ ಗೂಳಿಹಳ್ಳಿ ಎಂಬುದಾಗಿ ಬಂದಿದೆ.

ಈ ಗ್ರಾಮದ ಪಶ್ಚಿಮ ದಿಕ್ಕಿಗಿರುವ 'ಸೂಜಿಕಲ್ ಅಮಾನಿಕೆರೆ'ಯ ದಕ್ಷಿಣ ದಿಕ್ಕಿನ ಪರಿಸರದಲ್ಲಿ ಸುಮಾರು ೧೦ ಬೃಹತ್ ಶಿಲಾ ಸಮಾಧಿಗಳು ಪತ್ತೆಯಾದವು ಇವುಗಳು ಶಿಲಾ ವೃತ್ತ ಮಾದರಿಗೆ ಸೇರಿವೆ. ಈ ಶಿಲಾಸಮಾಧಿಗಳ ರಚನೆಗೆ ಕರಿ ಕಾಡುಗಲ್ಲುಗಳನ್ನು ಬಳಸಿದ್ದಾರೆ.

### ದೊಡ್ಡಘಟ್ಟ

ದೊಡ್ಡಘಟ್ಟ ಗ್ರಾಮವು ಮಾಸದಕೆರೆ ಹೋಬಳಿಯ ಜಾನಕಲ್ಲು ಗ್ರಾಮಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿದೆ. 'ದೊಡ್ಡಘಟ್ಟ' ಸ್ಥಳನಾಮವು ಪ್ರಾಕೃತಿಕವಾದದು. ಘಟ್ಟ ಎಂಬುದು ಭೌಗೋಳಿಕ ಲಕ್ಷಣವನ್ನು ತಿಳಿಸುವ ಪದ. ಈ ಪದಕ್ಕೆ ಬೆಟ್ಟಗಳ ಸಾಲು, ಪರ್ವತ ಪಂಕ್ತಿ, ನದಿ, ಕೆರೆ ಮುಂತಾದವುಗಳಲ್ಲಿ ನೀರಿಗೆ ಇಳಿಯುವುದಕ್ಕಾಗಿ ಕಟ್ಟಿರುವ ಮೆಟ್ಟಿಲು – ಸೋಪಾನ ಎಂಬ ಅರ್ಥಗಳಿವೆ.[೬] ದೊಡ್ಡಘಟ್ಟ ಗ್ರಾಮವು ಪ್ರಾಕೃತಿಕವಾದ ಲಕ್ಷಣಗಳಿಂದ ಕೂಡಿದ್ದು, ಈ ಗ್ರಾಮದ ಪಶ್ಚಿಮ ದಿಕ್ಕಿಗೆ ಕರಡಿಕಲ್ಲು ಬೆಟ್ಟಗಳಿವೆ, ಅಲ್ಲದೆ ಈ ಗ್ರಾಮದ ಪೂರ್ವದ ದಿಕ್ಕಿನಲ್ಲಿ ಇಳಿಜಾರಾಗಿದ್ದು ಆ ಭಾಗದಲ್ಲಿ ಜನಿಗಿಹಳ್ಳ ಹರಿಯುತ್ತದೆ. ಈ ಮೇಲಿನ ಪ್ರಾಕೃತಿಕ ಲಕ್ಷಣಗಳಿಂದಾಗಿ ಈ ಗ್ರಾಮಕ್ಕೆ ದೊಡ್ಡಘಟ್ಟ ಎಂಬುದಾಗಿ ಬಂದಿದೆ.

ದೊಡ್ಡಘಟ್ಟ ಗ್ರಾಮದ ಪಶ್ಚಿಮ ದಿಕ್ಕಿಗೆ ಮುದ್ದನಕಲ್ಲು ಬೆಟ್ಟದಲ್ಲಿ ೫೦ ಬೃಹತ್ ಶಿಲಾಸಮಾಧಿಗಳು ಪತ್ತೆಯಾದವು. ಇವುಗಳು ಶಿಲಾವೃತ್ತಗಳಾಗಿವೆ. ಶಿಲಾಸಮಾಧಿಗಳ ರಚನೆಗೆ ಕೆಂಪು ಬೆಣಚು ಕಲ್ಲುಗಳನ್ನು ಬಳಸಿದ್ದಾರೆ. ಬೆಣಚುಕಲ್ಲು ಚಪ್ಪಡಿಗಳನ್ನು ಸ್ವಸ್ತಿಕ ಆಕಾರದಲ್ಲಿ ನಿರ್ಮಿಸಿ ಅದರಲ್ಲಿ ಶವಸಂಸ್ಕಾರ ಮಾಡಿ ನಂತರ ಸುತ್ತಲೂ ಕಲ್ಲು ಚಪ್ಪಡಿಗಳನ್ನು ನೆಟ್ಟಿದ್ದಾರೆ. ಅಲ್ಲದೆ ಕೆಲವು ಶಿಲಾವೃತ್ತಗಳಿಗೆ ಮಧ್ಯದಲ್ಲಿ ಚಿಕ್ಕ ಗಾತ್ರದ ಉರುಟು ಕಲ್ಲುಗಳು ಹಾಗೂ ಬಿಳಿಕಲ್ಲುಗಳನ್ನು ತುಂಬಿದ್ದಾರೆ. ಈ ಶಿಲಾಸಮಾಧಿಗಳ ರಚನೆಗೆ ಬೇಕಾದ ಕಲ್ಲು ಚಪ್ಪಡಿಗಳನ್ನು ಇಲ್ಲಿನ ಬೆಟ್ಟಗಳ ಬಂಡೆಗಳನ್ನು ಒಡೆದು ತಂದಿರುವುದು ಕಂಡುಬರುತ್ತದೆ. ಅಲ್ಲಲ್ಲಿ ಬಂಡೆಗಳನ್ನು ಸೀಳಿ / ಹೊಡೆದ ಗುರುತುಗಳು ಇವೆ. ಇಲ್ಲಿನ ಸಮಾಧಿಗಳ ರಚನೆಗೆ ಬಳಸಿರುವ ಕಲ್ಲು ಚಪ್ಪಡಿಗಳು ೧೫ ಅಡಿ ಉದ್ದ, ೭ ಅಡಿ ಅಗಲ, ೧.೫ ಅಡಿ ದಪ್ಪದಾಗಿವೆ. ಒಟ್ಟಾರೆ ಇಲ್ಲಿ ನೈಸರ್ಗಿಕವಾಗಿ ದೊರೆಯುವ ಶಿಲಾ ಸಂಪತ್ತನ್ನು ಬೃಹತ್ ಶಿಲಾಯುಗದ ಜನರು ತುಂಬಾ ಅಚ್ಚುಕಟ್ಟಾಗಿ ಬಳಸಿ ಕೊಂಡಿದ್ದಾರೆ. ಇಲ್ಲಿನ ಶಿಲಾಸಮಾಧಿಗಳಲ್ಲಿ ಕೆಲವನ್ನು ನಿಧಿಗಾಗಿ ಹಾಳು ಮಾಡಲಾಗಿದ್ದು ಅವುಗಳಲ್ಲಿ ಅಪಾರ ಪ್ರಮಾಣದ ಮಡಿಕೆ ಚೂರುಗಳು ದೊರೆತಿವೆ. ಅವುಗಳಲ್ಲಿ ಕಪ್ಪು, ಕೆಂಪು ಮತ್ತು ಕಪ್ಪು–ಕೆಂಪು, ಕೆಂಪು ಬಣ್ಣದ ಮಡಿಕೆಗಳ ಮೇಲೆ ಕಪ್ಪು ಬಣ್ಣವನ್ನು ಚುಮುಕಿಸಿ ಚಿತ್ರಿಸಿರುವುದು ಕಂಡುಬರುತ್ತದೆ. ಇಷ್ಟು ಪ್ರಮಾಣದ ಬೃಹತ್ ಶಿಲಾ ಸಮಾಧಿಗಳು ದೊರೆತಿರುವ ಈ ಘಟ್ಟ ಪ್ರದೇಶವು ಬಹುಶಃ ಬೃಹತ್ ಶಿಲಾಯುಗ ಸಂಸ್ಕೃತಿಯ ವಾಸ್ತವ್ಯದ ನೆಲೆ ಇರಬಹುದೆಂದು ತೋರುತ್ತದೆ.

### ಗೂಳಿಹಟ್ಟಿ ಭೋವಿಹಟ್ಟಿ

ದೊಡ್ಡಘಟ್ಟ ಗ್ರಾಮದಿಂದ ಸುಮಾರು ೩ ಕಿ.ಮೀ ದೂರದಲ್ಲಿರುವ ಗೂಳಿಹಟ್ಟಿ ಭೋವಿಹಟ್ಟಿ ಗ್ರಾಮವು ಮಾಡದಕೆರೆ ಹೋಬಳಿಗೆ ಸೇರಿದೆ. ಇದರ ಸ್ಥಳನಾಮವು ಜಾತಿ ವಾಚಿಯಾಗಿದ್ದು ಈ ಗ್ರಾಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬೋವಿ ಜನಾಂಗದವರಿದ್ದಾರೆ. ಈ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಗಿರಿಯಣ್ಣನವರ ಹೊಲದಲ್ಲಿ ४ ಬೃಹತ್ ಶಿಲಾಸಮಾಧಿಗಳು ಪತ್ತೆಯಾದವು. ಇವುಗಳು ಕಲ್ಲುವೃತ್ತ ಸಮಾಧಿಗಳ ಮಾದರಿಗೆ ಸೇರಿವೆ. ಅವುಗಳಲ್ಲಿ ಒಂದು ಶಿಲಾ ಸಮಾಧಿಯು ಸುಮಾರು ೧೧೧ ಅಡಿ ಸುತ್ತಳತೆಯನ್ನೂ ಹೊಂದಿದೆ. ಈ ಸಮಾಧಿಯ ಮಧ್ಯದಲ್ಲಿ ಬಳಸಿರುವ ಕಲ್ಲುಚಪ್ಪಡಿಯು ೧೦ ಅಡಿ ಉದ್ದ, ೧/೨ ಅಡಿ ದಪ್ಪ ಹೊಂದಿದ್ದು ತುಂಬಾ ಬೃಹದಾಕಾರದ ಸಮಾಧಿಯಾಗಿದೆ. ಸ್ಥಳೀಯ ಈ ಬೃಹತ್ ಶಿಲಾಸಮಾಧಿಗಳನ್ನು "ಪಾಂಡವರ ಗುತ್ತಿ" ಎಂದು ಕರೆಯುತ್ತಾರೆ.

### ಡಿ. ಮಲ್ಲಾಪುರ

ಡಿ. ಮಲ್ಲಾಪುರವು ದೊಡ್ಡಘಟ್ಟ ಗ್ರಾಮದಿಂದ ಕೇವಲ ೧ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಿಂದ ಮಾವಿನ ಕಟ್ಟೆ ಗ್ರಾಮಕ್ಕೆ ಹೋಗುವ ದಾರಿಯಲ್ಲಿ ಒಂದು ಹೊಲದಲ್ಲಿ ಶಿಲಾ ವೃತ್ತ ಮಾದರಿಯ ಒಂದು ಬೃಹತ್ ಶಿಲಾ ಸಮಾಧಿಯು ದೊರೆಯಿತು.

### ಬನಸೀಹಳ್ಳಿ

ಬನಸಿಹಳ್ಳಿಯು ದೊಡ್ಡಘಟ್ಟ ಗ್ರಾಮದಿಂದ ೨ ಕಿ.ಮೀ. ಅಂತರದಲ್ಲಿದೆ. ಬನಸಿಹಳ್ಳಿ ಎಂಬ ಸ್ಥಳನಾಮವು ನಿಸರ್ಗ ವಾಚಿಯಿಂದ ಕೂಡಿದೆ. ಈ ಗ್ರಾಮದ ದಕ್ಷಿಣ ದಿಕ್ಕಿನಲ್ಲಿರುವ

## ಹೊಸದುರ್ಗ ತಾಲೂಕಿನಲ್ಲಿ ಪತ್ತೆಯಾಗಿರುವ ಪ್ರಾಗೈತಿಹಾಸಿಕ ನೆಲೆಗಳು

| ಕ್ರ. ಸಂ | ಗ್ರಾಮದ ಹೆಸರು | ಹಳೆಯ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನವ/ತಾಮ್ರ ಶಿಲಾಯುಗ | ಬೃಹತ್ ಶಿಲಾಯುಗ | ಆದಿ ಇತಿಹಾಸ ಕಾಲ |
|---|---|---|---|---|---|---|
| ೧ | ಗರಗ | ✓ | | ✓ | | |
| ೨ | ತಣಿಗೆಕಲ್ಲು | | | ✓ | ✓ | |
| ೩ | ಕಿಟ್ಟದಾಳು | | | ✓ | ✓ | |
| ೪ | ಹಿಂಡೆದೇವರಹಟ್ಟಿ | | | ✓ | | |
| ೫ | ದುಗ್ಗಾವರ | | ✓ | ✓ | ✓ | |
| ೬ | ಜಾನಕಲ್ಲು | | ✓ | | ✓ | |
| ೭ | ಕೆಂಕೆರೆ | | | | ✓ | |
| ೮ | ದೊಡ್ಡಕಿಟ್ಟದಹಳ್ಳಿ | | | | ✓ | |
| ೯ | ಸಣ್ಣಕಿಟ್ಟದಹಳ್ಳಿ | | | | ✓ | |
| ೧೦ | ಬೆನಕನಹಳ್ಳಿ | | | | ✓ | |
| ೧೧ | ಹೊನ್ನೆನಹಳ್ಳಿ | | | | ✓ | |
| ೧೨ | ವೀರವ್ವನಾಗತಿಹಳ್ಳಿ | | | | ✓ | |
| ೧೩ | ಅಂಚಿಭಾರಿಹಟ್ಟಿ | | | | ✓ | |
| ೧೪ | ಕೆರೆಕೋಡಿಹಟ್ಟಿ | | | | ✓ | |
| ೧೫ | ಇಟ್ಟಿಗೆಹಳ್ಳಿ | | | | ✓ | |
| ೧೬ | ನಿರುವುಗಲ್ಲು | | | | ✓ | |
| ೧೭ | ಅತ್ತಿಮೊಗೆ | | | | ✓ | |
| ೧೮ | ಮಲ್ಲಾಪುರ | | | | ✓ | |
| ೧೯ | ಮಾಡದಕೆರೆ | | | | ✓ | |
| ೨೦ | ಬ್ಯಾಡರಹಳ್ಳಿ | | | | ✓ | |
| ೨೧ | ಬಲ್ಲಾಳಸಮುದ್ರ | | | | ✓ | |
| ೨೨ | ಹೊಸದುರ್ಗ | | | | ✓ | |
| ೨೩ | ಬನಸೀಹಳ್ಳಿ | | | | ✓ | |
| ೨೪ | ಸೂಜಿಗಲ್ಲು | | | | ✓ | |
| ೨೫ | ಗೂಳಿಹಳ್ಳಿ | | | | ✓ | |
| ೨೬ | ಕೆಲ್ಲೋಡು | | | | ✓ | |
| ೨೭ | ಗೂಳಿಹಟ್ಟಿ ಭೋವಿಹಟ್ಟಿ | | | | ✓ | |
| ೨೮ | ದೊಡ್ಡಘಟ್ಟ | | | | ✓ | |
| ೨೯ | ಲಂಬಾಣಿಹಟ್ಟಿ | | ✓ | | ✓ | |
| ೩೦ | ಡಿ. ಮಲ್ಲಾಪುರ | | | | ✓ | |



ಗರಗ ಗ್ರಾಮದಲ್ಲಿ ದೊರೆತ ಆದಿ ಹಳೆಶಿಲಾಯುಧ



ಮುತ್ತಿನಗಿರಿ ಬೆಟ್ಟದ ಕಲ್ಲಾಸರೆ



ಮುತ್ತಿನಗಿರಿ ಬೆಟ್ಟದ ಕಲ್ಲಾಸರೆಯ ವರ್ಣಚಿತ್ರ



ಸೂಜಿಗಲ್ಲು ಗ್ರಾಮದಲ್ಲಿ ದೊರೆತ ಬೃಹತ್ ಶಿಲಾಸಮಾಧಿ



ಕಲ್ಲಿನಿಂದ ಕುಟ್ಟಿ ಮೂಡಿಸಿದ ಗೂಳಿಚಿತ್ರ, ಗೂಳಿಹಟ್ಟಿ



ಬೃಹತ್ ಶಿಲಾಸಮಾಧಿ, ದೊಡ್ಡಘಟ್ಟ



ನೂತನ ಶಿಲಾಯುಧ, ತಣಿಗೆಕಲ್ಲು



ಬೃಹತ್ ಶಿಲಾ ಸಂಸ್ಕೃತಿಯ ಮಡಿಕೆ ಚೂರುಗಳು, ತಣಿಗೆಕಲ್ಲು



ನೂತನ ಶಿಲಾಯುಧ, ಕಿಟ್ಟದಾಳು



ಜಾನಕಲ್ಲಿನ ನಿಲಿಸುಗಲ್ಲು



ಕೆಂಕೆರೆಯ ಬೃಹತ್ ಶಿಲಾಸಮಾಧಿ



ಮಣ್ಣಿನ ಮುಸೆಗಳು, ದೊಡ್ಡಕಿಟ್ಟದಹಳ್ಳಿ



ನಿರುವುಗಲ್ಲು ಗ್ರಾಮದ ನಿಲಿಸುಗಲ್ಲು ಮಾದರಿ ಬೃಹತ್ ಶಿಲಾ ಸಮಾಧಿ

ಹೊಲದಲ್ಲಿ ೭ ಬೃಹತ್ ಶಿಲಾಸಮಾಧಿಗಳು ಪತ್ತೆಯಾಗಿವೆ. ಇವುಗಳು ಶಿಲಾವೃತ್ತ ಮಾದರಿಗೆ ಸೇರಿವೆ. ಇವುಗಳಲ್ಲಿ ಒಂದು ಶಿಲಾಸಮಾಧಿಯು ಸುಮಾರು ೧೬೫ ಅಡಿ ಸುತ್ತಳತೆಯನ್ನು ಹೊಂದಿದೆ. ಇಲ್ಲಿನ ಶಿಲಾಸಮಾಧಿಗಳ ರಚನೆಗೆ ಬಿಳಿ ಕಣಶಿಲೆಯನ್ನು ಬಳಸಿದ್ದು, ಕಲ್ಲು ಚಪ್ಪಡಿಗಳನ್ನು ಒಂದು ಶಿಲಾಸಮಾಧಿಯ ಸುತ್ತಲೂ ವೃತ್ತಾಕಾರವಾಗಿ ಬಳಸಿದ್ದಾರೆ. ಉಳಿದ ಶಿಲಾಸಮಾಧಿಗಳಿಗೆ ದುಂಡು ಶಿಲೆಗಳನ್ನು ಉಪಯೋಗಿಸಿದ್ದಾರೆ.

### ತಣಿಗೆ ಕಲ್ಲು

ತಣಿಗೆಕಲ್ಲು ಬನಸೀಹಳ್ಳಿಯಿಂದ ಉತ್ತರಕ್ಕೆ ಕೇವಲ ೨ ಕಿ.ಮೀ. ಅಂತರದಲ್ಲಿದೆ. ತಣಿಗೆಕಲ್ಲು ಎಂಬ ಸ್ಥಳನಾಮದಿಂದ ಇದೊಂದು ಪ್ರಾಗೈತಿಹಾಸ ನೆಲೆ ಎಂದು ಹೇಳಬಹುದು. ಈ ಗ್ರಾಮದ ಸಿದ್ಧಪ್ಪನ ಬೆಟ್ಟದ ಗವಿಯಲ್ಲಿ ಒಂದು ನೂತನ ಶಿಲಾಯುಧವನ್ನು ಪತ್ತೆಹಚ್ಚಲಾಯಿತು. ಇದನ್ನು ಹಸಿರು ಶಿಲೆಯಿಂದ ತಯಾರಿಸಲಾಗಿದ್ದು ಇದು ೧೬ ಸೆಂ.ಮೀ. ಉದ್ದ, ೬ ಸೆಂ.ಮೀ. ಅಗಲ ೪.೫ ಸೆಂ.ಮೀ. ದಪ್ಪದಾಗಿದೆ. ಈ ಶಿಲಾಯುಧ ದೊರೆತ ಪ್ರದೇಶದಲ್ಲಿ ನೂತನ ಶಿಲಾಯುಧ ಸಂಸ್ಕೃತಿಯ ಮಡಿಕೆ ಚೂರುಗಳು ದೊರೆತಿವೆ. ಅಲ್ಲದೆ ಇದೇ ಗವಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಕಪ್ಪು ಮತ್ತು ಕೆಂಪು, ಕಪ್ಪು–ಕೆಂಪು ಬಣ್ಣದ ಮಡಿಕೆ ಚೂರುಗಳು ಯಥೇಚ್ಚ ಪ್ರಮಾಣದಲ್ಲಿ ದೊರೆತಿವೆ. ಆ ಮಡಿಕೆಗಳಲ್ಲಿ ವಿವಿಧ ನಮೂನೆಗಳನ್ನು ಕಾಣಬಹುದು. ಅಲ್ಲದೆ ಈ ಗ್ರಾಮದ ಪ್ರಾರಂಭದಲ್ಲಿ ಗವಿಸಿದ್ದೇಶ್ವರ ದೇವಾಲಯದ ಪರಿಸರದಲ್ಲಿ ನಮ್ಮ ಕ್ಷೇತ್ರಕಾರ್ಯದಲ್ಲಿ ಒಂದು ಕಲ್ಲು ವೃತ್ತ ಮಾದರಿಯ ಬೃಹತ್ ಶಿಲಾ ಸಮಾಧಿಯು ಪತ್ತೆಯಾಯಿತು. ಆದರೆ ನಿಧಿಯ ಆಸೆಯಿಂದ ಕೆಲವು ಕಿಡಿಗೇಡಿಗಳು ಉಳಿದ ಶಿಲಾಸಮಾಧಿಗಳನ್ನು ಹಾಳು ಮಾಡಿದ್ದಾರೆ. ಒಟ್ಟಾರೆ ತಣಿಗೆಕಲ್ಲು ಗ್ರಾಮದ ಸಿದ್ದಪ್ಪನ ಬೆಟ್ಟದ ಗವಿಯಲ್ಲಿ ದೊರೆತ ಪ್ರಾಗೈತಿಹಾಸ ಸಾಕ್ಷಿಗಳಿಂದಾಗಿ ಈ ಪರಿಸರವು ನೂತನ ಹಾಗೂ ಬೃಹತ್ ಶಿಲಾಯುಗ ಕಾಲಘಟ್ಟ ಪ್ರಮುಖ ವಾಸ್ತವ್ಯದ ನೆಲೆ ಎಂದು ಹೇಳಬಹುದು.

### ಜಾನಕಲ್ಲು

ಹೊಸದುರ್ಗ ತಾಲೂಕಿನ ಪ್ರಾಗಿತಿಹಾಸ ನೆಲೆಗಳಲ್ಲಿ ಜಾನಕಲ್ಲು ಒಂದಾಗಿದೆ. ಇದು ಮಾಡದಕೆರೆ ಹೋಬಳಿಯಲ್ಲಿದೆ. ೧೯೫೬ರಲ್ಲಿ ಡಾ॥ ಎಂ. ಶೇಷಾದ್ರಿಯವರು ಜಾನಕಲ್ಲು ಗ್ರಾಮದಲ್ಲಿ ಆದಿಹಳೇ ಶಿಲಾಯುಧಗಳನ್ನು ಪತ್ತೆ ಹಚ್ಚಿದ್ದರು. ನಂತರದಲ್ಲಿ ಈ ಗ್ರಾಮದ ಪರಿಸರದಲ್ಲಿ ಮತ್ತಾವುದೇ ಪ್ರಾಗೈತಿಹಾಸ ಅವಶೇಷಗಳು ಪತ್ತೆಯಾಗಿರಲಿಲ್ಲ. ನಂತರದಲ್ಲಿ ಈ ಗ್ರಾಮದ ಪರಿಸರದಲ್ಲಿ ನಾನು ಕೈಗೊಂಡ ನಿರಂತರ ಕ್ಷೇತ್ರಕಾರ್ಯದ ಫಲವಾಗಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಪತ್ತೆಹಚ್ಚಿದ್ದೇನೆ. ಶಂಕರ ಲಿಂಗೇಶ್ವರ ದೇವಾಲಯದ ಹಿಂಭಾಗದಲ್ಲಿರುವ ಚಿಕ್ಕಬೆಟ್ಟದಲ್ಲಿ ಸೂಕ್ಷ್ಮ ಶಿಲಾ ಸಂಸ್ಕೃತಿಗೆ ಸೇರಿದ ಚಿಕ್ಕ ಆಯುಧಗಳನ್ನು ಪತ್ತೆಹಚ್ಚಲಾಯಿತು. ಈ ಗ್ರಾಮದ ಮುಖ್ಯ ಬೆಟ್ಟದಲ್ಲಿ ಪಾಳೆಯಗಾರರ ಕಾಲದ ಕೋಟೆ ಇದ್ದು ಅದರ ಹಿಂಭಾಗದಲ್ಲಿ ಸುಮಾರು ನಾಲ್ಕು ಬೃಹತ್ ಶಿಲಾ ಸಮಾಧಿಗಳು ಕಂಡು ಬಂದವು. ಇವುಗಳಲ್ಲಿ ಒಂದು ಶಿಲಾ ಸಮಾಧಿಯು ನಿಲಿಸುಗಲ್ಲು (Menhir) ಮಾದರಿಗೆ ಸೇರಿದ್ದು ಇದು ಸುಮಾರು ೨೦ ಅಡಿ ಎತ್ತರ ಇದ್ದು ೭ ಅಡಿ ಅಗಲವಿದೆ. ಇದರ ಸುತ್ತಲೂ ಕಲ್ಲು ಚಪ್ಪಡಿಗಳನ್ನು ನೆಟ್ಟಿದ್ದು ಬಹುಭಾಗ ಚಪ್ಪಡಿಗಳು ಹಾಳಾಗಿ ಹೋಗಿವೆ. ಸ್ಥಳೀಯರು ಇದನ್ನು ನಿಲುವುಗಲ್ಲು ಎಂದು ಗುರುತಿಸುತ್ತಾರೆ. ಇನ್ನುಳಿದ ಮೂರು ಶಿಲಾ ಸಮಾಧಿಗಳು ಶಿಲಾವೃತ್ತ ಮಾದರಿಗೆ ಸೇರಿದ್ದು ಅವುಗಳು ಇದರ ಸಮೀಪದಲ್ಲೇ ಇವೆ.

### ಲಂಬಾಣಿಹಟ್ಟಿ

ಜಾನಕಲ್ಲು ಗ್ರಾಮದಿಂದ ಸುಮಾರು ೫ ಕಿ.ಮೀ ಅಂತರದಲ್ಲಿರುವ ಲಂಬಾಣಿಹಟ್ಟಿ ಗ್ರಾಮದ ದಕ್ಷಿಣ ದಿಕ್ಕಿನ ಒಂದು ಹೊಲದಲ್ಲಿ ೧೦ ಬೃಹತ್ ಶಿಲಾ ಸಮಾದಿಗಳು ಪತ್ತೆಯಾದವು ಶಿಲಾವೃತ್ತ, ಸಮಾಧಿಗಳಾದ ಇವುಗಳ ರಚನೆಗೆ ಬೃಹದಾಕಾರದ ಬಿಳಿ ಕಣಶಿಲೆಯ ದುಂಡು ಕಲ್ಲುಗಳನ್ನು ಬಳಸಿದ್ದಾರೆ.

### ಕೆಂಕೆರೆ

ಮಾಡದಕೆರೆ ಹೋಬಳಿಗೆ ಸೇರಿದ ಕೆಂಕೆರೆ ಗ್ರಾಮವು ಮಾಡದಕೆರೆಯಿಂದ ಹೊರಕೆರೆ ದೇವಪುರಕ್ಕೆ ಹೋಗುವ ಮಾರ್ಗದಲ್ಲಿ ಬಲಭಾಗಕ್ಕೆ ಬರುತ್ತದೆ. ಈ ಗ್ರಾಮದ ದಕ್ಷಿಣ ದಿಕ್ಕಿಗೆ ಗಂಗಾ ಕೊಳದ ಬದಿಯ ಹೊಲದಲ್ಲಿ ೭ ಬೃಹತ್ ಶಿಲಾ ಸಮಾಧಿಗಳು ಪತ್ತೆಯಾದವು. ಇವುಗಳು ಶಿಲಾವೃತ್ತ ಪ್ರಕಾರಕ್ಕೆ ಸೇರಿವೆ. ಈ ಶಿಲಾವೃತ್ತಗಳ ರಚನೆಗೆ ಕಾಡುಗಲ್ಲು ಅಥವಾ ಕರಿಕಲ್ಲುಗಳನ್ನು ವೃತ್ತಾಕಾರವಾಗಿ ಬಳಸಿ ಅವುಗಳ ಮಧ್ಯೆ ಚಿಕ್ಕ ಗಾತ್ರದ ಉರುಟುಕಲ್ಲು, ಬೆಣಚುಕಲ್ಲುಗಳನ್ನು ತುಂಬಾ ಪ್ರಮಾಣದಲ್ಲಿ ತುಂಬಿದ್ದಾರೆ.

ಈ ಶಿಲಾವೃತ್ತಕ್ಕೆ ಬಳಸಿದ ಕಾಡುಗಲ್ಲುಗಳು ಅತ್ಯಂತ ದೊಡ್ಡವು ಹಾಗೂ ಚಿಕ್ಕ ಗಾತ್ರದವುಗಳು ಇವೆ. ಇದರಲ್ಲಿ ಅತ್ಯಂತ ದೊಡ್ಡ ಶಿಲಾ ಸಮಾಧಿ ೮೮ ಅಡಿ ಸುತ್ತಳತೆಯನ್ನು ಹೊಂದಿದೆ. ಚಿಕ್ಕ ಶಿಲಾಸಮಾಧಿಯು ೩೦ ಅಡಿ ಇದೆ. ಇದೇ ಗ್ರಾಮದ ಪೂರ್ವದಿಕ್ಕಿನ ಮಂಟಲ್ ಕಣಿವೆಯಲ್ಲಿ

ಅಸಂಖ್ಯಾತ ಬೃಹತ್ ಶಿಲಾಸಮಾಧಿಗಳನ್ನು ಪತ್ತೆಹಚ್ಚಲಾಯಿತು. ಈ ಕಣಿವೆಯ ಪಶ್ಚಿಮ ದಿಕ್ಕಿನಲ್ಲಿ ಗುಂಡಿಹಳ್ಳ ಹರಿಯುತ್ತದೆ. ಈ ಗುಂಡಿಹಳ್ಳವು ಹೊಳಲ್ಕೆರೆ ತಾಲೂಕು ಹೊರಕೆರೆ ದೇವರಪುರ ಗ್ರಾಮದ ಸಮೀಪದಲ್ಲಿ ಹುಟ್ಟಿ ಗೂಳಿಹೊಸಹಳ್ಳಿ, ದೊಡ್ಡಕಿಟ್ಟದಹಳ್ಳಿ, ಸಣ್ಣಕಿಟ್ಟದಹಳ್ಳಿ, ಕೆಂಕೆರೆ ಗ್ರಾಮಗಳ ಮೂಲಕ ಹಾದು ವೇದಾವತಿ ನದಿಯನ್ನು ಸೇರುತ್ತದೆ. ಕೆಂಕೆರೆ ಗ್ರಾಮದ ಮಂಟಲ್ ಕಣಿವೆಯಲ್ಲಿರುವ ಬೃಹತ್ ಶಿಲಾಸಮಾಧಿಗಳು ಶಿಲಾವೃತ್ತ ಮಾದರಿಗೆ ಸೇರಿವೆ. ನಿಧಿಗಾಗಿ ಕೆಲವು ಕಿಡಿಗೇಡಿಗಳು ೪ ಬೃಹತ್ ಶಿಲಾಸಮಾಧಿಗಳನ್ನು ಹಾಳು ಮಾಡಿದ್ದಾರೆ. ಈ ಹಾಳಾದ ಶಿಲಾಸಮಾಧಿಗಳ ಭಾಗದಲ್ಲಿ ಕಪ್ಪು, ಕೆಂಪು ಮತ್ತು ಕಪ್ಪು–ಕೆಂಪು ಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಅಲ್ಲದೇ ಕಬ್ಬಿಣದ ಸಲಕರಣೆಗಳು ದೊರೆತಿರುವುದಾಗಿ ಸ್ಥಳೀಯರು ಹೇಳುತ್ತಾರೆ. ಈ ಪ್ರಾಚ್ಯಾವಶೇಷಗಳ ಅನ್ವೇಷಣೆಗಳ ಹಿನ್ನೆಲೆಯಲ್ಲಿ ಕೆಂಕೆರೆ ಪರಿಸರವು ಬೃಹತ್ ಶಿಲಾಯುಗ ಸಂಸ್ಕೃತಿಯಲ್ಲಿ ಒಂದು ದೊಡ್ಡ ನೆಲೆ ಎಂದು ಹೇಳಬಹುದು.

### ದೊಡ್ಡಕಿಟ್ಟದಹಳ್ಳಿ

ಕೆಂಕೆರೆ ಗ್ರಾಮದಿಂದ ಮುಂದೆ ಸಾಗಿದರೆ ದೊಡ್ಡ ಕಿಟ್ಟದಹಳ್ಳಿ ಇದೆ. ಇದರ ಸ್ಥಳನಾಮದ ಬಗ್ಗೆ ಗಮನಹರಿಸಿದಾಗ ಇದರಲ್ಲಿ ಕಿಟ್ಟ ಎಂಬ ಪದದ ಅರ್ಥ ಕೃಷ್ಣ ಎಂದೂ, ಹಾಗಂದರೆ ಕಬ್ಬಿಣ ಎಂಬುದಾಗಿ ಹೇಳಲಾಗಿದೆ.[೭] ಮತ್ತೊಂದೆಡೆ ಕಿಟ್ಟ ಎಂಬುದಕ್ಕೆ ಲೋಹಗಳನ್ನು ಅದುರುಗಳಿಂದ ಪ್ರತ್ಯೇಕಿಸುವಾಗ, ಕುಲುಮೆಗಳಿಂದ ಹೊರ ಹರಿಯುವ, ಅದುರುಗಳಲ್ಲಿನ ಅಶುದ್ಧತೆಗಳನ್ನೊಳಗೊಂಡ, ಒಂದು ದ್ರವರೂಪ ವಸ್ತು (ಸ್ಲ್ಯಾಗ್). ಅದುರು ಹಾಗೂ ಅಪಕರ್ಷಣಕಾರಿ ಮತ್ತು ಸಾವುಕ ವಸ್ತುಗಳ (ಫ್ಲಕ್ಸ್) ಮಿಶ್ರಣವನ್ನು ಕುಲುಮೆಯೊಳಗಡೆ ಚೆನ್ನಾಗಿ ಕಾಯಿಸಿದಾಗ ಲೋಹ ದ್ರವ ರೂಪದಲ್ಲಿ ಪ್ರತ್ಯೇಕಗೊಳ್ಳುತ್ತದೆ. ಸ್ರಾವಕ ವಸ್ತು ಅದುರಿನ ಕಲ್ಮಷ ಮತ್ತು ಇಂಧನದ ಬೂದಿಯೊಡನೆ ಸಂಯೋಗಹೊಂದಿ ಒಂದು ದ್ರವವಾಗುವುದು ಅದೇ ಕಿಟ್ಟ.[೮] ಒಟ್ಟಾರೆ ಕಿಟ್ಟ ಎಂಬುದು ಲೋಹ ಸಂಪತ್ತನ್ನು ಸೂಚಿಸುವ ಅಥವಾ ಅದನ್ನು ಉತ್ಪಾದಿಸುವ / ತಯಾರಿಸುವ ಕುರುಹನ್ನು ನಮಗೆ ಸೂಚಿಸುವಂತಿದೆ. ದೊಡ್ಡಕಿಟ್ಟದ ಹಳ್ಳಿಯು ಲೋಹ ತಯಾರಿಕೆಯ ನೆಲೆಯಾಗಿದೆ. ಈ ಗ್ರಾಮದ ಬಹುಭಾಗದಲ್ಲಿ ಕಬ್ಬಿಣದ ಕುಲುಮೆಗಳ ಅವಶೇಷಗಳಿದ್ದು ಈ ಹಿನ್ನೆಲೆಯಲ್ಲಿ ನಮಗೆ ಪುಷ್ಟಿ ದೊರೆಯುತ್ತದೆ. ಕುಲುಮೆಗಳ ಪ್ರದೇಶದಲ್ಲಿ ಕಿಟ್ಟದ ಅವಶೇಷ ಅಪಾರ ಪ್ರಮಾಣದಲ್ಲಿದೆ. ಇದಲ್ಲದೆ ಮಣ್ಣಿನ ಮೂಸೆಗಳು (ಕೊಳವೆಗಳು) ದೊರೆತಿವೆ. ಹೀಗಾಗಿ ದೊಡ್ಡಕಿಟ್ಟದಹಳ್ಳಿಯು ಒಂದು ಕಬ್ಬಿಣ ತಯಾರಿಕಾ ನೆಲೆಯಾಗಿದ್ದು ಇದರ ಸ್ಥಳನಾಮ ಇದರ ಹಿನ್ನೆಲೆಯಿಂದಲೇ ಬಂದಿದೆ.

ದೊಡ್ಡಕಿಟ್ಟದಹಳ್ಳಿಯ ಉತ್ತರದಿಕ್ಕಿನ ಒಂದು ಹೊಲದಲ್ಲಿ ೪ ಬೃಹತ್ ಶಿಲಾಸಮಾಧಿಗಳು ಪತ್ತೆಯಾದವು. ಇವುಗಳು ಶಿಲಾವೃತ್ತ ಸಮಾಧಿಗಳು ಇವುಗಳು ಶಿಲಾವೃತ್ತ ಮಾದರಿಗೆ ಸೇರಿವೆ. ಇವುಗಳ ರಚನೆಗೆ ಕಾಡುಗಲ್ಲು / ಕರಿಕಲ್ಲುಗಳನ್ನು ಬಳಸಿದ್ದಾರೆ. ದೊಡ್ಡಕಿಟ್ಟದಹಳ್ಳಿಯಲ್ಲಿ ದೊರೆತಿರುವ ಕುಲುಮೆಗಳ ಅವಶೇಷಗಳು ಹಾಗೂ ಕಿಟ್ಟದ ಅವಶೇಷಗಳು ಸುಟ್ಟ ಮಣ್ಣಿನ ಮೂಸೆಗಳು ಒಟ್ಟಾರೆ ಈ ಲೋಹ ತಯಾರಿಕಾ ನೆಲೆಯ ಇತಿಹಾಸವು ಇಲ್ಲಿಯೇ ದೊರೆತಿರುವ ಬೃಹತ್ ಶಿಲಾಯುಗ ಕಾಲಘಟ್ಟದ್ದಿರಬಹುದೆಂದು ಕಂಡುಬರುತ್ತದೆ.

### ಸಣ್ಣಕಿಟ್ಟದ ಹಳ್ಳಿ

ದೊಡ್ಡಕಿಟ್ಟದ ಹಳ್ಳಿಯ ಪೂರ್ವಭಾಗದಲ್ಲಿ ಗುಂಡಿಹಳ್ಳಿ ಹರಿಯುತ್ತದೆ. ಅದರ ಪೂರ್ವಭಾಗದಲ್ಲಿರುವುದೇ ಸಣ್ಣಕಿಟ್ಟದಹಳ್ಳಿ. ಈ ಗ್ರಾಮದಲ್ಲಿ ಅಲ್ಲಲ್ಲಿ ಕುಲುಮೆ, ಕಿಟ್ಟ ಹಾಗೂ ಸುಟ್ಟ ಮಣ್ಣಿನ ಅವಶೇಷಗಳು ಕಂಡುಬರುತ್ತವೆ. ಅಲ್ಲದೇ ಈ ಗ್ರಾಮದಲ್ಲಿ ಕಪ್ಪು ಬಣ್ಣದ ದುಂಡು ಶಿಲೆಗಳನ್ನು ಬಳಸಿ ನಿರ್ಮಿಸಿರುವ ಶಿಲಾವೃತ್ತ ಮಾದರಿಯ ಬೃಹತ್ ಶಿಲಾ ಸಮಾಧಿಗಳು ದೊರೆತಿದ್ದು ಅವುಗಳಲ್ಲಿ ೬ ಬೃಹತ್ ಶಿಲಾ ಸಮಾಧಿಗಳು ಉಳಿದಿವೆ.

### ನಿರುವುಗಲ್ಲು

ಮತ್ತೋಡು ಗ್ರಾಮದಿಂದ ಮುಂದೆ ಸಾಗಿದರೆ ಕಾರೇಹಳ್ಳಿ ಇದೆ. ಇದು ಹೊಸ ಗ್ರಾಮವಾಗಿದೆ. (ಚೆರಾಕ್ ಗ್ರಾಮ). ಇದರ ಹಳೇ ಊರು (ಬೇಚರಾಕ್ ಗ್ರಾಮ) ನಿರುವುಗಲ್ಲು ಎಂದೂ, ಇದು ವೇದಾವತಿ ನದಿಯ ತೀರದಲ್ಲಿದೆ. ಇದರ ಸ್ಥಳನಾಮವು ವಿಶೇಷತೆಯಿಂದ ಕೂಡಿದ್ದು ಪ್ರಾಗೈತಿಹಾಸ ಸಂಸ್ಕೃತಿಯಿಂದ ನಿಷ್ಪನ್ನಗೊಂಡಿದೆ. ಈ ಬೇಚರಾಕ್ ಗ್ರಾಮವು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿದೆ. ಈ ಗ್ರಾಮದಲ್ಲಿ ಪ್ರಾಚೀನ ಕಾಲದ ಹರಿಹರೇಶ್ವರ ದೇವಾಲಯವಿದೆ. ಈ ದೇವಾಲಯದ ಎಡಭಾಗದಲ್ಲಿ ಸುಮಾರು ೨೦ ಅಡಿ ಎತ್ತರದ ಬೃಹತ್ ಶಿಲಾಯುಗ ಕಾಲಘಟ್ಟದ ನಿಲಸುಗಲ್ಲು ಇದೆ. ಬಿಳಿ ಕಣಶಿಲೆಯಲ್ಲಿದೆ. ಆದ್ದರಿಂದ ನಿಲಸುಗಲ್ಲು > ನಿಲುವುಗಲ್ಲು > ನಿರುವುಗಲ್ಲು ಎಂಬುದಾಗಿ ಸ್ಥಳನಾಮ ನಿಷ್ಪತ್ತಿಯನ್ನು ಕಾಣಬಹುದು. ನಿಲಸುಗಲ್ಲು ಇರುವ ಪ್ರದೇಶದಲ್ಲಿ ಸುಮಾರು ೨೦ ಬೃಹತ್ ಶಿಲಾ ಸಮಾಧಿಗಳು ಪತ್ತೆಯಾದವು ಇವುಗಳು ಶಿಲಾವೃತ್ತ ಮಾಧರಿಗೆ ಸೇರಿವೆ. ಈ ಶಿಲಾಸಮಾಧಿಗಳ ರಚನೆಗೆ ದುಂಡು ಹಸಿರು ಶಿಲೆಗಳನ್ನು, ಕೆಲವಕ್ಕೆ ಬಿಳಿಕಣಶಿಲೆಯನ್ನು ಬಳಸಿದ್ದಾರೆ.



ಹೊಸದುರ್ಗದ ಕುಮಾರನ ಕಣಿವೆಯ ನಿಲಿಸುಗಲ್ಲು

ಶಿಲಾವೃತ್ತಗಳ ಮಧ್ಯಭಾಗದಲ್ಲಿ ಚಿಕ್ಕಗಾತ್ರದ ಬಿಳಿಕಲ್ಲುಗಳನ್ನು ಹಾಗೂ ಬೆಣಚು ಕಲ್ಲುಗಳನ್ನು ತುಂಬಿದ್ದಾರೆ.

### ಅತ್ತಿಮೊಗೆ

ಮಾಡದಕೆರೆ ಹೋಬಳಿಗೆ ಸೇರಿರುವ ಈ ಗ್ರಾಮದ ದಕ್ಷಿಣ ದಿಕ್ಕಿನ ಒಂದು ಚಿಕ್ಕ ಬೆಟ್ಟದಲ್ಲಿ "ಅಡುಗೋಲಜ್ಜಿ ಗುಂಡು" ಎಂದು ಕರೆಯಲ್ಪಡುವ ಮೂರು ದೊಡ್ಡದಾದ ಕಲ್ಲುಗುಂಡುಗಳಿವೆ. ಅದು ಹಿಡಂಬಿಯ ಗುಂಡು ಎಂದು ಕರೆಯಬೇಕಾದದ್ದು ಜನಪದ ಭಾಷೆಯಲ್ಲಿ 'ಅಡುಗೋಲಜ್ಜಿ ಗುಂಡು' ಎಂಬುದಾಗಿದೆ. ಭೀಮನ ಹೆಂಡತಿ ಹಿಡಂಬಿಯು ಇಲ್ಲಿ ಮೂರು ಒಲೆಗುಂಡುಗಳನ್ನು ಹೂಡಿ ಅಡುಗೆ ಮಾಡಿದಳು ಎಂದು ಸ್ಥಳೀಯರಲ್ಲಿಯ ಐತಿಹ್ಯ. ಪಾಂಡವರ ಕುರಿತ ಐತಿಹ್ಯವಿರುವ ಈ ಪರಿಸರದಲ್ಲಿ ಕೆಲವು ಬೃಹತ್ ಶಿಲಾಸಮಾಧಿಗಳು ಕಂಡುಬರುತ್ತವೆ. ಅವುಗಳು ಶಿಲಾವೃತ್ತ ಪ್ರಕಾರಕ್ಕೆ ಸೇರಿವೆ.

### ಮಲ್ಲಾಪುರ

ಮಾಡದಕೆರೆ ಹೋಬಳಿಗೆ ಸೇರಿರುವ ಮಲ್ಲಾಪುರ ಗ್ರಾಮವು ಗುಂಡಿಹಳ್ಳದ ಪಶ್ಚಿಮ ದಿಕ್ಕಿನಲ್ಲಿದೆ. ಈ ಗ್ರಾಮದ ಉತ್ತರ ದಿಕ್ಕಿನಲ್ಲಿಯ ಕ್ಷೇತ್ರಕಾರ್ಯದಲ್ಲಿ ಅಸಂಖ್ಯಾತ ಬೃಹತ್ ಶಿಲಾಸಮಾಧಿಗಳು ಪತ್ತೆಯಾದವು (ಸುಮಾರು ೩೦ ಬೃಹತ್



ಅಡುಗೋಲಜ್ಜಿ ಗುಂಡುಗಳು, ಅತ್ತಿಮೊಗೆ

ಶಿಲಾಸಮಾಧಿಗಳು). ಈ ಶಿಲಾ ಸಮಾಧಿಗಳು ವೃತ್ತ ಮಾದರಿಗೆ ಸೇರಿವೆ. ಇವುಗಳ ರಚನೆಗೆ ಕಪ್ಪುಶಿಲೆ, ಬಿಳಿಕಣಶಿಲೆ ಹಾಗೂ ಅದಿರು ಕಲ್ಲುಗಳನ್ನು ಬಳಸಿದ್ದಾರೆ. ಆದರೆ ಈ ಪ್ರದೇಶದಲ್ಲಿ ಇತ್ತೀಚೆಗೆ ಗಣಿಗಾರಿಕೆ ನಡೆಯುತ್ತಿದ್ದು ಬಹುತೇಕ ಶಿಲಾ ಸಮಾಧಿಗಳು ಹಾಳಾಗಿವೆ.

### ಮಾಡದಕೆರೆ

ಮಾಡದಕೆರೆಯು ಹೊಸದುರ್ಗ ತಾಲೂಕಿನ ಹೋಬಳಿ ಕೇಂದ್ರವಾಗಿದೆ. ಮಾಡದಕೆರೆಯ ಗುಂಡಿಹಳ್ಳದ ಪೂರ್ವದ ಭಾಗದಲ್ಲಿ ಸತೀಶ್ ಎಂಬುವವರ ಹೊಲದ ಬದಿಯಲ್ಲಿ ಸುಮಾರು ೪ ಬೃಹತ್ ಶಿಲಾಸಮಾಧಿಗಳು ಪತ್ತೆಯಾದವು ಇವುಗಳು ಶಿಲಾವೃತ್ತ ಪ್ರಕಾರಕ್ಕೆ ಸೇರಿವೆ.

### ಬ್ಯಾಡರಹಳ್ಳಿ

ಕಿಟ್ಟದಾಳ್ ಗ್ರಾಮದಿಂದ ಚಿಕ್ಕಬ್ಯಾಲದ ಕೆರೆಗೆ ಹೋಗುವ ಮಾರ್ಗದಲ್ಲಿ ೩ ಕಿ.ಮೀ. ಅಂತರದಲ್ಲಿರುವುದೇ ಬ್ಯಾಡರಹಳ್ಳಿ ಈ ಗ್ರಾಮದಲ್ಲಿ ೨ ಬೃಹತ್ ಶಿಲಾ ಸಮಾಧಿಗಳು ದೊರೆತವು.

### ಕಿಟ್ಟದಾಳು

ಮತ್ತೋಡು ಹೋಬಳಿ ಕಿಟ್ಟದಾಳು ಗ್ರಾಮದ ದಕ್ಷಿಣ ದಿಕ್ಕಿನ ಭಾಗದಲ್ಲಿ ಹಾಳೂರು ಎಂದು ಕರೆಯಲ್ಪಡುವ ಪ್ರಾಚೀನ ನಿವೇಶನವೊಂದು ಪತ್ತೆಯಾಯಿತು. ಇಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಒಂದು ಕೈಗೊಡಲಿ ದೊರೆಯಿತು. ಈ ಶಿಲಾಯುಧವು ಕಪ್ಪು ಶಿಲೆಯಿಂದ ರಚನೆಯಾಗಿದೆ.

### ಹೊಸದುರ್ಗ

ಪಾಳೆಯಗಾರರ ಚರಿತ್ರೆಯಲ್ಲಿ ಮಾತ್ರ ಗುರುತಿಸಿ ಕೊಂಡಿದ್ದ ಹೊಸದುರ್ಗವು ಪ್ರಸ್ತುತ ಕ್ಷೇತ್ರಕಾರ್ಯದಿಂದಾಗಿ ಇಲ್ಲಿನ ಪ್ರಾಚೀನತೆಯು ಪ್ರಾಗೈತಿಹಾಸದ ಕಾಲಘಟ್ಟಕ್ಕೆ ಹೋಯಿತು. ಹೊಸದುರ್ಗದ ಚನ್ನಸಮುದ್ರದಿಂದ ಕುಮಾರನ

ಕಣಿವೆ ಪರಿಸರದಲ್ಲಿ ೫ ನಿಲುಸುಗಲ್ಲು (Menhair) ಮಾದರಿ ಬೃಹತ್ ಶಿಲಾ ಸಮಾಧಿಗಳು ಪತ್ತೆಯಾಗಿವೆ.

## ಉಪಸಂಹಾರ

ಒಟ್ಟಾರೆ ಹೊಸದುರ್ಗ ತಾಲೂಕು ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ಸಂಸ್ಕೃತಿಯಲ್ಲಿ ತನ್ನದೆ ಆದ ಮಹತ್ವದ ಪಾತ್ರವನ್ನು ವಹಿಸುತ್ತದೆ. ಈ ಮೇಲೆ ವಿವರಿಸಿದ ಎಲ್ಲಾ ನೆಲೆಗಳು ನಿರಂತರವಾಗಿ ನಾನು ಕೈಗೊಂಡ ಕ್ಷೇತ್ರಕಾರ್ಯದ ಫಲವಾಗಿ ಮೊಟ್ಟ ಮೊದಲಿಗೆ ಈ ಪ್ರಬಂಧದಲ್ಲಿ ಅನಾವರಣ ಗೊಂಡಿವೆ.

[**ಕೃತಜ್ಞತೆ:**– ಹೊಸದುರ್ಗ ತಾಲೂಕಿನಲ್ಲಿ ಗ್ರಾಮವಾರು ಕ್ಷೇತ್ರಕಾರ್ಯ ಕೈಗೊಂಡು ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆಹಚ್ಚುವಾಗ ಅಲ್ಲಿನ ಸ್ಥಳೀಯರು ಹಲವು ವಿಧದಲ್ಲಿ ನನಗೆ ಸಹಕಾರ ನೀಡಿದ್ದಾರೆ. ಅವರಲ್ಲಿ ಕೆಲ ಪ್ರಮುಖರನ್ನು ನೆನೆವುದು ಸ್ತುತ್ಯಾರ್ಹವಾಗಿದೆ. ದುಗ್ಗಾವರದ ಆತ್ಮೀಯ ಸ್ನೇಹಿತ ಬಿ.ಪಿ. ಸಂತೋಷ್ ಕುಮಾರ್, ಜಾನಕಲ್ಲಿನ ಸಂತೋಷ್, ತಣಿಗೆಕಲ್ಲಿನ ಕಾಲೇಜು ವಿದ್ಯಾರ್ಥಿಗಳಾದ ಜೆ.ಎಸ್. ಮಹಂತೇಶ್, ಟಿ.ಎಸ್. ಶಾಂತ್‌ಕುಮಾರ್, ಟಿ.ಎಸ್. ಶಶಿಕುಮಾರ್, ಟಿ.ಆರ್. ಪ್ರಸನ್ನ, ಬೆಲಗೂರಿನ ಸಂತೋಷ್, ಬಿ.ಟಿ. ಕುಮಾರ್, ಸೂಜಿಗಲ್ಲಿನ ಪರಣ್ಣ, ಅಂಚಿಬಾರಿಹಟ್ಟಿಯ ಪರಮೇಶ್ವರಪ್ಪ, ಕೆಂಕೆರೆಯ ಕೆ.ಎಸ್. ದ್ಯಾಮಪ್ಪ, ಮಾಡದಕೆರೆಯ ಸತೀಶ್, ಇವರುಗಳಿಗೆ, ನನ್ನ ಪ್ರೀತಿಯ ಗೆಳೆಯ ಆರ್.ಎಸ್. ಉಮೇಶ, ಸಹೋದರ ಆರ್. ವಿಶ್ವನಾಥ, ನನಗೆ ಸಂಶೋಧನೆಗೆ ಅವಕಾಶ ಮಾಡಿಕೊಟ್ಟು ಸೂಕ್ತ ಮಾರ್ಗದರ್ಶನ ನೀಡುತ್ತಿರುವ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ॥ ಎಸ್.ವೈ. ಸೋಮಶೇಖರ್, ಈ ಎಲ್ಲಾ ಮಹನೀಯರಿಗೆ ಹೃದಯ ಪೂರ್ವಕವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.]

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ರಾಮದಾಸರೆಡ್ಡಿ .ಎಸ್.ಜಿ., ೨೦೦೯, **ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ ಅಧ್ಯಯನ,** ಪುಟ ೬.

೨. ಅದೇ.

೩. ಶಿವತಾರಕ್ .ಕೆ.ಬಿ., ೨೦೦೧, **ಕರ್ನಾಟಕದ ಪುರಾತತ್ವ ನೆಲೆಗಳು,** ಪುಟ ೨೬೫.

೪. ಅಜೇಯಕುಮಾರ .ಎ.ಹೆಚ್., ೨೦೦೮, **ಜಗಳೂರು ತಾಲೂಕಿನ ಸ್ಥಳನಾಮಗಳು** (ಅಪ್ರಕಟಿತ ಎಂ.ಫಿಲ್ ನಿಬಂಧ), ಮದರಾಸು ವಿಶ್ವವಿದ್ಯಾಲಯ, ಪುಟ ೫೮.

೫. ಸೂಜಿಗಲ್ಲು ಗ್ರಾಮದಲ್ಲಿ ಈ ಹಿಂದೆ ನೈಸರ್ಗಿಕವಾಗಿ ಸೂಜಿಗಳ ಆಕಾರದ ಕಲ್ಲುಗಳಿದ್ದು ಅವುಗಳಿಂದಾಗಿ ಈ ಪ್ರದೇಶಕ್ಕೆ ಸೂಜಿಕಲ್ಲು ಎಂಬ ಹೆಸರು ಬಂದಿರಬಹುದು. ಅಥವಾ ಬೃಹತ್ ಶಿಲಾ ಸಂಸ್ಕೃತಿಯ ನಿಲಸುಗಲ್ಲುಗಳು (Menhair) ಈ ಭಾಗದಲ್ಲಿ ಇದ್ದು ಅವುಗಳು ಸೂಜಿಗಳ ರೀತಿ ಕಂಡುಬರುತ್ತಿದ್ದು, ಅವುಗಳಿಂದಾಗಿಯೂ ಈ ಪ್ರದೇಶಕ್ಕೆ ಸೂಜಿಗಲ್ಲು ಎಂದು ಬಂದಿರಬೇಕು. (ಹೊಸದುರ್ಗದ ಕುಮಾರನ ಕಣಿವೆ ಪ್ರದೇಶದಲ್ಲಿ ಕಂಡುಬಂದಿರುವ ಬೃಹತ್ ಶಿಲಾಯುಗ ಸಂಸ್ಕೃತಿಯ ನಿಲಸುಗಲ್ಲುಗಳು ಸೂಜಿಗಳ ಆಕಾರದಲ್ಲಿವೆ) ಪ್ರಸ್ತುತ ಸೂಜಿಗಲ್ಲು ಗ್ರಾಮ ಪರಿಸರದಲ್ಲಿ ನಿಲಸುಗಲ್ಲುಗಳಿಲ್ಲ. ಆದರೆ ಬೃಹತ್ ಶಿಲಾಯುಗಕ್ಕೆ ಸೇರಿದ ಶಿಲಾವೃತ್ತ ಸಮಾಧಿಗಳು ದೊರೆತಿವೆ.

೬ **ಸಂಕ್ಷಿಪ್ತ ಕನ್ನಡ ನಿಘಂಟು,** ೨೦೦೧, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೪೧೨.

೭. ಅದೇ, ಪುಟ ೨೬೮ ಮತ್ತು ೩೦೬.

೮. **ಕನ್ನಡ ವಿಶ್ವಕೋಶ,** ಸಂಪುಟ–೨, ಮೈಸೂರು ವಿಶ್ವವಿದ್ಯಾಲಯ, ಪುಟ ೭೧೦.

ಜಿ.ಕೆ. ದೇವರಾಜಸ್ವಾಮಿ*

# ಮಂಕುಂದದ ತಿಮ್ಮಪ್ಪನ ಬೆಟ್ಟದ ಆದಿಮಾನವ ಕಾಲದ ಕಲ್ಲಾಸರೆಗಳು ಹಾಗೂ ಬಣ್ಣದ ಚಿತ್ರಗಳು

ರಾಮನಗರ ಜಿಲ್ಲೆಯಲ್ಲಿನ ಬೃಹದಾಕಾರದ ಕಲ್ಲಿನ ವಿವಿಧ ರೀತಿಯ ಬಂಡೆಗಳು ಚಾರಣ ಪ್ರಿಯರಿಗೆ ಬಂಡೆಗಳನ್ನೇರುವವರಿಗೆ ಸ್ವರ್ಗವೇ ಆಗಿದೆ. ಈಗಾಗಲೇ ಇದನ್ನು Mecca of Rocks ಎಂದೇ ಪರಿಗಣಿಸಲಾಗಿದೆ.

ರಾಮನಗರ ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನಿಂದ ಸುಮಾರು ೧೦ ಕಿ.ಮೀ. ದೂರದಲ್ಲಿ **ಮಂಕುಂದ** ಗ್ರಾಮವಿದೆ. ಇಲ್ಲಿಂದ ನೈರುತ್ಯಕ್ಕಿರುವ ಬೆಟ್ಟವೇ ತಿಮ್ಮಪ್ಪನ ಬೆಟ್ಟ. ಈ ಬೆಟ್ಟವು ಪೂರ್ವೋತ್ತರವಾಗಿ ಇಳಿಜಾರಾಗಿದೆ. ಪೂರ್ವ ದಿಕ್ಕಿಗೆ ಕಣ್ವ ನದಿ ಪಾತ್ರ ಕಣಿವೆಯನ್ನು ಹೊಂದಿದೆ. ಹಾಗೆಯೇ ಬೆಟ್ಟ ಪಶ್ಚಿಮಕ್ಕೆ ಕಡಿದಾದ ಪ್ರಪಾತವನ್ನುಂಟುಮಾಡಿದೆ. ಬೆಟ್ಟದ ಮೇಲಿರುವ ಚಿಕ್ಕದಾದ ಗುಡಿಯೇ ತಿಮ್ಮಪ್ಪನ ಗುಡಿ. ಇದು ವಿಜಯನಗರೋತ್ತರ ಕಾಲದ ವೆಂಕಟರಮಣದೇವರ ಗುಡಿಯಾಗಿದ್ದು ವರ್ಷಕ್ಕೊಮ್ಮೆ ವಿಶೇಷ ಪೂಜೆಗೊಳ್ಳುತ್ತದೆ. ಈ ಗುಡಿಯ ಹಿಂಭಾಗದಲ್ಲಿ ಬೃಹದಾಕಾರದ ಬಂಡೆಗಳ ಸಮೂಹ ಸಾಲು ಉತ್ತರ-ದಕ್ಷಿಣವಾಗಿ ಹಬ್ಬಿದೆ.

ಈ ಬಂಡೆಗಳ ಸಾಲಿನ ನಡುವೆ ಪಶ್ಚಿಮಾಭಿಮುಖವಾಗಿ ಸಾಗಿದರೆ ಮುಂದೆ ಬೆಟ್ಟದ ಕಡಿದಾದ ಪ್ರಪಾತ ಎದುರಾಗುವುದು. ಇಲ್ಲಿ ಬೃಹದಾಕಾರದ ಚಾಚು ಬಂಡೆಗಳು ಇವೆ. ಚಾಚು ಬಂಡೆಗಳ ಕೆಳಭಾಗದಲ್ಲಿ ದೊಡ್ಡದಾದ ಕಲ್ಲಾಸರೆಗಳು ಕಂಡುಬರುತ್ತದೆ. ಆರು ಕಲ್ಲಾಸರೆಗಳು ಸಾಲಾಗಿ ರಚನೆಗೊಂಡಿವೆ. ಅದರಲ್ಲಿ ಮೂರು ಸರಾಸರಿ ೨೫-೩೦ ಅಡಿಗಳಷ್ಟು ಉದ್ದ ೮-೧೦ ಅಡಿಗಳಷ್ಟು ಅಗಲ ಹಾಗೂ ೪-೫ ಅಡಿಯಷ್ಟು ಎತ್ತರವಾಗಿವೆ. ಮೇಲಿನ ಚಾಚು ಬಂಡೆಗಳು ಕಡಿದಾದ ಪ್ರದೇಶವನ್ನು ವ್ಯಾಪಿಸಿ ಅಗಲವಾಗಿ ಹರಡಿಕೊಂಡಿವೆ. ಇದರಿಂದಾಗಿ ಕಲ್ಲಾಸರೆಯಲ್ಲಿರುವ ಜೀವಿಗೆ ಮಳೆ, ಬಿಸಿಲಿನಿಂದ ರಕ್ಷಣೆಗೆ ಯೋಗ್ಯವಾಗಿದೆ. ಈ ಹಿನ್ನಲೆಯಲ್ಲಿ ಇದು ಆದಿಮಾನವನ ವಾಸಸ್ಥಳ(ಕಲ್ಲಾಸರೆ)ಕ್ಕೆ ಯೋಗ್ಯವಾಗಿರುವುದರಲ್ಲಿ ಸಂಶಯವಿಲ್ಲ. ಉಳಿದ ಮೂರು ಕಲ್ಲಾಸರೆಗಳು ಇವುಗಳಿಗಿಂತ ಚಿಕ್ಕದಾಗಿದ್ದರೂ, ಆದಿಮಾನವನು ವಾಸಿಸಲು ಉತ್ತಮ ಸ್ಥಳವಾಗಿದೆ. ಬಹುಶಃ ಈ ಜಿಲ್ಲೆಯಲ್ಲಿ ಆದಿಮಾನವನ ನೆಲೆಗಳಲ್ಲಿ ಇದು ಮೊದಲನೆಯದೆಂದೇ ನನ್ನ ಅನಿಸಿಕೆ. ಈ ಜಿಲ್ಲೆಯಲ್ಲಿ ಶಿಲಾಗೋರಿಗಳನ್ನು ಈಗಾಗಲೇ ವಿದ್ವಾಂಸರು ಹಲವಾರು ಸ್ಥಳಗಳಲ್ಲಿ ಪತ್ತೆ ಹಚ್ಚಿದ್ದಾರೆ.

ಚಿತ್ರ ೧ : ಈ ಕಲ್ಲಾಸರೆ ಗಮನಿಸಲು ಹೋಗುವಾಗ ಬಲಕ್ಕೆ ಮೊದಲಿಗೆ ಎದುರಾಗುವುದು ಬೃಹತ್ ಚಾಚು ಬಂಡೆ. ಈ ಬಂಡೆಯಲ್ಲಿ ನೆಲದಿಂದ ಸುಮಾರು ೧೦ ಅಡಿ ಎತ್ತರದಲ್ಲಿ ಬಣ್ಣದ ಚಿತ್ರ ಎದುರಾಗುತ್ತದೆ. ಒಟ್ಟು ಕಲ್ಲಾಸರೆಗಳಲ್ಲಿ ೫ ಕಡೆಗಳಲ್ಲಿ ಬಣ್ಣದ ಚಿತ್ರಗಳು ಸದ್ಯ ಕಂಡು ಬಂದಿವೆ. ಮೊದಲನೆಯ ಚಿತ್ರವು ಸೂಕ್ಷವಾಗಿ ಗಮನಿಸಿದರೆ ಗೋಚರಿಸುವುದು. ಚಿತ್ರವು ಸುಮಾರು ೪ X ೮ ಅಡಿ ವಿಸ್ತಾರದಲ್ಲಿ ವಿಸ್ತರಿಸಿಕೊಂಡಿದ್ದು. ಕೆಂಮಣ್ಣಿನ ಬಣ್ಣವನ್ನು ಹೊಂದಿದ್ದಾಗಿದೆ. ಈ ಬಣ್ಣದ ಹಿನ್ನೆಲೆಯಿಂದ ಸ್ಪಷ್ಟವಾಗಿ ಯಾವುದೇ ಚಿತ್ರವೆಂಬುದನ್ನು ಗುರುತಿಸಲು ಸಾಧ್ಯವಾಗುತ್ತಿಲ್ಲ. ಬಲಭಾಗದಲ್ಲಿ ಬಣ್ಣದ ಕುಂಚದಿಂದ ಎಳೆದಂತೆ ಸುಮಾರು ನಾಲ್ಕು ಅಡಿ ಉದ್ದವಾಗಿ ಕಂಡುಬರುತ್ತದೆ.

ಚಿತ್ರ ೨ : ಮೊದಲ ಕಲ್ಲಾಸರೆಯಿಂದ ಪಶ್ಚಿಮದಿಂದ ಉತ್ತರಕ್ಕೆ ಕಡಿದಾದ ಬಂಡೆಯನ್ನು ಕಷ್ಟಕರವಾಗಿ ಇಳಿದು ಚಲಿಸಿದರೆ ತಗ್ಗಿನಲ್ಲಿ ನೆಲದಿಂದ ಸುಮಾರು ೪ ಅಡಿ ಎತ್ತರದಲ್ಲಿ ಬಣ್ಣದ ಚಿತ್ರವಿದೆ. ಬ್ರೆಷ್‌ನಲ್ಲಿ ಅರ್ಧಚಂದ್ರಾಕೃತಿಯಂತೆ ರಚಿಸಲಾಗಿದ್ದು ೧೦ X ೫ ಅಂಗುಲವಿದೆ. ದಟ್ಟ ಬಣ್ಣವನ್ನು ಹೊಂದಿದ್ದು ಆಕೃತಿ ಸ್ಪಷ್ಟವಾಗುತ್ತಿಲ್ಲ.

ಚಿತ್ರ ೩ : ಈ ಚಿತ್ರ ಇರುವ ಜಾಗದಿಂದ ಪಶ್ಚಿಮಕ್ಕೆ ಚಲಿಸಿದರೆ ಎರಡು ಚಾಚುಬಂಡೆಗಳ ನಡುವೆ ಸುಮಾರು ೭ ಅಡಿ ಎತ್ತರದ ಒಂದು ಬಂಡೆ ಇದೆ. ಇದನ್ನು ಹತ್ತಿದರೆ ಪಶ್ಚಿಮಾಭಿಮುಖವಾಗಿರುವ ಚಾಚುಬಂಡೆಯಲ್ಲಿ 'S' ಆಕಾರದಲ್ಲಿ ಬರೆದಿರುವ ಸುಮಾರು ೯.೫" ಇಂಚು ಉದ್ದವಾಗಿ ೫.೫" ಉದ್ದವಾಗಿಯೂ ಎರಡು ಅಡ್ಡಗೆರೆಗಳು ಇವೆ. ಇದು ದಟ್ಟ ಕೆಂಮಣ್ಣು ಬಣ್ಣದಿಂದ ಕೂಡಿದ್ದು ವಿಶೇಷ ರಚನೆಯಾಗಿದೆ. ಹಾವಿನ ಆಕಾರದಂತೆ ಕಂಡುಬರುತ್ತದೆ ಆದರೂ ಸ್ಪಷ್ಟತೆಯಿಲ್ಲ.

ಚಿತ್ರ ೪ : ಈ ಮೇಲೆ ತಿಳಿಸಿದ ಬಂಡೆಗಳನ್ನು ಕಷ್ಟ ಸಾಹಸದಿಂದ, ಎಡಭಾಗದ ಕಣಿವೆಯ ಪ್ರಕೃತಿ ಸೌಂದರ್ಯ

* # ೫೬, 'ತ್ರಯೀ', ಎಂ.ಎಲ್.ಡಬ್ಲ್ಯೂ. ಲೇಔಟ್, ಸಿ.ಎನ್. ಪಾಳ್ಯ ೨ನೇ ಹಂತ, ನಾಗಸಂದ್ರ, ಬೆಂಗಳೂರು.



ನಕ್ಷೆ



ಪೂರ್ವಾಭಿಮುಖವಾಗಿರುವ ಕಲ್ಲಾಸರೆ



ಪಶ್ಚಿಮಾಭಿಮುಖವಾಗಿರುವ ಕಲ್ಲಾಸರೆ



ಚಿತ್ರ ೧ : ಪೂರ್ವಕ್ಕಿರುವ ಕಲ್ಲಾಸರೆಯ ಮೇಲಿರುವ ಬಣ್ಣದ ಚಿತ್ರ



ದಕ್ಷಿಣಾಭಿಮುಖವಾಗಿರುವ ಕಲ್ಲಾಸರೆ





ಚಿತ್ರ ೫, ೬. ದಕ್ಷಿಣಾಭಿಖವಾಗಿರುವ ಚಾಚು ಬಂಡೆಯ ಬಣ್ಣದ ಚಿತ್ರಗಳು



ಪಶ್ಚಿಮಾಭಿಮುಖವಾಗಿರುವ ಕಲ್ಲಾಸರೆ



ಚಿತ್ರ ೨ : ಪಶ್ಚಿಮದಲ್ಲಿ ದಕ್ಷಿಣಾಭಿಮುಖವಾಗಿರುವ ಕಲ್ಲಾಸರೆಯಲ್ಲಿರುವ ಬಣ್ಣದ ಚಿತ್ರ



ಚಿತ್ರ ೩ : ಪಶ್ಚಿಮಾಭಿಮುಖವಾಗಿರುವ ಚಾಚು ಬಂಡೆಯಲ್ಲಿರುವ ಬಣ್ಣದ ಚಿತ್ರ



ಚಿತ್ರ ೪. ಪೂರ್ವೋತ್ತರ ಮುಖವಾಗಿರುವ ಚಾಚು ಬಂಡೆಯಲ್ಲಿರುವ ಬಣ್ಣದ ಚಿತ್ರ

ಸವಿಯುತ್ತ ಸುತ್ತಿ ಮೊದಲ ಪೂರ್ವಾಭಿಮುಖಕ್ಕೆ ಬರಬೇಕು. ಹಾದಿಯಲ್ಲಿ ಎತ್ತರಕ್ಕೆ ಚಾಚಿರುವ ಬಂಡೆಯಲ್ಲಿ ಕೆಂಮಣ್ಣಿನ ಬಣ್ಣವನ್ನು ಹೊಂದಿ, ಗೀಚಿದಂತಿದೆ. ಇದೂ ದಟ್ಟ ಬಣ್ಣದಿಂದ ಕೂಡಿ, ಸುಮಾರು ೫" X ೩" ಅಳತೆಯಾಗಿದ್ದು ಆಕೃತಿ ಸ್ಪಷ್ಟವಾಗುತ್ತಿಲ್ಲ.

ಚಿತ್ರ ೫, ೬ : ದಕ್ಷಿಣಕ್ಕಿರುವ ಎರಡನೇ ಕಲ್ಲಾಸರೆಯ ಚಾಚು ಬಂಡೆಯ ದಕ್ಷಿಣಕ್ಕೆ ಕೆಂಮಣ್ಣಿನ ಬಣ್ಣವನ್ನು ಎಳೆದಂತೆ ೬" X ೩" ಅಳತೆಯಲ್ಲಿ ಎರಡು ಕಡೆ ಬಣ್ಣದಿಂದ ಚಿತ್ರವನ್ನು ಬಿಡಿಸಲಾಗಿದೆ. ಆಕಾರ ಗುರುತಿಸುವುದು ಕಷ್ಟಸಾಧ್ಯವೇ ಸರಿ.

ಹೀಗೆ ಒಟ್ಟು ಆರು ಚಿತ್ರಗಳು ಸುಮಾರು ಅರ್ಧ ಕಿ.ಮೀ. ವ್ಯಾಪ್ತಿಯಲ್ಲಿರುವ ಕಲ್ಲಾಸರೆಗಳಲ್ಲಿ ಕಂಡುಬಂದಿವೆ.

ಕಾಲ : ಈ ಚಿತ್ರಗಳನ್ನು ಶಿಲಾ ತಾಮ್ರಯುಗ ಕಾಲವಾದ ಕ್ರಿ.ಪೂ. ೨೦೦೦ ದಿಂದ ೨೦೦ರವರೆಗೆ ಎಂದು ಅಂದಾಜಿಸಲಾಗಿದೆ. ಚನ್ನಪಟ್ಟಣ ತಾಲ್ಲೂಕಿನಲ್ಲಿ ಈಗ ದೊರೆತಿರುವ ಕಲ್ಲಾಸರೆಗಳು ಹಾಗೂ ಬಣ್ಣದ ಚಿತ್ರಗಳ ಶೋಧ ಮೊದಲನೆಯದಾಗಿದೆ.

"ಈ ಚಿತ್ರಗಳನ್ನು ವಿವಿಧ ಜನಾಂಗದ ಕಲೆಗಳನ್ನಲ್ಲದೆ, ಅವರ ವೈವಿಧ್ಯಮಯ ಹಲವಾರು ಭಾವನೆ ನಂಬಿಕೆ ಕಟ್ಟಲೆಗಳನ್ನು ಪ್ರತಿಬಿಂಬಿಸುವ ಅಮೂಲ್ಯ ದೃಶ್ಯ ಸ್ಮಾರಕಗಳೆಂದು ಅಂತರಾಷ್ಟ್ರೀಯ ಮಟ್ಟದಲ್ಲಿ ಪರಿಗಣಿಸಲಾಗಿದೆ". – ಅ.ಸುಂದರ

ಚಿತ್ರ ೧ ಮತ್ತು ೩ರನ್ನು ಆದಿಮಾನವನೇ ರಚಿಸಿದ್ದೆಂಬುದಾಗಿ "ಇಂಡಿಯನ್ ರಾಕ್ ಆರ್ಟ್ ರಿಸರ್ಚ್ ಸೆಂಟರ್", ನಾಸಿಕ್‌ನಲ್ಲಿರುವ ತಜ್ಞರಾದ ಡಾ. ರಿಯಾಜ್ ಅಬ್ಬಾಸ್ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಉಳಿದವುಗಳನ್ನು ಇನ್ನೂ ಪರಿಶೀಲನೆಗೆ ಒಳಪಡಿಸಬೇಕೆಂಬುದಾಗಿ ಅಭಿಪ್ರಾಯ ಪಡುತ್ತಾರೆ. ಚಿತ್ರ ಸ್ಪಷ್ಟವಿಲ್ಲದಿರುವುದರಿಂದ ಕಾಲವನ್ನು ಹಾಗೂ ಚಿತ್ರವನ್ನು ನಿರ್ಧರಿಸುವುದು ಕಷ್ಟಸಾಧ್ಯವೇ ಎಂಬ ಅನಸಿಕೆ ವ್ಯಕ್ತಪಡಿಸಿದ್ದಾರೆ.

ಪ್ರಾಗಿತಿಹಾಸ ಕಾಲದ ಕಲೆಯನ್ನು ಎರಡು ವಿಭಾಗಗಳಾಗಿ ವಿಂಗಡಿಸಲಾಗಿದೆ. ಇದನ್ನು ಕರ್ನಾಟಕದಲ್ಲಿ ಈ ಕೆಳಕಂಡಂತೆ ಕಂಡುಬಂದಿದೆ.

೧ ಕಲ್ಲಾಸರೆ, ಗವಿಗಳಲ್ಲಿ ಕೆಂಮಣ್ಣಿನ ಬಣ್ಣದಲ್ಲಿ ಬಿಡಿಸಿದ ವರ್ಣ ಚಿತ್ರ ವರ್ಣ ಚಿತ್ರ ೧೫೦ಕ್ಕೂ ಹೆಚ್ಚು ಸ್ಥಳಗಳಲ್ಲಿ ಕಂಡುಬಂದಿದೆ. – ರಾಮದುರ್ಗ, ಬಾದಾಮಿ ಐಹೊಳೆ, ಕೊಪ್ಪಳ, ಪಿಕ್ಕಿಹಾಳ, ಹಿರೆಬೆನಕಲ್, ಆನೆಗೊಂದಿ, ರಾಯಚೂರು, ಮಾನ್ವಿ, ಬ್ರಹ್ಮಗಿರಿ, ಚಿತ್ರದುರ್ಗ ಇತ್ಯಾದಿ.,

೨ ಕೊರೆದ ಅಥವಾ ಕುಟ್ಟಿದ ಗೆರೆಗಳನ್ನು ಮೂಡಿಸಿ ಬಿಡಿಸಿದ ಚಿತ್ರ – ಬಯಲು ಬಂಡೆ ಚಿತ್ರಗಳು ಗೆರೆಗಳಲ್ಲಿ ಮೂಡಿಸಿದ ಚಿತ್ರ ೪೫ಕ್ಕೂ ಹೆಚ್ಚು ಸ್ಥಳಗಳಲ್ಲಿ ಕಂಡುಬಂದಿದೆ. – ಭೀಮರಾಯನ ಗುಡ್ಡ, ಪಿಕ್ಕಿಹಾಳ, ತಾವರೆಗೆರೆ, ಕುರುಗೋಡು, ಸಂಗನಕಲ್ಲು, ಬೆಳಕಲ್, ಹಾಳಗುಂದಿ, ಅಯ್ಯಪ್ಪನಹಳ್ಳಿ, ಬ್ರಹ್ಮಗಿರಿ, ಚಿತ್ರದುರ್ಗ, ಹೊಳಲೂರು, ಸೊಂದ, ಮಹಿಷಿ, ಪಶ್ಚಿಮ ಕಡಲ ತೀರ, ಅಂಕೋಲಾ, ಕುಂದಾಪುರ, ಇತ್ಯಾದಿ.,

(ಕೃತಜ್ಞತೆಗಳು : ಪ್ರೊ. ಕ.ವೆಂ. ರಾಜಗೋಪಾಲ್, ಹಿರಿಯ ಸಂಶೋಧಕರು, ಮಿತ್ರರಾದ ಮುರುಳಿ, ಚಂದ್ರು, ರುದ್ರಸ್ವಾಮಿ, ಕಿರಣ್, ಪವನ್, ಶಿವರಾಜ್, ಶ್ರೀನಿವಾಸ್.)

ಪ್ರವೀಣ್ ಬೆಳ್ತಂಗಡಿ*

# ಬೃಹತ್ ಶಿಲಾಯುಗದ ನೆಲೆಗಳು : ಅಗ್ಗುಂದ-ಗೊಲ್ಲರಹಟ್ಟಿ

ಇತಿಹಾಸವು ಮಾನವ ಜೀವನದ ಹೋರಾಟದ ಕಥೆಯ ನಿರೂಪಣೆ ಎಂಬುದಾಗಿ ಹೇಳಬಹುದು. ಈ ಕಥೆಯನ್ನು ತಿಳಿಯುವ ಸಲುವಾಗಿಯೇ ನಾವಿಂದು ಹೆಚ್ಚಿನ ಪ್ರಮಾಣದಲ್ಲಿ ಲಿಖಿತ ಆಧಾರಗಳನ್ನೇ ಅವಲಂಬಿಸುತ್ತೇವೆ. ಆದರೆ ಬರವಣಿಗೆಯು ಆರಂಭವಾಗಿರುವುದು ಇತ್ತೀಚಿಗಿನ ದಿನಗಳಲ್ಲಿ. ಮಾನವಶಾಸ್ತ್ರಜ್ಞರು ಮತ್ತು ಪ್ರಾಣಿಶಾಸ್ತ್ರಜ್ಞರು ಮಾನವನು ಸುಮಾರು ದಶಲಕ್ಷ ವರ್ಷಗಳ ಹಿಂದಿನಿಂದಲೇ ಅಸ್ತಿತ್ವದಲ್ಲಿದ್ದಿರುವುದನ್ನು ಸ್ಪಷ್ಟಪಡಿಸುತ್ತಾರೆ. ಈ ಹಂತದಿಂದ ಆಧುನಿಕ ನಾಗರೀಕ ಮಾನವನ ಪರಿವರ್ತನೆಯ ಹಂತದ ವರೆಗಿನ ದಾರಿಗಳು ವಿಭಿನ್ನವಾದವುಗಳಾಗಿವೆ. ಈ ಹಂತಗಳಲ್ಲಿ ಶೋಧನೆ ನಡೆದಾಗ ಕರ್ನಾಟಕದಲ್ಲಿ ಬಹುತೇಕ ನೆಲೆಗಳು ಕಂಡುಬಂದಿದ್ದು, ಅವುಗಳಲ್ಲಿ ಬೃಹತ್ ಶಿಲಾಯುಗದ ಕಾಲಕ್ಕೆ ಸಂಬಂಧಿಸಿದಂತೆ ಆಧಾರಗಳು ಅಧಿಕ ಪ್ರಮಾಣದಲ್ಲಿ ಕಾಣಬಂದಿವೆ.

ಬೃಹತ್ ಶಿಲಾಯುಗದ ಹಂತದಲ್ಲಿ ಕಾಣಬರುವ ಪ್ರಮುಖ ಪ್ರಕಾರಗಳಲ್ಲಿ ಕಲ್ಲುಗೋರಿಗಳು, ನಿಲುಸುಗಲ್ಲುಗಳು, ದಫನದಿನ್ನೆಗಳು, ಶಿಲಾವೃತ್ತಗಳನ್ನು ಹೆಸರಿಸಬಹುದಾಗಿದೆ. ನಿಲುಸುಗಲ್ಲುಗಳು ಅಥವಾ ಮೆನ್ಹಿರ್‌ಗಳು ಪ್ರಾಕ್ಚಾರಿತ್ರಿಕ ಸಮಾಧಿ ಎಡೆಗಳಲ್ಲಿ ಸ್ಥಾಪನೆಗೊಂಡ ನೆನಪಿನ ಶಿಲೆಗಳು.[೧] ಸುತ್ತಲೂ ಬೆಟ್ಟಗುಡ್ಡಗಳು ಹಾಗೂ ಜನವಸತಿಯನ್ನು ಹೊಂದಿರುವ ಅರಸೀಕೆರೆ ಪ್ರದೇಶವನ್ನು, ಶೋಧಗೊಂಡಿರುವ ಹೆಚ್ಚಿನ ಸಂಖ್ಯೆಯ ಕಲ್ಲುಗೋರಿಗಳು ಮತ್ತು ನಿಲುಸುಗಲ್ಲುಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಪ್ರದೇಶ ಹಿಂದೆ ಬೃಹತ್ ಶಿಲಾಯುಗದ ಜನರ ಶಾಶ್ವತ ನೆಲೆಯಾಗಿತ್ತು ಎಂದು ಹೇಳಬಹುದಾಗಿದೆ.

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಕಸಬಾ ಹೋಬಳಿಯ ಅಗ್ಗುಂದ-ಗೊಲ್ಲರಹಟ್ಟಿಯ ಗ್ರಾಮವು ಅರಸೀಕೆರೆ-ಹುಳಿಯಾರು ರಾಜ್ಯ ಹೆದ್ದಾರಿಯಲ್ಲಿ ಸಾಗುವಾಗ ಅಗ್ಗುಂದದಿಂದ ಒಂದು ಕಿ.ಮೀ. ದೂರದಲ್ಲಿ ಕಾಣಸಿಗುತ್ತದೆ. ಎನ್-೧೩.೧೯.೩೨.೪ ಮತ್ತು ಈ-೭೬.೧೮.೧೧.೪ ವ್ಯಾಪ್ತಿಯಲ್ಲಿರುವ ಹಾಗೂ ಸಮುದ್ರಮಟ್ಟದಿಂದ ಸುಮಾರು ೮೪೫ ಮೀಟರ್‌ಗಳಷ್ಟು ಎತ್ತರದಲ್ಲಿರುವ ಭೂಪ್ರದೇಶ ಇದಾಗಿದೆ. ಅಗ್ಗುಂದ-ಗೊಲ್ಲರಹಟ್ಟಿ ಗ್ರಾಮದ ಪೂರ್ವ ಭಾಗದಲ್ಲಿ ಸಿದ್ಧರಹಳ್ಳಿ ಗ್ರಾಮ ಕಾಣಬಂದರೆ, ಪಶ್ಚಿಮಭಾಗದಲ್ಲಿ ಬೊಮ್ಮೇನಹಳ್ಳಿ ಹಾಗೂ ದಕ್ಷಿಣ ಭಾಗದಲ್ಲಿ ಅಗ್ಗುಂದ ಗ್ರಾಮಗಳು ಕಾಣಬರುತ್ತವೆ. ಈ ಪ್ರದೇಶವು ಬಹುತೇಕ ಕೃಷಿ ಪ್ರಧಾನವಾದುದಾಗಿದೆ. ಗ್ರಾಮದ ಉತ್ತರ ಭಾಗದಲ್ಲಿ ಕೃಷಿ ಜಮೀನುಗಳಿದ್ದರೆ, ಪಶ್ಚಿಮ ಭಾಗದಲ್ಲಿ ವ್ಯಾಪಕವಾಗಿ ಚಾಚಿಕೊಂಡಿರುವ ಹಿರೇಕಲ್ ಬೆಟ್ಟಪ್ರದೇಶ ಕಾಣಸಿಗುತ್ತದೆ. ಈ ಪ್ರದೇಶವು ಬೃಹತ್ ಶಿಲಾಯುಗದ ನೆಲೆಯಾಗಿತ್ತೆಂಬುದಕ್ಕೆ ಇಲ್ಲಿನ ಕೃಷಿ ಭೂಮಿಯಲ್ಲಿ ದೊರೆತಿರುವ ಪ್ರಾಗೈತಿಹಾಸಿಕ ಕಾಲದ ಕುರುಹುಗಳೇ ಸಾಕ್ಷಿಯಾಗಿವೆ.

ಪ್ರಸ್ತುತ ಈ ನೆಲೆಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿರುವ ನಿಲುಸುಗಲ್ಲುಗಳು ಕಾಣಬಂದಿವೆ. ಈ ನಿಲುಸುಗಲ್ಲುಗಳ ಮೇಲೆ ಯಾವುದೇ ರೀತಿಯ ಕೆತ್ತನೆ ಇಲ್ಲದೇ ಸ್ವಾಭಾವಿಕ ರೂಪದಲ್ಲಿದೆ. ನಿಲುಸುಗಲ್ಲುಗಳು ಸಮೂಹ ಸಮಾಧಿಗಳನ್ನು ಗುರುತಿಸಲು ನೆಟ್ಟಿರುವ ಕಲ್ಲುಗಳು.[೨] ಅಗ್ಗುಂದ-ಗೊಲ್ಲರಹಟ್ಟಿ ಗ್ರಾಮದ ಎರಡು ಸ್ಥಳಗಳ ಕೃಷಿ ಭೂಮಿಯಲ್ಲಿ ನಿಲುಸುಗಲ್ಲುಗಳು ಕಂಡುಬಂದಿವೆ. ಮೊದಲನೆಯ ನೆಲೆಯು ಶ್ರೀಯುತ ಶೆಟ್ಟಪ್ಪ ಎಂಬವರ ಜಮೀನಿನಲ್ಲಿಯೂ, ಎರಡನೆಯ ನೆಲೆಯು ಶ್ರೀಯುತ ರಂಗಪ್ಪ ಎಂಬವರ ಜಮೀನಿನಲ್ಲಿ ಕಾಣಸಿಗುತ್ತದೆ. ಮೊದಲನೆಯ ನೆಲೆಯ ಉತ್ತರಭಾಗದಲ್ಲಿ ಎರಡನೆಯ ನೆಲೆಯು ಅಸ್ತಿತ್ವದಲ್ಲಿದೆ.

ಮೊದಲನೆಯ ನೆಲೆಯಲ್ಲಿ ಒಟ್ಟು ಏಳು ನಿಲುಸುಗಲ್ಲುಗಳು ಗೋಚರಿಸುತ್ತವೆ. ಇವು ವಿವಿಧ ಆಕಾರ, ಗಾತ್ರ ಮತ್ತು ದಿಕ್ಕುಗಳಲ್ಲಿ ನೆಲೆಯೂರಿ ನಿಂತಿವೆ. ಅತೀ ಹೆಚ್ಚಿನ ಎತ್ತರವಿರುವ ಮೊದಲನೆಯ ನಿಲುಸುಗಲ್ಲು ಸುಮಾರು ೧೦ ಅಡಿ ಎತ್ತರವಿದ್ದು, ೫ ಅಡಿ ಅಗಲ ಮತ್ತು ೨.೫ ಅಡಿಯಷ್ಟು ದಪ್ಪವಿದೆ. ತ್ರಿಕೋನಾಕಾರದಲ್ಲಿರುವ ಈ ಶಿಲೆ ನೆಲಕ್ಕೆ ವಾಲಿಕೊಂಡಿದ್ದು ದಕ್ಷಿಣಾಭಿಮುಖವಾಗಿದೆ. ಎರಡನೆಯ ನಿಲುಸುಗಲ್ಲು ೮ ಅಡಿ ಎತ್ತರ, ೫ ಅಡಿ ಅಗಲ ಮತ್ತು ೧.೫ ಅಡಿ ದಪ್ಪವಿದ್ದು ಗ್ರಾಮದ ದಕ್ಷಿಣಕ್ಕೆ ವಾಲಿಕೊಂಡಿದ್ದು,

* ಇತಿಹಾಸ ಉಪನ್ಯಾಸಕರು, ಶ್ರೀ ಗೋಕರ್ಣನಾಥೇಶ್ವರ ಪದವಿ ಪೂರ್ವ ವಿದ್ಯಾಲಯ, ಗಾಂಧಿನಗರ, ಮಂಗಳೂರು.

ದಕ್ಷಿಣಾಭಿಮುಖವಾಗಿ ನಿಂತಿದೆ. ಮೂರನೆಯ ನಿಲುಸುಗಲ್ಲು ೫ ಅಡಿ ಎತ್ತರ, ೩ ಅಡಿ ಅಗಲ, ಹಾಗೂ ೧ ಅಡಿ ದಪ್ಪವಿದ್ದು ಉತ್ತರಭಾಗದೆಡೆಗೆ ವಾಲಿಕೊಂಡಿದ್ದು ಉತ್ತರಾಭಿಮುಖ ಮಾಡಿ ನಿಂತಿದೆ. ನಾಲ್ಕನೆಯ ನಿಲುಸುಗಲ್ಲು ೭ ಅಡಿ ಎತ್ತರ, ೪ ಅಡಿ ಅಗಲ ಹಾಗೂ ೧ ಅಡಿ ದಪ್ಪವಿದ್ದು ಪೂರ್ವಭಾಗಕ್ಕೆ ವಾಲಿಕೊಂಡಿದ್ದು ಪೂರ್ವಾಭಿಮುಖವಾಗಿದೆ.



ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಅಗ್ಗುಂದ-ಗೊಲ್ಲರಹಟ್ಟಿ, ಒಂದು ಬೃಹತ್ ಶಿಲಾಯುಗದ ನೆಲೆ. ನಿಲುವುಗಲ್ಲುಗಳ ಛಾಯಾಚಿತ್ರ



ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಅಗ್ಗುಂದ-ಗೊಲ್ಲರಹಟ್ಟಿ, ಒಂದು ಬೃಹತ್ ಶಿಲಾಯುಗದ ನೆಲೆ. ನಿಲುವುಗಲ್ಲಿನ ಛಾಯಾಚಿತ್ರ

೫ ಹಾಗೂ ೬ನೇಯ ನಿಲುಸುಗಲ್ಲುಗಳು ಜೊತೆಯಲ್ಲಿದ್ದು ಮೊದಲ ನಾಲ್ಕು ನಿಲುಸುಗಲ್ಲುಗಳಿರುವ ನೆಲೆಯ ದಕ್ಷಿಣ ಭಾಗದಲ್ಲಿ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಕಾಣಸಿಗುತ್ತವೆ. ಇದರಲ್ಲಿ ಮೊದಲನೆಯ ನಿಲುಸುಗಲ್ಲು ೬ ಅಡಿ ಎತ್ತರ, ೩ ಅಡಿ ಅಗಲ, ಹಾಗೂ ೧.೫ ಅಡಿ ದಪ್ಪವಿದೆ. ಪೂರ್ವ ಭಾಗಕ್ಕೆ ವಾಲಿಕೊಂಡಿರುವ ಈ ನಿಲುಸುಗಲ್ಲು ಪೂರ್ವಾಭಿಮುಖವಾಗಿದೆ. ಎರಡನೆಯ ನಿಲುಸುಗಲ್ಲು ೬ ಅಡಿ ಎತ್ತರ, ೩ ಅಡಿ ಅಗಲ ಹಾಗೂ ೧.೫ ಅಡಿ ದಪ್ಪವಿದ್ದು ನೇರವಾಗಿ ನಿಂತಿದ್ದು, ಪಶ್ಚಿಮಾಭಿಮುಖವಾಗಿದೆ. ಇವೆರಡು ನಿಲುಸುಗಲ್ಲುಗಳ ಪೂರ್ವಭಾಗದಲ್ಲಿ ನೆಲಕ್ಕೆ ಉರುಳಿಕೊಂಡಿರುವ ಬೃಹತ್ ನಿಲುಸುಗಲ್ಲೊಂದು ಕಾಣಸಿಗುತ್ತದೆ. ಇದು ಸುಮಾರು ೧೩ ಅಡಿ ಉದ್ದ, ೫ ಅಡಿ ಅಗಲ, ೨.೫ ಅಡಿ ದಪ್ಪವಿದ್ದು, ತುದಿಭಾಗವು ಪಶ್ಚಿಮಾಭಿಮುಖವಾಗಿದೆ. ಈ ನೆಲೆಯ ಸುತ್ತಮುತ್ತಲೂ ತೆಂಗಿನ ಮರಗಳ ತೋಟವಿದೆ. ಮೊದಲನೆಯ ನೆಲೆಯ ಪೂರ್ವ ಭಾಗದಲ್ಲಿ ಆಧುನಿಕ ಕಾಲದ ಸಮಾಧಿ ಸ್ಥಳ ಕಾಣಸಿಗುತ್ತದೆ.

ಅಗ್ಗುಂದ-ಗೊಲ್ಲರಹಟ್ಟಿ ಗ್ರಾಮದಿಂದ ಉತ್ತರ ಭಾಗದಲ್ಲಿ ಸುಮಾರು ಒಂದು ಕಿ.ಮೀ. ಕ್ರಮಿಸಿದಾಗ ಮತ್ತೊಂದು ಬೃಹತ್ ಶಿಲಾಯುಗದ ನೆಲೆ ಗೋಚರಿಸುತ್ತದೆ. ಇಲ್ಲಿ ಒಟ್ಟು ಎರಡು ನಿಲುಸುಗಲ್ಲುಗಳಿದ್ದು, ಶ್ರೀ ರಂಗಪ್ಪ ಎಂಬ ಸ್ಥಳೀಯರ ಜಮೀನಿನಲ್ಲಿವೆ. ಹಿರೇಕಲ್ ಬೆಟ್ಟಪ್ರದೇಶ ಪೂರ್ವದ ತಪ್ಪಲಿನಲ್ಲಿರುವ ಈ ನೆಲೆಯು ಕೃಷಿ ಭೂಮಿಯಿಂದ ಆವರಿಸಿಕೊಂಡಿದೆ. ಮೊದಲನೆಯ ನಿಲುಸುಗಲ್ಲು ತುಂಡಾಗಿ ಪಶ್ಚಿಮದೆಡೆಗೆ ಬಿದ್ದಿದೆ. ಇದರ ಎತ್ತರ ೭ ಅಡಿಯಿದ್ದು, ೩ ಅಡಿ ಅಗಲ ಹಾಗೂ ೧.೫ ಅಡಿ ದಪ್ಪವಿದೆ. ಎರಡನೆಯ ನಿಲುಸುಗಲ್ಲು ೮ ಅಡಿ ಎತ್ತರ, ೪ ಅಡಿ ಅಗಲ ಹಾಗೂ ೧.೫ ಅಡಿ ದಪ್ಪವಿದ್ದು ಪಶ್ಚಿಮಾಭಿಮುಖವಾಗಿ ನೇರವಾಗಿ ನಿಂತಿದೆ.

ಈ ಪ್ರದೇಶವು ಫಲವತ್ತಾಗಿರುವುದರಿಂದ ವ್ಯವಸಾಯ ಇಲ್ಲಿ ಪ್ರಧಾನವಾಗಿ ನಡೆಯುತ್ತಲೇ ಬಂದಿದೆ. ಈ ನಿಲುಸುಗಲ್ಲುಗಳು ಕಲ್ಲುಬಂಡೆಗಳಿಂದ ಕೂಡಿದ ಹಿರೇಕಲ್ ಬೆಟ್ಟಗಳ ತಪ್ಪಲಿನಲ್ಲಿ ಕಾಣಸಿಗುತ್ತವೆ. ಆ ಕಾಲದ ಜನತೆಯ ಜೀವನದ ಅಗತ್ಯತೆಗಳನ್ನು ನಿವಾರಿಸುವುದಕ್ಕೆ ಈ ಪ್ರದೇಶಗಳನ್ನು ಬಳಸಿಕೊಂಡಿರುವ ಸಾಧ್ಯತೆಗಳಿವೆ. ಈ ನೆಲೆಯ ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ನೆಲವು ಫಲವತ್ತಾಗಿಯೂ ಹಾಗೂ ಬೆಟ್ಟಗುಡ್ಡಗಳಿಂದ ಸುತ್ತುವರಿದಿರುವುದರಿಂದ ಕೃಷಿಗೆ ಮತ್ತು ಬೇಟೆಗೆ ಬಹಳ ಅನುಕೂಲವಾಗಿದ್ದಂತೆ ಕಾಣಬರುತ್ತದೆ. ಮೊದಲನೆಯ ನೆಲೆಯಲ್ಲಿರುವ ನಾಲ್ಕು ನಿಲುಸುಗಲ್ಲುಗಳ ಪೂರ್ವ ಭಾಗದಲ್ಲಿ ಆಧುನಿಕ ಸಮಾಧಿಸ್ಥಳವು ಕಾಣಸಿಗುತ್ತದೆ. ಇಲ್ಲಿರುವ ಯಾವುದೇ ನಿಲುಸುಗಲ್ಲುಗಳ ಬಳಿಯಲ್ಲಿಯೂ ಪೂಜೆ ಸಲ್ಲಿಸುವ ವಿಧಾನದ ಕುರುಹುಗಳು ಹಾಗೂ ಮಾಹಿತಿಗಳು ಕಾಣಸಿಗುವುದಿಲ್ಲ.

ಅಗ್ಗುಂದ-ಗೊಲ್ಲರಹಟ್ಟಿ ಪ್ರದೇಶದಲ್ಲಿ ಈಗಲೂ ಕೃಷಿ ಪ್ರಧಾನ ಕಸುಬಾಗಿದ್ದು ಜೊತೆಗೆ ಕುರಿಸಾಕಾಣಿಕೆ ಹಾಗೂ ಬೇಟೆಗಾರಿಕೆ ಜನರ ಉಪಕಸಬುಗಳಾಗಿವೆ. ಈ ಪ್ರದೇಶದ ಹೆಸರೇ ಇದನ್ನು ಸ್ಪಷ್ಟಪಡಿಸುತ್ತದೆ. ಇವೆಲ್ಲ ಅಂಶಗಳನ್ನು ಗಮನಿಸಿದಾಗ ಈ ಪ್ರದೇಶವು ಪೂರ್ವೇತಿಹಾಸ ಕಾಲದಿಂದಲೂ ಪ್ರಮುಖ ಜನ ವಾಸ್ತವ್ಯದ ನೆಲೆಗಳಾಗಿದ್ದವೆಂಬುದಾಗಿ ತಿಳಿದುಬರುತ್ತದೆ. ಈ ಗ್ರಾಮದ ಪೂರ್ವ ಭಾಗದಲ್ಲಿ ಸಿದ್ಧರಹಳ್ಳಿ ಗ್ರಾಮವಿದ್ದು ಅಲ್ಲಿನ ಕೃಷಿ ಜಮೀನಿನಲ್ಲಿಯೂ ಇಂತಹವುದೇ ಬಗೆಯ ೫ ನಿಲುಸುಗಲ್ಲುಗಳಿರುವುದನ್ನು ಗುರುತಿಸಲಾಗಿದೆ. ಅಗ್ಗುಂದ ಗ್ರಾಮದ ಪಶ್ಚಿಮ ಭಾಗದಲ್ಲಿರುವ ಬೊಮ್ಮೇನಹಳ್ಳಿಯಲ್ಲಿರುವ ೮ ನಿಲುಸು ಗಲ್ಲುಗಳನ್ನು ನಾವಿಲ್ಲಿ ಉಲ್ಲೇಖಿಸಬಹುದಾಗಿದೆ.[3] ಒಟ್ಟಾರೆಯಾಗಿ ಅಗ್ಗುಂದ-ಗೊಲ್ಲರಹಟ್ಟಿ ಪ್ರದೇಶವು ಪ್ರಾಗೈತಿಹಾಸಿಕ ಕಾಲದ ನೆಲೆಯೆಂಬುದರಲ್ಲಿ ಸಂಶಯವಿಲ್ಲ ಎನ್ನಬಹುದು. ಈ ದಿಕ್ಕಿನಲ್ಲಿ ಅಧ್ಯಯನ ಸಾಗಬೇಕಿದೆ.

(ಈ ಪ್ರಬಂಧವನ್ನು ರಚನೆ ಮಾಡುವಲ್ಲಿ ಸಲಹೆ ಹಾಗು ಮಾರ್ಗದರ್ಶನ ನೀಡಿರುವ ನನ್ನ ಪೂಜ್ಯ ಗುರುಗಳು ಹಾಗೂ ಸಂಶೋಧನಾ ಮಾರ್ಗದರ್ಶಕರಾಗಿರುವ ಶ್ರೀ ಡಾ. ಹನುಮನಾಯಕರವರಿಗೆ ಮತ್ತು ಕ್ಷೇತ್ರಕಾರ್ಯದಲ್ಲಿ ನೆರವಾಗಿರುವ ಅರಸೀಕೆರೆ ತಾಲ್ಲೂಕಿನ ಚೆಲುವನಹಳ್ಳಿಯ ಶ್ರೀ ರವಿಕುಮಾರ್ ಹಾಗು ಶ್ರೀ ಕಿರಣ್‌ರವರಿಗೆ ಹಾಗೂ ಅಗ್ಗುಂದ-ಗೊಲ್ಲರಹಟ್ಟಿ ಗ್ರಾಮಸ್ಥರಿಗೂ ನಾನು ಅಭಾರಿಯಾಗಿರುತ್ತೇನೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಲಕ್ಷ್ಮಣ್ ತೆಲಗಾವಿ., 'ಬಳ್ಳಾರಿ ತಾಲ್ಲೂಕು ಹಳೇನೆಲ್ಲುಡಿ ಗ್ರಾಮದ ಸ್ಮಾರಕಗಳು-ಈಚಿನ ಶೋಧಗಳ ಹಿನ್ನಲೆಯಲ್ಲಿ' **ಇತಿಹಾಸ ದರ್ಶನ**, ಸಂಪುಟ ೧೧, ೧೯೯೬, ಪುಟ ೨೧.

೨. ಶ್ರೀ ಹನುಮನಾಯಕ., 'ಚೆಲುವನಹಳ್ಳಿಯ ಗವಿಮಠದ ಒಂದು ಪ್ರಾಗೈತಿಹಾಸಿಕ ನೆಲೆ' **ಇತಿಹಾಸ ದರ್ಶನ**, ಸಂಪುಟ ೯, ಬೆಂಗಳೂರು ೧೯೯೪, ಪುಟ ೬-೮.

೩. ಆರ್. ವೆಂಕಟೇಶ್‌ಮೂರ್ತಿ., 'ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು-ಒಂದು ಶೋಧ' **ಇತಿಹಾಸ ದರ್ಶನ**, ಸಂಪುಟ ೧೧, ಬೆಂಗಳೂರು ೧೯೯೬, ಪುಟ ೩೮.

ಎಸ್. ನಾಗರಾಜಪ್ಪ*

# ಚಿತ್ರದುರ್ಗ ತಾಲೂಕಿನ ಕೆಲವು ಪ್ರಾಗೈತಿಹಾಸಿಕ ನೆಲೆಗಳು

ಚಿತ್ರದುರ್ಗವು ಕರ್ನಾಟಕದ ಮಧ್ಯಭಾಗದಲ್ಲಿದ್ದ ಭೌಗೋಳಿಕ ಮತ್ತು ಚಾರಿತ್ರಿಕವಾಗಿ ಮಹತ್ವ ಪಡೆದ ಜಿಲ್ಲೆ, ಕರ್ನಾಟಕದ ಪ್ರಾಗೈತಿಹಾಸಿಕ ಚರಿತ್ರೆಯಲ್ಲಿ ಚಿತ್ರದುರ್ಗಕ್ಕೆ ಮಹತ್ವದ ಸ್ಥಾನವಿದೆ. ಕಡಿದಾದ ಕಣಿವೆಗಳು ಮತ್ತು ಬೃಹತ್ತಾದ ಬೆಟ್ಟಗುಡ್ಡ ಹಳ್ಳ ಕೊಳ್ಳಗಳ ಪರಿಸರವು ಜಿಲ್ಲೆಯ ಹಲವೆಡೆ ಯಲ್ಲಿವೆ. ಸದಾಕಾಲ ನೀರು, ಆಹಾರ ಮತ್ತು ಆಸರೆಗೆ ಯೋಗ್ಯವಾದ ಸ್ಥಳಗಳಲ್ಲಿಯೇ ಮಾನವನು ನೆಲೆಸುತ್ತಿದ್ದ ನೆಂಬುದು ಸ್ಪಷ್ಟ. ಚಿತ್ರದುರ್ಗ ತಾಲೂಕಿನ ಗೊಡಬನಹಾಳು ಮತ್ತು ಬಸ್ತಿಹಳ್ಳಿ ಗ್ರಾಮಗಳಲ್ಲಿ ಇತ್ತೀಚಿನ ಕ್ಷೇತ್ರಕಾರ್ಯದಲ್ಲಿ ಪತ್ತೆಯಾದ ಮಧ್ಯಹಳೇಶಿಲಾಯುಗ. ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಕುರುಹುಗಳ ವಿಶ್ಲೇಷಣೆಯೇ ಪ್ರಸ್ತುತ ಲೇಖನದ ಮುಖ್ಯ ಉದ್ದೇಶ.

ಗೊಡಬನಹಾಳು ಚಿತ್ರದುರ್ಗದಿಂದ ನೈರುತ್ಯಕ್ಕೆ ಸುಮಾರು ೧೫ ಕಿ.ಮೀ. ದೂರದಲ್ಲಿರುವ ಪುಟ್ಟ ಗ್ರಾಮ. ಚಿತ್ರದುರ್ಗದ ಪಶ್ಚಿಮ ದಿಕ್ಕಿನ ಬೆಟ್ಟಗಳ ಸಾಲುಗಳು ಗಂಜಿಗಟ್ಟೆ ಮತ್ತು ಗೊಡಬನಹಾಳು ಗ್ರಾಮಗಳವರೆಗೆ ವ್ಯಾಪಿಸಿದ್ದು, ಮುಂದೆ ಜೋಗಿಮಟ್ಟಿ ಕಡೆಗೆ ಸಾಗುತ್ತವೆ. ಈ ಬೆಟ್ಟಗಳ ಸಾಲಿನ ದಕ್ಷಿಣ ತಪ್ಪಲಿನಿಂದ ಪ್ರಾರಂಭವಾಗುವ ಹಳ್ಳವೊಂದು ಸರಿದೂರ ಸಾಗಿ ಮುಂದೆ ಜಿನಗಿ ಹಳ್ಳವನ್ನು ಸೇರುತ್ತದೆ. ಹಳ್ಳಕ್ಕೆ ಮತ್ತು ಬೆಟ್ಟಕ್ಕೆ ಹೊಂದಿಕೊಂಡಂತಿರುವ ತೀರಾ ಎತ್ತರವಲ್ಲದ ಇಲ್ಲಿನ ದಿಬ್ಬವೊಂದನ್ನು ಸ್ಥಳೀಯರು 'ಕಳ್ಳಿದಿಬ್ಬ' ಎಂದು ಕರೆಯುತ್ತಾರೆ. ಸ್ಥಳೀಯರ ಪ್ರಕಾರ ಇದು ಹಾಳೂರು.[೧] ಈ ದಿಬ್ಬದಲ್ಲಿ ಕೈಗೊಂಡ ಅನ್ವೇಷಣೆಯಲ್ಲಿ ಮಧ್ಯಹಳೆ ಶಿಲಾಯುಗದ ಎರಡು ಶಿಲಾಯುಧಗಳು ಹಾಗೂ ಸುಮಾರು ೩೦ ಬೃಹತ್ ಶಿಲಾಸಮಾಧಿಗಳು ಮತ್ತು ವಸತಿನೆಲೆ ಪತ್ತೆಯಾಯಿತು.

ಮಧ್ಯ ಹಳೇ ಶಿಲಾಯುಗವು ಆದಿ ಮತ್ತು ಅಂತ್ಯ ಹಳೇ ಶಿಲಾಯುಗದ ಮಧ್ಯದ ಹಂತ. ಈ ಕಾಲಘಟ್ಟದ ಮಾನವ ಮೂಲತಃ ಅಲೆಮಾರಿ; ಬೇಟೆ ಅವನ ಮುಖ್ಯ ವೃತ್ತಿಯಾಗಿತ್ತು. ವಿವಿಧ ಪ್ರಾಣಿಗಳನ್ನು ಬೇಟೆಯಾಡಿ, ಅವುಗಳ ಮಾಂಸ, ಗೆಡ್ಡೆ–ಗೆಣಸುಗಳನ್ನು ಹಣ್ಣುಗಳನ್ನು ತಿಂದು ಜೀವನ ನಡೆಸುತ್ತಿದ್ದ ಬೆಟ್ಟ ಗುಡ್ಡಗಳ ತಪ್ಪಲು, ನದಿ, ಹಳ್ಳಗಳ ದಂಡೆ, ಬೆಟ್ಟಗಳಲ್ಲಿನ ಕಲ್ಲಾಸರೆಗಳು ಇವನ ವಾಸಸ್ಥಾನಗಳಾಗಿದ್ದವು. ಮಧ್ಯಹಳೇ ಶಿಲಾಯುಗದ ಬಗ್ಗೆ ತಿಳಿಯಲು ಆಯುಧಗಳೇ ಪ್ರಮುಖ ಆಧಾರಗಳಾಗಿವೆ. ಆಯುಧಗಳ ವಿಧಗಳಲ್ಲಿ ಪ್ರಾದೇಶಿಕ ಭಿನ್ನತೆಗಳನ್ನು ಕಾಣಬಹುದು. ಕೆಲವೊಮ್ಮೆ ಆಯುಧಗಳ ವಿಧ ಮತ್ತು ತಾಂತ್ರಿಕತೆಯು ತಯಾರಿಕೆಗೆ ಬಳಸುವ ಕಚ್ಚಾವಸ್ತುವನ್ನು ಅವಲಂಬಿಸಿರುತ್ತದೆ. ಕಳ್ಳಿ ದಿಬ್ಬದ ಅನ್ವೇಷಣೆಯಲ್ಲಿ ಒಂದು ಮಚ್ಚುಗತ್ತಿ ಮತ್ತು ಒಂದು ಅಂಡಾಕಾರದ ಆಯುಧ ದೊರೆತಿವೆ.[೨] ಇವುಗಳ ತಯಾರಿಕೆಗೆ ಕ್ಲೋರೈಟಿಕ್ ಶಿಸ್ಟ್ ಶಿಲೆಯ ರೂಪಾಂತರ ಶಿಲೆಯನ್ನು ಬಳಸಲಾಗಿದೆ.[೩] ಸಾಧಾರಣವಾಗಿ ಮಧ್ಯಹಳೇ ಶಿಲಾಯುಗದಲ್ಲಿ ಉಪಕರಣಗಳ ತಯಾರಿಕೆಗೆ ಚಾಲ್ಸಿಡೊನಿ, ಚರ್ಟ್, ಅಗೇಟ್, ಜಾಸ್ಪರ್ ಮತ್ತು ಕ್ವಾಡ್ಜೈಟ್ ಶಿಲೆ ಇಲ್ಲವೆ ಪ್ರಾದೇಶಿಕವಾಗಿ ದೊರೆಯುವ ಶಿಲೆಯನ್ನೇ ಬಳಸುತ್ತಿದ್ದರು.[೪] ಕಳ್ಳಿ ದಿಬ್ಬದಲ್ಲಿ ಕ್ಲೋರೈಟಿಕ್ ಶಿಸ್ಟ್ ಶಿಲೆಯೇ ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿರುವುದರಿಂದ ಅದನ್ನೇ ಉಪಕರಣಗಳ ತಯಾರಿಕೆಗೆ ಉಪಯೋಗಿಸಲಾಗಿದೆ.

ಮಚ್ಚುಗತ್ತಿಯು ೧೧ ಸೆಂ.ಮೀ. ಉದ್ದ, ೫ ರಿಂದ ೯ ಸೆಂ.ಮೀ. ಅಗಲವಿದೆ. ಇದರ ಅಂಚಿನ ಭಾಗದಲ್ಲಿ ಚಕ್ಕೆಗಳನ್ನು ತೆಗೆದು ಅಲಗಿನ ಭಾಗವನ್ನು ಜಿಗ್‌ಜಾಗ್ ಮಾದರಿಯಲ್ಲಿ ಮೊನಚುಗೊಳಿಸಿಕೊಂಡಿರುವರು. ಇನ್ನೊಂದು ಆಯುಧವು ಅಂಡಾಕಾರದಲ್ಲಿದ್ದು ೧೫ ಸೆಂ.ಮೀ. ಉದ್ದ, ೬ ರಿಂದ ೮ ಸೆಂ.ಮೀ. ಅಗಲವಿದೆ. ಇದರ ಎರಡೂ ಭಾಗಗಳಲ್ಲಿ ಚಕ್ಕೆಗಳನ್ನು ಎಬ್ಬಿಸಿದ್ದು, ತುದಿಭಾಗವನ್ನು ಚೂಪಾಗಿಸಿಕೊಂಡಿರುವರು. ಆದರೆ ಈ ಆಯುಧದ ಅಲಗಿನ ಭಾಗ ಭಗ್ನವಾಗಿದೆ. ಇದಕ್ಕೆ ಕಾರಣ ಆಯುಧವನ್ನು ಹೆಚ್ಚಾಗಿ ಉಪಯೋಗಿಸಿದ್ದಿರಬೇಕು ಅಥವಾ ಆಯುಧ ತಯಾರಿಕೆಗೆ ಬಳಸಿದ ತಿರಾಗಟ್ಟಿಯಲ್ಲಿದ್ದ ಕ್ಲೋರೈಟಿಕ್ ಶಿಸ್ಟ್ ಶಿಲೆ ಕಾರಣವಾಗಿದ್ದಿರಬೇಕು ಎಂದು ಊಹಿಸಬಹುದು.

ಚಿತ್ರದುರ್ಗ ಜಿಲ್ಲೆಯ ತಾಳ್ಯ[೫] ಜಾನಕಲ್ಲು[೬] ಮತ್ತು ಕೂನಬೇವು[೭] ಗ್ರಾಮಗಳಲ್ಲಿ [ಚಳ್ಳಕೆರೆ ತಾಲೂಕಿನ] ಗ್ರಾಮದಲ್ಲಿ[೮]

* ಸಹಾಯಕ ಶಾಸನಶಾಸ್ತ್ರಜ್ಞ, ಭಾರತೀಯ ಪುರಾತತ್ತ್ವ ಸರ್ವೇಕ್ಷಣಾ ಇಲಾಖೆ, ಶಾಸನಶಾಸ್ತ್ರ ವಿಭಾಗ, ಚನ್ನೈ.

ಅಂತ್ಯ ಹಳೇ ಶಿಲಾಯುಗದ ಕುರುಹುಗಳು ಈ ಹಿಂದೆ ಪತ್ತೆಯಾಗಿದ್ದವು. ಆದರೆ ಮಧ್ಯ ಹಳೇಶಿಲಾಯುಗದ ಕುರುಹುಗಳು ಈ ಹಿಂದೆ ದೊರೆತಿರಲಿಲ್ಲ. **ಚಿತ್ರದುರ್ಗ ಜಿಲ್ಲೆಯಲ್ಲಿ ಇದೇ ಮೊಟ್ಟಮೊದಲ ಬಾರಿಗೆ ಮಧ್ಯಹಳೇ ಶಿಲಾಯುಗದ ಉಪಕರಣಗಳು ಪತ್ತೆಯಾಗಿದೆ.** ಎಂಬುದು ಗಮನಾರ್ಹ. ಈ ಕಾಲಘಟ್ಟವು ನಂತರದ ಮಧ್ಯಪ್ಲಿಸ್ಟೋಸೀನ್ ಕಾಲದಿಂದ ಅಂತ್ಯ ಪ್ಲಿಸ್ಟೋಸೀನ್ ಕಾಲದವರೆಗೆ ಅಸ್ತಿತ್ವದಲ್ಲಿತ್ತು.

ಮೇಲೆ ವಿವರಿಸಿದ ಕಳ್ಳಳ್ಳಿ ದಿಬ್ಬದ ಆಸುಪಾಸಿನಲ್ಲಿ ಸುಮಾರು ೩೦ ಶಿಲಾವೃತ್ತ [stone circle] ಮಾದರಿಯ ಬೃಹತ್ ಶಿಲಾಯುಗದ ಸಮಾಧಿಗಳು ಪತ್ತೆಯಾಗಿವೆ. ದೊಡ್ಡ



ಬೃಹತ್ ಶಿಲಾಯುಗ ಕಾಲದ ಶಿಲಾವೃತ್ತ ಮಾದರಿಯ ಸಮಾಧಿ ಗೊಡಬನಹಾಳು ಗ್ರಾಮ



ಮಧ್ಯ ಹಳೇ ಶಿಲಾಯುಗ ಕಾಲದ ಶಿಲಾಯುಧಗಳು<br>ಗೊಡಬನಹಾಳು ಗ್ರಾಮ

ನವ ಶಿಲಾಯುಗ ಕಾಲದ ಕಲ್ಲಿನ ಕೊಡಲಿ<br>ಬಸ್ತಿಹಳ್ಳಿ ಗ್ರಾಮ

ದೊಡ್ಡ ಕಲ್ಲುಗಳನ್ನು ಬಳಸಿ ಮಾನವನ ಸಮಾಧಿಗಳನ್ನು ನಿರ್ಮಿಸಿರುವುದರಿಂದ ಇದನ್ನು 'ಬೃಹತ್ ಶಿಲಾಯುಗ' ಎಂದು ಕರೆಯುತ್ತಾರೆ. ಹಾಗೆಯೇ ದಕ್ಷಿಣ ಭಾರತದಲ್ಲಿ ಕಬ್ಬಿಣದ ಬಳಕೆ ಮೊದಲ ಬಾರಿಗೆ ಈ ಕಾಲಘಟ್ಟದಲ್ಲಿ ಪ್ರಾರಂಭ ವಾದದ್ದರಿಂದ ಇದನ್ನು 'ಕಬ್ಬಿಣಯುಗ' ಎಂದೂ ಕರೆಯುತ್ತಾರೆ. ಈ ಹಂತದಲ್ಲಿ ಮಾನವ ಸತ್ತನಂತರ ಕಬ್ಬಿಣ, ಮಣಿಗಳು, ವಿವಿಧ ವರ್ಣದ ಮಡಕೆಗಳನ್ನು ದಫನ ಸಾಮಾಗ್ರಿ [Grave Goods] ಗಳಾಗಿ ಇಟ್ಟು ಸಮಾಧಿ ಮಾಡುತ್ತಿದ್ದರು. ನಂತರ ವಿವಿಧ ಬಗೆಯ ಕಲ್ಲುಗಳಿಂದ ಮುಚ್ಚುತ್ತಿದ್ದರು. ಇವುಗಳೇ ಬೃಹತ್ ಶಿಲಾಸಮಾಧಿಗಳೆನಿಸಿಕೊಂಡಿವೆ. ಕಳ್ಳಿ ದಿಬ್ಬದ ಸಮಾಧಿಗಳ ಮೇಲ್ಭಾಗದಲ್ಲಿ ದೊಡ್ಡ ದೊಡ್ಡ ಕಲ್ಲಿನ ಗುಂಡುಗಳನ್ನು ವೃತ್ತಾಕಾರವಾಗಿ ಇಟ್ಟಿರುವುದನ್ನು ಕಾಣಬಹುದು. ಇವುಗಳಲ್ಲಿ ಒಂದು ಸಮಾಧಿಯನ್ನು ಅಗೆದು ನಿಧಿಗಳ್ಳರು ಹಾಳು ಮಾಡಿರುವರು. ಈ ಯುಗವು ಸುಮಾರು ಕ್ರಿ.ಪೂ. ೮೦೦ ರಿಂದ ಕ್ರಿ.ಪೂ. ೩೦೦ರವರೆಗೆ ಅಸ್ತಿತ್ವದಲ್ಲಿತ್ತು.

ಚಿತ್ರದುರ್ಗದಿಂದ ವಾಯುವ್ಯ ದಿಕ್ಕಿಗೆ ಸುಮಾರು ೨೫ ಕಿ.ಮಿ. ದೂರದಲ್ಲಿ ಬಸ್ತಿಹಳ್ಳಿ ಗ್ರಾಮವಿದೆ. ಈ ಗ್ರಾಮದ ಹೊರವಲಯದಲ್ಲಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ನೂತನ ಶಿಲಾಯುಗಕ್ಕೆ ಸಂಬಂಧಪಟ್ಟ ಶಿಲಾಕೊಡಲಿ ದೊರೆತಿದೆ. ಇದರ ಹಿಂದಿನ ಹಿಡಿಕೆಯ ಭಾಗವು ಭಗ್ನವಾಗಿದ್ದು ಉಳಿದ ಭಾಗವು ೭ ಸೆಂ.ಮೀ. ಉದ್ದ ೫.೫ ಸೆಂ.ಮೀ. ಅಗಲವಿದೆ. ಕ್ಲೋರೈಟಿಕ್ ಶಿಸ್ಟ್ ಶಿಲೆಯನ್ನೇ ಇದರ ತಯಾರಿಕೆಗೂ ಬಳಸಲಾಗಿದೆ.[೧೦] ಆಯುಧವನ್ನು ಉಜ್ಜಿ ನಯಗೊಳಿಸಲಾಗಿದೆ. ಮುಂಬದಿಯ ಭಾಗವು ಚೂಪಾಗಿದ್ದು ೬ ಸೆಂ.ಮೀ. ಅಗಲವಿದೆ. ಮಾನವ ಮೊದಲ ಬಾರಿಗೆ ಕೃಷಿ ಪ್ರಾರಂಭಿಸಿದ್ದು ಈ ಕಾಲಘಟ್ಟದಲ್ಲಿಯೇ ಹಾಗಾಗಿ ಕೃಷಿ ಭೂಮಿ ವಿಸ್ತರಣೆಗೆ ಮರಗಳನ್ನು ಕಡಿಯಲು ಈ ಕೊಡಲಿಗಳನ್ನು ಬಳಸುತ್ತಿದ್ದರು. ಕ್ರಿ.ಪೂ. ೩೫೦೦ ವರ್ಷಗಳಷ್ಟು ಹಿಂದೆ ಬಸ್ತಿಹಳ್ಳಿಗ್ರಾಮ ಪರಿಸರವು ಮಾನವನ ಒಡನಾಟಕ್ಕೆ ಒಳಪಟ್ಟಿತ್ತೆಂಬ ಸಂಗತಿ ಈ ಆಯುಧದಿಂದ ಸ್ಪಷ್ಟವಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಮಧ್ಯಹಳೇ ಶಿಲಾಯುಗದ ಆಯುಧಗಳು ಚಿತ್ರದುರ್ಗ ಜಿಲ್ಲೆಯಲ್ಲಿ ಇದೇ ಮೊದಲ ಬಾರಿಗೆ ದೊರೆತಿರುವುದರಿಂದ ಪ್ರಸ್ತುತ ಶೋಧನೆ ಹೆಚ್ಚಿನ ಮಹತ್ವ ಪಡೆದಿದೆ. ಹಳೇ ಶಿಲಾಯುಗದ ಮೂರು ಹಂತಗಳು ಕುರುಹುಗಳ ಜಿಲ್ಲೆಯಲ್ಲಿ ದೊರೆತಂತಾಗಿದೆ. ಗೊಡಬನಹಾಳು ಪರಿಸರದಲ್ಲಿ ಕ್ರಿ.ಪೂ. ೪೦,೦೦೦ ವರ್ಷಗಳಷ್ಟು ಹಿಂದೆಯೇ ಮಾನವನ ಒಡನಾಟಕ್ಕೆ ಒಳಪಟ್ಟಿದ್ದು ಉಪಕರಣಗಳಿಂದ ದೃಢಪಟ್ಟಿದೆ. ಅಲ್ಲದೆ ಪ್ರಸ್ತುತ ಸಂಶೋಧನೆ ಯಿಂದ ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸದ ಅಧ್ಯಯನಕ್ಕೆ ಹೊಸ ಗರಿಯೊಂದು ಸೇರ್ಪಡೆಯಾಗಿದೆ ಎನ್ನಬಹುದು.

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಈ ಮಾಹಿತಿಯನ್ನು ಪಂಡರಹಳ್ಳಿಯ ಗ್ರಾಮಸ್ಥರಾದ ಬಸವರಾಜಪ್ಪ (೫೦ ವರ್ಷ) ಮತ್ತು ಪ್ರಕಾಶ್ [೪೩ ವರ್ಷ] ರವರು ತಿಳಿಸಿದರು.
೨. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕ ಮತ್ತು ಮಾರ್ಗದರ್ಶಕರಾದ ಡಾ. ಸಿ.ಎಸ್. ವಾಸುದೇವನ್‌ರವರು ಇವುಗಳನ್ನು ಮಧ್ಯಹಳೇ ಶಿಲಾಯುಗದ ಉಪಕರಣಗಳು ಎಂದು ಗುರುತಿಸಿದರು. ಶ್ರೀಯುತರಿಗೆ ಧನ್ಯವಾದಗಳು.
೩. ಚಿತ್ರದುರ್ಗದ ಎಸ್.ಜೆ.ಎಂ. ಮಹಾವಿದ್ಯಾಲಯದ ಪ್ರಾಚಾರ್ಯರು ಮತ್ತು ಭೂಗರ್ಭಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಡಾ. ಎಂ. ಬಸವರಾಜುರವರು ಈ ಶಿಲೆಯು ಕ್ಲೋರೈಟಿಕ್ ಶಿಸ್ಟ್ ಶಿಲೆಯ ರೂಪಾಂತರ ಶಿಲೆ ಎಂದು ಗುರುತಿಸಿದರು. ಶ್ರೀಯುತರಿಗೆ ಧನ್ಯವಾಗಳು.
೪. ಪಾಲ್. ಜೆ.ಎನ್. 'ದಿ ಮಿಡ್ಡಲ್ ಪ್ಯಾಲಿಯೋಲಿಥಿಕ್ ಕಲ್ಚರ್ಸ್ ಆಫ್ ಸೌತ್ ಏಷ್ಯಾ' ಶೆಟ್ಟರ್ ಎಸ್., ಅಂಡ್ ರವಿಕೋರಿ ಶೆಟ್ಟರ್ (ಸಂ). ಪ್ರಿಹಿಸ್ಟರಿ – ಪುಟ ೭೬.
೫. ಶೇಷಾದ್ರಿ ಎಂ., ದಿ ಸ್ಟೋನ್ ಯೂಸಿಂಗ್ ಕಲ್ಚರ್ಸ್ ಆಫ್ ಪ್ರಿಹಿಸ್ಟಾರಿಕ್ ಅಂಡ್ ಪ್ರೋಟೋಹಿಸ್ಟಾರಿಕ್. ಮೈಸೂರು. ಪುಟ ೧೫.
೬ ಅದೇ.,
೭. 'ಕೂನಬೇವು ಗ್ರಾಮದಲ್ಲಿ ಆದಿ ಹಳೇ ಶಿಲಾಯುಗದ ಆಯುಧಗಳು ಪತ್ತೆ' ದಿನಾಂಕ : ೧೯–೩–೨೦೧೧ರ ಕನ್ನಡಪ್ರಭ ದಿನಪತ್ರಿಕೆ, ಪುಟ ೩.
೮. ರಾಮದಾಸರೆಡ್ಡಿ ಜಿ.ಎಸ್., ಚಿತ್ರದುರ್ಗ ಜಿಲ್ಲೆಯ ಪ್ರಾಗ್ ಚಾರಿತ್ರಿಕ ಅಧ್ಯಯನ, ಪುಟ ೬೮.
೯. ಪಾಲ್ ಜೆ.ಎನ್., ಪೂರ್ವೋಕ್ತ, ಪುಟ ೭೮.
೧೦. ಡಾ. ಎಂ. ಬಸವರಾಜುರವರು ಈ ಶಿಲೆಗಳನ್ನು ಗುರುತಿಸಿದರು. ಅದಕ್ಕಾಗಿ ಶ್ರೀಯುತರಿಗೆ ಧನ್ಯವಾದಗಳು.

ಡಾ. ಮಹಾದೇವ ಸಿ.*

# ಆದಿಚುಂಚನಗಿರಿಯ ಇತಿಹಾಸ ಮತ್ತು ಪುರಾತತ್ತ್ವ

ಮಂಡ್ಯ ಜಿಲ್ಲೆಯ ಉತ್ತರ ಗಡಿಭಾಗದಲ್ಲಿರುವ ಚುಂಚನಗಿರಿ, ಪ್ರಸ್ತುತ ಆದಿಚುಂಚನಗಿರಿ ಎಂಬ ಹೆಸರಿನಿಂದ ಪ್ರಸಿದ್ಧ ಪುಣ್ಯಕ್ಷೇತ್ರವಾಗಿದೆ. ಬೀದರ್–ಶ್ರೀರಂಗಪಟ್ಟಣ ಹೆದ್ದಾರಿಯಲ್ಲಿ ಬೆಳ್ಳೂರು–ಮಾಯಸಂದ್ರದ ನಡುವೆ ಇರುವ ಚುಂಚನಹಳ್ಳಿ ಗ್ರಾಮದ ಪೂರ್ವಕ್ಕೆ ಒಂದು ಕಿ.ಮೀ. ಅಂತರದಲ್ಲಿರುವ ಬೆಟ್ಟವೇ ಚುಂಚನಗಿರಿ. ಸಮುದ್ರಮಟ್ಟದಿಂದ ೧೦೬೦ ಅಡಿ ಎತ್ತರದಲ್ಲಿರುವ ಬೆಟ್ಟ ರುದ್ರರಮಣೀಯವಾದ ತಾಣ.[೧] ದಕ್ಷಿಣೋತ್ತರವಾಗಿ ಕಂಡುಬರುವ ಈ ಬೆಟ್ಟಸಾಲಿನಲ್ಲಿ ಚುಂಚನಗಿರಿಯು ಎತ್ತರವಾಗಿದ್ದು, ಕಣಶಿಲೆಯ ಬೃಹತ್ ಬಂಡೆಗಳ ರಚನೆಯದು. ಇದರ ಪರಿಸರದಲ್ಲಿ ಸಣ್ಣಪುಟ್ಟ ಗುಡ್ಡಗಳು ಕಂಡುಬರುತ್ತವೆ. ಬೆಟ್ಟದ ಪಶ್ಚಿಮಕ್ಕೆ ಸ್ವಲ್ಪ ದೂರದಲ್ಲಿ ವೀರವೈಷ್ಣವಿ ನದಿ, ಪೂರ್ವಕ್ಕೆ ಶಿಂಷಾನದಿಗಳು ದಕ್ಷಿಣಾಭಿಮುಖವಾಗಿ ಹರಿಯುತ್ತವೆ. ಹೀಗೆ ಬಯಲು, ಬೆಟ್ಟಗುಡ್ಡಗಳು ಹಾಗೂ ನದಿಹಳ್ಳಗಳ ಪರಿಸರದಿಂದ ಕೂಡಿದ ಈ ಪ್ರದೇಶವು ಸಹಜವಾಗಿ ಮಾನವನ ಬದುಕಿಗೆ ಪೋಷಕವಾಗಿದೆ.

ಕರ್ನಾಟಕದ ಇತರ ಗಿರಿಪರ್ವತಗಳಂತೆ ಚುಂಚನಗಿರಿಯು ತನ್ನ ಪ್ರಾಕೃತಿಕ ಸೌಂದರ್ಯದಿಂದಾಗಿ, ಜನಸಾಮಾನ್ಯರ ಸ್ಮೃತಿಯಲ್ಲಿ ಸ್ಥಳಪುರಾಣ, ಐತಿಹ್ಯ, ಕಥೆ, ಕಾವ್ಯ ಇತ್ಯಾದಿ ಮೌಖಿಕ ಆಕರಗಳನ್ನು ಸೃಜಿಸಿದೆ. ಅವರವರ ಭಕ್ತಿಭಾವಗಳ ಕಣಜವೆನಿಸಿದೆ. ಸ್ಥಳ ಪುರಾಣದ ಪ್ರಕಾರ ಶಿವನು ಚುಂಚನಕಟ್ಟೆಯನ್ನು (ಕೆ.ಆರ್. ನಗರ ತಾಲ್ಲೂಕು) ರಾಮಲಕ್ಷ್ಮಣರಿಗೆ ವಹಿಸಿ, ಚುಂಚನಗಿರಿಗೆ ಬಂದು, ಅಲ್ಲಿದ್ದ ಚುಂಚನೆಂಬ ರಾಕ್ಷಸನನ್ನು ಕೊಂದನಂತೆ. ತನ್ನ ಪಾಪಪರಿಹಾರಕ್ಕಾಗಿ ಕೆಲಕಾಲ ತಪಸ್ಸು ಮಾಡಿದ ಶಿವನು ಪಾರ್ವತಿಯೊಂದಿಗೆ ಅಲ್ಲಿಯೇ ನೆಲಸಿದನಂತೆ. ಅಂದಿನಿಂದ ಈ ಸ್ಥಳಕ್ಕೆ ಚುಂಚನಗಿರಿ ಎಂದು ಹೆಸರಾಯಿತು. ಈ ನಡುವೆ ಈಶ್ವರನ ಕಪಾಲದಿಂದ ಅವತರಿಸಿದ ಸಿದ್ಧಯೋಗಿಯೊಬ್ಬನು, ಶಿವಪಾರ್ವತಿಯರು ನೆಲಸಿದ್ದ ಚುಂಚನಗಿರಿಗೆ ಬರಲಾಗಿ, ಅಲ್ಲಿ ಪರಮೇಶ್ವರನು ತನ್ನ ಅಂಶಯುಕ್ತವಾದ ಪೀಠವನ್ನು ಸ್ಥಾಪಿಸಿ, ಅದರ ನಿರ್ವಹಣೆಯನ್ನು ಸಿದ್ಧಯೋಗಿಗೆ ವಹಿಸಿ ಪಾರ್ವತಿ ಸಮೇತ ಕೈಲಾಸಕ್ಕೆ ಹೋದನಂತೆ. ಹೀಗೆ ಪರಮೇಶ್ವರ ಸ್ಥಾಪಿಸಿದ ಗುರುಪಿಠಗಳಲ್ಲಿ ಇದು ಆದಿಪೀಠವಾಗಿದ್ದು, ಈ ಕ್ಷೇತ್ರವನ್ನು ಆದಿಚುಂಚನಗಿರಿ ಎಂದು ಕರೆಯಲಾಯಿತು. ಶಿವನು ಅಲ್ಲಿ ಆದಿ ಗಂಗಾಧರೇಶ್ವರ, ಈಶ್ವರ, ಸೋಮೇಶ್ವರ, ಮಲ್ಲೇಶ್ವರ, ಗವಿಸಿದ್ದೇಶ್ವರ ಎಂದು ಪಂಚಲಿಂಗಗಳ ರೂಪದಲ್ಲಿ ಉದ್ಭವಿಸಿದನಂತೆ.[೨]

ಚುಂಚನಗಿರಿಗೆ ಸಂಬಂಧಿಸಿದಂತೆ ಐತಿಹ್ಯವೊಂದನ್ನು ಗಮನಿಸುವುದಾದರೆ, ಚುಂಚನಗಿರಿ ಪ್ರದೇಶದಲ್ಲಿ ದಟ್ಟ ಅರಣ್ಯವಿದ್ದು, ಉತ್ತಮ ಬಿದಿರು ಬೆಳೆಯುತ್ತಿತ್ತಂತೆ. ಒಮ್ಮೆ ಬೆಳ್ಳೂರಿನ ಪಾಳೆಯಗಾರನ ಮಗನಿಗೆ ಗಿಣ್ಣಿಲ್ಲದ ಬಿದಿರಿನ ತೊಟ್ಟಿಲು ಬೇಕಾಯಿತು. ಆಗ ಅಂತಹ ಬಿದಿರನ್ನು ಹುಡುಕಿ ತರಲು ಮೂವರು ಮೇದರು ಚುಂಚನಗಿರಿ ಪರಿಸರಕ್ಕೆ ಬಂದರಂತೆ. ಕೊನೆಗೂ ಪತ್ತೆ ಮಾಡಿದ ಗಿಣ್ಣಿಲ್ಲದ ಬಿದಿರನ್ನು ಕಡಿಯುವಾಗ ರಕ್ತ ಚಿಮ್ಮಿತು. ಆಗ ಅಶರೀರವಾಣಿಯೊಂದು, ತಿರುಗಿ ನೋಡದಂತೆ ಹೊರಟು ಹೋಗಿರಿ ಎಂದು ನುಡಿಯಿತು. ಆದರೆ ಕುತೂಹಲ ತಡೆಯದೆ ತಿರುಗಿ ನೋಡಿದ ಮೇದರು ರಕ್ತಕಾರಿ ಸತ್ತರು. ಅವರ ತಲೆಗಳೇ ಪ್ರಸ್ತುತ ಚುಂಚನಗಿರಿಯಲ್ಲಿರುವ ಮೂರು ರುಂಡಶಿಲ್ಪಗಳೆಂದು ನಂಬಲಾಗಿದೆ. ಅದೇ ರೀತಿ ಗಿಣ್ಣಿಲ್ಲದ ಬಿದಿರು ಹಾಗೂ ಕೊಡಲಿ ಏಟಿನಿಂದ ಭಿನ್ನಗೊಂಡ ಲಿಂಗವನ್ನು ಈಗಲೂ ಕಾಣಬಹುದು.[೩]

ಚುಂಚನಗಿರಿಯು ಕೇವಲ ಐತಿಹ್ಯ, ಕಥೆಗಳಲ್ಲದೆ, ಮುಖ್ಯವಾಗಿ ತನ್ನ ಗರ್ಭದಲ್ಲಿ ಪ್ರಾಗಿತಿಹಾಸ ಕಾಲದ ಕುರುಹುಗಳನ್ನು ತುಂಬಿಕೊಡಿರುವುದು ಗಮನಾರ್ಹ. ಅದೇ ರೀತಿ ಚಾರಿತ್ರಿಕವಾಗಿಯೂ ಮಹತ್ವ ಪಡೆದಿದೆ. ಈ ಪ್ರದೇಶದ ಶಾಸನಗಳು, ದೇವಾಲಯಗಳು ಮತ್ತಿತರ ಸ್ಮಾರಕ ಅವಶೇಷಗಳು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯ ದೃಷ್ಟಿಯಿಂದ ಅಧ್ಯಯನ ಯೋಗ್ಯವಾಗಿವೆ. ಈ ಹಿನ್ನೆಲೆಯಲ್ಲಿ ಚುಂಚನಗಿರಿ ಮತ್ತು ಅದರ ಪರಿಸರದ ಚರಿತ್ರೆ ಮತ್ತು ಪುರಾತತ್ವವನ್ನು ತಿಳಿಯುವ ಪ್ರಾಮಾಣಿಕ ಪ್ರಯತ್ನವೇ ಪ್ರಸ್ತುತ ಲೇಖನದ ಮುಖ್ಯ ಉದ್ದೇಶ.

ಇತ್ತೀಚೆಗೆ ಇದೇ ಲೇಖಕರು, ಚುಂಚನಗಿರಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಪ್ರಾಗಿತಿಹಾಸ ಕಾಲದ

* ಪ್ರಾಧ್ಯಾಪಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಕೆಲವು ಮಡಿಕೆ ಚೂರುಗಳು ದೊರೆತವು. ಅವು ಬೆಟ್ಟದ ಮೇಲಿನ ಗುಹಾಲಯಗಳಿಗೆ ತೆರಳುವ ಮಾರ್ಗದಲ್ಲಿನ ಕಪ್ಪು ಮಣ್ಣಿನ ಜತೆಯಲ್ಲಿ ಮಳೆನೀರಿನಿಂದ ಕೊಚ್ಚಿಕೊಂಡು ಬಂದವುಗಳಾಗಿದ್ದವು. ಅವುಗಳನ್ನು ಸಂಗ್ರಹಿಸಿ, ಪರಿಶೀಲಿಸಲಾಗಿ ನವಶಿಲಾಯುಗ ಸಂಸ್ಕೃತಿ ಮತ್ತು ಆದಿ ಇತಿಹಾಸ ಕಾಲಕ್ಕೆ ಸೇರಿದ ಮೃಣ್ಪಾತ್ರೆಯ ಅವಶೇಷಗಳೆಂದು ತಿಳಿದುಬಂದಿತು. ಮೊದಲನೆಯದಾಗಿ ನವಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಮಡಿಕೆ ಅವಶೇಷಗಳು ಬೂದುವರ್ಣದವು. ಇವುಗಳಲ್ಲಿ ಕೆಲವು ಕೈಯಿಂದ ಮಾಡಿದ ಮಡಿಕೆಯ ಅವಶೇಷಗಳಾಗಿದ್ದವು. ಇವುಗಳ ಜೊತೆಯಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಸೂಕ್ಷ್ಮ ಶಿಲಾಯುಧದ ಅವಶೇಷವೊಂದು ಸಹ ದೊರೆತಿದೆ. ಆದರೂ ಇಲ್ಲಿ ಪ್ರಧಾನವಾಗಿ ದೊರೆತದ್ದು, ನವಶಿಲಾಸಂಸ್ಕೃತಿಯ ಮಡಿಕೆ ಅವಶೇಷಗಳು. ಇದರಿಂದ ಚುಂಚನಗಿರಿ ಪರಿಸರದಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೇ ಮಾನವನು ನೆಲೆಗೊಂಡಿದ್ದ ನೆಂಬುದನ್ನು ಗ್ರಹಿಸಬಹುದು. ಚುಂಚನಗಿರಿಯ ವಾಯುವ್ಯ ಕ್ಕಿರುವ ಕಿಬ್ಬನಹಳ್ಳಿ[೪] ನೈರುತ್ಯಕ್ಕಿರುವ ಬಿಂಡಿಗನವಿಲೆ, ದಕ್ಷಿಣಕ್ಕಿರುವ ಪಾಂಡವಪುರದ ಕುಂತಿಬೆಟ್ಟ ಹಾಗೂ ತುಮಕೂರು ಜಿಲ್ಲೆಯ ಇತರೆಡೆಗಳಲ್ಲಿ ಪ್ರಾಗೈತಿಹಾಸಿಕ ಕುರುಹುಗಳನ್ನು ಪುರಾತತ್ವಜ್ಞರು ಬೆಳಕಿಗೆ ತಂದಿದ್ದಾರೆ.

ನವಶಿಲಾಯುಗ ಸಂಸ್ಕೃತಿಯ ಕಾಲದಲ್ಲಿ ಮಾನವನು ಮೊದಲಿನ ಬೇಟೆ ಮತ್ತು ಅಲೆಮಾರಿತನವನ್ನು ಬಿಟ್ಟು, ಪಶುಪಾಲನೆ ಮತ್ತು ಕೃಷಿಯನ್ನು ಕೈಗೊಂಡು ಒಂದೆಡೆ ನೆಲೆ ನಿಲ್ಲಲು ಆರಂಭಿಸಿ ದನು. ತನ್ನ ಆಯುಧಗಳಲ್ಲೂ ಬದಲಾವಣೆ ತಂದುಕೊಂಡು ನಯಗೊಳಿಸಿದನು. ಬೆಂಕಿಯ ಬಳಕೆ, ಚಕ್ರದ ಉಪಯೋಗ, ಮಡಿಕೆಗಳ ತಯಾರಿಕೆ ಮೊದಲಾದ ಕ್ರಾಂತಿಕಾರಕ ಶೊಧಗಳನ್ನು ಕಂಡುಕೊಂಡನು. ತನ್ನ ಅಗತ್ಯಗಳಾದ ಹಾಲು, ಮಾಂಸ ಮತ್ತಿತರ ಆಹಾರ ಪದಾರ್ಥಗಳನ್ನು ಬೇಕಾದ ಹಾಗೆ ಪಡೆಯುವ ಕ್ರಮವನ್ನು ಸಾಧಿಸಿಕೊಂಡನು. ಕೃಷಿ ಮೂಲಕ ಆಹಾರ ಪದಾರ್ಥಗಳನ್ನು ಬೆಳೆದು ಸಂಗ್ರಹಿಸಿ ಕೊಂಡನು. ಮೊದಲಿಗೆ ಬೆಟ್ಟಗುಡ್ಡಗಳ ಗುಹೆ, ಕಲ್ಲಾಸರೆಗಳಲ್ಲಿ ವಾಸಿಸುತ್ತಿದ್ದನು, ನಂತರ ಹೊರಬಂದು ಗುಡಿಸಲುಗಳನ್ನು ನಿರ್ಮಿಸಿಕೊಂಡು, ಚಿಕ್ಕ ಚಿಕ್ಕ ಹಳ್ಳಿಗಳ ನಿರ್ಮಾಣಕ್ಕೆ ನಾಂದಿ ಹಾಡಿದನು. ದ್ರವರೂಪದ ಪದಾರ್ಥಗಳಿಗಾಗಿ, ಅಡುಗೆ ಮಾಡಲು ಹಾಗೂ ಆಹಾರ ಕಾಳುಗಳ ಸಂಗ್ರಹಕ್ಕೆ ಮಣ್ಣಿನ ಪಾತ್ರೆಗಳನ್ನು ತಯಾರಿಸಿ ಬಳಸಲು ಆರಂಭಿಸಿದನು.

ದಕ್ಷಿಣ ಭಾರತದಲ್ಲಿ ರಾಯಚೂರು ಮತ್ತು ಬಳ್ಳಾರಿ ಪ್ರದೇಶಗಳನ್ನು ನವಶಿಲಾಯುಗ ಸಂಸ್ಕೃತಿಯ ತೊಟ್ಟಿಲು ಎನ್ನಲಾಗಿದೆ.[೫] ಇವಲ್ಲದೆ ಈ ಸಂಸ್ಕೃತಿಯ ಬ್ರಹ್ಮಗಿರಿ (ಚಿತ್ರದುರ್ಗ ಜಿಲ್ಲೆ), ಬನಹಳ್ಳಿ (ಕೋಲಾರಜಿಲ್ಲೆ), ಹಳ್ಳೂರು (ಹಾವೇರಿ ಜಿಲ್ಲೆ), ಹೆಮ್ಮಿಗೆ ಮತ್ತು ಟಿ. ನರಸೀಪುರ (ಮೈಸೂರು ಜಿಲ್ಲೆ) ಮೊದಲಾದ ಅಸಂಖ್ಯಾತ ನೆಲೆಗಳನ್ನು ಕರ್ನಾಟಕದಲ್ಲಿ ಗುರುತಿಸಲಾಗಿದೆ. ಉತ್ತರದಿಂದ ದಕ್ಷಿಣಾಭಿಮುಖವಾಗಿ ಕಾವೇರಿ ಕಣಿವೆಯ ಟಿ. ನರಸೀಪುರ ಮತ್ತು ಹೆಮ್ಮಿಗೆವರೆಗೂ ನವಶಿಲಾಯುಗ ಸಂಸ್ಕೃತಿ ಚಲನೆಗೊಂಡಿದೆ. ಪ್ರಸ್ತುತ ಚುಂಚನಗಿರಿಯಲ್ಲಿ ನವಶಿಲಾಯುಗ ಸಂಸ್ಕೃತಿಯ ಕುರುಹುಗಳು ದೊರೆತಿರುವ ಹಿನ್ನೆಲೆಯಲ್ಲಿ ಈ ಚಲನೆಯು ಚುಂಚನಗಿರಿಯ ಮೂಲಕವೇ ಹಾಯ್ದು ದಕ್ಷಿಣಕ್ಕೆ ಸಾಗಿರ ಬಹುದು. ಪಾಂಡವಪುರದ ಕುಂತಿಬೆಟ್ಟದಲ್ಲೂ ನವಶಿಲಾಯುಗ ಸಂಸ್ಕೃತಿಯ ಕುರುಹುಗಳನ್ನು ಡಾ. ಎಂ.ಎಸ್. ಕೃಷ್ಣಮೂರ್ತಿ ಯವರು ಶೊಧಿಸಿ ಬೆಳಕಿಗೆ ತಂದಿದ್ದಾರೆ.[೬] ಇದರಿಂದ ಪಶುಪಾಲನಾ ಸಂಸ್ಕೃತಿ ಕ್ರಿ.ಪೂ. ೩೦೦೦ದಲ್ಲೇ ಈ ಪ್ರದೇಶದಲ್ಲಿ ನೆಲೆಗೊಂಡಿತ್ತೆಂದು ಗ್ರಹಿಸಬಹುದು. ಅಂದರೆ ಸುಮಾರು ೫೦೦೦ ವರ್ಷಗಳ ಹಿಂದೆಯೆ ಚುಂಚನಗಿರಿಯಲ್ಲಿ ನವಶಿಲಾಯುಗ ಸಂಸ್ಕೃತಿಯ ಜನರು ನೆಲಸಿ ತಮ್ಮ ಬದುಕನ್ನು ನಡೆಸುತ್ತಿದ್ದರೆಂಬುದು ಸುಸ್ಪಷ್ಟ. ಅಲ್ಲದೆ ಇಲ್ಲಿ ಕೈಗೊಂಡ ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ + ಚಿಹ್ನೆಯ ಕೆಂಪು ವರ್ಣ ಚಿತ್ರಗಳು ಬೆಳಕಿಗೆ ಬಂದಿವೆ. ಇದು ಗಮನಾರ್ಹ ಸಂಗತಿ. ಬೆಟ್ಟದ ಮಧ್ಯದಲ್ಲಿರುವ ಗವಿಸಿದ್ದೇಶ್ವರ ಗುಹಾಲಯಕ್ಕೆ ಸಾಗುವ ದಾರಿಯಲ್ಲಿ ಎರಡು ಬೃಹತ್ ಬಂಡೆಗಳಿವೆ. ಈ ಬಂಡೆಗಳ ಆಸರೆ ಭಾಗದಲ್ಲಿ + ಚಿಹ್ನೆಗಳ ಕೆಂಪು ವರ್ಣ ಚಿತ್ರಗಳಿವೆ. ಈ + ಚಿಹ್ನೆಗಳ ಅರ್ಥ, ಕಾಲ ಮತ್ತು ಸಂದರ್ಭಗಳನ್ನು ಕುರಿತು ಅಧ್ಯಯನ ನಡೆಯಬೇಕಿದೆ. ಇನ್ನೂ ಮುಂದುವರೆದು ಹೇಳುವುದಾದರೆ ನವಶಿಲಾಯುಗ ಸಂಸ್ಕೃತಿಯ ಪೂರ್ವದಲ್ಲೇ ಅಂದರೆ, ಸೂಕ್ಷ್ಮಶಿಲಾಯುಗ ಕಾಲದಲ್ಲೇ (ಕ್ರಿ.ಪೂ. ೧೦,೦೦೦ ರಿಂದ ಕ್ರಿ.ಪೂ. ೨೦೦೦) ಇಲ್ಲಿ ಮಾನವನ ಚಟುವಟಿಕೆಗಳು ಆರಂಭಗೊಂಡಿದ್ದವೆಂದು ಹೇಳಬಹುದು. ಇದಕ್ಕೆ ಆಧಾರ ವೆಂಬಂತೆ ಸೂಕ್ಷ್ಮಶಿಲಾಯುಗ ಕಾಲಕ್ಕೆ ನಿರ್ದೇಶಿಸಬಹುದಾದ ಸೂಕ್ಷ್ಮ ಶಿಲಾಯುಧದ ಅವಶೇಷವೊಂದು ಇಲ್ಲಿ ಮಡಿಕೆ ಚೂರುಗಳೊಂದಿಗೆ ದೊರೆತಿರುವುದು. ಎರಡನೆಯದಾಗಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಪ್ರಮುಖ ನೆಲೆಯಾದ ಕಿಬ್ಬನಹಳ್ಳಿಯು ಚುಂಚನಗಿರಿಗೆ ಸಮೀಪದಲ್ಲಿರುವುದು.[೭] ಇನ್ನು ಚುಂಚನಗಿರಿಯಿಂದ ದಕ್ಷಿಣಕ್ಕಿರುವ ಶ್ರೀರಂಗಪಟ್ಟಣದಲ್ಲಿ ಸೂಕ್ಷ್ಮಶಿಲಾಯುಧಗಳ ತಯಾರಿಕಾ ನೆಲೆಯನ್ನು ಬೆಳಕಿಗೆ ತರಲಾಗಿದೆ.[೮] ಮೂರನೆಯದಾಗಿ ಚುಂಚನಗಿರಿಯನ್ನು ಭೌಗೋಳಿಕ ಪರಿಸರ, ಈ ಹಿನ್ನೆಲೆಯಲ್ಲಿ ಚುಂಚನಗಿರಿ ನೆಲೆಯನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಕಾಲಕ್ಕೆ

ನಿರ್ದೇಶಿಸಲು ಅಡ್ಡಿಯಿಲ್ಲ. ಆದರೂ ಇಲ್ಲಿ ಇನ್ನಷ್ಟು ಕ್ರಮಬದ್ಧವಾದ ಪುರಾತತ್ವ ಅನ್ವೇಷಣಾ ಕಾರ್ಯವನ್ನು ಕೈಗೊಂಡಲ್ಲಿ ಹೆಚ್ಚಿನ ಹಾಗೂ ಗುರುತರವಾದ ಪ್ರಾಗೈತಿಹಾಸಿಕ ಕುರುಹುಗಳು ಶೋಧಗೊಳ್ಳುವ ಸಾಧ್ಯತೆಗಳಿವೆ. ಇದು ಸಾಧ್ಯವಾದಲ್ಲಿ ಆದಿಚುಂಚನಗಿರಿ ಪರಿಸರದ ಪ್ರಾಗಿರಿಹಾಸವು ಕ್ರಿಪೂ. ೧೦,೦೦೦ದಷ್ಟು ಹಿಂದಕ್ಕೆ ಹೋಗುತ್ತದೆ. ಈ ನಿಟ್ಟಿನಲ್ಲಿ ಪುರಾತತ್ವಜ್ಞರು ಆದಿಚುಂಚನಗಿರಿ ಪರಿಸರದಲ್ಲಿ ಹೆಚ್ಚಿನ ಅಧ್ಯಯನ ಮತ್ತು ಸಂಶೋಧನೆಗಳನ್ನು ಕೈಗೊಳ್ಳುವಂತಾಗಬೇಕು. ಈ ಮೇಲಿನ ವಿವರಗಳಿಂದ ಆದಿಚುಂಚನಗಿರಿ ಪರಿಸರದಲ್ಲಿ ಸೂಕ್ಷ್ಮಶಿಲಾಯುಗ ಕಾಲದಿಂದಲೇ ಮನುಷ್ಯನು ನೆಲಸಿದ್ದನು ಎಂದು ಗ್ರಹಿಸಬಹುದು. ನಂತರದ ನವ ಶಿಲಾಯುಗ ಕಾಲದಲ್ಲೂ ಮನುಷ್ಯನು ಇಲ್ಲಿನ ಗವಿ ಹಾಗೂ ಕಲ್ಲಾಸರೆಗಳಲ್ಲಿ ತನ್ನ ಬದುಕನ್ನು ಸವೆಸಿರುವುದಂತೂ ಸುಸ್ಪಷ್ಟ. ಇದು ಅವನಿಗೆ ಪ್ರಾಕೃತಿಕವಾಗಿ ರಕ್ಷಣೆಯನ್ನು ಸಹ ನೀಡಿತ್ತು. ಸುತ್ತಲೂ ಪಸರಿಸಿರುವ ಬಯಲು, ಅವನ ಪಶುಪಾಲನೆ ಹಾಗೂ ಕೃಷಿ ಚಟುವಟಿಕೆಗಳಿಗೆ ಆಸರೆಯನ್ನೊದಗಿಸಿತು. ಹೀಗೆ ಚುಂಚನಗಿರಿಯ ಭೌಗೋಳಿಕ ಪರಿಸರ ಪ್ರಾಗಿತಿಹಾಸ ಕಾಲದಿಂದಲೂ ಸಂಸ್ಕೃತಿ ವರ್ಧನೆಗೆ ಪೋಷಕವಾಗಿರುವುದು ಗಮನಾರ್ಹ.

ಇನ್ನು ಆದಿ ಇತಿಹಾಸ ಕಾಲಕ್ಕೆ ಸೇರುವ ಚಿತ್ರಿತ ಕೆಂಪು ಮಡಿಕೆ ಅವಶೇಷಗಳು ಇಲ್ಲಿ ದೊರೆತಿದ್ದು, ಚುಂಚನಗಿರಿಯ ಐತಿಹಾಸಿಕ ಮಹತ್ವವನ್ನು ಎತ್ತಿಹಿಡಿದಿವೆ. ಇದರಿಂದ ಆದಿ ಇತಿಹಾಸ ಕಾಲದ ನೆಲೆ ಎನಿಸಿಕೊಂಡಿದೆ. ಕರ್ನಾಟಕದ ಚಂದ್ರವಳ್ಳಿ, ವಡಗಾವಿಮಾಧವಪುರ, ಹಂಪೆ, ಕುರುಗೋಡು, ಬ್ರಹ್ಮಗಿರಿ, ರಾಜಘಟ್ಟ, ಸನ್ನತಿ ಮೊದಲಾದ ನೂರಾರು ಆದಿ ಇತಿಹಾಸ ಕಾಲದ ನೆಲೆಗಳಲ್ಲಿ ಚಿತ್ರಿತ ಕೆಂಪು ಮಡಿಕೆಯ ಅವಶೇಷಗಳು ಕಂಡುಬಂದಿವೆ. ಕೆಂಪು ವರ್ಣಲೇಪಿತ ಮಡಿಕೆಗಳ ಮೇಲೆ ಬಿಳಿವರ್ಣದ ರೇಖಾವಿನ್ಯಾಸಗಳನ್ನು ಬಿಡಿಸಲಾಗುತ್ತಿತ್ತು. ಚುಂಚನಗಿರಿ ಬೆಟ್ಟದಲ್ಲಿ ದೊರೆತಿರುವ ಚಿತ್ರಿತ ಕೆಂಪು ಮಡಿಕೆಗಳ ಮೇಲಿನ ಬಿಳಿವರ್ಣದ ಚಿತ್ರಗಳು ಅಳಿಸಿ ಹೋಗಿದ್ದು, ಅದರ ಛಾಯೆಗಳು ಮಾತ್ರ ಕಂಡು ಬರುತ್ತವೆ. ಇದರಿಂದ ಚುಂಚನಗಿರಿಯು ಕ್ರಿ.ಶ. ೧ನೇ ಶತಮಾನದಲ್ಲೇ ಜನವಸತಿಯಿಂದ ಕೂಡಿತ್ತೆಂಬುದು ಸ್ಪಷ್ಟವಾಗುತ್ತದೆ. ಕೊಪ್ಪಳ, ಬ್ರಹ್ಮಗಿರಿ, ಕುರುಗೋಡು, ಚಂದ್ರವಳ್ಳಿ ಮುತ್ತಿತರ ನೆಲೆಗಳಂತೆ ಚುಂಚನಗಿರಿಯಲ್ಲೂ ಸಹ ಬೆಟ್ಟ ಗುಡ್ಡಗಳೇ ಪ್ರಾಕೃತಿಕವಾಗಿ ರಕ್ಷಣಾತಾಣವಾಗಿದ್ದವು. ಅಂದರೆ ಆದಿ ಇತಿಹಾಸ ಕಾಲದಲ್ಲಿ ಪಟ್ಟಣ ಅಥವಾ ಜನವಸತಿಗಳು ಸಾಮಾನ್ಯವಾಗಿ ಬೆಟ್ಟಗುಡ್ಡಗಳ ತಪ್ಪಲಲ್ಲಿ ನೆಲೆಗೊಳ್ಳುತ್ತಿದ್ದವು. ಈ ರೀತಿ ಬೆಟ್ಟಗುಡ್ಡಗಳು ಅಂತಹ ಪಟ್ಟಣ ಅಥವಾ ಜನವಸತಿಗಳಿಗೆ ಪ್ರಾಕೃತಿಕವಾಗಿ ರಕ್ಷಣೆಯನ್ನು ನೀಡುತ್ತಿದ್ದವು. ಜತೆಗೆ ಪ್ರಮುಖ ಪಟ್ಟಣ ಅಥವಾ ಜನವಸತಿಗಳನ್ನು ದೂರದಿಂದ ಗುರುತಿಸಲು ಸಹ ನೆರವಾಗುತ್ತಿದ್ದವು ಎಂದು ಗ್ರಹಿಸಬಹುದು. ಈ ಹಿನ್ನೆಲೆಯಲ್ಲಿ ಬಹುಶಃ ಚುಂಚನಗಿರಿಯ ತಪ್ಪಲಿನಲ್ಲಿದ್ದ ಆದಿ ತಿಹಾಸ ಕಾಲದ ನೆಲೆಯನ್ನು ಗುರುತಿಸುವ ಹಾಗೂ ಅದರ ಪ್ರಾಚೀನ ಸ್ಥಳನಾಮವನ್ನು ಶೋಧಿಸುವ ಕೆಲಸ ನಮ್ಮ ಮುಂದಿದೆ.

ಕರ್ನಾಟಕದಲ್ಲಿನ ಆದಿ ಇತಿಹಾಸ ಕಾಲದ ನೆಲೆಗಳಲ್ಲಿ ಸಾಮಾನ್ಯವಾಗಿ ಅಸ್ತಿತ್ವದಲ್ಲಿದ್ದ ಕುರುಹುಗಳು ಅಥವಾ ಸೂಚನೆಗಳು ದೊರೆಯುತ್ತವೆ. ಪ್ರಸ್ತುತ ಚುಂಚನಗಿರಿಯಲ್ಲೂ ಅಂತಹ ಕುರುಹುಗಳು ದೊರೆಯುವ ಸಾಧ್ಯತೆಯನ್ನು ಅಲ್ಲಗಳೆಯುವುದಿಲ್ಲ. ಈ ಕುರಿತು ವ್ಯಾಪಕ ಶೋಧನೆ ನಡೆಯಬೇಕಿದೆ. ಇಲ್ಲಿರುವ ತಾವರೆಕೆರೆಯ ಅಸ್ತಿತ್ವವನ್ನು ತಾರಾಭಗವತಿ ಆರಾಧನೆ ಹಿನ್ನೆಲೆಯಲ್ಲಿ ಹುಡುಕುವ ಪ್ರಯತ್ನ ಮಾಡಲಾಗಿದೆ.[೯] ಇಲ್ಲಿನ ಭೌಗೋಳಿಕ ಪರಿಸರವು, ಚುಂಚನಗಿರಿಯನ್ನು ಆರಂಭದಿಂದಲೂ ಒಂದು ಧಾರ್ಮಿಕ ಕೇಂದ್ರವನ್ನಾಗಿ ರೂಪಿಸಿದೆ. ಚುಂಚನಗಿರಿಯ ಹೊಯ್ಸಳರ ಕಾಲದಲ್ಲಿ ಗಂಗವಾಡಿಯ ಕಲುಕಣಿ ೨೦ರ ಆಡಳಿತ ವಿಭಾಗದಲ್ಲಿತ್ತು. ವಿಜಯನಗರದ ಕಾಲದಲ್ಲಿ ಆರಣಿಯ ಸ್ಥಳಕ್ಕೆ ಸೇರಿತ್ತೆಂದು ಶಾಸನದಿಂದ ತಿಳಿದುಬರುತ್ತದೆ. ವಿಜಯನಗರದ ಕೊನೆಗಾಲದಲ್ಲಿ ಪೆನುಗೊಂಡೆ ರಾಜ್ಯದ ಹೊಯ್ಸಣ ನಾಡಿನ ಬೆಳ್ಳೂರುಸೀಮೆಗೆ ಸೇರಿತ್ತೆಂದು ಚರಿತ್ರೆಯಿಂದ ತಿಳಿದು ಬರುತ್ತದೆ.

ಪ್ರಾಚೀನ ಕಾಪಾಲಿಕ ಪೀಠಗಳಲ್ಲಿ ಆದಿಚುಂಚನ ಗಿರಿಯು ಒಂದೆಂದು ಗುರುತಿಸಲಾಗಿದೆ.[೧೦] ಚುಂಚನಗಿರಿಯಲ್ಲಿ ಸಿದ್ಧಯೋಗಿಗೆ ಶಿವನು ನಾಥಪೀಠವನ್ನಿತ್ತಾಗ, ದೇವತೆಗಳು ಸಿದ್ಧಮುನಿಗಳು ಕಾಪಾಲಿ ಮತೋದ್ಧಾರ ಚರಿತವನ್ನು ಮೆಚ್ಚಿ ಹೂಮಳೆಗರೆದರೆಂದು ಆದಿಚುಂಚನಗಿರಿ ಸ್ಥಳಮಹಾತ್ಮ್ಯದಲ್ಲಿ ತಿಳಿಸಿದೆ.[೧೧] ಕೃಷ್ಣಮಿತ್ರನ 'ಪ್ರಬೋಧ ಚಂದ್ರೋದಯ'ದಲ್ಲಿ ಕಾಪಾಲಿಕರು ಕಾಲಭೈರವನ ಆರಾಧಕರು ಎನ್ನಲಾಗಿದೆ. ಆನಂದಗಿರಿಯ 'ಶಂಕರ ವಿಜಯ'ದಲ್ಲಿ ಉನ್ಮತ್ತ ಭೈರವನು ಕಾಪಾಲಿಕರ ಗುರುವೆಂದೂ, ಅವನು ಸದಾ ಕಾಲಭೈರವನ ಸ್ಮರಣೆ ಮಾಡುತ್ತಿದ್ದನು ಎಂದಿದೆ.[೧೨] ಶಂಕರರು ಕರ್ನಾಟಕಕ್ಕೆ ಹೊರಡುವ ಸಂದರ್ಭದಲ್ಲಿ ವಿದರ್ಭದ ರಾಜನು ಅಲ್ಲಿ ಕಾಪಾಲಿಕರು ಹೆಚ್ಚು ಹೋಗಬೇಡಿ ಎಂದು ತಡೆದನಂತೆ[೧೩] ಈ ಹೇಳಿಕೆ ಮತ್ತು ಮಾಹಿತಿಗಳಿಂದ ಕರ್ನಾಟಕದಲ್ಲಿ ಕಾಪಾಲಿಕ ಶೈವಪಂಥ ವ್ಯಾಪಕವಾಗಿ ಹರಡಿತ್ತು ಎಂದು ಗ್ರಹಿಸಬಹುದು. ಜತೆಗೆ ಚುಂಚನಗಿರಿಯಲ್ಲಿರುವುದು ಕಾಲಭೈರವ. ಹಾಗೂ ಈ ಪರಿಸರದಲ್ಲಿ ಕಾಪಾಲಿಕ ಮತಸ್ಥರು ಈಗಲೂ

ಕಂಡುಬರುತ್ತಾರೆ. ಹಾಗಾಗಿ ಚುಂಚನಗಿರಿಯಲ್ಲಿ ಮೂಲತಃ ಕಾಪಾಲಿಕ ಮಠವಿದ್ದು, ಕ್ರಿ.ಶ. ಹತ್ತನೆಯ ಶತಮಾನದ ನಂತರ ಅದು ನಾಥಪಂಥದ ಮಠವಾಗಿ ಮುಂದುವರೆದಂತೆ ಕಾಣುತ್ತದೆ. ಚುಂಚನಗಿರಿಯ ಕ್ರಿ.ಶ. ೧೦೨೯ರ ಶಾಸನವೊಂದು ದೇವನಾಗರಿ ಲಿಪಿಯಲ್ಲಿದ್ದು, ಚುಂಚನಗಿರಿಯಲ್ಲಿನ ನಾಥಪಂಥದ ಮೇಲೆ ಬೆಳಕು ಚೆಲ್ಲುತ್ತದೆ.[೧೪] ಡಾ. ರಹಮತ್ ತರೀಕೆರೆ ಅವರು ಪ್ರಸ್ತುತ ಚುಂಚನಗಿರಿ ಮಠವು ಈಗ ನಾಥಪಂಥದಿಂದಲೂ ಹೊರಹೋಗಿರುವುದನ್ನು ಗುರುತಿಸುತ್ತಾರೆ.[೧೫] ಚುಂಚನಗಿರಿಯಲ್ಲಿ ಈವರೆಗೆ ೬೮ ನಾಥಯೋಗಿಗಳು ಆಗಿಹೋಗಿದ್ದಾರೆ. ಈ ಪಟ್ಟಿಯನ್ನು ಗಮನಿಸಿದರೆ ಚುಂಚನಗಿರಿಯ ನಾಥಪರಂಪರೆಗೆ ಸುಮಾರು ೧೦೦೦ ವರ್ಷಗಳ ಹಿಂದಿನ ಇತಿಹಾಸವಿದೆ ಎಂಬುದು ಸ್ಪಷ್ಟವಾಗುತ್ತದೆ. ಕರ್ನಾಟಕದಲ್ಲಿ ದೇವಾಲಯ ಅಥವಾ ಮಠಗಳು ರೂಪಾಂತರ ಹೊಂದಿರುವ ಉದಾಹರಣೆಗಳು ಸಾಕಷ್ಟಿವೆ. ಮೂರ್ತಿಶಿಲ್ಪಗಳೇ ರೂಪಾಂತರ ಹೊಂದಿ ಬೇರೆ, ಬೇರೆ ಹೆಸರಿನಲ್ಲಿ ಪೂಜೆಗೊಳ್ಳುತ್ತಿವೆ ಹಾಗೂ ಜನರ ನಂಬಿಕೆಗೆ ಪಾತ್ರವಾಗಿವೆ. ಕರ್ನಾಟಕದಲ್ಲಿ ಕಾಪಾಲಿಕರಿಗೂ ನಾಥರಿಗೂ ನಡುವೆ ಹೆಚ್ಚು ವ್ಯತ್ಯಾಸವಿಲ್ಲವೆಂದು ಹೇಳಲಾಗಿದೆ. ಬಹುಶಃ ಅಳಿದುಳಿದ ಕಾಪಾಲಿಕ ಸಮುದಾಯಗಳು ನಾಥಪಂಥದೊಂದಿಗೆಯೇ ಸೇರಿ ತಮ್ಮ ಧಾರ್ಮಿಕ ಪಥವನ್ನು ಸವೆಸಿರಬೇಕು. ಹೀಗಾಗಿ ಆದಿ ಚುಂಚನಗಿರಿ ನಾಥಪೀಠವಾಗಿದ್ದರೂ, ಅದರ ಪರಿಸರದಲ್ಲಿ ಕಾಪಾಲಿಕ ಸಮುದಾಯವದವರನ್ನು ಕಾಣುತ್ತೇವೆ.

ಇನ್ನು ಚುಂಚನಗಿರಿ ಸ್ಥಳನಾಮ ಕುರಿತು ಹೇಳುವುದಾದರೆ, ಇದು ಮೂಲತಃ ಭೈರವನಿಗೆ ಅನ್ವಯಿಸುವ ಹೆಸರೇ ಆಗಿದೆ. ಜನಪದರು ಚುಂಚವನ್ನು ರಾಕ್ಷಸ ಎಂದು ಗುರುತಿಸುತ್ತಾರೆ. ಆದರೆ ಕರ್ನಾಟಕದಲ್ಲಿ ಚುಂಚನ ಹೆಸರಿನ ಸ್ಥಳಗಳು, ವ್ಯಕ್ತಿಗಳು ಹೆಚ್ಚಾಗಿ ಕಂಡುಬರುತ್ತವೆ ಹಾಗೂ ಚುಂಚ ಎಂದರೆ ಕೆದರಿದ ಅಥವಾ ಗುಂಗುರು ಅಥವಾ ಒರಟು ಕೂದಲಿನವನು ಎಂದು ಅರ್ಥೈಸಲಾಗಿದೆ.[೧೬] ಕರ್ನಾಟಕದಾದ್ಯಂತ ದೊರೆತಿರುವ ಭೈರವನ ಶಿಲ್ಪಗಳಲ್ಲಿ ಮೇಲೆ ಹೇಳಿದ ಕೇಶಲಕ್ಷಣಗಳು ಕಂಡುಬರುತ್ತವೆ. ಅಲ್ಲದೆ ಚುಂಚ ಎಂಬುದು ಭೈರವನ ಪರ್ಯಾಯನಾಮವೆಂದು ಹೇಳಲಾಗಿದೆ.[೧೭] ಈ ಎಲ್ಲ ಸಂದರ್ಭ ಹಾಗೂ ಲಕ್ಷಣಗಳು ಭೈರವನಿಗೆ ಅನ್ವಯಿಸುವುದರಿಂದ ಚುಂಚ ಎಂಬುದು ಭೈರವನಿಗೆ ಸಂಬಂಧಿಸಿದ ಪ್ರಾದೇಶಿಕ ಪರ್ಯಾಯ ನಾಮವಾಗಿರಬಹುದು. ಚುಂಚ ಎಂಬ ಹೆಸರಿನ ಬಳಕೆಯನ್ನು ಹಳೆಮೈಸೂರು ಪ್ರದೇಶದಲ್ಲಿ ಕಾಣುತ್ತೇವೆ. ಚಿತ್ರದುರ್ಗ-ಬಳ್ಳಾರಿ ಪ್ರದೇಶದಲ್ಲಿ ಕಾಡುಗೊಲ್ಲರ ದೈವವನ್ನು ಜುಂಜಪ್ಪ ಎಂದು ಕರೆಯಲಾಗುತ್ತದೆ. ಇಲ್ಲಿ ಜುಂಜಪ್ಪ ಮತ್ತು ಚುಂಚ ಪಶುಪಾಲಕ ಸಮುದಾಯಗಳ ದೈವಗಳಾಗಿದ್ದು, ಬಹುಶಃ ಈ ದೈವಗಳೇ ಮುಂದೆ ಶೈವೀಕರಣಗೊಂಡು ಭೈರವನೆನಿಸಿಕೊಂಡಿರಬಹುದು. ಚುಂಚ ಎಂಬುವನು ಚೋಳ ವ್ಯಕ್ತಿ ಇರಬಹುದೆಂದು ವಿದ್ವಾಂಸರೊಬ್ಬರು ಅಭಿಪ್ರಾಯಪಟ್ಟಿದ್ದಾರೆ.[೧೮] ಚುಂಚನಗಿರಿಯ ಭೈರವನನ್ನು ಕುರಿತ ಜಾನಪದ ಕಾವ್ಯದಲ್ಲಿ ಗಂಗೆಮಾಳವ್ವನನ್ನು ಪತ್ನಿ ಎನ್ನಲಾಗಿದೆ. ಅದೇ ರೀತಿ ಮೈಲಾರಲಿಂಗನ (ಮಾರ್ತಾಂಡ ಭೈರವ) ಪತ್ನಿಯ ಹೆಸರು ಸಹ ಗಂಗೆಮಾಳವ್ವ. ಇಲ್ಲಿ ಎರಡೂ ದೈವಗಳು ಪಶುಪಾಲಕರ ಮತ್ತು ಕೃಷಿಕರ ದೈವವಾಗಿದ್ದು, ಗಂಗೆಮಾಳವ್ವನೇ ಪತ್ನಿಯಾಗಿರುವುದು ಗಮನಾರ್ಹ. ಬಹುಶಃ ಪಶುಪಾಲಕ ಸಮುದಾಯ ದಕ್ಷಿಣಕ್ಕೆ ವಲಸೆ ಬಂದಂತೆ, ಮೈಲಾರಲಿಂಗೇಶ್ವರನ ಆರಾಧನೆ ಪ್ರಸಾರಗೊಂಡಿರಬೇಕು. ಬಹುಶಃ ಈ ಹಂತದಲ್ಲಿ ಆದಿಚುಂಚನಗಿರಿಯಲ್ಲಿ ಭೈರವಾರಾಧನೆ ಆರಂಭಗೊಂಡಂತೆ ಕಾಣುತ್ತದೆ.[೧೯]

ಕ್ರಿ.ಶ. ೧೦೨೯ರ ವೇಳೆಗೆ ಚುಂಚನಗಿರಿಯು ನಾಥ ಸಂಪ್ರದಾಯದ ಕೇಂದ್ರವಾಗಿ ರೂಪುಗೊಂಡಿತ್ತು. ಇಲ್ಲಿನ ಕ್ರಿ.ಶ. ೧೨೦೫ರ ಹೊಯ್ಸಳರ ವೀರಗಲ್ಲು ಶಾಸನವೊಂದು ಚುಂಚನ ಕೋಟೆಯನ್ನು ಉಲ್ಲೇಖಿಸುತ್ತದೆ. ಅಂದರೆ ಹೊಯ್ಸಳ ಕಾಲಕ್ಕೆ ಚುಂಚನಗಿರಿ ರಾಜಕೀಯವಾಗಿ ಪ್ರಾಶಸ್ತ್ಯ ಪಡೆದಂತೆ ಕಾಣುತ್ತದೆ. ಈ ಕೋಟೆಯನ್ನು ಸ್ಥಳೀಯ ನಾಯಕನೊಬ್ಬ, ಆಳುತ್ತಿದ್ದನೆಂದು ತಿಳಿದುಬರುತ್ತದೆ. ಸದ್ಯ ಚುಂಚನಗಿರಿಯಲ್ಲಿ ಯಾವುದೇ ಕೋಟೆಯ ಅವಶೇಷಗಳು ಕಂಡುಬರುವುದಿಲ್ಲ. ಆದರೆ ಚುಂಚನಗಿರಿ ಹಿಂಭಾಗದ ಹೊಲಗಳ ಆಚೆ ಕುರುಚಲು ಕಾಡಿನಲ್ಲಿರುವ ಶಿಥಿಲವಾದ ವಾಸ್ತುರಚನೆಗಳನ್ನು ಕೋಟೆ ಎಂದು ಗುರುತಿಸಲಾಗಿದೆ. ಈ ಕುರಿತು ಪರಿಶಿಲಿಸಬೇಕಿದೆ. ಚುಂಚಗಿರಿ ಪರಿಸರವು ಬೆಟ್ಟಗುಡ್ಡಗಳಿಂದ ಕೂಡಿದ್ದು, ಅಲ್ಲಿದ್ದ ನಾಥಪಂಥದ ಯೋಗಿಗಳಿಗೆ ರಕ್ಷಣೆಯನ್ನು ನೀಡಲು ಹೊಯ್ಸಳರು ನಾಯಕನೊಬ್ಬನ ನೇತೃತ್ವದಲ್ಲಿ ಸೈನ್ಯವನ್ನಿಟ್ಟಿದ್ದಂತೆ ಕಾಣುತ್ತದೆ. ಹಾಗಾಗಿ ಪ್ರಾಕೃತಿಕವಾಗಿ ರಕ್ಷಣಾತ್ಮಕವಾಗಿರುವ ಬೆಟ್ಟವನ್ನು ರಕ್ಷಣೆಯ ಪರಿಭಾಷೆಯಲ್ಲಿ ಚುಂಚನಕೋಟೆ ಎಂದು ಕರೆದಿರಬಹುದು.

ಈ ರೀತಿ ಪ್ರಮುಖ ಧಾರ್ಮಿಕ ಕ್ಷೇತ್ರಗಳನ್ನು ಸಂರಕ್ಷಿಸುವ ಅನಿವಾರ್ಯತೆ ಕ್ರಿ.ಶ. ೧೨-೧೩ನೆಯ ಶತಮಾನದ ಕರ್ನಾಟಕದಲ್ಲಿ ಸಾಮಾನ್ಯವಾಗಿರಬೇಕು. ಏಕೆಂದರೆ ಕಲ್ಯಾಣದ ಘಟನೆಯ ನಂತರ ಬಹುಶಃ ಕರ್ನಾಟಕದ ಪ್ರಮುಖ ತೀರ್ಥಕ್ಷೇತ್ರಗಳಿಗೆ ರಕ್ಷಣೆಯನ್ನು ಒದಗಿಸಿದಂತೆ ಕಾಣುತ್ತದೆ. ಉದಾಹರಣೆಗೆ ಕ್ರಿ.ಶ. ೧೧೯೯ರ ಕುರುಗೋಡು ಸಿಂದರ ಶಾಸನವೊಂದು, ವಿರೂಪಾಕ್ಷ ತೀರ್ಥದ ರಕ್ಷಣೆಗಾಗಿ ಸಾಮಂತ

ಮಾದೆನಾಯಕನು ಮತಂಗ ಪರ್ವತದಿಂದ ಆಳುತ್ತಿದ್ದನು ಎಂದು ಉಲ್ಲೇಖಿಸಿದೆ.[೨೧] ಅದೇ ರೀತಿ ಚುಂಚನಗಿರಿಯು ಸಹ ಕ್ರಿ.ಶ. ೧೧ನೇ ಶತಮಾನದಲ್ಲೇ ನಾಥಪಂಥದ ಪ್ರಮುಖ ಕೇಂದ್ರವಾಗಿತ್ತೆಂಬುದು ಅಲ್ಲಿನ ಶಾಸನದಿಂದ ತಿಳಿಯುತ್ತದೆ. ಹೀಗೆ ನಾಥಪಂಥದ ಪ್ರಮುಖ ಕೇಂದ್ರವಾಗಿದ್ದ ಚುಂಚನಗಿರಿಗೆ ಬಹುಶಃ ಬೇರೆ ಪಂಥೀಯರ ದಾಳಿ ಬೆದರಿಕೆಗಳಿದ್ದಿರಬೇಕು. ಏಕೆಂದರೆ ಈ ಸಂದರ್ಭದಲ್ಲಿ ವಿವಿಧ ಮತಪಂಥಗಳ ನಡುವೆ ಒಂದಿಲ್ಲೊಂದು ಸ್ವರೂಪದಲ್ಲಿ ಸ್ಪರ್ಧೆ ಪೈಪೋಟಿಗಳಿದ್ದವು. ಅಗ್ರಹಾರಗಳ ಪ್ರಾಬಲ್ಯವೂ ಇತ್ತು. ಚುಂಚನಗಿರಿ ಸಮೀಪ ದಲ್ಲಿರುವ ಬೆಳ್ಳೂರು ಪ್ರಮುಖ ಅಗ್ರಹಾರವಾಗಿತ್ತು. ಇಲ್ಲಿ ಶ್ರೀವೈಷ್ಣವ, ಶೈವ ಮತ್ತು ಜೈನಧರ್ಮಗಳು ನೆಲೆಗೊಂಡಿದ್ದವು. ಇದೇ ಕಾಲಕ್ಕೆ ಚುಂಚನಗಿರಿಯು ಸಹ ನಾಥಪಂಥದ ಪ್ರಮುಖ ಕೇಂದ್ರವಾಗಿತ್ತು. ಈ ಚುಂಚನಕೋಟೆಯ ಪ್ರಭು ಸಾರೆಯ್ಯನ ಮಗ, ರಾಮನಾಯಕನು ಬೆಲುಹೂರಲಿ (ಬಹುಶಃ ಬೆಳ್ಳೂರು ಇರಬಹುದು.) ಕಾದಿ ಮಡಿದನು ಎಂಬುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಬೆಳ್ಳೂರು ಅಗ್ರಹಾರ ಮತ್ತು ಚುಂಚನಗಿರಿಯ ಸಂಬಂಧಗಳ ಸ್ವರೂಪ ತಿಳಿದುಬರುವುದಿಲ್ಲ.

ಕ್ರಿ.ಶ. ೧೩–೧೪ನೆಯ ಶತಮಾನಕ್ಕೆ ಸೇರುವ ಚುಂಚನ ಹಳ್ಳಿಯ ಮತ್ತೊಂದು ವೀರಗಲ್ಲು ಶಾಸನವನ್ನು ಚಿಕಮಾಯ ನಾಯಕನ ಹೆಸರಿನಲ್ಲಿ ಹಾಕಿಸಲಾಗಿದೆ.[೨೨] ಈ ಚಿಕಮಾಯ ನಾಯಕನು, ಇದೇ ಊರಿನ ಕ್ರಿ.ಶ. ೧೨೦೫ರ ವೀರಗಲ್ಲು ಶಾಸನವನ್ನು ಹಾಕಿಸಿದ ಚಿಕ್ಕಮಾಯನಾಯಕನಿರಬಹುದು. ಆಗಿದ್ದಲ್ಲಿ ಚುಂಚನಹಳ್ಳಿಯ ಈ ವೀರಗಲ್ಲುಗಳು ಒಂದೇ ಘಟನೆಗೆ ಸಂಬಂಧಿಸಿವೆ. ಇಲ್ಲಿನ ಮತ್ತೊಂದು ವೀರಗಲ್ಲು ಶಾಸನ, ಕ್ರಿ.ಶ. ೧೪೨೭ಕ್ಕೆ ಸೇರಿದ್ದು, 'ಬೀರಂಮಲೆಯಲ್ಲಿ ಕಾದಿ ಬಿದ್ದ' ಎಂದಿದೆ.[೨೩] ಬಹುಶಃ ಊರಿನ ಪಕ್ಕದಲ್ಲೇ ಇರುವ ಚುಂಚನಗಿರಿಯನ್ನು ಮಲೆ ಎಂದು ಕರೆದಿರಬಹುದೆ? ಇದು ಖಚಿತವಾದಲ್ಲಿ ಬೀರ ಎಂಬುವನು ಚುಂಚನಗಿರಿಯಲ್ಲಿ ನಡೆದ ಘರ್ಷಣೆಯಲ್ಲಿ ಮಡಿದಿರಬೇಕು. ಆದರೆ ಮಲೆಯಲ್ಲಿ ನಡೆದ ಘರ್ಷಣೆಯ ಸ್ವರೂಪ ಏನೆಂಬುದು ತಿಳಿದು ಬರುವುದಿಲ್ಲ. ಹೀಗೆ ವಿಜಯನಗರ ಕಾಲದಲ್ಲೂ ಚುಂಚನಗಿರಿ ಪರಿಸರ ಕದನ ಮತ್ತು ಹೋರಾಟಗಳಿಂದ ಕೂಡಿತ್ತು.

ಚುಂಚನಹಳ್ಳಿಯ ಕ್ರಿ.ಶ. ೧೪೮೪ರ ಶಾಸನವೊಂದು ಆರಣಿಸ್ಥಳದ ಚುಂಚನಹಳ್ಳಿ ಗ್ರಾಮವನ್ನು ಚುಂಚನಭೈರವ ದೇವರಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ.[೨೪] ದಾನ ನೀಡಿದವನು ಕಠಾರಿ ಸಾಳುವ ನರಸಿಂಗ ರಾಜವೊಡೆಯರ ಮನೆಯ ಪ್ರಧಾನವಾದ ವಿರೂಪಾಕ್ಷದೇವಣ್ಣ. ಅಲ್ಲದೆ ಚುಂಚನಹಳ್ಳಿ ಗ್ರಾಮವನ್ನು ವಿರುಪಾಕ್ಷಪುರವೆಂದು ಪುನರ್ ನಾಮಕರಣ ಮಾಡುತ್ತಾನೆ. ಈ ಶಾಸನದಿಂದಾಗಿ ಚುಂಚನಗಿರಿಯ ಅಧಿದೇವತೆ ಭೈರವ ಎಂಬುದು ಸುಸ್ಪಷ್ಟ.

ಆದರೆ ಈಗಿರುವ ಭೈರವ ಮೂರ್ತಿಯನ್ನು ವಿಜಯ ನಗರೋತ್ತರ ಕಾಲಕ್ಕೆ ನಿರ್ದೇಶಿಸಬಹುದು. ಮೂರ್ತಿಯು ಗಿಡ್ಡಗಿದ್ದು ರಚನೆಯಲ್ಲಿ ಪ್ರಮಾಣಬದ್ಧತೆ ಇಲ್ಲದಿರುವುದು ಎದ್ದು ಕಾಣುತ್ತದೆ. ದೇವಾಲಯವು ಸಹ ಸಣ್ಣದಿದ್ದು, ಗರ್ಭಗೃಹ ಮತ್ತು ಮುಖಮಂಟಪದಿಂದ ಕೂಡಿದೆ. ಇದರಿಂದ ಶಾಸನದಲ್ಲಿ ಉಲ್ಲೇಖಗೊಂಡಿರುವ ಭೈರವ ದೇವರು, ಈಗಿರುವ ಭೈರವನಲ್ಲವೆಂಬುದು ಸುಸ್ಪಷ್ಟ. ಹಾಗಾದರೆ ಶಾಸನದಲ್ಲಿ ಉಲ್ಲೇಖಗೊಂಡ ಭೈರವ ಮೂರ್ತಿ ಏನಾಯಿತು? ಕಾಲಾಂತರದಲ್ಲಿ ಭೈರವಮೂರ್ತಿ ಪಲ್ಲಟಗೊಂಡು ಲಿಂಗವನ್ನು ಪ್ರತಿಷ್ಠಾಪಿಸಲಾಯಿತೆ ? ಅದೇ ಲಿಂಗವನ್ನು ಗಂಗಾಧರನೆಂದು ಕರೆಯಲಾಯಿತೆ ?[೨೫] ಎಂಬ ಪ್ರಶ್ನೆಗಳು ಎದುರಾಗುತ್ತವೆ. ಬೆಟ್ಟದಲ್ಲಿ ಈಗಿರುವ ಗಂಗಾಧರೇಶ್ವರ ದೇವಾಲಯವು ವಿಜಯನಗರೋತ್ತರ ಕಾಲದ ರಚನೆ. ಆದರೆ ಅಧಿಷ್ಠಾನ ಹಳೆಯದು. ಈ ಕುರಿತು ಮುಂದೆ ವಿವರಿಸಲಾಗುವುದು.

ಹೀಗೆ ಚುಂಚನಗಿರಿಯ ವಿಜಯನಗರ ಕಾಲದಲ್ಲಿ ಜನಜನಿತವಾದ ಧಾರ್ಮಿಕ ಕ್ಷೇತ್ರವಾಗಿದ್ದು, ವಿಜಯನಗರದ ಅಧಿಕಾರಿಗಳ ಗಮನ ಸೆಳೆದು ಅವರಿಂದ ದಾನದತ್ತಿಗಳನ್ನು ಪಡೆಯುವಷ್ಟು ಪ್ರಸಿದ್ಧಿಯನ್ನು ಪಡೆದಿತ್ತು. ಚುಂಚನಗಿರಿ ಯಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ನಾಗರಿ ಶಾಸನವೊಂದು ಸಮಾಧಿ ಮಂಟಪದ ಕಂಬದ ಮೇಲಿದ್ದು, ಚುಂಚನಗಿರಿಯ ರಾಮನಾಥಸ್ವಾಮಿ ಹಾಗು ಕುರುಕ್ಷೇತ್ರ ನಾಥರಿಗೆ ಸೇವೆ ಸಲ್ಲಿಸಿದ ಹರನಾಥ ಗುರುಬಾಯಿಯನ್ನು ಉಲ್ಲೇಖಿಸುತ್ತದೆ.[೨೬] ಇವರನ್ನು ಮೇಹರನಾಥ ಎಂದು ಗುರುತಿಸಿ, ಆದಿಚುಂಚನಗಿರಿ ಗುರು ಪರಂಪರೆಯಲ್ಲಿ ನಲವತ್ತೊಂಬತ್ತನೆಯ ಗುರುವಾಗಿದ್ದರೆನ್ನಲಾಗಿದೆ.[೨೭] ಇದನ್ನು ಗಮನಿಸಿದರೆ ಚುಂಚನಗಿರಿ ಕ್ಷೇತ್ರದಲ್ಲಿ ಉತ್ತರ ಭಾರತದ ಪ್ರಭಾವ ಗಾಢವಾಗಿತ್ತು ಎನಿಸುತ್ತದೆ.[೨೮]

ಕ್ರಿ.ಶ. ೧೭ನೆಯ ಶತಮಾನದ ಇನ್ನೊಂದು ಶಾಸನ ನಾಗಚಾವಡಿಯ ಸಮೀಪದ ಬಂಡೆಯ ಮೇಲಿದೆ.[೨೯] ಮುದಗವುಡಪನು ನಾಗಪರದೇಸಿಯಿಂದ ಕಟ್ಟಿಸಿದ ರಚನೆ ಯನ್ನು ಉಲ್ಲೇಖಿಸುತ್ತದೆ. ಶಾಸನವನ್ನು ಬರೆದವನು ಪುಟ್ಟಯ್ಯ ಸೋಮನಾಥ ಎಂದಿದೆ. ಈ ರಚನೆಯನ್ನು ಮಠದಲ್ಲಿನ ಜ್ವಾಲಾಪೀಠದ ಮುಂಭಾಗದಲ್ಲಿರುವ ನಾಗಚಾವಡಿ ಎನ್ನಲಾಗಿದೆ.[೩೦] ಇಲ್ಲಿನ ಕ್ರಿ.ಶ. ೧೮–೧೯ನೆಯ ಶತಮಾನದ ಮತ್ತೊಂದು ನಾಗರಿ ಶಾಸನ ಹರಪಂಥ ಕುಸುಮನಾಥಜಿ ಮಠವನ್ನು ಉಲ್ಲೇಖಿಸುತ್ತದೆ.[೩೧] ಇಲ್ಲಿನ ಇತರ ಶಾಸನ ಗಳೆಂದರೆ ಕ್ರಿ.ಶ. ೧೯೬೭ಕ್ಕೆ ಸೇರುವ ಹಿತ್ತಾಳೆ ತಗಡಿನ

ಮೇಲಿರುವ ಶಾಸನ, ಕರೀಗೌಡ ಎಂಬುವನು ಆದಿಚುಂಚನಗಿರಿ ನಿಲಯ ಕ್ಷೇತ್ರಪಾಲ ಶ್ರೀ ಗಂಗಾಧರೇಶ್ವರ ದೇವಾಲಯದ ಮಹಾದ್ವಾರದ ಬಾಗಿಲಿಗೆ ಹಿತ್ತಾಳೆ ತಗಡನ್ನು ಹೊದಿಸಿದ ಸೇವೆ ಬಗ್ಗೆ ತಿಳಿಸುವುದು.[೩೩] ಇದರ ಪಕ್ಕದಲ್ಲಿರುವ ಹಿತ್ತಾಳೆ ತಗಡಿನ ಮೇಲೆ ಸೇವೆ ಮಾಡಿದ ಕರೀಗೌಡ ಮತ್ತು ಅವನ ಪತ್ನಿಯ ಉಬ್ಬು ಪ್ರತಿಮೆಗಳಿದ್ದು, ಬರೆಹವಿದೆ. ಹೀಗೆ ಚುಂಚನಗಿರಿಯ ಶಾಸನಗಳು ವಿರಳವಾದರೂ ಅಲ್ಲಿನ ಚರಿತ್ರೆ ಕಟ್ಟಿಕೊಡಲು ಸಹಕಾರಿಯಾಗಿವೆ. ನಾಗಮಂಗಲ ತಾಲ್ಲೂಕಿನ ಇತರ ಶಾಸನಗಳಲ್ಲೂ ಭೈರವ ದೇವರು ಮತ್ತು ದೇವಾಲಯಗಳ ಬಗೆಗೆ ಮಾಹಿತಿ ದೊರೆಯುತ್ತವೆ. ತಾಲ್ಲೂಕಿನ ವಡ್ಡರಹಳ್ಳಿಯಿಂದ ಹನುಮನಹಳ್ಳಿಗೆ ಹೋಗುವ ರಸ್ತೆಯಲ್ಲಿ ಜುಂಜಪ್ಪನ ಗುಡಿ ಇದೆ.[೩೪] ಹಾಗೂ ಕುರುಬರ ಆರಾಧ್ಯ ದೈವ ಬೀರಪ್ಪನ ಗುಡಿಗಳು ತಾಲ್ಲೂಕಿನಾದ್ಯಂತ ಕಂಡುಬರುತ್ತವೆ. ಪಶುಪಾಲಕ ಮತ್ತು ಕೃಷಿಕ ಸಮುದಾಯಗಳ ಗಾಢವಾದ ಸಂಸ್ಕೃತಿ ಇಲ್ಲಿ ನೆಲೆಯೂರಿರುವುದು ಕಂಡುಬರುತ್ತವೆ. ಪಶುಪಾಲಕ ಮತ್ತು ಕೃಷಿಕ ಸಮುದಾಯಗಳ ಗಾಢವಾದ ಸಂಸ್ಕೃತಿ ಇಲ್ಲಿ ನೆಲೆಯೂರಿರುವುದು ಗಮನಾರ್ಹ.

ಇನ್ನು ಆದಿ ಚುಂಚನಗಿರಿಯಲ್ಲಿರುವ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳನ್ನು ಕುರಿತು ವಿವರಿಸುವುದಾದರೆ ಮೊದಲಿಗೆ ಇಲ್ಲಿನ ನೈಸರ್ಗಿಕ ಗುಹಾಲಯಗಳನ್ನು ಪ್ರಸ್ತಾಪಿಸುವುದು ಸೂಕ್ತ.

### ಕತ್ತಲ ಸೋಮೇಶ್ವರ ಗುಹೆ

ಚುಂಚನಗಿರಿಯ ಉತ್ತರದ ಶಿಖರವನ್ನು ಗಾಳಿಕಲ್ಲು ಎಂದು ಸ್ಥಳೀಯರು ಕರೆಯುತ್ತಾರೆ. ಇದನ್ನು ಕಹಳೆಕಲ್ಲು>ಕಾಳೆಕಲ್ಲು>ಗಾಳಿಗಲ್ಲು ಎಂದು ಸ್ಥಿತ್ಯಂತರಗೊಂಡಿರಬಹುದು.[೩೫] ಅಪಾಯಕಾರಿ ಕಂದಕಗಳಿಂದ ಸುತ್ತುವರೆದ ಕಡಿದಾದ ಕೋಡುಗಲ್ಲಿಗೆ ಕಬ್ಬಿಣದ ಸರಪಳಿಯನ್ನು ಬಿಗಿದು ಇಳಿಬಿಟ್ಟಿದ್ದಾರೆ. ಹರಕೆ ಹೊತ್ತ ಭಕ್ತರು ಈ ಸರಪಳಿಯನ್ನು ಹಿಡಿದು ಬಂಡೆಯನ್ನು ಹತ್ತುತ್ತಾರೆ. ಇದಕ್ಕೆ ಸಾಗುವ ಮಧ್ಯದಲ್ಲಿ ಸ್ವಲ್ಪ ಬಲಕ್ಕೆ ಬಂಡೆಗಳ ನಡುವೆ ಹಾಯ್ದು ಹೋದರೆ ವಿಶಾಲವಾದ ಬಂಡೆಯಾಸರೆಯ ಕತ್ತಲು ಗುಹೆ ಸಿಗುತ್ತದೆ. ಇದರ ನಡುವೆ ಸೋಮೇಶ್ವರ ಎಂದು ಕರೆಯುವ ಸ್ವಯಂಭೂ ಲಿಂಗವಿದೆ. ವಿಶೇಷ ದಿನಗಳಲ್ಲಿ ಬರುವ ಭಕ್ತರು ಈ ಲಿಂಗಕ್ಕೆ ಪೂಜೆ ಸಲ್ಲಿಸುತ್ತಾರೆ. ಲಿಂಗವು ಮಧ್ಯಮ ಗಾತ್ರದ್ದು. ಕ್ರಿ.ಶ. ೧೨-೧೩ನೇ ಶತಮಾನದ ರಚನೆಯಂತೆ ಕಂಡುಬರುತ್ತದೆ.

### ಗವಿಸಿದ್ಧೇಶ್ವರ

ಕತ್ತಲ ಸೋಮೇಶ್ವರದಿಂದ ಹಿಂತಿರುಗಿ ಸ್ವಲ್ಪ ದೂರ ಬಂದ ಮೇಲೆ, ಬಲಕ್ಕೆ ತಿರುಗಿ ಪಶ್ಚಿಮಾಭಿಮುಖವಾಗಿರುವ ಬಂಡೆಗಳ ಮೇಲೆ ನಡೆದರೆ ಗವಿಸಿದ್ದೇಶ್ವರ ಗುಹಾಲಯ ಸಿಗುತ್ತದೆ. ನೈಸರ್ಗಿಕ ಬಂಡೆಯಾಸರೆಯ ಗುಹೆಯು ಪಶ್ಚಿಮಾಭಿಮುಖವಾಗಿದ್ದು, ಅರ್ಧವೃತ್ತಾಕಾರದಲ್ಲಿದೆ. ಹಾಗೂ ಗಿಡ್ಡನೆಯ ದ್ವಾರವಿದ್ದು, ಗೋಡೆಯನ್ನು ಹೊಂದಿದೆ. ಒಳಗೆ ಮಧ್ಯಭಾಗದಲ್ಲಿ, ಪ್ರಾಚೀನ ಸ್ವಯಂಭೂ ಲಿಂಗವಿದೆ. ಇದನ್ನು ಗವಿಸಿದ್ದೇಶ್ವರ ಎಂದು ಕರೆಯುತ್ತಾರೆ. ಲಿಂಗದ ಪಕ್ಕದಲ್ಲಿ ಕಲ್ಲಿನ ದೀಪಸ್ತಂಭವನ್ನು ಕಾಣಬಹುದು. ಮುಂಭಾಗದಲ್ಲಿ ಭಗ್ನಗೊಂಡಿರುವ ಚಿಕ್ಕದಾದ ಎರಡು ನಂದಿ ಶಿಲ್ಪಗಳಿವೆ. ಮೇಲೆ ಹೇಳಿದ ಎರಡೂ ಕಲ್ಲಾಸರೆಯ ಗುಹಾಲಯಗಳು ಏಕಾಂತವಾಸಕ್ಕೆ ಯೋಗ್ಯವಾಗಿವೆ. ಇವು ಬೆಟ್ಟದಲ್ಲಿ ವಾಸವಿದ್ದ ತಪೋಧನರ, ಸಿದ್ಧರ ಅಥವಾ ನಾಥ ಸನ್ಯಾಸಿಗಳ ಆರಾಧನಾ ಸ್ಥಳಗಳಾಗಿದ್ದವೆನ್ನಬಹುದು. ಈ ಗುಹಾಲಯಗಳನ್ನು ಸ್ವಚ್ಛಗೊಳಿಸಿ, ಬೆಳಕಿನ ವ್ಯವಸ್ಥೆ ಕಲ್ಪಿಸಿದಲ್ಲಿ ಸಾರ್ವಜನಿಕರ ವೀಕ್ಷಣೆಗೆ ಅನುಕೂಲವಾಗುತ್ತದೆ. ಹಾಗೂ ಪ್ರಾಚೀನ ಪೂಜಾನೆಲೆಗಳನ್ನೂ ಸಂರಕ್ಷಿಸಿದಂತಾಗುವುದು. ಹೊರಗೆ ಬಂಡೆಯ ಮೇಲೆ ಮೂರು ಸುತ್ತಿನ ಚೌಕ ಹಾಗೂ ಅದರ ಮೇಲಿನ ನಾಲ್ಕೂ ಭಾಗಗಳಲ್ಲಿ ಅಡ್ಡಗೆರೆ ಇರುವ ರೇಖಾಚಿತ್ರವಿದೆ. ಈ ಗುಹೆಗಳು ತಾಂತ್ರಿಕ ಆಚರಣೆಯ ತಾಣಗಳಾಗಿದ್ದವು. ಮೇಲೆ ಹೇಳಿದ ಗುಹಾಲಯಗಳಲ್ಲದೆ ಇನ್ನೂ ಅನೇಕ ಗುಹೆಗಳು ಹಾಗೂ ಕಲ್ಲಾಸರೆಗಳು ಇಲ್ಲಿವೆ. ಇವುಗಳ ಸಮಗ್ರ ಕ್ಷೇತ್ರಕಾರ್ಯ ಆಗಬೇಕಿದೆ.

### ಚೋಳೂರು ಕಂಬ

ಬೆಟ್ಟದ ಮೇಲಿರುವ ಕಂಬವೊಂದನ್ನು ಚೇಳೂರು ಕಂಬ ಅಥವಾ ಚೋಳೂರು ಕಂಬ ಎಂದು ಕರೆಯುತ್ತಾರೆ. ಇಲ್ಲಿ ಹೊತ್ತಿಸಿದ ದೀಪದ ಬೆಳಕು ದೂರದ ಚೋಳೂರಿನ ಕಲ್ಯಾಣಿಯಲ್ಲಿ ಪ್ರತಿಬಿಂಬಿಸುವುದೆಂದು ಭಕ್ತರ ನಂಬಿಕೆ.[೩೬] ಸಾಮಾನ್ಯವಾಗಿ ಬೆಟ್ಟಗುಡ್ಡಗಳ ಪ್ರದೇಶಗಳಲ್ಲಿ ಇಂತಹ ಕಂಬಗಳನ್ನು ಕಾಣುತ್ತೇವೆ.[೩೭] ಬಹುಶಃ ಇವುಗಳು ಎತ್ತರದಲ್ಲಿರುವುದನ್ನು ಗಮನಿಸಿದರೆ, ಹಿಂದೆ ಮಾಹಿತಿಗಳನ್ನು ದೂರದ ಪ್ರದೇಶಗಳಿಗೆ ಕಳುಹಿಸಲು, ಇಲ್ಲಿಂದ ಪಂಜುಗಳ ಮೂಲಕ ಸೂಚನೆಗಳನ್ನು ನೀಡುತ್ತಿದ್ದಿರಬಹುದು. ಹಾಗಾಗಿ ಚುಂಚನಗಿರಿಯು ಆಯಕಟ್ಟಿನ ಸ್ಥಳದಲ್ಲಿದ್ದು, ರಕ್ಷಣಾ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸಿತ್ತೆನ್ನಬಹುದು. ಈ ಹಿನ್ನೆಲೆಯಲ್ಲಿ ಚುಂಚನಗಿರಿಯನ್ನು ಚುಂಚನಕೋಟೆ ಎಂದು ಕರೆದಿರಬಹುದು.

### ಗಂಗಾಧರೇಶ್ವರ ದೇವಾಲಯ

ಮಧ್ಯಬೆಟ್ಟದಿಂದ ಮೇಲೇರಿದರೆ ಜೀರ್ಣೋದ್ಧಾರಗೊಂಡಿರುವ ಗಂಗಾಧರೇಶ್ವರ ದೇವಾಲಯ ಸಿಗುತ್ತದೆ.

ಅಧಿಷ್ಠಾನದ ಮೇಲಿರುವ ದೇವಾಲಯವು ದಕ್ಷಿಣಾಭಿಮುಖವಾಗಿದೆ. ನಾಲ್ಕು ಗರ್ಭಗೃಹಗಳಿದ್ದು, ಗಂಗಾಧರೇಶ್ವರ ದೇವರ ಗರ್ಭಗೃಹ ಪೂರ್ವಾಭಿಮುಖವಾಗಿದೆ. ನೈರುತ್ಯ ಮೂಲೆಯಲ್ಲಿ ಪೂರ್ವಾಭಿಮುಖವಾಗಿರುವ ಗರ್ಭಗೃಹದಲ್ಲಿ ಇತ್ತೀಚೆಗೆ ಪ್ರತಿಷ್ಠಾಪಿಸಿರುವ ಪಾರ್ವತಿ ಶಿಲ್ಪವಿದೆ. ಗಂಗಾಧರೇಶ್ವರ ಲಿಂಗವು ಸ್ವಯಂಭೂ ರಚನೆಯದು. ಲಿಂಗದ ರುದ್ರಭಾಗವು ಒರಟಾಗಿದ್ದು, ಹುಟ್ಟುಬಂಡೆಯಂತಿದೆ. ಯೋನಿಪೀಠವು ನೆಲಮಟ್ಟದಲ್ಲಿದ್ದು, ಜಲಹರಿಯಿಂದ ಕೂಡಿದೆ.[೩೮] ದೇವಾಲಯದ ಬಹುತೇಕ ಭಾಗಗಳು ಜೀರ್ಣೋದ್ಧಾರಗೊಂಡಿವೆ. ಸಭಾಮಂಟಪದ ಉತ್ತರ ಭಾಗದಲ್ಲಿ ಎರಡು ಕೊಠಡಿಗಳನ್ನು ದಕ್ಷಿಣಾಭಿಮುಖವಾಗಿವೆ. ಮೊದಲನೆಯ ಕೊಠಡಿಯಲ್ಲಿ ಗಂಗಾಧರೇಶ್ವರ ದೇವರ ಉತ್ಸವ ಮೂರ್ತಿ ಇದ್ದು, ಕ್ರಿ.ಶ. ೧೭-೧೮ನೆಯ ಶತಮಾನದ ರಚನೆಯಾಗಿರಬಹುದು. ಕಿರೀಟ ಮುಕುಟ ಹೊಂದಿರುವ ಉತ್ಸವ ಮೂರ್ತಿಯು ಕೈಗಳಲ್ಲಿ ಕೊಡಲಿ, ಜಿಂಕೆ, ಅಭಯ ಮತ್ತು ವರದ ಹಸ್ತ ಹೊಂದಿದೆ. ಪಕ್ಕದಲ್ಲಿರುವ ಪಾರ್ವತಿ ಶಿಲ್ಪವು ಒಂದು ಕೈಯಲ್ಲಿ ಕಮಲವನ್ನು ಹಿಡಿದಿದ್ದು, ಮತ್ತೊಂದು ಕೈ ನೀಳವಾಗಿ ಇಳಿಬಿಟ್ಟಿದೆ. ಮತ್ತೊಂದು ಕೊಠಡಿಯಲ್ಲಿ ಈಶ್ವರಲಿಂಗವಿದ್ದು, ನಾಗಾಭರಣ ಸಹಿತವಾದ ಮುಖವಾಡವನ್ನು ಹೊಂದಿದೆ. ಈ ಕೊಠಡಿಗಳು ನಂತರದ ಕಾಲದ ರಚನೆಗಳಾಗಿವೆ. ಬಾಗಿಲುವಾಡಗಳು ಸರಪಳಿ, ಲತಾಬಳ್ಳಿ ಹಾಗೂ ಮೊಗ್ಗಿನ ಅಲಂಕರಣದ ಪಟ್ಟಿಗಳಿಂದ ಕೂಡಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ದ್ವಾರದ ತಳದಲ್ಲಿ ಇಷ್ಟಲಿಂಗ ಪೂಜಾ ಧ್ಯಾನದಲ್ಲಿರುವ ವ್ಯಕ್ತಿ ಮತ್ತು ಕಳಸ ಹಿಡಿದ ಸ್ತ್ರೀಯ ಉಬ್ಬುಶಿಲ್ಪಗಳಿವೆ. ಗಂಗಾಧರೇಶ್ವರ ಲಿಂಗದ ಎದುರಿಗೆ ಮಂಟಪವಿದ್ದು, ನಂತರದ ಕಾಲದ ನಂದಿಯನ್ನಿಡಲಾಗಿದೆ. ಈ ನಂದಿಮಂಟಪದ ಬಾಗಿಲು ವಾಡಗಳ ತಳದಲ್ಲಿ ಸ್ತ್ರೀ ಮತ್ತು ಪುರುಷ ಭಕ್ತರ ಉಬ್ಬುಶಿಲ್ಪಗಳನ್ನು ಬಿಡಿಸಿದೆ. ಬಾಗಿಲುವಾಡಗಳಲ್ಲಿ ಜ್ಯಾಮಿತಿ ಮತ್ತು ಹೂವಿನ ದಳಗಳ ಚಿತ್ರಗಳನ್ನು ಕೊರೆಯಲಾಗಿದೆ. ನಂದಿ ಮಂಟಪದ ಹೊಸ್ತಿಲ ಮುಖಭಾಗದಲ್ಲಿ ಭಕ್ತನೊಬ್ಬನ ಉಬ್ಬುಶಿಲ್ಪವನ್ನು ಬಿಡಿಸಿದ್ದಾರೆ.

ಸಭಾಮಂಟಪದ ಕಂಬಗಳು ಸರಳ ರಚನೆಗಳಾಗಿದ್ದು, ಚೌಕ ಮತ್ತು ಅಷ್ಟಮುಖ ಅಲಂಕರಣದವು. ಬೋದಿಗೆಗಳು ಸಹ ಸರಳ ರಚನೆಗಳಾಗಿವೆ. ಮೇಲ್ಛಾವಣಿ ಜೀರ್ಣೋದ್ಧಾರಗೊಂಡಿದೆ. ಸಭಾಮಂಟಪದ ದ್ವಾರವು ಹಿತ್ತಾಳೆ ತಗಡಿನ ಅಲಂಕರಣದಿಂದ ಕೂಡಿದೆ. ಲತಾಬಳ್ಳಿಗಳು, ಪುಷ್ಪಗಳು ಮತ್ತು ಮೊಗ್ಗಿನ ಪಟ್ಟಿಗಳ ಅಲಂಕರಣವಿದೆ. ಲಲಾಟದಲ್ಲಿ ಉಮಾಮಹೇಶ್ವರನ ಹಿತ್ತಾಳೆ ತಗಡಿನ ಉಬ್ಬುಶಿಲ್ಪವನ್ನು ಅಂಟಿಸಲಾಗಿದೆ. ಇದರ ಮೇಲಿನ ಹಿತ್ತಾಳೆ ತಗಡಿನ ಫಲಕದಲ್ಲಿ ಪುರುಷಮೃಗ, ಗಣೇಶ, ಭೈರವ, ಗಂಗಾಧರ, ವೀರಭದ್ರ, ಬ್ರಹ್ಮ ಹಾಗೂ ಕಾಮಧೇನುವಿನ ಉಬ್ಬು ಪ್ರತಿಮೆಗಳಿವೆ. ತಗಡಿನ ಒಳಭಾಗದಲ್ಲಿ ಉಬ್ಬುಶಿಲಾಪ್ರತಿಮೆಗಳಿದ್ದಂತೆ ಕಂಡುಬರುವುದಿಲ್ಲ. ದ್ವಾರಪಾಲಕರು ತ್ರಿಶೂಲ, ಡಮರು, ಗದೆ ಹಿಡಿದು ತ್ರಿಭಂಗಿಯಲ್ಲಿದ್ದಾರೆ. ದ್ವಾರದ ಇಕ್ಕೆಲಗಳಲ್ಲಿನ ಬೃಹತ್ ಸ್ತಂಭಗಳಿತೂ ಹಿತ್ತಾಳೆ ತಗಡನ್ನು ಹೊದಿಸಲಾಗಿದೆ. ಬಲಸ್ತಂಭದಲ್ಲಿ ಮುಖಭಾಗದಲ್ಲಿ ಪಾರ್ವತಿ, ಕೃಷ್ಣ, ಜಟ್ಟಿ, ನರ್ತಕಿ ಹಾಗು ಸಿಂಹದ ಉಬ್ಬುರಚನೆಗಳಿವೆ. ಎಡಸ್ತಂಭದ ಮುಖಭಾಗದಲ್ಲಿ ನಟರಾಜ, ಪಾರ್ಶ್ವಭಾಗಗಳಲ್ಲಿ ಮಹಿಷಮರ್ದಿನಿ, ದನಗಾಹಿ, ಮಾರ್ಕಂಡೇಯ-ಶಿವ-ಯಮ, ಸಿಂಹ ಹಾಗು ಇದನ್ನು ಮಾಡಿಸಿದ ದಂಪತಿಗಳ ಉಬ್ಬುಪ್ರತಿಮೆಗಳಿವೆ. ಹಾಗೂ ಅವರ ಹೆಸರನ್ನು ಉಲ್ಲೇಖಿಸುವ ಶಾಸನವಿದೆ.[೩೯] ಲೋಹದ ಉಬ್ಬುಶಿಲ್ಪಗಳ ಅಧ್ಯಯನಕ್ಕೆ ಮೇಲೆ ಹೇಳಿದ ಹಿತ್ತಾಳೆ ತಗಡಿನ ಉಬ್ಬುಶಿಲ್ಪಗಳು ಉತ್ತಮ ಉದಾಹರಣೆಗಳಾಗಿವೆ. ಇದನ್ನು ಸ್ಥಳೀಯ ನುರಿತ ಲೋಹ ಕೆಲಸಗಾರರು ಮಾಡಿರಬೇಕು.[೪೦]

ತೆರೆದ ಸಭಾಮಂಟಪದ ಮಧ್ಯದ ಭುವನೇಶ್ವರಿ ಸರಳ ರಚನೆಯಾಗಿದ್ದು, ಕಮಲ ಮತ್ತು ಕೀರ್ತಿಮುಖವನ್ನು ಬಿಡಿಸಿದೆ. ಸುತ್ತಲೂ ಇರುವ ಮೇಲ್ತೊಲೆಯಲ್ಲಿ ನೃತ್ಯಗಾತಿಯರು, ಕುಸ್ತಿಪಟುಗಳು, ಭಕ್ತರು ಹಾಗೂ ಭೈರವ ದೇವರ ಉಬ್ಬುಶಿಲ್ಪಗಳ ಒರಟು ರಚನೆಗಳಿವೆ. ಈ ದೇವಾಲಯದಲ್ಲಿ ಕಾಲಭೈರವನ ಉಬ್ಬುಶಿಲ್ಪಗಳು ಅಲ್ಲಲ್ಲಿ ಕಾಣಬರುವುದರಿಂದ ಕಾಲಭೈರವ ಇಲ್ಲಿನ ಅಧಿದೇವತೆ.[೪೧] ಹಾಗಾಗಿ ಪ್ರಸ್ತುತ ಗಂಗಾಧರೇಶ್ವರ ದೇವಾಲಯವೇ ಶಾಸನದಲ್ಲಿ ಉಲ್ಲೇಖಗೊಂಡಿರುವ ಚುಂಚನ ಭೈರವನ ದೇವಾಲಯವಿರಬಹುದೆ? ತೆರೆದ ಸಭಾಮಂಟಪ ಮತ್ತು ಕಂಬಗಳ ರಚನೆಯಲ್ಲಿ ವಿಜಯನಗರ ಶೈಲಿಯನ್ನು ಅನುಕರಿಸಲಾಗಿದೆ. ಇದು ಇದು ಕ್ರಿ.ಶ. ೧೮-೧೯ನೆಯ ಶತಮಾನದ ರಚನೆಯಾಗಿದ್ದು, ದೇವಾಲಯದ ವಿಸ್ತರಣೆಯಾಗಿದೆ. ಮಧ್ಯದ ಕಂಬಗಳಲ್ಲಿ ಭಕ್ತ, ಯತಿ, ನಂದಿ ಹಾಗೂ ಬ್ರಹ್ಮನ ಶಿಲ್ಪಗಳನ್ನು ಕಂಬಗಳನ್ನು ಹೊತ್ತಿರುವಂತೆ ಬಿಡಿಸಿದೆ. ಉಳಿದಂತೆ ಕಂಬಗಳ ಪಾರ್ಶ್ವಮುಖಗಳಲ್ಲಿ ಕಲಶ ಹಿಡಿದ ಸ್ತ್ರೀ, ಹಂಸ, ನಂದಿ, ಭಕ್ತ ಮೊದಲಾದ ಉಬ್ಬುಶಿಲ್ಪಗಳನ್ನು ಅಲಂಕರಣಾರ್ಥ ಬಿಡಿಸಿದ್ದಾರೆ. ದಕ್ಷಿಣ ಅಂಕಣದ ಕಂಬಗಳು ಉಪಕಂಬಗಳಿಂದ ಕೂಡಿವೆ.[೪೨] ಅಂಚಿನ ಕಂಬಗಳು ಚೌಕ ರಚನೆಗಳಾಗಿದ್ದು, ಮುಖಭಾಗಗಳಲ್ಲಿ ಗಣಪತಿ, ಭಕ್ತ, ಕಲಶ, ಪುಷ್ಪ, ಸಿಂಹ, ನವಿಲು, ಆನೆ ಹಾಗೂ ಅರ್ಧಕಂಬ ಅಲಂಕೃತ ಕುಂಭ ಪಂಜರಗಳ ಉಬ್ಬುರಚನೆಗಳಿಂದ ಕೂಡಿವೆ.

ಮೇಲ್ಭಾಗದ ಕೈಪಿಡಿ ಗೋಡೆಯ ಗಾರೆಗೂಡುಗಳಲ್ಲಿ, ಶಿವ, ಉಮಾಮಹೇಶ್ವರ, ಗಣೇಶ, ಕಾರ್ತಿಕೇಯರ ಗಾರೆ ಪ್ರತಿಮೆಗಳಿವೆ. ಗರ್ಭಗೃಹದ ಮೇಲಿರುವ ಇಟ್ಟಿಗೆ–ಗಾರೆಯ ಶಿಖರ ದ್ವಿತಲ ರಚನೆಯಾಗಿದ್ದು, ವಿಜಯನಗರೋತ್ತರ ಕಾಲದ ನಿರ್ಮಾಣವಾಗಿದೆ. ಕೂಡು, ಶಾಲ ರಚನೆಗಳಿಂದ ಕೂಡಿರುವ ಶಿಖರವು ಸುಕನಾಸವನ್ನು ಒಳಗೊಂಡಿದೆ. ಸುಕನಾಸದ ಮುಖಭಾಗದಲ್ಲಿ ಕೀರ್ತಿಮುಖದ ಅಲಂಕರಣವಿದ್ದು, ತೆರದ ಗೂಡನ್ನು ಹೊಂದಿದೆ. ಈ ಗೂಡಿನ ಮೂಲಕ ವ್ಯಕ್ತಿಯೊಬ್ಬ ಶಿಖರದ ಒಳಭಾಗಕ್ಕೆ ನುಸುಳಿ ಹೋಗಬಹುದು. ಶಿಖರದ ಮೇಲಿನ ತಲದ ಮೂಲೆಗಳಲ್ಲಿ ನಂದಿ ಪ್ರತಿಮೆಗಳ ರಚನೆಗಳಿವೆ. ಸ್ತೂಪಿ ಮತ್ತು ಗ್ರೀವದಿಂದ ಕೂಡಿರುವ ಶಿಖರವು ತುದಿಯಲ್ಲಿ ಕಲಶವನ್ನು ಹೊಂದಿದೆ. ಈ ದೇವಾಲಯದ ಅಧಿಷ್ಠಾನವು, ದೇವಾಲಯಕ್ಕಿಂತಲೂ ಹಳೆಯ ರಚನೆಯಂತೆ ಕಂಡು ಬರುತ್ತದೆ. ಹಾಗಾಗಿ ಜೀರ್ಣೋದ್ಧಾರಗೊಂಡಿರುವ ದೇವಾಲಯವನ್ನು ವಿಜಯನಗರೋತ್ತರ ಕಾಲಕ್ಕೆ ನಿರ್ದೇಶಿಸ ಬಹುದು. ಹೊರಗೆ ನಿಂತಿರುವ ಶಿಲಾಸ್ತಂಭ (ನಂದಿಕಂಬ) ಎತ್ತರವಾಗಿದ್ದು, ಗಣಪತಿಯ ಉಬ್ಬುಶಿಲ್ಪವಿದೆ.

## ಮಲ್ಲೇಶ್ವರ ದೇವಾಲಯ

ಗಂಗಾಧರೇಶ್ವರ ದೇವಾಲಯದಿಂದ ಸ್ವಲ್ಪ ಕೆಳಗಿಳಿದರೆ, ಎಡಭಾಗಕ್ಕೆ ಸಿಗುವುದೆ ಮಲ್ಲೇಶ್ವರ ದೇವಾಲಯ, ಪಶ್ಚಿಮಾಭಿಮುಖವಾಗಿರುವ ಗರ್ಭಗೃಹ ಮತ್ತು ತೆರೆದ ಮುಖಮಂಟಪವಿರುವ ದೇವಾಲಯದಲ್ಲಿ ಪ್ರಾಚೀನವೆನ್ನಬಹು ದಾದ ಸ್ವಯಂಭೂ ಲಿಂಗವಿದೆ. ಸಾಮಾನ್ಯವಾಗಿ ಮಲ್ಲಿಕಾರ್ಜುನ ಲಿಂಗವನ್ನು ಪಶ್ಚಿಮಾಭಿಮುಖವಾಗಿ ಪ್ರತಿಷ್ಠಾಪಿಸುತ್ತಾರೆ. ಅದೇ ರೀತಿ ಇಲ್ಲಿನ ಮಲ್ಲೇಶ್ವರ ಲಿಂಗವನ್ನು ಸಹ ಪಶ್ಚಿಮಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿದೆ. ಲಿಂಗವು ೧.೫ ಅಡಿ ಎತ್ತರದ ವೇದಿಕೆಯ ಮೇಲಿದೆ.

ಮಲ್ಲೇಶ್ವರ ಗುಡಿಯಿಂದ ಕೆಳಗಿಳಿಯುವ ಮೆಟ್ಟಿಲುಗಳ ಬಲಬದಿಯಲ್ಲಿ ಬಂಡೆಯ ಮೇಲೆ ಆಂಜನೇಯ, ತ್ರಿಶೂಲ, ಅಕ್ಕಪಕ್ಕದಲ್ಲಿ ಸೂರ್ಯ, ಚಂದ್ರರ ಗೆರೆ ಚಿತ್ರಗಳಿವೆ. ಪಕ್ಕದಲ್ಲಿ ದೇವನಾಗರಿ ಲಿಪಿಯ ಶಾಸನವಿದೆ.

## ಕಾಲಭೈರವ ದೇವಾಲಯ

ಮಧ್ಯಬೆಟ್ಟದಲ್ಲಿರುವ ಕಾಲಭೈರವ ದೇವಾಲಯವು ಆದಿಚುಂಚನಗಿರಿಯ ಪ್ರಮುಖ ದೇವಾಲಯ, ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪವನ್ನು ಮಾತ್ರ ಹೊಂದಿದೆ. ದೇವಾಲಯವು ಕ್ರಿ.ಶ. ೧೭–೧೮ನೇ ಶತಮಾನದ ರಚನೆಯಂತಿದೆ. ಕ್ರಿ.ಶ. ೧೪೮೪ರ ಶಾಸನವೊಂದು ಚುಂಚನ ಭೈರವನನ್ನು ಉಲ್ಲೇಖಿಸಿದೆ.[೪೩] ಪ್ರಸ್ತುತ ಕಾಲಭೈರವ ದೇವರು ಹಾಗೂ ಶಾಸನದಲ್ಲಿ ಉಲ್ಲೇಖಗೊಂಡಿರುವ ಚುಂಚನ ಭೈರವ ದೇವರು ಒಂದೇ ಆಗಿರಲಾರದು. ಏಕೆಂದರೆ ಅತ್ಯಂತ ಸರಳ ರಚನೆಯ ಕಾಲಭೈರವ ದೇವಾಲಯದಲ್ಲಿ ವಿಜಯನಗರ ಶೈಲಿಯ ಯಾವುದೇ ವಾಸ್ತು ಲಕ್ಷಣಗಳಿಲ್ಲ. ಅಲ್ಲದೆ ಈಗಿರುವ ಕಾಲಭೈರವ ದೇವರು, ಸುಮಾರು ೩ ಅಡಿ ಎತ್ತರ ಹೊಂದಿದ್ದು, ಪೀಠದಲ್ಲಿ ಯಾವುದೇ ಲಾಂಛನವಿಲ್ಲ. ರಚನೆಯಲ್ಲೂ ಅಷ್ಟಾಗಿ ಪ್ರಮಾಣಬದ್ಧತೆ ಕಾಣುವುದಿಲ್ಲ. ದಷ್ಟಪುಷ್ಟವಾದ ಶಿಲ್ಪವು ಕೀರ್ತಿಮುಖದ ಅಲಂಕರಣದಿಂದ ಕೂಡಿದ್ದು, ಮೈಸೂರು ಒಡೆಯರ ಕಾಲದ ಶೈಲಿಯಲ್ಲಿದೆ. ಕಾಲಭೈರವನ ಬಲ ಕೈಗಳಲ್ಲಿ ತ್ರಿಶೂಲ ಮತ್ತು ಖಡ್ಗವಿದ್ದು, ಎಡ ಕೈಗಳಲ್ಲಿ ಡಮರು ಮತ್ತು ರುಂಡವಿದೆ. ರಕ್ತವನ್ನು ನೆಕ್ಕುತ್ತಿರುವಂತೆ ನಾಯಿಯನ್ನು ಬಿಡಿಸಲಾಗಿದ್ದು, ರುಂಡವೊಂದರ ಮೇಲೆ ನಿಂತಿದೆ.

ಗರ್ಭಗೃಹ ದ್ವಾರವು ಸರಳ ರಚನೆಯಾಗಿದ್ದು, ಹಿತ್ತಾಳೆ ತಗಡನ್ನು ಹೊದಿಸಲಾಗಿದೆ. ಲಲಾಟದಲ್ಲಿರುವ ತಗಡಿನ ಮೇಲೆ ಗಜಲಕ್ಷ್ಮಿಯ ಉಬ್ಬುಶಿಲ್ಪವನ್ನು ಬಿಡಿಸಲಾಗಿದೆ. ಅದೇ ರೀತಿ ಬಾಗಿಲುವಾಡಗಳಿಗೆ ಅಳವಡಿಸಿರುವ ತಗಡಿನ ಮೇಲೆ ಲತಾಬಳ್ಳಿಗಳ ಮತ್ತು ದ್ವಾರಪಾಲಕರ ಉಬ್ಬುಪ್ರತಿಮೆಗಳನ್ನು ಬಿಡಿಸಿದೆ. ದ್ವಾರಪಾಲಕರು ಶಂಖ, ಚಕ್ರ, ಗದೆ ಮತ್ತು ಕಟಿಹಸ್ತವನ್ನು ಹೊಂದಿದ್ದು, ಹಣೆಯಲ್ಲಿ ವಿಭೂತಿಯನ್ನು ಬಿಡಿಸಲಾಗಿದೆ. ಅಂದರೆ ಲೋಹಶಿಲ್ಪಿ ತಿಳಿದೋ ಅಥವಾ ತಿಳಿಯದೆಯೋ ದ್ವಾರಪಾಲಕರಿಗೆ ವೈಷ್ಣವ ಚಿಹ್ನೆಗಳನ್ನು ತೋರಿಸಿದ್ದಾನೆ. ಈ ಮೇಲಿನ ವಿವರಗಳಿಂದ ಈಗಿರುವ ಕಾಲಭೈರವ ಪ್ರತಿಮೆ ಕ್ರಿ.ಶ. ೧೪೮೪ರ ಶಾಸನದಲ್ಲಿ ಉಲ್ಲೇಖ ಗೊಂಡಿರುವ ಚುಂಚನ ಭೈರವನಲ್ಲವೆಂಬುದು ಸುಸ್ಪಷ್ಟ. ಹಾಗಾದರೆ ವಿಜಯನಗರ ಕಾಲದ ಚುಂಚನಗಿರಿಯ ಭೈರವ ಶಿಲ್ಪ ಏನಾಯಿತು ? ಆ ದೇವಾಲಯವಾದರೂ ಯಾವುದು? ಎಂಬ ಪ್ರಶ್ನೆಗಳು ನಮ್ಮ ಮುಂದಿವೆ. ಬಹುಶಃ ಈಗಿನ ಗಂಗಾಧರೇಶ್ವರ ದೇವಾಲಯವೇ ಶಾಸನದಲ್ಲಿ ಉಲ್ಲೇಖ ಗೊಂಡಿರುವ ಚುಂಚನಭೈರವನ ದೇವಾಲಯವಿರಬಹುದು. ಅನ್ಯ ಶೈವಪಂಥೀಯರ ಪ್ರಭಾವದಿಂದಾಗಿ ಬೀಭತ್ಸವಾದ ಭೈರವ ಮೂರ್ತಿಯನ್ನು ವಿಸರ್ಜಿಸಿ, ಬದಲಿಗೆ ಲಿಂಗವನ್ನು ಪ್ರತಿಷ್ಠಾಪಿಸಿ ಗಂಗಾಧರೇಶ್ವರನೆಂಬ ಹೆಸರಿನಿಂದ ಕರೆದಿರ ಬಹುದೇ? ಕ್ರಿ.ಶ. ೧೮೯೭ರ ಶಾಸನದಲ್ಲಿ ಗಂಗಾಧರೇಶ್ವರನನ್ನು "ಆದಿಚುಂಚನಗಿರಿ ನಿಲಯ ಕ್ಷೇತ್ರಪಾಲ" ಎಂದು ಕರೆದಿರುವುದು ಗಮನಾರ್ಹ.[೪೪] ಹಾಗೂ ಗಂಗಾಧರೇಶ್ವರ ದೇವಾಲಯದ ಅಧಿಷ್ಠಾನವು, ದೇವಾಲಯಕ್ಕಿಂತಲೂ ಪ್ರಾಚೀನ ವಾಗಿರುವ ಕಾರಣ ಮೇಲಿನ ಅಭಿಪ್ರಾಯಪಡಲಾಗಿದೆ. ಈ ದಿಶೆಯಲ್ಲಿ ವ್ಯಾಪಕವಾದ ಸಂಶೋಧನೆ ನಡೆಯಬೇಕಿದೆ.

ಕಾಲಭೈರವನ ಗುಡಿ ಮುಂದಿರುವ ಮಹಾದ್ವಾರದ ಎಡಬದಿಯಲ್ಲಿ ಆಂಜನೇಯನ ಶಿಲ್ಪವಿದ್ದು, ವಿಶಾಲವಾಗಿರುವ ಮಂಟಪವನ್ನು ನಾಗಚಾವಡಿ ಎಂದು ಕರೆಯುತ್ತಾರೆ. ಬಲಬದಿಯಲ್ಲಿ ಗಣೇಶ ಶಿಲ್ಪವಿದ್ದು, ವಿಶಾಲವಾಗಿರುವ ಮಂಟಪದ ನಡುವೆ ಉರಿಗದ್ದಿಗೆ[೪೫] ಇದೆ. ಇದರ ನೈರುತ್ಯ ಮೂಲೆಯ ಚಂದ್ರಮೌಳೇಶ್ವರ ಗುಡಿಯಲ್ಲಿ ಮೂರು ಗೂಡುಗಳಿದ್ದು, ಕ್ರಮವಾಗಿ ಗಾಯತ್ರಿ, ಮುಖಲಿಂಗ ಮತ್ತು ಭೈರವ ಮೂರ್ತಿಗಳಿವೆ. ಇವೆಲ್ಲವೂ ವಿಜಯನಗರೋತ್ತರ ಕಾಲದ ರಚನೆಗಳು; ಭೈರವ ಮೂರ್ತಿಯು ತ್ರಿಶೂಲ, ಡಮರು, ಖಡ್ಗ ಹಾಗೂ ರುಂಡವನ್ನು ಹಿಡಿದಿದ್ದು, ಬಲಭಾಗದಲ್ಲಿ ಸ್ತ್ರೀ (ಮಾಳವ್ವ) ಹಾಗೂ ಎಡಭಾಗದಲ್ಲಿ ರುಂಡವನ್ನು ನೆಕ್ಕುತ್ತಿರುವ ನಾಯಿಯ ಸೂಕ್ಷ್ಮ ಶಿಲ್ಪಗಳಿಂದ ಕೂಡಿದೆ. ಚಂದ್ರಮೌಳೇಶ್ವರನ ನಾಲ್ಕು ಲೋಹದ ಪ್ರತಿಮೆಗಳಿವೆ. ಒಂದೇ ಅಳತೆಯ ಇವು ಸುಮಾರು ೧.೫ ಅಡಿ ಎತ್ತರವನ್ನು ಹೊಂದಿವೆ. ಭೈರವಿಯ ಪ್ರತಿಮೆಯೊಂದಿದ್ದು, ಖಡ್ಗ ಮತ್ತು ಕಪಾಲವನ್ನು ಹಿಡಿದಿದ್ದಾಳೆ. ಸ್ಥಳೀಯರು ಮಾಳವ್ವ ಎಂದು ಕರೆಯುತ್ತಾರೆ. ಭೈರವನ ಉತ್ಸವಮೂರ್ತಿಯು, ತ್ರಿಶೂಲ, ಡಮರು, ಖಡ್ಗ, ಬಟ್ಟಲು ಮತ್ತು ರುಂಡವನ್ನು ಹಿಡಿದಿದ್ದು, ರುಂಡದ ಮೇಲೆ ನಿಂತಿರುವ ನಾಯಿಯನ್ನು ಒಳಗೊಂಡಿದೆ. ಇದು ಸಹ ೧.೫ ಅಡಿ ಎತ್ತರವಿದೆ. ಇದರ ಪಕ್ಕದಲ್ಲಿ ಅನ್ನಪೂರ್ಣೇಶ್ವರಿಯ ಪ್ರತಿಮೆ ಇದೆ.

ಚಂದ್ರಮೌಳೇಶ್ವರ ಗುಡಿಯ ಹೊರಗೆ ಸಿಂಹಾಸನವಿದೆ. ನವರಾತ್ರಿಯ ಸಂದರ್ಭದಲ್ಲಿ ಶ್ರೀಮಠದ ಪೀಠಾಧಿಪತಿಗಳು ಇದರಲ್ಲಿ ಕುಳಿತು ದರ್ಬಾರು ನಡೆಸುತ್ತಾರೆ. ಇದಲ್ಲದೆ ಬೆಳ್ಳಿ ಸಿಂಹಾಸನವೂ ಇದೆ. ಆದಿ ಚುಂಚನಗಿರಿ ಮಠದ ಭವ್ಯ ಪರಂಪರೆಗೆ ಸಾಕ್ಷಿಯಾಗಿವೆ. ನಾಗಚಾವಡಿ ಬಳಿ ಇದ್ದ ಮೇದರ ತಲೆಗಳೆನ್ನುವ ರುಂಡಶಿಲ್ಪಗಳನ್ನು ಇತ್ತೀಚೆಗೆ ಬೇರೆಡೆಗೆ ಸ್ಥಳಾಂತರ ಮಾಡಲಾಗಿದೆ. ಈ ರುಂಡಶಿಲ್ಪಗಳು ಸಾಮಾನ್ಯವಾಗಿ ಪ್ರಸಿದ್ಧ ಭೈರವ ಕ್ಷೇತ್ರಗಳಲ್ಲಿ ಕಂಡುಬರುತ್ತವೆ. ಉದಾಹರಣೆಗೆ ಮೈಲಾರದಲ್ಲಿ ರುಂಡಶಿಲ್ಪಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಕಾಣುತ್ತೇವೆ. ಇವು ನರಬಲಿಯು ಆಚರಣೆಯಲ್ಲಿದ್ದ ಬಗ್ಗೆ ಸೂಚನೆ ನೀಡುತ್ತವೆ. ಕಾಲಭೈರವನ ಗುಡಿಯ ದಕ್ಷಿಣಕ್ಕೆ ಬಿಂದು ಸರೋವರವಿದೆ. ಇಲ್ಲಿನ ಸ್ತಂಭವೊಂದನ್ನು ಸ್ತಂಭದೇವತೆ ಅಥವಾ ಕಂಬದಮ್ಮ ಎಂದು ಕರೆಯುತ್ತಾರೆ.[೪೬] ಹರಕೆ ಹೊತ್ತ ಭಕ್ತರು ಕಂಬದಮ್ಮನಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಮೊದಲಿಗೆ ಈ ಕಂಬ ತೆರೆದ ಬಯಲಿನಲ್ಲಿ ಬಂಡೆಯ ಮೇಲಿತ್ತು. ಇದೀಗ ನಿರ್ಮಾಣಗೊಳ್ಳುತ್ತಿರುವ ಬೃಹತ್ ಭೈರವ ದೇವಾಲಯದಿಂದಾಗಿ ಈ ಕಂಬವು ಸಭಾಮಂಟಪದ ಪಾರ್ವತಿಗುಡಿ ಮುಂಭಾಗದಲ್ಲಿ ನೆಲ ಕೋಣೆಯಲ್ಲಿದೆ. ಒಳಗಿಳಿಯಲು ಮೆಟ್ಟಿಲುಗಳ ವ್ಯವಸ್ಥೆ ಮಾಡಲಾಗಿದೆ. ಇನ್ನು ಇಲ್ಲಿನ ನಾಗರಕಲ್ಲು, ಕೂಗುಬಂಡೆ ಮೊದಲಾದ ಎಡೆಗಳು ತಮ್ಮದೇ ಕಥೆಗಳನ್ನು ಹೊಂದಿ ಜನಪದರಿಗೆ ಚಿರಪರಿಚಿತವಾಗಿವೆ.

ಆದಿ ಚುಂಚನಗಿರಿಯಲ್ಲಿ ನೆಲಸಿದ್ದ ಸಪ್ಪೇಸ್ವಾಮಿ (ಎಡೆಯೂರು ಸಿದ್ಧಲಿಂಗ ಯತಿಗಳ ಶಿಷ್ಯ) ತಪಸ್ಸು ಮಾಡಿದ ಸ್ಥಳವನ್ನು ಸಪ್ಪೇಸ್ವಾಮಿ ಮಠ ಎಂದು ಗುರುತಿಸಲಾಗಿದೆ.[೪೭] ಎಡೆಯೂರಿನ ಶಾಸನವೊಂದರಲ್ಲಿ ಸಪ್ಪೇಸ್ವಾಮಿಯನ್ನು ಸಪ್ಪೇದೇವರು ಎಂದು ಉಲ್ಲೇಖಿಸಲಾಗಿದೆ.[೪೮] ಈತನನ್ನು ಬೋರಲಿಂಗಸ್ವಾಮಿ ಎಂತಲೂ ಕರೆಯುತ್ತಿದ್ದರು. ಚುಂಚಗಿರಿ ಬೆಟ್ಟದ ತಪ್ಪಲಿನಲ್ಲಿ ಸಪ್ಪೇಸ್ವಾಮಿ ಗುಹೆಯನ್ನು ಈಗಲೂ ಕಾಣಬಹುದು.[೪೯] ಆದಿಚುಂಚನಗಿರಿಯ ಶಾಸನವೊಂದು ಕುಸುಮಾನಾಥನ ಮಠವೊಂದನ್ನು ಉಲ್ಲೇಖಿಸಿದೆ.[೫೦] ಶಾಸನದ ಕಾಲ ಕ್ರಿ.ಶ. ೧೮–೧೯ ಶತಮಾನ. ನಾಗರಿ ಲಿಪಿಯಲ್ಲಿದೆ. ಇವೆಲ್ಲವನ್ನು ಗಮನಿಸಿದರೆ ಮೊದಲಿಗೆ ಚುಂಚನಗಿರಿಯು ಎಲ್ಲ ಸಾಧಕರಿಗೂ ಮುಕ್ತವಾಗಿದ್ದು, ಯಾವುದೇ ಧಾರ್ಮಿಕ ಪಂಥದ ಏಕಾಧಿಪತ್ಯ ಇರಲಿಲ್ಲವೆನಿಸುತ್ತದೆ.

ಇಲ್ಲಿನ ನಾಗರಿ ಶಾಸನಗಳು ಉಲ್ಲೇಖಿಸುವ ನಾಥಯತಿಗಳ ಸಮಾಧಿಗಳು ಈಗ ಕಂಡುಬರುವುದಿಲ್ಲ. ಇಲ್ಲಿ ಮರೆಯಾದ ಸ್ಮಾರಕಗಳಲ್ಲಿ ವೃತ್ತಾಕಾರದ ಮಣ್ಣಿನ ಕೊಠಡಿಗಳು ಸೇರಿವೆ. ಹೆಚ್ಚು ಎತ್ತರವಲ್ಲದ ವೃತ್ತಾಕಾರದ ಮಣ್ಣಿನ ಗೋಡೆಯ ಮೇಲೆ ವಿಶಾಲವಾದ ಶಿಲಾ ಚಪ್ಪಡಿಗಳಿದ್ದವಂತೆ. ಬಹುಶಃ ಇವು ನಾಥಯತಿ ಅಥವಾ ಸನ್ಯಾಸಿಗಳ ಸಮಾಧಿಗಳಾಗಿರಬಹುದು ? ಸುಗ್ಗಿ ಕಾಲದಲ್ಲಿ ರೈತರು ಈ ಕೊಠಡಿಗಳಲ್ಲಿ ಧಾನ್ಯಗಳನ್ನು ಮತ್ತು ಹುಲ್ಲು ಸೊಪ್ಪುಗಳನ್ನು ತುಂಬುತ್ತಿದ್ದರಂತೆ. ಈ ಮಣ್ಣಿನ ಕೊಠಡಿಗಳನ್ನು ಶ್ರೀ ಕ್ಷೇತ್ರದ ವಿಸ್ತರಣೆ ಮತ್ತು ನಿರ್ಮಾಣಗಳ ಸಂದರ್ಭದಲ್ಲಿ ತೆಗೆದು ಹಾಕಲಾಯಿತೆಂದು ತಿಳಿಸುತ್ತಾರೆ.

ಚುಂಚನಗಿರಿಯು, ಪ್ರಾಗಿತಿಹಾಸ ಕಾಲದಿಂದ ಮೊದಲುಗೊಂಡು ಇಂದಿನವರೆಗೂ ಮಾನವನ ಕ್ರಿಯಾಶೀಲ ಚಟುವಟಿಕೆಯ ತಾಣವಾಗಿರುವುದು ಸ್ತುತ್ಯಾರ್ಹ. ಇಲ್ಲಿನ ಭೌಗೋಳಿಕ ಪರಿಸರ ಎಲ್ಲ ಮನಃಸ್ಥಿತಿಗಳಿಗೆ ಸ್ಫೂರ್ತಿದಾಯಕವಾಗಿದೆ. ಅಭಿವೃದ್ಧಿಯನ್ನೆ ಮಂತ್ರವಾಗಿರಿಸಿಕೊಂಡಿರುವ ಶ್ರೀಮಠ, ಇಂದು ಬೃಹತ್ತಾಗಿ ಬೆಳೆದು ಜ್ಞಾನಪ್ರಸಾರದಲ್ಲಿ ತೊಡಗಿದೆ. ಈಗಿರುವ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಪೀಠದ ಎಪ್ಪತ್ತೊಂದನೆಯ ಯತಿಗಳಾಗಿದ್ದಾರೆ. ಪೂಜ್ಯಶ್ರೀಯವರು ನಿರ್ಮಿಸುತ್ತಿರುವ ಭೈರವನ ಬೃಹತ್ ಶಿಲಾದೇವಾಲಯವು ಇತ್ತೀಚಿನ ಶತಮಾನಗಳಲ್ಲಿ ನಿರ್ಮಾಣಗೊಂಡ ಅದ್ಭುತ ದೇವಾಲಯವೆನಿಸಿದೆ. ಭೈರವನ ಅರವತ್ತ

ನಾಲ್ಕು ರೂಪಗಳ ಪ್ರತಿಮೆಗಳು ಇಲ್ಲಿ ಪ್ರತಿಷ್ಠಾಪನೆಗೊಳ್ಳಲಿವೆ. ನಾಲ್ಕೂ ದಿಕ್ಕುಗಳಲ್ಲಿ ಮಹಾದ್ವಾರ ಗೋಪುರಗಳು, ಇದಕ್ಕೆ ಸೇರಿದಂತೆ ಒಳಪ್ರಕಾರ ಮಂಟಪವನ್ನು ಒಳಗೊಂಡಿರುವ ದೇವಾಲಯವು, ಮೂರು ಗರ್ಭಗೃಹಗಳು ಹಾಗೂ ಇವುಗಳನ್ನು ಒಳಗೊಂಡ ವಿಶಾಲವಾದ ಸಭಾಮಂಟಪದಿಂದ ಕೂಡಿದೆ. ಹೊರ ಭಿತ್ತಿಯನ್ನು ವಿಜಯನಗರ ಶೈಲಿಯಲ್ಲಿ ನಿರ್ಮಿಸಲಾಗುತ್ತಿದೆ. ಅರ್ಧಕಂಬ, ಕುಂಭ ಪಂಜರ ಮತ್ತು ದೇವಕೋಷ್ಠಕಗಳ ಅಲಂಕರಣವಿದೆ. ಪ್ರಧಾನ ಗರ್ಭಗೃಹದಲ್ಲಿ ಈಗಿರುವ ಕಾಲಭೈರವ ಮೂರ್ತಿಯನ್ನೇ ಪ್ರತಿಷ್ಠಾಪನೆ ಮಾಡಲಾಗುತ್ತದೆ. ಈ ಗರ್ಭಗೃಹದ ನೈರುತ್ಯ ಮೂಲೆಯಲ್ಲಿ ಮಾಳವ್ವನ ಗುಡಿಯನ್ನು, ವಾಯವ್ಯ ಮೂಲೆಯಲ್ಲಿ ಪಾರ್ವತಿ ಗುಡಿಯನ್ನು ನಿರ್ಮಿಸಿದ್ದಾರೆ. ಈ ಬೃಹತ್ ದೇವಾಲಯದ ಅರವತ್ತನಾಲ್ಕು ಭೈರವ ಪ್ರತಿಮೆಗಳನ್ನು ಚೆನ್ನೈನ ಮುತ್ತಯ್ಯ ಸ್ಥಪತಿ ಎಂಬ ಶಿಲ್ಪಿ ನಿರ್ಮಿಸುತ್ತಿದ್ದಾರೆ. ಪ್ರತಿಯೊಂದು ಭೈರವ ಮೂರ್ತಿಗಳು ಸೂರ್ಯನ ಪ್ರಭಾವಳಿ ಹೊಂದಿದ್ದು, ಕಲಾಸಕ್ತರ ಗಮನ ಸೆಳೆಯುತ್ತವೆ. ಸಭಾಮಂಟಪದ ಮಧ್ಯಸಾಲಿನಲ್ಲಿ ಮೂರ್ತಿಗಳು ಸುಮಾರು ಎಂಟು ಅಡಿ ಎತ್ತರವಿದ್ದರೆ, ಉಳಿದ ಮೂರ್ತಿಗಳು ಮೂರು ಅಡಿ ಎತ್ತರವಿದ್ದು, ಕಂಬಗಳ ಕಾಂಡ ಭಾಗದಲ್ಲಿ ಅಳವಡಿಸಿದ್ದಾರೆ. ಈ ಅಪರೂಪದ ದೇವಾಲಯ ಶ್ರೀಮಠದ ಹಿರಿಮೆಯನ್ನು ಹೆಚ್ಚಿಸಲಿದೆ. ಹಾಗು ಭೈರವನಿಗೆ ಪ್ರಾಚೀನ ವೈಭವವನ್ನು ತಂದುಕೊಡಲಿದೆ.

ಆದಿ ಚುಂಚನಗಿರಿಯು ಭಾರತದ ಪ್ರಮುಖ ಧಾರ್ಮಿಕ ಕ್ಷೇತ್ರವಾಗಿ ಹೊರಹೊಮ್ಮುತ್ತಿದ್ದು, ಅದರ ಇತಿಹಾಸ ಮತ್ತು ಪುರಾತತ್ವವನ್ನು ಕಟ್ಟಿಕೊಡುವ ಸಣ್ಣ ಪ್ರಯತ್ನದ ಕುರುಹು ಪ್ರಸ್ತುತ ಲೇಖನ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಮಂಡ್ಯ ಜಿಲ್ಲಾ ಗ್ಯಾಸೆಟಿಯರ್.
೨. **ಸಿರಿಯೊಡಲು,** ರಾಜೇಗೌಡ ಹ.ಕ. (ಸಂ).
೩. ಅದೇ.
೪. ಎಚ್ಚೆಸ್ಕೆ, ೧೯೮೫, **ಅವಲೋಕನ,** ಪುಟ ೪೮.
೫. ಅದೇ.
೬. ಕೃಷ್ಣಮೂರ್ತಿ ಎಂ.ಎಸ್. ಅವರ ಲೇಖನವನ್ನು **ಇತಿಹಾಸ ದರ್ಶನ**ದಲ್ಲಿ ನೋಡಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಸಂಪುಟ–೪/೧೯೮೯, ಪುಟ ೧.
೭. ಎಚ್ಚೆಸ್ಕೆ, ಪೂರ್ವೋಕ್ತ.
೮. ಮಹದೇವ. ಸಿ. ೨೦೦೧, **ಕರ್ನಾಟಕ ಪುರಾತತ್ವ ಶೋಧ,** ಶ್ರೀಲಕ್ಷ್ಮಿ ಪ್ರಕಾಶನ, ಶ್ರೀರಂಗಪಟ್ಟಣ, ಪುಟ ೧–೪.
೯. ರಹಮತ್ ತರೀಕೆರೆ, ೨೦೦೬, **ಕರ್ನಾಟಕದಲ್ಲಿ ನಾಥಪಂಥ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೪೪.
೧೦. ಅದೇ ಪುಟ ೧೫೦.
೧೧. ರಾಜೇಶ್ವರಿಗೌಡ ಕೆ., ೨೦೦೧, ಪೂರ್ವೋಕ್ತ ಪುಟ ೨೦.
೧೨. ಅದೇ. ಪುಟ ೧೨೯.
೧೩. ಅದೇ, ಪುಟ ೧೨೯.
೧೪. E.C. Vol ix, Ni. 1. ಕ್ರಿ.ಶ. ೧೦೨೯.
ಛಾಯಪರಮೇಶ್ವರನ ಮಗ ಸ್ತಂಭನಾತ, ಅವನ ಮಗ ದ್ವೀಪನಾಥ, ಅವನ ಶಿಷ್ಯ ಮೌನಿನಾಥ, ಅವನ ಶಿಷ್ಯ, ರೂಪಶಿವ.
೧೫. ರಹಮತ್ ತರೀಕೆರೆ, ೨೦೦೬, ಪೂರ್ವೋಕ್ತ, ಪುಟ ೧೫೦.
೧೬. ರಾಜೇಶ್ವರಿಗೌಡ ಪೂರ್ವೋಕ್ತ, ಪುಟ ೧೪.
ಚುಂಚ>ಚುಂಚು>ಜುಂಜು=ಗುಂಜು ಕೂದಲು, ಕೆದರಿದ ಕೂದಲು, ಗುಂಗುರು ಕೂದಲು, ಒರಟು ಕೂದಲು.
೧೭. ಕಲಬುರ್ಗಿ ಎಂ.ಎಂ. 'ಭೈರವ–ಜುಂಜಪ್ಪ–ಮೈಲಾರ' ಲೇಖನ, **ಮಾರ್ಗ–೪.**
೧೮. **ವಿಶ್ವಮಾನವ ಪತ್ರಿಕೆ,** ಜೆಟ್ಟಿಯ್ಯ ರಾಜಣ್ಣ (ಸಂ.), ಸಂಪುಟ–೪, ಪುಟ ೩೩–೪೨.
೧೯. ಆದಿಚುಂಚನಗಿರಿ ಕ್ಷೇತ್ರವಿರುವ ನಾಗಮಂಗಲ ತಾಲ್ಲೂಕಿನಲ್ಲಿ ಮೈಲಾರಪಟ್ಟಣ ಎಂಬ ಊರಿದೆ. ಬ್ರಾಹ್ಮಣರಾದಿಯಾಗಿ ಮೈಲಾರಯ್ಯ, ಮೈಲಾರಪ್ಪ ಎಂಬ ವ್ಯಕ್ತಿನಾಮಗಳು ಸಾಕಷ್ಟು ದೊರೆಯುತ್ತವೆ. ಈ ಹಿನ್ನೆಲೆಯಲ್ಲಿ ಆದಿಚುಂಚನಗಿರಿಯ ಧಾರ್ಮಿಕ ಚರಿತ್ರೆಯನ್ನು ಗ್ರಹಿಸಬೇಕಿದೆ.
೨೦. ರಾಜೇಶ್ವರಿಗೌಡ. ಕೆ. ಪೂರ್ವೋಕ್ತ, ಪುಟ ೧೦೨.
೨೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೩, **ಹಂಪಿ ಶಾಸನಗಳು**–೫೫, ಪುಟ ೪೩.
೨೨. E.C. Vol-7, ನಾಗಮಂಗಲ–೧೧೯.
೨೩. E.C. ಅದೇ, ನಾಗಮಂಗಲ–೧೧೦.
೨೪. ಅದೇ, ನಾಗಮಂಗಲ–೧೦೮.
೨೫. ಚುಂಚನಗಿರಿ ಭೈರವ ಕ್ಷೇತ್ರವೆನಿಸಿದ್ದರೂ ಗಂಗಾಧರೇಶ್ವರ ದೇವಾಲಯವೆ ಪ್ರಧಾನವಾಗಿತ್ತು. ಆದರೆ ಇತ್ತೀಚೆಗೆ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಬಹುಕೋಟಿ ವೆಚ್ಚದಲ್ಲಿ ಭೈರವನ ಬೃಹತ್ ಶಿಲಾದೇವಾಲಯವನ್ನು ನಿರ್ಮಿಸುತ್ತಿದ್ದು, ಈ ಮೂಲಕ ಭೈರವನಿಗೆ ಪ್ರಾಚೀನ ವೈಭವವನ್ನು ತಂದುಕೊಡಲಾಗುತ್ತಿದೆ.

೨೬. E.C. Vol-7, ನಾಗಮಂಗಲ-೧೧೨, ಶಾಸನವು ಸಮಾಧಿ ಮಂಟಪದ ಕಂಬದ ಮೇಲಿರುವುದರಿಂದ, ಇಲ್ಲಿ ಸೇವೆ ಎಂದರೆ ಬಹುಶಃ ಸಮಾಧಿ ನಿರ್ಮಿಸಿರಬೇಕು.

೨೭. ರಾಜೇಶ್ವರಿಗೌಡ ಕೆ. ಪೂರ್ವೋಕ್ತ ಪುಟ ೧೦೭.

೨೮. ಆದರೂ ಚುಂಚನಗಿರಿಯ ನಾಥ ಯೋಗಿಗಳ ಪರಂಪರೆಯಲ್ಲಿ ಕೆಲವರ ಹೆಸರು ಪಂಪಾನಾಥ್, ವಿರೂಪಾಕ್ಷನಾಥ್ ಎಂದಿರುವ ಹಿನ್ನೆಲೆಯಲ್ಲಿ ಇವರು ಹಂಪೆಯೊಂದಿಗೆ ಸಂಪರ್ಕ ಪಡೆದವರಿರಬೇಕು. ಹಂಪೆಯನ್ನು ಭಾಸ್ಕರಕ್ಷೇತ್ರ ಎಂದು ಕರೆಯಲಾಗಿದೆ. ಅಂದರೆ ಸೂರ್ಯ ಅಥವಾ ಭೈರವನ ಕ್ಷೇತ್ರವೆಂದಾಗುತ್ತದೆ.

೨೯. E.C. Vol-7, ನಾಗಮಂಗಲ-೧೧೩.

೩೦. ರಾಜೇಶ್ವರಿಗೌಡ ಕೆ. ಪೂರ್ವೋಕ್ತ, ಪುಟ ೧೦೮.

೩೧. E.C. Vol-7, ನಾಗಮಂಗಲ-೧೧೪, ಆದಿಚುಂಚನಗಿರಿಯಲ್ಲಿ ಇತರ ಸಣ್ಣ ಪುಟ್ಟ ಮಠಗಳಿದ್ದವೇ ? ಈ ಶಾಸನವನ್ನು ಡಾ. ರಾಜೇಶ್ವರಿಯವರು ಬೇರೆ ರೀತಿ ಅರ್ಥೈಸಿದ್ದಾರೆ.

೩೨. E.C. Vol-7, ನಾಗಮಂಗಲ-೧೧೫, ಇಲ್ಲಿ ಗಂಗಾಧರೇಶ್ವರನನ್ನು ಕ್ಷೇತ್ರಪಾಲ ಎಂದು ಕರೆದಿರುವುದು ಗಮನಾರ್ಹ.

೩೩. ಅದೇ Vol-7, ನಾಗಮಂಗಲ-೧೧೬ ಯಿದನ್ನು ಮಾಡಿಸಿದ ಕರಿಗೌಡರು ಯಿವರ ಧರ್ಮಪತ್ನಿ.

೩೪. ಜುಂಜಪ್ಪ-ಕಾಡುಗೊಲ್ಲರ ದೈವ, ಭೈರವನ ಪರ್ಯಾಯ ರೂಪ ಎಂದು ಗುರುತಿಸಲಾಗುತ್ತದೆ.

೩೫. ರಾಜೇಶ್ವರಿಗೌಡ ಕೆ., ಪೂರ್ವೋಕ್ತ, ಪುಟ ೧೮೨.

೩೬. ಅದೇ, ಪುಟ ೧೮೧.

೩೭. ಪಾಂಡವಪುರದ ಬಳಿಯ ಕುಂತಿಬೆಟ್ಟದ ತುದಿಯಲ್ಲಿ ಇಂತಹ ಕಂಬವಿದ್ದು, ಸ್ಥಳೀಯರು ಅದನ್ನು ಕುಂತಿ ಬಳಸುತ್ತಿದ್ದ ಒನಕೆ ಎಂದು ನಂಬಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಪ್ರದೇಶದಲ್ಲೂ ಇಂತಹ ಕಂಬಗಳನ್ನು ಕಾಣುತ್ತೇವೆ. ದೂರದ ಊರುಗಳಿಗೆ ಮಾಹಿತಿಯನ್ನು ನೀಡಲು ಅಲ್ಲಲ್ಲಿ ಎತ್ತರ ಗುಡ್ಡಗಳ ಮೇಲೆ ಇಂತಹ ಕಂಬಗಳನ್ನು ಸ್ಥಳನಿರ್ದೇಶನಕ್ಕಾಗಿ ನೆಟ್ಟು, ಅಲ್ಲಿಂದ ಪಂಜುಗಳನ್ನು ವಿವಿಧ ಭಂಗಿಗಳಲ್ಲಿ ತಿರುಗಿಸುವ ಮೂಲಕ ಮಾಹಿತಿಗಳನ್ನು ರವಾನಿಸುತ್ತಿದ್ದರೆಂದು ಡಾ. ಎಸ್. ತಿಪ್ಪೇಸ್ವಾಮಿ ತಿಳಿಸುತ್ತಾರೆ (ರಕ್ಷಣಾ ವಾಸ್ತುಶಿಲ್ಪ-ಚಿತ್ರದುರ್ಗ ಜಿಲ್ಲೆ, ಅಪ್ರಕಟಿತ ಸಂಪ್ರಬಂಧ, ಕ.ವಿ.ವಿ., ಹಂಪಿ).

೩೮. ಬಹುಶಃ ಮೊದಲಿಗೆ ಇಲ್ಲಿ ಪ್ರಾಚೀನ ಭೈರವ ಶಿಲ್ಪವಿದ್ದು, ಕಾಲಾಂತರದಲ್ಲಿ ಅದನ್ನು ಬದಲಿಸಿ ಈಗಿರುವ ಲಿಂಗವನ್ನು ಪ್ರತಿಷ್ಠಾಪಿಸಿ ಗಂಗಾಧರೇಶ್ವರನೆಂದು ಕರೆದಿರಬಹುದು. ಏಕೆಂದರೆ ಕರ್ನಾಟಕದಲ್ಲೆಡೆ ಭೈರವ ಶಿಲ್ಪಗಳು ಭಗ್ನಗೊಂಡು ದೇವಾಲಯದ ಹೊರಭಾಗದಲ್ಲಿರುವುದನ್ನು ಕಾಣುತ್ತೇವೆ. ಭೀಭತ್ಸಮೂರ್ತಿಯಾದ ಭೈರವನ ಆರಾಧನೆ ಬದಲಿಗೆ ಲಿಂಗಪೂಜೆಗೆ ಸ್ಥಿತ್ಯಂತರಗೊಂಡಿರಬಹುದು. ಆದಿಚುಂಚನಗಿರಿಯಲ್ಲಿ ಗಂಗಾಧರೇಶ್ವರನನ್ನು ಶಾಸನವೊಂದು ಕ್ಷೆತ್ರಪಾಲನೆಂದು ಕರೆದಿದೆ. ಆದರೆ ಜನಸಾಮಾನ್ಯರು ಭೈರವನೇ ಕ್ಷೇತ್ರದ ಅಧಿಪತಿ ಎಂದು ನಂಬಿ ನಡೆದುಕೊಳ್ಳುತ್ತಾರೆ. ಮೈಲಾರ ಕ್ಷೇತ್ರದಲ್ಲಿ ಮಾರ್ತಾಂಡಭೈರವನ ಮೃಣ್ಮಯಮೂರ್ತಿ ಇದ್ದರೂ, ನೆಲದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿ ಮೈಲಾರಲಿಂಗೇಶ್ವರನೆಂದು ಕರೆದಿದ್ದಾರೆ. ಇದೇ ರೀತಿ ಆದಿಚುಂಚನಗಿರಿಯಲ್ಲಿ ಭೈರವನ ಬದಲಿಗೆ ಲಿಂಗ ಪ್ರತಿಷ್ಠಾಪನೆಗೊಂಡು ಗಂಗಾಧರನೆನಿಸಿರಬೇಕು. ಆದರೂ ಭೈರವನ ಅಸ್ತಿತ್ವವನ್ನುಳಿಸಲು ವಿಜಯನಗರೋತ್ತರ ಕಾಲದಲ್ಲಿ, ಮಧ್ಯದ ಬೆಟ್ಟದಲ್ಲಿ ಸಣ್ಣಗುಡಿಯೊಂದನ್ನು ನಿರ್ಮಿಸಿ, ಕಾಲಭೈರವನ ಚಿಕ್ಕದಾದ ಪ್ರತಿಮೆಯೊಂದನ್ನು ಪ್ರತಿಷ್ಠಾಪಿಸಿದಂತೆ ಕಾಣುತ್ತದೆ. ಈ ದೇವಾಲಯವು ಗರ್ಭಗೃಹ ಮತ್ತು ತೆರದ ಮುಖಮಂಟಪವನ್ನು ಮಾತ್ರ ಹೊಂದಿದೆ. ಆದಿಚುಂಚನಗಿರಿಯು ವಾಸ್ತವವಾಗಿ ಭೈರವನ ಆರಾಧನೆಯ ಪ್ರಧಾನ ಸ್ಥಳವಾಗಿದ್ದು, ಭೈರವನ ಪುಟ್ಟ ಪ್ರತಿಮೆ ಹಾಗೂ ಒಂದೇ ಕೊಠಡಿಯುಳ್ಳ ಸಣ್ಣ ದೇವಾಲಯವನ್ನು ಹೊಂದಿರುವುದು ಆಶ್ಚರ್ಯಕರ. ವಿಜಯನಗರ ಕಾಲದ ಕ್ರಿ.ಶ. ೧೪೮೪ ಶಾಸನವೊಂದು ಚುಂಚನಭೈರವ ದೇವರಿಗೆ ಚುಂಚನಹಳ್ಳಿಯನ್ನು ದಾನ ನೀಡಿದರು (ಎಪಿಗ್ರಫಿಯಾ ಕರ್ನಾಟಕ ಸಂ. vii, ನಾಗಮಂಗಲ-೧೦೮) ಎಂದಿದೆ. ಹಾಗಿದ್ದಲ್ಲಿ ಇಲ್ಲಿ ದೊಡ್ಡದಾದ ಭೈರವ ಪ್ರತಿಮೆ ಮತ್ತು ದೇವಾಲಯ ಇದ್ದಿರಲೇಬೇಕು. ಈ ಸಂದರ್ಭದಲ್ಲಿ ಚುಂಚನಹಳ್ಳಿಯನ್ನು ವಿರೂಪಾಕ್ಷ ಪುರವೆಂದು ಪುನರ್‌ನಾಮಕರಣ ಮಾಡಿರುವುದೂ ಗಮನಾರ್ಹ. ಹಾಗು ಕಾಲಾಂತರದಲ್ಲಿ ಭೈರವ ಪ್ರತಿಮೆಯ ಬದಲಿಗೆ ಲಿಂಗವೇ ಪ್ರಧಾನಗೊಂಡು ಗಂಗಾಧರೇಶ್ವರ ದೇವಾಲಯವು ಚುಂಚನಗಿರಿಯ ಪ್ರಮುಖ ದೇವಾಲಯವಾಗಿ ಹೊರಹೊಮ್ಮಿದಂತೆ ಕಂಡುಬರುತ್ತದೆ. ಈ ಕುರಿತು ಇನ್ನೂ ಹೆಚ್ಚಿನ ಪರಿಶೀಲನೆ ಆಗಬೇಕಿದೆ. ಇತ್ತೀಚೆಗೆ ಪೂಜ್ಯಶ್ರೀಯವರು ಭೈರವನಿಗಾಗಿ ಬಹುಕೋಟಿಯ ಶಿಲಾದೇಗುಲವನ್ನು ನಿರ್ಮಿಸುವ ಮೂಲಕ ಆದಿಚುಂಚನಗಿರಿಯನ್ನು ಪ್ರಾಚೀನ ವೈಭವದತ್ತ ಕೊಂಡೊಯ್ಯುತ್ತಿದ್ದಾರೆ.

೩೯. E.C. Vol. VII, ನಾಗಮಂಗಲ-೧೧೬.

೪೦. ಇಂದಿಗೂ ನಾಗಮಂಗಲದಲ್ಲಿ ಲೋಹಪ್ರತಿಮೆಗಳ ತಯಾರಿಕೆಯಲ್ಲಿ ಪರಿಣತರಾದ ಶಿಲ್ಪಿಗಳಿದ್ದಾರೆ. ನಂದಿ, ಲಿಂಗ, ವೀರಭದ್ರ, ಪ್ರಭಾವಳಿ, ಕೀರ್ತಿಮುಖ, ಉತ್ಸವಮೂರ್ತಿಗಳು ಮೊದಲಾದ ಲೋಹ ಪ್ರತಿಮೆಗಳನ್ನು ತಯಾರಿಸುತ್ತಾರೆ.

೪೧. ಕ್ರಿ.ಶ. ೧೪೮೪ರ ಶಾಸನದಲ್ಲಿ ಉಲ್ಲೇಖಗೊಳ್ಳುವ 'ಚುಂಚನ ಭೈರವ', ಯಾವ ರೂಪದ್ದು ಎಂಬುದು ತಿಳಿದುಬರುವುದಿಲ್ಲ.

೪೨. ಹಂಪಿಯ ವಿರೂಪಾಕ್ಷ ಮತ್ತು ವಿಠಲ ದೇವಾಲಯದ ರಂಗಮಂಟಪದಲ್ಲಿರುವ ಉಪಕಂಬಗಳಿಂದ ಕೂಡಿದ ಕಂಬಗಳಂತೆ (ಸಂಯುಕ್ತ ಕಂಬ).

೪೩. E.C. Vol-VII, ನಾಗಮಂಗಲ-೧೦೮.

೪೪. ಅದೇ, ನಾಗಮಂಗಲ-೧೧೫.

೪೫. ಜೋಗಿಗಳಿಗೆ ದೀಕ್ಷೆ ನೀಡುವ ಸ್ಥಳ.

೪೬. ಭೈರವ ಮಾಳವ್ವನನ್ನು ಮದುವೆಯಾದಾಗ ಮೊದಲ ಪತ್ನಿ ಲಕ್ಷ್ಮಿ ಮುನಿದು ಕಂಬವಾದಳಂತೆ. ಈ ಕಂಬಕ್ಕೆ ದೇವಿಯ ಮೂರ್ತರೂಪದ ಲೋಹದ ಕವಚವನ್ನು ಅಳವಡಿಸುತ್ತಾರೆ.

೪೭. ರಾಜೇಶ್ವರಿಗೌಡ ಕೆ., ಪೂರ್ವೋಕ್ತ, ಪುಟ ೧೧೨.

೪೮. ಎಡೆಯೂರು ಶಾಸನ, ಉದ್ಧೃತ, ಪ್ರೊ. ಸಿದ್ಧಗಂಗಯ್ಯ ಎಚ್.ಕೆ., **ಯುಗಯೋಗಿ**, ಪುಟ ೧೨೫.

೪೯. ರಾಜೇಶ್ವರಿಗೌಡ ಕೆ., ಪೂರ್ವೋಕ್ತ, ಪುಟ ೧೧೩.

೫೦. E.C. Vol-VII, ನಾಗಮಂಗಲ-೧೧೪.

ಎಂ.ಎನ್. ಪ್ರಭಾಕರ್*

# ಕಂಬದಹಳ್ಳಿ ಪಂಚಕೂಟ ಬಸದಿ : ದಾಕ್ಷಿಣಾತ್ಯ ಸಂಪ್ರದಾಯದ ಮೂರು ಶೈಲಿಗಳು

ಕರ್ನಾಟಕದಲ್ಲಿ ಬೆಳೆದ ದಾಕ್ಷಿಣಾತ್ಯ ಸಂಪ್ರದಾಯದ ದೇವಾಲಯಗಳನ್ನು ಸ್ಥೂಲವಾದ ಮೂರು ಹಂತಗಳಲ್ಲಿ ಗುರುತಿಸಬಹುದು.

೧) ಆರಂಭದ ಬಾದಾಮಿಯ ಚಲುಕ್ಯರ ಕಾಲ : ಕ್ರಿ.ಶ. ೭ ಮತ್ತು ೮ನೆಯ ಶತಮಾನ.

೨) ಮಧ್ಯಕಾಲೀನ ಗಂಗ ಮತ್ತು ನೊಳಂಬರ ಕಾಲ : ಕ್ರಿ.ಶ. ೯ ಮತ್ತು ೧೦ನೆಯ ಶತಮಾನ.

೩) ಅಂತಿಮ ಹಂತ : ವಿಜಯನಗರ ಮತ್ತು ವಿಜಯನಗರೋತ್ತರ ಕಾಲ –ಕ್ರಿ.ಶ. ೧೪ನೆಯ ಶತಮಾನದಿಂದ....

ಬಾದಾಮಿ ಚಲುಕ್ಯರ ಕಾಲದಲ್ಲಿ ಸಂಪ್ರದಾಯ, ಶೈಲಿಗಳ ಆರಂಭದ ಬೆಳವಣಿಗೆಯನ್ನು ಕಾಣಬಹುದು. ಗಂಗ ಹಾಗೂ ನೊಳಂಬರ ಕಾಲದಲ್ಲಿ ರಚನೆಗೊಂಡ ದೇವಾಲಯಗಳಲ್ಲಿ ಸಂಪ್ರದಾಯ, ಶೈಲಿಗಳನ್ನು ಖಚಿತವಾಗಿ ವಿವರಿಸಬಹುದು. ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ದೇವಾಲಯ ಸಂಕೀರ್ಣಗಳು ಹೆಚ್ಚು ವಿಸ್ತಾರವಾಗಿ ಬೆಳೆದವು. ವಾಸ್ತುಶೈಲಿಯ ದೃಷ್ಟಿಯಲ್ಲಿ ಹೆಚ್ಚ ಪಾತ್ರವಿಲ್ಲ.

ಇವುಗಳಲ್ಲಿ ಮಧ್ಯಕಾಲೀನ ರಚನೆಗಳಾದ ನರಸಮಂಗಲದ ರಾಮಲಿಂಗೇಶ್ವರ, ಕಂಬದಹಳ್ಳಿಯ ಪಂಚಕೂಟ ಬಸದಿ, ಶ್ರವಣಬೆಳಗೊಳದ ಚಾವುಂಡರಾಯ ಬಸದಿ, ಬೇಸೂರಿನ ಜೋಡಿ ದೇವಾಲಯ, ನಂದಿಯ ಭೋಗನಂದೀಶ್ವರ, ಆವನಿಯ ಲಕ್ಷ್ಮಣೇಶ್ವರ ಮುಂತಾದವು ಪ್ರಮುಖ ದೇವಾಲಯಗಳೆನಿಸಿವೆ.

ದಾಕ್ಷಿಣಾತ್ಯ ದೇವಾಲಯ ಸಂಪ್ರದಾಯಕ್ಕೆ ಸಂಬಂಧಿಸಿದ ಪ್ರಕಟಗೊಂಡ ಹಲವು ವಾಸ್ತುಗ್ರಂಥಗಳು ಸುಮಾರು ಇದೇ ಕಾಲದವು. ಈ ಗ್ರಂಥಗಳಲ್ಲಿರುವ ವಿವರಣೆಯನ್ನು ಅನುಸರಿಸಿ ಈ ದೇವಾಲಯಗಳನ್ನು ಗುರುತಿಸಬಹುದು. ಕಂಬದಹಳ್ಳಿಯ ಪಂಚಕೂಟ ಬಸದಿಯ ಆವರಣದಲ್ಲಿ ದಾಕ್ಷಿಣಾತ್ಯ ಸಂಪ್ರದಾಯದ ನಾಗರ–ದ್ರಾವಿಡ–ವೇಸರ ಶೈಲಿಗಳ ಮೂರು ರಚನೆಗಳನ್ನು ಕಾಣಬಹುದು. ಗ್ರಂಥಗಳನ್ನಾಧರಿಸಿ ಈ ರಚನೆಗಳನ್ನು ಅಪಾದಮಸ್ತಕ ಗುರುತಿಸಬಹುದಾಗಿದೆ. ಈ ಪ್ರಯತ್ನ ಇತರ ದೇವಾಲಯಗಳ ಅಧ್ಯಯನಕ್ಕೆ ಮಾದರಿಯಾಗಲು ಸಾಧ್ಯವಿದೆ.

ದಾಕ್ಷಿಣಾತ್ಯ ದೇವಾಲಯಗಳ ಷಡ್ವರ್ಗ ಸ್ವರೂಪವನ್ನು ಮಧ್ಯಕಾಲೀನ ದೇವಾಲಯಗಳಲ್ಲಿ ಖಚಿತವಾಗಿ ಗುರುತಿಸಬಹುದಾಗಿದೆ. ಬಾದಾಮಿ ಚಲುಕ್ಯರ ಕಾಲದಲ್ಲಿ ಈ ಸ್ತರಗಳು ನಿಶ್ಚಿತ ರೂಪ ಪಡೆಯಲಾರಂಭಿಸಿದ್ದರಿಂದ ಸಂಪೂರ್ಣ ಬೆಳವಣಿಗೆಯ ವಿವರಗಳು ಅಲಭ್ಯ. ಈ ದೇವಾಲಯಗಳಲ್ಲಿ ವಿಕಾಸದ ಹಾದಿಯ ಪ್ರಾಯೋಗಿಕ ಹಂತಗಳನ್ನು ಕಾಣಬಹುದು. ಆರಂಭದ ದೇವಾಲಯ ಗಳಿಗಾಗಿ ಮಹಾಕೂಟದ ಮಹಾಕೂಟೇಶ್ವರ ಮತ್ತು ಮಲ್ಲಿಕಾರ್ಜುನ ಗುಡಿಗಳನ್ನು ಹೆಸರಿಸಬಹುದು. ಕಾಲದ ದೃಷ್ಟಿಯಿಂದ ಮಹಾಕೂಟೇಶ್ವರದ ಸ್ತಂಭ ಶಾಸನವು ಈ ಅಧ್ಯಯನಕ್ಕೊಂದು ಮೈಲಿಗಲ್ಲು. ಈ ಶಾಸನವನ್ನು ದೇವಾಲಯದೊಂದಿಗೆ ಗುರುತಿಸುವಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೆ ಇದಕ್ಕಿಂತ ಬೇರೆ ಸಾಕ್ಷಿ ಪ್ರಸ್ತುತ ಲಭ್ಯವಿಲ್ಲ. ಈ ಶಾಸನದ ಕಾಲವು ಕ್ರಿ.ಶ. ೬೦೧. ಮಹಾಕೂಟದ ಇವೆರಡೂ ದೇವಾಲಯಗಳ ಕಂಠ, ಶಿಖರಗಳು ಒಂದೇ ರೀತಿಯವು. ಅಷ್ಟಾಶ್ರಮವುಳ್ಳ ದ್ರಾವಿಡ ಶೈಲಿಯ ಶಿಖರವು ಸಮರ್ಪಕವೆನಿಸಿದರೂ ಕಂಠದ ಬೆಳವಣಿಗೆ ಷಡ್ವರ್ಗಗಳ ಎಣಿಕೆಗೆ ತಕ್ಕಂತೆ ಸಮನಾಗಿ ಬೆಳೆದಿಲ್ಲ. ಹಾರ ರಚನೆಯೂ ಶೈಶವಾವಸ್ಥೆಯಲ್ಲಿದೆ. ಮಹಾಕೂಟೇಶ್ವರ ದೇವಾಲಯದ ಮೇಲ್ಭಾಗ ಗಾರೆ ಅಥವಾ ಸುಣ್ಣದ ಲೇಪನದಿಂದ ಕೂಡಿದ್ದು ಮೂಲ ರಚನೆ ಮಾರ್ಪಾಡಾಗುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಮಲ್ಲಿಕಾರ್ಜುನ ಗುಡಿಯ ನೆತ್ತಿಯ ಮೇಲೆ ಸ್ತೂಪಿ ಇಲ್ಲ. ಇವುಗಳೊಂದಿಗೆ ಬಾದಾಮಿಯ ಮೇಲಿನ ಶಿವಾಲಯ, ಕೆಳಗಿನ ಶಿವಾಲಯ, ಮಾಲೆಗಿತ್ತಿ ದೇವಾಲಯ ಗಳನ್ನು ಗಮನಿಸಬೇಕು. ಮೇಲಿನ ಶಿವಾಲಯದಲ್ಲಿ ನಾಗರ ಶಿಖರವಿದೆ. ಇನ್ನೆರಡು ದೇವಾಲಯಗಳು ದ್ರಾವಿಡ ಶಿಖರವುಳ್ಳದ್ದು. ವೇಸರ ಶೈಲಿಗೆ ಉದಾಹರಣೆಯಾಗಿ ನಿಂತದ್ದು ಪಟ್ಟದಕಲ್ಲಿನ ಮಲ್ಲಿಕಾರ್ಜುನ ದೇವಾಲಯ. ಆರಂಭದ

* 'ಪದ್ಮಪ್ರಭಾ' # ೪೨, ಬ್ಲಾಕ್ ೧೭, ಬ್ಯಾಂಕ್ ಕಾಲೋನಿ, ಶ್ರೀರಾಮಪುರ ೨ನೆಯ ಹಂತ, ಮೈಸೂರು.

ದೇವಾಲಯಗಳಲ್ಲಿ ದ್ರಾವಿಡ, ನಾಗರ ಶಿಖರಗಳಿದ್ದು, ವೇಸರ ಶೈಲಿಯು ಮೂಡುವ ಸಲುವಾಗಿ ಕಂಠವು ನಿಶ್ಚಿತ ಆಕಾರ ತಳೆಯಿತು ಎನ್ನಬಹುದು. ಮಲ್ಲಿಕಾರ್ಜುನ ದೇವಾಲಯ ದೊಂದಿಗೆ, ವಿರೂಪಾಕ್ಷ ಹಾಗೂ ವಿಜಯೇಶ್ವರ ದೇವಾಲಯ ಗಳಲ್ಲಿ ಕಂಠಭಾಗವು ನಿಖರವಾಗಿ ಪ್ರದರ್ಶಿಸಲ್ಪಟ್ಟಿದೆ. ಈ ದೇವಾಲಯಗಳು ಕ್ರಿ.ಶ. ೭೩೦ ರಿಂದ ೭೪೦ ರ ಕಾಲಕ್ಕೆ ಸೇರಿದ್ದು. ಈ ವೇಳೆಗೆ ಕಂಠ ಹಾಗೂ ಶಿಖರ ಭಾಗಗಳು ನಿಶ್ಚಿತ ಆಕಾರ ಪಡೆದಿವೆ.

ಭೂತನಾಥ ದೇವಾಲಯದ ಶಿಖರ ಇದಕ್ಕಿಂತ ಕೊಂಚ ಹಿಂದಿನ ಕಾಲದ್ದು. ಇಲ್ಲಿ ತದನಂತರ ಕಾಲದಲ್ಲಿ ಜೋಡಿಸಿದ ಸ್ತೂಪಿ ರಚನೆ ಇದೆ. ಹಾರ ರಚನೆಯಲ್ಲಿರುವ ನಾಸೀ, ಶಾಲಾ, ಪಂಜರಗಳ ಬೆಳವಣಿಗೆಯನ್ನೂ ಗಮನಿಸಬೇಕು. ವಿರೂಪಾಕ್ಷ ಮತ್ತು ಪಾಪನಾಥ ದೇವಾಲಯದ ಕೈಪಿಡಿ ಗೋಡೆಯ ಶಾಲಾ ರಚನೆಯಲ್ಲಿ, ಕಪೋತದ ಮೇಲಿರುವ ನೇತ್ರನಾಸಿಗಳಂತೆ ಎರಡೆರಡು ನಾಸಿಕೆಗಳಿವೆ. ಶಾಲಾ ಮಧ್ಯದಲ್ಲಿ ಒಂದೇ ನಾಸಿಕೆಗೆ ಸೀಮಿತಗೊಂಡದ್ದು ಮುಂದುವರೆದ ಹಂತ. ಈ ಪ್ರಯೋಗಗಳು ವಾಸ್ತುಗ್ರಂಥಗಳ ಕಾಲವನ್ನು ನಿರ್ಧರಿಸುವಲ್ಲಿ ಮಾರ್ಗದರ್ಶಿಯಾಗುತ್ತವೆ.

ಕರ್ನಾಟಕವನ್ನು ಆಳಿದ ಗಂಗರಾಜ್ಯಾಧಿಪತಿಗಳು ಮೂಲತಃ ಜೈನ ಮತಾವಲಂಬಿಗಳು. ಇವರ ಕಾಲದ ಕೊಡುಗೆ ಗಳಿಂದ ಕಂಬದಹಳ್ಳಿಯ ಪಂಚಕೂಟ ಬಸದಿ, ಶ್ರವಣ ಬೆಳಗೊಳದ ಚಾವುಂಡರಾಯ ಬಸದಿ ವಾಸ್ತುಶಿಲ್ಪ ದೃಷ್ಟಿ ಯಿಂದ ಗಮನಾರ್ಹವಾದವು. ಕಂಬದಹಳ್ಳಿಯ ಬಸದಿಯನ್ನು ಮೊದಲು ಬಿಂಡಿಗನವಿಲೆ ತೀರ್ಥವೆಂದು ಗುರುತಿಸಲಾಗು ತ್ತಿತ್ತು. ಬಸದಿಯ ಮುಂದಿನ ಮಾನಸ್ತಂಭ ದಿಂದಾಗಿ ಕಂಬದಹಳ್ಳಿಯ ಬಸದಿ ಎಂಬ ಹೆಸರು ಬಂದಿದೆ. ಈ ಸ್ತಂಭದ ಬುಡದಲ್ಲಿರುವ ಕ್ರಿ.ಶ. ೧೧೧೮ರ ಶಾಸನವೇ ಬಸದಿಗೆ ಸಂಬಂಧಿಸಿದ ಪ್ರಾಚೀನ ಶಾಸನವೆನಿಸಿದೆ. ಹೊಯ್ಸಳ ಹಿರಿಯ ದಂಡನಾಯಕ ಗಂಗರಾಜನ ಕೋರಿಕೆಯಂತೆ ಹೊಯ್ಸಳ ವಿಷ್ಣುವರ್ಧನನು ಬಿಂಡಿಗನವಿಲೆ ತೀರ್ಥಕ್ಕೆ ತಳವೃತ್ತಿಗಳನ್ನು ಮಾಡಿ ದಾನ ನೀಡಿದನ್ನು ಈ ಶಾಸನವು ಉಲ್ಲೇಖಿಸುತ್ತದೆ.

ಬಸದಿಯನ್ನು ಕುರಿತ ನೇರ ಶಾಸನಗಳು ಲಭ್ಯವಿಲ್ಲ. ವಾಸ್ತುರಚನೆಯನ್ನಾಧರಿಸಿ ಕ್ರಿ.ಶ. ೯ನೇ ಶತಮಾನದ ಆಸುಪಾಸಿನ ರಚನೆ ಎಂದು ಗುರುತಿಸಬಹುದು. ಬಸದಿಯ ಆವರಣದಲ್ಲಿ ಮೂರು ಗರ್ಭಗೃಹಗಳ ತ್ರಿಕೂಟ ರಚನೆಯೂ, ಅದರ ಮುಂದೆ ಪ್ರತ್ಯೇಕಿಸಲ್ಪಟ್ಟ ಮುಖಾಮುಖಿಯಾದ ಜೋಡಿ ಬಸದಿಗಳಿವೆ. ಬಸದಿಗಳ ಮೇಲಿರುವ ಶಿಖರ ರಚನೆಗಳು ಪೂರ್ಣ ಪ್ರಮಾಣದಲ್ಲಿದ್ದು 'ದ್ರಾವಿಡ–ನಾಗರ–ವೇಸರ ಶೈಲಿಗಳನ್ನು ಪ್ರತಿಬಿಂಬಿಸಿವೆ.

ಬಸದಿಯ ಹಲವು ಭಾಗಗಳು ಶಿಥಿಲಗೊಂಡು, ಕುಸಿದು, ಹಲವು ಬಾರಿ ಪುನರುತ್ಥಾನ ಕಾರ್ಯ ನಡೆದಿದೆ. ಕಳೆದ ಶತಮಾನದಲ್ಲಿ ಪ್ರಾಚ್ಯ ವಸ್ತು ಇಲಾಖೆಯವರು ಕೆಲವು ಭಾಗಗಳನ್ನು ಸಂಪೂರ್ಣವಾಗಿ ಬಿಚ್ಚಿ ಪುನಃ ಜೋಡಿಸಿದ್ದಾರೆ. ಇದರಿಂದಾಗಿ ಈಗ ಬಸದಿಯನ್ನು ಪೂರ್ಣ ರೂಪದಲ್ಲಿ ನೋಡಲು ಸಾಧ್ಯ. ಗರ್ಭಗೃಹದ ಭಾಗದಲ್ಲಿ ಅಡಿಯಿಂದ ಮುಡಿಯವರೆಗೆ ಸ್ತರಗಳನ್ನು ಗುರುತಿಸಲು ಸಾಧ್ಯ.

### ಊರ್ಧ್ವಕ್ರಮದ ಸ್ತರಗಳು

**ಅಧಿಷ್ಠಾನ :** ಉಪಾನ, ಜಗತಿ, ಕಂಪ, ಕುಮುದ, ಕಂಪ, ಕಂಠ, ಕಂಪ, ಕಪೋತ ಹಾಗೂ ಕಂಪಸ್ತರಗಳಿವೆ. ಉಪಾನವು ಅಳತೆಯಲ್ಲಿ ಚಿಕ್ಕದು. ಕೆಲವೆಡೆ ನೆಲಹಾಸು ಎತ್ತರದಲ್ಲಿದ್ದಾಗ ಭೂಮಿಯಲ್ಲಿ ಮರೆಯಾಗಿದೆ. ಕುಮುದವು ಸಾಮಾನ್ಯವಾಗಿ ತ್ರಿಪಟ್ಟ ರಚನೆಯುಳ್ಳದ್ದು. ಜೋಡಿ ಬಸದಿಯ ಪಶ್ಚಿಮದೆಡೆಯಲ್ಲಿ ವೃತ್ತ ಕುಮುದವಿದೆ. ಕಂಠಭಾಗದಲ್ಲಿ ಗಲಪಾದವಿದೆ. ಕಪೋತದ ಮೇಲೆ ನಾಸಿ ರಚನೆ ಇದೆ. ಗಲಪಾದ, ನಾಸೀ ಹಾಗೂ ಕುಡ್ಯ ಸ್ತಂಭಗಳು ನೇರವಾಗಿ ಒಂದರ ಮೇಲೊಂದು ಸ್ತರಗಳಲ್ಲಿ ರೂಪುಗೊಂಡಿವೆ. ಕಪೋತಕ್ಕೆ ಪರ್ಯಾಯವಾಗಿ ಪಟ್ಟಿಕೆಯನ್ನು ಜೋಡಿ ಬಸದಿಯ ಪೂರ್ವಭಾಗದಲ್ಲಿ ಕಾಣಬಹುದು.

**ಭಿತ್ತಿ :** ಭಿತ್ತಿಯ ಭಾಗದಲ್ಲಿ ಕುಡ್ಯ ಸ್ತಂಭಗಳೂ, ಮಧ್ಯಕೋಷ್ಠ ರಚನೆಗಳನ್ನು ಕಾಣಬಹುದು. ಕೋಷ್ಠಗಳ ಗುಹಾಭಾಗದಲ್ಲಿ ಕೆಲವೆಡೆ ಜಿನವಿಗ್ರಹಗಳಿವೆ. ಕೋಷ್ಠಗಳ ಎರಡು ಕಡೆ ಕುಡ್ಯ ಸ್ತಂಭಗಳಿದ್ದು ಮೇಲ್ಗಡೆ ತೋರಣವಿದೆ. ತೋರಣದ ಅಲಂಕಾರಿಕ ಭಾಗದಲ್ಲಿ ಸರಳವಾದ ಪತ್ರ ತೋರಣವಿದೆ.

**ಕುಡ್ಯ ಸ್ತಂಭದ ಸ್ತರಗಳು :** ದಂಡ, ಮಾಲಾಸ್ಥಾನ, ಪದ್ಮಬಂಧ (ಆಸ್ಯ), ಕಲಶ, ಸ್ಕಂದ, ಕುಂಭ, ಮಧ್ಯಮೂಲ, ಪದ್ಮ–ಫಲಕ (ಮಂಡಿ), ವೀರಕಾಂಡ, ತರಂಗ ಬೋದಿಗೆ.

**ಪ್ರಸ್ತರ :** ಪ್ರಸ್ತರ ರಚನೆಯನ್ನು ಕಪೋತ ಪೂರ್ವ ಭಾಗ, ಕಪೋತ, ಕಪೋತೋತ್ತರ ಭಾಗ ಎಂದು ವಿಂಗಡಿಸಿ ಕೊಳ್ಳಬಹುದು. ಕುಡ್ಯ ಸ್ತಂಭಗಳ ಮೇಲೆ ಬೋದಿಗೆಯ ನಂತರ ಕಪೋತದವರೆಗೆ ಕಪೋತ ಪೂರ್ವಭಾಗ. ಇಲ್ಲಿ ಉತ್ತರ, ವಾಜನ, ವಲಭೀ ಮತ್ತು ವಾಜನಸ್ತರಗಳಿವೆ. ಕಪೋತದ ಕೆಳಗೆ ವಲಭೀ ಭಾಗದಲ್ಲಿ ಹಂಸಮಾಲಾ ರಚನೆಯನ್ನು ಕಾಣಬಹುದು.

ಕಪೋತದ ಸ್ತರವು ಪ್ರಮುಖ ಭಾಗ. ಕಪೋತದಲ್ಲಿ ನಾಸಿಕಾ ಹಾಗೂ ಲತಾಲಂಕಾರವಿದೆ. ಕೆಳ ತುದಿಯಲ್ಲಿ ಚಂದ್ರಮಂಡಲ ಪಟ್ಟಿಕೆ ಇದೆ. ಕರ್ಣ ಭಾಗದಲ್ಲಿ ನೇತ್ರ ನಾಸಿ





ವೇಸರ-ನಾಗರ-ದ್ರಾವಿಡ ಶಿಖರಗಳು

ರಚನೆಗಳನ್ನು ಕಾಣಬಹುದು. ಕಪೋತಾ ನಂತರ ಕಪೋತೋತ್ತರ ಭಾಗದಲ್ಲಿ ಅಂತರಿತ, ಪ್ರತಿ, ವಾಜನ ಸ್ತರಗಳಿವೆ. ಪ್ರತಿಯ ಮುಂಭಾಗದಲ್ಲಿ ಸಿಂಹಮುಖವುಳ್ಳ ಮತ್ಸ್ಯಗಳೂ, ನೀರು ಕುದುರೆಗಳೂ ಅಲಂಕರಿಸಲ್ಪಟ್ಟಿವೆ. ಕೆಲವೆಡೆ ಸರ್ಪದ ಹೆಡೆಯುಳ್ಳ ಅಲಂಕಾರವಿದೆ.

**ಹಾರ :** ಪ್ರಸ್ತರದ ಮೇಲೆ ವೇದಿ, ನಂತರ ಮೊದಲ ತಲರಚನೆಯನ್ನು ಕಾಣಬಹುದು. ಹಾರದ ಭಾಗಗಳಾಗಿ ಕರ್ಣಕೂಟ-ಹಾರಾಂತರ-ಶಾಲಾ-ಹಾರಾಂತರ-ಕರ್ಣಕೂಟ ರಚನೆಗಳಿವೆ. ಹಾರಾಂತರ ಭಾಗದಲ್ಲಿ ಒಂದು ಅಥವಾ ಎರಡು ನಾಸಿಕೆಗಳಿವೆ. ವೇದಿಕೆಯ ಸ್ತರಗಳಾಗಿ ಮೊದಲಿಗೆ ಕಂಠ, ಕಂಪ, ಪದ್ಮ ಹಾಗೂ ಕಂಪಗಳನ್ನು ಕಾಣಬಹುದು. ಕಂಠಭಾಗದಲ್ಲಿ ಮೇಲ್ಗಡೆಯ ಅಲಂಕಾರಕ್ಕೆ ಹೊಂದಿಕೊಂಡಂತೆ ಗಲಪಾದವಿದೆ. ಅನಂತರ ಗಲೋದಯ, ಕಂಪ, ವಾಜನ, ಕೂಟ, ಶಾಲಾ, ನಾಸಿಕಾ ರಚನೆಗಳ ಶೀರ್ಷಭಾಗ. ಕಂಪ ಹಾಗೂ ಶಾಲಾ ಮಧ್ಯದಲ್ಲಿ ನಾಸಿಕೆಗಳು. ಎರಡೂ ಕಡೆ ಲತಾಲಂಕಾರ. ಶೀರ್ಷದ ಕೆಳತುದಿಯಲ್ಲಿ ಚಂದ್ರಮಂಡಲ ಪಟ್ಟಿಕೆ. ಶಾಲಾ ರಚನೆಯ ಎರಡು ಬದಿಗಳಲ್ಲಿ ಪಾರ್ಶ್ವವಕ್ತ್ರ. ಪಾರ್ಶ್ವವಕ್ತ್ರದ ಪಟ್ಟಿಕೆಗಳನ್ನು ಮುಂಭಾಗದಲ್ಲಿ ಕಾಣಬಹುದು. ಇವಿಷ್ಟೂ ಮೊದಲ ತಲದ ವಿವರಗಳು.

**ಎರಡನೆಯ ತಲ :** ಎರಡನೆಯ ತಲವು ಭಿತ್ತಿ ಹಾಗೂ ಪ್ರಸ್ತರವುಳ್ಳದ್ದು; ನಂತರ ನೆತ್ತಿಯಲ್ಲಿ ಕಂಠ ಹಾಗೂ ಶಿಖರವಿದೆ. ಎರಡನೆಯ ತಲದ ಭಿತ್ತಿಯಲ್ಲಿ ಕುಡ್ಯ ಸ್ತಂಭ ಹಾಗೂ ನಾಸೀ ಕೋಷ್ಠಗಳನ್ನು ಕಾಣಬಹುದು. ಕುಡ್ಯ ಸ್ತಂಭಗಳ ಮೇಲೆ ಪ್ರಸ್ತರ ರಚನೆ ಇದೆ. ಪ್ರಸ್ತರದ ಕಪೋತ ಭಾಗದಲ್ಲಿ ವಿರಳವಾಗಿ ನಾಸೀ ಅಲಂಕಾರವಿದೆ. ಕಪೋತದ ಕೆಳಗೆ ವಲಭೀ ಭಾಗದಲ್ಲಿ ಹಂಸಮಾಲಿಕೆ. ಕಪೋತದ ಮೇಲೆ ಪ್ರತಿಭಾಗದಲ್ಲಿ ಪುನಃ ಸಿಂಹಮುಖವುಳ್ಳ ಮತ್ಸ್ಯ ಹಾಗೂ ನೀರು ಕುದುರೆಗಳನ್ನು ಕಂಡರಿಸಲಾಗಿದೆ. ಪ್ರತಿಯ ನಂತರ ವಾಜನದ ಮೇಲೆ ಮೂಲೆಗಳಲ್ಲಿ ಸಿಂಹವಾಹನ. ನಂತರ ವೇದಿರಚನೆ. ಇವಿಷ್ಟು ಎರಡನೆ ತಲದ ಅಲಂಕಾರಿಕ ಸ್ತರಗಳು.

**ಕಂಠ :** ಸಿಂಹವಾಹನದ ನಂತರ ಕಾಣುವ ವೇದಿ ಹಾಗೂ ಗಲೋದಯವೇ ಷಡ್ವರ್ಗಗಳಲ್ಲಿ ಗುರುತಿಸುವ ಕಂಠ ಅಥವಾ ಗ್ರೀವಭಾಗ. ಈ ಭಾಗಗಳು ಶಿಖರದ ಶೈಲಿ ಅಥವಾ ಆಕಾರಕ್ಕೆ ತಕ್ಕಂತೆ ರೂಪುಗೊಂಡಿವೆ. ಕಂಠ, ಕಂಪ, ಪದ್ಮ, ಕಂಪ ಇವು ವೇದಿಕೆಯ ಸ್ತರಗಳು. ವೇದಿ ಅಥವಾ ವೇದಿಕೆಯು ಶಿಖರದ ಸೌಂದರ್ಯಕ್ಕೆ ಒಂದು ಔನ್ನತ್ಯವನ್ನು ನೀಡಿದೆ. ವೇದಿಕೆಯ ನಂತರ ಗಲೋದಯವಿದೆ. ಇದನ್ನು ಪಿಂಡಿ ಎನ್ನುವರು. ಗಲೋದಯದ ಭಾಗದಲ್ಲಿ ಗಲಪಾದವಿದೆ. ನಂತರ ಉತ್ತರ, ವಾಜನ, ಮೃಣಾಲಿಕಾ, ದಂಡಿಕಾ ವಲಯ ಸ್ತರಗಳಿವೆ.

**ಶಿಖರ :** ಪಂಚಕೂಟ ಬಸದಿಯ ಐದು ಶಿಖರಗಳಲ್ಲಿ ಮೂರು ನಾಗರಶೈಲಿಯ ಶಿಖರಗಳು. ದಕ್ಷಿಣದ ಗರ್ಭಗೃಹ ಹಾಗೂ ಜೋಡಿ ಬಸದಿಗಳು ನಾಗರ ಶಿಖರಗಳನ್ನು ಹೊಂದಿವೆ. ನಾಗರವೆಂದಲ್ಲಿ ಚತುರದಶ ರಚನೆ. ತ್ರಿಕೂಟದ ಪಶ್ಚಿಮ ದಿಕ್ಕಿನ ಗರ್ಭಗೃಹವು ದ್ರಾವಿಡ ಶಿಖರವನ್ನು ಪಡೆದಿದೆ. ಇದು ಅಷ್ಟಾಶ್ರವುಳ್ಳದ್ದು. ಪೂರ್ವ ದಿಕ್ಕಿನ ಗರ್ಭಗೃಹವು ವೇಸರ ಶೈಲಿಯ ಶಿಖರವನ್ನು ಧರಿಸಿ ನಿಂತಿದೆ. ಇದು ವೃತ್ತಾಕಾರ ರಚನೆ. ನಾಗರ ಮತ್ತು ವೇಸರ ಶಿಖರಗಳಲ್ಲಿ ನಾಲ್ಕು ದಿಕ್ಕಿನಲ್ಲಿಯೂ ನಾಸೀ ಅಥವಾ ಮಹಾ ನಾಸೀ ರಚನೆಗಳಿವೆ. ದ್ರಾವಿಡ ಶಿಖರದಲ್ಲಿ ಎಂಟು ನಾಸಿಕೆಗಳಿವೆ. ಈ ನಾಸಿಕೆಗಳು ನಾಗರ, ವೇಸರ ಶಿಖರದ ಮಹಾನಾಸೀ ರಚನೆಗಳಿಗಿಂತ ಕೊಂಚ ಚಿಕ್ಕವು. ನಾಸಿಕೆಯ ಕೆಳಭಾಗದಲ್ಲಿ ಕುಕ್ಷಿ ಇದ್ದು ಮುಖಪಟ್ಟಿಕೆಯಿಂದ ಆವೃತವಾಗಿದೆ. ಕುಕ್ಷಿಯ ಮೇಲ್ಭಾಗದಲ್ಲಿ ಕೊಂಚ ನೀಳವಾದ ಗಲಭಾಗವಿದ್ದು ತುದಿಯಲ್ಲಿ ಕಿನ್ನರಿ ವಕ್ತ್ರ ಅಥವಾ ಸಿಂಹ ವಕ್ತ್ರವಿದೆ. ನಾಸಿಕೆಯ ಉಭಯ ಪಾರ್ಶ್ವದಲ್ಲಿ ಚಂದ್ರಮಂಡಲವೆಂಬ ಪಟ್ಟಿಕೆ ಶಿಖರದ ಕೆಳ ಅಂಚಿನಲ್ಲಿ ಸುತ್ತುವರೆಯುತ್ತದೆ. ನಾಗರ ಶಿಖರದ ಮೂಲೆಗಳಲ್ಲಿ ಲತಾಲಂಕಾರವಿದೆ. ಶಿಖರದ ಮೇಲ್ತುದಿಯಲ್ಲಿ ಫಲಿಕಾ ಮಂಡಲವಿದ್ದು ಮಧ್ಯೆ ಪದ್ಮರಚನೆ ಇದೆ.

ಷಡ್ವರ್ಗಗಳ ರಚನೆಯಲ್ಲಿ ಸ್ತೂಪಿಗೆ ಸ್ಥಾನವುಂಟು. ಆದರೆ ಇಲ್ಲಿನ ಐದು ಶಿಖರಗಳಲ್ಲಿ ಸ್ತೂಪಿ ರಚನೆ ಇಲ್ಲ. ಶಿಲಾ ರಚನೆಗೆ ಬದಲಾಗಿ ಲೋಹರಚನೆಗಳಿರಲೂ ಸಾಧ್ಯ. ಆದರೆ ಇಲ್ಲಿ ಸ್ತೂಪಿ ಇದ್ದ ಬಗ್ಗೆ ಯಾವುದೇ ಮಾಹಿತಿ ಇಲ್ಲ.

### ಕಂಬದಹಳ್ಳಿಯ ಪಂಚಕೂಟ ಬಸದಿ : ಊರ್ಧ್ವಕ್ರಮದ ಕ್ಷಿಪ್ರ ನೋಟ

**ಅಧಿಷ್ಠಾನ :** ಉಪಾನ, ಜಗತಿ, ಕಂಪ, ಕುಮುದ (ತ್ರಿಪಟ್ಟ/ವೃತ್ತ), ಕಂಪ, ಕಂಠ, ಕಂಪ, ಕಪೋತ/ಪಟ್ಟಿಕಾ, ಕಂಪ.

**ಭಿತ್ತಿ :** ಕುಡ್ಯಸ್ತಂಭ ಹಾಗೂ ಮಧ್ಯಕೋಷ್ಠ.

**ಕುಡ್ಯಸ್ತಂಭ/ಕೋಷ್ಠಸ್ತಂಭ :** ದಂಡ, ಮಾಲಾಸ್ಥಾನ, ಪದ್ಮಬಂಧ (ಆಸ್ಯ), ಕಲಶ, ಸ್ಕಂದ, ಕುಂಭ, ಮಧ್ಯಮೂಲ, ಪದ್ಮ-ಫಲಕ (ಮಂಡಿ), ವೀರಕಾಂಡ, ತರಂಗ ಬೋದಿಗೆ.

**ಮಧ್ಯಕೋಷ್ಠ :** ಕೋಷ್ಠಸ್ತಂಭ/ತೋರಣಸ್ತಂಭ, ತೋರಣ ಭಾಗದಲ್ಲಿ ಪತ್ರ ತೋರಣ.

**ಪ್ರಸ್ತರ :** ಕಪೋತ ಪೂರ್ವ ಭಾಗ - ಉತ್ತರ, ವಾಜನ, ವಲಭೀ (ಹಂಸಮಾಲಾ) ವಾಜನ. ಕಪೋತ-ನಾಸಿಕಾ/ನೇತ್ರನಾಸೀ, ಲತಾಲಂಕಾರ, ಚಂದ್ರಮಂಡಲಪಟ್ಟಿಕೆ. ಕಪೋತೋತ್ತರ ಭಾಗ - ಅಂತರಿತ, ಪ್ರತಿ, ವಾಜನ, ಪ್ರತಿಮುಖದಲ್ಲಿ, ಮತ್ಸ್ಯ/ನೀರು ಕುದರೆ.

**ಹಾರ :** ಕರ್ಣಕೂಟ, ಹಾರಾಂತರ-ಶಾಲಾ-ಹಾರಾಂತರ-ಕರ್ಣಕೂಟ. ಹಾರಾಂತರದಲ್ಲಿ ಏಕನಾಸೀ/ದ್ವಿನಾಸೀ.

ಕೂಟ, ಶಾಲಾ ರಚನೆಯಲ್ಲಿ ನಾಸಿಕಾ, ಲತಾಲಂಕಾರ, ಕೆಳತುದಿಯಲ್ಲಿ ಚಂದ್ರಮಂಡಲ ಪಟ್ಟಿಕೆ.

ಕೋಷ್ಠದ ಇಕ್ಕೆಲಗಳಲ್ಲಿ ಪಾರ್ಶ್ವ ವಕ್ತ್ರದ ಪಟ್ಟಿಕೆ.

ಹಾರದ ಕೆಳಗೆ ವೇದಿ : ಕಂಠ, ಕಂಪ, ಪದ್ಮ, ಕಂಪ ವೇದಿಯ ನಂತರ ಗಲೋಪಯ, ಕಂಪ, ವಾಜನ, ಕರ್ಣ/ಶಾಲಾ-ಶೀರ್ಷ.

**ಎರಡನೆಯ ತಲ :** ಭಿತ್ತಿ, ಪ್ರಸ್ತರ

ಭಿತ್ತಿಯಲ್ಲಿ ನಾಸಿಕೋಷ್ಠ, ಕುಡ್ಯ ಸ್ತಂಭಗಳು ಪ್ರಸ್ತರದಲ್ಲಿ ಕಂಪೋತಭಾಗ, ನಾಸೀರಚನೆ, (ಪ್ರತಿವಾಜನದ ನಂತರ ಮೂಲೆಗಳಲ್ಲಿ ಸಿಂಹವಾಹನ.

**ಕಂಠ :** ವೇದಿಕೆ : ಕಂಠ (ಗಲಪಾದ), ಕಂಪ, ಪದ್ಮ, ಕಂಪ ಗಲೋದಯ । ಪಿಂಡೀ, ಉತ್ತರ, ವಾಜನ, ಮೃಣಾಲಿಕಾ, ದಂಡಿಕಾವಲಯ.

**ಶಿಖರ :** ಚತುರಶ್ರ । ಅಷ್ಟಾಶ್ರ । ವೃತ್ತ

ನಾಗರ । ದ್ರಾವಿಡ । ವೇಸರ

ಶಿಖರದ ಮೇಲೆ ನಾಲ್ಕು । ಎಂಟು ನಾಸಿಕೆ । ಮಹಾನಾಸಿ, ಲತಾಲಂಕಾರ,

ಚಂದ್ರಮಂಡಲ ಪಟ್ಟಿಕೆ, ಫಲಿಕಾ ಮಂಡಲ

ಸ್ತೂಪಿ ರಚನೆ ಇಲ್ಲ.

(ಚರವಾಣಿ : ೯೮೪೫೪೯೧೫೪೫)

ಡಾ. ಕೂ.ಸ. ಅಪರ್ಣ*

# ದೇವಾಲಯ ನಿರ್ಮಾಣದ ಪೂರ್ವ ಕಾರ್ಯಗಳು

ನಮ್ಮ ಮನಸ್ಸಿಗೆ ಬಂದ ದೈವಕ್ಕಾಗಿ ದೇವಾಲಯವನ್ನು ನಿರ್ಮಿಸುವ ಸಂಕಲ್ಪವನ್ನು ವೈಯಕ್ತಿಕವಾಗಿಯೋ, ಒಗ್ಗಟ್ಟಾಗಿಯೋ ಮಾಡುವುದು ದೇವಾಲಯ ನಿರ್ಮಾಣದ ಒಂದು ಮಾನಸಿಕ ಹಂತ. ಆನಂತರ ಅದಕ್ಕಾಗಿ ನಿವೇಶನವನ್ನು ಆಯ್ಕೆ ಮಾಡುವುದು, ಅದನ್ನು ನಮ್ಮದಾಗಿಸಿಕೊಳ್ಳುವುದು ಎರಡನೆಯ ಹಂತ. ಆನಂತರ ಅಲ್ಲಿ ದೇವಾಲಯವನ್ನು ನಿರ್ಮಿಸಿ, ಭಕ್ತವತ್ಸಲ ದೇವರು ನೆಲೆ ನಿಲ್ಲುವಂತೆ ಮಾಡುವುದು ಮೂರನೆಯ ಹಾಗೂ ಕೊನೆಯ ಹಂತ. ದೇವಾಲಯವನ್ನು ಶಾಸ್ತ್ರೋಕ್ತ ರೀತಿಯಲ್ಲಿ ಆಯೋಜಿಸಿ, ಸರಿಯಾದ ಕ್ರಮದಲ್ಲಿ ದೇವಾಲಯವನ್ನು ನಿರ್ಮಿಸಿದರೆ ಮಾತ್ರವೇ ಅಲ್ಲಿ ದೈವವು ಸಾಕ್ಷಾತ್ಕಾರಗೊಂಡು ಭಕ್ತರನ್ನು ಅನುಗ್ರಹಿಸುವುದು ಎಂಬ ಅಭಿಪ್ರಾಯವು ಗ್ರಂಥಗಳಲ್ಲಿದೆ.

ಈಶಾನ ಶಿವಗುರುದೇವ ಪದ್ಧತಿಯು (೨೬.೧.೪, ಕ್ರಿಯಾ), ಕರ್ಷಣದಿಂದಾರಂಭಿಸಿ, ಶಂಕುಸ್ಥಾಪನೆಯವರೆಗಿನ ಕಾರ್ಯಗಳನ್ನು ಹೇಳಿದೆ. ಇದನ್ನೇ ಭೂಪರೀಕ್ಷಾ, ಪ್ರವೇಶಬಲಿ, ಭೂಪರಿಗ್ರಹ, ಭೂಕರ್ಷಣ, ಶಂಕುಸ್ಥಾಪನಾ, ಪದವಿನ್ಯಾಸ ಅಥವಾ ವಾಸ್ತುವಿನ್ಯಾಸ, ಪ್ರಾಸಾದವಾಸ್ತು, ವಾಸ್ತುಹೋಮ–ಎಂದು ಹೇಳಿ, ನಂತರ ಪ್ರಥಮೇಷ್ಟಕ ವಿಧಿಯನ್ನು ಹೇಳಿದೆ.

ಸೂಕ್ತ ಕಾಲದಲ್ಲಿ ಕಾರ್ಯವನ್ನು ಆರಂಭಿಸುವುದು ಇವುಗಳಲ್ಲಿ ಮೊದಲನೆಯದು. ಇದು, ಭೂಪರೀಕ್ಷೆಗಾಗಿ ಆಚಾರ್ಯರು ಮತ್ತು ಯಜಮಾನನು ಹೊರಡುವ ಕಾಲವನ್ನು ಹೇಳುತ್ತದೆ. ಇದು ದೇಶದಲ್ಲಿ 'ಸುಭಿಕ್ಷೆ' ಇರುವಾಗ ಆರಂಭ ಮಾಡಬೇಕೆಂಬ ಅಭಿಪ್ರಾಯ ಒಂದೆಡೆ ಇದ್ದರೆ, 'ಇಷ್ಟವಾದ ಮಾಸದಂದು, 'ಶುಭಮಾಸ ಮುಹೂರ್ತ'ದಂದು ಮಾಡಬೇಕೆಂದೂ ಇನ್ನೊಂದೆಡೆ ಇದೆ.

ಯಜಮಾನರಿಗೆ ಹೊಂದುವ ನಕ್ಷತ್ರದಂದು ಆರಂಭವಾಗಬೇಕೆಂದೂ ಹೇಳಲಾಗಿದೆ. ಗ್ರಂಥಗಳಲ್ಲಿ ದೊರೆಯುವ ಇನ್ನೂ ಕೆಲವು ವಿವರಗಳೆಂದರೆ : 'ದಿವ್ಯೆದ ನಿರ್ಮಲೇ', ಅಂದರೆ, ಹಗಲಿನಲ್ಲಿ ಆರಂಭ ಮಾಡುವುದು ಒಳ್ಳೆಯದು, ಭಾದ್ರಪದ ಮತ್ತು ಆಷಾಢ ಬಿಟ್ಟು ಉಳಿದ ಮಾಸಗಳಲ್ಲಿ, ಪಕ್ಷಗಳ ಕೊನೇ ೫ ದಿನ ಬಿಟ್ಟು, ಉಳಿದ ದಿನಗಳಲ್ಲಿ, ಮಂಗಳವಾರ ಮತ್ತು ಶನಿವಾರ ಬಿಟ್ಟು, ಸಿದ್ಧಯೋಗ ಮತ್ತು ಅಮೃತಯೋಗವಿರುವ ಕಾಲದಲ್ಲಿ, ಅಷ್ಟಮೀ, ವಿಷ್ಟಿಯೊಂದಿಗಿನ ಷಷ್ಠೀ (=ರಿಕ್ತ ತಿಥಿ) ತಿಥಿಗಳನ್ನು ಬಿಟ್ಟು, ಚರ ಕರಣಗಳಾದ ಬವ, ಬಾಲಕ, ಕಾಲವ, ತೈತುಲ, ಗರೋಜಿ, ವಣಜಿ ಈ ಕರಣಗಳಂದು, ರೇವತಿ, ರೋಹಿಣೀ, ಪುಷ್ಯಮೀ, ಸ್ವಾತಿ, ಧನಿಷ್ಠ, ಶ್ರವಣ, ಶತಬಿಷಾ, ಚಿತ್ರಾ, ಪುನರ್ವಸು, ಅಶ್ವಿನೀ ಮತ್ತು ಮೃಗಶಿರಾ ನಕ್ಷತ್ರದಂದು ಭೂಪರೀಕ್ಷೆಯನ್ನು ಆರಂಭಿಸಬೇಕೆಂದು ತಿಳಿದುಬರುತ್ತದೆ.

ಇವುಗಳಲ್ಲಿ ಎರಡನೆಯದು ದೇಶನಿರ್ಣಯ ಪವಿತ್ರ ತೀರ್ಥದ (ಸರೋವರದ) ಹತ್ತಿರ, ನದೀ ದಡಗಳಲ್ಲಿ, ಸಮುದ್ರದ ದಡದಲ್ಲಿ, ಹೊಳೆ ಹಾಗೂ ಸಮುದ್ರವು ಸೇರುವ (ಸಂಗಮ) ಸ್ಥಳಗಳಲ್ಲಿ, ಬೆಟ್ಟದ ತುದಿಯಲ್ಲಿ, ಬೆಟ್ಟದ ತಪ್ಪಲಿನಲ್ಲಿ, ವನೋಪ–ವನಗಳಲ್ಲಿ, ಹೂದೋಟದಲ್ಲಿ, ಸಿದ್ಧರ ಆಶ್ರಯ ಸ್ಥಾನದಲ್ಲಾಗಲೀ, ಹಳ್ಳಿಯಲ್ಲಾಗಲೀ, ರಾಜಧಾನಿಯಲ್ಲಾಗಲೀ, ಪಟ್ಟಣದಲ್ಲಾಗಲೀ ಇತರ ರಮ್ಯವಾದ ಪ್ರದೇಶದಲ್ಲಾಗಲೀ, ಆಚಾರ್ಯನು ದೇವತಾ ಪ್ರತಿಷ್ಠೆಗಾಗಿ ಭೂಮಿಯನ್ನು ರಚಿಸಬೇಕು. ಅಂದರೆ, ಗೊತ್ತುಪಡಿಸಬೇಕು ಎಂದು ವಿವಿಧ ಶ್ರೇಷ್ಠ ಭೂಪ್ರದೇಶಗಳನ್ನು ತಂತ್ರಸಮುಚ್ಚಯವು ಹೇಳಿದೆ (೧.೨೮).

ಇಷ್ಟೇ ಅಲ್ಲದೆ, ದೇವಾಲಯದ ನಿವೇಶನವು ಚೌಕ ಅಥವಾ ಆಯತಾಕಾರವಾಗಿದ್ದು, ಪಶ್ಚಿಮ ಅಥವಾ ದಕ್ಷಿಣದಲ್ಲಿ ಎತ್ತರವಾಗಿರಬೇಕೆಂದು ಮಯಮತವೂ (೩.೧), ಚೌಕಾಕಾರವಾಗಿದ್ದು, ದಕ್ಷಿಣದಲ್ಲಿ ಎತ್ತರವಾಗಿರಬೇಕೆಂದೂ, ಅಮುಖವಾಗಿರಬಹುದೆಂದೂ ಮಾನಸಾರವೂ (೪.೧&೬) ಹೇಳಿದೆ. ನಿವೇಶನವು ಬೇರೆಯ ಆಕಾರದಲ್ಲಿದ್ದರೆ ಅದನ್ನು ಚೌಕ/ಆಯತ ಆಕಾರಕ್ಕೆ ಮಾರ್ಪಡಿಸಬೇಕು, ಶಿಲ್ಪರತ್ನದ ಪ್ರಕಾರ ಆಯತದ ಉದ್ದವಾದ ಪಕ್ಕಗಳು ಉತ್ತರ–ದಕ್ಷಿಣವಾಗಿರಬೇಕು (ಅಂದರೆ ಉದ್ದವು ಅಗಲಕ್ಕಿಂತ ಜಾಸ್ತಿ ಇರಬೇಕು).[೧] ಕಾಲಾಮೃತವು (೬.೨೩೮) ಪಶ್ಚಿಮ ಅಥವಾ ದಕ್ಷಿಣಕ್ಕೆ ಎತ್ತರವು ಸ್ವಲ್ಪ ಮಾತ್ರ ಇರಬೇಕೆಂದೂ, ಅಥವಾ ಬೇರೆ ದಿಕ್ಕಿನಲ್ಲಿ ಎತ್ತರವಿದ್ದರೆ ಪರವಾಗಿಲ್ಲವೆಂದೂ ಹೇಳಿದೆ. 'ವಾಸ್ತುವಿದ್ಯಾ' ಗ್ರಂಥದಲ್ಲಿ, ಯಾವ ದಿಕ್ಕಿನಲ್ಲಿ (ಮತ್ತು

* # ೧೬೭೬, ೫ನೇ 'ಎ' ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ಬೆಂಗಳೂರು.

ವಿದಿಕ್ಕಿನಲ್ಲಿ) ಎತ್ತರವಿದ್ದರೆ ಏನು ಪರಿಣಾಮ ಎಂದು ಹೇಳಿ ಅವಕ್ಕೆ ಬೇರೆ ಬೇರೆ ಹೆಸರನ್ನು ಕೂಡಾ ಹೇಳಿದೆ (೨.೩೦–೩೨). ದಿಕ್–ವಿದಿಕ್ ಮಧ್ಯೆ ಕೂಡಾ ತಗ್ಗಾಗಿದ್ದು, ಅದಕ್ಕೂ ಬೇರೆ ಬೇರೆ ಹೆಸರನ್ನು ನೀಡಿ, ಅವುಗಳಲ್ಲಿ ಒಳ್ಳೆಯದು, ಕೆಟ್ಟದ್ದನ್ನೂ, ಅದೇ ಗ್ರಂಥವು ಗುರುತಿಸಿದೆ. (೮.೨೬)

ನಿವೇಶನದ ಗುಣದ ಬಗ್ಗೆ ಪರೀಕ್ಷಿಸಿ, ನಿರ್ಣಯಿಸುವುದು 'ಭೂಪರೀಕ್ಷಾ', ಇದು ದೇವಾಲಯದ ನಿರ್ಮಾಣ ಪೂರ್ವ ಕಾರ್ಯಗಳಲ್ಲಿ ಮೂರನೆಯದು. ಯಜಮಾನನು ಆಚಾರ್ಯನೊಂದಿಗೆ (? ಶಿಲ್ಪಿಯೊಂದಿಗೆ) ಸೂಕ್ತ ಕಾಲದಲ್ಲಿ ಹೋಗಿ ನಿರ್ಣಯಿಸಿರುವ ಭೂಮಿಯನ್ನು ಪರೀಕ್ಷಿಸಬೇಕು, ಕನ್ಯೆಯೊಬ್ಬಳು ಬಲಗೈಯಲ್ಲಿ ತಾವರೆಯನ್ನೂ, ಎಡಗೈಯಲ್ಲಿ ದೀಪವನ್ನೂ ಹಿಡಿದು ಮಂಗಳದ್ರವ್ಯಗಳೊಂದಿಗೆ ಮುಂದೆ ಹೋಗಬೇಕು ('ಪದ್ಮಪ್ರದೀಪ ಹಸ್ತಂ'). ನಿಶ್ಚಯಿಸಿರುವ ಭೂಮಿಯ ಸುತ್ತ ಪ್ರದಕ್ಷಿಣೆ ಮಾಡಿ ಶುಭಲಕ್ಷ್ಣ/ಶುಭ ಶಕುನಗಳನ್ನು ಗಮನಿಸಬೇಕು. ಈ ಶುಭ/ಅಶುಭ ಶಕುನಗಳ ಬಗ್ಗೆ ಗ್ರಂಥಗಳಲ್ಲಿ ವಿವರಗಳಿರುವುದಾಗಿ ತಿಳಿದುಬರುತ್ತದೆ. ಉತ್ತಮ ನಿವೇಶನದ ಬಗ್ಗೆ ಮಯಮತವು ಈ ರೀತಿ ತಿಳಿದುಬರುತ್ತದೆ.[೨] ಉತ್ತಮ ನಿವೇಶನದ ಬಗ್ಗೆ ಮಯಮತವು ಈ ರೀತಿ ಹೇಳಿದೆ.[೩] ಕೆಂಪು ರೀತಿಯ, ಬಿಳಿ, ಹಳದಿ, ಕಪ್ಪು ಬಣ್ಣದ, ಕುದುರೆ ಹಸು ಆನೆಗಳ ನಿನದವಿರುವ, ವೀಣಾ ವೇಣು ನೀರು ದುಂದುಬಿಗಳ ಧ್ವನಿಯಿರುವ, ಪುನ್ನಾಗಮಲ್ಲಿಗೆ ತಾವರೆ ಧಾನ್ಯ, ಪಾಟಲಗಳ ಸುವಾಸನೆಯಿರುವ, ಸರ್ವ ಬೀಜಗಳನ್ನು ಮೊಳೆಯುವಂತೆ ಮಾಡುವ, ಏಕವರ್ಣದಿಂದ ಕೂಡಿದ, ಅಚ್ಚುಕಟ್ಟಾಗಿರುವ, ಷಡ್ರಸ[೪]ಗಳಿಂದ ಕೂಡಿರುವ, ಹಸುವಿನ ಗಂಧವಿರುವ, ತಾವರೆಯಿರುವ, ನೀರು ಬಲಕ್ಕೆ ಪ್ರದಕ್ಷಿಣೆ ರೀತಿಯಲ್ಲಿ ಹರಿಯುವ, ಪೂರ್ವದ ಅಂಚಿನಲ್ಲಿ ನದಿಯಿರುವ, ಸುರಭಿಗೆ ಸಮಾನವಾಗಿರುವ, 'ಸುಖಸಂಸ್ಪರ್ಶ'ವಾದ, ಚೂಪಾದ ಸಾಮಗ್ರಿಗಳಿಲ್ಲದ, ಮೂಳೆಗಳಿಲ್ಲದ ಭೂಮಿಯು ಉತ್ತಮವಾದುದು.[೫]

ಈ ನಂತರದ ಐದನೆಯ ಕಾರ್ಯ ಭೂಪರಿಗ್ರಹ ದೇವಬಲಿಯ ನಂತರ ನಿವೇಶನವನ್ನು ಸ್ವೀಕರಿಸುವುದೇ ಮುಂದಿನ ಕಾರ್ಯ. ಇದಕ್ಕೆ ಮುನ್ನ ಕೆಲವು ಪರೀಕ್ಷೆಗಳೂ ಇವೆ. ನಿವೇಶನವನ್ನು ಪರೀಕ್ಷಿಸುವಾಗ ಮಧ್ಯೆ ಚೌಕವಾದ ಹಳ್ಳ ತೋಡಿ ಮಣ್ಣನ್ನು ತೆಗೆಯಬೇಕು. ನಂತರ ಆ ಮಣ್ಣಿನಿಂದಲೇ ಹಳ್ಳವನ್ನು ತುಂಬಬೇಕು. ಆಗ ಮಣ್ಣು ಹಳ್ಳದಲ್ಲಿ ತುಂಬಿ ಹೆಚ್ಚಾಗಿ ಉಳಿದರೆ, ಉತ್ತಮ (ಮಾನ. ೫.೩೪–೩೭). ಮಣ್ಣು ಸಮನಾಗಿ ಉಳಿದಲ್ಲಿ ಅದು ಮಧ್ಯಮವೆಂದೂ 'ತಂತ್ರಸಮುಚ್ಚಯ'ದಲ್ಲಿದೆ (೧.೩೦). ಇನ್ನೊಂದು ಪರೀಕ್ಷೆಯು ನೀರಿಗೆ ಸಂಬಂಧಿಸಿದ್ದು. ಭೂಮಿಯನ್ನು ಆಳವಾಗಿ ಅಗೆದು, ರಾತ್ರಿ ಅದರಲ್ಲಿ (ಎಲ್ಲಿ ಆಭರಣಗಳ) ನೀರನ್ನು ನಾಲ್ಕೂ ಕಡೆ ಸಮನಾಗಿರುವಂತೆ ತುಂಬಬೇಕು, ಚಂದನ ಅಕ್ಷತೆಯನ್ನೂ ಹಾಕಬೇಕು. ಸ್ಥಪತಿಯು ಆ ರಾತ್ರಿ ಪೂರ್ವ ದಿಕ್ಕಿಗೆ ಮುಖ ಮಾಡಿ ಅಲ್ಲೇ ಮಲಗಬೇಕು. ಉಪವಾಸವಿದ್ದು, 'ಭೂತಾಯಿ ಈ ನಿವೇಶನದಲ್ಲಿ ಸಂಪತ್ತಿನಿಂದ ಅಭಿವೃದ್ಧಿಯಾಗು' ಎಂದು ಪ್ರಾರ್ಥಿಸಬೇಕು. ಆ ದಿನದ ನಂತರ ಪರೀಕ್ಷಿಸಿದಾಗ ಗುಂಡಿಯಲ್ಲಿ ಸ್ವಲ್ಪ ನೀರಿದ್ದರೆ ಒಳ್ಳೆಯದು, ಅದು ಒಣಗಿದ್ದರೆ ಒಳ್ಳೆಯದಲ್ಲ.[೬] ತಂತ್ರಸಮುಚ್ಚಯ ಮತ್ತು ಈಶಾನ ಶಿವಗುರು ದೇವಪದ್ಧತಿಯಲ್ಲಿ (ಕ್ರಿಯಾ–೨೩, ೩೯–೪೦), ನೀರು ತುಂಬಿದ ಮೇಲೆ ಸ್ಥಪತಿಯು ೧೦೦ ಹೆಜ್ಜೆ ದೂರ ಹೋಗಿ ಮತ್ತೆ ಬರಬೇಕೆಂದೂ, ಅಜಿತಾಗಮದಲ್ಲಿ (೭,೯–೧೦), ೧೦ ಹೆಜ್ಜೆ ಮುಂದೆ ಹೋಗಬೇಕೆಂದೂ ಇದೆ.

ಭೂಪರಿಗ್ರಹದ ನಂತರ ಭೂಮಿಯನ್ನು ಸಮಗೊಳಿಸುವುದು (ಕರ್ಷಣ) ಆರನೆಯ ಕಾರ್ಯ, ನಿವೇಶನದ ಮಧ್ಯದಲ್ಲಿ ಚೌಕಾಕಾರದ ಭೂಮಿಯನ್ನು ಸಮತಟ್ಟಾಗಿ ಮಾಡಿ ಶುಚಿಗೊಳಿಸಬೇಕು. ಈ ಹಂತದಲ್ಲಿ ಮಾಡಬೇಕಾದ ಕಾರ್ಯವನ್ನು ತಂತ್ರಸಮುಚ್ಚಯವು ಈ ರೀತಿ ಹೇಳಿದೆ. ಆಯಾಯಾ ದೇವತಾ ಸಂಬಂಧಿಯಾದ ಅಸ್ತ್ರ ಮಂತ್ರಗಳನ್ನು ಜಪಿಸುತ್ತಾ, ಪೂಜಿಸಲ್ಪಟ್ಟ ಕತ್ತಿ, ಕೊಡಲಿ ಮೊದಲಾದ ಸಾಧನಗಳಿಂದ, ಅಲ್ಲಿರುವ ಮರ, ಪೊದೆ ಮೊದಲಾದುವನ್ನು ಬುಡಸಹಿತವಾಗಿ ಕಿತ್ತು ಉಳುವಿಕೆಯನ್ನು ಆರಂಭಿಸಬೇಕು. ಉಳುವಿಕೆಯ ಬಗ್ಗೆ ಗ್ರಂಥಕಾರನ ಇನ್ನೂ ಕೆಲವು ವಿವರಗಳಿವೆ. (೧.೫೫ ಮುಂದು..) ಇದನ್ನು ಪಶ್ಚಿಮದಿಂದ ಆರಂಭಿಸಿ ಪ್ರದಕ್ಷಿಣಾಕಾರವಾಗಿ ಪೂರ್ವಾಂತ್ಯವಾಗಿ ಹಾಗೂ ದಕ್ಷಿಣದಿಂದಾರಂಭಿಸಿ ಉತ್ತರಾಂತ್ಯವಾಗಿ ಮಾಡಬೇಕು. ೩/೫/೭ ಬಾರಿ ಉಳಬೇಕು.

ಸ್ಥಳವು ವಿಸ್ತಾರವಾಗಿದ್ದಲ್ಲಿ ಹತ್ತಕ್ಕೂ ಹೆಚ್ಚು ಬಾರಿ ಮಂಡಲಾಕಾರವಾಗುವಂತೆ ಉಳಬೇಕು. ಬಿತ್ತಿದ ನಂತರ ಅದು ಫಲ ನೀಡುವವರೆಗೂ ಪ್ರತಿ ದಿನ ನೀರು ಸಿಂಪಿಡಿಸಬೇಕು. ಬೀಜಗಳನ್ನು ಸಂಸ್ಕರಿಸಿ ಬಿತ್ತಬೇಕಲ್ಲದೆ, ಹೆಸರು, ಎಳ್ಳು, ಸಾಸಿವೆ, ಉದ್ದು ಮೊದಲಾದ ಬೀಜಗಳನ್ನು ಬಿತ್ತಬೇಕು. ಆಯಾಯ ದೇವತೆಗಳಿಗೆ ಸಂಬಂಧಿಸಿದ ಬೀಜಗಳನ್ನೂ ಬಿತ್ತಬಹುದು. ಗೋವಾಸವನ್ನು ವರ್ಷಾವಧಿಯ ಪರ್ಯಂತ (ಒಂದು ಯಾ ಮೂರು ದಿನ ಪರ್ಯಂತ ಎಂದೂ ಇದೆ) ಕಲ್ಪಿಸಿ ಈ ಸಸ್ಯಗಳು ಫಲ ಪುಷ್ಪಗಳನ್ನು ನೀಡಿದಾಗ ಅದನ್ನು ಗೋ, ಬ್ರಾಹ್ಮಣ ಮೊದಲಾದವುಗಳಿಗೆ ಕೊಟ್ಟು, ತಿರುಗಿ ಉತ್ತು, ಸ್ವಚ್ಛಗೊಳಿಸಿ, ಆ ಸ್ಥಳವನ್ನು ಸಮತಟ್ಟಾಗಿ ಮಾಡಿ, ದೇವತಾಯತನವನ್ನು ನಿರ್ಮಿಸಲು ಯೋಗ್ಯವಾಗುವಂತೆ ಮಾಡಬೇಕು (೧.೫೩) ಸಾಧ್ಯವಾದಲ್ಲಿ ಬ್ರಾಹ್ಮಣ ಭೋಜನ ಮಾಡಬೇಕು.

ಭೂಕರ್ಷಣದ ನಂತರ, ದಿಗ್ಭೇದ ನಿರ್ಣಯಕ್ಕಾಗಿ ಶಂಕುಸ್ಥಾಪನೆಯನ್ನು ಮಾಡಬೇಕು. ಏಳನೆಯ ಕಾರ್ಯವಾದ ಇದನ್ನು ದಿಕ್ಪರಿಚ್ಛೇದ/ಶಂಕುಸ್ಥಾಪನ ಎಂದು ಗುರುತಿಸಲಾಗಿದೆ. ಇದನ್ನು ಉತ್ತರಾಯಣ ಕಾಲ, ಶುಕ್ಲಪಕ್ಷ, ಸೂರ್ಯಮಂಡಲ ಶುಭ್ರವಾಗಿದ್ದಾಗ ಮಾಡಬೇಕೆಂದು ಹೇಳಿರುವ ಮಯಮತವು, ವರ್ಷದ ಯಾವುದೇ ಕಾಲದಲ್ಲೂ ಮಾಡಬಹುದೆಂಬ ಸೂಚನೆಯನ್ನು ನೀಡಿದೆ (೬.೧-೨ಎ, ೧೧). ಉತ್ತರಾಯನ, ದಕ್ಷಿಣಾಯನ ಎರಡೂ ಕಾಲಗಳನ್ನೂ ಹೇಳಿರುವ ಮಾನಸಾರವು, ಶುಕ್ಲಪಕ್ಷ, ಕೃಷ್ಣಪಕ್ಷಗಳಲ್ಲೂ ಇದನ್ನು ಮಾಡಬಹುದೆಂದಿದೆ. ಇದರೊಂದಿಗೆ, ಉದಯಕಾಲದಲ್ಲಿ ಶಂಕುಸ್ಥಾಪನೆಯನ್ನು ಆರಂಭಿಸಬೇಕೆಂದೂ, ಅಪರಾಹ್ನದ ವರೆಗೂ ಅದು ಹಾಗೇ ಇರಬೇಕೆಂದೂ ಹೇಳಿದೆ (೬.೧೬-೩). ಇದನ್ನು ಅಮಾವಾಸ್ಯೆ, ಹುಣ್ಣಿಮೆಯಂದು ಮಾಡಬಾರದೆಂದು ಗ್ರಂಥಗಳಲ್ಲಿದೆ. ದಿಕ್ಕುಗಳ ನಿರ್ಣಯಕ್ಕಾಗಿ ಶಂಕುಸ್ಥಾಪನೆಯನ್ನು ಮಾಡುವ ವಿಧಾನವೆಂದರೆ, ನಿವೇಶನದ ಮಧ್ಯದಲ್ಲಿ ಚೌಕಾಕಾರದ ಭೂಮಿಯನ್ನು ಸಮತಟ್ಟಾಗಿ ಮಾಡಿ ಮಧ್ಯದಲ್ಲಿ ಶಂಕುಸ್ಥಾಪನೆಯನ್ನು ಮಾಡಿ, ಸುತ್ತ ವೃತ್ತವನ್ನು ಬರೆಯಬೇಕು (ಮಯ ೬.೨-೩). ಈ ವೃತ್ತದ ವ್ಯಾಸವು ಶಂಕುವಿನ ಉದ್ದಕ್ಕಿಂತ ಎರಡರಷ್ಟಿರಬೇಕು, ಈ ವೃತ್ತವನ್ನು ರೇಖಾಗಣಿತ ಬಲ್ಲವನು ಸೂತ್ರವನ್ನು ಸುತ್ತ ತಿರುಗಿಸುತ್ತಾ ಬರೆಯಬೇಕು (ಮಾನಸಾರ-೬.೪, ೭-೮). ಬೆಳಿಗ್ಗೆ ಮತ್ತು ಸಂಜೆಯಲ್ಲಿ ಶಂಕುವಿನ ನೆರಳು ವೃತ್ತದ ಯಾವ ಬಿಂದುವಿನಲ್ಲಿ ಸೇರುತ್ತದೆಯೋ ಆ ಬಿಂದುಗಳ ರೇಖೆಯು ಪೂರ್ವ ಪಶ್ಚಿಮ ದಿಕ್ಕನ್ನು ಸೂಚಿಸುತ್ತದೆ.[೭] ಈ ರೇಖೆಯ ನಡುವೆ ಚಲಿಸುವ ಮತ್ತು ಮೇಲೆ ಮತ್ತು ಕೆಳಗಿನ ಭಾಗವನ್ನು ಸೇರಿಸುವ ರೇಖೆಯು ಉತ್ತರ-ದಕ್ಷಿಣ ದಿಕ್ಕು ಎಂದು ಗುರುತಿಸಬೇಕು (ಇದನ್ನು ಶಿಲ್ಪಿಯು ಗುರುತಿಸಿ ಸೇರಿಸಿ ಬರೆಯಬೇಕು) ಎಂದು ಮಯಮತ (೬.೨೭-೧೧೩) ಮತ್ತು ಮಾನಸಾರ (೬.೧೩-೧೪) ದಲ್ಲಿದೆ. ಮಧ್ಯರೇಖೆಯ ಮೂಲೆಗಳಲ್ಲಿ, ೪ ದಿಕ್ಕುಗಳಲ್ಲಿ ಹಾಗೂ ೪ ಮೂಲೆಗಳಲ್ಲೂ ಶಂಕುವನ್ನು ಸ್ಥಾಪಿಸಿ ಮೂಲೆಗಳನ್ನು ಸೇರಿಸಬೇಕೆಂದೂ ಮಾನಸಾರವು (೬.೫೩-೪) ಹೇಳಿದೆ. ಈ ವಿವರಗಳು 'ಕಾಶ್ಯಪಶಿಲ್ಪ'ದಲ್ಲಿಯೂ ಇವೆ. (೧.೬೧-೬೪). ಶಂಕುವಿನ ಅಳತೆ, ಮರ, ಆಕಾರದ ಬಗ್ಗೆಯೂ ಮಾನಸಾರ (೬. ೫-೮)) ದಲ್ಲಿದೆ.

**ಸೂತ್ರವಿನ್ಯಾಸ :** ಇದು ಕಟ್ಟಡದ ಅಳತೆ, ಪ್ರಮಾಣವನ್ನು ನಿರ್ಧರಿಸುವ ೯ನೇ ಕಾರ್ಯ ಕಟ್ಟಡದ ಸರಿಯಾದ ಅಳತೆಯನ್ನು 'ದಂಡ'ಕ್ಕಿಂತಲೂ (rod) ಸೂತ್ರದಿಂದ (cord- ಹುರಿ) ಅಳೆಯುವುದರಿಂದ ಪಡೆಯಬಹುದೆಂದೂ, ಈ ಸೂತ್ರವನ್ನು ಹತ್ತಿ ಅಥವಾ ಸೆಣಬಿನ ದಾರದಿಂದ ಮಾಡಬಹುದೆಂದೂ ಮಾನಸಾರವು (೬.೪೬, ೪೮) ಹೇಳಿದೆ. ಇದರಲ್ಲಿಯೇ ಮುಂದುವರಿದು, ಕಟ್ಟಡದ ಅಳತೆಯನ್ನು ಕಂಡುಹಿಡಿಯಲು, ನೈಋತ್ಯವನ್ನು ಮಧ್ಯವೆಂದು ಪರಿಗಣಿಸಿ ಸೂತ್ರವನ್ನು ಮೊದಲು ಚಲಿಸಬೇಕು ಮತ್ತು ಅದರ ಸಂಪರ್ಕ ದಿಕ್ಕುಗಳು ದಕ್ಷಿಣ ಮತ್ತು ಪಶ್ಚಿಮ, ನಂತರ ಪೂರ್ವದಿಂದ ಆಗ್ನೇಯಕ್ಕೂ, ನಂತರ ಪೂರ್ವದಿಂದ ಈಶಾನ್ಯಕ್ಕೂ ಚಲಿಸಬೇಕು. ಮುಂದೆ, ದಕ್ಷಿಣದಿಂದ ಆಗ್ನೇಯಕ್ಕೂ, ಪಶ್ಚಿಮದಿಂದ ವಾಯುವ್ಯಕ್ಕೂ, ಉತ್ತರದಿಂದ ವಾಯವ್ಯಕ್ಕೂ, ಕೊನೆಗೆ ಉತ್ತರದಿಂದ ಈಶಾನ್ಯಕ್ಕೂ ಚಲಿಸಬೇಕು (೬.೪೯-೫೦). ಈ ಸೂತ್ರ ವಿನ್ಯಾಸವು ೩ ರೀತಿಯದಾಗಿದೆ. ಪ್ರಮಾಣಸೂತ್ರ, ಪರ್ಯಂತ ಸೂತ್ರ ಮತ್ತು ವಿನ್ಯಾಸಸೂತ್ರ ಪ್ರಮಾಣಸೂತ್ರವನ್ನು ಆಜುಸೂತ್ರ, ಮಾನಸೂತ್ರ ಮತ್ತು ಋಜುಸೂತ್ರವೆಂದೂ ಹೇಳುವುದುಂಟು. ಪ್ರಮಾಣಸೂತ್ರವು ಉದ್ದೇಶಿತ ನಿರ್ಮಾಣದ ನಿಯಮಿತವಾದ ಅಳತೆ-ಪ್ರಮಾಣವನ್ನು ಸೂಚಿಸುತ್ತದೆ. ಈ ಪ್ರಮಾಣಸೂತ್ರದ ಆಧಾರದ ಮೇಲೆ ಉಳಿದ ಎಲ್ಲ ಅಳತೆಗಳೂ ನಿರ್ಣಯ ವಾಗುತ್ತವೆ. 'ಪರ್ಯಂತ ಸೂತ್ರ'ವು ಕಟ್ಟಡದ ಪರಿಮಿತಿಯನ್ನೂ, ಅದರ ಹೊರಚಾಚುವಿಕೆಯನ್ನೂ ನಿರ್ಣಯಿಸುತ್ತದೆ. ಇದು ಪ್ರಮಾಣಸೂತ್ರದ ಸುತ್ತ ಇರುತ್ತದೆ.

ನಿವೇಶನ ಸಂಬಂಧಿಯಾದ ೧೦ನೇ ಕಾರ್ಯವೆಂದರೆ ದೇವತಾಬಲಿ. ನಿವೇಶನದ ನಕಾಶೆಯ ಪ್ರಕಾರ ಒಂದೊಂದು ಪದ/ಸ್ಥಾನದಲ್ಲೂ ಇರುವ ದೇವತೆಗಳಿಗೆ ಬಲಿಯನ್ನು (ನೈವೇದ್ಯ) ನೀಡಬೇಕು. ಬ್ರಹ್ಮನಿಂದ ಆರಂಭಿಸಿ ಅದೇ ಸ್ಥಾನದಲ್ಲಿ ಸಾಮಾನ್ಯ ಬಲಿಯನ್ನು ನೀಡಬೇಕು (ಮಯ-೮.೧) ಇದರಲ್ಲಿ ಸಾಧಾರಣ ಬಲಿ, ವಿಶೇಷ ಬಲಿ ಎಂದು ಎರಡು ರೀತಿಗಳಿದ್ದು, ದೇವಾಲಯದ ನಿವೇಶನಕ್ಕೆ ನೀಡುವುದು-ಸಾಧಾರಣ ಬಲಿ-(ಮಾಗ-೮.೮). ಗ್ರಾಮದ/ದೇವಾಲಯದ ರಕ್ಷಣಾರ್ಥವಾಗಿ ಮತ್ತು ಸುರರು ಮತ್ತು ಭೂತಪ್ರೇತಗಳ ಶಾಂತಿಗಾಗಿ ಈ ಬಲಿಯನ್ನು ನೀಡಲಾಗುತ್ತದೆ ಎಂದು ಮಾನಸಾರದಲ್ಲಿದೆ (೮.೨೯,೩೧). ಪ್ರತಿಯೊಂದು 'ಪದ'ದ ದೇವತೆಗೂ ಬೇರೆ ಬೇರೆ ಬಲಿಯ ವಸ್ತುಗಳನ್ನು ಹೇಳಿದ್ದು, ಅದರ ವಿಧಾನವನ್ನೂ ಮಾನಸಾರ (೮.೯-೧೧) ಮತ್ತು ಮಯಮತ (೮.೨೫.) ಗ್ರಂಥಗಳು ಸ್ಪಷ್ಟಪಡಿಸಿವೆ. ಮೂರನೆಯ ದಿನ ಎಲ್ಲಾ ದೇವತೆಗಳಿಗೂ ಕ್ರಮಾನುಗತವಾಗಿ ಶುದ್ಧಭೋಜನ, ತುಪ್ಪ, ಮೊಸರು, ಗಂಧದಿಂದ ಕೂಡಿದ ನೈವೇದ್ಯವನ್ನು ನೀಡಬೇಕು. ಇದು ಸಾಧಾರಣ ಬಲಿ. ನಂತರ, ಸಕಲೀಕರಣ[೮] ವಿಧಾನದಿಂದಲೂ ಬಲಿ ನೀಡಿ ಸ್ವಸ್ತಿವಾಚನವನ್ನು ಮಾಡಬೇಕು. ಒಬ್ಬ ಕನ್ಯೆಯು ಈ ನೈವೇದ್ಯವನ್ನು ತಟ್ಟೆಯಲ್ಲಿ ಹಿಡಿದಿರಬೇಕು. ಒಂದೊಂದು ದೇವತೆಯನ್ನೂ 'ಓಂ' ಎಂದು ಅವರ ಹೆಸರಿನೊಂದಿಗೆ

ಕರೆದು ನೀರನ್ನು ನೀಡಿ ಅವರಿಗೆ ಯೋಗ್ಯವಾದ ಬಲಿಯನ್ನು ನೀಡಬೇಕು) ನಂತರ ನಮಸ್' ಎಂದೂ ಹೇಳಿ, ನೀರನ್ನು ನೀಡಬೇಕು (ಮಯ-೮.೧೬-೧೯, ೨೩, ಮಾನ-೮.೪-೮). ಗಂಧ, ಅಕ್ಷತೆ, ಧೂಪ ದೀಪಗಳಿಂದ ಹಾಲು, ಜೇನುತುಪ್ಪ, ಪಾಯಸ ಮೊದಲಾದವುಗಳಿಂದ ಬ್ರಹ್ಮನಿಗೆ ವಿಶೇಷ ಬಲಿ ನೀಡಬೇಕು (ಮಯ-೮.೨). ದೇವಗ್ರಹಾದಿ ೮ ಗ್ರಹಗಳಿಗೂ ಪ್ರಾಕಾರದ ಹೊರಭಾಗದಲ್ಲಿ ಬಲಿ ನೀಡಬೇಕೆಂದು ತಂತ್ರಸಮುಚ್ಚಯದಲ್ಲಿದೆ (೧.೭೨). ಬೇರೆ ಬೇರೆ ದೇವತೆಗಳಿಗೆ ಬೇರೆ ಬೇರೆ ಬಲಿಯನ್ನು ಮಾನಸಾರವು ಹೇಳಿದೆ (೮.೧೧-೨೭).

ಬಲಿಕರ್ಮ ವಿಧಿಯ ನಂತರದ ೧೧ನೇ ಕಾರ್ಯವನ್ನು **ಗೃಹವೀಥ್ಯಾದಿಭೇದ** ಎಂದು ಗ್ರಂಥವು ಹೇಳಿದ್ದು, ಬಹುಶಃ ಇದು ದೇವಾಲಯದ ಒಳಪ್ರವೇಶ, ಹೊರಗಿನ ದಾರಿ ಮುಂತಾದುವನ್ನು ನಿರ್ಧರಿಸುವುದಾಗಿರಬೇಕು. ಈ ಮುಂದಿನ ಕೊನೆಯ ೧೨ನೇ ಕಾರ್ಯವೆಂದರೆ, **ಗರ್ಭನ್ಯಾಸ**. ಸೂಕ್ತ ಪವಿತ್ರ ಸಮಯದಲ್ಲಿ ಭೂಮಿಯನ್ನು ಆಳವಾಗಿ ತೋಡಿ, ಸೂಕ್ತ ನಿಧಿಗಳಿಂದ ತುಂಬಿದ ಕುಂಭವನ್ನು ಅದರೊಳಗಿಡುವುದನ್ನು 'ಗರ್ಭನ್ಯಾಸ' ಎಂದು ಸ್ಥೂಲವಾಗಿ ಹೇಳಬಹುದು. ಶಾಸ್ತ್ರದಲ್ಲಿ ಹೇಳಿರುವಂತೆ ನಾನಾ ದ್ರವ್ಯಗಳಿಂದ ಪೂರ್ಣವಾದ ಗರ್ಭವು (ನಿಧಿಕುಂಭ) ಶುಭಪ್ರದ ಎಂದು ಮಾನಸಾರ (೧೨.೧-೩) ಮತ್ತು ಮಯಮತ (೧೨.೧-೩) ದಲ್ಲಿದೆ. ಈ ಸಂಪುಟವನ್ನು/ಕುಂಭವನ್ನು ಇದನ್ನು ಮಂಜೂಷ, ಭಾಜನ, ಪಾತ್ರ, ಫೆಲಾ ಎಂದೂ ಹೇಳುವರು. ಇದು, 'ಪ್ರಾಸಾದವೆಂಬ ಶರೀರದ ಮೂಲಾವಯವವಾದ ಆಧಾರಶಿಲಾನಿಧಿಕಲಶ' ಎಂದು ತಂತ್ರಸಮುಚ್ಚಯವು (೧.೭೪) ಹೇಳಿದೆ. ಹೀಗೆ ನಿವೇಶನವನ್ನು ಆಳವಾಗಿ ತೋಡುವಾಗ (ಗರ್ಭ), ಅದರ ಆಳವು ಕಟ್ಟಡದ ಅಧಿಷ್ಠಾನದಷ್ಟು ಎತ್ತರವಿರಬೇಕು (ಮಯ-೧೨.೩), ಅಗಲವು ಕಟ್ಟಡದ ಮುಖ್ಯ ಸ್ತಂಭದಷ್ಟು ಅಥವಾ ೧/೮, ೩/೪ ರಷ್ಟಿರಬೇಕು. ಅದರ ೪ ಪಕ್ಕಗಳು ಇಟ್ಟಿಗೆ/ಕಲ್ಲಿನಿಂದ ಮಾಡಿದ್ದು, ಸಮನಾಗಿರಬೇಕು (ಮಾಸ-೧೨.೩-೪ ಮತ್ತು ೧೫). ಒಬ್ಬ ಮನುಷ್ಯನು ಕೈ ಎತ್ತಿ ನಿಲ್ಲುವಷ್ಟು, ಕೈಯ ತುದಿಯು ಕುಳಿಯ ಮೇಲ್ಭಾಗಕ್ಕೆ ತಗುಲುವಷ್ಟು ಆಳ ಇರಬೇಕೆಂದೂ ಇದೆ.[೯]

ಕೊನೆಯಲ್ಲಿ ಪ್ರಾಸಾದಪುರುಷರೂಪದಲ್ಲಿ ಸಿದ್ಧವಾಗತಕ್ಕ ಈ ಗರ್ಭಸ್ಥಾನದಲ್ಲಿ ಮೂಲಮಂತ್ರದಿಂದ ದೇವತೆಯನ್ನು ಆವಾಹನೆ ಮಾಡಿ ದೇವಸನ್ನಿಧಿಗಾಗಿ ಪೂಜೆಯನ್ನು ಮಾಡಿ ತಾಳತ್ರಯಾದಿಗಳಿಂದಲೂ, ಲೌಕಿಕ ಪುರುಷರಿಂದ ಸಂರಕ್ಷಣೆಯನ್ನು ಮಾಡಿ, ಪೂಜಾಮೂರ್ತಿಯಾದ ಪ್ರತಿಮೆಯಿಂದ ಕೂಡಿ ಮಂದಿರವನ್ನು ಸಿದ್ಧಗೊಳಿಸಬೇಕು (೧.೧೨೬), ಬ್ರಾಹ್ಮಣ, ಆಚಾರ್ಯ, ಶಿಲ್ಪಿ-ಎಲ್ಲರನ್ನೂ ಭೋಜನ, ವಸ್ತ್ರ, ದಾನಗಳಿಂದ ಸಂತುಷ್ಟಗೊಳಿಸಬೇಕು (೧.೧೨೮). ಹೀಗೆ ತಂತ್ರಸಮುಚ್ಚಯದ ವಿವರಗಳು ಕೆಲವೆಡೆ ವಿಶೇಷವಾಗಿರುವುದು ಕಂಡುಬರುತ್ತದೆ.

ಹೀಗೆ ನಿರ್ಮಾಣಪೂರ್ವ ಕಾರ್ಯದ ಬಗ್ಗೆ ಅನೇಕ ವಿವರಗಳನ್ನು ಗ್ರಂಥಗಳು ನೀಡಿವೆ. ಈ ಕೆಲವು ವಿವರಗಳಿಗೆ ಹೊಂದುವಂತಹ ಪ್ರಾಚೀನ ಮಾಹಿತಿಗಳು ಕೆಲವೆಡೆ ಕಟ್ಟಡದ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರುತ್ತವೆ ಎಂಬುದನ್ನು ಹೆಚ್ಚಿನ ಅಧ್ಯಯನದಿಂದ ತಿಳಿಯಬೇಕಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ವಿವರಗಳಿಗೆ ನೋಡಿ : ರಾಮಚಂದ್ರರಾವ್, ಎಸ್.ಕೆ. **ದೇವಾಲಯ ವಾಸ್ತು** ಸಂ. ೧, ಪುಟ ೧೦-೧೬.

೨. ಅದೇ. ಪುಟ ೨೪-೨೮.

೩. ಮಯಮತ, ೩. ೨-೩, ೪-೭, ೧೯-೨೦.

೪. ಆರು ರಸಗಳೆಂದರೆ-ಮಧುರ (Sweet), ಕಟುಕ (pungent), ತಿಕ್ತ (bitter), ಕಷಾಯ (astringent), ಲವಣ (Saline) ಆಮ್ಲ/ರಷಾ (Acid).

೫. ಕೆಲವು ಸಂಬಂಧಿತ ವಿವರಗಳು ಮಾನಸಾರ (೪.೨-೬), ಕಾಶ್ಯಪಶಿಲ್ಪ (೧.೩೯-೪೦), ಬೃಹತ್ಸಂಹಿತಾ (೫೩.೯೬-೭), ಭವಿಷ್ಯ ಪುರಾಣ (೧೩೦.೪೨-೪), **ವಿಮಾನಾರ್ಚನಕಲ್ಪ**-ಈ ಗ್ರಂಥಗಳಲ್ಲೂ ಇದೆ.

೬. ಮಯಮತ - ೪.೧೧.೧೮, **ಮಾನಸಾರ** - ೫.೧೩-೧೬, **ಕಾಶ್ಯಪಶಿಲ್ಪ**-೪.೫-೭, **ತಂತ್ರಸಮುಚ್ಚಯ**-೧.೩೦, **ಈಶಾನ ಶಿವಗುರುದೇವ ಪದ್ಧತಿ,** ಕ್ರಿಯಾ-೨೩.೩೯-೪೦. ಈ ಸಂದರ್ಭದಲ್ಲಿ ಅಂಜಿಕಾಳನ್ನು ಪೂಜಿಸಬೇಕೆಂದೂ ಮಾನಸಾರದಲ್ಲಿದೆ.

೭. ಬೆಳಿಗ್ಗೆ ಶಂಕುವಿನ ನೆರಳು ವೃತ್ತದ ಪರಿಧಿಯನ್ನು ಸೇರುವುದು ಪಶ್ಚಿಮದಲ್ಲಿ, ಮಧ್ಯಾಹ್ನ ಸೇರುವುದು-ಪೂರ್ವದಲ್ಲಿ. ಹೀಗೆ ಗುರುತಿಸಿ ಸ್ಥಪತಿಯು ದಿಕ್ಕನ್ನು ನಿರ್ಣಯಿಸಬೇಕು. ಬೆಳಿಗ್ಗೆ ಮತ್ತು ಸಂಜೆಯ ನೆರಳು ವೃತ್ತವನ್ನು ಬಹುಪಾಲು ಮಧ್ಯಾಹ್ನದಿಂದ ಒಂದೇ (ಕಾಲದ) ಅಂತರದಲ್ಲಿ ಸೇರುತ್ತದೆ. (ಸಂ.) ನಂತರ ಶಂಕುವನ್ನು ಅಲ್ಲೇ ಬಿಡಬೇಕು. **ಮಾನಸಾರ**-೬.೧೩-೧೪.

೮. ಸಕಲೀಕರಣವೆಂದರೆ, ಎಳ್ಳು, ಜವೆ, ಚಂದನ, ಮೊಸರು, ಸಕ್ಕರೆ, ಜೇನುತುಪ್ಪ ಮುಂತಾದ ೮ ಧಾನ್ಯಗಳನ್ನು ಒಟ್ಟಾಗಿಸುವುದು. **ಮಾನಸಾರ**-೮.೪-೮ (ಅಡಿಟಿಪ್ಪಣಿ).

೯. ಎಸ್.ಕೆ. ರಾಮಚಂದ್ರರಾವ್, **ವಾಸ್ತುಕೋಶ,** ಭಾಗ-III, ಪು. ೯೩.

## ಗ್ರಂಥಸೂಚಿ


*Mayamatam*-(Ed & Trnsln)- Bruno Dagens An Indian Treatise on Housing Architecture and Iconography, Indira Gandhi National Centre for the arts, New Delhi-1985.

Acharya P.K. - (Ed & Trnsln) - *Manasara Series* - Vol. III & Iv, Munshiram Manoharlal publishers pvt. ltd, New Delhi, 1995 & 1994.

Ramachandra Rao S.K. - *VastuSilpa Kosha,* pt. I & III, Kalpataru Research Academy, Shankarapuram, Bangalore-4, 2001 & 2002.

D. Vikhanasacharyalu, *Devalaya Vastu,* Vol. i, Kalpataru Research Academy Bangalore 1997.

ಜೋಸ್ಯರ್ ಜಿ.ಆರ್. (ಸಂ) **ಪಾದ್ಮಸಂಹಿತಾ,** ಮೈಸೂರು ೧೯೭೯.

ರಘುನಾಥ ಚಕ್ರವರ್ತಿ ಭಟ್ಟಾಚಾರ್ಯ (ಸಂ). **ವಿಮಾನಾರ್ಚನಕಲ್ಪ,** ಮದ್ರಾಸು, ೧೯೨೬.

ಸ್ವಾಮಿ ಶಿವಾಚಾರ್ಯಜಿ (ಸಂ). **ಕಾಮಿಕಾಗಮ** (ಪೂರ್ವಭಾಗ) ಮದ್ರಾಸು ೧೯೭೫.

ಡಿ. ಕೃಷ್ಣರಾಯ ವಿನಾಯಕ ಗಣೇಶ ಆಪಟೆ, (ಸಂ) **ಕಾಶ್ಯಪಶಿಲ್ಪ,** ೧೯೨೬.

ಕೆ.ಪಿ. ಶಂಕರ ಸೋಮಯಾಜಿ (ಸ. ಅನು) **ತಂತ್ರಸಮುಚ್ಚಯ,** ಶ್ರೀ ಭಗವತ್ಪಾದ ಪ್ರಕಾಶನ, ಸೋಂದಾ ಸ್ವರ್ಣವಲ್ಲೀ ಮಹಾಸಂಸ್ಥಾನ, ಶಿರಸಿ, ೨೦೦೮.


ಇಲ್ಲಿನ ಕೆಲವು ಶ್ಲೋಕಗಳನ್ನು ಮೇಲೆ ಹೇಳಿದ *'Devalaya Vastu'*ಗ್ರಂಥದಿಂದ ಕೃತಜ್ಞತಾಪೂರ್ವಕವಾಗಿ ತೆಗೆದುಕೊಂಡಿದ್ದೇನೆ.

ಡಾ. ಇಂದಿರಾ ಹೆಗ್ಗಡೆ*

# ಪಂಚಲಿಂಗೇಶ್ವರ ದೇವಸ್ಥಾನ ಬಾರ್ಕೂರು

ಬ್ರಹ್ಮಾವರ ರಾಷ್ಟ್ರೀಯ ಹೆದ್ದಾರಿ ೧೭ ರಿಂದ ಮೂರು ಕಿಲೋಮೀಟರ್ ಒಳಗೆ ಬಾರ್ಕೂರು ನಗರದಲ್ಲಿ ಸೀತಾ ನದಿಯ ಬಲದಂಡೆಯಲ್ಲಿ ಪಂಚಲಿಂಗೇಶ್ವರ ದೇವಸ್ಥಾನ ಇದೆ.

ಗುರುರಾಜ ಭಟ್ಟರು (ಬಾರ್ಕೂರು ಪು ೬೦ ೧೯೭೫) ಈ ಪ್ರದೇಶದ ಅತ್ಯಂತ ಪುರಾತನ ಹೆಸರು ಬಾರಕನೂರು ಎನ್ನುವುದಕ್ಕೆ ಶಾಸನಾಧಾರ ಒದಗಿಸುತ್ತಾರೆ. "ಬಾರಕೂರಿನ ಹೊಸ ಹೊಳಲು (ಹೊಸಳ) ಎಂಬಲ್ಲಿ ಮಹಾಲಕ್ಷ್ಮೀ ದೇವಾಲಯದ ಎದುರಿರುವ ಕ್ರಿ. ಶ. ೧೦-೧೧ನೇ ಶತಕದ ವೀರಗಲ್ಲಿನಲ್ಲಿರುವ ಶಾಸನ.

ಸ್ವಸಿ ಶ್ರೀ ॥ ಬಾರಕನೂರಲು (ತು)ಯ್ಯನ

(ತಮ್ಮ)ಣನ ಕಾಳಗದುಳ್ (ದು) ಟ್ಟ

ಕಾಜಿ ನೂಂಕಿ ಸತ್ತಂ .........."

ಮೇಲಿನ ಶಾಸನ ಅಲ್ಲದೆ ಮತ್ತೊಂದು ಆಧಾರವನ್ನು ನೀಡಿ "ಹೊಯ್ಸಳ ಕಾಲದ ಶಾಸನಗಳಲ್ಲಿ ಅವರ ರಾಜ್ಯದ ಮೇರೆಗಳನ್ನು ನಮೂದಿಸುತ್ತ ಪಶ್ಚಿಮ ಭಾಗದ ಮೇರೆಯು 'ಬಾರಕನೂರ ಘಟ್ಟ' ವೆಂಬುದಾಗಿ ಉಲ್ಲೇಖವಿದೆ. ಬಾರಕೂರಿನಲ್ಲಿ ದೊರೆತ ತೇದಿ ಇಲ್ಲದ ಎರಡು ಶಾಸನಗಳಲ್ಲಿ ನಮಗೆ ಪ್ರಥಮವಾಗಿ 'ತುಳು ವಿಷಯ'ಕ್ಕೆ ಉಲ್ಲೇಖ ಕಂಡು ಬರುತ್ತದೆ. ಸುಮಾರು ೧೧ನೇ ಶತಮಾನಕ್ಕೆ ಈ ಶಾಸನಗಳನ್ನು ಅನ್ವಯಿಸಬಹುದು. (ಅದೇ. ಪು ೨೨) ಹೀಗೆ ಐತಿಹಾಸಿಕವಾಗಿ ಬಾರಕೂರಿನ ಅತ್ಯಂತ ಪ್ರಾಚೀನ ಹೆಸರು 'ಬಾರಕನೂರು' ಎಂಬುದಾಗಿ ತಿಳಿದುಬರುತ್ತದೆ. ಬಾರಕನ ಊರು – ಬಾರಕನೂರು.

"ಬಾರಕೂರಿನ ಅಧಿಕೃತ ರಾಜಕೀಯ ಇತಿಹಾಸವು ಕ್ರಿ.ಶ. ೧೦-೧೧ನೇ ಶತಮಾನದಿಂದ ಪ್ರಾರಂಭವಾಗುತ್ತದೆ. ಕ್ರಿ.ಶ. ೧೧ನೇ ಶತಮಾನದಲ್ಲಿ ಬಾರಕೂರನ್ನು ತಾತ್ಕಾಲಿಕವಾಗಿ ಚೋಳರು ವಶಪಡಿಸಿಕೊಂಡಿದ್ದರೆಂದು ತಿಳಿಯಲವಕಾಶವಿದೆ. ಚೌಳಿಕೇರಿಯು ಚೋಳಿಯ ಕೇರಿ ಎಂದೂ ಉಲ್ಲೇಖ ಗೊಂಡಿದೆ. ಬಾರಕೂರನ್ನು ಕೇಂದ್ರವಾಗಿಟ್ಟುಕೊಂಡು ತುಳುನಾಡನ್ನು ಅಂದರೆ ಆಳುವಖೇಡವನ್ನು, ಈ ಕೆಳಗಿನ ಆಳುಪರಸರುಗಳು ಆಳಿಕೊಂಡಿದ್ದರು. ಮೊದಲನೇ ಬಂಕಿದೇವ, ಪಟ್ಟಿಯೊಡೆಯ, ಪಾಂಡ್ಯಪಟ್ಟಿಯೊಡೆಯ, ಕವಿಯಾಳುಪೇಂದ್ರ, ಮೊದಲೇ ಕುಲಶೇಖರ, ಕುಂಡಣ, ಎರಡನೇ ದತ್ತಾಳುಪ (ವಲ್ಲಭದೇವ) ವೀರಪಾಂಡ್ಯದೇವ, ಬಲ್ಲಮಹಾದೇವಿ (ವೀರ ಪಾಂಡ್ಯನ ರಾಣಿ), ನಾಗದೇವರಸ, ಎರಡನೇ ಬಂಕಿದೇವ, ಮತ್ತು ಸೋಯಿದೇವ. ಇಲ್ಲಿ ಇವರ ಆಳ್ವಿಕೆ ೧೦-೧೧ನೇ ಶತಕದಿಂದ ಕ್ರಿ.ಶ. ೧೪ನೇ ಶತಮಾನದವರೆಗೆ ಹಬ್ಬಿತ್ತು" (ಅದೇ ಪು. ೨೩)

ಒಂದನೆಯ ಬಂಕಿದೇವಾಳುಪೇಂದ್ರನ ಕಾಲದ ಶಾಸನ ಬಾರಕೂರಿನಲ್ಲಿ ದೊರಕಿದೆ. "ಸಮಸ್ತ ಲೋಕದಲ್ಲಿಯೂ ತನ್ನ ಯಶಸ್ಸನ್ನು ವಿಸ್ತಾರವಾಗಿ ಹಬ್ಬಿಸಿದವನೂ, ತನ್ನ ದಕ್ಷಿಣಬಾಹುವಿನಲ್ಲಿ ಕರವಾಳ ಸಹಾಯಕನಾಗಿ ತನ್ನ ಆಜ್ಞೆಯನ್ನು 'ತುಳು ವಿಷಯ'ದಲ್ಲಿ ನಿಲ್ಲಿಸಿ, ಏಳು ಮಲೆ ಏಳು ಕೊಂಬುಗಳ ಅಧಿಪತಿಗಳನ್ನು ತನ್ನ ಪ್ರಭುವಾದ ಬಂಕಿದೇವಾಳುಪೇಂದ್ರನಿಗೆ ಶರಣು ಮಾಡಿಸಿ ತಮ್ಮ ಮೇಲೇರಿ ಬಂದ ಚೋಳರ ಬೆಂಬಲಿಗರಾಗಿ ನಿಂತ ಕೊಮರದಂಡರೇ ಮುಖ್ಯರಾದ ಮಂಡಲಿಕ, ಮಹಾಮಂಡಲಿಕರಾದ ನೂರ ಇಪ್ಪತ್ತು ಮಂದಿಯನ್ನು ವಶಪಡಿಸಿಕೊಂಡು ತನ್ನ ಸ್ವಾಮಿಯಾದ ಬಂಕಿದೇವಾಳುಪೇಂದ್ರನಿಗೊಪ್ಪಿಸಿ ಸಮಸ್ತ ದೇಶಾಧೀಶ್ವರರ ಪ್ರಸಿದ್ಧಿಯನ್ನೂ ತೇಜಪ್ರಭಾವವನ್ನೂ ಅಳಿಸಿ, ಈ ವ್ಯವಹಾರದಲ್ಲಿ ಕಾಂತಿಹೀನನಾಗಿ ಬಂದವನೂ, ಚೋಳರನ್ನು ಸೆದೆಬಡಿಯುವುದರಲ್ಲಿ ವಿನೋದಗೊಳ್ಳುವವನೂ, ತ್ಯಾಗದ ಕಣಿಯೂ ಆಗಿ ಸಾಂತಳಿಗೆ ೧೦೦೦ನ್ನು ಏಕಚ್ಛತ್ರಾಧಿಪತಿ ಯಾಗಿಯೂ ಕೊಂಕಣ ಭಯಂಕರನಾಗಿಯೂ ರಾಜ್ಯಭಾರ ಮಾಡುತ್ತಿದ್ದನು" (ಅದೇ ಪು. ೫೬)

ಹೀಗೆ ಬಾರ್ಕೂರು ತುಳುನಾಡಿನ ರಾಜಧಾನಿಯಾಗಿ, ಆಳುಪರಸರ ರಾಜಧಾನಿಯಾಗಿ ಪ್ರಸಿದ್ಧಿ ಪಡೆದಿದೆ. ಇಷ್ಟಲ್ಲದೆ ಅಳಿಯ ಸಂತಾನದ ಮೂಲ ಸ್ಥಳ ಎಂಬ ನಂಬಿಕೆಯೂ ಇದೆ. ಅಳಿಯ ಸಂತಾನವನ್ನು ಆಚರಣೆಗೆ ತಂದವ ಎನ್ನಲಾದ ಭೂತಾಳ ಪಾಂಡ್ಯನ ಕುಂಡೋದರ ಭೂತದ ಗುಡಿ (ಈಗ

* # ೬, ಕೃಷ್ಣಾ ರೆಸಿಡೆನ್ಸಿ, ೪ನೆಯ ತಿರುವು ಅಮರಜ್ಯೋತಿ ನಗರ, ವಿಜಯನಗರ, ಬೆಂಗಳೂರು.

ಮಹಿಷಾಸುರ ದೇವಸ್ಥಾನ) ಪಂಚಲಿಂಗೇಶ್ವರ ದೇವಾಲಯ ದಿಂದ ಸುಮಾರು ಒಂದು ಕಿಲೋಮೀಟರ್ ಒಳಗೆ ಇದೆ. (ಈ ಬಗ್ಗೆ ವಿವರ ಮುಂದೆ ಬರಲಿದೆ.)

ಪಂಚಲಿಂಗೇಶ್ವರ ದೇವಸ್ಥಾನದ ಆಡಳಿತ ಪರಂಪರೆ ಯವರನ್ನು ಮನೆಗಳವರನ್ನು ಮಾಗಣೆಯರು ಎಂದು ಕರೆಯುತ್ತಾರೆ. ಈಗಲೂ ಇಲ್ಲಿಯ ಆಡಳಿತ ನಾಲ್ಕು ಮನೆಗಳಲ್ಲಿ ಹಂಚಿ ಹೋಗಿದೆ. ಆದರೆ ಇವರಾರೂ ಇಲ್ಲಿಯ ಆಡಳಿತದಲ್ಲಿ ಪ್ರವೇಶಿಸುವುದಿಲ್ಲ. ಈಗಿನ ಮೊಕ್ತೇಸರರಾಗಿ ಬಿ. ಮಂಜುನಾಥ್ ರಾವ್ ಅವರು ನಿರ್ವಹಿಸುತ್ತಾರೆ.

ಗುರುರಾಜ ಭಟ್ಟರು ಹೀಗೆ ಬರೆಯುತ್ತಾರೆ. "ಬಾರ್ಕೂರಿಗೆ ಸೇರಿದ ನಾಲ್ಕು ಸ್ಥಳಗಳು ಗಣನೀಯವಾಗಿವೆ. –ಹೊಸಾಳ (ಹೊಸ ಹೊಳಲು), ಕಚ್ಚೂರು (ಕಬ್ಬೂರು) ಹಾನೇ ಹಳ್ಳಿ ಹೇರಾಡಿ. ಹೊಸ ಹೊಳಲು ಹೊಸಾಳವಾಗಿ ಮಾರ್ಪಟ್ಟಿತು. ಅಂತೆಯೇ ಪನ್ನಿರ್ಪಳ್ಳಿ ಎಂಬ ಊರು ಹಾನೆಹಳ್ಳಿಯಾಯಿತು." (ಬಾರ್ಕೂರು ಪು. ೨೦) ಈಗಲೂ ಈ ನಾಲ್ಕು ಮನೆಯವರ ಉಪಸ್ಥಿತಿ ಇಲ್ಲಿ ಇರಬೇಕು. ಹನೆ ಹಳ್ಳಿಯನ್ನು ೧೦–೧೧ನೆಯ ಶತಮಾನದ ಶಾಸನಗಳು 'ಪನ್ನಿರ್ಪಳ್ಳಿ' ಎಂದು ಕರೆಯುತ್ತವೆ. ಆಳುಪರಾಣಿ ಪಾಂಡ್ಯ ಮಹಾದೇವಿ ಪನ್ನಿರ್ಪಳ್ಳಿಯನ್ನು ಆಳುತ್ತಿದ್ದಳು.

ಕ್ರಿ.ಶ. ೧೪೨೫ರ ಶಾಸನದಲ್ಲಿ (SII Vol VII ನಂ. ೩೮೫) ಕಂದಾವೂರ, ಕೋಟ, ಬ್ರ(ಂಹಪೂರ) ನಿರುವಾರ, ಪಡುವಕೋಣ ನಾಡು ಈ ಗ್ರಾಮಗಳ ಉಲ್ಲೇಖ ಇದೆ. 'ಶ್ರೀ ಮಾರ್ಕಂಡೇಶ್ವರ ದೇವರು ಸಾಕ್ಷಗಳ ಒಪ್ಪ ನಾಲ್ಕುಗ್ರಾಮದ ಒಪ್ಪ' ಎಂಬ ಶಾಸನ ಬರಹ ಇದೆ. ಈ ಉಲ್ಲೇಖ ಬಾರ್ಕೂರಿನ ರಾಜ್ಯವ್ಯಾಪ್ತಿಯನ್ನು ಸೂಚಿಸುತ್ತದೆ. ಪಡುವ ಕೋಣೆ ಈಗಿನ ಪಡುಕೋಣೆ.

ಗುರುರಾಜ ಭಟ್ಟರ ಪ್ರಕಾರ 'ಈ ದೇವಾಲಯದ ಗರ್ಭಗೃಹವು ಸುಮಾರು ಕ್ರಿ.ಶ. ೮ನೆ ಶತಮಾನಕ್ಕೆ ಸೇರಿದೆ. ಅದರ ಎದುರಿನ ನಾಲ್ಕು ಬೃಹದಾಕಾರದ ಕಂಬಗಳುಳ್ಳ ಮಂಟಪವು ಕೂಡಾ ಅದೇ ಕಾಲದವುಗಳು. ಪಂಚಲಿಂಗಗಳ ಗರ್ಭಗುಡಿಯ ಬಲಭಾಗದಲ್ಲಿ ಇರುವ ಪುಟ್ಟ ಶಿವಾಲಯ ಕೂಡಾ ಸುಮಾರು ಅದೇ ಕಾಲದವು. ಪಂಚಲಿಂಗೇಶ್ವರ ದೇವಾಲಯದ ಎದುರು ವಿಜಯನಗರ ಕಾಲದ ಉತ್ತಮ ಶಿಲ್ಪವನ್ನೊಳಗೊಂಡ ಮಹಾದ್ವಾರವಿದೆ. ಇವೆಲ್ಲವು ಗಳನ್ನೊಳಗೊಂಡ ಆವರ್ಣವು ಈಗ ಸಂಪೂರ್ಣ ಬಿದ್ದು ಹೋಗಿದೆ. (ಇತ್ತೀಚೆಗೆ ರಿಪೇರಿ ಮಾಡಲಾಗಿದೆ.) ಬಾರ್ಕೂರಿನ ಪಂಚಲಿಂಗೇಶ್ವರ (ಮಾರ್ಕಣ್ಡೇಶ್ವರ)ದೇವಸ್ಥಾನವು ನಮ್ಮ ಜಿಲ್ಲೆಯ ಅತಿ ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ.' (GURURAH BHATT: ANTIQUITIES OF SOUTH KANARA PLATE XXVI)

ಪೂರ್ವಾಭಿಮುಖವಾಗಿರುವ ಗಜಪೃಷ್ಠಾಕಾರದ ವಿಶಾಲವಾದ ಸುಂದರ ಗರ್ಭಗುಡಿಯ ಮೇಲೆ ಐದು ಕಲಶಗಳಿವೆ. ಸುಮಾರು ೨೦ ವರ್ಷಗಳ ಹಿಂದೆ ಪಂಚಲಿಂಗೇಶ್ವರ ದೇವಸ್ಥಾನದ ಹಳೆಯ ತಾಮ್ರದ ಮಾಡನ್ನು ನವೀಕರಿಸಲಾಗಿದೆ. ಆಗ ಮಾಡಿನ ಭಾಗದ ಚಪ್ಪಡಿ ಕಲ್ಲನ್ನೂ ಮರುಜೋಡಿಸಲಾಯಿತು. ಹೆಬ್ಬಾಗಿಲನ್ನೂ ನವೀಕರಿಸ ಲಾಯಿತು. ಧ್ವಜ ಸ್ತಂಭ ಮರು ನಿರ್ಮಿಸಲಾಗಿದೆ. ಈ ಸಂದರ್ಭದಲ್ಲಿ ಪದ್ಧತಿಯಂತೆ ಬ್ರಹ್ಮಕಲಶೋತ್ಸವ ಮಾಡಿಲ್ಲ. ಹೊರಗೆ ಇದ್ದ ಕಲ್ಲಿನ ದೀಪ ಸ್ತಂಭ ಮುರಿದು ಬಿದ್ದುದರಿಂದ ಅದನ್ನು ರಿಪೇರಿ ಮಾಡದೆ ಹಾಗೆಯೇ ಊರಲಾಯಿತು.

ಪಂಚಲಿಂಗೇಶ್ವರ ದೇವಾಲಯದ ನವರಂಗದಲ್ಲಿರುವ ಗಣಪತಿಯ ಕ್ರಿ.ಶ.೧೦ನೆಯ ಶತಕ) ಮೇಲ್ಕೈಗಳಲ್ಲಿ ಪಾಶಾಂಕುಶ ಮತ್ತು ಕೆಳಗಿನ ಎರಡೂ ಕೈಗಳಲ್ಲಿ ಮೋದಕವನ್ನು ಧರಿಸಿದ ನೀಳವಾಗಿ ನೇರವಾಗಿ ಕೆಳಗಿಳಿದ ಈ ಸೊಂಡಿಲು ಪ್ರಾಚೀನವೆನ್ನಬಹುದು. ಹೊಯ್ಸಳ ಕಾಲದ್ದೆಂದು ಊಹಿಸ ಲಾದ ಲಕ್ಷ್ಮಿ ಜನಾರ್ಧನ ಶಿಲ್ಪವೂ ಇದೆ. ಲಕ್ಷ್ಮಿಯ ಕೈಯಲ್ಲಿ ದಂಡ ಇದೆ. (ಗುರುರಾಜ ಭಟ್ಟ ಬಾರ್ಕೂರು ಪು. ೩೨)

ನವರಂಗದಲ್ಲಿರುವ ಜನಾರ್ದನನ ಉಬ್ಬು ಶಿಲ್ಪ (ಕ್ರಿ.ಶ. ೯–೧೦ನೇ ಶತಕ)ಹನ್ನೆರಡು ಇಂಚು ಎತ್ತರವಾಗಿದ್ದು ಕಗ್ಗಲ್ಲಿನಿಂದ ನಿರ್ಮಿಸಲಾಗಿದೆ. (ಗುರುರಾಜ ಭಟ್ಟ ಬಾರ್ಕೂರು ಪು. ೩೧) ಜನಾರ್ಧನ ಶಿಲ್ಪ ಇರುವ ಪೀಠದ ಮೇಲೆ ನಿಂತ ಭಂಗಿಯ ಶಂಕ ಚಕ್ರ ಗದಾ ಪದ್ಮಧಾರಿ ಲಕ್ಷ್ಮಿ ಶಿಲ್ಪವಿದೆ. ಭಟ್ಟರು ಈ ಶಿಲ್ಪದ ಬಗ್ಗೆ ಪ್ರಸ್ತಾಪಿಸಿಲ್ಲ. ಈ ಶಿಲ್ಪ ಹೊಯ್ಸಳರ ಅನಂತರದ ಕಾಲದೆಂದು ದೇವರ ಕೊಂಡಾ ರೆಡ್ಡಿ ಅಭಿಪ್ರಾಯ ಪಡುತ್ತಾರೆ. ಬಹುಶಃ ಬೇರೆಲ್ಲಿಂದಲೋ ತಂದು ಇಲ್ಲಿ ಪ್ರತಿಷ್ಠಾಪಿಸಿರುವ ಸಾಧ್ಯತೆ ಇದೆ. ಹೀಗೆ ಅವಜ್ಞತೆಗೆ ಒಳಗಾಗಿರುವ ದೇವಸ್ಥಾನಗಳ ಶಿಲ್ಪವನ್ನು ತಂದು ಜೀವಂತ ದೇವಾಲಯಗಳಲ್ಲಿ ಪ್ರತಿಷ್ಠಾಪಿಸುವ ಪದ್ಧತಿ ಈ ಕಡೆ ಇದೆ.

"ಇದೇ ದೇಗುಲದಲ್ಲಿರುವ ಆದಿತ್ಯ ವಿಗ್ರಹ (ಕ್ರಿ.ಶ. ೯–೧೦ನೇ ಶಕ) ಇದು ಸಹ ಸ್ಕಂಧ ವಿಗ್ರಹದ ಶೈಲಿಯನ್ನೇ ಹೋಲುತ್ತದೆ. ಅದೇ ತರದ ಶಿಲೆಯಿಂದ ಮಾಡಲಾಗಿದೆ. ಮೂರು ಇಂಚು ಎತ್ತರವಾದ ಈ ಮೂರ್ತಿಯು ಬಹು ಚೆನ್ನಾದ ಕಲಾ ಕೃತಿಯಾಗಿದೆ." *ಅದೇ ಪು ೩೧) ಆದಿತ್ಯ ಶಿಲ್ಪ ನಮ್ಮ ಗಮನಕ್ಕೆ ಬರಲಿಲ್ಲ.

ಬಾರ್ಕೂರು ಪಂಚಲಿಂಗೇಶ್ವರ ದೇವಾಲಯದ ಒಳ ಪ್ರಕಾರದ ಪೂರ್ವ ಭಾಗದ ಎಡ ಮೂಲೆಯಲ್ಲಿ ಪುಟ್ಟ ಗುಡಿ

ಇದೆ. ಈ ಗುಡಿಯನ್ನು ಭುವನೇಶ್ವರಿ ಗುಡಿ ಎಂದು ಕರೆಯುತ್ತಾರೆ. ಇಲ್ಲಿ ಪಾರ್ವತಿಯ ಶಿಲ್ಪ ಇದೆ. ಅಭಯ ಮತ್ತು ವರದ ಹಸ್ತ, ಒಂದು ಕೈಯಲ್ಲಿ ಪದ್ಮ ಮತ್ತೊಂದು ಕೈಯಲ್ಲಿ ಪಾಶ ಹಿಡಿದುಕೊಂಡಿರುವ ಶಿಲ್ಪ. ಎಡಗಾಲು ಮಡಚಿ ಬಲಗಾಲು ಇಳಿ ಬಿಟ್ಟ ಪೀಠಸ್ಥ ಶಿಲ್ಪ. ಆಳರಸರ ಕಾಲದಲ್ಲಿ ಅರಸರ ವಿವಾಹಕ್ಕೆ ಅಡಚಣೆಯಾದಾಗ ಜೋಯಿಸರ ಬಳಿ ಆತಂಕವನ್ನು ತೋಡಿಕೊಳ್ಳುತ್ತಾರೆ. ಜೋಯಿಸರು ಈ ಭುವನೇಶ್ವರಿಯ ಸ್ಥಾಪನೆ ಮಾಡಿ ಶಿವನಿಗೂ ಭುವನೇಶ್ವರಿಗೂ ವಿವಾಹ ಮಹೋತ್ಸವ ನೆರವೇರಿಸಲು ಹೇಳುತ್ತಾರೆ. ಜೋಯಿಸರ ಸಲಹೆಯಂತೆ ಅರಸು ನಡೆಯುತ್ತಾರೆ. ಈಗಲೂ ಶಿವನಿಗೂ ಭುವನೇಶ್ವರಿಗೂ ವಿವಾಹ ಮಹೋತ್ಸವದ ಹರಕೆ ಇಲ್ಲಿ ನಡೆಯುತ್ತದೆ. ಅವಿವಾಹಿತರು ಇಲ್ಲಿಗೆ ಬಂದು "ತಮ್ಮ ವಿವಾಹ ನಡೆದರೆ ಶಿವ-ಭುವನೇಶ್ವರಿಯ ವಿವಾಹ ಮಹೋತ್ಸವ ನೆರವೇರಿಸುತ್ತೇವೆ" ಎಂದು ಹರಕೆ ಹಾಕಿದರೆ ಆರು ತಿಂಗಳ ಒಳಗೆ ವಿವಾಹ ನಡೆಯುತ್ತದೆ ಎನ್ನುತ್ತಾರೆ ಇಲ್ಲಿಯ ಪುರೋಹಿತ ವರ್ಗ. ರಥೋತ್ಸವದಂದು ಭುವನೇಶ್ವರಿಗೂ ಪಂಚಲಿಂಗೇಶ್ವರನಿಗೂ ವಿವಾಹ ಜರಗಿಸುವ ಸಂಪ್ರದಾಯ ಮುಂದುವರಿದಿದೆ. ಜೋಯಿಸರು ವರ್ಷಕ್ಕೆ ಒಮ್ಮೆ ಇಲ್ಲಿ ವಿಶೇಷ ಪೂಜೆ ಜರುಗಿಸುತ್ತಾರೆ. ಭುವನೇಶ್ವರಿಯ ಪುನರ್ಪ್ರತಿಷ್ಠೆ ಮಾಡಿದವರೂ ಜೋಯಿಸ ಕುಟುಂಬದವರು. ಇವರು ಹವ್ಯಿಕರು. ಜೋಯಿಸರ ಬಳಿ ಮುಹೂರ್ತ ಕೇಳುವ ಪದ್ಧತಿ ಈಗಲೂ ಇದೆ. ಇವರು ಪಂಚಲಿಂಗೇಶ್ವರ ಪೂಜೆಗೆ ನಿಯುಕ್ತಿ ಆದವರಲ್ಲ.

ಪಂಚಲಿಂಗ ದೇವರ ಗರ್ಭಗುಡಿಯ ಮುಂದೆ ಈಶಾನ್ಯಕ್ಕೆ ನಡುವೆ ಮುಂಭಾಗದಲ್ಲಿ ಒಂದು ಜಾಜಿ ಕಟ್ಟೆ ಇದೆ. ಸುಮಾರು ನಾಲ್ಕು ಅಡಿ ಎತ್ತರದ ಚಚ್ಚೌಕದ ಕಟ್ಟೆ ಇದು. ಪಂಚಲಿಂಗೇಶ್ವರ ಲಿಂಗಗಳ ಅಭಿಷೇಕದ ನೀರು ಭೂಮಿಯಡಿಯಿಂದ ಹರಿದು ಈ ಕಟ್ಟೆಯಡಿಗೆ ಸೇರುತ್ತದೆ ಎನ್ನುವುದು ಅಷ್ಟ ಮಂಗಳದವರು ನೀಡಿದ ಮಾಹಿತಿ.

ಒಬ್ಬ ಸಾಧ್ವಿಯ ರಕ್ಷಣೆ ಈ ಸ್ಥಳದಲ್ಲಿ ಆಯಿತು. ಆ ನೆನಪಿಗೆ ಇಲ್ಲಿ ಜಾಜಿಗಿಡ ನೆಟ್ಟು ಕಟ್ಟೆ ಕಟ್ಟಲಾಯಿತು ಎನ್ನುವುದು ಪ್ರತೀತಿ. ಈ ಕಟ್ಟೆಗೆಯಲ್ಲಿ ಇರುವ ಜಾಜಿ ಮಲ್ಲಿಗೆ ಗಿಡ ಸಾಯುವುದಿಲ್ಲ. ಹಳೆ ಗಿಡ ಸತ್ತಿದ್ದು ಹೊಸ ಗಿಡ ನೆಟ್ಟ ಬಗ್ಗೆ ಯಾರ ಅನುಭವಕ್ಕೂ ಬಂದಿಲ್ಲ, ಯಾರೂ ಕೇಳಿಲ್ಲ ಎನ್ನುತ್ತಾರೆ. ಈ ಜಾಜಿ ಗಿಡದಲ್ಲಿ ಅಕಾಲದಲ್ಲೂ ಒಂದಾದರೂ ಮಲ್ಲಿಗೆ ಅರಳುತ್ತದೆ. ಅದೇ ಈ ಗಿಡದ ವೈಶಿಷ್ಟ್ಯ. (ಸಾಮನ್ಯವಾಗಿ ಜಾಜಿ ಆರು ತಿಂಗಳಲ್ಲಿ ಮಾತ್ರ ಹೂ ಬಿಡುತ್ತದೆ. ವರ್ಷಕ್ಕೆ ಒಂದೇ ತಿಂಗಳು) ಆ ಜಾಜಿಯನ್ನು ಪಂಚಲಿಂಗೇಶ್ವರನಿಗೆ ಅರ್ಪಿಸುತ್ತಾರೆ.

ಆಳರಸರ ಕುಲದೇವಸ್ಥಾನ, ಸೀಮೆ ದೇವಸ್ಥಾನವಾಗಿದ್ದ ಪಂಚಲಿಂಗೇಶ್ವರ ದೇವಸ್ಥಾನವನ್ನು ಕೆಲವು ಶಾಸನಗಳಲ್ಲಿ 'ಮೂಲಸ್ಥಾನ ಮಾರ್ಕಾಂಡೇಶ್ವರದ ಪಂಚಲಿಂಗ ದೇವರು...' (SII Vol VII ನಂ ೩೮೫ ಕ್ರಿ.ಶ. ೧೪೨೫) ಎಂದು ಉಲ್ಲೇಖಿಸಲಾಗಿದೆ. ವಾಸ್ತವವಾಗಿ ಬಾರ್ಕೂರು ಎಲ್ಲಾ ತುಳುವರಿಗೂ ಮೂಲಸ್ಥಾನ ಎನ್ನಲಾಗುತ್ತಿದೆ. "ಬಾರಕೂರು ಮೂಲಸ್ಥಾನ ಸಪ್ತಮಾತೃಕಾರಾಧನೆಯೂ ಗಣನೀಯವಾಗಿದೆ" (ಬಾರ್ಕೂರು ಪು. ೩೮) ಎಂದು ಗುರುರಾಜ ಭಟ್ಟರು ಬರೆಯುತ್ತಾರೆ.

ತುಳುವರ ಮೂಲಸ್ಥಾನ ಎಂದರೆ ಪಂಚ ಶಕ್ತಿಗಳು ಒಂದು ಕ್ಷೇತ್ರದಲ್ಲಿ ಉಪಾಸನೆಗೊಳ್ಳುವ ಆದಿ ಕ್ಷೇತ್ರ, ಆದಿ ಮೂಲಸ್ಥಾನ. ಅತ್ಯಂತ ಪುರಾತನ ಶಕ್ತಿ ಕ್ಷೇತ್ರ. ಕಳೆದ ಶತಮಾನದವರೆಗೂ ಪಂಚ ಶಕ್ತಿಗಳ ಈ ಕ್ಷೇತ್ರ ಜಲಸಮೃದ್ಧಿ ಯಿಂದ ಕೂಡಿದ್ದ ವನವಾಗಿತ್ತು. ಇಂತಹ ಮೂಲಸ್ತಾನ ಕ್ಷೇತ್ರಗಳಲ್ಲಿ ಜಾನಪದ ರೀತಿಯ ಉಪಾಸನೆ ಈಗಲೂ ನಡೆಯು ತ್ತಿದೆ. ಅಬ್ರಾಹ್ಮಣ, ಅವೈದಿಕ ಮೂಲದ ಇಂತಹ ಕ್ಷೇತ್ರಗಳಲ್ಲಿ ಕ್ರಮೇಣ ಪೂಜೆಗೆ, ಅರ್ಚನೆಗೆ ಬ್ರಾಹ್ಮಣರು ನೇಮಕ ವಾಗುತ್ತಾರೆ. ಆಗ ವೈದಿಕಾಚಾರಣೆಯನ್ನು ರೂಢಿಸಿಕೊಂಡರೂ ಅದು ಮೂಲಸ್ಥಾನವಾಗಿಯೇ ಮುಂದುವರಿಯುತ್ತದೆ. ಅಂತೆಯೇ ಈ ದೇವಾಲಯವು ಜಾನಪದ ಉಪಾಸನಾ ಪದ್ಧತಿಯನ್ನು ಕೈ ಬಿಟ್ಟಿದ್ದರೂ ತುಳು ಜನಪದರ ಮೂಲಸ್ಥಾನವಾಗಿ ಈಗಲೂ ಮುಂದುವರಿದಿದೆ. ಜನರ ನಂಬಿಕೆಯಲ್ಲಿ ಎಂತೋ ತುಳು ಮೂಲಸ್ಥಾನ ದೈವಗಳು ಪಂಚಲಿಂಗೇಶ್ವರ ಕ್ಷೇತ್ರದಲ್ಲೂ ಇವೆ.

**ನಾಗ ಕ್ಷೇತ್ರ :** ಗುಡಿಯ ವಾಯವ್ಯ ಮೂಲೆಯಲ್ಲಿ ನಾಗ ಶಿಲ್ಪಗಳ ವಿಶಾಲ ಕಟ್ಟೆ ಇದೆ. ಅದಕ್ಕೆ ಮಾಡನ್ನು ಹೊದಿಸಿದ್ದಾರೆ. ಇಲ್ಲಿ ಅನೇಕ ನಾಗಶಿಲ್ಪಗಳು ಇವೆ. ಪುರಾತನ ಕೆಲವು ಶಿಲ್ಪಗಳು ಬರೇ ಶಿಲೆಯಾಗಿವೆ. ಅದರ ಮೇಲೆ ನಾಗನ ಆಕಾರವೂ ಮೂಡಿಲ್ಲ. ಈ ಕಟ್ಟೆಯಿದ್ದ ಸ್ಥಳದಲ್ಲಿ ಹಿಂದೆ ನೆಲ್ಲಿಮರ ಇತ್ತು. ನಾಗಶಿಲ್ಪಗಳೂ ಇದ್ದುವು. ಇಲ್ಲಿ ಮಾರ್ಕಾಂಡೇಯ ಮುನಿಗಳು ತಪಸ್ಸು ಮಾಡಿದ್ದರು ಎನ್ನುವುದು ಅಷ್ಟಮಂಗಳ ದವರ ಹೇಳಿಕೆ. ನಾಗ ಶಿಲ್ಪಗಳಿಗೆ ಕಟ್ಟೆ ಕಟ್ಟಿ ಪುನಃಪ್ರತಿಷ್ಠಾಪನೆ ಮಾಡಲಾಗಿದೆ. ಈಗ ನಾಗಶಿಲ್ಪಗಳ ಕಟ್ಟೆಗೆ ಹೊಂದಿ ಕೊಂಡಂತೆ ನೆಲ್ಲಿ ಮರ ಇದೆ. ೬೧ ವರುಷದ ಮಂಜುನಾಥ ರಾವ್ ಅವರು ಕಂಡಂತೆ ಇದು ಮೂರನೆಯ ನೆಲ್ಲಿ ಮರ. ಅವರ ಬಾಲ್ಯದಲ್ಲಿ ನಾಗಶಿಲ್ಪಗಳ ಬಳಿಯೇ ನೆಲ್ಲಿಮರವೂ ಇತ್ತು. ಹಳೆ ನೆಲ್ಲಿ ಮರ ಸತ್ತರೂ ಅದೇ ಬುಡದಿಂದ ಮತ್ತೊಂದು ನೆಲ್ಲಿ ಮರ ಬೆಳೆದು ನಿಲ್ಲುತ್ತದೆ. ಇಲ್ಲಿ ಮಾರ್ಕಾಂಡ ಮುನಿಗಳು ತಪಸ್ಸು ಮಾಡಿದ್ದರು ಎನ್ನುವುದು ಅಷ್ಟಮಂಗಳ ದವರ ಹೇಳಿಕೆ.

ಮಾರ್ಕಾಂಡ ಮುನಿಗಳ ತಪಸ್ಸಿನಲ್ಲಿ ಶಿವನು ಒಲಿದು ತಾನು ಇಲ್ಲಿ ಸ್ಥಾಪನೆಯಾಗಿದ್ದೇನೆಂದು ಹೇಳಿದ್ದಕ್ಕೆ ಆತ ಶಿವಾಲಯ ಕಟ್ಟಿದ ಎನ್ನುವುದು ಅಷ್ಟಮಂಗಳದ ಮಾಹಿತಿ. ಕಾಶಿಯಿಂದ ಲಿಂಗ ತರಲು ಹೋದವರು ಮುಹೂರ್ತ ಕಾಲಕ್ಕೆ ಬಾರದೆ ಇದ್ದಾಗ ಅಲ್ಲಿದ್ದ ಶಿಲೆಯನ್ನು ಐದು ತುಂಡು ಮಾಡಿ ಪ್ರತಿಷ್ಠಾಪಿಸಲಾಯಿತು ಎನ್ನುವುದು ಇಲ್ಲಿಯ ಕಥೆ. ಆದ್ದರಿಂದ  ಲಿಂಗಗಳು ತುಂಡು ತುಂಡಾಗಿವೆ ಎಂದು ಒರಟು ಶಿಲೆಗಳ ಪೂಜೆಗೆ ಸಮರ್ಥನೆ ಒದಗಿಸಲಾಗಿದೆ. ಗರ್ಭಗುಡಿಯ ಒಳಗಿರುವ ಐದು ಲಿಂಗಗಳೂ ಮುರಿದ ಶಿಲಾ ಕಂಬಗಳಂತಿವೆ. ಒಂದರ ಮೇಲೊಂದರಂತೆ ಇರುವ ಎರಡು ಶಿಲಾಹಾಸುಗಳ ಮೇಲೆ ಈ ಐದು ಲಿಂಗಗಳನ್ನು ನಾಟಲಾಗಿದೆ.

ಮುಂದೆ ಕಾಶಿಯಿಂದ ತಂದ ಐದು ಲಿಂಗಗಳಲ್ಲಿ ಒಂದು ಲಿಂಗವನ್ನು ಗರ್ಭ ಗುಡಿಯ ಎಡಭಾಗದಲ್ಲಿ ಸ್ಥಾಪಿಸಿ ಗುಡಿ ನಿರ್ಮಿಸಲಾಯಿತು. ಉಳಿದ ನಾಲ್ಕು ಲಿಂಗಗಳನ್ನು ಬೇರೆಡೆಗೆ ನೀಡಲಾಯಿತು. ಈ ಕಥೆಯಲ್ಲಿ ಬರುವ ಸುಳುಹು ಕೂಡಾ ಬಾರ್ಕೂರು ಪಂಚಲಿಂಗೇಶ್ವರದ ಲಿಂಗಗಳು ಅವೈದಿಕಾಚರಣೆಯ ಉದ್ಭವ ಲಿಂಗಗಳು. ತುಳುವರ ಮೂಲಸ್ಥಾನ ಲಿಂಗಗಳು ಎಂಬುದನ್ನು ಸಮರ್ಥಿಸುತ್ತವೆ.

ಇದೇ ದೇವಸ್ಥಾನದಲ್ಲಿ ಇರುವ ಕಾಲ ಇಲ್ಲದ ಇನ್ನೊಂದು ಶಾಸನದಲ್ಲಿ "ಶ್ರೀಮತು ಮಾರ್ಕಣ್ಡೇಶ್ವರ ದೇವರ ವಾಮ ಭಾಗದ ಮಹಾದೇವ........" (SII Vol VII ನಂ ೩೮೦) –ಎಂಬ ಬರಹ ಇದೆ.

**ಕುಮಾರ– ಸುಬ್ರಹ್ಮಣ್ಯ :** ನೆಲ್ಲಿ ಮರದ ಎಡಕ್ಕೆ ಇರುವ ಗೋಪುರದಲ್ಲಿ ಮೂಲೆಯಲ್ಲಿ, ಪಂಚಲಿಂಗೇಶ್ವರನ ವಾಯುವ್ಯ ಮೂಲೆಯಲ್ಲಿ ಪುಟ್ಟ ಗುಡಿ ಇದೆ. ಇಲ್ಲಿ ಸುಮಾರು ಎರಡುಮುಕ್ಕಾಲು ಅಡಿ ಎತ್ತರದ ಕೌಪೀನಧಾರಿ ಶಿಲ್ಪ ಇದೆ. ಗುರುರಾಜ ಭಟ್ಟರು ಈ ಶಿಲ್ಪವನ್ನು 'ಬ್ರಹ್ಮಚಾರಿ ಸುಬ್ರಹ್ಮಣ್ಯ' ಎಂದು ಗುರುತಿಸಿದ್ದಾರೆ. ಹಾಗೂ ಈ ಶಿಲ್ಪವನ್ನು ' ಉಪಸ್ಥಾನ ದೇವತೆ' ಎಂದು ಉಲ್ಲೇಖಿಸುತ್ತಾರೆ. 'ಬಲಗೈ ದಂಡಧಾರಿಯಾಗಿದ್ದು ಎಡಗೈಯಲ್ಲಿ ಕೋಳಿಯನ್ನು ಹಿಡಿದಿದೆ. ಕೌಪೀನ ಧಾರಿ ಶಿಲ್ಪ. ಈ ಶಿಲ್ಪವು ಸುಮಾರು ಕ್ರಿ. ಶ. ೧೦ನೆಯ ಶತಮಾನಕ್ಕೆ ಸೇರಿದ್ದೆಂದು ಭಟ್ಟರು ಅಭಿಪ್ರಾಯ ಪಡುತ್ತಾರೆ.' (GURURAH BHATT: ANTIQUITIES OF SOUTH KANARA PLATE XXVI,XXV11) ಶಿಲ್ಪದ ಕಾಲ ಬಳಿಯೂ ಹುಂಜದ ಶಿಲ್ಪ ಇದೆ. ಸುಬ್ರಹ್ಮಣ್ಯ ತುಳುವರ ಮೂಲಸ್ಥಾನ ದೇವತೆ. ತುಳುವರ ಪ್ರಕಾರ ಇವನೇ ನಾಗ. ಇವನೇ ಬ್ರಹ್ಮ! (ತುಳು ಬಿರ್ಮೆರ್) "ತುಳುವರಲ್ಲಿ ಕುಟುಂಬದ ಆದಿಮೂಲಸ್ಥಾನವನ್ನು ಆಲಡೆಯೆನ್ನುತ್ತಾರೆ. ಪ್ರತಿ ಕುಟುಂಬಕ್ಕೂ ಮುಖ್ಯವಾಗಿರುವ ಮೂಲಸ್ತಾನದಲ್ಲಿ ಐದು ದೈವಗಳ ಒಂದು ಸಂಕೀರ್ಣ ಆರಾಧನೆಯನ್ನು ಕಾಣಬಹುದು. ಬೆರ್ಮೆರ್/ಬ್ರಹ್ಮ, ಲೆಕ್ಕಸಿರಿ/ರಕ್ತೇಶ್ವರಿ, ಮಯಿಸಂದಾಯ /ಕ್ಷೇತ್ರಪಾಲ, ನಂದಿಗೋಣ/ನಂದಿ ಮತ್ತು ನಾಗ. ಆಲಡೆಯ ಈ ದೈವಗಳಿಗೆಲ್ಲ ಬೆರ್ಮೆರ್ ಅಧಿದೇವತೆ. ಹಾಗಾಗಿ ಆಲಡೆಯನ್ನು ಬ್ರಹ್ಮಸ್ಥಾನ/ಮೂಲಸ್ಥಾನ/ಬ್ರಹ್ಮ ಆಲಡೆಯೆನ್ನುವುದು." (ವಾಮನ ನಂದಾವರ, ಕೋಟಿ ಚೆನ್ನಯ ಜಾನಪದೀಯ ಅಧ್ಯಯನ. ಪು. ೧೮೯.) ಮೂಲಸ್ಥಾನ ಎನ್ನುವುದೇ ನಾಗ ಬ್ರಹ್ಮನ ಕ್ಷೇತ್ರ. ಇಲ್ಲಿ ದೊರೆತಿರುವ ಕ್ರಿ.ಶ. ೧೪೨೫ ಶಾಸನದಲ್ಲಿ 'ಸಾತನ ಗೋಳಿಯ ಬ್ರಹ್ಮರು ॥ (SII Vol VII ನಂ ೩೮೫) ಎಂಬ ಉಲ್ಲೇಖ ಇದೆ. ಈ ಸಾತನ ಗೋಳಿಯ ಬ್ರಹ್ಮ ಈ ನಾಗ ಕ್ಷೇತ್ರದ ಬ್ರಹ್ಮನ ಹೆಸರು ಇರಬಹುದೆ?

"ಕರಾವಳಿಯ ಉಪಾಸನಾ ಪಂಥದ ಇತಿಹಾಸವನ್ನು ಗಮನಿಸಿದಾಗ ಆ ಪ್ರದೇಶದ ಆದಿಮೂಲದೈವ ನಾಗನೇ ಇರಬೇಕು. ಎಲ್ಲಾ ಜನವರ್ಗದವರೂ ನಾಗನನ್ನು ಬೇರೆ ಬೇರೆ ರೂಪಗಳಲ್ಲಿ ಭಿನ್ನ ಭಿನ್ನ ಆರಾಧನಾ ಪ್ರಕ್ರಿಯೆಗಳಿಂದ ಪೂಜಿಸುತ್ತಾ ಬಂದಿರುವುದು ಕಂಡು ಬರುತ್ತದೆ. ತುಳುವ ಪ್ರದೇಶದ ಆಲಡೆ (ಬೆಮ್ರ ಗುಂಡ ತುಳು) ನಾಗನನ್ನು ಒಳಗೊಂಡಿರುವ ಒಂದು ದೈವ ಸಂಕೀರ್ಣ. ಇಲ್ಲಿ ನಾಗ ಬೆರ್ಮೆರ್, ನಂದಿಗೋಣ, ಲೆಕ್ಕಿಸಿರಿ, ಮತ್ತು ಕ್ಷೇತ್ರಪಾಲರಿಗೆ ಆರಾಧನೆ ನಡೆಯುತ್ತದೆ. ಕನ್ನಡ ಪ್ರದೇಶದಲ್ಲಿ ಇದಕ್ಕೆ ಸಂವಾದಿಯಾದ ಚಿತ್ತೇರಿ ಎಂಬ ದೈವ ಸಂಕೀರ್ಣವಿದ್ದು ಅಲ್ಲಿ ನಾಗ, ಬ್ರಹ್ಮ, ನಂದಿ ಚಿಕ್ಕು ಮತ್ತು ಕೇತ್ರಪಾಲ ಮತ್ತಿತರರಿಗೆ ಅರಾಧನೆ ನಡೆಯುತ್ತದೆ." (ಎ.ವಿ. ನಾವಡ. ಗಾಯತ್ರಿ ನಾವಡ: ಕಾಡ್ಯನಾಟ ಪಠ್ಯ ಮತ್ತು ಪ್ರದರ್ಶನ ಪು. ೨ ೧೯೯೨ ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ ಉಡುಪಿ)

ಪಂಚಲಿಂಗೇಶ್ವರ ಮೂಲಸ್ಥಾನದಲ್ಲಿ ಬಿರ್ಮೆರ್, ರೆಕ್ಕಿಸಿರಿ, ಕ್ಷೇತ್ರಪಾಲ, ನಾಗ ಮತ್ತು ಸುಬ್ರಹ್ಮಣ್ಯ ಇವೆ. ಸುಬ್ರಹ್ಮಣ್ಯನ ಜಾನಪದ ಹೆಸರು ಕುಮಾರ ಎಂಬುದಾಗಿ ತುಳು ಪಾಡ್ದನಗಳಿಂದ ತಿಳಿದುಬರುತ್ತದೆ. ಆದರೆ ಮೂಲಸ್ಥಾನಗಳಲ್ಲಿ ಇರಬೇಕಾದ ನಂದಿಗೋನ (ಕೋಣ) ಅರ್ಥಾತ್ ನಂದಿಕೇಶ್ವರ ವಿಗ್ರಹ ಅಥವಾ ಸಂಕೇತ ಇಲ್ಲಿ ನಮಗೆ ಕಾಣಲಿಲ್ಲ. ಆದರೆ ಬ್ರಹ್ಮ ಲಿಂಗ ಎಂದು ಶಿಲೆಯ ಎರಡು ಪದ್ಮಪೀಠಗಳಿವೆ. ಕ್ಷೇತ್ರಪಾಲ ಮತ್ತು ರೆಕ್ಕೆಸಿರಿಯೂ ಪದ್ಮ ಪೀಠರೂಪದಲ್ಲಿದೆ. ಈ ದೇವಸ್ಥಾನಕ್ಕೆ ಸಂಬಂಧಿಸಿದ ಮಹಿಷಾಸುರ ಗುಡಿಯಲ್ಲಿ ಪಂಚಮುಖ ನಂದಿ ಅರ್ಥಾತ್ ನಂದಿಕೋಣ (ಕೋಣ) ಇದೆ. ನಂದಿಗೋಣವನ್ನು

'ಮಹಿಷಂದಾಯ' ಎಂಬ ಹೆಸರಲ್ಲಿ ಉಪಾಸನೆ ಮಾಡುವ ರೂಢಿ ಇದೆ.

**ದೇವಸ್ಥಾನದ ಕಾವಲು ದೈವ :** ದೇವಸ್ಥಾನದ ನೈರುತ್ಯ ಮೂಲೆಯಲ್ಲಿ ಎರಡು ಫರ್ಲಾಂಗು ದೂರದಲ್ಲಿ ದಂಡಧಾರಿ ಕುದುರೆ ಸವಾರನ ಕಲ್ಲಿನ ಶಿಲ್ಪ ಇದೆ. ಕುದುರೆ ಬಡುಗುದಿಕ್ಕಿನ ಸವಾರಿಯಲ್ಲಿದ್ದರೂ ಕುದುರೆ ಮತ್ತು ಸವಾರ ಬಾಗಿಲಿಗೆ ಅಭಿಮುಖವಾಗಿವೆ. ಛತ್ರಿ ಇರುವ ಕುದುರೆ ಸವಾರನ ತಲೆಯ ಇಕ್ಕೆಲಗಳಲ್ಲಿ ಹೆಡೆಯೆತ್ತಿದ ನಾಗ ಶಿಲ್ಪಗಳಿವೆ. ಹೊಸ್ತಿಲ ಪ್ರವೇಶ ದ್ವಾರದಲ್ಲಿ "ರೇಮಂತೇಶ್ವರ ದೈವಸ್ಥಾನ" ಎಂಬ ಫಲಕ ಇದೆ. ರೇಮಂತ ಶಿಲ್ಪ. ಇದು ಅರಸು ದೈವ ಎಂದು ಹೇಳುತ್ತಾರೆ. ಇದು ಕ್ಷೇತ್ರಪಾಲನಂತೆ ದೇವಸ್ಥಾನದ ಕಾವಲು ದೈವ ಎನ್ನುವ ನಂಬಿಕೆಯೂ ಇದೆ.

**ಜಾನಪದ ಆಚರಣೆ :** ಜಾತ್ರೆಯ ಕೊನೆಯ ದಿನ ದೇವರು ಜಳಕ ಮಾಡಿ ಮರಳಿ ಗರ್ಭಗುಡಿ ಸೇರುವ ಮೊದಲು ಗರಡ (ಧ್ವಜ) ಇಳಿಸುತ್ತಾರೆ. ಇಳಿಸಿದ ಗರಡನನ್ನು ದೇವಾಡಿಗರು ದೇವಸ್ಥಾನದ ಒಳಗೆ ಹೊತ್ತೊಯ್ದು ಬಾಗಿಲು ಹಾಕುತ್ತಾರೆ. ಅವರ ಹಿಂದಿನಿಂದ ಹೋಗುವ ಪಂಚಲಿಂಗ ದೇವರ ಉತ್ಸವ ಮೂರ್ತಿಗೆ ಬಾಗಿಲು ತೆರೆಯುವುದಿಲ್ಲ. ಈ ಪರಿ ಪಾರ್ವತಿ ಶಿವನ ಮೇಲೆ ಮುನಿಸಿಕೊಂಡಿರುವ ಪ್ರಹಸನ ನಡೆಯುತ್ತದೆ. ಪುರೋಹಿತರು ಶಿವನು ಹೊರಗೆ ಸುತ್ತಲು ಹೋದ ಕಾರಣವನ್ನು ವಿವರಿಸುತ್ತಾರೆ. (ತಾನೇನು ಪರಸ್ತ್ರೀ ಸಂಗಕ್ಕೆ ಹೋದುದಲ್ಲ. ಭಕ್ತರನ್ನು ಕಾಣಲು ಹೋದೆ ಎಂಬರ್ಥದಲ್ಲಿ...) ಕೊನೆಗೆ ದೇವಿ ಬಾಗಿಲು ತೆರೆಯುತ್ತಾಳೆ. ಕಾರ್ಕಳ ತಾಲೂಕಿನ ಬೋಲ ಸೋಮನಾಥೇಶ್ವರ ದೇವಸ್ಥಾನವೂ (ಇದೂ ಮೂಲಸ್ಥಾನ) ಬಹಳ ಪುರಾತನ ದೇವಸ್ಥಾನ ಇಲ್ಲಿ ದೇವರು ಜಳಕಕ್ಕೆ ಬಂದು ಮರಳಿ ಗರ್ಭ ಗುಡಿ ಸೇರಲೆಂದು ಹೋಗುವ ಉತ್ಸವ ಮೂರ್ತಿಯನ್ನು ರೆಕ್ಕೆ ಸಿರಿ (ದೈವ ಮಾಧ್ಯಮ) ಅಡ್ಡಗಟ್ಟುತ್ತಾಳೆ. ಜಾನಪದ ಪರಂಪರೆಯ ನರ್ತನ ಸೇವೆಯ ಮೂಲಕ ನಡೆಯುವ ಈ ತಡೆ ಸುಮಾರು ಹೊತ್ತು ನಡೆಯುತ್ತದೆ. ಹಾಗೂ ನೋಡಲೂ ಅಮೋಘವಾಗಿರುತ್ತದೆ ಎನ್ನುತ್ತಾರೆ ಸ್ಥಳೀಯರು. ಹೀಗೆ ಬಾರ್ಕೂರು ಪಂಚಲಿಂಗ ದೇವರೂ ಮೂಲತಃ ತುಳುವರ ಪಂಚ ದೈವಗಳ ಕ್ಷೇತ್ರ ಆಗಿತ್ತು ಎನ್ನುವುದನ್ನು ನಾವು ಸಮರ್ಥಿಸಬಹುದು. (ಸಾಂಕೇತಿಕವಾಗಿ ಎಲ್ಲಾ ವೈದಿಕ ಸಂಪ್ರದಾಯದ ದೇವಾಲಯಗಳಲ್ಲಿ ಓಕುಳಿಯಾಟ ಇದೆ. ಆದರೆ ಯಾವುದೇ ವೈದಿಕಾಚರಣೆಯ ಬೇರು ಜಾನಪದದ ಮಣ್ಣಿನಲ್ಲಿದೆ ಎಂಬ ಮಾತಿದೆ) ಇವು ಮೂಲಸ್ಥಾನದ ಕುರುಹುಗಳು.

ಈಗಲೂ ಈ ದೇವಸ್ಥಾನಕ್ಕೆ ಮೂಲದ ಕುಟುಂಬ ದವರು ತಮ್ಮ ಆದಿ ಮೂಲಸ್ಥಾನ ಎಂಬ ನಂಬಿಕೆಯಿಂದ ಹರಕೆ ಹಾಕಲು ಬರುತ್ತಿದ್ದಾರೆ ಎನ್ನುತ್ತಾರೆ ದೇವಸ್ಥಾನದ ಅರ್ಚಕರು ಮತ್ತು ಚಾಕ್ರಿಯವರು. ಹೀಗೆ ಬರುತ್ತಿರುವವರ ಸಂಖ್ಯೆ ಇತ್ತೀಚೆಗೆ ಹೆಚ್ಚಾಗಿದೆ. ಕಾರಣ ಅಷ್ಟಮಂಗಳದವರು ಉತ್ತರ ಭಾಗದಲ್ಲಿ ನೆಲೆಸಿದ ಅನೇಕ ತುಳು ಕುಟುಂಬಗಳ ಮೂಲಸ್ಥಾನವು ಬಾರ್ಕೂರು ಪಂಚಲಿಂಗ ಕ್ಷೇತ್ರ ಎನ್ನುತ್ತಾರಂತೆ. ಮೂಲಸ್ಥಾನಕ್ಕೆ ಸಂಬಂಧಪಟ್ಟವರು ಕಡ್ಡಾಯವಾಗಿ ಮುಷ್ಠಿ ಹಣ ಹಾಕುವ ಹರಕೆಯೂ ಇಲ್ಲಿ ಮುಂದುವರಿದಿದೆ. ಹೀಗಾಗಿ ತಮ್ಮ ಆದಿಮೂಲ ಎಂದು ಈ ಕ್ಷೇತ್ರವನ್ನು ಹುಡುಕಿ ಬಂದು ಇಲ್ಲಿಯ ಮೂಲಸ್ಥಾನ ನಾಗ–ಪಂಚ ದೈವಗಳಿಗೆ ಹರಕೆ ಹಾಕುತ್ತಾರೆ. ಬಾರ್ಕೂರು ತುಳು ರಾಜ್ಯದ ರಾಜಧಾನಿ ಎಂಬ ಕಾರಣದಿಂದಲೂ ಅನೇಕ ತುಳುವರು ಇಲ್ಲಿಯ ಮೂಲಸ್ಥಾನವನ್ನು ಹುಡುಕಿ ಬಂದು ಹರಕೆ ಹಾಕುವುದು ಇದೆ. ತುಳುನಾಡಿನ ಜೈನರಿಗೂ ಈ ಕ್ಷೇತ್ರ ಮೂಲಸ್ಥಾನ: ಇತ್ತೀಚೆಗೆ ಕುಂದಾಪುರದ ಕಾಲ್ತೋಡು ಗ್ರಾಮದ ಪೃಥ್ವಿರಾಜ್ ಎನ್ನುವ ಜೈನ ಮನೆತನದವರೂ ಪಂಚಲಿಂಗೇಶ್ವರ ಕ್ಷೇತ್ರಕ್ಕೆ ಬಂದು ಇದು ತಮ್ಮ ಮೂಲಸ್ಥಾನ ಎಂದು ಎಂದಿದ್ದರು. ಅಷ್ಟಮಂಗಳದಲ್ಲಿ ಇವರಿಗೆ ಬಂದ ಮಾಹಿತಿ ಏನೆಂದರೆ ಇವರು ಬಾರ್ಕೂರಿನ ಅರಸು ಮೂಲದವರು. ಇವರ ಮೂಲಸ್ಥಾನ ದೇವರು, ಇವರ ಕುಲದೇವರು ಬಾರ್ಕೂರು ಪಂಚಲಿಂಗೇಶ್ವರ. ಬಾರ್ಕೂರಿನಿಂದ ಇವರ ಪೂರ್ವಿಕರು ವಲಸೆ ಹೋದವರು. ಆಗ ಪದ್ಮಾವತಿ ದೇವಿಯನ್ನು ಜತೆಗೆ ಕೊಂಡು ಹೋಗಿದ್ದರು. ಪಂಚಲಿಂಗೇಶ್ವರನ ದೇವಸ್ಥಾನ ಅನೇಕರ ಜಾತಿಗಳವರ ಮೂಲಸ್ಥಾನ ಜೊತೆಗೆ. ಬಾರ್ಕೂರು ರಾಜ್ಯದ/ಸೀಮೆ ದೇವಸ್ಥಾನ. ಹೀಗಾಗಿ ಇಲ್ಲಿಂದ ವಲಸೆ ಆದುದರಿಂದ ಅವರು ಈ ಮೂಲಸ್ಥಾನಕ್ಕೆ ನಡೆದುಕೊಳ್ಳಬೇಕು ಎಂದು ಸಲಹೆ ಬಂತು ಎನ್ನುತ್ತಾರೆ ಇಲ್ಲಿಯ ಆಡಳಿತ ವರ್ಗ.

ಬಾರ್ಕೂರು ಜೈನ ಧರ್ಮಕ್ಕೂ ಪ್ರೋತ್ಸಾಹ ನೀಡಿದ ಜಾಗ. ಇಲ್ಲಿ ಪಾಳು ಬಿದ್ದಿರುವ ಬಸದಿಯನ್ನು ಈಗಲೂ ಕಾಣಬಹುದು. ಬಾರ್ಕೂರು ಪಂಚಲಿಂಗೇಶ್ವರ ದೇವಾಲಯದ ಬಳಿ ಇರುವ ಜೋಯಿಸರ ಮನೆಯ ಹಲಸಿನ ಮರ ಕಡಿದಾಗ ಅದರ ಅಡಿಯಲ್ಲಿ ಜಿನ ಬಿಂಬಗಳ ಶಿಲಾ ಫಲಕ ದೊರಕಿದೆ. ಅದನ್ನು ಇಲ್ಲಿ ಇಟ್ಟಿದ್ದಾರೆ. ಅರಶಿನ ಬಣ್ಣದ ಈ ಶಿಲಾ ಫಲಕದಲ್ಲಿ ೨೦ ಕಿಂಡಿಗಳಿವೆ. ಈ ಕಿಂಡಿಗಳಲ್ಲಿ ಧ್ಯಾನ ಮುದ್ರೆಯಲ್ಲಿರುವ ೨೦ಜಿನ ಬಿಂಬಗಳನ್ನು ಕೊರೆಯಲಾಗಿದೆ. ಇದರ ಎರಡು ಭಾಗ ಮುರಿದಿದ್ದು ಇಲ್ಲಿ ನಾಲ್ಕು ಜಿನ ಬಿಂಬ ಇದ್ದ ಲಕ್ಷಣ ಇದೆ. ಒಟ್ಟಿನಲ್ಲಿ ಈ ಕ್ಷೇತ್ರದಲ್ಲಿ ಜೈನ

ಉಪಾಸನೆಯೂ ಇದ್ದಿರಬಹುದು ಎನ್ನುವುದಕ್ಕೆ ಈ ಮಾಹಿತಿ ಸಾಕಾಗುತ್ತದೆ. "ಜೈನ ಧರ್ಮವು ಎಂದಿನಿಂದ ಇಲ್ಲಿ ಪ್ರಾರಂಭವಾಯಿತೆಂದು ನಿರ್ದಿಷ್ಟವಾಗಿ ಹೇಳುವುದು ದುಸ್ತರವಾದರೂ ದೊರಕಿದ ಅವಶೇಷಗಳನ್ನವಲೋಕಿಸಿ ನಿರ್ಧರಿಸುವುದಾದರೆ ಕ್ರಿ.ಶ. ೧೩ನೆಯ ಶತಕಕ್ಕೆ ಅದು ಬೇರೂರಿತೆನ್ನಬಹುದು." (ಗುರುರಾಜ ಭಟ್: ಬಾರ್ಕೂರು ಪು. ೩೯)

**ಬಾರ್ಕೂರಿನಲ್ಲಿ ಕಾಶ್ಮೀರದವರು**

ಆಳುಪರಸ ಕವಿಯಾಳುಪೇಂದ್ರನ ಕ್ರಿಶ ೧೧೫೫ರ ಶಾಸನ ಹೀಗಿದೆ :

೭ ಮಾಸ ಪ್ರಥಮ ಸೋಮವಾರದಂದು ಶ್ರೀ ಕಾಶ್ಮೀರ [ಶ್ರೀ]
೮ ಜಿಲದ ಶ್ರೀಪ್ರವರ್ಪುರದ ಆಧಿಷ್ಠಾನದ [ಪಜ್ಜೆರ] ಪು
೯ ರದ ಸ್ಥಾನದಲು ಹುಟ್ಟಿದ ಶ್ರೀ ಸಾರದಾದೇವಿಯ . .
೧೦ ಣದ ಶ್ರೀಯೂಟರಾಣರ ದೇಗೂನ ರಾಣಿರಾ :
೧೧ ಅವರ ಮಕ್ಕಳು ಶ್ರೀ ಸಾವಾಸಿಮಣಿ ನೋಜ ರಾಣನ ವ
೧೨ ರ ತಮ್ಮ ಶ್ರೀ ಸಾಜಿ ರಾಣನು ಪನ್ನಿರ್ಪಳ್ಳಿಯೊಳು ಗು [ಡಿ]
೧೩ ಗಲ್ಲು ನಾಲ್ಗಂಡುಗದ ಪದಿನಾಲ್ಕು ಮೂಡೆ ಬಿತ್ತುವ [ಮೆ]
೧೪ ಮೆಕ್ಕೆ ಭೂಮಿಯ ಅರ್ತ್ಥ ಮಂಗೊಟ್ಟನಿತಂ ಕೊ ಪ [೦] ಡು ಶ್ರೀ.
೧೫ ದರಸರು ಪ್ರಧಾ [ನರ] ಪ ಹೆರ್ಗ್ಗಡೆಯು ಆ ಊರ
೧೬ ನಾಳ್ವ ಪಾ [ಂಡ್ಯ] ಮಹಾದೇವಿಯರ ನಗರ ಸ [ಮೂಹಕ್ಕೆ]
೧೭ . ನೆಲದವರು ವೊ [೦] ದಾಗಿರ್ದು ಮೂಲಸ್ಥಾನ ಮಾರ್ಕ್ಕಂಡೇ
೧೮ ಶ್ವರ ದೇವರಲ್ಲು ವಿಚ್ಚೇದ [ಗೆ] ಯಜೌ ಸಲ್ವರಾಗಿ ತೆಜೌಯ
೧೯ ಸರ್ವ್ವ ಬಾಧಾ ಪರಿಹಾರವಾಗಿ [ಯೆ] ಅಸಿ ಕೊ[೦] ಡು ಧಾರಾ
೨೦ ಪೂರ್ವಕವಾಗಿ [ಗಿ ಎ] ಅದು ಕೊಟ್ಟ ತಪ್ಪು ಭೂಮಿಯ ನೇಗಿಲು
೨೧ [ಹೂಡಿದ] ಸಾವಾಸಿಗಳ ಗುಂಡಿಕೆಯ . . ಪಯಿಸಾ .
೨೨ . . . . . ಮಕ್ಕಳಾ ಮಕ್ಕಳಾಳು [ಪೊ] ಡೆಯ ಧರ್ಮ್ಮ–
೨೩ ಮ ನಾಚಂ[ದ್ರಾ] ರ್ಕ್ಕತಾಂಬರಂ ಪಾಲಿಸಲಿ ಜ. . ದೇವ (SII.VOL.7.376)

ಈ ಶಾಸನದಲ್ಲಿ ಉಲ್ಲೇಖವಾಗಿರುವ ಸಾವಾಸಿಗಳು ಅಂದರೆ ಕಾಶ್ಮೀರಿಗಳು ಎನ್ನುತ್ತಾರೆ ವಿದ್ವಾಂಸರು. ಕಾಶ್ಮೀರಿಗಳಾಗಿದ್ದರೂ ತಮ್ಮ ಮೂಲವನ್ನು ಇಲ್ಲಿ ಉಲ್ಲೇಖಿಸುವುದು ಗಮನಾರ್ಹ. ಅಥವಾ ಕೆಲವು ಶಾಸನಗಳಲ್ಲಿ ಆಳುವರಸರು ಉತ್ತರ ಭಾರತ ಮೂಲವನ್ನು ಮೇಲರಿಮೆಯ ಪ್ರದರ್ಶನಕ್ಕೆ ತೋರಿಸುವಂತೆ ಇದೂ ಆಗಿರಬಹುದು. ರಾಣೋಜಿ ಬಳಿ(ವಂಶ)ಯವರು ತುಳು ಬಂಟರಲ್ಲಿ ಇದ್ದಾರೆ.

**ನಾಥ ಪಂಥ :** ಮಾರ್ಕಂಡೇಶ್ವರ ದೇವಳದ ಪ್ರಾಕಾರದ ಹೊರಗೆ ಕಾಲ ಭೈರವ ಗುಡಿ ಇದೆ. ಇದಕ್ಕೆ ನಾಥರು ಪೂಜೆ ಮಾಡುತ್ತಿದ್ದಾರೆ. ಈ ಗುಡಿಯ ಮುಂದೆ ಬಲಿ ಪೀಠ ಇದೆ. ಬಲಿ ಪೀಠದ ಮೇಲೆ ಮಾನವ ಬಲಿಯನ್ನು ಸಂಕೇತಿಸುವ ರುಂಡ ಇತ್ಯಾದಿ ಅಂಗಗಳ ಶಿಲ್ಪಗಳಿದ್ದು ಇವನ್ನು ಸರ್ಪವು ಸುತ್ತುಕೊಂಡಿದೆ.

ಕಾಳಭೈರವ ಗುಡಿಗೆದುರಾಗಿ ಸಿದ್ಧರಸ ಬಾವಿ ಮತ್ತು ಅದರ ಬಳಿ ಹಿಂಗುಳಾದೇವಿಯ ಗುಡಿ ಇತ್ತು ಎನ್ನುತ್ತಾರೆ ಮಾಹಿತಿದಾರರು. ಸಿದ್ಧರಸ ಬಾವಿಯನ್ನು ಸರಕಾರವೇ ಮುಚ್ಚಿಸಿದೆ. ಹಿಂಗುಳಾ ದೇವಿಯ ಗುಡಿಯ ಅವಶೇಷ ಇದೆ. ಈಗಿನ ಮೊಕ್ತೇಸರರಾದ ಮಂಜುನಾಥರಾವ್ ಅವರು ಬಾಲ್ಯದಲ್ಲಿ ಹಿಂಗುಳಾದೇವಿಯ ಪಾಳುಗುಡಿಯನ್ನು ಕಂಡಿದ್ದರು. ಅವರು ಕಂಡಾಗ ಅದರೊಳಗೆ ಶಿಲ್ಪ ಇರಲಿಲ್ಲ. ಚ್ಚಚೌಕದ ಗುಡಿಯ ಮುರ ಕಲ್ಲಿನ ಜರಿದು ಬಿದ್ದ ಗೋಡೆ ಇತ್ತು. ಎನ್ನುತ್ತಾರೆ. ಈಗಲೂ ಮುರಕಲ್ಲಿನ ಗೋಡೆಯ ಕೆಲವು ಭಾಗ ಉಳಿದಿದೆ. ಗೋಡೆಯ ಪಕ್ಕ ಪಂಚಲಿಂಗೇಶ್ವರ ದೇವಸ್ಥಾನದ ದಿಕ್ಕಿಗೆ ಒಂದು ಹಾಸು ಕಲ್ಲಿನ ಮೇಲೆ ಎರಡು ನಾಗ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಫಲಾಪೇಕ್ಷೆಯ ಸಂಯೋಗ ಶಿಲ್ಪ. ಮತ್ತು ಮೂರು ಹೆಡೆಯ ನಾಗ ಶಿಲ್ಪ. ಮಧ್ಯದ ಹೆಡೆ ವಿಶಾಲವಾಗಿದೆ. ಇದರ ಮುಂದೆ ಕಾಳ ಭೈರವ ಗುಡಿಯೊಳಗೆ ಇರುವ ಮಾದರಿಯ ಕಬ್ಬಿಣದ ಸಲಾಕೆಯ ಬಾಗಿದ ತುದಿಯಲ್ಲಿ ದೀಪದ ಬಟ್ಟಲಿದೆ.

ಈ ಪ್ರಾಕಾರದಲ್ಲಿಯೇ ಇರುವ ಕ್ರಿ.ಶ. ೧೪೨೫ರ ಶಾಸನವೊಂದರಲ್ಲಿ ಹಿಂಗುಳಾ ದೇವಿಯ ಪ್ರಸ್ತಾಪ ಇದೆ. (SII Vol VII £ÀA 384) ಹಿಂಗುಳಾ ಕ್ಷೇತ್ರ ಈಗಿನ ಪಾಕಿಸ್ಥಾನದ ಬಲೂಚಿಸ್ತಾನದಲ್ಲಿದೆ. ಹಿಂಗೋಲಿ ನದಿ ಮತ್ತು ಹಿಂಗೋಲಿ (ಕಥ್ ಕೋಟೇಶ್ವರ) ನ್ಯಾಷನಲ್ ಪಾರ್ಕ್‌ನ ಮಧ್ಯದಲ್ಲಿ ಹಿಂಗುಳಾ ದೇವಿಯ ಕ್ಷೇತ್ರ ಇದೆ. ಇದು ಸತಿಯ ೫೧ ಶಕ್ತಿ ಪೀಠಗಳಲ್ಲಿ ಒಂದು. ಸತಿಯ ಹಣೆಯ ಭಾಗ ಬಿದ್ದ ಕ್ಷೇತ್ರ ಹಿಂಗ್ಲಜಾ! ಈಕೆ ಮಧು ಪಾತ್ರೆಯನ್ನು ಹಿಡಿದ ಶಕ್ತಿ ದೇವಿ.

"ಬಾರಕೂರಿನ ಶಾಸನಗಳಲ್ಲಿ ಹಿಂಗುಳಾದೇವಿಯ ಪ್ರಸ್ತಾಪ ಇದೆ. ಇದು ನಾಥಪಂಥದ ದೇವಾಲಯ. ಈ ದೇವಾಲಯವು ಪಂಚಲಿಂಗೇಶ್ವರದ ಎದುರಿಗಿತ್ತೆಂದು ತಿಳಿಯಬಹುದು. ನಾಥ ಪಂಥವು ಬಾರಕೂರಿನಲ್ಲಿ ಪ್ರಬಲ

ವಾಗಿತ್ತು." (ಗುರುರಾಜ ಭಟ್ : ಪು. ೩೯ ಬಾರ್ಕೂರು ೧೯೭೪ ಐ.ಬಿ.ಎಚ್. ಬೆಂಗಳೂರು)

ಮಂಗಳೂರಿನ ಕದ್ರಿಯಲ್ಲಿ ೧೨ ವರ್ಷಕ್ಕೊಮ್ಮೆ "ಜೋಗಿ ಅರಸು" ಪಟ್ಟಾಭಿಷೇಕ ಆಗುತ್ತದೆ. ಆ ಪಟ್ಟಾಭಿಷೇಕಕ್ಕೆ ಬರುವ ನಾಥ ಅರಸು ಮತ್ತು ಅವರ ಪರಿವಾರದವರು ಈ ಮಾರ್ಗವಾಗಿ ಬರುತ್ತಾರೆ. ಈಗಲೂ ಹನ್ನೆರಡು ವರ್ಷಕ್ಕೆ ನಡೆಯುವ ಕದ್ರೆಯ ಪಟ್ಟಾಭಿಷೇಕಕ್ಕೆ ಬರುವ ಶಾಕ್ತ ಪಂಥದ ಸುಮಾರು ೨೦೦ವರೆಗೆ ಅನುಯಾಯಿಗಳು (ನಾಥರು) ಈ ಮಾರ್ಕಾಂಡೇಶ್ವರ ದೇವಸ್ಥಾನಕ್ಕೆ ಕಾಲ್ನಡಿಗೆಯಲ್ಲಿಯೇ ಬರುತ್ತಾರೆ. ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಬಿಡಾರ ಹೂಡುತ್ತಾರೆ. ಪಂಚಲಿಂಗೇಶ್ವರನಿಗೂ ಪೂಜೆ ಪುರಸ್ಕಾರ ಮಾಡಿ ಅವರು ಮುಂದೆ ಹೋಗುವುದು ಪದ್ಧತಿ. ನಾಗರ ಪಂಚಮಿಯಂದು ಹೊರಟು ಶಿವರಾತ್ರಿಗೆ ಕದ್ರಿ ಮುಟ್ಟುವಂತೆ ಬರುತ್ತಾರೆ. ನಡಿಗೆಯಲ್ಲಿ ಬರುವ ಇವರು. ಅಲ್ಲಲ್ಲಿ ಕ್ಯಾಂಪುಗಳಲ್ಲಿ ತಂಗಿ ಬರುತ್ತಾರೆ.

"ತೇದಿ ಇಲ್ಲದ ಶಾಸನದಲ್ಲಿ (ಲಿಪಿ ಶಾಸ್ತ್ರ ದೃಷ್ಟಿಯಿಂದ ೧೦ನೆಯ ಶತಮಾನ) ಸುರಾಲಿನ ತೋಳಹರ ಕೈಯಿಂದ ಬಿದಿರ ಗದ್ದೆಯ ಮೇಲೆ "ಆರುವಾರದ" ಮೂಲಕ ೩೦ ಗದ್ಯಾಣವನ್ನು ಬಡ್ಡಿಗೆ ಕೊಟ್ಟಂತೆಯೂ ಈ ವೃದ್ಧಿಯಿಂದ ಮಾರ್ಕಂಡೇಶ್ವರ ದೇವರಿಗೆ ಅಗ್ರಪೂಜೆ ಮಾಡುವಂತೆಯೂ ಈ ವ್ಯವಸ್ಥೆಯನ್ನು ಶಿವಾನಂದ ಯೋಗಿ ಎಂಬುವನು ಮಾಡಿದಂತೆಯೂ ಕಂಡು ಬರುತ್ತದೆ. ಇವನು ಈ ದೇವಾಲಯದಲ್ಲಿ ಒಂದು ನೈವೇದ್ಯ ಶಾಲೆಯನ್ನೂ ಕಟ್ಟಿಸಿದನು.

ಶಿವಾನಂದ ಯೋಗಿ (ಜೋಗಿ) ಎಂಬುವನು ನಾಥ ಪಂಥಕ್ಕೆ ಸೇರಿದವನಿರಬೇಕು. ಕ್ರಿ.ಶ. ೧೦ನೆಯ ಶತಮಾನ ಕ್ಕಂತೂ ಕದ್ರೆಯಲ್ಲಿ ನಾಥ ಪಂಥವು ಸರಿಯಾಗಿ ಬೆಳೆದಿತ್ತು. ಮಾತ್ರವಲ್ಲ ದಕ್ಷಿಣ ಕನ್ನಡದಲ್ಲಿ ಪ್ರಾಬಲ್ಯವನ್ನೂ ಪಡೆದಿತ್ತು. ನಾಥ ಪಂಥವು ಬೌದ್ಧ ಮತದ ವಜ್ರಾಯಾನದಿಂದ ಹೊರಟ ಶುದ್ಧ ಶೈವ ಧರ್ಮ." (ಅದೇ. ಪು. ೩೯)

ಬೌದ್ಧರ ತಾರಾಭಗವತಿಗೂ ಹಿಂಗುಳಾಂಬೆ ಎಂಬ ಹೆಸರಿದೆ. ಶೈವಪ್ಪ ಭಾವಿತವಾಗಿ ರೂಪುಗೊಂಡ ಬೌದ್ಧ ಮತದ ವಜ್ರಾಯಾನದಿಂದಲೇ ನಾಥ ಪಂಥ ಮೊದಲಾಯಿತು ಎಂಬ ವಾದ ಇದೆ.

**ಅಂಜುಮಾನ ಅವರ ಉಪಸ್ಥಿತಿ :** ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಚೈತ್ರ ಶುದ್ಧ ಪಾಡ್ಯದಂದು ಆರು ದಿನಗಳ ರಥೋತ್ಸವ ಆರಂಭ ಆಗುತ್ತದೆ.

ಕೊನೆಯ ದಿವಸ ಪಂಚಲಿಂಗ ದೇವರು ಬಾರ್ಕೂರು ಪೇಟೆಗೆ ಬಲಿ(ಸವಾರಿ) ಹೊರಟು ರಥೋತ್ಸವ ಮುಗಿಸಿ ಒಳಗೆ ಬರುವಾಗ ಓಲಗ ಮಂಟಪದಲ್ಲಿ ಓಲಗ ಸೇವೆ ಆಗಿ ರಾತ್ರಿ ಬರುವಾಗ (ರಾತ್ರಿ)ಶಿವನಿಗೂ ಪಾರ್ವತಿಗೂ ವಿವಾಹ ಜರಗುತ್ತದೆ. ವಿವಾಹ ಮುಗಿಸಿ ಮೇಲೆ ಶಿವ –ಭುವನೇಶ್ವರಿ ದಂಪತಿಗಳನ್ನು ಶಯ್ಯಾಗಾರದಲ್ಲಿ ಬಿಡುತ್ತಾರೆ.

ಇದೇ ದೇವಸ್ಥಾನದಲ್ಲಿ ಇರುವ ಕಾಲ ಇಲ್ಲದ ಇನ್ನೊಂದು ಶಾಸನ ಬರಹ ಹೀಗಿದೆ :

೧೨ ವೀರ ಗಜ ದೇವರಸರು ಶ್ರೀ ಮತು ಪಟ್ಟಮುಹ ದೇವಿಯರುಂ ಪಾಂಡ್ಯದೇವ

೧೩ ರಸರುಂ ಸ್ಥಿರ ಸಿಂಹಾಸನದಿಂ ಸುಖಸಂಕಥಾ ವಿನೋದದಿಂ ರಾಜ್ಯ

೧೪ ಂಗೆಯುತ್ತ ಮಿರ್ದ್ದಾ ಕಾಲದಲ್ಲಿ ಬಾರಹ ಕ(ಂ)ನ್ಯಾಪುರದ ಹರ

೧೫ ವರಿಯ ನ (ಗಿರ) ಹಂಜಮಾನ ವೋಲಗದೊಳಿರ್ದ್ದಾ ಸಂನ್ನಿಧಾ ೧೬ ನದಲು –

ಮೇಲಿನ ಶಾಸನದಲ್ಲಿ ಉಲ್ಲೇಖವಾಗಿರುವ ಅಂಜುಮಾನ ಸಮಾಜದವರಿಗೆ ಇಲ್ಲಿ ಪರಂಪರೆಯ ವಿಶೇಷ ಹಕ್ಕು ಈಗಲೂ ಇದೆ. ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಚೈತ್ರ ಶುದ್ಧ ಪಾಡ್ಯದಂದು ೬ ದಿನಗಳ ರಥೋತ್ಸವ ಆರಂಭ ಆಗುತ್ತದೆ. ರೇವತಿ ನಕ್ಷತ್ರಕ್ಕೆ ರಥೋತ್ಸವಕ್ಕೆ ಧ್ವಜಾರೋಹಣ. ಆದ್ರಾ ನಕ್ಷತ್ರಕ್ಕೆ ರಥೋತ್ಸವ. ರಥೋತ್ಸವದ ಕೊನೆಯ ದಿವಸ ಬಾರ್ಕೂರು ಪೇಟೆಗೆ ಬಲಿ (ಸವಾರಿ)ಹೋಗಿ ಮರಳಿ ಒಳಗೆ ಬರುವಾಗ ಓಲಗ ಮಂಟಪದಲ್ಲಿ ಓಲಗ ಸೇವೆ ಆಗುತ್ತದೆ. ರಾತ್ರಿ ಮರಳಿ ಬಂದ ಮೇಲೆ ಶಿವನಿಗೂ ಪಾರ್ವತಿಗೂ ವಿವಾಹ ಜರಗುತ್ತದೆ. ವಿವಾಹ ಮುಗಿದ ಮೇಲೆ ಶಿವ–ಪಾರ್ವತಿ ದಂಪತಿಗಳನ್ನು ಶಯ್ಯಾಗಾರದಲ್ಲಿ ಬಿಡುತ್ತಾರೆ.

ಮಾರನೆಯ ದಿನ ಬೆಳಿಗ್ಗೆ ಕವಾಟೋದ್ಘಾಟನೆ. (ಬಾಗಿಲು ತೆರೆಯುವುದು) ಅದೇ ಸಂಜೆ ಪೂಜೆ ಮುಗಿಸಿ ಬೆಳಿಗ್ಗೆ ಸುಮಾರು ಎರಡು ಗಂಟೆಗೆ ಹೊರಗೆ ದೇವರು ಸವಾರಿ ಹೊರಡುತ್ತಾರೆ. ಕೇರಿಗಳನ್ನು ಸಂದರ್ಶಿಸಿ ದೇವಸ್ಥಾನಕ್ಕೆ ಮರಳಿ ಓಲಗ ಮಂಟಪದಲ್ಲಿ ಪಂಚಲಿಂಗ ದೇವರು ಓಲಗ ಆಗುತ್ತಾರೆ. ಆಗ ಅಂಜುಮಾನ ಸಮಾಜದವರು ಓಕುಳಿ ಆಡಿಸುತ್ತಾರೆ. ಮಾರನೆಯ ದಿನ ಬೆಳಿಗ್ಗೆ ಕವಾಟೋದ್ಘಾಟನೆ. (ಬಾಗಿಲು ತೆರೆಯುವುದು) ಅದೇ ಸಂಜೆ ಪೂಜೆ ಮುಗಿಸಿ ಬೆಳಿಗ್ಗೆ ಸುಮಾರು ೨ ಗಂಟೆಗೆ ಹೊರಗೆ ದೇವರು ಸವಾರಿ ಹೊರಡುತ್ತಾರೆ. ಕೇರಿಗಳನ್ನು ದೇವಸ್ಥಾನಕ್ಕೆ ಮರಳಿ ಓಲಗ ಮಂಟಪದಲ್ಲಿ ಪಂಚಲಿಂಗ ದೇವರು ಓಲಗ ಆಗುತ್ತಾರೆ.

ಮಾರ್ಕಾಂಡೇಶ್ವರ ದೇವಾಲಯ ಮುಂಭಾಗದಲ್ಲಿ ಕಾಳ ಬೈರವ ಗುಡಿಯ ಮುಂದೆ ಎಡಕ್ಕೆ ಓಕುಳಿ ಹೊಂಡ ಇದೆ.

ಇಲ್ಲಿಯ ವಾರ್ಷಿಕ ಜಾತ್ರೆಯಲ್ಲಿ ಈ ಹೊಂಡದಲ್ಲಿ ಓಕುಳಿಯಾಟ ನಡೆಯುತ್ತದೆ. ಆದಿನ ಅವರು ದೇವಾಲಯದ ಮುಂದಿರುವ ಹೊಂಡದಲ್ಲಿ ಓಕುಳಿ ತುಂಬಿಸುತ್ತಾರೆ. ಒಂದು ರಾಟೆ ಕಟ್ಟಿ ಅದರ ಹಗ್ಗಕ್ಕೆ ಒಂದು ಬಾಳೆಗೊನೆಯನ್ನು ಓಕುಳಿ ಹೊಂಡಕ್ಕೆ ಇಳಿಸುತ್ತಾರೆ. ಅಂಜುಮಾನ ಮಖ್ಯಸ್ಥ ಬಾಳೆ ಗೊನೆಯನ್ನು ರಾಟೆ ಮೂಲಕ ಏರಿಸಿ, ಇಳಿಸಿ, ಕಸಿಯಲು ಎರಗುವ ತರುಣರನ್ನು ಆಟವಾಡಿಸುವವರು ಈ ಅಂಜುಮಾನ್ ಮನೆಯವರು. ಓಕುಳಿ ಹೊಂಡದಲ್ಲಿ ಓಕುಳಿಯಾಡಿದ ಬಂಟ ತರುಣರು ದೇವಸ್ಥಾನದ ಮುಂದಿರುವ ಕೋಟೆ ಕೇರಿ ಕೆರೆಯಲ್ಲಿ ಮೀಯಬಾರದು. ಚೌಳಿಕೇರಿಯ ಕೆರೆಗೆ ಹೋಗಿ ಮೀಯುವುದು ಪದ್ಧತಿ. (ಬಾರ್ಕೂರಿನಲ್ಲಿ ಹತ್ತು ಕೇರಿಗಳು ಮತ್ತು ಹತ್ತು ಕೆರೆಗಳು ಇವೆ.)

ಓಲಗ ಮಂಟಪದಲ್ಲಿ ಓಲಗ ಸೇವೆ ಆದ ಮೇಲೆ ವೀಳ್ಯ ಮರ್ಯಾದೆ ಕೊಡುವ ಪದ್ಧತಿ ಇದೆ. ಈ ಪದ್ಧತಿ ಅರಸರ ಕಾಲದಿಂದ ನಡೆದು ಬಂದಿದೆ ಎನ್ನುವುದಕ್ಕೆ ಈಗಲೂ ಇಲ್ಲಿ ಇರುವ ಆಚರಣೆಗಳು ಸಾಕ್ಷಿಯಾಗುತ್ತವೆ. ಬಂಗರು, ಚೌಟರು ಮತ್ತು ಎಲ್ಲಾ ಬೀಡುಗಳಿಗೂ, ಮಂಗಳೂರಿನಿಂದ ಬೈಂದೂರು ವರೆಗೆ ಇರುವ ತುಂಡರಸರ ಮನೆಗಳವರಿಗೆ ಹೇಳಿಕೆ ನೀಡಿ ವೀಳ್ಯದ ಜೊತೆಗೆ 'ಕಡಲೆ ಕಾಯಿ' ಪ್ರಸಾದ ನೀಡುವ ಪದ್ಧತಿ ಈಗಲೂ ಉಳಿದು ಬಂದಿದೆ. ಅದನ್ನು ಗ್ರಾಮದ ಪಟೇಲರು ನಡೆಸಿಕೊಡುತ್ತಾರೆ. ವೀಳ್ಯ ಪಡೆಯಲು ಬರುವವರ ಸಂಖ್ಯೆ ಕಡಿಮೆಯಾಗಿದೆ.

ಇಲ್ಲಿಯ ಅನೇಕ ಶಾಸನಗಳು ಅಂಜುಮಾನ್ ಸಂಘಟನೆಯ ಪಾತ್ರಗಳನ್ನು ಉಲ್ಲೇಖಿಸುತ್ತವೆ.

"ಹಂಜಮಾನ ಸಂಘವು ಸಖರ ಹಂಜಮಾನವೆಂದೂ ಶಾಸನಗಳಲ್ಲಿ ಉಕ್ತವಾಗಿರುತ್ತದೆ. ಹಂಜಮಾನ ಶಬ್ದವು ಪರ್ಶಿಯನ್ ಭಾಷೆಯ ಅಂಜುಮನ್ ಶಬ್ದದಿಂದ ಹುಟ್ಟಿದ್ದೆಂದೂ, ಆದ ಕಾರಣ ವರ್ತಕ ವೃತ್ತಿಯನ್ನವಲಂಬಿಸಿ ಭಾರತಕ್ಕೆ ಬಂದು ಅಲ್ಲಿಯ ಕರಾವಳಿಯುದ್ದಕ್ಕೂ ಅಲ್ಲಲ್ಲಿ ನೆಲೆಸಿದ್ದ ಪರ್ಶಿಯಾ ದೇಶದ ವ್ಯಾಪಾರಿಗಳ ಪಾಳೆಯಗಳನ್ನೆ ಆ ಶಬ್ದವು ಸೂಚಿಸುತ್ತದೆಯೆಂದೂ ಅನೇಕ ವಿದ್ವಾಂಸರು ಈಗಾಗಲೇ ಸಿದ್ಧಪಡಿಸಿರುವರು. ಉತ್ತರ ಕನ್ನಡ ಜಿಲ್ಲೆಯ ಕೈಕಿಣಿ ಗ್ರಾಮದಲ್ಲಿ ದೊರೆತಿಸುವ ಕ್ರಿ.ಶ ೧೪೨೭ರ ಶಾಸನ ವೊಂದರಲ್ಲಿ ಉಮರ ಮರಕ್ಕಾಲನೆಂಬಾತನನ್ನು "ಹಂಜಮಾನ ಮುಖ್ಯ" ನೆಂದು ಕರೆಯಲಾಗಿದೆ. ಉಮರ ಎಂಬೀ ಹೆಸರು ಪರ್ಶಿಯನ್ ಭಾಷೆಯ ಉಮರ್ ಎಂಬ ಹೆಸರೇ ಆಗಿರುವ ಕಾರಣ ಹಂಜಮಾನ ಶಬ್ದವು ಕಡಲು ದಾಟಿ ಭಾರತಕ್ಕೆ ಬಂದು ನೆಲೆಸಿದ್ದ ಪಾರಸೀ ವರ್ತಕರನ್ನೆ ಸೂಚಿಸುತ್ತದೆಯೆಂಬ ವಾದಕ್ಕೆ ಮತ್ತಷ್ಟು ಪುಷ್ಟಿ ದೊರೆತಂತಾಯಿತಷ್ಟೆ. ಹೀಗಾಗಿ ಹಂಜಮಾನ ಅಥವಾ ನಖರ ಹಂಜಮಾನವು ವ್ಯಾಪಾರ ಮಾಡುವ ಸಲುವಾಗಿ ತುಳುನಾಡಿಗೆ ಬಂದು ನೆಲೆಸಿದ್ದ ಪರ್ಶಿಯಾ ದೇಶದ ವರ್ತಕ ಸಂಘದ ಹೆಸರಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು." **(ಕೆ.ವಿ. ರಮೇಶ್ ತುಳುನಾಡಿನ ಇತಿಹಾಸ ಪು ೭೦ (ರಾಷ್ಟ್ರ ಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ.)"** ಶ್ರೀಲಂಕಾದಲ್ಲಿ ಮರಕ್ಕಾಲರೆಂದು ಮೀನುಗಾರ ಮುಸ್ಲಿಂರನ್ನು ಕರೆಯುವುದನ್ನು ನಾನು ಗಮನಿಸಿದ್ದೇನೆ. ತುಳುನಾಡಿನ ಹಿಂದೂ ಮೀನುಗಾರ ರನ್ನು 'ಮರಕ್ಕಾಲರು' ಎಂದು ಕರೆಯುವುದು ತುಳು ಭಾಷೆಯ ವಾಡಿಕೆ.

ಪಂಚಲಿಂಗೇಶ್ವರ ದೇವಸ್ಥಾನದಿಂದ ಒಂದು ಕಿಲೋ ಮೀಟರ್ ದೂರಕ್ಕೆ ನೈಋತ್ಯ ಮೂಲೆಯಲ್ಲಿ "ಸಿಂಹಾಸನ ಗುಡ್ಡೆ' ಇದೆ. ಇದು ವಿಕ್ರಾಮಾರ್ಜುನನ ಸಿಂಹಾಸನ ಭೂಗತ ಆದ ಕ್ಷೇತ್ರ ಎಂಬ ಪ್ರತೀತಿ ಇದೆ. ಗುರುರಾಜ ಭಟ್ಟರು ಹೀಗೆ ಬರೆಯುತ್ತಾರೆ, "ಐತಿಹ್ಯವು ಒಂದು ವಿಕ್ರಮಾದಿತ್ಯನ ಕತೆ ತಿಳಿಸುತ್ತದೆ. ನಮ್ಮ ಜಿಲ್ಲೆಯಲ್ಲಿ ಇಷ್ಟರ ತನಕ ದೊರಕಿದ ಯಾವ ದಾಖಲೆಯೂ ಈ ವಿಕ್ರಮಾದಿತ್ಯನ ಪ್ರಸ್ತಾವನೆಯನ್ನು ಮಾಡುವುದಿಲ್ಲ. ಬಾರಕೂರಿನ ಮೇಲೆ ಯಾವನಾದರೂ ಒಬ್ಬ ವಿಕ್ರಮಾದಿತ್ಯನೆಂಬ ಅರಸನು ಅಧಿಕಾರ ಅಧಿಪತ್ಯವನ್ನು ನಡೆಸಿದ್ದರೆ, ಅದು ಕಲ್ಯಾಣಿ ಚಾಲುಕ್ಯ ವಂಶದ ೬ನೇ ವಿಕ್ರಮಾದಿತ್ಯನೆಂದು ಅಭಿಪ್ರಾಯ ಪಡಬಹುದು, ಈತನ ಕಾಲ ಕ್ರಿ.ಶ. ೧೧-೧೨ನೇ ಶತಮಾನ. ಈ ವಿಕ್ರಮಾದಿತ್ಯನ ಅಧಿಪತ್ಯಕ್ಕೆ ಆಳುವಖೇಡವು ಸೇರಿತ್ತೆಂಬುದಕ್ಕೆ ಅನುಮಾನವಿಲ್ಲ." **(ಬಾರ್ಕೂರು ಪು. ೨೦)**

ಸಿಂಹಾಸನ ಗುಡ್ಡೆಯ ಅರ್ಚಕರ ಪ್ರಕಾರ ಭೂಗತ ಸಿಂಹಾಸನದ ಮೇಲೆ ಕಟ್ಟೆಯನ್ನು ನಿರ್ಮಿಸಲಾಗಿದೆ. ಕಟ್ಟೆಗೆ ಅಭಿಮುಖವಾಗಿ ರಾಜ ರಾಜೇಶ್ವರಿ ಶಿಲ್ಪವನ್ನು ಪ್ರತಿಷ್ಠಾಪಿಸ ಲಾಗಿದೆ. ರಾಜ ರಾಜೇಶ್ವರಿಯ ಪಾದದ ಬಳಿ ಶ್ರೀ ಚಕ್ರ ಇದೆ. ಪಂಚಲಿಂಗೇಶ್ವರ ದೇವಾಲಯದಲ್ಲಿ ಇರುವಂತೆ ಇಲ್ಲಿಯೂ ತುಳುರಾಜ್ಯದವರಿಗೆ ಬ್ಳೂಳ್ಯ ಗೌರವ ನೀಡುವ ಪದ್ಧತಿ ಇದೆ. ವಾರ್ಷಿಕ ಜಾತ್ರೆಯಂದು ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಓಲಗ ಮಂಟಪದಲ್ಲಿ ದೇವರು ಓಲಗ ಆಗುವಾಗ ಮತ್ತು ನವರಾತ್ರಿಯ ದಶಮಿಯಂದು ಸಿಂಹಾಸನ ಗುಡ್ಡೆಯಲ್ಲಿ, ಚೌಟರು, ಬಂಗರು, ಅರಮನೆಯವರು ಬೀಡಿನವರು, ಗುತ್ತಿನವರು ಹೀಗೆ ಬೈಂದೂರಿನಿಂದ ಕಾಸರಗೋಡಿನವರೆಗೆ ಇರುವ ಪರಂಪರೆಯ ಗೌರವಸ್ಥರು ಇಲ್ಲಿಗೆ ಬಂದು ವೀಳ್ಯ ಗೌರವ ಪಡೆಯುವ ಪದ್ಧತಿ ಉಳಿದು ಬಂದಿದೆ. ಬಂದವರಿಗೆ ಊಳಿಗದವರು ಚಾಪೆ ಹಾಸಿ ಕೊಡಬೇಕು. ಬಾರ್ಕೂರಲ್ಲಿ ಯಾವುದೇ ಶುಭ ಕಾರ್ಯ ಆಗುವುದಿದ್ದರೆ ಇಲ್ಲಿಗೆ ತಾಂಬೂಲ







ಗೌರವ ನೀಡಿ ಕಾಣಿಗೆ ನೀಡುವ ಪದ್ಧತಿ ಇದೆ. (ತುಳುನಾಡಿನ ಬೀಡು ಮತ್ತು ಗ್ರಾಮ ಗುತ್ತು ಮತ್ತು ಸೀಮೆ ಗುತ್ತುಗಳ ಚಾವಡಿಗಳಿಗೂ ಆ ಊರಲ್ಲಿ ನಡೆಯುವ ಸಮಾರಂಭಗಳಲ್ಲಿ ಬೂಳ್ಯ ನೀಡುವ ಪದ್ಧತಿ ಈಗಲೂ ಉಳಿದು ಬಂದಿದೆ. ಮರಣ–ಸಾವು, ಭೂತದ ಕೋಲ–ಮುಂತಾದ ಎಲ್ಲಾ ಕಾರ್ಯಗಳಲ್ಲೂ ಗುತ್ತು ಮನೆಗೆ ಮೊದಲು ತಿಳಿಸಬೇಕು) ಈಗಲೂ ತುಳುನಾಡಿನಲ್ಲಿ ಇರುವ ಸಂಪ್ರದಾಯವನ್ನು ಇಲ್ಲಿಗೆ ಹೋಲಿಸಿದಾಗ ಸಿಂಹಾಸನ ಗುಡ್ಡೆಯಲ್ಲಿ ಹಿಂದೆ ಅರಮನೆ ಇದ್ದಿರಬಹುದು ಎಂಬ ಊಹೆಯನ್ನು ನಾವು ಮಾಡಬಹುದು.

ಬಾರ್ಕೂರು ಪಂಚಲಿಂಗೇಶ್ವರದ ಪ್ರಾಕಾರದಲ್ಲಿ ಸುಮಾರು ೩೦ಕ್ಕೂ ಮಿಕ್ಕು ಶಾಸನಗಳ ಸಂಗ್ರಹ ಇದೆ. ಪ್ರಾಕಾರದ ಹೊರಗೆ ೩ ವೀರಗಲ್ಲುಗಳು, ಮೂರು ಮಾಸ್ತಿ ಕಲ್ಲುಗಳು ಇವೆ. ದೇವಾಲಯದ ಮುಂದೆ ವಿಶಾಲವಾದ ಕೋಟೆ ಕೇರಿ ಕೆರೆ ಇದೆ.

"ಚಾರಿತ್ರಿಕ ಬಾರ್ಕೂರಿನಲ್ಲಿ ೩೬೫ ದೇಗುಲಗಳಿದ್ದುವೆಂದೂ ದಿನಂಪ್ರತಿ ಒಂದರಂತೆ ಒಂದೊಂದು ದೇವಾಲಯದಲ್ಲಿ ಉತ್ಸವ ನಡೆಯುತ್ತಿತ್ತೆಂದೂ ಪ್ರಚಲಿತವಾಗಿದೆ." (**ಗುರುರಾಜ ಭಟ್ಟ ಬಾರ್ಕೂರು ಪು. ೧೮**) ಇತಿಹಾಸ ಕಾಲದ ಬಾರ್ಕೂರು ಅರಸರು ದಿನಕ್ಕೊಂದು ದೇವಸ್ಥಾನಕ್ಕೆ ಹೋಗಿ ದರ್ಶನ ಪಡೆಯುತ್ತಿದ್ದರು ಎಂಬ ಪ್ರತೀತಿ ಈಗಲೂ ಇದೆ.

(ಕ್ಷೇತ್ರ ಕಾರ್ಯಕ್ಕೆ ನೆರವು ನೀಡಿದವರು : ಡಾ. ಸಮೀರ್ ಮಾಡ ಕಿನ್ನಿಗೋಳಿ. : ಉದಯ ದೇವಾಡಿಗ ಬಾರ್ಕೂರು ಪಂಚಲಿಂಗೇಶ್ವರ ದೇವಸ್ಥಾನ, ಮಾಹಿತಿದಾರರು : ಬಿ. ಮಂಜುನಾಥ ರಾವ್ ಆಡಳಿತ ಮೊಕ್ತೇಸರರು ಪಂಚಲಿಂಗೇಶ್ವರ ದೇವಸ್ಥಾನ ಬಾರ್ಕೂರು. ಹಂದಾಡಿ ಶಾಂತರಾಮ ಹೆಗ್ಗಡೆ ಅಧ್ಯಕ್ಷರು ಬಾರ್ಕೂರು ಪಂಚಲಿಂಗೇಶ್ವರ ಟ್ರಸ್ಟ್ ಗಣಪಯ್ಯ ಅಡಿಗ ಪ್ರಾಯ ೮೦ ವರುಷ. ಅರ್ಚಕರು ಸಿಂಹಾಸನ ಗುಡ್ಡೆ.)

## ಆಧಾರಸೂಚಿ

ಗುರುರಾಜ ಭಟ್ : **ಬಾರ್ಕೂರು** ೧೯೭೫, ಐ.ಬಿ.ಎಚ್., ಬೆಂಗಳೂರು.

P.Gururaja Bhatt : *Antiquities of South Kanara* 1969 -Kallianpura S.K.

ಅರುಣಕುಮಾರಿ ಬಿ.*

# ಶಿವಗಂಗೆಯ ವಿಷ್ಣು ದೇವಾಲಯ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿರುವ ಶಿವಗಂಗೆಯು ಒಂದು ಪ್ರಮುಖ ಶೈವಕ್ಷೇತ್ರವಾಗಿ ಪ್ರಾಮುಖ್ಯತೆ ಪಡೆದಿದೆ. ಇಲ್ಲಿ ಮೊದಲು ೬೪ ವೀರಶೈವ ಮಠಗಳಿದ್ದವೆಂದು ಹೇಳಲಾಗುತ್ತದೆ. ಇದರಲ್ಲಿ ಅನೇಕ ಮಠಗಳು ಶಾಸನಗಳಲ್ಲಿ, ದಾಖಲೆಗಳಲ್ಲಿ ಉಲ್ಲೇಖಗೊಂಡಿವೆ. ಕೆಲವು ಮಠಗಳ ಅವಶೇಷಗಳು ಅದರ ಬಗ್ಗೆ ಬೆಟ್ಟದ ಮಾಹಿತಿ ನೀಡುತ್ತವೆ. ಕೆಲವು ಮಠಗಳು ಇಂದಿಗೂ ಕಾರ್ಯನಿರ್ವಹಿಸುತ್ತಿವೆ. ಇಲ್ಲಿ ಬೆಟ್ಟದ ಉತ್ತರ ಮತ್ತು ಪೂರ್ವಭಾಗಕ್ಕೆ ಅನೇಕ ದೇವಾಲಯಗಳಿದ್ದುವು. ಅವೆಲ್ಲವೂ ಶೈವದೇವಾಲಯಗಳೇ. ಗಂಗಾಧರೇಶ್ವರ ಮತ್ತು ಹೊನ್ನಾದೇವಿ ಇಲ್ಲಿನ ಪ್ರಮುಖ ದೇವಾಲಯಗಳು.

ಶಿವಗಂಗೆಯಲ್ಲಿ ನಡೆಸಿದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಿರಿಪ್ರದಕ್ಷಿಣೆ ಮಾಡುವಾಗ ಬೆಟ್ಟದ ಉತ್ತರ ಭಾಗದಲ್ಲಿ ಒಂದು ಚಿಕ್ಕ ವಿಷ್ಣುದೇವಾಲಯ ಕಂಡುಬಂದಿದೆ. (ಇದರ ಬಗ್ಗೆ ಡಾ. ನಂಜುಂಡಸ್ವಾಮಿ ಮತ್ತು ಡಾ. ರಾಜಶೇಖರಪ್ಪರವರು ಶಿವಗಂಗೆಯಲ್ಲಿ ನಡೆದ ಸಮ್ಮೇಳನದ ಸಂದರ್ಭದಲ್ಲಿ ಈ ದೇವಾಲಯದ ಬಗ್ಗೆ ಮಾಹಿತಿ ನೀಡಿದ್ದರು.) ಈ ವಿಷ್ಣು ದೇವಾಲಯ ತುಂಬಾ ಚಿಕ್ಕದಾಗಿದ್ದು ಹೊರಗಡೆ ಮಂಟಪ ಇತ್ಯಾದಿ ಅಲಂಕಾರಗಳೇನು ಇಲ್ಲ. ಒಳಗಡೆ ಎಡಭಾಗಕ್ಕೆ ಒಂದು ಗುಂಡಿನಲ್ಲಿ ವಿಷ್ಣುಶಿಲ್ಪವಿದೆ. ಮತ್ತು ಮುಂದೆ ದ್ವಾರಪಾಲಕ ಶಿಲ್ಪಗಳಿವೆ. ಗುಂಡಿನಲ್ಲಿರುವ ವಿಷ್ಣುವಿನ ಶಿಲ್ಪ ೨ ಅಡಿ ಉದ್ದ, ಎಡಗೈ ಮತ್ತು ಬಲಗೈ ೧೮ ಇಂಚು (೧ ೧/೨ ಅಡಿ) ಉದ್ದ ಇವೆ. ಗುಂಡು ೩೧ ಇಂಚು ಉದ್ದ, ೨೨ ಇಂಚು ಅಗಲವಿದೆ. ದ್ವಾರಪಾಲಕ ಶಿಲ್ಪಗಳು ೨೦ ಇಂಚು ಉದ್ದ ಮತ್ತು ೩೩ ಇಂಚು ಅಗಲವನ್ನು ಹೊಂದಿವೆ. ಶಿಲ್ಪದ ೪ ಕೈಗಳಲ್ಲಿ ಬಲಗಡೆಯ ಮುಂಗೈನಲ್ಲಿ ವರದ ಹಸ್ತ ಹಿಂಭಾಗದಲ್ಲಿ ಶಂಖ ಹಾಗೂ ಎಡಗಡೆ ಮುಂಗೈ ಕಪಿಲಿಹಸ್ತ ಹಾಗೂ ಹಿಂಭಾಗ ಚಕ್ರವಿದೆ. ಕಿರೀಟ ಮುಕುಟವಿದೆ. ವೈಜಯಂತಿ ಹಾರ, ಕೇಯೂರ, ಪಾಣಿಪೀಠ ಇತ್ಯಾದಿಗಳೇನು ಇಲ್ಲ. ದೇವಾಲಯದ ಒಳಗೆ ವಿಷ್ಣುವಿನ ಶಿಲ್ಪದ ಮುಂಭಾಗ ದಲ್ಲಿ ನಾಗರಕಲ್ಲುಗಳಿವೆ. ದೇವಾಲಯದ ಮುಂದೆ ಬಸವ ಹಾಗೂ ಲಿಂಗಮುದ್ರೆ ಕಲ್ಲುಗಳಿವೆ.

ಈ ವಿಷ್ಣು ಶಿಲ್ಪವನ್ನು ಸ್ವರೂಪದಿಂದ ೧೭-೧೮ನೇ ಶತಮಾನದ್ದೆಂದು ಹೇಳಬಹುದು. ಈ ದೇವಾಲಯದ ಮುಂದೆ ಕಲ್ಯಾಣಿ ಇದ್ದು ಈಗ ಹಾಳಾಗಿದೆ. ಇದನ್ನು ಗಂಧಾವತಿ ತೀರ್ಥ ಎಂದು ಕರೆಯುತ್ತಾರೆ. ಇದರ ಆಸುಪಾಸಿನಲ್ಲಿ ಕಲ್ಯಾಣಿಗಳಿದ್ದು, ಇಲ್ಲಿ ಪಂಚತೀರ್ಥಗಳಿದ್ದವೆಂದು ಹೇಳಲಾಗುತ್ತದೆ. ಈ ದೇವಾಲಯಕ್ಕೆ ಯಾವುದೇ ಶಾಸನ ಅಥವಾ ಇತರ ಆಧಾರಗಳು ದೊರೆಯದೆ ಇರುವುದರಿಂದ ಇದರ ಬಗ್ಗೆ ಪೂರ್ಣ ಮಾಹಿತಿ ತಿಳಿಯುವುದಿಲ್ಲ. ಶಿವಗಂಗೆಯ ಪ್ರಮುಖ ಶೈವಕ್ಷೇತ್ರವಾಗಿದ್ದು ಇಲ್ಲಿರುವ ಬಹುತೇಕ ಎಲ್ಲಾ ದೇವಾಲಯಗಳು ಶೈವ ದೇವಾಲಯಗಳೇ ಇಂತಹ ಸ್ಥಳದಲ್ಲಿ ವಿಷ್ಣು ದೇವಾಲಯವಿರುವುದು ವಿಶೇಷವೆನಿಸುತ್ತದೆ. ಇಂತಹ ಕ್ಷೇತ್ರದಲ್ಲಿ ದೊರೆತಿರುವ ಒಂದು ಶಾಸನದಲ್ಲಿ ಮಾತ್ರ ವಿಷ್ಣು ದೇವಾಲಯದ ಉಲ್ಲೇಖವಿದ್ದರೂ ಅದು ಈ ದೇವಾಲಯವಲ್ಲ. (ಎ.ಕ. ನೆಲ, ಶಾ.ಸಂ. ೮೪) ಅದು ಹೊಯ್ಸಳರ ಕಾಲದ ಶಾಸನದಲ್ಲಿ ವಿಷ್ಣುವರ್ಧನನು ಶಿವಗಂಗೆಯ ಹತ್ತಿರವೇ ಇರುವ ಮಾಗಡಿ ತಾಲ್ಲೂಕಿಗೆ ಸೇರಿದ ಬಿಟ್ಟಸಂದ್ರ ಗ್ರಾಮದಲ್ಲಿ ಬ್ರಹ್ಮಸಮುದ್ರ ಮತ್ತು ವಿಷ್ಣು ದೇವಾಲಯಗಳನ್ನು ಮಾಡಿಸಿದ್ದನ್ನು ಪ್ರಸ್ತಾಪಿಸಿದೆ. ಅದು ವಿಷ್ಣುವರ್ಧನ ತನ್ನ ತಂದೆಯ ಹೆಸರಿನಲ್ಲಿ ಕಟ್ಟಿಸಿದ ಕೆರೆ (ಬ್ರಹ್ಮಸಮುದ್ರ) ಮತ್ತು ಬ್ರಹ್ಮೇಶ್ವರ ದೇವಾಲಯ.

ಹೀಗೆ ಶಿವಗಂಗೆಯಂತಹ ಪ್ರಮುಖ ಶೈವ ಕ್ಷೇತ್ರದಲ್ಲಿ ವಿಷ್ಣು ದೇವಾಲಯವಿದ್ದರೂ ಅದು ಪ್ರಾಮುಖ್ಯತೆ ಪಡೆಯಲಿಲ್ಲವೆಂದು ಹೇಳಬಹುದು. ಇದಕ್ಕೆ ಕಾರಣಗಳು :

೧) ಇಲ್ಲಿ ಶೈವಧರ್ಮದ ಪ್ರಾಮುಖ್ಯತೆ ಹೆಚ್ಚಾಗಿ ದೇವಾಲಯ ಹಾಳಾಗಿರಬಹುದು.

೨) ಈ ದೇವಾಲಯ ಇತರ ಶೈವದೇವಾಲಯಗಳಂತೆ ಹೆಚ್ಚು ಜನಸಂಪರ್ಕ ಇರುವ ಕಡೆ ಇಲ್ಲದಿರುವುದು.

೩) ಈ ದೇವಾಲಯವು ತುಂಬಾ ಚಿಕ್ಕದಾಗಿದ್ದು ಬೆಟ್ಟದ ಒಂದು ಮೂಲೆಯಲ್ಲಿದೆ. ಹಾಗೂ ದೇವಾಲಯದ ಒಳಗೆ ನೇರವಾಗಿ ಶಿಲ್ಪವನ್ನು ಪ್ರತಿಷ್ಠಾಪಿಸಿಲ್ಲ. ಮುಖ್ಯದ್ವಾರದ ಎಡಭಾಗಕ್ಕೆ ಗೋಡೆಯಲ್ಲಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಇದರಿಂದ ಈ ದೇವಾಲಯವನ್ನು ಕಡೆಗಣಿಸಿರಬಹುದೆಂದು ಹೇಳಬಹುದು.

* # ೪೭೭/೧, ೪ನೆಯ ಅಡ್ಡರಸ್ತೆ, ಬಸವನಪುರ ಮುಖ್ಯರಸ್ತೆ, ದೇವಸಂದ್ರ, ಕೆ.ಆರ್. ಪುರಂ, ಬೆಂಗಳೂರು.

ರಾಜೀವಬಾಬು*

# ಕಾಡನೂರು ಚೆನ್ನಕೇಶವ ದೇವಾಲಯ

ಕಾಡನೂರು ಗ್ರಾಮವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲೂಕಿನ ಮಧುರೆ ಹೋಬಳಿಗೆ ಸೇರಿದ ಗ್ರಾಮ. ಈ ಗ್ರಾಮವು ಮಧುರೆ ಕೆರೆಯಿಂದ ೪ ಕಿ.ಮಿ. ದೂರದಲ್ಲಿದೆ. ದೊಡ್ಡಬಳ್ಳಾಪುರದಿಂದ ೮ ಕಿ.ಮಿ. ಮತ್ತು ಬೆಂಗಳೂರಿನಿಂದ ೫೦ ಕಿ.ಮಿ. ದೂರದಲ್ಲಿದೆ. ಇಲ್ಲಿ ಪುರಾತನವಾದ ಚೆನ್ನಕೇಶವ ದೇವಾಲಯವಿದೆ.

ಈ ದೇವಾಲಯವು ಚೋಳರ ನಿರ್ಮಾಣವೆಂದು ಸ್ಥಳೀಯರ ಹೇಳಿಕೆ. ಆದರೆ ವಾಸ್ತು ಲಕ್ಷಣಗಳ ಅಧ್ಯಯನದಿಂದಲೂ ಕಾಲಮಾನೋಕ್ತ ಶಾಸನವಿರುವುದ ರಿಂದಲು ಇದು ವಿಜಯನಗರ ಕಾಲಕ್ಕೆ ಸೇರಿದ್ದೆಂದು ದೃಢಪಡಿಸಬಹುದು. ಇಲ್ಲಿಯ ಶಾಸನದಲ್ಲಿ ಶಾಲಿವಾಹನ ಶಕ ೧೪೫೩ ಖರ ಸಂವತ್ಸರದ ಮಾರ್ಗಶಿರ ಶುದ್ಧ ೧೨ ಸೋಮವಾರವೆಂದು ಉಕ್ತವಾಗಿದೆ. ಇದು ಕ್ರಿ.ಶ. ೧೫೩೧, ೧೪ ಕ್ಕೆ ಸರಿಹೊಂದುತ್ತದೆ.[೧] ಇದಕ್ಕೆ ಪೋಷಕವಾಗಿ ಈ ದೇವಾಲಯದ ಹಲವಾರು ಭಾಗಗಳು ೧೬ನೇ ಶತಮಾನದ ವಾಸ್ತು ಲಕ್ಷಣಗಳನ್ನು ಹೊಂದಿದೆ. ಹೀಗಾಗಿ ಈ ದೇವಾಲಯವು ವಿಜಯನಗರ ಕಾಲದ್ದೆಂದೇ ಹೇಳಬಹುದು. ಈ ದೇವಾಲಯದ ಎದುರಾಗಿ ನಿಂತಿರುವ ಶಾಸನವು ವಿಜಯನಗರದ ಅರಸ ಅಚ್ಯುತರಾಯರ ಕಾಲಕ್ಕೆ ಸೇರಿದ್ದು.

**ತಲವಿನ್ಯಾಸ :** ಪೂರ್ವಾಭಿಮುಖವಾಗಿರುವ ಈ ದೇವಾಲಯವು ಸ್ವಲ್ಪ ಎತ್ತರದ ಪ್ರದೇಶದಲ್ಲಿ ನಿರ್ಮಿತವಾಗಿದೆ. ಈ ದೇವಾಲಯವು ತಲವಿನ್ಯಾಸದಲ್ಲಿ ಗರ್ಭಗುಡಿ, ಅಂತರಾಳ, ಅರ್ಧಮಂಟಪ, ನವರಂಗ ಮತ್ತು ಮಹಾಮಂಟಪವನ್ನು ಹೊಂದಿದೆ (ಚಿತ್ರ.೦೧). ಗರ್ಭಗೃಹದಲ್ಲಿ ಚೆನ್ನಕೇಶವ ದೇವರ ಸ್ಥಾನಕ ಚತುರ್ಭುಜ ಮೂರ್ತಿಯನ್ನು ಕಾಣಬಹುದು. ಮೂರ್ತಿಯ ಮೇಲಿನಕೈಗಳಲ್ಲಿ ಶಂಖ ಚಕ್ರಗಳನ್ನು ಹಿಡಿದಿದ್ದು ಬಲಗೈ ಜ್ಞಾನಮುದ್ರೆಯನ್ನು ಪ್ರದರ್ಶಿಸುತ್ತದೆ ಮತ್ತು ಎಡಗೈ ಕಟ್ಯವಲಂಬಿತಹಸ್ತವಾಗಿದೆ. ಅಂತರಾಳ ಮತ್ತು ಅರ್ಧ ಮಂಡಪಗಳ ನಂತರ ನಾಲ್ಕು ಕಂಬಗಳನ್ನು ಹೊಂದಿರುವ ನವರಂಗವಿರುವುದು. ಮುಂದಿನ ಮಹಾಮಂಟಪದಲ್ಲಿ ಎರಡು ಭದ್ರಕ ಸ್ತಂಭಗಳು ಸೇರಿ ೩೬ ಕಂಬಗಳನ್ನು ಆರು ಸಾಲುಗಳಲ್ಲಿ ನಿರ್ಮಿಸಲಾಗಿದೆ. ಈ ಮಹಾಮಂಟಪಕ್ಕೆ ಎದುರಾಗಿ ಬಲಿಪೀಠವಿದೆ. ಇದರ ಮುಂದೆ ದೊಡ್ಡ ಶಾಸನವಿದ್ದು ನಂತರ ದೀಪಸ್ತಂಭವನ್ನು ನಿರ್ಮಿಸಲಾಗಿದೆ. ಈ ದೀಪಸ್ತಂಭದ ಇಕ್ಕೆಲಗಳಲ್ಲು ಎರಡು ಸ್ತಂಭಗಳ ಭಗ್ನಾವಶೇಷಗಳನ್ನು ನೆಡಲಾಗಿದೆ. ಇತ್ತೀಚಿನ ದಿನಗಳಲ್ಲಿ ನವೀಕರಿಸಲ್ಪಟ್ಟ ಕಾರಣ ಈ ದೇವಾಲಯ ತನ್ನ ಮೂಲ ಸ್ವರೂಪವನ್ನು ಕಳೆದು ಕೊಂಡಿದೆ. ಈ ನವೀಕರಣ ಸಂದರ್ಭದಲ್ಲಿ ಕೇವಲ ಕಂಬ ಗಳನ್ನು ಮಾತ್ರ ಉಳಿಸಿಕೊಂಡು ಉಳಿದ ಎಲ್ಲಾ ಭಾಗಗಳನ್ನು ಆಧುನಿಕ ಸಲಕರಣೆಗಳ ಉಪಯೋಗದಿಂದ ನಿರ್ಮಿಸಲಾಗಿದೆ. ಹೀಗಾಗಿ ಗರ್ಭಗುಡಿಯ ಭಿತ್ತಿಯ ಹೊರ ಮುಖಗಳಲ್ಲಿ ಸಿಮೆಂಟಿನಿಂದ ಮಾಡಲ್ಪಟ್ಟ ಶಿಲ್ಪಗಳಿದ್ದು ಅವುಗಳಿಗೆ ತೈಲವರ್ಣಗಳಿಂದ ಅಲಂಕರಿಸಲಾಗಿದೆ. ಆದುದರಿಂದ ಈ ಭಾಗಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿಲ್ಲ. ಹೀಗಾಗಿ ನವೀಕೃತ ಭಾಗಗಳ ಪ್ರಸ್ತಾಪವನ್ನು ಈ ಪ್ರಬಂಧದಲ್ಲಿ ಮಾಡಿಲ್ಲ.

## ಏರುನೋಟ

**ಅಧಿಷ್ಠಾನ :** ನವರಂಗದ ಅಧಿಷ್ಠಾನವು ಸಾಧಾರಣ ಮಂಚಬಂಧ ರೀತಿ ಕಾಣುವುದರಿಂದ ಮೂಲದೇವಾಲಯಕ್ಕೆ ಇದೇ ರೀತಿಯ ಅಧಿಷ್ಠಾನವಿದ್ದಿರಬಹುದೆಂದು ಊಹಿಸ ಬಹುದು. ದೇವಾಲಯದ ಮುಖಮಂಟಪದ ಅಧಿಷ್ಠಾನವು ನವೀಕರಣ ಸಂದರ್ಭದಲ್ಲಿ ಮುಚ್ಚಿಹೋಗಿದೆ. ಗರ್ಭಗೃಹದ ಅಧಿಷ್ಠಾನವೂ ಸಹ ತನ್ನ ಮೂಲಸ್ವರೂಪವನ್ನು ಕಳೆದು ಕೊಂಡಿದೆ. ಅಧಿಷ್ಠಾನದ ಮೇಲಿನ ಭಿತ್ತಿ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ತೂಪಿಗಳೂ ಸಹ ತಮ್ಮ ಸ್ವರೂಪವನ್ನು ಕಳೆದುಕೊಂಡಿರುವುದರಿಂದ ಯಾವುದೇ ಪ್ರಾಚೀನ ಲಕ್ಷಣ ಗಳನ್ನು ವಿವರಿಸುವುದ ಕಷ್ಟ.

**ಕಂಬಗಳು :** ಪ್ರಾಚೀನತೆಯನ್ನು ಸಾಕಷ್ಟು ಕಳೆದುಕೊಂಡಿದ್ದರೂ, ಈ ದೇವಾಲಯವು ಮೂಲ ಸ್ತಂಭಗಳನ್ನು ಹಾಗೇ ಉಳಿಸಿಕೊಂಡಿದೆ. ಈ ದೇವಾಲಯದಲ್ಲಿ ನವರಂಗದಲ್ಲಿ ನಾಲ್ಕು ಮತ್ತು ಮಹಾ ಮಂಟಪದಲ್ಲಿ ಭದ್ರಕಸ್ತಂಭಗಳು ಸೇರಿದಂತೆ ೩೬ ಸ್ತಂಭಗಳಿವೆ. ಇವುಗಳೆಲ್ಲಾ

* # ೨೪, 'ನೇಸರ', ೪ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ಮುನಿಕೊಂಡಪ್ಪ ಬಡಾವಣೆ, ಬಾಗಲಗುಂಟೆ, ಬೆಂಗಳೂರು.

ಚಿತ್ರಖಂಡ ವರ್ಗಕ್ಕೆ ಸೇರಿದವು. ಈ ಸ್ತಂಭಗಳ ಚೌಕಾಕಾರದ ಪಟ್ಟಿಕಾ ಭಾಗದಲ್ಲಿ ಉಬ್ಬುಶಿಲ್ಪಗಳ ಕೆತ್ತನೆಯನ್ನು ಕಾಣಬಹುದು. ಸಾಮಾನ್ಯವಾಗಿ ಎಲ್ಲೆಡೆ ಕಾಣುವಂತ ಪ್ರಾಣಿ ಪಕ್ಷಿ ವೃಕ್ಷ ಪುಷ್ಪ ಮತ್ತು ದೇವತೆಗಳ ಬಿಂಬಗಳನ್ನು ಕೆತ್ತಲಾಗಿದೆ. ಇವುಗಳೊಂದಿಗೆ ಕಥಾನಕ ಮತ್ತು ದೊಂಬರೂ ಮುಂತಾದ ಉಬ್ಬು ಶಿಲ್ಪಗಳನ್ನು ಕಾಣಬಹುದು. ಕೆಲವು ನಮ್ಮ ಗಮನವನ್ನು ಸೆಳೆಯುತ್ತವೆ.











ನವರಂಗದ ಒಂದು ಸ್ತಂಭದಲ್ಲಿ ಮಧ್ಯದ ಪಟ್ಟಿಕೆಯಲ್ಲಿ ತ್ರಿವಿಕ್ರಮನ ಶಿಲ್ಪವನ್ನು ಕೆತ್ತಿದ್ದು ಇದೇ ಶಿಲ್ಪದ ಭಾಗವಾದ ಬ್ರಹ್ಮನ ಶಿಲ್ಪವನ್ನು ಮೇಲಿನ ಪಟ್ಟಿಯಲ್ಲಿ ಕೆತ್ತಿದ್ದಾರೆ.(ಇಲ್ಲಿ ಬ್ರಹ್ಮನು ತ್ರಿವಿಕ್ರಮನ ಕಾಲುಗಳನ್ನು ತೊಳೆಯುತ್ತಿದ್ದಾನೆ. ಇಲ್ಲಿರುವ ಮತ್ತೊಂದು ಕಥಾನಕ ಶಿಲ್ಪವೆಂದರೆ ಕುಚೇಲ ಉಪಾಖ್ಯಾನ ಇಲ್ಲಿ ಕುಚೇಲ ನನ್ನು (ಸುಧಾಮನನ್ನು) ಬಡ ಬ್ರಾಹ್ಮಣನ ರೀತಿ, ಅವಲಕ್ಕಿಯ ಗಂಟಿನೊಂದಿಗೆ ಚಿತ್ರಿಸಿಲಾಗಿದೆ. ಮತ್ತೊಂದು ಪಟ್ಟಿಕೆಯಲ್ಲಿ ನರಸಿಂಹನು ಹಿರಣ್ಯಕಶ್ಯಪುನನ್ನು ಸಂಹಾರ ಮಾಡುತ್ತಿರುವ ಉಬ್ಬುಶಿಲ್ಪವಿದೆ. ಇದರೊಂದಿಗೆ ನಾಗಶಿಲ್ಪಗಳಿವೆ.

ಮಹಾಮಂಟಪದ ಮುಂಭಾಗದ ಕಂಬಗಳೂ ಮತ್ತು ನಾಲ್ಕು ಮೂಲೆಗಳಲ್ಲಿ ಇರುವ ಕಂಬಗಳು ಸಂಯುಕ್ತ ಸ್ತಂಭ ಗಳಲ್ಲದಿದ್ದರು ಅದನ್ನು ಹೋಲುವಂತಹ ಅಲಂಕರಣವನ್ನು ಹೊಂದಿವೆ. ಭಿತ್ತಿಯಲ್ಲಿ ಕೆತ್ತಲಾಗುವ ಕುಂಭಪಂಜರಗಳನ್ನು ಸ್ತಂಭದ ಅಲಂಕರಣಕ್ಕೆ ಬಳಸಿರುವುದನ್ನು ಕಾಣಬಹುದು. ಇವುಗಳನ್ನು ಸಿಂಹಗಳು ಮತ್ತು ಭಾರವಾಹಕರು ಹೊತ್ತಿರು ವಂತೆ ತೋರಲಾಗಿದೆ. ಈ ಕಂಬಗಳೆಲ್ಲ ಪುಷ್ಪಪೋತಿಕೆಗಳನ್ನು ಹೊಂದಿದ್ದು, ಇದರ ಬಾಗಿದ ತಾವರೆಯ ಮುಕುಳಗಳು ಎರಡು ಸಾಲಿನ ದಳಗಳನ್ನು ಹೊಂದಿದೆ. ಸ್ತಂಭಗಳ ಮೇಲೆ ವಾಸ್ತು ಅಂಗಗಳಲ್ಲದೇ ಚಿಕಣೀ ಮಾದರಿಯ ದೇವಾಲಯ ಗಳನ್ನು ಕೆತ್ತಲಾಗಿದೆ. ಈ ದೇವಾಲಯಗಳಲ್ಲೂ ಷಡ್ವರ್ಗ ಗಳನ್ನು ತೋರಿರುವುದನ್ನು ಗಮನಿಸಬಹುದು.

ಈ ದೇವಾಲಯದ ಗರ್ಭಗೃಹ, ಅಂತರಾಳ ಮತ್ತು ಗೂಢಮಂಟಪಗಳ ದ್ವಾರಬಂಧಗಳು ತ್ರಿಶಾಖಾ ವರ್ಗಕ್ಕೆ ಸೇರಿದ್ದು ಬಾಹ್ಯಪತ್ರ ಮೊದಲಾದ ಸರಳ ಅಲಂಕರಣವನ್ನು ಹೊಂದಿದೆ. ಗರ್ಭಗೃಹದ ದ್ವಾರಬಂಧದ ಪೇದ್ಯಗಳು ಪೂರ್ಣಕುಂಭದ ಅಲಂಕರಣವಿದ್ದು. ಲಲಾಟದಲ್ಲಿ ಪದ್ಮ ಪದಕದ ಅಲಂಕರಣ ಹೊಂದಿದೆ. ಈ ದೇವಾಲಯದಲ್ಲಿ ಕುತೂಹಲಕಾರಿಯಾದ ಅಂಶವೊಂದಿದೆ. ಅಂತರಾಳದ ದ್ವಾರಬಂಧದ ಎರಡು ಕಡೆ ಕೆಳಗೆ ತ್ರಿಶೂಲ ಮತ್ತು ಡಮರು ಹಿಡಿದಿರುವ ಶೈವದ್ವಾರಪಾಲಕರಿದ್ದು ಇದರ ಲಲಾಟದಲ್ಲಿ ಗಜಲಕ್ಷ್ಮಿಯನ್ನು ಕಾಣಬಹುದು. ನಂತರ ಗೂಢಮಂಟಪದ ದ್ವಾರಬಂಧದ ಪೇದ್ಯದಲ್ಲಿ ಶಂಖ, ಚಕ್ರ ಹಿಡಿದ ವೈಷ್ಣವ ದ್ವಾರಪಾಲಕರು ಇದ್ದಾರೆ. ಇದರ ಲಲಾಟದಲ್ಲಿ ಕೀರ್ತಿ ಮುಖವನ್ನು ಕೆತ್ತಲಾಗಿದೆ. ಇದನ್ನು ಗಮನಿಸಿದಾಗ ಈ ದೇವಾಲಯವು ಶಿವ ಮತ್ತು ವಿಷ್ಣು ಇಬ್ಬರಿಗೂ ಸೇರಿದಂತೆ ನಿರ್ಮಿಸಲ್ಪಟ್ಟಿರಬಹುದು ಎನ್ನಿಸುತ್ತದೆ. ಗ್ಯಾಸೆಟಿಯರ್‌ನಲ್ಲಿ ಗೂಢಮಂಟಪದ ಒಳಭಾಗದಲ್ಲಿ ಗಂಗರ ಶೈಲಿಯ ಶಿವನ ಶಿಲ್ಪವು ಇದೆಯೆಂದು ಉಲ್ಲೇಖಿಸಿಲಾಗಿದೆ.[೨] ಪ್ರಸ್ತುತ ಈ ಶಿಲ್ಪವು ಈಗ ಗೂಢಮಂಟಪದ ದ್ವಾರದ ಮುಂಭಾಗದಲ್ಲಿರುವ ಗೋಡೆಯಲ್ಲಿ ಇದೊಂದು ದ್ವಿಭುಜ ಮೂರ್ತಿ.

**ವಿತಾನ :** ಗರ್ಭಗೃಹ, ಅಂತರಾಳ ಮತ್ತು ಗೂಢಮಂಟಪದ ವಿತಾನಗಳು ನಾಭಿಚ್ಛಂಧ ವರ್ಗಕ್ಕೆ ಸೇರಿದ್ದಾಗಿದೆ. ಗೂಢ ಮಂಟಪದ ವಿತಾನದಲ್ಲಿ ಮಧ್ಯಭಾಗದ ಪದ್ಮವನ್ನು ಆಕರ್ಷಕ ವಾಗಿ ಕೆತ್ತಲಾಗಿದೆ. ಮಹಾಮಂಟಪದ ವಿತಾನವು ಸಮತಟ್ಟಾಗಿದ್ದು ಅಲಂಕರಣ ಚಿತ್ರಗಳನ್ನು ಹೊಂದಿವೆ. ಕೊನೆಯಂಕಣದಲ್ಲಿ ಹಾವನ್ನು ಕೆತ್ತಲಾಗಿದೆ ನಂತರ ಅಕ್ಕಪಕ್ಕ ಅಂಕಣದಲ್ಲಿ ಕೂರ್ಮ, ಮೀನುಗಳನ್ನು ಕೆತ್ತಲಾಗಿದೆ.

## ಉಪಸಂಹಾರ

ಒಟ್ಟಾರೆ ಹೇಳಬೇಕೆಂದರೆ ಈ ದೇವಾಲಯವು ೧೬ನೇ ಶತಮಾನದ, ವಿಜಯನಗರ ಕಾಲದ ನಿರ್ಮಾಣಕ್ಕೆ ಉತ್ತಮ ಉದಾಹರಣೆ. ಇದಕ್ಕೆ ನಿದರ್ಶನ ತಳವಿನ್ಯಾಸದಲ್ಲಿ ವಿಜಯನಗರ ವಾಸ್ತುವಿನ ಮುಖ್ಯ ಲಕ್ಷಣವಾದ ತೆರೆದ ಮಹಾಮಂಟಪದ ಬಳಕೆ. ಈ ದೇವಾಲಯದಲ್ಲಿರುವ ಕಂಬ ಗಳು ಸಹ ವಿಜಯನಗರ ಕಾಲದಲ್ಲಿ ಹೆಚ್ಚು ಉಪಯೋಗಿಸ ಲ್ಪಟ್ಟ ಚಿತ್ರಖಂಡ ಕಂಬಗಳು. ಇದಕ್ಕೆ ನೀಡಿರುವ ಪುಷ್ಪಪೋತಿಕೆ ಗಳೂ ಸಹ ಈ ಅಭಿಪ್ರಾಯವನ್ನು ಪೋಷಿಸುತ್ತದೆ. ವಿಷಾದನೀಯವೆಂದರೆ ಸಾಮಾನ್ಯ ಜನರಲ್ಲಿ ಐತಿಹಾಸಿಕ ಪ್ರಜ್ಞೆಯ ಕೊರತೆಯಿರುವುದರಿಂದ ಇದು ತನ್ನ ಮೂಲ ಸ್ವರೂಪವನ್ನು ಕಳೆದುಕೊಂಡಿದೆ. ತೈಲವರ್ಣಗಳ ಬಳಕೆಯಿಂದ ಸ್ತಂಭಗಳ ಮೇಲಿನ ಉಬ್ಬು ಶಿಲ್ಪಗಳು ಅಸ್ಪಷ್ಟವಾಗಿವೆ. ಇಡೀ ದೇವಾಲಯ ತನ್ನ ಮೂಲ ಸ್ವರೂಪವನ್ನು ಬಹಳಷ್ಟು ಕಳೆದು ಕೊಂಡಿದೆ.

(ಈ ಲೇಖನವನ್ನು ಸಿದ್ಧಪಡಿಸಲು ನನಗೆ ನೆರವಾಗಿ ಮಾರ್ಗದರ್ಶನ ವಿತ್ತ ನನ್ನ ಗುರುಗಳಾದ ಡಾ. ಟಿ.ವಿ ನಾಗರಾಜ ರವರು ಮತ್ತು ಡಾ. ಜಿ ಮನೋಜ್ ಇವರುಗಳಿಗೆ ನಾನು ಆಭಾರಿಯಾಗಿದ್ದೇನೆ.)

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು

೧. *Epigraphia carnatica,* Rice. B.L. 1898.
೨. *Bangalore Rural Gazetteer,* Pg. no. 823.

ಲಿಂಗರಾಜು*

# ಕಿಕ್ಕೇರಿಯ ಇತಿಹಾಸ ಮತ್ತು ದೇವಾಲಯಗಳು

**ಪೀಠಿಕೆ:** ಮಂಡ್ಯ ಜಿಲ್ಲೆ ಕರ್ನಾಟಕ ರಾಜ್ಯದ ದಕ್ಷಿಣ ಭಾಗದ ಮಧ್ಯದಲ್ಲಿದೆ. ಮೈಸೂರು ಜಿಲ್ಲೆಗೆ ಸೇರಿದ್ದ ಮಂಡ್ಯ ೧೯೩೯ ರ ಜುಲೈ ೧ ರಂದು ಸ್ವತಂತ್ರ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿತು. ಜಿಲ್ಲೆಯ ಒಟ್ಟು ವಿಸ್ತೀರ್ಣ ೪೯೬೧ ಚ.ಕಿ.ಮೀ ಸಮುದ್ರ ಮಟ್ಟಕ್ಕಿಂತ ೭೬೨ ರಿಂದ ೯೧೪ ಮೀಟರ್ ಎತ್ತರದಲ್ಲಿದೆ. ಜಿಲ್ಲೆಯಲ್ಲಿ ಒಟ್ಟು ಏಳು ತಾಲ್ಲೂಕುಗಳಿದ್ದು ಇವುಗಳಲ್ಲಿ ಕೆ.ಆರ್. ಪೇಟೆ. ತಾಲ್ಲೂಕು ಸಹ ಒಂದಾಗಿದೆ. ಇಲ್ಲಿನ ಕಿಕ್ಕೇರಿಯು ಐತಿಹಾಸಿಕ ಸ್ಥಳವಾಗಿದ್ದು, ಕರ್ನಾಟಕ ಇತಿಹಾಸದಲ್ಲಿ ಮಹತ್ವ ನೀಡುವುದಕ್ಕೆ ಸಂಬಂಧಿಸಿದ ಅರ್ಹವಾದ ಎಲ್ಲಾ ಅಂಶಗಳನ್ನು ಈ ಸ್ಥಳ ಒಳಗೊಂಡಿದೆ.

ಮಂಡ್ಯ ಜಿಲ್ಲೆಯಲ್ಲಿ ಅತ್ಯಂತ ಹಿಂದುಳಿದಿರುವ ತಾಲ್ಲೂಕು ಎನಿಸಿಕೊಂಡಿದ್ದರೂ ಸಾಂಸ್ಕೃತಿಕವಾಗಿ ಶ್ರೀಮಂತಿಕೆಯನ್ನು ಹೊಂದಿರುವ ಕೆ.ಆರ್.ಪೇಟೆ ತಾಲ್ಲೂಕು ಜಿಲ್ಲಾ ಕೇಂದ್ರವಾದ ಮಂಡ್ಯದಿಂದ ಸುಮಾರು ೬೦ ಕಿ.ಮೀ ದೂರದಲ್ಲಿದೆ. ಕೃಷ್ಣರಾಜಪೇಟೆಯ ಪಶ್ಚಿಮ ಭಾಗದಲ್ಲಿ ಕಾವೇರಿಯ ಉಪನದಿಯಾದ ಹೇಮಾವತಿ ಹರಿದು ಇದೇ ತಾಲ್ಲೂಕಿನ ಸಂಗಮದಲ್ಲಿ ಕಾವೇರಿಯಲ್ಲಿ ಲೀನವಾಗುತ್ತದೆ[೧]. ಕ್ರಿ.ಶ ೧೮೯೧ರವರೆಗೂ ಈ ಪ್ರದೇಶಕ್ಕೆ 'ಅತ್ತಿಗುಪ್ಪೆ' ಎಂದು ಕರೆಯುತ್ತಿದ್ದರು. ಅಂದು ಈ ಪ್ರದೇಶ ಹಾಸನ ಜಿಲ್ಲೆಗೆ ಸೇರಿತ್ತು ಈ ಪ್ರದೇಶಕ್ಕೆ 'ಅತ್ತಿಗುಪ್ಪೆ'ಎಂದು ಹೆಸರು ಬರಲು ಕಾರಣ ಹಿಂದೆ ವಾಹನಗಳ ಸೌಕರ್ಯಗಳಿಲ್ಲದಿದ್ದ ಸಂದರ್ಭ ದಲ್ಲಿ ಹೇರಿನ ಬಂಡಿಯ ಮೂಲಕ ಅರಸೀಕೆರೆಯಿಂದ ಮೈಸೂರಿಗೆ ಹತ್ತಿಯನ್ನು ಸಾಗಿಸುವವರು ಇಲ್ಲಿ ಬೀಡು ಬಿಡುತ್ತಿದ್ದರಂತೆ. ಆದ್ದರಿಂದ ಈ ಊರಿಗೆ ಹತ್ತಿಗುಪ್ಪೆ>ಅತ್ತಿಗುಪ್ಪೆ ಎಂದು ಹೆಸರು ಬಂದಿತ್ತೆಂದು ತಿಳಿದುಬರುತ್ತದೆ[೨]. ಕ್ರಿ.ಶ. ೧೮೯೧ರಲ್ಲಿ ಆಳ್ವಿಕೆ ನಡೆಸುತ್ತಿದ್ದ ಮೈಸೂರಿನ ಒಡೆಯರು ಈ ಪ್ರದೇಶಕ್ಕೆ ಕೃಷ್ಣರಾಜಪೇಟೆ ಎಂದು ನಾಮಕರಣ ಮಾಡಿ ಮೈಸೂರು ಜಿಲ್ಲೆಗೆ ವರ್ಗಾಯಿಸಿದರು.

ಕ್ರಿ.ಶ. ೧೯೩೯ರಲ್ಲಿ ಮೈಸೂರು ಜಿಲ್ಲೆಯನ್ನು ವಿಭಜಿಸಿ ಹೊಸದಾಗಿ ಮಂಡ್ಯ ಜಿಲ್ಲೆ ಅಸ್ತಿತ್ವಕ್ಕೆ ತಂದಾಗ ಕೃಷ್ಣರಾಜಪೇಟೆ ಮಂಡ್ಯ ಜಿಲ್ಲೆಗೆ ಸೇರ್ಪಡೆಯಾಯಿತು. ಆಡಳಿತಾತ್ಮಕವಾಗಿ ಪಾಂಡವಪುರ ಉಪವಿಭಾಗಕ್ಕೆ ಒಳಪಟ್ಟಿದೆ. ಈ ತಾಲ್ಲೂಕಿನ ಒಟ್ಟು ವಿಸ್ತೀರ್ಣ ೯೦೩ ಚ.ಕಿ.ಮೀ. ಈ ತಾಲ್ಲೂಕಿನ ಈಶಾನ್ಯ, ಆಗ್ನೇಯ ಹಾಗೂ ಪೂರ್ವದಲ್ಲಿ ನಾಗಮಂಗಲ ಮತ್ತು ಪಾಂಡವಪುರ ತಾಲ್ಲೂಕುಗಳು ದಕ್ಷಿಣ ಹಾಗೂ ನೈರುತ್ಯದಲ್ಲಿ ಮೈಸೂರು ಜಿಲ್ಲೆ ಉತ್ತರ ಹಾಗೂ ವಾಯುವ್ಯ ದಿಕ್ಕಿನಲ್ಲಿ ಹಾಸನ ಜಿಲ್ಲೆಗಳಿಂದ ಸುತ್ತುವರಿದಿದೆ[೩]. ಈ ತಾಲ್ಲೂಕಿನಲ್ಲಿ ಆರು ಹೋಬಳಿಗಳಿದ್ದು ೩೧೭ ಗ್ರಾಮಗಳಿವೆ. ಕೃಷ್ಣರಾಜಪೇಟೆ, ಅಕ್ಕಿಹೆಬ್ಬಾಳು, ಶೀಳನೆರೆ, ಬೂಕನಕೆರೆ, ಸಂತೆಬಾಚಹಳ್ಳಿ, ಕಿಕ್ಕೇರಿ ಹೋಬಳಿ ಕೇಂದ್ರಗಳಾಗಿವೆ[೪]. ಕೆ.ಆರ್. ಪೇಟೆ ತಾಲ್ಲೂಕು ಹೊಯ್ಸಳರ ಕಾಲದ ದೇವಾಲಯಗಳಿಗೆ ಹಾಗೂ ಜೈನಬಸದಿಗಳಿಗೆ ಪ್ರಸಿದ್ದವಾಗಿದೆ. ಹೊಸಹೊಳಲು, ಗೋವಿಂದನಹಳ್ಳಿ, ಅಗ್ರಹಾರಬಾಚಹಳ್ಳಿ, ಆಘಲಯ, ತೊಣಚಿ, ತೆಂಗಿನಘಟ್ಟ, ಸಿಂಧಘಟ್ಟ, ಕಿಕ್ಕೇರಿ ಮೊದಲಾದ ಕಡೆಗಳಲ್ಲಿ ಹೊಯ್ಸಳರ ಕಾಲದ ನೂರಾರು ದೇವಾಲಯಗಳನ್ನು ಕಾಣಬಹುದು[೫]. ಈ ಪ್ರದೇಶಗಳಲ್ಲಿ ಪ್ರಮುಖವಾದ ಕಿಕ್ಕೇರಿ ತನ್ನದೆ ಆದ ಇತಿಹಾಸ ಮತ್ತು ಸಂಸ್ಕೃತಿಯನ್ನೊಳಗೊಂಡಿದ್ದು ಇತಿಹಾಸ ಆಸಕ್ತರಿಗೆ ಅನೇಕ ಐತಿಹಾಸಿಕ ಸಂಗತಿಗಳ ಕೇಂದ್ರವಾಗಿ ಗಮನ ಸೆಳೆಯುತ್ತದೆ.

## ಕಿಕ್ಕೇರಿಯ ಐತಿಹಾಸಿಕ ಹಿನ್ನೆಲೆ

ತಾಲ್ಲೂಕು ಕೇಂದ್ರವಾದ ಕೆ.ಆರ್. ಪೇಟೆಯಿಂದ ೧೫ ಕಿ.ಮೀ ವಾಯುವ್ಯಕ್ಕಿರುವ ಹೋಬಳಿ ಕೇಂದ್ರ ಕ್ರಿ.ಶ ೧೮೮೦ರವರೆಗೂ ಕಿಕ್ಕೇರಿಯೇ ಈ ಪ್ರದೇಶದ ತಾಲ್ಲೂಕು ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ[೬]. ಹೊಯ್ಸಳರ ಕಾಲದಲ್ಲಿ ಅಗ್ರಹಾರವಾಗಿದ್ದ ಇದಕ್ಕೆ 'ಸರ್ವಜ್ಞಪುರ' ಅಥವಾ 'ಸರ್ವಜ್ಞಪುರಿ' ಅಥವಾ 'ಸರ್ವಜ್ಞ ಕಾಳಿಕಾಪುರಿ' ಎಂಬ ಹೆಸರುಗಳಿದ್ದವು. ಆದರೆ ಸ್ಥಳಿಯ ಶಾಸನಗಳಲ್ಲಿ ಈ ಬಗ್ಗೆ ಮಾಹಿತಿಯಿಲ್ಲ. ಹೊಯ್ಸಳರ ಕಾಲದಲ್ಲಿ ಪ್ರಾಂತ್ಯವಾಗಿದ್ದ ಕಬ್ಬಾಹುಸಾಸಿರ (ಕಬ್ಬಾಹುನಾಡು) ಪ್ರಾಂತ್ಯದ ಉಪ ಪ್ರಾಂತ್ಯವಾಗಿತ್ತೆಂದು

* ಪ್ರಿಯದರ್ಶಿನಿ ನಿಲಯ, ನಂ. ೧೮೯೦, ಎಲ್.ಐ.ಸಿ. ಕಛೇರಿ ಹಿಂಭಾಗ, ಬಂದೀಗೌಡ ಲೇಔಟ್, ಮಂಡ್ಯ.

ತಿಳಿದುಬರುತ್ತದೆ. ಹೊಯ್ಸಳರ ವಿಷ್ಣುವರ್ಧನನ ಹಿರೀಕಳಲೆಯ ಕ್ರಿ.ಶ. ಸುಮಾರು ೧೨ನೇ ಶತಮಾನದ ಶಾಸನದಲ್ಲಿ ಈ ಪ್ರಾಂತ್ಯದ ಉಲ್ಲೇಖವಿದೆ[೬]. ಈ ಪ್ರಾಂತ್ಯದಲ್ಲಿ ವಿಷ್ಣುವರ್ಧನನ ಮಹಾಸಾಮಂತ ಚೆಣ್ಣಮನು ಕಿಕ್ಕೇರಿ-೧೨ ಎಂಬ ಸಣ್ಣ ವಿಭಾಗದ ಆಳ್ವಿಕೆಯನ್ನು ನೋಡಿ ಕೊಳ್ಳುತ್ತಿದ್ದನು. ಕೃಪೇ.(೭೩) ಹಿರಿಕಳಲೆಯ ಶಾಸನದಲ್ಲಿ ಆತನ ಗುಣಗಳ ವರ್ಣನೆಯಿದೆ. ಶಾಸನದ ಕಲ್ಲಿನ ಕೆಳಭಾಗ ಒಡೆದಿದೆ. ಕಾಲದ ಬಗ್ಗೆ ಮಾಹಿತಿಯಿಲ್ಲ. ಪುರಾತತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ (ಎಂ.ಎ. ಆರ್.೧೯೧೫, ಪು-೫೦) ಕಾಣಿಸಿರುವ ಹಿರಿಕಳಲೆಯ ಶಾಸನ ಇದೇಯೆಂದು ತಿಳಿದುಬರುತ್ತದೆ. ಚೆಣ್ಣನು ಮಂಕಿಕೆ-೧೨ ನನ್ನು ಆಳುತ್ತಿದ್ದನೆಂದು ಹೇಳಿದೆ. ಆದರೆ ಅದು ತಪ್ಪಾಗಿದ್ದು ಕಿಕ್ಕೇರಿ-೧೨ ಎಂಬುದು ಸರಿಯಾದ ಶಾಸನದ ಪಾಠದ ಸಾರಾಂಶವೆಂದು ತಿಳಿದುಬರುತ್ತದೆ[೭]. ಇದರಂತೆ ಇಂದಿನ ಕಿಕ್ಕೇರಿಯೇ ಈ ಪ್ರಾಂತ್ಯದ ಮುಖ್ಯ ಪಟ್ಟಣ ಹಾಗೂ ಆಡಳಿತ ಕೇಂದ್ರ ಕಿಕ್ಕೇರಿಯನ್ನೊಳಗೊಂಡಂತೆ ಇದರ ಸುತ್ತಮುತ್ತಲಿನ ೧೨ ಗ್ರಾಮಗಳು ಈ ಪ್ರಾಂತ್ಯದಲ್ಲಿ ಅಂತರ್ಗತವಾಗಿದ್ದವು.

### ಕಿಕ್ಕೇರಿಯ ಸ್ಥಳನಾಮ

ಇದೊಂದು ಚಾರಿತ್ರಿಕವಾದ ಹೋಬಳಿ ಕೇಂದ್ರ. ಇದರ ಮೂಲ ಸ್ಥಳನಾಮ ಘಟಕ ಜಲಸೂಚಕವಾದ ಏರಿ ಯಾಗಿದ್ದರೂ ಇದರ ಜೊತೆಗೆ ಕೇರಿಯೂ ಸೇರಿದೆಯೆನ್ನ ಬಹುದು. ಏರಿಕೇರಿ-ಕಿಕ್ಕೇರಿ(ದಟ್ಟಣೆ)ಯಿಂದ ಕೂಡಿದ್ದು ಏರಿಯೊಳಗಿರುವ ನೀರಿನ ಸಾಂದ್ರತೆ ಮತ್ತು ಕೇರಿಯೊಳ ಗಿರುವ ಜನಸಾಂದ್ರತೆ ಹೆಚ್ಚಿರುವಂತಿದ್ದು, ಏರಿಕೇರಿ ಕಿಕ್ಕೇರಿ ಆಗಿರುವಂತೆ 'ಹೆಗ್ಗೇರಿ'ಯೂ ಆಗಿರಬಹುದು[೮]. ಕ್ರಿ.ಶ. ೧೧-೧೩ನೇ ಶತಮಾನದ ಶಿಲಾ ಶಾಸನಗಳಲ್ಲಿ 'ಕಿಕ್ಕೇರಿ', 'ಕಿಕ್ಕೇರಿಪುರ' ಎಂದು ಉಲ್ಲೇಖಿಸಲ್ಪಟ್ಟಿರುವುದು ಕಂಡುಬರುತ್ತದೆ.

ವಿಜಯನಗರದ ಹರಿಹರರಾಯನ ಕಾಲದಲ್ಲಿದ್ದ ಕೀಕನೆಂಬ ಪಾಳೆಯಗಾರನು ಇಲ್ಲಿ ರಾಜ್ಯವಾಳುತ್ತಿದ್ದನಂತೆ. ಆತನು ಮಹಾದುಷ್ಟನಾಗಿದ್ದು ಜನರನ್ನು ಹಿಂಸಿಸುತ್ತಿದ್ದನಂತೆ. ಒಮ್ಮೆ ಹರಿಹರರಾಯನು ಶ್ರೀರಂಗಪಟ್ಟಣದಲ್ಲಿ ಕಾವೇರಿಸ್ನಾನ ಮಾಡಿ, ರಂಗನಾಥನ ದರ್ಶನ ಮಾಡಲು ಇದೇ ಮಾರ್ಗವಾಗಿ ಪ್ರಯಾಣ ಮಾಡುತ್ತಿದ್ದಾಗ ಇಲ್ಲಿನ ಪ್ರಜೆಗಳು ದೊರೆಯನ್ನು ಕಂಡು 'ಪ್ರಭುಗಳೇ ನಿಮ್ಮ ಕೀಕನ ದುಷ್ಕೃತ್ಯದಿಂದ ನಮ್ಮನ್ನು ರಕ್ಷಿಸಬೇಕು, ಅಲ್ಲದೆ ಪಾಳು ಬಿದ್ದಿರುವ ದೇವಾಲಯಗಳಲ್ಲಿ ಪೂಜಾ ಕಾರ್ಯ ಜರುಗುವಂತೆ ಮಾಡಬೇಕೆಂದು ಕೇಳಿಕೊಂಡಾಗ ದೊರೆಯು ಸೈನ್ಯದ ನೆರವಿನಿಂದ ಕೀಕನನ್ನು ಬಂಧಿಸಿದನು. ಕೀಕನು ದೊರೆಯ ಕಾಲಿಗೆ ಬಿದ್ದು 'ಮಹಾಪ್ರಭು ನನ್ನದು ಮಹಾಪರಾಧವಾಗಿದೆ ಮನ್ನಿಸಬೇಕು. ನನ್ನಲ್ಲಿ ಸಾಕಷ್ಟು ಸಂಪತ್ತಿದೆ, ಅದನ್ನು ತೆಗೆದುಕೊಂಡು ಏನಾದರು ಶಾಶ್ವತವಾದ ಕಾರ್ಯವನ್ನು ಮಾಡಿಸಿ ನನ್ನ ಹೆಸರು ಆಚಂದ್ರಾರ್ಕವಾಗಿ ಉಳಿಯುವಂತೆ ಮಾಡಬೇಕೆಂದು ಕೇಳಿಕೊಂಡನಂತೆ'. ಆತನ ಪ್ರಾರ್ಥನೆಯಂತೆ ದೊರೆಯು ಇಲ್ಲಿ ದೊಡ್ಡದೊಂದು ಕೆರೆಯನ್ನು ಕಟ್ಟಿಸಿದನು. ಇಲ್ಲಿ ಹಿಂದೆ ಕೇತಕೀ ನದಿ ಹರಿಯುತ್ತಿತ್ತು. ಅದೊಂದು ಸಣ್ಣ ಹಳ್ಳವಷ್ಟೇ, ಜೀವಜಲದ ನದಿಯೇನಲ್ಲ. ಹೆಬ್ಬಾಳವೆಂಬ ರೂಪದಲ್ಲಿ ಅದು ಈಗಲೂ ಉಳಿದು ಕೊಂಡಿದೆ. ದೊರೆಯು ಈ ಕೇತಕೀ ನದಿಗೆ ಏರಿಕಟ್ಟಿ, ಕೆರೆ ನಿರ್ಮಿಸಿ ಕೀಕನೇರಿ ಯೆಂದು ಹೆಸರಿಟ್ಟನು. ಅಲ್ಲದೆ ದೇವಾಲಯಗಳನ್ನು ದುರಸ್ತಿ ಗೊಳಿಸಿದನು. 'ದೊರೆತನ, ಭೂಮಿ ಶಾಶ್ವತವಲ್ಲ, ನನ್ನ ವಂಶದ ದೊರೆಗಳಾಗಲೀ, ಬೇರೆ ವಂಶದ ದೊರೆಗಳಾಗಲೀ, ನಾನು ಮಾಡಿದ ಧರ್ಮವನ್ನೇ ಯಾವಾಗಲೂ ಯಾರು ಪರಿಪಾಲಿಸಿ ಕೊಂಡು ಹೋಗುತ್ತಾರೋ, ಅವರ ಪಾದಕಮಲಗಳು ನನ್ನ ತಲೆಯಮೇಲಿರಲಿ' ಎಂದು ಘೋಷಿಸಿದನು. ಕೀಕನ ಹೆಸರಿನ ಮೇಲೆ ಕೀಕನೇರಿ ನಿರ್ಮಾಣವಾದ್ದರಿಂದ ಅದರ ಹಿನ್ನೆಲೆಯಲ್ಲಿ ಈ ಊರಿಗೆ ಕೀಕನೇರಿ > ಕೀಕೇರಿ > ಕಿಕ್ಕೇರಿ ಎಂದು ಹೆಸರು ಬಂದಿತ್ತೆಂದು ತಿಳಿದುಬರುತ್ತದೆ. ಇತ್ತೀಚಿನವರಗೂ ಕಿಕ್ಕೇರಿಯಲ್ಲಿ ಮದುವೆಯಾದರೆ ಹರಿಹರರಾಯನ ತಾಂಬೂಲವೆಂದೂ ಬೇರೆಯಾಗಿ ಎತ್ತಿಟ್ಟು ಊರಿನ ಹೆಬ್ಬಾರರ ವಶಕ್ಕೆ ಕೊಡುವುದು ರೂಢಿಯಲ್ಲಿದೆ[೧೦].

ಸಾಹಿತ್ಯಕ ಭಾಷೆಯಲ್ಲಿ ಕಿಕ್ಕೇರಿಯ ಪುರಾಣೇತಿ ಹಾಸವನ್ನು ಹೇಳುವ ಇಲ್ಲಿನ ಜನತೆ 'ಈ ಕೆರೆಗೆ ಹಲವು ಕೆರೆಗಳ ನೀರು ಬಂದು ಸೇರುತ್ತದೆ. ಆದ್ದರಿಂದಲೇ 'ಆರುಕೆರೆ ಅಕ್ಕಳಿಸಿ, ಮೂರುಕೆರೆ ಮುಕ್ಕಳಿಸಿ, ಅಘಲಯದಕ್ಕನ ಕಟ್ಟೆ ಒಡೆದರೆ ಕಿಕ್ಕೇರಮ್ಮನ ಹೊಟ್ಟೆ ತುಂಬಿತು'. ಎಂದು ಹೇಳುತ್ತಾರೆ[೧೧].

ಕಿಕ್ಕೇರಿ ೧೨ ಹಳ್ಳಿಗಳ ಆಡಳಿತ ಕೇಂದ್ರವಾಗಿ ತ್ತೆಂಬುದನ್ನು ಕ್ರಿ.ಶ.೧೧೧೩ರ ಹಿರಿಕಳಲೆಯ ಶಾಸನ ದಾಖಲಿಸಿದೆ. ಇಲ್ಲಿಂದ ಈವರೆಗೆ ಕಿಕ್ಕೇರಿಯಲ್ಲಿ ೧೬ ಶಾಸನಗಳು ದೊರೆತಿವೆ.. ಕಿಕ್ಕೇರಿ ಹೊಯ್ಸಳರ ಕಾಲದ ಕಲಾತ್ಮಕ ದೇವಾಲಯಗಳಿಂದ ಪ್ರಸಿದ್ಧವಾಗಿದೆ. ಊರನ್ನು ಸುತ್ತುವರಿದ ಪ್ರಾಚೀನ ಕೋಟೆಯ ಅವಶೇಷಗಳಿರುವುದು ಇಂದಿಗೂ ಅಲ್ಲಲ್ಲಿ ಕಂಡು ಬರುತ್ತದೆ. ಕೋಟೆಯ ಬಾಗಿಲಿನ ಎರಡು ಬದಿಯಲ್ಲಿ ಕೋಟೆ ಗಣಪ, ಕೋಟೆ ಆಂಜನೇಯರ ಚಿಕ್ಕ

ಗುಡಿಗಳಿರುವುದನ್ನು ಕಾಣಬಹುದು. ಕೋಟೆ ಬಾಗಿಲಿನ ಹೊರ ಭಾಗದಲ್ಲಿ ವಿಜಯನಗರ ಕಾಲಕ್ಕೆ ಸಂಬಂಧಿಸಿದ ಉಪ್ಪರಿಗೆ ಬಸವಣ್ಣ ದೇವಾಲಯವಿದೆ. ಆರು ಅಥವಾ ಏಳು ಅಡಿ ಎತ್ತರದ ನಾಲ್ಕು ಸ್ತಂಭಗಳ ಮೇಲೆ ಬಸವನ ಶಿಲ್ಪಾಕೃತಿಯಿದ್ದು ಇದರ ಮೇಲೆ ಚಿಕ್ಕದಾದ ಗೋಪುರ ಕಳಸದಿಂದ ಕೂಡಿದೆ. ಇದನ್ನೆ ಉಪ್ಪರಿಗೆಯ ಬಸವಣ್ಣ ದೇವಾಲಯವೆನ್ನುತ್ತಾರೆ.

ಊರಿನ ಹೊರ ಭಾಗ ಕೆರೆಯ ಕೆಳ ಭಾಗದಲ್ಲಿ ಹೊಯ್ಸಳರ ಕಾಲದ ಮಲ್ಲೇಶ್ವರನ ದೇವಾಲಯವಿರುವುದು ಕಂಡುಬರುತ್ತದೆ. ದೊಡ್ಡಕೆರೆ ಕೆಳಗಿನ ಪಾಳುಮಲ್ಲೇಶ್ವರ ಅಥವಾ ಕಾಡು ಮಲ್ಲೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೧೯೫ರ ಶಾಸನವು ಹೆಗ್ಗಡೆ ಮಲ್ಲಿಯಣ್ಣನು ದೇವಾಲಯವೊಂದನ್ನು ನಿರ್ಮಿಸಿ (ಬ್ರಹ್ಮೇಶ್ವರ ಎಂದು ಹೆಸರಿಟ್ಟು) ಕನ್ನೆಗೆರೆ (ನೂತನ ಕೆರೆ)ಯನ್ನು ನಿರ್ಮಿಸಿ ದೇವರ ಸೇವೆಗೆಂದು ಬ್ರಹ್ಮರಾಶಿ ಪಂಡಿತರಿಗೆ ದಾನ ಬಿಡಿಸಿದ್ದನ್ನು ದಾಖಲಿಸಿದೆ.ಈ ಮಲ್ಲೇಶ್ವರ ದೇವಾಲಯವನ್ನು ಕಿಕ್ಕೇರಿಯ ಹಾಲೋಜ ಹಾಗೂ ಆತನ ಮಗ ಬಮ್ಮೋಜ ಇವರಿಬ್ಬರೇ ನಿರ್ಮಿಸಿದ್ದಾರೆಂದು ತಿಳಿದುಬರುತ್ತದೆ[೧೨]. ಆದರೆ ಇಂದು ಈ ದೇವಾಲಯವು ಶಿಥಿಲಾವಸ್ಥೆಯಲ್ಲಿದ್ದು, ಸಂರಕ್ಷಿಸುವ ಅಗತ್ಯವಿದೆ. ಕೆರೆಯ ಏರಿಯ ಮೇಲೆ ನಿಂತು ನೋಡಿದರೆ ಈ ದೇವಾಲಯವೇ ಕಾಣದಂತೆ ದೇವಾಲಯದ ಮೇಲ್ಭಾಗವೆಲ್ಲ ಮುಳ್ಳಿನ ಗಿಡಗಳು, ಬಳ್ಳಿಗಳು, ಭೂತಾಳೆಗಳಿಂದ ಮುಚ್ಚಿಹೋಗಿರುವುದು ಗೋಚರಿಸುತ್ತದೆ.

ಊರಿನ ಒಳಭಾಗದಲ್ಲಿ ಪ್ರಸಿದ್ಧವಾದ ಬ್ರಹ್ಮೇಶ್ವರ ದೇವಾಲಯವಿದೆ. ಈ ದೇವಾಲಯ ಹೊಯ್ಸಳರ ೧ನೇ ನರಸಿಂಹನ ಕಾಲದ್ದಾಗಿದ್ದು, ಹೊಯ್ಸಳರ ಕಾಲದ ಕೆಲವು ವಿಶಿಷ್ಟ ಲಕ್ಷಣಗಳನ್ನೊಳಗೊಂಡ ದೇವಾಲಯವಾಗಿದೆ. ಈ ಬ್ರಹ್ಮೇಶ್ವರ ದೇವಾಲಯದ ನಂದಿ ಮಂಟಪದಲ್ಲಿರುವ ಒಂದನೆಯ ನರಸಿಂಹನ ಕಾಲಕ್ಕೆ ಸೇರಿದ ಕ್ರಿ.ಶ. ೧೧೭೧ರ ಶಾಸನವು, ಸಾಮಂತ ಬರ್ಮ್ಮಯ್ಯನ ಮಡದಿ ಬಮ್ಮವ್ವೆ ನಾಯಕಿತಿಯು, ಕಿಕ್ಕೇರಿಪುರದಲ್ಲಿ ಬ್ರಹ್ಮೇಶ್ವರ ದೇವಾಲಯವನ್ನು ನಿರ್ಮಿಸಿ ಈ ದೇವಾಲಯಕ್ಕೆ ದಾನ ನೀಡಿರುವುದನ್ನು ದಾಖಲಿಸಿದೆ. ಅಂದಿನ ಕಾಲದಲ್ಲಿ ಸಾಮಾನ್ಯ ಸ್ತ್ರೀಯರು ದೇವಾಲಯ ನಿರ್ಮಿಸಲು ಕಷ್ಟವಾದರೆ ತಮ್ಮ ಆರ್ಥಿಕ ಸ್ಥಿತಿಗತಿಗಳಿಗನುಗುಣವಾಗಿ ದೇವತಾಮೂರ್ತಿಗಳನ್ನು ಅಥವಾ ದೇವಾಲಯದ ವಿವಿಧ ಭಾಗಗಳ ರಚನೆಗೆ ನೆರವಾಗುತ್ತಿದ್ದಂತೆ ತೋರುತ್ತದೆ. ಉದಾ: ನಾಗಮಂಗಲ ತಾಲ್ಲೋಕ್‌ನ ಅರಣಿ ಗ್ರಾಮದ ಶಾಸನವು (ನಾ.ಮಂ.೧೦೧, ಎ.ಕ೭) ಸೋಮೇಶ್ವರ ಪಂಡಿತರ ಸ್ತ್ರೀ ಚಾಮವ್ವೆಯು ಚಾಮುಂಡೇಶ್ವರಿ ಮೂರ್ತಿಯನ್ನು ಪ್ರತಿಷ್ಠೆ ಮಾಡಿಸಿದ್ದಳೆಂದು ಆ ಮೂರ್ತಿ ಪೀಠದ ಶಾಸನವು ತಿಳಿಸುತ್ತದೆ. ಇದೇ ರೀತಿ ನಾಗಮಂಗಲ ತಾ. ಸುಬ್ಬರಾಯನ ಕೊಪ್ಪಲ ಸಿದ್ದೇಶ್ವರ ದೇವಾಲಯದ ಶಾಸನವು (ನಾ.ಮಂ. ೪೨ ಎ.ಕ.೭) ಜವನಿಕೆ ನಾರಾಯಣ ಎನ್ನಿಸಿದ್ದ ಬಲ್ಲಪ್ಪ ದಣ್ಣಾಯಕರ ದಾದಿ ಗೋವಿದೇವಿಯು ನವರಂಗದ ಕಂಬವೊಂದನ್ನು ಮಾಡಿಸಿದ್ದನ್ನು ತಿಳಿಸುತ್ತದೆ.[೧೩]

ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ, ಹಾಗೂ ನಂದಿಮಂಟಪಗಳನ್ನು ಹೊಂದಿರುವ; ಅಪೂರ್ವ ಶಿಲ್ಪ ಕೆತ್ತನೆಗಳಿಂದ ಕೂಡಿರುವ ಈ ದೇವಾಲಯದ ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ಶಿಖರವಿದೆ. ಅಲ್ಲದೆ ದ್ರಾವಿಡ ಸಂಪ್ರದಾಯ ಲಕ್ಷಣಗಳಿಗೆ ಹೆಚ್ಚು ಒತ್ತು ಕೊಟ್ಟು ನಿರ್ಮಿಸಲ್ಪಟ್ಟ ದೇವಾಲಯವಾಗಿದೆ. ಇದರ ಅಧಿಷ್ಠಾನ ಭಾಗದಲ್ಲಿ ಚಿತ್ರಪಟ್ಟಿಕೆಗಳಿಲ್ಲದಿರುವುದು ವಿಶೇಷವಾಗಿದೆ. ಭಿತ್ತಿಯನ್ನು ಕಿರು ಪ್ರಮಾಣದ ಬ್ರಹ್ಮ, ಶಿವತಾಂಡವ, ಕಾಲಭೈರವ, ಗೋಪಾಲಕೃಷ್ಣ, ವಾಮನ, ಮತ್ಸ್ಯಯಂತ್ರ ಭೇದಿಸುತ್ತಿರುವ ಅರ್ಜುನ, ಗೋವರ್ಧನಧಾರಿ ಕೃಷ್ಣ, ನಟರಾಜ, ಹರಿಹರ, ಬ್ರಹ್ಮ–ಸರಸ್ವತಿ, ಲಕ್ಷ್ಮೀನಾರಾಯಣ, ಗಜಚರ್ಮಾಂಬರದಾರಿ ಶಿವ, ಗಣಪ, ವರಾಹ, ವಿಷ್ಣು, ಸೂರ್ಯ, ಭೈರವ–ಭೈರವಿ, ಹಾಗೂ ದರ್ಪಣಾ ಸುಂದರಿಯರ ಸುಂದರ ಶಿಲ್ಪಗಳಿಂದ ನಿರ್ಮಾಣವಾಗಿದೆ. ಮುಖಮಂಟಪದ ಮುಂದಿರುವ ಆಕರ್ಷಕ ನಂದಿಮಂಟಪದಲ್ಲಿ ಬೃಹತ್ ಪ್ರಮಾಣದ ನಂದಿಯಿದ್ದು, ಹಿಂಬದಿಯಲ್ಲಿ ಸೂರ್ಯಪೀಠವಿದೆ. ಪ್ರಾಂಗಣದಲ್ಲಿ ಪಾರ್ವತಿ–ಗಣಪತಿ ಮಂಟಪಗಳೊಂದಿಗೆ ಕಾಲಭೈರವನ ಗುಡಿಯೂ ಇದ್ದು, ಇಲ್ಲಿಂದ ಊರಾಚೆಯಿರುವ ಮಲ್ಲೇಶ್ವರ ದೇವಾಲಯಕ್ಕೆ ಸುರಂಗಮಾರ್ಗವಿತ್ತೆಂಬ ಹೇಳಿಕೆಯೂ ಇದೆ. ಈ ಗುಡಿಯ ಬಲಮುಂಭಾಗದಲ್ಲಿ ಹೊಯ್ಸಳರ ಕಾಲಕ್ಕೆ ಸಂಬಂಧಿಸಿದ ವೈವಿಧ್ಯಮಯವಾದ ನಾಗಶಿಲ್ಪಗಳು ನೋಡುಗರನ್ನು ಆಕರ್ಷಿಸುತ್ತವೆ. ಪ್ರಾಕಾರದ ದ್ವಾರಮಂಟಪವೂ ಜೀರ್ಣೋದ್ಧಾರಗೊಂಡಿದ್ದು, ಎಡ ಭಾಗದ, ತೊಲೆ, ಬಾಗಿಲು, ಕಂಬಗಳನ್ನು ಮಸಣಯ್ಯ, ನಕರಚಾರಿ, ಕೋಟೂರು ಅಳಿಯ ಬಸವಣಪ್ಪ ಮೊದಲಾದವರು ದುರಸ್ತಿಗೊಳಿಸಿ, ಜೀರ್ಣೋದ್ಧಾರ ಮಾಡಿದ ಅಂಶವನ್ನು ಅಲ್ಲಿನ ಸುಮಾರು ೧೬–೧೭ನೇ ಶತಮಾನದ ಶಾಸನಗಳು ಖಚಿತಪಡಿಸುತ್ತವೆ.

ಗರ್ಭಗೃಹದಲ್ಲಿ ಆಕರ್ಷಣೀಯವಾದ ಹಾಗೂ ಸುಂದರವಾದ ಶಿವಲಿಂಗವಿದೆ. ಅರ್ಚಕರ ಪ್ರಕಾರ ಬ್ರಹ್ಮನಿಗೆ ಬುದ್ಧಿವಿಕಲ್ಪವಾದಾಗ ಅವನು ಈ ಲಿಂಗವನ್ನು ಸ್ಥಾಪಿಸಿ ತನ್ನ ಬುದ್ಧಿಯನ್ನು ಸರಿಮಾಡಿಕೊಂಡನೆಂದು ಸ್ಥಳ ಪುರಾಣ ತಿಳಿಸುತ್ತದೆಯೆಂದು ಹೇಳುತ್ತಾರೆ. ಅದರ ಪಂಚಶಾಖಾಲಂಕೃತ ಬಾಗಿಲುವಾಡವು ಆಕರ್ಷಕವಾಗಿದ್ದು, ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರಿದ್ದಾರೆ. ಪ್ರವೇಶದ್ವಾರದ ಇಕ್ಕೆಲದಲ್ಲಿ ಜಾಲಂಧ್ರಗಳಿದ್ದು, ಹೊಯ್ಸಳ ಲಾಂಛನವನ್ನೂ ಬಿಡಿಸಲಾಗಿದೆ. ನವರಂಗದ ಚಿತ್ತಾಕರ್ಷಕ ಕಂಬಗಳ ಬೋದಿಗೆಯಲ್ಲಿ ವಿವಿಧ ಭಂಗಿಯ ಸುಂದರ ಮದನಿಕಾ ಶಿಲ್ಪಾಕೃತಿಗಳ ಉಬ್ಬು ಶಿಲ್ಪಗಳಿದ್ದು, ಬೇಲೂರಿನ ಮದನಿಕೆಯರನ್ನು ನೆನಪಿಸುವುದಲ್ಲದೆ, ಬೇಲೂರು ಚೆನ್ನ ಕೇಶವ ದೇವಾಲಯದ ಮದನಿಕೆಯ ವಿಗ್ರಹಗಳಿಗೆ ಸೌಂದರ್ಯದಲ್ಲಿ ಸಮನಾಗಿದೆಯೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ನವರಂಗದ ಉತ್ತರ– ದಕ್ಷಿಣ ಭಾಗದ ಕಿರುಗರ್ಭಗೃಹಗಳಲ್ಲಿ ಶಿವಲಿಂಗ (ಗರ್ಭಗುಡಿಯ ಬಲ ಭಾಗ) ಹಾಗೂ ಚೆನ್ನಕೇಶವ (ಗರ್ಭಗುಡಿಯ ಎಡಭಾಗ) ಶಿಲ್ಪಗಳಿದ್ದು, ಗರ್ಭಗುಡಿಯ ಬಲಭಾಗದ ದೇವಕೋಷ್ಠಗಳಲ್ಲಿ ಗಣಪತಿ, ಸಪ್ತಮಾತೃಕೆಯರು, ಎಡಭಾಗದಲ್ಲಿ ಶ್ರೀ ಚಾಮುಂಡೇಶ್ವರಿ, ಪಕ್ಕದಲ್ಲಿ ಸುಬ್ರಮಣ್ಯಸ್ವಾಮಿ ಇದರ ಮೇಲ್ಭಾಗದಲ್ಲಿ ಶ್ರೀ ಕೃಷ್ಣನ ಶಿಲ್ಪಕೃತಿಗಳಿರುವುದನ್ನು ಕಾಣಬಹುದು. ಅಲ್ಲದೆ ಬ್ರಹ್ಮ, ವೀರಭದ್ರ, ಹಾಗೂ ಮಹಿಷಮರ್ದಿನಿ ಶಿಲ್ಪಗಳಿವೆ. ನವರಂಗದ ಮೇಲ್ಭಾಗದ ಭುವನೇಶ್ವರಿಯು, ಕಮಲಾಂಕೃತ ಮಕರತೋರಣಗಳಿಂದ ಕೂಡಿದೆ.[೧೪]

ಕೃಪೇ. ೫೨ ಕಿಕ್ಕೆರಿಯ–೨೬, ಬ್ರಹ್ಮೇಶ್ವರ ದೇವಾಲಯದ ದಕ್ಷಿಣದ ಕಡೆ ತಳಪಾದಿ ಕಲ್ಲಿನ ಶಾಸನಗಳಲ್ಲಿ ಬೊಮ್ಮವ್ವೆಯ ಭಕ್ತಿಗೆ ಮೆಚ್ಚಿ ಹರಸಿರುವುದನ್ನು ಉಲ್ಲೇಖಿಸಲಾಗಿದೆ. ಶ್ರೀ ಕಿಕ್ಕೇರಿಯ ಪುರದೊಳು ಶ್ರೀ ಪರುಬೊಮ್ಮವ್ವೆಯ ಚಳ ಭಕ್ತಿಗೆ ಪರಿಸಲು ಶ್ರೀ ಕೈಲಾಸದಿನೊಸೆದಿ ಶ್ರೀ ಪಾರ್ಬ್ಬತಿ ಬೆರಸು ಬಂದನೀ ಬ್ರಹ್ಮೇಶನು॥ ಮೇರುಗಿರಿ ಮ್ರು. .......... ಯ ವೇಳಿ ಧಾರುಣಿಯಲು ಬಮ್ಮವ್ವೆಯ ಗುಣ ಮೇರು ಪಡಿಯೆಂದು ನುಡಿಯಲಕ್ಕುಮೆ ಮನುಜರ॥ ಗುಣರತ್ನ ಭೂಷಣಾನ್ವಿತೆ ಸ(ದು)ಗುಣ ನಿಳಯಳ್ ಮನದೆ 'ಭಕ್ತಿ ಚಿಂತಾಮಣಿ' ಬ್ರಹ್ಮೇಶನ ಪಾದಕಮಳಾಭ್ರಿಂಗೆ ಎನಲು ಧಾರುಣಿಯಲು ಬಮ್ಮವ್ವೆಯಂತೆ ನೋಂತವರೊಳರೆ[೧೫].

ಕಿಕ್ಕೇರಿಯಲ್ಲಿ ಎರಡು ನರಸಿಂಹನ ದೇವಾಲಯಗಳಿರುವುದು ಒಂದು ವಿಶೇಷವಾಗಿ ಕಂಡು ಬರುತ್ತದೆ. ಒಂದು ದೊಡ್ಡ ನರಸಿಂಹನ ದೇವಾಲಯ (ಆದಿನರಸಿಂಹ ದೇವಾಲಯ ಅಥವಾ ಲಕ್ಷ್ಮೀನರಸಿಂಹ ದೇವಾಲಯ), ಮತ್ತೊಂದು ಚಿಕ್ಕ ನರಸಿಂಹ ದೇವಾಲಯ, (ಯೋಗ ನರಸಿಂಹ) ಊರ ಮಧ್ಯೆ ಇರುವ ಲಕ್ಷ್ಮೀನರಸಿಂಹನ ಗುಡಿಯು ಹೊಯ್ಸಳರ ಕಾಲದ ವಿಶಾಲ ರಚನೆಯಾಗಿದ್ದು. ಆರು ಕಂಬಗಳಿಂದ ಕೂಡಿದ ನವರಂಗ, ಸುರುಳಿಯಾಕಾರದ ಮೇಲ್ಛಾವಣಿ, ಹಾಗೂ ರಾಮಾನುಜಚಾರ್ಯರ ಪ್ರತಿಮೆಯಿದೆ. ಎರಡು ನರಸಿಂಹದೇವಾಲಯಗಳಿರುವುದಕ್ಕೆ ಸಂಬಂಧಿಸಿದಂತೆ ನರಸಿಂಹಭಟ್ಟರು ಕಥೆಯನ್ನು ಹೇಳಿರುವುದನ್ನು ಡಾ.ಕೆ. ಅನಂತರಾಮು ತಮ್ಮ ಸಕ್ಕರೆಸೀಮೆ ಕೃತಿಯಲ್ಲಿ ತಿಳಿಸಿದ್ದಾರೆ. ಇದರಂತೆ ಹಿಂದೆ ಆದಿನರಸಿಂಹನ ದೇವಾಲಯವಿದ್ದಿತು. ಮತೀಯ ಕಲಹದಿಂದಲೋ ಅಥವಾ ವಿಗ್ರಹ ಭಂಜಕರ ಭೀತಿಯಿಂದಲೋ ಹೆದರಿ ಗ್ರಾಮಸ್ಥರು ಮೂಲದೇವರ ಪ್ರತಿಮೆಯನ್ನು ರಕ್ಷಿಸಲು ಗೌಪ್ಯವಾಗಿ ಸಮೀಪದ ಕಾಳೇನಹಳ್ಳೀಯ ಬಳಿ ಹೇಮಾವತಿ ನದಿಯಲ್ಲಿ ಮುಳುಗಿಸಿ ಬಂದು ಬಿಟ್ಟರು. ಒಂದೆರಡು ತಲೆಮಾರುಗಳ ನಂತರ ಮುಳುಗಿಸಿದ್ದ ಜಾಗ ಪತ್ತೆಯಾಗಲಿಲ್ಲವೋ ಅಥವಾ ಮರೆತು ಹೋದುದ್ದರಿಂದಲೇನೋ ದೇವಾಲಯ ಪಾಳು ಬಿದ್ದಿತು. ಎಚ್ಚೆತ್ತ ಗ್ರಾಮಸ್ಥರು ದೂರದ ಕಟ್ಟೆ ಮಳಲವಾಡಿಯೆಂಬ ಗ್ರಾಮದ ಪಾಳು ಗುಡಿಯಲ್ಲಿದ್ದ ಈ ನರಸಿಂಹನನ್ನು ತಂದು ಪ್ರತಿಷ್ಠಾಪಿಸಿದರು. ಒಮ್ಮೆ ಆದಿನರಸಿಂಹ ಕನಸಿನಲ್ಲಿ ಬಂದು ತಾನಿರುವ ಸ್ಥಳವನ್ನು ಸೂಚಿಸಿದ್ದರಿಂದ ಭಕ್ತಿ ನರಸಪ್ಪನವರ ನೇತೃತ್ವದಲ್ಲಿ ಗ್ರಾಮಸ್ಥರು ಹೋಗಿ ಕಾಳೇನಹಳ್ಳಿಯ ಹೇಮಾವತಿ ನದಿಯಿಂದ ನರಸಿಂಹನ ಮೂರ್ತಿಯನ್ನು ಎತ್ತಿನಗಾಡಿಯಲ್ಲಿ ತೆಗೆದುಕೊಂಡು ಬರುತ್ತಿರುವಾಗ ರಸ್ತೆಯಲ್ಲಿ ಬಿದ್ದು ಮೂರ್ತಿಯ ಬಲಗೈ ಮುರಿಯಿತು. ನಂತರ ಶ್ರೀಗಂಧದಿಂದ ಮಾಡಿದ ಕೈಯನ್ನು ಕೂರಿಸಿ ಊರಿನೊಳಕ್ಕೆ ತಂದಾಗ ಗ್ರಾಮಸ್ಥರಲ್ಲಿ ಒಂದೇ ಗುಡಿಯಲ್ಲಿ ಎರಡು ನರಸಿಂಹನ ವಿಗ್ರಹಗಳಿರುವುದು ಬೇಡ ವೆಂದು ಬಾವಿಸಿ ಈಗಿರುವ ಚಿಕ್ಕ ನರಸಿಂಹನ ಗುಡಿಯನ್ನು ಮಣ್ಣು ಕಲ್ಲಿನಿಂದ ನಿರ್ಮಿಸಿದರು. ಇದೇ ಯೋಗನರಸಿಂಹನ ದೇವಾಲಯವಾಗಿದ್ದು ಇಲ್ಲಿಯ ಮೂರ್ತಿಯು ಕಾಳಿಂಗಹಳ್ಳಿಯ ಹೇಮಾವತಿ ನದಿಯಲ್ಲಿ ಮುಳುಗಿಸಿದ್ದ ಮೂಲ ಶಿಲ್ಪವೆಂದು ತಿಳಿದು ಬರತ್ತದೆ[೧೬].

ಜನ್ನಂತರಾಯನ ಗುಡಿಯೆಂದೇ ಕರೆಯಲ್ಪಡುವ ಜನಾರ್ಧನಗುಡಿಯು ಗರ್ಭಗೃಹ, ಅಂತರಾಳ,

ನವರಂಗಗಳನ್ನೊಳಗೊಂಡ ಹೊಯ್ಸಳ ರಚನೆಯಾಗಿದ್ದು, ಗಾತ್ರದಲ್ಲಿ ಕಿರಿದಾದರೂ ಭಿತ್ತಿಯ ಮೇಲಿನ ಸುಂದರ ಉಬ್ಬುಕೆತ್ತನೆಯಿಂದಾಗಿ ಕಲಾಸಕ್ತರನ್ನ ಗಮನ ಸೆಳೆಯುವ ದೇವಾಲಯವಾಗಿದೆ. ನ್ಯೂಯಾರ್ಕ್‌ನ ಮೆಟ್ರೋಪಾಲಿಟನ್ ವಸ್ತು ಸಂಗ್ರಹಾಲಯದಲ್ಲಿರುವ ಕೇಶವ ಶಿಲ್ಪದ ಪೀಠ ಶಾಸನದಿಂದ ಅದರ ಶಿಲ್ಪಿ ಬಳ್ಳಿಗಾವೆಯ ದಾಸೋಜನೆಂದು ತಿಳಿದುಬರುತ್ತದೆ. ಈ ಶಿಲ್ಪವು ಕಿಕ್ಕೇರಿಯ ವಿಷ್ಣು ದೇವಾಲಯವೊಂದಕ್ಕೆ ಸೇರಿದ್ದಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟರೆ, ಉಳಿದವರು ಅದನ್ನು ಬೇಲೂರಿನದ್ದಿರಬೇಕೆಂದು ತರ್ಕಿಸಿದ್ದಾರೆ[೧೭] ಇಂದು ಗ್ರಾಮಸ್ಥರ ಅಥವಾ ಸಂಬಂಧಪಟ್ಟ ಇಲಾಖೆಯ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಈ ದೇವಾಲಯ ಶಿಥಿಲಾವಸ್ಥೆಯಲ್ಲಿದ್ದು ಇತಿಹಾಸಾಸಕ್ತರು ಇತ್ತ ಗಮನ ಹರಿಸದಿದ್ದರೆ ಇಂತಹ ಪ್ರಸಿದ್ಧ ದೇವಾಲಯ, ಕೆಲವೇ ದಿನಗಳಲ್ಲಿ ನಶಿಸಿಹೋಗುವುದರಲ್ಲಿ ಸಂದೇಹವಿಲ್ಲ.

ಗ್ರಾಮದೇವತೆ ಕಿಕ್ಕೇರಮ್ಮನ ಗುಡಿಯು ಸಾಸಲು ರಸ್ತೆಯಲ್ಲಿದ್ದು, ವಿಶಾಲವಾದ ಪ್ರಾಕಾರದ ನಡುವೆ ಇರುವ ಈ ದೇವಿಯ ಜಾತ್ರೆಗೆ ದಾನ ಕೊಟ್ಟ ಅಂಶ, ಸು.೧೬ನೇ ಶತಮಾನದ ಶಾಸನವೊಂದರಲ್ಲಿದೆ. ಇಂದಿಗೂ ಯುಗಾದಿಯಾದ ಏಳು ದಿನಕ್ಕೆ ಜರುಗುವ ಕಿಕ್ಕೇರಮ್ಮನ (ವಸಂತ ಉತ್ಸವ) ಜಾತ್ರೆ, ದೇವಿಯ ಮೆರವಣಿಗೆ ಹಾಗೂ ದಿಮ್ಸಾಲೆ ಕುಣಿತ ವಿಶಿಷ್ಟ ಜನಪದ ಆಚರಣೆಯಾಗಿದೆ. ಗ್ರಾಮ ದೇವತೆ ಕಿಕ್ಕೇರಮ್ಮ ದೇವಿಯ ಪೂಜಾ ಕಾರ್ಯ ಪಕ್ಕದಗ್ರಾಮ ಲಕ್ಷ್ಮೀಪುರದ ಕುರುಬಜನಾಂಗಕ್ಕೆ ಸೇರಿದೆ. ಇವರನ್ನು ಹಾಲು ಮತದವರೆಂದು ಕರೆಯುತ್ತಾರೆ. ಇದಕ್ಕೂ ಮೊದಲು ಕಿಕ್ಕೇರಮ್ಮನ ಪೂಜೆಯನ್ನು ಬ್ರಾಹ್ಮಣರೇ ಮಾಡುತ್ತಿದ್ದರು. ಜೋಯಿಸರ ಮನೆಕೆಲಸದಲ್ಲಿದ್ದ ಕುರುಬ ಜನಾಂಗಕ್ಕೆ ಸೇರಿದ್ದ ಲಕ್ಕಮ್ಮ ಪ್ರತಿ ದಿನ ಜೋಯಿಸರು ಪೂಜೆ ಮಾಡಿ ಹೋದ ಮೇಲೆ ಜೋಯಿಸರು ಮಾಡಿದ್ದ ಪೂಜೆಯನ್ನೆಲ್ಲಾ ಕೆಳಕ್ಕೆ ಮಾಡಿ ಗರಿಕೆ ತುಂಬೆ ಸೊಪ್ಪಿನಿಂದ ತಾನು ಪೂಜಿಸಿ ಜೋಯಿಸರ ಮನೆಯಲ್ಲೇ ಕೊಟ್ಟಿದ್ದ ಅನ್ನವನ್ನು ಎಡೆಯಿಟ್ಟು ಹೋಗುತ್ತಿದ್ದಳಂತೆ ಆಕೆಯ ಭಕ್ತಿಗೆ ಮೆಚ್ಚಿ ಬ್ರಾಹ್ಮಣರು ಕಿಕ್ಕೇರಮ್ಮನ ಪೂಜೆಯ ಹಕ್ಕನ್ನು ಆಕೆಗೆ ಬಿಟ್ಟುಕೊಟ್ಟರಂತೆ. ಆಕೆ ಲಕ್ಷ್ಮೀಪುರಕ್ಕೆ ಮದುವೆಯಾದ ನಂತರ ಆಕೆಯ ವಂಶಸ್ಥರೇ ಇಂದಿಗೂ ಪೂಜಾಕಾರ್ಯ ನಡೆಸುತ್ತಿದ್ದಾರೆ. ಕಿಕ್ಕೇರಮ್ಮನೆಂದರೆ ಲಕ್ಷ್ಮೀದೇವಿ, ಸೌಮ್ಯದೇವತೆ, ವಿಜಯನಗರದ ಹರಿಹರ, ಬುಕ್ಕರಾಯರ ಕಾಲದಲ್ಲಿ ಆ ದೇವಾಲಯ ನಿರ್ಮಾಣವಾಯಿತ್ತೆಂದು ತಿಳಿದು ಬರುತ್ತದೆ[೧೮]. ಕಿಕ್ಕೇರಮ್ಮನ ಜಾತ್ರೆಯ ಅಂಗವಾಗಿ ನಡೆಯುವ ವಸಂತವೆಂಬ ದೇವಿಯ ಉತ್ಸವ ವಿಶಿಷ್ಟವಾದುದ್ದು. ಕೊಂತವನ್ನು ಕುಣಿಸುವ ಕೊಂತಧಾರಿ ಪಂಚೆಷರಟು ಧರಿಸಿ, ಸೊಂಟಕ್ಕೆ ಕೊಂತವನ್ನು ಕಟ್ಟಿಕೊಂಡು ಕಾಲಿಗೆ ಗೆಜ್ಜೆಯನ್ನು ತೊಟ್ಟು, ಜನಸಮುದಾಯದ ಮುಂಭಾಗದಲ್ಲಿ ಸಂಚರಿಸುತ್ತಿದ್ದನು. ಕೊಂತವು ಪೂರ್ಣವಾಗಿ ಮುಚ್ಚುವ ಕೆಂಪನೆಯ ಶಾಲೊಂದನ್ನು ಹೊದ್ದಿರುತ್ತಿದ್ದನು. ಕರಿಮರದಲ್ಲಿ ಕೆತ್ತಿದ್ದ ಕೊಂತವು ಒಂದುವರೆ ಅಡಿಯಷ್ಟು ಉದ್ದವಾಗಿದ್ದು ಅದಕ್ಕೆ ಪುರುಷಶಿಶ್ನದ ಆಕಾರವನ್ನು ಕೊಡಲಾಗಿತ್ತು. ಅದರ ತುದಿಗೆ ಸಿಂಧೂರವನ್ನು ಮೆತ್ತುತ್ತಿದ್ದರು ಅಂದಿಗೆ ಅದು ಕೊಂತದೇವರಾಗಿರುತ್ತಿತ್ತು[೧೯]. ಆಗಾಗ ಕೊಂತಧಾರಿಯು ಶಾಲಿನಲ್ಲಿ ಮರೆಮಾಡಿಕೊಂಡಿದ್ದ ಕೊಂತವನ್ನು ನೆರೆದ ಜನಸಮುದಾಯದ ಮುಂದೆ ತೋರಿಸುತ್ತ ಎರಡೂ ಕೈಗಳಿಂದಲೂ ಬುಡವನ್ನು ಹಿಡಿದು ಮೇಲಕ್ಕೂ ಕೆಳಕ್ಕೂ ಕುಣಿಸಿ ಮುಂದೆ ಸಾಗುವ ಕೊಂತಧಾರಿಯವನ (ದಿಮ್ಸಾಲೆಯವನ) ಕುಣಿತದ ಹಿಂದಿರುವ ಜನಪದ ಸೊಗಡು, ನಂಬಿಕೆಗಳು ಮರೆಯಾಗುವ ಮೊದಲೇ ದಾಖಲಿಸ ಬೇಕಾಗಿರುವುದು ಅತ್ಯವಶ್ಯಕವಾಗಿದೆ. ಉಳಿದಂತೆ ಕಿಕ್ಕೇರಿಯಲ್ಲಿಂದು ತಿರುಮಲದೇವರು, ವೀರಭದ್ರ, ಗಣಪತಿ, ಆಂಜನೇಯ, ಮತ್ತು ಮಾತಂಗಮ್ಮನ ಗುಡಿಗಳಿವೆ. ಅಲ್ಲದೇ ಮಸೀದಿ ಮತ್ತು ದರ್ಗಾಗಳೂ ಇದ್ದು ಶುಕ್ರವಾರದಂದು ವಾರದ ಸಂತೆಯಾಗುತ್ತದೆ[೨೦].

ಸುಮಾರು ಕ್ರಿ.ಶ ೧೫೫೦ ರಲ್ಲಿದ್ದ ವೀರಶೈವ ಕವಿ ನಂಜುಂಡರಾಧ್ಯ ಕಿಕ್ಕೇರಿಯುವನಾಗಿದ್ದು ಭೈರವೇಶ್ವರ ಕಾವ್ಯವೆಂಬ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯಲ್ಲಿ ಭೈರವ ರಾಜನ ಕಥೆಯನ್ನು ಪ್ರಧಾನವಾಗಿಟ್ಟುಕೊಂಡು ಅನೇಕ ಶಿವಶರಣರ ಕಥೆಗಳನ್ನು ಇದರಲ್ಲಿ ಹೇಳಲಾಗಿದೆ[೨೧].

ಒಟ್ಟಾರೆ ಸುಮಾರು ಸಾವಿರ ವರ್ಷಗಳ ಹಿಂದೆ ಈ ಪ್ರದೇಶಕ್ಕಿದ್ದ ಸ್ವರೂಪ ಇಂದು ಕಂಡುಬರುವುದಿಲ್ಲ, ಇಲ್ಲಿನ ಜನತೆಗೆ ತಮ್ಮ ಪ್ರದೇಶದ ಐತಿಹಾಸಿಕ ಪ್ರಜ್ಞೆಯ ಅರಿವಿಲ್ಲದಿರುವುದರಿಂದ ಇಲ್ಲಿನ ದೇವಾಲಯಗಳು ಹಾಗೂ ಈ ಪ್ರದೇಶ ಐತಿಹಾಸಿಕ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಆದ್ದರಿಂದ ಇತಿಹಾಸಾಸಕ್ತರು ಈ ಕಡೆ ಗಮನ ಹರಿಸುವುದು ಇಂದು ಅತ್ಯವಶ್ಯಕವಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಸಿರಿಯೊಡಲು,** (ಸಂ). ದೇ.ಜ.ಗೌ, ಮಂಡ್ಯ ಕಂಪ್ಯೂಟರ್ ಸೆಂಟರ್, ಮಂಡ್ಯ. ೧೯೯೪, ಪುಟ ಸಂಖ್ಯೆ ೨೧೨.

೨. **ಸಕ್ಕರೆಯ ಸೀಮೆ,** ಡಾ॥ ಕೆ. ಅನಂತರಾಮು, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೪, ಪುಟ ಸಂಖ್ಯೆ ೦೭.

೩. **ಸುವರ್ಣ ಮಂಡ್ಯ,** (ಸಂ). ದೇ.ಜ.ಗೌ, ಅಭಿಮಾನಿ ಪಬ್ಲಿಕೇಷನ್ಸ್ ಲಿಮಿಟೆಡ್, ಬೆಂಗಳೂರು, ಪುಟ ಸಂಖ್ಯೆ ೭೦.

೪. ಅದೇ, ಪುಟ ಸಂಖ್ಯೆ ೧೦೬.

೫. ಅದೇ, ಪುಟ ಸಂಖ್ಯೆ ೭೧.

೬. **ಸಕ್ಕರೆಯ ಸೀಮೆ,** ಡಾ॥ ಕೆ.ಅನಂತರಾಮು, ಅದೇ.

೭. ಎ.ಕ.ಸಂ-೦೬, ಶಾ.ಸಂ.೪೨, ಕನ್ನಂಬಾಡಿ, ಪಾಂ.ಪು. ತಾಲ್ಲೋಕ್ ಪುಟ-೭೩.

೮. ಎ.ಕ.ಸಂ.೦೬, ಪೀಠಿಕೆ- X1i

೯. **ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** (ಸಂ). ಡಾ.ಆರ್. ಗೋಪಾಲ್, ಪ್ರಾ.ವ & ಸಂ.ನಿ. ಮೈಸೂರು, ಪುಟ ಸಂಖ್ಯೆ ೩೧೮.

೧೦. **ಸಕ್ಕರೆಯ ಸೀಮೆ,** ಡಾ॥ ಕೆ.ಅನಂತರಾಮು, ಅದೇ, ಪುಟ ೧೯.

೧೧. ಅದೇ, ಪುಟ ಸಂಖ್ಯೆ ೪೭೨,

೧೨. **ಭಾರತದ ಗ್ಯಾಸೆಟಿಯರ್,** ಕರ್ನಾಟಕ ರಾಜ್ಯ, ಮಂಡ್ಯ ಜಿಲ್ಲೆ, ಪುಟ ಸಂಖ್ಯೆ ೯೦೭.

೧೩. **ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** (ಸಂ). ಡಾ.ಆರ್. ಗೋಪಾಲ್, ಪ್ರಾ. ವ & ಸಂ.ನಿ. ಮೈಸೂರು, ಪುಟ ಸಂಖ್ಯೆ ೬೬-೬೭.

೧೪. **ಭಾರತದ ಗ್ಯಾಸೆಟಿಯರ್,** ಅದೇ, ಪುಟ ೯೦೭.

೧೫. ಎ.ಕ. ಸಂ-೦೬ – ಪೀಠಿಕೆ, Xli.

೧೬. ಡಾ॥ ಕೆ. ಅನಂತರಾಮು, **ಸಕ್ಕರೆಯ ಸೀಮೆ,** ಅದೇ, ಪುಟ ೧೭.

೧೭. **ಭಾರತದ ಗ್ಯಾಸೆಟಿಯರ್,** ಅದೇ, ಪುಟ ೯೦೮.

೧೮. ಡಾ॥ ಕೆ. ಅನಂತರಾಮು, ಅದೇ, ಪುಟ ೧೮.

೧೯. ಅದೇ, ಪುಟ ಸಂಖ್ಯೆ ೪೭೦.

೨೦. ಭಾರತದ ಗ್ಯಾಸೆಟಿಯರ್, ಅದೇ, ಪುಟ ೯೦೮.

೨೧. ಅದೇ, ಪುಟ ಸಂಖ್ಯೆ ೬೯೬.

ಸಿದ್ಧರಗಿರಿ ಒ.ಎಲ್. ಚಂದ್ರೇಗೌಡ*

# ನಾಥಪಂಥ ಆದ್ಯಪ್ರವರ್ತಕ ಗೋರಖನಾಥ ಯಾನೆ ಲಕುಲೀಶನ ಕಾಲಮಾನದ ಐತಿಹಾಸಿಕ ಸಾಕ್ಷಾಧಾರಗಳು

ಭಾರತದಾದ್ಯಂತ ಜನಮಾನಸದಲ್ಲಿ ಯಾರ ಮಹಿಮೆಯು ಆಳವಾಗಿ ಬೇರೂರಿದೆಯೋ ಭಾರತೀಯ ಸಾಧನಾ ಇತಿಹಾಸದಲ್ಲಿ ಯಾರನ್ನು ಯುಗ ಪ್ರವರ್ತಕರೆಂದು ಮಹತ್ವ ನೀಡಲಾಗಿದೆಯೋ ಈ ಯುಗಪುರುಷನನ್ನು ಗೋರಕ, ಗೋರಕ್ಷ, ನಿರಂಜನ, ಲಕುಲೀಶ ಮುಂತಾದ ಹೆಸರುಗಳಿಂದ ಸ್ತುತಿಸಲ್ಪಡುತ್ತಿರುವ ಮತ್ಸೇಂದ್ರನಾಥನ ಶಿಷ್ಯ ಲಕುಳಧಾರಿ ಶಿವಗೋರಕ್ಷ. ಪಶ್ಚಿಮ ಕರಾವಳಿ ತೀರದ ಮಂಗಳೂರು ಕದರಿಯಿಂದ ಉತ್ತರದ ಹಿಮಗಿರಿ ತಪ್ಪಲಿನ ನೇಪಾಳದವರೆಗಿನ ನಾಥಪಂಥ ಕೇಂದ್ರಸ್ಥಾನಗಳಲ್ಲೆಲ್ಲಾ ಲಕುಳಧಾರಿಯಾದ ಪ್ರತಿಮಾ ಲಕ್ಷಣದಲ್ಲಿ ನಿರ್ಧಾರಿತ ನಾಗಿರುವನು ಲಕುಲೀಶ. ಅವನು ದಂಡಧಾರಿಯಾಗಿರುವುದನ್ನು ಭಾರದ್ವಜ ಸಂಹಿತೆಯು ವಿವರಿಸಿದೆ. ಮತ್ಸ್ಯೇಂದ್ರನಾಥನು ಇವನ ಗುರುವಾಗಿಯೂ ಸ್ವಯಂಭೂವಾಗಿಯೂ ವರ್ಣಿತವಾಗಿದ್ದಾನೆ. ಇವನನ್ನು ಮಹಾರಾಷ್ಟ್ರದ ಮಹಾಸಂತ ಜ್ಞಾನೇಶ್ವರಿಯ ಗ್ರಂಥಕರ್ತ ಜ್ಞಾನದೇವರು ಬಾಲಾರ್ಕ ಕೋಟಿಸದೃಶಿ, ಯೋಗಾಬ್ದಿನೀ-ಸರೋವರ, ವಿಷಯು-ವಿದ್ಯಾಂಸ್ಯೆಕವೀರ ಎಂಬ ವಿಶೇಷಣಗಳಿಂದ ಸ್ತುತಿಸಿರುವ ಈ ಮಹಾಗುರು ಆದಿಗೋರಕ್ಷಕನ ಜೀವನಗಾಥೆ ಹಾಗೂ ಅವರ ಹೆಜ್ಜೆಯ ಗುರುತು ಮಾತ್ರ ಅಖಂಡ ಭಾರತದ ಮೂಲೆಮೂಲೆಗಳಲ್ಲೂ ಎಲ್ಲಾ ಭಾಷೆಗಳಲ್ಲೂ ಹಾಗೂ ಲಿಪಿಯನ್ನೇ ಕಾಣದ ಪ್ರಾದೇಶಿಕ ಭಾಷೆಗಳಲ್ಲಿಯೂ ಪ್ರಚಲಿತವಿರುವುದು ಕಂಡುಬರುತ್ತದೆ. ಈ ಚಾರಿತ್ರಿಕ ಪುರುಷನ ಕಾಲಮಾನವನ್ನು ಈ ಕೆಳಕಂಡ ಆಧಾರಗಳಿಂದ ನಿರ್ಧರಿಸಬಹುದು.

**ರಾಜಗುಹ್ಯೆ ತಂತ್ರದಲ್ಲಿ :** ಗಕಾರೋ ಗುಣ ಸಂಯುಕ್ತ। ರಕಾರೋ ರೂಪಲಕ್ಷಣಂ । ಕ್ಷಕಾರೇಣಾಕ್ಷಂ ಬ್ರಹ್ಮ ಶ್ರೀಗೋರಕ್ಷನಾಥ ನಮಸ್ತುತೆ.

**ಕಲ್ಪದ್ರುಮ ತಂತ್ರದಲ್ಲಿ :** ಸುದ್ಧಸ್ಪಟಿಕ ಶಂಕಾಶಂ ಜಟಾಜೂಟಂ ತ್ರಿಲೋಚನಂ । ನಿರಂಜನಂ ನಿರಾಕಾರಂ ನಿರ್ವಿಕಲ್ಪಂ ನಿರಾಮಯಂ । ತ್ರಿಮೂರ್ತ್ರಂಚ ತ್ರಿಲೋಕೇಶಂ ವಿದಿವಿಷ್ಣು ಮಹೇಶರಂ । ವಿಶ್ವರೂಪಂ ಸದಾಕಾರಂ ಗೋರಕ್ಷನಾಥ ದೈವತಂ ॥

**ಗೋರಕ್ಷ ಸಿದ್ಧಾಂತ ಸಂಗ್ರಹ :** ನ ಕಾರೋ ಅನಾದಿ ರೂಪಾಃ । ಥ ಕಾರಃ ಸ್ಥಾಪ್ಯತೆ ಸದಾ ಭೂವನತ್ರಯ । ಮೇವೈಕ ಶ್ರೀ ಗೋರಕ್ಷನಮೋಸ್ತುತೆ ॥

ಲಕುಳಧಾರಿ ಲಕುಲೀಶನೇ ಪಾಶುಪಥಾಚರಣೆಯನ್ನು ಸ್ಥಾಪಿಸಿದ್ದರಿಂದ ಲಕುಲೀಶ ಪಾಶುಪಥದ ೧೮ ಜನ ನಾಥಸಿದ್ದರ ಪಟ್ಟಿಯಲ್ಲಿ ಲಕುಲೀಶನನ್ನು ಪ್ರಥಮ ಅಚಾರ್ಯನೆಂದು ನಿರೂಪಿಸಿದೆ. ಹಾಗೆಯೇ ಲಿಂಗಪುರಾಣ, ವಾಯುಪುರಾಣ ಮತ್ತು ಕೂರ್ಮಪುರಾಣಗಳು, ಪಾಶುಪಥಾ ಚರಣೆಯನ್ನು ಲಕುಲೀಶಪಾಶುಪಥವೆಂದು ವರ್ಣಿಸಿದೆ. ಶೈವಾಗಮಕ್ಕೆ ಪಾಶುಪತಾಗಮ ಎಂದು ಹೆಸರಿಡಲಾಗಿದೆ. ಈ ಪಾಶುಪಾತಾಚರಣೆ ಕ್ರಿ.ಶ. ೧೦೫ ರಿಂದ ೧೩೦ರ ಹೊತ್ತಿಗೆ ಬಳಕೆಯಲ್ಲಿ ಇತ್ತೆಂದು Early Indian Religions P Banerjee II ED 1975, p. 58. ಅಭಿಪ್ರಾಯಪಟ್ಟಿದ್ದಾರೆ.

ಬೌದ್ಧರ ವಜ್ರಯಾನದ ರೀತ್ಯ ಚೌರಾಸಿಸಿದ್ದರಲ್ಲಿ ಒಬ್ಬನಾದ ಲಕುಳದಾರಿ ಗೋರಕನಾಥ-(ಲಕುಲೀಶ), ಮತ್ಸೇಂದ್ರನಾಥ-(ಲುಯಿಪ), ಜ್ವಾಲಾಂದ್ರನಾಥ-(ಹಾಡಿಪ), ಕಾನೀಪನಾಥ-(ಕನ್‌ಪಾ) ಇವರುಗಳೆಲ್ಲಾ ಒಂದೇ ಸಮಕಾಲೀನರಾಗಿರುವುದರಿಂದ ಇವರ ಕಾಲಮಾನವು ಕ್ರಿ.ಶ. ೮ನೇ ಶತಮಾನಕ್ಕಿಂತ ಬಹಳ ಹಿಂದಕ್ಕೆ ಕೊಂಡೊಯ್ಯುತ್ತದೆ ಎಂಬುದಾಗಿ ಕೀರ್ತಿಶೇಷ ಪಂಡಿತ ರಾಹುಲ್ ಸಾಂಕೃತ್ಯಾಯ ಅಭಿಪ್ರಾಯಪಟ್ಟಿದ್ದಾರೆ. (**ವಿಶ್ವಸಂತರು ಪುಟ ೨೫೩**).

ಗೋರಕಾದಿನಾಥಸಿದ್ಧರಿಂದ ಪ್ರಚಲಿತವಾದ ಪಾಶುಪಥ ಪಂಥದ ಉಲ್ಲೇಖ ಕ್ರಿ.ಶ. ೨ನೇ ಶತಮಾನದ ಪಂತಜಲಿಯಲ್ಲಿ ದೊರಕುತ್ತದೆ. ಈ ಶಾಖೆಯನ್ನು ಶಿವನ ಅವತಾರವೆಂದು ಪರಿಗಣಿಸಲಾದ ಲಕುಳಧಾರಿ ಗೋರಕ್ಷನೆಂಬ ಮಾನವ ವ್ಯಕ್ತಿಯೇ ಈ ಪಂಥದ ಪ್ರವರ್ತಕನೆಂದೂ ಸೂಚಿಸುತ್ತದೆ.

ವಾಯು ಪುರಾಣ XXII ಮತ್ತು ಲಿಂಗಪುರಾಣ XXIV ದಂತಹ ಉತ್ತರಕಾಲೀನ ಸಾಹಿತ್ಯದ ಅನುಸಾರವಾಗಿ ಆದಿರುದ್ರನು ತಿಪ್ಪೆಯಲ್ಲಿ ಬಿದ್ದಿದ್ದ ಶಿಶುವಿನ ಮೃತದೇಹ ಒಂದನ್ನು ಪ್ರವೇಶಿಸಿ ಗೋರಕ ಎಂಬ ಅಭಿದಾನದಿಂದ (ಗೋರ ಅಂದರೆ ತಿಪ್ಪೆ + ಕಾ ಎಂದರೆ ಬಂದವನು)

* ಸಿದ್ಧರಗಿರಿ ಕಾಫಿ ಎಸ್ಟೇಟ್, ಜಗರ ಅಂಚೆ, ಚಿಕ್ಕಮಗಳೂರು.

ಲಕುಳಧಾರಿಯಾಗಿಯೇ ವಿಜೃಂಭಿಸಿದ. ಲಕುಲೀಶನು ಕಾಯಾರೋಹಣ ಎಂಬ ಸ್ಥಳದಲ್ಲಿ ಧರ್ಮೋದ್ಧಾರ ನಿಮಿತ್ತ ಮತ್ಸ್ಯೇಂದ್ರನಾಥನ ಅಭೀಷ್ಟದ ಮೇರೆಗೆ ಆದಿರುದ್ರನೇ ಅವತರಿಸಿದನೆಂದು ಇವನಿಗೆ ಕುಸಿಕ, ಗಾರ್ಗಿ, ಮಿತ್ರ ಹಾಗೂ ಋಷ್ಟ ಎಂಬ ನಾಲ್ಕು ಶಿಷ್ಯರುಗಳು ಇದ್ದರೆಂದು ಇವರು ಪಾಶುಪತಶೈವ, ಶಾಕ್ತ, ವೈಷವ, ಕಾಳಾಮುಖ ಪರಂಪರೆಯ ಪ್ರತಿಪಾದಕರೆಂದು ಹೆಸರಿಸಲಾಗಿದೆ. ಇವರುಗಳೆಲ್ಲಾ ಒಂದೇ ಬಗೆಯ ಸಂಸ್ಕಾರ ಆಚರಣೆಗಳನ್ನು ಅನುಸರಿಸುತ್ತಿದ್ದರೆಂದು ಉಲ್ಲೇಖಿಸಿದೆ.

ಇಂಡೋನೇಷ್ಯಾ ದೇಶದ 'ಜಾವಾ'ದಲ್ಲಿರುವ ಶಿಲಾಶಾಸನದಲ್ಲಿ ಲಕುಲೀಶನ ನಾಲ್ಕು ಶಿಷ್ಯರುಗಳಾದ ಕುಷಿಕ, ಗರ್ಗ, ಮಿತ್ರ, ಕೌರಷ್ಯ (ರುಷ್ಯ) ರೊಡನೆ ಪತಂಜಲಿಯನ್ನು ಸೇರಿಸಿ ಐದು ದೇವತೆಗಳೆಂದು ಉಲ್ಲೇಖಿಸಿದ್ದಾರೆ. **(ಪಿ.ಸಿ. ಭಾಗ್‌ಚಿ-ಬಂಗಾಳದ ಚರಿತ್ರೆ ೧ ಪುಟ ೪೦೫-೦೬)**

Whitehead Catalogue of Coins in tha Panjab Musuem. (ಪುಟ ೧೮೩-೧೮೫, ೧೮೭) ನಲ್ಲಿ ಸುರಕ್ಷಿತವಾಗಿರುವ ಕ್ರಿ.ಶ. ಮೊದಲನೆಯ ಶತಮಾನದ ಮಧ್ಯಭಾಗದಲ್ಲಿನ ಕುಶಾನರ ಕಾಲದ ಮೆ.ಮಾ.... ನಶಿಸಿದೆ...... ನಾಣ್ಯಗಳ ಮೇಲಿನ ತ್ರಿಶೂಲ ಹಿಡಿದ ಮಾನವ ಸ್ವರೂಪವನ್ನು ಗೋರಕನದೆಂದು ಖಚಿತವೆನ್ನುವುದಿದೆ. **(ಭಾರತ ಧರ್ಮ ತಾತ್ವಿಕ ಸಂಸ್ಕೃತಿ ವಿಕಾಸನ ಲೇ ಆರ್.ಸಿ. ಮುಜಂದಾರ್)**.

ಇದೇ ಕುಶಾನರ ಕಾಲದಲ್ಲಿ ಲಕುಲೀಶನೆಂಬ ಪ್ರಸಿದ್ಧನಾದ ಉಪದೇಶಕನು ಭಾರತದಾದ್ಯಂತ ಸಂಚರಿಸುತ್ತಾ ಇದ್ದನೆಂದು, ಅವನು ಆದಿರುದ್ರನ ಕೊನೆ ಅವತಾರವೆಂದು ಪಾಶುಪಥ ತತ್ವಗಳ ಸ್ಥಾಪಕಾಚಾರ್ಯನೆಂದು ಇವನ ತತ್ವೋಪದೇಶಗಳನ್ನು ಮಾಧವನು ತನ್ನ ಸರ್ವದರ್ಶನ ಸಂಗ್ರಹದಲ್ಲಿ ಲಕುಲೀಶಪಾಶಪಥ ಎಂದು ಸಂಗ್ರಹಿಸಿದ್ದಾನೆ. *Journal of the Bombay Branch of the Royal Asiatic Society XXII P. 151.* ಮತ್ತು *Archaological Survey of India Annual Report P. 179* ರಲ್ಲಿ ಲಕುಲೀಶನಿಗೆ ಕೊಟ್ಟಿರುವ ಕಾಲದ ಪ್ರಾಚೀನತೆಯನ್ನು ಗುಪ್ತರ ಕಾಲದ ಶಾಸನವು ಈ ರೀತಿ ಸಮರ್ಥಿಸುತ್ತದೆ.

ಲಕುಲೀಶನ ಶಿಷ್ಯನಾದ ಕುಸೀಕನ ಶಿಷ್ಯಪರಂಪರೆಯ ೧೦ನೇ ತಲೆಮಾರಿನ ಆರ್ಯ ಉದಿತಾಚಾರ್ಯನು ಮಥುರಾದಲ್ಲಿ ಸ್ಥಾಪಿಸಿರುವ ವರ್ಷ ೬೧ರ (ಕ್ರಿ.ಶ. ೩೮೦) ಎಂದು ಕಾಲವನ್ನು ನಿರ್ಧರಿಸುವ ೨ನೇ ಚಂದ್ರಗುಪ್ತ ಕಾಲದ EP-India XXI ಪುಟ ೭ ಎಂದು ಗುರುತಿಸುತ್ತಿರುವ ಶಾಸನದಲ್ಲಿ ಎಲ್ಲರೂ ನಂಬಲರ್ಹವಾದ ವಿಷಯದೊಂದಿಗೆ ಲಕುಳಧಾರಿ ಲಕುಲೀಶನ ಶಿಷ್ಯನಾದ ಕುಶಿಕನ ಕಾಲವನ್ನು ನಿರ್ಧರಿಸಲು ಸಾಧ್ಯವಾಗುತ್ತದೆ. ಈ ಶಾಸನ ರಚಿತ ಉದಿತಾಚಾರ್ಯರು ತನ್ನ ಗುರು ಉಪಮಿತಮಿಮಲರ ಮತ್ತು ತನ್ನ ಗುರುವಿನ ಗುರುಗಳಾದ ಕಪಿಲವಿಮಲರ ಪ್ರತಿಮೆಯನ್ನು ಸ್ಥಾಪಿಸಿದ ಗುರುವಾಯತನದಲ್ಲಿ (ಗುರುಗಳ ಆಲಯದಲ್ಲಿ) ಲಕುಲೀಶನ ಶಿಷ್ಯನಾದ ಕುಶಿಕನ ನಂತರದ ಶಿಷ್ಯ ಪರಂಪರೆಯ ೧೧ನೆಯ ತಲೆಮಾರಿನ ಗುರುನಾಮ ಎಂದು ಶಾಸನದಲ್ಲಿ ಪ್ರಚಾರಪಡಿಸಿದ್ದಾನೆ. ಮೂರು ತಲೆಮಾರಿಗೆ ಒಂದು ಶತಮಾನವೆಂದು ಲೆಕ್ಕಹಾಕಿದರೆ ಲಕುಳದಾರಿ ಶಿವಘೋರಕ್ಷಕನ ಕಾಲಮಾನವನ್ನು ಮೇಲಿನ ಆಧಾರದ ಮೇರೆಗೆ ಸರಿಸುಮಾರು ಕ್ರಿ.ಶ. ಮೊದಲನೆಯ ಶತಮಾನವೆಂದು ಪರಿಗಣಿಸಲೇಬೇಕಾಗುತ್ತದೆ.

ಭಾರತಕ್ಕೆ ಬಂದ ಚೀನಿ ದಾರ್ಶನಿಕ ಪಾಹಿಯಾನ್ (೩೯೪-೪೧೪) ನಾಥಪಂಥ ಶಾಖೆಗಳಾದ ಪಾಶುಪಥ, ಕಾಳಾಮುಖ, ಕಾಪಾಲಿಕರ ಪ್ರಸ್ತಾಪ ಮಾಡುತ್ತಾ ಆಗಿನ ಕಾಲದ ಪ್ರಮುಖ ಧಾರ್ಮಿಕ ಪಂಥಗಳೆಂದು ತನ್ನ *Krom Hindoe Javaneshe Gerschie Dnis* ಪುಟ ೮೮ ಗ್ರಂಥದಲ್ಲಿ ಉಲ್ಲೇಖಿಸಿರುವುದು ಕಂಡುಬರುವುದರಿಂದ ನಾಥಪಂಥ ಆದ್ಯಪ್ರವರ್ತಕ ಲಕುಳದಾರಿ ಶಿವಗೋರಕ್ಷನ ಕಾಲಮಾನದ ಖಚಿತತೆಗೆ ಸಾಕ್ಷಿಯಾಗುತ್ತದೆ.

ತತ್ಕಾಲೀನ ಸಂಸ್ಕೃತ ವಾಙ್ಮಯ ಕೃತಿಗಳಾದ ಮಾಲತಿ ಮಾದವ, ಕಾದಂಬರಿ, ಹರ್ಷಚರಿತ, ರತ್ನಾವಲಿ, ಪ್ರಬೋಧ ಚಂದ್ರೋದಯ, ಕರ್ಪೂರ ಮಂಜರಿ ಮುಂತಾದ ಕೃತಿಗಳಲ್ಲೂ ನಾಥಪಂಥದ ಹೆಜ್ಜೆಯ ಗುರುತುಗಳಿರುವುದರಿಂದ ಈ ಮೇಲ್ಕಂಡ ಗ್ರಂಥೋದಯಗಳಿಗಿಂತ ಬಹಳ ಹಿಂದೆಯೇ ನಾಥಪಂಥ ಆದ್ಯಪ್ರವರ್ತಕರುಗಳಾದ ಗೋರಕಾದಿಸಿದ್ಧರ ಉಗಮ ಮತ್ತು ಪ್ರಾಚೀನತೆ ಸಾಬೀತು ಆಗುತ್ತದೆ.

ಪಾಶುಪಥಶಾಖೆಯು ಉದಯವಾದದ್ದು ಸುಮಾರಾಗಿ ಕ್ರಿ.ಶ. ೨ನೇ ಶತಮಾನವೆಂದು ನನಗೆ ಹೊಸದಾಗಿ ಲಭಿಸಿರುವ ಶಾಸನ ಆಧಾರದ ಮೇಲೆ ಖಚಿತಪಡಿಸಬಹುದು ಎಂದು ಕೀರ್ತಿಶೇಷ ಪಂಡಿತ ಡಾ॥ ಬಂಡಾರ್ಕರ್‌ರವರು ಅಭಿಪ್ರಾಯ ಪಟ್ಟಿದ್ದಾರೆ.

EC IX Ni. I ತೇದಿ ೧೦೨೯ ಎಂದು ಗುರುತಿಸಿರುವ ಶಾಸನಾಧಾರಿತ ಶಿಷ್ಯ ಪರಂಪರೆಯಲ್ಲಿ ಛಾಯಾಪರಮೇಶ್ವರನ ಮಗ ಸ್ತಂಭನಾಥ, ಇವನ ಮಗ ದೀಪನಾಥ ಅವನ ಶಿಷ್ಯ ಮೌನೀನಾಥ, ಅವನ ಶಿಷ್ಯ ರೂಪಶಿವ ಎಂಬ ವಿವರವಾದ ಉಲ್ಲೇಖವಿದೆ. ಇವರುಗಳ ಹೆಸರೇ ನಾಥಪಂಥೀಯರೆಂದು ಖಚಿತಪಡಿಸುತ್ತದೆ. ಇಲ್ಲಿ ಕಂಡುಬಂದಿರುವ ಐದು ತಲೆಮಾರುಗಳೆಂದರೆ ಸುಮಾರು ಒಂದೂವರೆ ಶತಮಾನಗಳಷ್ಟು ಇವರ ಪ್ರಾಚೀನತೆಯನ್ನು ಕೊಂಡೊಯ್ಯಬಹುದು. ಹೀಗಾಗಿ ಕ್ರಿ.ಶ. ಸುಮಾರು ೮ನೇ ಶತಮಾನಕ್ಕಿಂತಲೂ

ಹಿಂದಿನಿಂದ ನಾಥಪಂಥ ಕರ್ನಾಟಕದಲ್ಲಿ ಪ್ರಚಲಿತದಲ್ಲಿ ಇದ್ದರೆ ಅದರ ಪ್ರಾಚೀನತೆಗೆ ಮೈಲಿಗಲ್ಲೆನಿಸುತ್ತದೆ.

EC ಶಿಕಾರಿಪುರ ನಂ. ೮ ತೇದಿ ಕ್ರಿ.ಶ. ೧೭೬ ಎಂದು ಗುರುತಿಸಿರುವ ಶಾಸನ ಹಾಗೂ ಕ್ರಿ.ಶ. ೪ನೇ ಶತಮಾನದ ತಾಳಗುಂದದ ಸ್ತಂಬ ಶಾಸನವು ಕರ್ನಾಟಕದಲ್ಲಿನ ನಾಥಪಂಥದ ಪ್ರಾಚೀನತೆಗೆ ಕೈಗನ್ನಡಿಯಾಗಿದೆ.

ಮೇಲಿನ ಆಧಾರರೀತ್ಯಾ ಕ್ರಿಸ್ತಶಕೋದಯದ ಸರಿಸಮಾನ ಕಾಲಘಟ್ಟದಿಂದೀಚೆಗೆ ನಾಥಪಂಥ ಗೋರಕಾದಿ ಚೌರಾಸಿಸಿದ್ಧರಿಂದ ಭಾರತದಾದ್ಯಂತ ಪ್ರಸರಿಸಿದ ರೀತಿಯಲ್ಲಿಯೇ ಕನ್ನಡ ನಾಡಿನಲ್ಲಿಯೂ ಪ್ರಸರಿಸಿದೆ. ಈ ಪ್ರಸರಣದ ಬಗ್ಗೆ ೧೨ನೇ ಶತಮಾನದ ಶಿವಶರಣರ ವಚನದಲ್ಲಿ ಉಲ್ಲೇಖ ಇರುವುದರಿಂದ ವಚನಾಭಿಪ್ರಾಯವನ್ನು ಈ ಲೇಖನದಲ್ಲಿ ಚಿಂತಿಸಲೇಬೇಕಾಗಿರುವುದು ನನ್ನ ಕರ್ತವ್ಯ ವಾಗಿರುವುದು ಸಹಜ.

ಅಲ್ಲಮಪ್ರಭುದೇವರಿಂದಾದಿಯಾಗಿ, ರೇವಣಸಿದ್ಧ, ಮರುಳಸಿದ್ಧ, ಸಿದ್ಧರಾಮ ಮೊದಲಾದವರುಗಳು ಒಂದೇ ಪರಂಪರೆಯ ಸಿದ್ಧಾಂತದೆಡೆಗೆ ಬಂದು ಸೇರಿದವರಾಗಿದ್ದು ಸುಮಾರಾಗಿ ಸರಿಸಮಾನ ಕಾಲದವರೆಂದೂ ಭಾವಿಸಬಹುದು. ಇವರಲ್ಲೊಬ್ಬರಾದ ರೇವಣಸಿದ್ಧರನ್ನು ಶಿವಶರಣರಾದ ಹರಿಹರ ಕವಿಯು ರೇವಣಸಿದ್ಧ ರಗಳೆಯಲ್ಲಿ ನಿರುಪಮಸಿದ್ಧ, ಸಿದ್ಧಕುಲ ಚಕ್ರವರ್ತಿ ಎಂಬ ವಿಶೇಷಣಗಳಿಂದ ಹೊಗಳುತ್ತ ಕೃತಿಯ ಮೂರನೇ ಸ್ಥಲದಲ್ಲಿ ರೇವಣಸಿದ್ಧರು ಕೊಲಾಪುರದಲ್ಲಿ ಗೋರಕನಾಥನನ್ನು ಮುಖಾಮುಖಿಯಾದ ಸಂದರ್ಭವನ್ನು ವಿವರಿಸುತ್ತಾ ಅಹಂಕಾರದಿಂದಿದ್ದ ಗೋರಕನನ್ನು ಮಣಿಸಿದ ರೆಂದೂ ಚಿತ್ರಿಸಲಾಗಿದೆ.

ಹೀಗೆಯೇ ಶಿವಶರಣರಾದ ಚಾಮರಸ ಕವಿಯೂ ಸಹ ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮಪ್ರಭುಗಳು ಶ್ರೀಗಿರಿಗೆ ಬಂದು ಅಲ್ಲಿ ಗೋರಕನಾಥನೆಂಬ ಹಠಯೋಗಿಯನ್ನು ಸಂಧಿಸಿದ ಸಂದರ್ಭವನ್ನು ವಿವರಿಸುತ್ತಾ ವಜ್ರದೇಹಿಯಾದ ಗೋರಕನ ದೇಹಾಭಿಮಾನವನ್ನು ನಿರಾಸನಗೊಳಿಸುವ ಅಲ್ಲಮನ ಸಾಧನೆಗೆ ಗೋರಕನಾಥನು ಶರಣಾಗಿ ಲಿಂಗಾಯಿತ ತತ್ವೋಪದೇಶವನ್ನು ಪಡೆದುಕೊಂಡನೆಂಬ ಉಲ್ಲೇಖವಿದೆ.

ಶ್ರೀಶೈಲ ನಾಥಪಂಥದ ಮುಖ್ಯಕೇಂದ್ರ ಎಂಬುದು ಸತ್ಯ. ಆದರೆ ಶಿವಶರಣ ಹರಿಹರಕವಿಯ ಪ್ರಸಂಗದಲ್ಲಿಲ್ಲದ ಬಹುಮುಖ್ಯ ಅಧ್ಯಾಯವು ಶಿವಶರಣ ಚಾಮರಸ ಕವಿಯ ಪ್ರಸಂಗದಲ್ಲಿ ಬಂದಿರುವುದು ಪ್ರಬಲವಾದ ಸಂಶಯಕ್ಕೆ ಎಡೆಮಾಡಿಕೊಟ್ಟಿದೆ. ಅಲ್ಲದೇ ಅಲ್ಲಮ ಮತ್ತು ಆದಿಗೋರಕನ ಸಂದರ್ಶನವು ಚಾರಿತ್ರಿಕ ಆಧಾರದ ಕಾಲಮಾನದ ದೃಷ್ಟಿಯಿಂದಲೂ ಸಹ ಯಾವುದೇ ಕಾರಣಕ್ಕೂ ತಾಳೆಯಾಗು ವುದಿಲ್ಲ. ಅಲ್ಲಮಪ್ರಭುದೇವರಿಗಾಗಲಿ, ಅನಿಮೀಶಯ್ಯನವರಿ ಗಾಗಲಿ, ರೇವಣಸಿದ್ಧ ಮತ್ತು ರೇಣುಕಾಚಾರ್ಯರಿಂದಾದಿ ಯಾಗಿ ಯಾವುದೇ ವೀರಶೈವ, ಲಿಂಗಾಯಿತ ಶಿವಶರಣರಿಗೆ ನಾಥಪಂಥ ಆದಿಪ್ರವರ್ತಕರಾದ ಆದಿಗೋರಕನಾಥರನ್ನು ಮುಖಾಮುಖಿಯಾಗುವ ಸಂದರ್ಭ ಕಾಲಗಣನೆಯ ಚಾರಿತ್ರಿಕ ಆಧಾರದ ರೀತ್ಯ ಸಾಧ್ಯವೇ ಇಲ್ಲ. ಭಾರತದಾದ್ಯಂತ ಆದಿಗೋರಕನಾಥನ ಶಿಷ್ಯಕೋಟಿಯಲ್ಲಿ ಈಗಲೂ ಕಾಣ ಸಿಕ್ಕುವಂತಹ ಗೋರಕ ಎಂಬ ಅಭಿದಾನದ ಯಾರೋ ಸಾಮಾನ್ಯ ಯತಿಗಳಲ್ಲಿ ಒಬ್ಬನಾಗಿರಲು ಸಾಧ್ಯ ಎಂದು ಸ್ವೀಕರಿಸುವುದೇ ಹೆಚ್ಚು ಔಚಿತ್ಯಪೂರ್ಣ.

**ಡಾ. ವಸಂತಲಕ್ಷ್ಮಿ. ಕೆ.***

# ಕರ್ನಾಟಕದಲ್ಲಿ ಅಲ್ಲಾಳನಾಥನ ಆರಾಧನೆ

ಶ್ರೀ ಮದ್ಭಾಗವತ ಪ್ರೇಮಸಿದ್ಧಿಪ್ರದ ಜನಾರ್ಧನಃ ॥
ಶ್ರೀ ಕಾಞ್ಚೀ ಶ್ರೀ ಪುರಿನಾಥ ಶ್ರೀನಾಥೋ ಜಯತಿ ಪ್ರಭುಃ॥
ಗಂಭೀರಂ ಮಧುರಂ ವ್ಯಕ್ತಂ ಗವಜ್ಜನ ಸುಖಪ್ರದಾ ।
ಶ್ರೀ ಮದಲ್ಲಾಳನಾಥಸ್ಯ ಶಾಸನಂ ಧರ್ಮಶಾಸನಂ ॥
(ಚಾನ. ೩೦೯ ಕ್ರಿ.ಶ. ೧೩೦೩)

ಭರತ ವರ್ಷದಲ್ಲಿರುವ ಸಪ್ತಮುಕ್ತಿ ಕ್ಷೇತ್ರಗಳೆಂದು ಪ್ರಸಿದ್ಧ ವಾಗಿರುವ ಸಿದ್ಧಕ್ಷೇತ್ರಗಳಲ್ಲಿ ಕಾಂಚೀಪುರವು 'ದಕ್ಷಿಣದ ಮೋಕ್ಷಪುರಿ' ಎನ್ನಿಸಿದೆ. ಕಂಚೀಪುರವು ಶಿವಕಂಚಿ, ವಿಷ್ಣು ಕಂಚಿಗಳೆಂಬ ಎರಡು ಪವಿತ್ರ ಕ್ಷೇತ್ರಗಳನ್ನು ಹೊಂದಿದೆ. ಈ ನಾಡಿನ ಒಂದು ಭಾಗವು ಪ್ರಾಚೀನ ಕಾಲದಲ್ಲಿ ಜಿನಕೇಂದ್ರ ವಾಗಿದ್ದು ಜಿನಕಂಚಿ ಎನ್ನಿಸಿದೆ. ಹೀಗೆ ಪ್ರಾಚೀನ ದೇವಾಲಯ ಗಳನ್ನು ಹೊಂದಿರುವ ಕಾಂಚೀಪುರವು ಎಲ್ಲಾ ಮತದವರಿಗೂ ಪವಿತ್ರ ಕ್ಷೇತ್ರವೆನ್ನಿಸಿದೆ.

ಕಾಂಚೀಪುರಂನಲ್ಲಿ ಅನೇಕ ದೇವಾಲಯಗಳಿದ್ದು, ವರದರಾಜಸ್ವಾಮಿ ದೇವಾಲಯವು ಸುಮಾರು ಕ್ರಿ.ಶ. ಏಳನೇ ಶತಮಾನಕ್ಕಿಂತ ಮೊದಲೇ ರಚಿತವಾದಂತೆ ತೋರುತ್ತದೆ. ಜಗನ್ನಿಯಾಮಕನಾದ ಶ್ರೀಮನ್ನಾರಾಯಣನ ಉಪ ಅವತಾರ ಗಳಲ್ಲಿ ಒಂದಾದ ವರದರಾಜಸ್ವಾಮಿಯ ಸ್ವರೂಪವಾಗಿದೆ. ಕಂಚೀಪುರದಲ್ಲಿರುವ ವರದರಾಜಸ್ವಾಮಿಯನ್ನು ಜನರು ವರದರಾಜ ಪೆರಮಾಳ್, ಅರುಲಾಳ ಪೆರಮಾಳ್, ಅತ್ತಿಯೂರನ್, ದೇವರಾಜ, ಪ್ರಣತಾರ್ಥಿ ಹರನ್, ಹಸ್ತಗಿರಿ ನಾಥನ್, ದೇವಾಧಿದೇವ, ಅಭೀಷ್ಟವರದ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ದೇವಾಲಯದ ಪ್ರಾಚೀನತೆಯ ಬಗೆಗೆ ಗಮನಿಸಿದರೆ, ಮೊದಲಿಗೆ, ಕ್ರಿ.ಶ. ಏಳನೇ ಶತಮಾನದಲ್ಲಿ ಇಲ್ಲಿ ನೆಲೆಸಿದ್ದ ಬುದತ್ತಾಳ್ವಾರರು ಈ ದೇವರನ್ನು ಸ್ತುತಿಸಿ ಹಾಡಿದ್ದಾರೆ. ಇದರಿಂದ ಅವರ ಕಾಲಕ್ಕಿಂತ ಮೊದಲೇ, ದೇವಾಲಯವಿದ್ದಿರಬೇಕೆನಿಸುತ್ತದೆ. ಆದರೆ ಕ್ರಿ.ಶ. ೭ನೇ ಶತಮಾನದ ಶಾಸನಗಳಾಗಲೀ, ದೇವಾಲಯದ ವಾಸ್ತುವಿನ ಭಾಗಗಳಾಗಲೀ ಈ ದೇವಾಲಯದ ಆವರಣದಲ್ಲಿ ದೊರೆಯುವುದಿಲ್ಲ. ಕಂಚೀಪುರಂನ ಬಗೆಗೆ ಅಧ್ಯಯನ ಮಾಡಿರುವ ಎ.ಕೆ. ಶೇಷಾದ್ರಿಯವರು" ಮೊದಲಿಗೆ ಇದ್ದ ಪ್ರಾಚೀನ ದೇವಾಲಯವು ಹೆಚ್ಚು ವಿಸ್ತಾರವಾದುದ್ದಾಗಿರದೇ, ಗರ್ಭಗೃಹ ದಲ್ಲಿದ್ದ ಮೂಲಬೇರವು ಮರದ ಮೂರ್ತಿಯಾಗಿತ್ತು. ಈ ಪ್ರದೇಶವು ಚೋಳರ ಆಳ್ವಿಕೆಗೆ ಸೇರಿದ ಮೇಲೆ ಸುಮಾರು ೧೧-೧೨ನೇ ಶತಮಾನದಲ್ಲಿ ದೇವಾಲಯವು ಜೀರ್ಣೋದ್ಧಾರವಾದಾಗ ಶಿಲಾಮೂರ್ತಿಯ ಪ್ರತಿಷ್ಠೆಯಾಯಿ ತೆಂದು ತಿಳಿಸಿದ್ದಾರೆ. ೧೧-೧೨ನೇ [Kanchipuram, ಪುಟ ೫೩] ಶತಮಾನದಲ್ಲಿ ದೇವಾಲಯದ ಗರ್ಭಗೃಹ, ಅಂತರಾಳ ಮೊದಲಾದ ಭಾಗಗಳು ನಿರ್ಮಾಣವಾಯಿತೆಂದು ತಿಳಿಸಿದ್ದಾರೆ. ನಂತರದ ಕಾಲದಲ್ಲಿ ಕಂಚಿಯ ವರದರಾಜಸ್ವಾಮಿಯ ಆರಾಧನೆ ಹೆಚ್ಚು ಪ್ರಚಲಿತೊಂಡಿದೆ.

ಕರ್ನಾಟಕದ ಅಲ್ಲಾಳನಾಥನ ಆರಾಧನೆಯ ಬಗೆಗೆ ಗಮನಹರಿಸುವಾಗ ಕಂಚಿಯ ಅಲ್ಲಾಳನಾಥನ ಬಗೆಗೆ ತಿಳಿಯುವುದು ಅಗ್ಯವಾಗಿದೆ. ಶ್ರೀ ರಾಮಾನುಜಾಚಾರ್ಯರು ಕಾಂಚೀಪುರಂನಲ್ಲಿ ಬಹುಕಾಲ ನೆಲೆಸಿದ್ದು, ವರದರಾಜ ಸ್ವಾಮಿಯ ಪರಮ ಭಕ್ತರಾಗಿದ್ದರು. ಇವರು ಅನೇಕ ಕೃತಿಗಳನ್ನು ಇಲ್ಲೇ ರಚಿಸಿದ್ದರು. ರಾಮಾನುಜರು ಬೋಧಿಸಿದ 'ವಿಶಿಷ್ಟಾದ್ವೈತ ಸಿದ್ಧಾಂತ'ದಂತೆ, ದೇವಾಲಯಗಳಲಲಿ ಪೂಜೆ, ನೈವೇದ್ಯ, ಉತ್ಸವಗಳು ನಿಗದಿತ ಸಮಯಕ್ಕೆ ಮಾಡುವಂತೆ ನಿರ್ಧಾರವಾಯಿತು. ದೇವಾಲಯಗಳಲ್ಲಿ 'ಆಡಳಿತ ನಿರ್ವಹಣೆಯ ಕ್ರಮವನ್ನು ರೂಪಿಸಿಕೊಟ್ಟು, ಅನೇಕ ಧಾರ್ಮಿಕ ಚಟುವಟಿಕೆಗಳು ನಡೆಯುವಂತೆ ನಿಯಮಾವಳಿ ರೂಪಿಸಿದರು. ಇದರಿಂದ ದೇವಾಲಯವು 'ವೈಷ್ಣವ ಧರ್ಮದ ಕೇಂದ್ರವಾಗಿ ಬೆಳೆಯಿತು. ಪೂಜಾ ಸಮಯದಲ್ಲಿ ದ್ರಾವಿಡವೇದ'ವೆನ್ನಿಸಿರುವ 'ದಿವ್ಯ ಪ್ರಬಂಧ'ವನ್ನು ಹಾಡುವ ಪರಿಪಾಠವನ್ನು ಬೆಳಸಿದರು. ಹೀಗೆ ಹನ್ನೊಂದನೇ ಶತಮಾನದಲ್ಲಿ ಅಲ್ಲಾಳನಾಥನ ಆರಾಧನೆ ವಿಕಾಸಗೊಂಡಿದ್ದನ್ನು ಕಾಣುತ್ತೇವೆ.

ಸುಮಾರು ಕ್ರಿ.ಶ. ೧೦-೧೧ನೇ ಶತಮಾನದಲ್ಲಿ ಚೋಳರ ದೊರೆ ೧ನೇ ರಾಜರಾಜಚೋಳನು ಆಳುತ್ತಿದ್ದಾಗ ಕರ್ನಾಟಕದ ಕೆಲವು ಭಾಗಗಳು ಚೋಳರ ವಶದಲ್ಲಿದ್ದವು. ಮಂಡ್ಯ ಜಿಲ್ಲೆಯ ಪ್ರದೇಶವು "ಮುಡಿಗೊಂಡ ಚೋಳ

*ಭಾರತೀಯ ಸಂಸ್ಕೃತಿ ವಿದ್ಯಾಪೀಠ ಸರ್ವೋತ್ತಮ ಪಿ.ಯು. ಕಾಲೇಜು, ೪ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು.

ಮಂಡಲಕ್ಕೆ ಸೇರಿದ್ದ ರಾಜೇಂದ್ರ ಚೋಳ ಒಳನಾಡಿನಲ್ಲಿತ್ತು" ಎಂದು ಶಾಸನವೊಂದು ತಿಳಿಸಿದೆ. [ಎ.ಕ. ೭, ಮದ್ದೂರು ೧]. ಚೋಳರ ಅಧೀನದಲ್ಲಿದ್ದ ಈ ಪ್ರದೇಶದಲ್ಲಿ ಚೋಳರ ನಾಡಿನಿಂದ ಬಂದು ಅನೇಕ ಜನರು ನೆಲೆಸಿದ್ದರೆಂದು ತಿಳಿಯುತ್ತದೆ. ಕಾವೇರಿ ನದಿಯ ಉಪನದಿಯಾದ ಶಿಂಷಾ ನದಿಯ ಬಲದಂಡೆಯ ಮೇಲಿರುವ ಮದ್ದೂರು ಗ್ರಾಮವು ಈ ಜನರ ಮೆಚ್ಚಿನ ತಾಣವಾಗಿತ್ತು. ಈ ನದಿ ತಟದಲ್ಲಿ ಚೋಳರ ಕಾಲದಲ್ಲಿ ನಿರ್ಮಿಸಿದ ವೈದ್ಯನಾಥೇಶ್ವರ ದೇವಾಲಯವಿದೆ. ಇದರಂತೆ ಮದ್ದೂರು ಗ್ರಾಮದಲ್ಲಿ ನಾರಸಿಂಹ ದೇವಾಲಯವೂ, ಕೃತಕವಾಗಿ ನಿರ್ಮಿಸಿರುವ ಹಸ್ತಿಗಿರಿಯ ಮೇಲೆ ಕಟ್ಟಲಾಗಿರುವ ವರದರಾಜಸ್ವಾಮಿ ದೇವಾಲಯವೂ ಇರುವುದು ಗಮನಾರ್ಹವಾಗಿದೆ. ಇಲ್ಲಿರುವ ದೇವರ ಮೂರ್ತಿಯ ಕಂಚಿಯ ವರದರಾಜಸ್ವಾಮಿಯ ಪ್ರತಿರೂಪವಾಗಿದೆ. ಕಂಚಿಯ ವರದರಾಜಸ್ವಾಮಿಯನ್ನು 'ಅರುಳಾಲ ಪೆರುಮಾಳ್' ಎನ್ನುವರು. ಅರುಳಾಲ>ಅಲ್ಲಾಳ ವೆನ್ನಿಸಿದ್ದು, 'ಅಲ್ಲಳಾನಾಥ'ನೆಂದೂ, ಕನ್ನಡನಾಡಿನಲ್ಲಿ ವರದರಾಜಸ್ವಾಮಿಯನ್ನು ಕರೆದಿರುವುದು ಗಮನಕ್ಕೆ ಬರುತ್ತದೆ.



ಕಾಂಚೀಪುರದ ವರದರಾಜಸ್ವಾಮಿ

ಕಂಚಿಯ ಅಲ್ಲಾಳನಾಥನ ಶಿಲ್ಪದ ಲಕ್ಷಣಗಳನ್ನು ಗಮನಿಸಿದರೆ ಪದ್ಮಪೀಠದ ಮೇಲೆ ಸಮಭಂಗಿಯಲ್ಲಿ ನಿಂತ ವಿಷ್ಣುವಿನ ಚತುರ್ಭುಜಗಳಲ್ಲಿ ಮೇಲಿನ ಬಲಗೈ ಚಕ್ರವನ್ನು, ಮೇಲಿನ ಎಡಗೈ ಶಂಖವನ್ನು ಹಿಡಿದಿರುವಂತಿದೆ. ಮುಂದಿನ ಬಲಗೈ ವರದಹಸ್ತವಾಗಿದ್ದು, ಮುಂದಿನ ಎಡಗೈ ಗದೆಯನ್ನು ಆಧರಿಸಿದೆ. ಸರ್ವಾಭರಣ ಸಂಯುಕ್ತನಾದ ದೇವರ ಎಡಗೈ ಬಳಿ ಇರುವ ಗದೆಯ ಕೆಳಭಾಗವೂ ತೋರವಾಗಿಲ್ಲ. ದೇವನ ಶಿರಸ್ಸಿನ ಹಿಂದೆ ಶಿರಚ್ಚಕ್ರವಿಲ್ಲ ಮತ್ತು ಅವನ ಕೆಳಭಾಗದಲ್ಲಿ ಎರಡೂ ಕಡೆ ಭೂದೇವಿ ಶ್ರೀದೇವಿಯರ ಶಿಲ್ಪಗಳೂ ಪೀಠಕ್ಕೆ ಹೊಂದಿಕೊಂಡಂತೆ ರಚಿತವಾಗಿಲ್ಲದಿರುವುದು ಗಮನಾರ್ಹವಾಗಿದೆ. ಇದರಂತೆ ರೂಪಿಸಲಾಗಿರುವ ಮದ್ದೂರಿನ ವರದರಾಜಸ್ವಾಮಿ ಶಿಲ್ಪವೂ, ಎತ್ತರವಾದ ಪದ್ಮಪೀಠದಲ್ಲಿ ಸಮಭಂಗಿಯಲ್ಲಿ ಸ್ಥಾನೀಕನಾಗಿರುವ ಸುಮಾರು ಹನ್ನೆರಡು ಅಡಿ ಎತ್ತರದ ಭವ್ಯವಾದ ಶಿಲ್ಪವಾಗಿದೆ. ಉದ್ದವಾದ ಕಿರೀಟ ಮಕುಟವನ್ನು ಧರಿಸಿರುವ ವಿಷ್ಣುವಿನ ಚತುರ್ಭುಜಗಳಲ್ಲಿ ಮೇಲಿನ ಬಲಗೈ ಚಕ್ರವನ್ನು, ಮೇಲಿನ ಎಡಗೈ ಶಂಖವನ್ನು ಧರಿಸಿರುವಂತೆ ಬಿಡಿಸಿದೆ. ಬಲಮುಂಗೈ ವರದಹಸ್ತವಾಗಿದ್ದು, ಚಿಕ್ಕದಾಗಿ ಪದ್ಮವನ್ನು ಹಿಡಿದಿರುವಂತಿದೆ. ಇಲ್ಲಿ ವರದ ಮುದ್ರೆಯು ಪ್ರಧಾನವಾಗಿದ್ದು ದೇವರನ್ನು 'ವರದರಾಜಸ್ವಾಮಿ' ಎಂದು ಖಚಿತಪಡಿಸುತ್ತದೆ. ಮುಂದಿನ ಎಡಗೈ ಬಳಿ ಇರುವ ಗದೆಯನ್ನು ಆಧರಿಸಿದೆ. ಸರ್ವಾಭರಣ ಸಂಯುಕ್ತವಾಗಿರುವಂತೆ ಬಿಡಿಸಿರುವ ಈ ಶಿಲ್ಪವು ಹೊಯ್ಸಳ ಶೈಲಿಯದಾಗಿರದೇ, ಹೊಯ್ಸಳರ ಪೂರ್ವ ಕಾಲದ ಅಂದರೆ ಸುಮಾರು ಹತ್ತನೇ ಶತಮಾನದ ಬಿಂಬವಾಗಿದೆ. ಈ ದೇವಾಲಯದ ವಾಸ್ತುವಿನ ಭಾಗಗಳನ್ನು ಗಮನಿಸಿದರೆ, ಅಲ್ಲಿನ ಶಾಸನಗಳನ್ನು ಗಮನಿಸಿದರೆ, ಹದಿಮೂರನೇ ಶತಮಾನದ ನಂತರದ್ದೆಂಬ ಭಾವನೆ ಬರುವಂತಿದೆ. ಆದರೆ ದೇವಾಲಯದ ಜೀರ್ಣೋದ್ಧಾರದ ಸಮಯದಲ್ಲಿ ೧೧ನೇ ಶತಮಾನದ ನಾಲ್ಕು ಕಂಬಗಳುಳ್ಳ ಮಂಟಪವೂ, ತಮಿಳು ಶಾಸನವೊಂದು ದೊರೆತಿದ್ದು, ಇವು ದೇವಾಲಯದ ಪ್ರಾಚೀನತೆಯನ್ನು ದೃಢಪಡಿಸಿವೆ. ಇದರಿಂದ ಕರ್ನಾಟಕದ ಮಂಡ್ಯ ಜಿಲ್ಲೆಯ ಮದ್ದೂರಿನಲ್ಲಿ, ರಾಮಾನುಜಾಚಾರ್ಯರ ಪ್ರವೇಶಕ್ಕಿಂತ ಮೊದಲೇ ಚೋಳನಾಡಿನ ಜನರಿಂದ ಅಲ್ಲಾಳ ನಾಥನ ಆರಾಧನೆ ಆರಂಭವಾಗಿತ್ತೆಂದು ತಿಳಿಯುತ್ತದೆ.

ಕರ್ನಾಟಕದಲ್ಲಿ ಅಲ್ಲಾಳನಾಥನ ಆರಾಧನೆ ಬಗೆಗೆ ಗಮನಿಸುವಲ್ಲಿ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಕೊಂಡಜ್ಜಿಯ ಅಲ್ಲಾಳನಾಥನ ಶಿಲ್ಪವು ಕಣ್ಸೆಳೆಯುತ್ತದೆ. ಚಿಕ್ಕ ಗ್ರಾಮವಾದ ಕೊಂಡಜ್ಜಿಯಲ್ಲಿ ಸುಮಾರು ಹದಿನಾಲ್ಕನೇ ಶತಮಾನದ್ದೆನ್ನ ಬಹುದಾದ ಸರಳವಾದ ಭಿತ್ತಿ ಮತ್ತು ಕಂಬಗಳಿಂದಾದ ದೇವಾಲಯದ ಗರ್ಭಗೃಹದಲ್ಲಿ ಭವ್ಯವಾದ ಅಲ್ಲಾಳ ನಾಥನ ಶಿಲ್ಪವಿದೆ. ಈ ಶಿಲ್ಪವು ಸುಮಾರು ಮೂರಡಿ ಎತ್ತರದ ಪದ್ಮಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಹದಿನಾಲ್ಕು ಅಡಿ ಎತ್ತರದ ವಿಷ್ಣುವಿನ ದುಂಡು ಶಿಲ್ಪವಾಗಿದೆ. ಈ ಅಲ್ಲಾಳನಾಥನ ಶಿಲ್ಪವು ಹೊಯ್ಸಳರ ಕಾಲದ ಶಿಲ್ಪವಾದರೂ, ಕೆಲಮಟ್ಟಿಗೆ ಕಂಚಿಯ ಶಿಲ್ಪವನ್ನು ಅನುಸರಿಸಿ ರೂಪಿಸಿರುವಂತಿದೆ ಈ ಶಿಲ್ಪದ ಶಿರದಲ್ಲಿ ಎತ್ತರವಾದ ಕಿರೀಟ ಮಕುಟವಿದ್ದು, ಕಿವಿಗಳಲ್ಲಿ ಮಕರ ಕುಂಡಲಗಳಿವೆ. ದಪ್ಪದಾದ ಕೊರಳಿನಲ್ಲಿ ಕಂಠಿಕೆಯಲ್ಲದೇ ಎರಡು ಉರಹಾರಗಳನ್ನು



ಕೊಂಡಜ್ಜಿಯಲ್ಲಿರುವ ಅಲ್ಲಾಳನಾಥ ದೇವರು ಪಾಣಿಪೀಠದಿಂದ ಹದಿನಾಲ್ಕು ಅಡಿ ಎತ್ತರವಿದೆ

ಬಿಡಿಸಿದ್ದು, ವೈಜಯಂತಿ ಮಾಲೆಯು ಅಡಿಯವರೆಗೆ ಹಬ್ಬಿದೆ. ಚತುರ್ಭುಜಧಾರಿಯಾದ ಶಿಲ್ಪದ ಮೇಲಿನ ಬಲಗೈಯಲ್ಲಿ ಚಕ್ರವನ್ನು, ಮೇಲಿನ ಎಡಗೈಯಲ್ಲಿ ಶಂಖವನ್ನು ಬಿಡಿಸಿದೆ. ಮುಂದಿನ ಬಲಗೈ ವರದಹಸ್ತವಾಗಿದ್ದು, ಹೆಬ್ಬೆರಳಿಗೆ ಹೊಂದಿಕೊಂಡಂತೆ ಚಿಕ್ಕದಾದ ಪದ್ಮವನ್ನು ಬಿಡಿಸಿದೆ. ಮುಂದಿನ ಎಡಗೈ ಗದೆಯನ್ನು ಆಧರಿಸಿದೆ. ನೀಳವಾದ ಕೈಬೆರಳುಗಳಲ್ಲಿ ಉಂಗುರಗಳೂ, ಮುಂಗೈನಲ್ಲಿ ದಪ್ಪದಾದ ಕಡಗಗಳೂ ಇವೆ. ಶಿಲ್ಪವನ್ನು ನೀಳಕಾಯದಂತೆ ಬಿಡಿಸಿದ್ದು ಕಟಿಯಿಂದ ಮೊಣಕಾಲಿನವರೆಗೆ ಚಿತ್ತಾರವುಳ್ಳ ವಸ್ತ್ರವನ್ನು ಬಿಡಿಸಿದೆ. ದುಂಡು ಶಿಲ್ಪವಾದ ಈ ಶಿಲ್ಪದ ಹಿಂಭಾಗದಲ್ಲೂ ದೈಹಿಕ ಅಂಗಸೌಷ್ಠವ ವನ್ನು ಕೆತ್ತಲಾಗಿದೆ. ಆದರೆ ಹೆಚ್ಚಿನ ಅಲಂಕಾರವಿಲ್ಲ. ಈ ಶಿಲ್ಪವನ್ನು ಹೊಯ್ಸಳರ ಕಾಲದ 'ಕೇಶವ'ನ ಶಿಲ್ಪವೆಂದು ಭಾವಿಸುವರಾದರೂ, ಕೇಶವ ಶಿಲ್ಪಗಳಲ್ಲಿ ಕಾಣುವ ಸುಂದರವಾದ ಮಕರತೋರಣವುಳ್ಳ ಪ್ರಭಾವಳಿಯಾಗಲೀ, ಕೇಶವ ಶಿಲ್ಪಗಳ ಕೆಳಭಾಗದಲ್ಲಿ ಇಕ್ಕೆಲದಲ್ಲಿ ಬಿಡಿಸುವ, ಶ್ರೀದೇವಿ, ಭೂದೇವಿಯರ ಶಿಲ್ಪಗಳೂ ಇಲ್ಲಿಲ್ಲ. ಎತ್ತರವಾದ ಈ ಶಿಲ್ಪದ ಬಲಗೈ 'ವರದಹಸ್ತ'ದಂತೆ ಬಿಡಿಸಿದ್ದು ಚಿಕ್ಕದಾಗಿ ಬಿಡಿಸಿರುವ ಕಮಲದ ಮೊಗ್ಗು, ಪದ್ಮದಂತೆ ಕಾಣಿಸುವುದಿಲ್ಲ. ಮುಂದಿನ ಎಡಗೈ ಧರಿಸಿರುವ ಎಡಗೈಯಲ್ಲಿ ಉದ್ದವಾದ ಹಿಡಿಕೆಯುಳ್ಳ ಗದೆಯನ್ನು ಬಿಡಿಸಿದ್ದು, ಗದೆಯ (ಕೆಳಗಿನ ದುಡಾದ ಶಿರೋ ಭಾಗವನ್ನು) ಆಯುಧ ಪುರುಷನ ಮುಖದಂತೆ ಅಲಂಕಾರಿಕ ವಾಗಿ ಬಿಡಿಸಿದೆ. ಹೀಗೆ ಈ ಶಿಲ್ಪವನ್ನು ಗಮನಿಸಿದರೆ ಇದೂ ಕೇಶವನ ಶಿಲ್ಪವಾಗಿರದೇ, ಕಂಚಿಯ ವರದರಾಜಸ್ವಾಮಿಯ ಶಿಲ್ಪದಂತೆ ಕೆತ್ತಿರುವ 'ಅಲ್ಲಾಳನಾಥ'ನ ಶಿಲ್ಪವೆಂದು ಖಚಿತ ವಾಗುತ್ತದೆ. ಇಲ್ಲಿಯ ಶಾಸನವು 'ಕೊಂಡಜ್ಜಿಯ ಅಲ್ಲಾಳನಾಥ' ನೆಂದೇ ಕರೆದಿದೆ.

ಕರ್ನಾಟಕದಲ್ಲಿ ಹಲವೆಡೆ 'ಅಲ್ಲಾಳನಾಥನ ದೇವಾಲಯ ಗಳನ್ನು ನಿರ್ಮಿಸಿ ಆರಾಧಿಸುತ್ತಿದುದ್ದನ್ನು ಶಾಸನಗಳು ದಾಖಲಿಸಿವೆ, ಮಂಡ್ಯ ಜಿಲ್ಲೆಯ ಮದ್ದೂರು, ಬೆಳ್ಳೂರು, ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ತೆರಕಣಾಂಬಿ, ಹೊಂಗನೂರು, ಹುಲ್ಲಹಳ್ಳಿಗಳಲ್ಲೂ, ಹಾಸನ ಜಿಲ್ಲೆಯ ಕೆಲ್ಲವತ್ತಿ, ಕೊಂಡಜ್ಜಿಗಳಲ್ಲೂ, ಕೋಲಾರದ ತೇಕಲ್ಲಿನಲ್ಲಿ ಮುಂತಾದೆಡೆಗಳಲ್ಲಿ ಅಲ್ಲಾಳನಾಥನ ದೇವಾಲಯಗಳನ್ನು ನಿರ್ಮಿಸಿ, ಆರಾಧಿಸುತ್ತಿದ್ದುದನ್ನು ಶಾಸನಗಳು ದಾಖಲಿಸಿವೆ. ವಿಶೇಷವಾಗಿ ಹೊಯ್ಸಳ ವೀರನಾರಸಿಂಹ ದೇವನ ಕಾಲದ ನಂತರ, ಕರ್ನಾಟಕದಲ್ಲಿ ಅಲ್ಲಾಳನಾಥನ ಆರಾಧನೆ ಹೆಚ್ಚು ಜನಪ್ರಿಯವಾಗಿದೆ. ಕ್ರಿ.ಶ. ೧೨೧೮ರಲ್ಲಿ ಹೊಯ್ಸಳ ದೊರೆ ೨ನೇ ನಾರಸಿಂಹ ದೇವನು ಕಂಚಿಯಲ್ಲಿ ಭೇರುಂಡ ವರ್ಗವನ್ನು ಸ್ಥಾಪಿಸುತ್ತಾನೆ. ಚೋಳರಾಜ್ಯವನ್ನು ಆಕ್ರಮಿಸುತ್ತಿದ್ದ ಪಾಂಡ್ಯರ ಸೇನೆಯನ್ನು ಹಿಮ್ಮೆಟ್ಟಿಸಲೆಂದು ಹೊಯ್ಸಳ ದೊರೆ ಕಂಚಿಯಲ್ಲಿ ನಿಯೋಜಿಸಿದ್ದ ಸೇನಾಪಡೆಯನ್ನು 'ಭೇರುಂಡ ವರ್ಗ'ವೆಂದು ಕರೆದಿದೆ, ಹೀಗೆ ಭೇರುಂಡ ವರ್ಗದಲ್ಲಿದ್ದು ವಿಜೇತನಾಗಿ ಬಂದಿದ್ದ ಗೋಪಯ್ಯ ದಂಡನಾಯಕರು ರಾಜನಿಂದ ನವಿಲೆ ಗ್ರಾಮವನ್ನು ಪಿಂಡದಾನವಾಗಿ ಪಡೆದು, ಅಗ್ರಹಾರವನ್ನು ನಿರ್ಮಿಸುತ್ತಾರೆ. ಈ ಸಂದರ್ಭದಲ್ಲಿ ನವಿಲೆ ಗ್ರಾಮದ ಸಿದ್ಧಾಯ ೫೦೦ ಗದ್ಯಾಣದಲ್ಲಿ ಮೂವತ್ತು ಗದ್ಯಾಣವನ್ನು ಕಂಚಿಯ ಅಲ್ಲಾಳನಾಥನಿಗೆ ದಾನ ಬಿಟ್ಟಿದ್ದನ್ನು ನವಿಲೆಯ ಶಾಸನವು [ಎ.ಕ. ೧೦, ಚ.ರಾ.ಪಟ್ಟಣ ೬೩] ತಿಳಿಸಿದೆ. ಹೀಗೆ ಕಂಚಿ ಮತ್ತು ಕರ್ನಾಟಕಗಳ ನಡುವಣ ಸಂಬಂಧ ನಿಕಟವಾದಂತೆ ಕಂಚಿಯ ಅಲ್ಲಾಳನಾಥನಿಗೆ ಕನ್ನಡಿಗರು ಬಿಟ್ಟದಾನಗಳನ್ನು ಶಾಸನಗಳು ತಿಳಿಸಿವೆ. ಹೊಯ್ಸಳದೊರೆ ಮೂರನೇ ವೀರಬಲ್ಲಾಳ ದೇವರು, ಕಂಚಿಯ ದೇವಾಲಯದಲ್ಲಿ 'ವಲ್ಲಾಳ ಮಂಟಪ'ವನ್ನು ನಿರ್ಮಿಸಿ, ಅಲ್ಲಿ ರಾಜನೂ, ಅವನ ಪರಿವಾರದವರೂ ನೆರೆದು, ದೇವರ ಅಭಿಷೇಕವನ್ನು ನೋಡುತ್ತಿದ್ದರೆಂದು ಶಾಸನವೊಂದು ತಿಳಿಸಿದೆ. [Kanchipuram, P. No. 53]. ಕ್ರಿ.ಶ. ೧೧೭೫ರ ತೊಣ್ಣೂರಿನ ಶಾಸನವೊಂದು [ಎ.ಕ. ಸಂ. ೬, ಪಾಂಡವಪುರ ೬೪]. ಶ್ರೀ ವೀರಬಲ್ಲಾಳದೇವನ ಅಧಿಕಾರಿಯಾಗಿದ್ದ ಕಲಿಯಣ್ಣನು ಒಂಬತ್ತು ವೃತ್ತಿಗಳನ್ನು ಕೊಂಡುಕೊಂಡು ಕೊಂಚಿಪುರದ ಅಲ್ಲಾಳನಾಥ ದೇವರಿಗೆ ದಾನ ಬಿಟ್ಟಿದ್ದನ್ನು ತಿಳಿಸುತ್ತಿದೆ. ಹೀಗೆ ಕಂಚಿಯಲ್ಲಿ ನೆಲೆಸಿದ್ದ ಅಲ್ಲಾಳನಾಥ ದೇವರನ್ನು ಪೂಜಿಸುತ್ತಿದ್ದ ಜನರು ಕರ್ನಾಟಕದಲ್ಲಿದ್ದರೆಂದು ತಿಳಿಯುತ್ತದೆ. ಅಂಥ ಜನರು ಕರ್ನಾಟಕದಲ್ಲೂ ಅನೇಕ ಊರುಗಳಲ್ಲಿ ಅಲ್ಲಾಳನಾಥ ದೇವರನ್ನು ಸ್ಥಾಪಿಸಿದರು. ಹಾಸನ ಜಿಲ್ಲೆಯ ಕೆಲ್ಲವತ್ತಿ ಶಾಸನವು ಕ್ರಿ.ಶ. ೧೨೬೭ರಲ್ಲಿ ದೇವಣ್ಣನವರು ಲಕ್ಷ್ಮೀನಾರಾಯಣ ದೇವಾಲಯದಲ್ಲಿ ಅಲ್ಲಾಳ ಪೆರಮಾಳು ದೇವರನ್ನು ಪ್ರತಿಷ್ಠೆ ಮಾಡಿ, ಮಹಾಜನರ ಕೈಯಲ್ಲಿ ಭೂಮಿಯನ್ನು ಕೊಂಡು, ದೇವರ ಅಮೃತಪಡಿ ಮತ್ತು ಅರ್ಚನೆಗೆಂದು ದಾನ ಬಿಟ್ಟಿದ್ದನ್ನು ತಿಳಿಸಿದೆ. [ಎ.ಕ. ಸಂ. ೮, ಹಾ ೭೫].

ಮದ್ದೂರಿನ ತಮಿಳು ಶಾಸನವೊಂದು ತ್ರಿಭುವನ ಚಕ್ರವರ್ತಿ ಕೊನೇರ್ಮ್ಮೈಕೊಂಡಾನ್ ಎಂಬುವನು ಭಾದ್ರಪದ ಮಾಸದ ಚಿತ್ತರೈ ನಕ್ಷತ್ರದಂದು ಮಾಡುವ **ಭುವನೈಕವೀರ ಸಂಧಿ** ಉತ್ಸವದಂದು, ಅರುಳಂದನಾಥದೇವರ ನೈವೇದ್ಯ ಮತ್ತು ತಿರುಮಾಲೆಗೆಂದು ಪಳ್ಳಿಪೆರಿಯೂರಿನ ಒಂದು ಕೊಳಗ ಗದ್ದೆ ಮಣ್ಣನ್ನು ಸರ್ವಮಾನ್ಯವಾಗಿ ಬಿಟ್ಟದ್ದನ್ನು ತಿಳಿಸಿದೆ. [ಎ.ಕ. ಸಂ. ೭, ಮದ್ದೂರು ೧೯]. ಕ್ರಿ.ಶ. ೧೨೭೮ರ ಶಾಸನವು [ಎ.ಕ. ೭, ಮದ್ದೂರು ೧]. ಹೊಯ್ಸಳ ದೊರೆ ನರಸಿಂಹದೇವ

ಬಲ್ಲಾಳನ ಮಂತ್ರಿ ಚಿಕ್ಕಕೇತಯ್ಯನು ಅನಾದಿ ಅಗ್ರಹಾರವಾದ ಶ್ರೀ ನಾರಸಿಂಹ ಚತುರ್ವೇದಿ ಮಂಗಲದ ನರಸಿಂಹ ದೇವರಿಗೂ ಶ್ರೀ ಅಲ್ಲಾಳ ಪೆರಮಾಳ ದೇವರಿಗೂ ದಾನ ಬಿಟ್ಟಿದ್ದನ್ನು ತಿಳಿಸಿದೆ. ಮುಂದೆ ವಿಜಯನಗರದ ಅರಸರು ಶ್ರೀ ಅಲ್ಲಾಳ ದೇವರ ಅಂಗರಂಗಭೋಗಕ್ಕೆ ಮತ್ತು ಅಮೃತಪಡಿಗೆ ಸಲ್ಲುವುದೆಂದು ಕುಪ್ಪೆ ಮದ್ದೂರು ಗ್ರಾಮಗಳನ್ನು ಬಿಟ್ಟಿದ್ದನ್ನು ಶಾಸನವೊಂದು ದಾಖಲಿಸಿದೆ.

ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಗ್ರಾಮದ ಶಾಸನವು ವೀರ ನಾರಸಿಂಹ ದೇವರ ಮಹಾಪ್ರಧಾನಿ ಪೆರುಮಾಳೆ ದಂಡನಾಯಕರು, ಉದ್ಭವ ನರಸಿಂಹಪುರವಾದ ಬೆಳ್ಳೂರಿನ ಮಧ್ಯದ ಶ್ರೀ ಪ್ರಸನ್ನ ಮಾಧವ ದೇವರು, ರಾಮಕೃಷ್ಣ ದೇವರು, ಶ್ರೀ ವರದಲ್ಲಾಳನಾಥದೇವರು ಬಿಜಯಂಗೈಯು ವಾಗ, ದೇವರ ಅಮೃತಪಡಿ, ನಿಬಂಧಕಾರರ ಜೀವಿತಕ್ಕೆಂದು ದಾನ ಬಿಟ್ಟದ್ದನ್ನು ತಿಳಿಸಿದೆ. **[ಎ.ಕ. ೭, ನಾಮಂ ೭೩]**. ಬೆಳ್ಳೂರಿನಲ್ಲಿ ಇವರು 'ಅಲ್ಲಾಳ ಸಮುದ್ರ'ವೆಂಬ ಕೆರೆಯನ್ನು ಕಟ್ಟಿಸುತ್ತಾರೆ.

ಪೆರಮಾಳು ದಂಡನಾಯಕರೇ ಕ್ರಿ.ಶ. ೧೩೦೩ರಲ್ಲಿ ತೆರಕಣಾಂಬಿ ನೆಲೆವೀಡಿನ ಪದಿನಾಲ್ಕು ನಾಡನ್ನು ಪಾಲಿಸುತ್ತಿದ್ದಾಗ ಇವನ ಮಗನಾದ ಮಾಧವ ದಂಡನಾಯಕನು ತೆರಕಣಾಂಬಿಯಲ್ಲಿ ಶ್ರೀ ವರದ ಅಲ್ಲಾಳನಾಥನನ್ನು ಪ್ರತಿಷ್ಠಾಪಿಸಿ ದಾನ ನೀಡಿದ್ದನ್ನು ಶಾಸನವು ತಿಳಿಸುತ್ತಿದೆ. **[ಎ.ಕ. ಸಂ. ೪, ಚಾ.ನ. ೩೯]**. ಮುಂದೆ ಕ್ರಿ.ಶ. ೧೫೦೪ರಲ್ಲಿ ಈ ದೇವರ ಅಂಗಭೋಗ, ರಂಗಭೋಗ, ಅಮೃತ ಪಡಿಗೆಂದು ಉಮ್ಮತ್ತೂರಿನ ಶ್ರೀ ವೀರನಂಜರಾಯವೊಡೆಯರು ದಾನ ನೀಡಿದ್ದನ್ನು ಮತ್ತೊಂದು ಶಾಸನ ತಿಳಿಸಿದೆ. **[ಎ.ಕ. ೩, ಗುಂಡ್ಲುಪೇಟೆ ೧೧೫]**.

ಕ್ರಿ.ಶ. ೧೩೩೨ರಲ್ಲಿನ ಗುಂಡ್ಲುಪೇಟೆ ತಾಲ್ಲೂಕಿನ ಹುಲ್ಲಹಳ್ಳಿ ಗ್ರಾಮದ ವರದರಾಜಸ್ವಾಮಿ ದೇವಾಲಯದ ಶಾಸನವು **[ಅದೇ ಗುಂ.ಪೇ. ೧೩೮]**. ಹೊಯ್ಸಳ ದೊರೆ ೨ನೇ ಬಲ್ಲಾಳ ದೇವನ ಪ್ರಧಾನಿ ಮಾಧವ ದಂಡನಾಯಕನು ಪದಿನಾಲ್ಕು ನಾಡನ್ನು ಆಳುತ್ತಿದ್ದಾಗ ಸೂರ್ಯಗ್ರಹಣದಂದು ಹುಲ್ಲನಹಳ್ಳಿಯ ಅಲ್ಲಾಳನಾಥದೇವರ ಅಂಗರಂಗ ಭೋಗಕ್ಕೆಂದು ಕೇತಮ್ಮನಹಳ್ಳಿಯನ್ನು ಸರ್ವಬಾಧಾ ಪರಿಹಾರವಾಗಿ ಬಿಟ್ಟದ್ದನ್ನು ತಿಳಿಸಿದೆ. ಇದೇ ದೇವರಿಗೆ ಕ್ರಿ.ಶ. ೧೬೧೪ರಲ್ಲಿ ಬಸವರಾಜ ಒಡೆಯರು ದೇವರ ಶ್ರೀ ಕಾರ್ಯಕ್ಕೆಂದು ದಾನ ನೀಡಿದ್ದಾರೆ. [ಅದೇ ಗುಂ.ಪೇ. ೧೪]. ಹೀಗೆ ಹಲವೆಡೆ ಅಲ್ಲಾಳನಾಥ ದೇವಾಲಯಗಳು ರಚನೆಗೊಂಡದ್ದನ್ನು ಕಾಣುತ್ತೇವೆ.

ವರದರಾಜಸ್ವಾಮಿಯ ದೇವಾಲಯಗಳಲ್ಲಿ ವಿಶೇಷ ವಾಗಿ ರಾಮಾನುಜಾಚಾರ್ಯರು ಕಂಚಿಯ ದೇವಾಲಯದಲ್ಲಿ ನಿರೂಪಿಸಿಕೊಟ್ಟಂತೆ, ದೇವಾಲಯದ ಪೂಜಾ ವಿಧಿ ವಿಧಾನ ಗಳೂ ಮತ್ತು ಆಡಳಿತ ನಿರ್ವಹಣೆಯೂ ನಡೆಯುತ್ತಿದ್ದವು. ಆ ಕಾಲದ ವೈಷ್ಣವ ದೇವಾಲಯಗಳ ದಿನಚರಿಯ ಕಾರ್ಯಗಳ ಬಗೆಗೆ ಕೋಲಾರ ಜಿಲ್ಲೆಯ ಟೇಕಲ್‌ನ ವರದರಾಜಸ್ವಾಮಿ ದೇವಾಲಯದ ಶಾಸನಗಳು ಬೆಲಕು ಚೆಲ್ಲಿವೆ. ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕಿನ ವರದರಾಜಸ್ವಾಮಿ ದೇವಾಲಯದ ಶಾಸನವೊಂದು, ಹೊಯ್ಸಳ ದೊರೆ ೨ನೇ ವೀರಬಲ್ಲಾಳ ದೇವನ ಕಾಲದಲ್ಲಿ ಮಹಾಪ್ರಧಾನಿ ವಲ್ಲಪ್ಪ ದಂಡನಾಯಕರು, ಅವರ ಅಣ್ಣ ಸಿಂಗೇಯ ದಂಡನಾಯಕ ರೊಂದಿಗೆ ದೇವರ ಅಮೃತಪಡಿ, ಶಾತ್ತುಪಡಿ, ತಿರುವಳಕ್ಕು, ತಿರುಮೇರುಪೂಚ್ಚು ಮತ್ತು ತಿರುಪಣ್‌ಗಾಗಿ, ಆಳಂಬಾಳು, ಕ್ಕಜ್‌ಪಳ್ಳಿ ಮತ್ತು ಪೂವೈಪಳ್ಳಿ ಗ್ರಾಮಗಳನ್ನು ದಾನ ಬಿಟ್ಟಿದ್ದನ್ನು ತಿಳಿಸಿದೆ. **[ಎ.ಕ. ೧೦ (ರೈಸ್‌ಸಂ) ಮಾಲೂರು ೧೦, ೧೧, ೧೨]**. ಇದೇ ದೇವಾಲಯದ ಅನೇಕ ದಾನಗಳನ್ನು ಸ್ಥಾನೀಕನಾಗಿದ್ದ ಚೊಕ್ಕ ಪೆರುಮಾಳ್ ದಾಸನೆಂಬುವನು ಸ್ವೀಕರಿಸಿದ್ದನ್ನು ಶಾಸನಗಳು ತಿಳಿಸಿವೆ. ಕ್ರಿ.ಶ. ೧೩೧೦ರ ಶಾಸನವೊಂದು ಚೊಕ್ಕ ಪೆರವಾಳ ದಾಸನು ಈ ದೇವಾಲಯುದ ನಂಬಿಯಾರ್ ಭಟರ್, ಪೆರಮಾಳ್ ಭಟರ್, ಚೊಕ್ಕರ ಪೆರಿಯಪೆರಮಾಳ್, ಕೇಶವ ಪೆರಮಾಳ್ ಮೊದಲಾದ ಆರು ಜನ ಪೂಜಾರಿಗಳಿಗೆ ದಾನ ಬಿಟ್ಟಿದ್ದನ್ನು ತಿಳಿಸಿದೆ ಇವರಲ್ಲದೆ, ದಾಮೋದರ ಮತ್ತು ವರಂದರುಮ್ ಪೆರಮಾಳರನ್ನು ದೇವಾಲಯದ ಮುಖ್ಯ ಅರ್ಚಕರನ್ನಾಗಿ ನೇಮಿಸಿದ್ದು, ಇವರಿಗೆ 'ವತಿಹಳ್ಳಿಯ ಬಳಿ ಮೂರು ಖಂಡುಗ ಗದ್ದೆ ಬಿಟ್ಟದ್ದನ್ನು ಶಾಸನ ದಾಖಲಿಸಿದೆ. ಈ ದೇವಾಲಯದ ಇನ್ನೊಂದು ಶಾಸನವು ೧೮ ಜನ ಪೂಜಾರಿಗಳಿಗೆ ದಾನ ಬಿಟ್ಟಿದ್ದನ್ನು ತಿಳಿಸಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಅರ್ಚಕ ವರ್ಗದವರಿದ್ದುದ್ದು ಅಲ್ಲಿ ವಿವಿಧ ಧಾರ್ಮಿಕ ಚಟುವಟಿಕೆಗಳು ನಡೆಯುತ್ತಿತ್ತೆಂದೂ ಸೂಚಿಸುತ್ತಿದೆ.

ಕ್ರಿ.ಶ. ೧೪೩೦ರಲ್ಲಿ ವಿಜಯನಗರದ ಅರಸ ೨ನೇ ದೇವರಾಯನ ಅಧಿಕಾರಿ ಗೋಪರಾಜನ ಕಾಲದಲ್ಲಿ ಈ ದೇವಾಲಯ ಜೀರ್ಣೋದ್ಧಾರಗೊಂಡಿದ್ದು, ಮುಖಮಂಟಪ, ಗರುಡಸ್ತಂಭ, ಬಲಿಪೀಠ, ಮುಖ್ಯದ್ವಾರ, ಗೋಪುರಗಳನ್ನು ನಿರ್ಮಿಸಲಾಗಿದೆ. ಇದನ್ನು ತಿಳಿಸುವ ಶಾಸನವೇ ಇಲ್ಲಿ ನಡೆಯುತ್ತಿದ್ದ ರಂಗಭೋಗದ, ಅಂಗಭೋಗದ ವೈಭವವನ್ನು ಬಣ್ಣಿಸಿದೆ. ದೇವರ ಅಂಗಪೂಜೆಯಲ್ಲಿ ನಿರತರಾಗಿದ್ದ ಪೂಜಾರಿಗಳಾದ ತಿಗುಳ ಬ್ರಾಹ್ಮಣರಾದ ವರದರಾಜಭಟ್ಟರು, ದೇವರಾಜಭಟ್ಟರು, ಶಾಮಂಣ, ಪರಿಚಾರಕ ರಾಮಡು, ದೇವರಿಗೆ ಬೋನವ ಮಾಡುವ ಅಳಗಿ ವರದು, ದೇವರ ನಾಮಸ್ಮರಣೆ ಮಾಡುವ ಶ್ರೀ ವೈಷ್ಣವರು ಅಯಿಪಿಳ್ಳೆ, ಬನ್ನೂರ

ಸಟ್ಟದ ತಿರುವೆಂಗಡದಾಸ, ಹಿರಿಯ ದಾಸು, ದೇವಣ್ಣ, ವಿನ ರದಣ್ಣ, ಮಾಧವದಾಸ, ಇವರಿಗೆಲ್ಲ ದಾನ ನೀಡಲಾಗಿದೆ. ಂಗಭೋಗದಲ್ಲಿ ನಿರತರಾದ ಶಂಖ ನುಡಿಸುತ್ತಿದ್ದ ಶ್ರೀರಂಗ, ಉಪಾಂಗದ ವರದ, ಹಾಡುತ್ತಿದ್ದ ವರದಿಕಾ, ಅವರ ಮಗಳು ಅಲ್ಲಿನಾಚಿ, ಅಠಂಗಿದೇವಿ, ನಟುವ ನಾಯನಾರ್ ಮಗಳು ಚಿಕ್ಕನಾಚಿ ಮೊದಲಾವರಿಗೆಂದು ಗೋಪರಾಜನು ಸೆಟ್ಟಿಹಳ್ಳಿ ಗ್ರಾಮವನ್ನು ಬಿಡುತ್ತಾನೆಂದು ಶಾಸನ ತಿಳಿಸಿದೆ. ಇದಲ್ಲದೇ ೀಕಲ್ ನಾಡಿನ ಅಳಂಬಾಳಿ, ಕೆಂಮಾಳ, ವತಿವಳ್ಳಿ, ವಿರಂಗ ಪುತ್ತೂರು, ಹುಣಸೆಕೊಪ್ಪ, ಅಂಣಂದನಹಳ್ಳಿಗಳನ್ನು ಗ್ರಾಮದಾನ ೀಡಿ, ದೇವಾಲಯದಲ್ಲಿ ರಂಗಭೋಗ ನಿರಂತರವಾಗಿ ಡೆಯುವಂತೆ ವ್ಯವಸ್ಥೆ ಮಾಡಲಾಗಿತ್ತು.

ಗೋಪರಾಜನ ಪ್ರಧಾನಿ ಸಿಂಗರಾಜನು ದೇವಾಲಯದ ಲಭಾಗದಲ್ಲಿ ಅರಮನೆ ಕಟ್ಟಿಸಿಕೊಂಡಿದ್ದನು. ಇವನು ಉದಯ ಮತ್ತು ಸಂಧ್ಯಾ ಎರಡೂ ಕಾಲದಲ್ಲಿ ಸ್ನಾನ, ಔಪಾಸನ ಮಾಡುತ್ತಿದ್ದು, ದೇಹಾರ ಮಾಡಿ, ವರದರಾಜ ದೇವಾಲಯದ ಖರ ದರ್ಶನ ಮಾಡಿ, ದೇವರಿಗೆ ನೈವೇದ್ಯ, ತಾಂಬೂಲ ಮರ್ಪಿಸಿ, ತುಳಸೀ ತೀರ್ಥ ತೆಗೆದುಕೊಂಡು ದೇವರ ಂಗರಂಗಭೋಗ ಪ್ರತಿಷ್ಠೆ ಮಾಡಿದ್ದನ್ನು ಶಾಸನ ತಿಳಿಸಿದೆ. ಈ ಮೂಲಕ ಶ್ರೀ ವೈಷ್ಣವ ಭಕ್ತನೊಬ್ಬನ ದೈನಂದಿನ ರ್ಯವೈಖರಿಯು ತಿಳಿಯುವಂತಿದೆ. ಈ ಸಿಂಗರಾಜನು ೀವಾಲಯದ ಮೂಡಣ ಗೋಪುರಕ್ಕೆ ಕದ ಮಾಡಿಸಿ, ೋಪುರ ನಿರ್ಮಿಸುತ್ತಾನೆ. ಇದನ್ನು ನಿರ್ಮಿಸಿದ್ದಲ್ಲದೆ ರಾಜಗಂಭೀರ' ಎಂಬ ಕೊತ್ತಳವನ್ನು ಕಟ್ಟಿಸುತ್ತಾನೆ ಎಂದು ಶಸನ ತಿಳಿಸಿದೆ.

ಕ್ರಿ.ಸ. ೧೪೮೯ರ ಶಾಸನವು [ಎ.ಕ. ೧೦, (ರೈಸ್ ೦.) ಮಾಲೂರು ೩]. ದೇವಾಲಯದಲ್ಲಿ ಎರಡು ಜಾವದ ೂಜೆ, ನಾಲ್ಕು ಜಾವದ ಪೂಜೆಗಳು ನಡೆಯುತ್ತಿತ್ತೆಂದು ತಿಳಿಸಿದೆ. ದಕ್ಕಾಗಿ ಬಾಳಿ ಪ್ರಸಾದ, ಇರುನಾಳಿ ಪ್ರಸಾದ, ನಾಜಿವಳಿ ಸಾದ, ಇರ್ಪಡಿ ಸೇವೆ ನಡೆಯುತಿತ್ತೆಂದು ತಿಳಿದುಬರುತ್ತದೆ. ಪೂಜಾ ಸಮಯದಲ್ಲಿ ತಿರುವಂದಿ ಕಾಪು (ಸಂಜೆ ಆರತಿ) ಆದಮೇಲೆ ತಿರುವಾಯ್‌ಮೋಳಿಯನ್ನು ತಿರುಪಲ್ಲಾಂಡುವನ್ನು ಹಾಡುತ್ತಿದ್ದರು. ಹೀಗೇ ದೇವಾಲಯದಲ್ಲಿ ನಡೆಯುತ್ತಿದ್ದ ಪೂಜಾ ವಿವರಗಳನ್ನು ಕಂಡಾಗ, ಅಂದಿನ ದಿನಗಳಲ್ಲಿ ಈ ದೇವಾಲಯವು ಶ್ರೀ ವೈಷ್ಣವರ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿತ್ತೆಂದು ತಿಳಿಯುತ್ತದೆ.

ಅಲ್ಲಾಳನಾಥನ ಆರಾಧನೆಯು ಕರ್ನಾಟಕದಲ್ಲಿ ಬೆಳೆದಂತೆ, ಆ ದೇವರನ್ನು ಆರಾಧಿಸುವ ಜನಸಮುದಾಯವು ಹೆಚ್ಚಾಯಿತು ಈ ದೇವಾಲಯಗಳಿಗೆ ಬಿಟ್ಟ ದಾನಗಳಲ್ಲಿ ಗ್ರಾಮವನ್ನು 'ಅಲ್ಲಾಳಪುರ'ವನ್ನಾಗಿ ಮಾಡಿದ್ದನ್ನು ಶಾಸನಗಳು ದಾಖಲಿಸಿವೆ. ಗುಂಡ್ಲುಪೇಟೆ ತಾಲ್ಲೂಕಿನ ತೆರಕಣಾಂಬಿಯ ಶಾಸನವು [ಗುಂ.ಪೇ. ೧೧೩]. ತೆರಕಣಾಂಬಿಯ ಸಮೀಪ ಗ್ರಾಮವಾದ ಹುಲ್ಲಹಳ್ಳಿಗೆ ಸಲುವ ಅಲ್ಲಾಳನಾಥಪುರದ ಮೂಡಣದ ಗದ್ದೆಯನ್ನು ಎಂದು ದಾಖಲಿಸಿದೆ. ಇದರಂತೆ ಹಳಗನಹಳ್ಳಿ ಶಾಸನವು [ಪಿರಿಯಾಪಟ್ಟಣ ೧೯] ಸಿಂಗೇಯ ದಣ್ಣಾಯಕರು ಹಳಗನಹಳ್ಳಿಯನ್ನು ಅಲ್ಲಾಳಪುರವಾಗಿ ಮಾಡಿದ್ದನ್ನು ದಾಖಲಿಸಿದೆ. ಹೀಗೆ ಬೆಳೆಯುತ್ತಾ ಬಂದ ಅಲ್ಲಾಳನಾಥನ ಆರಾಧನೆ ೧೯-೨೦ನೇ ಶತಮಾನದವರೆಗೆ ನಡೆದುಬಂದಿದೆ. ಮೇಲುಕೋಟೆಯ ಕಂಚಿಮಠದ ತಾಮ್ರಶಾಸನವು ಕಂಚಿಯ ವರದರಾಜದೇವರ ನೈವೇದ್ಯಕ್ಕಾಗಿ ಬಿಟ್ಟ ಗ್ರಾಮದಾನವನ್ನು ತಿಳಿಸಿದೆ. (ಪಾಂ.ಪುರ ೨೧೫) ಮೈಸೂರಿನ ಶಾಸನವೊಂದು ೧೯ನೇ ಶತಮಾನದಲ್ಲಿ ಮೈಸೂರಿನಲ್ಲಿ ಕೃಷ್ಣರಾಜ ಒಡೆಯರು ವರದರಾಜಸ್ವಾಮಿ ದೇವಾಲಯವನ್ನು ನಿರ್ಮಿಸಿದ್ದನ್ನು ತಿಳಿಸಿದೆ. ಹೀಗೆ ಜಗನ್ನಾಥನಾದ 'ಅಲ್ಲಾಳನಾಥನ ಆರಾಧನೆ' ನಿರಂತರವಾಗಿ ಸಾಗಿ ಬಂದಿದ್ದು, ನಾಡಿನ ಜನರಲ್ಲಿ ವಿಷ್ಣು ಭಕ್ತಿಯೊಂದಿಗೆ ಧಾರ್ಮಿಕ ನಂಬಿಕೆಗಳು ಉಳಿದು ಬಂದಿರುವುದನ್ನು ಸಾರುತ್ತಿದೆ.

## ಆಧಾರಸೂಚಿ


A.K. Sheshadri, *'Kanchipuram and Its Temples'*, Tirupathi, 2003.

**ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳು,** ಮೈಸೂರು ವಿ.ವಿ. ಪ್ರಕಟಣೆ, ಸಂ. ಬಾ.ರಾ. ಗೋಪಾಲ್.

**ಇತಿಹಾಸ ದರ್ಶನ,** ಸಂಪುಟ ೨೧, ೨೨.

**ಎಪಿಗ್ರಾಫಿಯಾ ಕರ್ನಾಟಿಕಾ,** ಸಂ. ೧೦, (ರೈಸ್ ಆವೃತ್ತಿ).

ಕ.ವೆಂ. ರಾಜಗೋಪಾಲ*

# ಬೆಂಗಳೂರಿನ ಗವಿಗಂಗಾಧರೇಶ್ವರ ಒಂದು ಅಧ್ಯಯನ

ಸೌದತ್ತಿಗೆ ಹೋದವರಿಗೆ ರ(ಅ)ಟ್ಟರ ಕೋಟೆಯನ್ನು ನೋಡುವ ಸುಯೋಗವುಂಟಾಗುತ್ತದೆ. ಇದನ್ನು 'ರಟ್ಟಪಾಡಿ' ಎಂಬ ರಾಷ್ಟ್ರಕೂಟರ ಒಂದು 'ಬ್ರಾಂಚು' ಎಂದು ನಮ್ಮ ಇತಿಹಾಸಕಾರರು (ಆರ್.ಎಸ್. ಪಂಚಮುಖಿ ಮೊದಲಾದವರು) ಗುರುತಿಸುತ್ತಾರೆ (ಒಂದು ಶಾಸನ ಕೋಟೆಯೊಳಗೇ ಇದೆಯಷ್ಟೆ) ಇಲ್ಲಿ ರಾಷ್ಟ್ರ>ರಟ್ಟ=ಅಟ್ಟ ಆಗಿರಲು ಸಾಧ್ಯ. ಇದಕ್ಕೆ ಸಮರ್ಥನೆಯನ್ನು ಶಬ್ದಮಣಿ ದರ್ಪಣಂ ಮೊದಲಾದ ವ್ಯಾಕರಣಗಳಿಂದ ಕಾಣಬಹುದು. ಷ್ಟುತ್ವ ಸಂಧಿಯಂತೆ ಷಕಾರಕ್ಕೆ 'ಟ'ಕಾರವಿದೆ. (ವಿಷ್ಣು ಎಂಬುದು ವಿಟ್ಟು ಎಂದೂ ಕೃಷ್ಣ ಎಂಬುದು ಕಿಟ್ಟ ಎಂದೂ ಆಗುತ್ತದೆ)

ಧಾರವಾಡದ ಕನ್ನಡದಲ್ಲಿ ಕೃಷ್ಣ>ಕ್ರುಷ್ಣ>ಕುಷ್ಟ ಆಗುತ್ತದೆ. ಕೃಷ್ಣರಾಯ ಎಂಬಾತ ತನ್ನ ರುಜುವನ್ನು ಕ್ರುಷ್ಣರಾಯ ಎಂದೂ ಕುಷ್ಟರಾಯ–ಎಂದೂ ಮಾಡಬಹುದು. ಆದುದರಿಂದ ರಾಷ್ಟ್ರ>ರಟ್ಟ ಜನರ ಮಾತಿನ ಧಾಟಿಯಲ್ಲಿ ಇಂಥ ಸಾಧ್ಯತೆಯನ್ನು ಕಾಣಬಹುದು. ಅದರಲ್ಲೂ ಬ್ರಾಹ್ಮಣ ಹಾಗೂ ವೀರಶೈವ (?) ರಲ್ಲಿರಬಹುದಾಗಿದೆ. ಮುದವೀಡು ಕೃಷ್ಣರಾಯರು ಮುದವೀಡು ಕ್ರುಷ್ಣರಾಯರು ಎಂದೇ ಗುರುತಿಸಿಕೊಂಡಿದ್ದರು. ಇಲ್ಲಿಯ 'ಕ್ರುಷ್ಣ' ಎಂಬುದು 'ಕುಷ್ಠ' ಕೂಡ ಆಗಬಹುದು. ಶ್ರೀರಂಗರ ನಾಟಕಗಳಲ್ಲಿ ಈ ಬಗೆಯ ಉಚ್ಚಾರವು ಕಂಡುಬರುತ್ತದೆಯಷ್ಟೆ !

ಶಿವರಾಮ ಕಾರಂತರು ಯಕ್ಷಗಾನದ ಬಣ್ಣದ ವೇಷಧಾರಿ ಬಣ್ಣದ ಕುಷ್ಠ ಎಂಬ ಕಲಾವಿದನನ್ನು ಗುರುತು ಮಾಡಿದ್ದಾರೆ. ಶಿರಸಿಯ ಕಡೆಯ ಹಾಲಕ್ಕಿ ಜನಾಂಗದಲ್ಲಿ ಈತ ಒಬ್ಬ 'ನಿರಕ್ಷರ ಕುಕ್ಷಿ'. ಆದರೆ ಒಬ್ಬ ಜಾನಪದ ಮಹಾನ್ ಕಲಾವಿದ ! ಯಕ್ಷಗಾನ ಬಯಲಾಟದಲ್ಲಿ ಬಣ್ಣದ ವೇಷಕ್ಕೆ 'ಜಾನಪದ ಸತ್ವ'ವು ಸೇರಿದಲ್ಲದೆ ಕಳೆ ಕಟ್ಟುವುದಿಲ್ಲ. ಧರ್ಮಸ್ಥಳದ ಮೇಳದಲ್ಲಿ ಒಬ್ಬಾತ ಚಂದ್ರಗಿರಿ ಅಂಬು, ಈತನಿಗೆ ತನ್ನ ರುಜು ಮಾಡುವುದಕ್ಕೂ ಬರುತ್ತಿರಲಿಲ್ಲ. ಆದರೆ ಮೇಳದಲ್ಲಿ ಈತನ ಪಾತ್ರ ಅದ್ಭುತ ರಮ್ಯ. ತನ್ನ ವೇಷವನ್ನು ತಾನೆ ಮಾಡಿಕೊಳ್ಳುತ್ತಿದ್ದ 'ಚುಟ್ಟಿ'ಯ ಸಂದರ್ಭದಲ್ಲಿ ಮಾತ್ರ ಈತನು ಅಂಗಾತ ಮಲಗಿ ಸುಮಾರು ಒಂದು ಗಂಟೆಯಷ್ಟು ಕಾಲ ಅಲಂಕರಿಸಿಕೊಳ್ಳುತ್ತಿದ್ದ. ಬಣ್ಣದ ವೇಷವೆಂದರೆ ರಾಕ್ಷಸ ? ಸುಶಿಕ್ಷಿತ ವೇಷ–ಪಾತ್ರ. ಇಲ್ಲಿ 'ಚುಟ್ಟಿ' ಕೂಡ ಪ್ರಾಕೃತದಿಂದ ಬಂದಿರಬಹುದಾದ 'ಪದ' ಇಷ್ಟು ಗಮನಿಸಿದ ಮೇಲೆ 'ಕೋಷ್ಟ' ಪದಕ್ಕೆ ಬರಬಹುದು. ದಿ। ಹಡಪದ್ ಅವರ ವಿವರಣೆ ಅವಶ್ಯಕವಾಗುತ್ತದೆ. ಇವರು ಬಾದಾಮಿ (ಉಚ್ಚಾರದಲ್ಲಿ 'ಬದಾಮಿ') ಯವರು (ಗೆಳೆಯರು) ಇಲ್ಲಿಯ ಗುಹಾಂತರ ದೇಗುಲಗಳ ಸಾಲಿನಲ್ಲಿ ಕೊನೆಯದು ಒಂದು ಜೈನ ಗುಹೆ; ಉಳಿದ ಗುಹೆಗಳಂತೆ ಕಲಾತ್ಮಕತೆಯಲ್ಲಿ 'ಸಂಸ್ಕೃತೀಕರಣ' ಗೊಂಡುದಲ್ಲಿ ಇದಕ್ಕೂ ಮುಂದಕ್ಕೆ ಇಳಿದುಹೋದರೆ 'ಕೋಷ್ಠ' ರಾಯನ ಗುಹೆ ಸಿಗುತ್ತದೆ. ಇದನ್ನು ಅಥವಾ ಇಲ್ಲಿಯ ಮುಖ್ಯ ವಿಗ್ರಹವನ್ನು 'ಕುಷ್ಠರಾಯ' ಎಂದು ಕರೆಯುತ್ತಿದ್ದರು. ಅಂತೆ ಇದು 'ಕೋಷ್ಠ'ದ ಪೂರ್ವ ರೂಪ ! ಕುಷ್ಠಮ ಕೋಷ್ಠ ಆಗುತ್ತದೆ. (ಆದರೆ ಇದು 'ಕುಟ್ಟ' ಆದಂತಿಲ್ಲ) ವಿಗ್ರಹ ಮಾತ್ರ ಶಾಸ್ತ್ರಬದ್ಧವಾದ ರಚನೆಯಾಗಿದೆ. (ಇದರ ಹಿಂದಿನ ಮೇಲುಭಾಗದಲ್ಲಿ ನಮಗೆ ಬಲಗಡೆಯಿಂದ ಬೆಳಕು ಬೀಳಲು ರಂಧ್ರದ ಅವಕಾಶವಿದೆ. ಇದು ಕೊರೆದುದಲ್ಲ. ಸಹಜವಾದ 'ಒಡಕು' ಎನ್ನಬಹುದು. ಸುಮಾರು ಹತ್ತು ಹನ್ನೆರಡು ಅಡಿಗಳು ಬಗ್ಗಿ ಒಳಹೊಕ್ಕರೆ 'ಪ್ರತಿಮೆ' ಗಳ ಎದುರಿಗೆ ನಿಲ್ಲಬಹುದು, ಕೆಳಗೆ ಪೋಟೋಗೆಂದು ಕುಳಿತುಕೊಳ್ಳಲೂಬಹುದು. ಈ ಬಗೆಯ ವಿಗ್ರಹವನ್ನು ಈ ಗುಹೆಯಿಂದ ಮುಂದಕ್ಕೆ ಕೆಲವು ದೇಗುಲಗಳು. ಇವು ಅಗಸ್ತ್ಯತೀರ್ಥದ ಅಂಚಿನಲ್ಲಿವೆ. ಆಚೆಗೆ ಕೋಷ್ಠಗಳಿವೆ. ಅದರಲ್ಲಿ ಒಂದು ಶಾಕ್ತ ಪ್ರತಿಮೆ. ಈಗ ಕೈಗಳನ್ನು ಮುರಿಯಲಾಗಿದೆ. ಇದರಲ್ಲಿ ಒಂದರಲ್ಲಿ ಓಲೆಯ ಗ್ರಂಥವಿದ್ದಿದ್ದಿರಬಹುದು (ಕಾಣುತ್ತಿಲ್ಲ) ಆದರೆ ಈ ವಿಗ್ರಹದ ರಚನೆಯು ಶಾಸ್ತ್ರಬದ್ಧವಾಗಿದೆ. ಶಿಲ್ಪಶಾಸ್ತ್ರದ ಹಳೆಯತನಕ್ಕೆ ಇದು ಆಧಾರವೂ ಸಾಕ್ಷಿಯೂ ಆಗುತ್ತದೆ. ಇದು ಒಂದು 'ಶಾಕ್ತ'ದ ಗುರುಪ್ರತಿಮೆ. ಅಥವಾ ನಾಥಪಂಥದ ಪ್ರತಿಮೆ ಎನ್ನಬಹುದು. ಈ ಕೇಂದ್ರವನ್ನು ಏನೆಂದು ಕರೆಯುತ್ತಾರೋ ಖಚಿತವಿಲ್ಲ. ಆದರೆ ಈ ಪಂಥದ ಪ್ರತಿಮೆ ಎಂದರೆ ತಪ್ಪಾಗಲಾರದು.

ಇಂಥ ಶಾಕ್ತ ಪಂಥದ ಕುರುಹುಗಳು ಕನ್ನಡ ನಾಡಿನಲ್ಲಿ 'ನಂದಿ' ಗ್ರಾಮದ ಕೋಲಾರ ಜಿಲ್ಲೆ ದೇಗುಲಗಳ ಪ್ರಾಕಾರದಲ್ಲಿ,

* ಬೆಂಗಳೂರು.

ಾಗೆಯೇ ಬೆಂಗಳೂರಿನ ಗವಿಗಂಗಾಧರೇಶ್ವರ ಪ್ರಾಕಾರದಲ್ಲಿ ುತ್ತು ಕೋಟೆಯ (ಬೆಂಗಳೂರು) ಪ್ರಾಂಗಣದಲ್ಲಿ ವನಾಥಪಂಥರ ವಿಗ್ರಹಗಳಿವೆ. ಅಚ್ಚುಕಟ್ಟಾಗಿವೆ.

ಸದ್ಯಕ್ಕೆ ಈ ದೇಗುಲಕ್ಕೂ 'ಗವಿ ಗಂಗಾಧರ' ್ರಾಂಗಣಕ್ಕೂ ಸಂಬಂಧವೇ ಇಲ್ಲದಂತಿವೆ. ಆದರೂ ವಿಗಂಗಾಧರೇಶ್ವರ ಪ್ರಾಂಗಣವು ಐತಿಹಾಸಿಕವಾಗಿ, ನುಮಂತನಗರ (ಬೆಂಗಳೂರು)ಕ್ಕೆ ಅಂಟಿಕೊಂಡಂತೆ ದೆಯಷ್ಟೆ ! ಇಲ್ಲಿಯ ಮೂರು ಸ್ತಂಭಗಳಲ್ಲಿ ಒಂದು ಶೂಲವನ್ನು ಹೊತ್ತಿದೆ. ಸುಮಾರು ಹದಿನೈದು ಅಡಿಗಳು ತ್ತರ. ಮತ್ತೆರಡು ಹೋಲಿಕೆಯಾಗುವಂತೆ ಮಂಡಲ ಸೂಮಂಡಲ) ವನ್ನು ಹೊತ್ತಂತೆ ಮೂರೂ ಒಂದೇ ತ್ತರದಲ್ಲಿ ಗಮನ ಸೆಳೆಯುತ್ತವೆ. ಮತ್ತು ಒಂದು ರೈಟ್ ಂಗಲ್ಡ್ ತ್ರಿಕೋನವನ್ನು ಗುರುತಿಸುತ್ತವೆ. ಇದು ಹೇಗೆ ಂತೆಂಬುದು ಇತಿಹಾಸದಲ್ಲಿ ಅಡಗಿರುವಂತಿದೆ. ತೊಂಬತ್ತು ಗ್ರಿಯ ತ್ರಿಕೋಣವು ಟ್ರಿಗನಾಮಿಟ್ರಿಗೆ ಸೇರಿದುದು. ಈ ಸ್ತ್ರವು ಗಣಿತಶಾಸ್ತ್ರದಲ್ಲಿ ಅದರಲ್ಲೂ 'ಗ್ರೀಕ'ರಲ್ಲಿ ರ್ಕಮಿಡೀಸನ ನೆನಪು ತರುವಂಥದು. ಈ ಶಾಸ್ತ್ರದ ವಿಚಾರವು 'ಗವಿ'ಯ ಮುಂಭಾಗಕ್ಕೆ ಹೇಗೆ ಬಂದಿರಬಹುದೆಂಬುದು ಗೂಢ !

ಆದರೆ ಮುಂಚೆಯೇ ಹೇಳಿದ ಬಾದಾಮಿ, ನಂದಿಗ್ರಾಮ ಾಗೂ ಬೆಂಗಳೂರು) ಈ ಕೇಂದ್ರಗಳಿಗೆ ಸಾಮಾನ್ಯ ! ್ಯಕ್ಕೆ ಈ ವಿಚಾರಕ್ಕಿಂತ ಒಂದು ಕಿಟಕಿಯ ಮೂಲಕ ರ್ಷಕ್ಕೆ ಎರಡು-ಮೂರು ಬಾರಿ ಸೂರ್ಯನ ಕಿರಣವೊಂದು ಗಡೆಯಲ್ಲಿನ ಗರ್ಭಗುಡಿಯ 'ಅಂತರಾಳ'ದ ಮುಂದೆ ುವ ಬಸವನ (ಕಲ್ಲು) ಮುಖದ ಮೇಲೆ ಬಿದ್ದು ಒರೆಯಾಗಿ ನ್ನಡಿಯಂತೆ) ಮೂಲವಿಗ್ರಹ (ಇದು ಸುಮಾರು ಹತ್ತು-ನ್ನೆರಡು ಅಡಿಗಳು ಒಳಕ್ಕೆ) ಮೇಲೆ ಬೀಳುತ್ತದೆ. ಈ ಮತ್ಕಾರ ಮಾತ್ರ ಜನಜನಿತವಾಗಿದೆ. (ಡಾ। ಶೈಲಜಾ ಕೂಡ ಳುತ್ತಿದ್ದಾರೆ.) ಇಂತಹ ಐತಿಹ್ಯಕ್ಕೆ ಗುಹೆಯು ಸಹಜವಾಗಿ ರಾತನವಾದುದು. ಇದರ ಮೇಲು ಭಾವಣಿಯಂಥ ಗದಲ್ಲಿ ಸಹಜವಾದ ಅಲೆಗಳಂಥ ಗುರುತುಗಳಿವೆ. ರ್ಭಗುಡಿಯನ್ನು ಪ್ರದಕ್ಷಿಣೆ ಮಾಡಲು ಅನುಕೂಲವಾದ ಂದು 'ರೀತಿ' ಯೂ ಇದೆ. ಇದರ ಗೋಡೆಯಲ್ಲಿ ೀರಭದ್ರನ' ? ವಿಗ್ರಹವೂ ಬಲಗಡೆಯಿಂದ ಪ್ರವೇಶಿಸಿದಂತೆ ುಳು ಜುಳು' ಸದ್ದಿನಿಂದ ಒಳಗಿನ ನೆಲದಲ್ಲಿ ಹರಿಯುವ ಂದು ಝರಿಯಾಗಿ (ಇದನ್ನು ಅದೃಷ್ಟದ ಪರೀಕ್ಷೆಗೆ ಳಕೆಯಾಗುವಂತೆ) ಗಮನಕ್ಕೆ ಕತ್ತಲೆಯುಲ್ಲಿಯೇ ಡುಬರುತ್ತದೆ ಇತ್ಯಾದಿ, ಅವಕಾಶಗಳಿವೆ. ಅದುದರಿಂದಲೇ ಗುಹೆಗೆ 'ಮಾಂತ್ರಿಕತೆ'ಯು ಸೇರಿದಂತೆ ಜನಪ್ರಿಯವಾಗಿದೆ.

ಇಲ್ಲಿ ಮರೆತುಹೋಗದಂತೆ ಬಾದಾಮಿಯ 'ಕೋಷ್ಠ'ರಾಯನನ್ನು ಬೇರೆಡೆ ಕಾಣುತ್ತಿಲ್ಲ. ಆದರೆ 'ಕೋಷ್ಠರಾಯ' ಎಂಬುದು ಕುಷ್ಠರಾಯ ಮತ್ತು ಕೃಷ್ಣರಾಯ ಆಗುತ್ತದೆಯಷ್ಟೆ ಕೋಷ್ಠ ಮತ್ತು ಕುಷ್ಠ ಪದಗಳಿಗೆ ಜನಪದದಲ್ಲಿನ 'ಚಕ್ಕಾ-ಭಾರ' ಆಟದಲ್ಲಿ ಕವಡೆಗಳನ್ನು (ಎಂಟು ಕವಡೆಗಳು ಲೆಖ್ಖಕ್ಕೆ) ಬಿಟ್ಟಾಗ 'ಒಂದು' ಮಾತ್ರ ಅಂಗಾತ ಬಿದ್ದರೆ 'ಕುಷ್ಠ' ಎನ್ನುವುದುಂಟು. ಎರಡನೆಯದಾಗಿ 'ಕೋಷ್ಠ' ಪದವು 'ಮಗ್ಗಿ ಕೋಷ್ಠಕ' ದಲ್ಲಿಯೂ (ಒಂದರಿಂದ ಹತ್ತು, ನೂರು, ಸಾವಿರ ಹೀಗೆ) ಬರುತ್ತದೆ. ಇಲ್ಲೆಲ್ಲಾ ಅಂಕಿ ಮತ್ತು ಅಂಕಗಣಿತದಲ್ಲಿ 'ಸಂಖ್ಯೆ' ಯಾಗಿ ಬಳಕೆಯಾಗುತ್ತದೆಯಷ್ಟೆ ! 'ಕೃಷ್ಣ' ಎಂಬುದು 'ಕುಷ್ಠ' ಆಗುವಂತೆಯೇ ಮತ್ತೊಂದು ಅರ್ಥದಲ್ಲಿ ಬಳಕೆಯಾಗುವಲ್ಲಿ 'ಒಂದು', ಒಂದುನೂರು, ಸಾವಿರ, ಲಕ್ಷ ಇತ್ಯಾದಿಗಳಲ್ಲಿ ಇರಲೇಬೇಕಾದ ಹೆಣಿಗೆಯ ಮೂಲ ಆಗಿರುತ್ತದೆ. ಇದು ಒಂದು ಶಾಸ್ತ್ರಬದ್ಧತೆಯಂತೆ (ಗಣಿತ ಶಾಸ್ತ್ರ) ಸೇರುತ್ತದೆ. ಆಧುನಿಕರೂ ಈ ಬಗೆಯನ್ನು ಬಳಸುವುದುಂಟು. ಕೃಷ್ಣನ ಲೆಖ್ಖ ರಾಮನ ಲೆಖ್ಖ ಎನ್ನುವಲ್ಲಿ ಸಂಕೇತವಾಗಿ ಬಳಕೆಯಷ್ಟೆ. ಕೋಷ್ಠರಾಯ-ಕುಷ್ಠರಾಯ-ಕೃಷ್ಣರಾಯನು ಮೊದಲಿಗನಾಗುವ ವಿಚಾರವಿರಬಹುದು. ಆದರೆ ಇದು ಗಣಿತವಾಗಿ, ಒಂದು ಶಾಸ್ತ್ರವಾಗಿರಬೇಕೆಂಬ ಅನುಮಾನಕ್ಕೆ 'ತ್ರಿಕೋಣ'ವೂ ಸೇರುತ್ತದೆ. ಇದು ಹೇಗೆ ಗ್ರೀಕರಿಂದ ಮೊದಲಾಗಿ 'ಶಾಸ್ತ್ರ ರೂಪದಲ್ಲಿ' ಬೆಂಗಳೂರು, ನಂದಿ ಮತ್ತು ಬಾದಾಮಿಗಳಿಗೆ ಬಂದಿತೋ ಇನ್ನು ತಿಳಿಯದು. ಮುಖ್ಯವಾಗಿ ಈ 'ಲೆಖ್ಖಾಚಾರದ ಬಗೆಯು ಶಾಕ್ತ ಪಂಥದಿಂದ ಬಳಕೆಯಲ್ಲಿರುವಂತಿದೆ.

ಆದರೂ ಗವಿ ಗಂಗಾಧರೇಶ್ವರ, ಇಲ್ಲಿನ ವಿಗ್ರಹಕ್ಕೆ ರವಿಕಿರಣವು 'ಕ್ಲಿಪ್ತ' ಕಾಲದಲ್ಲಿ ಗುಣಾಕಾರಕ್ಕೆ, ಕಾಲಗಣನೆಗೆ ದೊರಕುವಂತೆ ಆಗಿರುವುದು ನಿಜಕ್ಕೂ ಆಶ್ಚರ್ಯವೂ ಅದ್ಭುತವೂ ಅಲ್ಲದೆ ಒಂದು ಕಾಲಗಣನೆಯ ಶಾಸ್ತ್ರಕ್ಕೆ ಸೇರಿರುವಂತಿದೆ. ಆದುದರಿಂದ ಗವಿಯ ಮುಂದಿನ 'ತ್ರಿಕೋಣ' ವನ್ನು 'ಹೆಗ್ಗುರುತು' ಮಾಡುವ ಮೂರು ಸ್ತಂಭಗಳು.

ಇಷ್ಟು 'ಅರಿವು' ಉಂಟಾದರೆ ಮಾತ್ರ ಈ 'ತ್ರಿಕೋಣ'ವು ಶಾಸ್ತ್ರಬದ್ಧವಾದ ರಚನೆಯಾಗಿರಬೇಕೆಂಬ ಅನುಮಾನಕ್ಕೆ 'ಇಂಬಾ'ಗುತ್ತದೆ. ಇದರ ಅಳತೆಗಳನ್ನು ಊಹಿಸಬಹುದು. ಎರಡು ಭೂಮಂಡಲ (ಸ್ತಂಭ)ದ ಸೂಚನೆಯ ಸ್ತಂಭಗಳು (ಕಲ್ಲಿನವು) ನೇರವಾಗಿ ಒಂದರ ಮಂಡಲದ ನೆರಳು ವರ್ಷದಲ್ಲಿ 'ಒಮ್ಮೆ'ಯಾದರೂ ಮತ್ತೊಂದರ ಮೇಲೆ ಬೀಳುತ್ತದೆ ಎಂಬುದು ನಿಜವಿರಬಹುದಾಗಿದೆ. ಏಕೆಂದರೆ ಇಂತಹ ಅವಕಾಶವನ್ನು ಕಾಣುವುದಕ್ಕೆ ಸದ್ಯಕ್ಕೆ 'ಪ್ರಕೃತಿ'ಯು ಅನುಕೂಲಕರವಾಗಿರುವುದಿಲ್ಲ ! ಆದರೆ ಫೋಟೋ ಮೂಲಕ

ಗುರುತಿಸಲು ಅಡ್ಡಿಯಾಗಲಾರದು. ತ್ರಿಕೋಣದ 'ಹೆಡತಲೆ'ಯು ಒಂದನೇ ಅಥವಾ ಎದುರಿನ ಭೂಮಂಡಲದ ಸ್ತಂಭದ ನೆತ್ತಿಯ 'ನೇರ' ಗೆರೆಯಲ್ಲಿ ಕಂಡುಬರುತ್ತದೆ. ತ್ರಿಕೋಣದ (ತ್ರಿಶೂಲದ) ನಡುವಿನ ಈಟಿಯಂಥ ಭಾಗವು ಎದುರಿನ ಭೂಮಂಡಲದಂತೆ 'ನೇರ' ಗೆರೆಯನ್ನು ಗುರುತಿಸುತ್ತದೆ. (ಇದಕ್ಕೆ ಫೋಟೋ ದೊರಕುತ್ತದೆ).

ಕೊಂಚ ಮುಂದಕ್ಕೆ ವಿಚಾರ ಮಾಡಿದರೆ ಟ್ರಿಗನಾಮಿಟ್ರಿ ಅಥವಾ ಹೈಸ್ಕೂಲಿನ 'ಜ್ಯಾಮಿಟ್ರಿ' ಯ ನೆರವಿನಿಂದ ನೋಡಿದರೆ ತ್ರಿಕೋಣವು ನೆಲದ ಮೇಲಿನ ನೆರಳಿನಿಂದ, ವೇದ್ಯವಾಗುತ್ತದೆ. ಎರಡು ಭೂಮಂಡಲ ಸ್ತಂಭಗಳೂ ಪೂರ್ವದಿಂದ ಪಶ್ಚಿಮಕ್ಕೆ ಅಥವಾ ಪಶ್ಚಿಮದಿಂದ ಪೂರ್ವಕ್ಕೆ ಭೂಮಿಯ ಮೇಲಿನ ಸಮಭಾಜಕ ವೃತ್ತವನ್ನು ಗುರುತಿಸುತ್ತದೆ. ಆದುದರಿಂದ ಮೊದಲನೆಯ ಸ್ತಂಭದ ನೆರಳು ಎರಡನೆಯ ಸ್ತಂಭದ ಕಡೆಗೆ ಪ್ರತಿದಿನವೂ ಕಾಲಗಣನೆಗೆ ಅನುಕೂಲವಾಗುವಂತೆ ಬೀಳುತ್ತದೆ. ಬೆಳೆಯುತ್ತದೆ. ಒಂದರ ಮಂಡಲವು ಎರಡನೆಯ ಮಂಡಲದ ಮೇಲೆ ಬೀಳುವವರೆಗೂ ಸಾಧ್ಯವಿದೆ. ಮೂರನೆಯದಾದ ತ್ರಿಶೂಲದ ಹೆಡತಲೆಯ ಸ್ತಂಭವು ಎರಡನೆಯ ಸ್ತಂಭದಿಂದ ಪ್ರಾಯಶಃ ಇವೆರಡರ 'ಅಂತರ' ದಲ್ಲಿ ಅರ್ಧವೆನ್ನುವಂತೆ ಕಂಡುಬರುವಂತಿದೆ. ಇದು ಸಮ ಬಾಹು ತ್ರಿಭುಜವನ್ನು ಗುರುತಿಸಲಾರದು ಎನ್ನಿಸುತ್ತದೆ. ಇದನ್ನು ಸರಿಯಾದ ಅಳತೆಯಿಂದ ಮಾತ್ರ ಸ್ಥಿರಪಡಿಸಿಕೊಳ್ಳಬಹುದು. ಆದರೆ ಗಮನಕ್ಕೆ ಬರುವಂತೆ ಇದೊಂದು ತ್ರಿಕೋಣ. ಇದರಲ್ಲಿ ಒಂದು ೯೦° ಡಿಗ್ರಿಯದು. ಇದು ಸ್ಪಷ್ಟ !

ಮುಖ್ಯವಾಗಿ ಇಂತಹ 'ತ್ರಿಕೋಣ'ವು ಮುಂಜಾನೆಯ ಸೂರ್ಯೋದಯದಿಂದ ಅಸ್ತಮಾನದವರೆಗೆ ಹಾಗೂ 'ಅಯನ' ಗಳನ್ನು ಗುರುತಿಸಲು ಅನುಕುಲವಾಗುವಂತೆ ನಿಂತಿವೆ ! ಆದುದರಿಂದ ಈ ತ್ರಿಕೋಣಕ್ಕೆ ಕಾಲಚಕ್ರದ 'ಒಂದು ವರುಷ'ದ ಅಳತೆಯ ಮಹತ್ವವು ಸೇರುವಂತೆ ಶಾಸ್ತ್ರೋಕ್ತವಾಗಿ ನಿಂತಿವೆ ಎಂಬುದು ನನ್ನ ಅನುಭವದಿಂದ ಹೇಳಿದ್ದೇನೆ. (ಇದಕ್ಕಾಗಿ ನಾನು ನಮ್ಮ ಮನೆಯ 'ಮಾಡಿ'ನಲ್ಲಿ ಉದಯಾಸ್ತದ ಪ್ರಯೋಗವನ್ನು ನಡೆಸಿದ್ದೇನೆ).

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಉಳಿದ ಶಾಕ್ತ ಕೇಂದ್ರಗಳಿಗಿಂತ 'ಕಾಲಚಕ್ರ'ದ ಅಳತೆಯನ್ನು, ತ್ರಿಕಾಲ ಮತ್ತು ತ್ರಿಕೋಣಗಳಿಂದ ಅಳೆಯಲು ಸಾಧ್ಯವಿದ್ದಿರಬಹುದಾಗಿದೆ. ವಿದ್ವಾಂಸರು ಮತ್ತು ಶಾಸ್ತ್ರಜ್ಞರಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ.

೨. ಹಂಪೆಯ ವಿರುಪಾಕ್ಷ ದೇಗುಲದ ಪ್ರಾಂಗಣದಲ್ಲಿಯೂ 'ಕಾಲಚಕ್ರ'ದ ಗಣನೆಗೆ ಭಾಸ್ಕರಾಚಾರ್ಯ II ನು 'ನೆರಳಿನ' ಬಳಕೆಯಿಂದ ಪ್ರಯೋಗ ನಡೆಸಿದಂತಿದೆ.

೩. 'ಶಾಕ್ತ' ಕೇಂದ್ರಗಳಲ್ಲಿ ಗಣಿತಶಾಸ್ತ್ರದ ಕುರುಹುಗಳಲ್ಲದೆ ಶಿಲ್ಪ ಶಾಸ್ತ್ರವನ್ನೂ ಬಳಕೆಗೆ ತಂದವರಲ್ಲಿ ಮೊದಲಿಗರಿರಬಹುದು. ಸದ್ಯಕ್ಕೆ ನಾಡಿನ ಇತಿಹಾಸದಲ್ಲಿ 'ಶಾಕ್ತ'ರು ಪ್ರಮುಖರು.

೪. ಕುಷ್ಠ, ಕೋಷ್ಟ, ಕೋಷ್ಟಕ, ಇವುಗಳಿಗೂ 'ಕೃಷ್ಣ' ಪದಕ್ಕೂ 'ರಕ್ತಸಂಬಂಧ'ವಿರುವಂತಿದೆ.

೫. 'ಗವಿ ಗಂಗಾಧರ'ದ ಪ್ರಾಂಗಣದಲ್ಲಿ ಎರಡು 'ಗಂಗರ ಕಾಲದ' ಸಣ್ಣ ವಿಗ್ರಹಗಳಿವೆ. ಇಂಥದು ರಾಮನಗರಕ್ಕೂ ಚನ್ನಪಟ್ಟಣಕ್ಕೂ ಮಧ್ಯದಲ್ಲಿ 'ಮುಂಕುಂದ' ದಲ್ಲಿದೆ.

೬. ಗವಿಗಂಗಾಧರ + ಈಶ್ವರ, ಇದನ್ನು ನೋಡಿದಾಗ ಯಾರೋ ಬುದ್ಧಿವಂತ(ರು)–ಇದು ಗಂಗರ ಕಾಲದಲ್ಲಿ ಪ್ರಾರಂಭದಿಂದಲೂ ಒಂದು ಪ್ರಮುಖ 'ಆಚರಣೆ'ಯಾಗಿದ್ದಿರಬೇಕು ಎಂಬುದು ಇತಿಹಾಸಕ್ಕೆ ಸೇರಿಹೋಗುತ್ತದೆ. ಆದುದರಿಂದ ಗವಿಯು 'ಗಂಗಧಾರ' ಇದ್ದಿರಬಹುದಾಗಿದೆ. ಇದರ ಗರ್ಭಗುಡಿಯ ಒಳಗಿಂದ ಒಂದು 'ಗುಪ್ತಧಾರೆ'ಯು ಜುಳುಜುಳನೆ ಹರಿಯುತ್ತದೆ. ಈ ನೀರ ಝರಿಯು ಇದರ ಎಡಗುಹೆಯೊಂದರಲ್ಲಿ ಕಾಣಿಸಿಕೊಂಡು ಸುಮಾರು 'ಒಂದು ಫರ್‌ಲಾಂಗ್ ಕೆಳಗಿನ ಕೆರೆಗೆ ಸೇರುತ್ತದೆ. ಈಗ ಒಂದು ಕಲ್ಲುಮಂಟಪ ಮಾತ್ರ ಉಳಿದಿದೆ. ಆ ಕೆರೆಯು ಕಳೆದ ಶತಮಾನದ ಐದನೇ ದಶಕದಲ್ಲಿ ಕೆರೆ ಸಹಿತ ಕಂಡುಬರುತ್ತಿತ್ತು.

ಡಾ. ವಿ. ಅನುರಾಧ*

# ಕರ್ನಾಟಕದ ದೇವಾಲಯಗಳಲ್ಲಿ ಮಕರ ತೋರಣಗಳು

ತೋರಣ ಎಂಬುದು ಎರಡು ಕಂಬಗಳನ್ನು, ಎರಡು ಭಾಗಗಳನ್ನು ಸೇರಿಸುವ ಅಥವಾ ಜೋಡಿಸುವ ಅಂಗ. ತೋರಣಗಳು ಆಕಾರದಲ್ಲಿ ಲಂಬವಾಗಿ, ತ್ರಿಕೋಣಾಕಾರವಾಗಿ, ಅರ್ಧ ವೃತ್ತಾಕಾರವಾಗಿ ಸಾಮಾನ್ಯವಾಗಿ ಕಂಡುಬರುತ್ತದೆ. ಮಾನಸಾರವು ಬಿಲ್ಲಿನಾಕಾರದ ತೋರಣವನ್ನು ಹೆಸರಿಸುತ್ತದೆ. ಈ ರೀತಿಯ ತೋರಣವು ಅರ್ಧ ವೃತ್ತಾಕಾರಕ್ಕಿಂತ ಸ್ವಲ್ಪ ಹೆಚ್ಚು ಅಗಲವಿರುತ್ತದೆ.

ಫರ್‌ಗೂಸನ್[೧]ರವರು "ರೋಮನ್ನರು ತೋರಣಗಳನ್ನು ಪ್ರಥಮವಾಗಿ ತಮ್ಮ ವಾಸ್ತು ರಚನೆಗಳಲ್ಲಿ ಬಳಸಿದರು" ಎಂದು ಹೇಳುತ್ತಾರೆ. ರೋಮನ್ನರು ತಮ್ಮ ಕಟ್ಟಡಗಳಲ್ಲಿ ಈ ರೀತಿಯ ರಚನೆಗಳನ್ನು ಸರ್ವತ್ರ ಬಳಸಿರುವುದು ಗಮನಾರ್ಹವಾದ ಅಂಶ.

ಮಾನಸಾರವು ತೋರಣವು ಎಲ್ಲಾ ರೀತಿಯ ವಾಸ್ತು ರಚನೆಗಳಲ್ಲೂ ಭೂಷಣಪ್ರಾಯವಾಗಿರುತ್ತದೆ. ಇದನ್ನು ಸಿಂಹಾಸನಗಳಲ್ಲಿ, ದೇವಾಲಯಗಳಲ್ಲಿ ಮತ್ತು ಅರಮನೆಗಳಿಗೆ ಬಳಸಬಹುದು ಎಂದು ಹೇಳುತ್ತದೆ.[೨] ತೋರಣಗಳ ವಿಧಗಳನ್ನು ಮಾನಸಾರದ ನಲವತ್ತಾರನೆಯ ಅಧ್ಯಾಯವು ವಿವರಿಸುತ್ತದೆ. ೩ರಿಂದ ೩೬ರವರೆಗಿನ ಶ್ಲೋಕಗಳು ಈ ವಿಧಗಳ ವಿವರಣೆಯನ್ನು ನೀಡುತ್ತವೆ. ಮೂರನೆಯ ಶ್ಲೋಕದಿಂದ ಇಪ್ಪತ್ತೊಂಬತ್ತನೆಯ ಶ್ಲೋಕದವರಗೆ ತೋರಣಗಳ ಬೇರೆ ಭಾಗಗಳ ಅಳತೆ ಹಾಗೂ ತೋರಣಗಳನ್ನು ಯಾವ ದಿಕ್ಕಿನಲ್ಲಿ ರಚಿಸಬೇಕೆಂದು ಸೂಚಿಸಲಾಗಿದೆ. ತೋರಣಗಳಲ್ಲಿನ ಅಲಂಕರಣಗಳನ್ನು ಅನುಸರಿಸಿ ಅವುಗಳನ್ನು i) ಪತ್ರ ತೋರಣ, ii) ಪುಷ್ಪ ತೋರಣ, iii) ರತ್ನ ತೋರಣ, iv) ಚಿತ್ರ ತೋರಣವೆಂದು ವಿಭಾಗಿಸಲಾಗಿದೆ.

ಮಾನಸಾರದಲ್ಲಿ ತೋರಣದ ಅಲಂಕರಣಗಳನ್ನು ಈ ರೀತಿ ವರ್ಣಿಸುತ್ತದೆ.

**ಸರ್ವೇಶಾಂ ತೋರಣ ಮಧ್ಯೆ ಬೋರ್ಧೆ ತುಂಬುರು ನಾರದಂ ।**
**ತದ್ ಪ್ರದೇಶೇ ದ್ವಿಪಾರ್ಶ್ವೇತು ಮಕರಾದಿ ವಿಭೂಷಿತಂ॥**
**ತೋರಣಾಸ್ಯಾಗ್ರ ಮೂಲೇ ತು ಗ್ರಹ ಪತ್ರೈಶ್ಚ ಭೂಷಿತಂ।**
**ತೋರಣಾದ್ಯಂತು ಪತ್ರಾದಿ - ಭೂತ- ವ್ಯಾಳ-ಸಮ ಸಮನ್ವಿತ್ವಂ ॥**
**ಪಾದಾನಾಂಚ ದ್ವಿಪಾರ್ಶ್ವೇತು ವ್ಯಾಳ-ತೋರಣ-ಧಾರಿಣಂ।**
(ಮಾನಸಾರ ೪೬ನೇ ಅಧ್ಯಾಯ, ೪೫-೪೯)

ತೋರಣದ ಮಧ್ಯಭಾಗದ ಉತ್ತರದಲ್ಲಿ ತುಂಬುರು, ನಾರದರನ್ನು ರಚಿಸುವುದು. ಎರಡೂ ಪಕ್ಕದಲ್ಲಿ, ಪಾರ್ಶ್ವದಲ್ಲಿ ಮಕರಗಳನ್ನು ರಚಿಸುವುದು, ತೋರಣದ ಅಗ್ರಭಾಗದಲ್ಲಿ ವಿವಿಧ ರೀತಿಯ ಪತ್ರಗಳಿಂದ ಕೂಡಿದ ಬಳ್ಳಿಗಳನ್ನು ರಚಿಸುವುದು. ಈ ಮಧ್ಯೆ ಭೂತ ಮತ್ತು ವ್ಯಾಳಗಳಿಂದ ಅಲಂಕರಿಸುವುದು, ಈ ರೀತಿಯ ಅಲಂಕರಣಗಳನ್ನು ಕರ್ನಾಟಕದ ದೇವಾಲಯಗಳಲ್ಲಿ ಗಮನಿಸಬಹುದು. ಇದಲ್ಲದೆ ಹಾವು, ಹಲವು ರೀತಿಯ ರತ್ನಗಳಿಂದಲೂ ತೋರಣಗಳನ್ನು ಅಲಂಕರಿಸಬಹುದೆಂದು ಮಾನಸಾರವು ಹೇಳುತ್ತದೆ.

**ರತ್ನಕಾರಂಗನ್ನೈರ್‌ಯುಕ್ತಂ ಕುಕ್ಷಿರಾವೃತ ಲಂಬಿತಂ ।**
**ತೋರಣಸ್ಯೋಪರಿ ಪೇಶೇತು ಭುಜಂಗ ಪಾದ ದ್ಯಾಯೋರ್ ಅಪಿ ।**
**ಗ್ರಾಹಂತಂ ಸರ್ವ ರತ್ನೈಶ್ಚ ಪೂರಿತಂ ಶ್ರೇಣಿ ಸಂಯುತಂ।**
(ಮಾನಸಾರ ೪೬-೫೮-೬೦)

ಯಾವುದೇ ರೀತಿಯ ಅಲಂಕರಣಗಳಿಲ್ಲದೆ, ಸರಳವಾಗಿಯು ತೋರಣಗಳನ್ನು ನಿರ್ಮಿಸಬಹುದೆಂದೂ ಮಾನಸಾರವು ಸೂಚಿಸುತ್ತದೆ. ಈ ರೀತಿಯ ತೋರಣಗಳನ್ನು 'ಚಿತ್ರ-ಹೀನ' ಎಂದು ವಿವರಿಸುತ್ತದೆ.[೩]

ಮಂಟಪಗಳು ನಾಲ್ಕೂ ದಿಕ್ಕುಗಳಲ್ಲೂ, ನಾಲ್ಕೂ ದ್ವಾರಗಳ ಮೇಲೂ, ನಾಲ್ಕು ತೋರಣಗಳನ್ನು ಹೊಂದಿರಬೇಕೆಂದು ಮಾನಸಾರವು ಹೇಳುತ್ತದೆ. ಚತುರ್ ದಿಕ್ಷು, ಚತುರ್‌ದ್ವಾರಂ, ಚತುಶ್ ತೋರಣ ಸಂಯುತಂ.[೪]

ಮಹಾರಾಜನು ಸಿಂಹಾಸನಾಭಿಷಿಕ್ತನಾಗುವ ಮಂಟಪ, ಆಸ್ಥಾನ ಮಂಟಪವು ತೋರಣದಲ್ಲಿ ಕಲ್ಪವೃಕ್ಷವನ್ನು ಹೊಂದಿರಬೇಕು ಎಂದು ಸೂಚಿಸುತ್ತದೆ.

**"ಪಶ್ಚಾತ್ ಸಿಂಹಾದೈಶ್ಚ ಕಲ್ಪವೃಕ್ಷಂ ಚ-ತೋರಣಂ"**
(ಮಾನಸಾರ ೪೯-೧೮೫)

*ಮಹಾರಾಣಿ ಕಲಾ ಕಾಲೇಜು, ಬೆಂಗಳೂರು.













ದೇವತೆಗಳನ್ನು ಸ್ಥಾಪಿಸಲು ಮಾಡುವ ಪೀಠಗಳು ತೋರಣದಲ್ಲಿ ಕಲ್ಪವೃಕ್ಷವನ್ನು ಹೊಂದಿರಬೇಕೆಂದು ಮಾನಸಾರವು ಸೂಚಿಸುತ್ತದೆ.

**ಪದ್ಮಪೀಠ, ಮಹಾಪೀಠಂ, ತ್ರಿಮೂರ್ತಿನಾಮ್ ಚ ಯೋಜಯೇತ್ ।**

**ಪ್ರವಾಚ ತೋರಣಂ ವಾಪಿ ಕಲ್ಪವೃಕ್ಷಂ ಚ ಸಂಯುತಂ ।**

(ಮಾನಸಾರ-೫೧-೮೬-೮೭)

ದೇವತಾ ವಾಹನಗಳನ್ನು ಹೊಂದಿರುವ ಮಂಟಪಗಳ ಮೇಲೆ ರಚಿಸಲ್ಪಡುವ ತೋರಣಗಳು ಚಾಮರವನ್ನು ಹೊಂದಿರಬೇಕೆಂದು ಸೂಚಿಸಲಾಗಿದೆ.

**ಶಿಖೀ ಶಿಖಾಂಡಕ ಚಾಮರ-ತೋರಣಂ**

(ಮಾನಸಾರ ೪೩-೧೫೬)

ವಿಮಾನದ ಶಾಲಾ ಭಾಗದ ಮೇಲಿನ ನಾಸಿಕ ಮತ್ತು ಕೂಟದ ನೀಡಾ ಭಾಗದಲ್ಲಿ ತೋರಣವನ್ನು ರಚಿಸಬಹುದು.[೫] ಎರಡು ಕಂಬಗಳ ಮೇಲೆ ವಾಜನದಲ್ಲಿ ರಚಿಸಲ್ಪಡುವ ತೋರಣದಲ್ಲಿ ಮಕರಗಳು, ಪತ್ರಗಳೂ ಇರಬೇಕೆಂದು ಮಾನಸಾರವು ತಿಳಿಸುತ್ತದೆ.[೬]

ಕಾಮಿಕಾಗಮವು ಮೂರು ರೀತಿಯ ತೋರಣಗಳನ್ನು ಹೆಸರಿಸುತ್ತದೆ. ಅವು ಪತ್ರ ತೋರಣ, ಮಕರ ತೋರಣ ಮತ್ತು ಚಿತ್ರ ತೋರಣ.[೭] ಕಾಮಿಕಾಗಮವು ದೇವ, ದ್ವಿಜ, ನರೇಂದ್ರರಿಗಾಗಿ ನಿರ್ಮಿಸಲ್ಪಡುವ ವಾಸ್ತು ರಚನೆಗಳು ಮಕರ ತೋರಣವನ್ನೂ, ವೈಶ್ಯರಿಗೆ ರಚಿಸಲ್ಪಡುವ ವಾಸ್ತುವಿನಲ್ಲಿ ಚಿತ್ರ ತೋರಣವನ್ನು, ಶೂದ್ರಾದಿಗಳ ರಚನೆಯಲ್ಲಿ ಪದ್ಮಪತ್ರ ತೋರಣವನ್ನೂ ಬಳಸಬೇಕೆಂದು ಸೂಚಿಸುತ್ತದೆ.[೮]

ಕರ್ನಾಟಕದಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ (ಕ್ರಿ.ಶ. ೭೩೩) ಗರ್ಭಗೃಹದ ಮೇಲ್ಭಾಗದಲ್ಲಿ ಎರಡು ವಿಷ್ಣುಕಾಂತ ಕಂಬಗಳ ಮೇಲೆ ಇರುವ ಬೋದಿಗೆಯ ಮೇಲೆ ಅಲಂಕೃತವಾದ ಎರಡು ಮಕರಗಳನ್ನು ರಚಿಸಲಾಗಿದೆ. ಆ ಮಕರಗಳ ಮೇಲೆ ವೀರರಿದ್ದಾರೆ. ಆ ಮಕರಗಳ ಬಾಯಿಂದ ದೇವತೆಗಳು, ಕಿನ್ನರ ಕಿಂಪುರುಷರು ಹೊರಬರುತ್ತಿದ್ದಾರೆ. ಮಕರಗಳ ಬಾಲವು ಅತೀ ಸುಂದರವಾಗಿ ಬಳ್ಳಿಗಳಿಂದ, ಪುಷ್ಪಗಳಿಂದ ಅಲಂಕೃತವಾಗಿದೆ. ಮಕರಗಳ ಬಾಯಿಂದ ರತ್ನಾಹಾರಗಳು, ಮುತ್ತಿನ ಮಾಲೆಗಳೂ ಹೊರಹೊಮ್ಮುತ್ತಿವೆ. ಈ ರಚನೆಯು ಶಾಸ್ತ್ರಗಳು ವಿವರಿಸಿರುವಂತೆಯೇ ಇದೆ ಎಂಬುದು ಗಮನಾರ್ಹ ಸಂಗತಿ. ಚಾಲುಕ್ಯರು ಅತ್ಯುತ್ತಮ ಮಕರ ತೋರಣಗಳನ್ನು ರಚಿಸಿದ್ದಾರೆ.

ರಾಷ್ಟ್ರಕೂಟರು ಈ ಕಲೆಯನ್ನು ಮುಂದುವರೆಸಿದರು. ಕ್ರಿ.ಶ. ೮ನೇ ಶತಮಾನದ ಕೈಲಾಸ ದೇವಾಲಯದ ಭಿತ್ತಿಯ ಮೇಲೆ ಅದ್ಭುತವಾದ, ಮನೋಹರವಾದ ಮಕರ ತೋರಣಗಳು ನಿರ್ಮಾಣಗೊಂಡಿವೆ. ಬ್ರಹ್ಮಕಾಂತ ಸ್ತಂಭಗಳ ಮೇಲೆ ಮಕರ ತೋರಣಗಳಿದ್ದು ಕಂಬ ಮೇಲ್ಭಾಗ ಹಾಗೂ ತೋರಣದ ಉತ್ತುಂಗದಲ್ಲಿ ಮಕರಗಳಿವೆ. ಮಕರದ ಬಾಲವು ಅಲಂಕೃತವಾದ ಪತ್ರ, ಪುಷ್ಪ, ವಲ್ಲಿಗಳನ್ನು ಹೊಂದಿದೆ. ತೋರಣದ ಮಧ್ಯಭಾಗ ನಿಮ್ನಕವಾಗಿದ್ದು ಅಲ್ಲಿ ದೇವ, ದೇವತೆಗಳ ಮೂರ್ತಿಗಳನ್ನು ರಚಿಸಲಾಗಿದೆ.

ಶಾಸ್ತ್ರಗಳು ಮಂಟಪಗಳ ನಾಲ್ಕೂ ದಿಕ್ಕುಗಳಲ್ಲಿ, ದ್ವಾರಗಳ ಮೇಲೆ ಮಕರ ತೋರಣಗಳನ್ನು ರಚಿಸಬೇಕೆಂದು ಹೇಳುತ್ತವೆ. ಈ ರೀತಿಯ ರಚನೆ, ಎಲ್ಲೋರದ ಕೈಲಾಸ ದೇವಾಲಯದ, ನಂದೀ ಮಂಟಪದಲ್ಲಿ ಕಂಡುಬರುತ್ತದೆ.

ಎಲ್ಲೋರದ ಚೋಟಾ ಕೈಲಾಸ ದೇವಾಲಯದ (ಕ್ರಿ.ಶ. ೮ನೇ ಶತಮಾನದ ಕೊನೆಯ ಕಾಲ) ಗರ್ಭಗುಡಿಯ ಮುಂಭಾಗದ ಮಕರ ತೋರಣವು ಎರಡು ಸೌಮ್ಯಕಾಂತ ಸ್ತಂಭಗಳ ಮೇಲೆ ರಚನೆಯಾಗಿದೆ. ಮಕರಗಳ ಬಾಯಿಂದ ಎರಡು ಮುತ್ತಿನ ಹಾರಗಳು ಹೊರಬಂದು ಹಾರಗಳ ಮಧ್ಯಭಾಗದಲ್ಲಿ ಸಹಸ್ರ ದಳ ಪದ್ಮದ ರಚನೆಯಿದೆ. ಈ ಪದ್ಮದ ಮೇಲೆ ಮಹಾವೀರನ ಮೂರ್ತಿ ಧ್ಯಾನಮುದ್ರೆಯಲ್ಲಿದೆ. ಇದೇ ರೀತಿಯ ಅಲಂಕರಣ ಜಗನ್ನಾಥ ಸಭೆಯಲ್ಲೂ ಗಮನಿಸಬಹುದು.[೯]

ಶಾಸ್ತ್ರಗಳು ತೆರದ ಮಂಟಪಗಳಲ್ಲಿ, ವಿಮಾನಗಳಲ್ಲಿ ಶಾಲಾಭಾಗದ ಭದ್ರನಾಸಿಗಳನ್ನು ಆವರಿಸಿರುವಂತೆ ಮಕರ ತೋರಣಗಳನ್ನು ರಚಿಸಬೇಕೆಂದು ಸೂಚಿಸಿವೆ. ಈ ರೀತಿಯ ಮಕರ ತೋರಣಗಳನ್ನು ಎಲ್ಲೋರದ ಸರ್ವತೋ ಭದ್ರ ದೇವಾಲಯ, ಭಾವನಾಸಿ ಸಂಗಮ, ರೂಪಾಲಿ ಸಂಗಮೇಶ್ವರ ದೇವಾಲಯ (ಕ್ರಿ.ಶ. ೯ನೇ ಶತಮಾನ) ಇದೇ ದೇವಾಲಯದ ಕಪಿಲಿಯ ಗೋಡೆಯ ಮೇಲಿರುವ ಜಾಲವಾತಾಯನದ ಮೇಲೂ ಕಾಣಬಹುದು. ಕುಕ್ಕನೂರಿನ ನವಲಿಂಗ ದೇವಾಲಯದ (ಕ್ರಿ.ಶ. ೯ನೇ ಶತಮಾನದ ಕೊನೆ) ಅಂತರಾಳದ ಮುಂಭಾಗದ ಮಕರ ತೋರಣವು ಅತೀ ರಮಣೀಯವಾಗಿದ್ದು ಪೂರ್ಣ ಮಕರಗಳು, ಮಕರಗಳ ಮೇಲ್ಭಾಗದಲ್ಲಿ ಶಂಖನಿಧಿ, ಪದ್ಮನಿಧಿ, ಲಲಾಟ ಬಿಂಬವಾಗಿ ಲಕ್ಷ್ಮೀ, ಮೇಲ್ಭಾಗದಲ್ಲಿ ತುಂಬುರು, ನಾರದ, ಅಪ್ಸರೆಯರು, ನರ್ತಕರು, ಕಿನ್ನರ ಕಿಂಪುರುಷರ ರಚನೆ ಇದೆ.

ಶಾಸ್ತ್ರಗಳು ಯಾವುದೇ ಅಲಂಕರಣವಿಲ್ಲದೆಯೂ ಮಕರ ತೋರಣವನ್ನು ರಚಿಸಬಹುದೆಂದು ಪ್ರತಿಪಾದಿಸಿವೆ. ಈ ರೀತಿಯ (ಚಿತ್ರ-ಹೀನ) ಸರಳವಾದ ಮಕರತೋರಣ ಪಟ್ಟದಕಲ್ಲಿನ ಜೈನ ದೇವಾಲಯದ ಗರ್ಭಗೃಹದ ಮೇಲಿದೆ.[೧೦] ಈ ತೋರಣವು ಸರಳವಾದ ಸೌಮ್ಯಕಾಂತ ಸ್ಥಂಭಗಳ ಮೇಲೆ ರಚಿಸಲ್ಪಟ್ಟಿದೆ.

ಶಾಸ್ತ್ರಗಳು ಸಿಂಹಾಸನ ಮಂಟಪದಲ್ಲಿ ಅಥವಾ ಆಸ್ಥಾನ ಮಂಟಪದಲ್ಲಿ ಮಕರ ತೋರಣದಲ್ಲಿ ಸಿಂಹಗಳ ರಚನೆ ಇರಬೇಕೆಂದು ಪ್ರತಿಪಾದಿಸುತ್ತದೆ.

ಈ ರೀತಿ ಮಕರ ತೋರಣದಲ್ಲಿ ಸಿಂಹಗಳನ್ನು ಶೀರ್ವಾಳದ ಹನ್ನೆರಡನೇ ದೇವಾಲಯದ ಅಂತರಾಳದ ಮೇಲೆ ರಚಿಸಲಾಗಿದೆ. ಈ ತೋರಣವು ಹತ್ತು ಸಿಂಹಗಳನ್ನು ಹೊಂದಿದೆ. ಇದು ಚಿತ್ರಖಂಡ ಸ್ತಂಭಗಳ ಮೇಲೆ ರಚಿಸಲ್ಪಟ್ಟಿದೆ. ಇದು ಅತ್ಯಂತ ಅಪರೂಪದ ತೋರಣವಾಗಿದೆ.

ಚಿಕ್ಕವೋಲು ಗೋಳಿಂಗೇಶ್ವರ ದೇವಾಲಯದ ಉತ್ತರದ ಭಿತ್ತಿ, ಬಿಕ್ಕವೋಲು ಚಂದ್ರಶೇಖರ ದೇವಾಲಯದ ದಕ್ಷಿಣ ವಿಮಾನದ ಭದ್ರದ ಮೇಲೂ ಸುಂದರವಾದ ಮಕರ ತೋರಣಗಳಿವೆ. ಬಿಕ್ಕವೋಲು ಗೋಳಿಂಗೇಶ್ವರ ದೇವಾಲಯದ ದಕ್ಷಿಣ ಭಾಗದ ಭಿತ್ತಿಯಲ್ಲಿ ಇಂದ್ರ, ನಕ್ಕಲಗುಡಿ ವಿಮಾನದಲ್ಲಿ ಪಶ್ಚಿಮ ಭಿತ್ತಿಯಲ್ಲಿ ಸೂರ್ಯ, ವೀರಭದ್ರ ಗುಡಿಯ ಪೂರ್ವ ಭಿತ್ತಿಯಲ್ಲಿ ಸೂರ್ಯ, ಉತ್ತರ ಭಿತ್ತಿಯಲ್ಲಿ ಬ್ರಹ್ಮ, ದಕ್ಷಿಣ ಭಿತ್ತಿಯಲ್ಲಿ ವಿಷ್ಣುಮೂರ್ತಿಗಳಿದ್ದು, ಈ ಎಲ್ಲಾ ಮೂರ್ತಿಗಳೂ ಸುಂದರವಾದ ಮಕರ ತೋರಣಗಳನ್ನು ಹೊಂದಿವೆ.

ಕಂಬದಹಳ್ಳಿಯ ಆದಿನಾಥ ಬಸದಿಯ ಪಶ್ಚಿಮ ವಿಮಾನದಲ್ಲಿ ಮಕರ ತೋರಣದ ರಚನೆ ಇದೆ.[೧೧] ಕಂಬದಹಳ್ಳಿಯ ಪಂಚಕೂಟ ಬಸದಿಯ ಪ್ರತೋಳಿಯಲ್ಲಿನ ದೇವಕೋಷ್ಠವು ಸರಳವಾದ, ಸುಂದರವಾದ ಪತ್ರ ತೋರಣವನ್ನು ಹೊಂದಿದೆ. ಕಂಬದಹಳ್ಳಿಯ ದೇವಾಲಯದ ತೋರಣಗಳು ಪತ್ರ ತೋರಣ, ಪುಷ್ಪತೋರಣ ಹಾಗೂ ಚಿತ್ರ ತೋರಣಗಳಾಗಿವೆ.

ಬೇಗೂರಿನ ನಗರೇಶ್ವರ ಧೇವಾಲಯದ ಮೇಲೆ ಸರಳವಾಗಿ ರಚಿಸಲ್ಪಟ್ಟಿರುವ ಮಕರ ತೋರಣಗಳು ಇವೆ.[೧೨]

ಕ್ರಿ.ಶ. ೯ನೇ ಶತಮಾನದ ಕೊನೆಯ ಭಾಗಕ್ಕೆ ಹುಂಚದ ಸಾಂತರ ವಂಶಸ್ಥರು ಅತ್ಯುತ್ತಮವಾದ ಮಕರ ತೋರಣಗಳನ್ನು ನಿರ್ಮಿಸಿದ್ದು ಅವು ಶ್ರೇಷ್ಠ ಮಟ್ಟದ ಕಲಾ ಪ್ರೌಢಿಮೆಯನ್ನು ಬಿಂಬಿಸುತ್ತವೆ.

ಬೆಂಗಳೂರು ನಗರ ತಾಲ್ಲೂಕಿಗೆ ಸೇರಿರುವ ನೆಲಮಂಗಲದ ಭಿನ್ನಮಂಗಲದ ಮುಕ್ತಿನಾಥೇಶ್ವರ ದೇವಾಲಯದ ಭಿತ್ತಿಯಲ್ಲಿ ಅತ್ಯಂತ ಅಲಂಕೃತವಾದ ಮಕರ ತೋರಣಗಳನ್ನು ರಚಿಸಲಾಗಿದೆ. ಈ ಮಕರ ತೋರಣದಲ್ಲಿ ತೋರಣದ ಕೆಳಭಾಗದಲ್ಲಿ ಇಬ್ಭಾಗಗಳಲ್ಲಿಯೂ ವಿರುದ್ಧ ದಿಕ್ಕಿಗೆ ಮುಖ ಮಾಡಿರುವ ಮಕರಗಳಿವೆ. ಮಧ್ಯದ ನಿಮ್ನಕ ಭಾಗದಲ್ಲಿ ಗಜಲಕ್ಷ್ಮಿ, ಗಣೇಶ, ಶಿವಲಿಂಗ, ಇತರ ಮೂರ್ತಿಗಳಿವೆ. ಮೇಲ್ಭಾಗದ ಸಿಂಹಮುಖಿಯ ಎರಡೂ ಕಡೆ ಇರುವ ಮಕರಗಳ ಬಾಯಿಂದ, ಕೈಯಲ್ಲಿ ಕತ್ತಿಯನ್ನು ಹಿಡಿದು ಹೋರಾಟಕ್ಕೆ ಸಿದ್ಧರಾಗಿರುವ ವೀರರು ಹೊರಬರುತ್ತಿರುವಂತೆ ಅತ್ಯಂತ ರಮ್ಯವಾಗಿ ಚಿತ್ರಿಸಿದ್ದಾರೆ. ಇದು ಚೋಳ ನಿರ್ಮಿತ ದೇವಾಲಯ.[೧೩]

ಕೋಲಾರದ ಕೋಲಾರಮ್ಮ ದೇವಾಲಯದ ಭಿತ್ತಿಯ ಮೇಲಿರುವ ಮಕರ ತೋರಣಗಳು ಅತೀ ಸರಳವಾಗಿ ಸುಂದರವಾಗಿ ರಚಿಸಲ್ಪಟ್ಟಿವೆ. ತೋರಣದ ಕೆಳಭಾಗದಲ್ಲಿ ಎರಡೂ ಕಡೆ ಮಕರಗಳಿದ್ದು, ಮಕರದ ಬಾಯಿಂದ ವಲ್ಲಿಗಳು ಹೊರಬಂದಿವೆ.[೧೪] ಇದೂ ಕೂಡ ಚೋಳರಿಂದ ಪುನರ್ ನಿರ್ಮಿತವಾದ ದೇವಾಲಯ.

ಬೇಲೂರಿನ ಚೆನ್ನಕೇಶವ ದೇವಾಲಯದ ದ್ವಾರದ ಮೇಲಿನ ಮಕರತೋರಣ ಮತ್ತು ಹಳೇಬೀಡಿನ ಹೊಯ್ಸಳೇಶ್ವರದ ದೇವಾಲಯದ ಮುಖ್ಯದ್ವಾರದ ಮೇಲಿನ ಮಕರ ತೋರಣಗಳು, ಅತ್ಯಂತ ವಿಸ್ತೃತವಾಗಿ ರಚಿಸಲ್ಪಟ್ಟಿರುವ ಮಕರ ತೋರಣಗಳಾಗಿದ್ದು, ಎಲ್ಲಾ ರೀತಿಯಲ್ಲೂ ಶಾಸ್ತ್ರೀಯವಾಗಿ ಮನೋಜ್ಞವಾಗಿ ರಚಿಸಲ್ಪಟ್ಟಿವೆ. ಇವು ಕಲಾ ಪುರುಷನ, ವರ್ಧಕಿಯ ಕಲಾಜ್ಞಾನಕ್ಕೆ ಸಾಕ್ಷಿಗಳಾಗಿವೆ. ಇಲ್ಲಿ ಆತನ ಸೃಷ್ಟಿಯ ಪರಿಪಕ್ವತೆ ಸ್ಪಷ್ಟವಾಗಿ ಗೋಚರವಾಗುತ್ತದೆ. ಮಕರಗಳ ಮಧ್ಯೆ ವಿಶಾಲವಾದ ಪರಿಧಿಯಲ್ಲಿ ನಾಟ್ಯದವರು, ಪ್ರಮುಖ ನರ್ತಕಿ, ಸಹ ನರ್ತಕಿಯರು, ನಟುವಾಂಗ, ಮದ್ದಳೆಯವರು, ಚೆನ್ನಕೇಶವ ದೇವಾಲಯದ ಮಕರ ತೋರಣದ ಲಲಾಟ ಬಿಂಬದಲ್ಲಿ ಗರುಡನ ಶಿಲ್ಪವಿದೆ. ಹೊಯ್ಸಳೇಶ್ವರ ದೇವಾಲಯದ ಲಲಾಟಬಿಂಬದಲ್ಲಿ ಶಿವನ ಮೂರ್ತಿಯಿದೆ. ಮಕರದ ಮೇಲೆ ವರುಣ ಮತ್ತು ಪತ್ನಿಯ ಬಿಂಬಗಳನ್ನು ರಚಿಸಲಾಗಿದೆ. ಈ ಮಕರಗಳು ಪೂರ್ಣ ಮಕರಗಳಾಗಿವೆ.

ಅತ್ಯಂತ ಸುಂದರವಾದ ಕಲಾತ್ಮಕವಾದ ಮಕರ ತೋರಣಗಳು ಕರ್ನಾಟಕದ ದೇವಾಲಯಗಳಲ್ಲಿ ರಚನೆಯಾಗಿರುವುದು ವಿಶೇಷವಾದ ಸಂಗತಿ. ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ನೊಳಂಬರು, ಹೊಯ್ಸಳರು ತಮ್ಮ ವಾಸ್ತು ರಚನೆಗಳಲ್ಲಿ ಈ ರೀತಿಯ ಮಕರತೋರಣಗಳನ್ನು ಹೇರಳವಾಗಿ ಬಳಸಿದ್ದಾರೆ. ಈ ಮಕರ ತೋರಣಗಳು, ಅವುಗಳ ರಚನಾಶೈಲಿಯಿಂದ ಕಾಲವನ್ನು ನಿರ್ಧರಿಸುವಲ್ಲಿಯೂ ಪ್ರಮುಖ ಪಾತ್ರವಹಿಸಿವೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಫರ್‌ಗೂಸನ್, ಹಿಸ್ಟರಿ ಆಫ್ ಇಂಡಿಯಾ ಅಂಡ್ ಇಸ್ಟ್ ಆರ್ಕಿಟೆಕ್ಚರ್,** ಪುಟ ೨೧೨.

೨. **ಮಾನಸಾರ,** (ಅಧ್ಯಾಯ XLVI, ತೋರಣ, ೧.೭೭ ಶ್ಲೋಕಗಳು).

೩. **ಮಾನಸಾರ,** ೪೬–೬೮ ರಿಂದ ೭೦.

೪. **ಮಾನಸಾರ,** ೭೦–೨೧ ಮತ್ತು ೩೪–೨೧೭.

೫. **ಮಾನಸಾರ,** ೪೩–೨೦೧, ಶಾಲಾ ಚ ನಾಸಿಕಾ ಭದ್ರೆ ಕೂಟ ನೀಡ್ಯೈಸ್ತು ತೋರಣ್ಯೆ.

೬. **ಮಾನಸಾರ,** ೧೪–೧೩೦–೧೩೩–೧೩೫) ಅಥವಾ ತೋರಣಂ
ಕೃತ್ವಾ ಸ್ಥಂಭಾಸೋಪರಿ ವಾಜನಂ ।
ತದ್ ಊರ್ಧ್ವೇ ತೋರಣಸ್ಯಾಂತೇ ಮಕರ ಪತ್ರ ಸಂಯುತಂ ।
ತದ್ ಊರ್ಧ್ವೇ ತೋರಣಂ ಸ್ಯಾದ್ ಏಕ ದಂಡಂ ತುತಚ್ಛಿರಂ ।
ಮಕರಿ ವಕ್ತ್ರ ಸಂಯುತಂ ।

೭. ತೋರಣಂ ತ್ರಿವಿಧಂ ಪತ್ರ ತೋರಣಂ ಮಕರಾನ್ವಿತಂ ।
ಚಿತ್ರ ತೋರಣಂ ಇತಿ ಈಶಂ ಮಂಡನಂ ಚಾಧುನೋಚ್ಯತೆ ।
(ಕಾಮಿಕಾಗಮ – ೫೫–೬೪–೯೩)

೮. ದೇವ ದ್ವಿಜ ನರೇಂದ್ರಾಣಾಮ್ ತೋರಣಂ ಮಕರಾಕ್ಯಕಂ ।
ತೋರಣಂ ಚಿತ್ರ ಸಂಜ್ಞಾಮ್‌ತು ವೈಶ್ಯಾನಾಂ ಪ್ರವಿಧೀಯತೆ ।
ಪದ್ಮಾಪತ್ಯಾಕ್ಯ ತೋರಣಂ ಶೂದೇ ಸರ್ವಂ ಸರ್ವತ್ರ ವಾಮತಮ್।
(ಕಾಮಿಕಾಗಮ ೫೫–೬೪, ೯೩)

೯. ಎಲ್ಲೋರದ ಜಗನ್ನಾಥ ದೇವಾಲಯ ಸಭೆಯ ದೇವಾಲಯ ಸಮೂಹದಲ್ಲಿ, ಕೆಳಗಿನ ಗುಹೆಯಲ್ಲಿ ನಾಲ್ಕು ಮಕರಗಳ ರಚನೆಯಿದ್ದು, ಕಿನ್ನರ, ಕಿಂಪುರುಷರು ಇದ್ದಾರೆ. ಇದೇ ರೀತಿಯ ರಚನೆ ಐಹೊಳೆಯ ಹಳ್ಳಿ ಬಸಪ್ಪನ ದೇವಾಲಯದ ಪೂರ್ವದ ದ್ವಾರಬಾಗಿಲಿನ ಮೇಲೂ ಕಾಣಬಹುದು. ಇದು ಕ್ರಿ.ಶ. ೯ನೇ ಶತಮಾನದ ದೇವಾಲಯ.

೧೦. ಜೈನ ದೇವಾಲಯ, ಪಟ್ಟದಕಲ್ಲು–ಕರ್ನಾಟಕ ಶೈಲಿ, ಕ್ರಿ.ಶ. ೯ನೇ ಶತಮಾನದ ಕೊನೆಯ ಭಾಗ ಅಥವಾ ಕ್ರಿ.ಶ. ೧೦ನೇ ಶತಮಾನದ ಪೂರ್ವ ಭಾಗದಲ್ಲಿ ರಾಷ್ಟ್ರಕೂಟರಿಂದ ರಚಿಸಲ್ಪಟ್ಟಿದೆ.

೧೧. ಈ ದೇವಾಲಯ ಕ್ರಿ.ಶ. ೧೦ನೇ ಶತಮಾನದ ಕೊನೆಯ ಭಾಗಕ್ಕೆ ಸೇರಿದ್ದು.

೧೨. ಇದು ಕ್ರಿ.ಶ. ೧೦ನೇ ಶತಮಾನಕ್ಕೆ ಸೇರಲ್ಪಟ್ಟಿದ್ದು, ಗಂಗವಾಡಿ ಶೈಲಿಯಲ್ಲಿದ್ದು, ತಲಕಾಡಿನ ಗಂಗರಿಂದ ರಚಿಸಲ್ಪಟ್ಟಿದೆ.

೧೩. ಇದು ನೆಲಮಂಗಲದ ಬಳಿಯಿರುವ ಬಿನ್ನಮಂಗಲದಲ್ಲಿರುವ ದೇವಾಲಯ, ಚೋಳರಾಜ ರಾಜನ ಶಾಸನವಿದೆ.

ಡಾ. ಕೆ. ಮಹೇಶ್*

# ರಾವಿಯಹಾಳು ಗ್ರಾಮದ ಚೆನ್ನಕೇಶವ ಶಿಲ್ಪ

ಬಳ್ಳಾರಿ ಜಿಲ್ಲೆಯ ಸಿರುಗುಪ್ಪ (ಸಿರಿಕುಪ್ಪೆ) ತಾಲೂಕಿನ 'ರಾವಿಹಾಳ್' (ರಾವಿಯಹಾಳು) ಎಂಬ ಗ್ರಾಮದ ಮಧ್ಯಭಾಗದಲ್ಲಿ ಪಾಳುಬಿದ್ದಿರುವ ದೇವಾಲಯದ ಮುಂದಿನ ವೇದಿಕೆಯಲ್ಲಿ ನಾಲ್ಕು ಅಡಿಯಷ್ಟು ಎತ್ತರ ಮೂರು ಅಡಿಯಷ್ಟು ಅಗಲದ ಒಂದು ಶಿಲ್ಪವನ್ನು ಬಿಳಿದಾದ ಕಲ್ಲುಬಂಡೆಗೆ ಒರಗಿಸಿ ನಿಲ್ಲಿಸಿರುವುದನ್ನು ಕಾಣಬಹುದು. ಈ ಶಿಲ್ಪವನ್ನು ಸ್ಥಳೀಯರು ಚೆನ್ನಕೇಶವ, ವಿಷ್ಣು, ಜನಾರ್ಧನ ಶಿಲ್ಪವೆಂದು ಕರೆಯುತ್ತಾರೆ.

ಸುಮಾರು ಮೂವತ್ತು ವರ್ಷದ ಹಿಂದೆ ಬಸವಣ್ಣ ದೇವಾಲಯವನ್ನು ನಿರ್ಮಾಣ ಮಾಡುವುದಕ್ಕೆ ಬುನಾದಿಯನ್ನು ತೆಗೆಯುವಾಗ (ಈಗ ಮೂರ್ತಿ ಇರುವ ಹಿಂಭಾಗದ ಬಲಕ್ಕೆ ಇರುವ ದೇವಾಲಯ) ಕೇಶವಮೂರ್ತಿ ಸುಮಾರು ಹತ್ತು ಅಡಿ ಆಳದಲ್ಲಿ ದೊರೆತಿದೆ ಎಂದು ಗ್ರಾಮದ ಹಿರಿಯ ನಾಗರೀಕರು ತಮ್ಮ ಅಭಿಪ್ರಾಯವನ್ನು ತಿಳಿಸುತ್ತಾರೆ. ಈ ಶಿಲ್ಪವನ್ನು ವಿಶೇಷವಾಗಿ ರಕ್ಷಣೆಯ ದೃಷ್ಟಿಯಿಂದ ಹಿಂದೆ ಗ್ರಾಮವು ಧಾಳಿಗೆ ಒಳಗಾದಂತ ಸಂದರ್ಭದಲ್ಲಿ ಮೂರ್ತಿಯನ್ನು ರಕ್ಷಿಸಲೆಂದು ಭೂಮಿಯಲ್ಲಿ ಹೂತಿರುವುದು ಗೊತ್ತಾಗುತ್ತದೆ. ಇದನ್ನು ತ್ರುಟಿತವಾಗದಿರಲೆಂದು ಮೂರ್ತಿಯ ಕೆಳಭಾಗದಲ್ಲಿ ಮರಳು ಮತ್ತು ಮೂರ್ತಿಯ ಮೇಲ್ಭಾಗದಲ್ಲಿ ಹುಲ್ಲನ್ನು (ಜೊಂಡು) ಹಾಕಿ ಇದರ ಮೇಲೆ ಮರಳನ್ನು ಹಾಕಲಾಗಿದ್ದು ನಂತರ ಮಣ್ಣಿನಿಂದ ಮೂರ್ತಿಯನ್ನು ಮುಚ್ಚಿರುವುದನ್ನು ಬುನಾದಿ ತೆಗೆಯುವ ಸಂದರ್ಭದಲ್ಲಿ ಈ ಮೇಲಿನ ವಿಷಯುವು ಗೊತ್ತಾಗಿರುತ್ತದೆ. ಇಲ್ಲಿ ಬಹುಮುಖ್ಯವಾಗಿ ಮೂರ್ತಿಯು ಹಾಳಾಗದಿರಲೆಂದು ಸ್ಥಳೀಯರು ಅಂದು ವಿಶೇಷ ರಕ್ಷಣೆಯನ್ನು ತೆಗೆದುಕೊಂಡಿರಬೇಕು. ಈ ರೀತಿಯ ರಕ್ಷಣೆ ಕ್ರಮವನ್ನು ಕೈಗೊಂಡಿರುವುದು ವಿಶೇಷವೆಂದು ಹೇಳಬೇಕು.

ಈ ಗ್ರಾಮವು ವಿಜಯನಗರದ ತುಳುವ ಮನೆತನದ ಸದಾಶಿವರಾಯನ ಆಳ್ವಿಕೆಗೆ ಒಳಪಟ್ಟ ಗ್ರಾಮವಾಗಿತ್ತೆಂದು ವೇದಿಕೆಗೆ ಅಂಟಿಕೊಂಡಿರುವ ಕಲ್ಲು ಬಂಡೆಯ ಮೇಲಿನ ಕ್ರಿ.ಶ. ೧೫೫೪ರ ಶಾಸನದಿಂದ ತಿಳಿದುಬರುತ್ತದೆ.[೧] ಈ ಶಾಸನದಲ್ಲಿ ರಾವಿಹಾಳು ಗ್ರಾಮವನ್ನು 'ರಾವಿಯಹಾಳು' ಗ್ರಾಮವೆಂದು ಇದಕ್ಕೆ 'ಮಲ್ಲಿನಾಥಪುರ'ವೆಂಬುದಾಗಿ ಹೆಸರಿಸಿರುವ ಅಂಶ ವ್ಯಕ್ತವಾಗುತ್ತದೆ. ಅಲ್ಲದೆ, ಈ ಗ್ರಾಮವನ್ನು ನಾನಾಗೋತ್ರದ ಮಹಾಜನರಿಗೆ ಹಂಚಿದ ವಿವರ ಈ ಶಾಸನವು ನೀಡುತ್ತದೆ.

ಈ ಗ್ರಾಮವು ಆದವಾನಿ ರಾಜ್ಯಕ್ಕೆ ಸೇರಿದ ಗ್ರಾಮವಾಗಿತ್ತು. ಇಲ್ಲಿ ಶೈವ, ವೈಷ್ಣ, ಜೈನ ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳು ಶಿಲ್ಪಗಳು ಕಂಡುಬರುತ್ತವೆ. ಅಲ್ಲದೆ ವೀರಗಲ್ಲುಗಳು ಮತ್ತು ಬೇಟೆಯ ಶಿಲ್ಪಗಳು ಕೂಡಾ ಗ್ರಾಮದಲ್ಲಿ ಸಿಕ್ಕುತ್ತವೆ. ಇಂದು ಹಲವಾರು ದೇವಾಲಯಗಳು, ಶಿಲ್ಪಗಳು ಭಗ್ನಗೊಂಡು ಕಣ್ಮರೆಯಾಗುವ ಹಂತ ತಲುಪಿರುವುದು ದುರಾದೃಷ್ಟಕರ ಸಂಗತಿ.

ಈ ಶಿಲ್ಪವನ್ನು ನಾಲ್ಕು ಅಡಿಯ ಏಕಶಿಲಾ ಬಂಡೆಯಲ್ಲಿ ಕಡಿಯಲಾಗಿದ್ದು, ಇದರಲ್ಲಿ ಮೂರು ಅಡಿ ಎತ್ತರದ ಚೆನ್ನಕೇಶವ ಶಿಲ್ಪವಿದೆ.[೧] ಈ ಬಂಡೆಯು ಅರ್ಧ ಪೀಠವನ್ನು ಹೊಂದಿದ್ದು ಇದರ ಮೇಲೆ ಮೂರ್ತಿಯನ್ನು ಕೆತ್ತಲಾಗಿದೆ. ಮೂರ್ತಿಯು ಚತುರ್ಭುಜಗಳನ್ನು ಹೊಂದಿದ್ದು ಸಮಭಂಗಿಯಲ್ಲಿ ನಿಂತಿದೆ. ಬಲಹಿಂಗೈಯಲ್ಲಿ ಶಂಖವಿದೆ. ಬಲ ಮುಂಗೈಯಲ್ಲಿ ಕಮಲದ ಮೊಗ್ಗನ್ನು ವರದ ಹಸ್ತಮುದ್ರಿಕೆಯಲ್ಲಿ ಹಿಡಿಯಲಾಗಿದೆ. ಎಡ ಭಾಗದ ಹಿಂಗೈಯಲ್ಲಿ ಚಕ್ರವಿದ್ದು, ಎಡಭಾಗದ ಮುಂಗೈಯಲ್ಲಿ ಒಂದೂವರೆ ಅಡಿ ಎತ್ತರದ ಗದೆಯನ್ನು ಹಿಡಿದಿದ್ದಾನೆ. ತಲೆಯ ಭಾಗದಲ್ಲಿ ಕಿರೀಟವಿದ್ದು ಮುಖ ಮಂದಸ್ಮಿತವಾಗಿ ಧ್ಯಾನ ಸ್ಥಿತಿಯಲ್ಲಿದೆ. ಕಿವಿಗಳಲ್ಲಿ ಭುಜದ ಮೇಲೆ ಇಳಿಬಿದ್ದಿರುವ ಕುಂಡಲಗಳಿವೆ. ಕಂಠದಲ್ಲಿ ಕಂಠಿಹಾರ, ಎದೆಯ ಮೇಲೆ ಕೌಸ್ತುಭಹಾರ, ಉದರಬಂಧ, ಯಜ್ಞೋಪವೀತವಿದೆ. ಉಟ್ಟಿರುವ ವಸ್ತ್ರದ ಮೇಲೆ ಆಭರಣಗಳನ್ನು ಇಳಿಬಿಟ್ಟಿದೆ. ಕೈಗಳಿಗೂ ಮತ್ತು ಕಾಲುಗಳಿಗೂ ಕಡಗಗಳಿವೆ (ಅಂದುಗೆಗಳು). ಇದು ಮುಖ್ಯ ಶಿಲ್ಪದ ವಿವರವಾದರೆ, ಶಿಲ್ಪದ ಸುತ್ತಲೂ ಜಡಾವಣೆಗೊಂಡಿರುವ ಪ್ರಭಾವಳಿಯಿದೆ. ಶಿಲ್ಪದ ಬಲ ಹಾಗೂ ಎಡಬದಿಯಲ್ಲಿ ಚಾಮರವನ್ನು ಹಿಡಿದಿರುವ ನಿಂತ ಭಂಗಿಯ ಸ್ತ್ರೀಯರ ಶಿಲ್ಪಗಳಿವೆ. ಬಲ ತಳದ ಮೂಲೆಯಲ್ಲಿ ಕುಳಿತಿರುವ ಗರುಡನ ಶಿಲ್ಪವಿದೆ.

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರಕಾರಿ ಪ್ರಥಮ ದರ್ಜೆ ಕಾಲೇಜು, ಮರಿಯಮ್ಮನಹಳ್ಳಿ, ಹೊಸಪೇಟೆ.



ಇಂದು ಶಿಲ್ಪದ ಮೇಲೆ ಭಕ್ತರು ಎಣ್ಣೆಯನ್ನು ಸುರಿಯುತ್ತಿದ್ದು, ಮೂರ್ತಿಯನ್ನು ಹಾಳುಗೆಡವಿದ್ದಾರೆ. ಒಟ್ಟಾರೆಯಾಗಿ ಈ ಶಿಲ್ಪವು ವೈಷ್ಣವ ಧರ್ಮದ ಕುರುಹಾಗಿ ಉಳಿದುಕೊಂಡಿದೆ. ಈ ಶಿಲ್ಪದಿಂದ ವೈಷ್ಣವ ಧರ್ಮವು ಕೂಡಾ ರಾವಿಯಹಾಳು ಗ್ರಾಮದಲ್ಲಿ ಹಿಂದಿನಿಂದಲೂ ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಈ ಶಿಲ್ಪವನ್ನು ಕ್ರಿ.ಶ. ೧೪ನೇ ಶತಮಾನದಲ್ಲಿ ಕೆತ್ತಿರಬಹುದಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಪುಟ ೧೦೬.
ವಕ್ತೃ–ಮಲ್ಲಿಕಾರ್ಜುನಯ್ಯ.

ರಘು ಆರ್.*

# ಕೊಳ್ಳೇಗಾಲದ ಮಹಾದೇವಮ್ಮನ (ದಂಡಿನಮಾರಮ್ಮ) ಶಿಲ್ಪ ಮತ್ತು ಸಂಸ್ಕೃತಿ

ಮೈಸೂರು ಸಂಸ್ಥಾನದಲ್ಲಿ ಎಲ್ಲಾ ಗ್ರಾಮಗಳಲ್ಲಿ ಗ್ರಾಮದೇವತೆಯಾಗಿ ಮಾರಮ್ಮನ ದೇವಾಲಯಗಳು ಸಾಮಾನ್ಯವಾಗಿ ಕಂಡುಬರುತ್ತದೆ. ಚಾಮರಾಜನಗರ, ಮೈಸೂರು ಜಿಲ್ಲೆಗಳಲ್ಲಿ ಹೊನ್ನೆಮರದ ಮಾರಮ್ಮನ ಎರಡು ಕೊಳಗಗಳು ಇದೆ. ಒಂದು ದೊಡ್ಡಮ್ಮ ಮತ್ತು ಚಿಕ್ಕಮ್ಮತಾಯಿ ಎಂದು ಕರೆಯುತ್ತಾರೆ. ಮರದ ಕೊಳಗಗಳಿಗೆ ಕಣ್ಣು, ಮೂಗು, ಕೊರುಮೀಸೆ, ವಿಭೂತಿಪಟ್ಟೆ ಬೆಳ್ಳಿಯಲ್ಲಿ ಮಾಡಿಸಿ ತಾಯಿಗೆ ಅಲಂಕರಿಸಿ ಪೂಜಿಸುತ್ತಾರೆ.

ವಿಶೇಷವಾಗಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ಪಟ್ಟಣದ ನಾಯಕರ ದೊಡ್ಡ ಬೀದಿಯಲ್ಲಿ ದಂಡಿನಮಾರಮ್ಮನ (ಮಹಾದೇವಮ್ಮ) ದೇವಸ್ಥಾನವಿದೆ. ಆಲಯದಲ್ಲಿ ಮಹಾದೇವಮ್ಮನ ಮೂರ್ತಿ ಮಧ್ಯಭಾಗದಲ್ಲಿದ್ದು ಬಹಳ ಸುಂದರವಾಗಿ ಕೆತ್ತಲ್ಪಟ್ಟಿವೆ. ಎಡಭಾಗದಲ್ಲಿ ಬೊಮ್ಮರಾಯನ ದಾರು ಶಿಲ್ಪವಿದೆ. ಈ ಶಿಲ್ಪವನ್ನು ಕಪ್ಪು ಶಿಲೆಯಿಂದ ಕೆತ್ತಿದ್ದಾರೆ. ಇದೆ ಊರಿನಲ್ಲಿ ಜನಿಸಿದ ವಿಶ್ವಕರ್ಮ ಸಮಾಜದ ಶಿಲ್ಪಿ ಸಿದ್ದಲಿಂಗಸ್ವಾಮಿಯವರು ಸ್ವಂತ ಅನುಭವದಿಂದ ಶಿಲ್ಪಶಾಸ್ತ್ರದಂತೆ ಸಾಮಾಜಿಕ ಸಂಸ್ಕೃತಿಯ ಕಥೆಯನ್ನು ಅನುಸರಿಸಿ, ಇತಿಹಾಸವನ್ನು ಆಧಾರವಾಗಿಟ್ಟುಕೊಂಡು ಈ ಶಿಲ್ಪವನ್ನು ರಚನೆಮಾಡಿದ್ದಾರೆ. ಇವರು ಕೊಳ್ಳೇಗಾಲದ ತಮ್ಮ ಸ್ವಂತ ಮನೆಯಲ್ಲಿ ಕೆತ್ತನೆ ಮಾಡಿದ್ದು ಅವರೇ ನಿಂತು ದೇವಸ್ಥಾನದಲ್ಲಿ ವಿಶ್ವಕರ್ಮ ಬ್ರಾಹಣರಿಂದ ಪ್ರತಿಷ್ಠಾಪಿಸಿದ್ದಾರೆ. ವಿಶ್ವಕರ್ಮದವರಾದ ಪಾಂಚಾಳರು ಮಹಾದೇವಮ್ಮನ ಪೂಜಾರಿಯಾಗಿದ್ದರು. ಕಾಲಾನಂತರ ತೊರೆಯನಾಯಕರಿಗೆ ವಹಿಸಿಕೊಡಲಾಯಿತು ಎಂದು ವಿಶ್ವಕರ್ಮಸಮಾಜದ ಯಜಮಾನರು ತಿಳಿಸಿರುತ್ತಾರೆ.

**ಶಿಲ್ಪಲಕ್ಷಣ ಮತ್ತು ಸಂಸ್ಕೃತಿ :-** ಪ್ರತಿಮಾ ಶಿಲ್ಪಶಾಸ್ತ್ರದಂತೆ ಮೈಸೂರು ಆಸ್ಥಾನದ ಶಿಲ್ಪಿಗಳಾದ ಸಿದ್ದಲಿಂಗಸ್ವಾಮಿ ಸ್ಥಪತಿಗಳು ದಂಡಿನಮಾರಮ್ಮ(ಮಹದೇವಮ್ಮ) ಶಿಲ್ಪವನ್ನು ಸುಂದರವಾಗಿ ವಿಶಿಷ್ಟ ಶೈಲಿಯಲ್ಲಿ ರಚಿಸಿದ್ದಾರೆ. ದಂಡಿನ ಮಾರಮ್ಮ ಮೂರ್ತಿ ವೀರಾಸೀನ ಭಂಗಿಯಲ್ಲಿದೆ. ಈ ಮಹಾತಾಯಿಯು ಚತುರ್ಭುಜಧಾರೆಯಾಗಿ, ಸರ್ವಾಂಗ ಸುಂದರಿಯಾಗಿ, ಅಲಂಕಾರಭೂಷಿತಳಾಗಿ, ಬಲಗೈಯಲ್ಲಿ ತೇವರ್(ಶಸ್ತಮೂರ್ತಿ) ಎಂಬ ಆಯುಧವಿಡಿದಿದ್ದರೆ ಮತ್ತು ಎಡಗೈಯಲ್ಲಿ ಕಳಶ ಮತ್ತು ಹಿಂಬದಿಯ ಬಲಗೈಯಲ್ಲಿ ಪರಶುಕೊಡಲಿ ಇದ್ದು (ಕಾಳಿಆಯುಧ) ಎಡಭಾಗದಲ್ಲಿ ಡಮರುಗ ಸರ್ಪದಿಂದ ಕೂಡಿದೆ. ಕೊರಳಿನಲ್ಲಿ ತಾಲಿಯನ್ನು ಹಾಕಿದಂತೆ ಕೆತ್ತಿದ್ದಾರೆ. ಈ ಆಯುಧಗಳು ಸಾಮಾನ್ಯವಾಗಿ ಮಾರಮ್ಮನ ದೇವತಾ ಶಿಲ್ಪಗಳಲ್ಲಿ ಕಂಡುಬರುವುದಿಲ್ಲ. ಆದರೆ ಸ್ಥಪತಿಗಳು ಈ ತಾಯಿಯ ಕಥೆಯನ್ನು ಆಧರಿಸಿ ಇತಿಹಾಸವನ್ನು ಮತ್ತು ಸಮಾಜದ ಸಂಕೇತವನ್ನು ಅನುಸರಿಸಿ, ಪುರಾಣದ ಸಂಪ್ರದಾಯದಂತೆ ಕೆತ್ತನೆ ಮಾಡಿದ್ದು ವಿಶಿಷ್ಟ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿರುತ್ತಾರೆ.

ಈ ಶಿಲ್ಪಲಕ್ಷಣದಲ್ಲಿ ತೇವರ್ ಎಂಬ ಆಯುಧವು (ಶಸ್ತ್ರಮೂರ್ತಿಯಾಗಿ) ತ್ರಿಮೂರ್ತಿ ಸ್ವರೂಪದಲ್ಲಿದೆ. (ತಮಿಳುನಾಡಿನ ಮಧುರೈ ಜಿಲ್ಲೆಯ ತೇವರ್ ಎಂಬ ಸಮುದಾಯಗಳಲ್ಲಿದೆ). ಅಂದರೆ ಬ್ರಹ್ಮ, ವಿಷ್ಣು, ಶಂಕರನೆಂದು (ಪರಮೇಶ್ವರ) ಸೃಷ್ಟಿ, ಸ್ಥಿತಿ, ಲಯ, ಈ ಮೂರು ಗುಣಗಳು ಅಭಿಮುಖವಾಗಿರುವಂತೆ ಆಯುಧಗಳನ್ನು ಸಂಕೇತಿಸಿದ್ದಾರೆ. ಎಡಗೈಯಲ್ಲಿರುವ ಕಳಶವು ಗಂಗೆಮಾತೆಯ ಗಂಗೆಕುಲವನ್ನು ಸಂಕೇತಿಸುತ್ತದೆ. ಪರಶುಕೊಡಲಿ ಕಾಳಿಯ ಆಯುಧವಾಗಿ, ವಿಶ್ವಕರ್ಮಸಮಾಜದ (ತಿಂತಿಣಿಮೌನೇಶ್ವರರು) ಸಂಕೇತವನ್ನು ಸ್ಮರಿಸುತ್ತದೆ. ಢಮರುಗಸರ್ಪ ಎಂಬ ಆಯುಧವು ಆದಿಜಾಂಬವ (ಮಾದಿಗ ಸಮಾಜ) ಸಮಾಜದ ಸಂಕೇತವಾಗಿದೆ. ಕೊರಳಿನಲ್ಲಿರುವ ಮಾಂಗಲ್ಯ ತಾಯಿಗೆ ಮದುವೆಯಾದಂತೆ ಸಾಂಕೇತಿಕವಾಗಿ ಸೂಚಿಸುತ್ತದೆ.

ಹೀಗೆ ಶಿಲ್ಪಲಕ್ಷಣ ದಂಡಿನಮಾರಮ್ಮನ ಸ್ವರೂಪವನ್ನು, ಆದಿಶಕ್ತಿಯಾಗಿ (ಪರಮೇಶ್ವರಿ) ಪುರಾಣಸಂಸ್ಕೃತಿಯಲ್ಲಿ ಚಿತ್ರಿಸಿದ್ದಾರೆ. ಚಾಮರಾಜನಗರದ ಮಲೆಯೂರಿನ ದೇವಚಂದ್ರ ಎಂಬ ಕವಿಯು (೧೭೭೦ –೧೮೪೧) "ರಾಜಾವಳಿ ಕಥಾಸಾರ" ಎನ್ನುವ ಹಳೇಗನ್ನಡದ ಶೈಲಿಯಲ್ಲಿರುವ ತನ್ನ ಕಾವ್ಯದಲ್ಲಿ, ಪಾಂಚಾಳರು, ಬೆಸ್ತರು (ತೊರೆಯರು), ಮಾದಿಗರು ಈ ಮೂರು ಕುಲಗಳು ಒಂದು ಮೂಲದಿಂದ

* ಚಿತ್ರಕಲಾ ಶಿಕ್ಷಕರು, # ೨೧೯/೫, ಚಿತ್ರಚಾವಡಿ ಬೀದಿ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ.

ಬಂದು, ಎಡಗೈಬಣದವರೆಂದು ನಮೂದಿಸಿ ದ್ದಾನೆ. ಈ ಕಾರಣಗಳಂತೆ ಕೊಳ್ಳೇಗಾಲ ನಗರದಲ್ಲಿ ಹಲವು ಸಮಾಜದವರಿದ್ದಾರೆ, ಆದರೆ ಈ ಹತ್ತುದಿನ ನಡೆಯುವ ಮಾರಿಹಬ್ಬ ಆಚರಣೆಯಲ್ಲಿ ಮೂರು ಕುಲದವರು ಮಾತ್ರ ಸಹಭಾಗಿಂಯಾಗಿ ಈ ಹಬ್ಬವನ್ನು ಆಚರಿಸುತ್ತಾರೆ. (ಮುಡಿಗುಂಡ ಗ್ರಾಮದ ಮಾರಿ ಹಬ್ಬದಲ್ಲಿ ನಾಯಕ ಜನಾಂಗದವರನ್ನು ಯಾವ ಕಾರ್ಯಕ್ರಮಕ್ಕೂ ಸೇರಿಸುವುದಿಲ್ಲ) ವಿಶ್ವಕರ್ಮ ಸಮಾಜದವರಿಗೆ ಮೊದಲನೆ ಪೂಜೆ ಮತ್ತು ಮಡೆಉತ್ಸವ, ನಾಯಕರಿಗೆ ಎರಡನೆ ಪೂಜೆ ಮತ್ತು ಮಡೆ ಉತ್ಸವ, ಆದಿಜಾಂಬವರಿಗೆ ಮೂರನೆ ಪೂಜೆ ಮತ್ತು ಮಡೆ ಉತ್ಸವ ಹೀಗೆ ಒಬ್ಬೊಬ್ಬರು ಒಂದು ಬಾರಿ ಮಹಾದೇವಮ್ಮನ ಅರ್ಚಕರಾಗಿ ಪೂಜೆಯನ್ನು ಸಲ್ಲಿಸುವ ಆಚರಣೆಯನ್ನು ನಡೆಸಿಕೊಂಡು ಬರುತ್ತಿದ್ದಾರೆ. ಆಯಾ ದಿನಗಳಲ್ಲಿ ಪಾಂಚಾಳರಿಗೆ, ತೊರೆಯ ನಾಯಕರು ಮತ್ತು ಆದಿಜಾಂಬವ ಸಮಾಜದ ಯಜಮಾನರಿಗೆ ಆಯಾ ದಿನಗಳಲ್ಲಿ ರಾಜಮರ್ಯಾದೆ ಗೌರವದಿಂದ ಛತ್ರಿಚಾಮರ, ಶೂರಪಾನಗಳಿಂದ ಸ್ವಾಗತ ಕೋರುತ್ತಾರೆ. ಒಟ್ಟಾರೆಯಾಗಿ ಹತ್ತುದಿನಗಳಲ್ಲಿ ವಿಶಿಷ್ಟವಾಗಿ ದಂಡಿನಮಾರಿಹಬ್ಬ ಆಚರಿಸುತ್ತಾರೆ. ಈ ಸಂಸ್ಕೃತಿಯನ್ನು ಗಮನಿಸಿದರೆ ತೊರೆಯನಾಯಕರು, ಆದಿಜಾಂಬವರು, ಪಾಂಚಾಳರು, ಒಂದೇ ಮೂಲದಿಂದ ಒಂದೇ ಬಣದಿಂದ ಕೂಡಿರುತ್ತಾರೆ, ಇವರಿಗೆ ಎಡಗೈಬಣದವರೆಂದು ಗುರ್ತಿಸಲಾಗಿದೆ. ರಾಜರುಗಳ ಬಹುಪತ್ನಿತ್ವದ ಕಾರಣದಿಂದ ವೃತ್ತಿಜಾತಿಗಳ ವರ್ಣಸಂಕರವಾಗಿರುವ ವಿಷಯ ಶೋಧಿಸಬಹುದಾಗಿದೆ. ವರ್ಣಸಂಕರ ವ್ಯವಸ್ಥೆಯ ಬಗ್ಗೆ ವ್ಯಾಸಭಾರತದಲ್ಲಿ ಉಲ್ಲೇಖಿಸಿರುವಂತೆ ವಶಿಷ್ಠಮಹರ್ಷಿ ಪತಿ ಮತ್ತು ಅರುಂಧತಿ ಪತ್ನಿಯರಾಗಿದ್ದು (ಜಾಂಬವ ಕುಲದವಳು ಹಿಂದೂಸಂಪ್ರದಾಯದಲ್ಲಿ ಅರುಂಧತಿ ನಕ್ಷತ್ರವಾಗಿದ್ದಾಳೆ) ಸಂಸಾರ ಜೀವನ ಮತ್ತು ಸಮಾಜದಲ್ಲಿ ಅತ್ಯಂತ ಶ್ರೇಷ್ಠನಾಗಿದ್ದು, ಕುಲಪತಿ ಪದವಿಯನ್ನು ವಶಿಷ್ಠಮಹರ್ಷಿ ಪಡೆದಿದ್ದರೆಂದು ತಿಳಿದುಬರುತ್ತದೆ.

ಕೊಳ್ಳೇಗಾಲದ ವಿಶ್ವಕರ್ಮಸಮಾಜದ ಶಿಲ್ಪಿ ಸಿದ್ದಲಿಂಗಸ್ವಾಮಿಗಳ ಮನೆತನದವರು ಹಿಂದೆ ಮಹಾದೇವಮ್ಮ (ದಂಡಿನಮಾರಮ್ಮನ) ದೇವಸ್ಥಾನದ ಅರ್ಚಕರಾಗಿದ್ದರು. ಇಂದು ತೊರೆಯನಾಯಕರು ಪೂಜಿಸುತ್ತಿದ್ದಾರೆ. ಪಾಂಚಾಳರು ವಾರ್ಷಿಕವಾಗಿ ದಂಡಿನಮಾರಮ್ಮನ (ಪರಮೇಶ್ವರಿ) ಮದುವೆ ಮಾಡಿಕೊಂಡು ಬರುವ ಸಂಪ್ರದಾಯವನ್ನು ನಡೆಸಿಕೊಂಡು ಬಂದಿರುತ್ತಾರೆ. ದೇವರುಗಳಿಗೆ ಮದುವೆ ಮಾಡುವ ಸಂಪ್ರದಾಯ ಹಿಂದೂಧರ್ಮದ ಆಗಮಶಾಸ್ತ್ರದಲ್ಲಿ ಆಚರಣೆಯಲ್ಲಿದೆ. ಗುಂಡ್ಲುಪೇಟೆತಾಲ್ಲೂಕು, ಕಬ್ಬಳ್ಳಿಗ್ರಾಮದಲ್ಲಿ ದೇವರುಗಳಾದ ಚೆಲುವರಾಯಸ್ವಾಮಿ ಮತ್ತು ತೋಳಸಮ್ಮಳಿಗೆ ವರ್ಷದಲ್ಲಿ ಒಮ್ಮೆ ಮದುವೆ ಮಾಡುವ ಸಂಪ್ರದಾಯವಿದೆ. ಗಂಡಿನಕಡೆಯವರು ಬ್ರಾಹ್ಮಣರು, ಹೆಣ್ಣಿನಕಡೆಯವರು ಪಾಂಚಾಳರು(ಆಚಾರ್‌ಗಳು), ವೀರಶೈವಮಠದ ಗುರುಗಳ ಮೇಲ್ವಿಚಾರಣೆಯಲ್ಲಿ ನಡೆಯುತ್ತಿರುವುದು ವಿಶೇಷವಾಗಿದೆ. ಪಾರ್ವತಿಕಲ್ಯಾಣ (ಚಂದ್ರಮೌಳೇಶ್ವರ), ಲಕ್ಷ್ಮಿ ಕಲ್ಯಾಣ (ಲಕ್ಷ್ಮಿ ನಾರಾಯಣ), ಸೀತಾಕಲ್ಯಾಣ (ಸೀತಾರಾಮ), ಗಿರಿಜಾ ಕಲ್ಯಾಣ, ನಂಜುಡೇಶ್ವರನ ಕಲ್ಯಾಣ, ಮಲ್ಲಿಕಾರ್ಜುನಸ್ವಾಮಿ ಕಲ್ಯಾಣ ಹೀಗೆ ದೇವರಿಗೆ ಮದುವೆ ಮಾಡಿಸಿ ಆನಂದಪಡುವ ಸಂಸ್ಕೃತಿಯು ಇದೆ. ಹಾಗೆಯೇ ಕೊಳ್ಳೇಗಾಲದಲ್ಲಿ ದಂಡಿನ ಮಾರಮ್ಮನ ಮದುವೆ ಮಾಡಿಸುವ ಸಂಪ್ರದಾಯ ಪಾಂಚಾಳರಾದ ವಿಶ್ವಕರ್ಮಸಮಾಜದವರು, ಮತ್ತು ನಾಯಕರು (ತೊರೆಯರು) ಆಚರಿಸುತ್ತಾ ಬಂದಿದ್ದಾರೆ.

ಈ ಸಂಪ್ರದಾಯ ಮತ್ತು ವಾಡಿಕೆಯಂತೆ ದಂಡಿನ ಮಾರಮ್ಮನನ್ನು, ತಾಯಿ, ದೇವಮ್ಮ, ದೇವಿ,ಮಹಾತಾಯಿ, ಮಹಾದೇವಮ್ಮ(ಪರಮೇಶ್ವರಿ) ಎಂದು ಪೂಜಿಸುತ್ತಾರೆ. ಇವಳ ಗಂಡನಿಗೆ ಬೊಮ್ಮರಾಯ, ಬೊಮ್ಮಪ್ಪ, ಬೊಮ್ಮ (ಬ್ರಹ್ಮ, ಕ್ಷೇತ್ರಪಾಲಕ) ಎಂದು ಕರೆಯುತ್ತಾರೆ. ಮಾರಮ್ಮ ಮತ್ತು ಬೊಮ್ಮರಾಯನಿಗೆ ಮದುವೆ ಮಾಡುವ ಸಂಪ್ರದಾಯವನ್ನು ಪಾಂಚಾಳರು ನಡೆಸಿಕೊಂಡು ಬಂದಿರುತ್ತಾರೆ. ಗೊತ್ತು ಪಡಿಸಿದ ದಿನಾಂಕ ಜೇಷ್ಠಮಾಸ, ಕೃಷ್ಣಪಕ್ಷ ತೃತಿಯ ಮಂಗಳವಾರದಂದು ಆಚರಿಸುತ್ತಾರೆ. ನಾಯಕ ಜನಾಂಗದ ಯಜಮಾನರು ಸಂಪ್ರದಾಯದಂತೆ ಗೌರವಪೂರ್ವಕವಾಗಿ, ಮಾನ್ಯತೆ ಪಡೆದ ಬಿಳಿಛತ್ರಿಯೊಂದಿಗೆ, ಪಂಚವಾದ್ಯ ಮತ್ತು ತಮಟೆಯನ್ನು ಬಾರಿಸುತ್ತಾ ನಾದಸ್ವರದೊಂದಿಗೆ ದೇವಸ್ಥಾನ ದಿಂದ ಹೊರಟು, ಕಾಳಿಕಾಂಬದೇವಸ್ಥಾನದ ಬೀದಿಯಲ್ಲಿರುವ ಪಾಂಚಾಳರಾದ ಸಿದ್ದಲಿಂಗಸ್ವಾಮಿ ಮನೆತನದವರ ಮನೆಗೆ ಹೋಗಿ ಯಜಮಾನರು ಕುಳಿತು ಮಾತನಾಡಿ, ಸಂಪ್ರದಾಯ ದಂತೆ ಮದುವೆ ಕಾರ್ಯ ನಡೆಸಿಕೊಡಬೇಕೆಂದು ಕೋರುತ್ತಾರೆ. ತದನಂತರ ಅವರ ಕುಟುಂಬದ ಹೆಣ್ಣು ಮಕ್ಕಳು ಪಂಚಕಳಶ ತೆಗೆದುಕೊಂಡು, ತಾಲಿಭಾಗ್ಯ ತರಲು ಸುಪರ್ಣಸ್ಯಗೋತ್ರದ ಚಿನ್ನಗೆಲಸದ ಆಚಾರರ ಮನೆಗೆ ತೆರಳಿ, ಅಲ್ಲಿ ಶಾಸ್ತ್ರದಂತೆ ಮುತ್ತೈದೆಯರು ತಾಲಿಗೆ ಹರಿಶಿಣ ಕುಂಕುಮ ಹಚ್ಚಿ ಮಂತ್ರ ಹೇಳಿ ಮಂಗಳಾರತಿ ಮಾಡುತ್ತಾರೆ. ಹೂವು ವೀಳ್ಯವನ್ನು ಕೊಟ್ಟು ಯಜಮಾನರನ್ನು ಗೌರವಪೂರ್ವಕವಾಗಿ ಕಳುಹಿಸಿ ಕೊಡುತ್ತಾರೆ.

ಹೆಣ್ಣಿನ ಮನೆಯವರು ತಾಳಿಯ ಭಾಗ್ಯ ಮತ್ತು ಪಂಚಕಳಶದೊಂದಿಗೆ ನಾರಾಯಣಸ್ವಾಮಿಗುಡಿ ಬೀದಿಯಲ್ಲಿ ಗೌರವಪೂರ್ವಕವಾಗಿ ಮೆರವಣಿಗೆ ಮಾಡಿಸಿ, ಮಾರಮ್ಮನ

ದೇವಸ್ಥಾನಕ್ಕೆ ತರುತ್ತಾರೆ. ಮಾರಮ್ಮನ ದೇವಸ್ಥಾನದ ಗರ್ಭಗುಡಿಯಲ್ಲಿ ಎರಡು ಮೂರ್ತಿಗಳಿದ್ದು, ಮಹಾದೇವಿ ಕಲ್ಲಿನಶಿಲ್ಪವಾಗಿದೆ. ಎಡಭಾಗದಲ್ಲಿ ಬೊಮ್ಮರಾಯನ ಧಾರುಶಿಲ್ಪವಿದೆ. ಬೊಮ್ಮರಾಯನು ಲಕ್ಷಣವಾಗಿದ್ದು ಕಿರೀಟಧರಿಸಿ ವೇಷಭೂಷಣ ರಾಜನಂತೆ ಧರಿಸಿದ್ದಾನೆ. ಬಲಗೈಯಲ್ಲಿ ತ್ರಿಶೂಲವಿಡಿದು (ತೇವರ್ ಆಯುಧ) ಕುದುರೆ ಮೇಲೆ ಕುಳಿತು, ಎಡಗೈಯಲ್ಲಿ ಲಗಾಮು ಹಿಡಿದಿದ್ದಾನೆ. ಸಂಪ್ರದಾಯದಂತೆ ಪನ್ನೀರನ ಸ್ನಾನಮಾಡಿಸಿ ಶುಚಿರ್ಭೂತ ವಾಗಿ ಗಂಡು ಹೆಣ್ಣಿಗೆ ಹೊಸದಾದ ವಸ್ತ್ರ ಸೀರೆಯಿಂದ ಅಲಂಕರಿಸಿ ಮದುವೆ ಸಂಪ್ರದಾಯದಂತೆ, ಒಳಗಡೆ ಆಲಯ ದಲ್ಲಿ, ಪಂಚವಾದ್ಯ ಮಂತ್ರ ಸಮೇತವಾಗಿ ಕಾರ್ಯಕ್ರಮವನ್ನು ಮನೆತನದವರು ನಡೆಸಿಕೊಡುತ್ತಾರೆ. ಕೊನೆಯ ಹಂತ



ಮಹಾದೇವಿ / ದೇವಮ್ಮ / ದಂಡಿನ ಮಾರಮ್ಮ ಉತ್ಸವಮೂರ್ತಿ



ಮಹಾದೇವಿ / ದೇವಮ್ಮ / ದಂಡಿನ ಮಾರಮ್ಮ ಮೂಲವಿಗ್ರಹ ಶಿಲ್ಪ



ಕುದುರೆ ಮೇಲೆ ಕುಳಿತಿರುವ ಬೊಮ್ಮರಾಯ



ಶಸ್ತ್ರಮೂರ್ತಿ, ರಾಮೇಶ್ವರ ದೇವಸ್ಥಾನ ಅಗರ, ಯಳಂದೂರು ತಾಲ್ಲೂಕು



ಪರಸು ಕೊಡಲಿ
ವಿಶ್ವಕರ್ಮ ಸಮಾಜದ ಯಾತ್ರಾಸ್ಥಳ, ಮೌನೇಶ್ವರ ಕ್ಷೇತ್ರ, ತಿಂತಿಣಿ ಗ್ರಾಮ, ರಾಯಚೂರು ಜಿಲ್ಲೆ

ಸಂದರ್ಭದಲ್ಲಿ ಗಟ್ಟಿಮೇಳ ನುಡಿಸಿ ತಾಲಿಕಟ್ಟುತ್ತಾರೆ. ನಂತರ ಮುಚ್ಚಿದ ಬಾಗಿಲು ತೆರೆದು, ಮಂಗಳಾರತಿ ಮಾಡಿ ಎಲ್ಲರಿಗೂ ದರ್ಶನ ಭಾಗ್ಯ ಕಲ್ಪಿಸುತ್ತಾರೆ. ಮಹಾದೇವಿಗೆ ಹೊಸದಾಗಿ ಮಾಡಿಸಿದ ತಾಲಿಯನ್ನು ಹಾಕಿಸಿರುತ್ತಾರೆ. ಹೀಗೆ ಬೊಮ್ಮಪ್ಪ ಮಹಾದೇವಿಗೆ ಮದುವೆ ಮಾಡಿಸಿ ತೀರ್ಥಪ್ರಸಾದ ಕೊಡುತ್ತಾರೆ. ನಂತರ ನಾಯಕ ಜನಾಂಗದವರು ಮತ್ತೆ ಮಹಾದೇವಿಯನ್ನು ಶುಚಿರ್ಭೂತಗೊಳಿಸಿ ನಾಯಕ ಜನಾಂಗದ ಸಂಪ್ರದಾಯದಂತೆ ಮತ್ತೆ ಪೂಜಿಸುತ್ತಾರೆ. ನಾಯಕ ಜನಾಂಗದವರು ಮಹಾದೇವಿಯನ್ನು ತಮ್ಮ ಮನೆಯ ಸೊಸೆ ಎಂದು ಭಾವಿಸುತ್ತಾರೆ. ಮೈಸೂರು ಸಂಸ್ಥಾನದಲ್ಲಿ ತೊರೆಯನಾಯಕರಿಗೆ ಮಾರಮ್ಮನ ದೇವಸ್ಥಾನದ (ಅರ್ಚಕ ವೃತ್ತಿ) ತಮ್ಮಡಿಯಾಗಿ ಪೂಜೆಯನ್ನು ಮಾಡುವ ಹಕ್ಕು ಬಾಧ್ಯತೆಯನ್ನು ನೀಡಿದ್ದಾರೆ. ಎಂಬುದನ್ನು ಕರ್ನಾಟಕ ಗ್ಯಾಸೆಟಿಯರ್‌ನಲ್ಲಿ ನಮೂದಿಸಲಾಗಿದೆ.

ಈ ಸಂಸ್ಕೃತಿಯಲ್ಲಿ ದೇವರಿಗೆ ಮದುವೆ ಮಾಡುವುದು ವಿಶೇಷ, ಅದರಲ್ಲೂ ಮಾರಮ್ಮನಿಗೆ ಮದುವೆ ಎಂದರೆ ಆಶ್ಚರ್ಯವಾಗುತ್ತದೆ. ಕಾರಣ ಮಾರಮ್ಮನಿಗೆ ಗಂಡನಿಲ್ಲ ಮತ್ತು ಬೊಮ್ಮಪ್ಪನಿಗೆ ಹೆಂಡತಿಯಿಲ್ಲ ಎಂಬ ಗಾದೆಮಾತು ಇದೆ.

ಆದಿಚುಂಚನಗಿರಿಯ ಬೆಟ್ಟದಲ್ಲಿ ಗಂಗಾಧರೇಶ್ವರ ಮೂಲ ದೇವರಾಗಿ ಮತ್ತು ಕ್ಷೇತ್ರಪಾಲಕ ಕಾಲಭೈರವನಾಗಿ ಈ ಪ್ರಾಂತ ಸಂಸ್ಕೃತಿಯಂತೆ ಪೂಜೆಗೊಳ್ಳುತ್ತಿವೆ. ಈ ಪ್ರಾಂತದಲ್ಲಿ ನಡೆದಿರುವ ಇತಿಹಾಸ, ಸಮಾಜ ಸಂಸ್ಕೃತಿ ಹಿನ್ನಲೆ ಇದಾಗಿದೆ. ಭೈರವನಿಗೆ ಹೆಂಡತಿ ಇಲ್ಲ ಗಂಗಮಾಳಮ್ಮನಿಗೆ ಗಂಡನಿಲ್ಲ ಎಂದು ಜನಪದರು ಹೇಳುತ್ತಾರೆ. ಈ ಸಂದರ್ಭ ನಮಗೆ ಇತಿಹಾಸ ನೆನಪಿಸುತ್ತದೆ.

ದಂಡಿನಮಾರಮ್ಮನ ಮಾರಿಹಬ್ಬದಲ್ಲಿ, ಬಿದಿರುತಟ್ಟೆ ನೆಡುವ ಸಂಪ್ರದಾಯದಲ್ಲಿ, ನಾಲ್ಕು ಬಿದಿರುತಟ್ಟೆಗಳಲ್ಲಿ ಬೊಮ್ಮರಾಯನ ತಟ್ಟೆ ಮತ್ತು ಮಾರಮ್ಮನತಟ್ಟೆ ಎಂದು ನೆಡುತ್ತಾರೆ. ಅಂದರೆ ಮಾರಮ್ಮನಿಗೆ ಮತ್ತು ಬೊಮ್ಮರಾಯನಿಗೆ ವಿಶೇಷವಾಗಿ ಪೂಜಿಸುತ್ತಾರೆ. ಪಾಂಚಾಳರು, ತೊರೆಯರು, ಆದಿಜಾಂಬವರು ಮೂಲತಃ ಒಂದೇ ಬಣದವರೆಂದು ತಿಳಿಯುತ್ತದೆ. ಅವರವರ ಜನಾಂಗದ ಇತಿಹಾಸದಲ್ಲಿ, ರಾಜ್ಯಗಳ ಇತಿಹಾಸದಲ್ಲಿ, (ವ್ಯಾಸರ ಪುರಾಣ ಮಹಾಭಾರತ ದಲ್ಲಿಯು) ಸಹಭಾಗಿತ್ವ ಕಂಡುಬರುತ್ತದೆ. ಇಂದಿಗೂ ದಂಡಿನಮಾರಮ್ಮ (ಮಹಾದೇವಿ) ಮತ್ತು ಬೊಮ್ಮರಾಯನ ಮದುವೆ ಒಂದು ಸಂಪ್ರದಾಯವಾಗಿ ಕೊಳ್ಳೇಗಾಲದಲ್ಲಿ ನಡೆಯುತ್ತಿರುವುದು ವಿಶೇಷವಾಗಿದೆ. ಈ ಸಂಸ್ಕೃತಿಯ ಹಿನ್ನೆಲೆಯಲ್ಲಿ (ಆದಿಶಕ್ತಿಪುರಾಣ) ಇತಿಹಾಸವನ್ನು ಸಂಶೋಧಿಸಬಹುದಾಗಿದೆ.

ಆದಿಚುಂಚನಗಿರಿಬೆಟ್ಟವು ಭಾರತದಲ್ಲಿಯೇ ಮೊದಲ ಕಾಲಭೈರವನ ಹಿಂದೂಧರ್ಮಕ್ಷೇತ್ರವಾಗಿ ಸ್ಥಾಪನೆಗೊಂಡಿದೆ. ಕಾಲಭೈರವ ಹಿಂದೂಧರ್ಮದ ಪುನುರುತ್ಥಾನ ಪುರುಷನಾಗಿ ಪ್ರಕಾಶಕ್ಕೆ ಬಂದಿದ್ದಾನೆ. ಆದರೆ ಇಲ್ಲಿನ ಶಾಲಾ ವಿದ್ಯಾರ್ಥಿಯರನ್ನು, ಕಾಲಭೈರವನ ಬಗ್ಗೆ ಕೇಳಿದಾಗ, ಕಾಲಭೈರವನ ಹೆಂಡತಿಯರು ಗಂಗಾಮಾಳಮ್ಮ ಮತ್ತು ಕಂಬದಮ್ಮ ಎಂದು ತಿಳಿಸಿದ್ದಾರೆ. ನಾವು ಕಾಲಭೈರವನ ಮೂಲ ಹಿನ್ನಲೆಯನ್ನು ಸಂಶೋಧಿಸಿದಾಗ, ತಮಿಳುನಾಡಿನ ಶೀರ್ಕಾಳಿಎಂಬ ಶಿವಕ್ಷೇತ್ರವಿದೆ ಮೂಲದೇವಸ್ಥಾನದಲ್ಲಿ ಮೂರು ಅಂತಸ್ತಿನ ಮಹಡಿಯ ಗೋಪುರವಿದೆ. ಮೂಲ ಸ್ಥಾನದಲ್ಲಿ ಬ್ರಹ್ಮಪುರೀಶ್ವರ, ಮಹಾಲಿಂಗರೂಪದಲ್ಲಿದೆ. ಮಧ್ಯಅಂತಸ್ತಿನಲ್ಲಿ ದೋಣಿಯಪ್ಪರ್ ಪೆರಿಯನಾಯಕಿ (ಉಮಾಮಹೇಶ್ವರ) ಶಿಲ್ಪವಿದೆ. ಶಿಖರಭಾಗದಲ್ಲಿ ಚಟ್ಟನಾಥರ್ (ಭೈರವನಾಗಿ) ಪೂಜೆಗೊಳ್ಳುತ್ತಿದೆ. ಬಲಮುರಿ ಮಂಟಪದಲ್ಲಿ ಅಷ್ಟಭೈರವನಾಗಿ ಬೆಳಗುತ್ತಿದ್ದಾನೆ. ಈ ದೇವಾಲಯದಲ್ಲಿ ಒಂದೇಸ್ಥಾನದಲ್ಲಿರುವ ದೇವರ ಆಕೃತಿಗಳಿಗೂ ಮೂರು ಭಾವನೆಗಳಿದ್ದು ಪುರಾಣದ ಕಥೆಯಿದೆ.

ಇತಿಹಾಸವನ್ನು ಸಂಶೋಧಿಸಿದಾಗ ಗಂಗರ ಸಾಮ್ರಾಜ್ಯಕ್ಕೆ ಸಾವಿರವರ್ಷಗಳಷ್ಟು ಇತಿಹಾಸವಿದ್ದು, ಅದ.ರಾಜರಾಗಿ ಆಡಳಿತ ನಡೆಸಿದ್ದಾರೆ. ಜೈನಸಂಸ್ಕೃತಿಗೆ ಹೆಚ್ಚಿನ ಪ್ರೋತ್ಸಾಹ ನೀಡಿ ಜೈನಧರ್ಮವನ್ನು ಪ್ರಕಾಶಿಸುವಂತೆ ಮಾಡಿದ್ದಾರೆ. ತಲಕಾಡಿನ ಗಂಗರಸಾಮ್ರಾಜ್ಯದ ಪತನದ ನಂತರ ಚೋಳ ಸಂಸ್ಕೃತಿಯ ಆಗಮಶಾಸ್ತ್ರದಲ್ಲಿ ಕಾಲಭೈರವನು ಕ್ಷೇತ್ರಪಾಲಕನಾಗಿ ಸ್ಥಾಪಿಸಲ್ಪಟ್ಟಿದ್ದಾನೆ. ಐತಿಹಾಸಿಕವಾಗಿ ಕಾಲಭೈರವನು ವೈಯಕ್ತಿಕ ಕಾರಣ ಗಳಿಂದಾಗಿ ಪತ್ನಿಯಿದ್ದರು ಬ್ರಹ್ಮಚಾರಿಯಾಗಿ ಪತಿಧರ್ಮವನ್ನು ಪಾಲನೆ ಮಾಡಿದ್ದಾನೆ. ಗಂಗಮಾಳಮ್ಮಳು ಸತಿಯಾಗಿದ್ದರು ಬ್ರಹ್ಮಚಾರಿಣಿಯಾಗಿ, ಪ್ರಾಕೃತಿಕ ಧರ್ಮಪಾಲಕಳಾಗಿ, ಶಕ್ತಿಸ್ವರೂಪಳಾಗಿದ್ದಾಳೆ. ಕಂಬದಮ್ಮಳು ಸಾಂಸ್ಕೃತಿವಾಗಿ ಶಿವಶಕ್ತಿಯಾಗಿ ನಿಂತಿದ್ದಾಳೆ. ಹೀಗೆ ಭೈರವಪುರಾಣದಲ್ಲಿ ಈ ಅಂಶ ಬೆಳಕಿಗೆ ಬಂದಿರುತ್ತದೆ. ಕ್ರಿ.ಶ. ೧೧೧೬ರಲ್ಲಿ ಚೋಳರಾಜರನ್ನು ಗೆದ್ದ ಹೊಯ್ಸಳರ ದೊರೆ ಬಿಟ್ಟಿದೇವ ಜೈನಧರ್ಮೀಯನಾಗಿದ್ದುದ್ದು, ಇತಿಹಾಸಕಾರರಿಗೆ, ಶಿಲ್ಪಿಗಳಿಗೆ ತಿಳಿದ ವಿಷಯವಾದ ಕಾರಣ ಬೇಲೂರು ಮತ್ತು ಹಳೇಬೀಡಿನ ಶಾಂತಲೇಶ್ವರ ಮತ್ತು ಹೊಯ್ಸಳೇಶ್ವರ ದೇವಸ್ಥಾನದ ಹೊರಭಿತ್ತಿಯ ಪ್ರಮುಖ ಸ್ಥಳಗಳಲ್ಲಿ ಭೈರವನ ಮೂವತ್ತಾರು ಶಿಲ್ಪಗಳು ಸುಂದರವಾಗಿ ಕೆತ್ತಲ್ಪಟ್ಟಿದೆ. ಬಹುಮುಖ ಮತ್ತು ಬಹುರೂಪ ಶಿಲ್ಪಗಳ ಲಕ್ಷಣ ಅಷ್ಟಭೈರವರಲ್ಲಿದೆ. ಹಾಗೆಯೇ ಭೈರವನಂತೆಯೇ ಕಾಣುವ ಭೈರವಿಯು ಬಹಳ ಸುಂದರವಾಗಿ ಬಹುಮುಖ ಮತ್ತು

ಬಹುರೂಪವುಳ್ಳ ಶಿಲ್ಪಗಳು ಮತ್ತು ಕಥಾಸಂಧರ್ಭ ಶಿಲ್ಪಗಳು ಇದೆ. ಭೈರವನಶಿಲ್ಪ ಮತ್ತು ಭೈರವಿಯ ಶಿಲ್ಪ ಬಿಟ್ಟರೆ ಸ್ತ್ರೀಶಿಲ್ಪಗಳು ಹೆಚ್ಚಾಗಿ ಬೇಲೂರು ಮತ್ತು ಹಳೇಬೀಡಿನ ದೇವಾಲಯಗಳಲ್ಲಿ ಕಂಡುಬರುತ್ತವೆ. ಪ್ರಮುಖವಾಗಿ ಭೈರವನ ಕಲ್ಪನೆಯಲ್ಲಿ ದೇವಸ್ಥಾನದ ಲಕ್ಷಣವೇ ಅಡಗಿರುವಂತೆ ಕಾಣುತ್ತದೆ. ಹೊಯ್ಸಳರ ದೊರೆ (ಬಿಟ್ಟಿದೇವ) ವೈಷ್ಣವಧರ್ಮಕ್ಕೆ ಮತಾಂತರವಾಗಿದ್ದು, ಭೈರವನಶಿಲ್ಪಕ್ಕೆ ಪ್ರಾಮುಖ್ಯತೆ ಕೊಟ್ಟದ್ದು ಕಲಾವಿದರು ಮತ್ತು ಶಿಲ್ಪಿಗಳೇ ಕಾರಣ. ಭೈರವನ ಶಿಲ್ಪಲಕ್ಷಣವು ಇತಿಹಾಸದ ಸತ್ಯಸಂಗತಿಯಾಗಿದೆ. ಆದ್ದರಿಂದ ಭೈರವ ಮತ್ತು ಭೈರವಿ ಈರ್ವರು ಪತಿಪತ್ನಿಯರೆಂದು ಶಿಲ್ಪಕಲಾವಿದರ ಭಾವನೆಯಾಗಿರುವುದು ತಿಳಿದುಬರುತ್ತದೆ. ಭೈರವಿ ಶಕ್ತಿದೇವತೆಯೆಂದಾದರೆ ಕಾಳಮ್ಮ ಳಾಗಬೇಕಾಗುತ್ತದೆ. ಭೈರವ-ಭೈರವಿ ಹಾಗೂ ವೀರಭದ್ರ-ವೀರಭದ್ರಿಣಿ ಹೀಗೆ ಪತಿಪತ್ನಿಯರು ಗಂಗವಾಡಿ ಮತ್ತು ಚಾಮರಾಜನಗರ ದೇವಸ್ಥಾನದಲ್ಲಿ ಕಂಡುಬರುತ್ತದೆ. ಉದಾ: ಹಾವೇರಿ ಜಿಲ್ಲೆಯಲ್ಲಿ ಮೈಲಾರಲಿಂಗೇಶ್ವರನ ಕ್ಷೇತ್ರವಿದ್ದು ಕುರುಬಗೌಡರ ಪುಣ್ಯಕ್ಷೇತ್ರವಾಗಿದೆ. ಮಾರ್ತಾಂಡಭೈರವಚರಿತ್ರೆ ಈ ಪ್ರಾಂತ ಸಂಸ್ಕೃತಿಯಾಗಿದೆ. ಮಾರ್ತಾಂಡಭೈರವ ಮತ್ತು ಗಂಗ ಮಾಳಮ್ಮ ಇಬ್ಬರನ್ನು ಶಿವಶಕ್ತಿಯಾಗಿ ಪೂಜಿಸುತ್ತಿದ್ದಾರೆ. ಈರ್ವರೂ ಸತಿ-ಪತಿಯಾಗಿ ಸರ್ವರಿಗೂ ಆಶೀರ್ವಾದ ನೀಡುತ್ತಿದ್ದಾರೆ. ತುಪ್ಪದಮಾಳಮ್ಮ, ಕುರುಬರ ಗಂಗಮಾಳಮ್ಮ, ಗಂಗೆಮತಸ್ತರ ಗಂಗಮಾಳಮ್ಮ, ಆದಿಚುಂಚನಗಿರಿಯ ಗಂಗಮಾಳಮ್ಮ, ನಾಯಕರ ಮಾಳಗರಸಮ್ಮ, ಆದಿಜಾಂಬವರ ಮಾಳಗರಸಮ್ಮ, ಹರಿಜನರ ಮಾಳಗರಸಮ್ಮ ಎಂದು ಹಲವು ಜಾತಿಗಳಲ್ಲಿ ಮಹಾಶಕ್ತಿಯಾಗಿ ಪೂಜೆಗೊಳ್ಳುತ್ತಿದ್ದಾಳೆ.

ಕಾಲಾನಂತರದಲ್ಲಿ ನಾಯಕ ಜನಾಂಗದ ಕುಲದಲ್ಲಿ ಕಾಮರಾಯಲಕ್ಷ್ಮಿಯಾಗಿಯು ಕುರುಬಗೌಡರ ಕುಲದಲ್ಲಿ ಬ್ರಹ್ಮೇಶ್ವರಲಕ್ಷ್ಮಿಯಾಗಿಯು ಗಂಗಡಿಕಾರಗೌಡರ ಕುಲದಲ್ಲಿ ಭೈರವಲಕ್ಷ್ಮಿಯಾಗಿಯು ಈ ಗಂಗರ ಗಂಗಮಾಳಮ್ಮನನ್ನು ಪೂಜಿಸುತ್ತಾ ಬಂದಿದ್ದಾರೆ. ಹೀಗೆ ಗಂಗಮಾಳಮ್ಮನನ್ನು ಅಂದಿನ ಕಾಲದ ಇತಿಹಾಸಕ್ಕೆ ಸಂಬಂಧಪಟ್ಟಂತೆ ಜನಪದರು ಮಾತನಾಡುವುದು ಸತ್ಯವಾಗಿದೆ. ಆದಿಚುಂಚನಗಿರಿಬೆಟ್ಟದ ಕಾಲಭೈರವಸ್ವಾಮಿಗೆ ಹೆಂಡತಿಯಿಲ್ಲ, ಗಂಗಮಾಳಮ್ಮಳಿಗೆ ಗಂಡನಿಲ್ಲ ಎಂದು ಅಂದಿನ ಇತಿಹಾಸ ಕಾಲದ ಜನಪದರು ಹಾಡಿರುತ್ತಾರೆ. ಆದರೆ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಭೈರವ ಸ್ವರೂಪಿಯಾಗಿ ಆದಿಚುಂಚನಗಿರಿ ಕ್ಷೇತ್ರವನ್ನು ಭಾರತದಲ್ಲಿಯೇ ಪ್ರಕಾಶಿಸುವಂತೆ ಮಾಡಿದ್ದಾರೆ. ಈ ಕ್ಷೇತ್ರವು ಸತಿ-ಪತಿಗಳಿಗೆ ಅಭಯ ನೀಡುವ ಕ್ಷೇತ್ರವಾಗಿದೆ. ಕಾಲಭೈರವನ್ನನ್ನು ಜೈನ ಸಂಸ್ಕೃತಿಯಲ್ಲಿ ಶ್ವೇತಾಂಬರರು (ಭೈರವ-ಶಕ್ತಿಯಾಗಿ) ಪೂಜಿಸಿಕೊಂಡು ಬರುತ್ತಿದ್ದಾರೆ. ಆದಕಾರಣ ಕಾಲಭೈರವನು ಸಾಂದರ್ಭಿಕವಾಗಿ ಬ್ರಹ್ಮಚಾರಿಯೆ ಹೊರತು ಸಹಜ ಜೀವನದಲ್ಲಿ ಸಂಸಾರಿಯಾಗಿ ಜೀವನ ನಡೆಸಿದ್ದಾನೆ. ಈ ಕಾಲದಲ್ಲಿಯಾದರು ಭೈರವಲಕ್ಷ್ಮಿಯಾಗಿ ಪೂಜೆಯಾಗಲೆಂದು ಮತ್ತು ಭೈರವ-ಲಕ್ಷೀ ಕಲ್ಯಾಣೋತ್ಸವ ನಡೆಸುವಂತಾಗಿ ಈ ಕ್ಷೇತ್ರದ ಭಕ್ತರಿಗೆ ಕಾಲಭೈರವ-ಲಕ್ಷ್ಮಿಯು ಸತಿ-ಪತಿಗಳಾಗಿ ಆಶೀರ್ವಾದ, ಅಭಯ ನೀಡುವ ಕ್ಷೇತ್ರವಾಗಿ ಬೆಳಗಲೆಂದು (ಈ ಸಂಶೋಧನೆಯ) ಭಕ್ತನ ಆಶಯವಾಗಿದೆ.

## ಆಧಾರಸೂಚಿ


ದೇವಚಂದ್ರ ಕವಿಯ **ರಾಜಾವಳಿ ಕಥಾಸಾರ** ಅನುವಾದ ಪ್ರೊ. ಸಣ್ಣಯ್ಯ.

ಶಿಲ್ಪಗಳ ಭಾವಚಿತ್ರಗಳು, ಉತ್ಸವಮೂರ್ತಿ (ಪಂಚಲೋಹ) ನಾಯಕರ ದೊಡ್ಡಬೀದಿ, ಕೊಳ್ಳೇಗಾಲ.

ವಿಶ್ವಕರ್ಮ ಸಮಾಜದ ಯಜಮಾನರುಗಳ ಹೇಳಿಕೆಗಳು, ಫೋಟೊಗಳು, ಕೊಳ್ಳೇಗಾಲ.

**ಸಿದ್ದಲಿಂಗ ಸ್ವಾಮಿ ಸ್ತಪತಿಗಳು ಜೀವನಚರಿತ್ರೆ**, ಕೊಳ್ಳೇಗಾಲ.

**ಧರೆಗೆ ದೊಡ್ಡವರು** ಪುಸ್ತಕ ಬರೆದವರು ಸುಭಾಷ್‌ಭರಣಿ. ಐ.ಪಿ.ಎಸ್.

**ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, (ಮು.ಸಂ.) ಸೂರ್ಯನಾಥ ಯು.ಕಾಮತ್.

ಶರಣೇಗೌಡ ಪಾಟೀಲ್, **ಶ್ರೀ ಮ್ಹಾಲಸಾ ಮಾರ್ತಾಂಡಭೈರವಚರಿತ್ರೆ**, (ಸಂಗ್ರಹ).

**ಶೀರ್ಕಾಳಿ ಶಿವಕ್ಷೇತ್ರ**, ತಮಿಳುನಾಡು ಸಂಪಾದಕರು.ಲಕ್ಷ್ಮೀಪತಿ ಎಂ.ಎ. (ಅನುವಾದ).

ಡಾ. ಕೆ.ಎನ್. ಮೋಹನ್*

# ಹುಲ್ಲಹಳ್ಳಿಯ ಪ್ರಾಚ್ಯ ಅವಶೇಷಗಳು

ಕಪಿಲಾ ನದಿಯ ದಡದಲ್ಲಿರುವ ಈ ಗ್ರಾಮವು ಭೌಗೋಳಿಕವಾಗಿ ಮತ್ತು ಪ್ರಾಚ್ಯಾವಶೇಷಗಳ ದೃಷ್ಟಿಯಿಂದಲೂ ತುಂಬ ಸಂಪದ್ಭರಿತವಾಗಿರುವ ಸ್ಥಳ. ಈ ಸ್ಥಳವು ಮೈಸೂರಿನಿಂದ ದಕ್ಷಿಣಕ್ಕೆ ೩೦ ಕಿ.ಮೀ. ನಂಜನಗೂಡಿನಿಂದ ಪಶ್ಚಿಮಕ್ಕೆ ೧೬ ಕಿ.ಮೀ. ದೂರದಲ್ಲಿರುವ ಒಂದು ಐತಿಹಾಸಿಕ ಸ್ಥಳ. ಈ ಗ್ರಾಮಕ್ಕೆ ಹುಲ್ಲಹಳ್ಳಿ ಎಂದು ಹೆಸರು ಬರಲು ಹಲವು ಐತಿಹ್ಯಗಳನ್ನು ಉಲ್ಲೇಖಿಸಲಾಗುತ್ತದೆ. ಅದರಲ್ಲಿ ಮೊದಲಿಗೆ ಪೌರಾಣಿಕ ಹಿನ್ನೆಲೆಯನ್ನು ನೋಡುವುದಾದರೆ ಕಪಿಲಾನದಿಯ ದಡದಲ್ಲಿ ತ್ರೇತಾಯುಗದಲ್ಲಿ ಮಹಾ ತಪಸ್ವಿಯಾದ 'ತೃಣಬಿಂದು' ಎಂಬ ಮಹರ್ಷಿಗಳು ಆಶ್ರಮ ವನ್ನು ಸ್ಥಾಪಿಸಿಕೊಂಡು ಅದನ್ನು ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡರು ಈ ಮಹಾಕ್ಷೇತ್ರವೇ 'ತೃಣಾಪುರಿ' ಎಂಬುದಕ್ಕೆ ಹುಲ್ಲಹಳ್ಳಿಯ ವೀರಶೈವ ಮಠದ ಒಲೇಗರಿಯ ಉಲ್ಲೇಖವೇ ಆಧಾರ.

ಹುಲ್ಲಹಳ್ಳಿ ಶಾಸನದಲ್ಲಿ "ಅಲ್ಲಾಳನಾಥಪುರ" ಎಂದು ಮತ್ತು ತೆರಕಣಾಂಬಿ ಶಾಸನದಲ್ಲಿಯು ಅಲ್ಲಾಳನಾಥಪುರ ಎಂಬ ಉಲ್ಲೇಖವಿದೆ. ಇಲ್ಲಿ ವರದರಾಜಸ್ವಾಮಿಯ ದೇವಾಲಯ ಇರುವುದರಿಂದ ವರದರಾಜನಿಗೆ ಮತ್ತೊಂದು ಹೆಸರು ಅಲ್ಲಾಳನಾಥ ಎಂದು, ಹಾಗಾಗಿ ಅಲ್ಲಾಳನಾಥಪುರ ಎಂಬುದಾಗಿ ರೂಢಿಗೆ ಬಂದಿದೆ. ಅದು "ಹರಣಿಪುರ" ಈ ಹೆಸರಿನಿಂದಲೂ ಪ್ರಸಿದ್ಧಿಯಾಗಿತ್ತು ಎಂಬುದಕ್ಕೆ (ಶಿವಲಿಂಗ ಚರಿತ್ರ) ಗ್ರಂಥದ "ಹರಣಿಪುರ-ತೃಣಬಿಂದುಪುರವೆಂಭುಭಯ ನಾಮವನಾಂತು ರಾರಾಜಿಪ ಹುಲ್ಲಹಳ್ಳಿ ಎಂಬ ಪೊಳಲ್" ಎಂಬ ವಾಕ್ಯದಿಂದ ಪ್ರಸಿದ್ಧಿಯಾಗಿದೆ.

ಈ ಗ್ರಾಮವು ಪಂಚನಾರಸಿಂಹ ಕ್ಷೇತ್ರವೆಂತಲೂ ಪ್ರಸಿದ್ಧಿ ಇದೆ. ಇದಕ್ಕೆ ಕುರುಹಾಗಿ ಹೆಚ್.ಡಿ. ಕೋಟೆ ಮತ್ತು ನಂಜನಗೂಡು, ತಿರುಮಕೂಡಲು ನರಸಿಪುರದ ಗಡಿ ಭಾಗಗಳಲ್ಲಿ ಹರಿಯುವ ಕಪಿಲಾನದಿಯ ತೀರದ ಸ್ಥಳಗಳಾದ ಸರಗೂರು, ಕೊಲ್ಯಬೆಟ್ಟ, ಕುಂಟನಬೆಳ್ತೂರು, ಹುಲ್ಲಹಳ್ಳಿ, ತಿರುಮಕೂಡಲು ಸಂಗಮದಲ್ಲಿ ನರಸಿಂಹಸ್ವಾಮಿಯ ದೇವಾಲಯಗಳಿರುವುದು ವಿಶೇಷ. ಹಾಗಾಗಿ ಈ ಕ್ಷೇತ್ರವನ್ನು "ಪಂಚನಾರಸಿಂಹ" ಕ್ಷೇತ್ರವೆಂದು ಕರೆಯಲ್ಪಡುತ್ತಾರೆ.

"ಹುಲ್ಲನಹಳ್ಳಿ" ಒಬ್ಬ ವ್ಯಕ್ತಿಯ ಹೆಸರಿನಿಂದ ಕರೆಯಲ್ಪಟ್ಟ ಊರು. ಕ್ರಿ.ಶ. ೧೧೦೦ ರಲ್ಲಿ ಹೊಯ್ಸಳ ಸಾಮ್ರಾಜ್ಯದಲ್ಲಿ 'ಹುಲ್ಲ' ಎಂಬಾತ ಕೋಶಾಧಿಕಾರಿಯಾಗಿದ್ದು ಈತ ಜೈನಮುನಿ "ಮಲಧಾರಿ ಸ್ವಾಮಿಯ" ಶಿಷ್ಯನಾಗಿದ್ದ ಈತನಿಗೆ ಹೊಯ್ಸಳ ರಾಜರು ಹಲವು ಗ್ರಾಮಗಳನ್ನು ದಾನವಾಗಿ ನೀಡಿದ್ದಕ್ಕೆ ಶ್ರವಣಬೆಳಗೊಳ ಶಾಸನದಲ್ಲಿ ಉಲ್ಲೇಖವಿದ್ದು ಈ 'ಹುಲ್ಲ' ನಿಂದ ಹುಲ್ಲಹಳ್ಳಿಯಾಗಿರಬಹುದು. ಕಣೆನೂರು ಶಾಸನದಲ್ಲಿ ಸಹ ಈ ವಂಶದ ಅರಸರ ಉಲ್ಲೇಖವಿದೆ. ಸ್ಥಳೀಯರ ಸ್ಥಳ ಪುರಾಣ ಮಾಹಿತಿಯಂತೆ : ಹುಲ್ಲನೆಂಬ ಪಾಳೆಗಾರನಿದ್ದು ಈತ ಜೈನಧರ್ಮಿಯನಾಗಿದ್ದನು. ಈತನು ಹೊಯ್ಸಳರ ಸಾಮಂತ ದೊರೆಯಾಗಿ ಈ ಪ್ರಾಂತ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದ ಆದುದರಿಂದ ಈ ಗ್ರಾಮಕ್ಕೆ ಹುಲ್ಲಹಳ್ಳಿ ಎಂದು ಹೆಸರು ಬಂದಿತು.

ಅಂತಿಮವಾಗಿ "ಹುಲ್ಲಹಳ್ಳಿ" ಎಂಬ ಹೆಸರು ಬರಲು "ತೃಣಪುರಿ" ಎಂಬ ಸಂಸ್ಕೃತ ಶಬ್ದದ ಕನ್ನಡ ರೂಪ ಹುಲ್ಲಹಳ್ಳಿ ಆಗಿದೆ. ಹರಿಣಿಪುರವೆಂದು ಪ್ರಸಿದ್ಧಿಯಲ್ಲಿದ್ದ ಈ ಸ್ಥಳ "ಹುಲ್ಲೇಹಳ್ಳಿ"ಯಾಗಿ ನಂತರ ಹುಲ್ಲಹಳ್ಳಿಯಾಗಿದೆ ಎಂದು ಊಹಿಸಲು ಅವಕಾಶವಿದೆ.

ಹುಲ್ಲಹಳ್ಳಿಯ ಪ್ರಮುಖ ಪ್ರಾಚ್ಯವಶೇಷಗಳ ಸಾಲಿನಲ್ಲಿ ಕಾಣಬರುವ ದೇವಾಲಯಗಳೆಂದರೆ, ವರದರಾಜಸ್ವಾಮಿ ದೇವಾಲಯ ಮತ್ತು ಮಲ್ಲಿಕಾರ್ಜುನ ದೇವಾಲಯಗಳು ಪ್ರಮುಖವಾದವು. ಇವುಗಳಲ್ಲದೆ, ಕಂಬದಕೊಲ್ಲಿ ವೆಂಕಟರಮಣಸ್ವಾಮಿ, ಶಾಸನೋಕ್ತ ಅಗೋಚರ ಸ್ಥಿತಿಯ ಆದಿಪರಮೇಶ್ವರ ಮತ್ತು ತ್ರಿಜಗನ್ಮಂಗಲವೆಂಬ ಜೈನ ಚೈತ್ಯಾಲಯ, ಪ್ರಸನ್ನ ಆಂಜನೇಯ, ಕಾಡುಬಸವೇಶ್ವರ, ಸೋಮೇಶ್ವರ, ವಿಘ್ನೇಶ್ವರ, ಕಾಳಿಕಾದೇವಿ, ಚಿಕ್ಕದೇವಿ ಗುಡಿಗಳು ಕಾಣಬರುತ್ತವೆ. ಇಲ್ಲಿಯ ಪಾಳೇಗಾರರ ಅರಮನೆಯಿದ್ದ ಗುಡ್ಡದಲ್ಲಿ ಈಗ ಪ್ರಾಥಮಿಕ ಶಾಲೆ ನಿರ್ಮಾಣವಾಗಿದೆ. ಅವಶೇಷವಾಗಿ ಉಳಿದಿರುವ ಕೋಟೇಬುಡವೆಂದು ಕರೆಯಲ್ಪಡುವ ಎತ್ತರದ ಸ್ಥಳ ಪಕ್ಕದಲ್ಲಿಯೆ "ಶೃಂಗಾರಬಾವಿ" ಎಂದು ಕರೆಯಲ್ಪಡುವ ಬಾವಿಯೊಂದಿದ್ದು ಇದನ್ನು ಬಹಳ

* ಇತಿಹಾಸ ಸಹಾಯಕ ಪ್ರಾಧ್ಯಾಪಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಲ್ಲಹಳ್ಳಿ, ಮೈಸೂರು.

ಸುಂದರವಾಗಿ ವೃತ್ತಾಕಾರವಾಗಿ ನಿರ್ಮಿಸಲಾಗಿದೆ. ಇದನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ.

## ವರದರಾಜಸ್ವಾಮಿ ದೇವಾಲಯ

ಈ ದೇವಾಲಯವು ಊರಿನ ಪಶ್ಚಿಮ ಭಾಗದಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗ್ರಾನೈಟ್ ಶಿಲೆಯದಾಗಿದೆ. ಈ ಗ್ರಾಮದಲ್ಲೆ ಇರುವ ದೇವಾಲಯಗಳಲ್ಲಿ ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಮುಖವಾದ ದೇವಾಲಯವಾಗಿದೆ. ಈ ಆಲಯದ ನಿರ್ಮಾಣದ ಬಗ್ಗೆ ದಾಖಲೆಗಳು ನಮಗೆ ಲಭ್ಯವಿಲ್ಲ. ಆದರೆ ದೇವಾಲಯದ ಕಾಲ ಮತ್ತು ವಾಸ್ತುವಿನ ಬೆಳವಣಿಗೆ ಮತ್ತು ಸಮಕಾಲೀನ ರಾಜಕೀಯ ಸ್ಥಿತಿಗತಿಗಳನ್ನು ಆಧರಿಸಿ ಕಾಲವನ್ನು ಅಂದಾಜಿಸಬಹುದು. ಹೊಯ್ಸಳರ ರಾಜ್ಯದ ಭಾಗವನ್ನು ಚೋಳರು (ಕರ್ನಾಟಕ) ತಲಕಾಡನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದರು ಎಂಬುದಕ್ಕೆ ಆಧಾರಗಳಿವೆ. ಹಾಗಾಗಿ ಈ ವಾಸ್ತುವಿನ ಮೂಲ ಸ್ವರೂಪವು ಚೋಳರ ಮಾದರಿಯಲ್ಲಿದ್ದು ಚೋಳರ ಕಾಲದಲ್ಲಿ ನಿರ್ಮಾಣವಾಗಿದೆ. ನಂತರದ ಹೊಯ್ಸಳರ ಪ್ರಭಾವ ಈ ವಾಸ್ತುವಿನಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಆನಂತರದ ವಿಜಯನಗರ ಮತ್ತು ಪಾಳೆಗಾರರ ಆಳ್ವಿಕೆಯ ಪ್ರಭಾವವನ್ನು ಹೆಚ್ಚು ಗಮನಿಸಬಹುದು. ಸ್ಥಳೀಯರಾದ ಹು.ಬಿ.ನಾಗರಾಜು ರಚಿಸಿರುವ 'ಹುಲ್ಲಹಳ್ಳಿ ದರ್ಶನ' ಎಂಬ ಗ್ರಂಥದಲ್ಲಿ ಮೊದಲು ಈ ದೇವಾಲಯ ಜೈನ ಬಸದಿಯಾಗಿದ್ದು ನಂತರದಲ್ಲಿ ವೈಷ್ಣವ ದೇವಾಲಯವಾಯಿತು ಎಂದು ಹೇಳುತ್ತಾರೆ. ಜೈನ ಬಸದಿಯ ಕೆಲವು ಭಗ್ನಾವಶೇಷಗಳು ದೇವಾಲಯದ ಆವರಣದಲ್ಲಿರುವ ವಸಂತೋತ್ಸವ ಮಂಟಪದಲ್ಲಿ ಕಾಣಿಸುತ್ತವೆ. ಇದಕ್ಕೆ ಪೂರಕವಾಗಿ ಕಣೇನೂರು ಶಾಸನದಲ್ಲಿನ ಉಲ್ಲೇಖ ಮತ್ತು ದೇವಾಲಯದಲ್ಲಿರುವ ಕೆಲವು ಮೂಲ ಲಕ್ಷಣ ಹಾಗೂ ಹೊರ ಆವರಣದಲ್ಲಿ ಕಂಡುಬರುವ ಜೈನ ವಾಸ್ತುವಿನ ಅವಶೇಷಗಳು ಮತ್ತು ಮಂಟಪ ಇವೆಲ್ಲವನ್ನು ಗಮನಿಸಿದರೆ ಮೂಲತಃ ಈ ದೇವಾಲಯ ಜೈನ ಬಸದಿಯಾಗಿದ್ದು ನಂತರದ ಕಾಲಕ್ಕೆ ವೈಷ್ಣವ ದೇವಾಲಯವಾಗಿ ಪರಿವರ್ತನೆ ಆಗಿದೆ ಎಂಬ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ.

## ದೇವಾಲಯದ ವಾಸ್ತುವಿವರ

**ಗರ್ಭಗೃಹ:** ಗರ್ಭಗುಡಿಯಲ್ಲಿ ವರದರಾಜಸ್ವಾಮಿಯ ವಿಗ್ರಹವು ಸುಮಾರು ೫ ಅಡಿ ಎತ್ತರವಿದ್ದು, ಶಂಖ ಚಕ್ರ ಗದಾಧಾರಿಯಾಗಿ ವರದ ಹಸ್ತದಿಂದ ಕೂಡಿದ್ದು, ಮೊದಲಿಗೆ ಈ ಮೂರ್ತಿಯನ್ನು ಸೌಮ್ಯನಾರಾಯಣನೆಂದು, ಶಾಸನಗಳ ಪ್ರಕಾರ ಅಲ್ಲಾಳನಾಥನೆಂದು ಈ ವಿಗ್ರಹವನ್ನು ಕಂಚಿಯಿಂದ ತಂದರೆಂದು ಪ್ರತೀತಿ ಸಹ ಇದೆ. ಗರ್ಭಗುಡಿಯು ಪ್ರದಕ್ಷಣಾ ಪಥವನ್ನು ಹೊಂದಿದೆ.

**ನವರಂಗ:** ನವರಂಗದಲ್ಲಿ ದ್ವಾರಪಾಲಕರಾದ ಜಯವಿಜಯರ ಬೃಹತ್ತಾದ ಮೂರ್ತಿಗಳಿವೆ. ನವರಂಗದ ದಕ್ಷಿಣದಲ್ಲಿ ಮತ್ತೊಂದು ಗರ್ಭಗುಡಿಯಿದ್ದು ಇಲ್ಲಿ ಯೋಗನರಸಿಂಹನ ವಿಗ್ರಹವಿದೆ. ಜೊತೆಗೆ ಶ್ರೀದೇವಿ ಮತ್ತು ಭೂದೇವಿಯರ ಬಿಡಿ ಶಿಲ್ಪಗಳನ್ನು ಕೆತ್ತಲಾಗಿದೆ. ನವರಂಗವು ಪೂರ್ವ ಮತ್ತು ಉತ್ತರ ಭಾಗಗಳಲ್ಲಿ ಎರಡು ದ್ವಾರಗಳನ್ನು ಹೊಂದಿದೆ. ಪೂರ್ವದ್ವಾರದ ಬಾಗಿಲವಾಡದಲ್ಲಿ ಕೃಷ್ಣನ ವಿವಿಧ ಲೀಲೆಗಳನು ಕಂಡರಿಸಲಾಗಿದೆ, ಆದರೆ ಅಷ್ಟೇನು ವೈಭವಯುತವಾಗಿಲ್ಲ.

**ಮುಖಮಂಟಪ:** ಮುಖಮಂಟಪವು ಒಂದು ಜಗತಿಯನ್ನು ಒಳಗೊಂಡಿದ್ದು, ಜಗತಿಯ ಎಡ ಮತ್ತು ಬಲ ಭಾಗದಲ್ಲಿ ಗುಡಿಗಳಿವೆ. ಒಂದರಲ್ಲಿ ಆಳ್ವಾರರ ಪ್ರತಿಮೆಗಳಿದ್ದು ಮತ್ತೊಂದರಲ್ಲಿ ವೇಣುಗೋಪಾಲನ ವಿಗ್ರಹವಿದೆ. ಅಲ್ಲಿಂದ ತಳಭಾಗದಲ್ಲಿ ವಿಶಾಲವಾದಂತಹ ೧೨ ಕಂಬಗಳುಳ್ಳ ಮುಖಮಂಟಪವಿದೆ. ದಕ್ಷಿಣದಲ್ಲಿ ೪ ಅಡಿ ಎತ್ತರದ ಕಾಳಿಂಗಮರ್ದನ ವಿಗ್ರಹವಿದೆ. ಈ ದೇವಾಲಯ ಪಾಳೆಪಟ್ಟುಗಳು ಮತ್ತು ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ. ಮುಖಮಂಟಪದ ಕಂಬಗಳು ಅರೆಕಂಬಗಳನ್ನು ಹೊಂದಿದ್ದು, ಇವುಗಳ ಮೇಲೆ ಪೌರಾಣಿಕ ಉಬ್ಬುಶಿಲ್ಪಗಳಿವೆ. ಎಲ್ಲಾ ಕಂಬಗಳಿಗೂ ಇತ್ತೀಚೆಗೆ ಸುಣ್ಣಬಣ್ಣ ಬಳಿಯಲಾಗಿದೆ.

ಅಂತಿಮವಾಗಿ ೧೮ನೇ ಶತಮಾನದ ಅಂತ್ಯದಲ್ಲಿ ಟಿಪ್ಪುಸುಲ್ತಾನನು ಮೈಸೂರು ಸಂಸ್ಥಾನದ ಅಧಿಕಾರ ಸೂತ್ರವಹಿಸಿಕೊಂಡ ನಂತರ ವರದರಾಜಸ್ವಾಮಿ ದೇವಾಲಯಕ್ಕೆ ಧಕ್ಕೆ ಬರಬಹುದೆಂದು ಟಿಪ್ಪುವಿನಿಂದ ದೇವಾಲಯ ನಾಶವಾಗಬಹುದೆಂದು ಸ್ಥಳೀಯ ಜನರು ಭಾವಿಸಿ ಟಿಪ್ಪುವಿನ ಆರಾಧ್ಯದೈವವಾದ ಶ್ರೀರಂಗನಾಥನ ಶಿಲ್ಪವನ್ನು ವರದರಾಜ ದೇವಾಲಯದ ಮುಖಮಂಟಪದ ಮುಂದೆ ಮಾಡಿಸಲಾಗಿದೆ. ಟಿಪ್ಪು ಶ್ರೀರಂಗನಾಥಸ್ವಾಮಿ ಹಾಗೂ ಮತ್ತು ನಂಜುಂಡೇಶ್ವರನ ಪರಮಭಕ್ತನಾಗಿದ್ದ. ಈ ರೀತಿಯಲ್ಲಿ ರಂಗನಾಥಸ್ವಾಮಿಯ ಮೂರ್ತಿಯನ್ನು ಗಾರೆಯಿಂದ ಮಾಡಿಸಿ ಆರಾಧಿಸುವುದರೊಂದಿಗೆ ಈ ದೇವಾಲಯುವನ್ನು ರಕ್ಷಿಸಲಾಯಿತು. ಎಂಬ ಸ್ಥಳೀಯರ ಮಾತಿಗೆ ಇದು ಇಂಬು ನೀಡುತ್ತದೆ.

**ಪ್ರದಕ್ಷಿಣ ಪಥ:** ದೇವಾಲಯದ ಸುತ್ತಲೂ ವಿಶಾಲ ಪ್ರದಕ್ಷಿಣಾ ಪಥವಿದ್ದು, ದೇವಾಲಯದ ಹೊರ ಮತ್ತು





ಳಭಾಗಗಳು ಭಗ್ನಗೊಂಡಿದ್ದು ನಂತರದಲ್ಲಿ ಈ ೇವಾಲಯದ ಕೆಲವು ಭಾಗಗಳು ಸೇರ್ಪಡೆ ಆಗಿರುವುದಕ್ಕೆ ೂಲ ಚೋಳ ದೇವಾಲಯದ ಹೊರಭಿತ್ತಿಯಲ್ಲಿ ಅಲ್ಲಲ್ಲಿ ಲವು ಸೇರ್ಪಡೆಗಳು ಕಾಣಬರುತ್ತವೆ. ಅಲ್ಲದೆ ಅಧಿಷ್ಠಾನದ ನಿರ್ಮಾಣವು ಸಹ ವಿಭಿನ್ನವಾಗಿದೆ. ಇದನ್ನು ಗಮನಿಸಿದರೆ ಇದು ಎರಡು ರಾಜಮನೆತನದ ಕಾಲದ ಮಿಶ್ರ ಲಕ್ಷಣಗಳನ್ನು ಮೈಗೂಡಿಸಿಕೊಂಡಿರುವುದು ಕಂಡುಬರುತ್ತದೆ. ಭಿತ್ತಿಯ ಹೊರಭಾಗವನ್ನು ಸಂಪೂರ್ಣ ಗ್ರಾನೈಟ್ ಕಲ್ಲನ್ನು ಬಳಸಿ









ನಿರ್ಮಾಣವಾಗಿದೆ. ಅದರ ಮೇಲ್ಭಾಗದಲ್ಲಿ ಗಾರೆ ಮಿಶ್ರಿತವಾದಂತಹ ಇತ್ತೀಚಿನ ಗೋಪುರವನ್ನು ಕಾಣಬಹುದು.

**ಪ್ರಾಕಾರ:** ಸುಮಾರು ೧೨ ಅಡಿ ಎತ್ತರದ ಹೊರ ಪ್ರಾಕಾರದ ಗೋಡೆಯಿದ್ದು ಪ್ರಾಕಾರದ ಹಿಂಭಾಗದ ಎಡಬದಿಯಲ್ಲಿ ಅಮ್ಮನವರ ಗುಡಿ ಇದೆ (ಪೆರಂದೇವಿ) ಪ್ರಾಕಾರದ ಹಿಂದಿನ ಬಲ ಭಾಗದಲ್ಲಿ ಕೋದಂಡರಾಮ ಸೀತೆ ಲಕ್ಷ್ಮಣರ ಶಿಲ್ಪಗಳಿವೆ. ಉಳಿದಂತೆ ಪ್ರಾಕಾರದಲ್ಲಿ ವಿಶಾಲವಾದಂತಹ ಜಗತಿ ಇದೆ. ಮಹಾದ್ವಾರದ ಎರಡು ಬದಿಗಳಲ್ಲಿ (ಒಳ ಮತ್ತು ಹೊರಗೆ) ಜಗತಿಯನ್ನು ನಿರ್ಮಾಣ ಮಾಡಿದ್ದು, ಪ್ರಾಕಾರದ ಹೊರಭಾಗದಲ್ಲಿ ಮುಖ್ಯದ್ವಾರದ ಮುಂಭಾಗ ಒಂದು ಬಲಿಪೀಠವಿದೆ. ಇದರ ಮುಂಭಾಗದಲ್ಲಿ ಕಲ್ಲಿನ ಚೌಕಟ್ಟಿನ ಮೇಲೆ ನಿಂತಿರುವ ಸುಮಾರು ೨೫ ಅಡಿ ಎತ್ತರದ ದ್ವೀಪಸ್ತಂಭ ಇದೆ. ಇದರ ಬುಡದಲ್ಲಿ ಶಂಖ ಚಕ್ರ ಗರುಡರನ್ನು ಕಂಡರಿಸಲಾಗಿದೆ. ಮುಖ್ಯ ದ್ವಾರಕ್ಕೆ ನೇರವಾಗಿ ಮುಂಭಾಗದಲ್ಲಿ ಸುಮಾರು ೭೦ ಅಡಿ ದೂರದಲ್ಲಿ ವಸಂತೋತ್ಸವ ಮಂಟಪವನ್ನು ನಿರ್ಮಿಸಿದ್ದು ಜೀರ್ಣಾವಸ್ಥೆಯಲ್ಲಿರುವ ಈ ಮಂಟಪದ ಕಂಬಗಳಲ್ಲಿ ಹೂಬಳ್ಳಿ ಕೆತ್ತನೆ ಹೊಂದಿದ್ದು ಜೈನ ವಾಸ್ತು ಶೈಲಿಯನ್ನು ಹೋಲುವ ತೀರ್ಥಂಕರ ಪೀಠದ ಕಲ್ಲುಗಳ ರಾಶಿ ಇದೆ. ಪಕ್ಕದಲ್ಲಿಯೇ ವಸಂತ ಕೊಳವು ಇದೆ. ಈ ಸಂಗತಿಗಳು ಶಾಸನಗಳಲ್ಲಿ ಆಧೀಪರಮೇಶ್ವರ ಮತ್ತು ಶ್ರೀ ಜಗನ್ಮಂಗಲ ಚೈತ್ಯಗಳ ಉಲ್ಲೇಖಕ್ಕೆ ಪುಷ್ಠಿ ನೀಡುತ್ತದೆ ಮತ್ತು ಮೂಲತಹ ಈ ಆಲಯ ಜೈನ ಬಸದಿಯಾಗಿತ್ತು ಎಂದು ನಿಸ್ಸಂದೇಹವಾಗಿ ಹೇಳಬಹುದು. ಮುಖ್ಯದ್ವಾರದ ೨ ಬದಿಯಲ್ಲಿಯು ೨ ಮಂಟಪಗಳಿದ್ದು, ಇವುಗಳನ್ನು ಸ್ಥಳೀಯರು ಕಲ್ಯಾಣ ಮಂಟಪಗಳೆಂದು ಕರೆಯುತ್ತಾರೆ.





ಹುಲ್ಲಹಳ್ಳಿ ಶಾಸನದಲ್ಲಿ ೧೩೩೨ರಲ್ಲಿ ವರದರಾಜ ಸ್ವಾಮಿ ಸೇವೆಗೆ ವೀರ ಬಲ್ಲಾಳ ಕೇತಮ್ಮಹಳ್ಳಿ ಎಂಬ ಗ್ರಾಮವನ್ನು ದಾನ ನೀಡಿದ್ದ ಎಂಬ ಉಲ್ಲೇಖ ಇದೆ. ತೆರಕಣಾಂಬಿ ಶಾಸನದಲ್ಲಿ ಬಸವರಾಜ ಒಡೆಯನು ಹುಲ್ಲಹಳ್ಳಿ ಗ್ರಾಮವನ್ನು ದಾನ ನೀಡಿದ್ದು ಉಲ್ಲೇಖವಾಗಿದೆ. ತರಗನಹಳ್ಳಿ ಮತ್ತು ಕಾರೆಯ ಕೆಳಗಿನ ಜಮೀನು ದೇವಾಲಯಕ್ಕೆ ದಾನ ನೀಡಿರುವುದು ಉಲ್ಲೇಖವಾಗಿದೆ. ಮತ್ತೊಂದು ಗಮನಾರ್ಹ ವಿಷಯವೆಂದರೆ, ಇಲ್ಲಿ ಬಸವರಾಜ ಒಡೆಯ ಎಂಬುವವನು ಹುಲ್ಲಹಳ್ಳಿಯ ಪ್ರಾಂತ್ಯಾಧಿಕಾರಿ ಅಥವಾ ಪಾಳೆಗಾರ ನಾಗಿದ್ದನೆಂದು ಹುಲ್ಲಹಳ್ಳಿ ಮತ್ತು ತೆರಕಣಾಂಬಿಯ ಶಾಸನಗಳು ಉಲ್ಲೇಖಿಸುತ್ತವೆ. ಆದರೆ ಈ ಮನೆತನದ ಸ್ಪಷ್ಟ ಮಾಹಿತಿಗಳು ಸ್ಪಷ್ಟಾಗಿ ಎಲ್ಲಿಯೂ ಕಂಡುಬರುವುದಿಲ್ಲ. ಆದುದರಿಂದ ಈ ಬಸವರಾಜ ಒಡೆಯನು ಯಾವ ವಂಶದವನು ಹಾಗೂ ಈತ ಎಲ್ಲಿಂದ ಬಂದವನೆಂಬುದು ಸ್ಪಷ್ಟವಿಲ್ಲ.

## ಮಲ್ಲಿಕಾರ್ಜುನಸ್ವಾಮಿ ದೇವಾಲಯ

ಪ್ರಸ್ತುತ ಈ ದೇವಾಲಯವನ್ನು "ಕಪಿಲ ಮಲ್ಲಿಕಾರ್ಜುನ" ಎಂದು ಕರೆಯುವುದರ ಜೊತೆಗೆ ಈ ಆಲಯವನ್ನು ಚೋಳರ ಕರಿಕಾಳಚೋಳನ ಕಾಲದಲ್ಲಿ ನಿರ್ಮಿಸಿದ್ದು ಎಂದು ಹುಲ್ಲಹಳ್ಳಿ ದರ್ಶನದಲ್ಲಿ ಉಲ್ಲೇಖಿತವಾಗಿದ್ದರು ಪುರಾವೆಯ ಕೊರತೆ ಇದೆ. ಈ ದೇವಾಲಯವು ಊರಿನ ಪೂರ್ವ ಭಾಗದಲ್ಲಿದ್ದು ಪೂರ್ವಾಭಿಮುಖವಾಗಿದ್ದು ಇದನ್ನು ಗ್ರಾನೈಟ್ ಶಿಲೆಯಿಂದ ನಿರ್ಮಾಣ ಮಾಡಲಾಗಿದೆ. ಇದು ಚಿಕ್ಕದಾದ ಗರ್ಭಗುಡಿ ಯನ್ನು ಹೊಂದಿದೆ. ಇದು ೧೫x೧೫ ಅಡಿ ಉದ್ದಗಲವನ್ನು ಹೊಂದಿದೆ. ಈ ಗರ್ಭಗುಡಿಯು ಸುಖನಾಸಿ ಯಿಲ್ಲದೆ ನೇರವಾಗಿ ನವರಂಗಕ್ಕೆ ಹೊಂದಿಕೊಂಡಿದೆ. ಇಲ್ಲಿ ಸ್ವತಂತ್ರ ಗಂಗ ಶೈಲಿಯ ಕಂಬಗಳನ್ನು ಹೊಂದಿದ್ದು, ಬಹುಶಃ ಭಗ್ನವಾದ ವಸ್ತುಗಳನ್ನು ಬಳಸಿಕೊಂಡು ಪಾಳೆಗಾರರ ಕಾಲದಲ್ಲಿ ೧೬ ಮತ್ತು ೧೭ನೇ ಶತಮಾನದಲ್ಲಿ ಜೀರ್ಣೋದ್ಧಾರ ವಾಗಿರಬಹುದೆಂದು ನಿರ್ಣಯಿಸಬಹುದಾಗಿದೆ.

**ಗರ್ಭಗೃಹ:–** ಮೂಲದಲ್ಲಿ ಮಲ್ಲಿಕಾರ್ಜುನಸ್ವಾಮಿ ಅಥವಾ ಮಲ್ಲೇಶ್ವರ ಎಂದು ಕರೆಯುಲಾಗುತ್ತದೆ. ಗರ್ಭಗುಡಿಯು ಪ್ರದಕ್ಷಿಣಾಪಥವನ್ನು ಹೊಂದಿದ್ದು, ಗರ್ಭಗುಡಿಯ ಇಕ್ಕೆಲೆಗಳಲ್ಲಿ ದ್ವಾರಪಾಲಕರಾದ ಚಂಡ, ಪ್ರಚಂಡ ವಿಗ್ರಹಗಳಿವೆ. ನವರಂಗವು ದುಂಡಾಗಿರುವ ಕುಗುಚಿದ ಬೋಗುಣಿಯಂತಿರುವ ಬೋದಿಗೆಯನ್ನು ಹೊಂದಿರುವ ೪ ಕಂಬಗಳ, ಸುಖನಾಸಿಯಿಲ್ಲದ, ನೇರವಾಗಿ ಗರ್ಭಗೃಹಕ್ಕೆ ಎದುರುಗಿದೆ. ಇವುಗಳು ಗಂಗರ ಕಾಲಕ್ಕೆ ಸೇರಿದವು. ಈ ಆಲಯದ ದುಂಡಾಗಿರುವ ಕಂಭಗಳು ಮತ್ತು ಕಂಬದ ಮೇಲಿನ ಬೋಗುಣಿಯಾಕಾರದ ಬೋದಿಗೆಗಳು ಮತ್ತು ದೇವಾಲಯದ ಮುಂಭಾಗದಲ್ಲಿನ ಭಗ್ನವಾಗಿ ಬಿದ್ದಿರುವ ಕಂಭದ ಲಕ್ಷಣಗಳನ್ನು ಗಮನಿಸಿದರೆ ಇವುಗಳು ಮೂಲತಃ ಗಂಗರ ಕಾಲದಲ್ಲಿ ರಚನೆ ಯಾಗಿದ್ದಾಗಿವೆ. ಅನಂತರದ ಕಾಲದಲ್ಲಿ ದೇವಾಲಯವು ಜೀರ್ಣೋದ್ಧಾರವಾಗಿರುವ ಲಕ್ಷಣಗಳು ಕಂಡುಬರುತ್ತವೆ. ನವರಂಗದ ಮುಂಭಾಗದಲ್ಲಿ ನಂದಿ ವಿಗ್ರಹವಿದ್ದು, ಎಡಬಲ ದಲ್ಲಿ ಕ್ರಮವಾಗಿ ಕುಮಾರಸ್ವಾಮಿ ಮತ್ತು ಗಣೇಶನ ಶಿಲ್ಪಗಳನ್ನು ಕಾಣಬಹುದು.

**ಮುಖಮಂಟಪ:** ನವರಂಗ ದಾಟಿ ಮುಂದೆ ಬಂದರೆ ಪೂರ್ವದ್ವಾರದ ೨ ಭಾಗಗಳಲ್ಲಿಯು ಎತ್ತರವಾದ ಜಗಲಿ ಇದ್ದು, ಎಡ ಜಗಲಿಯಲ್ಲಿ ನವಗ್ರಹ ಮೂರ್ತಿಗಳಿದ್ದು ಮತ್ತೊಂದು ಜಗಲಿಯಲ್ಲಿ ವೀರಭದ್ರನ ಶಿಲ್ಪವಿದೆ. ಜಗಲಿಯ ಮುಂದಿನ ಮುಖ್ಯ ಮಂಟಪದಲ್ಲಿ ಸುಮಾರು ೧೨ ಅಡಿ ಎತ್ತರದ ಕಂಬಗಳಲ್ಲಿ ಉಬ್ಬು ಶಿಲ್ಪಗಳನ್ನು ಕಂಡರಿಸಲಾಗಿದೆ. ಈ ದೇವಾಲಯದ ಶಿಲ್ಪಗಳನ್ನು ಗ್ರಾನೈಟ್ ಶಿಲೆಯಿಂದ ನಿರ್ಮಾಣ ಮಾಡಲಾಗಿದೆ.

**ಹೊರಪ್ರಾಕಾರ:** ಮೂಲ ದೇಗುಲದ ಸುತ್ತಲೂ ಎತ್ತರವಾದ ಪ್ರಾಕಾರ ಗೋಡೆಯಿದ್ದು, ಹಿಂಭಾಗದ ಎಡ ಭಾಗದಲ್ಲಿ ಅಮ್ಮನವರ (ಭ್ರಮರಾಂಭ) ಗುಡಿ ಇದೆ. ಪಶ್ಚಿಮದ ಪ್ರಾಕಾರದ ಜಗಲಿಯಲ್ಲಿ ಸುಮಾರು ೯ ಲಿಂಗಗಳನ್ನು ಪ್ರತ್ಯೇಕವಾದ ಗೂಡುಗಳಲ್ಲಿ ಪ್ರತಿಷ್ಠಾಪಿಸಲಾಗಿದೆ. ಮೂಲನವರಂಗದ ಹೊರ ನೈಋತ್ಯ ಭಾಗದಲ್ಲಿ ಚಂಡೀಕೇಶ್ವರ ಗುಡಿಯಿದೆ. ಮಹಾದ್ವಾರದ ಹಿಂದೆ ಮತ್ತು ಮುಂದೆ ಜಗಲಿಯಿದ್ದು ದೇವಾಲಯದ ಎದುರು ಸುಮಾರು ೨೦ ಅಡಿ ಎತ್ತರದ ದ್ವೀಪ ಸ್ತಂಭವಿದೆ.

**ಆದಿಪರಮೇಶ್ವರ ಚೈತ್ಯಾಲಯ:** ಈ ದೇವಾಲಯ ಬಹುಶಃ ಗಂಗರ ಕೊಡುಗೆ ಆಗಿರಬಹುದಾಗಿದೆ. ಕ್ರಿ.ಶ. ೧೩೩೦ ರಲ್ಲಿ ಹುಲ್ಲಹಳ್ಳಿಯನ್ನು ಆಳುತ್ತಿದ್ದ ಪೆರುಮಾಳ್ ದೇವರಸ ಈ ಪರಮೇಶ್ವರ ಚೈತ್ಯಾಲಯುವನ್ನು ಜೀರ್ಣೋದ್ಧಾರ ಮಾಡಿಸಿದ ಎಂದು ಕಣೆನೂರು ಶಾಸನದಲ್ಲಿ ಉಲ್ಲೇಖಿತ ವಾಗಿದೆ. ಈ ಚೈತ್ಯದ ನಿರ್ವಹಣೆಗೆ ನಾಗಸಮುದ್ರ ಮತ್ತು ಹುಲ್ಲಹಳ್ಳಿಯ ಸ್ವಲ್ಪ ಜಮೀನು ಬಿಟ್ಟುಕೊಟ್ಟ ನಿದರ್ಶನಗಳಿವೆ. ಪ್ರಸ್ತುತ ಈ ದೇವಾಲಯವು ಭಗ್ನವಾಗಿದೆ.

**ಶ್ರೀ ಜಗನ್ಮಂಗಲ ಚೈತ್ಯಾಲಯ:** ಹುಲ್ಲಹಳ್ಳಿ ಶಾಸನದಲ್ಲಿ ತಿಳಿಸಿರುವಂತೆ ಹುಲ್ಲಹಳ್ಳಿ ಆಡಳಿತಗಾರನ ಮಕ್ಕಳಾದ ಮರ್ಮಿದೇವರಸ ಮತ್ತು ಪೆರುಮಾಳ್‌ರು ಆಡಳಿತ ನಡೆಸಿ ದ್ವಾರಸಮುದ್ರ ಶಿಲ್ಪಿಗಳನ್ನು ಕರೆಸಿ ಈ ಚೈತ್ಯಾಲಯದಲ್ಲಿ

ಮಾಣಿಕ್ಯ ದೇವರನ್ನು ಪ್ರತಿಷ್ಠಾಪಿಸಿದ್ದರು. ಆದರೆ ೧೭೫೦ರ ನಂತರ ಧಾರ್ಮಿಕ ರಾಜಕೀಯ ಸಂಘರ್ಷದಿಂದ ಈ ಚೈತ್ಯ ಗ್ರಾಮದಲ್ಲಿ ಕಂಡುಬರುತ್ತಿಲ್ಲ. ವರದರಾಜ ಸ್ವಾಮಿ ದೇವಾಲಯದ ಜೀರ್ಣೋದ್ಧಾರದ ವೇಳೆ ಜೈನ ಶಿಲ್ಪಗಳು ದೊರೆತಿದ್ದವೆಂದು ಗ್ರಾಮಸ್ಥರು ಅಭಿಪ್ರಾಯಿಸಿದ್ದಾರೆ. ಇದಕ್ಕೆ ಪೂರಕವಾಗಿ ದೇವಾಲಯದ ವಸಂತೋತ್ಸವ ಮಂಟಪದಲ್ಲಿ ಹಲವಾರು ಜೈನ ಅವಶೇಷಗಳು ಬಿದ್ದಿರುವುದು ಸಾಕ್ಷಿಯಾಗಿವೆ.

ಕಂಬದಕೊಲ್ಲಿ ವೆಂಕಟರಮಣಸ್ವಾಮಿ ದೇವಾಲಯವು ತೃಣಮಹರ್ಷಿಯ ಆಶ್ರಮದ ಸ್ಥಳದಲ್ಲಿದ್ದು ಮಹಾವಿಷ್ಣುವನ್ನು ಕಂಬದಲ್ಲಿ ಭಾವಿಸಿಕೊಂಡು ಮಹರ್ಷಿಗಳು ಉಪಾಸನೆ ಮಾಡುತ್ತಿದ್ದರು ಎಂಬ ಪ್ರತೀತಿ ಇದೆ. ಕಂಬದರಾಯನ ಗುಡಿ ಇದ್ದುದರಿಂದ ಕಪಿಲಾ ಕೊಲ್ಲಿಯು ಕಂಬದಕೊಲ್ಲಿ ಆಗಿದೆ.

ಗ್ರಾಮದ ಉತ್ತರ ಭಾಗದ ನದಿಯ ಬಲಭಾಗದಲ್ಲಿ ೧೮ನೇ ಶತಮಾನದ ಕೊನೆಯಲ್ಲಿ ಸುಂದರ ಕಾಳಿಕಾ ದೇವಾಲಯವಿದ್ದಿತ್ತು. ಆ ವೇಳೆಗೆ ಟಿಪ್ಪು ಅಧಿಕಾರ ರೂಡನಾಗಿದ್ದು ಆತನ ದಾಳಿಗೆ ಹೆದರಿದ ಭಕ್ತರು ಇಲ್ಲಿಂದ ಕಾಳಿಕಾ ದೇವಿಯ ವಿಗ್ರಹವನ್ನು ಪಕ್ಕದ ಅತ್ವಾಳದಲ್ಲಿ ಪ್ರತಿಷ್ಠಾಪಿಸಿ ದರು. ಪರಿಣಾಮವಾಗಿ ಮೂಲಗುಡಿಯು ನಾಶವಾಯಿತು. ಈ ಕಾಳಿಕ ದೇವಿಯ ಮೂರ್ತಿಯನ್ನು ಪ್ರತಿವರ್ಷ ಚೈತ್ರಮಾಸದಲ್ಲಿ ಅತ್ವಾಳ್ ಗ್ರಾಮದಿಂದ ತಂದು ನಂತರ ಹುಲ್ಲಹಳ್ಳಿಯಲ್ಲಿ ಪ್ರದಕ್ಷಿಣೆ ಮಾಡುವ ಪ್ರತೀತಿ ಇಂದಿಗೂ ಇದೆ, ಆದರೆ ಈ ವಾದಕ್ಕೆ ಯಾವ ಲಿಖಿತಾಧಾರಗಳು ಇಲ್ಲವಾಗಿದ್ದು, ಕೇವಲ ಜನಪದಿಯ ನಂಬಿಕೆಯಾಗಿದೆ.

ಉಳಿದಂತೆ ಪಾಳೆಗಾರರ ಕಾಲದಲ್ಲಿ ನಿರ್ಮಾಣವಾದ ಬಸವೇಶ್ವರ ದೇವಾಲಯ, ಚಿಕ್ಕದೇವಿ ಗುಡಿ (ನಾಯಕರ ಕೇರಿಯಲ್ಲಿದೆ) ಸೋಮೇಶ್ವರ ದೇವಾಲಯ, ಪೇಟೆಗಣಪತಿ, ಕಾಡುಬಸವೇಶ್ವರ ಮತ್ತು ಶ್ರೀಪ್ರಸನ್ನಾಂಜನೇಯ ದೇವಾಲಯ ಗಳಿವೆ. ಸ್ಥಳೀಯರು ಹೇಳುವ ಪ್ರಕಾರ ಇವು ಐತಿಹಾಸಿಕ ದೇವಾಲಯಗಳಾಗಿವೆ.

ಅಂತಿಮವಾಗಿ ಈ ಗ್ರಾಮದಲ್ಲಿ ಕೆಲವು ನಿಷಿದಿಕಲ್ಲು, ವೀರಗಲ್ಲು ಮತ್ತು ಮಹಾಸತಿ ಕಲ್ಲುಗಳು ಇವೆ. ಗ್ರಾಮದ ಒಂದೆ ಭಾಗದಲ್ಲಿ ಸುಮಾರು ೧೦ ವೀರಗಲ್ಲುಗಳಿದ್ದು ಇವೆಲ್ಲವು ಜೀರ್ಣಾವಸ್ಥೆಯತ್ತ ಸಾಗುತ್ತಿವೆ. ಶಾಸನಾಧಾರವಿಲ್ಲದ ಇವುಗಳಿಗೆ ಸ್ಥಳೀಯರು ನೀಡುವ ವಿವರಣೆ ಎಂದರೆ ವೀರಬಲ್ಲಾಳ ಪಾಂಡ್ಯರನ್ನು ಮತ್ತು ಮುಸ್ಲಿಂರನ್ನು ಎದುರಿಸಲು ಹುಲ್ಲಹಳ್ಳಿಯ ವೀರಯೋಧರ ನೆರವನ್ನು ಪಡೆದಿದ್ದ ಹಾಗಾಗಿ ಹೊಯ್ಸಳರ ಪರವಾಗಿ ಹೋರಾಡಿ ಮಡಿದ ಹುಲ್ಲಹಳ್ಳಿಯ ವೀರರ ನೆನಪಿನಾರ್ಥ ಈ ವೀರಗಲ್ಲುಗಳನ್ನು ಹಾಕಿಸಲಾಗಿದೆ ಎಂಬ ನಂಬಿಕೆಯಿದೆ. ಹೀಗೆ ಹಲವು ಸ್ಮಾರಕಗಳನ್ನು ಹೊಂದಿರುವ ಈ ಗ್ರಾಮವು ಐತಿಹಾಸಿಕವಾಗಿ ಮತ್ತು ರಾಜಕೀಯವಾಗಿ ಪ್ರಮುಖವಾಗಿದ್ದರು ಆಧಾರಗಳ ಕೊರತೆಯಿಂದ ಇಲ್ಲಿದ್ದ ಪ್ರಾರಂಭದ ಬಸದಿಗಳ ಭಗ್ನಕ್ಕೆ ಕಾರಣ ಮತ್ತು ಇಲ್ಲಿ ಆಳ್ವಿಕೆ ನಡೆಸುತ್ತಿದ್ದ ಪಾಳೇಗಾರ ಮನೆತನದ ಬಗ್ಗೆ ಬೆಳಕು ಚೆಲ್ಲಬೇಕಾಗಿದೆ.

## ಆಧಾರಸೂಚಿ


**ಎಫಿಗ್ರಾಫಿಯ ಕರ್ನಾಟಕ**, ಸಂಪುಟ–೩, ನಂಜನಗೂಡು.

ರಘುನಾಥ ಭಟ್ಟ, **ಕರ್ನಾಟಕ ಶಾಸನ ಕಲೆ.**

ಡಾ. ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನದ ಸಾಂಸ್ಕೃತಿಕ ಅಧ್ಯಯನ.**

ಡಾ. ಜಿ. ಮರಳಯ್ಯ, **ಪ್ರಭುಲೀಲೆ.**

**ಶಾಂತವೀರದೇಶಿಕ ರಚಿತ 'ಶಿವಲಿಂಗ ಚರಿತ್ರೆ'**, ಸಂ. ಎಂ.ಜಿ. ನಂಜುಂಡಾರಾಧ್ಯ.

ಮಿರ್ಜಿ ಅಣ್ಣರಾಯ, **ಜೈನಧರ್ಮ.**

**ಮೈಸೂರು ಅರ್ಕಿಯಾಲಾಜಿಕಲ್ ರಿಪೋರ್ಟ್**, ೧೯೨೯.

ಹು.ಬಿ. ನಾಗರಾಜ್, **ಹುಲ್ಲಹಳ್ಳಿಯ ದರ್ಶನ.**

ಶಿವಪ್ಪ ನ. ನೀರಲಗಿ*

# ನಡುಕೂರಿನ ಪ್ರಾಚ್ಯಾವಶೇಷಗಳು

ಇಂದಿನ ಯಾದಗಿರಿ ಜಿಲ್ಲೆಯ ಸುರಪುರ ತಾಲೂಕಿನ ಸಗರ ೩೦೦ ರಲ್ಲಿರುವ ಶಾಸನೋಕ್ತ ಗ್ರಾಮ ನಡಕೂರ ಐತಿಹಾಸಿಕ ಕೆಂಭಾವಿಯಿಂದ ದಕ್ಷಿಣಕ್ಕೆ ಸುಮಾರು ೫-೬ ಕಿ.ಮೀ.ಗಳ ಅಂತರದಲ್ಲಿದೆ. ಈ ಊರಿನಲ್ಲಿ ಸುಮಾರು ೧೨ ನೇ ಶತಮಾನಕ್ಕೆ ಸೇರಿದ ಎರಡು ದೇವಾಲಯಗಳಿದ್ದು, ಊರ ಹೊರಗೆ ಉತ್ತರ ದಿಕ್ಕಿನಲ್ಲಿರುವ ದೇವಾಲಯವನ್ನು ಶ್ರೀ ರಾಮಲಿಂಗೇಶ್ವರ ದೇಗುಲವೆಂದು ಊರ ಮಧ್ಯದಲ್ಲಿರುವ ದೇಗುಲವನ್ನು ಸಿದ್ದೇಶ್ವರ ದೇಗುಲವೆಂದು ಈ ಊರಿನ ಜನರು ಕರೆಯುತ್ತಾರೆ. ಕ್ರಿ.ಶ. ೧೦೫೪ರ ಕೆಂಭಾವಿಯ ಶ್ರೀ ರೇವಣಸಿದ್ದೇಶ್ವರ ದೇಗುಲದಲ್ಲಿರುವ ಒಂದನೆಯ ಸೋಮೇಶ್ವರನ ಶಾಸನವು (EI-XXII P. 291-293, J.F. Fleet) ಹೈಹಯ ವಂಶದ ಮಹಾಮಂಡಲೇಶ್ವರ ಚಂದನಿಂದ ರೇವರಸನವರೆಗಿನ ವಂಶಾವಳಿಯನ್ನು ವಿವರಿಸುತ್ತಿದ್ದು, ರೇವರಸನ ಹೆಂಡತಿ ಮಾಳಿಯಬ್ಬರಿಸಿ ಕೆಂಬಾವಿಯಲ್ಲಿ ಮಾಳಿಬ್ಬೇಶ್ವರ ದೇವಸ್ಥಾನವನ್ನು ಕಟ್ಟಿಸಿದಳು. ಶಾಸನವು ಈ ಕೆಳಗಿನಂತಿದೆ.

*ಸಕವರ್ಷ ೯೭೬ನೇಯ ಜಯಸಂವತ್ಸರದ ಪುಷ್ಯಮಾಸ ದೊಳತ್ತರಾಯಣ ಸಂಕ್ರಾಂತಿಯಂದು ಮಾಳಿಬೇಶ್ವರದೇವರ ಪ್ರತಿಷ್ಠಗೆಯ್ದು ದೇವರಂಗಭೋಗಕ್ಕವೊಂದು ಭೋಗಂ ॥ ಪೊದ್ದವರ್ಗಂ ಪರೆಕಾರ್ಗ್ಗವೊಂದು ಭೋಗಂ ತಪೋಧನರ್ಕ್ಕಂ ಮಠದಲೋದುವ ವಿದ್ಯಾರ್ಥಿಗಳ್ಗಮಾಹಾರಕ್ಕಂ ಪ್ರತಿದಿನಕ್ಕ ಮೊಂದು ಭೋಗವಿಂತು ತ್ರಿಭೋಗಂ ಮಾಡಿ ಪೆರ್ಬಾಳ ೫ ವಭಳಾರಗ್ಗೆ ರಾಜಧಾನಿ ಕೆಂಬಾವಿಯ ಮುಡವೊಲದೋ ಟಿ ಸರ್ವ್ವಬಾಧಾ ಪರಿಹಾರಂ ಮಾಡಿಬಿಟ್ಟ ಕೆಯ್ಮತ್ತರ್ ೧೦೦೦ ಎಲೆಯದೋಂಟಿಯ ಕೆಲದ ನೀರಪರಿಯಿಂ ಬಡಗಣಾಳಿಗೆ ವಡ್ಡದೇತರೋಳಿಯಂ ಗಡಿಗಲ್ಮಾಡಿ ಪ್ರತಿಬದ್ಧದಿಂದ ಬಡಗಣ ಕೇರಿಯಂ ಬಡಗಣ ಕೇರಿಯ ಕೆಳಗಣ ಬರಿಯಳ ಕೇರಿಯ ಬನದೇವರ ನಿವೇದ್ಯಕ್ಕೆ ತೆಂಕವೊಲದ "ನಡುಕುರವದ" ಪೊಳಲ್ಗಳ್ದೆ ಮತ್ತು ಆ ಕೆಂಬಾವಿ ೨೪೮ ಬಳಿಯ ಕರಡಿಕಲ್ಲೂಡಲಿಗೆಯಂ ತೆರೆದುಂಬಾಡದ ಮಂನ್ನೆಯಸಾಮ್ಯಂ ಸಗರ ೩೦೦ ಬಳಿಯ ನಗರವುರದ ಮಂನ್ನೆಯಸಾಮ್ಯಮಿಂತಿನಿತುಮ ನಾ ಚಂದ್ರಾರ್ಕ್ಕಬರಂ ಧರ್ಮ್ಮಂ ಪ್ರವರ್ಧಿಸಲ್ ಬಿಟ್ಟರ್ ಮಾಳಲದೇವಿಯ ಕೀರ್ತಿಗಾರ್ಮ್ಮಮೆನಿಸುವ ಧರ್ಮ್ಮ ॥ ಶ್ರೀಮತ್ ಬರೆವರ ರುದ್ರಂ ಚಂಗದೇವಯ್ಯಂ ಬರೆದಂ*

ಎಂದು ಶಾಸನದಲ್ಲಿ ನಡಕೂರ, ಕಡಕಲ್, ಕೂಡಲಗಿ ಹಾಗೂ ನಗನೂರಗಳನ್ನು ಉಲ್ಲೇಖಿಸಿದೆಯಲ್ಲದೆ ಈ ಶಾಸನವನ್ನು ಬರೆದ ಕವಿಯ ಹೆಸರನ್ನು ಚೆಂಗದೇವಯ್ಯನೆಂದು ಹೆಸರಿಸಿದೆ.

## ರಾಮಲಿಂಗೇಶ್ವರ ದೇಗುಲ

ಈ ದೇಗುಲದಲ್ಲಿ ಚತುರ್ಭುಜಗಳನ್ನು ಹೊಂದಿದ ಲಕ್ಷ್ಮೀನಾರಾಯಣನ ಶಿಲ್ಪವಿದ್ದು, ಕೈಯಲ್ಲಿ ಕ್ರಮವಾಗಿ ಶಂಖ, ಚಕ್ರಗಳಿದ್ದು, ಅಭಯಹಸ್ತಧಾರಿಯಾಗಿದ್ದಾನೆ. ತನ್ನ ಎಡತೊಡೆಯ ಮೇಲೆ ಲಕ್ಷ್ಮಿಯನ್ನು ಕೂಡ್ರಿಸಿಕೊಂಡು ಒಂದು ಕೈಯಿಂದ ಅವಳ ಸೊಂಟವನ್ನು ಬಳಸಿದಂತಿದೆ. ಮೂರ್ತಿಯ ಲಲಿತಾಸನದಲ್ಲಿದ್ದು, ಕರಂಡ ಮುಕುಟಧಾರಿಯಾಗಿದ್ದಾನೆ. ಲಕ್ಷ್ಮೀನಾರಾಯಣನು ತಲೆಯ ಮೇಲೆ ಏಳು ಹೆಡೆಯ ಸರ್ಪವನ್ನು ಸುಂದರವಾಗಿ ಕೆತ್ತಲಾಗಿದೆ. ಮೂರ್ತಿಯು ಎದೆಗೆ ಕಂಠಿಹಾರ ಹಾಗೂ ಕೊರಳಹಾರವನ್ನು ಧರಿಸಿದೆ. ಮೂರ್ತಿಯ ಮೇಲ್ಗಡೆ ಸುಂದರವಾದ ಸಿಂಹ ಮುಖವನ್ನು (ಕೀರ್ತಿಮುಖ) ಕೆತ್ತಲಾಗಿದೆ. ಲಕ್ಷ್ಮೀನಾರಾಯಣನ ಬಲಭಾಗ ದಲ್ಲಿ ಕೈಮುಗಿದು ನಿಂತುಕೊಂಡ ಅವನ ವಾಹನವಾದ, ಗರುಡನನ್ನು ಸುಂದರವಾಗಿ ಕೆತ್ತಲಾಗಿದೆ. ಅದೇ ರೀತಿಯಾಗಿ ಮೂರ್ತಿಯ ಎಡಭಾಗದಲ್ಲಿ ಕೈಮುಗಿದುಕೊಂಡು ನಿಂತ ಭಕ್ತನನ್ನು ಕೆತ್ತಲಾಗಿದೆ.

## ರಾಮಲಿಂಗೇಶ್ವರನ ಶಿಲ್ಪ

ಸುಂದರವಾಗಿ ಕೆತ್ತಿದ ಅಂದವಾದ ಮುಖಮುದ್ರೆಯನ್ನು ಹೊಂದಿದ ಎದೆಯ ಮೇಲೆ ಕಂಠಿಹಾರ, ಕೊರಳಲ್ಲಿ ಕೊರಳಹಾರವನ್ನು ಧರಿಸಿದ್ದು, ಕಿವಿಯಲ್ಲಿ ಕರ್ಣಕುಂಡಲ ಗಳಿದ್ದು, ಸುಂದರವಾದ ಕರಂಡ ಮುಕುಟವನ್ನು ಧರಿಸಿದ ಈ ಶಿಲ್ಪವನ್ನು ಶ್ರೀ ರಾಮಲಿಂಗೇಶ್ವರನೆಂದು ಸ್ಥಳೀಯರು ಕರೆಯುತ್ತಾರೆ. ಇದೇ ತರಹ ಇನ್ನೊಂದು ಮೂರ್ತಿಯು

*ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, # ೨೪೦, ಜಿಲ್ಲಾ ಆಡಳಿತ ಭವನ, ನವನಗರ, ಬಾಗಲಕೋಟೆ.



ಸಿದ್ಧೇಶ್ವರ ದೇಗುಲದ ಶಿವಲಿಂಗ



ಕಲ್ಯಾಣದ ಚಾಲುಕ್ಯರ ಕಂಬ



ರಾಮಲಿಂಗೇಶ್ವರ ದೇಗುಲದ ಶಿವಲಿಂಗ

ಲಕ್ಷ್ಮೀ ನರಸಿಂಹ
ವಿಗ್ರಹ





ಶ್ರೀರಾಮ



ಸೀತೆ

ಈ ಸ್ಥಳದಲ್ಲಿ ಇದ್ದು, ಅದನ್ನು ಲಕ್ಷ್ಮಣನೆಂದು ಕರೆಯುತ್ತಾರೆ. ಇದೇ ರೀತಿಯಾಗಿ ಭಗ್ನಗೊಂಡ ಸುಂದರವಾದ ಸೀತಾಮಾತೆಯ ಮೂರ್ತಿಯು ಸಹ ಇಲ್ಲಿದೆ. ಈ ಎಲ್ಲಾ ಮೂರ್ತಿಗಳನ್ನು ಕಪ್ಪುಕಣ ಶಿಲೆಯಲ್ಲಿ (Black Granite) ಕೆತ್ತಲಾಗಿದೆ.

**ದ್ವಿಭುಜ ಗಣೇಶನ ವಿಗ್ರಹ :** ಕಪ್ಪು ಕಣ ಶಿಲೆಯಲ್ಲಿ ಸುಂದರವಾಗಿ ಕೆತ್ತಿದ, ಒಂದು ಕೈಯಲ್ಲಿ ಪರಶು ಹಾಗೂ ಇನ್ನೊಂದು ಕೈಯಲ್ಲಿ ಪಾಶವನ್ನು ಹಿಡಿದುಕೊಂಡಿರುವ ಈ ಮೂರ್ತಿಯು ತುಂಬಾ ಹಾಳಾಗಿದ್ದು, ತಲೆಗೆ ಸುಂದರವಾದ ಹಾಗೂ ಉದ್ದವಾದ ಕರಂಡ ಮುಕಟವನ್ನು ಧರಿಸಿದೆ.

**ನಂದಿಯ ಶಿಲ್ಪ :** ಕರಿಕಲ್ಲಿನಲ್ಲಿ ಕೆತ್ತಿರುವ ಈ ನಂದಿಯ ಹಣೆಗೆ ಹಣೆಪಟ್ಟಿ ಧರಿಸಿದೆ. ಕೊರಳಲ್ಲಿ ಗೆಜ್ಜೆಸರ ಮತ್ತು ಸರಮಣಿಯನ್ನು ಕೆತ್ತಲಾಗಿದ್ದು, ಸುಂದರವಾದ ಹಿಣಿಯನ್ನು ಹೊಂದಿದ್ದು ಈ ನಂದಿಯ ಕುತ್ತಿಗೆಯು ಹೊಡೆದು ಹೋಗಿದೆ.

**ದೇವಾಲಯದ ಸ್ತಂಭಗಳು :** ಕರಿಕಲ್ಲಿನಲ್ಲಿ ಕೆತ್ತಿ ನಯಗೊಳಿಸಿದ ಈ ಸ್ತಂಭಗಳನ್ನು ಶಿಲ್ಪಕಲಾ ದೃಷ್ಟಿಯಿಂದ ಕಲ್ಯಾಣದ ಚಾಲುಕ್ಯರ ಕಾಲದ್ದಾಗಿದ್ದು, ೧೨ನೇ ಶತಮಾನಕ್ಕೆ ಸೇರಿಸಬಹುದಾಗಿದೆ.

**ಶಿವಲಿಂಗ :** ಈ ಶಿವಲಿಂಗವನ್ನು ಕಪ್ಪು ಗ್ರಾನೈಟ್ ಶಿಲೆಯಲ್ಲಿ ಕೆತ್ತಿ ನಯಗೊಳಿಸಲಾಗಿದೆ.

**ಭುವನೇಶ್ವರಿ :** ಕಪ್ಪುಕಣ ಶಿಲೆಯಲ್ಲಿ ಸುಂದರವಾಗಿ ಕಮಲದ ಹೂವನ್ನು ಬಿಡಿಸಲಾಗಿದ್ದು, ಹಾಳಾದ ದೇಗುಲದ ಭುವನೇಶ್ವರಿ ಇದಾಗಿದೆ.

**ಸಿದ್ದೇಶ್ವರ ದೇಗುಲ :** ಊರಿನ ಮಧ್ಯದಲ್ಲಿರುವ ಈ ದೇವಾಲಯವು ಸಂಪೂರ್ಣ ನಾಶವಾಗಿದೆ. ದೇಗುಲದೊಳಗೆ ಇತ್ತೀಚಿನ ಶಿವಲಿಂಗವಿದೆ. ಇದೇ ದೇವಾಲಯದ ಹಾಳಾದ ಕಲ್ಲುರಾಶಿಯೊಳಗೆ ಅಪ್ರಕಟಿತ ಅತೀ ತ್ರುಟಿತವಾದ ಹಾಗೂ ಸವಕಳಿಯಾದ ಶಾಸನವಿದ್ದು, ಶಾಸನದ ಲಿಪಿ ಸ್ವರೂಪದಿಂದ ೧೨ನೇ ಶತಮಾನಕ್ಕೆ ಸೇರಿಸಬಹುದಾಗಿದೆ. ಈ ಶಾಸನವನ್ನು ಬಿಳಿಸೇದಿ ಕಲ್ಲಿನಲ್ಲಿ ಕೆತ್ತಲಾಗಿದ್ದು, ಶಾಸನದ ಕೊನೆಯಲ್ಲಿ ೧೨ ಮತ್ತರು ಭೂಮಿಯನ್ನು ದಾನಗೈದ ಉಲ್ಲೇಖ ಕನ್ನಡ ಅಂಕಿಯಲ್ಲಿದೆ, ಹಾಗೂ ಶಾಸನದಲ್ಲಿ ಬಂಡಿ 'ರ' ಕಾರವನ್ನು ಬಳಸಲಾಗಿದೆ. ಹೀಗೆ ನಡಕೂರು ಪ್ರಾಚೀನ ಕರ್ನಾಟಕದ ಶೈವ ವೈಷ್ಣವಧರ್ಮಗಳ ಧಾರ್ಮಿಕ ಕೇಂದ್ರವಾಗಿದ್ದು, ಅನೇಕ ಮಹತ್ವದ ಚಾರಿತ್ರಿಕ ಅವಶೇಷಗಳನ್ನು ಹೊಂದಿದೆ ಎಂದು ಹೇಳಬಹುದಾಗಿದೆ.

(ಈ ಲೇಖನವನ್ನು ತಯಾರಿಸುವಾಗ ಕ್ಷೇತ್ರ ಕಾರ್ಯದಲ್ಲಿ ಸಹಾಯವನಿತ್ತ ನನ್ನ ಸಹೋದರರಾದ ಶ್ರೀ ಗೌಡಪ್ಪಗೌಡ ಬಿರಾದಾರ. ಸಾ॥ ನಡಕೂರ. ಹಾಗೂ ಶ್ರೀ ನಿಂಗಪ್ಪ ನೀರಲಗಿ ಸಾ॥ ಭಂಟನೂರ ಇವರಿಗೆ ಲೇಖಕರ ಕೃತಜ್ಞತೆಗಳು)

## ಆಧಾರಸೂಚಿ

ಪ್ರೊ. ಎಸ್.ಕೆ. ರಾಮಚಂದ್ರರಾವ್, ಮೂರ್ತಿಶಿಲ್ಪ ನೆಲೆ ಹಿನ್ನಲೆ.

ಸುರಪುರ ತಾಲ್ಲೂಕಿನ ಶಾಸನಗಳು, ಸಂ. ಶ್ರೀಮತಿ ಹನುಮಾಕ್ಷಿ ಗೋಗಿ.

EI, Vil. XXII.

ಮಹೇಶ ಬ. ಅಂಗಡಿ*

# ಸವದತ್ತಿ ಪ್ರದೇಶದ ಪ್ರಾಚ್ಯಾವಶೇಷಗಳು

ಸುಗಂಧವರ್ತಿ ೧೨' ಎಂದು ಪ್ರಸಿದ್ಧಿ ಪಡೆದ ಇಂದಿನ ಸವದತ್ತಿಯ ಕುಂತಲ ದೇಶವು ಕುಹೂಂಡಿ ೩೦೦೦ ನಾಡಿನ ಒಂದು ಭಾಗ, ತಾಲೂಕ ಕೇಂದ್ರವಾದ ಇದು ಬೆಳಗಾವಿಯಿಂದ ಪೂರ್ವಕ್ಕೆ ೭೮ ಕಿ.ಮೀ. ದೂರದಲ್ಲಿರುವ ಐತಿಹಾಸಿಕ ನಗರ, ಶಾಸನಗಳಲ್ಲಿ ಇದನ್ನು 'ಸುಗಂಧವರ್ತಿ' ಎಂದು ಕರೆಯಲಾಗಿದೆ. ಸಾವಿರಾರು ವರ್ಷಗಳ ಪ್ರಾಚೀನತೆ ಹೊಂದಿ, ಈ ಸುಗಂಧವರ್ತಿ ಪ್ರದೇಶದಲ್ಲಿ ಚಾಲುಕ್ಯರು, ರಾಷ್ಟ್ರಕೂಟರು, ರಟ್ಟರು, ಕಲ್ಯಾಣ ಚಾಲುಕ್ಯರು, ಯಾದವರು ಕಲಚೂರಿಗಳು, ಹೊಯ್ಸಳರು, ಮರಾಠರು, ಮುಂತಾದ ಅರಸರು ಆಳ್ವಿಕೆ ಮಾಡಿದ್ದಾರೆ.

ಕ್ರಿ.ಶ. ಒಂಬತ್ತನೆ ಶತಮಾನದಿಂದ ಹನ್ನೊಂದನೆ ಶತಮಾನದವರೆಗೆ ರಟ್ಟರ ರಾಜಧಾನಿಯಾಗಿದ್ದ ಸವದತ್ತಿ ಪಟ್ಟಣ ಕ್ರಿ.ಶ. ೧೦೪೮ರಲ್ಲಿ "ಕಂಪಣ ಹನ್ನೆರಡರ ಮೊದಲ ಬಾಡ ರಾಜಧಾನಿ ಸುಗನ್ಧವರ್ತಿ" ಎಂಬ ಪ್ರಸಿದ್ಧಿ ಪಡೆದಿತ್ತು. ಈ 'ಸುಂಧವರ್ತಿ' ಎಂಬ ಹೆಸರಿನ ನಿಷ್ಪತ್ತಿಯ ಕುರಿತು ನೋಡಿದಾಗ ವಿದ್ವಾಂಸರಲ್ಲಿ ಈ ನಿಷ್ಪತ್ತಿಯ ಕುರಿತು ಅನೇಕ ಚರ್ಚೆಗಳು ಏರ್ಪಟ್ಟಿವೆ. ಈ ಪ್ರದೇಶದಲ್ಲಿ ನೇಕಾರರು ನೂಲಿಗೆ ಬಣ್ಣ ಹಾಕುವಾಗ ಸುಗಂಧವನ್ನು ಬೆರೆಸುತ್ತಿದ್ದ ಕಾರಣ ಸುಗಂಧವರ್ತಿ ಎಂಬ ಹೆಸರು ಪ್ರಾಪ್ತವಾಗಿರಬಹುದು ಎಂಬ ಮಾತು ಸತ್ಯಕ್ಕೆ ದೂರವಾದದ್ದು ಎನ್ನಬಹುದಾಗಿದೆ. ಕಾರಣ ಅಂದಿನಿಂದ ಇಂದಿನವರೆಗೂ ಈ ಪ್ರದೇಶದ ಯಾವ ನೇಕಾರರು ನೂಲಿಗೆ ಸುಗಂಧ ದ್ರವ್ಯ ಬೆರೆಸುವುದಿಲ್ಲ ಕೇವಲ ಹುಣಸೆ ಬೀಜದ ಗಂಜಿ ಇಲ್ಲವೆ ಹಿಟ್ಟಿನ ಗಂಜಿ ಬೆರೆಸುವುದು ಕಂಡುಬರುತ್ತದೆ. ಇನ್ನೊಂದು ಮಾತಿನ ಪ್ರಕಾರ 'ಸುಗಂಧವರ್ತಿ' ಎನ್ನುವ ಹೆಸರಿನಲ್ಲಿ 'ವರ್ತಿ' ಎನ್ನುವ ಆರಂಭದ ಶಬ್ದದ ಅರ್ಥ ಕಲ್ಲು ಪೊಟರೆಗಳಿಂದ ನೀರು ಬರುವುದು ಎಂದರ್ಥ. ಇಂತಹ ವರ್ತಿಗಳು ಸವದತ್ತಿ ಪಟ್ಟಣದ ಸುತ್ತಮುತ್ತಲೂ ಹೇರಳವಾಗಿವೆ, ವಿಶೇಷವಾಗಿ ಎಲ್ಲಮ್ಮನ ಗುಡ್ಡದಲ್ಲಿಯ ವರ್ತಿಗಳು ಹಲವಾರು ರಾಸಾಯನಿಕ ಗಿಡಮೂಲಿಕೆಗಳಿಂದ ಕೂಡಿದ್ದು. ರೋಗಗಳನ್ನು ಗುಣ ಪಡಿಸುವ ಶಕ್ತಿ ಈ ನೀರಿಗಿತ್ತು. ಅಂತೆಯೇ 'ಎಣ್ಣೆಗೊಳ್ಳದವರ್ತಿ' ನೀರಿನ ಸ್ನಾನ ಮಾಡಿದರೆ ಚರ್ಮರೋಗ ನಿವಾರಣೆ ಯಾಗುತ್ತದೆಯೆನ್ನುವ ನಂಬಿಕೆ. ಈ ತೆರನಾಗಿ ಸುಗಂಧಯುಕ್ತ ನೀರು ವರ್ತಿಯಿಂದ ಬರುವದರಿಂದ ಈ ಭಾಗಕ್ಕೆ ಸುಗಂಧವರ್ತಿ ಎಂದು ನಿಸರ್ಗನಿಷ್ಟ ಹೆಸರನ್ನು ಪಡೆದಿರ ಬಹುದೆಂದು ತರ್ಕಿಸಬಹುದಾಗಿದೆ.

ಇನ್ನೊಂದು ಐತಿಹ್ಯದ ಪ್ರಕಾರ ಪ್ರಾಚೀನ ಕಾಲದಲ್ಲಿ 'ಸುಗಂಧವರ್ತಿ' ಪ್ರದೇಶವು ದಟ್ಟವಾದ ಕಾಡುಗಳಿಂದ ಆವರಿಸಿದ್ದು ಇಲ್ಲಿ ಅನೇಕ ಋಷಿ ಮುನಿಗಳು ವಾಸಿಸುತ್ತಿದ್ದರು, ಅವರು ಕೈಕೊಳ್ಳುವ ಯಜ್ಞಯಾಗಾದಿಗಳಿಂದ ಹೊರ ಹೊಮ್ಮುವ ಸುಗಂಧಯುತ ಧೂಪದಿಂದ ಆ ಪ್ರದೇಶ ಸುಗಂಧಯುತವಾದ ವಾತಾವರಣದಿಂದ ಆವರಿಸುತ್ತಿತ್ತು ಹಾಗಾಗಿ ಅಲ್ಲಲ್ಲಿ 'ವರ್ತಿ'ಗಳಂತೆ ಕಂಡುಬಂದಿದ್ದಕ್ಕೆ 'ಸುಗಂಧವರ್ತಿ' ಎಂದು ಕರೆದಿರಬಹುದಾಗಿದೆ.

ವಿದ್ವಾಂಸರ ಇನ್ನೊಂದು ಅಭಿಪ್ರಾಯ ಹೀಗಿದೆ : ಸವದತ್ತಿ ತಾಲೂಕಿನ ಬಡ್ಲಿ ಶಾಸನ ಕ್ರಿ.ಶ. ೧೨೪೯ರಲ್ಲಿ "ಲಕ್ಷ್ಮೀ ದೇವರಸನ ಧಾರಾಪೂರ್ವಕಂ ಕೊಟ್ಟ ಸವಂದತ್ತಿಯ ...... ಸಿನ ದಾಯಿಂ"– ಈ ಶಾಸನದ ಸಾಲುಗಳ ಆಧಾರದಿಂದ ಹನ್ನೆರಡನೆಯ ಶತಮಾನದ ಪೂರ್ವದಲ್ಲಿಯೇ ಸುಗಂಧವರ್ತಿ ಜೈನ ಸನ್ಯಾಸಿಗಳಿಗೆ (ಸವಣ)ದತ್ತಿಯಾಗಿ ಕೊಡಲ್ಪಟ್ಟಿತ್ತು. ಇದರಿಂದ ಸವಣದತ್ತಿ ಎಂದು ಕರೆಯುವ ವಾಡಿಕೆ ಬೆಳೆದು ಬಂದು ಸವಣದತ್ತಿ > ಸವಂದತ್ತಿ > ಸವದತ್ತಿ > ಸೌಂದತ್ತಿ. ಈ ರೀತಿಯಾಗಿ 'ಣ' ಕಾರ ಲೋಪವಾಗಿ ಸೌಂದತ್ತಿ ಎಂಬ ಅಪಭ್ರಂಶ ಹೆಸರು ಉಳಿದುಬಂದಿತು. ಹಾಗೆಯೇ ಸುಗಂಧವರ್ತಿಯು > ಸೌಗಂಧಿಪುರ > ಸವಣದತ್ತಿ > ಸೌದತ್ತಿಯಾಗಿ ಪ್ರಚಾರದಲ್ಲಿ ಬಂದಿರುವುದನ್ನು ವಿದ್ವಾಂಸರ ಚರ್ಚೆಗಳ ಆಧಾರದ ಮೇಲೆ ಅರಿಯಬಹುದು.

ಸವದತ್ತಿ ಪ್ರದೇಶದ ಹಳೆಮೆ ಎಷ್ಟು ಎಂದು ಹುಡುಕುತ್ತಾ ಸಾಗಿದಾಗ ಅದರ ಮೂಲ ಸಿಗುವುದು ಪ್ರಾಗೈತಿಹಾಸಿಕ ಕಾಲದಿಂದ ಅಂದರೆ ಸುಮಾರು ಕ್ರಿ.ಪೂ. ೨೦೦೦ ಎಂದು ಅಂದಾಜಿಸಬಹುದು. ಇದಕ್ಕೆ ಆಧಾರವೆಂಬಂತೆ ಅಲ್ಲಿ ದೊರೆತಿರುವ ಕುರುಹುಗಳೇ ಸಾಕ್ಷಿಯಾಗಿವೆ. ಡಾ. ಬಿ.

* ನ್ಯಾಯಂಗ ಇಲಾಖೆ, ಸವದತ್ತಿ, ಹಿರೇಕುಂಬಿ, ಸವದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ.

ನರಸಿಂಹಯ್ಯನವರು ಕ್ರಿ.ಶ. ೧೯೫೬ರಲ್ಲಿ ಆದಿ ಶಿಲಾಯುಗದ ನೆಲೆಗಳನ್ನು ಮಲಪ್ರಭೆಯ ತಡಿಯಲ್ಲಿ ಶೋಧಿಸಿಸಲಾಗಿದ್ದು. ಅವುಗಳಲ್ಲಿ ಮನವಳ್ಳಿ ಹತ್ತಿರದ ತಲ್ಲೂರಿನ ನೆಲೆಯೊಂದು ಹಾಗೂ ಎಲ್ಲಮ್ಮನ ಗುಡ್ಡ ಪ್ರದೇಶದಲ್ಲಿಯೇ ಆದಿ ಮತ್ತು ಮಧ್ಯ ಶಿಲಾಯುಗದ ನೆಲೆಗಳನ್ನು ಶೋಧಿಸಿದರು. ನವಿಲ ತೀರ್ಥದ ಜಲಾಶಯದ ಹತ್ತಿರವೇ ಗುಡ್ಡದ ಬಯಲಿನಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಉಜ್ಜಿ ನಯ ಮಾಡಿದ ಒಂದು ಕಲ್ಲಿನ ಕೊಡಲಿಯ ಡಾ. ಅ. ಸುಂದರರಿಗೆ ಕ್ರಿ.ಶ. ೧೯೭೮ರಲ್ಲಿ ಸಿಕ್ಕಿತು ಇದರೊಂದಿಗೆ ಇವರು ಮಲಪ್ರಭ ಪ್ರದೇಶದಲ್ಲಿಯ ಕಲ್ಲೂರೆ, ಕಿತ್ತೂರಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಜನವಾಸ್ತವ್ಯದ ನೆಲೆಗಳನ್ನು ಶೋಧಿಸಿದ್ದಾರೆ. ತಲ್ಲೂರಿನ ನೆಲೆಗಳ ಸಮೀಪದಲ್ಲಿಯೇ ಇತಿಹಾಸ ಪ್ರಾರಂಭ ಕಾಲದ ಜನವಸತಿ ಇದ್ದ ಒಂದು ನೆಲೆಯಿದೆ ಅಲ್ಲಿ ದೊರೆತಿರುವ ಪಾತ್ರೆಗಳ ಅವಶೇಷಗಳಿಂದ ಈ ನೆಲೆಯೂ ಕ್ರಿ.ಶ. ಪೂರ್ವ ೨ನೇ ಶತಮಾನದ್ದೆಂದು ತರ್ಕಿಸಬಹುದಾಗಿದೆ. ಬೆಳಗಾವಿಯ ಹೊರವಲಯದ ವಡಗಾಂವ-ಮಾಧವಪುರದಲ್ಲಿ ಸುಮಾರು ೨೦೦೦ ವರ್ಷಗಳ ಹಿಂದಿನ ಪ್ರಾಚೀನ ನಗರದಂತೆ ಇಲ್ಲಿಯೂ ಒಂದು ಪಟ್ಟಣ ಇತ್ತೆಂದು ಅ. ಸುಂದರ ಅಭಿಪ್ರಾಯಪಟ್ಟಿದ್ದಾರೆ.

ಸವದತ್ತಿ ಪ್ರದೇಶವು ಕೂಹುಂಡಿ ೩೦೦೦ ಭಾಗ ವಾಗಿದ್ದು ಈ ಭಾಗವನ್ನು ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು ಹಾಗೂ ಸಾಮಂತ ರಾಜರುಗಳಾದ ರಟ್ಟರು, ಬೈಸರು, ಸೇವುಣರು, ವಿಜಯನಗರ ಸಾಮ್ರಾಜ್ಯದ ಜೊತೆಗೆ ದೇಶಗತಿಗಳ ಆಡಳಿತಕ್ಕೆ ಕರ್ನಾಟಕದ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿರುವುದನ್ನು ಕಾಣಬಹುದು. ಇಂತಹ ಐತಿಹಾಸಿಕ ಭವ್ಯ ಪರಂಪರೆಯ ಕುರುಹುಗಳನ್ನು ಸವದತ್ತಿ ಪ್ರದೇಶದ ಸುತ್ತಮುತ್ತಲ ಪ್ರದೇಶದಲ್ಲಿ ಕಾಣಬಹು ದಾಗಿದೆ. ಅಂತಹ ಪ್ರಾಚ್ಯಾವಶೇಷಗಳನ್ನು ಹೊಂದಿದ ಪ್ರದೇಶ ಗಳನ್ನು ಕಾಣಬಹುದಾಗಿದೆ.

ತಾಲ್ಲೂಕು ಕೇಂದ್ರವಾದ ಸವದತ್ತಿಯಿಂದ ಪೂರ್ವಕ್ಕೆ ೧೨ ಕಿ.ಮೀ. ಅಂತರದಲ್ಲಿ ಹಿರೇಕುಂಬಿ, ಚಿಕ್ಕುಂಬಿ, ಚುಳಕಿ, ಧಡೇರಕೊಪ್ಪ ಗ್ರಾಮಗಳಲ್ಲಿ ಪ್ರಾಚ್ಯಾವಶೇಷಗಳನ್ನು ಕಾಣಬಹುದಾಗಿದೆ. ಅವುಗಳನ್ನು ಈ ಕೆಳಗಿನ ಆಧಾರದ ಮೂಲಕ ನೋಡಬಹುದು.

೧. ಶಾಸನಗಳು

೨. ವೀರಗಲ್ಲುಗಳು

೩. ಮೂರ್ತಿಶಿಲ್ಪಗಳು

**ಶಾಸನಗಳು**

***ಹಿರೇಕುಂಬಿಯ ಹೊಸ ಶಾಸನ :** 'ಸುಗಂಧವರ್ತಿ ೧೨' ಎಂಬುವಲ್ಲಿ ಸುಗಂಧವರ್ತಿಯು ೧೨ ಗ್ರಾಮಗಳನ್ನು ಒಳಗೊಂಡಿದ್ದು ಅದರಲ್ಲಿ 'ಪೇರಗುಮ್ಮಿ' ಒಂದು ಇದು ಇಂದಿನ ಹಿರೇಕುಂಬಿ ಆಗಿದೆ. ಈ ಗ್ರಾಮದ ಕಲ್ಮೇಶ್ವರ ದೇವಸ್ಥಾನದ ಕಟ್ಟೆಯ ಮೇಲೆ ತಂದು ಇಟ್ಟಿರುವ ಮೂರ್ತಿಶಿಲ್ಪವೊಂದರ ಪಾದ ಪೀಠದ ಕೆಳಗೆ ಶಾಸನವನ್ನು ಕಾಣಬಹುದಾಗಿದೆ.



ಈ ಶಾಸನವು ಎರಡು ಸಾಲುಗಳಿಂದ ಕೂಡಿದ್ದು ಮೊದಲನೆಯ ಸಾಲು ಅರ್ಧವಾಗಿದ್ದು ಅದು ಅಸ್ಪಷ್ಟವಾಗಿದೆ. ಎರಡನೆಯ ಸಾಲು ಸ್ಪಷ್ಟವಾಗಿದ್ದು ಅರ್ಥೈಸಬಹುದು, ಕೊನೆಸಾಲಿನಲ್ಲಿ ವಿಷಯ ಅಸ್ಪಷ್ಟತೆಯಿಂದ ಕೂಡಿದೆ.

೧. [ಯಾಪ] ನೀಯ ಸಂಘದ

೨) ಸಿದ್ದಾಂತ ದೇವರ ಶೀಷ್ಯಪ ಪದ್ಮ [ನಂದಿ] [ವೀರ]

೩) ಕಟ್ಟಿಸಿದ ದೇವರು ......... ತಲೆ

ಈ ಶಾಸನವು ೧೨ನೇ ಶತಮಾನಕ್ಕೆ ಸಂಬಂಧಿಸಿದ್ದಾ ಗಿದ್ದು ಇದರಲ್ಲಿ ಸಿದ್ಧಾಂತ ದೇವರ ಶಿಷ್ಯ ಪದ್ಮ ನಂದಿ ಕಟ್ಟಿಸಿದ ಬಸದಿಯ ಉಲ್ಲೇಖವಿರಬಹುದೆಂದು ಊಹಿಸಬಹು ದಾಗಿದೆ.

*** ಚುಳಕಿಯ ಕಲ್ಮೇಶ್ವರ ದೇಗುಲದ ಹೊಸ ಶಾಸನ :** ಚಳಕಿ ಗ್ರಾಮವು ಸವದತ್ತಿಯಿಂದ ಪೂರ್ವಕ್ಕೆ ೧೮ ಕಿ.ಮೀ. ಅಂತರದಲ್ಲಿದ್ದು ಈ ಗ್ರಾಮದ ಕೆರೆಯ ದಂಡೆಯ ಮೇಲಿರುವ ಶ್ರೀ ಕಲ್ಮೇಶ್ವರ ದೇವಸ್ಥಾನದ ಎಡಗಡೆಯ ಕಟ್ಟೆಯ ಗೋಡೆಯಲ್ಲಿ ಶಾಸನವೊಂದು ಇದೆ. ಇದು ೫೨ ಇಂಚು ಉದ್ದ ೧೯ ಇಂಚು ಅಗಲವಾಗಿದ್ದು ಇದರಲ್ಲಿ ೮ ಶಾಸನ ಸಾಲುಗಳನ್ನು ಹೊಂದಿದೆ.



ಈ ಶಾಸನದಲ್ಲಿ ಶಕ ೧೧೯೪ಳರಲ್ಲಿ ಭಾದ್ರಪದ ಸೋಮವಾರದಂದು ಬೈತಿಮಯ್ಯ ಮಠಪತಿ ಸಾ॥ ಚಳಕಿ ಎಂಬುವರು ಈ ದೇವಾಲಯವನ್ನು ಕಟ್ಟಿಸಿದ ಉಲ್ಲೇಖವಿದೆ ಯಾದರು ಇನ್ನೂ ಅಸ್ಪಷ್ಟತೆಯಿಂದ ಕೂಡಿದ್ದರಿಂದ ಇದರ ಸರಿಯಾದ ಪಠ್ಯವನ್ನು ತಿಳಿಯಲು ಡಾ. ಶ್ರೀನಿವಾಸ ಪಾಡಿಗಾರ ಇವರಿಗೆ ಕೊಡಲಾಗಿದೆ.

### ವೀರಗಲ್ಲುಗಳು

*** ವೀರಗಲ್ಲು-೧ :** ಹಿರೇಕುಂಬಿ ಗ್ರಾಮದ ನಿವೃತ್ತ ಶಿಕ್ಷಕರಾದ ಶ್ರೀ ಅಲ್ಲಪ್ಪ ಬಸಪ್ಪ ಹೂಲಿ ಎಂಬುವರು ಖುಲ್ಲಾ ಜಾಗದಲ್ಲಿ ಈ ವೀರಗಲ್ಲನ್ನು ಕಾಣಬಹುದಾಗಿದೆ. ಇದು ೬೯ ಇಂಚು ಎತ್ತರ ೨೭ ಇಂಚು ಅಗಲವಿದೆ. ಇದು ನಾಲ್ಕು ಹಂತಗಳನ್ನು ಹೊಂದಿದೆ ಇದು ಅಸ್ಪಷ್ಟವಾಗಿದೆ.

ಕೆಳಭಾಗದಲ್ಲಿ ವಿವಿಧ ಪ್ರಾಣಿಗಳ ಚಿತ್ರವಿದ್ದು ಅಸ್ಪಷ್ಟವಾಗಿವೆ ಎರಡನೇ ಭಾಗದಲ್ಲಿ ಕಾಡು ಹಂದಿಯೊಂದಿಗೆ ವೀರರು ಹೋರಾಡುತ್ತಿರುವ ದೃಶ್ಯವಿದ್ದು ಮೂರನೇ ಭಾಗದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಒಯ್ಯುವ ದೃಶ್ಯವಿದ್ದು ಕೊನೆಯ ಭಾಗದಲ್ಲಿ (ಮೇಲ್ಭಾಗದಲ್ಲಿ) ಸ್ವರ್ಗದಲ್ಲಿ ವೀರನಿಗೊಂದು ಸ್ಥಾನವನ್ನು ಕಲ್ಪಿಸಿಕೊಟ್ಟು ಆತನ ಸೇವೆಗೆ ದೇವಕನ್ಯೆಯರಿರುವುದನ್ನು ಕಾಣಬಹುದಾಗಿದೆ. ಪಟ್ಟಿಕೆಗಳಲ್ಲಿಯ ಲಿಪಿಯು ಅಸ್ಪಷ್ಟವಾಗಿದೆ.

*** ವೀರಗಲ್ಲು-೨ :** ಈ ವೀರಗಲ್ಲು ಹಿರೇಕುಂಬಿಯ ದೊಡ್ಡಲಿಂಗೇಶ್ವರ ದೇವಸ್ಥಾನದ ಮುಂದೆ ಇರುವ ಬಸವನ ಕಟ್ಟೆಯ ಮೇಲೆ ಈ ವೀರಗಲ್ಲಿದ್ದು ಈ ವೀರಗಲ್ಲಿನಲ್ಲಿ ದೊಡ್ಡದಾದ ಕುದುರೆ ಮೇಲೆ ವೀರನೊಬ್ಬನು ಕುಳಿತು ಯುದ್ಧ ಮಾಡುವ ದೃಶ್ಯವಿದ್ದು, ಬಲಗೈಯಲ್ಲಿ ಉದ್ದನೆಯ ಬರ್ಚಿಯನ್ನು ಎತ್ತಿ ಹಿಡಿದಿದ್ದಾನೆ. ಎಡಗೈಯಲ್ಲಿ ಕುದುರೆ ಲಗಾಮನ್ನು ಹಿಡಿದಿದ್ದಾನೆ. ಕುದುರೆಯ ಮುಖಕ್ಕೆ ದಪ್ಪನೆಯ ಕಬ್ಬಿಣದ ಮುಖವಾಡವನ್ನು ಹಾಕಿದ್ದಾರೆ.

*** ವೀರಗಲ್ಲು-೩ :** ಹಿರೇಕುಂಬಿಯಿಂದ ದಕ್ಷಿಣಕ್ಕೆ ಧಡೇರಕೊಪ್ಪಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿ ಶ್ರೀ ಸಿದ್ದಪ್ಪ ನವಲಗುಂದ ಎಂಬುವರ ಹೊಲದಲ್ಲಿ ಬೇವಿನ ಗಿಡದ ಕೆಳಗೆ ಇರುವ ವೀರಗಲ್ಲನ್ನು ಸ್ಥಾನಿಕವಾಗಿ ಈರಣ್ಣ > ವೀರಣ್ಣ ದೇವರೆಂದು ಪೂಜಿಸುತ್ತಿದ್ದರು. ಅಲ್ಲಿ ಹೋಗಿ ನೀಡಲಾಗಿ ಅದೊಂದು ವೀರಗಲ್ಲಾಗಿದ್ದು ೨೨ ಇಂಚು ಉದ್ದ ೧೯ ಇಂಚು ಅಗಲವಾಗಿದೆ.

ಈ ವೀರಗಲ್ಲಿನಲ್ಲಿ ವೀರನೊಬ್ಬನು ಬಲಗೈಯಲ್ಲಿ ಕತ್ತಿಯನ್ನು ಎಡಗೈಯಲ್ಲಿ ಡಾಲನ್ನು ಹಿಡಿದು ಹೋರಾಡುವ ಭಂಗಿಯಲ್ಲಿದ್ದಾನೆ. ತಲೆಯ ಮೇಲೆ ತುರುಬನ್ನು ಕಟ್ಟಿದ್ದಾನೆ ಹಾಗೂ ಧೋತಿಯನ್ನು ಧರಿಸಿಕೊಂಡಿದ್ದು ಹೋರಾಟದ ಭಂಗಿಯಲ್ಲಿದ್ದಾನೆ.

*** ಚಿಕ್ಕುಂಬಿಯ ಈ ತುರುಳ್ಗೋಳ ವೀರಗಲ್ಲು :** ಶಾಸನವು ಎರಡು ಭಾಗವಾಗಿ ಒಡೆದು ಹೋಗಿದ್ದು ಮೇಲಿನ ಅರ್ಧಭಾಗ ಶ್ರೀ ಕಲ್ಲೇಶ್ವರ ದೇವಸ್ಥಾನದಲ್ಲಿ ಉಳಿದರ್ದ ಊರಿನ



ಮಧ್ಯದಲ್ಲಿರುವ ಹಣಮಂತ ದೇವರ ಗುಡಿಯಲ್ಲಿದೆ. ಇದರ ಒಟ್ಟು ಉದ್ದ ೫೦ ಇಂಚು. ೨೯ ಅಗಲವಾಗಿದೆ.

ಇದು ಮೂರು ಪಟ್ಟಿಗೆಗಳನ್ನು ಒಳಗೊಂಡಿದ್ದು ಕೆಳಭಾಗದಲ್ಲಿ ತುರುಕಳ್ಳರು ಹಾಗೂ ವೀರರ ನಡುವೆ ಘೋರವಾದ ಹೋರಾಟ ನಡೆದಿದೆ. ಕಳ್ಳರು ಕುದುರೆಯ ಮೇಲಿಂದ ದಾಳಿ ಮಾಡಿದ್ದಾರೆ. ಎಮ್ಮೆ, ಎತ್ತು, ಆಕಳು, ಕುರಿ ಹಾಗೂ ಟಗರುಗಳು ದಿಕ್ಕಾಪಾಲಾಗಿ ಓಡುವ ದೃಶ್ಯವಿರುವುದನ್ನು ಕಾಣಬಹುದು.

ಮಧ್ಯಭಾಗದಲ್ಲಿ ಮೂರು ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯ, ಕೊನೆಯ ಭಾಗದಲ್ಲಿ ಮೂರು ವೀರರಿಗೆ ಸ್ವರ್ಗದಲ್ಲಿ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದನ್ನು ಕಾಣಬಹುದು. ಈ ವೀರಗಲ್ಲಿನ ಪಟ್ಟಿಕೆಗಳಲ್ಲಿ ಶಾಸನದ ಲಿಪಿಯಿದ್ದು ಬಹಳಷ್ಟು ತೃಟಿತಗೊಂಡು ಅಸ್ಪಷ್ಟವಾಗಿದೆ.

* **ವೀರಗಲ್ಲು-೫ :** ಇದು ಚಿಕ್ಕುಂಬಿಯ ಹಣಮಂತ ದೇವರ ಗುಡಿಯ ಮುಂದೆ ವೀರಗಲ್ಲೊಂದು ಇದ್ದು ಚಿಕ್ಕದಾಗಿದೆ. ಅದು ೩ ಹಂತಗಳಲ್ಲಿದ್ದು ಮೊದಲನೆ ಭಾಗದಲ್ಲಿ (ಕೆಳಭಾಗದಲ್ಲಿ) ಯುದ್ಧಕ್ಕೆ ಹೊರಟ ವೀರ ದೃಶ್ಯವಿದ್ದು ಅವರ ಕೈಯಲ್ಲಿ ವಿವಿಧ ಆಯುಧಗಳನ್ನು ಹೊಂದಿದ್ದಾರೆ. ಮಧ್ಯಭಾಗದಲ್ಲಿ ಸ್ವರ್ಗಕ್ಕೆ ಹೋಗುತ್ತಿರುವ ವೀರರ ದೃಶ್ಯ ಮೇಲ್ಭಾಗದಲ್ಲಿ ಸ್ವರ್ಗದಲ್ಲಿ ವೀರನಿಗೆ ಸ್ಥಾನ ಪ್ರಾಪ್ತಿಯಾಗಿರುವುದನ್ನು ಕಾಣಬಹುದಾಗಿದೆ.

* **ವೀರಗಲ್ಲು-೬ :** ಇದು ಚಿಕ್ಕುಂಬಿಯಿಂದ ೨ ಕಿ.ಮೀ. ಅಂತರದಲ್ಲಿ ಇರುವ ಶ್ರೀ ಶೇಖಪ್ಪ ಶಿರಸಂಗಿ ಎಂಬುವರ ಹೊಲವಾಗಿದ್ದು ಈ ಹೊಲಕ್ಕೆ 'ವೀರಗಲ್ಲು ಹೊಲ' ಎಂದು ಕರೆಯುತ್ತಾರೆ. ಅಲ್ಲಿ ಹೋಗಿ ನೋಡಿದಾಗ ಬನ್ನಿಗಿಡದ ಕೆಳಗೆ ಈರಣ್ಣ ದೇವರು ಎಂದು ಪೂಜಿಸುತ್ತಿದ್ದ ಕಲ್ಲಿದ್ದು ಅದು ವೀರಗಲ್ಲಾಗಿದ್ದು ಆಕರ್ಷಣೆಯವಾಗಿದೆ. ಹೋರಾಟದ ಭಂಗಿಯಲ್ಲಿದ್ದು ವಿಶಿಷ್ಟವಾದ ಪೋಷಾಕನ್ನು ಧರಿಸಿದ್ದಾನೆ. ಕೈಯಲ್ಲಿ ದೊಣ್ಣೆ ಆಕಾರದ ಆಯುಧವಿದೆ. ಈತನು ವಿಶಿಷ್ಟವಾದ ಮುಡಿಯನ್ನು ಕಟ್ಟಿದ್ದಾನೆ. ಕೊರಳಪಟ್ಟಿ, ಕೈಗಡಗ ಧರಿಸಿದ್ದಾನೆ. ವಿಶೇಷವೆಂದರೆ ಅದೇ ಕಲ್ಲಿನ ಕೆಳಭಾಗದಲ್ಲಿ ಅರ್ಧ ಕೆತ್ತಿದ ವೀರನ ಚಿತ್ರವಿದೆ.

* **ವೀರಮಾಸ್ತಿಕಲ್ಲು-೭ :** ಚುಳಕಿಯ ಶ್ರೀ ಕಲ್ಮೇಶ್ವರ ದೇವಸ್ಥಾನದಿಂದ ಮುಂದೆ ಸಾಗಿದಾಗ ಮಾನವ ನಿರ್ಮಿತವಾದ ಗವಿಯೊಂದು ಇದೆ. ಆ ಗವಿಯ ಮುಂದೆ ಬಲಭಾಗದ ಕಟ್ಟೆಯ ಮೆಲೆ ವೀರ ಮಾಸ್ತಿ ಕಲ್ಲನ್ನು ತಂದು ನಿಲ್ಲಿಸಲಾಗಿದೆ. ಈ ವೀರ ಮಾಸ್ತಿಯ ಮೇಲ್ಭಾಗದಲ್ಲಿ ಶಾಸನದ ಸಾಲೊಂದು ಇದೆ.



"ಶ್ರೀಮತ್ ಗುಜಯಲನ ಮಗ ಹಣುಮಣ್ಣ..." ಈ ಶಾಸನದ ಸಾಲಿನಿಂದಾಗಿ ಈ ವೀರಮಾಸ್ತಿಗಲ್ಲು 'ಗುಜಲಿ' ಎಂಬ ಬೇಡವಂಶದವನಾದ ಯಲ್ಲನ ಮಗ ಹಣುಮಣ್ಣನ ಕುರಿತದ್ದಾಗಿದೆ ಎಂದು ಅರ್ಥೈಸಬಹುದಾಗಿದೆ.

ಈ ವೀರ ಮಾಸ್ತಿಯಲ್ಲಿ ಎರಡು ಮೂರ್ತಿಗಳಿದ್ದು ಅವು ಸ್ತ್ರೀ-ಪುರುಷನ ಶಿಲ್ಪಗಳಾಗಿವೆ ವೀರನ ಕೈಯಲ್ಲಿ ಬಿಲ್ಲು ಬಾಣವನ್ನು ಹಿಡಿದು ಹೋರಾಟಕ್ಕೆ ಸಿದ್ಧವಾಗಿ ನಿಂತಿದ್ದಾನೆ ಬೆನ್ನ ಹಿಂದೆ ಬತ್ತಳಿಕೆಯಿದೆ, ಸೊಂಟದಲ್ಲಿ ಕತ್ತಿ ಕೊರಳ ಹಾರ ತುರುಬನ್ನು ಹಾಕಿಕೊಂಡಿದ್ದಾನೆ ಹಾಗೂ ಕಾಲಲ್ಲಿ ಕಡಗವನ್ನು ಧರಿಸಿದ್ದಾನೆ.

ಸ್ತ್ರೀ ಶಿಲ್ಪವು ಮಹಾಸತಿಯಾಗಿದ್ದು ಅದ್ಭುತ ಹಾಗೂ ವಿಶಿಷ್ಟವಾಗಿದೆ. ಶಿಲ್ಪವು ಸಮಭಂಗಿಯಲ್ಲಿ ಇರದೆ ನೃತ್ಯಭಂಗಿಯಲ್ಲಿದೆ. ತುಂಬಾ ಅಲಂಕಾರಿಕವಾಗಿದ್ದು ಸತಿಯು ತನ್ನ ಎಡಗೈಯಲ್ಲಿ ಲಿಂಬೆಹಣ್ಣು, ಬಲಗೈಯಲ್ಲಿ ಕನ್ನಡಿಯನ್ನು ಹಿಡಿದಿದ್ದಾಳೆ. ಕೊರಳಲ್ಲಿ ಅಲಂಕಾರಿಕ ಹಾರಗಳನ್ನು ಧರಿಸಿದ್ದಾಳೆ ನೃತ್ಯಗಾರ್ತಿಯರು ಧರಿಸುವ ಸೀರೆ ಹಾಗೂ

ಅದರ ಶೈಲಿಯನ್ನು ಇಲ್ಲಿ ಕಾಣಬಹುದು, ಈಕೆಯ ಕೇಶಾಲಂಕಾರವು ವಿಶಿಷ್ಟ ಬಗೆಯದಾಗಿದೆ.* (ಈ ಸ್ತ್ರೀಯ ಶಿಲ್ಪವು ಮೇಲಿನ ವಿವರಣೆ ಮೂಲಕ ಇದು ವಿಜಯನಗರ ಕಾಲದ್ದು ಎಂದು ಡಾ. ಕರುಣಾ ವಿಜೇಂದ್ರ ಗುರುತಿಸಿದ್ದಾರೆ.)

**ಮೂರ್ತಿ ಶಿಲ್ಪಗಳು**

* **ತೀರ್ಥಂಕರ ಶಿಲ್ಪ–೧ :** ಈ ಶಿಲ್ಪವು ಚಿಕ್ಕುಂಬಿಯ ಹಣಮಂತ ದೇವರ ಗುಡಿಯಲ್ಲಿ ಈ ಶಿಲ್ಪವನ್ನು ತಂದು ಇಟ್ಟಿದ್ದಾರೆ. ಶಿಲ್ಪವು ಧ್ಯಾನ ಸ್ಥಿತಿಯಲ್ಲಿದ್ದು ಓಂದೆ ಸರ್ಪದ



ಹೆಡೆಯನ್ನು ಕಾಣಬಹುದು ಜೊತೆಗೆ ಯಕ್ಷಿಣಿಯರು ಹಾಗೂ ತಲೆಯ ಮೇಲೆ ಬೆಳ್ಕೊಡೆ ಇರುವದರೊಂದಿಗೆ ಇದು ಅಪೂರ್ಣ ಶಿಲ್ಪವಾಗಿದೆ. ಇದು ಪಾರ್ಶ್ವನಾಥನ ತೀರ್ಥಂಕರನ ಶಿಲ್ಪವೇ? ಎಂಬ ಸಂದೇಶ ಉಂಟಾಗಿ ೨೪ನೇ ಕರ್ನಾಟಕ ಇತಿಹಾಸ ಅಕಾಡೆಮಿಯ ವಾರ್ಷಿಕ ಸಮ್ಮೇಳನದ ಗೋಷ್ಠಿಯಲ್ಲಿ ಚರ್ಚೆಯಾಗಿದ್ದು ಅದರ ನಿರ್ದಿಷ್ಟತೆ ಬಗ್ಗೆ ನಿರ್ಧಾರ ಬಂದಿಲ್ಲ ಹಾಗಾಗಿ ಇದರ ಮೇಲೆ ಇನ್ನೂ ಹೆಚ್ಚಿನ ಅಧ್ಯಯನ ಆಗಬೇಕಾಗಿದೆ.

* **ತೀರ್ಥಂಕರ ಶಿಲ್ಪ–೨ :** ಚಿಕ್ಕುಂಬಿಯ ಹಣಮಂತದೇವರ ಪಕ್ಕದ ಮನೆಯ ಕಟ್ಟೆಯ ಮೇಲೆ 'ಭರಮಪ್ಪ' ಎಂದು ಪೂಜಿಸುತ್ತಿದ್ದ ಮೂರ್ತಿಯನ್ನು ಸೂಕ್ಷ್ಮವಾಗಿ ನೋಡಿದಾಗ ಇದು ಜೈನ ತೀರ್ಥಂಕರ ಶಿಲ್ಪವಾಗಿದೆ. ಧ್ಯಾನಸ್ಥಿತಿಯಲ್ಲಿದ್ದು ಹಾಗೂ ಚಾಮರವನ್ನು ಅದರಲ್ಲಿ ಕಾಣಬಹುದಾಗಿದೆ.

* **ಸ್ತ್ರೀ ಮೂರ್ತಿ ಶಿಲ್ಪ–೨ :** ಹಿರೇಕುಂಬಿಯಿಂದ ದಕ್ಷಿಣಕ್ಕೆ ೮ ಕಿ.ಮೀ. ಅಂತರದಲ್ಲಿರುವ ಧಡೇರಕೊಪ್ಪ ಗ್ರಾಮ ಈ ಗ್ರಾಮದ ಹಳ್ಳದ ದಂಡೆಯ ಮೇಲೆ ಶ್ರೀರಾಯಸಾಬ ಫಕ್ಕಿರಸಾಬ ಎಂಬುವರ ಹೊಲದಲ್ಲಿ ಕರೆಮ್ಮನ ದೇವಸ್ಥಾನವಿದೆ ಆ ದೇವಸ್ಥಾನದ ಹಿಂದೆ ಎರಡು ಭಾಗವಾಗಿ ಒಡೆದು ಬಿದ್ದ ಮೂರ್ತಿಯನ್ನು ಹೊರತೆಗೆದು ಜೋಡಿಸಿದಾಗ ಅದೊಂದು ಅದ್ಭುತವಾದ ಹಾಗೂ ವಿಶಿಷ್ಟವಾದ ಸ್ತ್ರೀಮೂರ್ತಿ ಶಿಲ್ಪವಾಗಿತ್ತು.

ಮಂದಸ್ಮಿತ ಮುದ್ರೆಯಲ್ಲಿದ್ದು ಹಣೆಯ ಮೇಲೆ ಹಾಗೂ ತೋಳುಗಳಲ್ಲಿ ವಿಭೂತಿ ಧರಿಸಿದ್ದಾಳೆ ಕೊರಳಲ್ಲಿ ಮಾಂಗಲ್ಯ ಸಹಿತ ೮ ವಿವಿಧ ರೀತಿಯ ಹಾರಗಳನ್ನು ಧರಿಸಿದ್ದಾಳೆ ಕಿವಿಯಲ್ಲಿ ವಜ್ರಖಚಿತವಾದ ಬೆಂಡವೋಲೆ ಹಾಗೂ



ಬುಗಡಿಯನ್ನು ಧರಿಸಿದ್ದಾಳೆ ಕೈಯಲ್ಲಿ ಬಳೆಗಳು, ಪಾಟ್ಲಿ-ಬಿಲವಾರಗಳನ್ನು ಬೆರಳುಗಳಿಗೆ ಉಂಗುರುವನ್ನು ಕಾಲುಗಳಿಗೆ ಕಡಗವನ್ನು ಧರಿಸಿದ್ದಾಳೆ. ವಜ್ರದ ಮೂಗುತಿಯನ್ನು ಧರಿಸಿದ್ದಾಳೆ ಪೀಠದ ಮೇಲೆ ಧ್ಯಾನಸಕ್ತಳಾಗಿದ್ದು ತಲೆಯ ಮೇಲೆ ಕೂದಲು ಇಲ್ಲ. ಕೈಯಲ್ಲಿ ಲಿಂಗವಿದೆ, ಮೈಮೇಲೆ ತೆಳುವಾದ ·ಉತ್ತರೀಯವನ್ನು ಧರಿಸಿದ್ದಾಳೆ. ಪೀಠದ ಮೇಲ್ಭಾಗದಲ್ಲಿ ದುರ್ಗೆಯ ಮುಖಮುದ್ರೆಯನ್ನು ಕಾಣಬಹುದು.

ಇವೆಲ್ಲವುಗಳ ಆಧಾರದ ಮೇಲೆ ಇದು ಇತ್ತೀಚಿನ ಶಿವಶರಣೆಯರ ಶಿಲ್ಪವಾಗಿರಬಹುದೆಂದು ಊಹಿಸಲಾಗಿದೆ. ಆದರೆ ಯಾರದು ಎಂಬುದನ್ನು ಗುರುತಿಸಲು ಸಾಧ್ಯವಾಗಿಲ್ಲ.

ಈ ಮೇಲಿನ ಆಧಾರಗಳ ಮೇಲೆ ಸವದತ್ತಿಯ ಪ್ರಾಚೀನ ಸಂಸ್ಕೃತಿಯ ಬಗ್ಗೆ ವಿಶೇಷ ಬೆಳಕನ್ನು ಚೆಲ್ಲುವ ಅವು ಪೂರಕವಾಗಿರುವುದನ್ನು ಕಾಣಬಹುದಾಗಿದೆ.

(ಇಲ್ಲಿಯೇ ಹೊಸ ಶಾಸನಗಳನ್ನು ಓದಿ ಅರ್ಥೈಸಿಕೊಟ್ಟ ಡಾ. ಬಿ. ರಾಜಶೇಖರಪ್ಪ, ಡಾ. ಶ್ರೀನಿವಾಸ ಪಾಡಿಗಾರ್ ಅವರಿಗೆ ಕೃತಜ್ಞತೆಗಳು. ಈ ಲೇಖನ ಸಿದ್ಧಪಡಿಸಲು ಮಾರ್ಗದರ್ಶನ ನೀಡಿದ ಗುರುಮಾತೆಯರಾದ ಡಾ. ಶ್ರೀಮತಿ ಸ್ಮಿತಾ ಸುರೇಬಾನಕರ, ಡಾ. ಬಿ.ಆರ್. ಭಾರತೀ ಹಾಗೂ ಸ್ನೇಹಿತರಾದ ಬಿ.ಆಯ್. ಚಿನಗುಡಿಯವರಿಗೆ ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ಸಹೋದರ ಕಿರಣ ಸಿ. ಬಂಡಿ ಹಾಗೂ ರುದ್ರಗೌಡ ಬಿ. ಪಾಟೀಲರಿಗೆ ಧನ್ಯವಾದಗಳು)

## ಆಧಾರಸೂಚಿ

ಡಾ. ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.**

**ಜಾನಪದ ಸಾಹಿತ್ಯ ದರ್ಶನ,** ೧೦, ಡಾ. ಎಂ.ಎಂ. ಕಲಬುರ್ಗಿ (ಸಂ).

ಬಡ್ಲಿ ಶಾಸನ, ಕ್ರಿ.ಶ. ೧೨೪೯ ಕೆ.ಐ. ಸಂಪುಟ, ಪುಟ ೭೯.

ಡಾ. ಎಂ.ವಿ. ಪಾಟೀಲ, **ಸವದತ್ತಿ ರಟ್ಟರು,** ಪುಟ ೨೫.

ಡಾ. ಶಿ.ಬಾ. ಪಾಟಿಲ, **ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ.**

ಡಾ. ಎಚ್. ತಿಪ್ಪೇರುದ್ರಸ್ವಾಮಿ, **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ.**

ಡಾ. ಡಿ.ವಿ. ಪರಮಶಿವಮೂರ್ತಿ, **ಕನ್ನಡ ಶಾಸನ ಶಿಲ್ಪ.**

ಡಾ. ಬಿ. ಬಸವರಾಜು*
ಹೆಚ್.ಎನ್. ಕಾಳಸ್ವಾಮಿ**

# ಯಳಂದೂರು ತಾಲ್ಲೂಕು ಅಗರ ಗ್ರಾಮದ ಪ್ರಾಚ್ಯಾವಶೇಷಗಳು ಮತ್ತು ದೇಗುಲಗಳು

ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಅಗರ ಗ್ರಾಮವು ಒಂದು ಪ್ರಾಚೀನ ನೆಲೆಯಾಗಿದ್ದು ಧಾರ್ಮಿಕತೆಯೊಂದಿಗೆ ಆ ಕಾಲದ ರಾಜಕೀಯ, ಸಾಮಾಜಿಕ ಆರ್ಥಿಕ, ಶೈಕ್ಷಣಿಕ, ಹಾಗೂ ಸಾಂಸ್ಕೃತಿಕ ವಿದ್ಯಮಾನಗಳನ್ನು ಪ್ರತಿಬಿಂಬಿಸುವ ಸ್ಥಳವಾಗಿದೆ ತಲಕಾಡಿನ ಗಂಗರ ನಂತರ ತಂಜಾವೂರಿನ ಚೋಳರು ಕ್ರಿ.ಶ. ೧೦ನೇ ಶತಮಾನದ ಕೊನೆಯ ವೇಳೆಗೆ ಕರ್ನಾಟಕದ ಆಗ್ನೇಯ ಭಾಗಗಳನ್ನು ಆಕ್ರಮಿಸಿಕೊಂಡರು.[೧] ಸುಮಾರು ೧೨೦ ವರ್ಷಗಳ ಕಾಲ ಆಳ್ವಿಕೆ ನಡೆಸಿದರು. ಇಲ್ಲಿ ಸುಮಾರು ೭೯ ಶಾಸನಗಳು[೨] ದೊರೆತಿದ್ದು ತನ್ನದೇ ಆದ ಪರಂಪರೆ ಹಾಗೂ ಸಂಸ್ಕೃತಿಯನ್ನು ಹೊಂದಿದೆ. ಯಾವುದೇ ಒಂದು ಪ್ರದೇಶದ ಪೂರ್ವ ಇತಿಹಾಸವನ್ನು ತಿಳಿಯಬೇಕಾದರೆ ಆ ಪ್ರದೇಶದ ಭೌಗೋಳಿಕ ವೈಶಿಷ್ಟ್ಯತೆಗಳು ಮತ್ತು ಮಾನವನ ಜೀವನ ವಿಧಾನಗಳನ್ನು ಸಂಸ್ಕೃತಿಯ ಬೆಳವಣಿಗೆಯ ವಾತಾವರಣವನ್ನು, ಮೇಲ್ಮೈ ಲಕ್ಷಣಗಳನ್ನು ಪ್ರಮುಖವಾಗಿ ಗಮನಿಸಬೇಕು. ಈ ಹಿನ್ನಲೆಯಿಂದ ಅಗರ ಗ್ರಾಮವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇಲ್ಲಿ ಸುಮಾರು ೨೦ ಎಕರೆ ಭೂಪ್ರದೇಶದಲ್ಲಿ ಅಂದಿನ ಕಾಲದ ಜನರು ಬಳಸುತ್ತಿದ್ದ ಮಡಕೆಯ ಚೂರುಗಳನ್ನು ಪತ್ತೆಮಾಡಲಾಗಿದೆ.[೩]

ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ಶಿಲಾಯುಗ ಕಾಲದ ಸಂಸ್ಕೃತಿ ಅವಶೇಷಗಳು ದೊರೆತಿವೆ. ಕ್ರಿ.ಶ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಭಾರತೀಯ ಪೂರ್ವ ಇತಿಹಾಸದ ಪಿತಾಮಹರಾದ ರಾಬರ್ಟ್ ಬ್ರೂಸ್‌ಫುಟ್ ರವರು ಭೂಗರ್ಭಶಾಸ್ತ್ರಕ್ಕೆ ಸಂಬಂಧಿಸಿದಂತೆ ಅನ್ವೇಷಣೆಯಲ್ಲಿ ತೊಡಗಿದ್ದು, ಕರ್ನಾಟಕದ ಹಲವೆಡೆಗಳಲ್ಲಿ ಆಯಾ ಕಾಲಕ್ಕೆ ಸೇರಿರುವ ಅವಶೇಷಗಳನ್ನು ಕಂಡುಹಿಡಿದಿರುವುದು ತಿಳಿದುಬರುತ್ತದೆ. (ಚಿತ್ರ -೧) ಕೆಲವೊಂದು ಕಡೆಗಳಲ್ಲಿ ನೂತನ ಶಿಲಾಯುಗ, ಕಬ್ಬಿನ ಯುಗ, ಇತಿಹಾಸ ಪೂರ್ವಯುಗದ ಬಗ್ಗೆ ತಿಳಿದುಬರುವ ಕೆಲವು ನವಶಿಲಾಯುಗದ ಮಡಿಕೆಗಳು, ಮಾಸಲು ಬೂದುಬಣ್ಣದ ಹೊದಿಕೆ, ಸುಟ್ಟ ಕಪ್ಪು ಮತ್ತು ಕೆಂಪು ಬಣ್ಣದ ಹೊದಿಕೆ ಅಲ್ಲದೆ ಬೂದು ಮಿಶ್ರಿತ ಹೊದಿಕೆಯಿರುವ ಮಡಿಕೆ ಚೂರುಗಳು ದೊರೆತಿರುವ ನೆಲೆಗಳನ್ನು ಕೆಲವು ವಿದ್ವಾಂಸರು ಗುರುತಿಸಿರುತ್ತಾರೆ.[೪] ಇದೇ ರೀತಿಯ ಅವಶೇಷಗಳು ಯಳಂದೂರು ತಾಲ್ಲೂಕಿನ ಅಗರ ಗ್ರಾಮದಲ್ಲಿ ಕಂಡುಬಂದಿರುವುದರಿಂದ ಇದೊಂದು ಪ್ರಾಚೀನ ನೆಲೆಯೆಂದು ಹೇಳಬಹುದಾಗಿದೆ. ಈ ನೆಲೆಯ ಬಗ್ಗೆ ಪ್ರಜಾನುಡಿ, ದಿನಪತ್ರಿಕೆಯಲ್ಲಿ ದಿನಾಂಕ: ೧೨-೦೮-೨೦೧೦ರಂದು ಪ್ರಕಟವಾಗಿದೆ. ಈ ಊರಿನಲ್ಲಿಯೂ ಕೆಲವು ಸುಟ್ಟ ಮಡಕೆ ಚೂರುಗಳು, ಕೈಯಿಂದ ಮಾಡಿದ ಮಡಕೆಯ ಚೂರುಗಳು, ಚಕ್ರದಿಂದ ಮಾಡಿದ ಮಡಕೆಯ ಚೂರುಗಳು ಕಂಡುಬರುತ್ತವೆ. ಅಲ್ಲದೆ ಬೂದು ಕಂದು ಬಣ್ಣದ ಹೊದಿಕೆ, ಸುಟ್ಟ ಬೂದು ಬಣ್ಣದ ಹೊದಿಕೆ ಮತ್ತು ಕಪ್ಪು ಕೆಂಪು ಬಣ್ಣದ ಹೊದಿಕೆಗಳನ್ನು ಹೊಂದಿರುವ ಮಡಕೆಯ ಚೂರುಗಳು ದೊರೆತಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಈ ಸ್ಥಳದಲ್ಲಿ ಬಿಳಿಯ ಮತ್ತು ಕಪ್ಪು ಬಣ್ಣದ ಮಡಕೆಯ ಚೂರುಗಳು ಇಲ್ಲಿ ಸಿಗುವುದರಿಂದ ಕಬ್ಬಿನ ಯುಗಕ್ಕೆ ಹೋಲಿಕೆ ಮಾಡಬಹುದಾಗಿದೆ. ಈ ಎಲ್ಲಾ ಆಧಾರಗಳಿಂದ ಅಗರ ಗ್ರಾಮ ಕ್ರಿ.ಪೂ. ೨ನೇ ಶತಮಾನದಿಂದ ಪ್ರಾರಂಭವಾಗಿ ಕ್ರಿ.ಶ.ದ ಪ್ರಾರಂಭದವರೆಗೆ ಮಾನವನ ಚಟುವಟಿಕೆಯ ಕೇಂದ್ರವಾಗಿತ್ತೆಂದು ತಿಳಿಯಬಹುದಾಗಿದೆ.[೫] ಆದರೆ ಈ ಗ್ರಾಮದಲ್ಲಿ ತಂಜಾವೂರಿನ ಚೋಳರ ಕಾಲಕ್ಕೆ ಸೇರಿದ ಶಾಸನಗಳು ಹೇರಳವಾಗಿ ಕಂಡುಬರುತ್ತವೆ. ತದನಂತರದ ಬೆಳವಣಿಗೆಯಲ್ಲಿ ಹೊಯ್ಸಳ, ವಿಜಯನಗರ ಅರಸರು, ಮೈಸೂರಿನ ಒಡೆಯರು, ಉಮ್ಮತ್ತೂರಿನ ಪಾಳೇಯಗಾರರು, ನಂದಾಳ್ಯರು ಇನ್ನಿತರರು ಆಳ್ವಿಕೆ ನಡೆಸಿರುವುದರ ಬಗ್ಗೆ ಇಲ್ಲಿ ದೊರೆಯುವ ಶಾಸನಗಳಿಂದ ದೃಢಪಡುತ್ತದೆ.[೬]

ಈ ಗ್ರಾಮದಲ್ಲಿ ಚೋಳರ ಕಾಲಕ್ಕೆ ಸೇರಿದ ಐದು ದೇವಾಲಯಗಳಿವೆ. ಅವುಗಳಲ್ಲಿ ೧) ದುರ್ಗಾ ದೇವಾಲಯ, ೨) ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯ, ೩) ರಾಮೇಶ್ವರ ದೇವಾಲಯ, ೪) ವರದರಾಜಸ್ವಾಮಿ ದೇವಾಲಯ ಹಾಗೂ

* ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮಾನಸ ಗಂಗೋತ್ರಿ, ಮೈಸೂರು.
** ಪ್ರಾದೇಶಿಕ ನಿರ್ದೇಶಕರು, ಕ.ರಾ.ಮು.ವಿ.ವಿ., ಚಾಮರಾಜನಗರ.

೫) ಸೋಮೇಶ್ವರ ದೇವಾಲಯಗಳು.[೭] ಅಲ್ಲದೇ ಇನ್ನಿತರ ಕಾಲಕ್ಕೆ ಸೇರಿದಂತೆ ದಂಡಿಮಾರಮ್ಮ ನ ದೇವಾಲಯ, ಶ್ರೀ ಕೈಲಾಸೇಶ್ವರ ದೇವಾಲಯ, ಶ್ರೀ ಬಸವೇಶ್ವರ ದೇವಾಲಯ, ಶ್ರೀ ಕಾಳಮ್ಮ ದೇವಾಲಯ, ವೀರಾಂಜನೇಯ ದೇವಾಲಯ ಗಳಿವೆ. ಇವುಗಳೆಲ್ಲವೂ ಸಹ ಶುದ್ಧ ದ್ರಾವಿಡ ಶೈಲಿಯಲ್ಲಿ ನಿರ್ಮಾಣಗೊಂಡಿವೆ. ಆದರೆ ಈ ದೇವಾಲಯಗಳ ಬಗ್ಗೆ ವಾಸ್ತುರಚನಾ ನೋಟ ಕುರಿತು ಹೆಚ್ಚಿನ ಮಾಹಿತಿಯನ್ನು ಈ ಪ್ರಬಂಧದಲ್ಲಿ ನೀಡಿಲ್ಲ. ಆದರೆ ಇಲ್ಲಿ ಕಂಡುಬರುವ ಶಿಲ್ಪಗಳ ಮತ್ತು ಕಂಚು ಶಿಲ್ಪಗಳ ಬಗ್ಗೆ ಮಾಹಿತಿಯನ್ನು ಸ್ವವಿವರವಾಗಿ ನೀಡಲಾಗಿದೆ. ವಿಶೇಷವಾಗಿ ಈ ಗ್ರಾಮದ ರಾಮೇಶ್ವರ ದೇವಾಲಯದಲ್ಲಿ ಕಂಚು ಶಿಲ್ಪಗಳು ಕಂಡುಬಂದಿದ್ದು, ಕಂಚು ಶಿಲ್ಪಗಳಲ್ಲಿ ಪಾರ್ವತಿ ಶಿಲ್ಪ, ದೇವಿಶಿಲ್ಪ, ನಟರಾಜನ ಶಿಲ್ಪ ಹಾಗೂ ತ್ರಿಶೂಲ ಇರುವ ಕಂಬವಿದೆ. ಅಲ್ಲದೆ ಇಲ್ಲಿ ವೀರಭದ್ರ ಗಣೇಶನ ಶಿಲ್ಪ, ವಿಷ್ಣು ಶಿಲ್ಪ, ದಕ್ಷಿಣಮೂರ್ತಿ, ಭೈರವಶಿಲ್ಪ, ಮತ್ತೊಂದು ಗಣಪತಿ, ವೀರಗಲ್ಲು, ಸಿಂಹಶಿಲ್ಪಗಳು ಕಂಡುಬರುತ್ತದೆ, ಇವುಗಳ ರಚನಾ ನೋಟವನ್ನೂ ಸಹ ಸ್ವವಿವರವಾಗಿ ನಿರೂಪಿಸಲಾಗಿದೆ.

**ಕಂಚು ಶಿಲ್ಪಗಳು:** ಭಾರತದಲ್ಲಿ ಲೋಹ ಶಿಲ್ಪಕಲೆ ಅತ್ಯಂತ ಪ್ರಾಚೀನವಾದದ್ದು. ಕ್ರಿ.ಪೂ. ೩ನೇಯ ಶತಮಾನ ದಲ್ಲಿಯೇ ಅಂದರೆ ಹರಪ್ಪ ಸಂಸ್ಕೃತಿಯಲ್ಲಿ ದೊರೆತಿರುವ ಕೆಲವೊಂದು ಸಣ್ಣ ಶ್ರೀಮೂರ್ತಿ ಶಿಲ್ಪ ನಿರೂಪಣೆಯಲ್ಲಿ ಅಸಾಧಾರಣ ಕೌಶಲ್ಯ ಮೂಡಿಬಂದಿದೆ. ತನ್ನ ಸಮಕಾಲೀನ ವಾದ ಇನ್ನಿತರ ಸಂಸ್ಕೃತಿಗಳಿಗಿಂತ ಲೋಹ ವಿಜ್ಞಾನದಲ್ಲಿ ಮುಂದುವರೆದಿದೆ ಹಾಗೂ ವೈದಿಕ ಯುಗದಲ್ಲಿಯೇ ಲೋಹ ಶಿಲ್ಪ ಜ್ಞಾನ ಚೆನ್ನಾಗಿ ಬೆಳೆದು ಬಂದಿದೆ ಎಂಬುದು ಸಾಕಷ್ಟು ಪುರಾವೆಗಳಿಂದ ತಿಳಿದುಬರುತ್ತದೆ. ಯಜುರ್ವೇದವು ಲೋಹಶಿಲ್ಪವನ್ನೂ ಸೃಷ್ಟಿಕರ್ತನೆಂದೇ ಹೇಳುತ್ತದೆ. ಈ ಹಿನ್ನೆಲೆಯಲ್ಲಿ ರಾಮಾಯಣ, ಮಹಾಭಾರತ ಕಾಲದಲ್ಲಿಯೂ ಲೋಹ ಶಿಲ್ಪಕಲೆ ಹೆಚ್ಚಾಗಿ ಉಪಯೋಗದಲ್ಲಿತ್ತು ಎಂಬುದಕ್ಕೆ ಸಾಕಷ್ಟು ಮಾಹಿತಿಗಳು ದೊರಕುತ್ತವೆ. ಅಲ್ಲದೇ ದಕ್ಷಿಣ ಭಾರತದಲ್ಲಿಯೂ ಸಾಕಷ್ಟು ಪ್ರವರ್ಧಮಾನವಾಗಿ ಬೆಳೆದಿತ್ತು. ಹಾಗೂ ನೆರೆಯ ತಮಿಳುನಾಡಿನಲ್ಲಿ ಸಾಕಷ್ಟು ಕಡೆ ಉತ್ಖನನದಲ್ಲಿ ಕಂಚಿನ ಶಿಲ್ಪಗಳು ದೊರೆತಿವೆ. ಕರ್ನಾಟಕದಲ್ಲಿ ಲೋಹಶಿಲ್ಪಕಲೆ ತಾಮ್ರ ಶಿಲಾಯುಗ ಕಾಲದಿಂದ ಪ್ರಾರಂಭವಾಗಿದ್ದು, ಇದನ್ನು ಕ್ರಿ.ಪೂ. ೧೦೦೦ಕ್ಕೆ ಸೇರಿದವೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಈ ಸಂಸ್ಕೃತಿಯ ನಿವೇಶನಗಳಾದ ಹಳ್ಳೂರು, ತೆಕ್ಕಲಕೋಟೆ, ಪ್ರದೇಶಗಳಲ್ಲಿ ಕಂಚಿನ ವಸ್ತುಗಳು ಬಳಕೆಯಲ್ಲಿತೆಂಬುದಕ್ಕೆ ಸಾಕಷ್ಟು ಆಧಾರಗಳು ದೊರೆತಿವೆ. ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನ ಲೋಹ ಕಲಾಕೃತಿಗಳು ಶಾತವಾಹನರ ಕಾಲದಿಂದ ಪ್ರಾರಂಭ ವಾಗಿದೆ. ಕ್ರಿ.ಶ. ೧೧ನೇ ಶತಮಾನದ ಕೊನೆಗೆ ಕರ್ನಾಟಕದ ಆಗ್ನೇಯ ಭಾಗಗಳು ಚೋಳರ ಆಳ್ವಿಕೆಗೆ ಒಳಪಟ್ಟಿದ್ದವು. ಈ ಪ್ರಾಂತ್ಯದಲ್ಲಿ ಚೋಳರ ಕಂಚು ಶಿಲ್ಪ ಶೈಲಿಯ ಪ್ರಭಾವನ್ನು ಹೊಂದಿರುವ ಕಂಚಿನ ಮೂರ್ತಿಗಳು ಆಗ್ನೇಯ ಕರ್ನಾಟಕದ ವಿವಿಧ ಭಾಗಗಳಲ್ಲಿ ಕಂಡುಬರುತ್ತದೆ, ಉದಾಹರಣೆಗೆ ಕೋಲಾರ, ನರಸಮಂಗಲ, ಬೆಂಗಳೂರು, ಗುಂಡ್ಲುಪೇಟೆ, ನಂಜನಗೂಡು, ತೆರಕಣಾಂಬಿ, ತಿರುಮಕೂಡಲು ನರಸೀಪುರ, ಮೈಸೂರು ಇನ್ನೂ ಮುಂತಾದ ಕಡೆಗಳಲ್ಲಿ ಕಂಚು ಶಿಲ್ಪಗಳು ಕಂಡುಬರುತ್ತವೆ. ಅದೇ ರೀತಿ ನನ್ನ ಸಂಶೋಧನಾ ಹಿನ್ನೆಲೆ ಯಲ್ಲಿ ಅಗರ ಗ್ರಾಮದ ರಾಮೇಶ್ವರ ದೇವಾಲಯದಲ್ಲಿ ಚೋಳರ ಕಾಲಕ್ಕೆ ಪೂರಕವಾದ ಕಂಚು ಶಿಲ್ಪಗಳು ದೊರೆತಿವೆ ಎಂದು ಹೇಳಬಹುದು. ವೈಜ್ಞಾನಿಕ ದೃಷ್ಟಿಕೋನದಿಂದ ಶಿಲ್ಪಕಲೆಯ ಬಗ್ಗೆ ಹೇಳುವುದಾದರೆ ಇಲ್ಲಿ ಕಂಡುಬರುವ ಶಿಲ್ಪಗಳು ಚೋಳರ ಕಾಲದ ಪ್ರಭಾವದ ಜೊತೆಗೆ ನಂತರ ಕಾಲದ ಶಿಲ್ಪಗಳು ದೊರೆತಿವೆ.

ಅಗರ ಗ್ರಾಮದ ರಾಮೇಶ್ವರ ದೇವಾಲಯ[೮]ದಲ್ಲಿ ಕಂಡುಬರುವ ಶಿಲ್ಪಗಳ ವಿವರ ಈ ಕೆಳಕಂಡಂತಿದೆ:

**ಪಾರ್ವತಿ ಶಿಲ್ಪ (ಚಿತ್ರ-೨):** ಶಿವನ ಪಕ್ಕದಲ್ಲಿ ಪಾರ್ವತಿ ಮೂರ್ತಿಯ ಶಿಲ್ಪವನ್ನು ಇಡಲಾಗಿದೆ. ದೇವಿ ಪಾರ್ವತಿಯ ಶಿಲ್ಪವು ತುಂಬಾ ಸುಂದರವಾಗಿ ಮೂಡಿಬಂದಿದ್ದು ಸುಂದರವಾದ ವಸ್ತ್ರವಿನ್ಯಾಸವನ್ನು ಧರಿಸಿರುತ್ತಾಳೆ. ಬಳಕುವ ಸೊಂಟ, ತುಂಬಿದ ಎದೆ, ಕಂಠದಲ್ಲಿ ಮಣಿಸರಗಳನ್ನು ಹಾಕಿದ್ದು, ಎರಡು ಕೈಗಳನ್ನು ಹೊಂದಿದ್ದು ಒಂದು ಕೈಯನ್ನು ಕೆಳಗೆ ಬಿಟ್ಟು ಮತ್ತೊಂದು ಕೈಯನ್ನು ಮೇಲೆ ಎತ್ತಿದ್ದು ಒಂದು ಸುಂದರವಾದ ಕಮಲದ ಮೊಗ್ಗನ್ನು ಹಿಡಿದಿರುವುದು ಕಂಡುಬರುತ್ತದೆ. ಕಾಲ್ಕಡಗ, ಕೈಬಳೆ, ಕರ್ಣಕುಂಡಲ, ತಲೆಯ ಮೇಲೆ ಕಿರೀಟ ಮೂಡಿ ಬಂದಿದೆ. ಈ ಮೂರ್ತಿ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಪ್ರಾಯಶಃ ಕ್ರಿ.ಶ. ೧೪-೧೫ನೇ ಶತಮಾನಕ್ಕೆ ಸೇರಿರಬಹುದೆಂದು ಊಹಿಸಬಹುದಾಗಿದೆ.

**ದೇವಿ ಶಿಲ್ಪ (ಚಿತ್ರ-೩):-** ಈ ಶಿಲ್ಪವು ಸಹ ಮೇಲೆ ತಿಳಿಸಿರುವ ಶಿಲ್ಪದ ಮಾದರಿಯಲ್ಲಿಯೇ ಮೂಡಿಬಂದಿದೆ. ಆದರೆ ಕೆಲವೊಂದು ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ತೋಳು ಕಡಗಗಳು, ಕಂಠಾಭರಣ, ಕರ್ಣಕುಂಡಲ, ತಲೆಯಮೇಲೆ ಏರುವಿನ್ಯಾಸವಿರುವ ಸುಂದರವಾದ ಕಿರೀಟವನ್ನು ದೇವಿ ಹೊಂದಿದ್ದಾಳೆ. ಈ ಶಿಲ್ಪವು ಶಿಲ್ಪಕಲಾ ದೃಷ್ಟಿಯಿಂದ ಯೌವ್ವನದ ಪ್ರತೀಕವಾದ ಸಂಕೇತವನ್ನು ಮಾಡಿಸುವಂತಹ ಗಾಂಭೀರ್ಯವುಳ್ಳ ಶಿಲ್ಪವಾಗಿದೆ ಎಂದು ಹೇಳಬಹುದು.



ಪಾರ್ವತಿ ಶಿಲ್ಪ.



ದೇವಿ ಶಿಲ್ಪ.



ನಟರಾಜ ಶಿಲ್ಪ



ಕಂಬ ಅಥವಾ ಸ್ತಂಭ



ಗಣೇಶನ ಶಿಲ್ಪ



ದಕ್ಷಿಣ ಶಿಲ್ಪ



ಮಡಿಕೆ ಅವಶೇಷಗಳು



ಬಿಡಿ ಶಿಲ್ಪಗಳು



ಸಿಂಹ ಶಿಲ್ಪ



ಭೈರವ ಶಿಲ್ಪ



ವಿಷ್ಣು ಶಿಲ್ಪ



ವೀರಗಲ್ಲು



ವೀರಭದ್ರ ಶಿಲ್ಪ

**ನಟರಾಜ ಶಿಲ್ಪ (ಚಿತ್ರ ೪):** ಈ ನಟರಾಜ ಮೂರ್ತಿಯು ತಂಜಾವೂರಿನ ಚೋಳರ ಕಾಲದ ಮೂರ್ತಿ ಎಂದು ಪರಿಗಣಿಸಬಹುದಾಗಿದೆ. ಈ ಶಿಲ್ಪದಲ್ಲಿ ಒಂದು ಕಾಲನ್ನು ಮೇಲೆತ್ತಿದ್ದು ಮತ್ತೊಂದು ಕಾಲನ್ನು ವ್ಯಕ್ತಿಯ ಮೇಲೆ ಹಾಕಿರುವುದನ್ನೂ ಗಮನಿಸಿದರೆ ಇದೊಂದು ನೃತ್ಯ ಮಾಡುತ್ತಿರುವ ಭಂಗಿಯಲ್ಲಿದೆ ಎಂಬುದನ್ನು ಕಾಣಬಹುದಾಗಿದೆ. ಹಾಗೂ ಒಂದು ಕೈಯಲ್ಲಿ ದೀಪವನ್ನು ಬೆಳಗಿಸುವ ಮಾದರಿಯಲ್ಲಿ ಮತ್ತೊಂದು ಕೈಯಲ್ಲಿ ಅಭಯಹಸ್ತ ನೀಡುತ್ತಿರುವುದು ಮೂಡಿಬಂದಿದೆ. ಭುಜದ ಮೇಲೆ ಭುಜಕಿರೀಟವಿದ್ದು ತಲೆಯ ಮೇಲೆ ಸರ್ಪದ ಮಾದರಿಯ ಇಳಿಬಿಟ್ಟ ಕಿರೀಟಧಾರೆಯನ್ನು ಧರಿಸಿರಿವುದು ಕಂಡುಬರುತ್ತದೆ. ಒಟ್ಟಾರೆ ಹೇಳುವುದಾದರೆ ಈ ಶಿಲ್ಪವು ಚೋಳರ ಕಾಲದಲ್ಲಿಯೇ ನಿರ್ಮಿಸಲ್ಪಟ್ಟ ಪ್ರಮುಖ ಶಿಲ್ಪವೆಂದು ಪರಿಗಣಿಸಬಹುದಾಗಿದೆ.

**ಕಂಬ ಅಥವಾ ಸ್ತಂಭ (ಚಿತ್ರ-೫):** ಈ ಕಂಬವನ್ನು ಸೂಕ್ಷ್ಮವಾಗಿ ನೋಡಿದರೆ ಚೋಳ ವಾಸ್ತು ಮಾದರಿಯಲ್ಲಿಯೇ ಮೂಡಿ ಬಂದಿರುವುದು ಕಂಡು ಬರುತ್ತದೆ. ಆದರೆ ಮೇಲ್ಭಾಗದಲ್ಲಿ ಇತ್ತೀಚೆಗೆ ತ್ರಿಶೂಲವನ್ನು ಸೇರಿಸಲಾಗಿದೆ. ಈ ಭಾಗದಲ್ಲಿ ಅಲಂಕಾರಿಕ ಅರೆಗಂಬಗಳನ್ನು ಮಾಡಿಸಿ ದಾನವಾಗಿ ನೀಡಿರಬಹುದೆಂದು ಊಹಿಸಬಹುದಾಗಿದೆ.

ಅಗರ ಗ್ರಾಮದಲ್ಲಿ ಶಿಲಾ ಶಿಲ್ಪಗಳು ಸಹ ಕಂಡು ಬರುತ್ತವೆ. ವಾಸ್ತುಶಿಲ್ಪ ಲಕ್ಷಣಕ್ಕಿಂತಲೂ ಮೂರ್ತಿಶಿಲ್ಪಗಳಿಗೆ ಪ್ರಾಚೀನವಾದ ಇತಿಹಾಸವಿದೆ. ಭಾರತದಲ್ಲಿ ಕ್ರಿ.ಪೂ. ೩೦೦೦ಕ್ಕೆ ಮುನ್ನ ಅನೇಕ ಸುಂದರವಾದ ಮೂರ್ತಿಗಳು ಕಂಡುಬರುತ್ತವೆ. ಶಿವ,ಲಿಂಗ, ವೃಷಭ ಇನ್ನಿತರ ಅನೇಕಾನೇಕ ಶಿಲ್ಪಗಳು ಹಿಂದೂ ಸಂಸ್ಕೃತಿಯಲ್ಲಿ ಕಂಡು ಬರುತ್ತವೆ. ವೈದಿಕ ಯುಗದಲ್ಲಿ ವಿಗ್ರಹಗಳಿಗೆ ಪ್ರಾಮುಖ್ಯತೆ ಇರಲಿಲ್ಲವೆಂದು ಪ್ರಕೃತಿ ಶಕ್ತಿಗಳನ್ನೇ ಪೂಜಿಸಲಾಗುತ್ತಿತ್ತೆಂದು ಹೇಳುವುದುಂಟು. ಆದರೆ ಇಂದ್ರ, ವರುಣ, ರುದ್ರ ಮೊದಲಾದ ದೇವತೆಗಳಿಗೆ ಮನುಷ್ಯನಾಕಾರದ ಕಲ್ಪನೆಯನ್ನು ಕೊಟ್ಟಿರುವುದು ಸಹ ಕಾಣಬರುತ್ತದೆ. ಚಾರಿತ್ರಿಕ ಯುಗಕ್ಕೆ ಬಂದರೆ ಅತ್ಯಂತ ಪ್ರಾಚೀನವಾದ ಶಿಲ್ಪಲಕ್ಷಣಗಳು, ಶಿಲ್ಪಕೃತಿಗಳು ಮೌರ್ಯರ ಕಾಲದಿಂದ ಕಂಡುಬರುತ್ತದೆ. ಅಗರ ಗ್ರಾಮದಲ್ಲಿಯೂ, ದೇವಾಲಯಗಳಲ್ಲಿ ಬಿಡಿ ಶಿಲ್ಪಗಳು, ಮೂರ್ತಿಶಿಲ್ಪಗಳು ಕಂಡುಬಂದಿದ್ದು ಅವುಗಳ ವಿವರಣೆಯನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಗಣೇಶನ ಶಿಲ್ಪ (ಚಿತ್ರ-೬):** ನವರಂಗದ ದಕ್ಷಿಣ ದಿಕ್ಕಿಗೆ ಇರುವ ಈ ಶಿಲ್ಪದಲ್ಲಿ ಗಣೇಶನು ಪದ್ಮಾಸನದಲ್ಲಿ ಕುಳಿತಿದ್ದು, ಸುಂದರವಾಗಿದೆ. ಪ್ರಾಯಶಃ ಈ ಶಿಲ್ಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ಹೊಯ್ಸಳರ ಕಾಲಕ್ಕೆ ಸೇರಿದ ಶಿಲ್ಪವೆಂದು ತೋರುತ್ತದೆ. ಇದು ಚತುರ್ಭುಜವಾಗಿದ್ದು ಎರಡು ಕೈಗಳಲ್ಲಿ ಪರಶು ಮತ್ತು ಪಾಶವನ್ನು ಹಿಡಿದಿದ್ದು, ಮತ್ತೆರಡು ಕೈಯಕೈಗಳಲ್ಲಿ ಫಲ, ಮತ್ತು ಅಭಯಹಸ್ತ ತೋರಿಸುತ್ತಿರುವುದು ಹಾಗೂ ತಲೆಯ ಮೇಲೆ ಕಿರೀಟ ಕಂಠಹಾರ, ಮಣಿಸರ, ಕಾಲ್ಕಡಗ, ಯಜ್ಞೋಪವಿತ, ಕೈಬಳೆ ಇವುಗಳೆಲ್ಲವೂ ಶಿಲ್ಪದಲ್ಲಿ ಸುಂದರವಾಗಿ ಮೂಡಿಬಂದಿರುವುದನ್ನು ಕಾಣಬಹುದಾಗಿದೆ.

**ವಿಷ್ಣು ಶಿಲ್ಪ (ಚಿತ್ರ-೭):** ನವರಂಗದ ಸಮಭಂಗಿಯಲ್ಲಿ ನಿಂತಿರುವ ಈ ವಿಷ್ಣು ಶಿಲ್ಪವು ಕ್ರಿ.ಶ. ೧೧-೧೨ ನೇ ಶತಮಾನಕ್ಕೆ ಸೇರಿದ ಶಿಲ್ಪವೆಂದು ಪರಿಗಣಿಸಬಹುದಾಗಿದೆ. ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದ್ದು ಶಂಖ, ಚಕ್ರ, ಗಧ ಮತ್ತು ಅಭಯ ಹಸ್ತವನ್ನು ಹೊಂದಿರುವುದು ಕಂಡುಬರುತ್ತದೆ. ಹಾಗೂ ತಲೆಯ ಮೇಲೆ ನೀಳವಾದ ಕಿರೀಟವನ್ನು ಹೊಂದಿದ್ದು ಕಿವಿಯಲ್ಲಿ ಕರ್ಣಕುಂಡಲವಿದೆ. ಕಂಠದಲ್ಲಿ ಸರಮಾಲೆಯನ್ನು ಧರಿಸಿದ್ದು ಯಜ್ಞೋಪವಿತವು ಸಹ ಸುಂದರವಾಗಿ ಮೂಡಿ ಬಂದಿರುವುದು ಶಿಲ್ಪದಲ್ಲಿ ಕಂಡುಬರುತ್ತದೆ.

**ವೀರಭದ್ರ ಶಿಲ್ಪ (ಚಿತ್ರ-೮):** ನವರಂಗದಲ್ಲಿ ಸುಂದರ ವಾದ ವೀರಭದ್ರ ಶಿಲ್ಪವಿದೆ. ಈ ಶಿಲ್ಪವನ್ನು ಕಲ್ಲು ಪೀಠದ ಮೇಲೆ ನಿಲ್ಲಿಸಲಾಗಿದ್ದು ೪ ಕೈಗಳನ್ನು ಹೊಂದಿದೆ. ಮೊದಲ ಎರಡು ಕೈಯಗಳಲ್ಲಿ ಖಡ್ಗ, ಅಂಕುಶ, ಹಾಗೂ ಮತ್ತೆರಡು ಕೈಗಳಲ್ಲಿ ಬಿಲ್ಲು ಮತ್ತೊಂದು ಕೈಯಲ್ಲಿ ಗದೆಯನ್ನು ಹಿಡಿದಿರುವುದು ನಂತರ ತಳಭಾಗದಲ್ಲಿ ರುಂಡವನ್ನು ತೋರಿಸಲಾಗಿದೆ. ಶಿಲ್ಪವು ವಿವಿಧ ವಸ್ತ್ರಾಭರಣ ಗಳಿಂದ ಕೂಡಿದ್ದು, ಪಾದದಲ್ಲಿ ಪಾದುಕೆಯನ್ನು ಧರಿಸಿದೆ. ಕಂಠದಲ್ಲಿ ಕಂಠಾಭರಣವನ್ನು, ತಲೆಯ ಮೇಲೆ ಕಿರೀಟವನ್ನು, ಕಾಲ್ಕಡಗ, ಕೈಬಳೆ, ಯಜ್ಞೋಪವಿತ ಇವುಗಳು ಶಿಲ್ಪದಲ್ಲಿ ಕಂಡುಬಂದಿರು ವುದನ್ನು ಗಮನಿಸಿದರೆ ಈ ಶಿಲ್ಪವು ಕ್ರಿ.ಶ.೧೧-೧೨ನೇ ಶತಮಾನಕ್ಕೆ ಸೇರಿದ ಶಿಲ್ಪವೆಂದು ಪರಿಗಣಿಸಬಹುದಾಗಿದೆ.

**ದಕ್ಷಿಣಮೂರ್ತಿ (ಚಿತ್ರ-೯):** ದೇವಾಲಯದ ಹೊರಭಾಗದ ಒಂದು ಗುಡಿಯಲ್ಲಿ ಈ ಮೂರ್ತಿ ಶಿಲ್ಪವಿದೆ. ಶೈವ ದೇವಾಲಯಗಳಲ್ಲಿ ವಿಶೇಷವಾಗಿ ಇಂತಹ ದಕ್ಷಿಣಮೂರ್ತಿ ಶಿಲ್ಪಗಳು ಸರ್ವೇಸಾಮಾನ್ಯವಾಗಿ ಕಂಡುಬರುವುದುಂಟು. ಇಲ್ಲಿಯೂ ಸಹ ದಕ್ಷಿಣಾಮೂರ್ತಿ ಶಿಲ್ಪವಿದೆ. ಈ ಶಿಲ್ಪವು ಪದ್ಮಾಸೀನ ಭಂಗಿಯಲ್ಲಿದ್ದು ಒಂದು ಕಾಲನ್ನು ಪದ್ಮಾಸನದಲ್ಲಿ ಮತ್ತೊಂದು ಕಾಲನ್ನು ಕೆಳಗೆ ಇಳಿಬಿಟ್ಟಂತೆ ಇದ್ದು, ಶಿಲ್ಪವು ಎರಡು ಕೈಗಳನ್ನು ಹೊಂದಿದ್ದು ಒಂದು ಕೈಯನ್ನು ತನ್ನ ಮಂಡಿ ಮೇಲೆ ಇಟ್ಟುಕೊಂಡಿದ್ದು ಮತ್ತೊಂದು ಕೈಯಲ್ಲಿ ಕೊಡಲಿಯನ್ನು ಹಿಡಿದುಕೊಂಡಂತೆ ಕಂಡುಬರುತ್ತದೆ. ಈ ಮೂರ್ತಿ ಶಿಲ್ಪವು ಸೊಗಸಾಗಿದ್ದು ಕಾಲ್ಕಡಗ, ಕೈಬಳೆ, ಕಂಠಾಭರಣ, ಕರ್ಣಕುಂಡಲ, ತಲೆಯ ಮೇಲೆ ಉತ್ತರ ಭಾರತ ಶೈಲಿಯ ಮಾದರಿಯಲ್ಲಿ ಅಂದರೆ ನಾಗರ ಶೈಲಿಯ ವಿಮಾನದ ಮಾದರಿಯಲ್ಲಿ ಕಿರೀಟವನ್ನು ಹೊಂದಿದೆ.

**ಭೈರವಶಿಲ್ಪ (ಚಿತ್ರ-೧೦):** ದೇವಾಲಯದ ಹೊರಭಾಗದ ಪ್ರಾಕಾರದ ಗುಡಿಯಲ್ಲಿ ಈ ಶಿಲ್ಪವಿದೆ. ಈ ಶಿಲ್ಪವು ಕಲ್ಲು ಪೀಠದ ಮೇಲಿದ್ದು, ವಿರಾಟರೂಪವನ್ನು ಹೋಲುವಂತಿದೆ. ಪೀಠದಲ್ಲಿ ಒಬ್ಬ ವ್ಯಕ್ತಿಯನ್ನು ಸಂಹಾರ ಮಾಡುತ್ತಿರುವ ದೃಶ್ಯವಿದ್ದು, ಶಿಲ್ಪವು ನಿಂತ ಭಂಗಿಯಲ್ಲಿದ್ದು ನಾಲ್ಕು ಕೈಗಳನ್ನು ಹೊಂದಿದೆ. ಶಿಲ್ಪದಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾತ್ರೆಯನ್ನು ಹಿಡಿದುಕೊಂಡಿರುವುದು ಕಂಡುಬರುತ್ತದೆ. ಜೊತೆಗೆ ಎಡಪಾರ್ಶ್ವದಲ್ಲಿ ನಾಯಿಯ ಚಿತ್ರಣವಿದೆ. ಕಿರೀಟಮುಕುಟ, ಕರ್ಣಕುಂಡಲ, ಯಜ್ಞೋಪವಿತ, ಕಾಲ್ಕಡಗ, ಕೈಬಳೆ ಮುಂತಾದ ಆಭರಣಗಳನ್ನು ಧರಿಸಿರುವುದು ಕಂಡುಬರುತ್ತದೆ.

**ವೀರಗಲ್ಲು (ಚಿತ್ರ-೧೧):-** ದೇವಾಲಯದ ಹೊರಭಾಗದಲ್ಲಿ ಅಂದರೆ ಬಸ್ ನಿಲ್ದಾಣದಲ್ಲಿ, ನೆಲದಲ್ಲಿ ಸ್ವಲ್ಪಭಾಗ ಮುಚ್ಚಿ ಹೋಗಿರುವ ವೀರಗಲ್ಲು ಇದೆ. ಈ ವೀರಗಲ್ಲನ್ನು ಗಮನಿಸಿದರೆ ಮೂರು ಪಟ್ಟಿಕೆಗಳಿಂದ ಕೂಡಿದೆ ಎಂದು ಹೇಳಬಹುದು. ಆದರೆ ಒಂದು ಪಟ್ಟಿಕೆ ಭೂಮಿಯಲ್ಲಿ ಮುಚ್ಚಿಹೋಗಿದೆ. ಆದರೂ ಸ್ವಲ್ಪಭಾಗ ಕಾಣಿಸುವುದರಿಂದ ವೀರಗಲ್ಲೆಂದು ಹೇಳಬಹುದು. ವೀರನು ಕೈಯಲ್ಲಿ ಕುಡುಗೋಲು ಹಿಡಿದು ಹೋರಾಟ ಮಾಡುತ್ತಿರು ವಂತೆ ಮೂಡಿಬಂದಿದೆ. ಎರಡನೇ ಪಟ್ಟಿಕೆಯಲ್ಲಿ ಇಬ್ಬರು ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕರೆದುಕೊಂಡು ಹೋಗುವಂತೆ ಶಿಲ್ಪದಲ್ಲಿ ಮೂಡಿಬಂದಿದೆ. ಮೂರನೇ ಪಟ್ಟಿಕೆಯಲ್ಲಿ ವೀರನು ಶಿವಪೀಠದ ಮುಂದೆ ಅಂಜಲೀ ಬದ್ಧನಾಗಿ ಆಸೀನನಾಗಿದ್ದು ಪಕ್ಕದಲ್ಲಿ ಪತ್ನಿಯನ್ನು ಸಹ ತೋರಿಸಲಾಗಿದೆ. ಒಬ್ಬ ಶಿವಾರ್ಚಕ ನಿಂತಿದ್ದು ಪಕ್ಕದಲ್ಲಿ ಭಕ್ತನೊಬ್ಬ ಕೈಮುಗಿಯುತ್ತಿರುವ ಭಂಗಿಯಲ್ಲಿದೆ. ಆತನ ಪಕ್ಕದಲ್ಲಿ ಸುಂದರವಾಗಿ ಅಲಂಕೃತ ಗೊಂಡ ನಂದಿಯ ಶಿಲ್ಪವನ್ನೂ ಸಹ ತೋರಿಸಲಾಗಿದೆ. ಈ ವೀರಗಲ್ಲಿನ ಪ್ರತಿಯೊಂದು ಪಟಿಕೆಯಲ್ಲಿಯೂ ಲತೆಯ ಸುರುಳಿಯ ಕೆತ್ತನೆಯನ್ನು ಕಡೆಯಲಾಗಿದೆ. ಈ ವೀರಗಲ್ಲನ್ನು ನೋಡಿದರೆ ವಿಜಯನಗರ ಅರಸರ ಅಥವಾ ಮೈಸೂರು ಒಡೆಯರ ಕಾಲಕ್ಕೆ ಸೇರಿಸಬಹುದಾದ ವೀರಗಲ್ಲೆಂದು ಹೇಳಬಹುದಾಗಿದೆ.

**ಬಿಡಿ ಶಿಲ್ಪಗಳು (ಚಿತ್ರ -೧೨):** ಹಿಂಡಿಮಾರಮ್ಮನ ದೇವಾಲಯದ ಮುಂಭಾಗ ತೋರಣ ಕಂಬದ ತಳಭಾಗದಲ್ಲಿ ಪೀಠ ಮತ್ತು ಬಿಡಿ ಶಿಲ್ಪಗಳಿವೆ. ಈ ಬಿಡಿ ಶಿಲ್ಪಗಳು ಸ್ತ್ರೀ ಶಿಲ್ಪಗಳಾಗಿದ್ದು ಶಕ್ತಿದೇವತೆಯು ಆರಾಧನೆಯ ದೃಷ್ಟಿಯಿಂದ ಜಾನಪದೀಯ ಶಿಲ್ಪಗಳಾಗಿವೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ಆಯಾ ಪ್ರಾಂತದಲ್ಲಿ ಶಕ್ತಿದೇವತೆಯನ್ನು ಆರಾಧಿಸುವ ಪರಿಪಾಠವಿರುವ ಹಿನ್ನೆಲೆಯಿರುವುದರಿಂದ ಹಿಂಡಿಮಾರಮ್ಮ ಸಹ ಸ್ಥಳೀಯ ಶಕ್ತಿದೇವತೆಯಾಗಿದ್ದು ಇಲ್ಲಿ ಕೆಲವೊಂದು ಸ್ತ್ರೀ ಶಿಲ್ಪಗಳನ್ನು ಇಡಲಾಗಿದೆ ಎಂದು ಹೇಳಬಹುದಾಗಿದೆ.

**ಸಿಂಹ ಶಿಲ್ಪ (ಚಿತ್ರ–೧೩):** ದುರ್ಗಾ ದೇವಾಲಯದ ಎದುರು ದೇವಾಲಯಕ್ಕೆ ಮುಖ ಮಾಡಿಕೊಂಡಂತೆ ಒಂದು ಕಲ್ಲು ಪೀಠದ ಮೇಲೆ ಸಿಂಹವನ್ನು ಇರಿಸಲಾಗಿದೆ. ದುರ್ಗಿಗೆ ಸಿಂಹವು ವಾಹನವಾಗಿರುವುದರಿಂದ ಪ್ರಾಯಶಃ ಈ ಸಿಂಹ ಶಿಲ್ಪವನ್ನು ಇರಿಸಿರಬಹುದು. ಸಿಂಹವು ಮೈಕಟ್ಟಿನಿಂದ ಬಲಾಢ್ಯ ವಾಗಿದ್ದು ಸೂಕ್ಷ್ಮವಾದ ನೋಟವನ್ನು ನೋಡುತ್ತಿರುವಂತೆ ಶಿಲ್ಪದಲ್ಲಿ ಮೂಡಿಬಂದಿದೆ. ಕೂದಲುಗಳು ವಿಶಾಲವಾಗಿ ಬೆಳೆದಿರುವುದನ್ನು ಅಲ್ಲದೆ ಬಾಲವನ್ನು ಮೇಲೆ ಎತ್ತಿಕೊಂಡಂತೆ ಶಿಲ್ಪ ಬಿಡಿಸಿರುವುದು ಸೊಗಸಾಗಿ ಮೂಡಿಬಂದಿದೆ.

ಈ ಹಿನ್ನೆಲೆಯಲ್ಲಿ ಅಗರ ಗ್ರಾಮವು ಅತ್ಯಂತ ಪ್ರಾಚೀನ ನೆಲೆಯಾಗಿದ್ದು ಇಲ್ಲಿ ದೊರೆತಿರುವ ಚೋಳರ ಕಾಲದ ಶಾಸನಗಳಿಂದ ಈ ಗ್ರಾಮವು ಪ್ರಾಚೀನ ಅಗ್ರಹಾರವಾಗಿದ್ದು ೧೦೧ ಜನ ಬ್ರಾಹ್ಮಣರಿಗೆ ದಾನವಿತ್ತ ವಿಷಯವು ಕಂಡು ಬರುವುದರಿಂದ ಇದೊಂದು ಐತಿಹಾಸಿಕ ಪ್ರಾಮುಖ್ಯತೆಯುಳ್ಳ ನೆಲೆಯೆಂದು ಪರಿಗಣಿಸಿ ನಿರೂಪಿಸಲಾಗಿದೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಬಿ. ಬಸವರಾಜು, **ಚೋಳರ ವಾಸ್ತು ಮತ್ತು ಶಿಲ್ಪ**–೨೦೦೮, ತಗರಪುರ.
೨. **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ–೪, ಯಳಂದೂರು ತಾಲ್ಲೂಕು ಅಗರ ಗ್ರಾಮದ ಶಾಸನಗಳ ಆಧಾರ.
೩. **ಪ್ರಜಾನುಡಿ** ದಿನಪತ್ರಿಕೆ–೧೫–೮–೨೦೧೦ರ ವರದಿ.
೪. ಇರ್ಫನ್ ಹಬೀಬ್‌ರವರ **ಪೂರ್ವ ಇತಿಹಾಸ,** ೨೦೦೮, ಪುಟ ಸಂಖ್ಯೆ: ೧೭.
೫. –ಅದೇ–
೬ ಎಪಿಗ್ರಾಫಿಯ ಕರ್ನಾಟಿಕ: ಸಂಪುಟ–೪, ಯಳಂದೂರು ತಾಲ್ಲೂಕು ಅಗರ ಗ್ರಾಮದ ೭೯ ಶಾಸನಗಳ ಆಧಾರ.
೭. ಡಾ.ಬಿ. ಬಸವರಾಜು, **ಐತಿಹ್ಯ ದರ್ಶನ**–೨೦೦೮, ತಗರಪುರ.
೮. ಕರ್ನಾಟಕದ ಕಂಚು ಶಿಲ್ಪಗಳು (ಡಾ. ಚಿದಾನಂದ ಮೂರ್ತಿ ಗೌರವ ಸಂಪುಟ ಲೇಖನ) ಡಾ. ಎಂ.ಎಸ್. ಕೃಷ್ಣಮೂರ್ತಿ.
೯. ಚಿತ್ರ ಸಂಖ್ಯೆ–೧. ಪಾರ್ವತಿ ಶಿಲ್ಪ.
೧೦. ಚಿತ್ರ ಸಂಖ್ಯೆ–೨. ದೇವಿ ಶಿಲ್ಪ.
೧೧. ಚಿತ್ರ ಸಂಖ್ಯೆ–೩. ನಟರಾಜ ಶಿಲ್ಪ.
೧೨. ಚಿತ್ರ ಸಂಖ್ಯೆ–೪. ಕಂಬ.
೧೩. ಚಿತ್ರ ಸಂಖ್ಯೆ–೫. ಗಣೇಶ ಶಿಲ್ಪ.
೧೪. ಚಿತ್ರ ಸಂಖ್ಯೆ–೬. ವಿಷ್ಣುಶಿಲ್ಪ.
೧೫. ಚಿತ್ರ ಸಂಖ್ಯೆ–೭. ವೀರಭದ್ರ ಶಿಲ್ಪ.
೧೬. ಚಿತ್ರ ಸಂಖ್ಯೆ–೮. ದಕ್ಷಿಣಮೂರ್ತಿ ಶಿಲ್ಪ.
೧೭. ಚಿತ್ರ ಸಂಖ್ಯೆ–೯. ಭೈರವ ಶಿಲ್ಪ.
೧೮. ಚಿತ್ರ ಸಂಖ್ಯೆ–೧೦. ವೀರಗಲ್ಲು ಶಿಲ್ಪ.
೧೯. ಚಿತ್ರ ಸಂಖ್ಯೆ–೧೧. ಬಿಡಿ ಶಿಲ್ಪಗಳು.
೨೦. ಚಿತ್ರ ಸಂಖ್ಯೆ–೧೨. ಸಿಂಹಶಿಲ್ಪ.

ಹೇಮಾವತಿ ಶಿ. ಮೆಣಸಗಿ*

# ರೋಣ ತಾಲೂಕಿನ ವಿಶಿಷ್ಟ ತ್ರೈಪುರುಷ ಶಿಲ್ಪ

ಪ್ರಸ್ತುತ ಗದಗ ಜಿಲ್ಲೆಯಲ್ಲಿ ರೋಣ ತಾಲೂಕು. ಅತಿ ದೊಡ್ಡ ತಾಲೂಕು ಎಂಬ ಹೆಗ್ಗಳಿಕೆಯನ್ನೂ ಪಡೆದಿದೆ. ಐತಿಹಾಸಿಕ ಹಿನ್ನೆಲೆಯನ್ನೊಳಗೊಂಡ ಈ ತಾಲೂಕು ಪ್ರಾಚೀನ ಆಡಳಿತ ವಿಭಾಗಗಳಾದ ಬೆಳ್ವಲ-೩೦೦, ಪುಲಿಗೆರೆ-೩೦೦, ಬೆಳ್ವಣಿಕೆ-೧೨, ನೆರೆಯಂಗಲ್-೧೨ ಹಾಗೂ ಕಿಸುಕಾಡು-೭೦ರ ಆಳ್ವಿಕೆಗೆ ಒಳಪಟ್ಟಿತ್ತು. ಮೌಖಿಕ ಆಧಾರಗಳ ಹಿನ್ನೆಲೆಯಲ್ಲಿ ಇದರ ಪ್ರಾಚೀನತೆ ಪೌರಾಣಿಕ ಕಾಲಘಟ್ಟವನ್ನು ಸೇರುತ್ತದೆ. ಇಲ್ಲಿಯ ಸ್ಥಳೀಯರು ಇದನ್ನು 'ದ್ರೋಣಪುರ'ವೆಂದು ಕರೆಯುತ್ತಾರೆ. ಅಲ್ಲದೇ ಸಾಕ್ಷಿಯಾಗಿ ಇಲ್ಲಿಯ ಬಸವನ ದೇವಾಲಯದಲ್ಲಿಯ ಒಂದು ಶಿಲ್ಪವನ್ನು ದ್ರೋಣಾಚಾರ್ಯರ ಶಿಲ್ಪ ಎಂದು ಐತಿಹ್ಯಕ್ಕೆ ಪೂರಕವಾಗಿ ಬಳಸಿಕೊಳ್ಳುತ್ತಾರೆ. ಶಿಲ್ಪದ ಆಧಾರದ ಮೇಲೆ ದ್ರೋಣಪುರವೆಂಬ ಸ್ಥಳೀಯರ ಹೇಳಿಕೆಯು ಸಮಂಜಸವಲ್ಲದಿದ್ದರೂ ಶಾಸನಗಳಲ್ಲಿ ದೊರೆಯುವ 'ಮಹಾ ಅಗ್ರಹಾರ ರೋಣ', ೧೦೪ ಮಹಾಜನರನ್ನು ಒಳಗೊಂಡಿತ್ತು. 'ದ್ರೋಣ', 'ಕಲ್ಕುಟಿ ಶ್ರೀ ದ್ರೋಣಸ್ವಾಮಿ' ಎಂಬ ಉಲ್ಲೇಖಗಳು ಸ್ಥಳೀಯ ಹೇಳಿಕೆಗೆ ಪುಷ್ಠಿ ನೀಡುತ್ತವೆ.[೧] ಶಾಸನಾಧಾರಗಳಿಂದ ಇದರ ಇತಿಹಾಸವು ೭-೮ನೇ ಶತಮಾನದಿಂದ ಅಂದರೆ ಬಾದಾಮಿ ಚಾಲುಕ್ಯ ಕಾಲದಿಂದ ಆರಂಭವಾಗುತ್ತದೆ. ಆದರೆ ಬಾದಾಮಿ ಚಾಲುಕ್ಯರ ಯಾವುದೇ ಸ್ಮಾರಕಗಳು ಕಂಡುಬರುವುದಿಲ್ಲ. ಅವರ ನಂತರ ಆಳ್ವಿಕೆ ನಡೆಸಿದ ರಾಜಮನೆತನಗಳ ದೇವಾಲಯಗಳು ಕಾಣಸಿಗುತ್ತವೆ.

ರೋಣ ತಾಲೂಕಿನಲ್ಲಿ ೬೫-೭೦ಕ್ಕಿಂತಲೂ ಹೆಚ್ಚು ದೇವಾಲಯಗಳು ಕಂಡುಬರುತ್ತವೆ. ಇದರಲ್ಲಿ ೫೦ ಕ್ಕಿಂತಲೂ ಹೆಚ್ಚು ದೇವಾಲಯಗಳು ಶೈವ ದೇವಾಲಯಗಳೇ ಆಗಿವೆ. ಉಳಿದವು ಜೈನ ಮತ್ತು ವೈಷ್ಣವ ದೇವಾಲಯಗಳಾಗಿವೆ. ಇಲ್ಲಿಯೇ ಇಷ್ಟು ಪ್ರಮಾಣದ ಶೈವ ದೇವಾಲಯಗಳು ನಿರ್ಮಾಣವಾಗಲು ಕಾರಣವಾದರೂ ಏನು ? ಬೇರೆ ಎಲ್ಲ ಧರ್ಮಕ್ಕಿಂತ ಶೈವ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ಏಕೆ ನೀಡಲಾಯಿತು ? ಎಂಬ ಪ್ರಶ್ನೆಗಳಿಗೆ ಉತ್ತರವೆಂದರೆ, ಇಲ್ಲಿ ಆಳ್ವಿಕೆ ನಡೆಸಿದ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಆರಂಭದ ವಿಜಯನಗರದ ಅರಸರು ಶೈವ ಧರ್ಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದರಿಂದ ಹಾಗೂ ಇದು ಒಂದು ಮಹಾ ಅಗ್ರಹಾರವಾಗಿದ್ದರಿಂದ ಇಲ್ಲಿ ದೇವಾಲಯಗಳು, ಅದರಲ್ಲೂ ಶೈವ ದೇವಾಲಯಗಳು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಾಣಗೊಂಡವು ಎಂದು ಹೇಳಬಹುದು. ಇನ್ನೂ ವಿಶೇಷವೆಂದರೆ ಇಲ್ಲಿ ವಿಶಿಷ್ಟವಾದ ಮತ್ತು ಅಪರೂಪವಾದ ತ್ರೈಪುರುಷ ಶಿಲ್ಪಗಳು ಕಾಣಸಿಗುತ್ತವೆ. ಇದೇ ಈ ಲೇಖನದ ಮೂಲಕ ಹೇಳಲು ಹೊರಟಿರುವ ಪ್ರಮುಖಾಂಶ.

ದೇವಾಲಯಗಳು ವಿದ್ಯಾಕೇಂದ್ರವಾಗಿ ಕಾರ್ಯ ನಿರ್ವಹಿಸುತ್ತಿದ್ದವು ಎಂಬುದು ಸರ್ವವಿದಿತ ವಿಷಯ. ಮಹಾ ಅಗ್ರಹಾರ ಎನಿಸಿಕೊಂಡಿದ್ದ ರೋಣ ಪ್ರದೇಶದಲ್ಲಿ ಶೈವ ಧರ್ಮದ ಉಪಪಂಗಡಗಳಲ್ಲಿ ಒಂದಾದ ಕಾಳಾಮುಖ ಪರಂಪರೆಯು ಹೆಚ್ಚು ಪ್ರಮಾಣದಲ್ಲಿ ಕಂಡುಬರುತ್ತದೆ. ಇವರು ದೇವಾಲಯಗಳನ್ನು ನಿರ್ಮಿಸಿ ಅವುಗಳ ಮೂಲಕ ವಿದ್ಯಾದಾನದ ಮಹತ್ವದ ಕಾರ್ಯವನ್ನು ನಿರ್ವಹಿಸುತ್ತಿದ್ದರು ಎಂಬುದನ್ನು ಶಾಸನಾಧಾರಗಳು ತಿಳಿಸುತ್ತವೆ. ವಿಶೇಷವಾಗಿ ತ್ರಿಕೂಟ ಮತ್ತು ತ್ರೈಪುರುಷ ದೇವಾಲಯಗಳು ಇದರಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವು. "ರೋಣ ತಾಲೂಕಿನಲ್ಲಿ ತ್ರೈಪುರುಷ ದೇವಾಲಯಗಳು ಕಾಳಾಮುಖ ಶೈವ ಧರ್ಮದ ಪ್ರಮುಖ ಕೇಂದ್ರಗಳಾಗಿದ್ದು, ಘಟಿಕಾಸ್ಥಾನಗಳನ್ನು ನಡೆಸುತ್ತಿದ್ದವು.[೨] ರೋಣ ಪ್ರದೇಶದಲ್ಲಿ ತ್ರೈಪುರುಷ ದೇವಾಲಯಗಳಿಗಿಂತಲೂ ತ್ರಿಕೂಟಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದರೂ ತ್ರೈಪುರುಷ ದೇವಾಲಯಗಳು ವಿಶೇಷ ಎನಿಸಿವೆ. ವಿಶೇಷ ಎನ್ನಲು ಕಾರಣ ಇವು ಗರ್ಭಗೃಹದಲ್ಲಿ ಅಪರೂಪದ ಶಿಲ್ಪಗಳನ್ನು ಹೊಂದಿವೆ. ಇಲ್ಲಿ ಒಂದೇ ಪೀಠದಲ್ಲಿ ತ್ರೈಪುರುಷರನ್ನು ಅಂದರೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನು (ಶಿವನನ್ನು ಲಿಂಗ ರೂಪದಲ್ಲಿ ತೋರಿಸಲಾಗಿದೆ) ಮೂರ್ತಿ ರೂಪದಲ್ಲಿ ಸ್ಥಾಪಿಸಲಾಗಿದೆ. ಇದು ಒಂದು ವಿಶಿಷ್ಟ ಮತ್ತು

* ಸಂಶೋಧನಾ ವಿದ್ಯಾರ್ಥಿನಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಕನ್ನಡ ವಿ.ವಿ., ಹಂಪಿ.

ಅಪರೂಪದ ಶಿಲ್ಪ ಎನ್ನಬಹುದು. ಏಕೆಂದರೆ ಗರ್ಭಗೃಹದಲ್ಲಿ ಬ್ರಹ್ಮನನ್ನು ಮೂರ್ತಿ ರೂಪದಲ್ಲಿ ತೋರಿಸುವುದು ತುಂಬಾ ವಿರಳ. ಆದರೆ ಇಲ್ಲಿ **ಬ್ರಹ್ಮನನ್ನು ಮೂರ್ತಿ ರೂಪದಲ್ಲಿ ತೋರಿಸಿದ್ದಲ್ಲದೇ, ತ್ರೈಪುರುಷರನ್ನು ಒಂದೇ ಪೀಠದಲ್ಲಿ ನಿಲ್ಲಿಸಲಾಗಿದೆ.** ಇದಕ್ಕೆ ಕಾರಣ ಡಾ. ಅ. ಸುಂದರವರ ಅಭಿಪ್ರಾಯದ ಮೇರೆಗೆ ಹೇಳುವುದಾದರೆ 'ಸುಮಾರು ೯–೧೦ನೇ ಶತಮಾನದಲ್ಲಿ ವಿವಿಧ ಮತದವರಲ್ಲಿ ಸೌಹಾರ್ದತೆಯನ್ನು ಬೆಳೆಸಲು ತ್ರೈಪುರುಷ ದೇವಾಲಯ ಮತ್ತು ತ್ರಿಕೂಟೇಶ್ವರ ದೇವಾಲಯಗಳನ್ನು ನಿರ್ಮಿಸಲಾಯಿತು.[೩] ಇಂತಹ ತ್ರೈಪುರುಷ ದೇವಾಲಯಗಳು ರೋಣ ತಾಲೂಕಿನಲ್ಲಿ ಸವಡಿ ನಿಡಗುಂದಿ ಮತ್ತು ಬಾದಾಮಿ ತಾಲೂಕಿನ ಬೇಲೂರು ಎಂಬ ಗ್ರಾಮದಲ್ಲಿ ದೊರೆಯುತ್ತದೆ.

ಸವಡಿ ಗ್ರಾಮದಲ್ಲಿ ಬ್ರಹ್ಮದೇವರ ದೇವಾಲಯ ಅಥವಾ ತ್ರಿಮೂರ್ತೇಶ್ವರ ದೇವಾಲಯ ಎಂದು ಕರೆಯಲ್ಪಡುವ ದೇವಾಲಯವು ರಾಷ್ಟ್ರಕೂಟ ಶೈಲಿಯಲ್ಲಿ, ಪೂರ್ವಾಭಿಮುಖವಾಗಿ, ನಕ್ಷತ್ರಾಕಾರದ ತಲವಿನ್ಯಾಸದಲ್ಲಿ ನಿರ್ಮಾಣಗೊಂಡಿದೆ. ತಿರ್ಯಙ್ಮುಖ ಕ್ರಮದಲ್ಲಿ ಈ ದೇವಾಲಯವು ಗರ್ಭಗೃಹ, ಅಂತರಾಳ ಹಾಗೂ ವಿಶಾಲವಾದ ನವರಂಗ ಭಾಗಗಳನ್ನು ಹೊಂದಿದೆ. ಊರ್ಧ್ವಮುಖ ಕ್ರಮದಲ್ಲಿ ಅಧಿಷ್ಠಾನ ಭಾಗವು ಮಣ್ಣಲ್ಲಿ ಹೂತಿದ್ದು, ಶಿಖರವು ಸಂಪೂರ್ಣ ನಾಶವಾಗಿದೆ. ಗರ್ಭಗೃಹದಲ್ಲಿ ಆಯತಾಕಾರದ ಉದ್ದನೆಯ ಪೀಠದಲ್ಲಿ ಬ್ರಹ್ಮ, ಶಿವಲಿಂಗ ಹಾಗೂ ವಿಷ್ಣುವಿನ ಶಿಲ್ಪಗಳನ್ನು ಕಾಣಬಹುದು. ಪೀಠದಲ್ಲಿ ಹಂಸ ಪಕ್ಷಿಯ ಉಬ್ಬು ಕೆತ್ತನೆಯೊಂದಿಗೆ ಸಮಭಂಗಿಯಲ್ಲಿ ನಿಂತಿರುವ ಬ್ರಹ್ಮನ ಶಿಲ್ಪವು ಸುಮಾರು ೩–೪ ಅಡಿ ಎತ್ತರವಾಗಿದ್ದು ನೋಡಲು ಆಕರ್ಷಕವಾಗಿದೆ. ಚತುರ್ಭುಜಧಾರಿಯಾದ ಈ ಶಿಲ್ಪವು ಕಿರೀಟ ಮುಕುಟಧಾರಿಯಾಗಿದ್ದು, ಮೇಲಿನ ಬಲಗೈಯಲ್ಲಿ ಅಕ್ಷ ಮಾಲೆ ಹಾಗೂ ಕೆಳ ಬಲಗೈ ಅಭಯಹಸ್ತದಲ್ಲಿದ್ದು, ಎಡ ಮೇಲಿನ ಕೈಯಲ್ಲಿ ಪದ್ಮ, ಕೆಳ ಕೈಯಲ್ಲಿ ಅಂಕುಶ ಹಿಡಿದ್ದಿದ್ದು ಸುಂದರ ವಸ್ತ್ರಾಭರಣಗಳಿಂದ ಅಲಂಕೃತವಾಗಿದೆ. ಅಲ್ಲದೇ ಪ್ರಭಾವಳಿ ಭಾಗದ ಎಡಬಲದಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಸುಂದರ ಉಪದೇವತೆಗಳ ಶಿಲ್ಪವನ್ನೂ ಕೆತ್ತಲಾಗಿದೆ. ಮಧ್ಯದಲ್ಲಿ ವೃತ್ತಾಕಾರದ ಪಾಣಿಪೀಠವನ್ನು ಹೊಂದಿರುವ ಶಿವಲಿಂಗವಿದ್ದು, ಪೀಠಭಾಗದಲ್ಲಿ ನಂದಿ ಶಿಲ್ಪವನ್ನು ಕಾಣಬಹುದು. ಶಿವಲಿಂಗದ ಎಡಭಾಗದ ಪೀಠದಲ್ಲಿ ಗರುಡನ ಉಬ್ಬು ಕೆತ್ತನೆಯನ್ನು ಹೊಂದಿರುವ ಸುಮಾರು ೩–೪ ಅಡಿ ಎತ್ತರವಾದ ಹಾಗೂ ಸಮಭಂಗಿಯಲ್ಲಿ ನಿಂತಿರುವ ಆಕರ್ಷಕ ವಿಷ್ಣುವಿನ ಶಿಲ್ಪವಿದೆ. ಚತುರ್ಭುಜಧಾರಿಯಾದ ಈ ಶಿಲ್ಪವು ಕಿರೀಟಮುಕುಟಧಾರಿಯಾಗಿದ್ದು, ಬಲ ಮೇಲಿನ ಕೈಯಲ್ಲಿ ಶಂಖಚಕ್ರ, ಕೆಳ ಕೈ ಅಭಯಹಸ್ತದಲ್ಲಿದ್ದು, ಎಡ ಮೇಲಿನ ಕೈಯಲ್ಲಿ ಪದ್ಮ, ಕೆಳ ಕೈಯಲ್ಲಿ ಗದೆಯನ್ನು ಹಿಡಿದ್ದಿದ್ದು ಸುಂದರ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆ. ಈ ಶಿಲ್ಪವೂ ಸಹ ಎಡಬಲದಲ್ಲಿ ತ್ರಿಭಂಗಿಯಲ್ಲಿ ನಿಂತಿರುವ ಸುಂದರ ಉಪದೇವತೆಗಳ ಶಿಲ್ಪವನ್ನು ಒಳಗೊಂಡಿದೆ. ದೇವಾಲಯದ ಅಂತರಾಳ ಭಾಗದಲ್ಲಿ ನಂದಿ ಶಿಲ್ಪವನ್ನು ಇರಿಸಲಾಗಿದ್ದು, ನವರಂಗದಲ್ಲಿರುವ ಕಂಬಗಳು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಹಾಗೂ ವಿಜಯನಗರ ಕಾಲಕ್ಕೆ ಸೇರಿದವುಗಳಾಗಿವೆ. ರಾಷ್ಟ್ರಕೂಟ ಕಾಲದಿಂದ ವಿಜಯನಗರದ ಕಾಲದವರೆಗೂ ಅಂದರೆ ಸುಮಾರು ಆರು ಶತಮಾನಗಳ ಕಾಲದವರೆಗೂ ಈ ದೇವಾಲಯ ಜೀರ್ಣೋದ್ಧಾರಗೊಂಡಿರುವುದನ್ನು ಗಮನಿಸಬಹುದು. ಇದಕ್ಕೆ ಶಾಸನಾಧಾರಗಳು ಲಭ್ಯವಾಗಿವೆ. ಸವಡಿಯಲ್ಲಿ ದೊರೆತ ಮೂರು ಶಾಸನಗಳು ಈ ದೇವಾಲಯದ ಕುರಿತು ಉಲ್ಲೇಖಗಳನ್ನು ಒದಗಿಸುತ್ತವೆ. ಕ್ರಿ.ಶ. ೯೭೦ರ ರಾಷ್ಟ್ರಕೂಟ ಅರಸ ಖೊಟ್ಟಿಗನ ಶಾಸನವು ದೇವಾಲಯದ ನಿರ್ಮಾಣದ ಬಗೆಗೆ ಉಲ್ಲೇಖವನ್ನು ಒದಗಿಸುತ್ತದೆ. ಆದರೆ ದೇವಾಲಯದ ಹೆಸರಿನ ಬಗ್ಗೆ ಮಾಹಿತಿ ನೀಡುವುದಿಲ್ಲ. ಆದರೆ ಶಾಸನದಲ್ಲಿ ದೇವಾಲಯ ಮತ್ತು ಮಂಟಪದ ನಿರ್ಮಾಣದ ಬಗ್ಗೆ ಇರುವ ಉಲ್ಲೇಖ ಬಹುಶಃ ಸವಡಿಯ ಬ್ರಹ್ಮೇಶ್ವರ ದೇವಾಲಯ ಕುರಿತದ್ದೇ ಎಂಬುದರಲ್ಲಿ ಸಂಶಯವಿಲ್ಲ.[೪] ಇನ್ನೊಂದು ಶಾಸನ ಕಲ್ಯಾಣ ಚಾಲುಕ್ಯ ಅರಸ ೪ನೇ ವಿಕ್ರಮಾದಿತ್ಯನ ಕ್ರಿ.ಶ. ೧೦೮೩ರ ತೇದಿಯದಾಗಿದ್ದು, ಮೂಲ ದೇವಸ್ಥಾನಕ್ಕೆ ದಾನ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. ಇಲ್ಲಿ ಮೂಲಸ್ಥಾನ ದೇವರೆಂದರೆ ಬಹುಶಃ ಬ್ರಹ್ಮೇಶ್ವರ ದೇವಾಲಯವೇ ಆಗಿರಬಹುದು.[೫] ಮತ್ತೊಂದು ಶಾಸನವು ವಿಜಯನಗರದ ಅರಸ ೨ನೇ ದೇವರಾಯನ ಕ್ರಿ.ಶ. ೧೪೭೧ರ ತೇದಿಯುಳ್ಳದ್ದು. ಇದರಲ್ಲಿ ಜಿಕು ವಂಶದ ಬಾಗಿಲವಾಡದ ತಿಪಣನಾಯಕನ ಮಕ್ಕಳು ಚವುಡ ನಾಯಕರು ಬಾದಾಮಿ ಸೀಮೆಯೊಳಗಿನ ಸವಡಿಯ ತ್ರೈಮೂರ್ತಿಗಳಿಗೆ ಜೀರ್ಣೋದ್ಧಾರ ಮಾಡಿದ ಉಲ್ಲೇಖ ಇದೆ.[೬]

ಹೀಗೆ ಶಾಸನಾಧಾರಗಳನ್ನೊಳಗೊಂಡ ಈ ದೇವಾಲಯವು ವಿಶಿಷ್ಟ ಶಿಲ್ಪವನ್ನು ಹೊಂದಿದ್ದು, ಅಧ್ಯಯನ ದೃಷ್ಟಿಯಿಂದ ಮಹತ್ವವುಳ್ಳ ದೇವಾಲಯ ಎನ್ನಬಹುದು.

ಕೆ. ವಸಂತಲಕ್ಷ್ಮಿಯವರು ಗದಗ ಜಿಲ್ಲೆಯಲ್ಲಿ ತ್ರಿಕೂಟಾಚಲಕ್ಕಿಂತ ಮೊದಲು 'ತ್ರೈಪುರುಷ' ದೇವಾಲಯಗಳನ್ನು ನಿರ್ಮಿಸಲಾಗಿದೆ. ಒಂದು ರೀತಿಯಲ್ಲಿ ನೋಡಿದರೆ ತ್ರೈಪುರುಷ ದೇವಾಲಯಗಳ ಸ್ವರೂಪವೇ ವಿಕಾಸಗೊಂಡು ತ್ರಿಕೂಟಾಚಲಗಳು ನಿರ್ಮಾಣವಾಯಿತೆನ್ನಬಹುದು.

ಉದಾಹರಣೆಗೆ ಸವಡಿ ಗ್ರಾಮದ ಬ್ರಹ್ಮೇಶ್ವರ ದೇವಾಲಯ ವಿಶೇಷ ಗಮನ ಸೆಳೆಯುತ್ತದೆ ಎಂದಿದ್ದಾರೆ.

ರೋಣ ತಾಲೂಕಿನ ಮತ್ತೊಂದು ಗ್ರಾಮ ನಿಡಗುಂದಿಯಲ್ಲಿಯೂ ಇದೇ ಮಾದರಿಯ ದೇವಾಲಯ ದೊರೆಯುತ್ತದೆ. ನಿಡಗುಂದಿಯೂ ಸಹ ಅಗ್ರಹಾರವಾಗಿತ್ತು. ಶಾಸನಗಳಲ್ಲಿ ಇದನ್ನು 'ಶ್ರೀಮದನಾರಿಯಗ್ರಹಾರಂ ನಿಡಗುಂದಿ' ಎಂದು ಉಲ್ಲೇಖಿಸಿದೆ. ಸ್ಥಳೀಯರು ಚೌಕಾಕಾರದ ತಲವಿನ್ಯಾಸದಲ್ಲಿ, ಪೂರ್ವಾಭಿಮುಖವಾಗಿ ನಿರ್ಮಾಣಗೊಂಡ ದೇವಾಲಯವು ಗರ್ಭಗೃಹ, ಅಂತರಾಳ, ವಿಶಾಲವಾದ ನವರಂಗ ಭಾಗಗಳನ್ನು ಒಳಗೊಂಡಿದೆ. ಪ್ರಸ್ತುತ ದೇವಾಲಯದಲ್ಲಿ ಒಂದೇ ಪೀಠದಲ್ಲಿ ಗಣೇಶ, ಲಕ್ಷ್ಮೀನಾರಾಯಣ ಹಾಗೂ ಶಿವಲಿಂಗಗಳನ್ನು ಕಾಣಬಹುದು. ಗಣೇಶ ವಿಗ್ರಹದ ಪೀಠಭಾಗದಲ್ಲಿ ಹಂಸ ಪಕ್ಷಿಯ ಉಬ್ಬುಶಿಲ್ಪ ಇರುವುದರಿಂದ ಇಲ್ಲಿ ಬ್ರಹ್ಮನ ಮೂರ್ತಿ ಇತ್ತೆಂದು ಗಮನಿಸಬಹುದು. ಕಾಲಾನಂತರದಲ್ಲಿ ಬಹುಶಃ ಈ ಬ್ರಹ್ಮನ ಮೂರ್ತಿಯು ಭಗ್ನಗೊಂಡಿರಬಹುದು. ಇಲ್ಲವೇ ಬ್ರಹ್ಮನಿಗೆ ಪೂಜೆ ಸಲ್ಲದು ಎಂಬ ನಂಜಿಕೆ ಇದ್ದುದರಿಂದಲೇ ಏನೋ ಇದರ ಸ್ಥಳದಲ್ಲಿ ಬ್ರಹ್ಮನ ಮೂರ್ತಿಯ ಬದಲಾಗಿ ಗಣೇಶನ ಶಿಲ್ಪ ಇರಿಸಲಾಗಿದೆ. ಮಧ್ಯದಲ್ಲಿ ಸುಮಾರು ೩-೪ ಅಡಿ ಎತ್ತರವಾದ ಲಕ್ಷ್ಮೀನಾರಾಯಣರ ಮೂರ್ತಿಶಿಲ್ಪ ಇದೆ. ದ್ವಿಭುಜನಾದ ನಾರಾಯಣನ ಶಿಲ್ಪವು ಕಿರೀಟಮುಕುಟಧಾರಿಯಾಗಿದ್ದು, ಬಲಗೈಯು ಅಭಯ ಹಸ್ತದಲ್ಲಿದ್ದು, ಎಡಗೈಯು ಸತಿಯಾದ ಲಕ್ಷ್ಮೀಯ ಭುಜದ ಮೇಲಿದ್ದು ಪದ್ಮವನ್ನು ಹಿಡಿದಿದೆ. ಕೆಳಗೆ ಗದೆಯನ್ನು ಕೆತ್ತಲಾಗಿದೆ. ಲಕ್ಷ್ಮಿಯ ಶಿಲ್ಪವೂ ದ್ವಿಭುಜ ಹೊಂದಿದ್ದು, ಎಡಗೈಯಲ್ಲಿ ಪದ್ಮವನ್ನು ಹಿಡಿದಿದ್ದು ಬಲಗೈಯು ನಾರಾಯಣನ ಭುಜದ ಮೇಲಿದೆ. ಲಕ್ಷ್ಮೀನಾರಾಯಣರ ಈ ಶಿಲ್ಪವು ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆ. ಪೀಠದಲ್ಲಿ ಗರುಡನ ಉಬ್ಬುಶಿಲ್ಪವಿದೆ. ಇದರ ಬಲಭಾಗದಲ್ಲಿ ಚೌಕಾಕಾರದ ಪೀಠದಲ್ಲಿ ಶಿವಲಿಂಗವಿದೆ. ಹಾಗೂ ಕೆಳಭಾಗದಲ್ಲಿ ನಂದಿ ಶಿಲ್ಪವನ್ನು ಹೊಂದಿದೆ. ದೇವಾಲಯಕ್ಕೆ ತೆರೆದ ಅಂತರಾಳವಿದ್ದು, ವಿಶಾಲ ನವರಂಗವನ್ನು ಹೊಂದಿದೆ. ದೇವಾಲಯದ ಅಧಿಷ್ಠಾನ ಭಾಗವು ಸರಳವಾಗಿದ್ದು, ಉಪಾನ ಹಾಗೂ ಕಪೋತ ಭಾಗಗಳನ್ನು ಒಳಗೊಂಡಿದೆ. ಭಿತ್ತಿಯು ಸರಳವಾಗಿದ್ದು, ಪ್ರಸ್ತರ ಭಾಗವು ಕೆಲವು ಅಲಂಕರಣೆಯಿಂದ ಕೂಡಿದೆ. ಆದರೆ ಶಿಖರ ಭಾಗವು ಸಂಪೂರ್ಣವಾಗಿ ಬಿದ್ದಿದೆ.

ಈ ದೇವಾಲಯಕ್ಕೆ ಸಂಬಂಧಪಟ್ಟ ಎರಡು ಶಾಸನಗಳು ದೇವಾಲಯದ ಮುಂಭಾಗದಲ್ಲೇ ಇವೆ. ಮೊದಲನೆಯ ಶಾಸನವು ಕಲ್ಯಾಣ ಚಾಲುಕ್ಯರ ಅರಸ ಭುವನೈಕಮಲ್ಲನ (ಸೋಮೇಶ್ವರ ೨) ಕ್ರಿ.ಶ. ೧೦೭೪ ತೇದಿಯುಳ್ಳದ್ದು. ಈ ಶಾಸನವು ಕನ್ನಡ ಸಂಧಿವಿಗ್ರಹಾಧಿಪತಿ ಮಹಾಪ್ರಚಂಡ ದಂಡನಾಯಕ ಜನ್ನಮಯ್ಯನು ಕಿಸುಕಾಡು ೭೦ರ ಆಳ್ವಿಕೆಗೆ ಒಳಪಟ್ಟ ನಿಡಗುಂದಿ ಗ್ರಾಮದಲ್ಲಿ ಘನವೆತ್ತ ತ್ರೈಪುರುಷ ದೇವಾಲಯವನ್ನು ನಿರ್ಮಿಸಿ ಅರಸನ ಸಮ್ಮತಿಯ ಮೇರೆಗೆ ಅದಕ್ಕೆ ಕಳ್ಳಮನಪಳ್ಳಿ ಎಂಬ ಗ್ರಾಮವನ್ನು ದತ್ತಿ ಬಿಟ್ಟುದುದನ್ನು ತಿಳಿಸುತ್ತದೆ. ಇನ್ನೊಂದು ಶಾಸನವು ವಿಶೇಷವಾದುದು. ಇದು ಸ್ವಸ್ತಿ ಶ್ರೀ ಜಯಶ್ಚಾಭ್ಯುದಯಶ್ಚ ॥ ಶ್ರೀ ತ್ರೈಪುರುಷದೇವಾಯ ನಮಃ । ಎಂದೇ ಆರಂಭಗೊಳ್ಳುತ್ತದೆ. ಇದು ಇಮ್ಮಡಿ ಬಿಜ್ಜಳನ ಪುತ್ರಿ ಸಿಂಧ ಅರಸ ಚಾವುಂಡನ ರಾಣಿ ಸಿರಿಯಾದೇವಿಯ ಕ್ರಿ.ಶ. ೧೧೭೧ರ ತೇದಿಯುಳ್ಳದ್ದು. ಈ ಶಾಸನವು ಮತ್ತು ಆಕೆಯ ಇಬ್ಬರು ಪುತ್ರರಾದ ಮಹಾಮಂಡಳೇಶ್ವರ ಹಿರಿಯ ಪುತ್ರ ಕುಮಾರ ಬಿಜ್ಜಣದೇವರಸ (ಸಿಂಧ ಬಿಜ್ಜಳ) ಮತ್ತು ಕುಮಾರ ವಿಕ್ರಮದೇವರಸರು ಭಕ್ತಿಯಿಂದ ತಮ್ಮ ವಂಶಾಭಿವೃದ್ಧಿ ಮತ್ತು ರಾಜ್ಯಾಭಿವೃದ್ಧಿಗಾಗಿ ಕಿಸುಕಾಡು-೭೦ರ ಆಳ್ವಿಕೆಗೆ ಒಳಪಟ್ಟ ಶ್ರೀ ಮದನಾದಿ ಯಗ್ರಹಾರ ನಿಡಗುಂದಿಯಲ್ಲಿರುವ ತ್ರೈಪುರುಷ ದೇವಾಲಯಕ್ಕೆ ದತ್ತಿ ನೀಡಿದುದಾಗಿದೆ. ಅಲ್ಲದೆ ದತ್ತಿ ಬಿಟ್ಟ ಕಳ್ಳವನಹಳ್ಳಿ ಗ್ರಾಮವನ್ನು ಯಾವುದೇ ಬಾಧೆಯಿಲ್ಲದೆ ನಡೆಸುವವೆಂದು ಹೇಳಿರುವುದನ್ನು ಮತ್ತು ಸಮಸ್ತ ಪರಿವಾರ ಸಹಿತವಾಗಿ ಈ ವಿಷಯಕ್ಕೆ ಸಂಬಂಧಿಸಿದಂತೆ ಈ ಹಳ್ಳಿಗೆ ತಾಮ್ರ ಶಾಸನವೊಂದನ್ನು ಕೊಟ್ಟಿರುವುದನ್ನು ತಿಳಿಸುತ್ತದೆ.

ರೋಣದಿಂದ ಸುಮಾರು ೧೭-೧೮ ಕಿ.ಮೀ. ದೂರದಲ್ಲಿರುವ ಹಾಗೂ ಬಾದಾಮಿ ತಾಲೂಕಿಗೆ ಒಳಪಡುವ ಸುಮಾರು ೧೫-೧೬ ಕಿ.ಮೀ. ಅಂತರದಲ್ಲಿರುವ ಬೇಲೂರು ಗ್ರಾಮದಲ್ಲಿಯೂ ಇದೇ ಮಾದರಿಯ, ಅಂದರೆ ಗರ್ಭಗೃಹದಲ್ಲಿ ತ್ರೈಪುರುಷ ಶಿಲ್ಪವನ್ನು ಹೊಂದಿರುವ ದೇವಾಲಯವಿದೆ. ಇಲ್ಲಿಯೂ ಸಹ ತ್ರೈಪುರುಷರನ್ನು ಒಂದೇ ಪೀಠದಲ್ಲಿ ನಿಲ್ಲಿಸಲಾಗಿದೆ. ಇಲ್ಲಿ ವಿಶೇಷವೆಂದರೆ ಅಥವಾ ಮೊದಲೆರಡು ಹೇಳಿದ ಶಿಲ್ಪಗಳಿಗಿಂತ ಭಿನ್ನವಾಗಿ ಕಂಡುಬರುವ ಅಂಶವೆಂದರೆ ಶಿವನನ್ನು ಲಿಂಗರೂಪದಲ್ಲಿ ತೋರಿಸದೇ, ಮೂರ್ತಿ ರೂಪದಲ್ಲಿಯೇ ತೋರಿಸಿರುವುದು. ಸುಮಾರು ೩-೪ ಅಡಿ ಎತ್ತರವಿರುವ ಬ್ರಹ್ಮ, ವಿಷ್ಣು, ಮಹೇಶ್ವರರ ಶಿಲ್ಪಗಳನ್ನು ವಾಡಿಕೆಯಲ್ಲಿ ಕರೆಯುವಂತೆ ಅನುಕ್ರಮವಾಗಿ ಕಾಣಬಹುದು. ಆದರೆ ದುರದೃಷ್ಟವಶಾತ್ ಬ್ರಹ್ಮ ಮತ್ತು ಲಕ್ಷ್ಮೀನಾರಾಯಣನ ಶಿಲ್ಪಗಳು ಸಂಪೂರ್ಣ ಭಗ್ನಗೊಂಡಿವೆ. ಭಗ್ನಗೊಂಡ ಶಿಲ್ಪಾವಶೇಷಗಳನ್ನು ಪೀಠದ ಮೇಲೆಯೇ ಇರಿಸಲಾಗಿದೆ. ಬ್ರಹ್ಮನ ಶಿಲ್ಪವು ಚತುರ್ಮುಖವನ್ನು ಹೊಂದಿದ್ದು ಮುಖದ ಭಾವಗಳನ್ನು ಸುಂದರವಾಗಿ ತೋರಿಸಲಾಗಿದೆ. ಚತುರ್ಭುಜಗಳನ್ನು ಹೊಂದಿರುವ ಈ ಶಿಲ್ಪವು ಕೆಳ ಬಲಗೈಯಲ್ಲಿ

ಅಕ್ಷಮಾಲೆ, ಬಲ ಮೇಲಿನ ಕೈಯಲ್ಲಿ ಎಡ ಕೆಳ ಕೈಯಲ್ಲಿ ಅಜ್ಯಸ್ತಾಲಿ, (ಎಡ ಮೇಲಿನ ಕೈಯಲ್ಲಿ ಹಿಡಿದಿದ್ದುದು ಭಗ್ನ ಗೊಂಡಿದೆ) ಸುಂದರ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆ. ಲಕ್ಷ್ಮೀನಾರಾಯಣರ ಶಿಲ್ಪವು ಸಂಪೂರ್ಣವಾಗಿ ಭಗ್ನ ಗೊಂಡಿದ್ದು, ಇದರ ಚಿಕ್ಕ ಚಿಕ್ಕ ಶಿಲ್ಪಾವಶೇಷಗಳನ್ನು ಪೀಠದ ಮೇಲೆಯೇ ಇರಿಸಲಾಗಿದೆ. ಈ ಶಿಲ್ಪದ ಎಡಪಕ್ಕದಲ್ಲಿ ಮಹೇಶ್ವರನ ಶಿಲ್ಪವಿದೆ. ಜಟಾಮುಕುಟಧಾರಿಯಾದ ಈ ಶಿಲ್ಪವೂ ಚತುರ್ಭುಜ ಹೊಂದಿದ್ದು, ಕೆಳ ಬಲಗೈಯಲ್ಲಿ ಮಾಲೆ, ಮೇಲಿನ ಕೈಯಲ್ಲಿ ತ್ರಿಶೂಲ ಹಿಡಿದಿದೆ. ಮತ್ತು ಎಡ ಕೆಳಕೈಯು ಭಗ್ನಗೊಂಡಿದ್ದು, ಮೇಲಿನ ಕೈಯಲ್ಲಿ ನಾಗಸರ್ಪವನ್ನು ಹಿಡಿದಿರುವಂತೆ ಕೆತ್ತ ಲಾಗಿದೆ. ಈ ಶಿಲ್ಪವೂ ಸಹ ಸುಂದರ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದೆ. ಈ ತ್ರೈಪುರುಷ ಶಿಲ್ಪಗಳು ಪ್ರಭಾವಳಿಯ ಎಡಭಾಗದಲ್ಲಿ ಉಪದೇವತೆಯರ ಶಿಲ್ಪಗಳನ್ನೂ ಮತ್ತು ಪೀಠದಲ್ಲಿ ಅನುಕ್ರಮವಾಗಿ ವಾಹನಗಳಾದ ಹಂಸ, ಗರುಡ ಮತ್ತು ನಂದಿಯ ಉಬ್ಬುಶಿಲ್ಪಗಳನ್ನು ಹೊಂದಿವೆ. ದೇವಾಲಯ ದಲ್ಲಿ ಸಾಮಾನ್ಯವಾಗಿ ಗರ್ಭಗೃಹದ ನಂತರ ಕಂಡುಬರುವ ಅಂತರಾಳ ಭಾಗವು ಇಲ್ಲಿ ಕಾಣಸಿಗುವು ದಿಲ್ಲ. ಆದರೆ ವಿಶಾಲ ವಾದ ನವರಂಗ ಮತ್ತು ಸಭಾ ಮಂಟಪಗಳನ್ನು ಕಾಣಬಹುದು.

ಈ ದೇವಾಲಯದ ದ್ವಾರ ಬಾಗಿಲದ ಎಡ ಪಕ್ಕ ದಲ್ಲಿಯೇ ಶಿಲಾಶಾಸನವನ್ನು ನಿಲ್ಲಿಸಲಾಗಿದೆ. ಈ ಶಾಸನವು[೧೦] ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲ ಜಯಸಿಂಹನ ಕಾಲಕ್ಕೆ ಸೇರಿದ್ದು. ಇದರಲ್ಲಿ ದೇವಾಲಯಕ್ಕೆ ಸಂಬಂಧಪಟ್ಟಂತೆ ದೊರೆಯುವ ವಿಷಯವೆಂದರೆ ಅಕ್ಕಾದೇವಿಯು ಕಿಸು ಕಾಡೆಪ್ಪತ್ತನ್ನು ಆಳುತ್ತಿದ್ದಾಗ ತನ್ನ ಅಣ್ಣ ವಿಕ್ರಮಾದಿತ್ಯನಿಗೆ ಪರೋಕ್ಷ ವಿನಯವಾಗಿ ಪೆರೂರು ಅಗ್ರಹಾರವನ್ನು ಸರ್ವನಮಸ್ಯವಾಗಿ ಬಿಟ್ಟಳಲ್ಲದೆ, ಆವೂರಿನಲ್ಲಿ ಮಾಡಿಸಿದ ತ್ರೈಪುರುಷ ಶಾಲೆಯ ೫೦೦ ಮತ್ತು ಭೂಮಿಯನ್ನು ೫೦ ಮನೆಯನ್ನು, ಎರಡು ಮತ್ತರು ಹೂವಿನ ತೋಟವನ್ನು ದಾನ ಬಿಡುತ್ತಾಳೆ. ಈ ಧರ್ಮವನ್ನು ರಾಜರಕ್ಷಿತ ಧರ್ಮವೆಂದು ಕರೆದು ಇದನ್ನು ಪೆರೂರು ೪೦೦ ಮಹಾಜನರು ಪಾಲಿಸಬೇಕೆಂದಿದೆ.[೧೧] ಇಲ್ಲಿ ಪೆರೂರು ಎಂಬುದು ಬಹುಶಃ ಬೇಲೂರಿನ ಪ್ರಾಚೀನ ನಾಮವಿರ ಬಹುದು. ಅಲ್ಲದೆ ಶಾಸನದಲ್ಲಿ ಉಲ್ಲೇಖಿತ ತ್ರೈಪುರುಷ ಶಾಲೆ ಎಂಬುದು ಬೇಲೂರಿನ ಬೇಲೂರಪ್ಪ ಅಥವಾ ನಾರಾಯಣ ದೇವಾಲಯವೇ ಆಗಿರಬಹುದು. ಏಕೆಂದರೆ ಬೇಲೂರು ಅಗ್ರಹಾರವಾಗಿತ್ತೆಂದು ಶಾಸನವೇ ಉಲ್ಲೇಖಿಸುತ್ತದೆ.

ಇದೇ ಮಾದರಿಯ ಶಿಲ್ಪಗಳಿದ್ದಿರಬಹುದಾದ ಪೀಠವನ್ನು ಹಂಪಿಯ ವಿರುಪಾಕ್ಷ ದೇವಾಲಯದ ಕನಕಗಿರಿ ಉತ್ತರ ದಿಕ್ಕಿನ ಗೋಪುರದಲ್ಲಿ ಅಳವಡಿಸಲಾಗಿದೆ. ಗಾರೆಯಿಂದ ಕಟ್ಟಲ್ಪಟ್ಟ ಈ ಗೋಪುರದ ಪ್ರಸ್ತರ ಭಾಗದಲ್ಲಿ ಶಿಲೆಯ ಪೀಠಭಾಗವನ್ನು ಮಾತ್ರ ಅಳವಡಿಸಿ ಅನಂತರ ಗಾರೆಯ ಗೋಪುರವನ್ನು ನಿರ್ಮಿಸಲಾಗಿದೆ. ಈ ಪೀಠದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ವಾಹನಗಳನ್ನು ಮಾತ್ರವೇ ಕಾಣಬಹುದು. ಪೀಠದ ಮಧ್ಯಭಾಗದಲ್ಲಿ ಸಣ್ಣ ಕೋಷ್ಟಗಳಲ್ಲಿ ಹಂಸ, ಪದ್ಮಾಸನದಲ್ಲಿ ಕುಳಿತ ಗರುಡ ಮತ್ತು ನಂದಿಯ ಶಿಲ್ಪಗಳನ್ನು ಕಂಡಿರಿಸಲಾಗಿದೆ. ಶಿಲೆಯ ಈ ಪೀಠವನ್ನು ಕುರಿತು ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೩ ಹಂಪಿ ಶಾಸನಗಳು ಎಂಬ ಶಾಸನ ಸಂಪುಟದಲ್ಲಿ ಸಂಪಾದಕರು ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಕನಕಗಿರಿ ಗೋಪುರದ ಮೊದಲ ಹಂತ (ಪ್ರಸ್ತಾರದವರೆಗೆ) ಹೊಯ್ಸಳರ ಕಾಲಕ್ಕೆ ರಚನೆಯಾಗಿರಬೇಕು. ಮುಂದಿನ ಹಂತದಲ್ಲಿ ಗೋಪುರವನ್ನು ಗಾರೆಯಲ್ಲಿ ಕಟ್ಟಿರಬೇಕು. ಗೋಪುರದ ಉತ್ತರದಲ್ಲಿ ತ್ರಿಮೂರ್ತಿ ಪೀಠವೊಂದನ್ನು ಪ್ರಸ್ತಾರದ ಮೇಲೆ ಸೇರಿಸಿದೆ. ಅಂದರೆ ಇಲ್ಲಿ ಹೊಯ್ಸಳರ ಕಾಲದಲ್ಲಿ ಅಥವಾ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ತ್ರಿಮೂರ್ತಿ ದೇವಾಲಯವೊಂದಿದ್ದು ಒಂದೇ ಪೀಠದಲ್ಲಿ ಮೂರು ಮೂರ್ತಿಗಳ ಪ್ರತಿಷ್ಠೆಯಾಗಿದ್ದವು ಎಂದು ಹೇಳುವುದರ ಮೂಲಕ ಹಂಪಿ ಪರಿಸರದಲ್ಲಿಯೂ ಸಹ ಒಂದೇ ಪೀಠದ ಮೇಲೆ ತ್ರೈಪುರುಷರನ್ನು ಹೊಂದಿರುವ ಒಂದು ದೇವಾಲಯವಿದ್ದಿರಬಹುದೆಂದು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಈ ಪೀಠವು ಬಹುಶಃ ಹೊಯ್ಸಳರ ಕಾಲದಲ್ಲಿ ನಿರ್ಮಿತವಾದವು ಎಂದು ಹೇಳಲಾಗುವ ವಿರೂಪಾಕ್ಷ ದೇವಾಲಯದ ಸಮುಚ್ಚಯದಲ್ಲಿರುವ ಪಂಪಾಂಬಿಕೆ ಮತ್ತು ಭುವನೇಶ್ವರಿ ದೇವಾಲಯಗಳೆರಡರಲ್ಲಿ ಒಂದು ದೇವಾಲಯ ದಿದ್ದಿರಬಹುದೆಂದು ಹೇಳುತ್ತಾರೆ.[೧೨]

ಈ ಮೇಲಿನ ಎಲ್ಲ ವಿವರಣೆಗಳೊಂದಿಗೆ, ಈ ಲೇಖನದ ಮೂಲಕ ಹೇಳಬಯಸುವುದೇನೆಂದರೆ, ಕಾಲಕಾಲಕ್ಕೆ ಎಲ್ಲ ಮನೆತನಗಳ ಅರಸರು ಒಂದೇ ಪೀಠದಲ್ಲಿ ತ್ರೈಪುರುಷರನ್ನು ಸ್ಥಾಪಿಸುವುದರೊಂದಿಗೆ ಧರ್ಮ ಸಮನ್ವಯತೆಗೆ ಆದ್ಯತೆ ನೀಡಿದ್ದರಲ್ಲದೆ, ಅದರ ಜೊತೆ ಜೊತೆಗೆ ಮೂರ್ತಿ ರೂಪದಲ್ಲಿ ಬ್ರಹ್ಮನ ಆರಾಧನೆಗೆ ಅವಕಾಶ ಕಲ್ಪಿಸಿದ್ದರೆಂಬುದು ಗಮನಿಸ ಬೇಕಾದ ವಿಷಯ, ಸ್ವತಂತ್ರವಾಗಿ ಬ್ರಹ್ಮನ ಮೂರ್ತಿಗಳನ್ನು ಪೂಜಿಸಲು ಅವಕಾಶವಿಲ್ಲದಿದ್ದರೂ ವಿಷ್ಣು, ಮಹೇಶ್ವರರೊಂದಿಗೆ ಬ್ರಹ್ಮನ ಮೂರ್ತಿ ಪೂಜೆ ಬಳಕೆಯಲ್ಲಿತ್ತೆಂದು ತಿಳಿಯಬಹುದು.

(ಈ ಲೇಖನವನ್ನು ಸಿದ್ಧಪಡಿಸಲು ಮಾರ್ಗದರ್ಶನ ನೀಡಿದ ಹಾಗೂ ನನ್ನ ಮಾರ್ಗದರ್ಶಕರೂ ಆದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಹ ಪ್ರಾಧ್ಯಾಪಕರಾದ ಡಾ. ಸಿ.ಎಸ್. ವಾಸುದೇವನ್ ಇವರಿಗೆ ಧನ್ಯವಾದಗಳು)

## ಅಡಿಟಿಪ್ಪಣಿಗಳು

೧. ಹೊನವಾಡ ವ್ಹಿ.ಕೆ., **ರೋಣ ತಾಲೂಕಿನ ಶಾಸನಗಳು ; ಒಂದು ಅಧ್ಯಯನ** (ಅಪ್ರಕಟಿತ ಎಂ.ಫಿಲ್. ಪ್ರಬಂಧ ಪುಟ ೧-೨.

೨. ಮಂಜುನಾಥ ಎಂ.ಜಿ., 'ಗದಗ ಜಿಲ್ಲೆಯ ಧರ್ಮಗಳು : ಒಂದು ಅಧ್ಯಯನ', ಗೋಪಾಲ ಆರ್. (ಸಂ). **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪುಟ ೪೧೪.

೩. ಸುಂದರ ಅ., 'ಧಾರವಾಡ ಜಿಲ್ಲೆಯ ಪ್ರಾಚೀನ ದೇವಾಲಯಗಳು' (ಲೇಖನ) ತಿರುಳ್ಗನ್ನಡ (**ಧಾರವಾಡ ಜಿಲ್ಲೆಯ ೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ),** ಪುಟ ೨೯.

೪. ಬಾಲಸುಬ್ರಹ್ಮಣ್ಯ, ವಾಸುದೇವನ್ ಸಿ.ಎಸ್., ರಮೇಶ ನಾಯಕ, **ಕರ್ನಾಟಕ ದೇವಾಲಯ ಕೋಶ-ಗದಗ ಜಿಲ್ಲೆ,** ಪುಟ ೨೩೧ ಮತ್ತು SII X-i No. ೪೨.

೫. ಅದೇ, ಪುಟ ೨೩೧ ಮತ್ತು SII X-ii No. ೧೨೯.

೬. SII XV No. ೨೪೬.

೭. ಕೆ. ವಸಂತಲಕ್ಷ್ಮಿ ಕೆ., 'ಗದಗ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಲೆ ಮತ್ತು ವಾಸ್ತುಶಿಲ್ಪ', ಗೋಪಾಲ ಆರ್. (ಸಂ), **ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪುಟ ೨೧೧.

೮. SII XV No. ೨.

೯. ಅದೇ, XV No. ೧೧೭.

೧೦. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯, ಬಾಗಲಕೋಟ ಜಿಲ್ಲೆ,** ಶಾ.ಸಂ.-೧೬, ಪುಟ ೧೫೮-೬೦ ಮತ್ತು ಇಂಡಿಯನ್ ಆ್ಯಂಟಿಕ್ವರಿ ಸಂಪುಟ XVII, ಪುಟ ೨೭೦-೨೭೫.

೧೧. ಅದೇ, ಪುಟ ೧೫೯.

೧೨. **ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೯,** ಹಂಪಿ ಶಾಸನಗಳು, ಪುಟ ಸಂಖ್ಯೆ XXXV.

ರಂಗನಾಥ. ವೈ*

# ಮಹಾಕೂಟೇಶ್ವರ ದೇಗುಲದ ಆತ್ಮಲಿಂಗ : ಅಪರೂಪ ಕಥಾನಕ ಶಿಲ್ಪ

ಮಹಾಕೂಟ ಬಾದಾಮಿ ಚಾಲುಕ್ಯರ ಕಾಲದ ವಾಸ್ತು ಮತ್ತು ಶಿಲ್ಪಕಲಾ ನೆಲೆಗಳಲ್ಲಿ ಒಂದು ಪ್ರಮುಖ ಸ್ಥಳವಾಗಿದೆ. ದಕ್ಷಿಣಕಾಶಿ ಎಂದು ಆ ಭಾಗದಲ್ಲಿ ಜನಪ್ರಿಯವಾಗಿರುವ ಮಹಾಕೂಟ ಧಾರ್ಮಿಕ ತೀರ್ಥಕ್ಷೇತ್ರವಾಗಿದೆ. ಚಾಲುಕ್ಯರ ಹಲವಾರು ಶಾಸನಗಳಲ್ಲಿ ಮಹಾಕೂಟದ ಉಲ್ಲೇಖಗಳಿವೆ. ಮುಖ್ಯವಾಗಿ ಮೊದಲನೇ ಪುಲಿಕೇಶಿಯ ಮಗ ಮಂಗಳೇಶನ ಧರ್ಮವಿಜಯ ಶಾಸನಸ್ತಂಭ ಮಹಾಕೂಟದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಮುಖ್ಯದಾಖಲೆಯಾಗಿದೆ.

ಮಹಾಕೂಟ ಪದಶಃ ಅರ್ಥೈಯಿಸಿದಾಗ ತಾಂತ್ರಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ಇಲ್ಲಿನ ದೇವಾಲಯಗಳು "ಪ್ರಾಚೀನ ವಿಷ್ಣುಪುಷ್ಕರಣಿ" ಎಂದು ಕರೆಯುವ ಹಾಗೂ ಶಾಸನದಲ್ಲಿ "ದೇವದ್ರೋಣಿ" ಎಂದು ಕರೆಯಲಾಗುವ ಕಲ್ಯಾಣಿಯ ಸುತ್ತಲೂ ನಿರ್ಮಾಣವಾಗಿದೆ. ಮಹಾಕೂಟೇಶ್ವರ ನಾಥ ಇಲ್ಲಿಯ ಪ್ರಮುಖ ಆರಾಧ್ಯ ದೇವ ಹಾಗೂ ಈ ದೇವಾಲಯದ ಸಂಕೀರ್ಣದ ಪ್ರಮುಖ ದೇವಾಲಯವೂ ಆಗಿದೆ. ಈ ಸಂಕೀರ್ಣದಲ್ಲಿರುವ ಇನ್ನುಳಿದ ಮುಖ್ಯ ದೇವಾಲಯಗಳೆಂದರೆ ಮಲ್ಲಿಕಾರ್ಜುನ, ವಿರುಪಾಕ್ಷ, ಸಂಗಮೇಶ್ವರ, ದೇವಾಲಯಗಳು ಅಲ್ಲದೇ ಲಕುಲೀಶ ಮತ್ತು ಸರಸ್ವತಿ ದೇವತೆಗಳಿಗಾಗಿ ಪ್ರತ್ಯೇಕ ದೇವಾಲಯಗಳಿದ್ದವು. ಪ್ರಸ್ತುತ ಕೊನೆಯ ಎರಡು ದೇವಾಲಯಗಳು ಇತ್ತೀಚಿನ ಕಟ್ಟಡಗಳಲ್ಲಿ ಸೇರಿಹೋಗಿವೆ.

ಮಹಾಕೂಟೇಶ್ವರನಾಥ ದೇವಾಲಯ ಮಂಗಳೇಶನ ಶಾಸನದಲ್ಲಿ ಉಲ್ಲೇಖಗೊಂಡಿದೆ. ಸುಮಾರು ಕ್ರಿ.ಶ. ೬೦೨ ರಲ್ಲಿ ಮಂಗಳೇಶನು ಈ ಶಾಸನ ಹಾಕಿಸಿದ್ದು ಅದರ ಪ್ರಕಾರ ಕಳಚೂರಿ ಬುದ್ಧರಾಜನನ್ನು ಸೋಲಿಸಿ ಯುದ್ಧದಲ್ಲಿ ಸಂಗ್ರಹಿಸಿದ ಎಲ್ಲಾ ಸಂಪತ್ತನ್ನು ಮಹಾಕೂಟೇಶ್ವರನಾಥನ ಧಾರ್ಮಿಕ ಮೆರವಣಿಗೆಯಲ್ಲಿ ವಿನಿಯೋಗಿಸಿದನೆಂದು ಉಲ್ಲೇಖಿಸಿದೆ. ಇದರಿಂದ ಮಹಾಕೂಟೇಶ್ವರ ದೇವರು ಚಾಲುಕ್ಯ ಮನೆತನದ ಆರಾಧ್ಯ ದೇವರಾಗಿತ್ತೆಂದು ಕೂಡ ಹೇಳಬಹುದು.

ಮಹಾಕೂಟೇಶ್ವರ ದೇವಾಲಯ ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಪೂಜೆಯಲ್ಲಿರುವ ಧಾರ್ಮಿಕ ಕೇಂದ್ರವಾಗಿದೆ. ಈ ದೇವಾಲಯ ವಾಸ್ತುಶೈಲಿಯ ದೃಷ್ಟಿಯಿಂದ ದ್ರಾವಿಡ ಶೈಲಿಯಲ್ಲಿದ್ದು ಗರ್ಭಗೃಹ, ಅಂತರಾಳ (ಶುಕನಾಸಿ) ನವರಂಗ ಅಥವಾ ಸಭಾಮಂಟಪ ಮತ್ತು ಮುಖಮಂಟಪ ಗಳನ್ನು ಹೊಂದಿದೆ. ಈ ದೇವಾಲಯವು ಸಾಂಧಾರ ಮಾದರಿಯದ್ದಾಗಿದೆ. ಈ ದೇವಾಲಯದ ಬಿತ್ತಿಯಲ್ಲಿ ದೇವಕೋಷ್ಠಗಳು ಶಿವನ ವಿಭಿನ್ನ ರೂಪಗಳನ್ನು ಬಿಂಬಿಸುವ ಉಬ್ಬುಶಿಲ್ಪ ಕೃತಿಗಳು ಇವೆ. ದೇವಾಲಯದ ಅಧಿಷ್ಠಾನ ಸರಳವಾಗಿದ್ದು ಇದರಲ್ಲಿ ಶಿವಲೀಲಾ ಘಟನೆಗಳು ಹಾಗು ಕೆಲವು ಯುದ್ಧ ಸನ್ನಿವೇಶಗಳನ್ನು ನಿರೂಪಿಸುವ ಕಥಾನಕ ಶಿಲ್ಪಗಳಿವೆ. ಪ್ರಸ್ತುತ ಕಥಾನಕ ಶಿಲ್ಪಗಳಿಗೆ ಸಂಬಂಧಿಸಿದ ಶಿವನ ಆತ್ಮಲಿಂಗ ಘಟನೆಗೆ ಸಂಬಂಧಿಸಿದ ಕಥಾನಿರೂಪಣೆ ಯನ್ನು ಇಲ್ಲಿ ಚರ್ಚಿಸಿದೆ. ಈ ನಿರೂಪಣೆಯ ದೇವಾಲಯದ ದಕ್ಷಿಣ ಭಾಗದ ಅಧಿಷ್ಠಾನದ ಹಾರ ಪಟ್ಟಿಕೆಯಲ್ಲಿ ಕಂಡು ಬರುತ್ತದೆ.

ಶಿವನ ಆತ್ಮಲಿಂಗ ಕಥನ ವಿಶಿಷ್ಟ ನಿರೂಪಣೆಗಳಿಂದ ಕೂಡಿದೆ. ಆತ್ಮಲಿಂಗ ಕಥನಕ್ಕೆ ಪೂರಕವಾಗಿ ರಾವಣನು ತಪಸ್ಸನ್ನು ಮಾಡುವ ದೃಶ್ಯಗಳು ಈ ಶಿಲ್ಪಗಳಲ್ಲಿ ನಿರೂಪಣೆಗೊಂಡಿದೆ. ಒಟ್ಟು ನಾಲ್ಕು ಪಟ್ಟಿಕೆಗಳನ್ನು ಇಲ್ಲಿ ಗುರುತಿಸಬಹುದು. ಮೊದಲನೆಯದು ನಂದಿಯ ಸಮೇತರಾಗಿ ನಿಂತಿರುವ ಪಾರ್ವತಿ ಪರಮೇಶ್ವರರು ಕೈಲಾಸದಲ್ಲಿರುವಂತೆ ತೋರಿಸಲಾಗಿದೆ. ಎರಡನೆಯ ದೃಶ್ಯ ಘಟನೆಯಲ್ಲಿ ರಾವಣನು ಆತ್ಮಲಿಂಗಕ್ಕಾಗಿ ಘೋರ ತಪಸ್ಸನ್ನು ಮಾಡುತ್ತಿರುವಂತೆ ತೋರಿಸಲಾಗಿದೆ. ಈ ದೃಶ್ಯಾವಳಿಯಲ್ಲಿ ಶಿವ ಮತ್ತು ಪಾರ್ವತಿಯರು ಕೈಲಾಸದಲ್ಲಿ ಕುಳಿತು ರಾವಣನ ತಪಸ್ಸು ನೋಡಲ್ಪಡುವಂತೆ ಬಿಂಬಿಸಲಾಗಿದೆ. ಶಿವ ಮತ್ತು ಪಾರ್ವತಿಯರನ್ನು ತೋರಿಸುವ ರೀತಿ ಬಹಳ ಸೊಗಸಾಗಿದ್ದು ಪಾರ್ವತಿ ಶಿವನ ತೊಡೆಯ ಮೇಲೆ ಕುಳಿತಿದ್ದಾಳೆ. ರಾವಣನು ತನ್ನ ತಲೆಗಳನ್ನು ಸ್ವತಃ ಒಂದೊಂದನ್ನು ಕತ್ತರಿಸಿ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಲು ಶಿವನಿಗೆ ಅರ್ಪಿಸುತ್ತಿದ್ದಾರೆ. ಮತ್ತೊಂದು

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು.

ದೃಶ್ಯದಲ್ಲಿ ತನ್ನ ತಲೆಗಳನ್ನೇ ಹಾರ ಮಾಡಿಕೊಂಡು ಒಂದೇ ಕಾಲಿನಲ್ಲಿ ಹಠಯೋಗ ತಪಸ್ಸನ್ನು ಮಾಡುತ್ತಿದ್ದಾನೆ. ಇಲ್ಲಿಯೂ ಕೂಡ ಶಿವ ಮತ್ತು ಪಾರ್ವತಿಯರನ್ನು ಕೈಲಾಸದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಕೊನೆಯ ನಿರೂಪಣೆಯಲ್ಲಿ ರಾವಣನು ಆತ್ಮಲಿಂಗಕ್ಕಾಗಿ ಶಿವ ಮತ್ತು ಪಾರ್ವತಿಯರಿರುವ ಕೈಲಾಸಪರ್ವತವನ್ನೇ ಎತ್ತುವ ಪ್ರಯತ್ನದಲ್ಲಿದ್ದಾನೆ. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಕಥಾ ನಿರೂಪಣಾ ಅಂಶಗಳು ಬಿತ್ತಿಯಲ್ಲಿ ಕಂಡು ಬರುವ ಶಿಲ್ಪಗಳಂತೆ ದೊಡ್ಡ ಶಿಲ್ಪಗಳಂತೆ ಚಿತ್ರಿಸುವ ಬದಲಾಗಿ ಅದಿಷ್ಠಾನದ ಪಟ್ಟಿಕೆಯಲ್ಲಿರುವ ಸಣ್ಣ ಸಣ್ಣ ಆಕೃತಿಗಳಾಗಿ ಚಿತ್ರಿಸಿದ್ದಾರೆ. ಅವುಗಳ ಅಳತೆ ಸುಮಾರು ಒಂಬತ್ತು ಇಂಚು ಎತ್ತರವಿರಬಹುದು. ಇಷ್ಟು ಕಿರಿದಾದ ಅಳತೆಯಲ್ಲಿ ಕಲಾವಿದರು ರಾವಣನು ಆತ್ಮಲಿಂಗ ಪಡೆಯುವ ಕಥನದ ಆಯ್ದ ಘಟನಾವಳಿಯನ್ನು ಮಾತ್ರ ಆರಿಸಿಕೊಂಡು ಹಿಡಿ ಕಥೆಯ ಚಿತ್ರಣ ನೀಡುವ ರೀತಿಯಲ್ಲಿ ನಿರೂಪಿಸಿದ್ದಾರೆ. ಆತ್ಮಲಿಂಗ ಕಥನವು ಗೋಕರ್ಣ ಮಹಾತ್ಮೆಯಲ್ಲಿ ಕೂಡ ಬಂದಿದೆ. ಪ್ರಸ್ತುತ ಶಿಲ್ಪ ಮೂಡಿಬಂದಿರುವ ದೃಶ್ಯಾವಳಿಗಳು ನಂತರದ ಕಾಲದಲ್ಲಿಯೂ ಕೂಡ ದೇವಾಲಯಗಳಲ್ಲಿ ರಚನೆಯಾಗಿರುವುದು ಚಾಲುಕ್ಯರ ವಾಸ್ತು ನೆಲೆಗಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದ ದಕ್ಷಿಣದ್ವಾರ ಮಂಟಪದ ಮೇಲೆ ರಾವಣನು ಕೈಲಾಸ ಪರ್ವತ ಎತ್ತುತ್ತಿರುವ ದೃಶ್ಯ ಆಕರ್ಷಿತವಾಗಿದೆ. ಅದೇ ರೀತಿ ರಾಷ್ಟ್ರಕೂಟರ ಕಾಲದ ಎಲ್ಲೋರದ ಕೈಲಾಸನಾಥ ದೇವಾಲಯದಲ್ಲಿ ಸುಮಾರು ಹದಿನಾಲ್ಕು ಅಡಿ ಎತ್ತರದ ರಾವಣ ಕೈಲಾಸ ಪರ್ವತ ಎತ್ತುತ್ತಿರುವ ದೃಶ್ಯ ನಿರೂಪಣೆ ಇದೆ. ಇದನ್ನು ಗಮನಿಸಿದಾಗ ಪ್ರಾಯಶಃ ಪ್ರಸ್ತುತ ಮಹಾಕೂಟದ ಕಥಾನಿರೂಪಣಾ ಶಿಲ್ಪಗಳು ನಂತರದ ಶಿಲ್ಪಗಳಿಗೆ ಪ್ರೇರಣೆಯನ್ನು ಒದಗಿಸಿದೆ ಎಂದು ಹೇಳಬಹುದು. ಚಾಲುಕ್ಯ ಶಿಲ್ಪಗಳು ಭಾರತೀಯ ಶಿಲ್ಪಕಲೆಯ ಬೆಳವಣಿಗೆಯಲ್ಲಿ ಪ್ರಾಯಶಃ ಮೊದಲ ಬಾರಿಗೆ ಇಂತಹ ಹಲವಾರು ಹೊಸ ಪೌರಾಣಿಕ ವಿಷಯಗಳನ್ನು ನಿರೂಪಿಸಿದ್ದವು. ಚಾಲುಕ್ಯ ಕಲಾವಿದರು ಬಾದಾಮಿ, ಮಹಾಕೂಟ, ಐಹೊಳೆ, ಪಟ್ಟದಕಲ್ಲುಗಳಲ್ಲಿ ರಚಿಸಿದ ಶಿಲ್ಪಗಳು ನಂತರದ ದೇವಾಲಯ ಶಿಲ್ಪಗಳಿಗೆ ಮಾದರಿಯಾಗಿವೆ. ರಾಷ್ಟ್ರಕೂಟರ ಹಾಗೂ ಕಲ್ಯಾಣದ ಚಾಲುಕ್ಯರ ಶಿಲ್ಪ ಕಲೆಯು ಹೊಯ್ಸಳ ಶಿಲ್ಪಕಲೆಗೆ ಪ್ರೇರಣೆಯನ್ನು ಒದಗಿಸುತ್ತವೆ. ಇವು ತಮ್ಮದೇ ಅದಂತಹ ವಿಶಿಷ್ಟವಾದ ಸ್ಥಾನವನ್ನು ಹೊಂದಿವೆ. ಇದಕ್ಕೆ ಪ್ರಸ್ತುತ ಮಹಾಕೂಟದ ರಾವಣ ಆತ್ಮಲಿಂಗ ಕಥಾ ನಿರೂಪಣಾ ಶಿಲ್ಪ ಒಂದು ಮುಖ್ಯ ಉದಾಹರಣೆಯಾಗಿದೆ.

(ಈ ಪ್ರಬಂಧ ಮೈಸೂರು ವಿಶ್ವವಿದ್ಯಾನಿಲಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲಿ ಪ್ರೊ. ಎಂ.ವಿ. ಕೃಷ್ಣಪ್ಪನವರ ಮಾರ್ಗದರ್ಶನದಲ್ಲಿ ನಾನು ಕೈಗೊಳ್ಳುತ್ತಿರುವ "ಮಹಾಕೂಟ ದೇವಾಲಯಗಳ ಬಹುಮುಖ ಅಧ್ಯಯನ" ಎಂಬ ಸಂಶೋಧನಾ ಅಧ್ಯಯನದ ಭಾಗವಾಗಿದೆ. ಈ ಲೇಖನವನ್ನು ತಯಾರಿಸುವಲ್ಲಿ ನನಗೆ ಮಾರ್ಗದರ್ಶನ ನೀಡಿದ ಮಾರ್ಗದರ್ಶಕರಾದ ಎಂ.ವಿ. ಕೃಷ್ಣಪ್ಪರವರಿಗೂ ಮತ್ತು ಡಾ. ಆರ್.ಎಚ್. ಕುಲಕರ್ಣಿರವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.)

## ಆಧಾರಸೂಚಿ


೧. Carrol Bolen, 1985, *"Mahakuta Pillar and its temple".*

೨. G.S. Gay, F. Asher, *Indian Epigraphy, Its bearing on Art History,* Varanasi.

೩. George Michell, 1975, *"Dating of Mahakuteshwara Temple at Mahakuta"*

೪. Orrientel Arts Volume 2.3.

೫. Henry Cusines, 1953, *"The Chalukya Architecture of Canceries"*

೬. ಬಸಪ್ಪ ಶಂಕರ ಶಾಸ್ತ್ರಿ, **ಮಹಾಕೂಟ ದೇವಾಲಯ–ಒಂದು ಕ್ಷೇತ್ರ**

೭. ಡಾ. ಶೀಲಾಕಾಂತ ಪತ್ತಾರ, **ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ,** ಕ.ವಿ.ವಿ., ಹಂಪಿ.

೮. ಕೂ.ಸ. ಅಪರ್ಣ, **ದೇವಾಲಯ ವಾಸ್ತುಶಿಲ್ಪ ಪರಿಚಯ,** ಕ.ವಿ.ವಿ., ಹಂಪಿ.

ಡಾ. ಶಲ್ವಪಿಳ್ಳೈ ಐಯಂಗಾರ್*

# ಹೊಯ್ಸಳ ದೇವಾಲಯಗಳಲ್ಲಿ ದಧಿವಾಮನಮೂರ್ತಿ ಶಿಲ್ಪಗಳು

ಹೊಯ್ಸಳ ಸಾಮ್ರಾಜ್ಯ ದಕ್ಷಿಣಭಾರತದಲ್ಲಿಯೇ ಪ್ರಮುಖರಾದ ಒಂದು ರಾಜಮನೆತನವಾಗಿತ್ತು. ಅವರು ರಾಜಕೀಯ ಮತ್ತು ಆಡಳಿತದ ದೃಷ್ಟಿಯಿಂದ ಎಷ್ಟು ಪ್ರಸಿದ್ಧರಾಗಿದ್ದರೋ ಅದಕ್ಕಿಂತ ಹೆಚ್ಚಿನ ಮಟ್ಟದಲ್ಲಿ ಪ್ರಖ್ಯಾತರಾಗಿರುವುದು ಅವರ ಶಿಲ್ಪಕಲೆಗಳು ಮತ್ತು ದೇವಾಲಯಗಳಿಂದ ಎಂಬುದು ಸರ್ವವಿದಿತ. ತಮ್ಮದೇ ಆದ ಶೈಲಿಯಲ್ಲಿ ದೇವಾಲಯಗಳನ್ನು ಕರ್ನಾಟಕ ಹಾಗೂ ತಮಿಳುನಾಡುಗಳಲ್ಲಿ ಕಟ್ಟಿದ್ದು ಇಂದಿಗೂ ಸಹ ಅವು ಹೊಯ್ಸಳರ ಶಿಲ್ಪಕಲಾಶೈಲಿಯನ್ನು ಜಗತ್ತಿಗೆ ಸಾರುತ್ತಿವೆ. ವಿದ್ವಾಂಸರು ಈ ದೇವಾಲಯಗಳ ಶೈಲಿಯ ಆಧಾರದ ಮೇಲೆ ಹೊಯ್ಸಳರ ಹೆಚ್ಚು ದೇವಾಲಯಗಳು ವೇಸರ ಶೈಲಿಯಲ್ಲಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಶಾಸ್ತ್ರಗ್ರಂಥಗಳ ಪೂರ್ಣವಿವರಗಳೊಂದಿಗೆ ಹೋಲಿಸಿದಾಗ ವೇಸರ ಶೈಲಿ ಎಂದು ಅಭಿಪ್ರಾಯಪಡಲಾಗುವುದಿಲ್ಲ.

ಈ ಹೊಯ್ಸಳರ ದೇವಾಲಯಗಳಲ್ಲಿ ವಾಸ್ತುವಿನಷ್ಟೇ ಪ್ರಾಮುಖ್ಯತೆಯನ್ನು ಅಥವಾ ಅದಕ್ಕಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಶಿಲ್ಪಗಳಿಗೆ ನೀಡಲಾಗಿದೆ. ಭಾರತೀಯ ಪುರಾಣ, ಆಗಮ ಹಾಗೂ ಕಾವ್ಯಗಳ ದೃಶ್ಯಾವಳಿಗಳನ್ನು ಅತಿ ಹೆಚ್ಚು ಶಿಲ್ಪರೂಪದಲ್ಲಿ ಪಡೆಮೂಡಿಸಿದ ಕೀರ್ತಿಯು ಹೊಯ್ಸಳರಿಗೆ ಸೇರಬೇಕು. ವೈಷ್ಣವ ಮಾತ್ರವಲ್ಲ, ಶೈವ, ಶಾಕ್ತ ಹಾಗೂ ಇತರ ಸಾಧಾರಣ ಶಿಲ್ಪಗಳೂ ಸಹ ಹೊಯ್ಸಳ ದೇವಾಲಯಗಳಲ್ಲಿ ಅತ್ಯಧಿಕವಾಗಿ ಕಂಡುಬರುತ್ತವೆ. ಬೇಲೂರು, ಹಳೇಬೀಡು, ನುಗ್ಗೇಹಳ್ಳಿ, ಅಮೃತಾಪುರ, ಸೋಮನಾಥಪುರ, ಮೊಸಳೆ, ಹೊಸಹೊಳಲು, ಬೂಚೇಶ್ವರ ಮುಂತಾದ ದೇವಾಲಯಗಳು ಹೊಯ್ಸಳರ ಶಿಲ್ಪಪ್ರದರ್ಶನಾಶಾಲೆಗಳಾಗಿವೆ. ಈ ದೇವಾಲಯಗಳ ಶಿಲ್ಪಗಳ ಅಧ್ಯಯನವು ಭಾರತೀಯ ಪುರಾಣಗಳ, ಆಗಮಗಳ ಅಧ್ಯಯನ ಎಂದು ಹೇಳಬಹುದು.

ಹೊಯ್ಸಳರ ದೇವಾಲಯಗಳಲ್ಲಿ ಅತಿ ಹೆಚ್ಚಿನ ಮಟ್ಟದಲ್ಲಿ ವೈಷ್ಣವ ಶಿಲ್ಪಗಳು ಕಂಡು ಬರುತ್ತದೆ ಎಂದರೆ ತಪ್ಪಾಗಲಾರದು. ವಿಷ್ಣುವಿನ ಇಪ್ಪತ್ತನಾಲ್ಕು ಮೂರ್ತಿಗಳು, ಅಲ್ಲಾಳನಾಥ, ದಶಾವತಾರ ಮೂರ್ತಿಗಳು, ನಾಲ್ಕು ವ್ಯೂಹ ಮೂರ್ತಿಗಳು, ಇತರೆ ರೀತಿಯ ಮೂರ್ತಿಗಳು ಸೇರಿ ವಿಷ್ಣುವಿನ ಎಂಬತ್ತೈದು ರೀತಿಯ ಮೂರ್ತಿಗಳು ನನ್ನ ಅಧ್ಯಯನದಲ್ಲಿ ಕಂಡುಬಂದಿದೆ. ಈ ಮೂರ್ತಿಗಳಲ್ಲಿ ಪ್ರಸ್ತುತ ಲೇಖನದಲ್ಲಿ ವಿಷ್ಣುವಿನ ಇತರ ಅವತಾರ ಮೂರ್ತಿಗಳಲ್ಲಿ ಒಂದಾದ ದಧಿವಾಮನ ಮೂರ್ತಿಯ ಬಗೆಗೆ ತಿಳಿಯೋಣ.

ಹೊಯ್ಸಳರ ಈ ದಧಿವಾಮನ ಮೂರ್ತಿಗಳನ್ನು ಸಾಮಾನ್ಯ ವಿದ್ವಾಂಸರು ಧನ್ವಂತರಿ ಎಂಬುದಾಗಿ ಗುರುತಿಸಿ ಶಿಲ್ಪಶಾಸ್ತ್ರದ ನಿಯಮಗಳನ್ನು ಮೀರಿದ್ದಾರೆ. ಅಂದರೆ ಇಲ್ಲಿಯವರೆಗೂ ದಧಿವಾಮನ ಮೂರ್ತಿಗಳನ್ನು ತಪ್ಪಾಗಿ ಧನ್ವಂತರಿ ಎಂದು ಗುರುತಿಸಲಾಗುತ್ತಿದೆ. ಈ ತಪ್ಪನ್ನು ಸರಿಪಡಿಸಿ ಮುಂದೆ ದಧಿವಾಮನ ಮೂರ್ತಿಗಳನ್ನು ಸರಿಯಾಗಿ ಗುರುತಿಸಬೇಕಿದೆ. ಈಗ ಈ ಎರಡೂ ಮೂರ್ತಿಗಳ ಬಗೆಗೆ ವಿವರಣೆಯನ್ನು ನೋಡೋಣ.

ದಧಿವಾಮನ ಮೂರ್ತಿಯು ಚಂದ್ರಮಂಡಲ ಮಧ್ಯದಲ್ಲಿ ಕುಳಿತಿರುವ ಭಂಗಿಯಲ್ಲಿದ್ದು ಎರಡು ಕೈಗಳಲ್ಲಿ ಅಮೃತಕುಂಭ ಮತ್ತು ಮೊಸರನ್ನ ಪಾತ್ರೆಗಳನ್ನು ಹಿಡಿದಿರುತ್ತಾನೆ, ಈ ಕೈಗಳಲ್ಲಿ ಈ ವಸ್ತುಗಳು ಕೆಲವೊಮ್ಮೆ ಬದಲಾವಣೆಯಾಗಿರುವುದನ್ನು ನಾವು ಗಮನಿಸಬಹುದು. ಆದರೆ ಎರಡೇ ಕೈಗಳಿದ್ದು ದಧ್ಯನ್ನ ಮತ್ತು ಮೊಸರನ್ನದ ಪಾತ್ರೆಗಳನ್ನು ಹೊಂದಿರಲೇಬೇಕು. ಶಂಖಚಕ್ರಗಳು ಭುಜದ ಬಳಿಯಿದ್ದು ಅವುಗಳನ್ನು ಸಾಂಕೇತಿಕವಾಗಿ ಕೆತ್ತಲಾಗಿರುತ್ತದೆಯೇ ಹೊರತು ಮೂರ್ತಿಯ ಕೈಗಳಲ್ಲಿ ಅವುಗಳನ್ನು ಹಿಡಿದಿರುವುದಿಲ್ಲ. ಉಳಿದಿರುವಂತೆ ಕಿರೀಟ, ಕುಂಡಲ, ಕಂಠಿಹಾರ, ಮುಕ್ತಾಸರ, ಕೇಯೂರ, ಕಟಕ, ಯಜ್ಞೋಪವೀತ, ಉತ್ತರೀಯ, ಅಂಗುಲೀಯಕ, ಗ್ರೈವೇಯಕ, ಕಾಂಚಿ, ಮುಕ್ತದಾಮ, ಉರುಬಂಧ, ಪಾದಕಟಕ ವನಮಾಲಾ ಪಾದಜಾಲಕ, ಮುಂತಾದ ಹೊಯ್ಸಳರ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಆಭರಣಗಳಿಂದ ಅಲಂಕೃತನಾಗಿರುತ್ತಾನೆ. ಪಕ್ಕದಲ್ಲಿ ರಮಾದೇವಿಯಿಂದ ಕೂಡಿರುತ್ತಾನೆ. ಇದು ಶಿಲ್ಪಗಳಲ್ಲಿ ಕಂಡುಬರುವ ಲಕ್ಷಣಗಳಾದರೆ ಶಾಸ್ತ್ರಗಳು ಏನು ಹೇಳುತ್ತವೆ ಎಂಬುದನ್ನು ಗಮನಿಸೋಣ.

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಶ್ರೀ ಡಿ. ದೇವರಾಜ ಅರಸು ಸ.ಪ್ರ.ದ.ಕಾ., ಹುಣಸೂರು.

ಪುರಾಣಗಳಲ್ಲಿ ದಧಿವಾಮನ ಮೂರ್ತಿಯ ಉತ್ಪತ್ತಿಯ ಬಗೆಗೆ ಅಧ್ಯಯನದಲ್ಲಿ ಯಾವುದೇ ಮೂಲಗಳು ಕಂಡುಬರದೇ ಇದ್ದರೂ ಆಗಮದ ಮೂಲಗಳಲ್ಲಿ ಅದು ನಮಗೆ ಕಂಡುಬರುತ್ತವೆ. ಪ್ರಕೀರ್ಣಾಧಿಕಾರ ಎಂಬ ವೈಖಾನಸ ಆಗಮ ಗ್ರಂಥಗಳಲ್ಲಿ ದಧಿವಾಮನ ಮೂರ್ತಿ ಯನ್ನು ಕುರಿತು ಹೀಗೆ ಹೇಳಲಾಗಿದೆ[೨]. "ದಧಿವಾಮನಮೂರ್ತಿಯು ಎರಡು ಭುಜಗಳನ್ನು ಹೊಂದಿದ್ದು, ಒಂದು ಕೈಯಲ್ಲಿ ಮೊಸರನ್ನವನ್ನೂ (ದಧ್ಯನ್ನ), ಮತ್ತೊಂದು ಕೈಯಲ್ಲಿ ಕುಂಭವನ್ನು ಹಿಡಿದಿದ್ದಾನೆ. ಅವನ ದೇಹದ ಬಣ್ಣ ಬಿಳಿ".

ಪಾಂಚರಾತ್ರ ಆಗಮಗಳ ಪ್ರಕಾರ "ದಧಿವಾಮನ ಮೂರ್ತಿಯು ರಮಾದೇವಿಯೊಂದಿಗೆ ಇರುತ್ತಾನೆ. ಅವನು ಚಂದ್ರಮಂಡಲದಲ್ಲಿದ್ದು, ದೇವತೆಗಳಿಂದ ಆರಾಧಿಸಲ್ಪಡುತ್ತಾನೆ. ಅವನು ಬಿಳಿಯ ಬಣ್ಣದಲ್ಲಿದ್ದು, ಅವನ ಕಣ್ಣುಗಳು ಕಮಲದ ದಳಗಳಂತಿವೆ. ಇವನಿಗೆ ಎರಡು ಕೈಗಳಿದ್ದು ಎರಡು ಚಿನ್ನದ ಪಾತ್ರೆಗಳನ್ನು ಹಿಡಿದಿದ್ದಾನೆ. ಬಲಗೈಯಲ್ಲಿ ದಧ್ಯನ್ನ ಪಾತ್ರೆಯನ್ನೂ. ಎಡಗೈಯಲ್ಲಿ ಅಮೃತಕುಂಭವನ್ನೂ ಹಿಡಿದಿದ್ದಾನೆ"[೩].

ಮಂತ್ರಮಹಾರ್ಣವ[೪] ಎಂಬ ಮಂತ್ರಶಾಸ್ತ್ರಗ್ರಂಥದಲ್ಲಿ "ದಧಿವಾಮನನು ಬಿಳಿಯ ಮುತ್ತಿನ ಬಣ್ಣದಲ್ಲಿದ್ದಾನೆ, ಬೆಲೆ ಬಾಳುವ ರತ್ನಗಳಿಂದ ಅಲಂಕೃತನಾಗಿದ್ದಾನೆ. ಅವನು ಚಂದ್ರಮಂಡಲದ ಮಧ್ಯದಲ್ಲಿದ್ದು, ಅವನ ಮುಂಗುರುಳು ದುಂಬಿಗಳಂತಿವೆ. ಅವನ ಎರಡು ಕೈಗಳಲ್ಲಿ ಒಂದರಲ್ಲಿ ಕನಕಕಲಶ ಪಾತ್ರೆಯನ್ನು ಹಿಡಿದಿದ್ದು ಅದರಲ್ಲಿ ಪೂರ್ಣನೀರಿದೆ ಮತ್ತೊಂದರಲ್ಲಿ ದಧ್ಯನ್ನವನ್ನು (ದಧಿಭೋಜ್ಯ) ವನ್ನು ಹಿಡಿದಿದ್ದಾನೆ" ಎಂದು ಹೇಳಲಾದಾಗಿದೆ.

"ಅನೇಕ ವಿಧದ ವಾಮನ ಮೂರ್ತಿಗಳನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಉದಾಹರಣೆಗೆ ದಧಿವಾಮನ (ಮೇರು ತಂತ್ರ ೨೬, ೩೪೧–೩೪೨ ಮತ್ತು ೧೫ ಶಾರದಾ ತಿಲಕ, ೧೫, ೫೬–೬೦), ಇದು ತಾಂತ್ರಿಕ ದೇವತೆಯಿದ್ದಂತೆ ಕಾಣುತ್ತದೆ. ದಧಿ ಎನ್ನುವುದು ಜೀವನದ ಉತ್ಪತ್ತಿಯನ್ನು ಸಂಕೇತಿಸುತ್ತದೆ. ಮೇರುತಂತ್ರದಲ್ಲಿ ವಾಮನನ್ನು ಹೀಗೆ ಕಲ್ಪಿಸಲಾಗಿದೆ. ಅವನು ಕಮಲದ ಮೇಲೆ ಕುಳಿತಿದ್ದು, ಚಂದ್ರಪ್ರಭೆಗಳಿಂದ ಕೂಡಿರುತ್ತಾನೆ. ಬಲಗೈಯಲ್ಲಿ ಬೇಯಿಸಿದ ದಧ್ಯನ್ನವನ್ನೂ ಎಡಗೈಯಲ್ಲಿ ಕುಂಭವನ್ನೂ ಹಿಡಿದಿರುತ್ತಾನೆ. ಅವನನ್ನು ಲಕ್ಷ್ಮೀ ಮತ್ತು ಭೂಮಿದೇವಿಯರು ಎರಡು ಪಕ್ಕಗಳಲ್ಲಿ ಆಲಂಗಿಸಿಕೊಂಡಿರುತ್ತಾರೆ. ಮಂತ್ರದೇವತಾಪ್ರಕಾಶಿಕಾ ಎಂಬ ಗ್ರಂಥವೂ (ತಂಜಾವೂರಿನ ಪ್ರಪಂಚಸಾರಸಂಗ್ರಹ ಕೃತಿಯಲ್ಲಿ ಕಂಡಂತೆ, ಪ್ರಪಂಚಸಾರಸಂಗ್ರಹ, ತಂಜಾವೂರು, ಭಾಗ – ೨, ಪಟಲ – ೩೧, ಪುಟ – ೯೦೪) ಸಹ ದಧಿವಾಮನ ಮೂರ್ತಿಯನ್ನು ಉಲ್ಲೇಖಿಸುತ್ತದೆ. ಅದರಲ್ಲಿ ಚಂದ್ರಮಂಡಲದಲ್ಲಿ ದಧಿವಾಮನನು ಕುಳಿತಿದ್ದು ತನ್ನೆರಡು ಕೈಗಳಲ್ಲಿ ನೀರಿನಿಂದ ತುಂಬಿದ ಕಲಶ ಮತ್ತು ದಧ್ಯನ್ನ ಪಾತ್ರೆಗಳನ್ನು ಹಿಡಿದಿರುವುದನ್ನು ಉಲ್ಲೇಖಿಸಲಾಗಿದೆ. ಆದರೆ ಇಲ್ಲಿ ಶ್ರೀ ಅಥವಾ ಭೂಮಿ ದೇವಿಯ ಉಲ್ಲೇಖ ಕಂಡುಬರುವುದಿಲ್ಲ. ಆದರೆ ಎರಡೂ ಗ್ರಂಥಗಳ ಪ್ರಕಾರ ದಧಿವಾಮನನಿಗೆ ಕೇವಲ ಎರಡು ಕೈಗಳು ಮಾತ್ರ ಕಂಡುಬರುತ್ತದೆ" ಎಂದು ಎಸ್.ಕೆ. ರಾಮಚಂದ್ರ ರಾಯರು[೫] ಅಭಿಪ್ರಾಯಪಟ್ಟಿದ್ದಾರೆ.

ಇನ್ನು ಪುರುಷೋತ್ತಮ ಸಂಹಿತೆಯ[೬] ಪ್ರಕಾರ ದಧಿವಾಮನನ್ನು ಪೂಜಿಸುವುದರಿಂದ ಹಸು, ಭೂಮಿ, ಧಾನ್ಯ ಮತ್ತು ಧನಗಳನ್ನು ಅಂದರೆ ಆಹಾರ ಮತ್ತು ಸಂಪತ್ತನ್ನು ಆರಾಧಕನು ಪಡೆದುಕೊಳ್ಳುತ್ತಾನೆ.

ಹೀಗೆ ಅನೇಕ ಆಗಮಶಾಸ್ತ್ರಗಳಲ್ಲಿ ದಧಿವಾಮನ ಮೂರ್ತಿಯ ಪೂಜೆಯನ್ನು ಎತ್ತಿ ಹಿಡಿದಿರುವುದರಿಂದ ಈ ಪೂಜೆಯಿಂದ ಧನಧಾನ್ಯ ಆರೋಗ್ಯ ಇತ್ಯಾದಿ ಎಲ್ಲಾ ಫಲಗಳು ದೊರಕುತ್ತವೆ ಎಂಬ ನಂಬಿಕೆಯಿಂದ ಹೊಯ್ಸಳ ದೇವಾಲಯಗಳಲ್ಲಿ ದಧಿವಾಮನ ಮೂರ್ತಿಗಳನ್ನು ಪ್ರಮುಖ ದೇವಾಲಯಗಳ ಭಿತ್ತಿಗಳಲ್ಲಿ ಕಡೆಯಲಾಗಿದೆ. ಅವುಗಳೆಂದರೆ ನುಗ್ಗೆಹಳ್ಳಿಯ ಲಕ್ಷ್ಮೀನರಸಿಂಹ, ಸೋಮನಾಥಪುರದ ಕೇಶವದೇವಾಲಯ, ನಾಗಲಾಪುರದ ಕೇಶವ ದೇವಾಲಯ, ಹೊಸಹೊಳಲುವಿನ ಲಕ್ಷ್ಮೀನಾರಾಯಣ ದೇವಾಲಯ ಇತ್ಯಾದಿ. ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ ದಲ್ಲಿರುವ ಶಿಲ್ಪವು ಕುಳಿತ ಭಂಗಿಯಲ್ಲಿದ್ದು ಚಂದ್ರಮಂಡಲವನ್ನು ದೇವರ ಹಿಂಭಾಗದಲ್ಲಿ ಸುಂದರವಾಗಿ ಕಡೆಯಲಾಗಿದೆ. ಶಂಖ ಚಕ್ರಗಳನ್ನು ಭುಜಗಳ ಪಕ್ಕದಲ್ಲಿ ಕೆತ್ತಲಾಗಿದ್ದರೂ ಅದನ್ನು ಭುಜಗಳಿಂದ ಹಿಡಿಯಲಾಗಿಲ್ಲ. ಬಲಗೈಯಲ್ಲಿ ದಧ್ಯನ್ನ ಪಾತ್ರವನ್ನೂ ಎಡಗೈಯಲ್ಲಿ ಕಲಶವನ್ನು ಹಿಡಿದಿದ್ದಾನೆ. ಮಿಕ್ಕಂತೆ ಮೇಲೆ ಹೇಳಿದ ಎಲ್ಲಾ ಆಭರಣಗಳಿಂದ ಅಲಂಕೃತನಾಗಿದ್ದು, ವಿಶೇಷತೆಯೆಂದರೆ ಮೂರ್ತಿಯ ಪೀಠದಲ್ಲಿ "ದಧಿವಾಮನ" ಎಂದು ಕೆತ್ತಲಾಗಿದ್ದು ಕೇವಲ 'ನ' ಮಾತ್ರ ಉಳಿದು ಬಂದಿದೆ.

ಎರಡನೆ ಉದಾಹರಣೆಯನ್ನು ನಾಗಲಾಪುರದ ಕೇಶವ ದೇವಾಲಯದ ಭಿತ್ತಿಯಿಂದ ಆಯ್ದುಕೊಳ್ಳಲಾಗಿದೆ. ಈ ಶಿಲ್ಪವೂ ಸಹ ಚಂದ್ರಮಂಡಲದಿಂದ ಕೂಡಿದ್ದು, ಚಂದ್ರಮಂಡಲ ಮೇಲಿನ ಉದಾಹರಣೆಗಳಿಗಿಂತ ವಿಶಿಷ್ಟವಾಗಿದೆ. ಕೈಗಳಲ್ಲಿ ದಧ್ಯನ್ನ ಮತ್ತು ಕಲಶಗಳನ್ನು ಹಿಡಿದಿದ್ದು ಕೈಗಳು ಭಿನ್ನಗೊಂಡಿವೆ. ಆದರೆ ಶಿಲ್ಪದ ಸೌಂದರ್ಯದ ದೃಷ್ಟಿಯಿಂದ ಇದು ಮಿಕ್ಕೆಲ್ಲ ಉದಾಹರಣೆಗಳಿಗಿಂತ ಸುಂದರವಾಗಿದೆ.

ಮೂರನೆಯ ಉದಾಹರಣೆಯನ್ನು ಹೊಸಹೊಳಲುವಿನ ಲಕ್ಷ್ಮೀನಾರಾಯಣ ದೇವಾಲಯದ ಭಿತ್ತಿಯಿಂದ

ಆಯ್ದುಕೊಳ್ಳಲಾಗಿದ್ದು ನುಗ್ಗಿಹಳ್ಳಿಯ ಶಿಲ್ಪಲಕ್ಷಣಗಳನ್ನು ಒಳಗೊಂಡಿದೆ. ಬಲಗೈಯಲ್ಲಿರುವ ದಧ್ಯನ್ನ ಪಾತ್ರೆ ಬುಗುರಿಯಾಕಾರದಲ್ಲಿ ಕಂಡುಬಂದು ಗೊಂದಲ ಸೃಷ್ಟಿಸುತ್ತದೆ.

ನಾಲ್ಕನೇ ಶಿಲ್ಪವನ್ನು ಸೋಮನಾಥಪುರದ ಕೇಶವ ದೇವಾಲಯದ ಭಿತ್ತಿಯಿಂದ ಆಯ್ದುಕೊಳ್ಳಲಾಗಿದ್ದು, ಚಂದ್ರಮಂಡಲ ಸುಂದರವಾಗಿ ಕಾಣುತ್ತದೆ. ಆದರೆ ಭುಜದ ಪಕ್ಕದಲ್ಲಿರುವ ಶಂಖ ಹಾಗೂ ಚಕ್ರಗಳು ಒಡೆದು ಹೋಗಿವೆ. ಅದೂ ಅಲ್ಲದೇ ಕೈಯಲ್ಲಿ ಹಿಡಿದಿರುವ ವಸ್ತುಗಳನ್ನೂ ಸಹ ವ್ಯತ್ಯಾಸವಾಗಿ ಕೆತ್ತಲಾಗಿದೆ. ಬಲಗೈಯಲ್ಲಿ ಅಮೃತ ಅಥವಾ ಕನಕಕಲಶವನ್ನೂ, ಎಡಗೈಯಲ್ಲಿ ದಧ್ಯನ್ನ ಪಾತ್ರೆಯನ್ನೂ ಕೆತ್ತಲಾಗಿದ್ದು ಈ ಶಿಲ್ಪ ಉಳಿದೆಲ್ಲಾ ಶಿಲ್ಪಗಳಿಗಿಂತ ವಿಭಿನ್ನವಾಗಿದೆ.

ಉಳಿದಂತೆ ಎಲ್ಲಾ ಶಿಲ್ಪಗಳೂ ಹದಿನಾರಿ ವಿಧದ ಹೊಯ್ಸಳ ಶೈಲಿಯ ಆಭರಣಗಳಿಂದ ಅಲಂಕೃತವಾಗಿದ್ದು, ವಿಗ್ರಹದ ಪಕ್ಕದಲ್ಲಿ ರಮಾದೇವಿಯನ್ನು ಒಳಗೊಂಡಿವೆ. ಅದೂ ಅಲ್ಲದೇ ಅಲಂಕಾರಿಕ ಎರಡು ಚಾಮರಧಾರಿಣಿಯರ ವಿಗ್ರಹಗಳೂ ಸಹ ಕೆಲವು ಕಡೆ ಕಂಡುಬರುತ್ತದೆ.

ಈಗ ನಮಗೆದುರಾಗುವ ಪ್ರಶ್ನೆ ಎಂದರೆ ಇಷ್ಟು ಸಮಜಂಸವಾಗಿ, ಶಾಸ್ತ್ರಗಳಿಗೆ ಶಿಲ್ಪಗಳನ್ನೂ ಹೋಲಿಸಿ ನೋಡಿದಾಗಲೂ ಸಹ ಇದು ದಧಿವಾಮನ ಎಂಬುದು ಸ್ಪಷ್ಟಪಡುವಾಗ ಏಕೆ ವಿದ್ವಾಂಸರು ಇದನ್ನು ಧನ್ವಂತರಿ ಎಂದು ಗುರುತಿಸುತ್ತಾರೆ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಬಹುಶಃ ದಧಿವಾಮನನ ಕೈಯಲ್ಲಿರುವ ಅಮೃತಕಲಶ ಅಥವಾ ಕನಕಕಲಶದಿಂದಾಗಿ ಇದು ಧನ್ವಂತರಿ ಎಂಬ ಸಂದೇಹಕ್ಕೆ ಅಥವಾ ಅಭಿಪ್ರಾಯಕ್ಕೆ ಅವರು ಬರುತ್ತಾರೆ. ಆದ್ದರಿಂದ ಈ ರೀತಿ ದಧಿವಾಮನ ಮೂರ್ತಿಯನ್ನು ಧನ್ವಂತರಿ ಎಂದು ಗುರುತಿಸಲಾಗುತ್ತಿದೆ. ಮತ್ತೊಂದು ವಿಶೇಷವೆಂದರೆ ಧನ್ವಂತರಿಯ ಪೂಜೆಯನ್ನು ಆಗಮಗಳಲ್ಲಿ ಹೇಳಲಾಗಿಲ್ಲ, ಬದಲಿಗೆ ಪುರಾಣಗಳಲ್ಲಿ ಮಾತ್ರ ಧನ್ವಂತರಿಯ ಕಥೆಯು ನಮಗೆ ಕಂಡುಬರುತ್ತದೆ.[೭] ಅದೂ ಅಲ್ಲದೇ ಶಾಸ್ತ್ರಗ್ರಂಥಗಳಲ್ಲಿ ಧನ್ವಂತರಿಯ ಶಿಲ್ಪದ ಬಗೆಗೆ ಹೇಳುವಾಗ ಅವನು ಕುಂಭವನ್ನು ಹಿಡಿದು ತನ್ನೆರಡು ಕೈಗಳಿಂದ ತನ್ನ ತಲೆಗೆ ಅಭಿಷೇಕ ಮಾಡುತ್ತಿರುವಂತೆ ಇರಬೇಕು ಎಂದು ಹೇಳಲಾಗಿದೆ. ಅಥವಾ ಧ್ಯಾನ ಶ್ಲೋಕದ ಪ್ರಕಾರ ಅವನು ಜಿಗಣೆ ಹುಳು, ಶಂಖ, ಚಕ್ರ, ಪುಸ್ತಕಗಳನ್ನು ಹಿಡಿದಿರಬೇಕಾಗುತ್ತದೆ. ಅಲ್ಲದೇ ನಿಂತ ಭಂಗಿಯಲ್ಲಿರಬೇಕು[೮].

ಅಂದರೆ ಪ್ರಪಂಚಸಾರ ಸಂಗ್ರಹ, ಅಗ್ನಿಪುರಾಣ ಅಥವಾ ಇನ್ನಾವುದೇ ಶಿಲ್ಪಗ್ರಂಥಗಳು ಕುಂಭವನ್ನು ಧನ್ವಂತರಿಗೆ ಹೇಳಲಿಲ್ಲ ಹಾಗೂ ಮೇಲಿನ ಯಾವ ಲಕ್ಷಣಗಳೂ ಪ್ರಸ್ತುತ ಉದಾಹರಿಸಿರುವ ಶಿಲ್ಪಗಳಲ್ಲಿ ಕಂಡುಬರದೇ ಇರುವುದರಿಂದ ಬದಲಿಗೆ ಎಲ್ಲಾ ಲಕ್ಷಣಗಳೂ ದಧಿವಾಮನಮೂರ್ತಿ ಲಕ್ಷಣಗಳಿಗೆ ಹೋಲುವುದರಿಂದ ಈ ಮೂರ್ತಿಗಳು ದಧಿವಾಮನ ಮೂರ್ತಿಗಳೇ ಎಂದು ಸಪ್ರಮಾಣವಾಗಿ ಸಿದ್ಧಗೊಳ್ಳುತ್ತದೆ.

## ಆಧಾರಸೂಚಿ


೧. **ಪ್ರಕೀರ್ಣಾಧಿಕಾರ** ೧೭, ೧೮–೧೯.

೨. ಪಾಂಚರಾತ್ರಾಗಮಗಳು ಶ್ರೀತತ್ವನಿಧಿಯಲ್ಲಿದ್ದಂತೆ, **ಶ್ರೀತತ್ವನಿಧಿ,** ಪುಟ ೮೧ಬಿ/೪, ಪ್ರಾಚ್ಯಸಂಶೋಧನಾ ಸಂಸ್ಥೆ, ಮೈಸೂರು.

೩. **ಮಂತ್ರಮಹಾರ್ಣವ ವಿಷ್ಣುತಂತ್ರ,** ಅಧ್ಯಾಯ ೭, ೧.

೪. ಎಸ್.ಕೆ. ರಾಮಚಂದ್ರರಾವ್, **ಪ್ರತಿಮಾಕೋಶ,** ಭಾಗ – ೨, ಕಲ್ಪತರು ರೀಸರ್ಚ್ ಅಕಾಡೆಮಿ, ಬೆಂಗಳೂರು, ಪುಟ ೧೦೮.

೫. **ಪುರುಷೋತ್ತಮ ಸಂಹಿತಾ,** ೩೮–೩೯.

೬ **ಮಹಾಭಾರತ,** ಆದಿಪರ್ವ, ಅಧ್ಯಾಯ ೧೮, ಅನುಶಾಸನ ಪರ್ವ, ಅಧ್ಯಾಯ ೧೬ ಮತ್ತು ೩೭, ಭಾಗವತ ಪುರಾಣ, ಅಷ್ಟಮ ಸ್ಕಂಧ, ಅಧ್ಯಾಯ ೫ ರಿಂದ ೮.

೭. **ಪ್ರಪಂಚಸಾರಸಂಗ್ರಹ.**

ಡಾ. ಶೋಭಾ*

# ಹೊಯ್ಸಳ ಶಿಲ್ಪಗಳಲ್ಲಿ ಆನೆಗಳಿಗೆ ರಕ್ಷಣಾ ವ್ಯವಸ್ಥೆಯ ಚಿತ್ರಣ

ಇತಿಹಾಸದ ಆರಂಭ ಕಾಲದಿಂದಲೂ ಆನೆ ಮತ್ತು ಕುದುರೆಗಳು ಸಾಗಾಣಿಕೆಗಳಿಗಲ್ಲದೆ, ಯುದ್ಧದ ಸಂದರ್ಭಗಳಲ್ಲೂ ಬಳಕೆಯಾಗುತ್ತಿದ್ದವು. ಒಳ್ಳೆಯ ಗುಣಮಟ್ಟದ ಕುದುರೆಗಳು ಹೊರದೇಶಗಳಿಂದ ಆಮದಾಗುತ್ತಿದ್ದವು. ಆನೆಗಳನ್ನು ದೇಶೀಯವಾಗಿ ಪಳಗಿಸುತ್ತಿದ್ದಿರಬಹುದು. ಕಾರಣ ಅಲೆಗ್ಸಾಂಡರ್ ಭಾರತಕ್ಕೆ ಬಂದಾಗ ಮೊದಲ ಬಾರಿಗೆ ಆನೆಗಳನ್ನು ಕಂಡ ಎಂಬ ಹೇಳಿಕೆಗಳಿವೆ ಎಂದು ಭರತ ಅಯ್ಯರ್ ಅವರು ತಿಳಿಸುತ್ತಾರೆ. ಆನೆ ಚರ್ಮ ದಪ್ಪನಾಗಿದ್ದು ಬಾಣ ಅಥವ ಈಟಿಯ ಏಟುಗಳನ್ನು ಸ್ವಲ್ಪ ಮಟ್ಟಿಗೆ ತಡೆದುಕೊಳ್ಳಬಹುದಾದ ಸಾಧ್ಯತೆಗಳಿವೆ. ಆದರೆ ಅದರ ಕುಂಭಸ್ಥಳ ಮೆದುವಾಗಿದ್ದು, ಆನೆಯನ್ನು ನಿಯಂತ್ರಿಸಲು ಆ ಭಾಗದಲ್ಲಿ ಅಂಕುಶವನ್ನು ಬಳಸಿಕೊಳ್ಳಲಾಗುತ್ತದೆ.

೩ನೇ ಶತಮಾನದ ನಾಗಾರ್ಜುನಕೊಂಡದ ಶಿಲ್ಪವೊಂದರಲ್ಲಿ ಮಾವಟಿಗನೊಬ್ಬ ಆನೆಯ ಕುಂಭಸ್ಥಳದಲ್ಲಿ ಅಂಕುಶವನ್ನು ಬಳಸಿ ನಿಯಂತ್ರಿಸುತ್ತಿದ್ದಾನೆ. ಇದೇ ಚಿತ್ರಮಾಲಿಕೆಯಲ್ಲಿ ಆನೆಯ ಕುಂಭಸ್ಥಳಕ್ಕೆ ಆಭರಣವನ್ನು ಹೊಂದಿಸಿದ್ದು ಅದು ರಕ್ಷಣಾ ಕವಚವಾಗಿಯೂ ಬಳಕೆಯಾಗು ವಂತಿದೆ. ಈ ಬಗ್ಗೆ ಪ್ರಾಣಿಗಳಿಗೂ ಅರಿವಿದ್ದು ಆನೆಯೊಂದರ ಬೆನ್ನ ಮೇಲೆ ಕುಳಿತು ಅದರ ಕುಂಭಸ್ಥಳವನ್ನು ಸೀಳಲು ಹವಣಿಸುತ್ತಿರುವ ಸಿಂಹವೊಂದರ ಚಿತ್ರಣವನ್ನು ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯದ ಶಿಲ್ಪ ಪಟ್ಟಿಕೆಯಲ್ಲಿ ಕಾಣಬಹುದು. ಅಲಂಕೃತಗೊಂಡ ಆನೆಗಳಿಗೆ ಹೆಚ್ಚಿನ ರಕ್ಷಣಾ ಕವಚಗಳು ಇಲ್ಲವಾದರೂ ನೆಲದ ಮೇಲೆ ನಿಂತು ಕತ್ತಿಯನ್ನು ಹಿಡಿದು ಆನೆ ಮತ್ತು ಅದರ ಮೇಲಿರುವ ಯೋಧರೊಂದಿಗೆ ಕಾದಾಡುತ್ತುರುವ ವೀರರ ಚಿತ್ರಣಗಳನ್ನು ನಾಗಲಾಪುರ ಬಂದಳಿಕೆ ಬಸರಾಳು ಇತ್ಯಾದಿ ಅನೇಕ ಕಡೆಗಳಲ್ಲಿ ಕಾಣಬಹುದು. ಸರಳ ಸುಂದರವಾದ ಆನೆಗಳ ಮೇಲೆ ಕುಳಿತ ದಂಪತಿಗಳು ಸುಖ-ಸಂಕಥಾ ವಿನೋದದಲ್ಲಿ ತೊಡಗಿದ್ದು ಅದೇ ವೇಳೆಯಲ್ಲಿ ಶೂಲದಿಂದ ಆನೆಯನ್ನು ನಿಯಂತ್ರಿಸುತ್ತಿರುವ ಚಿತ್ರಣ ಕಂಬದಹಳ್ಳಿಯ ಗಂಗರ ಕಾಲದ ದೇವಾಲಯದಲ್ಲಿ ಇದೆ.

ಯುದ್ಧದಲ್ಲಿ ಆನೆಯನ್ನೇ ಒಂದು ರಕ್ಷಣಾ ಸಾಧನವಾಗಿ ಬಳಸಿಕೊಂಡು ಅದರ ಮೇಲೆ ಒಬ್ಬರು ಅಥವಾ ಇಬ್ಬರು ಯೋಧರು ಕುಳಿತು ಯುದ್ಧಮಾಡುತ್ತಿರುವ ಅನೇಕ ಶಿಲ್ಪಗಳು ದೊರೆಯುತ್ತವೆ. ಆದರೆ ಅಗ್ರಹಾರ ಬಾಚಿಹಳ್ಳಿಯ ಸಾಮೂಹಿಕವಾಗಿ ಗರುಡರಾಗಿ ಸುರಲೋಕಕ್ಕೆ ಪಯಣಿಸುತ್ತಿರುವ ಶಿಲ್ಪದಲ್ಲಿ ಆನೆಯ ಮೇಲೆ ಐದಕ್ಕೂ ಹೆಚ್ಚು ಜನರಿದ್ದಾರೆ. ಆನೆಯ ಮೇಲೆ ಅಳವಡಿಸುವ 'ಹೌದ' ಸಹ ಒಂದು ಸುರಕ್ಷಿತ ವ್ಯವಸ್ಥೆ. ಇದಕ್ಕೆ ಅಂಬಾರಿ, ಬಿಸುಗೆ ಇತ್ಯಾದಿ ಹೆಸರುಗಳೂ ಇವೆ ಶಾಸನಗಳಲ್ಲಿ 'ಬಿಸುಗೆಯೆ ಕಳಮಾಗಿ'- ಎಂದರೆ ಅಂಬಾರಿಯೇ ಯುದ್ಧಭೂಮಿಯಾಗಿ-ಹೋರಾಡಿದರು ಎಂಬ ವೈಭವೀಕರಿಸಿದ ಮಾತುಗಳಿವೆ. (ಇ.ಸಿ.೩, ಎಚ್‌ಡಿ ೪೧, ೯೫೦) ಒಂದು ಆನೆಯಿಂದ ಇನ್ನೊಂದರ ಮೇಲೆ ಹಾರುತ್ತಿರುವ ಯೋಧನ ಶಿಲ್ಪ ನೇರ್ಲಿಗೆಯಲ್ಲಿದೆ. (ಇ.ಸಿ.೧೫,ಎಕೆ ೨೭೩, ೯೭೧) ಅಂಬಾರಿಯಲ್ಲಿಯೇ ಹಿಂಭಾಗದಲ್ಲಿ ಪುಟ್ಟದೊಂದು ತೊಟ್ಟಿಲಿನಂತಹ ಪೀಠವಿದ್ದು ಮತ್ತೊಬ್ಬರು ಅಲ್ಲಿ ಕುಳಿತುಕೊಳ್ಳಬಹುದಾದ ವ್ಯವಸ್ಥೆ ಇರುವುದುಂಟು. ಹೊಸಹೊಳಲಿನ ಶಿಲ್ಪದಲ್ಲಿ ಐರಾವತವನ್ನು ನಡೆಸುತ್ತಿರುವ ಇಂದ್ರನ ಹಿಂದೆ ಇಂದ್ರಾಣಿಯು ಕುಳಿತ್ತಿದ್ದಾಳೆ. ಈ ರೀತಿಯ ಹೌದಾಗಳಿನ್ನು ಆನೆಯ ಬೆನ್ನ ಮೇಲೆ ಸುಮ್ಮನೆ ಇರಿಸಿದಂತಿವೆ. ಆದರೆ ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಹೊರ ಭಿತ್ತಿಯ ಶಿಲ್ಪದಲ್ಲಿ ಅಂಬಾರಿಯನ್ನು ಆನೆಯ ಬೆನ್ನ ಮೇಲೆ ಇರಿಸಿ ಹೊಟ್ಟೆಯ ಕೆಳಭಾಗದಿಂದ ಬಂಧಿಸಿದೆ ಎಂದು ಜೀನ್ ಡಿಲೋಚಿ ಅವರು ಗಮನ ಸೆಳೆಯುತ್ತಾರೆ.

ಬಸರಾಳಿನ ಪಟ್ಟಿಕೆಯ ಶಿಲ್ಪದಲ್ಲಿ ಆನೆಯ ಕೊರಳ ಭಾಗಕ್ಕೆ ದಪ್ಪನಾದ ಹಲವಾರು ಪದರಗಳ ಪಟ್ಟಿಕೆಗಳನ್ನು ಹಾಕಿ ರಕ್ಷಣೆಯನ್ನು ನೀಡಲಾಗಿದೆ. ಬಸರಾಳಿನ ದೇವಾಲಯದ ಮೆಟ್ಟಲುಗಳ ಬದಿಯಲ್ಲಿ ದೊಡ್ಡ ಪ್ರಮಾಣದ ನೈಜ ಶೈಲಿಯಲ್ಲಿ ಕೆತ್ತಿದ ಆನೆಗಳಿದ್ದು ಆಭರಣಗಳೇ ರಕ್ಷಣಾ ಕವಚಗಳಂತಿವೆ.

ಆನೆಗಳಿಗೆ ಕಣ್ಣು, ಕುಂಭಸ್ಥಳ ಮತ್ತು ಸೊಂಡಿಲುಗಳನ್ನು ಮುಚ್ಚುವಂತೆ ಮುಖ ಕವಚವನ್ನು ಅಳವಡಿಸಿರುವುದು

* ಉಪನ್ಯಾಸಕರು, ಇತಿಹಾಸ ವಿಭಾಗ, ಪದವಿಪೂರ್ವ ಕಾಲೇಜು, ಅಮೃತೂರು, ಕುಣಿಗಲ್ ತಾಲ್ಲೂಕು, ತುಮಕೂರು.

ಇಂದಿಗೂ ಮೈಸೂರು ದಸರಾ ಮೆರವಣಿಗೆಯಲ್ಲಿ ಕಾಣಬಹುದು.

ಕೇರಳದ ಆಚರಣೆಗಳಲ್ಲಿ ಬಳಸುವ ಆನೆಗಳು ಹಾಗೂ ಉತ್ತರ ಭಾರತದ ರಾಜವಂಶದವರು ಮೆರವಣಿಗೆಯಲ್ಲಿ ಬಳಸುವ ಆನೆಗಳಿಗೂ ಇದೇ ಬಗೆಯಲ್ಲಿ ಮುಖ ಕವಚಗಳನ್ನು ಕಾಣಬಹುದು. ಯೋಧರುಗಳು ತಾವು ಕೊಂದ ಆನೆಯ ಮುಖ ಕವಚವನ್ನು ರಾಜನಿಂದ ಬೇಡಿ ಪಡೆದ ಬಗ್ಗೆ ಹೊಯ್ಸಳರ ಕಾಲದ ಶಾಸನಗಳು ಉಲ್ಲೇಖಿಸುತ್ತವೆ. (ಇ.ಸಿ ೬, ಕೆಡಿ ೩೪, ೧೧೪೮ ಮತ್ತು ಇ.ಸಿ ೧೦ ಹೆಚ್‌ಎನ್ ೧೧೬, ೧೧೨೩) ೧೭ನೇ ಶತಮಾನದ ವೇಳೆಗೆ ಆನೆಗಳ ಮೈಯನ್ನು ಸಂಪೂರ್ಣವಾಗಿ ಮುಚ್ಚುವಂತೆ ದಪ್ಪನಾದ ವರ್ಣಮಯ ವಾದ ಬಟ್ಟೆಯಿಂದ ರಕ್ಷಣೆ ನೀಡಿರುವುದನ್ನು ವಿಜಯನಗರ–ಬಹಮನಿಗಳ ಯುದ್ಧದ ದೃಶ್ಯದ ಚಿತ್ರಕಲೆಯಲ್ಲಿ ಕಾಣಬಹುದು. ಈ ಅವಧಿಯಲ್ಲಿ ಬಂದಿದ್ದ ವಿದೇಶೀ ಪ್ರವಾಸಿಗರೂ ಕೆಲವು ಮಾಹಿತಿಗಳನ್ನು ನೀಡುತ್ತಾರೆ. ಅಥನೇಷಿಯಸ್ ಎಂಬಾತ "ಆನೆಗಳಿಗೆ ಅಲಂಕರಿಸಿದ ಉಕ್ಕಿನ ತಗಡುಗಳನ್ನು ಹೊದ್ದಿಸಿ ಅವುಗಳ ಸೊಂಡಲಿಗೆ ಮತ್ತು ಕೋರೆಗಳಿಗೆ ದೊಡ್ಡ ಕೋಲ್ಗತ್ತಿಗಳನ್ನು ಸಿಕ್ಕಿಸಿರುತ್ತಾರೆ" ಎಂದು ಹೇಳುತ್ತಾನೆ. ಶಬ್ದಕೋಶದಲ್ಲಿ ಯುದ್ಧದ ಆನೆಗಳ ಸೊಂಡಲಿಗೆ ಕಟ್ಟುವ ಸೂಲಂಗಿ ಎಂಬ ಸಣ್ಣ ಕಠಾರಿಯ ಬಗ್ಗೆ ಹೇಳುತ್ತದೆ. ಆದರೆ ಈ ಚಿತ್ರಣ ಶಿಲ್ಪಗಳಲ್ಲಿ ಕಂಡುಬರುವುದಿಲ್ಲ. ಡೊಮಿಂಗೋ ಪಾಯೆಸ್ "ಆನೆಗಳಿಗೂ ಮಕಮಲ್ಲು ಮುಂತಾದ ಬಟ್ಟೆಗಳನ್ನು ಹೊದ್ದಿಸಿ ಗಂಟೆಗಳ ಸರಗಳನ್ನು ಕಟ್ಟಿದ್ದರು....ಅವುಗಳ ಮುಖದ ಮೇಲೆ ನಾನಾ ತರದ ಚಿತ್ರಗಳನ್ನು ಚಿತ್ರಿಸಿ ಅಲಂಕರಿಸಿದ್ದರು" ಎಂದು ಹೇಳುತ್ತಾನೆ. ಇದೂ ಸಹ ಇಂದಿಗೂ ಬಳಕೆಯಲ್ಲಿದೆ. ಗಜಶಾಸ್ತ್ರದಲ್ಲಿ 'ಪರಿಸ್ತೋಮ' ಎಂದರೆ ಆನೆಯ ಮೇಲೆ ಹಾಸುವ ಚಿತ್ರಿತಕಂಬಳಿ ಎಂದೂ 'ಆಸ್ತರಣ'ಎಂದರೆ ಈ ರೀತಿ ಹಾಸುವ ಚಿತ್ರದ ಕಂಬಳಿ ಅಲಂಕಾರ ಅಥವ ರಕ್ಷಣೆಗೆ ತೊಡೆಸುವ ಬಟ್ಟೆ ಎಂದು ವ್ಯಾಖ್ಯಾನಿಸಿದೆ.

ಶಾಸ್ತ್ರ ಗ್ರಂಥಗಳು ಆನೆಗಳ ಮೇಲೆ ಬಣ್ಣದ ಪಟ್ಟಿಗಳಿಂದ ಅಲಂಕರಿಸುವ ರೀತಿಗೆ 'ಗಜಮಂಡನ', 'ಮಂಡನಾ ಯೋಗ' ಎಂದು ಕರೆದಿದ. ಅಂತೆಯೇ ರಕ್ಷಣಾ ಕವಚಗಳಿಗೆ ಪಕ್ಕರೆ, ಪಕ್ಕರಿಕೆ, ಲೋಹವಕ್ಕರೆ ಇತ್ಯಾದಿ ಪಾರಿಭಾಷಿಕ ಶಬ್ದಗಳಿವೆ. ಪಂಪ ಭಾರತದಲ್ಲಿ ಈ ಕೆಲವು ಪದ ಪ್ರಯೋಗಗಳಾಗಿದ್ದು ಜಿಸುಗೆಯನ್ನು ಏರಿಸಿ, ಲೋಹವಕ್ಕರೆಗಳನ್ನು ಇರಿಸಿದ ಮೇಲೆ ಮುಖವಾಡವನ್ನು ತೆಗೆಯುತ್ತಿದ್ದರು ಎಂದು ಹೇಳುತ್ತಾನೆ (ಆಶ್ವಾಸ ೧೦, ಪದ್ಯ ೫೧ ವಚನ) ಲೋಹವಕ್ಕರೆ ಇರಿಸಿದ ಮೇಲೆ ಮುಖವಾಡಗಳನ್ನು ತೆಗೆಯಬೇಕಾದ ಅವಶ್ಯಕತೆಯನ್ನು ಅರ್ಥೈಸುವುದು ಕಷ್ಟ.

ಹೊಯ್ಸಳ ದೇವಾಲಯದ ಅಧಿಷ್ಠಾನದ ಪಟ್ಟಿಕೆಗಳಲ್ಲಿ ಆನೆಯ ಸಾಲುಗಳು ಕಂಡುಬರುವುದು ಜನಜನಿತವಾಗಿದೆ. ದೇವಾಲಯ ಸುತ್ತುವರಿದು ನೂರಾರು ಆನೆಗಳಿದ್ದರೂ ಅವುಗಳಲ್ಲಿ ಬಹುತೇಕ ನಿರಾಭರಣವಾಗಿ ಸರಳವಾಗಿವೆ. ಅವುಗಳ ಎಡೆಯಲ್ಲಿಯೇ ವಿರಳವಾಗಿ ಪೂರ್ತಿಯಾಗಿ ರಕ್ಷಣಾ ಕವಚ ತೊಡಿಸಿದ ಆನೆಗಳೂ ಇವೆ. ಉದಾಹರಣೆಗ ನಾಗಲಾಪುರದ ಈಶ್ವರ ದೇವಾಲಯದಲ್ಲಿ ೨೫೫ ಆನೆಗಳಿದ್ದು ಅವುಗಳಲ್ಲಿ ಆರು ಮಾತ್ರ ರಕ್ಷಣಾ ಕವಚವನ್ನು ಹೊಂದಿರುವಂತಹವು. ಸೋಮನಾಥಪುರದಲ್ಲಿ ಈ ಬಗೆಯ ಮೂರು ಆನೆಗಳಿದ್ದರೆ ನುಗ್ಗೇಹಳ್ಳಿಯ ನರಸಿಂಹ ದೇವಾಲಯದಲ್ಲಿ ಐದಾರು ಆನೆಗಳನ್ನು ಗುರುತಿಸಬಹುದು. ಅರಳುಗುಪ್ಪೆಯ ನರಸಿಂಹ ದೇವಾಲಯದಲ್ಲಿ ಒಂದೇ ಒಂದಿದೆ. ಮಂಡ್ಯ ಜಿಲ್ಲೆಯ ಹೊಯ್ಸಳ ದೇವಾಲಯ ಗಳಲ್ಲಿ ಒಂದೂ ಇಲ್ಲ. ಹೀಗಾಗಲು ಯುದ್ಧದ ದೃಶ್ಯ ಅಥವ ಕವಚ ಸಹಿತ ಇರುವ ಆನೆಗಳನ್ನು ಶಿಲ್ಪಿ ಕಂಡಿಲ್ಲದಿರಬಹುದು. ರಕ್ಷಣಾ ಕವಚಗಳೆಲ್ಲಾ ಹಲವಾರು ಡಿಸೈನ್‌ಗಳಿಂದ, ಪಟ್ಟಿಕೆಗಳಿಂದ ಕೂಡಿ ಲೋಹದಿಂದ ರೂಪಿಸಿರುವುದು ಸ್ಪಷ್ಟವಾಗಿದೆ. ಜೀನ್ ಡೆಲೋಚಿ ಅವರು ಇವು ಸಹ ಬಟ್ಟೆಯಿಂದ ತಯಾರಿಸಿರಬಹುದೆಂದು ತಪ್ಪಾಗಿ ಹೇಳುತ್ತಾರೆ.

ಒಟ್ಟಾರೆಯಾಗಿ ಆನೆಗಳಿಗೆ ಅಳವಡಿಸಿರುವ ರಕ್ಷಣಾ ಕವಚಗಳು ಶಿಲ್ಪದಲ್ಲಿ ಇರುವಂತೆ ಲೋಹದ್ದಾಗಿರಬಹುದು ಇಲ್ಲವೆ ಚಿತ್ರಕಲೆಯಲ್ಲಿ ಇರುವಂತೆ ಬಟ್ಟೆಯದಾಗಿದ್ದಿರಬಹುದು. ಆದರೆ ಇಡೀ ಆನೆಯ ಸಾಲಿನಲ್ಲಿ ನೂರಾರು ಬಿಡಿ ಆನೆಗಳ ಮಧ್ಯದಲ್ಲಿ ಕೆಲವೊಂದು ಆನೆಗಳಿಗೆ ಮಾತ್ರ ರಕ್ಷಣಾ ವ್ಯವಸ್ಥೆ ಇರುವುದು ಕುತೂಹಲಕಾರಿಯಾಗಿದೆ. ಎಂದರೆ ಹತ್ತಾರು ಆನೆಗಳಲ್ಲಿ ಒಂದು ವಿಶೇಷವಾದ ಆನೆ ಮುಂಚೂಣಿಯಲ್ಲಿ ಇದೆ ಎಂದು ಹೇಳಬಹುದು. ಇವು ಬಲಿಷ್ಠವೂ, ಸರ್ವಲಕ್ಷಣಗಳಿಂದ ಕೂಡಿದವೂ, ಯದ್ಧಕ್ಕೆಂದೇ ಪಳಗಿಸಿದವೂ, ತರಬೇತಿ ನೀಡಿದವೂ ಆಗಿರಬಹುದು. (ಇಂತಹ ಆನೆಗಳಿಗೆ ಗಜಶಾಸ್ತ್ರ ಶಬ್ದಕೋಶದಲ್ಲಿ ಉಪಸ್ಥನ, ಕಲ್ಯಾಣ, ಜವನ, ವಧಾವಧ, ಸಂವರ್ತನ, ಹಸ್ತಿಯುದ್ದ ಎಂದು ಕರೆದಿವೆ.) ರಾಜನಾಗಲೀ, ಸೈನ್ಯದ ಪ್ರಮುಖರಾಗಲೀ (ಔಪವಾಹ್ಯ, ಪಟ್ಟವರ್ಧನ) ಇಂತಹ ಆನೆಗಳನ್ನು ಬಳಸುತ್ತಿದ್ದರೆಂದು ಹೇಳಲಾಗದು. ಅರ್ಥಕೋಶಗಳಲ್ಲಿ ಕಾವ್ಯ ಪ್ರಯೋಗಗಳನ್ನು ಅನುಸರಿಸಿ 'ಸೂಚಿಯಾನೆ' ಎಂಬ ಪದವಿದ್ದು

ಯುದ್ಧ ಮುಂತಾದ ಸಂದರ್ಭಗಳಲ್ಲಿ ಎಲ್ಲಕ್ಕಿಂತ ಮುಂದೆ ನಿಲ್ಲಿಸಲಾಗುವ ಪ್ರಮುಖವೂ, ಬಲಿಷ್ಠವೂ ಆದ ಆನೆ ಎಂದು ಅರ್ಥೈಸಲಾಗಿದೆ. ಆದುದರಿಂದ ಶಿಲ್ಪಗಳಲ್ಲಿ ಕಂಡುಬರುವ ರಕ್ಷಣಾ ಕವಚದಿಂದ ಕೂಡಿರುವ ಆನೆಗಳನ್ನು 'ಸೂಚಿಯಾನೆ' ಎಂದು ಕರೆಯಬಹುದಾಗಿದೆ.











(ಪ್ರಬಂಧ ಮಂಡಿಸಿದ ಮೇಲೆ ಬಂದ ಪ್ರಶ್ನೆಗಳಿಗೆ ಉತ್ತರಗಳು – ಮೈಸೂರಿನ ದಸರಾ ಒಂದು ಸಾಂಸ್ಕೃತಿಕ ಮೆರವಣಿಗೆಯೆಂದು ಕೆಲವರ ಅಭಿಪ್ರಾಯ. ಆದರೆ ಅದೂ ಸಹ ಯುದ್ದದ ಮೆರವಣಿಗೆಯೇ ಆಗಿದೆ. ಯುದ್ಧದ ಸೈನಕರೊಂದಿಗೆ ಮನರಂಜನಾ ವ್ಯಕ್ತಿಗಳೂ ಹೋಗುತ್ತಿದ್ದರು. ವಿಜಯನಗರದ ಅಚ್ಯುತರಾಯ ವಿಜಯದಶಮಿಯ ಕೊನೆಯ ದಿನದಂದು ಮೆರವಣಿಗೆಯ ಅಂತ್ಯದಲ್ಲಿ ತನ್ನ ಮುವ್ವರು ಶತ್ರುಗಳು ಇದ್ದ ದಿಕ್ಕಿನ ಕಡೆಗೆ (ಯಾದುಲ್ಲಾ ಖನ್, ಕುತುಬ್ ಷಾ ಮತ್ತು ಪೋರ್ಚುಗೀಸರು) ಮೂರು ಬಾಣಗಳನ್ನು ಸಾಂಕೇತಿಕವಾಗಿ ಬಿಡುತ್ತಿದ್ದ ಎಂದು ಫರ್ನಾಂವ್ ನೂನಿಜ್ ತಿಳಿಸುತ್ತಾನೆ. ಇಂದಿಗೂ ಶಮಿವೃಕ್ಷದ ಪೂಜೆ, ಸಾಂಕೇತಿಕವಾಗಿ ಪ್ರಾಣಿವಧೆ, 'ವಿಜಯದಶಮಿ' ಎಂಬ ಪದ ಇತ್ಯಾದಿಗಳೆಲ್ಲಾ ಯುದ್ಧದ ಅಂಗವಾದ ಮೆರವಣಿಗೆಯೇ ಆಗಿದೆ).

## ಆಧಾರಸೂಚಿ


೧. ಕುಲಕರ್ಣಿ ಜಿ.ಟಿ. ಮತ್ತು ಮೇಟೆ ಎಂ.ಎಸ್., **ತಾರಿಖ್ ಇ ಹುಸೇನ್ ಷಾ ಬಾದ್ ಷಾ,** ಪುಣೆ, ೧೯೮೭.

೨. ಚಿದಾನಂದಮೂರ್ತಿ ಎಂ., **ಕನ್ನಡ ಶಾಸಗಳ ಸಾಸ್ಕೃತಿಕ ಅಧ್ಯಯನ,** ಮೈಸೂರು, ೧೯೭೯.

೩. ಜೀನ್ ಡಿಲೋಚಿ, ಮಿಲ್ಟ್ರಿ ಟೆಕ್ನಾಲಜಿ ಇನ್ ಹೊಯ್ಸಳ ಸ್ಕಲ್ಪ್ಚರ್, ನವದೆಹಲಿ, ೧೯೮೯.

೪. ನಾಗೇಗೌಡ ಎಚ್.ಎಲ್., **ಪ್ರವಾಸಿ ಕಂಡ ಇಂಡಿಯಾ,** ಭಾಗ ೨, ಮೈಸೂರು, ೧೯೬೬.

೫. ಭರತ ಅಯ್ಯರ್, ಎನಿಮಲ್ಸ್ ಇನ್ ಇಂಡಿಯನ್ ಆರ್ಟ್, ಮುಂಬಯಿ, ೧೯೭೭.

೬ ದಿ ವೇ ಆಪ್ ಬುದ್ಧ, ಲಾಡ್ ಪಿ.ಎಂ. (ಸಂ) ನವದೆಹಲಿ, ೧೯೬೫.

೭. ವೆಂಕಟಾಚಲ ಶಾಸ್ತ್ರಿ ಟಿ.ವಿ., **ಗಜಶಾಸ್ತ್ರ ಶಬ್ದಕೋಶ,** ಮೈಸೂರು, ೧೯೯೪.

೮. ಶೇಷಶಾಸ್ತ್ರೀ ಆರ್., **ಕರ್ನಾಟಕದ ವೀರಗಲ್ಲುಗಳು,** ಬೆಂಗಳೂರು, ೧೯೮೨.

೯. ಶೋಭಾ, ಮಂಡ್ಯ ಜಿಲ್ಲೆಯ ಹೊಯ್ಸಳ ದೇವಾಲಯಗಳ ಹಿನ್ನಲೆಯಲ್ಲಿ ಅಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ (ಪಿಎಚ್.ಡಿ ನಿಬಂಧ, ಅಪ್ರಕಟಿತ).

ಡಾ. ಎಸ್. ಸುದರ್ಶನ್*

# ಹೊಯ್ಸಳರ ಶಿಲ್ಪಕಲೆಯಲ್ಲಿ ರಾಮಾಯಣದ ಪ್ರದಾನ ಮಹಿಳಾ ಶಿಲ್ಪಗಳು

ಹೊಯ್ಸಳರ ಕಾಲದಲ್ಲಿ ಹೊಯ್ಸಳ ಕಲಾವಿದರಿಂದ ಕೆತ್ತಲ್ಪಟ್ಟ ರಾಮಾಯಣದ ಪೌರಾಣಿಕ ಕತೆಯನ್ನು ಸೋಮನಾಥಪುರ, ಹೊಸಹೊಳಲು, ಬೇಲೂರು ಮತ್ತು ಹಳೆಬೀಡು ದೇವಾಲಯಗಳಲ್ಲಿ ಕಾಣಬಹುದು. ವಾಲ್ಮೀಕಿಯಿಂದ ಬರೆದ ಈ ರಾಮಾಯಣವು ಅನಾದಿಕಾಲದಿಂದಲೂ ಕನ್ನಡಿಗರ ಗುಣವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ರಾಮಾಯಣವು ಸಾಹಿತ್ಯದ ಒಂದು ಮುತ್ತಾಗಿದೆ. ಹಾಗೂ ಹಲವಾರು ಭಾಷೆಗಳಲ್ಲಿ ಅನೇಕ ಕವಿಗಳಿಗೆ ಸ್ಫೂರ್ತಿಯ ಸೆಲೆಯಾಗಿದೆ.

ದುಷ್ಟ ಶಕ್ತಿಯ ವಿರುದ್ಧ ಶಿಷ್ಟತೆಯ ಪರಮ ಜಯದ ಹೋರಾಟವೇ ರಾಮಾಯಣದ ಪ್ರಮುಖ ತಿರುಳಾಗಿದೆ. ರಾಮನು ಒಳ್ಳೆತನದ, ಸ್ಫೂರ್ತಿಯ ಸಮಾನತೆ ನ್ಯಾಯದ ಪ್ರತೀಕವಾದರೆ, ಮತ್ತೊಂದೆಡೆ ರಾವಣನು ಈ ಗುಣಗಳಿಗೆ ತದ್ವಿರುದ್ಧವಾಗಿದ್ದಾನೆ. ಲಕ್ಷ್ಮಣನು ರಾಮನ ಆದರ್ಶ ಸೋದರನಾಗಿದ್ದಾನೆ. ಈತನು ವೈಭವದ ರಾಜ ಮನೆತನದ ಜೀವನವನ್ನು ತ್ಯಾಗಮಾಡಿ ರಾಮನನ್ನು ಅನುಸರಿಸಿ ಕಾಡಿಗೆ ಹೊರಟನು. ಅನೇಕ ಅಡೆತಡೆಗಳನ್ನು ಧೈರ್ಯದಿಂದ, ನಗುನಗುತ್ತಾ ಎದುರಿಸಿ ತನ್ನ ಅಣ್ಣ ರಾಮ ಮತ್ತು ಸೀತೆಯನ್ನು ನೋಡಿಕೊಳ್ಳುತ್ತಿದ್ದನು. ಪರಮ ಭಕ್ತ ಹನುಮಾನನು ವಿಧೇಯ ಸೇವಕ ಮತ್ತು ದಾಸಭಕ್ತಿಯ ಗಾಂಬೀರ್ಯ ಮತ್ತು ಉನ್ನತ್ತ ಪ್ರತಿರೂಪವನ್ನು ಪ್ರತಿನಿಧಿಸುತ್ತಾನೆ. ಸೀತೆಯು ಅಪ್ರತಿಮ ಸೌಚಿದರ್ಯವತಿಯಾಗಿದ್ದು, ಅತ್ಯುತ್ತಮಳು ಹಾಗೂ ಎಲ್ಲರ ಪ್ರೀತಿ, ಮಮತೆಯ ಪ್ರತಿನಿಧಿಯಾಗಿದ್ದಾಳೆ.

## ರಾಮಾಯಣದ ಪ್ರಧಾನ ಮಹಿಳಾ ಶಿಲ್ಪಗಳ ಕಥೆ

ರಾಮಾಯಣದ ಕಥೆಯು ದಶರಥನ ದರ್ಬಾರಿನೊಡನೆ ಆರಂಭವಾಗುತ್ತದೆ. ಇದರಲ್ಲಿ ರಾಜನೊಡನೆ ಆಸ್ಥಾನ ಕವಿಗಳು, ಮಂತ್ರಿಗಳು, ಸಂಗೀತಗಾರರು ಮತ್ತು ಇತರರು ಇರುತ್ತಾರೆ.

**ದೃಶ್ಯ ಸಂಖ್ಯೆ – ೧, ೨ & ೩** ಎರಡನೇ ಆಸ್ಥಾನದಲ್ಲಿ ಕೈಕೇಯಿಯ ರಾಜನ ಮೇಲಿನ ಪ್ರಭಾವದ ಅನುಕೂಲತೆ ಪಡೆದುಕೊಂಡು ತನ್ನ ಸವತಿಯರನ್ನು ಕೀಳಾಗಿ ನೋಡುವುದನ್ನು ವಾಲ್ಮೀಕಿಯು ವಿವರಿಸುತ್ತಾನೆ. ಒಂದು ಸಾಮಾನ್ಯ ದುಃಖವು ಎಲ್ಲಾ ರಾಣಿಯರನ್ನು ಒಂದು ಗೂಡಿಸಿತು ಅದೇನೆಂದರೆ; ಅದು ಒಂದು ನೋವಿನ ಸಂಗತಿಯಾಗಿದ್ದು ಎಲ್ಲಾ ರಾಣಿಯರಿಗೆ ಮಕ್ಕಳ ಫಲವಿರಲಿಲ್ಲ. ಇಲ್ಲಿ ಪುತ್ರ ಕಾಮೇಷ್ಟಿಯಾಗದ ಮುಖಾಂತರ ಒಂದು ಪಾಯಸ ನೀಡುವಿಕೆಯ ಚಿತ್ರಣವಿದೆ.

**ದೃಶ್ಯ ಸಂಖ್ಯೆ–೪** ರಲ್ಲಿ ನಾಮಕರಣ ಆಚರಣೆಗಾಗಿ ದಶರಥನ ನಾಲ್ಕು ಮಕ್ಕಳು ತಮ್ಮ ತಾಯಂದಿರ ತೊಡೆಯ ಮೇಲೆ ಕುಳ್ಳಿರಿಸಿಕೊಂಡಿರುವುದು.

**ದೃಶ್ಯ ಸಂಖ್ಯೆ–೫ & ೬** ರಲ್ಲಿ ದಶರಥನ ರಾಣಿಯರು ಮಕ್ಕಳೊಡನೆ ಆಟವಾಡುತ್ತಿದ್ದಾರೆ. ನಂತರ ಮಕ್ಕಳಿಗೆ ಸಮರಕಲೆ ಅಭ್ಯಾಸವು ಮುಂದುವರಿದಿದೆ.

ರಾಮ ಮತ್ತು ಲಕ್ಷ್ಮಣರನ್ನು ವಿಶ್ವಾಮಿತ್ರನು ಕರೆದುಕೊಂಡು ಹೋಗುವ ಮತ್ತು ತನ್ನೊಡನೆ ಅವರನ್ನು ಕಳುಹಿಸಿಕೊಡುವಂತೆ ರಾಜ ದಶರಥನನ್ನು ಕೇಳುತ್ತಾನೆ. ಋಷಿಗಳು ಯಜ್ಞಗಳನ್ನು ಮಾಡುವಾಗ ರಾಕ್ಷಸರಾದ ತಾಟಕ ಮತ್ತು ಮಾರೀಚರಿಂದ ಅಡಚಣೆಯಾಗಿ, ರಾಕ್ಷಸರಿಂದ ಕಲ್ಲಿನ ಮಳೆಗೆರೆದು ಯಜ್ಞವನ್ನು ಅಡ್ಡಿಪಡಿಸಲಾಯಿತು. ರಾಮನು ರಾಕ್ಷಸರಾದ ತಾಟಕ ಮತ್ತು ಮಾರೀಚರನ್ನು ಕೊಂದನು. ನಂತರ ವಿಶ್ವಾಮಿತ್ರನು ರಾಮ ಮತ್ತು ಲಕ್ಷಣರನ್ನು ಜನಕನ ಆಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾನೆ.

**ದೃಶ್ಯ ಸಂಖ್ಯೆ–೭ & ೮** ರಲ್ಲಿ ಸೀತೆಯ ಸ್ವಯಂವರ ಮತ್ತು ರಾಮ ಸೀತೆಯರ ವಿವಾಹ ಚಿತ್ರಣವಿದೆ.

**ದೃಶ್ಯ ಸಂಖ್ಯೆ–೯** ರಲ್ಲಿ ರಾಮ, ಲಕ್ಷ್ಮಣ ಮತ್ತು ಸೀತೆಯರನ್ನು ಸುಮಂತ್ರನು ತನ್ನ ರಥದಲ್ಲಿ ಕರೆದುಕೊಂಡು ಹೋಗುವುದು ಮತ್ತು ನದಿಯನ್ನು ತಲುಪುವ ಚಿತ್ರವಿದೆ.

**ದೃಶ್ಯ ಸಂಖ್ಯೆ–೧೦**ರಲ್ಲಿ ವಾದ್ಯಗೋಷ್ಠಿಯೊಡನೆ ಸಂಗೀತಗಾರರ ಜೊತೆಗೂಡಿ ರಾಮ ಮತ್ತು ಸೀತೆ ರಥದಲ್ಲಿ ಸಾಗುವುದನ್ನು ಚಿತ್ರೀಕರಿಸಲಾಗಿದೆ. ಇವರನ್ನು ದೊಡ್ಡ ಬೀಳ್ಕೊಡುಗೆ ಮತ್ತು ವೈಭವದಿಂದ ಆಯೋಧ್ಯೆಗೆ ಕಳುಹಿಸುವ ಚಿತ್ರವಿದೆ.

* ಭಾರತ ಭಾಷೆಗಳ ಕೇಂದ್ರ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು–೦೬.

ತನ್ನ ವಾರಸುದಾರನಾಗಿ ರಾಮನನ್ನು ಕೂರಿಸುವಾಗ ಕೈಕೇಯಿಯು ಹೇಳುವುದನ್ನು ವಾಲ್ಮೀಕಿಯು ತೋರಿಸುತ್ತಾನೆ. ಇದಕ್ಕೆ ಅವಳ ಆರಂಭಿಕ ಪ್ರತಿಕ್ರಿಯೆಯು ಸಾಧಾರಣವಾಗಿಯು ಮತ್ತು ಪರವಾಗಿಯು ಇತ್ತು. ಅವಳಿಗೆ ತುಂಬಾ ಸಂತೋಷವಾಗಿ ಸ್ವಾಗತ ಸುದ್ಧಿಯನ್ನು ತರಲು ಮಂಥರಾಳಿಗೆ ಅಪಾರ ಮೌಲ್ಯದ ಆಭರಣಗಳನ್ನು ನೀಡಲಾಯಿತು. ನನಗೆ ರಾಮ ಮತ್ತು ಭರತರ ನಡುವೆ ಯಾವುದೇ ವ್ಯತ್ಯಾಸ ಕಾಣುತಿಲ್ಲ ಎಂದು ಅವಳು ಹೇಳಿದುದಲ್ಲದೆ, ಸಾಮ್ರಾಜ್ಯಕ್ಕೆ ರಾಮನನ್ನು ರಾಜನಾಗಿ ನೇಮಿಸುವ ಉದ್ದೇಶವು ಸಂತೋಷಕರ ವಾದ್ದುದೆಂದು ಹೇಳಿದಳು.

ತನ್ನ ಮನಸ್ಸನ್ನು ಕಹಿಮಾಡಿಕೊಳ್ಳುವ ಮಂಥರಳಾ ಹಿಂದಿನ ದುರ್ಬಲ ಪ್ರಯತ್ನವನ್ನು ತಡೆಯುವುದಕ್ಕಾಗಿ ಕೇವಲ ರಾಮನ ಉತ್ತಮ ಗುಣಗಳನ್ನು ಮಾತ್ರ ಹೇಳುವಂತೆ ಕೈಕೇಯಿಯು ವಾಲ್ಮೀಕೀಗೆ ಹೇಳುತ್ತಾಳೆ. ಭರತನಿಗಿಂತ ರಾಮನು ನನಗೆ ಹೆಚ್ಚು ಹತ್ತಿರ ಅಲ್ಲದೆ ಕೌಸಲ್ಯನನ್ನು ಪ್ರೀತಿಸುವುದಕ್ಕಿಂತ ಆತ ಹೆಚ್ಚಾಗಿ ನನ್ನನು ಪ್ರೀತಿಸುತ್ತಾನೆ ಎಂದು ಹೇಳುತ್ತಾಳೆ. ಜೊತೆಗೆ ಸಾಮ್ರಾಜ್ಯವು ರಾಮನಿಗೆ ಸೇರಿದ್ದಾದರೆ ಅದು ಭರತನಿಗೂ ಕೂಡ ಸೇರುತ್ತದೆ, ರಾಮನು ತನ್ನಂತೆಯೆ ತನ್ನ ಸೋದರರನ್ನು ಕಾಣುತ್ತಾನೆ ಎಂದು ಹೇಳುತ್ತಾಳೆ.

**ದೃಶ್ಯ ಸಂಖ್ಯೆ–೧೧,೧೨,೧೩ & ೧೪** ರಲ್ಲಿ ದಶರಥನು ರಾಮ ಮತ್ತು ಸೀತೆಯನ್ನು ಕಾಡಿಗೆ ಕಳುಹಿಸುವಾಗ ಅವರು ರಾಜನಿಂದ ಅಪ್ಪಣೆಪಡೆದು ಕಾಡಿಗೆ ಸೀತೆ ರಾಮ ಮತ್ತು ಲಕ್ಷ್ಮಣರು ಅಯೋಧ್ಯೆಯನ್ನು ಬಿಟ್ಟು ದಂಡಕಾರಣ್ಯದ ಜನ್ಮಸ್ಥಾನಕ್ಕೆ ಹೊರಟರು. ಕಾಡಿನಲ್ಲಿ ಸೀತೆಯು ರಾಮ ಮತ್ತು ಲಕ್ಷ್ಮಣರೊಡನೆ ವಾಸಿಸಿದಳು.

**ದೃಶ್ಯ ಸಂಖ್ಯೆ–೧೫** ರಲ್ಲಿ ಲಕ್ಷ್ಮಣ ಶೂರ್ಪಣಖಿಯ ಮೂಗನ್ನು ಕೊಯ್ದು ವಿರೂಪಗೊಳಿಸಿದ ಚಿತ್ರಣವಿದೆ.

**ದೃಶ್ಯ ಸಂಖ್ಯೆ–೧೬** ರಲ್ಲಿ ಲಕ್ಷ್ಮಣನು ತನ್ನನ್ನು ಅವಮಾನ ಮಾಡಿದ ಎಂದು ಶೂರ್ಪಣಖಿಯು ರಾವಣನಗೆ ಹೇಳುತ್ತಿರುವುದು.

**ದೃಶ್ಯ ಸಂಖ್ಯೆ–೧೭** ರಲ್ಲಿ ಸೀತೆಗೆ ಕಾಡಿನ ವಾಸದ ಸಂತೋಷವನ್ನು ನಿರಾಕರಿಸಲಾಯಿತು, ರಾಕ್ಷಸನಾದ ಮಾರೀಚನು ಚಿನ್ನದ ಜಿಂಕೆ ರೂಪದಲ್ಲಿ ಬಂದನು. ಸೀತೆಯು ಅದನ್ನು ಇಷ್ಟಪಟ್ಟಳು ಹಾಗೂ ಅದು ತನಗೆ ಬೇಕು ಎಂದಳು. ಆ ಜಿಂಕೆ ಬೇಕೆಂದು ಸೀತೆಯು ರಾಮನಿಗೆ ಕೇಳಿದಳು. ರಾಮನು ಆ ಜಿಂಕೆಯ ಭೇಟೆಗೆ ಹೊರಟನು ಮತ್ತು ಚಿನ್ನದ ಜಿಂಕೆ ಮೇಲೆ ಬಾಣ ಬಿಟ್ಟನು.

ಅದೇ ಸಂದರ್ಭದಲ್ಲಿ ರಾಕ್ಷಸನಾದ ರಾವಣನು ಬ್ರಾಹ್ಮಣ ರೂಪದಲ್ಲಿ ಬಂದು ಭಿಕ್ಷೆ ಬೇಡಿದನು. ಆಗ ಲಕ್ಷ್ಮಣನು ಒಂದು ಗೆರೆಯನ್ನು ಸೀತೆಯ ಸುತ್ತಲೂ ಹಾಕಿ, ಈ ಲಕ್ಷ್ಮಣ ರೇಖೆಯನ್ನು ದಾಟಬಾರದೆಂದು ಸೀತೆಗೆ ಹೇಳಿದನು. ರಾಕ್ಷಸನಾದ ರಾವಣನು ತನ್ನ ಪುಷ್ಪಕ ವಿಮಾನದಲ್ಲಿ ಸೀತೆಯನ್ನು ಹೊತ್ತೊಯ್ದನು. **ದೃಶ್ಯ ಸಂಖ್ಯೆ  ೧೮, ೧೯, ೨೦, ೨೧.**

ಸೀತೆಯನ್ನು ರಾವಣನಿಂದ ರಕ್ಷಿಸುವಂತೆ ಜಟಾಯು ಪಕ್ಷಿ ರಾಮನಿಗೆ ಹೇಳುತ್ತದೆ. ಸೀತೆಯ ಆಭರಣಗಳನ್ನು ಸುಗ್ರೀವನು ಗುರುತಿಸುತ್ತಾನೆ. ಆಭರಣಗಳನ್ನು ಸೀತೆಯು ಪುಷ್ಪಕ ವಿಮಾನದಿಂದ ಎಸೆದಳು, ಅವುಗಳು ರಾಮನಿಗೆ ಮಾಹಿತಿಯನ್ನು ಸೂಚಿಸುವ ಸಂಕೇತ.

ರಾಮನು ವಾನರನ್ನು ಭೇಟಿ ಮಾಡಿ ಏಳು ಹಸ್ತಗಳಿಂದ ಬಾಣ ಬಿಟ್ಟು ವಾಲಿ ಮತ್ತು ಸುಗ್ರೀವರನ್ನು ಸೋಲಿಸುತ್ತಾನೆ ಮತ್ತು ಹನುಮಾನನು ರಾಮನಿಂದ ಚಿನ್ನದ ಉಂಗುರವನ್ನು ಪಡೆದು ಸೀತೆಗಾಗಿ ಹುಡುಕಾಟ ಆರಂಭಿಸುತ್ತಾನೆ. ರಾಮನು ವಾಲಿಯನ್ನು ಸೋಲಿಸುತ್ತಾನೆ.

**ದೃಶ್ಯ ಸಂಖ್ಯೆ – ೨೨** ರಲ್ಲಿ ರಾಮನು ಸೀತೆಯನ್ನು ಲಂಕಾದಲ್ಲಿ ಇರಿಸಿದ್ದನು. ಅವಳ ಚಿಂತೆ ರಾಮನದೇ ಆಗಿತ್ತು. ಸೀತೆಯು ರಾವಣನ ತಂತ್ರಗಳಿಂದ ಬದಲಾಗುವುದಿಲ್ಲ, ಕದಲುವುದಿಲ್ಲ. ಸದ್ಗುಣಿಯಾದ ವಿಭೂಷಣನ ಹೆಂಡತಿಯಾದ ಸರಾಮೆಯನ್ನು ಸೀತೆಯ ಸಂಗಾತಿಯಾಗಿ ಆಕೆಯ ಬಳಿ ಕಳುಹಿಸಿದನು. ಈಕೆಯು ಒಳ್ಳೆಯವಳಾಗಿ, ಕರುಣೆಯಾಗಿ ಸೀತೆಗೆ ಕಂಡಳು. ರಾವಣನಿಂದ ಸೀತೆಯನ್ನು ರಕ್ಷಿಸುವಂತೆ ಬಯಸಿದಳು. ರಾಮನು ಬೇಗನೆ ಬಂದು ರಾವಣನನ್ನು ಕೊಂದು ನಿನ್ನನು ವಾಪಸ್ಸು ಕರೆದುಕೊಂಡು ಹೋಗುತ್ತಾನೆ ಎಂದು ಸರಾಮಳು ಸೀತೆಯನ್ನು ಮನವೊಲಿಸುತ್ತಾಳೆ.

**ದೃಶ್ಯ ಸಂಖ್ಯೆ–೨೩** ರಲ್ಲಿ ರಾವಣನು ತನ್ನ ಅರಮನೆಯಲ್ಲಿ ಸಖಿಯರೊಂದಿಗೆ ಕಾಲಕಳೆಯುತ್ತಿರುವ ಚಿತ್ರ.

**ದೃಶ್ಯ ಸಂಖ್ಯೆ–೨೪ & ೨೫** ರಲ್ಲಿ ಸೀತೆಯು ಲಂಕಾದ ಅಶೋಕವನದಲ್ಲಿದ್ದಾಗ ಹನುಮಾನನು ಅಶೋಕವನವನ್ನು ತಲುಪಿ ಸೀತೆಯನ್ನು ಭೇಟಿಮಾಡಿ ಅವಳಿಗೆ ಚೂಡಾಮಣಿ ಉಂಗುರವನ್ನು ತೋರಿಸುವ ಮತ್ತು ನಾನು ರಾಮನ ಸೇವಕನೆಂದು ಸೀತೆಗೆ ತಿಳಿಸುವುದನ್ನು ಚಿತ್ರೀಕರಿಸಲಾಗಿದೆ.

ವಾನರಗಳು ದೊಡ್ಡ ದೊಡ್ಡ ಬಂಡೆಗಳನ್ನು ತಂದು ಲಂಕೆಗೆ ಸೇತುವೆಯನ್ನು ನಿರ್ಮಿಸುತ್ತವೆ. ಹನುಮಾನ ಮತ್ತು

ಸುಗ್ರೀವರು ವಾನರ ಸೈನ್ಯ ಒಡಗೂಡಿ ರಾಮ ಮತ್ತು ಲಕ್ಷ್ಮಣರೊಡನೆ ಲಂಕೆಗೆ ಹೋಗುತ್ತಾರೆ.

ರಾವಣನು ಸೀತೆಯನ್ನು ಆಕಾಶದಲ್ಲಿ ಹೊತ್ತೊಯ್ದರೂ ಸಹ ಕೆಲವು ವಾನರಗಳು ಬೆಟ್ಟದ ಮೇಲೆ ಕುಳಿತಿರುವುದನ್ನು ಸೀತೆಯು ಕಂಡಳು ಮತ್ತು ಅವುಗಳ ಮೇಲೆ ರೇಷ್ಮೆ ಬಟ್ಟೆಯಲ್ಲಿ ಕೆಲವು ಆಭರಣಗಳನ್ನು ಸುತ್ತಿ ಎಸೆದು ರಾಮನೇನಾದರು ಈ ಮಾರ್ಗದಲ್ಲಿ ಬರುವ ಸಾಧ್ಯತೆಯಿದ್ದರೆ ತನ್ನನ್ನು ಹುಡುಕುವ ಸೂಚನೆ ಸಿಗುತ್ತದೆ ಎಂದು ಯೋಚಿಸುತ್ತಾಳೆ. ಅವಳ ಸೌಂದರ್ಯದಿಂದಾಗಿ ರಾವಣನು ಅವಸರದಲ್ಲಿ ಸೀತೆಯನ್ನು ಹೊತ್ತೊಯ್ಯುವಾಗ ಸೀತೆಯು ಆಭರಣ ಮತ್ತು ರೇಷ್ಮೆ ಬಟ್ಟೆಯನ್ನು ಕೆಳಗೆ ಎಸೆಯುವುದನ್ನು ಗಮನಿಸಲಿಲ್ಲ.

**ದೃಶ್ಯ ಸಂಖ್ಯೆ – ೨೪** ರಲ್ಲಿ ಸೀತೆಯು ತನ್ನ ಹೊಳೆಯುವ ತಲೆ ಆಭರಣಗಳನ್ನು ಹನುಮಾನನಿಗೆ ನೀಡುತ್ತಾಳೆ. ನೀನು ನಿಜವಾಗಿ ರಾಮನ ಸೇವಕನಾಗಿದ್ದರೆ ಲಕ್ಷ್ಮಣನ ಖ್ಯಾತಿಯ ಬಗ್ಗೆ ಹೇಳು ಎಂದು ರಾಮನಿಗೆ ತಿಳಿಸಬೇಕೆನ್ನುತ್ತಾಳೆ. ಹನುಮಾನನು ಇದರಿಂದ ತೃಪ್ತಿಕರಗೊಂಡು ರಾಮನ ಸಂದೇಶವನ್ನು ಸೀತೆಗೆ ತಿಳಿಸುತ್ತಾನೆ. ಹಾಗು ಸೀತೆಯ ಸಂದೇಶವನ್ನು ರಾಮನಿಗೂ ತಿಳಿಸುತ್ತಾನೆ.

ರಾವಣನೊಡನೆ ರಾಮ, ಲಕ್ಷ್ಮಣ ಮತ್ತು ಹನುಮಾನರು ಯುದ್ಧ ಮಾಡುತ್ತಾರೆ.

**ದೃಶ್ಯ ಸಂಖ್ಯೆ – ೨೬ & ೨೭** ರಲ್ಲಿ ರಾವಣನನ್ನು ಕೊಂದ ನಂತರ ತನ್ನ ಸಂಗಡಿಗರ ಮಧ್ಯದಲ್ಲಿ ನಿಂತು ಸೀತೆಗೆ ಹೀಗೆ ಹೇಳುತ್ತಾನೆ : ನಿನ್ನನ್ನು ವಾಪಸ್ಸು ಕರೆದುಕೊಂಡು ಹೋಗುವುದಿಲ್ಲ. ನಿನಗೆ ಇಷ್ಟವಾದ ಕಡೆ ಹೋಗು ಎಂದು ಹೇಳುತ್ತಾನೆ. ರಾಮನ ಈ ಮಾತು ಕೇಳಿ ಸೀತೆಯು ರಾಮನ ಸುತ್ತಾ ಒಂದು ಸುತ್ತು ಹಾಕಿ ಅಗ್ನಿಪರೀಕ್ಷೆಗೆ ಹಾಜರಾದಳು ನಂತರ ನಾನು ಪತಿವ್ರತೆಯಾಗಿದ್ದರೆ ನನ್ನನ್ನು ರಾಮನು ಪರಿಗಣಿಸಬೇಕೆಂದು ಹೇಳುತ್ತಾಳೆ, ಅಗ್ನಿ ಪರೀಕ್ಷೆಯು ಜನರಿಗೆ ಸಾಕ್ಷಿಯಾಗಿಲಿದೆ ಎಂದೂ ಸಹಾ ಹೇಳುತ್ತಾಳೆ. ಅಗ್ನಿ ಪರೀಕ್ಷೆಯಿಂದ ಸುರಕ್ಷಿತವಾಗಿ ಸೀತೆಯು ಬಂದಾಗ ಆಕೆ ಕೇವಲ ಪತಿವ್ರತೆಯಲ್ಲ ಅವಳು ಒಬ್ಬ ದೈವತ್ವವುಳ್ಳವಳೆಂದು ದೈವವಾಣಿಯು ಹೇಳಿತು. ನಂತರ "ಸೀತೆಯು ನನ್ನವಳು ಸೂರ್ಯನಿಗೆ ಸೇರಿದವಳೆಂದು" ಹೇಳುತ್ತಾ ರಾಮನು ಸೀತೆಯನ್ನು ಸ್ವೀಕರಿಸುತ್ತಾನೆ. ರಾಮನು ತನ್ನ ಪಕ್ಕದಲ್ಲಿ ಸೀತೆಯ ಚಿನ್ನದ ವಿಗ್ರಹವನ್ನು ಇಡುತ್ತಾನೆ. ರಾಮನು ಪಾಪ ವಿಮೋಚನೆಗೆ ಲಿಂಗಪೂಜೆ ನೆರವೇರಿಸುತ್ತಾನೆ.

**ಉಪಸಂಹಾರ**

ಸೀತೆಯ ಚಿನ್ನದ ಪ್ರತಿಕೃತಿಯನ್ನು ರಾಮನ ಪಕ್ಕದಲ್ಲಿಟ್ಟು ಎಲ್ಲಾ ಪ್ರಮುಖ ಆಚರಣೆಗಳಲ್ಲು ಪೂಜಿಸುತ್ತಾರೆ. ನಂತರದ ವರ್ಷಗಳಲ್ಲಿ ರಾಮನು ಈ ರೀತಿ ಮಾಡುತ್ತಾನೆ. ರಾಮನು ತನ್ನ ವಾರಸುದಾರರನ್ನಾಗಿ ಲವ–ಕುಶರನ್ನು ಸ್ವೀಕರಿಸುತ್ತಾನೆ. ಸೀತೆಯು ತನ್ನ ಪಾತಿವ್ರತ್ಯಾತನದಿಂದ ಪ್ರಭಾವಿತಳಾಗಿ ಭೂಮಿಯಲ್ಲಿ ಮಾತ್ರ ನನಗೆ ಜಾಗ ಮಾಡಿಕೊಡಬೇಕೆಂದು ಕೇಳುತ್ತಾಳೆ.

ಉನ್ನತ ವರ್ಗದ ಮಹಿಳೆಯರಂತೆಯೇ ಸೀತೆಯ ಈ ವರ್ಗದಲ್ಲಿ ಕೆಲವು ಸಾಮಾನ್ಯ ಸಂತೋಷವನ್ನು ಅನುಭವಿಸಲು ಇಷ್ಟಪಡುತ್ತಾಳೆ. ತಡೆದುಕೊಳ್ಳಲಾಗದ ಬಯಕೆಯಾದ ಚಿನ್ನದ ಜಿಂಕೆಯನ್ನು ಹಿಡಿಯುವ ಆಸೆಯನ್ನು ಕೂಡ ಹೊಂದಿರುತ್ತಾಳೆ. ದುರಾದೃಷ್ಟವಶಾತ್ ಅದು ಬೇರೆಯದೇ ಆಗಿರುತ್ತದೆ. ದಾರುಣ ಸಂದರ್ಭವನ್ನು ಎದುರಿಸಬೇಕಾಗುತ್ತದೆ. ಇದು ತನ್ನ ಜೀವನದಲ್ಲಿ ಆಸೆಯ ವಿರುದ್ಧ ಹೊಂದಾಣಿಕೆ ಮಾಡಿಕೊಳ್ಳಲು ದೀರ್ಘ ಪ್ರಯತ್ನ ಮಾಡುತ್ತಾಳೆ.

ರಾಮನಿಗೆ ತಕ್ಕ ಪತ್ನಿಯಾಗಿ ತನ್ನ ದಿಟ್ಟ ಹೋರಾಟವನ್ನು ಮಾಡುತ್ತಾಳೆ. ಸೀತೆಯು ಎರಡು ರೀತಿಯ ಉದ್ದೇಶ ಹೊಂದಿರುತ್ತಾಳೆ. ಒಂದು ತಾನು ರಾಮನಿಗೆ ಮೀಸಲಾಗಿರುವುದು ಎಂದು ಹೇಳುತ್ತಾಳೆ. ಸೀತೆಯು ರಾಮನ ಸಂಗವನ್ನು ಬಿಟ್ಟಿರುವುದನ್ನು ಒಳಗೊಂಡಂತೆ ತನ್ನ ಎಲ್ಲಾ ಐಷಾರಾಮಿ ಜೀವನದ ಹಕ್ಕು ಸವಲತ್ತುಗಳನ್ನು ತ್ಯಾಗ ಮಾಡುತ್ತಾಳೆ. ಹಾಗೂ ವೈಯಕ್ತಿಕ ಅವಮಾನಕ್ಕೆ ಒಳಪಡುತ್ತಾಳೆ. ಅಲ್ಲಿಂದ ರಾಮನು ಜಗತ್ತಿನ ಮುಂದೆ ಆದರ್ಶ ರಾಜನಾಗಿ ತನ್ನ ಶಕ್ತಿ, ಶುದ್ಧತೆಗೆ, ಸತ್ಯಕ್ಕೆ ಹಾಗೂ ನ್ಯಾಯಪರತೆಗೆ ಹೆಸರುವಾಸಿಯಾಗುತ್ತಾನೆ. ಎಲ್ಲಾ ಪರಾಕ್ರಮಗಳು ರಾಮನಿಗೂ ಹಾಗೂ ಎಲ್ಲಾ ತ್ಯಾಗಗಳು ಸೀತೆಗೆ ಅನ್ವಯಿಸುತ್ತವೆ.

ಕೆ. ಪ್ರಭು*

# ಅಮೃತಾಪುರದ ಅಮೃತೇಶ್ವರ ದೇವಾಲಯದ ಕಪಿಶಿರ ಶಿಲ್ಪಗಳು

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನಲ್ಲಿ ಇರುವ ಅಮೃತಾಪುರದ ಅಮೃತೇಶ್ವರ ದೇವಾಲಯವು ಹೊಯ್ಸಳರ ಎರಡನೇ ಬಲ್ಲಾಳನ ಕಾಲದಲ್ಲಿ ಹೊಯ್ಸಳರ ಅಧಿಕಾರಿಯಾದ ಅಮೃತೇಶ್ವರ ದಂಡನಾಯಕನಿಂದ ಕ್ರಿ.ಶ. ೧೧೯೬ರಲ್ಲಿ ನಿರ್ಮಾಣವಾಗಿದ್ದು ಅತ್ಯಂತ ಸುಂದರವಾಗಿದೆ. ಕರ್ನಾಟಕದ ಐತಿಹಾಸಿಕ ಸ್ಥಳಗಳಲ್ಲಿ ಗುರುತಿಸಿಕೊಂಡಿರುವ ಈ ಸ್ಥಳವು ಸರ್ಕಾರದ ನಿರ್ಲಕ್ಷಕ್ಕೆ ಒಳಗಾಗಿ ಅಭಿವೃದ್ಧಿಯನ್ನು ಹೊಂದಿಲ್ಲದಿದ್ದರೂ, ಇಲ್ಲಿನ ಅಮೃತೇಶ್ವರ ದೇವಾಲಯವನ್ನು ಪುರಾತತ್ವ ಇಲಾಖೆಯವರು ಸಂರಕ್ಷಣೆಯನ್ನು ಮಾಡಿ ಸುರಕ್ಷಿತ ಸ್ಮಾರಕವನ್ನಾಗಿ ಮಾಡಿದ್ದಾರೆ. ಈ ದೇವಾಲಯವು ಏಕಕೂಟವಾಗಿದ್ದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಇವುಗಳನ್ನು ಹೊಂದಿದ್ದು ಸುತ್ತಲೂ ವಿಶಾಲವಾದ ಒಂದು ಪ್ರಾಕಾರದ ಗೋಡೆಯಿಂದ ಸುತ್ತುವರೆದಿದೆ. ಇಲ್ಲಿನ ಕಕ್ಷಾಸನದಲ್ಲಿರುವ ರಾಮಾಯಣ, ಮಹಾಭಾರತ ಹಾಗೂ ಭಾಗವತ ಕಥೆಗಳಲ್ಲಿ ಬರುವ ದೃಶ್ಯಾವಳಿಯ ಚಿತ್ರಣಗಳನ್ನು ಕೆತ್ತಿರುವ ಉಬ್ಬುಶಿಲ್ಪಗಳು ಹೊಯ್ಸಳ ಕಲಾಶೈಲಿಯಲ್ಲಿಯೇ ಅಪ್ರತಿಮವಾಗಿ ಮೂಡಿಬಂದಿದೆಯಲ್ಲದೇ ಇಲ್ಲಿನ ಭುವನೇಶ್ವರಿಗಳಲ್ಲಿನ ಶಿಲ್ಪಗಳು ಮತ್ತು ಭುವನೇಶ್ವರಿಗಳ ವಿಧಗಳು ಇವೆಲ್ಲವೂ ಈ ದೇವಾಲಯದ ವಿಶಿಷ್ಠತೆಯನ್ನು ಇಮ್ಮಡಿಗೊಳಿಸಿದೆ.

ದೇವಾಲಯದ ಪ್ರಾಕಾರ ಗೋಡೆಯ ಮೇಲೆ ಹಲವಾರು ರಕ್ಷಣಾ ಬುರುಜುಗಳಂತಹ ಅಥವಾ ವಾಸ್ತುಶಾಸ್ತ್ರಗಳಲ್ಲಿ ಕಪಿಶಿರಗಳೆಂದು ಗುರುತಿಸಲ್ಪಟ್ಟ ವೃತ್ತಾಕಾರದ ಆಕೃತಿಗಳಲ್ಲಿ ಹಲವಾರು ಶಿಲ್ಪಗಳನ್ನು ಕಂಡರಿಸಲಾಗಿದೆ. ಇಂತಹ ಶಿಲ್ಪಗಳು ಹೊಯ್ಸಳರ ಕಾಲದ ದೇವಾಲಯಗಳಲ್ಲಿ ವಿಶೇಷವಾಗಿದ್ದು ಇಲ್ಲಿನ ಶಿಲ್ಪಗಳು ಇತರ ದೇವಾಲಯಗಳಿಗಿಂತ ಭಿನ್ನವಾಗಿದೆ. ಅವುಗಳಲ್ಲಿ ಮುಖ್ಯವಾದ ಶಿಲ್ಪಗಳೆಂದರೆ ನೃತ್ಯ ಗಣೇಶ, ಪುರುಷ ಅಥವಾ ಭೀಮನ ಶಿಲ್ಪ, ಭೈರವ ಶಿಲ್ಪ, ಹಂಸಬಂಧ, ಹಂಸಶಿಲ್ಪ, ಆನೆಯನ್ನು ಬೇಟೆಯಾಡುತ್ತಿರುವ ಸಿಂಹ, ನಗ್ನ ಸ್ತ್ರೀ ಶಿಲ್ಪ, ಭೀಮನ ಶಿಲ್ಪ.

## ಶಿಲ್ಪಗಳ ವಿವರಣೆ

**ನೃತ್ಯಗಣೇಶ :** ಈ ಶಿಲ್ಪದಲ್ಲಿ ನೃತ್ಯ ಮಾಡುತ್ತಿರುವ ಗಣೇಶನನ್ನು ಕೆತ್ತನೆ ಮಾಡಲಾಗಿದ್ದು, ಇದರಲ್ಲಿ ಎರಡು ಭುಜಗಳಿಂದ ಕೂಡಿರುವ ಗಣೇಶನು ತನ್ನ ಎಡಗೈಯನ್ನು ಮಡಚಿ ಬಲಗೈಯನ್ನು ಮೇಲಕ್ಕೆ ಎತ್ತಿ, ಬಲಪಾದವನ್ನು ಎತ್ತಿ ಮಡಚಿ ಎಡಗಾಲನ್ನು ಬಗ್ಗಿಸಿ ನಾಟ್ಯವಾಡುತ್ತಿರುವ ಭಂಗಿಯಲ್ಲಿ ಪಡಿಮೂಡಿಸಲಾಗಿದೆ. ಇದನ್ನು ನಾಟ್ಯಶಾಸ್ತ್ರದಲ್ಲಿ ಹಲವಾರು ಭಂಗಿಗಳನ್ನು ಒಳಗೊಂಡ ನಾಟ್ಯ ಎಂದು ಕರೆದಿದ್ದರೂ, ಅದನ್ನು ನಾವು ಉದ್ವೃತ್ತ ಎಂದು ಗುರುತಿಸಬಹುದು. ಉಳಿದಂತೆ ಸೊಂಡಿಲನ್ನು ತನ್ನ ಎಡಗಡೆಗೆ ತಿರುಗಿಸಿದ್ದು, ಕಿರೀಟ, ಕುಂಡಲ ಇತ್ಯಾದಿ ಆಭರಣಗಳಿಂದ ಭೂಷಿತನಾಗಿದ್ದಾನೆ.

**ಪುರುಷ ಅಥವಾ ಭೀಮನ ಶಿಲ್ಪ :** ಈ ಶಿಲ್ಪದಲ್ಲಿ ಅತ್ಯಂತ ದೃಢಕಾಯನಾದ ಶರೀರವನ್ನುಳ್ಳ ಪುರುಷನನ್ನು ಕಂಡರಿಸಲಾಗಿದೆ. ವಿಶಿಷ್ಟವಾದ ಕೇಶವಿನ್ಯಾಸ ಗುಂಗುರು ಕೂದಲು, ದೊಡ್ಡದಾದ ಕುಂಡಲಗಳು, ಹಾರ, ಯಜ್ಞೋಪವೀತ ವಸ್ತ್ರಗಳಿಂದ ಅಲಂಕೃತನಾಗಿದ್ದು ರಾಜಪುರುಷನಂತೆ ಕಂಡುಬರುತ್ತಾನೆ. ಅವನ ಕಾಲುಗಳಲ್ಲಿ ಕಡಗ ಮತ್ತು ನೂಪುರಗಳಿವೆ. ಅವನ ಮುಖಭಾವಗಳು, ಹುಬ್ಬು ಇತ್ಯಾದಿಗಳಿಂದ ಬಲಶಾಲಿಯಾದ ಭೀಮ ಎಂದು ಊಹಿಸಬಹುದು.

**ಭೈರವ ಶಿಲ್ಪ :** ಈ ಕಪಿಶಿರದ ಶಿಲ್ಪದಲ್ಲಿ ಆರು ಭುಜಗಳಿಂದ ಕೂಡಿದ ಭೈರವನನ್ನು ಕಂಡರಿಸಲಾಗಿದ್ದು, ಭೈರವನು ಕಾಲಭೈರವ ಸ್ವರೂಪದಲ್ಲಿದ್ದಾನೆ. ಮೇಲಿನ ಬಲಗೈಯಲ್ಲಿ ತ್ರಿಶೂಲ, ಮಧ್ಯದ ಬಲಗೈಯಲ್ಲಿ ಚೂರಿ, ಕೆಳಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಮೇಲಿನ ಎಡಗೈಯಲ್ಲಿ ಡಮರು, ಮಧ್ಯದ ಎಡಗೈಯಲ್ಲಿ ಕಪಾಲ ಮತ್ತು ಶಿರಸ್ಸು ಹಾಗೂ ಕೆಳ ಎಡ ಕೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಭೈರವನು ನಗ್ನನಾಗಿದ್ದು ರುಂಡಮಾಲೆಯಿಂದ ಹಾಗೂ ಇತರ ಆಭರಣಗಳಿಂದ ಅಲಂಕೃತನಾಗಿದ್ದಾನೆ. ಕಾಲುಗಳಲ್ಲಿ ಪಾದುಕೆಗಳನ್ನು ತೊಟ್ಟುಕೊಂಡಿದ್ದು, ತಾನು

* ಸಹಾಯಕ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸ ಗಂಗೋತ್ರಿ, ಮೈಸೂರು.



ದೇವಾಲಯದ ಪ್ರಾಕಾರ ಹಾಗೂ ಕಪಿ ಶಿರಗಳು



ನೃತ್ಯ ಗಣೇಶ



ಪುರುಷ ಅಥವಾ ಭೀಮನ ಶಿಲ್ಪ



ಭೈರವ



ಹಂಸಬಂಧ



ಹಂಸ



ಬೇಟೆಗೀಡಾದ ಆನೆ



ನಗ್ನ ಸ್ತ್ರೀ

ರ್ರಹ್ಮಹತ್ಯೆಯ ಪಾಪ ವಿಮೋಚನೆಗಾಗಿ ಯಾತ್ರೆಯಲ್ಲಿರುವ ಭಂಗಿಯಲ್ಲಿದ್ದಾನೆ. ಅವನ ಬಲಭಾಗದಲ್ಲಿ ಹಾಗೂ ಎಡ ಭಾಗದಲ್ಲಿ ಮೂಳೆಗಳಿಂದ ಕೂಡಿದ ಪಿಶಾಚಗಳನ್ನು ಕೆತ್ತಲಾಗಿದ್ದು, ಅವು ವಾದ್ಯ ನುಡಿಸುವುದರಲ್ಲಿ ಹಾಗೂ ಪಾನಪಾತ್ರೆಗಳನ್ನು ಹಿಡಿಯುವುದರಲ್ಲಿ ಮಗ್ನವಾಗಿವೆ. ಪೀಠದಲ್ಲಿ ಭೈರವನ ವಾಹನವಾದ ಚೇಳನ್ನು ಕೆತ್ತಲಾಗಿದ್ದು, ಶಿಲ್ಪವು ಶಾಸ್ತ್ರಗಳ ಪ್ರಕಾರ ಪರಿಪೂರ್ಣವಾದ ಭೈರವನ ಅಂಶಗಳನ್ನು ಒಳಗೊಂಡಿದೆ.

**ಹಂಸಬಂಧ :** ಈ ಶಿಲ್ಪದಲ್ಲಿ ಹಂಸವು ಬಳ್ಳಿಯನ್ನು ಕೊಕ್ಕಿನಲ್ಲಿ ಹಿಡಿದಿದ್ದು ಸುತ್ತಲೂ ಹಲವು ವಿಧವಾದ ಅಲಂಕರಣಗಳನ್ನು ಮಾಡಿದ್ದಾರೆ. ಸುತ್ತಲೂ ಬಳ್ಳಿಯ ಅಲಂಕರಣವಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖವೂ ಸಹ



ಭೀಮ

ಕಂಡುಬರುತ್ತದೆ. ಒಟ್ಟಿನಲ್ಲಿ ಶಿಲ್ಪವು ಸುಂದರವಾದ ಜ್ಯಾಮಿತಿಕ ಅಲಂಕರಣಗಳಿಂದ ಹಾಗೂ ಹೂವಿನ ಅಲಂಕರಣಗಳಿಂದ ಕೂಡಿವೆ.

**ಹಂಸಶಿಲ್ಪ :** ಈ ಕಪಿಶಿರದ ಶಿಲ್ಪದಲ್ಲಿ ಹಂಸವನ್ನು ಕೆತ್ತಲಾಗಿದ್ದು, ಹಂಸದ ತಲೆಯ ಮೇಲೆ ಪುಚ್ಛವನ್ನು ಕೆತ್ತಲಾಗಿದೆ. ಕೊಕ್ಕಿನಲ್ಲಿ ಬಳ್ಳಿಯನ್ನು ಹಿಡಿದಿದ್ದು ಪೌರಾಣಿಕ ಕಲ್ಪನೆಗಳಲ್ಲಿ ಕಂಡುಬರುವ ಹಂಸವನ್ನು ಇಲ್ಲಿನ ಶಿಲ್ಪದಲ್ಲಿ ಮೂಡಿಸಲಾಗಿದೆ.

**ಆನೆಯನ್ನು ಬೇಟೆಯಾಡುತ್ತಿರುವ ಸಿಂಹ :** ಈ ಶಿಲ್ಪದಲ್ಲಿ ಸಿಂಹವೊಂದು ಜಿಗಿದು ಆನೆಯ ಕುಂಭಸ್ಥಳದಲ್ಲಿ ತನ್ನ ಪಂಜಗಳಿಂದ ಹಾಗೂ ನಖಗಳಿಂದ ಕುಂಭಸ್ಥಳವನ್ನು ಸೀಳುತ್ತಿರುವಂತೆ ಕಂಡರಿಸಲಾಗಿದೆ. ಆನೆ ಹಾಗೂ ಸಿಂಹಗಳನ್ನು ನೈಜವಾಗಿ ಕಂಡರಿಸಲಾಗಿದ್ದು, ಆನೆಯು ಭಯದಿಂದ ತನ್ನ ಸೊಂಡಿಲನ್ನು ಎತ್ತಿದೆ. ಸಿಂಹದ ಕಣ್ಣುಗಳಲ್ಲಿ ಕ್ರೌರ್ಯ ಹಾಗೂ ಆನೆಯ ಕಣ್ಣಿನಲ್ಲಿ ಭಯವನ್ನು ಮೂಡಿಸಲಾಗಿದೆ. ಸಿಂಹದ ಕತ್ತಿನ ಸುತ್ತಲೂ ಇರುವ ಕೇಸರಗಳಿಂದ ಸಿಂಹವು ತನ್ನ ನೈಜಸ್ವರೂಪದಲ್ಲಿದ್ದಂತೆ ಕಂಡುಬರುತ್ತದೆ. ಸಿಂಹದ ಕಾಲಿನ ಉಗುರುಗಳನ್ನು ಅತ್ಯಂತ ಚೂಪಾಗಿ ನೈಜವಾಗಿ ಚಿತ್ರಿಸಲಾಗಿದೆ.

**ನಗ್ನ ಸ್ತ್ರೀ ಶಿಲ್ಪ :** ಈ ಶಿಲ್ಪದ ಚಿತ್ರದಲ್ಲಿ ಸ್ತ್ರೀಯೊಬ್ಬಳು ತನ್ನ ತೊಡೆಗಳನ್ನು ಅಗಲಿಸಿ, ಕುಕ್ಕುರುಗಾಲಿನಲ್ಲಿ ಕುಳಿತು ತನ್ನ ಯೋನಿಯನ್ನು ಪ್ರದರ್ಶಿಸುತ್ತಿರುವಂತೆ ಕಂಡರಿಸಲಾಗಿದೆ. ಸ್ತ್ರೀಯು ಯಾವುದೇ ಆಭರಣಗಳನ್ನು ಧರಿಸಿರುವುದಿಲ್ಲ. ಸ್ತ್ರೀಯ ಮುಂದೆ ಕೆಳಭಾಗದಲ್ಲಿ ಬಿಂದಿಗೆಯೊಂದನ್ನು ಕಡೆಯಲಾಗಿದ್ದು ಇದರ ಅರ್ಥವನ್ನು ಸ್ಪಷ್ಟಪಡಿಸಲು ಕಷ್ಟಸಾಧ್ಯವಾಗಿದ್ದು, ಇದು ಲಜ್ಜಾಗೌರಿಯ ಶಿಲ್ಪ ಎಂದು ಹೇಳಲೂ ಸಹ ಸಾಕಷ್ಟು ಆಧಾರಗಳಿಲ್ಲ.

**ಭೀಮನ ಶಿಲ್ಪ :** ಈ ಕಪಿಶಿರದ ಶಿಲ್ಪದಲ್ಲಿ ಬಲಿಷ್ಠವಾದ ವ್ಯಕ್ತಿಯ ಶಿಲ್ಪವಿದ್ದು ರಾಜೋಚಿತವಾದ ವಸ್ತ್ರಗಳನ್ನು ಧರಿಸಿದ್ದಾನೆ. ಇವನನ್ನೂ ಭೀಮ ಎಂದು ಗುರುತಿಸಬಹುದಾಗಿದೆ. ಆದರೆ ಸ್ಪಷ್ಟವಾದ ಆಧಾರಗಳಿಲ್ಲ. ಉಳಿದಂತೆ ಹಿಂದಿನ ಬಲಿಷ್ಠ ವ್ಯಕ್ತಿಯು ಶಿಲ್ಪದಲ್ಲಿ ಇದ್ದಂತೆಯೇ ಗೋಚರವಾಗುತ್ತದೆ.

ಈ ಮೇಲಿನ ಕಪಿಶಿರದಲ್ಲಿನ ಶಿಲ್ಪಗಳೆಲ್ಲವೂ ಅಮೃತೇಶ್ವರ ದೇವಾಲಯದಲ್ಲಿನ ಪ್ರಾಕಾರದ ಗೋಡೆಯ ಮೇಲೆ ನೋಡಲು ಅತ್ಯಂತ ಆಕರ್ಷಣೀಯವಾಗಿದ್ದು ಹೊಯ್ಸಳರ ಕಾಲದಲ್ಲಿ ಶಿಲ್ಪಕಲೆಯು ಎಷ್ಟರ ಮಟ್ಟಿಗೆ ಬೆಳೆದಿತ್ತು ಎಂಬುದರ ಪರಿಚಯವಾಗುವುದಲ್ಲದೇ, ಹೊಯ್ಸಳ ಕಾಲದ ಇತರ ದೇವಾಲಯಗಳಲ್ಲಿ ಈ ರೀತಿಯ ಕಪಿಶಿರ ಶಿಲ್ಪಗಳನ್ನು ಕಾಣುವುದು ಬಹಳ ವಿರಳ ಎಂಬುದನ್ನು ನಾವು ಇಲ್ಲಿ ಗಮನಿಸಬಹುದಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಪ್ರೊ. ಎಸ್.ಕೆ. ರಾಮಚಂದ್ರರಾವ್, **ಪ್ರತಿಮಾಕೋಶ, ಭಾಗ – ೬,** ಕಲ್ಪತರು ರೀಸರ್ಚ್ ಅಕಾಡೆಮಿ ಪಬ್ಲಿಕೇಷನ್ಸ್, ಬೆಂಗಳೂರು – ೧೯೯೨.

೨. **ಪ್ರಪನ್ನಾಮೃತ.**

೩. **ಸ್ಕಾಂದಮಹಾಪುರಾಣ,** ೨, ೧, ೪–೮.

೪. ಗಣಪತಿಯ ವಿಶೇಷ ಮೂರ್ತಿ ಹಾಗೂ ವೈಶಿಷ್ಟ್ಯಗಳಿಗಾಗಿ, **ಪ್ರತಿಮಾಕೋಶ,** ಹಿಂದೂ ಐಕಾನಗ್ರಫಿಗಳನ್ನು ಪರಾಮರ್ಶಿಸಬಹುದು.

೫. **ವಾಮನ ಪುರಾಣ,** ಅಧ್ಯಾಯ ೬೭.

೬ **ಪಾದ್ಮಸಂಹಿತೆ, ಕ್ರಿಯಾಪಾದ,** ಅಧ್ಯಾಯ ೧೮.

೭. **ಸಿಂಹಭೂಪಾಲನ ಲಾಸ್ಯರಂಜನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೬೯.

೮. ಪ್ರೊ. ಎಸ್.ಕೆ. ರಾಮಚಂದ್ರರಾವ್, **ಪ್ರತಿಮಾಕೋಶ,** ಕಲ್ಪತರು ರೀಸರ್ಚ್ ಅಕಾಡೆಮಿ ಪಬ್ಲಿಕೇಷನ್ಸ್, ಬೆಂಗಳೂರು, ೧೯೯೦.

ಹೆಚ್.ಎನ್. ಕಾಳಸ್ವಾಮಿ*

# ಗುಂಡ್ಲುಪೇಟೆ ತಾಲ್ಲೂಕು ಕಮ್ಮರಹಳ್ಳಿಯ ಮೂರ್ತಿಶಿಲ್ಪಗಳು

ಕಮ್ಮರಹಳ್ಳಿ ಗ್ರಾಮವು ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಬೇಗೂರು ಹೋಬಳಿಯಿಂದ ಸುಮಾರು ೪ ಕಿ.ಮೀ. ದೂರದ ಪೂರ್ವದಿಕ್ಕಿನಲ್ಲಿದೆ. ಇದು ಒಂದು ಐತಿಹಾಸಿಕ ಹಿನ್ನೆಲೆಯುಳ್ಳ ಸ್ಥಳವಾಗಿದೆ.[೧] ಹಿಂದಿನ ಕಾಲದಿಂದಲೂ ಈ ಪ್ರಾಂತದಲ್ಲಿ ಗಂಗರು, ಚೋಳರು, ಹೊಯ್ಸಳರು, ಉಮ್ಮತ್ತೂರಿನ ಪಾಳೆಯಗಾರರು, ಕಳಲೆ ಪ್ರಭುಗಳು, ತೆರಕಣಾಂಬಿ ಪಾಳೆಯಗಾರರು ಮತ್ತು ಮೈಸೂರಿನ ಒಡೆಯರು ಆಳ್ವಿಕೆ ನಡೆಸಿದುದು ಶಾಸನೋಕ್ತವಾಗಿದೆ. ಈ ಗ್ರಾಮದ ಉತ್ತರ ಭಾಗದ ಪ್ರಾಥಮಿಕ ಶಾಲೆಯ ಆವರಣದಲ್ಲಿ ಒಂದು ರಾವಳೇಶ್ವರ ಶಿಲ್ಪ ಹಾಗೂ ಎರಡು ಮೂರ್ತಿಶಿಲ್ಪಗಳು ಕಂಡುಬಂದಿವೆ.[೨]

ರಾವಳೇಶ್ವರ ಸಂಸ್ಕೃತಿಯು ಪ್ರಮುಖವಾಗಿ ಕರ್ನಾಟಕದ ಆಗ್ನೇಯ ಭಾಗದಲ್ಲಿ ಅದರಲ್ಲೂ ಮಹಿಷ ಮಂಡಲ ಪ್ರಾಂತದಲ್ಲಿ ಕಂಡುಬರುತ್ತದೆ. ಮಹಿಷಮಂಡಲ ಪ್ರಾಂತ ತಲಕಾಡಿನ ಗಂಗರ ರಾಜಧಾನಿಯ ಒಂದು ಭಾಗವಾಗಿ ಮೆರೆದಿದೆ. ಕ್ರಿ.ಶ. ೩೨೫ ರಿಂದ ೧೦೦೪ರವರೆಗೆ ಈ ಭಾಗ ಜನರ ಸಂಸ್ಕೃತಿಗೆ ಹೆಸರುವಾಸಿಯಾಗಿತ್ತು. ತದನಂತರ ಕ್ರಿ.ಶ. ೧೦೦೪ ರಿಂದ ೧೧೧೬ ರವರೆಗೆ ಚೋಳರ ಕಾಲ ಗುಂಡ್ಲುಪೇಟೆ ಭಾಗದಲ್ಲಿ ಉದಯವಾಯಿತು. ನಂತರ ಈ ಭಾಗದಲ್ಲಿ 'ರಾಜ ಪ್ರತ್ಯಕ್ಷದೇವತಾ' ಎಂಬ ಗಾದೆ ಮಾತಿನಂತೆ "ರಾಮಾಯಸ್ವತಿಃ" ಮತ್ತು "ರಾವಣಾಸ್ವತಿಃ" ಎಂದು ಅಧಿಕಾರ ಮಾಡಿದ್ದಾನೆ. ಈ ಕಾಲದಲ್ಲಿ ರಾವಳೇಶ್ವರ ಶಿಲ್ಪಗಳೂ ಮತ್ತು ಮುಡಿ ಕೊಂಡೇಶ್ವರನ ಶಿಲ್ಪಗಳೂ ಪ್ರತ್ಯೇಕವಾಗಿ ಕೆತ್ತಲ್ಪಟ್ಟಿವೆ. ಹೀಗೆ ರಾಜನ ವೈಯಕ್ತಿಕ ಜೀವನದ ಬದುಕಿನ ಗುಣಗಳಿಗೆ ಕಥೆಯನ್ನು ಮೂರ್ತಿಶಿಲ್ಪಗಳಲ್ಲಿ ಸಂದರ್ಭಾನುಸಾರವಾಗಿ ಕೆತ್ತಲ್ಪಟ್ಟಿದ್ದರೂ ಸಹ ಅಂದಿನ ಶಿಲ್ಪ ಕಲಾವಿದರು ಸತ್ಯ ಸಂಗತಿಗಳನ್ನು ಸುಂದರವಾಗಿ ಶಿಲ್ಪಗಳಲ್ಲಿ ಕೆತ್ತಿದ್ದಾರೆ. ಒಟ್ಟಾರೆ ಹೇಳುವುದಾದರೆ ರಾಜನ ಗುಣಗಾನ ಮಾಡುವಾಗ ಪ್ರಾಂತೀಯವಾಗಿ ಪುರಾಣ ಕಲ್ಪನೆಗಳನ್ನು ಗ್ರಾಮಸ್ಥರು ಮಾಡಿದ್ದಾರೆ.[೩]

ಅದರಂತೆ ಈ ಭಾಗದಲ್ಲಿ ರಾವಣನನ್ನು ಪ್ರತಿನಿಧಿಸುವಂತಹ ಒಂದು ತಲೆ, ಮೂರುತಲೆ, ಐದು ತಲೆ, ಹತ್ತು ತಲೆಗಳನ್ನು ಹೊಂದಿರುವ ಶಿಲ್ಪಗಳು ಮಹಿಷಮಂಡಲ ಪ್ರಾಂತದಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಇಂತಹ ಶಿಲ್ಪಗಳು ಚೋಳರ ಕಾಲದಲ್ಲಿ ಕೆತ್ತಲ್ಪಟ್ಟಿವೆ ಎಂದು ಹೇಳಬಹುದಾಗಿದೆ.[೪] ಹಾಗೆಯೇ ಈ ಭಾಗದಲ್ಲಿ ಚೋಳರ ಕಾಲದ ಶಿಲ್ಪಗಳು ಮತ್ತು ದೇವಸ್ಥಾನಗಳು ಹಾಗೂ ಶಾಸನಗಳು ಕಂಡುಬರುತ್ತವೆ. ಸಂಸ್ಕೃತಿಯಂತೆ ಕಾವೇರಿ, ಕಪಿಲೆ, ಹೊನ್ನಹೊಳೆ, ಅಡ್ಡಹೊಳೆ, ತೊರೆಹಳ್ಳ ನೀರಿನ ವ್ಯವಸ್ಥೆಯನ್ನು ಅನುಸರಿಸಿದ ತೊರೆಯ ನಾಡಿನಲ್ಲಿ ರಾವಳೇಶ್ವರನ ಶಿಲ್ಪ ಮತ್ತು ರಾವಣನ ಶಿಲ್ಪ ಅಧಿಕವಾಗಿವೆ. ರಾವಳೇಶ್ವರನನ್ನು ಮತ್ತು ರಾವಣನನ್ನು ಜಾನಪದ ಸಂಸ್ಕೃತಿಯಂತೆ ಪೂಜಿಸಿಕೊಂಡು ಬರುತ್ತಿದ್ದಾರೆ ಹಾಗೂ ರಾವಳೇಶ್ವರನನ್ನು ಈ ಪ್ರಾಂತ್ಯದಲ್ಲಿ ಕುಲದೇವರನ್ನಾಗಿ ಮಾಡಿಕೊಂಡು ಬಂದಿದ್ದಾರೆ. ಗ್ರಾಮಗಳಲ್ಲಿ ಈ ಮೂರ್ತಿಗಳನ್ನು ಬೇರೆ ಬೇರೆ ಹೆಸರುಗಳಿಂದಲೂ ಸಹ ಕರೆಯುತ್ತಾರೆ. ಅಂದರೆ ಉದಾಹರಣೆಗೆ ಕಲಿಯೂರಿನಲ್ಲಿ ಮಲ್ಲಿಗೆ ಮಾರಮ್ಮ, ಮಲ್ಲಮ್ಮ ಈ ಹಿನ್ನೆಲೆಯಿಂದ ಗುಂಡ್ಲುಪೇಟೆ ತಾಲ್ಲೂಕಿನಲ್ಲಿಯೂ ಕೂಡ ಇಂತಹ ಶಿಲ್ಪಗಳು ಕಂಡು ಬರುತ್ತವೆ ಎಂದು ಹೇಳಬಹುದು.[೫]

## ಮೂರ್ತಿ ಶಿಲ್ಪಗಳು

**ರಾವಳೇಶ್ವರ ಶಿಲ್ಪ :** ಈ ಶಿಲ್ಪವು ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು ಇದನ್ನು ರಾವಳೇಶ್ವರ ಶಿಲ್ಪವೆಂದು ಗುರುತಿಸಲಾಗಿದೆ ಈ ಶಿಲ್ಪವು ೨ ಅಡಿ ಎತ್ತರ ೨ ಅಡಿ ಅಗಲವಾಗಿದ್ದು ಇದು ಚತುರ್ಭುಜಾ ಕೃತಿಯನ್ನು ಹೊಂದಿದ್ದು ಕೆಳಗಿನ ಎರಡು ಕೈಗಳಲ್ಲಿ ಒಂದೇ ಕತ್ತಿಯನ್ನು ಹಿಡಿದುಕೊಂಡಿರುವುದು, ಇಕ್ಕೆಲಗಳಲ್ಲಿ ಒಬ್ಬ ಸ್ತ್ರೀ ಮತ್ತು ಒಬ್ಬ ಪುರುಷನ ಶಿಲ್ಪವಿರುವುದರಿಂದ ಇವರು ರಾಜಸೇವಕರಾಗಿರಬಹುದೆಂದು ಹೇಳಬಹುದಾಗಿದೆ. ಮೇಲಿನ ಒಂದು ಕೈಯಲ್ಲಿ ಬಿಲ್ಲು ಮತ್ತೊಂದು ಕೈಯಲ್ಲಿ ಬಾಣವನ್ನು ಹಿಂಬದಿಯಿಂದ ತೆಗೆಯುವಂತೆ ಕಾಣುತ್ತಿದ್ದು ರಾವಳೇಶ್ವರನ ಮುಖ ಸವೆದು ಹೋಗಿರುವುದರಿಂದ ಇದನ್ನು ನಿಖರವಾಗಿ ಗುರ್ತಿಸಲು ಸಾಧ್ಯವಾಗಿಲ್ಲ. ಕೊರಳಲ್ಲಿ (ಕಂಠ) ರುದ್ರಮಾಲೆ (ರುದ್ರಾಕ್ಷಿ ಮಣಿ) ಹಾಕಿಕೊಂಡಿರುವುದು ಸ್ಪಷ್ಟವಾಗಿ ಕಾಣುತ್ತಿದ್ದು ಸೊಂಟ

*ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ, ಮೈಸೂರು.



ರಾವಳೇಶ್ವರ ಶಿಲ್ಪ



ಕುದುರೆಯ ಮೇಲೆ ಕುಳಿತ ರಾಜ

ದಲ್ಲಿ ವಸ್ತ್ರವನ್ನು ಧರಿಸಿದ್ದು ವಸ್ತ್ರವು ಸುಂದರವಾದ ನೆರಿಗೆ ಗಳಿಂದ ಕೂಡಿದ್ದು ಎರಡು ಕಾಲುಗಳಲ್ಲಿ ಕಾಲುಕಡಗ (ಕಾಲ ಬಂದಿ) ಧರಿಸಿದ್ದಾನೆ. ಕಲಾದೃಷ್ಟಿಯಿಂದ ಈ ಶಿಲ್ಪ ರಾಜನ ಎಲ್ಲಾ ಲಕ್ಷಣಗಳನ್ನು ಹೊಂದಿರುವುದರಿಂದ 'ರಾವಳೇಶ್ವರ ಪ್ರತ್ಯಕ್ಷದೇವ' (ರಾಜ) ಎಂದು ಈ ಭಾಗದಲ್ಲಿ ಕರೆಯುವ ವಾಡಿಕೆ ಇದೆ.

**ಕುದುರೆಯ ಮೇಲಿನ ರಾಜಶಿಲ್ಪ :** ಕಮ್ಮರಹಳ್ಳಿಯಲ್ಲಿರುವ ಈ ಶಿಲ್ಪವು ಸುಂದರವಾಗಿದ್ದು ಶಕ್ತಿವಂತ ರಾಜ ಕುದುರೆಯ ಮೇಲೆ ಕುಳಿತಿರುವ ದೃಶ್ಯದ ದುಂಡು ಶಿಲ್ಪವು ಉಬ್ಬುಶಿಲ್ಪ ರಚನಾ ಶೈಲಿಯಲ್ಲಿದೆ. ರಾಜ ಕುದುರೆಯ ಮೇಲೆ ಕುಳಿತಿದ್ದು ಎಡಗೈಯಲ್ಲಿ ಲಗಾಮು ಹಿಡಿದು ಬಲಗೈಯಲ್ಲಿ ಭರ್ಜಿ ಹಿಡಿದಿದ್ದು ವೀರಾವೇಶದಿಂದ ಹೋರಾಟಕ್ಕೆ ಹೊರಡುತ್ತಿರುವ ದೃಶ್ಯ ವಿಶೇಷವಾಗಿ ಮೂಡಿಬಂದಿದೆ. ವೀರನ ಕರ್ಣ ಕುಂಡಲವು ಸುಂದರವಾಗಿದೆ ಅಲ್ಲದೇ ದುಂಡನೆಯ ಮಾದರಿಯಲ್ಲಿ ಕೇಶಾಲಂಕಾರವನ್ನು ಹೊಂದಿದ್ದು ಮೀಸೆಯನ್ನು ಸಹ ಹೊಂದಿದ್ದಾನೆ. ಇದರಿಂದ ಇವನನ್ನು ಒಬ್ಬ ಸಾಮಾನ್ಯ ಮನುಷ್ಯನ ಬದಲಿಗೆ ಸೈನ್ಯಕ್ಕೆ ಸೇರಿದ ಒಬ್ಬ ಉತ್ತಮವಾದಂತಹ ಪದವಿಯನ್ನು ಹೊಂದಿದ ವ್ಯಕ್ತಿ ಎಂದು ಗುರುತಿಸಬೇಕು ಹಾಗೂ ವಿಶೇಷವಾಗಿ ಗಮನಿಸಿದರೆ ರಾಜನು ಉತ್ತಮವಾದ ಶರೀರವನ್ನು ಹೊಂದಿದ್ದು ರಣರಂಗದಲ್ಲಿ ವೀರಾವೇಶದಿಂದ ಹೋರಾಡುವ ಮಾದರಿಯು ಶಿಲ್ಪದಲ್ಲಿ ಮೂಡಿಬಂದಿದೆ ಹಾಗೂ ಕುದುರೆಯನ್ನು ಸಹ ಸುಂದರವಾಗಿ ಅಲಂಕೃತವಾದಂತೆ ಚಿತ್ರಿಸಲಾಗಿದೆ. ಹಳೆಯ ಪದ್ಧತಿಯಂತೆ ರಾಜ ಉದ್ದವಾದ ಕೂದಲನ್ನು ಬಿಟ್ಟಿದ್ದಾನೆ ಇದರಿಂದ ಯುದ್ಧಕ್ಕೆ ಹೊರಟ ಒಬ್ಬ ಯೋಧ ಎಂಬುದನ್ನು ದೃಢೀಕರಿಸುತ್ತದೆ ಹಾಗೂ ಪ್ರಾಯಶಃ ಈ ಶಿಲ್ಪವನ್ನು ವಿಜಯನಗರ ಅರಸರ ಕಾಲಕ್ಕೆ ಹೋಲಿಕೆ ಮಾಡಬಹುದಾಗಿದೆ.

ಕೆಲವು ಸ್ಥಳೀಯ ಜನರು ಕರೆಯುವಂತೆ ಇಂತಹ ಶಿಲ್ಪವನ್ನು ಕೆಲವೊಂದು ಊರುಗಳಲ್ಲಿ ಕದಗಾರಪ್ಪ ಎಂದು ಕರೆಯುವ ವಾಡಿಕೆ ರೂಢಿಯಲ್ಲಿದೆ. ಉದಾಹರಣೆಗೆ: ಮಂಡ್ಯ ಜಿಲ್ಲೆಯ 'ರಾವಣಿ' ಎಂಬ ಗ್ರಾಮದಲ್ಲಿ ಕದಗಾರಪ್ಪನ ದೇವಸ್ಥಾನದಲ್ಲಿ ಇರುವಂತಹ ಶಿಲ್ಪ ಮತ್ತು ಮೈಸೂರು ಜಿಲ್ಲೆಯ ಟೀ. ನರಸೀಪುರ ತಾಲ್ಲೂಕಿನ ಮೂಗೂರಿನಲ್ಲಿರುವ



ಸ್ಮಾರಕ ಶಿಲ್ಪ

ಶಿಲ್ಪ ಹಾಗೂ ಕೊಳ್ಳೇಗಾಲ ತಾಲ್ಲೂಕಿನ ಸಿಂಗಾನಲ್ಲೂರಿನ ಬಸವನ ಕಟ್ಟೆ ದೇವಸ್ಥಾನದ ಹೊರಭಾಗದಲ್ಲಿ ಕಂಡು ಬರುವ ಶಿಲ್ಪ ಇವುಗಳನ್ನು ಕದಗಾರಪ್ಪ ಎಂದು ಕರೆಯುತ್ತಾರೆ.

**ಸ್ಮಾರಕ ಶಿಲ್ಪ:** ಈ ಶಿಲ್ಪವು ಗ್ರಾನೈಟ್ ಕಲ್ಲಿನಿಂದ ಕೂಡಿದ್ದು ಯೋಧನನ್ನು ಸುಂದರವಾಗಿ ಕೆತ್ತಲಾಗಿದೆ ಇದರಿಂದ ಯೋಧ ಸ್ಥಳೀಯ ಪ್ರಾಂತ್ಯದವನೇ ಇರಬಹುದು. ಈತನು ಒಬ್ಬ ಜಟ್ಟಿಯ ರೀತಿಯಲ್ಲಿ ಪಂಚೆಯನ್ನು (ವಸ್ತ್ರ) ಮೇಲೆ ಎತ್ತಿದಂತೆ ಅಂದರೆ ಕಚ್ಚೆಯಂತೆ ಕಟ್ಟಿರುವುದು ಸುಂದರವಾಗಿ ಮೂಡಿಬಂದಿದ್ದು ಈತನು ಕಂಠದಲ್ಲಿ ಸರಗಳನ್ನು ಮಾಲೆಯಾಗಿ ಧರಿಸಿರುತ್ತಾನೆ ಮತ್ತು ಕೈಗಳಿಗೆ ತೋಳುಬಂದಿಯನ್ನು ಧರಿಸಿದ್ದು ಹಾಗೂ ತುಂಬಿದ ಅಗಲವಾದ ದಪ್ಪನೆಯ ಮುಖ ಹೊಂದಿದ್ದು ದಪ್ಪನೆಯ ಮೀಸೆ, ಸುಂದರವಾದ ಆಕರ್ಷಕ ಕಣ್ಣುಗಳು ಸೊಗಸಾಗಿ ಈ ಶಿಲ್ಪಕಲೆಯಲ್ಲಿ ಮೂಡಿ ಬಂದಿದೆ. ಈತನ ಕಂಠದಲ್ಲಿ ವಿಶೇಷವಾದ ಕಂಠಾಭರಣಗಳನ್ನು ಧರಿಸಿರುತ್ತಾನೆ. ಈತನು ಎರಡು ಕೈಗಳಲ್ಲಿಯೂ ಸಹ ಆಯುಧವನ್ನು ಹಿಡಿದಿದ್ದು ಯುದ್ಧ ಹೋರಾಟದ ದೃಶ್ಯದಂತೆ ಮೂಡಿಬಂದಿದೆ. ಈ ಹಿನ್ನೆಲೆಯಿಂದ ಈ ಶಿಲ್ಪವನ್ನು ಗಮನಿಸಿದಾಗ ಒಂದು ದೃಷ್ಟಿಯಲ್ಲಿ ಸ್ಮಾರಕ ಶಿಲ್ಪವಾದರೂ ಮತ್ತೊಂದು ಕಡೆ ವೀರಯೋಧನ ಶಿಲ್ಪವೆಂದು ಪರಿಗಣಿಸಬಹುದಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಕರ್ನಾಟಿಕ,** ಸಂಪುಟ-೩, ಮೈಸೂರು ವಿಶ್ವವಿದ್ಯಾನಿಲಯ, ಪ್ರಸಾರಾಂಗ, ಮೈಸೂರು.

೨. **ಮೈಸೂರು ರಾಜ್ಯ ಗ್ಯಾಸೆಟಿಯರ್,** (ಸಂ) ಡಾ. ಸೂರ್ಯನಾಥ್ ಕಾಮತ್, ಬೆಂಗಳೂರು.

೩. **ಮೈಸೂರು ರಾಜ್ಯ ಗ್ಯಾಸೆಟಿಯರ್,** ಅದೇ., ಬೆಂಗಳೂರು, ಪುಟ ೮೫೭-೮೫೮.

೪. **ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** (ಸಂ) ಡಾ. ಆರ್. ಗೋಪಾಲ್, ೨೦೦೮, ಪುಟ ೪೫೩-೪೫೬.

೫. **ಕರ್ನಾಟಕದ ಕೈಫಿಯತ್ತು,** ಮೂಲ ಸಂಗ್ರಹ-ಕರ್ನಲ್ ಮೆಕೆಂಜಿ, ಪುಟ-೧೬೧.

೬ ಫೋಟೊವನ್ನು ಗಮನಿಸಿ, ಸಂಖ್ಯೆ ೧, ೨, ೩.

ಕೆ.ಎಂ. ಗರಗ*
ಡಾ. ಬಾಲಕೃಷ್ಣ ಹೆಗಡೆ**

# ಹುಲಕೋಟಿಯ ಶೇಷಶಯನ ವಿಷ್ಣುಮೂರ್ತಿ

ಗದಗ ಜಿಲ್ಲೆಯ ಹುಲಕೋಟಿಯಲ್ಲಿ ಗ್ರಾಮ ಪಂಚಾಯತಿ ವತಿಯಿಂದ ರಸ್ತೆ ಕಾಮಗಾರಿ ಮಾಡುವ ಸಂದರ್ಭದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕಲ್ಮೇಶ್ವರ ದೇವಾಲಯದ ಪಕ್ಕ ವಿಶಿಷ್ಟವಾದ ಶೇಷಶಯನ ವಿಷ್ಣುವಿನ ಮೂರ್ತಿ ಪತ್ತೆಯಾಗಿದೆ.

ಈ ಶಿಲ್ಪವು ೮ ಅಡಿ ಉದ್ದವಾಗಿದೆ. ೧೨ನೇ ಶತಮಾನದ ಕಲ್ಯಾಣ ಚಾಲುಕ್ಯ ಶೈಲಿಯ ಶೇಷಶಯನ ರೂಢನಾದ ಈ ವಿಷ್ಣುವಿನ ತಲೆಭಾಗದಲ್ಲಿರುವ ಅಲಂಕಾರಿಕ ಅರ್ಧಚಂದ್ರಾಕೃತಿಯಲ್ಲಿರುವ ಪ್ರಭಾವಳಿಯಲ್ಲಿ ಸುರುಳಿ ಆಕಾರದ ಕೆತ್ತನೆ ಇದೆ. ಇದರಲ್ಲಿ ವಿಷ್ಣುವಿನ ದಶಾವತಾರದ ಕೆತ್ತನೆ ಇದ್ದು ಅದರಲ್ಲಿ ಮತ್ಸ್ಯ ಮತ್ತು ಕೂರ್ಮಾವತಾರ ಸ್ಪಷ್ಟವಾಗಿ ಗೋಚರಿಸುತ್ತಿದ್ದು ಉಳಿದ ಎಂಟು ಅವತಾರಗಳ ಕೆತ್ತನೆ ತ್ರುಟಿತವಾಗಿದೆ. ಶೇಷಶಯನ ಚತುರ್ಭುಜ ವಿಷ್ಣುವಿನ ತಲೆಯ ಮೇಲೆ ಶೇಷವು (ಸಪ್ತ ಹೆಡೆಯ) ತನ್ನ ಹೆಡೆಯನ್ನು ಕೊಡೆಯ ಹಾಗೆ ಬಿಚ್ಚಿದ್ದು ವಿಷ್ಣುವಿನ ತಲೆಭಾಗದಲ್ಲಿ ಬಲಕ್ಕೆ ಭೂದೇವಿ ಮತ್ತು ಚಾಚಿದ ಬಲಪಾದದ ಅಡಿಯಲ್ಲಿ ಆಸೀನರಾಗಿರುವ ಶ್ರೀದೇವಿ ಶಿಲ್ಪಗಳು ಸವ್ಯಲಲಿತಾಸನದಲ್ಲಿವೆ.

ವಿಷ್ಣುವಿನ ಹಿಂದಿನ ಬಲಗೈ ನಾಭಿಯ ಮೇಲಿದೆ ಎಡಗೈ ತ್ರುಟಿತವಾಗಿದ್ದು ಪದ್ಮಮುದ್ರೆಯಂತೆ ಕಾಣುತ್ತಿದೆ. ಮುಂದಿನ ಬಲಗೈ ಶೇಷನನ್ನು ಸ್ಪರ್ಶಿಸಿದೆ. ಎಡಗೈಯ ಹಸ್ತ ತ್ರುಟಿತವಾಗಿದೆ. ವಿಷ್ಣುವಿನ ಬಲಗಾಲು ಲಂಬವಾಗಿ ಶೇಷನ ಬಾಲದವರೆಗೂ ಚಾಚಿದಂತಿದೆ. ಇನ್ನು ಎಡಗಾಲು ಸುಖನಿದ್ರಾಸನದಲ್ಲಿದ್ದು ಕಮಲದ ಮೇಲೆ ಪವಡಿಸಿದ್ದಾನೆ.

ಶಯನ ಭಂಗಿಯ ವಿಷ್ಣುವಿನ ಬಲ ಭುಜದ ಕೆಳಗೆ ಉಳಿದ ಶೇಷನ ಭಾಗವು ಚಲಿಸುತ್ತ ಮುಂದೆ ಬಲಪಾದದವರೆಗೂ ಬಾಲವು ಪವಡಿಸಿದೆ. ವಿಷ್ಣುವಿನ ಕಿರೀಟಮುಕುಟ, ಕರ್ಣಕುಂಡಲ (ಕಿವಿಯೋಲೆ) ಭುಜದವರೆಗೂ ಇಳಿಬಿಟ್ಟ ಸುಂದರ ಕಂಠಹಾರ, ಎದೆಹಾರ, ಭುಜಕೀರ್ತಿ ಯಜ್ಞೋಪವಿತ, ವೈಜಯಂತಿ ಮಾಲೆ, ಕಟಿಬಂಧವಿದೆ. ಕಟಿಭಾಗದಿಂದ ಶಿಲ್ಪದ ಸೌಂದರ್ಯವೃದ್ಧಿಗಾಗಿ ಮುತ್ತಿನ ತೋರಣದಲ್ಲಿ ಉಡಿಗೆಯನ್ನು ಕುಸುರಿ ಕೆತ್ತನೆ ಮೂಲಕ ಅಲಂಕರಿಸಲಾಗಿದೆ. ಕಾಲ್ಗಡಗ, ನೂಪುರಗಳನ್ನು, ನಾಜೂಕಾಗಿ ಕೆತ್ತಿ ಅಲಂಕರಿಸಲಾಗಿದೆ. ಪಾಣಿಪೀಠದ ಮೇಲೆ ವಿಷ್ಣುವಿನ ಆಯುಧವಾದ ಗದೆ ಶಯನಭಂಗಿಯಲ್ಲಿದೆ.



ಹುಲಕೋಟಿಯ ೧೨ನೇ ಶತಮಾನದ
ಶೇಷಶಯನ ವಿಷ್ಣುವಿನ ಮೂರ್ತಿ

ಇವಲ್ಲದೆ ಇಲ್ಲಿ ಇನ್ನೂ ಹಲವಾರು ತ್ರುಟಿತವಾದ ಪ್ರಾಚೀನ ಶಿಲ್ಪಗಳಿದ್ದು ಅವೂ ಸಹ ಇತಿಹಾಸದ ದೃಷ್ಟಿಯಿಂದ ಪ್ರಮುಖವಾಗಿವೆ. ಈ ಊರಿನಲ್ಲಿ ಗಂಭೀರವಾದ ಸಂಶೋಧನೆ ಮಾಡಿದರೆ, ಇಲ್ಲಿನ ಇತಿಹಾಸಕ್ಕೆ ಹೆಚ್ಚಿನ ಬೆಳಕನ್ನು ನೀಡಲು ಸಹಾಯಕವಾಗಬಲ್ಲದು ಎಂದು ಹೇಳಬಹುದು.

(ಈ ಪ್ರಬಂಧವನ್ನು ಮಂಡಿಸಲು ಸಹಕರಿಸಿದ ಡಾ. ಎಮ್.ಎಸ್. ನರೇಗಲ್ಲ ಹಾಗೂ ಡಾ. ವಾಯ್.ಆರ್. ಬೆಲೇರಿ ಇವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಕ್ಷೇತ್ರ ಕಾರ್ಯದಲ್ಲಿ ಸಲಹೆ ಮತ್ತು ಸಹಕಾರ ನೀಡಿದ ಜಿ.ಸಿ.ಟಿ.ಎಂ.ಪಿ.ಯು. ಕಾಲೇಜಿನ ಶೈಕ್ಷಣಿಕ ಸಲಹಾ ಸಮಿತಿ ಚೇರಮನ್ನರಾದ ಮಾನ್ಯಶ್ರೀ ಡಿ.ಬಿ. ಓದುಗೌಡರ ಹಾಗೂ ಗ್ರಾಮ ಪಂಚಾಯತಿ ಸದಸ್ಯರಾದ ಶ್ರೀ ಏಕನಾಥಗೌಡ ಕರಿರಾಯನ ಗೌಡ್ರ ಮತ್ತು ಜಿ.ಸಿ.ಟಿ.ಎಂ. ಪಿ.ಯು. ಕಾಲೇಜಿನ ಅರ್ಥಶಾಸ್ತ್ರ ಉಪನ್ಯಾಸಕರಾದ ಪ್ರೊ. ಬಿ.ವಾಯ್. ನರೇಗಲ್ ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುವೆನು.)

* ಇತಿಹಾಸ ಉಪನ್ಯಾಸಕರು, ಗ.ಸ.ಜ.ಗಿ.ಪ.ಪೂ. ಮಹಾವಿದ್ಯಾಲಯ, ಹುಲಕೋಟಿ, ಗದಗ ಜಿಲ್ಲೆ.
** ಇತಿಹಾಸ ಪ್ರಾಧ್ಯಾಪಕರು, ಕಮಲಾ ನೆಹರು ಮಹಿಳಾ ವಿದ್ಯಾಲಯ, ಶಿವಮೊಗ್ಗ.

ಕನ್ಯಾಕುಮಾರ್ ಪಿ.*

# ಕೂಡ್ಲೂರು : ಒಂದು ಶಿಲ್ಪಕಲಾ ಕೇಂದ್ರ

ಜಿಲ್ಲಾ ಕೇಂದ್ರ ರಾಮನಗರಕ್ಕೆ ೧೩ ಕಿ.ಮೀ. ದೂರದಲ್ಲಿರುವ ಚನ್ನಪಟ್ಟಣ ತಾಲ್ಲೂಕಿನ ಪ್ರಮುಖ ಸ್ಥಳ ಕೂಡ್ಲೂರು. ಇದು ಚನ್ನಪಟ್ಟಣದಿಂದ ೬ ಕಿ.ಮೀ. ದೂರದಲ್ಲಿದೆ. ಈ ಪ್ರದೇಶ ಐತಿಹಾಸಿಕವಾಗಿ ಪ್ರಮುಖವಾಗಿದೆ. ಗಂಗವಾಡಿ ೯೬,೦೦೦ ಪ್ರದೇಶದ ಒಂದು ಭಾಗವಾಗಿದ್ದ ಈ ಕೂಡ್ಲೂರು ಗಂಗರ ಕಾಲದ ಪ್ರಮುಖ ನೆಲೆಯಾಗಿತ್ತು. ಚನ್ನಪಟ್ಟಣದ ಪ್ರಮುಖ ಪ್ರದೇಶಗಳಾದ ದೊಡ್ಡಮಳೂರು, ಮಳೂರು, ಮಳೂರು ಪಟ್ಟಣ ಮತ್ತು ಕೂಡ್ಲೂರುಗಳು ಒಂದೇ ಸರಣಿಯಲ್ಲಿ ಬರುವ ಪ್ರದೇಶಗಳು. ಈ ಎಲ್ಲಾ ಪ್ರದೇಶಗಳು ತಾಲ್ಲೂಕಿನ ಪ್ರಮುಖ ನದಿಯಾದ ಕಣ್ವ ನದಿಯ ದಂಡೆಯ ಮೇಲೆ ರೂಪುಗೊಂಡಿದೆ. ಈ ಪ್ರದೇಶಗಳೆಲ್ಲವೂ ಸಹ ಗಂಗರ ಕಾಲದ ಪ್ರಮುಖ ನೆಲೆಗಳೇ ಆಗಿದ್ದು ಚೋಳರ ಆಕ್ರಮಣದ ತರುವಾಯ ತಮ್ಮ ನೈಜತೆಯ ಸ್ಪಷ್ಟ ಚಿತ್ರಣಗಳನ್ನು ಉಳಿಸಿ ಕೊಂಡು ಬಂದಿವೆ.

ಗಂಗರ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನ ಚೋಳರು ಪ್ರಬಲರಾಗಿದ್ದು ಕ್ರಿ.ಶ. ೯೯೦ರ ಚಾವುಂಡರಾಯನ ನಂತರ ಈ ಕಿಳಲೈನಾಡನ್ನು ಆಕ್ರಮಿಸಲಾರಂಭಿಸಿದರು. ಚೋಳರ ಆಳ್ವಿಕೆಯ ಅವಧಿಯಲ್ಲಿ ಈ ಕೂಡ್ಲೂರು ಗ್ರಾಮ 'ಅಗ್ರಹಾರ' ಮತ್ತು ಪ್ರಮುಖ ಪಟ್ಟಣವಾಗಿತ್ತು. ತಮಿಳು ಶಾಸನಗಳು ಈ ಕೂಡ್ಲೂರು ಗ್ರಾಮವನ್ನು "ಕೂಡಲೂರು" ಮತ್ತು "ರಾಜ-ರಾಜ ಚುತರ್ವೇದಿ ಮಂಗಲ" ಎಂದು ಕರೆದಿವೆ.[೧] ೧೭೬೭ರಲ್ಲಿ ಹೈದರಾಲಿ ಈ ಗ್ರಾಮವನ್ನು 'ಸೈದು ಮಹಮದ ಅಕಲ್‌ಶ ಖಾದ್ರಿ' ಎಂಬುವನಿಗೆ ಫಕೀರ ಧರ್ಮಕ್ಕೆ ಇನಾಮಾಗಿ ಬಿಟ್ಟ ಉಲ್ಲೇಖ ಶಾಸನದಿಂದ ತಿಳಿದುಬರುತ್ತದೆ.[೨]

## ಕೂಡ್ಲೂರಿನ ಶಾಸನಗಳು

ಚನ್ನಪಟ್ಟಣ ತಾಲ್ಲೂಕಿನಲ್ಲಿ ಒಟ್ಟು ೧೮೬ ಶಾಸನಗಳಿವೆ. ಈ ಶಾಸನಗಳ ಪೈಕಿ ೮೦ ಶಾಸನಗಳು ತಮಿಳು ಶಾಸನಗಳು. ಈ ಶಾಸನಗಳ ಪೈಕಿ ೨೦ ಶಾಸನಗಳು ಈ ಕೂಡ್ಲೂರು ಗ್ರಾಮದಲ್ಲಿಯೇ ದೊರೆತಿವೆ.[೩] ಇಲ್ಲಿ ದೊರೆತಿರುವ ೨೦ ಶಾಸನಗಳ ಪೈಕಿ ೧೬ ಶಾಸನಗಳು ಅರವಕ್ಷರದವುಗಳು. ಗ್ರಾಮದ ಶಾಸನೋಕ್ತ ದೇವಾಲಯ ರಾಮದೇವರ ದೇವಾಲಯದಲ್ಲಿನ ಶಾಸನವು ಕಾನಕನಹಳ್ಳಿ ವೆಂಕಟಲಕ್ಷ್ಮಿಯು ಶ್ರೀರಾಮದೇವರ ಉತ್ಸವಕ್ಕೆ ಅದೇ ಊರಿನ ಶಾನುಭೋಗ ಕಪನೀಪತಯ್ಯನಿಂದ ತೆಂಗಿನ ತೋಟವನ್ನು ಕ್ರಯಕ್ಕೆ ಪಡೆದು ದೇವರಿಗೆ ಅರ್ಪಿಸಿದ ವಿಷಯವನ್ನು ತಿಳಿಸುತ್ತದೆ.[೪] ಅದೇ ಗ್ರಾಮದ ಶಾಸನವೊಂದು ೧೭೬೭ರಲ್ಲಿ ಹೈದರಾಲಿ ಈ ಕೂಡಲೂರು ಗ್ರಾಮವನ್ನು 'ಸೈದು ಮಹಮದ ಅಕಲ್‌ಶಾ ಖಾದ್ರಿ' ಎಂಬುವನಿಗೆ ಫಕೀರ ಧರ್ಮಕ್ಕೆ ಇನಾಮಾಗಿ ಬಿಟ್ಟು ವಿಷಯವನ್ನು ಪ್ರಸ್ತಾಪಿಸಿದೆ.[೫] ಗ್ರಾಮದ ಮತ್ತೊಂದು ಶಾಸನ ಅಮ್ಮನ ದೇವಾಲಯದ ದಕ್ಷಿಣ ಗೋಡೆಯಲ್ಲಿದೆ. ಇದು ತ್ರುಟಿತಗೊಂಡಿದ್ದು, ಸಾನ್ತಾರ ಬಸದಿಯ ಉಲ್ಲೇಖವನ್ನು ಮಾಡಿದೆ.[೬] ದೊರೆತ ೨೦ ಶಾಸನಗಳಲ್ಲಿ ೧೬ ಶಾಸನಗಳು ತಮಿಳು ಭಾಷೆಯವು. ಅವುಗಳಲ್ಲಿ ೧೫ ಶಾಸನಗಳು ಚೋಳರ ಕಾಲದವು. ಈ ೧೫ ಶಾಸನಗಳು ಗ್ರಾಮದ ಪ್ರಾಚೀನ ದೇವಾಲಯದ ಮಂಗಳೇಶ್ವರ ದೇವಾಲಯಕ್ಕೆ ಕೊಟ್ಟ ದಾನದ ವಿಷಯದ ದಾಖಲೆಗಳಾಗಿವೆ.[೭] ಈ ಶಾಸನಗಳಿಂದ ಈ ಕೂಡ್ಲೂರು ಗ್ರಾಮದಲ್ಲಿ ಈ ಕೂಡ್ಲೂರು ಗ್ರಾಮದಲ್ಲಿ ವಲ್ಲಾಳೀಶ್ವರ / ಮಂಗಳೇಶ್ವರ ದೇವಾಲಯ ಅತ್ಯಂತ ಪ್ರಾಚೀನ ದೇವಾಲಯವಾಗಿತ್ತೆಂದು ತಿಳಿದುಬರುತ್ತದೆ. ಈ ದೇವಾಲಯ ಕ್ರಿ.ಶ. ೧೮೨೮ರಲ್ಲಿ ಜೀರ್ಣೋದ್ಧಾರ ಗೊಂಡಿದ್ದು ಆಧುನಿಕ ಕಾಲದ ದೇವಾಲಯದಂತೆ ಇದೆ. ಆದರೂ ಈ ದೇವಾಲಯ ಕ್ರಿ.ಶ. ೧೧೯೫ಕ್ಕಿಂತಲೂ ಹಿಂದೆಯೇ ಅಸ್ತಿತ್ವದಲ್ಲಿತ್ತು, ಎಂಬುದನ್ನು ಶಾಸನ ತಿಳಿಯಪಡಿಸುತ್ತದೆ.[೮] ಕ್ರಿ.ಶ. ೧೧೯೫ರಲ್ಲಿ ಈ ದೇವಾಲಯಕ್ಕೆ ದಾನವನ್ನು ನೀಡಿದ ಉಲ್ಲೇಖವಿರುವುದರಿಂದ ಈ ಮುಂಚೆಯೇ ಈ ದೇವಾಲಯವಿತ್ತೆಂದು ಇದರಿಂದ ತಿಳಿಯಬಹುದು. ಕ್ರಿ.ಶ. ೧೨೦೦ರ ಶಾಸನ್ ಮಂಗಳೇಶ್ವರ ದೇವಾಲಯದಲ್ಲಿ ಚಂದ್ರಶೇಖರದೇವರಿಗೆ ದಾನ ನೀಡಿದ ಉಲ್ಲೇಖವಿದೆ. ದೊರೆತ ಶಾಸನಗಳು ಕೂಡ್ಲೂರು ಗ್ರಾಮದಲ್ಲಿ ಅಸ್ತಿತ್ವದಲ್ಲಿದ್ದ ಬಹುಸಂಖ್ಯಾತ ಪ್ರಾಚೀನ ದೇವಾಲಯಗಳನ್ನು ಸೂಚಿಸುವಲ್ಲಿ ನೆರವಾಗಿವೆ.

* ಇತಿಹಾಸ ಉಪನ್ಯಾಸಕ, ಸರ್ಕಾರಿ ಪದವಿ ಪೂರ್ವ ಕಾಲೇಜು, ಜಾಲಮಂಗಲ, ರಾಮನಗರ ಜಿಲ್ಲೆ.

## ಕೂಡ್ಲೂರಿನ ದೇವಾಲಯಗಳು

ಕೂಡ್ಲೂರು ಗ್ರಾಮದಲ್ಲಿ ಚಲ್ಲಮ್ಮದೇವಾಲಯ, ಶ್ರೀರಾಮ ದೇವಾಲಯ, ಮಂಗಳೀಶ್ವರ ದೇವಾಲಯ, ನರಸಿಂಹ ದೇವಾಲಯ, ಮಳವಳ್ಳಮ್ಮ, ಮಸಣಮ್ಮ, ಮೂಗಮ್ಮ, ಆಂಜನೇಯ, ಗಣಪತಿ, ಕರಿಚಲ್ಲಮ್ಮ ಮುಂತಾದ ದೇವಾಲಯಗಳಿವೆ. ಇವುಗಳಲ್ಲಿ ಚಲ್ಲಮ್ಮ, ಶ್ರೀರಾಮ ಮತ್ತು ಮಂಗಳೀಶ್ವರ ದೇವಾಲಯಗಳು ಪ್ರಾಚೀನ ದೇವಾಲಯಗಳು. ಉಳಿದ ದೇವಾಲಯಗಳು ಇತ್ತೀಚಿನವುಗಳು. ಚಲ್ಲಮ್ಮ ದೇವಾಲಯ ಗಂಗರ ಕಾಲದ ದೇವಾಲಯವಾಗಿದ್ದು, ಕಂಬಗಳುಳ್ಳ ಒಂದು ಚಿಕ್ಕ ಕಟ್ಟಡ. ಈ ದೇವಾಲಯದ ಮುಂಭಾಗದಲ್ಲಿ ಎರಡು ವೀರಗಲ್ಲುಗಳಿವೆ. ಈ ಗ್ರಾಮದ ದೇವಾಲಯಗಳನ್ನು ಗಮನಿಸಿದಾಗ ಇವೆಲ್ಲವೂ ಅಗಲವಾದ ಇಟ್ಟಿಗೆಗಳಿಂದ ನಿರ್ಮಿತವಾದ ದೇವಾಲಯಗಳೆಂಬುದು ತಿಳಿಯುತ್ತದೆ.

ಮಂಗಳೀಶ್ವರ ದೇವಾಲಯವು ಗ್ರಾಮದ ಅತ್ಯಂತ ಪ್ರಾಚೀನ ದೇವಾಲಯ. ಈ ದೇವಾಲಯವನ್ನು ಶಾಸನಗಳು ಮಂಗಳೀಶ್ವರ, ವಳ್ಳಾಳೀಶ್ವರ ಎಂದು ಕರೆದಿವೆ.[೧೦] ಇದು ಇಂದು ಸಂಪೂರ್ಣವಾಗಿ ಹಾಳಾಗಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು ಪೂರ್ಣ ಜೀರ್ಣೋದ್ಧಾರ ಗೊಂಡಿದೆ. ಗರ್ಭಗೃಹ, ಸುಖನಾಸಿ ಮತ್ತು ನವರಂಗಗಳನ್ನು ಹೊಂದಿದ್ದು ಈ ದೇವಾಲಯ ಒರಟಾದ ಕೆತ್ತನೆಯುಳ್ಳ ಕಂಬವನ್ನು ಹೊಂದಿತ್ತೆಂದು ೧೯೩೫ನೇ ವರ್ಷದ ಎಂ.ಎ.ಆರ್. ವರದಿಯಲ್ಲಿ ಹೇಳಿದೆ.[೧೧] ದೇವಾಲಯವಿದ್ದ ದಿಬ್ಬದ ಮೇಲೆ ಸಣ್ಣ ಗುಡಿಯನ್ನು ಕಟ್ಟಿ ಮಂಗಳೀಶ್ವರ ಲಿಂಗವನ್ನು ಇಟ್ಟಿರುವುದಾಗಿಯೂ ಇದರ ತಳಪಾಯದ ಕಲ್ಲುಗಳನ್ನು ಪಕ್ಕದಲ್ಲೇ ಇರುವ ಕೊಳದ ರಚನೆಗೆ ಬಳಸಿಕೊಂಡಿರುವುದಾಗಿಯೂ ೧೯೪೬-೫೭ರ ಎಂ.ಎ.ಆರ್. ವರದಿ ತಿಳಿಸಿದೆ.[೧೨]

ಊರಿನ ಮಧ್ಯಭಾಗದಲ್ಲಿರುವ ರಾಮದೇವಾಲಯವು ಪ್ರಾಚೀನವಾದ ರಚನೆಯೇ ಆಗಿದೆ. ಆದರೆ ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರಗೊಂಡಿದೆ. ಮೂಲತಃ ಗಂಗರ ಕಾಲದ ರಚನೆಯೇ ಆಗಿದೆ.[೧೩] ಕ್ರಿ.ಶ. ೧೧೯೫ಕ್ಕಿಂತಲೂ ಮುಂಚೆಯೇ ದೇವಾಲಯವಿತ್ತೆಂದು ದಾನಶಾಸನಗಳಿಂದ ತಿಳಿಯಬಹುದಾಗಿದೆ.[೧೪] ಗಂಗರ ಕಾಲದ ಹೋಲಿಕೆಯ ಶೈಲಿಯ ಸುಮಾರು ಒಂದುವರೆ ಮೀಟರ್ ಎತ್ತರವಿರುವ ವಿಗ್ರಹ ಈ ದೇವಾಲಯುದ ಆವರಣದಲ್ಲಿದೆ. ಈ ದೇವಾಲಯದ ನವರಂಗ ವಿಜಯನಗರದ ಅರಸರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿರಬಹುದಾದ ಸಾಧ್ಯತೆಗಳಿವೆ.

ಕೂಡ್ಲೂರು ರಾಮದೇವರ ದೇಗುಲ ಮಹಾದ್ವಾರದ ದಕ್ಷಿಣ ಪಾರ್ಶ್ವದಲ್ಲಿರುವ ಕ್ರಿ.ಶ. ಸು. ೧೨೦೦ರ ಶಾಸನ ವೊಂದರಲ್ಲಿ ತಿರುಮಲಪಾಡಿ ರಾಜಸಿಂಗನ್ ಎಂಬುವನು ಕೂಡ್ಲೂರಿನ ಶಜ್ಜುಗ್ಗಣರಾಮಪ್ಪೆರುಮ್ಮಾಳ್ ದೇವಸ್ಥಾನದ ಸಂಬಂಧದ ಮಠವೊಂದಕ್ಕೆ ಜಮೀನನ್ನು ದತ್ತಿಯಾಗಿ ನೀಡಿದ ವಿಷಯ ಉಕ್ತವಾಗಿದೆ.[೧೫] ಇದರಿಂದ ಶ್ರೀರಾಮ ದೇವಾಲಯ ಸಜ್ಜುಗ್ಗಣ(>ಸದ್ಗುಣ) ರಾಮಪೆರುಮಾಳ್ ದೇವಾಲಯ ಎಂಬ ಹೆಸರಿನಿಂದ ಕರೆಯಲ್ಪಡುತಿತ್ತು ಎಂದು ತಿಳಿದುಬರುತ್ತದೆ.

## ಕೂಡ್ಲೂರಿನ ಶಿಲ್ಪಗಳು

ಕೂಡ್ಲೂರು ಗ್ರಾಮದಲ್ಲಿ ಕೂಡ್ಲೂರು ಒಂದು ಶಿಲ್ಪಕಲಾ ಕೇಂದ್ರವೆಂಬಂತೆ ಸಾಕಷ್ಟು ಮೂರ್ತಿಗಳು, ಶಿಲ್ಪಗಳು, ದೇವಾಲಯಗಳಲ್ಲಿ ಮತ್ತು ದೇವಾಲಯಗಳ ಹೊರ ಭಾಗಗಳಲ್ಲಿ ದೊರೆಯುತ್ತವೆ. ವಿಷ್ಣುವಿನ ವಿಗ್ರಹ, ಮಹಿಷಮರ್ದಿನಿ ಶಿಲ್ಪ, ಕೊಳದ ಬಳಿಯಲ್ಲಿನ ಮತ್ತೊಂದು ವಿಗ್ರಹ, ಕಾಳಿವಿಗ್ರಹ, ಚಂದ್ರಶೇಖರ ಎಂದು ಕರೆಯಲ್ಪಡುವ ಶಿವಲಿಂಗ, ಸಪ್ತಮಾತೃಕೆಯರಲ್ಲಿ ಒಂದಾದ ಮಾತೃವಿಗ್ರಹ, ರಾಮದೇವಾಲಯದ ಒಳಪ್ರಾಂಗಣದಲ್ಲಿನ ವಿಷ್ಣು ಶಿಲ್ಪಗಳು ಕೂಡ್ಲೂರು ಗ್ರಾಮದಲ್ಲಿವೆ.

ದೇವಾಲಯಗಳಲ್ಲಿ ಮಾತ್ರ ಶಿಲ್ಪಗಳು ದೊರೆಯುವುದಿಲ್ಲ. ಗ್ರಾಮದ ಕೊಳದ ಬಳಿ ಸಾಕಷ್ಟು ಶಿಲ್ಪಗಳು ದೊರೆಯುತ್ತವೆ. ಈ ಶಿಲ್ಪಗಳೆಲ್ಲವೂ ಲಕ್ಷಣಗಳ ಹಿನ್ನೆಲೆಯಲ್ಲಿ ಗಂಗರ ಕಾಲಕ್ಕೆ ಸೇರುತ್ತವೆ. ಈ ಶಿಲ್ಪಗಳನ್ನು ಗಮನಿಸಿದರೆ ಗ್ರಾಮ ಶಿಲ್ಪಕಲಾ ಕೇಂದ್ರವಾಗಿತ್ತೆಂದು ಮೇಲ್ನೋಟಕ್ಕೆ ಭಾವಿಸಲು ಸಾಧ್ಯವಿದ್ದರೂ, ಶಾಸನಗಳ ಆಧಾರದಿಂದ ಈ ಶಿಲ್ಪಗಳೆಲ್ಲವೂ ಶಾಸನೋಕ್ತ ವಳ್ಳಾಳೀಶ್ವರ ದೇವಾಲಯದಲ್ಲಿನ ಮೂರ್ತಿ ಶಿಲ್ಪಗಳೆಂಬುದು ತಿಳಿದುಬರುತ್ತದೆ. ಆದರೆ ಈ ದೇವಾಲಯ ಇಂದು ಅಸ್ತಿತ್ವದಲ್ಲಿಲ್ಲ. ಆದರೆ ಆ ದೇವಾಲಯದಲ್ಲಿದ್ದು ಪೂಜೆಗೊಳ್ಳುತ್ತಿದ್ದ ಮೂರ್ತಿ ಶಿಲ್ಪಗಳು ದೇವಾಲಯ ನಾಶವಾದರೂ ಉಳಿದುಕೊಂಡಿದೆ.

ಈ ಶಾಸನೋಕ್ತ ವಂಗಳೀಶ್ವರ ದೇವಾಲಯಕ್ಕೆ ತಮಿಳು ನಾಡಿನಿಂದ ಬಂದ ಚೋಳರು ತಮ್ಮ ಆಕ್ರಮಿತ ಅವಧಿಯಲ್ಲಿ ಸಾಕಷ್ಟು ದಾನ-ದತ್ತಿಗಳನ್ನು ನೀಡುವುದರ ಮುಖಾಂತರ ಶೈವಧರ್ಮಕ್ಕೆ ಪ್ರೋತ್ಸಾಹಿಸಿರುವುದು ತಿಳಿದುಬರುತ್ತದೆ. ಕೇವಲ ಚೋಳರಾಜರು ಮಾತ್ರವಲ್ಲದೆ, ಚೋಳ ಅಧಿಕಾರ ವರ್ಗದವರು ಸಹ ದೇವಾಲಯಗಳಿಗೆ ದಾನ, ದತ್ತಿ, ದೀಪ, ಪಣಗಳನ್ನು ನೀಡಿರುವ ವಿಷಯಗಳು ಶಾಸನೋಕ್ತಗೊಂಡಿವೆ. ರಾಜೇಂದ್ರಚೋಳನು ಮುಡಿಗೊಂಡ ಚೋಳಮಂಡಲಂ ಎಂದು ಕರೆಯಲಾಗುತ್ತಿದ್ದ ಕೂಡ್ಲೂರಿನ ಈ ಶಾಸನೋಕ್ತ



ಚಂದ್ರಶೇಖರಲಿಂಗ



ಶಿವಲಿಂಗ



ವಿಷ್ಣುಶಿಲ್ಪ



ವಿಷ್ಣುಶಿಲ್ಪ

ವಂಗಳೀಶ್ವರ ದೇವಾಲಯಕ್ಕೆ ಮತ್ತು ಚಂದ್ರಶೇಖರದೇವರಿಗೆ ದಾನ ನೀಡಿದ ವಿಷಯ ಶಾಸನೋಕ್ತಗೊಂಡಿದೆ.[೧೬] ಇರುಪದುವುಲನ್ ಎಂಬ ಚೋಳ ಅಧಿಕಾರಿ ಕ್ರಿ.ಶ. ೧೨೩೦ರಲ್ಲಿ ದೇವರಿಗೆ ದೀಪ, ದಾನವನ್ನು ಮಾಡಿದ ವಿಷಯವನ್ನೂ[೧೭] ಪುರುಶಾಮನಿಕ್ಕಶೆಟ್ಟಿ ಎಂಬ ಚೋಳ ಅಧಿಕಾರಿಯು ೩ ೧/೨ ಪಣಂನ್ನು ಮಂಗಳೀಶ್ವರ ದೇವರಿಗೆ ನೀಡಿದ ವಿಷಯ ಮೂಡಿಬಂದಿದೆ.[೧೮] ತಿರುವಲ ಲಂಗದ್ ಉದಿಯಾರಾನ್ ಸಿಬ್ಬಂದಿಯಾಗಿ ೩ ೧/೨ ಪಣಂ ಮತ್ತು ದೀಪದ ಕೊಡುಗೆಗಳನ್ನು ದಾನವಾಗಿ ನೀಡಲಾಗಿದೆ.[೧೯] ಕ್ರಿ.ಶ. ೧೨೦೦ರ ಶಾಸನವು[೨೦] ಪುಮಂಡಿ ನಾಯಕನ್ ಎಂಬ ಅಧಿಕಾರಿ ದೇವಾಲಯಕ್ಕೆ ದಾನ ನೀಡಿದ ವಿವರವನ್ನು ತಿಳಿಸುತ್ತದೆ. ಕ್ರಿ.ಶ. ೧೨೫೦ರ ಶಾಸನವು ೩ ೧/೨ ಪಣಂ ದಾನ ನೀಡಿದ ವಿಷಯವನ್ನು[೨೧] ಕ್ರಿ.ಶ. ೧೩೦೫ರಲ್ಲಿ ಯಾದವ ವಂಶದ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕರ....ಯಂಗಳೀಶ್ವರ ದೇವರಿಗೆ ದಾನ ನೀಡಿದಂತೆ ತೋರುತ್ತದೆ. ಆದರೆ ರಾಜನ ಹೆಸರಿನ ಭಾಗ ತ್ರುಟಿತ ಗೊಂಡಿದೆ.[೨೨] ಕಿಟಿಲಾದಿ ರಾಜ ಮತ್ತು ವಾಚ್ಚಿದೇವನ್ ಎಂಬುವನು ಸಹ ದೇವಿ ದಾನವನ್ನು ಮಾಡಿದ್ದಾರೆ.[೨೩]

ಈ ಎಲ್ಲಾ ಶಾಸನಗಳ ಅಧ್ಯಯನವನ್ನು ಮಾಡಿದರೆ ಶಾಸನೋಕ್ತಗೊಂಡಿರುವ ಕೂಡ್ಲೂರಿನ ಈ ಮಂಗಳೀಶ್ವರ ಅಥವಾ ವಳ್ಳಾಳೀಶ್ವರ ದೇವಾಲಯವು ಕ್ರಿ.ಶ. ೧೨೦೦ಕ್ಕಿತಂಲೂ ಪುರಾತನವಾದುದ್ದಾಗಿದೆ. ಅಂದರೆ ಈ ದೇವಾಲಯ ಗಂಗರ ಕಾಲಕ್ಕೆ ಸೇರಿಸಬಹುದಾಗಿದೆ. ಈ ದೇವಾಲಯದ ರಚನೆಯನ್ನು ಮತ್ತು ಲಕ್ಷಣಗಳನ್ನು ಗಮನಿಸಿದರೆ ಈ ದೇವಾಲಯ ಗಂಗರ ಕಾಲದ ಪ್ರಾಚೀನ ಶಿವಾಲಯವಾಗಿದ್ದು ನಂತರದ ಕಾಲಕ್ಕೆ ಇದು ಜೀರ್ಣೋದ್ಧಾರವಾಗಿದೆ. ಈ ದೇವಾಲಯದ ಸುತ್ತ ಮತ್ತು ಕೊಳದ ಸಮೀಪ ಒಂದೇ ಭಾಗದಲ್ಲಿರುವ ಮೂರ್ತಿ ಶಿಲ್ಪಗಳು ಈ ಶಾಸನೋಕ್ತ ಮಂಗಳೀಶ್ವರ ಅಥವಾ ವಳ್ಳಾಳೀಶ್ವರ ದೇವಾಲಯಕ್ಕೆ ಸಂಬಂಧಿಸಿದವುಗಳೆಂಬುದು ತಿಳಿದುಬರುತ್ತದೆ. ದೇವಾಲಯದ ಬಾವಿಯೊಂದರಲ್ಲಿ ದೊರೆತಂತಹ ಪಂಚಲೋಹದ ವಿಗ್ರಹಗಳು ಸಹ ಈ ದೇವಾಲಯಕ್ಕೆ ಸಂಬಂಧಿಸಿದವುಗಳು ಎಂಬುದು ತಿಳಿದುಬರುತ್ತದೆ. ಈ ವಿಗ್ರಹಗಳನ್ನು ಕರ್ನಾಟಕದ ಪುರಾತತ್ವ ಇಲಾಖೆಯ ನಿರ್ದೇಶಕರಾದ ಎಂ.ಎಸ್. ನಾಗರಾಜರಾಯರು ತೆಗೆದುಕೊಂಡು ಹೋಗಿ ಅವುಗಳಿಗೆ ಬದಲೀ ವಿಗ್ರಹಗಳನ್ನು ಮಾಡಿಸಿಕೊಟ್ಟಿರುವರೆಂದು ಆ



ನಾಗಕೇಶವ !



ದುರ್ಗೆ !



ಕಾಳಿ



ವೈಷ್ಣವಿದೇವಿ !



ರಾಮದೇಗುಲದ ಶಾಸನ

ಊರಿನ ಗ್ರಾಮಸ್ಥರು ಹೇಳಿರುತ್ತಾರೆಂದು ಹೇಳಲಾಗಿದೆ.[೨೪] ಈ ಬಗ್ಗೆ ಗ್ರಾಮಸ್ಥರಲ್ಲಿ ವಿಚಾರಿಸಿದಾಗ ಹೌದು ಎಂದೂ, ಮತ್ತೆ ಕೆಲವರು ಇರಬಹುದು ? ಎಂದು ಅಸ್ಪಷ್ಟವಾದ ಮಾಹಿತಿಯನ್ನು ನೀಡಿದರು. ಅದು ಏನೇ ಇರಲೀ 'ವಳ್ಳಾಳೀಶ್ವರ' ಎಂದು ಕರೆಯಲ್ಪಡುತ್ತಿದ್ದ ಕೂಡ್ಲೂರುವಿನಲ್ಲಿ ಈ ಶಾಸನೋಕ್ತ 'ಮಂಗಳೀಶ್ವರ' ದೇವಾಲಯ ಪ್ರಾಚೀನ ವಾದದ್ದು ಎಂಬುದು ಸ್ಪಷ್ಟ.

ಒಟ್ಟಿನಲ್ಲಿ ಶಾಸನೋಕ್ತ ಕೂಡ್ಲೂರು ಗಂಗರ ಕಾಲದಲ್ಲಿ ಪ್ರಮುಖ ನೆಲೆಯಾಗಿದ್ದಿತು. ಅವರ ಕಾಲದಲ್ಲಿ ಸಾಕಷ್ಟು ದೇವಾಲಯಗಳು ರಚನೆಯಾಗಿದ್ದು ಪ್ರಸ್ತುತ ತಮ್ಮ ಮೂಲ ಸ್ವರೂಪದಿಂದ ಜೀರ್ಣೋದ್ಧಾರಗೊಂಡಿವೆ. ಪ್ರಸ್ತುತ ವಳ್ಳಾಳೀಶ್ವರ ಅಥವಾ ಮಂಗಳೀಶ್ವರ ದೇವಾಲಯವು ನಾಶಗೊಂಡಿದೆ. ಈ ಗ್ರಾಮವು ಗಂಗರನ್ನು ಬಹುಕಾಲ ಸಂಘರ್ಷದಲ್ಲಿ ಸೆಣಸಾಡಿ ಸೋಲಿಸಿದ ಈ ಗ್ರಾಮವು ಗಂಗರನ್ನು ಬಹುಪಾಲು ಸಂಘರ್ಷದಲ್ಲಿ ಸೆಣಸಾಡಿ ಸೋಲಿಸಿದ ಚೋಳರಿಗೂ ಸಹ ನೆಲೆಯಾಗಿತ್ತು. ಚೋಳರು ಇಲ್ಲಿನ ದೇವಾಲಯಗಳನ್ನು ಪೋಷಿಸಿ ದಾನ, ದತ್ತಿ, ಕೊಡುಗೆಗಳನ್ನು ನೀಡಿರುವುದು ಶಾಸನೋಕ್ತವಾಗಿವೆ. ಕೂಡ್ಲೂರು ಗ್ರಾಮದಲ್ಲಿ ದೊರೆತಿರುವ ಶಾಸನಗಳಲ್ಲಿ ಬಹುಪಾಲು ಶಾಸನಗಳು ವಳ್ಳಾಳೀಶ್ವರ ದೇವಾಲಯಕ್ಕೆ ನೀಡಿದ ದಾನ ಶಾಸನಗಳೇ.

ಪ್ರಾರಂಭದಲ್ಲಿ ಕಲ್ಯಾಣಿ ಮತ್ತು ವಳ್ಳಾಳೀಶ್ವರ ದೇವಾಲಯದ ಆವರಣದಲ್ಲಿನ ಬಹುಮೂರ್ತಿ ಶಿಲ್ಪಗಳನ್ನು ವೀಕ್ಷಿಸಿದಾಗ ಬಹುಶಃ ಈ ಗ್ರಾಮ ಗಂಗರ ಕಾಲದಲ್ಲಿ 'ಶಿಲ್ಪಕಲಾ ಕೇಂದ್ರವಾಗಿದ್ದು ಈ ಗ್ರಾಮದಲ್ಲಿ ಸಿದ್ಧಪಡಿಸಿದ ವಿಗ್ರಹಗಳನ್ನು ಸುತ್ತಮುತ್ತಲಿನಲ್ಲಿ ಅಂದರೆ ಮಳೂರು, ಮಳೂರು ಪಟ್ಟಣ, ಹೊಂಗನೂರು, ಚಿಕ್ಕಮಳೂರುಗಳಲ್ಲಿ ಚೋಳರಿಂದ ನಿರ್ಮಿತವಾದ ದೇವಾಲಯಗಳಿಗೆ ಬಳಸಲಾಗುತ್ತಿದ್ದೆಂದು ಭಾವಿಸ ಲಾಗಿತ್ತು. ಆದರೆ ಶಾಸನಗಳನ್ನು ಅಧ್ಯಯನ ಮಾಡುತ್ತಾ ಹೋದಂತೆ ಕೂಡ್ಲೂರು ಗಂಗರ ಕಾಲಕದಲ್ಲಿ "ಶಿಲ್ಪಕಲಾ ಕೇಂದ್ರವಾಗಿರಲಿಲ್ಲ.[೪೧] ಬದಲಾಗಿ ಅಲ್ಲಿ ಒಂದೇ ಕಡೆ ಚೆಲ್ಲಾಪಿಲ್ಲಿ ಯಾಗಿ ಬಿದ್ದಿರುವ ಶಿಲ್ಪಗಳೆಲ್ಲವೂ ಪ್ರಾಚೀನ ಕಾಲದ ಗಂಗರ ಶಿವದೇವಾಲಯವಾಗಿದ್ದ 'ಮಂಗಳೀಶ್ವರ ಅಥವಾ ವಳ್ಳಾಳೀಶ್ವರ ದೇವಾಲಯದಲ್ಲಿನ ಶಿಲ್ಪಗಳೆಂದು ತಿಳಿಯಬಹುದಾಗಿದೆ. ಅಲ್ಲಿ ದೊರೆತಿರುವ 'ಚಂದ್ರಶೇಖರ' ಎಂದು ಕರೆಯಲಾಗಿರುವ ಲಿಂಗ ಮತ್ತು ಪಾತಾಳೇಶ್ವರ ಎಂಬ ಹೆಸರಿನಿಂದ ಕರೆಸಿಕೊಳ್ಳುವ ಶಿವಲಿಂಗಗಳೂ ಸಹ ಗಂಗರ ಕಾಲಕ್ಕೆ ಸೇರಿದ್ದೂ, ವಳ್ಳಾಳೀಶ್ವರ ಅಥವಾ ಮಂಗಳೀಶ್ವರ ದೇವಾಲಯಕ್ಕೆ ಸೇರಿದವುಗಳೆಂದು ಆಧಾರಗಳಿಂದ ತೀರ್ಮಾನಿಸಬಹುದು.

(ಈ ಸಂಶೋಧನಾತ್ಮಕ ಲೇಖನವನ್ನು ಸಿದ್ಧಪಡಿಸಲು ನೆರವಾದ ಡಾ. ಎಚ್.ಎಸ್. ಗೋಪಾಲರಾವ್‌ರವರಿಗೆ ತುಂಬು ಹೃದಯದ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಹಾಗೂ ಮೂರ್ತಿ ಶಿಲ್ಪಗಳ ಲಕ್ಷಣಗಳನ್ನು ತಿಳಿಸಿಕೊಟ್ಟ ಡಾ. ಎಂ.ಜಿ. ನಾಗರಾಜ್‌ರವರಿಗೂ ಸಹ ಧನ್ಯವಾದಗಳು.)

## ಆಧಾರಸೂಚಿ


೧. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೭೬ ಮತ್ತು ೧೧೫.
೨. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೪, ಕ್ರಿ.ಶ. ೧೬೬೭.
೩. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೦೯ ರಿಂದ ೧೨೬.
೪. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೦೮, ಕ್ರಿ.ಶ. ೧೮೨೮.
೫. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೪, ಕ್ರಿ.ಶ. ೧೬೬೭.
೬. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೩.
೭. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೦೯–೧೧೧, ೧೧೩, ೧೧೫–೧೨೫, ೧೨೫(ಎ), ೧೨೬.
೮. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೦, ಕ್ರಿ.ಶ. ೧೯೫.
೯. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೦, ಕ್ರಿ.ಶ. ೧೨೦೦.
೧೦. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೫–೧೧೮.
೧೧. M.A.R. ೧೯೩೫, ಪುಟ ೧೫.
೧೨. M.A.R. ೧೯೪೭–೫೬ ಪುಟ ೩೨.
೧೩. ಡಾ. ದೇವರಕೊಂಡಾರೆಡ್ಡಿ, ೧೯೯೪, **ತಲಕಾಡಿನ ಗಂಗರ ದೇವಾಲಯಗಳು**, ಪು೧ ೧೪೨, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.
೧೪. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೦, ಕ್ರಿ.ಶ. ೧೯೫.
೧೫. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ
೧೬. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೦, ಕ್ರಿ.ಶ. ೧೨೦೦.
೧೭. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೮, ಕ್ರಿ.ಶ. ೧೨೩೦.
೧೮. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೧೬, ಕ್ರಿ.ಶ. ೧೨೦೦.
೧೯. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೧, ಕ್ರಿ.ಶ. ೧೨೬೦.
೨೦. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೫(ಎ), ಕ್ರಿ.ಶ. ೧೨೦೦.
೨೧. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೫, ಕ್ರಿ.ಶ. ೧೨೫೦.
೨೨. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೫, ಕ್ರಿ.ಶ. ೧೨೫೦.
೨೩. ಎ.ಕ. IX, ಚನ್ನಪಟ್ಟಣ, ಶಾಸನ ಸಂಖ್ಯೆ ೧೨೬.
೨೪. ಎಂ. ಬೈರೇಗೌಡ, ತಾ.ಸಿ. ತಿಮ್ಮಯ್ಯ (ಸಂ), ೧೯೯೯, ಅರ್ಕಾವತಿ, ಪುಟ ೨೯೨, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಡಾ. ಜಗದೀಶ*

# ಇನ್ನೂ ಕೆಲವು ಪಂಚತಂತ್ರ ಶಿಲ್ಪಗಳು

ಕರ್ನಾಟಕದಲ್ಲಿ ಅನೇಕ ಕಡೆ ಪಂಚತಂತ್ರ ಶಿಲ್ಪಗಳು ಬೆಳಕಿಗೆ ಬಂದಿವೆ. ಅಂತೆಯೇ ಶಿವಮೊಗ್ಗ ಜಿಲ್ಲೆಯಲ್ಲಿ ಪಂಚತಂತ್ರ ಕಥಾನಕ ಶಿಲ್ಪಗಳು ವರದಿಯಾಗಿವೆ. ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ದೇವಾಲಯದ ತೆರೆದ ಸಭಾಮಂಟಪದ ಅಧಿಷ್ಠಾನ ಪಟ್ಟಿಕೆಗಳಲ್ಲಿ ಎಂಟು ಕಥೆಗಳು, ಹೊಂಬುಜ ಕಮಠೇಶ್ವರ ದೇವಾಲಯದ ಕಪೋತದ ಕೆಳಗೆ ಆರು ಕಥೆಗಳು, ಸಂಡ, ಕುಪ್ಪಗಡ್ಡೆ ಮತ್ತು ಹುನವಳ್ಳಿ ಗ್ರಾಮಗಳಲ್ಲಿ ಗೋಸಾಸ ಶಿಲ್ಪಗಳಲ್ಲಿ ಹಂಸ ಮತ್ತು ಆಮೆ ಕಥೆ ಕಂಡು ಬಂದಿವೆ. ಹಾವೇರಿ ಜಿಲ್ಲೆಯ ಹಿರೇಮಾಗನೂರು ಗ್ರಾಮದ ಶ್ರೀ ಕಲ್ಲೇಶ್ವರ ದೇವಾಲಯದಲ್ಲಿ ಬ್ರಾಹ್ಮಣ ಏಡಿ ಮತ್ತು ಕಾಗೆ ಹಾಗೂ ಗುಬ್ಬಿ ಕೊಂದ ಆನೆ ಕಥೆಗಳು ಪತ್ತೆಯಾಗಿವೆ.

## ಹಂಸಗಳು ಮತ್ತು ಆಮೆ

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಸಂಡ ಗ್ರಾಮದಲ್ಲಿನ ಗೋಸಾಸ ಶಿಲ್ಪದ ಮೇಲಿರುವ ಹಂಸಗಳು ಮತ್ತು ಆಮೆಯ ಕಥೆಯನ್ನು ಡಾ. ಬಿ.ವಿ. ವಸಂತಕುಮಾರ ಹಾಗೂ ಡಾ. ಜಗದೀಶ ಗುರ್ತಿಸಿದ್ದಾರೆ. ಈಗ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಹುನವಳ್ಳಿ ಮತ್ತು ಕುಪ್ಪಗಡ್ಡೆ ಗ್ರಾಮಗಳಲ್ಲಿ ಶಿಲ್ಪಗಳ ಮೇಲೆ ಹಂಸಗಳು ಮತ್ತು ಆಮೆಯ ಕಥೆಯನ್ನು ಡಾ. ಜಗದೀಶ ಗುರ್ತಿಸಿದ್ದಾರೆ.

ಸಂಸ್ಕೃತ ತಂತ್ರೋಪಾಖ್ಯಾನದಲ್ಲಿ ಈ ಕಥೆಯ ಸಾರಾಂಶ ಹೀಗಿದೆ : ಬರಗಾಲದಿಂದ ಸರೋವರವು ಬತ್ತಿ ಹೋಗಿದ್ದು ಅಲ್ಲಿದ್ದ ಎರಡು ಹಂಸಗಳು ಮತ್ತು ಒಂದು ಆಮೆ ಬೇರೆಡೆಗೆ ವಲಸೆ ಹೋಗಲು ನಿರ್ಣಯಿಸುತ್ತವೆ. ಹಂಸಗಳು ತಮ್ಮ ಕೊಕ್ಕಿನಲ್ಲಿ ಹಿಡಿದ ಕಡ್ಡಿಯನ್ನು ಆಮೆ ತನ್ನ ಬಾಯಿಯಲ್ಲಿ ಹಿಡಿದು ನೇತು ಬೀಳುತ್ತದೆ. ಹಂಸಗಳು ಆಕಾಶದಲ್ಲಿ ಹಾರುತ್ತವೆ. ಹಂಸಗಳು ಆಮೆಯ ಜೊತೆಗೆ ಹಾರುತ್ತಿರುವುದನ್ನು ನೋಡಿ ನರಿಗಳು ನಗುತ್ತವೆ. ನರಿಗಳನ್ನು ಬಯ್ಯಲು ಆಮೆ ಬಾಯಿ ತೆಗೆದಾಗ ಅದು ಭೂಮಿಗೆ ಬಿದ್ದು ಸಾಯುತ್ತದೆ. ನರಿಗಳು ಆಮೆಯ ಮಾಂಸವನ್ನು ತಿನ್ನುತ್ತವೆ.

ಈ ಶಿಲ್ಪವನ್ನು ಸಂಡ ಮತ್ತು ಕುಪ್ಪಗಡ್ಡೆಯ ಗೋಸಾಸ ಕಲ್ಲುಗಳ ಮೇಲೆ ಒಂದೇ ಚಿತ್ರದಲ್ಲಿ ನಿರೂಪಿಸಲಾಗಿದೆ. ಹಂಸಗಳು ಕೊಕ್ಕಿನಲ್ಲಿ ಕಡ್ಡಿಯನ್ನು ಹಿಡಿದು ಹಾರುತ್ತಿದ್ದು ಅದಕ್ಕೆ ಆಮೆಯು ಜೋತುಬಿದ್ದಿರುವ ಚಿತ್ರವಿದೆ. ಹುನವಳ್ಳಿಯ ಗೋಸಾಸ ಶಿಲ್ಪದಲ್ಲಿ ಹಂಸಗಳು ಕೊಕ್ಕಿನಲ್ಲಿ ಕಡ್ಡಿಯನ್ನು ಹಿಡಿದು ಹಾರುತ್ತಿದ್ದು ಅದಕ್ಕೆ ಆಮೆಯು ಜೋತು ಬಿದ್ದಿದ್ದು ಕೆಳಗಡೆ ನರಿಯು ಮೇಲೆ ನೋಡುತ್ತಿರುವಂತೆ ಚಿತ್ರಿಸಲಾಗಿದೆ. ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಈ ಕಥೆ ನಾಲ್ಕು ದೃಶ್ಯಗಳಲ್ಲಿದೆ. ಮೊದಲ ದೃಶ್ಯದಲ್ಲಿ ಸರೋವರ ಮತ್ತು ಆಮೆ ಹಾಗೂ ಎರಡು ಹಂಸಗಳಲ್ಲಿ ಒಂದು ಏನನ್ನೋ ಆರಿಸುತ್ತಿರುವಂತೆ ಮತ್ತೊಂದು ಆಮೆಯನ್ನು ನೋಡುತ್ತಿರುವಂತೆ ಚಿತ್ರಿಸಲಾಗಿದೆ. ಸರೋವರದ ದಡದಲ್ಲಿ ನರಿ ಆಮೆಯನ್ನು ನೋಡುತ್ತಿದೆ. ಎರಡನೆಯ ದೃಶ್ಯದಲ್ಲಿ ಹಂಸವೊಂದು ಕಡ್ಡಿಯನ್ನು ತರುವುದನ್ನು ತೋರಿಸಲಾಗಿದೆ. ಮೂರನೆಯ ದೃಶ್ಯದಲ್ಲಿ ಆಮೆಯು ಹಂಸಗಳು ಹಿಡಿದಿರುವ ಕಡ್ಡಿಗೆ ಜೋತು ಬಿದ್ದು ಹಾರುತ್ತಿರುವಂತೆ ಚಿತ್ರಿಸಲಾಗಿದೆ. ನಾಲ್ಕನೆಯ ದೃಶ್ಯದಲ್ಲಿ ಕೆಳಗೆ ಬಿದ್ದ ಆಮೆಯನ್ನು ನರಿಯು ತಿನ್ನುತ್ತಿರುವ ಚಿತ್ರಣವಿದೆ. ಹೊಂಬುಜದಲ್ಲಿ ಈ ಕಥೆಯನ್ನು ಮೂರು ದೃಶ್ಯಗಳಲ್ಲಿ ನಿರೂಪಿಸಲಾಗಿದೆ. ಮೊದಲನೆಯ ದೃಶ್ಯದಲ್ಲಿ ಎರಡು ಹಂಸಗಳು ಒಂದು ಕಡ್ಡಿಯ ತುದಿಗಳನ್ನು ತಮ್ಮ ಬಾಯಿಯಲ್ಲಿ ಹಿಡಿದುಕೊಂಡು ಹಾರುತ್ತಿವೆ. ಕಡ್ಡಿಯ ಮಧ್ಯ ಭಾಗವನ್ನು ಬಾಯಿಯಲ್ಲಿ ಹಿಡಿದುಕೊಂಡು ಆಮೆಯು ನೇತಾಡುತ್ತಿದೆ. ಕೆಳಗೆ ಇರುವ ನರಿಯು ಎಡಕ್ಕೆ ಚಲಿಸುತ್ತಿದೆ. ಎರಡನೆಯ ದೃಶ್ಯದಲ್ಲಿ ಆಮೆಯು ಒಂದು ಕಲ್ಲಿನ ಮೇಲೆ ಬಿದ್ದಿದೆ. ಮಧ್ಯದಲ್ಲಿನ ಮೂರನೆಯ ದೃಶ್ಯದಲ್ಲಿ ನರಿಯು ಆಮೆಯನ್ನು ತಿನ್ನುತ್ತಿದೆ.

## ಗುಬ್ಬಿ ಕೊಂದ ಆನೆ

ಒಂದು ಕಾಡು ಇತ್ತು, ಅಲ್ಲಿ ಒಂದು ಹೊಂಗೆಯ ಮರವಿತ್ತು. ಆ ಮರದಲ್ಲಿ ಗುಬ್ಬಿಯ ಸಂಸಾರ ವಾಸವಾಗಿತ್ತು. ಗೂಡಿನಲ್ಲಿ ಅವುಗಳ ಮೊಟ್ಟೆಯಿತ್ತು. ಒಂದು ದಿನ ಮತ್ತೇರಿದ

* ಪುರಾತತ್ವ ಸಂರಕ್ಷಣಾ ಇಂಜಿನಿಯರ್, ವೆಂಕಟಪ್ಪ ಚಿತ್ರಶಾಲೆ ಕಟ್ಟಡ, ಕಸ್ತೂರಿಬಾ ರಸ್ತೆ, ಬೆಂಗಳೂರು.



ಹುನವಳ್ಳಿ : ಹಂಸ ಮತ್ತು ಆನೆ



ಹಿರೇಮಾಗನೂರು : ಗುಬ್ಬಿಯ ಕೊಂದ ಆನೆ



ಹಿರೇಮಾಗನೂರು : ಬ್ರಾಹ್ಮಣ, ಏಡಿ ಮತ್ತು ಕಾಗೆ

ಆನೆಯು ಅಲ್ಲಿಗೆ ಬಂದಿತು, ಹೊಂಗೆಯ ಮರದ ನೆರಳಿನಲ್ಲಿ ನಿಂತು ಅದರ ಟೊಂಗೆಯನ್ನು ಮುರಿದು ಕೆಳಗೆ ಹಾಕಿತು. ಗುಬ್ಬಚ್ಚಿಯ ಗೂಡು ಇದರಲ್ಲಿ ಇದ್ದ ಕಾರಣ ಅದೂ ಕೆಳಗೆ ಬಿದ್ದು ಮೊಟ್ಟೆಗಳು ಒಡೆದು ಹೋದವು. ಗುಬ್ಬಿಗಳಿಗೆ ಬಹಳ ನೋವಾಯಿತು. ಇವುಗಳ ಗೋಳಾಟವನ್ನು ಮರಕುಟಿಗ ಹಕ್ಕಿಯು ಆಲಿಸಿತು. ಗುಬ್ಬಿಯು ಆನೆಯನ್ನು ಕೊಲ್ಲುವ ಉಪಾಯದ ಬಗ್ಗೆ ಮರಕುಟಿಗ ಹಕ್ಕಿಗೆ ಕೇಳಿತು. ಮರಕುಟಿಗ ಗುಬ್ಬಚ್ಚಿಯನ್ನು ತನ್ನ ಸ್ನೇಹಿತರಾದ ವೀಣಾವರ ಎಂಬ ನೊಣ ಮತ್ತು ಮೇಘನಾದ ಎಂಬ ಕಪ್ಪೆಯ ಬಳಿಗೆ ಕರೆದೊಯ್ದು ಚರ್ಚಿಸಿತು. ಒಗ್ಗಟ್ಟಿನಲ್ಲಿ ಬಲವಿದೆ ಎಂದು ಎಲ್ಲರೂ ಒಂದೊಂದು ಕೆಲಸ ಮಾಡುವುದರ ಮೂಲಕ ಆನೆಯನ್ನು ಕೊಲ್ಲುವ ಉಪಾಯ ಹೂಡಿದರು. ಅದೇನೆಂದರೆ: ನೊಣವು ಆನೆಯ ಬಳಿ ವೀಣಾ ನಾದದಂತೆ ಹಾಡುವುದು, ಆನೆ ಹಾಡಿದ ಧ್ವನಿಗೆ ಅರ್ಧ ಕಣ್ಣು ಮುಚ್ಚುತ್ತದೆ, ಮರಕುಟಿಗ ಆಗ ಆನೆಯ ಕಣ್ಣು ಕುಕ್ಕಿ ಅದನ್ನು ಕುರುಡಾಗಿಸುತ್ತದೆ. ನಂತರ ಬಾಯಾರಿದ ಆನೆ ದಾರಿ ಕಾಣದೆ ತಡವರಿಸುವಾಗ ಕೆರೆಯ ಕೆಸರಗುಂಡಿಯಲ್ಲಿ ಕುಳಿತ ಕಪ್ಪೆಯು ವಟರಗುಟ್ಟುತ್ತದೆ. ಕಪ್ಪೆಯ ಸದ್ದು ಕೇಳಿದ ಆನೆಯು ನೀರು ಇದೆಯೆಂದು ತಿಳಿದು ಕೆಸರ ಗುಂಡಿಗೆ ಬರುತ್ತದೆ, ಕಾಲು ಹೂತು ಅಲ್ಲಿಂದ ಮೇಲೇರಲು ದಾರಿ ತೋರದೆ, ಅಲ್ಲೇ ಸತ್ತು ಹೋಗುತ್ತದೆ.

ಹಾವೇರಿ ಜಿಲ್ಲೆ ರಾಣೇಬೆನ್ನೂರು ತಾಲೂಕು ಹಿರೇಮಾಗನೂರ ಗ್ರಾಮದ ಕಲ್ಲೇಶ್ವರ ದೇವಾಲಯದ ಮುಂದೆ ಇದ್ದ ಕಲ್ಲಿನ ಮೇಲೆ ಇರುವ ಬ್ರಾಹ್ಮಣ, ಏಡಿ ಮತ್ತು ಕಾಗೆ ಪಂಚತಂತ್ರ ಕತೆ ಕುರಿತಾದ ಶಿಲ್ಪವನ್ನು ಕುರಿತು ಇತಿಹಾಸ ದರ್ಶನದಲ್ಲಿ ಈಗಾಗಲೇ ಪ್ರಬಂಧ ಮಂಡಿಸಿರುತ್ತೇನೆ. ಈಗ ಮತ್ತೊಂದು ಕತೆಯ ಶಿಲ್ಪವೂ ಪತ್ತೆಯಾಗಿದೆ. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಧರ್ಮೋತ್ಥಾನ ಟ್ರಸ್ಟ್ (ರಿ) ಇವರಿಂದ ೨೦೦೬ರಲ್ಲಿ ಶ್ರೀ ಕಲ್ಲೇಶ್ವರ ದೇವಾಲಯ ಸಂರಕ್ಷಣೆ ಕೈಗೊಳ್ಳಲಾಯಿತು. ಆ ಸಮಯದಲ್ಲಿ ಹಿಂದೆ ಕಲ್ಲಿನ ಜೊತೆಗೆ ಇನ್ನು ಎರಡು ಕಲ್ಲುಗಳ ತುಂಡು ದೊರೆಯಿತು. ಅವುಗಳನ್ನು ಹೊಂದಿಸಿ ನೋಡಿದಾಗ ಅವು ಬಾಗಿಲ ಮೇಲ್ಭಾಗದಲ್ಲಿ ಹಾಕಲಾಗುವ ಕಲ್ಲಿನ ತುಂಡುಗಳೆಂದು (ಉತ್ತರಾಂಗ) ಎಂದು ತಿಳಿಯಿತು. ಮಧ್ಯದಲ್ಲಿ ಎಂಟು ಕೈಗಳ ವೀಣಾಪಾಣಿಯಾದ ಸರಸ್ವತಿಯ ಉಬ್ಬು ಶಿಲ್ಪವಿದ್ದು ಎಡ ಬಲಗಳಲ್ಲಿ ಕಾಳಾಮುಖ

ಯತಿಗಳ ಚಿತ್ರವಿದೆ. ಬಲಭಾಗದಲ್ಲಿ ಹಿಂದೆ ಗುರ್ತಿಸಲಾದ ಬ್ರಾಹ್ಮಣ, ಏಡಿ ಮತ್ತು ಕಾಗೆ ಕಥೆ ಇದ್ದರೆ, ಎಡಭಾಗದಲ್ಲಿ ಗುಬ್ಬಿ ಕೊಂದ ಆನೆಯ ಕಥೆ ಇದೆ.

ಈ ಕಥಾನಕ ಶಿಲ್ಪದಲ್ಲಿ ಕಾಡನ್ನು ಸೂಚಿಸಲು ಒಂದು ಮರದ ಚಿತ್ರವಿದೆ, ಆನೆಯು ನೀರು ಕುಡಿಯುತ್ತಿರುವಂತೆ ಅದರ ಸೊಂಡಿಲನ್ನು ಉದ್ದ ಮಾಡಿ ತೋರಿಸಲಾಗಿದೆ, ಕೆರೆಯನ್ನು ಸೂಚಿಸಲು ಕಮಲದ ಹೂ ಚಿತ್ರಿಸಲಾಗಿದೆ. ಎರಡು ಕಪ್ಪೆಗಳನ್ನು ಆನೆಯ ಎದಿರು ಚಿತ್ರಿಸಲಾಗಿದೆ. ನಂತರ ಕಪ್ಪೆಯ ಹಿಂಭಾಗದಲ್ಲಿ ಕುಸಿದು ಕುಳಿತಿರುವ ಆನೆಯನ್ನು ತೋರಿಸಲಾಗಿದೆ.

## ಆಧಾರಸೂಚಿ


೧. ಡಾ. ಚನ್ನಬಸಪ್ಪ ಎಸ್. ಪಾಟೀಲ, **ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೧೯೯೪ ಮತ್ತು ೧೯೯೫ರ ಆಂಗ್ಲ ಆವೃತ್ತಿ.

೨. ಡಾ. ಚನ್ನಬಸಪ್ಪ ಎಸ್. ಪಾಟೀಲ, 'ಹೊಂಬುಜ (ಹುಂಚ)ದಲ್ಲಿಯ ಪಂಚತಂತ್ರ ಶಿಲ್ಪಗಳು', **ಇತಿಹಾಸ ದರ್ಶನ,** ಸಂಪುಟ ೧೩/೧೯೯೮, ಪುಟ ೫೭-೬೧.

೩. ಡಾ. ಜಗದೀಶ, 'ಸಂಡ ಮತ್ತು ಹಿರೇಮಾಗನೂರಿನಲ್ಲಿ ಪಂಚತಂತ್ರ ಶಿಲ್ಪಗಳು', **ಇತಿಹಾಸ ದರ್ಶನ,** ಸಂಪುಟ ೧೯, ಪುಟ ೧೦೯-೧೧೨.

೪. **ಶ್ರೀ ವಿಷ್ಣುಶರ್ಮನ ಪಂಚತಂತ್ರ,** ಶ್ರೀ ಮಂಜುನಾಥೇಶ್ವರ ಪುಸ್ತಕ ಪ್ರಕಾಶನ ಮಾಲೆ, ಉಜಿರೆ, ೧೯೮೨-೮೩.

ಡಾ. ಬಿ.ಎಸ್. ಪುಟ್ಟಸ್ವಾಮಿ*

# ಮಂಡ್ಯ ಜಿಲ್ಲೆಯ ಜೈನ ಕೇಂದ್ರಗಳು : ಒಂದು ಅಧ್ಯಯನ

ಕರ್ನಾಟಕ ದಕ್ಷಿಣ ಭಾಗದಲ್ಲಿರುವ ಮಂಡ್ಯ ಜಿಲ್ಲೆ ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಜೈನ ಧರ್ಮಕ್ಕೆ ಆಶ್ರಯ ನೀಡಿದೆ. ಇತ್ತೀಚೆಗೆ ಮೈಸೂರು ಜಿಲ್ಲೆಯಿಂದ ಬೇರ್ಪಟ್ಟು ಮಂಡ್ಯವು ಜಿಲ್ಲೆಯಾಗಿ ರೂಪುಗೊಂಡಿದೆ. ಮೊದಲು ಮೈಸೂರು ಜಿಲ್ಲೆಯ ಒಂದು ಭಾಗವಾಗಿದ್ದ ಮಂಡ್ಯ ಜಿಲ್ಲೆಯಲ್ಲಿ ಪ್ರಾಚೀನ ಕಾಲದಲ್ಲಿ ಜೈನಧರ್ಮದ ಅವಶೇಷಗಳು ಮತ್ತು ಜೈನ ಕೇಂದ್ರಗಳಿದ್ದವೆಂದು ಹಲವು ಶಾಸನಗಳು ದೃಢೀಕರಿಸಿವೆ. ಮೈಸೂರು ಭಾಗದಲ್ಲಿ ಬರುವ ಪುನ್ನಾಟ (ಹೆಚ್.ಡಿ. ಕೋಟೆ) ಪ್ರಸಿದ್ಧ ಪ್ರಾಚೀನ ಜೈನ ಕೇಂದ್ರವಾಗಿತ್ತು. ಪುನ್ನಾಟದಿಂದ ತಮಿಳುನಾಡಿನ ಕಡೆಗೆ ಕ್ರಿ.ಪೂ. ೪ನೇ ಶತಮಾನದಲ್ಲಿ ಜೈನ ಮುನಿ ಶೃತಕೇವಲಿ ಭದ್ರಬಾಹು ಕೆಲವು ಜೈನ ಯತಿಗಳನ್ನು ಕಳುಹಿಸಿದನೆಂದು ತಿಳಿದುಬರುತ್ತದೆ.

ಮಂಡ್ಯ ಜಿಲ್ಲೆಯು ಜೈನಧರ್ಮ ಮತ್ತು ಜೈನ ಸಾಂಸ್ಕೃತಿಕ ಕೇಂದ್ರವಾಗಿತ್ತು. ಮದ್ದೂರು ತಾಲ್ಲೂಕಿನ ಅರೆತಿಪ್ಪೂರು ಹಾಗೂ ನಾಗಮಂಗಲ ತಾಲ್ಲೂಕಿನ ಕಂಬದಹಳ್ಳಿ ಪ್ರಾಚೀನ ಕಾಲದ ಪ್ರಮುಖ ಜೈನಕೇಂದ್ರಗಳಾಗಿದ್ದವು.

## ಅರೆತಿಪ್ಪೂರು

ಪ್ರಾಚೀನ ಕಾಲದಲ್ಲಿ ಒಂದು ಪ್ರಮುಖ ಜೈನ ಕೇಂದ್ರವಾಗಿ ಬಸದಿಗಳು, ಜಿನಮಂದಿರಗಳು ಮತ್ತು ಅಭೂತಪೂರ್ವ ಶಿಲ್ಪಗಳನ್ನು ಹೊಂದಿರುವ ತಿಪ್ಪೂರು ತ್ಯಾಗ ಮುನಿಗಳಿಗೆ, ಕವಿಗಳಿಗೆ ಆಶ್ರಯ ಕೊಟ್ಟಿತ್ತು. ಮದ್ದೂರು ತಾಲ್ಲೂಕಿನಿಂದ ಕೂಳಗೆರೆ ಗ್ರಾಮದ ಕ್ರಿ.ಶ. ೯೦೯ರ ಶಾಸನವು ಸಗರಕುಲದ ಮಣಲಾರನು ಕನಕಗಿರಿ ತೀರ್ಥದ ಮೇಲಿನ ಬಸದಿಯನ್ನು ನಿರ್ಮಿಸಿ ಕನಕಸೇನ ಭಟಾರರಿಗೆ ತಿಪ್ಪೂರಿನ ವಿವಿಧ ತೆರಿಗೆಗಳನ್ನು ದತ್ತಿಬಿಟ್ಟ ವಿವರಗಳಿವೆ. ಹೊಯ್ಸಳ ಸೇನಾನಿ ಗಂಗರಾಜನನ್ನು ಉಲ್ಲೇಖಿಸುವ ಶಾಸನವು (ಕ್ರಿ.ಶ. ೧೧೧೭) ತಿಪ್ಪೂರು ಗ್ರಾಮವನ್ನು ಈತನು ವಿಷ್ಣುವರ್ಧನನಿಂದ ದತ್ತಿಯಾಗಿ ಪಡೆದ ಬಗ್ಗೆ ತಿಳಿಸುತ್ತದೆ. ಈ ಶಾಸನವು ಜೈನ ಶಾಸನವಾಗಿದ್ದು ತಿಂತ್ರಿಣಿಘಚ್ಛದ ಮೇಘಚಂದ್ರ ಸಿದ್ಧಾಂತ ದೇವರ ಬಗ್ಗೆ ಉಲ್ಲೇಖಿಸಿದ್ದು ಬಹಳಷ್ಟು ಮಟ್ಟಿಗೆ ಇದರಲ್ಲಿ ಬರುವ ಜಿನಪೀಠದ ಶಾಸನವು ಉಭಯ ಕವಿ ಚಕ್ರವರ್ತಿ ಕಂದರ್ಪ ದೇವ-ಸೊನ್ನುದೇವಿಯರ ಮಗನಾದ ಬಾಳಚಂದ್ರದೇವನು, ತನ್ನ ಗುರುಗಳಿಗೆ ಪರೋಕ್ಷ ವಿನಯವಾಗಿ ತೀರ್ಥಂಕರ ಮೂರ್ತಿಯನ್ನು ಪ್ರತಿಷ್ಠಾಪಿಸಿದ ಅಂಶ ತಿಳಿಯುತ್ತದೆ; ಜೊತೆಗೆ ಬಾಳಚಂದ್ರದೇವ ಕವಿಯು ತಿಪ್ಪೂರಿನವನೆಂಬ ಮಹತ್ವದ ಅಂಶವನ್ನು ಶಾಸನಗಳು ಉಲ್ಲೇಖಿಸುತ್ತದೆ.

ದೇಶದ ಪ್ರಸಿದ್ಧ ಜೈನಕೇಂದ್ರವಾದ ಶ್ರವಣ ಬೆಳಗೊಳದಷ್ಟು ಮಹತ್ವವನ್ನು ಪಡೆದಿದ್ದ ತಿಪ್ಪೂರು ಶ್ರವಣಬೆಳಗೊಳದಂತೆಯೇ ಎರಡು ಬೆಟ್ಟಗಳನ್ನು ಕನಕಗಿರಿ ಜಿನಗುಡ್ಡ ಹಾಗೂ ಸವಣಪ್ಪನಗುಡ್ಡ ಅಥವಾ ಚಿಕ್ಕಬೆಟ್ಟ, ದೊಡ್ಡಬೆಟ್ಟಗಳನ್ನು ಹೊಂದಿದೆ. ಅಲ್ಲಿ ಗಂಗರ ಕಾಲದ ನಾಲ್ಕು ಬಸದಿಗಳಿದ್ದವೆಂದು ತಿಳಿದುಬರುತ್ತದೆ. ಭಗ್ನಗೊಂಡ ಶಿಲ್ಪಗಳು ಮತ್ತು ಇಟ್ಟಿಗೆಗಳ ರಾಶಿಯೇ ಇದಕ್ಕೆ ಸಾಕ್ಷಿಯಾಗಿದೆ. ಚಿಕ್ಕಬೆಟ್ಟದ ತೀರ್ಥದಂಚಲ್ಲಿರುವ ಪಾರ್ಶ್ವನಾಥನ ಎರಡು, ಸುಪಾರ್ಶ್ವನಾಥ ಹಾಗೂ ರುಂಡರಹಿತ ಮಹಾವೀರರ ಒಂದೊಂದು ಶಿಲ್ಪಗಳು, ಹಿಂದೆ ಅಲ್ಲಿ ಪಾರ್ಶ್ವನಾಥನ ಎರಡು ಸುಪಾರ್ಶ್ವನಾಥ ಹಾಗೂ ಪಾರ್ಶ್ವನಾಥನ ಒಂದೊಂದು ಬಸದಿಗಳಿದ್ದುದಕ್ಕೆ ಕುರುಹು ಗಳಿವೆ. ತೀರ್ಥದ ಒಂದು ಭಾಗದ ಮೇಲೆ ಇಪ್ಪತ್ನಾಲ್ಕು ತೀರ್ಥಂಕರರನ್ನು ಕೆತ್ತುವ ಯೋಜನೆ ಅಪೂರ್ಣವಾಗಿದೆ. ಸವಣ್ಣಪ್ಪನ ಬೆಟ್ಟದ ಮೇಲೆ ನಿಂತಿರುವ ಸುಮಾರು ಹನ್ನೆರಡು ಅಡಿ ಬಾಹುಬಲಿ ಮೂರ್ತಿ ಬಹುದೂರದಿಂದಲೇ ಗೋಚರಿಸುತ್ತದೆ. ಶ್ರವಣಬೆಳಗೊಳದ ಗೊಮ್ಮಟದ ಮೂರ್ತಿ ಗಿಂತಲೂ ಹಳೆಯದಾಗಿದ್ದು, ಇದು ಗಂಗರ ಕಾಲದ ಶಿಲ್ಪಗಳಿಗೆ ಒಂದು ಉತ್ತಮ ಉದಾಹರಣೆ. ಶ್ರವಣಬೆಳಗೊಳ ಮೂರ್ತಿಯ ಸ್ಥಾಪನೆಗಿಂತ ಮೊದಲೇ ತಿಪ್ಪೂರಿನಲ್ಲಿ ಗೊಮ್ಮಟನ ಮೂರ್ತಿ ಸ್ಥಾಪನೆಯಾಗಿತ್ತು. ೯ನೇ ಶತಮಾನಕ್ಕಿಂತಲೂ ಮೊದಲೇ ತಿಪ್ಪೂರು ಜನಪ್ರಿಯ ಜೈನಕ್ಷೇತ್ರವಾಗಿತ್ತು.

## ಕಂಬದ ಹಳ್ಳಿ

ನಾಗಮಂಗಲ ತಾಲ್ಲೂಕಿನ ಕಂಬದಹಳ್ಳಿಯ ಪ್ರಸಿದ್ಧ ಪಂಚಕೂಟ ಬಸದಿಯ ಸಂಕೀರ್ಣದಲ್ಲಿರುವ ಅತ್ಯಂತ ಪ್ರಾಚೀನದ್ದೆನ್ನಲಾಗುವ ತ್ರಿಕೂಟ ಬಸದಿಯು ಸುಮಾರು

* ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ವಿ.ವಿ. ಪುರ ಕಲಾ ಕಾಲೇಜು, ಬೆಂಗಳೂರು.

ಕ್ರಿ.ಶ. ೯೦೦ರ ರಚನೆಯೆಂದು ಅಭಿಪ್ರಾಯ ಪಡೆಯಲಾಗಿದೆ. ಇಲ್ಲಿನ ಜೈನವಾಸ್ತು ಶಿಲ್ಪವನ್ನು ಮೂರು ವಿಧವಾಗಿ ವಿಂಗಡಿಸಬಹುದು. ೧. ಬಸದಿಗಳು, ೨. ಮಾನಸ್ತಂಭ, ೩. ಏಕಶಿಲಾವಿಗ್ರಹ.

**ಬಸದಿಗಳು** : ಕಂಬದಳ್ಳಿಯಲ್ಲಿ ೮ ಬಸದಿಗಳಿವೆ. ಪಂಚಕೂಟ' ಬಸದಿಗೆ ಸೇರಿದ ತ್ರಿಕೂಟಾಚಲದ ಬಸದಿಯಲ್ಲಿರುವ ಮೂಲಬಿಂಬಗಳು ಅದಿನಾಥ, ಶಾಂತಿನಾಥ, ನೇಮಿನಾಥ, ಬಸದಿಗಳು - ಈ ಜಿನಾಲಯುಗಳು ಜೈನಯತಿಗಳ ವಸತಿಗೃಹಗಳಾಗಿದ್ದು ಜೈನ ಧರ್ಮದ ಪ್ರಸಾರ ಕೇಂದ್ರಗಳಾಗಿ ಕೆಲಸ ಮಾಡಿವೆ.

**ಮಾನಸ್ತಂಭ** : ಜೈನ ವಾಸ್ತುವಿನ ಇನ್ನೊಂದು ಕೊಡುಗೆ ಮಾನಸ್ತಂಭ; ಇದು ಗಂಗರಸರ ಕೊಡುಗೆ. ಮಾನಸ್ತಂಭ (ಸ್ಮಾರಕಸ್ತಂಭ, ವಿಜಯಸ್ತಂಭ) ಸ್ಥಾಪನೆ ಮಾಡಿದ ಕಾಲಕ್ಕೆ 'ಕಂಬದಳ್ಳಿ' ಎಂಬ ಹೆಸರು ಬಂದಿದೆ. ಕರ್ನಾಟಕದಲ್ಲಿ ಅತಿ ಎತ್ತರವಾದ ಕಂಬವೆಂದು ಪರಿಗಣಿಸಲಾಗಿದೆ. ಕಂಬದ ತುತ್ತ ತುದಿಯಲ್ಲಿ ಕುಳಿತಿರುವ ಬ್ರಹ್ಮದೇವರ ಸುಂದರವಾದ ವಿಗ್ರಹವಿದೆ.

ಮಾನಸ್ತಂಭದ ತಳದಲ್ಲಿರುವ ಶಾಸನವು ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ ಸೇರಿದ್ದು, ಹೊಯ್ಸಳ ಪ್ರಧಾನಿ ಗಂಗರಾಜನು ಚೋಳರ ಮೇಲಿನ ವಿಜಯಕ್ಕಾಗಿ ಶಾಸನವನ್ನು (ಕ್ರಿ.ಶ. ೧೧೧೮-೧೯) ಬರೆಸಿ ಬಿಂಡಿಗನವಿಲೆಯ ತೀರ್ಥಕ್ಕೆ ಕೊಂಡಕೊಂಡಾನ್ವಯ ಮೂಲಸಂಘದ ದೇಸಿಗಣದ ಪುಸ್ತಕಗುಚ್ಛಕ್ಕೆ ಸೇರಿದ ಶುಭಚಂದ್ರ ಸಿದ್ದಾನ್ತದೇವನೆಂಬ ಮುನಿಗೆ ಜಮೀನನ್ನು ದಾನವಾಗಿ ಕೊಟ್ಟ ವಿವರವಿದೆ.

ಮಾನಸ್ತಂಭದ ದಕ್ಷಿಣಕ್ಕೆ ಪಂಚಕೂಟ ಬಸದಿಯಲ್ಲಿರುವ ತ್ರಿಕೂಟಾಚಲದ ರಂಗಮಂಟಪದ ತೊಲೆಯ ಮೇಲೆ ಗಂಗವಂಶದ ಪಾರ್ಶ್ವದೇವನಿಗೆ ಸಂಬಂಧಪಟ್ಟಿರುವ ೧೧ನೇ ಶತಮಾನದ ಶಾಸನವಿದೆ; ಅದರಲ್ಲಿ ಬಿಂಡಿಗನವಿಲೆಯ ಸಮೀಪದಲ್ಲಿರುವ ಕಂಬದಳ್ಳಿಯ ಜೈನ ತ್ರಿಕೂಟಾಚಲದ ಬಸದಿಯನ್ನು ಜೀರ್ಣೋದ್ಧಾರ ಮಾಡಿ ಅದನ್ನು ಸುಂದರಗೊಳಿಸಿ ಗದ್ದೆ ಮತ್ತು ಹೊಲವನ್ನು ಗಂಗವಂಶದ ನೇಮಿ ದಂಡೇಶ ಮತ್ತು ಮುದ್ದರಾಶಿಯರ ಪುತ್ರನಾದ ಪಾರ್ಶ್ವದೇವನು ದಾನವಾಗಿ ಬಿಟ್ಟನೆಂಬ ವಿವರವಿದೆ.

## ಏಕಶಿಲಾ ವಿಗ್ರಹ

ಇದೇ ಮಾನಸ್ತಂಭದ ಬಳಿಯಿರುವ ಶಾಸನದಲ್ಲಿ 'ಪ್ರಭಚಂದ್ರಮುನಿ' ಏಳುಜನ ಮುನಿ ಮತ್ತು ಯತಿಗಳ ಗುಣಗಾನದ ವಿಷಯ ಉಲ್ಲೇಖಿತವಾಗಿದೆ. ನಿಂತ ಭಂಗಿಯಲ್ಲಿರುವ ಏಳು ಹೆಡೆಯ ಪಾರ್ಶ್ವನಾಥ, ೧೦ ಅಡಿಯ ಶಾಂತಿನಾಥ ಮೂರ್ತಿ ಶಿಲ್ಪಗಳು, 'ಪರ್ಯಂಕಾಸನ' ಭಂಗಿಯಲ್ಲಿರುವ ಆದಿನಾಥ ವಿಗ್ರಹ, ಶಾಂತಿನಾಥ ಜಿನಬಿಂಬ ಕಂಬದಹಳ್ಳಿಯ ಪ್ರಮುಖ ಆಕರ್ಷಣೆಯಾಗಿವೆ.

## ಮಂಡ್ಯ ಜಿಲ್ಲೆಯ ಇತರೆ ಕೇಂದ್ರಗಳು

ಕ್ಯಾತನಹಳ್ಳಿ ಕೋದಂಡರಾಮ ದೇವಾಲಯದಲ್ಲಿರುವ ೧೧೭೫ರ ಶಿಲಾಶಾಸನವು ಎರೆಯಣ್ಣನು ಸ್ವಲ್ಪ ಭೂಮಿಯನ್ನು ಕ್ರಯಕ್ಕೆ ಕೊಂಡು ಕೊಡೆಹಾಳ ಬಸದಿಗೆ ದತ್ತಿ ಬಿಟ್ಟಿರುವ ವಿವರ ತಿಳಿಸುತ್ತದೆ.

ಕೆ.ಆರ್. ಪೇಟೆ ತಾಲ್ಲೂಕಿನ ಹೊಸಹೊಳಲು ಗ್ರಾಮದ ಪಾರ್ಶ್ವನಾಥ ಬಸದಿಯಲ್ಲಿ ದೊರೆತಿರುವ ಶಾಸನವು (ಕ್ರಿ.ಶ. ೧೧೨೫) ನೊಣಂಬಿಸೆಟ್ಟಿಯು ಶುಭಚಂದ್ರ ಸಿದ್ದಾಂತ ದೇವರಿಗೆ ಬಸದಿಗಾಗಿ ಅರ್ಹನಹಳ್ಳಿಯನ್ನು ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ. ಇದೇ ತಾಲ್ಲೂಕಿನ ಮುರುಕನಹಳ್ಳಿಯಲ್ಲಿ ಪೂರ್ಣ ಜೀರ್ಣೋದ್ಧಾರಗೊಂಡಿರುವ ಬಸದಿಯ ಹತ್ತಿರ ದೊರೆತಿರುವ ಶಾಸನವು ಕ್ರಿ.ಶ. (೧೧೬೫) ಹೊಯ್ಸಳರ ಮಹಾಪ್ರಧಾನ ಹೆಗ್ಗಡೆ ಶಿವರಾಜ ಸೋಮಯ್ಯನು ಮಾಣಿಕ್ಯದೊಳಲ ಜಿನಾಲಯಕ್ಕೆ ದತ್ತಿ ನೀಡಿದ ಬಗ್ಗೆ ತಿಳಿಸುತ್ತದೆ.

ಇದೇ ಬಸ್ತಿಹೊಸಕೋಟೆಯುಲ್ಲಿ ಹೊಯ್ಸಳ ಜಿನಾಲಯದ ಮೂಲ ಬಸದಿಯನ್ನು ಪುಣಿಸಮಯ್ಯನು ಕಟ್ಟಿಸಿದನೆಂದು ತಿಳಿಸುವ ಮತ್ತೊಂದು ಶಾಸನ ದೊರೆತಿದೆ. ಅಳೀಸಂದ್ರದಲ್ಲಿ ಕ್ರಿ.ಶ. ೧೧೮೪ಕ್ಕೆ ಸೇರಿದ ಶಾಸನ ದೊರೆತಿದ್ದು ಇದು ಹೊಯ್ಸಳ ವಂಶದ ಅಮೂಲ್ಯ ವಿಚಾರಗಳನ್ನು ತಿಳಿಸುವುದರ ಜೊತೆಗೆ ಅಳೀಸಂದ್ರ, ಸಿಂಧಘಟ್ಟ, ಚಾಕೇನಹಳ್ಳಿಯಲ್ಲಿದ್ದ ಬಸದಿಗಳ ಬಗ್ಗೆ, ಇಂಗಳೇಶ್ವರ ಬಳ್ಳಿಗೆ ಕೊಲ್ಲಾಪುರದ ಸಾವಂತಬಸದಿ ಬಗ್ಗೆಯೂ ಉಲ್ಲೇಖಗಳಿವೆ.

ಕ್ಯಾತನಹಳ್ಳಿ ಬಸ್ತಿಗದ್ದೆಯಲ್ಲಿರುವ ಕ್ರಿ.ಶ. ೯೦೦ರ ಶಾಸನವು ಸತ್ಯವಾಕ್ಯಕೊಂಗುಣಿ ವರ್ಮನ ಕಾಲದಲ್ಲಿ ತ್ಯಾಗಿ ಪೆರ್ಮಾಡಿಯು ಕಲ್ಲು ಬಸದಿ ಕಟ್ಟಿಸಿ ಅಲ್ಲಿನ ಕುಮಾರಸೇನ ಭಟಾರರಿಗೆ ದತ್ತಿ ನೀಡಿದುದನ್ನು ತಿಳಿಸುತ್ತದೆ.

## ನಾಗಮಂಗಲ ತಾಲ್ಲೂಕಿನ ಜೈನ ಕೇಂದ್ರಗಳು

ಕಸಲಗೆರೆಯ ಕಲ್ಲೇಶ್ವರ ದೇವಾಲಯದಲ್ಲಿ ದೊರೆತಿರುವ ಶಾಸನವು (ಕ್ರಿ.ಶ. ೧೧೪೨) ಕಲ್ಕುಣಿನಾಡಿನ ಸಾಮಂತ ಸೋಮೇಯ ನಾಯಕನು ಹೆಬ್ಬಿದರವಾಡಿಯಲ್ಲಿ ಉತ್ತುಂಗ ಚೈತ್ಯಾಲಯವನ್ನು ಕಟ್ಟಿಸಿ, ಪಾರ್ಶ್ವನಾಥ ತೀರ್ಥಂಕರನನ್ನು ಸ್ಥಾಪಿಸಿ ಅರುಹನಹಳ್ಳಿಯನ್ನು ಬ್ರಹ್ಮದೇವ ಮುನಿಗಳಿಗೆ ದತ್ತಿಯಾಗಿ ಬಿಟ್ಟನೆಂದು ತಿಳಿಸುತ್ತದೆ.

ಬೋಗಾದಿ ಗ್ರಾಮದ ಶಾಸನವು (ಕ್ರಿ.ಶ. ೧೧೪೪) ಶ್ರೀಕರಣದ ಹೆಗಡೆ ಮಾದಿರಾಜನು ಬೋಗವದಿಯಲ್ಲಿ ಶ್ರೀಕರಣದ ಜಿನಾಲಯವನ್ನು ನಿರ್ಮಿಸಿ ಪಾರ್ಶ್ವನಾಥನನ್ನು ಪ್ರತಿಷ್ಠಾಪಿಸಿ ಬೋಗಾದಿ ಗ್ರಾಮವನ್ನು ದಾನ ನೀಡಿದ ಬಗ್ಗೆ ತಿಳಿಸುತ್ತದೆ.

**ಬೆಳ್ಳೂರು :** ಹೊಯ್ಸಳ ಶಾಸನಗಳಲ್ಲೂ 'ಬೆಳ್ಳೂರು' ಎಂದೇ ಉಲ್ಲೇಖಿತಗೊಂಡಿದೆ. ಇದು ಕ್ರಿ.ಶ. ೧೬೩೦ರ ತಾಮ್ರಶಾಸನದಲ್ಲಿ ರತ್ನಗಿರಿ ಎಂದು ಜೈನಪುರಾಣಗಳಲ್ಲಿ ಶ್ವೇತಪುರಿ ಎಂದು ಕರೆಯಲ್ಪಟ್ಟಿದೆ. ಜೈನಕೇರಿಯಲ್ಲಿರುವ 'ವಿಮಲನಾಥಬಸದಿ' ಯನ್ನು ಹಿಂದೆ ಲಕ್ಷ್ಮೀಸೇನಾಚಾರ್ಯರ ಶಿಷ್ಯನಾದ ಸಕ್ಕರೆಸೆಟ್ಟಿಯು ನಿರ್ಮಿಸಿದ್ದು ನಂತರದಲ್ಲಿ ಪಾಳುಬಿದ್ದು ಅದನ್ನು ಹರತಿಯ ಸಾಮಂತರಾಯಪ್ಪ ರಾಜನು ಜೀರ್ಣೋದ್ಧಾರ ಮಾಡಿಸಿದ್ದನ್ನು ಕ್ರಿ.ಶ. ೧೬೮೮ರ ತಾಮ್ರಶಾಸನ ದಾಖಲಿಸಿದೆ.

**ಸೂರನಹಳ್ಳಿ :** ೧ನೇ ನರಸಿಂಹನ ಆಳ್ವಿಕೆಯಲ್ಲಿ ಮಹಾಪ್ರಧಾನ ದೇವರಾಜ ಹಾಗೂ ಅವನ ಸತಿ ಕಾಮಲದೇವಿಯರು, ಸೂರನಹಳ್ಳಿಯಲ್ಲಿ 'ರಾಜ-ರಾಷ್ಟ್ರ-ಯಶೋ-ಧನ' ವೃದ್ಧಿಗಾಗಿ ತ್ರಿಕೂಟ ಪಾರ್ಶ್ವನಾಥ ಜಿನಾಲಯವನ್ನು ನಿರ್ಮಿಸಿ ಪೂಜಾವಿಧಿಗೆಂದು ಸೂರನಹಳ್ಳಿಯನ್ನು ಸ್ಥಾನಾಚಾರ್ಯಮುನಿ ಚಂದ್ರದೇವನಿಗೆ ದಾನ ಬಿಟ್ಟ ವಿವರವಿದೆ.

**ಕಸಲಗೆರೆ :** ದೇವಾಲಪುರ ಸಮೀಪದ ೫ ಶಾಸನಗಳಲ್ಲಿ ಕಲ್ಲೇಶ್ವರಗುಡಿ ಬಳಿಯಿರುವ ೧೧೪೨ರ ಶಾಸನವು ಭಾನುಕೀರ್ತಿ ಸಿದ್ಧಾಂತ ದೇವರ ಶಿಷ್ಯ ಸಾವಂತ ಸೋಮೇಯನಾಯಕರು ಹಿಬ್ಬಿದರವಾಡಿಯಲ್ಲಿ ಉತ್ತುಂಗ ಚೈತ್ಯಾಲಯವನ್ನು ನಿರ್ಮಿಸಿ, ಪಾರ್ಶ್ವದೇವರನ್ನು ಪ್ರತಿಷ್ಠಾಪಿಸಿ, ದಾನ ಬಿಟ್ಟ ವಿಷಯವನ್ನು ತಿಳಿಸಿದರೆ, ಇಮ್ಮಡಿ ಬಲ್ಲಾಳನ ೧೧೯೦ರ ಇನ್ನೊಂದು ಶಾಸನವು ಹೆಬ್ಬಿದಿರವಾಡಿಯ ಕಲಿದೇವರ ನಿತ್ಯಸೇವೆಗೆಂದು ದಾನ ಬಿಟ್ಟಿದ್ದನ್ನು ದಾಖಲಿಸಿದೆ. ಅದೇ ಕಲ್ಲಿನ ಎಡಭಾಗದಲ್ಲಿರುವ ಸುಮಾರು ೧೨ನೇ ಶತಮಾನಕ್ಕೆ ಸೇರಿದ ಇನ್ನೊಂದು ಶಾಸನ ಇಲ್ಲಿಯ ಬಸದಿಯನ್ನು 'ಕಲ್ಕುಣಿನಾಡ ಏಕೋಟಿ ಜಿನಾಲಯ'ವೆಂದು ಕರೆದು ರುವಾರಿ ಮಾಚೋಜನನ್ನು ಕಲ್ಕುಣಿನಾಡ ಆಚಾರ್ಯ, ಕಲಿಯುಗ ವಿಶ್ವಕರ್ಮನೆಂದು ಹೊಗಳಿದೆ.

**ದೇವರಹಳ್ಳಿ :** ಕ್ರಿ.ಶ. ೭೭೬ರ ತಾಮ್ರಶಾಸನವು ಗಂಗ ಅರಸ ಶ್ರೀಪುರುಷನ ಆಳ್ವಿಕೆಯಲ್ಲಿ ಬಾಣವಂಶದ ಪೃಥ್ವಿ ನಿರ್ಗುಂದರಾಜನ ಮಡದಿ ಸಗರ ಕುಲದ **ಕುಂದಚ್ಚಿಯು,** ಶ್ರೀಪುರದಲ್ಲಿ ಲೋಕತಿಲಕ **ಬಸದಿ**ಯನ್ನು ನಿರ್ಮಿಸಿ ಅದರ ಪೂಜಾವಿಧಿಗೆಂದು ಪೊನ್ನಳ್ಳಿ ಗ್ರಾಮವನ್ನು ದತ್ತಿ ಬಿಡಿಸಿದ ಅಂಶವನ್ನು ದಾಖಲಿಸಿದ್ದು, **ಮಹಿಳೆಯೋರ್ವಳು ಬಸದಿ ನಿರ್ಮಿಸಿದ ಮೊದಲ ಉಲ್ಲೇಖ** ಇದಾಗಿದೆ.

**ದಡಗ :** ಹೊಯ್ಸಳ ವಿಷ್ಣುವರ್ಧನನ ಕಾಲದ ತೇದಿರಹಿತ ಶಾಸನ, ಮರಿಯಾನೆ ಭರತಮಯ್ಯ, ದಂಡನಾಯಕ ಸಹೋದರರು ಮತ್ತವರ ಮಡದಿಯರಾದ ಜಕ್ಕಲೆ-ಹರಿಯಬ್ಬೆಯರು ಸಂಯುಕ್ತವಾಗಿ ದೇಶಿಯ ಗಣದ ನಾಲ್ಕು ಹಾಗೂ ಕಾಣಾರುಗಣದ ಒಂದು ಬಸದಿಯನ್ನೊಳಗೊಂಡ ಪಂಚಬಸದಿಯ ಬಾಹುಬಲಿ ಕೂಟವನ್ನು ಜವಳಿಗೆಯ ಮುನಿಭದ್ರ ಸಿದ್ಧಾಂತ ದೇವರ ಶಿಷ್ಯರಾದ ಮೇಘಚಂದ್ರ ಸಿದ್ಧಾಂತ ದೇವರಿಗೆ ಅರ್ಪಿಸಿ, ದತ್ತಿ ಬಿಟ್ಟಿದ್ದನ್ನು ದಾಖಲಿಸುತ್ತದೆ. ಆದರೆ ಇಲ್ಲಿಯ ಶಾಂತನಾಥ ಬಸದಿಯು ಕೇವಲ ಗರ್ಭಗೃಹ ಮತ್ತು ವಿಶಾಲವಾದ ನವರಂಗವನ್ನು ಹೊಂದಿದ್ದು ಪೂರ್ಣ ಜೀರ್ಣೋದ್ಧಾರಗೊಂಡಿದೆ. ಗರ್ಭಗೃಹದಲ್ಲಿ ಶಾಂತಿನಾಥನ ಬಿಂಬವೂ ಸೇರಿದಂತೆ ವಿವಿಧ ತೀರ್ಥಂಕರರ ಕಿರುಶಿಲ್ಪ ಗಳೊಡನೆ ಕಂಚಿನ ಶಿಲ್ಪವೂ ಇದೆ.

## ಕಲಿಕಾ ಕೇಂದ್ರ

ಮಂಡ್ಯ ಜಿಲ್ಲಾ, ಭೌಗೋಳಿಕ ವ್ಯಾಪ್ತಿಯಲ್ಲಿ ಹಲವಾರು ಜೈನ ಶಿಕ್ಷಣ ಕೇಂದ್ರಗಳು ಅಸ್ತಿತ್ವದಲ್ಲಿದ್ದು, ಸಂತೆಬಾಚಳ್ಳಿ ಜೈನಮಠ ಪ್ರಮುಖವಾದುದು. ಪಂಚ ಬಸದಿ ಹೊಂದಿದ ಕಂಬದಳ್ಳಿಯೂ ಪ್ರಮುಖ ಜೈನ ಕಲಿಕಾ ಕೇಂದ್ರವಾಗಿತ್ತು. ಜಿನಾಲಯಗಳಿಗೆ ದತ್ತಿ ಹಾಗೂ ಅಗ್ರಹಾರಗಳಿಗೆ ಭೂಮಿಯ ಕೊಡುಗೆ ಬಿಟ್ಟು ಹಲವಾರು ವಿಷಯಗಳು ಶಾಸನಗಳಿಂದ ತಿಳಿದುಬರುತ್ತದೆ. ಜಿನಾಲಯ ಭಟ್ಟಾರರಿಗೆ ಅಧಿಕಾರಿಗಳು, ವ್ಯಾಪಾರಸ್ಥರು, ಕೆಲವು ಶ್ರೇಣಿಕೃತ ಸಂಘಗಳು ಗ್ರಾಮದ ಮುಖಂಡರು ದಾನದತ್ತಿ ನೀಡಿ ಪೂಜೆ ಸಲ್ಲಿಸುತ್ತಿದ್ದ ವಿಷಯ ಶಾಸನಗಳಲ್ಲಿ ಉಲ್ಲೇಖಿತವಾಗಿದೆ.

## ಜೈನ ಧರ್ಮದ ಇಳಿಗಾಲ

ಪ್ರಾಚೀನ ಕಾಲದಲ್ಲಿಯೇ ಅಸ್ತಿತ್ವದಲ್ಲಿದ್ದ ಅರೆ ತಿಪ್ಪೂರು ಮತ್ತು ಕಂಬದಳ್ಳಿಯು ಜೈನ ಧಾರ್ಮಿಕ ಕೇಂದ್ರಗಳು ಕೇವಲ ಧರ್ಮಾಚರಣೆಯ ಕರ್ತವ್ಯಕ್ಕೆ ಮಾತ್ರ ಸೀಮಿತವಾಗಿರದೆ ಇವು ಅಂದಿನ ಕಾಲದ ಜನಜೀವನದ ಸಾಂಸ್ಕೃತಿಕ ಬದುಕನ್ನು ಉತ್ತಮವಾಗಿ ರೂಪಿಸಿ ಸಮಾಜದಲ್ಲಿ ಶಾಂತಿ ನೆಲಸುವಂತೆ ಮಾಡಿದ್ದರು. ಪ್ರಾಚೀನ ಕರ್ನಾಟಕದ ಜನತೆ ಸುಸಂಸ್ಕೃತಿ ಮತ್ತು ಶಾಂತಿಯಿಂದ ಬಾಳ್ವೆ ನಡೆಸುತ್ತಿದ್ದರೆಂಬುದಕ್ಕೆ ಜೈನ ಧರ್ಮದ ಪ್ರಭಾವವೇ ಕಾರಣವಾಗಿತ್ತು.

ಇಂದು ತಿಪ್ಪೂರಿನ ಅವಶೇಷಗಳನ್ನು ಭಗ್ನ ತೀರ್ಥಂಕರರನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವು ಪ್ರಕೃತಿ ವಿಕೋಪಗಳಿಂದ ಹಾಳಾಗಿರಬಹುದೆಂದು ಮೇಲ್ನೋಟಕ್ಕೆ ಅನ್ನಿಸಿದರೂ, ನಿಜವಾಗಿಯೂ ಪ್ರಕೃತಿ ವಿಕೋಪಗಳಿಗೆ ತುತ್ತಾಗದೆ ೧೩-೧೪ನೇ ಶತಮಾನದಲ್ಲಿ ನಡೆದ ಧಾರ್ಮಿಕ ಸಂಘರ್ಷಗಳಿಂದಾಗಿಯೇ ನಾಶವಾಗಿರುವುದು ಎದ್ದು ಕಾಣುತ್ತದೆ. ೧೪ನೇ ಶತಮಾನದ ವೇಳೆಗಾಗಲೇ ತಿಪ್ಪೂರು ನಾಶಗೊಂಡಿದ್ದರೂ ಸಹ ೧೭-೧೮ನೇ ಶತಮಾನದವರೆಗೂ ಈ ಸ್ಥಳ ತನ್ನ ಕೀರ್ತಿಯನ್ನು ಕಳೆದುಕೊಂಡಿರಲಿಲ್ಲ.

ತಿಪ್ಪೂರಿನ ಊರೊಳಗಿದ್ದ ಜೈನೇಶ್ವರಿ ಗುಡಿಯು ಹಿಂದೆ ಜೈನ ಬಸದಿಯಾಗಿತ್ತು. ಗುಡಿಯ ಅವಶೇಷಗಳಾದ ಕಂಬಗಳು, ಬೋದಿಗೆಗಳು ಮುಂತಾದ ಕಲ್ಲುಗಳನ್ನು ಗಮನಿಸಿದರೆ, ಇಲ್ಲಿನ ಬಸದಿಯನ್ನು ನೆಲಸಮ ಮಾಡಿ ಅದೇ ಸ್ಥಳದಲ್ಲಿ ಹಿಂದಿನ ಅಧಿಷ್ಠಾನದ ಮೇಲೆಯೇ ಹೊಸ ಗುಡಿಯನ್ನು ನಿರ್ಮಿಸಲಾಗಿದೆ; ಹಿಂದೆ ಬಸದಿಯಲ್ಲಿದ್ದ **'ಯಕ್ಷಿಣಿ'**ಯ ವಿಗ್ರಹವನ್ನು ಪ್ರತಿಷ್ಠಾಪಿಸಿ ಅದಕ್ಕೆ ಜೈನೇಶ್ವರಿಗುಡಿ ಎಂದು ನಾಮಕರಣ ಮಾಡಿದೆ; ಅದಕ್ಕೆ ಹಿಂದೂ ಧರ್ಮಾಚರಣೆಯ ಪದ್ಧತಿಯ ಪೂಜಾ ವಿಧಾನ ಜಾರಿಗೆ ಬಂದಿದ್ದರಿಂದ ಜೈನ ಧರ್ಮ ಯಾವ ರೀತಿ ನಯವಾಗಿ ಪತನ ಹೊಂದಿರಬಹುದೆಂದು ಊಹಿಸಬಹುದು. ಇನ್ನೂ ಮುಂದುವರಿದು ಇಂದಿನ ವರೆಗೂ ಸ್ಥಳೀಯ ಜನರ ಮೂಢನಂಬಿಕೆ ಯಾವ ರೀತಿ ಯಾಗಿದೆ ಎಂದರೆ ಸವಣಪ್ಪನ ಗುಡ್ಡದ ಗೊಮ್ಮಟನ ವಿಗ್ರಹ ವನ್ನು 'ಮಧ್ಯರಾತ್ರಿ ಬಂಜೆಯು ನಗ್ನ ಸ್ಥಿತಿಯಲ್ಲಿ ಅಪ್ಪಿಕೊಂಡರೆ ಬಂಜೆತನ ನಿವಾರಣೆಯಾಗುತ್ತದೆ" ಎಂಬ ಮಾತಿನ ಅನುಸರಣೆ ಯಲ್ಲಿದೆ.

ಒಂದು ಕಾಲದಲ್ಲಿ ಪ್ರಮುಖ ಜೈನ ಕೇಂದ್ರವಾಗಿದ್ದ ತಿಪ್ಪೂರನ್ನು ಮದ್ದೂರಿನ ವೈಷ್ಣವ ದೇವಾಲಯಕ್ಕೆ ದಾನ ನೀಡಿರುವುದನ್ನು (ತಿಪ್ಪೂರು ಶಾಸನ ೧೩ನೇ ಶತಮಾನ) ಗಮನಿಸಿದರೆ ಈ ವೇಳೆಗಾಗಲೇ ಜೈನ ಧರ್ಮದ ಪ್ರಾಬಲ್ಯ ಕುಸಿದು ವೈಷ್ಣವ ಧರ್ಮದ ಪ್ರಾಬಲ್ಯ ಹೆಚ್ಚಾಗಿರಬೇಕು ಎಂದೆನಿಸುತ್ತದೆ. ಇದನ್ನು ಸಮರ್ಥಿಸಲು ಮತ್ತೊಂದು ಆಧಾರವೆಂದರೆ ಬೆಳ್ಳೂರಿನ ಮಾಧವ ದೇವಾಲಯಕ್ಕೆ ಅಲ್ಲಿನ ಕೆಲಸ ಕಾರ್ಯಗಳಿಗಾಗಿ ತಿಪ್ಪೂರು ಸೇರಿದಂತೆ ಮೂರು ಹಳ್ಳಿಗಳನ್ನು ಹೊಯ್ಸಳರ ದಂಡನಾಯಕ ಪೆರುಮಾಳೆ ದಂಡನಾಯಕನು ದಾನ ನೀಡಿದ್ದಾನೆ. ಎಂದರೆ ಇಲ್ಲಿ ಜೈನಧರ್ಮ ತನ್ನ ಪ್ರಭಾವವನ್ನು ಕಳೆದುಕೊಂಡಿರಬೇಕು.

ರಾಮಾನುಜಾಚಾರ್ಯರು ಮೇಲುಕೋಟೆಗೆ ಬಂದು ನೆಲೆ ನಿಂತು ಸ್ಥಳೀಯ ಸಮಾಜದ ಮೇಲೆ ಹಲವು ರೀತಿಯ ಪ್ರಭಾವ ಬೀರಿದ ಸಂದರ್ಭಗಳಿವೆ. ಹಾಗೂ ಜೈನನಾಗಿದ್ದ ಬಿಟ್ಟಿದೇವ ವೈಷ್ಣವ ಮತಾವಲಂಬಿಯಾಗಿ, ರಾಮಾನುಜಾಚಾರ್ಯರ ಅನುಯಾಯಿಗಳಾಗಿ ನಂತರ ಯಥಾ ರಾಜ ತಥಾ ಪ್ರಜೆ ಎಂಬಂತೆ ರಾಜ್ಯದ ಬಹುಪಾಲು ಜನರೂ ವೈಷ್ಣವ ಧರ್ಮವನ್ನು ಅವಲಂಬಿಸಿದ ಕಾಲಮಾನದಲ್ಲಿ ಜೈನಧರ್ಮ ಕುಸಿದ ಸಂದರ್ಭಗಳೇ ಹೆಚ್ಚು. ವೈಷ್ಣವ ಕೇಂದ್ರವಾದ ಮೇಲುಕೋಟೆ, ತೊಣ್ಣೂರು ತನ್ನ ಪ್ರಾಬಲ್ಯವನ್ನು ವೃದ್ಧಿಗೊಳಿಸಿಕೊಂಡಂತೆ ಮತಾಂತರ ವ್ಯವಸ್ಥೆಯೂ ಪ್ರಬಲವಾಗಿ ವ್ಯಾಪಿಸಿದ ಪರಿಣಾಮ ಜೈನಧರ್ಮಾನುಸರಣೆಗೆ ಬಲವಾದ ಪೆಟ್ಟು ಬಿದ್ದಂತಾಯಿತು.

ಮಂಡ್ಯ ಜಿಲ್ಲಾ ಭೌಗೋಳಿಕ ವ್ಯಾಪ್ತಿಯಲ್ಲಿ ಜೈನ ಧರ್ಮಕ್ಕೆ ಸೆಡ್ಡು ಹೊಡೆಯುವ ಪ್ರಬಲ ವೈಷ್ಣವ ಕೇಂದ್ರ ಮೇಲುಕೋಟೆ ಮತ್ತು ಶೈವ ಕೇಂದ್ರ ಆದಿಚುಂಚನಗಿರಿ ಪ್ರಾಚೀನ ಕಾಲದಿಂದಲೂ ಶೈವಪಂಥ ಮತ್ತು ಅದರಲ್ಲಿರುವ ಕಾಪಾಲಿಕ, ಕಾಳಾಮುಖ ಪಂಥಗಳು ಈ ಪ್ರದೇಶದಲ್ಲಿ ಆಚರಣೆಯಲ್ಲಿದ್ದವು. ಇದಕ್ಕೆ ಸಾಕ್ಷಿಯಾಗಿ ತಿಪ್ಪೂರಿನಲ್ಲಿ ಎರಡು ಶಾಸನ ರಹಿತ ಶಿಲ್ಪಗಳಿವೆ. ಒಂದು ವಾಮನ ಮುದ್ರೆಕಲ್ಲು, ಇದು ವೈಷ್ಣವ ಧರ್ಮದ ಪ್ರತೀಕ. ಅದೇ ರೀತಿ ಕಾಳಾಮುಖ ಶೈವ ಪಂಥದ ಜಡೆಮುನಿಯ ಶಿಲ್ಪವಿದೆ. ಅನಂತರ ಹೆಚ್ಚು ಪ್ರಚಾರಗೊಂಡು ವೀರಶೈವ ಧರ್ಮ ಈ ಪ್ರದೇಶದಲ್ಲಿ ನೆಲೆಸಿತು. ಮೃದುಧೋರಣೆ, ಅಹಿಂಸೆ ಆಚರಿಸುತ್ತಿದ್ದ ಜೈನಧರ್ಮದ ಅನುಯಾಯಿಗಳು ಧಾರ್ಮಿಕ ಸಂಘರ್ಷದಲ್ಲಿ ನಡೆದ ದಬ್ಬಾಳಿಕೆದುರು ಪ್ರತಿರೋಧ ಒಡ್ಡದೆ, ತಮಗೆ ಯಾರ ರಕ್ಷಣೆಯೂ ಇಲ್ಲದ ಕಾರಣಗಳಿಂದ ಕೆಲವರು ವ್ಯಾಪಾರ ವೃತ್ತಿಗೆಂದು ನಗರಗಳನ್ನು ಸೇರಿಕೊಂಡು ತಮ್ಮ ಧರ್ಮ ಉಳಿಸಿಕೊಂಡರು. ಹೆಚ್ಚು ಜನರು ತಮ್ಮ ಬದುಕನ್ನು ರೂಪಿಸಿಕೊಳ್ಳಲು ಅನಿವಾರ್ಯವಾಗಿ ಮತಾಂತರಗೊಂಡಿರ ಬಹುದು. ೧೨-೧೩ನೇ ಶತಮಾನದ ನಂತರ ಜೈನ-ಶೈವ ಧರ್ಮಗಳ ನಡುವೆ ನಡೆದ ಸಂಘರ್ಷದ ಕಾಲದಲ್ಲಿಯೂ ಇಲ್ಲಿನ ಜೈನ ಧರ್ಮ ಸಂಸ್ಕೃತಿಗೆ ಇಳಿಗಾಲ ಆವರಿಸಿತು.

ಡಾ. ಅಪ್ಪಣ್ಣ ಎನ್. ಹಂಜೆ*

# ಕಲಘಟಗಿ ತಾಲ್ಲೂಕಿನ ಜೈನಾವಶೇಷಗಳು

ಪೀಠಿಕೆ : ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕಿನ ಭೂಪ್ರದೇಶವು ಉತ್ತರ ಅಕ್ಷಾಂಶ ೧೫° ೦೨' ರಿಂದ ೧೫° ೨೧' ವರೆಗೆ ಮತ್ತು ಪೂರ್ವ ರೇಖಾಂಶ ೭೪° ೪೯' ರಿಂದ ೭೫° ೦೯' ರವರೆಗಿನ ಪ್ರದೇಶದಲ್ಲಿ ಒಟ್ಟು ೬೮೨.೮ ಚ.ಕಿ.ಮೀ. ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಇದು ಸಮುದ್ರಮಟ್ಟದಿಂದ ೭೦೦ ಮೀ. ಎತ್ತರದಲ್ಲಿದೆ. ಈ ತಾಲ್ಲೂಕಿನಲ್ಲಿ ಒಟ್ಟು ಎಂಭತ್ತೇಳು ಗ್ರಾಮಗಳಿವೆ. ಇದರ ಮೇರೆಗಳಾಗಿ ಪೂರ್ವದಲ್ಲಿ ಹುಬ್ಬಳ್ಳಿ, ಕುಂದಗೋಳ ಮತ್ತು ಶಿಗ್ಗಾಂವ, ಪಶ್ಚಿಮದಲ್ಲಿ ಹಳಿಯಾಳ ಮತ್ತು ಯಲ್ಲಾಪುರ, ದಕ್ಷಿಣದಲ್ಲಿ ಮುಂಡಗೋಡ, ಉತ್ತರದಲ್ಲಿ ಧಾರವಾಡ ತಾಲ್ಲೂಕುಗಳಿವೆ.[೧] ಈ ತಾಲ್ಲೂಕಿನ ಸಂಪದ್ಭರಿತವಾದ ಭೌಗೋಳಿಕ ಸಂಪನ್ಮೂಲಗಳು ಇತಿಹಾಸಪೂರ್ವ ಕಾಲ ದಿಂದಲೂ ವಿವಿಧ ಜನಾಂಗಗಳು, ಅರಸು ಮನೆತನಗಳು, ಆಡಳಿತಾಧಿಕಾರಿಗಳು, ಧರ್ಮಗಳನ್ನು ಆಕರ್ಷಿಸಿ ಅವುಗಳನ್ನು ಪೋಷಿಸಿ ಬೆಳೆಸಿವೆ. ಅಂತಾಗಿ ಈ ತಾಲ್ಲೂಕಿನ ಪರಿಸರದ ರಾಜಕೀಯ, ಆಡಳಿತ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳು ವೈವಿಧ್ಯಮಯವಾಗಿ ಬೆಳೆದು ಬಂದಿದೆ. ಈ ಪರಿಸರದಲ್ಲಿ ಆಳ್ವಿಕೆ ಕೈಗೊಂಡಿದ್ದ ಮತ್ತು ಆಳ್ವಿಕೆಯ ಪ್ರಭಾವವನ್ನು ಹೊಂದಿದ ಅರಸು, ಮಹಾಮಂಡಳೇಶ್ವರ, ಮಹಾಸಾಮಂತ, ಪ್ರಭುಗಾವುಂಡ, ಗಾವುಂಡ ಮನೆತನಗಳು ಒಂದಿಲ್ಲೊಂದು ರೀತಿಯಲ್ಲಿ ಜೈನ ಧರ್ಮಕ್ಕೆ ರಾಜಾಶ್ರಯ ಕೊಡಮಾಡಿ ಇದರ ಪ್ರವರ್ಧಮಾನ ಮತ್ತು ಬೆಳವಣಿಗೆಗೆ ಪ್ರೋತ್ಸಾಹ ವನ್ನಿತ್ತಿವೆ. ಈ ನಿಟ್ಟಿನಲ್ಲಿ ಸಮಕಾಲೀನ ಆಡಳಿತಾಧಿಕಾರಿಗಳು, ಶ್ರಾವಕರು ಮತ್ತು ಜೈನಾಭಿಮಾನಿಗಳ ಕೊಡುಗೆ ಅಪಾರವಾಗಿದೆ. ಹಾಗಾಗಿ ಈ ಪರಿಸರದಲ್ಲಿ ಜೈನಮುನಿ ಪರಂಪರೆ, ವಾಸ್ತುಕಲೆ, ಶಿಲ್ಪಕಲೆ, ಸಂಸ್ಕೃತಿ ಮೊದಲಾದವು ಗಳು ಉಜ್ವಲವಾಗಿ ಸಾಗಿಬಂದಿದೆ. ಇದನ್ನು ಈ ತಾಲ್ಲೂಕಿನಾದ್ಯಂತ ಹರಡಿಕೊಂಡಿರುವ ಜೈನ ಶಾಸನ, ವಾಸ್ತು, ಶಿಲ್ಪ, ನಿಷಿಧಿ ಮೊದಲಾದ ಅವಶೇಷಗಳು ದೃಢಪಡಿಸುತ್ತವೆ.

## ಕಲಘಟಗಿ ತಾಲ್ಲೂಕಿನ ಜೈನಾವಶೇಷಗಳು

ಕಲಘಟಗಿ ತಾಲ್ಲೂಕಿನಲ್ಲಿ ಜೈನ ಧರ್ಮದ ಕುರಿತಾದ ಸಮಗ್ರ ಅಧ್ಯಯನದ ಉದ್ದೇಶದಿಂದ ೨೦೦೬ರಲ್ಲಿ ಈ ತಾಲ್ಲೂಕಿನ ಪ್ರತಿಯೊಂದು ಗ್ರಾಮದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿತ್ತು. ಆ ಸಂದರ್ಭದಲ್ಲಿ ಕೇವಲ ಹನ್ನೊಂದು ಗ್ರಾಮಗಳಲ್ಲಿ ಜೈನಾವಶೇಷಗಳು ಕಂಡುಬಂದಿವೆ. ಪ್ರಸ್ತುತ ಕಲಘಟಗಿ, ಬಾನಗಿತ್ತಿ ಗುಡಿಹಾಳ, ಬೇಗೂರು, ದಾಸ್ತಿಕೊಪ್ಪ, ದ್ಯಾಮಾಪುರ, ಧುಮ್ಮವಾಡ, ದೇವಿಕೊಪ್ಪ, ಗಂಭ್ಯಾಪುರ, ಗುಡ್ಡದ ಹುಲಿಕಟ್ಟಿ, ಹಿರೇಹೊನ್ನಿಹಳ್ಳಿ, ಹನುಮಾಪುರ, ಹುಲ್ಲಂಬಿ, ಹುಲಗಿನಕಟ್ಟಿ, ಕಾಮಧೇನು, ಕೂಡಲಗಿ, ಮಿಶ್ರಿಕೋಟಿ, ಮುತ್ತಗಿ, ನಾಗನೂರ, ಪರಸಾಪುರ, ಸುರಶೆಟ್ಟಿಕೊಪ್ಪ, ತಂಬೂರು, ತಾವರಗೇರಿ ಗ್ರಾಮಗಳಲ್ಲಿ ಜೈನಧರ್ಮೀಯರ ವಾಸ್ತವ್ಯವಿದೆ. ಒಟ್ಟು ೫೧೯ ಕುಟುಂಬಗಳಿದ್ದು, ೨೭೫ ಜನಸಂಖ್ಯೆಯಿದೆ.[೨]

**ಕಲಘಟಗಿ** : ತಾಲ್ಲೂಕು ಕೇಂದ್ರವಾಗಿರುವ ಈ ನಗರವು ಧಾರವಾಡದಿಂದ ದಕ್ಷಿಣಕ್ಕೆ ಮೂವತ್ತೇಳು ಕಿ.ಮೀ. ಅಂತರದಲ್ಲಿದೆ. ಕ್ರಿ.ಶ. ಸುಮಾರು ೧೨ ಮತ್ತು ೧೩ನೆಯ ಶತಮಾನದ ಕೆಲವು ಶಾಸನಗಳಲ್ಲಿ 'ಕಲ್ಲುಕುಟಿಗೆ' ಎಂದು ಉಲ್ಲೇಖಿತವಾಗಿದೆ. ಇದು ಪಲಸಿಗೆ ಪನ್ನಿರ್ಚ್ಛಾಸಿರ ಪ್ರಾಂತದಲ್ಲಿ ಸೇರ್ಪಡೆಯಾಗಿತ್ತು. ಕಲ್ಯಾಣದ ಚಾಳುಕ್ಯ ಮನೆತನದ ಅಧೀನದಲ್ಲಿ ಆಳ್ವಿಕೆ ಕೈಗೊಂಡಿದ್ದ ಗೋವೆ ಕಾದಂಬ ಮನೆತನದ ಕಾಲಾವಧಿಯಲ್ಲಿ ಪ್ರಸಿದ್ಧ ಅಗ್ರಹಾರವಾಗಿತ್ತು. ಇಲ್ಲಿ ಕ್ರಿ.ಶ. ಸುಮಾರು ೧೩ನೆಯ ಶತಮಾನದಲ್ಲಿ ನಿರ್ಮಾಣವಾಗಿದ್ದ ಶಾಂತಿನಾಥ ಬಸದಿಯು ಜೀರ್ಣವಾಗಿದ್ದ ಕಾರಣ ೧೭೨ರಲ್ಲಿ ಜೀರ್ಣೋದ್ಧಾರ ಮಾಡಲಾಗಿತ್ತು. ಇದನ್ನು ೨೦೦೬ರಲ್ಲಿ ಸಂಪೂರ್ಣವಾಗಿ ಬಿಚ್ಚಿ ಪುನರ್ ನಿರ್ಮಿಸ ಲಾಗಿದೆ. ಈ ಬಸದಿಯ ಗರ್ಭಗೃಹದಲ್ಲಿ ತೀರ್ಥಂಕರನ ದುಂಡು ಶಿಲ್ಪವಿದೆ. ಇದು ಸ್ಥಳೀಯ ಕಿಲ್ಲೆಯಲ್ಲಿ ೯೧೫ರಲ್ಲಿ ಬಾವಿಯನ್ನು ತೋಡುತ್ತಿದ್ದ ಸಂದರ್ಭದಲ್ಲಿ ದೊರೆತಿದೆ. ಕ್ರಿ.ಶ. ಸುಮಾರು ೧೩ನೆಯ ಶತಮಾನದ ಈ ಶಿಲ್ಪವು ಕಪ್ಪುಮಿಶ್ರಿತ

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗದಗ.

ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ೯೫ ಸೆಂ.ಮೀ. ಎತ್ತರ ಮತ್ತು ೬೫ ಸೆಂ.ಮೀ. ಅಗಲವಾಗಿದೆ. ಸ್ಥಳೀಯರು ಇದನ್ನು ಶಾಂತಿನಾಥ ತೀರ್ಥಂಕರನ ಪ್ರತಿರೂಪದಲ್ಲಿ ಆರಾಧಿಸುತ್ತಿದ್ದಾರೆ. ಪದ್ಮಪೀಠದ ಮೇಲೆ ಪರ್ಯಂಕಾಸನದಲ್ಲಿರುವ ತೀರ್ಥಂಕರನು ಧ್ಯಾನಮುದ್ರೆಯಲ್ಲಿದ್ದಾನೆ: ಈತನ ಕಂಠದ ಸುತ್ತಲೂ ರೇಖೆಗಳಲ್ಲಿ ಸಹಜ ನೆರಿಗೆಗಳನ್ನು ಬಿಡಿಸಲಾಗಿದೆ.

ಅದೇ ಬಸದಿಯಲ್ಲಿ ಕ್ರಿ.ಶ. ಸುಮಾರು ೧೪ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಇದು ಸ್ಥಳೀಯ ಕಿಲ್ಲೆಯಲ್ಲಿ ೧೯೧೫ರಲ್ಲಿ ಬಾವಿಯನ್ನು ತೋಡುತ್ತಿದ್ದ ಸಂದರ್ಭದಲ್ಲಿ ದೊರೆತಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ೧೧೫ ಸೆಂ.ಮೀ. ಎತ್ತರ ಮತ್ತು ೬೫ ಸೆಂ.ಮೀ. ಅಗಲವಾಗಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಶಿರದ ಹಿಂಭಾಗದಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಏಳು ಹೆಡೆಗಳ ಸರ್ಪವಿದೆ. ಸರ್ಪದ ಮೇಲೆ ವಜ್ರಕೊಡೆಯಿದೆ. ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ತಮ್ಮ ಚತುರ್ಭುಜಗಳಲ್ಲಿ ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲವನ್ನು ಹಿಡಿದುಕೊಂಡು ಸರ್ವಾಲಂಕೃತರಾಗಿ ತ್ರಿಭಂಗಿಯಲ್ಲಿ ನಿಂತಿದ್ದಾರೆ. ಶಿಲ್ಪದ ಇಕ್ಕೆಲಗಳಲ್ಲಿ ಎರಡು ಉಬ್ಬುಸ್ತಂಭಗಳಿದ್ದು, ಇವುಗಳ ಮೇಲ್ಭಾಗದಲ್ಲಿ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಶಿಲ್ಪದ ಮೇಲ್ತುದಿಯಲ್ಲಿ ಕೀರ್ತಿಮುಖದ ಅಲಂಕಾರವಿದೆ. ಅದೇ ಬಸದಿಯಲ್ಲಿ ಕ್ರಿ.ಶ. ಸುಮಾರು ೧೪ನೆಯ ಶತಮಾನದ ಚೌವ್ವೀಸ ತೀರ್ಥಂಕರರ ಪ್ರಭಾವಳಿಯುಳ್ಳ ಆದಿನಾಥ ತೀರ್ಥಂಕರನ ಶಿಲ್ಪವಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಶಿಲ್ಪವು ೩೯ ಸೆಂ.ಮೀ. ಎತ್ತರ ಮತ್ತು ೨೫ ಸೆಂ.ಮೀ. ಅಗಲವಾಗಿದೆ. ಕಾಯೋತ್ಸರ್ಗದಲ್ಲಿರುವ ಆದಿನಾಥನ ಶಿರದ ಹಿಂಬದಿಯಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಆದಿನಾಥನ ಕಾಲುಗಳ ಪಾರ್ಶ್ವಗಳ ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥ ಮತ್ತು ಸುಪಾರ್ಶ್ವನಾಥನ ಉಬ್ಬು ಶಿಲ್ಪಗಳಿವೆ. ಶಿಲ್ಪದ ಸುತ್ತಲೂ ಇರುವ ಪರ್ಯಂಕಾಸೀನ ಇಪ್ಪತ್ತೊಂದು ತೀರ್ಥಂಕರರ ಉಬ್ಬುಶಿಲ್ಪಗಳ ಸಾಲು ಶಿಲ್ಪಕ್ಕೆ ಪ್ರಭಾವಳಿಯನ್ನು ರೂಪಿಸಿದಂತಿದೆ.

ಅದೇ ಬಸದಿಯಲ್ಲಿ ಸುಪಾರ್ಶ್ವನಾಥ ತೀರ್ಥಂಕರನ ಕ್ರಿ.ಶ. ಸುಮಾರು ೧೭ನೆಯ ಶತಮಾನದ ಶಿಲ್ಪವಿದೆ. ಕಾಯೋತ್ಸರ್ಗದಲ್ಲಿರುವ ಸುಪಾರ್ಶ್ವನಾಥನ ಶಿರದ ಮೇಲೆ ಐದು ಹೆಡೆಗಳ ಸರ್ಪವಿದೆ. ಸರ್ಪದ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಮೇಲ್ಭಾಗದಲ್ಲಿ ಕೊಡೆಯಿದೆ. ಈ ಬಸದಿಯ ಮುಂಭಾಗದಲ್ಲಿ ಶ್ರಾವಕರು ೨೦೦೬ರಲ್ಲಿ ಮಾನಸ್ತಂಭವನ್ನು ನಿರ್ಮಿಸಿದ್ದಾರೆ. ಈ ನಗರದಲ್ಲಿ ೧೯೬೨ರಲ್ಲಿ ನಿರ್ಮಾಣವಾಗಿರುವ ಪಾರ್ಶ್ವನಾಥ ಬಸದಿ ಆಧುನಿಕ ವಾಸ್ತು ಸ್ವರೂಪದಲ್ಲಿದೆ.

**ತಂಬೂರು** : ಈ ಗ್ರಾಮವು ಕಲಘಟಗಿಯಿಂದ ಉತ್ತರಕ್ಕೆ ಹತ್ತು ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಮತ್ತು ಇತರೆಡೆಯ ಕೆಲವು ಶಾಸನಗಳಲ್ಲಿ 'ತಮ್ಮಿಊರು', 'ತಮ್ಮಿಯೂರು', 'ತಾಂಬ್ರಪುರ' ಎಂದು ಉಲ್ಲೇಖಿತವಾಗಿದೆ. ಈ ಗ್ರಾಮದ ಇತಿಹಾಸವು ಮಳಖೇಡರ ರಾಷ್ಟ್ರಕೂಟ ಮನೆತನದ ಕಾಲದಿಂದ ಪ್ರಾರಂಭವಾಗುತ್ತದೆ. ಇದು ಹಲಸಿಗೆ ಪನ್ನಿರ್ಚ್ಛಾಸಿರ ಪ್ರಾಂತದ ತಮ್ಮಿಯೂರು ಪನ್ನೆರಡು ಕೆಂಪಣದ ಮುಖ್ಯ ಆಡಳಿತ ಕೇಂದ್ರವಾಗಿತ್ತು. ಅಂದು ಸಾವಿರ ಮಹಾಜನರನ್ನೊಳಗೊಂಡ ಪ್ರಸಿದ್ಧ ಅಗ್ರಹಾರವಾಗಿತ್ತು. ಗೋವೆ ಕಾದಂಬ ಮನೆತನದ ಆಳ್ವಿಕೆಯ ಕಾಲದಲ್ಲಿ ಪ್ರಮುಖ ಜೈನ ಕೇಂದ್ರವಾಗಿತ್ತು. ಸ್ಥಳೀಯ ಕೋಟೆಯ ಆವರಣದಲ್ಲಿರುವ ಕಲ್ಯಾಣದ ಚಾಳುಕ್ಯ ಮೆನತನದ ೬ನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಗೋವೆ ಕಾದಂಬ ಮನೆತನದ ಇಮ್ಮಡಿ ಜಯಕೇಶಿಯ ಕ್ರಿ.ಶ. ೧೧೨೫ರ ಶಾಸನದ ವಿವರಗಳು ಇಂತಿವೆ. ಇಮ್ಮಡಿ ಜಯಕೇಶಿಯ ಹಿರಿಯ ಸಹೋದರಿ ಪದ್ಮಲದೇವಿಯ ಪತಿಯಾದ ಹಾಕಿಬಲ್ಲದೇವನ (ಪ್ರಾಯಶಃ ಈತನು ಹಾನಗಲ್ಲ ಕಾದಂಬ ಮನೆತನದ ಮಲ್ಲಿಕಾರ್ಜುನ ಇರಬಹುದು) ಸಚಿವೋತ್ತಮರಾದ ಬ್ರಮ್ಮಚಯ್ಯ ಮತ್ತು ರಾಚಮಲ್ಲರು, ಬರ್ಮ್ಮಚಯನ ತಂದೆ ಬಲ್ಲರಾಜ, ತಾಯಿ ಮಾಳಿಯಕ್ಕ, ಗುರು ಗೋಪನಂದಿ, ಧರ್ಮಪತ್ನಿ ಭಾಗವ್ವೆ ಮತ್ತು ಪುತ್ರ ಶಾಂತಿವರ್ಮ ನಿಷ್ಠಾವಂತ ಜಿನಭಕ್ತರಾಗಿದ್ದರು. ಹಾಕಿಬಲ್ಲದೇವನು ತನ್ನ ಸಹೋದರ ಮಾವುಲಿದೇವನ ಪುಣ್ಯಾರ್ಥವಾಗಿ ಇಮ್ಮಡಿ ಜಯಕೇಶಿ ಆಳ್ವಿಕೆ ಕೈಗೊಂಡಿದ್ದ ಪಲಸಿಗೆ ಪನ್ನಿರ್ಚ್ಛಾಸಿರದ ಕಂಪಣ ವಸಾವಳೆ ಐನೂರರದ ತಂಬೂರು ಪಟ್ಟಣದಲ್ಲಿ ನಿವೇಶನವನ್ನು ಪಡೆದು ತನ್ನ ಸಚಿವರಾದ ಬ್ರಹ್ಮಚಯ್ಯ ಮತ್ತು ರಾಚಮಲ್ಲರಿಗೆ ಒಪ್ಪಿಸುತ್ತಾನೆ. ಇವರು ಈ ನಿವೇಶನದಲ್ಲಿ ಬಸದಿಯನ್ನು ನಿರ್ಮಿಸಿ ಮೂಲಸಂಘದ ಸೂರಸ್ತಗಣ ಪರಂಪರೆಯ ಮೇಘಚಂದ್ರಪಂಡಿತದೇವ ಮುನಿಯ ಪಾದಗಳನ್ನು ತೊಳೆದು, ಆ ಪ್ರಕ್ಷಾಳನ್ನು ಜಯಕೇಶಿ ಮತ್ತು ಮಾದಿರಾಜನಿಗೆ ಕೊಟ್ಟು ಅವರಿಂದ ಬಸದಿಯ ವಿವಿಧ ಧಾರ್ಮಿಕ ಚಟುವಟಿಕೆಗಳಿಗೆ ಮತ್ತು ಮುನಿಗಳ ಆಹಾರದಾನಕ್ಕೆ ಗದ್ದೆ, ಹಕ್ಕಲು ಮತ್ತು ಭೂಮಿಯನ್ನು ದಾನ ಪಡೆದರು.

ಅದೇ ಬಸದಿಗೆ ನಖರರು ಭತ್ತವನ್ನು, ತೆಲ್ಲಿಗರು ಎಣ್ಣೆಯನ್ನು, ಎಲೆಗಾರರು ಎಲೆಗಳನ್ನು ದಾನ ಮಾಡಿದರು. ಅದೇ ಬಸದಿಗೆ ದಂಡನಾಯಕ ಜಯಕೇಶಿ, ಮಾದಿರಾಜಯ್ಯ ಮತ್ತು ನರಸಿಂಹದೇವ ಜೊತೆಗೂಡಿ ತಮಗೆ ಶ್ರೇಯೋಭಿವೃದ್ಧಿಯಾಗಲೆಂದು ತೋಟವನ್ನು ದಾನ ಮಾಡಿದರು. ಅದೇ ಬಸದಿಗೆ ಕಾಲಾಂತರದಲ್ಲಿ ಗೋವೆ ಕಾದಂಬ ಮನೆತನದ ಪೆರ್ಮಾಡಿದೇವನ ಆಳ್ವಿಕೆಯ ಸಂದರ್ಭದಲ್ಲಿ ತಮ್ಮಿಯೂರು ಪನ್ನೆರಡು, ಹುಲಗೋಡು, ಮಾವಳ್ಳಿ, ಕೋಟೆಕಿರುವತ್ತಿ ಮೊದಲಾದ ಪಟ್ಟಣಗಳಲ್ಲಿ ತ್ರಿಭೋಗಾಭ್ಯಂತರದಿಂದ ಮಹಾಸಾಮಂತಗೈಯುತ್ತಿದ್ದ ರುದ್ರಯ್ಯನು ಕ್ರಿ.ಶ. ೧೧೪೫ರಲ್ಲಿ ಮನೆಗಳು ಮತ್ತು ದೇವರ ತೋಟದ ಆದಾಯವನ್ನು ನಂದಿದೇವ (ಪೂರ್ವಪದ ತ್ರುಟಿತವಾಗಿದೆ) ಮುನಿಯ ಪಾದಗಳನ್ನು ತೊಳೆದು ದಾನ ಮಾಡಿದನು. ಅದೇ ಬಸದಿಗೆ ಜನನಾಯಕನು ಕ್ರಿ.ಶ. ೧೧೪೫ರ ಡಿಸೆಂಬರ್ ೨೫ರಂದು ತೋಟದ ಬಟ್ಟೆ ಸುಂಕವನ್ನು (ಊರಿಂದೂರಿಗೆ ಸಾಗಿಸುವಾಗ ಇಲ್ಲವೇ ಸುಂಕದ ಕಟ್ಟೆಯನ್ನು ದಾಟಿಸುವಾಗ ತೋಟದ ಹುಟ್ಟುವಳಿಯ ಸರಕುಗಳ ಮೇಲೆ ವಿಧಿಸುತ್ತಿದ್ದ ಸುಂಕ) ಬಿಟ್ಟುಕೊಟ್ಟನು. ಕಾಲಾಂತರದಲ್ಲಿ ಆ ಬಸದಿಯು 'ಪದ್ಮಲದೇವಿ ಬಸದಿ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು.[೩]

ಬಸವಣ್ಣ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೧೪೦ರ ತ್ರುಟಿತ ಶಾಸನದ ವಿವರಗಳು ಇಂತಿವೆ. ನಖರ ಬಸದಿಗೆ ತೆಲ್ಲಿಗರು ಎಣ್ಣೆಯನ್ನು, ಎಲೆಗಾರರು ಎಲೆಗಳನ್ನು, ನಖರರು ಹಣವನ್ನು ದಾನ ಮಾಡಿದರು. ಆ ಬಸದಿಯ ಸ್ಥಾನಾಚಾರ್ಯನಾದ ಮುನಿಯ ವರ್ಣನೆಗಳಿವೆ. ಪದ್ಮಾವತಿ (ಪ್ರಾಯಶಃ ಇವಳು ಗೋವೆ ಕಾದಂಬ ಮನೆತನದ ಇಮ್ಮಡಿ ಜಯಕೇಶಿಯ ಹಿರಿಯ ಸಹೋದರಿ ಪದ್ಮಲದೇವಿ) ನಖರ ಬಸದಿಯ ಮುನಿಗಳ ಆಹಾರದಾನಕ್ಕೆಂದು ದಂಡನಾಯಕ ಮಾದಿರಾಜಯ್ಯ ಮತ್ತು ದಂಡನಾಯಕ ನರಸಿಂಹರಿಗೆ ಪಾದಪೂಜೆಯನ್ನು ಕೊಟ್ಟು ತುಯ್ಯಲ ಬೊಪ್ಪ ಬಸದಿಗೆ ಗದ್ದೆಯನ್ನು ದಾನ ಮಾಡಿದಳು. ಕಾಲಾಂತರದಲ್ಲಿ ಸಂಧಿವಿಗ್ರಹಿ ಬಸವಣ್ಣನು ನಖರ ಬಸದಿಯ ಗದ್ದೆ, ದಾನಶಾಲೆಗೆ ಗೋವುಗಳನ್ನು ಮತ್ತು ನಂದಾದೀಪಕ್ಕೆ ತೇಲಿಗ (ಗಾಣ) ಮನೆಯನ್ನು ದಾನ ಮಾಡಿದನು. ಅದೇ ಬಸದಿಯ ನಂದಾದೀವಿಗೆಗಾಗಿ ಸುಂಕಾಧಿಕಾರಿ ತಳಸಾರಿಗೆ ಬೀರವಣ್ಣನು ತೇಲಿಗ ಮನೆಯನ್ನು ದಾನ ಮಾಡಿದನು.[೪] ಈ ಮೇಲಿನ ಎರಡೂ ಶಾಸನಗಳಿಂದ ತಂಬೂರು ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೧-೧೨ನೆಯ ಶತಮಾನದಲ್ಲಿ ಎರಡು ಪಾರ್ಶ್ವನಾಥನ (?) ಬಸದಿಗಳು ಅಸ್ತಿತ್ವದಲ್ಲಿದ್ದವೆಂಬ ವಿಚಾರ ಖಚಿತವಾಗುತ್ತದೆ. ಅವೆರಡೂ ಬಸದಿಗಳು ಯಾವುದೋ ಒಂದು ಕಾಲಘಟ್ಟದಲ್ಲಿ ಜರುಗಿದ ರಾಜಕೀಯ ಮತ್ತು ಧಾರ್ಮಿಕ ಘರ್ಷಣೆಗಳಲ್ಲಿ ಸಮೂಲನಾಶವಾಗಿದೆ.

**ದೇವಿಕೊಪ್ಪ :** ಈ ಗ್ರಾಮವು ಕಲಘಟಗಿಯಿಂದ ನೈರುತ್ಯಕ್ಕೆ ಏಳು ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಿಂದ ಪಶ್ಚಿಮಕ್ಕೆ ಎರಡು ಕಿ.ಮೀ. ಅಂತರದಲ್ಲಿರುವ ಲಂಬಾಣಿ ತಾಂಡೆಯ ಪಶ್ಚಿಮಕ್ಕೆ ಅರಣ್ಯದಲ್ಲಿ ೨೦೦೦ರ ಅಕ್ಟೋಬರ್ ೧೦ರಂದು ಜಿನಶಾಸನ ಸ್ತಂಭ ಬೆಳಕಿಗೆ ಬಂದಿದೆ.[೫] ಈಗ ಈ ಸ್ತಂಭವನ್ನು ಸ್ಥಳೀಯ ಸರಕಾರಿ ಕಿರಿಯ ಪ್ರಾಥಮಿಕ ಕನ್ನಡ ಶಾಲೆಯ ಮುಂಭಾಗದಲ್ಲಿ ನಿಲ್ಲಿಸಲಾಗಿದೆ. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಸ್ತಂಭವು ೨೭೦ ಸೆಂ.ಮೀ. ಎತ್ತರ (ಭೂಮಿಯಲ್ಲಿ ಹೂಳಲ್ಪಟ್ಟ ಭಾಗವನ್ನು ಹೊರತುಪಡಿಸಿ) ಮತ್ತು ೫೫ ಸೆಂ.ಮೀ. ಅಗಲವಾಗಿದೆ. ಇದರ ಮೇಲ್ತುದಿಯಲ್ಲಿ ಊರ್ಧ್ವಮುಖ ವಾಗಿರುವ ಶಂಖದ ಮೇಲೆ ತೀರ್ಥಂಕರನು ಕಾಯೋತ್ಸರ್ಗ ದಲ್ಲಿರುವ ಉಬ್ಬುಶಿಲ್ಪ ಪಟ್ಟಿಕೆಯಿದೆ. ತೀರ್ಥಂಕರನ ಶಿರದ ಮೇಲೆ ಮುಕ್ಕೊಡೆಯಿದೆ. ಮುಕ್ಕೊಡೆಯ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳು ಮತ್ತು ಸೂರ್ಯ-ಚಂದ್ರನ ನಿರೂಪಣೆಗಳಿವೆ. ಶಂಖವು ೨೨ನೆಯ ತೀರ್ಥಂಕರನ ನೇಮಿನಾಥನ ಲಾಂಛನವಾಗಿದೆ. ಅಂತಾಗಿ ಇದು ನೇಮಿನಾಥ ಬಸದಿಗೆ ಸಂಬಂಧಿಸಿದಂತೆ ನಿಲ್ಲಿಸಲಾದ ಶಾಸನಸ್ತಂಭ ಎಂಬುದು ಖಚಿತವಾಗುತ್ತದೆ. ಈ ಸ್ತಂಭ ದೊರೆತ ಸ್ಥಳವನ್ನು 'ಕೋಟಿಮನಿ' ಎಂದು ಕರೆಯಲಾಗುತ್ತದೆ. ಶಿಲ್ಪಪಟ್ಟಿಕೆಯ ಕೆಳಭಾಗದಲ್ಲಿರುವ ಶಾಸನದಲ್ಲಿ ಗೋವೆ ಕಾದಂಬ ಮನೆತನದ ಮುಮ್ಮಡಿ ಚಟ್ಟಯ್ಯದೇವನು ಹುಲಿಗೇರಿಯ (ಲಕ್ಷ್ಮೇಶ್ವರ) ಸಿದ್ಧಾದಿತೀರ್ಥದ (ಸಿದ್ಧಕ್ಷೇತ್ರ) ಶಂಖದೇವರಿಗೆ (ಶಂಖಬಸದಿ) ದತ್ತಿಯನ್ನು ಕೊಟ್ಟ ಪ್ರಸ್ತಾಪವಿದೆ.[೬] ಈ ಸ್ತಂಭ ದೊರೆತ ಸ್ಥಳದಿಂದ ದಕ್ಷಿಣಕ್ಕೆ ಒಂದು ಕಿ.ಮೀ. ಅಂತರದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ವಾಸ್ತು ಅವಶೇಷಗಳು ಹರಡಿಕೊಂಡಿವೆ. ಈ ಪರಿಸರವನ್ನು 'ಬಟ್ಟಿಕೊಪ್ಪ' ಎಂದು ಕರೆಯಲಾಗುತ್ತದೆ. 'ಬಸ್ತಿಕೊಪ್ಪ' ಎಂಬುದೇ 'ಬಟ್ಟಿಕೊಪ್ಪ' ಎಂದಾಗಿದೆ. ಇಲ್ಲಿ ಹರಡಿಕೊಂಡಿರುವ ವಾಸ್ತು ಅವಶೇಷಗಳು ಸಮಕಾಲೀನ ಬಸದಿಯದ್ದಾಗಿವೆ. ಅದು ಯಾವ ತೀರ್ಥಂಕರನ ಬಸದಿ ಎಂಬುದು ಸ್ಪಷ್ಟವಿಲ್ಲ.

**ಬೊಮ್ಮಿಗಟ್ಟಿ :** ಈ ಗ್ರಾಮವು ಕಲಘಟಗಿಯಿಂದ ದಕ್ಷಿಣಕ್ಕೆ ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಚಾವಡಿಯ ಹತ್ತಿರ ಇರುವ ಗೋವೆ ಕಾದಂಬ ಮನೆತನದ ಪೆರ್ಮಾಡಿದೇವನ ಕ್ರಿ.ಶ. ೧೧೪೭-೪೮ರ ಶಾಸನದಲ್ಲಿ ಸಿಂಘಣ ಎಂಬಾತನು ಪಾರ್ಶ್ವನಾಥ (?) ಬಸದಿಯ

ಧಾರ್ಮಿಕ ಚಟುವಟಿಕೆಗಳಿಗೆ ಯಾಪನೀಯ ಸಂಘದ ಕಂಡೂರುಗಣ ಪರಂಪರೆಯ ಮುನಿಯ (ಹೆಸರು ತ್ರುಟಿತವಾಗಿದೆ) ಸನ್ನಿಧಿಯಲ್ಲಿ ದಾನ ಮಾಡಿದ ವಿವರಗಳಿವೆ.[೭] ಈ ಶಾಸನಶಿಲೆ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತಿಲ್ಲ. ಅದು ತ್ರುಟಿತವಾಗಿತ್ತಾದ್ದರಿಂದ ಸಂಪಾದಕರಿಗೆ ಹೆಚ್ಚಿನ ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಗಿಲ್ಲ. ಶಾಸನೋಕ್ತ ಬಸದಿ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ಮಲಕನಕೊಪ್ಪ :** ಈ ಗ್ರಾಮವು ಕಲಘಟಗಿಯಿಂದ ಪೂರ್ವಕ್ಕೆ ಎಂಟು ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ಕೆರೆಯ ಏರಿಯ ಮೇಲಿರುವ ಕ್ರಿ.ಶ. ೧೧೦೩ರ ಶಾಸನದಲ್ಲಿ ಕಲ್ಯಾಣದ ಚಾಳುಕ್ಯ ಮನೆತನದ ಆರನೆಯ ವಿಕ್ರಮಾದಿತ್ಯನ ಮಹಾಮಂಡಳೇಶ್ವರ ಗೋವೆಯ ಕಾದಂಬ ಮನೆತನದ ಮುಮ್ಮಡಿ ಗೂವಲದೇವನ ಆಳ್ವಿಕೆಯ ಸಂದರ್ಭದಲ್ಲಿ ಪುಲಿಗೋಡ ಬಮ್ಮಿಸೆಟ್ಟಿ ಬಸದಿಯನ್ನು ನಿರ್ಮಿಸಿ ಇದರ ಧಾರ್ಮಿಕ ಚಟುವಟಿಕೆಗಳಿಗೆ ಯಾಪನೀಯ ಸಂಘದ ಮೈಳಾಪಾನ್ವಯದ ಕಾರೆಯಗಣ ಪರಂಪರೆಯ ಶಾಂತಿವೀರ ಮುನಿಯ ಪಾದಗಳನ್ನು ತೊಳೆದು ಗದ್ದೆ, ಎರಡುನೂರು ಕಮ್ಮ ಹೂದೋಟ, ಮನೆಗಳು ಮತ್ತು ಎಣ್ಣೆಯನ್ನು ದಾನ ಮಾಡಿದ ವಿವರಗಳಿವೆ. ಈ ದಾನಗಳನ್ನು ಸ್ಥಳೀಯ ಅರುವತ್ತೊಕ್ಕಲರು, ಗಾವುಂಡರು ಮತ್ತು ವಸುರೇಶ್ವರರಿಗೆ ರಕ್ಷಿಸಲು ನಿರ್ದೇಶಿಸಲಾಗಿದೆ. ಈ ಶಾಸನದಲ್ಲಿ ಶ್ರೀವೀರಾನ್ವಯ ಮೈಳಾಪಾನ್ವಯ ಯಾಪನೀಯ ಸಂಘದ ಕಾರೆಯಗುಣ ಪರಂಪರೆಯ ಜಯಕೀರ್ತಿ, ನಾಗಚಂದ್ರದೇವ, ಕನಕಶಾಂತಿ, ಮಹೇಂದ್ರಕೀರ್ತಿ, ಮಹಾವೀರಾಚಾರ್ಯ, ಶಾಂತಿವೀರ, ಏಕವೀರ, ಮುನಿಚಂದ್ರ ಮುನಿಗಳ ಪಾಂಡಿತ್ಯ ಮತ್ತು ವಿದ್ವತ್ತಿನ ಸೊಗಸಾದ ವರ್ಣನೆಗಳಿವೆ. ಹಾಗೆಯೇ ಆ ಬಸದಿಯ ಸ್ಥಾನಾಚಾರ್ಯನಾಗಿದ್ದ ಶಾಂತಿವೀರ ಮುನಿಗೆ ಏಕ್ಕೋಟಿ ಚಕ್ರವರ್ತಿಗಳು (ಶೈವ ಧರ್ಮದ ಕಾಳಾಮುಖ ಪಂಥದ ಆಚಾರ್ಯರು) ಉಣಕಲ್ಲದ (ಇದು ಇಂದಿನ ಹುಬ್ಬಳ್ಳಿ ತಾಲ್ಲೂಕಿನಲ್ಲಿದೆ) ಉತ್ತಮವೇದ ಆಚಾರ್ಯನ ನೇತೃತ್ವದಲ್ಲಿ ಜೋಗವಟ್ಟಿಗೆಯನ್ನು (ಯೋಗಪಟ್ಟಿಕೆ) ಸಲ್ಲಿಸಿದ ಪ್ರಸ್ತಾಪವಿದೆ.[೮] ಇದರಿಂದ ಆ ಬಸದಿ ಯಾವುದೋ ಒಂದು ಕಾಲಘಟ್ಟದಲ್ಲಿ ಶೈವ ಧರ್ಮೀಯರ ಅಧೀನಕ್ಕೊಳಪಟ್ಟಿತ್ತೆಂಬ ವಿಚಾರ ಸ್ಪಷ್ಟವಾಗುತ್ತದೆ. ಪ್ರಾಯಶಃ ಸಮಕಾಲೀನ ಮತೀಯ ಘರ್ಷಣೆಗಳಲ್ಲಿ ಆ ಬಸದಿ ಸಮೂಲನಾಶವಾಗಿದೆ. ಆ ಬಸದಿಗೆ ಸಂಬಂಧಿಸಿದಂತೆ ಯಾವುದೇ ವಾಸ್ತು ಮತ್ತು ಶಿಲ್ಪಾವಶೇಷಗಳು ಇಂದು ಉಳಿದು ಬಂದಿಲ್ಲ.

**ಮಾವಳ್ಳಿ :** ಈ ಗ್ರಾಮವೆಂದು ಬೇಚರಾಕ ಗ್ರಾಮವಾಗಿದೆ. ಸ್ಥಳೀಯ ದುರ್ಗವ್ವನ ದೇವಾಲಯದ ಹತ್ತಿರ ಇರುವ ಕ್ರಿ.ಶ. ೧೧೨೫ರ ಶಾಸನದಲ್ಲಿ ಗೋವೆ ಕಾದಂಬ ಮನೆತನದ ಇಮ್ಮಡಿ ಜಯಕೇಶಿಯ ಸಹೋದರಿ ಪದ್ಮಲ ದೇವಿಯ ಪತಿಯಾದ ಮಹಾಮಂಡಳೇಶ್ವರ ಹಾಕಿಬಲ್ಲದೇವನ ಮಂತ್ರಿ ಬ್ರಮ್ಮಚಯ್ಯ ನಾಯಕನು ಮೂಲಸಂಘದ ಸೇನಗಣದ ಪೊಗರಿಗಚ್ಛ ಪರಂಪರೆಯ ಮುನಿಯ (ಹೆಸರು ತ್ರುಟಿತವಾಗಿದೆ) ಸನ್ನಿಧಿಯಲ್ಲಿ ಶಾಂತಿನಾಥ ಬಸದಿಗೆ ಭೂದಾನ ಮಾಡಿದ ನಿರೂಪಣೆಗಳಿವೆ.[೯] ಈ ಶಾಸನಶಿಲೆ ಸಂಪೂರ್ಣ ತ್ರುಟಿತವಾಗಿದೆ. ಹಾಗಾಗಿ ಹೆಚ್ಚಿನ ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಗಿಲ್ಲ. ಈ ಶಾಸನೋಕ್ತ ಬಸದಿ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಬ್ರಮ್ಮಚಯ್ಯ ನಾಯಕನು ತಂಬೂರು ಗ್ರಾಮದಲ್ಲಿಯೂ ಬಸದಿಯನ್ನು ನಿರ್ಮಿಸಿ ದಾನ ಮಾಡಿದ್ದಾನೆ.[೧೦]

**ಮುತ್ತಗಿ :** ಈ ಗ್ರಾಮವು ಕಲಘಟಗಿಯಿಂದ ಉತ್ತರಕ್ಕೆ ಹತ್ತು ಕಿ.ಮೀ. ಅಂತರದಲ್ಲಿದೆ. ಇದು ಗೋವೆ ಕಾದಂಬ ಮನೆತನದ ಆಳ್ವಿಕೆಯ ಕಾಲದಲ್ಲಿ ಪ್ರಮುಖ ಪಟ್ಟಣವಾಗಿತ್ತು. ಆ ಸಂದರ್ಭದಲ್ಲಿ ಇಲ್ಲಿ ಅನೇಕ ದೇವಾಲಯ ಮತ್ತು ಬಸದಿಗಳು ನಿರ್ಮಾಣವಾಗಿದೆ. ಈ ಗ್ರಾಮವು ಸ್ಥಳೀಯ ಶಾಸನಗಳಲ್ಲಿ 'ಮುತ್ತಗೆ' ಎಂದು ಉಲ್ಲೇಖಿತವಾಗಿದೆ. ಈ ಗ್ರಾಮದ ಪಶ್ಚಿಮಕ್ಕೆ ಹಾಳೂರದಲ್ಲಿ ೧೯೫೮ರಲ್ಲಿ ಎ.ಎನ್.ಎಂ. ವಸತಿ ನಿಲಯಗಳ ನಿರ್ಮಾಣಕ್ಕೆ ಪಾಯ ತೋಡುತ್ತಿದ್ದ ಸಂದರ್ಭದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ನೇಮಿನಾಥ ಮತ್ತು ಪಾರ್ಶ್ವನಾಥ ತೀರ್ಥಂಕರರ ಶಿಲ್ಪಗಳು ಬೆಳಕಿಗೆ ಬಂದಿವೆ.[೧೧] ಶ್ರೀಮತಿ ರೇಣುಕಮ್ಮ ಅಂಗಡಿ ಅವರು ತಮ್ಮ ಪತಿ ದಿವಂಗತ ಶ್ರೀ ರಾಮರಾವ ಅಂಗಡಿ ಅವರ ಪರೋಕ್ಷ ವಿನಯಾರ್ಥವಾಗಿ ೧೯೮೬ರಲ್ಲಿ ಬಸದಿಯನ್ನು ನಿರ್ಮಿಸಿ ಅದರಲ್ಲಿ ಈ ಎರಡೂ ಶಿಲ್ಪಗಳನ್ನು ಪ್ರತಿಷ್ಠಾಪಿಸಿದ್ದಾರೆ.

ನೇಮಿನಾಥ ತೀರ್ಥಂಕರನ ಶಿಲ್ಪವು ೧೦೫ ಸೆಂ.ಮೀ. ಎತ್ತರ ಮತ್ತು ೫೫ ಸೆಂ.ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ನೇಮಿನಾಥನ ಶಿರದ ಹಿಂಬದಿಯಲ್ಲಿ ಪ್ರಭಾಮಂಡಲವಿದ್ದು, ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಪ್ರಭಾಮಂಡಲದ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಶಿಲ್ಪದ ಇಕ್ಕೆಲಗಳಲ್ಲಿ ಎರಡು ಸ್ತಂಭಗಳಿದ್ದು, ಇವುಗಳ ಮೇಲ್ಭಾಗದಿಂದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿಯಲ್ಲಿ ಪೂರ್ಣಕಲಶ, ಶ್ರೀವತ್ಸ, ಪದ್ಮಗಳ ಅಲಂಕಾರಗಳಿವೆ. ಕಾಲುಗಳ ಇಕ್ಕೆಲಗಳಲ್ಲಿ ಸರ್ವಾಹ್ಣ

ಯಕ್ಷ ಮತ್ತು ಕೂಷ್ಮಾಂಡಿನಿ ಯಕ್ಷಿ ಸುಖಾಸನದಲ್ಲಿ ಆಸೀನರಾಗಿರುವ ಉಬ್ಬುಶಿಲ್ಪಗಳಿವೆ. ಇಬ್ಬರೂ ಚತುರ್ಭುಜ ರಾಗಿದ್ದು ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲವನ್ನು ಹಿಡಿದುಕೊಂಡಿದ್ದಾರೆ. ಕಿರೀಟಮಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕೈಗಡಗ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಈ ಶಿಲ್ಪದ ಪೀಠದ ಮೇಲಿರುವ ಶಾಸನದಲ್ಲಿ ಯಾಪನೀಯ ಸಂಘದ ಮೈಳಾಪಾನ್ವಯದ ಕಾರೆಯಗಣ ಪರಂಪರೆಯ ರವಿಚಂದ್ರದೇವ ಮುನಿಯಗುಡ್ಡ (ಶಿಷ್ಯ) ಕೂಚರ ದೋಂಬನು ತಾನು ನಿರ್ಮಿಸಿದ ಸಿಂಹ ಬಸದಿಯಲ್ಲಿ ನೇಮಿನಾಥ ತೀರ್ಥಂಕರನ ಶಿಲ್ಪವನ್ನು ಪ್ರತಿಷ್ಠಾಪಿಸಿದ ವಿವರಗಳಿವೆ.[೧೨]

ಪಾರ್ಶ್ವನಾಥ ತೀರ್ಥಂಕರನ ಶಿಲ್ಪವು ೧೩೫ ಸೆಂ.ಮೀ. ಎತ್ತರ ಮತ್ತು ೫೫ ಸೆಂ.ಮೀ. ಅಗಲವಾಗಿದೆ. ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಹಿಂಬದಿಯಲ್ಲಿ ಅಡಿಯಿಂದ ಮುಡಿಯುವರೆಗೆ ಅಂಕುಡೊಂಕಾಗಿ ಸುರುಳಿಯಾಗಿರುವ ಸರ್ಪವು ಆತನ ಶಿರದ ಮೇಲೆ ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಇದರ ಮೇಲೆ ವಜ್ರಕೊಡೆಯಿದೆ. ಶಿರದ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಶಿಲ್ಪದ ಮೇಲರ್ಧದ ಸುತ್ತಲೂ ತೋರಣದ ಪ್ರಭಾವಳಿಯಿದ್ದು, ಮೇಲ್ತುದಿಯಲ್ಲಿ ಕೀರ್ತಿಮುಖದ ಅಲಂಕಾರವಿದೆ. ಕಾಲುಗಳ ಇಕ್ಕೆಲಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸುಖಾಸನದಲ್ಲಿ ಆಸೀನರಾಗಿರುವ ಉಬ್ಬುಶಿಲ್ಪಗಳಿವೆ. ಇಬ್ಬರೂ ಚತುರ್ಭುಜರಾಗಿದ್ದು ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲವನ್ನು ಹಿಡಿದುಕೊಂಡಿದ್ದಾರೆ. ಇಬ್ಬರೂ ಧರಿಸಿರುವ ಕಿರೀಟಗಳ ಮೇಲೆ ಒಂದು ಹೆಡೆಯ ಸರ್ಪಗಳಿವೆ. ಕರ್ಣಕುಂಡಲ ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕೈಗಡಗ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಈ ಶಿಲ್ಪದ ಪೀಠದ ಮೇಲಿರುವ ಶಾಸನದಲ್ಲಿ ಯಾಪನೀಯ ಸಂಘದ ಕಾರೆಯುಗಣದ ಮೈಳಾಪಾನ್ವಯ ಪರಂಪರೆಯ ಏಕವೀರಪಂಡಿತದೇವ ಮುನಿಯ ಶಿಷ್ಯ ರವಿಚಂದ್ರದೇವ ಮುನಿಯ ಗುಡ್ಡರಾದ (ಶಿಷ್ಯರು ತರಿಯ ಬಲ್ಲಮ್ಮ ಮತ್ತು ಕೂಚರ ದೋಂಬನು ಮುತ್ತಗೆಯ ಸಿಂಹ ಬಸದಿಯಲ್ಲಿ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವನ್ನು ಪ್ರತಿಷ್ಠಾಪಿಸಿದ ಮತ್ತು ಎಕ್ಕೋಟಿ ಚಕ್ರವರ್ತಿಗಳು ಸಿಂಹ ಬಸದಿಯ ಸ್ಥಾನಾಚಾರ್ಯ ರವಿಚಂದ್ರದೇವ ಮುನಿಗೆ ಉಣಕಲ್ಲದ ಉತ್ತಮದೇವ ಆಚಾರ್ಯನ ನೇತೃತ್ವದಲ್ಲಿ ಜೋಗವಟ್ಟಿಗೆಯನ್ನು (ಯೋಗಪಟ್ಟಿಕೆ) ಸಮರ್ಪಿಸಿದ ವಿವರಗಳಿವೆ.[೧೩]

ಈ ಮೇಲಿನ ಎರಡೂ ಶಿಲ್ಪಗಳು ಮತ್ತು ಅವುಗಳ ಪೀಠಗಳ ಮೇಲಿರುವ ಶಾಸನಗಳಿಂದ ಈ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಪಾರ್ಶ್ವನಾಥ ತೀರ್ಥಂಕರನ ಬಸದಿ ಅಸ್ತಿತ್ವದಲ್ಲಿತ್ತೆಂಬ ವಿಚಾರ ಖಚಿತವಾಗುತ್ತದೆ. ಅದು 'ಸಿಂಹ ಬಸದಿ' ಎಂದು ಪ್ರಸಿದ್ಧವಾಗಿತ್ತು. ಆ ಬಸದಿ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲ ನಾಶವಾಗಿದೆ. ಪ್ರಸ್ತುತ ಶಿಲ್ಪಗಳು ದೊರೆತ ಪರಿಸರದಲ್ಲಿಯೇ ೧೯೯೪ರಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಜೈನ ಶಾಸನದ ತುಂಡು ಭಾಗ ದೊರೆತಿದೆ. ಇದನ್ನು ಸ್ಥಳೀಯ ನೇಮಿನಾಥ ಮತ್ತು ಪಾರ್ಶ್ವನಾಥ ಬಸದಿಯ ಮುಂಭಾಗದಲ್ಲಿಡಲಾಗಿದೆ. ಇದರಲ್ಲಿ ಸಿಂಹ ಬಸದಿಗೆ ದಾನ ಮಾಡಿದ ವಿವರಗಳಿದ್ದಂತೆ ತೋರುತ್ತದೆ.[೧೪]

**ಮಿಶ್ರಿಕೋಟಿ :** ಈ ಗ್ರಾಮವು ಕಲಘಟಗಿಯಿಂದ ಪಶ್ಚಿಮಕ್ಕೆ ಹದಿನೆಂಟು ಕಿ.ಮೀ. ಅಂತರದಲ್ಲಿದೆ. ಇದು ಗೋವೆ ಕದಂಬ ಮನೆತನದ ಆಳ್ವಿಕೆಯ ಕಾಲದಲ್ಲಿ ಪ್ರಮುಖ ಪಟ್ಟಣವಾಗಿತ್ತು. ಈ ಗ್ರಾಮದ ಸುತ್ತಲೂ ವಿಜಯನಗರ ಮನೆತನದ ಕಾಲದಲ್ಲಿ ನಿರ್ಮಾಣ ವಾದ ಮತ್ತು ವಿಜಾಪುರ ಆದಿಲ್‌ಷಾಹಿ ಮನೆತನದ ಕಾಲದಲ್ಲಿ ವಿಸ್ತರಿಸಲ್ಪಟ್ಟ ಮಣ್ಣಿನ ಕೋಟೆಯಿದೆ. ಗೋವೆ ಕದಂಬ ಮನೆತನದ ಆಳ್ವಿಕೆಯ ಕಾಲದಲ್ಲಿ ಅಂದರೆ ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ನಿರ್ಮಾಣವಾಗಿದ್ದ ಪಾರ್ಶ್ವನಾಥ ಬಸದಿಯು ಜೀರ್ಣವಾಗಿದ್ದ ಕಾರಣ ಅದನ್ನು ೧೯೫೮ರಲ್ಲಿ ಜೀರ್ಣೋದ್ಧಾರ ಮಾಡಲಾಗಿತ್ತು. ಇದನ್ನು ೨೦೦೬ರಲ್ಲಿ ಸಂಪೂರ್ಣವಾಗಿ ಬಿಚ್ಚಿ ನೂತನವಾಗಿ ನಿರ್ಮಿಸಲಾಗಿದೆ. ಈ ಬಸದಿಯಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಈ ಶಿಲ್ಪವು ಇದೇ ತಾಲ್ಲೂಕಿನ ಬಗಡಗೇರಿ ಗ್ರಾಮದಲ್ಲಿ ೧೯೨೦ರಲ್ಲಿ ಅಗೆಯುತ್ತಿದ್ದ ಸಂದರ್ಭದಲ್ಲಿ ದೊರೆತಿದೆ. ಆ ಗ್ರಾಮದಲ್ಲಿ ಜೈನಧರ್ಮೀಯರ ವಾಸ್ತವ್ಯವಿರದ ಕಾರಣ ಆ ಶಿಲ್ಪವನ್ನು ಈ ಗ್ರಾಮಕ್ಕೆ ತಂದು ಸ್ಥಳೀಯ ಪಾರ್ಶ್ವನಾಥ ಬಸದಿಯಲ್ಲಿ ಪ್ರತಿಷ್ಠಾಪಿಸಲಾಗಿದೆ. ಈ ಬಸದಿಯಲ್ಲಿದ್ದ ಮೂಲನಾಯಕ ಪಾರ್ಶ್ವನಾಥ ತೀರ್ಥಂಕರನ ಶಿಲ್ಪವನ್ನು ಮಹಾರಾಷ್ಟ್ರಕ್ಕೆ ಸಾಗಿಸಲಾಗಿದೆ ಎಂದು ಸ್ಥಳೀಯರು ತಿಳಿಸುತ್ತಾರೆ. ಪ್ರಸ್ತುತ ಶಿಲ್ಪವು ೧೪೫ ಸೆಂ.ಮೀ. ಎತ್ತರ ಮತ್ತು ೬೫ ಸೆಂ.ಮೀ. ಅಗಲವಾಗಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಶಿರದ ಮೇಲೆ ಏಳು ಹೆಡೆಗಳ ಸರ್ಪವಿದೆ. ಇದರ ಇಕ್ಕೆಲಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಸರ್ಪದ ಮೇಲೆ ವಜ್ರಕೊಡೆಯಿದೆ. ಪಾರ್ಶ್ವನಾಥನ ಕಾಲುಗಳ ಬಲಬದಿಯಲ್ಲಿ

ಧರಣೇಂದ್ರ ಯಕ್ಷನು ವಾಮಲಲಿತಾಸನದಲ್ಲಿ ಆಸೀನನಾಗಿದ್ದಾನೆ. ಈತನು ಚತುರ್ಭುಜನಾಗಿದ್ದು ಕೈಗಳಲ್ಲಿ ಕ್ರಮವಾಗಿ ಖಡ್ಗ, ಅಂಕುಶ, ಪಾಶ ಮತ್ತು ಗುರಾಣಿಗಳನ್ನು ಹಿಡಿದುಕೊಂಡಿದ್ದಾನೆ. ಈತನ ಶಿರದ ಮೇಲೆ ಮೂರು ಹೆಡೆಗಳ ಸರ್ಪವಿದೆ. ಪಾರ್ಶ್ವನಾಥನ ಕಾಲುಗಳ ಎಡಬದಿಯಲ್ಲಿ ಪದ್ಮಾವತಿ ಯಕ್ಷಿ ಸವ್ಯಲಲಿತಾಸನದಲ್ಲಿ ಆಸೀನಳಾಗಿದ್ದಾಳೆ. ಇವರು ಚತುರ್ಭುಜೆಯಾಗಿದ್ದು ಕೈಗಳಲ್ಲಿ ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲವನ್ನು ಹಿಡಿದುಕೊಂಡಿದ್ದಾಳೆ. ಇವಳ ಶಿರದ ಮೇಲೆ ಒಂದು ಹೆಡೆಯ ಸರ್ಪವಿದೆ. ಪಾರ್ಶ್ವನಾಥನ ಇಕ್ಕೆಲಗಳಲ್ಲಿ ಬ್ರಹ್ಮಕಾಂತ ಪ್ರಕಾರದ ಉಬ್ಬುಸ್ತಂಭಗಳಿದ್ದು ಇವುಗಳ ಮೇಲ್ಭಾಗದಿಂದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಇದೇ ಬಸದಿಯಲ್ಲಿ ಕ್ರಿ.ಶ. ಸುಮಾರು ೧೩ನೆಯ ಶತಮಾನದ ತೀರ್ಥಂಕರನ ಶಿಲ್ಪವಿದೆ. ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಶಿಲ್ಪವು ೪೭ ಸೆಂ.ಮೀ. ಎತ್ತರ ಮತ್ತು ೧೭ ಸೆಂ.ಮೀ. ಅಗಲವಾಗಿದೆ. ಕಾಯೋತ್ಸರ್ಗದಲ್ಲಿರುವ ತೀರ್ಥಂಕರನ ಕಾಲುಗಳ ಪಾರ್ಶ್ವಗಳಲ್ಲಿ ಆತನ ಯಕ್ಷ-ಯಕ್ಷಿಯ ಆಸೀನ ಉಬ್ಬುಶಿಲ್ಪಗಳಿವೆ.

**ಶೀಗಿಗಟ್ಟಿ :** ಈ ಗ್ರಾಮವು ಕಲಘಟಗಿಯಿಂದ ಉತ್ತರಕ್ಕೆ ಎಂಟು ಕಿ.ಮೀ. ಅಂತರದಲ್ಲಿದೆ. ಗ್ರಾಮದ ಪಶ್ಚಿಮಕ್ಕಿರುವ ಹಾಳೂರದಲ್ಲಿ ದಿವಂಗತ ನಿಂಗನಗೌಡ ಪಾಟೀಲ ಅವರ ಹೊಲದಲ್ಲಿ ೧೯೯೪ರಲ್ಲಿ ಅಗೆಯುತ್ತಿದ್ದ ಸಂದರ್ಭದಲ್ಲಿ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪ ದೊರೆತಿದೆ. ಈಗ ಇದು ಇತ್ತೀಚೆಗೆ ನಿರ್ಮಾಣವಾಗಿರುವ ಪಾರ್ಶ್ವನಾಥ ಬಸದಿಯಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ. ೧೨೯ ಸೆಂ.ಮೀ. ಎತ್ತರ ಮತ್ತು ೬೩ ಸೆಂ.ಮೀ. ಅಗಲವಾಗಿದೆ. ಇದು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪದ್ಮಪೀಠದ ಮೇಲೆ ಕಾಯೋತ್ಸರ್ಗದಲ್ಲಿರುವ ಪಾರ್ಶ್ವನಾಥನ ಹಿಂಬದಿಯಲ್ಲಿ ಅಡಿಯಿಂದ ಮುಡಿಯವರೆಗೆ ಅಂಕುಡೊಂಕಾಗಿ ಸುರುಳಿಯಾಗಿರುವ ಸರ್ಪವು ಆತನ ಶಿರದ ಮೇಲೆ ತನ್ನ ಏಳು ಹೆಡೆಗಳನ್ನು ಬಿಚ್ಚಿಕೊಂಡಿದೆ. ಇದರ ಮೇಲೆ ವಜ್ರಕೊಡೆಯಿದೆ. ಶಿರದ ಪಾರ್ಶ್ವಗಳಲ್ಲಿ ಹಿಡಿಸಹಿತ ಎರಡು ಚಾಮರಗಳಿವೆ. ಪಾರ್ಶ್ವನಾಥನ ಇಕ್ಕೆಲಗಳಲ್ಲಿ ಬ್ರಹ್ಮಕಾಂತ ಪ್ರಕಾರದ ಉಬ್ಬುಸ್ತಂಭಗಳಿದ್ದು ಇವುಗಳ ಮೇಲ್ಭಾಗದಿಂದ ಸುತ್ತಲೂ ಮಕರತೋರಣದ ಪ್ರಭಾವಳಿಯಿದೆ. ಶಿಲ್ಪದ ಮೇಲ್ತುದಿಯಲ್ಲಿ ಕೀರ್ತಿಮುಖದ ಅಲಂಕಾರವಿದೆ. ಪಾರ್ಶ್ವನಾಥನ ಕಾಲುಗಳ ಪಾರ್ಶ್ವಗಳಲ್ಲಿ ಧರಣೇಂದ್ರ ಯಕ್ಷ ಮತ್ತು ಪದ್ಮಾವತಿ ಯಕ್ಷಿ ಸುಖಾಸನದಲ್ಲಿ ಆಸೀನರಾಗಿದ್ದಾರೆ. ಇಬ್ಬರೂ ಚತುರ್ಭುಜರಾಗಿದ್ದು ಕ್ರಮವಾಗಿ ಪದ್ಮ, ಅಂಕುಶ, ಪಾಶ ಮತ್ತು ಫಲವನ್ನು ಹಿಡಿದುಕೊಂಡಿದ್ದಾರೆ. ಪದ್ಮಾವತಿಯ ಬಲಬದಿಯ ಕೆಳಗಿನ ಕೈ ವರದಮುದ್ರೆಯಲ್ಲಿದೆ. ಇಬ್ಬರೂ ಧರಿಸಿರುವ ಕಿರೀಟಗಳ ಮೇಲೆ ಒಂದು ಹೆಡೆಯ ಸರ್ಪಗಳಿವೆ. ಕರ್ಣಕುಂಡಲ, ಕಂಠಹಾರ, ಮಣಿಸರ, ಕೇಯೂರ, ತೋಳಬಂದಿ, ಕೈಗಡಗ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾರೆ. ಪಾದಪೀಠದ ಮೇಲಿರುವ ಶಾಸನದಲ್ಲಿ ಯಾಪನೀಯ ಸಂಘದ ಪೊನಕಲು (ಹುಬ್ಬಳ್ಳಿ ತಾಲ್ಲೂಕಿನ ಉಣಕಲ್ಲ) ವೃಕ್ಷಮೂಲಗಣದ ಕೊಲ್ಲಾಕದ ತೀರ್ಥದೊಂದಿಗೆ (ಇಂದಿನ ಆಂಧ್ರಪ್ರದೇಶದ ನಲ್ಗೊಂಡ ಜಿಲ್ಲೆಯ ಭುವನಗಿರಿ ತಾಲ್ಲೂಕಿನ ಕೊಲನುಪಾಕ) ಸಂಬಂಧ ಹೊಂದಿದ್ದ ಅಣಿಲಪುರದ (ಧಾರವಾಡ ತಾಲ್ಲೂಕಿನ ಅಳ್ನಾವರ) ಅನಂತಕೀರ್ತಿದೇವ ಮುನಿಯ ಶಿಷ್ಯರಾದ ಕಗುಲಿಯ ಬೊಮ್ಮಯ್ಯ ಮತ್ತು ನಾರಹೈಯ ಮಾಡಿಸಿದ ಬಸದಿಯ ಪ್ರತಿಮೆ ಎಂಬ ವಿವರಗಳಿವೆ.[೧೫] ಈ ಶಿಲ್ಪ ಮತ್ತು ಶಾಸನವು ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಈ ಗ್ರಾಮದಲ್ಲಿ ಪಾರ್ಶ್ವನಾಥ ತೀರ್ಥಂಕರನ ಬಸದಿ ಅಸ್ತಿತ್ವದಲ್ಲಿತ್ತೆಂಬುದನ್ನು ದೃಢಪಡಿಸುತ್ತವೆ. ಆ ಬಸದಿ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ಸಿದ್ಧನಬಾವಿ :** ಈ ಗ್ರಾಮವು ಕಲಘಟಗಿಯಿಂದ ಉತ್ತರಕ್ಕೆ ಹನ್ನೆರಡು ಕಿ.ಮೀ. ಅಂತರದಲ್ಲಿದೆ. ಸ್ಥಳೀಯ ದೊಡ್ಡ ಕೆರೆಯ ಏರಿಯ ಮೇಲಿರುವ ಗೋವೆ ಕದಂಬ ಮನೆತನದ ಪೆರ್ಮಾಡಿದೇವನ ಕ್ರಿ.ಶ. ೧೧೪೯ರ ಶಾಸನವು ಮಹಾಸಾಮಂತ ರುದ್ರಯ್ಯನು ತಮ್ಮಿಯೂರು ಪನ್ನೆರಡು ಕಂಪಣದ ಬೀರನಹಳ್ಳಿಯಲ್ಲಿ (ಸಿದ್ಧನಹಳ್ಳಿ) ಬಸದಿಯನ್ನು ನಿರ್ಮಿಸಿ ಮೂಲಸಂಘದ ಸೂರಸ್ಥಗಣದ ಚಿತ್ರಕೂಟಾನ್ವಯ ಪರಂಪರೆಯ ಗುಣನಂದಿ ಮುನಿಯ ಪಾದಗಳನ್ನು ತೊಳೆದು ಧಾರಾಪೂರ್ವಕವಾಗಿ ಮುನಿಗಳ ಆಹಾರದಾನಕ್ಕೆ ತೋಟ, ಹಕ್ಕಲು, ಭೂಮಿಯನ್ನು ದಾನ ಮಾಡಿದ ಹಾಗೂ ಅದೇ ಬಸದಿಗೆ ಕೇತಗಾವುಂಡ ಮತ್ತು ಅರುವತ್ತೊಕ್ಕಲರು ಗುಣನಂದಿ ಮುನಿಯ ಶಿಷ್ಯ ನೇಮಿಚಂದ್ರ ಮುನಿಯ ಸನ್ನಿಧಿಯಲ್ಲಿ ದಾನ ಮಾಡಿದ ವಿವರಗಳಿವೆ.[೧೬] ಈ ಶಾಸನದ ಮೇಲ್ಭಾಗದ ಶಿಲ್ಪಪಟ್ಟಿಕೆಯನ್ನು ಹೊರತುಪಡಿಸಿದರೆ ಉಳಿದ ಭಾಗವೆಲ್ಲವೂ ಒಡೆದು ಹೋಗಿದೆ. ಹಾಗಾಗಿ ಹೆಚ್ಚಿನ ವಿವರಗಳನ್ನು ಸಂಗ್ರಹಿಸಲು ಸಾಧ್ಯವಾಗಿಲ್ಲ. ಪ್ರಸ್ತುತ ಶಿಲ್ಪಪಟ್ಟಿಕೆಯಲ್ಲಿ ಬಸದಿಯ ಪ್ರತಿರೂಪದಲ್ಲಿರುವ ಮಂಟಪದಲ್ಲಿ ಪರ್ಯಂಕಾಸನದಲ್ಲಿರುವ ಪಾರ್ಶ್ವನಾಥನ ಉಬ್ಬುಶಿಲ್ಪವಿದೆ. ಅಂತಾಗಿ ಶಾಸನೋಕ್ತ ಬಸದಿ ಪಾರ್ಶ್ವನಾಥ ತೀರ್ಥಂಕರನದ್ದಾಗಿತ್ತೆಂಬುದು ಖಚಿತವಾಗುತ್ತದೆ. ಆ ಬಸದಿ

ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲ ನಾಶವಾಗಿದೆ. ಈ ಗ್ರಾಮದ ಹಳ್ಳದ ಹತ್ತಿರ ಕ್ರಿ.ಶ. ಸುಮಾರು ೧೨ನೆಯ ಶತಮಾನದ ತೀರ್ಥಂಕರನ ತ್ರುಟಿತ ಶಿಲ್ಪವಿದೆ.

**ಸೋಮನಕೊಪ್ಪ :** ಈ ಗ್ರಾಮವು ಕಲಘಟಗಿಯಿಂದ ಪೂರ್ವಕ್ಕೆ ಏಳು ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದ ಕೆರೆಯ ಹತ್ತಿರ ಕ್ರಿ.ಶ. ಸುಮಾರು ೧೨ನೆಯ ಶತಮಾನದ ತೀರ್ಥಂಕರರ ತ್ರುಟಿತ ಶಿಲ್ಪಗಳಿವೆ.

**ಸಮಾರೋಪ :** ಇದುವರೆಗಿನ ಅವಲೋಕನದಿಂದ ಕಲಘಟಗಿ ತಾಲ್ಲೂಕಿನಲ್ಲಿರುವ ಜೈನ ಶಾಸನ ಮತ್ತು ಶಿಲ್ಪಗಳು ಸಮಕಾಲೀನ ಜೈನ ವಾಸ್ತುಕಲೆ, ಶಿಲ್ಪಕಲೆ, ಮುನಿಪರಂಪರೆ ಮೊದಲಾದ ವಿಚಾರಗಳ ಅಧ್ಯಯನಕ್ಕೆ ತುಂಬಾ ಅಪರೂಪದ ಕೊಡುಗೆಗಳು ಎಂಬುದು ಸ್ಪಷ್ಟವಾಗುತ್ತದೆ. ಇಲ್ಲಿಯ ಬಹುತೇಕ ಪ್ರಾಚೀನ ಬಸದಿಗಳೆಲ್ಲವೂ ಕಾಲಾಂತರದಲ್ಲಿ ನೈಸರ್ಗಿಕ ವಿಕೋಪಗಳಿಗೆ ಮತ್ತು ಮತೀಯ ಘರ್ಷಣೆಗಳಲ್ಲಿ ಸಮೂಲನಾಶವಾಗಿವೆ. ಹಾಗಾಗಿ ಈ ಪರಿಸರದ ಪ್ರಾಚೀನ ಜೈನ ವಾಸ್ತುಕಲೆಯ ಅಧ್ಯಯನ ಅಸ್ಪಷ್ಟವಾಗಿದೆ. ಈ ಪರಿಸರದಲ್ಲಿ ಯಾಪನೀಯ ಸಂಘದ ಕಾರೆಯಗಣದ ಮೈಳಾಪಾನ್ವಯ ಪರಂಪರೆಯ ಮುನಿಗಳು ಪಾರ್ಶ್ವನಾಥ ತೀರ್ಥಂಕರನ ಬಸದಿಗಳ ನಿರ್ಮಾಣಕ್ಕೆ ಮತ್ತು ಶಿಲ್ಪಗಳ ಪ್ರತಿಷ್ಠಾಪನೆ-ಆರಾಧನೆಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಅಂತಾಗಿ ಇಲ್ಲಿ ಪಾರ್ಶ್ವನಾಥನ ಬಸದಿಗಳೇ ಅಧಿಕವಾಗಿ ಗೋಚರಿಸುತ್ತವೆ. ಕನ್ನಡ ನಾಡಿನಲ್ಲಿ ಕ್ರಿ.ಶ. ಸುಮಾರು ೧೧ನೆಯ ಶತಮಾನದಿಂದೀಚೆಗೆ ಜೈನ ಧರ್ಮದ ಇಳಿಮುಖ ಪ್ರಾರಂಭವಾದ ಸೂಚನೆ ಸಮಕಾಲೀನ ಅನೇಕ ಶಾಸನ ಮತ್ತು ಕೃತಿ-ಕಾವ್ಯಗಳಲ್ಲಿ ದೊರೆಯುತ್ತದೆ. ಹಾಗಾಗಿ ಈ ಧರ್ಮವು ಅಂದಿನಿಂದ ಶೈವ ಮತ್ತು ವೈಷ್ಣವ ಧರ್ಮಗಳ ವಿವಿಧ ಪಂಥಗಳೊಂದಿಗೆ ಹೊಂದಾಣಿಕೆ-ಒಡಂಬಡಿಕೆ ಮಾಡಿಕೊಂಡು ಮುಂದುವರೆಯುವುದು ಅನಿವಾರ್ಯವಾಯಿತು. ಜೈನಧರ್ಮೀಯರು ಶೈವ ಮತ್ತು ವೈಷ್ಣವ ಧರ್ಮೀಯರು ಪ್ರಬಲರಾಗಿದ್ದ ಗ್ರಾಮಗಳಲ್ಲಿ ಅವರ ಅನುಮತಿಯೊಂದಿಗೆ ಬಸದಿಗಳನ್ನು ನಿರ್ಮಿಸುವುದು, ಅವರಿಂದ ದಾನ-ದತ್ತಿಗಳನ್ನು ಪಡೆಯುವುದು, ಆ ಧರ್ಮಗಳ ಧಾರ್ಮಿಕ ಚಿಹ್ನೆಗಳನ್ನು ಬಸದಿಗಳಲ್ಲಿಟ್ಟುಕೊಳ್ಳುವುದು ಮೊದಲಾದ ಕ್ರಿಯೆಗಳಲ್ಲಿ ತೊಡಗಿದರು. ಶೈವ ಧರ್ಮೀಯರು ತಮ್ಮ ಅನುಮತಿಯೊಂದಿಗೆ ನಿರ್ಮಾಣವಾದ, ತಾವು ದಾನ-ದತ್ತಿಗಳನ್ನು ಕೊಡಮಾಡಿದ ಮತ್ತು ತಮ್ಮ ಅಧೀನದಲ್ಲಿದ್ದ ಬಸದಿಗಳಲ್ಲಿ ಜೋಗವಟ್ಟಿಗೆಯನ್ನಿಟ್ಟು (ಕೆಲವೊಮ್ಮೆ ನಂದಿಕೋಲು, ಶೂದ್ರಕ, ಚಕ್ರ, ತ್ರಿಶೂಲ ಇತ್ಯಾದಿ) ಆ ಬಸದಿಯನ್ನು 'ಜೋಗವಟ್ಟಿಗೆ ಜಿನಾಲಯ', 'ಎಕ್ಕೋಟಿ ಜಿನಾಲಯ' ಎಂದು ಹೆಸರಿಸುತ್ತಿದ್ದರು.[೧೭] ಆ ಪರಂಪರೆ ಕಲಘಟಗಿ ತಾಲ್ಲೂಕಿನ ಪರಿಸರದಲ್ಲಿಯೂ ರೂಢಿಯಲ್ಲಿದ್ದ ವಿಚಾರ ಮಲಕನಕೊಪ್ಪ ಮತ್ತು ಮುತ್ತಗಿಯ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ಮುತ್ತಗಿಯಲ್ಲಿ ಬಸದಿಯನ್ನು ನಿರ್ಮಿಸಿ ಶಿಲ್ಪಗಳನ್ನು ಪ್ರತಿಷ್ಠಾಪಿಸಿದ ತರಿಯ ಬಲ್ಲಮ್ಮ ಮತ್ತು ಕೂಚರ ದೋಂಬನು ಮೀನುಗಾರ ಪಂಗಡಕ್ಕೆ ಸೇರಿದವರಾಗಿದ್ದಾರೆ. ಒಂದು ಕಾಲದಲ್ಲಿ ಪರಧರ್ಮೀಯರೂ ಜೈನ ಧರ್ಮದ ವಿವಿಧ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳನ್ನು ವಿಜೃಂಭಣೆಯೊಂದನ್ನು ಕೈಗೊಂಡು ಉದಾರವಾಗಿ ದಾನ-ದತ್ತಿಗಳನ್ನು ಕೊಡುತ್ತಿದ್ದರು. ಅವರನ್ನು ಗುಡ್ಡ-ಗುಡ್ಡಿ ಎಂದು ಕರೆಯಲಾಗುತ್ತಿತ್ತು.[೧೮] ಈ ಮೇಲೆ ಗಮನಿಸಲಾದ ತೀರ್ಥಂಕರರ ಶಿಲ್ಪಗಳೆಲ್ಲವೂ ಅಂಗೋಪಾಂಗಗಳಲ್ಲಿ ನೈಜವಾಗಿ ಮೂಡಿಬಂದಿದೆ. ಈ ನಿಟ್ಟಿನಲ್ಲಿ ಸಮಕಾಲೀನ ಶಿಲ್ಪಿಗಳ ಪ್ರಯತ್ನ, ಜಾಣ್ಮೆ, ಕೌಶಲ್ಯ ಯಶಸ್ವಿಯಾಗಿದೆ. ಕಲಘಟಗಿಯ ಪಾರ್ಶ್ವನಾಥ, ಮುತ್ತಗಿಯ ಪಾರ್ಶ್ವನಾಥ, ಮಿಶ್ರಿಕೋಟಿಯ ಪಾರ್ಶ್ವನಾಥ ಮತ್ತು ಶೀಗಿಗಟ್ಟಿಯ ಪಾರ್ಶ್ವನಾಥ ತೀರ್ಥಂಕರರ ಶಿಲ್ಪಗಳು ಪಾರ್ಶ್ವನಾಥನು ಕೇವಲ ಜ್ಞಾನಕ್ಕಾಗಿ ತಪಸ್ಸಿನಲ್ಲಿ ನಿರತನಾಗಿರುವ ಪರಿಕಲ್ಪನೆಯಲ್ಲಿವೆ. ಮುತ್ತಗಿಯ ನೇಮಿನಾಥ ತೀರ್ಥಂಕರನ ಶಿಲ್ಪವು ನೇಮಿನಾಥ ತೀರ್ಥಂಕರನ ನಿರ್ವಾಣಾವಸ್ಥೆಯ ಪರಿಕಲ್ಪನೆಯಲ್ಲಿದೆ. ಬಮ್ಮಿಹಾಳ, ದೇವಿಕೊಪ್ಪ, ನೀರಸಾಗರ, ಬಾನಗಿತ್ತಿ ಗುಡಿಹಾಳ, ಶೀಗಿಗಟ್ಟಿ ಗ್ರಾಮಗಳಲ್ಲಿ ಏಳು ಹೆಡೆಗಳ ನಾಗಶಿಲ್ಪಗಳಿವೆ. ಅತೀ ಪ್ರಾಚೀನ ಕಾಲದಿಂದಲೂ ಜನಪದ ಧರ್ಮವಾಗಿ ಬೆಳೆದು ಬಂದಿರುವ ನಾಗಾರಾಧನೆಯನ್ನು ಸಾಮಾನ್ಯವಾಗಿ ಸಂತಾನ ಮತ್ತು ಸಂಪತ್ತಿನ ಅಭಿವೃದ್ಧಿ, ಕುಷ್ಠರೋಗ, ಕ್ಷಾಮ ನಿವಾರಣೆ ಮೊದಲಾದ ಉದ್ದೇಶಗಳಿಗಾಗಿ ಆಚರಿಸಲಾಗುತ್ತದೆ. ಆದರೆ ಏಳು ಹೆಡೆಗಳ ನಾಗಶಿಲ್ಪಗಳನ್ನು ಜೈನಧರ್ಮೀಯರು ಪಾರ್ಶ್ವನಾಥ ತೀರ್ಥಂಕರನ ಪ್ರತಿರೂಪದಲ್ಲಿ ಆರಾಧಿಸುತ್ತಿದ್ದಂತೆ ತೋರುತ್ತದೆ. ಈ ನಿಟ್ಟಿನಲ್ಲಿ ಸಂಶೋಧನೆಗೆ ಅವಕಾಶವಿದೆ. ಕಳೆದ ಶತಮಾನದಿಂದೀಚೆಗೆ ಅನೇಕ ಮುನಿಗಳು, ಆರ್ಯಿಕೆಯರು, ಭಟ್ಟಾರಕರು ಈ ತಾಲ್ಲೂಕಿನಲ್ಲಿ ಧರ್ಮಪ್ರಸಾರದ ಮೂಲಕ ಸಮಾಜವನ್ನು ಜಾಗೃತಗೊಳಿಸಿ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳಿಗೆ ಸ್ಫೂರ್ತಿ-ಪ್ರೇರಣೆ ಕೊಟ್ಟಿದ್ದಾರೆ. ಹಾಗಾಗಿ ಕಲಘಟಗಿಯಲ್ಲಿ ಪಾರ್ಶ್ವನಾಥ, ಬಾನಗಿತ್ತಿ ಗುಡಿಹಾಳದಲ್ಲಿ ಧರ್ಮನಾಥ, ದಾಸ್ತಿಕೊಪ್ಪದಲ್ಲಿ ಶಾಂತಿನಾಥ, ದ್ಯಾಮಾಪುರದಲ್ಲಿ ಶಾಂತಿನಾಥ, ಧುಮ್ಮವಾಡದಲ್ಲಿ ನೇಮಿನಾಥ, ಗಂಭ್ಯಾಪುರದಲ್ಲಿ ಆದಿನಾಥ, ಹಿರೇಹೊನ್ನಿಹಳ್ಳಿಯಲ್ಲಿ ಮಹಾವೀರ

ತೀರ್ಥಂಕರರ ಬಸದಿಗಳು ನಿರ್ಮಾಣವಾಗಿವೆ. ಒಟ್ಟಾರೆ ಕಲಘಟಗಿ ತಾಲ್ಲೂಕಿನ ಜೈನಾವಶೇಷಗಳು ಸಮಕಾಲೀನ ಪ್ರಾದೇಶಿಕ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಅಧ್ಯಯನಕ್ಕೆ ಅಪರೂಪದ ಆಕರಗಳಾಗಿವೆ.

## ಆಧಾರಸೂಚಿ


೧. **ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್**, ಸೂರ್ಯನಾಥ ಕಾಮತ್ (ಸಂ.), (೧೯೫೫), ಪುಟ ೩.

೨. **ಕಲಘಟಗಿ ತಾಲ್ಲೂಕು ಜೈನ ಡೈರೆಕ್ಟರಿ**, (ಮಾರ್ಚ್-೨೦೦೪), ಜೈನ ಮಿಲನ ಕಲಘಟಗಿ.

೩. ಗುರುವ ಆರ್.ಎನ್., "ತಂಬೂರ ಶಾಸನಗಳು", ಸಾಧನೆ ಸಂ. ೩/೧ (ಸೆಪ್ಟೆಂಬರ್-೧೯೭೫), ಪುಟ ೯೦-೧೦೬, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪. ಗುರುವ ಆರ್.ಎನ್., ದಿ ಕದಂಬಾಸ್ ಆಫ್ ಗೋವಾ ಆ್ಯಂಡ್ ದೇಯರ್ ಇನ್ಸ್‌ಕ್ರಿಪ್‌ಶನ್ಸ್, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ-೧೯೬೯), ಶಾಸನ ಸಂಖ್ಯೆ ೩೪, ಪುಟ ೬೦೨-೬೦೪, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. **ವಿಜಯ ಕರ್ನಾಟಕ** ದಿನಪತ್ರಿಕೆ (೧೬ ಅಕ್ಟೋಬರ್ ೨೦೦೦), ಪುಟ ೨.

೬ ಗುರುವ ಆರ್.ಎನ್., ಪೂರ್ವೋಕ್ತ, ಶಾಸನ ಸಂಖ್ಯೆ ೬೮, ಪುಟ ೭೩೦.

೭. ಧಾ. ಜಿ. ಶಾ. ಸೂ., ಕಲಘಟಗಿ ತಾಲ್ಲೂಕು, ಶಾಸನ ಸಂಖ್ಯೆ ೩೭, ಪುಟ ೨೫.

೮. ಗುರುವ ಆರ್.ಎನ್., ಪೂರ್ವೋಕ್ತ, ಶಾಸನ ಸಂಖ್ಯೆ ೧೫, ಪುಟ ೫೫೦-೫೫೩.

೯. ಧಾ.ಜಿ.ಶಾ.ಸೂ., ಪೂರ್ವೋಕ್ತ, ಶಾಸನ ಸಂಖ್ಯೆ ೪೭, ಪುಟ ೨೫.

೧೦. ಗುರುವ ಆರ್.ಎನ್., "ತಂಬೂರ ಶಾಸನಗಳು", ಪೂರ್ವೋಕ್ತ.

೧೧. ಪಾಡಿಗಾರ ಶ್ರೀನಿವಾಸ, "ಇನ್‌ಸ್ಕ್ರೈಬ್ಡ್ ಜೈನ್ ಇಮೇಜಸ್ ಫ್ರಾಮ್ ಮುತ್ತಗಿ ಡಿಸ್ಟ್ರಿಕ್ಟ್ ಧಾರವಾಡ", ಜರ್ನಲ್ ಆಫ್ ದಿ ಕರ್ನಾಟಕ ಯೂನಿವರ್ಸಿಟಿ ಸೋಶಿಯಲ್ ಸೈನ್ಸಿಸ್ ಸಂಪುಟ XXIII, ಪುಟ ೫೨-೬೧, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೨. ಅದೇ.

೧೩. ಅದೇ.

೧೪. ಅಪ್ರಕಟಿತ ಶಾಸನ.

೧೫. ಹಂಜೆ ಅಪ್ಪಣ್ಣ ಎನ್., "ಶೀಗಿಗಟ್ಟಿಯ ಪಾರ್ಶ್ವನಾಥ ತೀರ್ಥಂಕರನ ಶಿಲ್ಪ ಮತ್ತು ಪಾದಪೀಠ ಶಾಸನ", **ಅರವಂಟಿಗೆ** ಸಂಪುಟ ೧/೨ (ಸೆಪ್ಟೆಂಬರ್-೨೦೦೮), ಪುಟ ೩೨-೩೪, ಜೈನ ಅಧ್ಯಯನ ಸಂಸ್ಥೆ ಶ್ರವಣಬೆಳಗೊಳ.

೧೬. ಗುರುವ ಆರ್.ಎನ್., ದಿ ಕದಂಬಾಸ್ ಆಫ್ ಗೋವಾ ಆ್ಯಂಡ್ ದೇಯರ್ ಇನ್ಸ್‌ಕ್ರಿಫ್‌ಶನ್ಸ್, ಪೂರ್ವೋಕ್ತ, ಶಾಸನ ಸಂಖ್ಯೆ ೪೨, ಪುಟ ೬೩೪-೬೩೭.

೧೭. ಹಂಜೆ ಅಪ್ಪಣ್ಣ ಎನ್., **ಧಾರವಾಡ ಪರಿಸರದಲ್ಲಿ ಜೈನಧರ್ಮ**, (೨೦೦೮), ಪುಟ ೫೩.

೧೮. ಕಲಬುರ್ಗಿ ಎಂ.ಎಂ., "ಜೈನಧರ್ಮ : ಶಿಷ್ಯ-ಗುಡ್ಡ", **ಮಾರ್ಗ ಸಂಪುಟ ೪**, (೨೦೦೪), ಪುಟ ೧೧೯-೧೧೨.

ಡಾ. ಶ್ರೀಮತಿ ಸ್ಮಿತಾ ಸುರೇಬಾನಕರ*

# ವಾಸ್ತುಶಿಲ್ಪ ವೈಭವದ ಚಿಕ್ಕೋಡಿಯ ಕುಲಕರ್ಣಿವಾಡೆ

ಅನೇಕ ಜಮಿನ್ದಾರಿ ಮನೆತನಗಳು ರಾಜ ಮಹಾರಾಜರುಗಳ ವೈಭವಯುತ ಸಂಪತ್ತಿಗೆ, ವಿಲಾಸಮಯ ಜೀವನಶೈಲಿಗೆ ಸರಿಸಮವಾಗಿ ಬಾಳಿಬದುಕಿದ ಉದಾಹರಣೆಗಳಿಗೆ ಕೊರತೆಯಿಲ್ಲ. ಅಂತಹ ಒಂದು ಜಮಿನ್ದಾರ ಮನೆತನಕ್ಕೆ ಸೇರಿದ ಕುಲಕರ್ಣಿಯವರ ಭವ್ಯ ವಾಡೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿಯಲ್ಲಿದೆ. ಕುಲಕರ್ಣಿವಾಡೆ ಎಂದೇ ಸುತ್ತಮುತ್ತಲಿನ ಪ್ರದೇಶದಲ್ಲಿ ಪ್ರಖ್ಯಾತಿ ಪಡೆದ ಈ ವಾಡೆ ಮೂಲತಃ ವಂಟಮುರಿ ಸಂಸ್ಥಾನದ ದೇಸಾಯರಿಗೆ ಸೇರಿತ್ತು.

೧೬’೨೫ ಉತ್ತರ ಅಕ್ಷಾಂಶ ಮತ್ತು ೭೪’೩೮ ಪೂರ್ವ ರೇಖಾಂಶವಿರುವ ಚಿಕ್ಕೋಡಿ ಬೆಳಗಾವಿಯಿಂದ ೪೦ ಮೈಲಿ ಉತ್ತರಕ್ಕಿದ್ದು ತಾಲೂಕು ಕೇಂದ್ರವಾದರೂ ಇಂದು ಶೈಕ್ಷಣಿಕ ಜಿಲ್ಲೆಯ ಸ್ಥಾನಕ್ಕೇರಿದೆ. ಕೃಷ್ಣಾನದಿಯ ತಟದಿಂದ ದಕ್ಷಿಣಕ್ಕೆ ೧೦ ಮೈಲು ದೂರದಲ್ಲಿರುವ ಚಿಕ್ಕೋಡಿ ಗುಡ್ಡಗಳಿಂದ, ಕೆರೆ-ತೊರೆಯಿಂದ ಆವೃತವಾಗಿದೆ. ಚಿಕ್ಕಕೋಡಿ ಚಿಕ್ಕೋಡಿಯಾಗಿ ಜಲಮೂಲ ಸ್ಥಳನಾಮವನ್ನು ಹೊಂದಿದೆ. ಇದು ಪ್ರಸಿದ್ಧ ವಾಣಿಜ್ಯಕೇಂದ್ರವೂ ಹೌದು. ಸುಮಾರು ಕ್ರಿ.ಶ. ೧೮೯೦ರ ಸುಮಾರಿಗೆ ಇಂಗ್ಲೀಷ ಭೂಗೋಳಶಾಸ್ತ್ರಜ್ಞನಾದ ಒಗ್ಲಿಬಿ ಚಿಕ್ಕೋಡಿ ಅನೇಕ ಗೋಪುರ ಮತ್ತು ಸೌಧಗಳಿಂದಾವೃತವಾದ ನಗರವೆಂದು ಉಲ್ಲೇಖಿಸಿದ್ದಾನೆ. ಕ್ರಿ.ಶ. ೧೭೨೦ ರಲ್ಲಿ ಕ್ಯಾಪ್ಟನ್ ಮೂರ್ ಚಿಕ್ಕೋಡಿಯನ್ನು ವಿಶಾಲ ಮತ್ತು ಘನವಂತ ನಗರವೆಂದೂ, ಅನೇಕ ಅಂಗಡಿಗಳು ಮತ್ತು ಮಾರುಕಟ್ಟೆಗಳಿಂದ ಕೂಡಿತ್ತೆಂದು ಉಲ್ಲೇಖಿಸುತ್ತಾನೆ. ಕ್ಯಾಪ್ಟನ್ ಕ್ಲೂನ್ಸ್ ಇದನ್ನು ಚಿಕ್ಕೂರಿ ಎಂದು ಕರೆದು ೬೦೦ ಕ್ಕೂ ಹೆಚ್ಚು ಮನೆಗಳನ್ನು, ವಿಶಾಲವಾದ ಓಣಿಗಳನ್ನು ಮತ್ತು ಬಾವಿಗಳನ್ನು ಹೊಂದಿತ್ತೆಂದು ಹೇಳುತ್ತಾನೆ.

ವಂಟಮುರಿ ದೇಸಾಯರಿಂದ ಕುಲಕರ್ಣಿ ಮನೆತನದ ಈ ವಾಡೆಯನ್ನು ಆರ್.ಡಿ. ಎಂದೇ ಖ್ಯಾತಿಪಡೆದ ರಾಮಚಂದ್ರ ದತ್ತಾತ್ರಯ ಕುಲಕರ್ಣಿ ಎಂಬವರು (ಈ ಭಾಗದ ಪ್ರಸಿದ್ಧ ಜಮಿನ್ದಾರರು, ಶಿಕ್ಷಣತಜ್ಞರು ಮತ್ತು ದಾನಿಗಳು) ೮೦೦ ರೂಪಾಯಿಗಳಿಗೆ ಖರೀದಿಸಿದರು.

ಸಂಸ್ಕೃತಮೂಲದ 'ವಾಟವು' ಉಚ್ಚಾರದಲ್ಲಿ ಬಾಡ ಇಲ್ಲವೆ ವಾಡವೆಂದೂ, ಕನ್ನಡ ಮತ್ತು ಮರಾಠಿಯಲ್ಲಿ ಕ್ರಮವಾಗಿ ವಾಡೆ, ವಾಡಾ ಎಂದೂ ಬಳಕೆಯಾಗುತ್ತಿರುವ ಪದಗಳು. ಬಾಡ, ವಾಡಿ, ವಾಡ, ಎಂಬ ಗ್ರಾಮಸೂಚಿಯಾಗಿರುವ ಇದು ವಾಸಿಸುವ ಮನೆಯನ್ನು ಅದರಲ್ಲೂ ದೊಡ್ಡ ಮನೆಯನ್ನು ಸೂಚಿಸುತ್ತಿರಬಹುದು. ಪ್ರಾಚೀನ ಕನ್ನಡದ 'ಮಾಡ' (ಉಪ್ಪರಿಗೆ ಮನೆ) ಶಬ್ದದಿಂದ ವಾಡೆ, ರಾಜವಾಡೆ ಎಂಬ ರೂಪದಲ್ಲಿಯೂ ಬಳಕೆಯಲ್ಲಿದೆ.

ಮರಾಠಾ ಮತ್ತು ಪೇಶ್ವೆಯರ ಕಾಲದಲ್ಲಿ ಅವರ ಅಧೀನರಾದ ದೇಸಾಯಿ, ದೇಶಪಾಂಡೆ, ದೇಶಮುಖ ಜಹಗೀರದಾರರು, ಜಮಿನ್ದಾರರು, ನಾಯಕರು, ಸಂಸ್ಥಾನಿಕರು ತಮ್ಮ ವಸತಿ ಹಾಗೂ ಆಡಳಿತ ಕಾರ್ಯಗಳಿಗಾಗಿ ಕಟ್ಟಿಸಿದ ದೊಡ್ಡ ಕಟ್ಟಡಗಳೇ ವಾಡೇ, ವಾಡಾ ಎಂದು ಕರೆಯಲ್ಪಟ್ಟವು. ಉತ್ತರ ಕರ್ನಾಟಕದಲ್ಲಿ ೧೮ ಮತ್ತು ೧೯ನೆಯ ಶತಮಾನದಲ್ಲಿ ಅಧಿಕ ಪ್ರಮಾಣದಲ್ಲಿ ವಾಡೆಗಳು ನಿರ್ಮಾಣಗೊಂಡವು. ಉತ್ತರಕರ್ನಾಟಕದ ಘನವಂತ ಜಿಲ್ಲೆಗಳಲ್ಲೊಂದಾದ ಬೆಳಗಾವಿಯಲ್ಲಿ ಅನೇಕ ದೇಶಗತಿ ಮತ್ತು ಇನಾಮದಾರ ಮನೆತನಗಳಿದ್ದು (೧೨೦ ಇನಾಮದಾರಿ ಮನೆತನಗಳು ೧೯೨೨ರಲ್ಲಿ ಇದ್ದವು. ಅವುಗಳಲ್ಲಿ ಆಡಳಿತದ ಚುಕ್ಕಾಣಿ ಹಿಡಿದ ಮನೆತನಗಳು ತಮ್ಮ ನಿವಾಸ ಮತ್ತು ಆಡಳಿತಕ್ಕಾಗಿ ಅನೇಕ ಭವ್ಯಸೌಧಗಳನ್ನು ವಾಡೆಗಳನ್ನು ನಿರ್ಮಿಸಿದರು. ರಾಮದುರ್ಗ, ಕಿತ್ತೂರು, ಚಚಡಿ, ತಲ್ಲೂರು, ನೇಗಿನಾಳ, ರುದ್ರಾಪುರ, ಶಿರಸಂಗಿ, ಕಾಕತಿ, ಎಲೆಮುನವಳ್ಳಿ, ತುರುಮುರಿ ಇವೇ ಮುಂತಾದವುಗಳು.

ಚಿಕ್ಕೋಡಿಯು ದೇಶಗತಿಯ ಪ್ರಧಾನಕೇಂದ್ರ ವಾಗಿರದಿದ್ದರೂ ವಂಟಮುರಿ ದೇಸಾಯರ ಅಧೀನಕ್ಕೆ ಒಳಪಟ್ಟಿತ್ತು. ಪ್ರಸಿದ್ಧ ವಾಣಿಜ್ಯ ಕೇಂದ್ರವೂ ಮತ್ತು ವಾಸಕ್ಕೆ ಅನುಕೂಲಕರವೂ ಆದ ಉತ್ತಮ ಹವಾಗುಣ, ಹಚ್ಚಹಸಿರಿನ ಪ್ರದೇಶ ಮತ್ತು ಸಾಕಷ್ಟು ಕೆರೆ-ಬಾವಿಗಳನ್ನು ಹಳ್ಳ-ತೊರೆಗಳನ್ನು ಹೊಂದಿದ ಪ್ರದೇಶವಾದ್ದರಿಂದ ದೇಸಾಯರು ಇಲ್ಲಿ ವಾಡೆಯ

* ಇತಿಹಾಸ ವಿಭಾಗ, ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ, ಬೆಳಗಾವಿ.

ನಿರ್ಮಾಣಗೈದರು, ಇದನ್ನು ಮುಂದೆ ಕುಲಕರ್ಣಿ ಮನೆತನದವರು ಖರೀದಿಸಿದರು.

ಎರಡು ಎಕರೆ ವಿಸ್ತಾರವಾದ ಪ್ರದೇಶವನ್ನಾವರಿಸಿದ ಎರಡಂತಸ್ತಿನ ವಾಡೆ, ಅದನ್ನು ಸುತ್ತುವರೆದ ಉದ್ಯಾನವನ, ಶಿಲಾಮಂಟಪ, ಲತಾಮಂಟಪ, ಕಮಲಾಕಾರದ ಕಾರಂಜಿಯ ಮಧ್ಯೆ ಗತವೈಭವಕ್ಕೆ ಸಾಕ್ಷಿಯಂತೆ ನಿಂತಿರುವ ಕೊಳಲೂದುವ ಕೃಷ್ಣನ ನಯನ ಮನೋಹರ ವಿಗ್ರಹ-ಇವೇ ಮುಂತಾದವುಗಳು ಕಣ್ಮನ ಸೆಳೆಯುತ್ತವೆ.

ವಂಟಮುರಿ ದೇಸಾಯರ ಹಲವಾರು ವಾಡೆಗಳಲ್ಲಿ ಒಂದಾದ ಇದು ಸಾಕಷ್ಟು ವಿಸ್ತಾರವಾಗಿದೆ. ಇದು ನಿರ್ಮಾಣವಾದ ಖಚಿತವಾದ ವರ್ಷ ತಿಳಿದು ಬರುವುದಿಲ್ಲ. ಆದರೆ ಇದನ್ನು ಖರೀದಿಸಿದ ನಂತರ ಕುಲಕರ್ಣಿ ಮನೆತನದವರು ಈ ವಾಡೆಯನ್ನು ವಿಸ್ತೀರ್ಣಗೊಳಿಸಿದಾಗ, ಇದಕ್ಕೆ ಹೊಸದಾಗಿ ಪೂಜಾಗೃಹವನ್ನು ನಿರ್ಮಿಸಿದರು. ಚೆಲುವಿನ ಚಿತ್ತಾರದಿಂದ ಮತ್ತು ಸೂಕ್ಷ್ಮತೆಯನ್ನು ಅಲಂಕರಣದಿಂದ ಕೂಡಿದ ಪೂಜಾಗೃಹದ ಬಾಗಿಲವಾಡದ ಮೇಲೆ ಕ್ರಿ.ಶ. ೧೮೫೭ ಎಂಬ ಇಸ್ವಿಯನ್ನು ದಾಖಲೀಕರಿಸಲಾಗಿದೆ. ಇದರಿಂದ ಈ ವಾಡೆಯ ನಿರ್ಮಾಣ ೧೮೫೭ಕ್ಕೂ ಮೊದಲೇ ಆಗಿರಬೇಕೆಂಬುದು ಖಚಿತವಾಗುತ್ತದೆ.

ಕುಲಕರ್ಣಿವಾಡೆಯು ಪೂರ್ವಾಭಿಮುಖವಾಗಿದ್ದು ಹೇರಳ ಪ್ರಮಾಣದಲ್ಲಿ ಕಟ್ಟಿಗೆಯನ್ನು ಉಪಯೋಗಿಸಿರುವ ಈ ವಾಡೆ ಕಟ್ಟಿಗೆಯ ಅಲಂಕರಣದ ನಿರ್ಮಾಣಕ್ಕೆ ಮಾದರಿಯಾಗಿದೆ. ದೇಶಗತಿ ಸಂಸ್ಥಾನಿಕರ ವಾಡೆಗಳಲ್ಲಿ ಸದರಕಟ್ಟೆಯ ಪಕ್ಕ ಕುಳಿತುಕೊಳ್ಳುತ್ತಿದ್ದ ಕುಲಕರ್ಣಿ, ವಾಡೆಯನ್ನೇ ಖರೀದಿಸಿದ್ದು ದಿನೇ ದಿನೇ ಅಭಿವೃದ್ಧಿ ಹೊಂದಿದ ಅವರ ಆರ್ಥಿಕ ಸಮೃದ್ಧತೆಯನ್ನು ಬಿಂಬಿಸುತ್ತದೆ. ವಾಡೆಯ ಮಹಾದ್ವಾರದಿಂದ ಒಳಗೆ ಪ್ರವೇಶಿಸಿದಾಗ ಇಕ್ಕೆಲಗಳಲ್ಲಿ ಕೋಶಾಗಾರ, ನ್ಯಾಯದಕಟ್ಟೆ, ಮಜಬೂತಾದ ಬೊಕ್ಕಸ, ಸದರಕಟ್ಟೆ, ಕಂದಾಯ ವಸೂಲಿಯ ಸ್ಥಳ, ಅದರ ನೇರಕ್ಕೆ ದಾಖಲೆಗಳ ಕೋಣೆ, ಹಾಗೇ ರಾಜಾಂಗಣದ ಎಡಕ್ಕೆ ಮನೆ ಯಜಮಾನರ ವೈಯಕ್ತಿಕ ಕೋಣೆ, ಅದರ ನೇರಕ್ಕೆ ಆಯುಧ ಸಲಕರಣೆಗಳ ಕೋಣೆ ಇವೆ. ಈ ವಾಡೆಯ ಕೋಶಾಗಾರಕ್ಕೆ ಸುರಕ್ಷತೆ ಒದಗಿಸಲು ಗಟ್ಟಿ ಸರಳುಗಳಿವೆ. ಇದರ ಅಕ್ಕಪಕ್ಕದಲ್ಲಿ ಶಸ್ತ್ರಾಗಾರ, ಕಾವಲುಗಾರ ಮತ್ತು ಭಟಾರಿಗಳು ನಿಲ್ಲುವ ಸ್ಥಳಗಳಿವೆ. ಕೋಶಾಗಾರದ ಪಕ್ಕದಲ್ಲಿ ಕೋಶಾಧಿಕಾರಿ, ಲೆಕ್ಕಿಗ ಮತ್ತು ಕಂದಾಯ ಸಲ್ಲಿಸಲು ಬರುವ ಜನಗಳಿಗಾಗಿ ಕೂಡಲು ಪ್ರತ್ಯೇಕ ಸ್ಥಳಗಳಿವೆ.

ಕಟ್ಟಿಗೆ, ಗಾಜಿನ ಹಲಿಗೆ, ಅಪಾರ ಪ್ರಮಾಣದ ತೇಗದ ಮರದ ಕಟ್ಟಿಗೆಯಿಂದ ರೂಪುಗೊಂಡ ಈ ವಾಡೆ ಉಬ್ಬು ಕೆತ್ತನೆಯ ಹೊಂಗಿರಣ ಬೀರುವ ಸೂರ್ಯ, ಲತಾವಲ್ಲರಿಗಳು, ಹೂವು-ಹಣ್ಣುಗಳು ಗೋಡಂಬಿ ಹಣ್ಣುಗಳು, ಹುಲಿ-ಸಿಂಹಗಳ ನಾಜೂಕು ಕೆತ್ತನೆಯು ಮನಮೋಹಕ ಕಾಷ್ಠಶಿಲ್ಪಗಳನ್ನು ಹೊಂದಿದೆ.

ಹೆಬ್ಬಾಗಿಲು, ಪೂಜಾಗೃಹದ ಬಾಗಿಲು, ಕಿಟಕಿಗಳ ಗಾತ್ರಗಳು ಪ್ರಮಾಣಬದ್ಧವಾಗಿವೆ. ಕಮಾನಾಕಾರದ ಕಿಟಕಿಗಳು ಆ ಕಮಾನದಲ್ಲಿರುವ ಬಣ್ಣದ ಗಾಜು ಭವ್ಯವಾಗಿದೆ. ಮುಂದುವರಿದು ಹೋದರೆ ಎಡಭಾಗಕ್ಕೆ ಸುಂದರವಾದ ಪೂಜಾಗೃಹ ಎಂತಹ ನಾಸ್ತಿಕನನ್ನೂ ದೈವ ಭಕ್ತನನ್ನಾಗಿಸುತ್ತದೆ. ಸೊಗಸಾದ ಪೂಜಾ ಮಂಟಪದಲ್ಲಿರುವ ಜ್ಯೋತಿಬಾ, ವೀರಭದ್ರ ಇವೇ ಮುಂತಾದ ಲೋಹಶಿಲ್ಪಗಳು ಅಪ್ರತಿಮವಾಗಿವೆ. ಯಾವುದೇ ಜೋಡಣೆಗಳಿಲ್ಲದ ಬಾಗಿಲುವಾಡೆ ರಚನೆ, ಕಟ್ಟಿಗೆಯ ಜಾಲರಿಯ ಕೆತ್ತನೆ, ದಪ್ಪನಾದ ಎತ್ತರವುಳ್ಳ ಚೌಕಟ್ಟು, ಅದನ್ನು ಸುತ್ತುವರಿದ ಬಣ್ಣಗಳ ಸಾಲು, ಗೋಡಂಬಿಹಣ್ಣುಗಳ ಭವ್ಯವಾದ ಕೆತ್ತನೆ, ಮಧ್ಯ ಗಣಪತಿಯ ಶಿಲ್ಪ, ಬಾಗಿಲಿನ ಲಲಾಟದಲ್ಲಿ ಕೈಜೋಡಿಸಿ ನಿಂತ ಭಕ್ತರು, ಬಾಗಿಲಿಗೆ ಎದುರಾದ ಭವ್ಯಮಂಟಪ ಪ್ರಾಚೀನ ಅರ್ವಾಚೀನಗಳ ಸಂಗಮದಂತಿವೆ. ಮಂಟಪದ ಗೋಪುರದಲ್ಲಿಯು ಕಲಶ, ಇಕ್ಕೆಲಗಳಲ್ಲಿ ಬೃಹದಾಕಾರದ ನಂದಾದೀಪ, ಪೂಜಾಸಾಮಾಗ್ರಿಗಳನ್ನಿಡುವ ಸಾಧನಗಳು ದೇವನಮನಕ್ಕೆ ಅನುಕೂಲಕರವಾದ ವಾತಾವರಣ ನಿರ್ಮಿಸುತ್ತದೆ.

ಪೂಜಾಗೃಹದಿಂದ ಮುಂದುವರೆದರೆ ಇಡೀ ವಾಡೆಯ ಕೇಂದ್ರಬಿಂದು / ಹೃದಯಸ್ಥಳ ಎನಿಸುವ ೨೦ ಅಡಿ ಉದ್ದ ೧೦ ಅಡಿ ಅಗಲದ ಚೌಸಪ್ಪೆ ನಯನಮನೋಹರವಾಗಿದೆ. ಅಲಂಕೃತ ಕೆತ್ತನೆಯ ಕಾಷ್ಠಶಿಲ್ಪದ ದಕ್ಷಿಣೋತ್ತರವಾದ ಆರುಕಂಬಗಳು ಹೊರನೋಟಕ್ಕೆ ಒಂದೇ ಬಗೆ ಎನಿಸಿದರೂ ಸೂಕ್ಷ್ಮವಾಗಿ ಗಮನಿಸಿದಾಗ ಒಂದರಂತೆ ಇನ್ನೊಂದಿಲ್ಲ. ಕುಂಭಗಳು, ಶಿರೋಭಾಗದಲ್ಲಿರುವ ಕಾಷ್ಠ ಕಂಕಣಗಳು, ಚೌಕಾಕೃತಿ, ಬಳ್ಳಿ, ಗೋಡಂಬಿಹಣ್ಣುಗಳ ಅಲಂಕರಣ, ಕಂಬ ಹಾಗೂ ತೊಲೆಯ ಜೋಡಣೆಯ ಅಲಂಕೃತ ಚಾಚುಪಟ್ಟಿ, ಫಲಪುಷ್ಪಗಳು ಕಾಷ್ಠದಲ್ಲಿ ಅರಳಿನಿಂತು ಕಲಾಭಾಷೆಯನ್ನು ಸಾರಿ ಹೇಳುತ್ತವೆ. ಹಲವಾರು ಕೆತ್ತನೆಗಳ ಉಬ್ಬು ರಚನೆ, ಜಾಲರಿಯ ಕೆತ್ತನೆ ಗಿಳಿ, ಮೊಗ್ಗು, ಪುಷ್ಪ, ಮೀನು, ಕುಂಭ ಇವೇ ಮುಂತಾದವುಗಳು ೧೫೦ ವರ್ಷಗಳಿಗಿಂತ ಹಿಂದಿನ ಕಾಷ್ಠಶಿಲ್ಪದ ಕುಸುರಿನ ಕೌಶಲ್ಯದ ನಯಗಾರಿಕೆಯನ್ನು ಸಾರಿ ಹೇಳುತ್ತವೆ. ಇದಕ್ಕೆ ಹೊಂದಿಕೊಂಡು ಆಯತಾಕಾರದ ಮಾಡದಲ್ಲಿ ಗಣಪತಿ ಉತ್ಸವಕ್ಕಾಗಿ ಎಂದೇ ವಿಶೇಷವಾಗಿ ನಿರ್ಮಿಸಿದ ಚಿತ್ತಾರದ ತೂಗುಮಂಚವಿದೆ. ಇದಕ್ಕೆ

ಹೊಂದಿಕೊಂಡು ಚೌಸಪ್ಪೆ ಅಥವಾ ಚೌಕಾಕಾರದ ತೆರೆದ ಅಂಗಳವಿದ್ದು ಮಧ್ಯ ತುಳಸಿವೃಂದಾವನ ರಾರಾಜಿಸುತ್ತಿದೆ. ಇದು ವಾಸ್ತುಪರಂಪರೆಯ ಪ್ರಾಚೀನ ಮತ್ತು ಸಾಮಾನ್ಯ ಲಕ್ಷಣ. ಈ ಚೌಸಪ್ಪೆಯ ಸುತ್ತಲೂ ವಿಶ್ರಾಂತಿ ಕೊಠಡಿ, ಶಯ್ಯಾಗಾರಗಳು, ಕುದುರೆಲಾಯ, ದನಕರುವಿನ ಕೊಟ್ಟಿಗೆ, ಪಾಕಶಾಲೆ, ಪ್ರಸಾಧನ ಕೋಣೆ ಇವೇ ಮುಂತಾದವುಗಳು ಇವೆ. ವಿಶಾಲವಾದ ಅಡಿಗೆಮನೆಯಲ್ಲಿರುವ ನೆಲಮಾಳಿಗೆ ಯಿಂದ ಬೆಟ್ಟದತುದಿಗೆ ಹೋಗಿ ಸೇರುವ ಸುರಂಗ ಮಾರ್ಗವಿದೆ. ಇದು ಜನಸಾಮಾನ್ಯರು ವಾಡೆಯ ಬಗ್ಗೆ ಜನರ ರಹಸ್ಯಮಯ ಜೀವನದ ಬಗ್ಗೆ ಕಲ್ಪಿಸಿಕೊಂಡ ಊಹಾ-ಪೋಹಗಳ ಬಗ್ಗೆ ಮೌನವಾಗಿ ಸಾರುತ್ತದೆ. ಅಡುಗೆಕೋಣೆಗೆ ಹೊಂದಿಕೊಂಡು ವಿಶಾಲವಾದ ಚಿತ್ತಾರದ ಬಾವಿಯಿದೆ. ವಾಡೆಯ ಶಯ್ಯಾಗಾರಗಳು ವಿಶೇಷ ಅಲಂಕರಣವನ್ನು ಹೊಂದಿವೆ. ಲೋಹದ ತಗಡಿನ ಮೇಲ್ಛಾವಣಿ, ತೇಗದ ಭವ್ಯ ಮಂಚಗಳು, ನಿಲುವುಗನ್ನಡಿ, ಜಿಂಕೆಕೊಂಬುಗಳ ಅಲಂಕರಣ ಕುಲಕರ್ಣಿ ಕುಟುಂಬದ ಕಲಾತ್ಮಕ ಜೀವನ ಶೈಲಿಯನ್ನು ಅವರ ಕಲಾಶಕ್ತಿಯನ್ನು ಮತ್ತು ಅವರು ಹೊಂದಿದ ಭೌತಿಕ ಸಂಪತ್ತನ್ನು ಸಾರಿ ಹೇಳುತ್ತವೆ. ಇದಲ್ಲದೆ ಪುರಾತನ ಪೀಠೋಪಕರಣಗಳು, ಭಿತ್ತಿಗನ್ನಡಿ, ಕಲಾತ್ಮಕ ಪೌರಾಣಿಕ ವರ್ಣಚಿತ್ರಗಳು (ಬೇಟೆದೃಶ್ಯ, ವಿಶ್ವಾಮಿತ್ರನ ತಪೋಭಂಗ ಮುಂತಾದವುಗಳು) ಇದಲ್ಲದೇ ಬೆಲೆಬಾಳುವ ಸಾಮಾನುಗಳನ್ನಿಡಲು ನಿರ್ಮಿಸಿದ ಕಲಾತ್ಮಕ ಪೆಟ್ಟಿಗೆ, ಶಸ್ತ್ರಾಸ್ತ್ರಗಳನ್ನಿಡಲು ಮಾಡಿದ ಕಪಾಟು, ಬಂದೂಕು ಇಡುವ ಜೀರು ಗತಕಾಲದ ವೈಭವಯುತ ಜೀವನಶೈಲಿ ಮತ್ತೆ ಮತ್ತೆ ಕಣ್ಮುಂದೆ ಸುಳಿಯುತ್ತದೆ. ಸ್ನಾನಗೃಹದಲ್ಲಿ ಉಪಯೋಗಿಸಿದ ನೀಲಿಗಾಜು ಈಗಲೂ ವಾತಾವರಣಕ್ಕೆ ತಂಪು ಹುಟ್ಟಿಸುವಂತಿದೆ. ಇದು ಆಧುನಿಕ ಸ್ನಾನಗೃಹಗಳನ್ನು ನಾಚಿಸುವಂತಿದೆ. ಇಲ್ಲಿದ್ದ ವಿದೇಶಿ ಬಾತ್‌ಟಬ್ ಇಂದು ಬೆಳಗಾವಿಗೆ ಸ್ಥಳಾಂತರಗೊಂಡಿದೆ.

ಚಾಸಪ್ಪೆಯ ಬಲಬದಿಗೆ ವಾಡೆಯ ಹೆಬ್ಬಾಗಿಲಿನಿಂದ ಬಲಗೋಡೆಗೆ ಹೊಂದಿಕೊಂಡು ೪೫ ಮೆಟ್ಟಿಲುಗಳನ್ನು ಏರಿ ಹೋದರೆ ವಾಡೆಯ ಮೇಲಂತಸ್ತಿದೆ. ಇವುಗಳ ಸಾಗವಾನಿ ಕಟ್ಟಿಗೆಯ ಕಂಬಗಳು ನಯಗಾರಿಕೆಯ ಕಲೆಯಲ್ಲಿ ವಿಶೇಷವಾಗಿ ರೂಪುಗೊಂಡಿವೆ. ಮೇಲೆ ಕಮಾನಿನಿಂದ ಆವೃತವಾದ ಚಿಕ್ಕ ಕೋಣೆಯಿದ್ದು ಇಲ್ಲಿ ಕುಳಿತರೆ ೨-೩ ಕಿ.ಮಿ. ದೂರದವರೆಗಿನ ದೃಶ್ಯ ಗೋಚರಿಸುತ್ತದೆ. ಇದಕ್ಕೆ ಹೊಂದಿಕೊಂಡು ಸಂಗೀತ, ನೃತ್ಯ ಗಾಯನ ಇದೇ ಮುಂತಾದ ಕಲೆಗಳಿಗೆ ವಾಡೆಯಲ್ಲಿ ಪ್ರೋತ್ಸಾಹ ಪೋಷಣೆ ಇದ್ದುದನ್ನು ಬಿಂಬಿಸುವ ಬಣ್ಣ ಬಣ್ಣದ ಬೆಲ್ಜಿಯಂ ಗಾಜಿನ ಹೊಂದಾಣಿಕೆ ಇರುವ ೩೦ ಅಡಿ ಉದ್ದ ಮತ್ತು ೧೫ ಅಡಿ ಅಗಲವಿರುವ ಸಭಾಗೃಹವಿದೆ. ತೇಗದ ಮರದ ಸೊಗಸಾದ ಕೆತ್ತನೆಯು ಮರದ ಬಳ್ಳಿಗಳ ತೂಗದೀಪಗಳ ಅಲಂಕರಣ ಸಂಗೀತ ಸಭೆ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಸಹಜ ವಾತಾವರಣ ರೂಪಿಸುತ್ತದೆ. ಇದರ ಬಾಗಿಲು ತೆಗೆದು ಒಳಪ್ರವೇಶಿಸಿದರೆ ಕಲಾಲೋಕ ಹೊಕ್ಕಂತಾಗಿ ಗತಕಾಲದ ಚಿತ್ರ ಮನಃಪಟಲದ ಮೇಲೆ ಮೂಡುತ್ತದೆ.

ವಾಡೆಗೆ ಸಂಬಂಧಪಟ್ಟ ಪೀಠೋಪಕರಣಗಳು, ಕಛೇರಿ ನಡೆಸುವಾಗ ಉಪಯೋಗಿಸಿದ ಬೃಹದಾಕಾರದ ಕುರ್ಚಿ, ಟೇಬಲ್, ಬಾಕ್, ಮುದ್ರೆಗಳು, ಮಜಬೂತಾದ ಅಲಮೇರ, ಚೆಲ್ಲಾಪಿಲ್ಲಿಯಾಗಿ ಬಿದ್ದ ಮೋಡಿ ಭಾಷೆಯ ಕಂದಾಯ ಪತ್ರಗಳು, ಮೊಗಸಾಲೆಯ ಗೋಡೆಗೆ ತೂಗುಹಾಕಿದ ಪೇಟೆಯ ರೋಲ್ಸರಾಯ ಕಾರಿನೆದುರು ಯುರೋಪಿನಿಂದ ಅಧಿಕಾರಿಗಳ ಜೊತೆ ತೆಗೆಸಿಕೊಂಡ ಭಾವಚಿತ್ರಗಳು, ಆರ್.ಡಿ. ಹೈಸ್ಕೂಲು ಉದ್ಘಾಟನೆಯ ಭಾವಚಿತ್ರ – ಇವೇ ಮುಂತಾದವುಗಳು ಅವರ ಹವ್ಯಾಸ, ಜೀವನಮಟ್ಟ ಮತ್ತು ಸಾಮಾಜಿಕ ಚಟುವಟಿಕೆಗಳು ಪ್ರತಿಬಿಂಬಿಸುತ್ತವೆ.

ವಯೋವೃದ್ಧ ನೌಕರ ಶಂಕರ ಕೂಡಲ, ಈ ವಾಡೆಯ ಕಾವಲು/ಮೇಲ್ವಿಚಾರಣೆ ಮಾಡುತ್ತಾನೆ. ಮೂರು ತಲೆಮಾರಿನಿಂದ ಕುಲಕರ್ಣಿ ಕುಟುಂಬದ ಬಂಟರಾಗಿ ಈತನ ಕುಟುಂಬದವರು ಸೇವೆ ಸಲ್ಲಿಸಿದ್ದಾರೆ.

೧೯ನೆಯ ಶತಮಾನದ ಪ್ರಥಮಾರ್ಧದಲ್ಲಿ ನಿರ್ಮಾಣವಾದ ಈ ವಾಡೆಯ ನಿರ್ಮಾಣಕ್ಕೆ ಕರಿಕಲ್ಲು, ಗಚ್ಚು ಸಾಗವಾನಿ ಕಟ್ಟಿಗೆ ಡಂಚುಗಳನ್ನು ಯಥೇಚ್ಛವಾಗಿ ಉಪಯೋಗಿಸಲಾಗಿದೆ. ಪಾಡೇದ ಮತ್ತು ಹೆದರ ಕಲ್ಲನ್ನು ಈ ವಾಡೆಯ ನಿರ್ಮಾಣ ವಿನ್ಯಾಸದಲ್ಲಿ ಬಳಸಲಾಗಿದೆ. ಈ ವಾಡೆಯ ನಿರ್ಮಾಣ ನುರಿತ ರಚನಕಾರರು, ವಾಸ್ತುಶಿಲ್ಪಿ, ಅಭಿಯಂತರರಿಂದ ಆಗಿತ್ತೆಂಬುದು ನಿಸ್ಸಂಶಯ. ಕಲ್ಪುಟಿಕನ ಜಾಣ್ಮೆ, ನಿರ್ಮಿಸಿದವರ ಭೌತಿಕ ಸಾಮರ್ಥ್ಯ, ಪ್ರತಿಷ್ಠೆ, ಶಾಸ್ತ್ರಬದ್ಧತೆ ಮತ್ತು ಕಲಾತ್ಮಕತೆಯ ಪ್ರತೀಕವೇ ಈ ವಾಡೆ. ವಾಡೆಯ ಮೇಲ್ಭಾಗದಲ್ಲಿರುವ ಕೆಂಪು ಹಂಚಿನ ಹೊದಿಕೆಯ ಗೋಪುರಗಳು, ಕಿಟಕಿಗಳು, ಮಾಡಗಳು ಕಮಾನುಗಳು, ಇಂಡೊ-ಸಾರ್ಸೆನಿಕ್ ಮಾದರಿಯ ವಾಸ್ತುಶಿಲ್ಪವನ್ನು ಹೊಂದಿದೆ. ಇವುಗಳ ನಯ, ನುಣುಪು, ಚಿತ್ತಾರಗಳು ಮನಮೋಹಕವಾಗಿವೆ. ಕಾಲಾಂತರದಿಂದ ವಾಡೆಯು ಶಿಥಿಲಗೊಂಡಿದ್ದು ತನ್ನ ಮಹತ್ವವನ್ನು ಕಳೆದುಕೊಂಡಿದೆ. ಇದು ಬದುಕಿನ ಏರಿಳಿತದ ಸಂದೇಶ ನೀಡುತ್ತದೆ. ಅಲ್ಲದೇ ರಾಜತ್ವ ಪದ್ಧತಿಯ, ಭಾರತೀಯ ಜಮಿನ್ದಾರಿ ಪದ್ಧತಿಯ ಮೇಲೆ ಬೆಳಕು ಚೆಲ್ಲುತ್ತದೆ. ಮರ್ಮದೊಳು ನೀಡುವಂತಹ

ಬದುಕಿನ ತತ್ವವನ್ನು ಜೀವನ ಮೌಲ್ಯವನ್ನು ಸಾರಿಹೇಳುತ್ತದೆ. ವಾಡೆಯ ಆಡಳಿತಕ್ಕೆ ಸಹಾಯಕ ಅಧಿಕಾರಿಗಳಾದ ಕುಲಕರ್ಣಿ ಕಂದಾಯ ವಸೂಲಿ, ವ್ಯಾಜ್ಯ ಬಗೆಹರಿಸುವಿಕೆ, ಗ್ರಾಮದ ಕಂದಾಯ ದಾಖಲೆ ಇಡುವಿಕೆ– ಇವೆ ಮುಂತಾದವುಗಳ ನಿರ್ವಹಣೆಗೈಯುತ್ತಿದ್ದ ಕುಲಕರ್ಣಿಗಳು ದೇಸಾಯರ ವಾಡೆಯುನ್ನು ಖರೀದಿಸಿ ಅವರ ಜೀವನ ಶೈಲಿಗೆ ಸರಿಸಮನಾಗಿ ಬಾಳಿಬದುಕಿದ್ದು ಆಗ ಬದಲಾವಣೆ ಹೊಂದಿದ ಸಮಾಜೋ–ಆರ್ಥಿಕ ಸ್ಥಿತಿ–ಗತಿಗಳ ಮೇಲೆ ಬೆಳಕು ಬೀರುತ್ತದೆ.

ಶ್ರೀ ವಿಜಯ ಕುಲಕರ್ಣಿ, ವಾಡೆಯ ಅಳಿಯಂದಿರು. ಶ್ರೀಮತಿ ಪುಷ್ಪಾ ಮಗಳು. ಈ ವಾಡೆ ಎರಡು ಭಾಗವಾಗಿದ್ದು ಒಂದು ಭಾಗದಲ್ಲಿ ಶಿರೀಷ ಕುಲಕರ್ಣಿ (ವಾಡೆಯ ಮಗ) ವಾಸವಾಗಿದ್ದಾರೆ. ಇನ್ನೊಂದು ಭಾಗ ಖಾಲಿಯಿದೆ. ವಾಡೆಯ ಮೊಮ್ಮಗನಾದ ಮತ್ತು ಖ್ಯಾತ ವಕೀಲರೂ ಆದ ಶ್ರೀ ರಾಜನ ದೇಶಪಾಂಡೆಯವರಿಗೆ ಈ ವಾಡೆ ಬಿಸಿ ತುಪ್ಪದಂತಿದ್ದು ನುಂಗಲೂ ಆಗದ ಉಗುಳಲೂ ಆಗದ ಪರಿಸ್ಥಿತಿ. ಹೀಗೆಯೇ ಬಿಟ್ಟರೆ ನಿಧಾನವಾಗಿ ಅವನತಿಯ ಹಾದಿಯತ್ತ ಸಾಗಿದ ವಾಡೆ ಕಾಲದ ಪ್ರವಾಹಕ್ಕೆ ಸಿಲುಕಿ ಕೃಷ್ಣಾರ್ಪಣ ಆಗುವುದರಲ್ಲಿ ಸಂದೇಹವಿಲ್ಲ. ವಾಡೆಗಳು ಬರೀ ಕಟ್ಟಡಗಳಲ್ಲ. ಅವು ಸಮಕಾಲೀನ ಮೌಲ್ಯಗಳು ಎಂಬದನ್ನು ಚಿಕ್ಕೋಡಿ ಕುಲಕರ್ಣಿ ವಾಡೆ ಸಿದ್ಧಪಡಿಸುತ್ತದೆ. ಒಟ್ಟಿನಲ್ಲಿ ಬೆಳಗಾವಿ ಜಿಲ್ಲೆಯ ವಾಸ್ತುಶಿಲ್ಪ ಪರಂಪರೆಯನ್ನು ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಅದ್ಭುತ ಪಾರಂಪರಿಕ ಕಟ್ಟಡವಾದ ಚಿಕ್ಕೋಡಿಯ ಕುಲಕರ್ಣಿವಾಡೆ tangible heritage (ಗೋಚರಿಸುವ ಪರಂಪರೆಗೆ) ಹಿಡಿದ ಕೈಗನ್ನಡಿಯಂತಿದೆ.

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ಚಿಕ್ಕೋಡಿ ವಾಡೆಯನ್ನು ಸಂದರ್ಶಿಸಿ ಕೈಗೊಂಡ ಕ್ಷೇತ್ರಕಾರ್ಯ.

೨. ಕುಲಕರ್ಣಿ ಮನೆತನದ ವಾಡೆಯ ವಾರಸುದಾರರೊಂದಿಗೆ ನಡೆಸಿದ ಸಂದರ್ಶನ.

೩. ಡಾ. ಸೀಗಿಹಳ್ಳಿ ಬಾಳಣ್ಣ (ಸಂ) ಬೆಳಗಾವಿ ಜಿಲ್ಲೆಯ ವೀರಶೈವ ದೇಶಗತಿಗಳು.

೪. ಡಾ. ಸಂತೋಷ ಹಾನಗಲ್ಲ, **ಬೆಳಗಾವಿ ಜಿಲ್ಲೆಯ ಲಿಂಗಾಯತ ವಾಡೆಗಳು**, ಕಿತ್ತೂರು, ೨೦೦೯.

೫. ಬ್ರಿಟಿಷ್ ಕಲೆಕ್ಟರ್ ಶ್ರೀ ಜಿ.ಎಲ್. ಮ್ಯಾಕ್ ಗ್ರೇಗಾರ್ ೧೯೨೨ರಲ್ಲಿ ತಯಾರಿಸಿದ ಬೆಳಗಾವಿ ಜಿಲ್ಲೆಯ ಇನಾಂದಾರರ ಯಾದಿ.

ಡಾ. ಪಿ.ಎನ್. ನರಸಿಂಹಮೂರ್ತಿ*

# ಒಂದನೆಯ ಕುಲಶೇಖರನ ನಾರಾವಿ ಶಾಸನ

ಶೀಘ್ರ ಗತಿಯಲ್ಲಿ ಬೆಳೆಯುತ್ತಿರುವ ಪುಟ್ಟ ಗ್ರಾಮ ನಾರಾವಿ. ಪಶ್ಚಿಮ ಘಟ್ಟಗಳ ಬುಡದಲ್ಲಿ ಹರಿಯುವ ಪುಟ್ಟ ಹೊಳೆಯೊಂದರ ದಕ್ಷಿಣ ದಂಡೆಯ ಮೇಲಿದೆ ಈ ಗ್ರಾಮ. ಈ ಹೊಳೆಯ ಉತ್ತರ ದಂಡೆಯ ಮೇಲಿದೆ ಈ ಕುಗ್ರಾಮ. ಬಹಳ ಕಾಲದವರೆಗೆ ನಾರಾವಿ ಕಾರ್ಕಳ ತಾಲೂಕಿನೊಳಗಿತ್ತು. ನಂತರ ೧೯೫೪ರಲ್ಲಿ ಸೃಷ್ಟಿಯಾದ ಬೆಳ್ತಂಗಡಿ ತಾಲೂಕಿಗೆ ಇದು ಸೇರಿತು. ಈ ಕುಗ್ರಾಮ ಕಾರ್ಕಳ ತಾಲೂಕಿನಲ್ಲೇ ಉಳಿದಿದೆ. ಜಿಲ್ಲೆ ವಿಭಜನೆಯಾದ ಮೇಲೆ ಕಾರ್ಕಳ ಉಡುಪಿ ಜಿಲ್ಲೆಗೆ ಸೇರಿದರೆ ಬೆಳ್ತಂಗಡಿ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿದೆ.

ನಾರಾವಿ ಹೊಳೆಯ ದಂಡೆಯ ಮೆಲೆ ಪ್ರಾಚೀನ ಶಾಂತಿನಾಥ ಬಸದಿ ಇತ್ತು. ಈಗ ಇದು ಕೇವಲ ಸ್ಮಾರಕವಾಗಿದೆ. ಇಲ್ಲಿದ್ದ ಶಾಂತಿನಾಥ ಜಿನ ವಿಗ್ರಹವನ್ನು ಮುಖ್ಯ ರಸ್ತೆಯ ದಕ್ಷಿಣ ಭಾಗದಲ್ಲಿ ಪುನರ್ ನಿರ್ಮಾಣಗೊಂಡಿರುವ ಬಸದಿ ಸಮುಚ್ಚಯದ ಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿದೆ. ಈ ಮಾರ್ಪಾಡಿಗೆ ಮೊದಲು ಬಸದಿಯ ಅಧ್ಯಯನ ಕೈಗೊಂಡಾಗ ಇದರ ಪ್ರಾಕಾರದೊಳಗಿದ್ದ ಕ್ಷೇತ್ರಪಾಲನ ಕಲ್ಲು ನನ್ನ ಗಮನಸೆಳೆಯಿತು. ಅದನ್ನು ಪರಿಶೀಲಿಸಿದಾಗ ಅದರಲ್ಲಿ ಬರಹ ಇದ್ದುದ ಕಂಡುಬಂತು. ಕಲ್ಲನ್ನು ಶುದ್ಧಗೊಳಿಸುವ ಕಾರ್ಯ ಕೈಗೊಂಡಾಗ ಕಲ್ಲಿನ ಎರಡು ಬದಿಗಳಲ್ಲಿ ಬರಹ ಇದ್ದುದು ಗೋಚರಿಸಿತು. ಅದರ ಪಡಿಯಚ್ಚು ತೆಗೆದು ಓದಿದಾಗ ಆಳುಪರ ಹೊಸ ಶಾಸನವೊಂದು ಬೆಳಕಿಗೆ ಬಂತು. ಇದು ಒಂದನೆಯ ಕುಲಶೇಖರನದಾಗಿದ್ದು ಅದರ ಪರಿಚಯ ಇಲ್ಲಿದೆ.

ಶಾಸನದ ಪಡಿಯಚ್ಚು ತೆಗೆಯುವಾಗ ಬಸದಿಯ ಇಂದ್ರ (ಅರ್ಚಕ) ರಲ್ಲಿ ಇದರ ಬಗ್ಗೆ ಮಾಹಿತಿ ಕೇಳಿದೆ. ಆಗ ತಿಳಿಯಿತು, ಹೀಗೆ ಇಲ್ಲಿದ್ದ ಕಲ್ಲು ಹಾಳಾದಾಗ ಹೊಳೆಯ ಆಚೆ (ಉತ್ತರ) ಭಾಗದಲ್ಲಿದ್ದ ಈ ಕಲ್ಲನ್ನು ತಂದು ನೆಟ್ಟಿರುವುದು ಎಂದು. ಹೊಳೆಯ ಆಚೆಗಿರುವುದು ಈ ಕುಗ್ರಾಮ. ಈಚೆ ನಾರಾವಿ. ಆ ವೇಳೆಗಾಗಲೆ ಈ ಕುಗ್ರಾಮದಲ್ಲಿ ಎರಡು ಶಾಸನಗಳನ್ನು ನಾನು ಪತ್ತೆ ಮಾಡಿದ್ದೆ.[೧] ಹಾಗಾಗಿ ಇದು ಮೂರನೆಯದಾಯಿತು. ಆದರೆ ಪ್ರತಿ ಮಾಡುವ ಕಾಲಕ್ಕೆ ಇದು ಇದ್ದುದು ನಾರಾವಿಯಲ್ಲಿ. ಈ ಕಾರಣದಿಂದ ಇದು ಬೆಳ್ತಂಗಡಿ ತಾಲ್ಲೂಕಿಗೆ ಸೇರಿತು.

ಆ ವೇಳೆಗೆ ಬೆಳ್ತಂಗಡಿ ತಾಲ್ಲೂಕಿನಲ್ಲಿ ಒಂದು ಪ್ರಾಚೀನ ಆಳುಪ ಶಾಸನ ದೊರೆತಿದ್ದು ಅದು ವೇಣೂರಿನ ಮಹಾಲಿಂಗೇಶ್ವರ ದೇವಾಲಯದಲ್ಲಿದೆ. ಈ ಶಾಸನ ನೆಲದೊಳಗೆ ಸೇರಿದ್ದ ಕಾರಣ ಪೂರ್ಣ ಓದಲಾಗಿಲ್ಲ.[೨] ಈಗ ಈ ಕಲ್ಲು ಅಲ್ಲಿ ಕಾಣುವುದೇ ಇಲ್ಲ. ಇದರಿಂದ ಅಮೂಲ್ಯ ದಾಖಲೆಯೊಂದು ಶಾಶ್ವತವಾಗಿ ನಷ್ಟವಾಗಿದೆ. ವೇಣೂರು ಸಹ ಹಿಂದೆ ಕಾರ್ಕಳ ತಾಲ್ಲೂಕಿನ ಭಾಗವೇ ಆಗಿತ್ತು. ಈ ದೃಷ್ಟಿಯಲ್ಲಿ ಇಲ್ಲಿ ದೊರೆತಿರುವ ಆಳುಪ ಶಾಸನಗಳು ಹಿಂದಣ ಕಾರ್ಕಳ ತಾಲ್ಲೂಕಿನವೇ ಆಗಿತ್ತು.

ವೇಣೂರಿನ ಶಾಸನ ಕ್ರಿ.ಶ. ೯೬೭ಕ್ಕೆ ಸೇರಿದ್ದು ಇದರಲ್ಲಿ ಆಳುಪ ರಾಜನ ಹೆಸರಿಲ್ಲ. ಆದರೆ ಇದು ವಿಶಿಷ್ಟ ರೀತಿಯ ಆಳುಪ ಬಿರುದುಗಳನ್ನು ತಿಳಿಸುತ್ತದೆ. ಅದೆಂದರೆ– "ಮಿನಾಲಾಞ್ಛ ನೋ ಪೇತ ಸತ್ಯ ಶೌಚಾಚಾರ ನಯ ವಿನಯ ವೀರ ಲಕ್ಷ್ಮೀ ವಾಸ ವಕ್ಷಸ್ಥಳ ಭೃತ್ಯ ಚಿನ್ತಾಮಣಿ"[೩] ಇದಕ್ಕೆ ಮೊದಲು "ಸ್ವಸ್ತ್ಯಾ(ಂಡ) ವಿಭೂತ ವಿಸ್ಮಿತ ಪಿತಾಮಹಾ ಲೋಕನ ಸಂಬರ್ಧಿತ ಸಕಳ ಕೂಳಾಭಿಮಾನ" ಎಂದಿದೆ[೪]. ಇದು ಆಳುಪರ ಬಿರುದಾವಳಿಯೇ ಆದುದರಿಂದ ಇದರಲ್ಲಿರುವ ತೇದಿ ವಿವರಗಳ ಆಧಾರದಲ್ಲಿ ಶಾಸನ ಕುಂದವರ್ಮನ ಕಾಲದ್ದು ಎಂದು ನಿರ್ಧರಿಸಲಾಗಿದೆ[೫]. ಪ್ರಸ್ತುತ ದೊರೆತಿರುವ ನಾರಾವಿ ಶಾಸನ ವೇಣೂರಿನ ಶಾಸನ ಕಾಲಕ್ಕೆ ಇಪ್ಪತ್ತಮೂರು ದಶಕಗಳ ನಂತರದ್ದು. ಹಾಗಾಗಿ ಇಲ್ಲಿರುವುದು ಹೊಸ ಕಾಲದ ಹೊಸ ಮಾಹಿತಿ.

ನಾರಾವಿ ಶಾಸನದಲ್ಲಿ ಒಟ್ಟು ೩೧ ಸಾಲುಗಳ ಬರಹ ಇದ್ದು ಮುಂಭಾಗದಲ್ಲಿ ೨೧ ಮತ್ತು ಹಿಂಭಾಗದಲ್ಲಿ ೧೦ ಸಾಲುಗಳಿವೆ. ಇದರ ಲಿಪಿ ಮತ್ತು ಭಾಷೆ ಕನ್ನಡ. ಅಕ್ಷರ ಸ್ವಲ್ಪ ಮಾಸಿರುವ ಈ ಶಾಸನದಲ್ಲಿ ಶಕವರ್ಷದ ಉಲ್ಲೇಖ ಇಲ್ಲ. ಕೇವಲ "ರೌದ್ರಿ ಸಂವತ್ಸರದ ಧನುಮಾಸ ಮೊದಲಾಗಿ ಎಂದಷ್ಟೇ ಇದೆ. ಲಿಪಿ ಮತ್ತು ಶಾಸನ ಉಲ್ಲೇಖಿಸುವ ರಾಜನ

* 'ಗುರುಕೃಪ', # ೨೦೩೧, ೧೦ನೇ ಕ್ರಾಸ್, ಕಲ್ಲಹಳ್ಳಿ, ವಿ.ವಿ. ನಗರ, ಮಂಡ್ಯ.

ಆಳ್ವಿಕೆ ಆಧಾರದಲ್ಲಿ ರೌದ್ರಿ ಸಂವತ್ಸರವನ್ನು ಶಕವರ್ಷ ೧೧೨೨ಕ್ಕೆ ಸಮೀಕರಿಸಬಹುದು. ಇದರ ಆಧಾರದಲ್ಲಿ ಇರುವ ತೇದಿ ವಿವರವನ್ನು ಕ್ರಿ.ಶ. ೧೨೦೦ ಡಿಸೆಂಬರ್‌ಗೆ ಸೇರಿಸಬಹುದು.

## ಕುಲಶೇಖರನ ಆಳ್ವಿಕೆ

ಶಾಸನ ಪ್ರಾರಂಭದಲ್ಲೇ "ವೀರಕುಲಶೇಖರ ದಾಳ್ವೇಂದ್ರ ದೇವ"ನ ಆಳ್ವಿಕೆಯುನ್ನು ಉಲ್ಲೇಖಿಸಿದೆ. ಆಳುಪ ವಂಶಾವಳಿಯಲ್ಲಿ ಈತ ಒಂದನೆಯ ಕುಲಶೇಖರ[೬]. ಈ ರಾಜನ ಅತ್ಯಂತ ಪ್ರಾಚೀನ ಶಾಸನ ಕುಂದಾಪುರ ತಾಲ್ಲೂಕಿನ ಕೂರ್ಸಿಯಲ್ಲಿ ದೊರೆತಿದೆ[೭]. ಕ್ರಿ.ಶ. ೧೧೬೨ಕ್ಕೆ ಸೇರಿದ ಈ ಶಾಸನದಲ್ಲಿ ರಾಜನನ್ನು "ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಸೋಮಕುಳ ತಿಳಕ ಪಾಣ್ಡ್ಯ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕರಪ್ಪ ಶ್ರೀ ಮತ್ಪಾಂಡ್ಯ ಚಕ್ರವರ್ತಿ" ಎಂದು ಉಲ್ಲೇಖಿಸಿದೆ[೮]. ಕೂರ್ಸಿ ಶಾಸನ ಒಂದು ಹೊಸ ಸೇರ್ಪಡೆ. ಇದೇ ರಾಜನ ಇನ್ನೂ ನಾಲ್ಕು ಶಾಸನಗಳು ಬಸರೂರು (೧) ಮಂಗಳೂರು (೧) ಮತ್ತು ಮೂಡಬಿದರೆ (೨) ಗಳಲ್ಲಿ ದೊರೆತಿವೆ. ಇವು ಕ್ರಮವಾಗಿ ಕ್ರಿ.ಶ. ೧೧೭೬, ೧೨೦೪, ೧೨೦೫ ಮತ್ತು ೧೨೧೫ಕ್ಕೆ ಸೇರಿದಾಗಿವೆ.[೯] ಕ್ರಿ.ಶ. ೧೨೧೫ಕ್ಕೆ ಸೇರುವ ಮೂಡಬಿದರೆ ಶಾಸನ[೧೦]ರಲ್ಲಿ ಕಲಿ ವರ್ಷ ೪೩೧೬ (ಗತ ೪೩೧೫) ರ ಉಲ್ಲೇಖವಿದೆ. ಕ್ರಿ.ಶ. ೯೬೮ ಜನವರಿ ೧೩ಕ್ಕೆ ಸೇರುವ ಕುಂದವರ್ಮನ ಕದ್ರಿ ಶಾಸನದಲ್ಲೂ ಕಲಿವರ್ಷ (೪೦೬೮)ದ ಉಲ್ಲೇಖ ಇದೆ[೧೧].

ಕೂರ್ಸಿ ಶಾಸನಕ್ಕೂ ಬಸರೂರು ಶಾಸನಕ್ಕೂ ಹೆಚ್ಚು ಅಂತರವಿಲ್ಲ. ಆದರೆ ಇವುಗಳಿಗೂ ನಾರಾವಿ ಶಾಸನ ಕಾಲಕ್ಕೂ ಬಹಳ ಅಂತರವಿದೆ. ಹೊಸ ಶೋಧದಿಂದ ಮಾತ್ರ ಈ ಕೊರತೆ ನೀಗಲು ಸಾಧ್ಯ. ಕೆ.ವಿ. ರಮೇಶ ಅವರ ಪ್ರಕಾರ ಈ ರಾಜ ಕ್ರಿ.ಶ. ೧೧೬೦ ರಿಂದ ೧೨೨೦ರ ವರೆಗೆ ಆಳಿದ[೧೨].

## ಶಾಸನದ ಉದ್ದೇಶ

ಶಾಸನದ ಮುಖ್ಯ ಉದ್ದೇಶ ರಾಜ ಮಾಡಿದ ಗ್ರಾಮದಾನವನ್ನು ದಾಖಲಿಸುವುದು. ದಾನದ ಉತ್ಪತ್ತಿಯಲ್ಲಿ ಪ್ರಾಯಶಃ ಬಹುಭಾಗ ಮಂಜುನಾಥ ದೇವರಿಗೆ ನೀಡುವುದೆಂದು ಸೂಚಿಸಲಾಯಿತು. ಇದೊಂದು ದಾನ ಶಾಸನವಾದರೂ ಹಲವು ಮುಖ್ಯ ಅಂಶಗಳನ್ನು ಒಳಗೊಂಡಿದೆ.

ರಾಜ ವೀರಕುಲಶೇಖರ ಆಳುಪೇನ್ದ್ರದೇವನು ಮಂಗಳೂರಿನ ಹಿರಿಯರ ಮನೆಯ ಭುವನಾಶ್ರಯದ ಮುಂದಣ ಮೊಗಸಾಲೆಯಲ್ಲಿ ವಡ್ಡೋಲಗದಲ್ಲಿದ್ದಾಗ ಈ ದಾನ ಮಾಡಿದ. ಆ ರಾಜ ಸಭೆಯಲ್ಲಿ ಕುಮಾರ ಬಂಕಿದೇವ, ಪ್ರಧಾನರು, ನಖರ ಹಂಜಮಾನರು, ಎರಡು ಕೋಲ ಬಳಿಯವರು, ಸಕಲ ಛಾತ್ರ ಮನ್ನೆಯರು, ಮಂಗಳೂರು ಹೊರಹಿನವರು, ನೆಲದವರು ಆದಿಯಾಗಿ ಸಮಸ್ತರೂ ನೆರೆದಿದ್ದರು. ಆಗ ರಾಜ ಅರಮನೆಗೆ ಹರವರಿಯಾಗಿ ಬಂದಿದ್ದ ಕೋಟೆಯ ಊರನ್ನು ಬೆರ್ಮುದೆಯ ಬಳಿಯ ಬೀರಲ ದೇವಿಯ ಮಗ ಗಣಪಂಣನಿಗೆ ಧಾರೆಯೆರದುಕೊಟ್ಟ. ಪ್ರಾಯಶಃ ಮಂಜುನಾಥ ದೇವರಿಗಾಗಿ ಮಾಡಿದ ಈ ದಾನವನ್ನು ಗಣಪಂಣ ಸ್ವೀಕರಿಸಿದ. ನಂತರ ದೇವರ ಪಾದಕಾಣಿಕೆಯಾಗಿ ಇದನ್ನು ಮಯ್ಯಂದು ಹಡಪನ ವಶ ಕೊಟ್ಟ. ಶಾಸನದ ಉತ್ತರಾರ್ಧದಲಿ ಬರಹ ಮಾಸಿರುವುದರಿಂದ ಈ ದಾನ ಏತಕ್ಕಾಗಿ ಮಾಡಿದ್ದು ಎಂಬುದು ತಿಳಿಯುವುದಿಲ್ಲ. ಶಾಪಾಶಯದ ಭಾಗದಲ್ಲೂ ಮಂಜುನಾಥ ದೇವರ ಉಲ್ಲೇಖ ಇದೆ. ಈ ದಾನದ ಉತ್ಪತ್ತಿಯಿಂದ ದೇವಾಲಯದಲ್ಲಿ ಯಾವ ಪೂಜಾ ಕಾರ್ಯಗಳು ನೆರವೇರಬೇಕೆಂಬುದಕ್ಕೆ ಶಾಸನದಲ್ಲಿ ಮಾಹಿತಿ ಇಲ್ಲ. ಆದರೂ ಹಲವು ವಿಷಯಗಳು ಇಲ್ಲಿ ಪ್ರಥಮ ಬಾರಿಗೆ ಉಲ್ಲೇಖಗೊಂಡಿವೆ.

ಮೊದಲಿಗೆ ಈ ಭಾಗದಲ್ಲಿ ದೊರೆತಿರುವ ಆಳುಪ ಒಂದನೆಯ ವೀರಕುಲಶೇಖರನ ಶಾಸನ ಇದೊಂದೆ. ಶಾಸನ ಕಾಲಕ್ಕೆ ರಾಜ ಮಂಗಳೂರಿನಲ್ಲಿದ್ದ. ಕುಮಾರ ಬಂಕಿದೇವನ ಪ್ರಸ್ತಾಪ ಇಲ್ಲಿ ಪ್ರಥಮ ಬಾರಿಗೆ ಬಂದಿದೆ. ಈತ ಕುಲಶೇಖರನ ಸೋದರಳಿಯ ಎಂಬ ಮಾಹಿತಿ, ಕ್ರಿ.ಶ. ೧೨೦೪ಕ್ಕೆ ಸೇರುವ ಮಂಗಳೂರು ಶಾಸನದಲ್ಲಿದೆ.[೧೩] ಬಂಕಿದೇವನಿಗೆ ಮಗರು ನಾಡಿನ ಅಧಿಕಾರ ವಹಿಸಿಕೊಟ್ಟ ವಿಚಾರ ಈ ಶಾಸನದಲ್ಲಿದೆ. ಶಾಸನ ಬಂಕಿದೇವನನ್ನು "ವೀರಬಂಕಿ ದೇವರ್ಸ" ಎಂದು ಉಲ್ಲೇಖಿಸಿದೆ. ಆ ಸಂದರ್ಭದಲ್ಲಿ ರಾಜಕುಲಶೇಖರ ಮತ್ತು ಆತನ ಸೋದರಳಿಯ ಬಂಕಿದೇವರ್ಸ ಈರ್ವರೂ ಕೂಡಿ ಬಂಕೇಶ್ವರ ದೇವರಿಗೆ ಮಾಡಿದ ದಾನ ಶಾಸನದಲ್ಲಿ ದಾಖಲಾಗಿದೆ. ಆದರೆ ನಾರಾವಿ ಶಾಸನ ಕಾಲಕ್ಕೆ ಬಂಕಿದೇವ ಕೇವಲ ಕುಮಾರನಾಗಿದ್ದು ಆಡಳಿತದ ಯಾವುದೇ ಜವಾಬ್ದಾರಿಯನ್ನು ಹೊಂದಿರಲಿಲ್ಲ.

## ನಖರ ಹಂಜಮಾನ

'ನಖರ ಹಂಜಮಾನ' ಎಂದರೆ ಹಂಜಮಾನ ವರ್ತಕ ಸಂಘ. ಹಂಜಮಾನರು ಪರ್ಶಿಯಾ (ಮಧ್ಯಪ್ರಾಚ್ಯ)ದಿಂದ ಕರ್ನಾಟಕದ ಕರಾವಳಿಗೆ ಬಂದ ವರ್ತಕರು[೧೪] ಮಧ್ಯಪ್ರಾಚ್ಯದ ದೇಶದವರೆಗೂ ಕರ್ನಾಟಕದ ಕರಾವಳಿಗೂ ಅರಬ್ಬೀ ಸಮುದ್ರದ ಮೂಲಕ ಪ್ರಾಯಶಃ ಸುಮಾರು ಮೂರು ಸಾವಿರ ವರ್ಷಗಳಿಂದಲೂ (ವ್ಯಾಪಾರೀ) ಸಂಪರ್ಕ ಇತ್ತು ಎಂದು ಕೆ.ಎಂ. ಪಣಿಕ್ಕರ್[೧೫] ಅಭಿಪ್ರಾಯಪಟ್ಟಿದ್ದಾರೆ. ಹಂಜಮಾನರು ಕರ್ನಾಟಕದ ತೀರದ ಉದ್ದಕ್ಕೂ ತಮ್ಮ ವ್ಯಾಪಾರಿ ಸಮುದಾಯ

ಹೊಂದಿದ್ದರು. ಬಂದರು ನಗರಗಳಾದ ಬಾರಕೂರು ಮತ್ತು ಬಸರೂರು ಇವರ ಪ್ರಮುಖ ಕೇಂದ್ರಗಳು. ಇಲ್ಲಿ ಇವರು ಅತ್ಯಂತ ಪ್ರಾಚೀನ ಕಾಲದಿಂದಲೇ ಕಾರ್ಯನಿರತರಾಗಿದ್ದರೂ ಇವರ ಪ್ರಥಮ ಉಲ್ಲೇಖ ದೊರೆತಿರುವುದು ೧೩ನೆಯ ಶತಮಾನದ ಉತ್ತರಾರ್ಧಕ್ಕೆ ಸೇರುವ ಬಾರಕೂರು ಶಾಸನದಲ್ಲಿ[೧೬]. ಈ ನಿಟ್ಟಿನಲ್ಲಿ ಕ್ರಿ.ಶ. ೧೨೦೦ಕ್ಕೆ ಸೇರುವ ನಾರಾವಿ ಶಾಸನದಲ್ಲಿ ಇರುವ ಇವರ ಉಲ್ಲೇಖ ಗಮನಾರ್ಹವಾದುದು. ಅಷ್ಟೇ ಅಲ್ಲ ಸದ್ಯಕ್ಕಂತೂ ಇದು ಪ್ರಥಮ ಮಾಹಿತಿ.

ಈ ವಿದೇಶೀ ವರ್ತಕ ಸಂಘ ಕರಾವಳಿ ಉದ್ದಕ್ಕೂ ತನ್ನ ಕಾರ್ಯ ಚಟುವಟಿಕೆ ವಿಸ್ತರಿಸಿದ್ದಲ್ಲದೆ ಮಂಗಳೂರಿನಲ್ಲೂ ಒಂದು ಕೇಂದ್ರ ಸ್ಥಾನವನ್ನು ಹೊಂದಿತ್ತು. ಅಷ್ಟೇ ಅಲ್ಲ ತನ್ನ ವಿಶ್ವಾಸಾರ್ಹ ಕಾರ್ಯಗಳಿಂದ ರಾಜ ಗೌರವಕ್ಕೂ ಪಾತ್ರವಾಗಿದ್ದು ರಾಜಸಭೆಯಲ್ಲಿ ಸ್ಥಾನ ಹೊಂದಿತ್ತು. ಇದೊಂದು ವಿಶೇಷವಾಗಿ ಗಮನಿಸಬೇಕಾದ ಅಂಶ. ರಾಜ್ಯದ ಆಗುಹೋಗುಗಳ ಮುಖ್ಯ ವಿಷಯಗಳೆಲ್ಲವೂ ಇಲ್ಲಿ ಚರ್ಚಿತವಾಗುತ್ತಿದ್ದುವು. ಅದರ ಮಾಹಿತಿ ಈ ವಿದೇಶೀ ವ್ಯಾಪಾರಿ ಸಂಘಟನೆಗೂ ತಿಳಿಯುತ್ತಿತ್ತು. ಇದು ರಾಜ್ಯದ ನಂಬಿಕೆಗೆ ಹಂಜಮಾನರು ಪಾತ್ರರಾಗಿದ್ದರು ಎಂಬುದನ್ನು ತಿಳಿಸುತ್ತದೆ.

**ಎರಡು ಕೋಲ ಬಳಿ**

ಆಳುಪರ ಸೈನ್ಯ ವಿಚಾರ ಶಾಸನಗಳನ್ನು 'ಕೋಲ ಬಳಿ' ಎಂಬ ಉಲ್ಲೇಖದಿಂದ ತಿಳಿಯುತ್ತದೆ. ಸಾಮಾನ್ಯವಾಗಿ ಆ ಸಂದರ್ಭಗಳಲ್ಲಿ 'ಎರಡು ಕೋಲ ಬಳಿ' ಎಂಬ ಉಲ್ಲೇಖ ಇದೆ. ಕ್ರಿ.ಶ. ೧೨೦೪ಕ್ಕೆ ಸೇರುವ ಮಂಗಳೂರು ಶಾಸನದಲ್ಲಿ ಇದರ ಪ್ರಥಮ ಉಲ್ಲೇಖ ಕಾಣಬಹುದು.[೧೭] (ಈ ಶಾಸನದ ಪ್ರಾಮುಖ್ಯತೆಯ ಬಗ್ಗೆ ಮೇಲೆ ಹೇಳಿದೆ). ನಾರಾವಿ ಶಾಸನದಲ್ಲೂ ಇರುವ ಇದರ ಉಲ್ಲೇಖ ಸದ್ಯಕ್ಕೆ ಅತ್ಯಂತ ಪ್ರಾಚೀನವಾದುದು.

ಇಲ್ಲಿ 'ಎರಡು' ಎಂಬುದರ ಅರ್ಥ ಸರಿಯಾಗಿ ಇನ್ನು ನಿರ್ಧಾರವಾಗಿಲ್ಲ. ಪ್ರಾಯಶಃ ಇದು ಎರಡು ರೀತಿಯ ಸೈನ್ಯ ವಿಭಾಗಗಳನ್ನು ಹೆಸರಿಸುವುದಾಗಿರಬೇಕು. ಭೂಸೈನ್ಯ ಎಲ್ಲ ರಾಜರಲ್ಲೂ ಅವಶ್ಯವಾಗಿ ಇದ್ದದ್ದೆ. ಆಳುಪರಿಗೆ ಸಮುದ್ರದ ಸಂಪರ್ಕ ಬಹಳವಾಗಿ ಇದ್ದ ಕಾರಣ ಹಾಗೂ ಅದು ಸಾಕಷ್ಟು ಆದಾಯ ತರುತ್ತಿದ್ದ ಕಾರಣ ಅವರು ಸಮುದ್ರದ ರಕ್ಷಣೆಗೂ ಗಮನಹರಿಸಿದ್ದಿರಬೇಕು. ಇದಕ್ಕಾಗಿ ನೌಕಾಬಲವನ್ನು ಇವರು ಹೊಂದಿದ್ದರು. ಈ ಎರಡೂ ಬಲಗಳ ದಂಡನಾಯಕರು ರಾಜಸಭೆಯಲ್ಲಿರುತ್ತಿದ್ದರು. ನಾರಾವಿಯ ಶಾಸನದಲ್ಲಿರುವ ಉಲ್ಲೇಖ ಪ್ರಾಯಶಃ ಇದನ್ನೇ ತಿಳಿಸುತ್ತದೆ.

**ಸಕಲಭಾತ್ರ ಮನ್ನೆಯರು**

ಇದೊಂದು ಅಪೂರ್ವವಾದ ಉಲ್ಲೇಖ. ನಾರಾವಿಯ ಶಾಸನದಲ್ಲಿ ಅಲ್ಲದೆ ಬೇರಾವ ಆಳುಪ ಶಾಸನದಲ್ಲೂ ಇದರ ಉಲ್ಲೇಖ ಆಗಿಲ್ಲ. ಅಷ್ಟೇ ಅಲ್ಲ ಕರಾವಳಿಯ ಬೇರಾವುದೇ ಶಾಸನದಲ್ಲೂ ಈ ರೀತಿಯ ಪ್ರಯೋಗವಿಲ್ಲ[೧೮]. ಹಾಗಾಗಿ ನಾರಾವಿ ಶಾಸನ ವಿಶಿಷ್ಟವಾದುದು. ಇದನ್ನು ಎರಡು ರೀತಿಯಲ್ಲಿ ಅರ್ಥೈಸಬಹುದು. ೧) ಶೌರ್ಯವಂತರೂ ಮತ್ತು ಗೌರವಾನ್ವಿತರು ಆದ ಹಿರಿಯ ಸಾಮಂತ ವರ್ಗ, ೨) ಸಕಲ ಶಾಸ್ತ್ರ ಕೋವಿದರ ವರ್ಗ, ಪ್ರಾಯಶಃ ಸಾಮಂತವರ್ಗ ತಮ್ಮ ಪಂಡಿತ ಜನರೊಂದಿಗೆ ರಾಜಸಭೆಯಲ್ಲಿತ್ತು. ಅದರೊಂದಿಗೆ ರಾಜನ ಪಂಡಿತ ವರ್ಗವು ಅಲ್ಲಿದ್ದಿರಬೇಕು. ಇದು ರಾಜಸಭೆಗೆ ಮೆರುಗನ್ನು ಕೊಟ್ಟಿತ್ತು.

**ಮಂಗಳೂರು ಹೊರಹಿನವರು ಮತ್ತು ನೆಲದವರು**

ಇದೂ ಸಹ ಪ್ರಪ್ರಥಮವಾಗಿ ಶಾಸನಗಳಲ್ಲಿ ಕಾಣಿಸಿಕೊಂಡಿರುವುದು ಪ್ರಸ್ತುತದ ನಾರಾವಿ ಶಾಸನದಲ್ಲಿ. ಇದರ ಅರ್ಥ ಪ್ರಾಯಶಃ ಆಳುಪ ರಾಜ್ಯದ ಹೊರಗಿನಿಂದ ಬಂದವರು[೧೯] (ಹೊರಹಿನವರು) ರಾಜ್ಯದ ಒಳಗಿನವರು (ನೆಲದವರು) ಗಳನ್ನು ಗುರುತಿಸುವುದಾಗಿರಬೇಕು. ಕ್ರಿ.ಶ. ೧೩೪೨ಕ್ಕೆ ಸೇರುವ ಹೊಯ್ಸಳ ವೀರಬಲ್ಲಾಳನ ಮೂಡಬಿದುರೆ ಶಾಸನದಲ್ಲಿರುವ ಈ ಬಗೆಗಿನ ಉಲ್ಲೇಖವೇ ಈವರೆವಿಗೆ ಮೊದಲ ಮಾಹಿತಿಯಾಗಿತ್ತು. ಈ ಶಾಸನದಲ್ಲಿ "ಐವರು ಹೊರಹಿನವರು" ಎಂಬ ಉಲ್ಲೇಖ ಇದೆ.

ಮಂಗಳೂರು ಕ್ರಿಸ್ತ ವರ್ಷಾರಂಭ ಕಾಲಕ್ಕೆ ಬಂದರು ಚಟುವಟಿಕೆಗಳಿಂದ ಕೂಡಿದ ಪ್ರಮುಖ ವ್ಯಾಪಾರೀ ಕೇಂದ್ರವಾಗಿ ಬೆಳೆದಿತ್ತು. ಈ ಚಟುವಟಿಕೆಗೆ ಯಾವ ಕಾಲದಲ್ಲೂ ಕುಂದು ಬರಲಿಲ್ಲ. ಇದರಲ್ಲಿ ನಿರತರಾಗಿದ್ದ ವ್ಯಾಪಾರಿಗಳು ನಾನಾ ಕಡೆಗಳಿಂದ ಬಂದು ಇಲ್ಲಿ ಶಾಶ್ವತ ಇಲ್ಲವೆ ತಾತ್ಕಾಲಿಕವಾಗಿ ನೆಲೆಸಿದ್ದರು. ರಾಜ್ಯದ ಬೊಕ್ಕಸಕ್ಕೆ ಇವರು ಕೊಡುತ್ತಿದ್ದ ತೆರಿಗೆ ಬಹುಮುಖ್ಯವಾದ ಆದಾಯವಾಗಿತ್ತು. ಪ್ರಾಯಶಃ ಈ ವರ್ಗದ ಪ್ರಮುಖರನ್ನು ಗೌರವಿಸುವ ಸಲುವಾಗಿ ಆಳುಪ ರಾಜ ತನ್ನ ರಾಜಸಭೆಯಲ್ಲಿ ಸ್ಥಾನ ಕಲ್ಪಿಸಿದ್ದ. ಈ ಗೌರವದ ಸ್ಥಾನ ಸ್ಥಳೀಯ ವರ್ತಕ ಪ್ರಮುಖರಿಗೂ ದೊರೆತಿತ್ತು. ಆರ್ಥಿಕ ವ್ಯವಹಾರಗಳ ಚರ್ಚೆಯಲ್ಲಿ ಇವರ ಮಾತಿಗೆ ಮನ್ನಣೆ ಇತ್ತು. ಈ ದೃಷ್ಟಿಯಲ್ಲಿ ನಾರಾವಿ ಶಾಸನ ಇವರನ್ನು ಪ್ರಥಮ ಬಾರಿಗೆ ಉಲ್ಲೇಖಿಸಿರುವ ಗೌರವಕ್ಕೆ ಪಾತ್ರವಾಗಿದೆ.

**ಬೆರ್ಮುದೆಯನ ಬಳಿ**

ನಾರಾವಿ ಶಾಸನದಲ್ಲಿರುವ ಈ ಬಳಿಯ ಉಲ್ಲೇಖ ಎರಡನೆಯ ಮತ್ತು ಸದ್ಯಕ್ಕೆ ಕೊನೆಯದು. ಈ ಶಾಸನ

ಕಾಲಕ್ಕೆ ಸುಮಾರು ೧೫೦ ವರ್ಷಗಳಷ್ಟು ಹಿಂದಕ್ಕೆ ಹೋಗುವ ಕೆಲ್ಲ ಪುತ್ತಿಗೆ ವೀರಗಲ್ಲು ಶಾಸನದಲ್ಲಿ ಬೆರ್ಮುದೆಯನ ಬಳಿಯ ಪ್ರಥಮ ಉಲ್ಲೇಖ ಇದೆ.[೨೧] ಕೆಲ್ಲ ಅರಸರ ಭೃತ್ಯರಾಗಿ ಬೆರ್ಮುದೆಯನ ವಂಶದವರು ಸೇವೆ ಸಲ್ಲಿಸಿದ್ದರು. ಆಳುಪರ ನೆಚ್ಚಿನ ಸೈನ್ಯಾಧಿಕಾರಿಗಳಾಗಿದ್ದರು (ಕೆಲ್ಲ ಪುತ್ತಿಗೆಯ) ಕೆಲ್ಲ ಅರಸರು. ನಾರಾವಿ ಶಾಸನದಲ್ಲಿ ಕೆಲ್ಲರ ಉಲ್ಲೇಖವಿಲ್ಲ. ಅವರ ಸೇವಕರ ಉಲ್ಲೇಖ ಇದೆ. ಇಲ್ಲಿ ಕಾಣುವುದು ಸ್ವಾಮಿನಿಷ್ಠೆಯನ್ನು. ಈ ಬಳಿಯ ಗಣಪಂಣ ಮಂಜುನಾಥ ದೇವರಿಗಾಗಿ ರಾಜ ಕೊಟ್ಟ ದಾನವನ್ನು ಸ್ವೀಕರಿಸಿದ. ಪ್ರಾಯಶಃ ಆ ಭಾಗದ ಪ್ರಮುಖ ಅಧಿಕಾರಿಯಾಗಿ ಈತ ಕಾರ್ಯನಿರ್ವಹಿಸಿದ್ದಿರಬೇಕು.

## ಮಂಜುನಾಥದೇವ

ನಾರಾವಿ ಶಾಸನದಲ್ಲಿ ಉಲ್ಲೇಖಗೊಂಡು ದಾನ ಪಡೆದಿರುವ ಮಂಜುನಾಥದೇವ ಯಾವ ಊರಿನ ದೇವರೆಂಬುದು ಶಾಸನದಲ್ಲಿ ಉಲ್ಲೇಖವಾಗಿಲ್ಲ. ಹಾಗಾಗಿ ಈ ದೇವರು ಯಾವ ಊರಿನದೆಂದು ನಿರ್ಧಾರವಾಗಬೇಕಿದೆ. ಮಂಜುನಾಥ ಎಂದ ಕೂಡಲೆ ಸಾಮಾನ್ಯವಾಗಿ ಎರಡು ಸ್ಥಳಗಳು ನೆನಪಿಗೆ ಬರುವಂತಹುದು. ಒಂದು ಮಂಗಳೂರು ಕದ್ರಿಯ ಮಂಜುನಾಥ, ಎರಡು ಧರ್ಮಸ್ಥಳದ ಮಂಜುನಾಥ. ಆಳುಪರಾಜ ಕುಂದವರ್ಮನ ಅತಿ ಮುಖ್ಯವಾದ ಶಾಸನ ದೊರೆತಿರುವುದು ಕದ್ರಿಯಲ್ಲಿ ಇದೊಂದು ಪ್ರತಿಮಾ ಶಾಸನ[೨೨].

ಈ ಹಿಂದೆ ಈ ಕುಗ್ರಾಮದಲ್ಲಿ ದೊರೆತ ಎರಡು ಶಾಸನಗಳ ಬಗ್ಗೆ ಈಗಾಗಲೆ ಅಧ್ಯಯನ ಮಾಡಿದ್ದೇನೆ[೨೩]. ಅಲ್ಲಿ ಮಂಜುನಾಥದೇವರ ಉಲ್ಲೇಖ ಇದೆ. ಆ ದೇವರಿಗೆ ಕೊಟ್ಟ ಭೂದಾನವನ್ನು ಹೆಗ್ಗಡೆಯೋರ್ವರು (ಹೆಸರು ನಷ್ಟವಾಗಿದೆ) ಸ್ವೀಕರಿಸಿದರು. ಇದರ ಉತ್ಪತ್ತಿ ಸಾಮಾನ್ಯ ಪ್ರಮಾಣದ್ದು. ದಾನ ಭೂಮಿಗೆ ಸಮೀಪದಲ್ಲಿರಬಹುದಾದ ದೇವರಿಗೆ ಇದರ ಅರ್ಪಣೆಯಾಗಿದೆ. ಈ ನೆಲೆಯಲ್ಲಿ ಈ ಕುಗ್ರಾಮಕ್ಕೆ ಅರಿ ಸಮೀಪ ಇರುವ ಧರ್ಮಸ್ಥಳದ ದೇವರಿಗೆ ಈ ದಾನ ಮಾಡಿರುವುದೆಂದು ಅಲ್ಲಿ ನಾನು ಗುರುತಿಸಿದ್ದೇನೆ. ಪ್ರಸ್ತುತ ನಾರಾವಿ ಶಾಸನವು ಮೊದಲು ಈ ಕುಗ್ರಾಮದಲ್ಲಿದ್ದು ಆನಂತರ ನಾರಾವಿ ಬಸದಿಗೆ ಸ್ಥಳಾಂತರಗೊಂಡಿದೆ. (ಶಾಸನದಲ್ಲಿ ಬಸದಿಗೆ ಸಂಬಂಧಿಸಿದ ಯಾವ ಮಾಹಿತಿಯೂ ಇಲ್ಲ). ಮೊದಲೆರಡು ಶಾಸನಗಳು ವಿಜಯನಗರ ಕಾಲದ್ದಾದರೆ ಈಗಿನದು ಅತ್ಯಂತ ಪ್ರಾಚೀನ ಕಾಲದ್ದು ಮತ್ತು ಆಳುಪರ ಕಾಲದ್ದು. ಈ ನೆಲೆಯಲ್ಲಿ ಹೇಳುವುದಾದರೆ ಇದರಲ್ಲಿ ಹೆಸರಿಸಿರುವ ಮಂಜುನಾಥ ದೇವರು ಬೇರಾವುದೂ ಅಲ್ಲದೆ ಸಮೀಪವೇ ಇರುವ ಧರ್ಮಸ್ಥಳದ ದೇವರು ಎಂದು ಹೇಳಬಹುದು (ಈ ಸ್ಥಳ ಸಹ ಬೆಳ್ತಂಗಡಿ ತಾಲ್ಲೂಕಿನಲ್ಲಿದೆ).[೨೪]

ಇದರಿಂದಾಗಿ ಧರ್ಮಸ್ಥಳದ ಮಂಜುನಾಥನ ಪ್ರಾಚೀನತೆ ಕ್ರಿ.ಶ. ೧೨೦೦ಕ್ಕೂ ಹಿಂದಕ್ಕೆ ಹೋಗುತ್ತದೆ. ಪರಂಪರಾಗತ ನಂಬಿಕೆಯ ಪ್ರಕಾರ ವಾದಿರಾಜರ ಕಾಲದಲ್ಲಿ ಈ ದೇವರ ಪ್ರತಿಷ್ಠೆ ಆಯಿತು ಎಂಬುದು ಪ್ರಾಯಶಃ ದೇವಾಲಯದ ಜೀರ್ಣೋದ್ಧಾರದ ನಂತರ ಆದ ಪುನರ್ ಪ್ರತಿಷ್ಠೆ ಇರಬೇಕು, ಮೂಲಪ್ರತಿಷ್ಠೆ ಅಲ್ಲ. ಧರ್ಮಸ್ಥಳದ ದೇವರು ಅತ್ಯಂತ ಪ್ರಾಚೀನವಾದುದು ಎಂಬುದು ನಾರಾವಿಯ ಈ ಶಾಸನದಿಂದ ತಿಳಿಯುವ ಅತ್ಯಂತ ಪ್ರಮುಖ ವಿಷಯ.

ಒಟ್ಟಿನಲ್ಲಿ ಕುಮಾರ ಬಂಕಿದೇವ, ನಖರ ಹಂಜಮಾನ, ಎರಡು ಕೋಲಬಳಿ, ಸಕಲ ಛಾತ್ರಮನ್ನೆಯರು, ಹೊರಹಿನವರು, ನೆಲದವರು ಮತ್ತು ಮಂಜುನಾಥದೇವ ಇವುಗಳನ್ನು ಪ್ರಥಮ ಬಾರಿಗೆ ಉಲ್ಲೇಖಿಸಿರುವ ನಾರಾವಿಯ ಒಂದನೆಯ ಕುಲಶೇಖರನ ಈ ಶಾಸನ ಆಳುಪ ಮತ್ತು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಶಾಸನಗಳ ಅಧ್ಯಯನದಲ್ಲಿ ತನ್ನ ಪ್ರಾಮುಖ್ಯತೆಯನ್ನು ಕಾಯ್ದುಕೊಂಡಿದೆ.

### ಶಾಸನ ಪಾಠ

**ಮುಂಭಾಗ**

೧ ಸ್ವ ಸ್ತಿ [॥*] ಶ್ರೀಮತು ಪಾಂಡ್ಯ ಚ
೨ ಕ್ರವರ್ತಿ ರಾಯಗಜಾಂಕುಸ ಶ್ರೀ
೩ ವೀರ ಕುಲಸೇಕರದಾಳ್ವೇಂದ್ರ ದೇವರು ವಿ
೪ ಜಯ ರಾಜ್ಯಂಗೆಯ್ಯುತ್ತಮಿರ್ದ ರೌದ್ರಿ
೫ ಸಂವತ್ಸರದ ಧನುಮಾಸ ಮೊದ
೬ ಲಾಗಿ ಮಂಗಳೂರ ಹಿರಿಯರ
೭ ಮನೆಯ ಭುವನಾಶ್ರಯದ ಮುಂದ
೮ ಣ ಮೊಕಸಾಲೆಯಲು ವಡ್ಡೋಲಗಂ
೯ ಗೊಟ್ಟಿದ್ದಾಮರ ಶ್ರೀಪಾದ ಸಂನ್ನಿ
೧೦ ಧಾನದಲು ಕೊ (ಕು) ಮಾರ ಬಂಕಿ
೧೧ ದೇವರುಂ ಮುಂತಾಗಿ ಯಿದ್ದಂತ ಪ್ರ
೧೨ ಧಾನರುಂ ನಕರ ಹಂಜಮಾನರುಂ ಎ
೧೩ ರಡು ಕೋಲ ಬಳಿಯರುಂ ಸಕಳ ಛಾತ್ರ
೧೪ ಮನ್ನೆಯರ್ಗೆಯುಂ ಕೂಡಿ ನೆರೆದಿದ್ದ
೧೫ (ಪ್ರ) ಹಾವದಲು ಮಂಗಳೂರ
೧೬ ಹೊರಹಿನವರುಂ ನೆಲದವರುಂ ಕೋ
೧೭ ಟಿಯಾ ವೂರ ಹರವರಿಯನುಂ ಬೆ
೧೮ ರ್ಮುದೆಯ ಬಳಿಯ ಬೀರಲದೇವಿ

೧೯ ಯರ ಕುಮಾರ ಗಣಪಣಂಗ್ಗೆ ಧಾ

೨೦ ರೆಯನೆರದು ಕೊಟ್ಟು ಮಂಜುನಾ

೨೧ (ತ) ದೇವರಿಗೆ . . . . . . . .

**ಹಿಂಭಾಗ**

೨೨ ಮಯ್ಯಂದು ಹಡಪ

೨೩ ಕಯಂ ಕೊಟ್ಟ (ಪಾದಕಾಣಿಕೆ)

೨೪ ಧರ್ಮ್ಮಕೆ ಯರರು ವೊಕ್ರಸ್ತರ (ವಾದಡೆ)

೨೫ ಗಂಗೆ ವಾರ [ಣಾ*] ಸಿಯಲು ಸಾವಿರ ಕವಿಲೆ

೨೬ ಯ ವದಿಸಿದ ದೋಸ [*] ಮಂಜುನತ ದೆ

೨೭ ವರ ಕೀಸ್ತ (ಕಿತ್ರ) ದೋಸ [೧*] ಯಾವೂರಿಂದ ಒಬ್ಬ

೨೮ ರು ವರ್ತಿಸ್ತರಾದಡೆ ಯರಸಿಂಗೆ ದ (೦)-

೨೯ ಡ ಗ ೧೦೦೦ ವೊಂದು . . . .

೩೦ ಹರ (ವ) ರಿ (ಬ್ರ) ಹ್ಮರು ಮುದ (ಲಾಗಿ)

೩೧ ೧೨೦ [೦೦] . . . . . . . .

[ಮುಂದಕ್ಕೆ ಅಕ್ಷರ ಮಾಸಿಹೋಗಿದೆ]

## ಅಡಿಟಿಪ್ಪಣಿ

೧. **ಉದಯವಾಣಿ** (ಕನ್ನಡ ದೈನಿಕ) ತಾ. ೮.೩.೧೯೭೯.

೨. *South Indian Inscriptions* [S.I.I] Vol. VII No. 253.
ಕೆ.ವಿ. ರಮೇಶ, ಎಂ.ಜೆ. ಶರ್ಮ **"ತುಳುನಾಡಿನ ಶಾಸನಗಳು"** [ತು.ನಾ.ಶಾ.] ಸಂ. ೨೬.

೩. ಅದೇ., ಶಾಸನ ಪಾಠ, ಸಾಲು ೬–೭.

೪. ಅದೇ., ಶಾಸನ ಪಾಟ, ಸಾಲು ೩–೬.

೫. K.V. Ramesh, *"A History of South Kanara"* [AHSK], [Dharwar, 1970], pp. 98-99.

೬ Ibid., pp. 115-119, 135.

೭. ಪಿ.ಎನ್. ನರಸಿಂಹಮೂರ್ತಿ : "ಕುಂದನಾಡಿನ ಶಾಸನಗಳು" [ಉಡುಪಿ, ೨೦೦೭], ಸಂ. ೩೦, ಪುಟ ೧೧–೧೪ ಮತ್ತು ೧೭೦–೧೭೨.

೮. ಅದೇ., ಪುಟ ೧೨ ಮತ್ತು ೧೭೧, ಶಾಸನ ಪಾಠ ಸಾಲು ೩–೫.

೯. S.I.I. Vol. IX pt. I. No. 394, S.I.I. Vol. VII Nos. 185, 223 and 222.
ತು.ನಾ.ಶಾ. ಸಂ. ೩೫, ೩೬, ೩೮ ಮತ್ತು ೪೧.

೧೦. S.I.I. Vol. VII No. 222, ತು.ನಾ.ಶಾ. ಸಂ. ೪೧.

೧೧. S.I.I. Vol. VII, No. 191, ತು.ನಾ.ಶಾ. ಸಂ. ೨೫, AHSK p. 97.

೧೨. AHSK, pp. 115-118.

೧೩. S.I.I. Vol. VII No. 185, AHSK p. 117.

೧೪. AHSK pp. 252-53.

೧೫. K.M. Panikkar, *Geographical factors in Indian History,* p. 57.

೧೬. S.I.I. Vol. VII No. 380.

೧೭. Ibid, No. 185.

೧೮. See S.I.I. Vols. VII, IX pt I and II
ತುಳು ನಾಡಿನ ಶಾಸನಗಳು ಮತ್ತು ಕುಂದನಾಡಿನ ಶಾಸನಗಳು.

೧೯. AHSK p. 257.

೨೦. S.I.I. Vol. VII No. 213.

೨೧. P.N. Narasimhamurthy : "Some interesting Names and terms in the Memorial epigraphes of kella puttige" Journal of Place Names Society of India Vil. VI. pp. 71-74.
P.N. Narasimha Murthy : "Jainism on the Kanara Coast" (1985)
(ph.d. Thesisi type script], pp. 97-98.

೨೨. S.I.I. Vol. VII No. 191, AHSK pp. 97-98.

೨೩. **ಉದಯವಾಣಿ** (ಕನ್ನಡ ದಿನಪತ್ರಿಕೆ) ೮.೩.೧೯೭೯.

೨೪. ಪಿ.ಎನ್. ನರಸಿಂಹಮೂರ್ತಿ, ಜಾ.ರಾ. ಗೋಪಾಲ್ ಪ್ರಶಸ್ತಿ (೨೦೦೮) ಭಾಷಣ, **ಇತಿಹಾಸ ದರ್ಶನ,** ಸಂ. ೨೪ (೨೦೦೯) ಪು. XLI-XLii.

ಡಾ. ಎಸ್.ಜಿ. ಸಾಮಕ್*

# ೨ನೇ ಆಳುವರಸನ ಹೊಸ ತಾಮ್ರಶಾಸನ

ಕರ್ನಾಟಕದ ಇತಿಹಾಸದಲ್ಲಿ ಒಂದುಸಾವಿರ ವರ್ಷ ಸುದೀರ್ಘ ಆಳ್ವಿಕೆ ನಡೆಸಿರುವ ಆಳುಪರ ತಾಮ್ರ ಶಾಸನ ಇತ್ತೀಚೆಗೆ ದೊರೆತಿದೆ. ಆಳುಪರು ಕ್ರಿ.ಶ. ೪೫೦ ರಿಂದ ಈಗಿನ ದಕ್ಷಿಣಕನ್ನಡ, ಉಡುಪಿ ಹಾಗೂ ಶಿವಮೊಗ್ಗದ ಕೆಲವು ಭಾಗಗಳಲ್ಲಿ ಆಳ್ವಿಕೆ ನಡೆಸಿದ್ದಾರೆ. ಉದ್ಯಾವರ, ಮಂಗಳೂರು, ಬಾರಕೂರು ಹಾಗೂ ಮೂಡಬಿದರೆ ಇವರ ರಾಜಧಾನಿಗಳಾಗಿದ್ದವು. ಹೊಸದಾಗಿ ದೊರೆತಿರುವ ಈ ತಾಮ್ರ ಶಾಸನವನ್ನು ಶಿವಮೊಗ್ಗದ ಖ್ಯಾತ ನಾಣ್ಯ ಸಂಗ್ರಹಕಾರರೂ ಹಾಗೂ ನಿವೃತ್ತ ಇತಿಹಾಸ ಉಪನ್ಯಾಸಕರಾದ ಶ್ರೀ ಖಂಡೋಬರಾಯರು ಪತ್ತೆಹಚ್ಚಿ ಅಧ್ಯಯನಕ್ಕೆ ನನಗೆ ನೀಡಿದ್ದಾರೆ. ಈ ಶಾಸನ ದೊರೆತ ಸ್ಥಳ ನಿಗೂಢ. ಅವರ ಪ್ರಕಾರ ಕೋಲಾರದ ಸಮೀಪದ್ದಾಗಿದೆ.*

ಈ ಶಾಸನವನ್ನು ೧೪ ಸಾಲುಗಳಲ್ಲಿ ೧೯ x ೨೦ ಸೇ.ಮೀ. ಅಗಲದ ತಾಮ್ರದ ಹಲಗೆಯಮೇಲೆ ಎರಡು ಬದಿಯಲ್ಲಿ* ರಚಿಸಲಾಗಿದೆ. ಹಲಗೆಯ ಮೇಲ್ಭಾಗವನ್ನು ಕಮಾನಾಕಾರದಲ್ಲಿ ಮಾಡಲಾಗಿದ್ದು ಅದರಲ್ಲಿ ಆಳುಪರ ರಾಜ ಲಾಂಛನವಾದ ಜೋಡಿ ಮೀನು ಹಾಗೂ ಅದರ ಮೇಲೆ ಒಂದು ರಂಧ್ರವನ್ನು ಕೊರೆಯಲಾಗಿದೆ. ಅದು ಮೀನಿನ ಕಣ್ಣಿನಾಕಾರದಲಿರುವುದು ವಿಶೇಷ.

**ಶಾಸನ ಪಾಠ**

೧ ಓಂ ನಮಶ್ಶಿವಾಯಃ ಸ್ವಸ್ತ್ಯಾಣ್ಡ ವಿಭೂತ ವಿಸ್ಮಿತ ಪಿತಾಮಹಲೋಕನ ಸಂಬರ್ಧಿತ ಕುಲಾಭಿ

೨ ಮಾನ ಸಕಲ್ ಶ್ರೀಮದಾಳುವರಸರಾ ಪೃಥಿವಿ ರಾಜ್ಯದೊ ಮಾನಾಡೋಳ್ ಶ್ರೀಯಾಳು

೩ ವರಸರುಂ ಶ್ರೀಎರೆಯಪ್ಪರಸರು ಮಿಳ್ದು ಸೂರ್ಯ್ಯ ಗ್ರಹಾಣದನ್ದು ಬೆಳ್ಮಣ್ಣಸಭೆಗೆ

೪ ಸಿವವಳ್ಳಿ ಮರಿಯಾದಿ ಸರ್ವಪರಿಹಾರವಾಗೆ ಪಾಣಿಗ್ರಹಾಣಗೆಯ್ದರ್ ಕನ್ತಾಪುರದಾ ಮಾಣಿ

೫ ದೇವನಾ ಬಾಗಿನುಳ್ ಚೊಕ್ಕಪಾಡಿಯಾಭಟ್ಟರು ಮಿಳ್ದು ಕಾಯಿಸಿದಾರ್ಇದರ್ಕ್ಕೆ ಕಾಪು

೬ ಬೊಯ್ಗ್ಗವರ್ಮ್ಮನುಂ ಬೇಳದಾ ನನ್ದನುಂ ಕುಳುನೊಳ ನನ್ದನುಂ ಸನ್ತೌರ ಮಿದಿನಿಯುಂ ಉರಪ

೭ ಣನು ಮಿವನ್ದಿರ್ಗೆ ಕಾಪು ಕಾವೋರ್ಗೆ ಅನನ್ಯ ಪುಣ್ಯಂ ಅಶ್ವಮೇಧ ಪಲಮಕ್ಕುಂ ಸಿವವಳ್ಳಿಗೆ ಪುನ್ಡವ

೮ ರ್ದ್ಧನಕ್ಕೆ ಗೋಸಹಾಸ್ರ ಕೊಟ್ಟ ಪಲಮುಕ್ಕುಂ ಇದನಳಿವೋರುಂ ಬಕ್ರಬಪ್ಪೋರುಂ ಪಂಇ ಮಹಾ

೯ ಪಾತಕರಪ್ಪೋರ್ ಇಪ್ಪತ್ತೊನ್ದುನರಖದುಳಿಪ್ಪಾರ್ ವಾರಣಾಶಿಯುಂ ಶಿವವಳ್ಳಿಯುಮನಳಿದ ಪಾಪ

೧೦ ಮಕ್ಕುಂ ದಿವ್ಯಸಾಹಾಸ್ರವರಿಷಂ ವೃಷ್ಟೆಯುಳ್ ಪುಳುವಾಗಿಪ್ಪಾರ್ ಕ್ಷಯಮಾಗಿ ಪುಟ್ಟಿನವೆವಾರ್

೧೧ ಇದನಳಿವಲ್ಲಿ ಸಾವವರ್ಗೆಳ್ ಇನ್ದ್ರಲೋಕಮನ್ನಿಡಿ ಯಾಳ್ದಿಪ್ಪಾರ್ ಅತಿನುತೆ ವಿನ್ಧ್ಯವಾಸಿ

೧೨ ನಿ ಮಹಾಮುನಿ ಸೇವಿತೆ ಬ್ರಹ್ಮ ಮುಖ್ಯರಾನ್ನ್ ಕ್ಷಿಪತಿ ಕಾರ್ವೊಳಕ್ಕೆ ನಿಜ ಧರ್ಮ್ಮ ಪರರ್ಕ್ಕ

೧೩ ಳಪ್ಪೋರಾನ್ ಕೃತು ಶತಮಶ್ವಮೇಧ ಪಲಮೆಯ್ದುಗೆ ಪಾಣ್ಡ್ಯ ಕುಲರ್ಕಳಿನ್ತಿಶಯಮಾಗಿ ನಿ

೧೪ ಲ್ಕೆ ಧರ್ಮ್ಮಂ ಜಗದುಳ್ ಅದಿತ್ಯನುಳ್ಳಿನಂ ಯಸ್ಯ ಯಸ್ಯ ಯದಾ ಭೂಮಿ ಯಸ್ಯ ತಸ್ಯ ತಥಾ ಪಲಂ

**ಶಾಸನ ಸಾರಾಂಶ**

ಆಳುಪರ ದೊರೆ ಆಳುವರಸನು ರಾಜ್ಯವಾಳುವ ಸಮಯ ದಲ್ಲಿ ಮಹಾನಾಡು ಎಂಬ ಸಭೆಯಲ್ಲಿ ಎರ್ಯಪ್ಪರಸನ ಜೊತೆಗೂಡಿ ಸೂರ್ಯಗ್ರಹಣದ ಸಮಯದಲ್ಲಿ ಶಿವವಳ್ಳಿ ಸಭೆಗೆ ಅನ್ವಯಿಸುವಂತಹಾ ಕಟ್ಟು ಕಟ್ಟಲೆ ಗಳನ್ನು ಬೆಳ್ಮಣ್ಣಿನ ಸಭೆಗೂ ಅನ್ವಯಿಸುವಂತೆ ಆಜ್ಞೆ ಹೊರಡಿಸಿದ್ದಾನೆ. ಈ ಆಜ್ಞೆಯನ್ನು ಕಂತಾಪುರದ (ಇಂದಿನ ಕಾಂತಾವರ) ಮಾಣಿ ಹಾಗೂ ಚೊಕ್ಕಪಾಡಿಯ ಭಟ್ಟರು ಕಾಪಾಡಿಕೊಂಡು ಬರಲು ನಿರ್ದೇಶಿಸಲಾಗಿದೆ. ಈ ಶಾಸನವನ್ನು ಕಾಪುವಿನ ಬೊಯ್ಗವರ್ಮ, ಬೇಳದ ನಂದ, ಕುಳನೊಳ ನಂದ, ಸಾಂತರ ಮೀದಿನಿ ಮತ್ತು ಉರಪಣ

* ಇತಿಹಾಸ ಉಪನ್ಯಾಸಕರು, ಡಿ.ವಿ.ಎಸ್. ಪದವಿಪೂರ್ವ (ಸ್ವ) ಕಾಲೇಜು, ಶಿವಮೊಗ್ಗ.

ಮುಂತಾದವರು ರಕ್ಷಿಸಬೇಕೆಂದು ತಿಳಿಸಲಾಗಿದೆ. ಕೊನೆಯಲ್ಲಿ ಈ ಶಾಸನವನ್ನು ಕಾಪಾಡಿದವರಿಗೆ ಶಿವವಳ್ಳಿ ಮತ್ತು ಪುಂಡ್ರವರ್ಧನವೆಂಬ ಧರ್ಮಕ್ಷೇತ್ರಗಳಲ್ಲಿ ಸಾವಿರ ಹಸುಗಳನ್ನು ದಾನ ಮಾಡಿದ ಪುಣ್ಯ ಹಾಗೂ ಆಗ್ನೆಮೀಂದವರಿಗೆ ವಾರಣಾಸಿಯನ್ನೂ ಹಾಗೂ ಶಿವಳ್ಳಿಯನ್ನು ನಾಶಮಾಡಿದ ಪಾಪದೊರಕುವುದೆಂದು ತಿಳಿಸಲಾಗಿದೆ. ಈ ಶಾಸನದ ಕಾಲಮಾನ ೮ನೇ ಶತಮಾನ.

**ಶಾಸನದ ವಿಶೇಷತೆ**

ಪ್ರಸುತ್ತ ಶಾಸನದ ವಿಶೇಷತೆ ಎಂದರೆ ಇದು ಈ ಹಿಂದೆ ಉಡುಪಿಯ ದಿವಂಗತ ಪಿ. ಗುರುರಾಜಭಟ್ಟರು ಪ್ರಕಟಿಸಿದ್ದ ಕನ್ನಡದ ಪ್ರಪ್ರಥಮ ತಾಮ್ರಶಾಸನವೆಂದು ಪ್ರಸಿದ್ಧವಾಗಿದ್ದ ಬೆಳ್ಮಣ್ಣು ತಾಮ್ರಶಾಸನದ ಯಥಾ ನಕಲಾಗಿರುವುದು. ಆದರೆ ಬೆಳ್ಮಣ್ಣು ಶಾಸನವನ್ನು ಐದು ೧೭.೮ ೭.೭ ಸೆ.ಮೀ ಅಗಲದ ತಾಮ್ರ ಹಲಗೆಗಳ ಮೇಲೆ ೨೮ ಸಾಲುಗಳಲ್ಲಿ ಬರೆಯಲಾಗಿದೆ. ಹಾಗೂ ಆ ತಾಮ್ರ ಹಲಗೆಗಳನ್ನು ಬಳೆಯಿಂದ ಬಂಧಿಸಲಾಗಿದ್ದು ಆ ತಾಮ್ರದ ಬಳೆಯಲ್ಲಿ ಆಳೂಪರ ರಾಜಲಾಂಛನವಾದ ಜೋಡಿ ಮೀನುಗಳನ್ನು ಕೆತ್ತಲಾಗಿದೆ.

ಬೆಳ್ಮಣ್ಣು ಶಾಸನ ೧೯೫೨ ರಲ್ಲಿ ಶ್ರೀ ದುರ್ಗಾ ಪರಮೇಶ್ವರಿ ದೇವಾಲಯದ ಅಡಿಪಾಯದಲ್ಲಿ ಪತ್ತೆಯಾಗಿತ್ತು. ೧೯೭೩ ರಲ್ಲಿ ಶ್ರೀ ಪಿ. ಗುರುರಾಜ ಭಟ್ಟರು ಬೆಳ್ಮಣ್ಣು ಶ್ರೀ ದುರ್ಗಾಪರ್ಮೇಶ್ವರಿ ದೇವಾಲಯ (ಒಂದು ಐತಿಹಾಸಿಕ ಪರಿಚಯ) ಅನ್ನುವ ಕೃತಿಯಲ್ಲಿ ಪರಿಚಯಿಸಿದ್ದರು ಹಾಗೂ ೧೯೭೭ ರಲ್ಲಿ ಉಡುಪಿಯಲ್ಲಿ ನಡೆದ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾದ ಮೂರನೇ ವಾರ್ಷಿಕ ಅಧಿವೇಶನದಲ್ಲಿ ಡಾ॥ ಜಿ.ಎಸ್.ಗಾಯಿಯವರು ಪ್ರಬಂಧವೊಂದನ್ನು ಮಂಡಿಸಿದ್ದರು.

**ಬೆಳ್ಮಣ್ಣು ತಾಮ್ರ ಶಾಸನ**

**ಪತ್ರ ೧**

೧ ಓಂ ನಮಶ್ಶಿವಾಯಃ ಸ್ವಸ್ಥ್ಯಣ್ಡ ವಿಭೂತ ವಿಸ್ಮಿತ

೨ ಪಿತಾಮಹಲೋಕನ ಸಂಬರ್ದ್ಧಿತ ಕುಲಾಭಿ–

೩ ಮಾನ ಸಕಲ್ ಶ್ರೀಮದಾಳುವರಸ–

೪ ರಾ ಪೃಥಿವಿರಾಜ್ಯದೊ[ಳ್*] ಮಾನಾಡೋಳ್ ಶ್ರೀಯಾಳು–

**ಪತ್ರ ೨ ಮುಂಭಾಗ**

೫ ವರಸರುಂ ಶ್ರೀಎರೆಯಪ್ಪರಸರು ಮಿಳ್ದು ಸೂ–

೬ ರ್ಯ್ಯ ಗ್ರಹಾಣದನ್ನು ಬೆಳ್ಮಣ್ಣಸಭೆಗೆ

೭ ಸಿವವಳ್ಳಿ ಮರಿಯಾದಿ ಸರ್ವಪರಿಹಾರಮಾಗೆ

೮ ಪಾಣಿಗ್ರಹಾಣಗೆಯ್ದರ್ [।*]ಕನ್ತಾಪುರದಾ ಮಾಣಿ

**ಪತ್ರ ೨ ಹಿಂಭಾಗ**

೯ ದೇವನಾ ಬಾಗಿನುಳ್ ಚೊಕ್ಕಪಾಡಿಯಾ

೧೦ ಭಟ್ಟರು ಮಿಳ್ದು ಕಾಯಿಸಿದಾರ್[।*]ಇದರ್ಕ್ಕೆ ಕಾಪು

೧೧ ಬೊಯ್ಗವರ್ಮ್ಮನುಂ ಬೇಳದಾ ನನ್ದನುಂ ಕುಳು–

೧೨ ನೊಳ ನನ್ದನುಂ ಸನ್ತೌರ ಮಿದಿನಿಯುಂ ಉರಪ–

**ಪತ್ರ ೩ ಮುಂಭಾಗ**

೧೩ ಣನು ಮಿವನ್ದಿರ್ಗೆ ಕಾಪು[।*] ಕಾವೊರ್ಗೆ ಅನನ್ಯ ಪುಣ್ಯಂ

೧೪ ಅಶ್ವಮೇಧ ಪಲಮಕ್ಕುಂ ಸಿವವಳ್ಳಿಗೆ ಪುನ್ಡವ–

೧೫ ರ್ದ್ಧನಕ್ಕೆ ಗೋಸಹಾಸ್ರ ಕೊಟ್ಟ ಪಲಮಕ್ಕುಂ[।*]

೧೬ ಇದನಳಿವೋರುಂ ಬಕ್ರಬರ್ಪ್ಪೊರುಂ ಪಂಇ ಮಹಾ–

**ಪತ್ರ ೩ ಹಿಂಭಾಗ**

೧೭ ಪಾತಕರಪ್ಪೋರ್ ಇಪ್ಪತ್ತೊನ್ದುನರಖದುಳಿಪ್ಪಾರ್

೧೮ ವಾರಣಾಶಿಯುಂ ಶಿವವಳ್ಳಿಯುಮನಳಿದ ಪಾಪ–

೧೯ ಮಕ್ಕುಂ ದಿವ್ಯಸಾಹಾಸ್ರವರಿಷಂ ವೃಷ್ಟೆಯುಳ್

೨೦ ಪುಳುವಾಗಿರ್ಪ್ಪಾರ್ ಕ್ಷಯಮಾಗಿ ಪುಟ್ಟಿನವೆವಾರ್

**ಪತ್ರ ೪ ಮುಂಭಾಗ**

೨೧ ಇದನಳಿವಲ್ಲಿ ಸಾವವರ್ಗೆಳ್ ಇನ್ದ್ರಲೋಕಮನ್ನಿ–

೨೨ ಡಿಯಾಳ್ದಿರ್ಪ್ಪಾರ್ ಅತಿನುತೆ ವಿನ್ಧ್ಯವಾಸಿ–

೨೩ ನಿ ಮಹಾಮುನಿ ಸೇವಿತೆ ಬ್ರಹ್ಮ ಮುಖ್ಯರಾನ್ನ್

೨೪ ಕ್ಷಿಪತಿ ಕಾರ್ವೊಳಕ್ಕೆ ನಿಜ ಧರ್ಮ್ಮ ಪರರ್ಕ್ಕ–

**ಪತ್ರ ೪ ಹಿಂಭಾಗ**

೨೫ ಳಪ್ಪೋರಾನ್ ಕೃತು ಶತಮಶ್ವಮೇಧ ಪಲಮೆಯ್ದುಗೆ

೨೬ ಪಾಣ್ಡ್ಯ ಕುಲರ್ಕಳಿನ್ತತಿಶಯ ಮಾಗಿ ನಿ–

೨೭ ಲ್ಕೆ ಧರ್ಮ್ಮಂ ಜಗದುಳ್ ಅದಿತ್ಯನುಳ್ಳಿನಂ[।*]

೨೮ ಯಸ್ಯ ಯಸ್ಯ ಯದಾ ಭೂಮಿ ಯಸ್ಯ ತಸ್ಯ ತಥಾ ಪಲಂ[।*]

[ಮಾಹಿತಿಗಾಗಿ : * ಈ ಶಾಸನ ಕೊಳ್ಳೇಗಾಲದ ತಾಮ್ರ ವ್ಯಾಪಾರಿಗಳೊಬ್ಬರ ಬಳಿ ದೊರೆತಿತೆಂದು ೧೯.೧೧.೨೦೦೯ರ 'ದಿ ಹಿಂದೂ' ಪತ್ರಿಕೆಯಲ್ಲಿ ವರದಿಯಾಗಿದೆ. ಶಾಸನದ ಪಾಠ ಒಂದೇ ಬದಿಯಲ್ಲಿ ಮಾತ್ರವಿದೆ. (ಸಂ).]

ಡಾ. ಎನ್. ನಂದೀಶ್ವರ *

# ಸಿರಾ ತಾಲ್ಲೂಕಿನ ಕೆಲವು ಅಪ್ರಕಟಿತ ಶಾಸನಗಳು

ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕಿನ ದೊಡ್ಡಗೂಳ, ಕಳುವರಹಳ್ಳಿ, ನೆಲದಿಮ್ಮನಹಳ್ಳಿ ಗ್ರಾಮಗಳಲ್ಲಿ ಅಪ್ರಕಟಿತ ಶಾಸನಗಳು ಕಂಡುಬರುತ್ತವೆ.

**ದೊಡ್ಡಗೂಳದ ಶಾಸನ :** ಸಿರಾ – ಮಧುಗಿರಿ ರಸ್ತೆ ಮಾರ್ಗದಲ್ಲಿ ಪದ್ಮಾಪುರ ಗೇಟ್‌ನಿಂದ ಬಲಭಾಗಕ್ಕೆ ಸಿರಾದಿಂದ ೧೦ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಗ್ರಾಮದಲ್ಲಿ ಗ್ರಾಮದೇವತೆ ಮಾರಮ್ಮ, ವೀರಭದ್ರ, ನರಸಿಂಹಸ್ವಾಮಿ, ಮುಜರಾಯಿ ಇಲಾಖೆಗೆ ಸೇರಿದ ಆಂಜನೇಯ, ನಾಯಕ ಜನಾಂಗದವರ ಮನೆದೇವರು ದೊಡ್ಡಮ್ಮ, ದೇವಾಂಗದವರ ಮನೆದೇವರು ಚೌಡೇಶ್ವರಿ ದೇವಸ್ಥಾನಗಳು ಹಾಗೂ ಮಸೀದಿ ಇರುತ್ತವೆ. ಚೌಡೇಶ್ವರಿ ದೇವಸ್ಥಾನದ **ಹರೆಯ ಮೇಲೆ ಶಾಸನ** ಬರೆಯಲಾಗಿದೆ. ಈ ಹರೆಯು ಯಾವಾಗಲೂ ಇದೇ ದೇವಸ್ಥಾನದಲ್ಲಿದ್ದು, ವಿಶೇಷ ಪೂಜೆಯ ದಿನ ಹಾಗೂ ದೇವರ ಉತ್ಸವ ಮೊದಲಾದ ದಿನಗಳಂದು ಬಡಿಯಲಾಗುತ್ತದೆ. ಈ ಹರೆಯು ಈ ದೇವರಿಗಾಗಿ ಮೀಸಲಾಗಿದ್ದು, ಇದನ್ನು ಈ ಹರೆ ಬಡಿಯಲು ನಿಗದಿಪಡಿಸಿದ ಆದಿದ್ರಾವಿಡ (ಛಲವಾದಿ) ಜನಾಂಗದವರು ಮಾತ್ರ ಬಡಿಯುತ್ತಾರೆ. ಚೌಡೇಶ್ವರಿ ದೇವಸ್ಥಾನದಲ್ಲಿ ಕಂಚಿನ ಹರೆಯನ್ನು ದೇವಾಂಗದ ಏಳು ಮಂದಿ ಶೆಟ್ಟಿ ಮುಂತಾದ ಕುಲದವರು ಮಾಡಿಸಿಕೊಟ್ಟಿರುವುದಕ್ಕೆ ಹಾಕಿರುವ ಶಾಸನ. ಈ ಮೊದಲು ೧೧ ಸಾಲು ಕನ್ನಡ ಭಾಷೆಯಲ್ಲಿ ಬರೆದ ಶಾಸನವನ್ನು ಒಡೆದುಹಾಕಿ ಮತ್ತೆ ಪಕ್ಕದಲ್ಲಿ ೧೩ ಸಾಲು ಕನ್ನಡ ಭಾಷೆಯಲ್ಲಿ ಬರೆಸಲಾಗಿದೆ. ೧೮ನೇ ಶತಮಾನಕ್ಕೆ ಸೇರಿದ ಈ ಶಾಸನವನ್ನು ಮುಂದಿನ ತಿಂಗಳಾದ ಕಾರ್ತಿಕ ಬಹುಳ ೧೪ರಲ್ಲಿ ಇದೇ ಶೀರ್‍ಯದ ಏಳು ಮಂದಿ ಶೇಟ್ಟಿಗಳು ಮುಂತಾದ ಕುಲಾಚಾರದವರು ಚೌಡೇಶ್ವರಿ ದೇವಸ್ಥಾನದ ಮುದತಿಪ್ಪ ದಾಸನಿಗೆ ಕಂಚಿನ ಹರೆ ಮಾಡಿಸಿಕೊಟ್ಟಿರುತ್ತಾರೆ.

### ಶಾಸನದ ಪಾಠ

೧ ಶುಭ ಕೃತು ಸಂವತ್ಸರದ
೨ ಅಶ್ವಿಜ ಶು ೨ ಲ್ಲು ಶಿರ‍್ಯದ
೩ ದೇವಾಂಗದ ಯೆಳುಮಂ
೪ ದಿ ಶೇಟ್ಟಿಗಳು ಮುಂತಾ
೫ ದ ಕುಲದವರು ಸಹ । ಗು
೬ ಳದ ಚೌಡೆಶ್ವರ್‍ರಿ
೭ ದೇವಸ್ತಾನದ ವಲ
೮ ಗಕ್ಕೆ – – – ಗ
೯ ಸ ಗೆ । ಮಾಡಿಸಿ
೧೦ ಕೊಟ್ಟ ಕಂಚಿನ
೧೧ ಹರೆ

### ಅದೇ ಹಾರೆಯ ಮತ್ತೊಂದು ಭಾಗದ ಶಾಸನ

೧ ಶುಭ ಕ್ರೂತು ನಾ
೨ ಮಾ ಸಂವತ್ಸರದ
೩ ಕರ್ತಿಕ ಬ ೧೪ ಲು
೪ ಶಿರ‍್ಯದ ದೆವಂಗದ
೫ ಯೆಳು ಮಂದಿ ಸೆ
೬ ಟ್ಟಿಗಳು ಮುಂತಾ
೭ ದ ಕುಲ ಚಾರ
೮ ದವರು ಸಹ ಗು
೯ ಳದ ಚಾವುಡೆಶ್ವರಿ
೧೦ ದೆಸಸ್ತನಾದ ವಲ
೧೧ ಗಕ್ಕೆ ಮದತಿಪ ದಾ
೧೨ ಸಗ ಮಾಡಿಶಿ ಕೊ
೧೩ ಟ ಕಂಚಿನ ಹರೆ ॥

### ಕಳುವರಹಳ್ಳಿಯ ಶಾಸನ

ಸಿರಾ – ತಾವರೇಕೆರೆ – ಹೊಸೂರು ರಸ್ತೆಯಲ್ಲಿ ಕಳುವರಹಳ್ಳಿ ಗೇಟ್‌ನಿಂದ ಬಲಭಾಗಕ್ಕೆ, ಸಿರಾದಿಂದ ೨೩ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಗ್ರಾಮದಲ್ಲಿ ಜುಂಜಪ್ಪ,

* ಪ್ರಾಂಶುಪಾಲರು, ಎಸ್.ಎಮ್.ಆರ್.ಪಿ.ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ.

ಲಕ್ಷ್ಮಿ, ಕರಿಯಮ್ಮ, ತಿಮ್ಮಪ್ಪ ದೇವಸ್ಥಾನಗಳು ಇವೆ. ಗ್ರಾಮದ ಹೊರಗೆ ಪವಿತ್ರ ಸ್ಥಳ ಜುಂಜಪ್ಪನ ಸಮಾಧಿ ಇದೆ. ಇದು ಪ್ರಮುಖ ಸಾಂಸ್ಕೃತಿಕ ನೆಲೆಯಾಗಿದೆ. ಗ್ರಾಮದ ಮಧ್ಯ ಭಾಗದಲ್ಲಿನ **ಜುಂಜಪ್ಪ ದೇವಸ್ಥಾನದ ಗಂಟೆಯ** ಮೇಲೆ **ಸುತ್ತಲೂ ಬರೆದ ಕನ್ನಡ ಭಾಷೆಯ ಶಾಸನ**ವಿದೆ. ಈ ಗಂಟೆಯನ್ನು, ವಿಕ್ರುತು ಸಂವತ್ಸರದ ಬಾದ್ರಪದ ೧೦ ರಲ್ಲಿ ಅಜ್ಜಣ್ಣನ ಮಗ ಚಿಪ್ಪನ(ಡಿ)ಕೆ ದೊಡ್ಡ ಜುಂಜಪ್ಪನು ಹಾಕಿದ ಗಂಟೆ ಎಂದು ತಿಳಿಸುತ್ತದೆ. ಶಾಸನವು ೧೮ನೇ ಶತಮಾನದ ಬರವಣಿಗೆಯನ್ನು ಹೊಂದಿರುತ್ತದೆ.

**ಶಾಸನದ ಪಾಠ**

೧ ವಿಕ್ರುತು ಸಂವತ್ಸರದ ಬಾದ್ರಪದ ೧೦
೨ ಯಲು ಅಜ್ಜಣ್ಣನ ಮಗ ಚಿಟ್ಟನಡಿಕೆ ಗ ದೊಡ್ಡ ಜುಂಜಪ್ಪ
೩ ಅಕಿದ ಗಂಟೆ

**ಓಜಗುಂಟೆಯ ಶಾಸನ :** ಓಜಗುಂಟೆ ಗ್ರಾಮವು ಸಿರಾ – ಅಮರಾಪುರ ಮಾರ್ಗವಾಗಿ ಓಜಗುಂಟೆ ಗೇಟ್‌ನಿಂದ ಬಲಭಾಗಕ್ಕೆ ೧ ಕಿ.ಮೀ. ಸಿರಾದಿಂದ ೪ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಗ್ರಾಮದಲ್ಲಿ ಕುಂಚಿಟಿಗರ ಮಾಣಸೇನವರ ಕುಲದ ಮನೆದೇವರು ಮಲ್ಲೇಶ್ವರ ದೇವಸ್ಥಾನ ಇದೆ. ಈ ದೇವಸ್ಥಾನದ ಗುಡಿ **ಗೌಡರಾದ ಸಿರಾದ ಸಂತೇಪೇಟೆಯ** (ಮಲ್ಲಿಕಾಪುರದ) **ಮಲ್ಲೇಶಪ್ಪನವರ ಹತ್ತಿರ ಹರೆ** ಇದೆ. ಇದನ್ನು ಛಲವಾದಿ ಜನಾಂಗದವರಿಂದ ದೇವಸ್ಥಾನದ ವಿವಾದಕ್ಕೆ ಸಂಬಂಧಿಸಿದಂತೆ ಇದನ್ನು ದಾಖಲೆಗಾಗಿ ಇತ್ತೀಚೆಗೆ ತಂದಿಟ್ಟುಕೊಂಡಿರುತ್ತಾರೆ.

ಈ ಹರೆ ಶಾಸನವು ಕ್ರಿ.ಶ. ೧೮೩೭ರ ಕಾಲದ್ದಾಗಿದೆ. ಹಾರೆಯ ೨ ಭಾಗದಲ್ಲಿ ಶಾಸನವನ್ನು ಕನ್ನಡ ಭಾಷೆಯಲ್ಲಿ ಬರೆಯಲಾಗಿದೆ. ಶಾಸನದ ಪ್ರಾರಂಭದಲ್ಲಿ ಚಕ್ರ, ನಾಮ, ಶಂಖದ ರೇಖಾಚಿತ್ರ ಕೊರೆಯಲಾಗಿದೆ. ಶಾಸನದ ಎಡಭಾಗದಲ್ಲಿ ನಂದಿ ರೀತಿ ಕಾಣುವ ಚಿತ್ರವಿದೆ. ಓಜಗುಂಟೆ ಮಲ್ಲೇಶ್ವರ, ರಂಗನಾಥ ದೇವರಿಗೆ ಚಿಕ್ಕನಕೋಟೆ ಅಕ್ಕಸಾಲಿಗಳಿಗೆ ಸಿರಾ ನಗರದ ಮಲ್ಲಿಕಾಪುರದ ಗೌಡ ಅಜ್ಜಣ್ಣನು ಯೆರಕ ಹೊಯಿಸಿ ಈ ಹಾರೆಯನ್ನು ಒಪ್ಪಿಸಿದ್ದಾನೆ. ಈ ಶಾಸನದಲ್ಲಿ ಅಜ್ಜಣನ ನಾಲ್ಕು ತಲೆಮಾರನ್ನು ಬರೆಸಲಾಗಿದೆ. ಅಜ್ಜಣನ ತಂದೆ ಯಿರಂಗಣ, ಆತನ ತಮ್ಮ ಬಕ್ಕಣ, ಬಕ್ಕಣ್ಣನ ತಂದೆ ಬುಜರಂಗಣ್ಣ, ಆತನ ತಂದೆ ಅಜ್ಜಣ ಎಂದು ತಿಳಿಸಲಾಗಿದೆ.

**ಶಾಸನದ ಪಾಠ**

೧ ಶ್ರೀ ರಂಗನಥ
೨ ಶೈಲ್ಲಿವನ ಶೆಕಾ ೧೭೫೯ ಹೇ
೩ ವಳಂಬಿ ಸಂ॥ ಅ ಸ್ವಿಜ
೪ ಶುದ ೧೦ಯಲ್ಲು ಅಜಂಣ
೫ ನ ಮಗ ಬುಬರಂಗಣನ
೬ ಮಗ ಬಕಂಣನ ಮಗ
೭ ಯಿರಂಗಂಣ ಅಜಂಣ ವೊ
೮ ಜಗುಂಟೆ ಮಲ್ಲೇಶ್ವರ ಚಕ
೯ ನಕೊಟೆ ಅಕ್ಕಗಳಿಗೆ ರಂಗ
೧೦ ಧಮಗು ಸಹ ಮಲುಕಪುರ
೧೧ ದ ಗೌಡ ಅಜಂಣನು ಯೆರಸಿ
೧೨ ವಪಿಸಿದ ಹರೇ

**ಇನ್ನೊಂದು ಭಾಗದಲ್ಲಿ**

೧ ಶ್ರೀ ರಂಗಧಮನ ಪಾದದ್ಯವೆಗತೀ
೨ ವೊಜುಗುಂಟೆ ಮಾಣಚಿನೊರ ಹ
೩ ಳೆಮ ಚಲವದಿ ಸಿಬನ
೪ ಮಗ ರಂಗನ ಕೊರಳಿಗೆ ಅ
೫ ಕಿಸಿದ ಹರೆ ॥

**ನೆಲದಿಮ್ಮನಹಳ್ಳಿ ತಾಮ್ರದ ಜಯರೇಖೆ :** ಈ ಗ್ರಾಮದ ಪಟ್ಟಣದಾಸಪ್ಪನವರ ವಂಶಸ್ಥರಾದ ಮಂಜುನಾಥರ ಮನೆಯಲ್ಲಿ ೧೯ ಸೆಂಟಿಮೀಟರ್ ಉದ್ದ, ೮.೮ ಸೆಂಟಿಮೀಟರ್ ಅಗಲ, ೧ ಮಿಲಿಮೀಟರ್ ದಪ್ಪದ ಜಯರೇಖೆ ಇದೆ. ಈ ಶಾಸನದ ಭಾಷೆ ನೋಡಿದರೆ ೧೯ನೆಯ ಶತಮಾನದ ಕೊನೆಯ ಕಾಲದ್ದಾಗಿದೆ. ಇದೊಂದು ಕೂಟ ಶಾಸನವಾಗಿದೆ. ಶಾಸನವು ೧೭ ಸಾಲುಗಳನ್ನು ಒಳಗೊಂಡಿದೆ. ಜಯರೇಖೆಯ ಒಂದು ಭಾಗದಲ್ಲಿ ಮಾತ್ರ ಬರೆಯಲಾಗಿದೆ.

ಈ ಶಾಸನದಲ್ಲಿ ಪೂಜ್ಯ ಅಮ್ಮಯ್ಯನವರ ಅಣ್ಣತಮ್ಮಗಳು ಕಂಪಿಲ ಶ್ರೀ ಕಾಮಣ್ಣ ಅರಸರಿಗೆ ತಮ್ಮ ಸಾಮ್ರಾಜ್ಯ ವಿಸ್ತಾರ ಮಾಡುವುದಕ್ಕೆ ಮಡುಗದ ಕೈಯೊಳು (ಜಾಗ) ಹಣ ಸಂಗ್ರಹ ಮಾಡುವುದಕ್ಕೆ ಒಪ್ಪಗೆ ಕೊಟ್ಟಿರುವ ಒಂದು ತಾಮ್ರಪತ್ರ. ಇದರಲ್ಲಿ ಇಲ್ಲಿನ ಗೌಡ ಪ್ರಮುಖರಾದ ಯರಗುಂಡೆಯ ಮಜರೆ ಬೋರೆಗೌಡ, ಚುಳಗವುಡನ ಕಮ್ಮೇಗೌಡ, ಗಿರನಹಳ್ಳಿಯ ಕಮ್ಮೇಗೌಡ, ಬಾಣಗೆರೆಯ ಮಲ್ಲೇಗೌಡ, ಹುಯಿಲದೊರೆಯ ಹಾಲೆಗೌಡ, ಯತ್ತಿಗೇನಹಳ್ಳಿಯ ಚಿಕ್ಕಲಿಂಗೇಗೌಡ, ನ್ಯಾ(ಯ)ಗೆರೆ ಕುಮ್ಮಟೇಗೌಡರು ಇದಕ್ಕೆ ಸಾಕ್ಷಿಯಾಗಿ ರುಜು ಹಾಕಿರುತ್ತಾರೆ. ಹಾಗೂ ಈ ಶಾಸನವನ್ನು ಕಮ್ಮರಾಯಣನು ಕೆತ್ತಿದ್ದಾನೆ.



ಓಜಗುಂಟೆ ಗುಡಿ
ಹಾರೆಯ ಶಾಸನ



ನೆಲವಿಮ್ಮನಹಳ್ಳಿ
ತಾಮ್ರದ ಜಯರೇಖೆ

### ಶಾಸನದ ಪಾಠ

೧ ಸ್ವಸ್ತಿ ಶ್ರೀ ವಿಜಯಭದಯ ಶಲ್ಲಿವಹನ ಶಕ
೨ ವ ವೊರುಷಗಳು ೧೧೧೨ ನೆಯು ಸಂರದ ಚೈತ್ರಶು
೩ ಶೀ ಗುರುವರದಲ್ಲು ಮುಗ್ಗನಹಳ್ಳಿ ಅಮ್ಮ
೪ ಯನವರ ಪುಜ ಶಿಕಮಂಣ ಅಣ ತಮ
೫ ಳು ಸಹ ಸಾಶ್ರೀ ಕಾಮಂಣ ಕಂಪಿಲಿಯ ನವ್ರಿಗೆ
೬ ದೊಡ ದೇಶ ಮಡುವದಕೆ ಯೆಳು ಮ
೭ ದಲಿಸೂರಂಲ್ಲಿ ಅಣ ಅಕಿಶಿಕೊಂಡು ದೇ
೮ ವಶಕ್ಯ ಮಡುಗದಕೆ ಯೆಳು ಮದ
೯ ಲಿ ಸೂರು ಗೊತು ಮಡಿಯಿರುತರೆ ರುಜು
೧೦ ವೂ ಯರಗುಂಡೆ ಮಾಚೊರೆ ಗವುಡ
೧೧ ಚುಳಗೊಡನ ಕಮೆಗವುಡ
೧೨ ಗಿರಳನಹಳ್ಳಿ ಕಮೆಗವುಡ
೧೩ ಭಣಗೆರೆ ಮಲೆಗವುಡ
೧೪ ವೂಲಿದೊರೆ ಅಲೆಗವುಡ
೧೫ ಯಲೆಗೆನಹಳ್ಳಿ ಚಿಕಲಿಗೆ ಗವುಡ
೧೬ ನ್ಯಾಗೆರೆ ಕುಂಮಟೆ ಗವುಡ
೧೭ ಕಂಮರಾಸಂಣನು ಕೆತ್ತಿದು

(ಶಾಸನ ಓದಲು ನೆರವಾದ ಸುಂಕ ಗೋವರ್ಧನ, ಡಾ. ಪಿ.ವಿ. ಕೃಷ್ಣಮೂರ್ತಿರವರಿಗೆ ಕೃತಜ್ಞತೆಗಳು).

## ಆಧಾರ ಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಎನ್. ನಂದೀಶ್ವರ, ೨೦೦೮, **ಸಿರಾ ತಾಲೂಕಿನ ಸ್ಮಾರಕಗಳು ಹಾಗೂ ಶಾಸನಗಳು,** ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ.

೨. ಡಾ. ಎನ್. ನಂದೀಶ್ವರ, **ಸಿರಾ ತಾಲೂಕು ದರ್ಶನ,** ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ.

೩. **ಎಪಿಗ್ರಾಫಿಯ ಕರ್ನಾಟಕ, ಸಂಪುಟ ೧೨,** ತುಮಕೂರು ಜಿಲ್ಲೆ.

೪. **ಎಪಿಗ್ರಾಫಿಯ ಕರ್ನಾಟಕ, ಸಂಪುಟ ೧೬,** ತುಮಕೂರು ಜಿಲ್ಲೆ.

ಡಾ. ಎಂ.ಜಿ. ನಾಗರಾಜ್ *

# ಕೊಡಗಿನ ಕೊಂಗಾಳ್ವ ರಾಜಧಾನಿ ಮಾಲಂಬಿ ಮತ್ತು ಮಾದ್ರೆಯ ಹೊಸ ವೀರ ಶಾಸನಗಳು

ಕೊಡಗಿನ ಕೊಂಗಾಳ್ವರ ಮೂಲಪುರುಷ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಮನಿಜ. ಚೋಳ ಯುವರಾಜ ಪಂಚವನ್ ಮಹಾರಾಯ (ರಾಜೇಂದ್ರಚೋಳ) ತಂದೆಯಿಂದ ಆದೇಶಿತನಾಗಿ 'ಮಾಲವ್ವಿ'ಯಲ್ಲಿ ಕ್ರಿ.ಶ. ಸುಮಾರು ೧೦೦೪ರಲ್ಲಿ ಅವನಿಗೆ ಪಟ್ಟಿ ಕಟ್ಟಿದ.[೧] ಚೋಳಸಾಮಂತಿಕೆಯನ್ನು ಕ್ರಿ.ಶ. ಹೊಯ್ಸಳರು ಬರುವವರೆಗೂ ಕೊಂಗಾಳ್ವರು ಹೊಂದಿದ್ದರು. ಸುಳುಗೋಡು ಸೋಮವಾರ ಗ್ರಾಮದ ಕ್ರಿ.ಶ. ೧೦೭೯-೮೦ರ ಶಾಸನವು[೨] ಕೊಡಗಿನ ಕೊಂಗಾಳ್ವರ ನಾಲ್ಕನೆಯ ದೊರೆ (!) ರಾಜೇನ್ದ್ರ ಪ್ರಿಥುವೀ ಕೊಂಗಾಳ್ವನನ್ನು ವರ್ಣಿಸುವಲ್ಲಿ 'ಮಹಾಮಂಡಲೇಶ್ವರಂ **ಒಱೆಯೂರ್ಪುರಾಧೀಶ್ವರಂ** ಜಟಾಚೋಳ ಕುಳೋದಯಾಚಳಗಭಸ್ತಿಮಾಳಿ ಸೂರ್ಯ್ಯ ವಂಶ ಶಿಖಾಮಣಿ ಶರಣಾಗತ ವಜ್ರಪಂಜರಂ ಶ್ರೀಮದ್ರಾಜೇನ್ದ್ರ ಪ್ರಿಥುವೀ ಕೊಂಗಾಳ್ವಂ' ಬಸದಿ ಕಟ್ಟಿಸಿದ ಬಗ್ಗೆಯೂ ಹೇಳಿದೆ.

ಇಲ್ಲಿ 'ಒಱೆಯೂರ್ಪುರಾಧೀಶ್ವರಂ' ಎನ್ನುವಲ್ಲಿ ತಿರುಚನಾಪಳ್ಳಿ ಸನಿಹದ ಚೋಳರ ರಾಜಧಾನಿ ಆಗಿದ್ದ. ಆ ಊರಿನ ಒಡೆಯರಾಗಿ ಮೊದಲಿದ್ದ ಕೊಂಗಾಳ್ವರಿಗೂ ಆ ಬಿರುದಿತ್ತು ಎಂದಾಗುತ್ತದೆ. ಚೋಳ ರಾಜಕೇಸರಿವರ್ಮನಿಗಿದ್ದ ವಂಶದ ಬಿರುದಿನಂತೆ ಅದೇ ಅರ್ಥದ 'ಚೋಳಕುಳ ಗಘನ ಗಭಸ್ತಿ ಮಾಳಿ' ಚೋಳವಂಶದ ಗಗನಕ್ಕೆ ಕಿರಣ ಮಾಲೆಯಾಗಿರುವವನು-ಎಂದು ರಾಜೇಂದ್ರ ಪ್ರಿಥುವೀ ಕೊಂಗಾಳ್ವನಿಗಿದೆ. ಅಂದರೆ ಕೊಂಗಾಳ್ವರು ಮೊದಲಿಗೆ ಚೋಳನಾಡಿನಲ್ಲಿ ಒಱೆಯೂರು ಆಳುತ್ತಿದ್ದು, ಅದು ಆಕ್ರಮಿತವಾದ ಮೇಲೆ ಕಾಲಾಂತರದಲ್ಲಿ ಕೊಡಗಿನತ್ತ ಸರಿದಿರುವ ಸೂಚನೆ ಕಾಣುತ್ತದೆ.

ಶಿಲಪ್ಪದಿಗಾರಂನಲ್ಲಿ **ಕೊಡಗು ಕೊಂಗರ್** ಎಂದಿದೆ. ಇವರು ಕೊಯಮತ್ತೂರಿನವರೆಗೆ ಆಳಿದವರು. ಒಂದು ಕಾಲಕ್ಕೆ ಚೋಳರ ರಾಜಧಾನಿ ಕರೂರಿನ ಅಧಿಪತಿಗಳಾಗಿದ್ದರು. ಕ್ರಿ.ಶ. ಸುಮಾರು ೭೭೦ರ ಪಾಂಡ್ಯರಾಜ ಶೆಡೈಯನ್ ಪರಾಂತಕನ ವೇಳ್ವಿಕುಡಿ ಶಾಸನದಲ್ಲಿ 'ವೇಱ್ಕೊಂಗರ್' ಎಂದಿದೆ.[೩] ಕ್ರಿಪೂ. ೧೦೭೫ರ ವೇಳೆಗೆ ಕುಂಭ ಸಂಭವ ಅಗಸ್ತ್ಯನು ವೆಲೀರರ ೧೮ ಕುಟುಂಬಗಳು ಹಾಗೂ ಕುರುಬರ ಮೂಲಪುರುಷರಾದ ಅರುವಲರ್ ಬುಡಕಟ್ಟಿನವರನ್ನು ಕರೆದುಕೊಂಡು ದಕ್ಷಿಣ ಭಾರತದ ಕೇರಳದ ಕಡೆ ಬಂದನೆಂದು ಕೇರಳದ ಗ್ರಂಥಗಳು ತಿಳಿಸುತ್ತವೆ.[೪] ಅಂದರೆ ಈ ವೆಲೀರರ ವಂಶಜರು ವೇಱ್(ವೇಟ್) ಕೊಂಗರ್ ಆಗಿದ್ದಿರುವ ಸಾಧ್ಯತೆಯನ್ನು ಸೂಚಿಸುವಂತಿದೆ. ಇವರು ಚೇರ ಮತ್ತು ಚೋಳರ ಪ್ರಾಬಲ್ಯಕ್ಕೆ ಸೆಡ್ಡು ಹೊಡೆದಿದ್ದರು. ಕರೂರಿನ ಅಧಿಪತಿಗಳಾಗಿದ್ದ ಇವರನ್ನು ಮುಂದೆ ಚೋಳರು ಸೋಲಿಸಿ ಶರಣಾಗಿಸಿದರು ಎಂದು ಶೆಟ್ಟರ್ ಅಭಿಪ್ರಾಯಪಡುತ್ತಾರೆ.[೫] ಬಹುಶಃ ಈ ವೇಟ್ (!) ಕೊಂಗರು ಚೋಳರಿಂದ ಸೋತಮೇಲೆ ಕೊಡಗಿನತ್ತ ಬಂದಿರುವಂತಿದೆ.

ಉತ್ತರ ಕನ್ನಡ ಜಿಲ್ಲೆಯ ಗುಡ್ನಾಪುರದ ಕ್ರಿ.ಶ. ಸುಮಾರು ೫ನೆಯ ಶತಮಾನದ ಕದಂಬರ ರವಿವರ್ಮನ ಶಾಸನದಲ್ಲಿ 'ಗಜ್ಗ ಪುನ್ನಾಟ ಕೊಂಜ್ಞಾಳ ಪಾಂಣ್ಡ್ಯಾ ಉಪಾದಯಃ' ಎಂದಿದೆ. ಅಂದರೆ ೫ನೇ ಶತಮಾನದಲ್ಲಿ ಕದಂಬರು ಕೊಂಗಾಳ್ವರನ್ನು ಗೆದ್ದಿದ್ದರೆಂದಾಗುತ್ತದೆ. ಅದಾಗಿ ಕದಂಬರ ಆಳ್ವಿಕೆಯು ಕರ್ನಾಟಕದ ಕೊಡಗಿನ ಕೊಂಗಾಳ್ವರ ಪ್ರದೇಶದವರೆಗೂ ಹರಡಿತ್ತು ಎಂದಾಗುತ್ತದೆ. ಬಹುಶಃ 'ಮನಿಜ' ಪೂರ್ವಜ ಮೂಲ ಕೊಂಗಾಳ್ವರು, ಒಱೆಯೂರು-ಕರೂರುನಲ್ಲಿ ಆಳುತ್ತಿದ್ದು ಕ್ರಿ.ಶ. ಸುಮಾರು ೩ನೇ ಶತಮಾನದಲ್ಲಿ ಕೊಡಗಿಗೆ ವಲಸೆ ಬಂದಿರುವ ಇನ್ನೊಂದು ಸಾಧ್ಯತೆಯೂ ಕಾಣುತ್ತದೆ.

ಸಂಗಂ ಚೋಳರು ಕಾವೇರಿಪ್ಪೂಂಪಟ್ಟಿನಮ್ ರಾಜಧಾನಿಯಲ್ಲಿ ಆಳುತ್ತಿದ್ದ ಸಮಯ. ಕ್ರಿ.ಶ. ಸುಮಾರು ೨-೩ನೇ ಶತಮಾನದಲ್ಲಿ ಸಮುದ್ರ ಕೊರೆತದಿಂದ ಆ ರಾಜಧಾನಿ ನಾಶವಾಗಲು ಚೋಳರು ಒರೆಯೂರನ್ನು ರಾಜಧಾನಿ ಮಾಡಿಕೊಂಡರು. (Kuppuram, *Imperial Cholas is Kamataka*, PP. 11-12). ಹೀಗೆ ಸಂಗಂ ಚೋಳರು ಒಱೆಯೂರನ್ನು ಆಕ್ರಮಿಸಲಾಗಿ ಮೊದಲ ಕೊಂಗಾಳ್ವರು (ಮೂಲ) ಕ್ರಿ.ಶ. ಸುಮಾರು ೩ನೆಯ ಶತಮಾನದ ವೇಳೆಗೆ ಕೊಡಗಿಗೆ ವಲಸೆಗೊಂಡಿರಬಹುದು. ಆಗ ಕದಂಬರ ಆಳ್ವಿಕೆಗೆ ಕೊಡಗು ಭಾಗ ಇದ್ದದ್ದು ಕಾಣುತ್ತದೆ, ಡಾ. ಹುಳ್ಷ್ ಮತ್ತು ಇ.

* ಅನರ್ಘ್ಯ, ಶ್ರೀ ಜಚನಿ ಕೃಪ, ೨೨೧, ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೧೦.

ಮಹದೇವನ್ ಅವರು ಎಡಕಲ್ಲು ಗುಡ್ಡದ ಗವಿಯ ಸುಮಾರು ೨-೩ನೇ ಶತಮಾನದ ಶಾಸನಗಳನ್ನುಕಂಡುಹಿಡಿದು ಅದರಲ್ಲಿಯ ಕದಂಬ ವಿಷ್ಣುವರ್ಮನ ಆಳ್ವಿಕೆಯು ಕೊಡಗಿನಲ್ಲಿ ಇತ್ತು, ಎಂಬ ಸುಳುಹನ್ನು ತೋರಿದ್ದಾರೆ. ಅದಾದ ನಂತರ ಸಂಗಂ ಚೋಳರು ಒರೆಯೂರು ರಾಜಧಾನಿ ಆಕ್ರಮಿಸಲು ಕೊಜ್ಞಾಳರು ಕೊಡಗಿನಲ್ಲಿ ಕದಂಬ ಸಾಮಂತರೆನಿಸಿ ರಾಜ್ಯ ಕಟ್ಟಲಾರಂಭಿಸಿರಬೇಕು. ನಂತರ ಅವರು ಸ್ವತಂತ್ರವಾಗುವ ಪ್ರಯತ್ನ ಮಾಡಿದಾಗ ಕ್ರಿ.ಶ. ೫ನೇ ಶತಮಾನದ ಗುಡ್ನಾಪುರ ಶಾಸನ ರೀತ್ಯಾ ಕದಂಬರ ಅಂಕೆಗೆ ಮತ್ತೆ ಒಳಗಾದಂತಿದೆ. ಕದಂಬರ ನಂತರ ಕೊಡಗಿನಲ್ಲಿ ಗಂಗರ ಅಂಕೆಗೆ ಒಳಗಾಗಿ ಅವರ ಸಾಮಂತರಾದರೆನ್ನಬೇಕು. ತತ್ಫಲವಾಗಿ ಜೈನಧರ್ಮ ವನ್ನು ಅನುಸರಿಸಿದರು. ಇದಕ್ಕೆ ಸಾಕ್ಷಿಯಾಗಿ ಕೊಡಗಿನಲ್ಲಿ ಬಸದಿಗಳಿಗೆ, ಜೈನಗುರುಗಳಿಗೆ ಅವರು ನೀಡಿದ ದಾನದ ಸ್ವರೂಪವೇ ಇದೆ. ಗಂಗರ ಅಂಕೆಯಿಂದ ಅವರು ಬಿಡುಗಡೆ ಆದದ್ದು ೯-೧೦ನೇ ಶತಮಾನದಲ್ಲಿ ಬೆಳಕಿಗೆ ಬಂದ ತಂಜಾವೂರು ವಿಜಯಾಲ ಬುಡಕಟ್ಟಿನ ಚೋಳನ ಪರಂಪರೆಯ ರಾಜರಾಜನ ಕಾಲದಲ್ಲಿ ಪಂಚವನ್ ಮಹಾರಾಯನು (ರಾಜೇಂದ್ರ ಚೋಳ) 'ಮಾಲವ್ವಿ'ಯಲ್ಲಿ ಕ್ರಿ.ಶ. ಸು. ೧೦೦೪ ಮನಿಜನಿಗೆ ಪಟ್ಟ ಕಟ್ಟಿದಾಗಲೆ ಎನ್ನಬೇಕು.

ಈ ಹಿಂದೆ ಗಂಗರು ಈ ಕೊಂಗು ನಾಯಕರನ್ನು ಮಣಿಸಿದ್ದಾಗ 'ಕೊಂಗಣಿವರ್ಮ' ಎಂಬ ಬಿರುದು ಪಡೆದಿರಬಹುದು. ಕಾರಣ ಗಂಗರ ಒಂದನೇ ಮಾಧವ ಕೊಂಗು ದೇಶದವರೆಗೆ, (ಕೊಯಮತ್ತೂರು, ಸೇಲಂ ಜಿಲ್ಲೆ) ಕೊಂಕಣ ದೇಶದವರೆಗೆ ತನ್ನ ರಾಜ್ಯ ವಿಸ್ತಾರ ಮಾಡಿದ ವಿಷಯವಿರುವಲ್ಲಿ ಈ ಅಂಶ ಅಡಗಿರುವಂತಿದೆ. ಗಂಗರ ಆಶ್ರಿತರಾಗಿ ಕೊಡಗಿನಲ್ಲಿ ಮನಿಜನ ಪೂರ್ವಜರು ನೆಲೆಸಿರಬೇಕು. ಆದರೆ ಕ್ರಿ.ಶ. ೧೦೦೪ರಲ್ಲಿ ಗಂಗರ ಮೇಲೆ ಚೋಳರು ಏರಿ ಬರುವಲ್ಲಿ ಮೊದಲೇ ತಮಿಳುನಾಡಿನ ಒಱೆಯೂರನ್ನು ಆಳಿದವರಾಗಿದ್ದು ಪೂರ್ವ ವ್ಯಾಮೋಹದಲ್ಲಿ ಚೋಳರ ಪರ ಕೊಂಗರ್ ಕೊಂಗಾಳ್ವರು ವಾಲಿರಬೇಕು. ಗಂಗರ ವಿರುದ್ಧ ಚೋಳರೊಡನೆ ಸೇರಿದ ಮನಿಜ, ಶೌರ್ಯ ತೋರಿ ಚೋಳರ ಜಯಕ್ಕೆ ಕಾರಣನಾಗಿರಬೇಕು. ಇದು ಪನಸೋಗೆಯಲ್ಲಿ ನಡೆದ ಯುದ್ಧ. ಈ ಜಯದ ಕಾರಣ, ಕೊಡಗಿನಲ್ಲಿಯೇ ಇದ್ದ 'ಮನಿಜ'ನಿಗೆ ಚೋಳರು ಕೊಡಗಿನ 'ಮಾಲವ್ವಿ'ಯಲ್ಲಿ ಪಟ್ಟ ಕಟ್ಟಿ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಎಂಬ ಬಿರುದನ್ನು ವಂಶನಾಮ ಸೃಷ್ಟಿಸಿ ನೀಡಿದರೆನ್ನಬೇಕು. ಕೊಂಗು ಪ್ರದೇಶ ಆಳಿದವ 'ಕೊಂಗಾಳ್ವ' ಎಂಬ ಪೂರ್ವ ಪರಂಪರೆಯನ್ನು ಪರಿಭಾವಿಸಿ ಚೋಳರು ಪಟ್ಟ ಕಟ್ಟಿದರೆನಿಸುತ್ತದೆ.

ಕೊಂಗಾಳ್ವರು, ಗಂಗರ ಅಧೀನದಲ್ಲಿದ್ದಾಗ ಜೈನಧರ್ಮ ವನ್ನು ಅವಲಂಬಿಸಿರಬೇಕು. ಅದಾಗಿ ಕ್ರಿ.ಶ. ೧೦೫೮ರ ಮುಳ್ಳೂರು ಪಾರ್ಶ್ವನಾಥ ಬಸದಿಗೆ ಮನಿಜನ ವಂಶಿಕ ರಾಜೇಂದ್ರ ಕೊಂಗಾಳ್ವನು ದಾನ ಮಾಡಿದ ವಿಷಯ ಶಾಸನೋಕ್ತವಿದೆ, ೧೧ನೆಯ ಶತಮಾನದಲ್ಲಿ ರಾಜಾಧಿರಾಜ ಕೊಂಗಾಳ್ವ ಹಾಗೂ ಅವನ ಅಬ್ಬೆ ಪೋಚಬ್ಬರಸಿ ಜೈನಗುರು ಗುಣಸೇನ ಪಂಡಿತ ದೇವರಿಗೆ ಬಸದಿ ಮಾಡಿಸಿ ವಾಸಸ್ಥಾನ ಸಹಿತ ದಾನವಿತ್ತ ಸಂಗತಿ ಇದೆ.[೭] ಇಂಥ ದಾನ, ತೆರಿಗೆ ಪರಿಹಾರ ಕೊಂಗಾಳ್ವರ ಕೊಡಗಿನ ಕೊನೆಯ ಶಾಸನ ಕ್ರಿ.ಶ. ೧೧೭೫ರ ನಂದಿಗುಂದ ಶಾಸನದವರೆಗೂ ಕಾಣಬರುತ್ತದೆ.[೮] ಅವರು ಕೊಡಗಿನಿಂದ ಹಾಸನ ಜಿಲ್ಲೆಯ ಮೊಳತೆಬೀಡಿಗೆ ರಾಜಧಾನಿ ಬದಲಾಯಿಸಿದರೂ ಅವರ ಆಶ್ರಿತವಾಗಿದ್ದ ಜೈನಧರ್ಮದ ಪ್ರಭಾವ ಕೊಡಗಿನಲ್ಲಿ ಮುಂದುವರಿದಿದ್ದುದಕ್ಕೆ ಶಾಸನಗಳೆ ಸಾಕ್ಷಿ ಹೇಳುತ್ತವೆ. ಆದರೂ ಕೆಲವು ಶಿವಾಲಯಗಳಿಗೂ ಅವರು ದಾನ ನೀಡಿ ಸಾಮರಸ್ಯ ತೋರಿದರು.

ಇಂಥ ಕೊಂಗಾಳ್ವರಿಗೆ ಸುಮಾರು ಸಾವಿರ ವರುಷದ ಹಿಂದೆ ಪಟ್ಟವಾದ ಊರು 'ಮಾಲವ್ವಿ'ಯು ಮಾಲಂಬಿ ಎನಿಸಿ ಇಂದಿಗೂ ಇದೆ. ಆದರೆ ಆ ಗ್ರಾಮದಲ್ಲಿ ಪಟ್ಟವಾದ ಸ್ಥಳದ ಇತಿಹಾಸ, ಐತಿಹ್ಯದ ಸ್ಪರ್ಶವನ್ನು ಹೊಂದಿದೆ.

ಮಾಲಂಬಿ ಬೆಟ್ಟದ ಪೂರ್ವ ಬುಡದಲ್ಲಿ ಬಸವೇಶ್ವರ ದೇಗುಲವಿದೆ. ದೇಗುಲದ ಬಲಬದಿಗೆ 'ಮನಿಜ'ನ ಮಾಲಂಬಿ ಶಾಸನ ತುಂಡಾಗಿ ಬಿದ್ದಿದೆ. ಈ ದೇಗುಲದಿಂದ ಒಂದು ಮೈಲಿ ಪೂರ್ವಕ್ಕೆ ಇಂದಿನ ಆಲೂರು (ಹಾಳೂರು !) ಇದೆ. 'ಆಲ್' ಕಿರಿಚು, ಕೂಗಾಡು ಎಂಬರ್ಥ ಹಾಗೂ 'ಕೋಳಾಹಳ ಕೊಂಗ' ಎಂಬ ಶಾಸನೋಕ್ತ ಬಿರುದು ಕೊಂಗಾಳ್ವರ ನಾಯಕರಿಗೆ ಕೆಲವು ಶಾಸನಗಳಲ್ಲಿ ಕಂಡುಬರುವಲ್ಲಿ ಕೊಂಗಾಳ್ವರ ಮನಿಜ ಕೊಂಗರ ಪೈಕಿಯವನಾಗಿದ್ದರಿಂದ ಊರಿಗೆ ಈ ಹೆಸರು ಬಂದಿರಬಹುದೆ! ಈ ಊರು ಪಾಳೇಗಾರರಿದ್ದ ನೆಲೆ ಎಂಬುದು ಸ್ಥಳೀಯರ ಅಂಬೋಣ. ಕಪ್ಪು ಮಣ್ಣಿನ ಭೂಮಿ ಸುತ್ತುವರಿದಿದೆ. ಇಲ್ಲಿ ಜೋಳ, ಭತ್ತದ ಬೆಳೆಗಳು ಮಳೆ ಆಸರೆಯಲ್ಲಿ ಬೆಳೆಯಲ್ಪಡುತ್ತವೆ.

ಆಲೂರಿಗೆ ಸೇರಿದ ಈ ಊರಿನ ಪೂರ್ವಕ್ಕೆ ಸುಮಾರು ಮುಕ್ಕಾಲು ಮೈಲಿ ದೂರದಲ್ಲಿ ಕಡಿದಾದ ಬಂಡೆಯ ಗುಡ್ಡವಿದೆ. ಈ ಗುಡ್ಡವನ್ನು **'ಮುದುಕಿ ಗುಡ್ಡ'**ವೆಂದು ಕರೆದು ಅದರ ಹಿರಿಯತನ ಅರ್ಥಾತ್ ಪ್ರಾಚೀನತೆಯ ಸಂಕೇತವನ್ನು ಜನರು ಸೂಚಿಸುತ್ತಾರೆ. ಈ ಮುದುಕಿಗುಡ್ಡ ಏರಲು ತೀರ ಕಷ್ಟವೇನಿಲ್ಲ. ಸುತ್ತಲ ಪ್ರದೇಶಕ್ಕೆ ಸ್ಪಷ್ಟವಾಗಿ ಕಾಣಿಸುವ ಈ ಗುಡ್ಡದ ನೆತ್ತಿಯಲ್ಲಿ ಏಕಗರ್ಭಗೃಹದ ಪೂರ್ಣಕಲ್ಲುಕಟ್ಟಡ ಶಿಥಿಲವಾಗಿದ್ದರೂ ಎದ್ದು

ಕಾಣುತ್ತದೆ. ಚೋಳಶೈಲಿಯ ತೆರೆದ ಏಕಗರ್ಭಗೃಹ ಮಂಟಪ ವೆನಿಸುವ ಈ ನೆಲೆಯ ಮನಿಜನಿಗೆ 'ಪಟ್ಟಾಭಿಷೇಕವಾದ ಮಂಟಪ' ವೆಂದು ಸಾಧಿಸಲೂ ಅವಕಾಶವಿದೆ. ಈಗ ಮಂಟಪದ ಶಿಲೆಯ ತೊಲೆಗಳು ಕಳಚಿಬಿದ್ದಿವೆ. ಆದರೆ ಮಂಟಪದ 'ರಾಜ ಗಾಂಭೀರ್ಯ'ದ ವರ್ಚಸ್ಸು ಉಳಿದಿದೆ. ರಾಜರು ಕೂರುತ್ತಿದ್ದ ನೆಲೆ ಎಂಬ ಐತಿಹ್ಯವು ಈ ಮಂಟಪದ ಬಗ್ಗೆ ಇಲ್ಲಿಯ ಜನರಲ್ಲಿದೆ. ಅಂತಾಗಿ ಇದು ಕೇವಲ ಶಿಲಾ ಅವಶೇಷವೆನಿಸುವುದಿಲ್ಲ. ಮಂಟಪದ ಭಿತ್ತಿಯಲ್ಲಿ ಸ್ತಂಭಶಿಲ್ಪದ ಆಕೃತಿ ಎದ್ದು ಕಾಣುತ್ತದೆ. ಹಿಂಬದಿ ಶಿಲಾಭಿತ್ತಿ ೯' ಉದ್ದ ೫' ಅಗಲ, ದಪ್ಪ ೧ ೧/೨ ಅಡಿ ಇದ್ದು ದಟ್ಟವಾಗಿ ಚೋಳಶೈಲಿಯ ಕಟ್ಟಡವನ್ನು ಹೋಲುತ್ತದೆ. ರಾಜೇಂದ್ರ ಸಿಂಹ ಚತುರ್ವೇದಿ ಮಂಗಲವೆನಿಸಿ ಕೆಳಲೈನಾಡಿನ ಮಳೂರು (ಚನ್ನಪಟ್ಟಣ ತಾಲ್ಲೂಕು ರಾಮನಗರ ಜಿಲ್ಲೆ) ಅಪ್ರಮೇಯ ದೇಗುಲದ ಕೆಲ ಶಿಲ್ಪ ಸ್ತಂಭಶೈಲಿಯನ್ನು ಈ ಕಟ್ಟಡದ ಅಂಚು ಮೂಲೆಯ ಸ್ತಂಭ ಹೋಲುವಂತಿದೆ. ಅದಾಗಿ ಇದು ಚೋಳರ ಕಾಲದ ನಿರ್ಮಿತ ಮಾದರಿ ಎನ್ನಬೇಕು. 'ಮನಿಜ'ನ ಪಟ್ಟದ ವಿಷಯ ಹೇಳುವ ಶಾಸನ ಮಾಲಂಬಿಯಲ್ಲಿದ್ದು ಎರಡು ತುಂಡಾಗಿ ಬಿದ್ದಿದೆ.

'ಮುದುಕಿ ಗುಡ್ಡ'ದ ಬಂಡೆಯ ಮೇಲಿನ ಎತ್ತರದ ವೇದಿಕಾ ಮಂಟಪವು ದೂರಕ್ಕೆ ಪಟ್ಟ ಕಟ್ಟಿದ ನೆಲೆಯಂತೆ ಕಾಣುತ್ತದೆ. ದೇಗುಲ ೧೫ ಅಡಿ ಚತುರಶ್ರವಾಗಿದೆ. ಹಿಂಬದಿ ಭಿತ್ತಿಯಲ್ಲಿ ಅಶ್ವಾರೋಹಿ ವೀರನ ಶಿಲ್ಪವಿದೆ. ಸೊಂಟದ ಮೇಲೆ ಹಸ್ತವಿಟ್ಟು ಸ್ಥಾನಕ ಭಂಗಿಯ ಉಬ್ಬು ಶಿಲ್ಪವೂ ಇದೆ. ಆಸೀನ ಶಿಲ್ಪವೂ ಇದೆ. ಅಧಿಷ್ಠಾನದ ಮೂರು ಹಂತಗಳಿದ್ದು, ಅದರ ಮೇಲೆ ಭಿತ್ತಿ ಶಿಲೆಗಳು, ನಾಲ್ಕು ಮೂಲೆಗಳಲ್ಲಿ ಅಂಚು ಸ್ತಂಭಗಳು ಸೇರಿ, ಮುಂಬದಿ ತೆರೆದ ಭಾಗವಿದ್ದು, ವಿಶಿಷ್ಟ ಅಂದವನ್ನು ತನ್ನ ಅವಶೇಷ ಸ್ಥಿತಿಯಲ್ಲಿಯೂ ಈ ಶಿಲಾಕಟ್ಟಡ ತೋರಿಕೊಂಡಿದೆ. ಪಟ್ಟದ ವೇದಿಕೆ ಎಂದು ರೂಹನ್ನು ತೋರುವಂತಿದೆ. ಅಧಿಷ್ಠಾನವು ವಾಸ್ತುದೃಷ್ಟಿಯಿಂದ ಭಿತ್ತಿ, ಕುಮುದ ಖುರಿಕ, ಕಾರ್ನಿಕ, ಕಂಟಕ ಭಾಗಗಳನ್ನು ವೇದಿ ಸಹಿತ ಹೊಂದಿದೆ ; ಅದರ ಮೇಲೆ 'ಪಾದ'ವೆನ್ನುವ ಶಿಲಾಭಿತ್ತಿ ಶರೀರ, ಪ್ರಸ್ತರ ಭಾಗವಿದ್ದುದು ಅವಶೇಷಗಳಿಂದ ವಿದಿತ. ಮಂಟಪ ಒಳಕೇಂದ್ರದಲ್ಲಿ ಪೀಠವೂ ಚೆಲ್ಲಾಪಿಲ್ಲಿಯಾಗಿ ಇದೆ. ನೋಡುಗರಿಗೆ ಕೇವಲ ಬೆಟ್ಟದ ಮೇಲಣ ವೀಕ್ಷಣ ಮಂಟಪದ ವೆನಿಸದೆ, ಒಂದು ರಾಜಯೋಗ್ಯ ಮಂಟಪದಂತೆಯೆ ಭಾಸ ವಾಗುತ್ತದೆ. ಸುತ್ತಲ ತಗ್ಗಿನ ಪರಿಸರದಲ್ಲಿ ಎದ್ದು ಕಾಣುವ 'ಮುದುಕಿ ಗುಡ್ಡ'ದ ನೆತ್ತಿಯ ಈ ಮಂಟಪ ಪಟ್ಟ ಕಟ್ಟಿದ ನೆಲೆ ಎನಿಸುತ್ತದೆ. ಪ್ರಾಚೀನತೆಯ ಸೊಗಡನ್ನು ದಟ್ಟವಾಗಿ ಬೀರುತ್ತದೆ.

ಐತಿಹ್ಯದ ರೀತ್ಯಾ, ಮಾಲಂಬಿ ಬೆಟ್ಟದ ಮೇಲಿರುವ ಮಲ್ಲಿಕಾರ್ಜುನ (ಮಾಲಂಬಿ ಮಳೆ ಮಲ್ಲೇಶ್ವರ) ಬೆಟ್ಟದಪುರದ ಅನ್ನದಾನಿ ಮಲ್ಲಿಕಾರ್ಜುನ ದೇವರ ತಮ್ಮನಂತೆ. ಅಣ್ಣನ ನೆಲೆ ಎತ್ತರದಲ್ಲಿರಲಿ ಎಂದು ಈ ಮಳೆ ಮಲ್ಲೇಶ ತಗ್ಗಾದ ಮಾಲಂಬಿ ಬೆಟ್ಟದಲ್ಲಿ ನಿಂತನಂತೆ. ಅಣ್ಣ ತಮ್ಮಂದಿರಲ್ಲಿ ಮನಸ್ತಾಪ ವಾದರೂ ಅಣ್ಣನಿಗೆ ಗೌರವ ಕೊಟ್ಟು ಇಲ್ಲಿಗೆ ಬಂದು ನಿಂತನಂತೆ. 'ಮುದುಕಿಮನೆ' ಈ ಬೆಟ್ಟದಲ್ಲಿ ಇತ್ತಂತೆ. ಮಳೆಮಲ್ಲೇಶನಿಗೆ ನೆಲೆ ಕೊಡಲು ಆ ಮುದುಕಿ ಗುಡ್ಡಕ್ಕೆ ಹೋದಳಂತೆ, ಅಲ್ಲಿ ಐಕ್ಯವಾದಳಂತೆ. ಈ ಕತೆಯ ಸಂಕೇತವೇ ಪ್ರಾಚೀನ ನೆಲೆಗಳ ಪ್ರದೇಶ ಮಾಲಂಬಿ–ಮಾಲವ್ವಿ (ಮಲೆಯ + ಅವ್ವಿ=ಮಾಲವ್ವಿ) ಆಗಿತ್ತು ; ಮಾಲ + ಅವ್ವಿ ಎಂದರೂ ಹಿರಿಯ ಅವ್ವೆಯ ಊರು ಎಂಬ ನಿಷ್ಪತ್ತಿಗೂ ಅವಕಾಶ ನೀಡುತ್ತದೆ ಎನ್ನಬೇಕು. ಹೀಗಾಗಿ ಪಟ್ಟ ಕಟ್ಟಿದ 'ಮಾಲವ್ವಿ'ಯ ಗುಡ್ಡೆ ಪ್ರಾಚೀನ ಚೋಳರ ಕಾಲದ ಪಟ್ಟದ ನೆಲೆ ಎಂಬುದಕ್ಕೆ ಒತ್ತಾಸೆ ಆಗುತ್ತದೆ. 'ಮಾಲವ್ವಿ'ಯೆ 'ಮುದುಕಿ ಗುಡ್ಡೆ' ಎಂದು ಕಾಲಾಂತರದ ಐತಿಹ್ಯವಾಗಿರುವಂತಿದೆ.

ಮಾಲವ್ವಿ, ಈ 'ಮುದುಕಿ ಗುಡ್ಡೆ' ಯಿಂದ ಉತ್ತರಕ್ಕೆ ಅರ್ಧ ಕಿ.ಮೀ. ದೂರದಲ್ಲಿ ಕೊಡಗಿನ ಗಡಿಯಲ್ಲಿ (ಮೊದಲು ಕೊಡಗಿಗಿದ್ದು ಈಗ ಅರ್ಕಲಗೂಡು ತಾಲ್ಲೂಕಿಗೆ ಸೇರಿದ) ಸುಳುಗೋಡು ಸೋಮವಾರಗ್ರಾಮವಿದೆ. ಅಲ್ಲಿ ಇಂದಿನ ಬಸವೇಶ್ವರ ದೇಗುಲವಿದೆ. ಕ್ರಿ.ಶ. ೧೦೭೯–೮೦ರ ರಾಜೇಂದ್ರ ಪ್ರಥ್ವಿ ಕೊಂಗಾಳ್ವನ ಶಾಸನವು ಹಳೆಯ ಬಸ್ತಿಯ ಬಳಿ ಇದ್ದು ಮೂಲಸಂಘ ಕಾಣೂರ್ಗಣ, ತಗರಿಗಚ್ಚದ ಗಣ್ಡವಿಮುಕ್ತ ಸಿದ್ಧಾಂತ ದೇವರಿಗೆ ನಿರ್ಮಿಸಿ ಭೂದಾನ ನೀಡಿದ ವಿಷಯ ಹೇಳಿದೆ ; ಜೈನಯತಿಯ ಪ್ರಶಸ್ತಿಯನ್ನು ಹೇಳಲಾಗಿದೆ.[೮] ಬಸವಣ್ಣನ ದೇವಸ್ಥಾನದ ನವರಂಗದ ತೊಲೆಯ ಮೇಲೆ, ಸಮಾಧಿ ಮರಣದಿಂದ ಮುಡುಪಿದ, ಮಾಕವ್ವೆ ಗಂತಿಯ ವಿಷಯ ತಿಳಿಸುವ ಕ್ರಿ.ಶ. ೧೧೯೫ರ ಶಾಸನವಿದೆ. ಆಕೆ ಸೂರಸ್ತ ಗಣದ ರಾಮಚಂದ್ರದೇವರ ಹಾಗೂ ಅರಸವ್ವೆ ಗನ್ತಿಯರ ಶಿಷ್ಯೆಯಾಗಿದ್ದ ವಿಷಯವನ್ನು ತಿಳಿಸಿದೆ.[೯]

ಈ ದೇಗುಲವು ಗಂಗ–ಚೋಳ ಶೈಲಿಯ ಭಾಗಗಳನ್ನು ಹೊಂದಿದೆ. ಗರ್ಭಗೃಹ, ಸುಖನಾಸಿ, ನವರಂಗ, ಚಾಚುಸ್ತಂಭ ಮುಖಮಂಟಪ ಜಗತಿಯೊಡನಿದೆ. ಕುಡ್ಯಸ್ತಂಭಗಳು ಕೋಷ್ಠಸಹಿತ ಹೊರಭಿತ್ತಿಯಲ್ಲಿದ್ದು, ಪ್ರಸ್ತರದ ಮೇಲೆ ಗೋಪುರ ಕಾಣಬರದು. ದೇಗುಲದ ಆವರಣದಲ್ಲಿ ಬಿಲ್ಪತ್ರೆ ಮರದ ಕೆಳಗೆ ಸುಮಾರು ಎರಡುವರೆ ಅಡಿ ಎತ್ತರ, ಒಂದುಮುಕ್ಕಾಲು ಅಡಿ ಅಗಲ, ಒಂದು ಕಾಲು ಅಡಿ ದಪ್ಪದ ಆಸೀನ ಜಿನನ ಸುಂದರ ಗುಂಗುರುಕೇಶಿ ವಿಗ್ರಹವಿದೆ. ಇದಲ್ಲದೆ ಆವರಣದಲ್ಲಿ ತೀರ ಸವೆದ ಪ್ರಾಚೀನ ಯಕ್ಷ ದಂಪತಿ ವಿಗ್ರಹದ ಭಗ್ನ ಅವಶೇಷವಿದೆ. ದೇಗುಲದ ಒಳಭಾಗದಲ್ಲಿ ನಾಲ್ಕು ರುದ್ರಕಾಂತ ಸ್ತಂಭಗಳಿವೆ. ಇದು ಮೊದಲಿಗೆ ಜೈನ ಬಸದಿ ಆಗಿದ್ದು



ಮುದುಕಿ ಗುಡ್ಡದ ಮೇಲಿನ ಕೊಂಗಾಳ್ವ ಮನಿಜನ ಪಟ್ಟಾಭಿಷೇಕದ ಮಂಟಪದ ನೆಲೆ



ಪಟ್ಟಾಭಿಷೇಕ ಮಂಟಪದ ಹೊರನೋಟ



ಪಟ್ಟಾಭಿಷೇಕ ಮಂಟಪದ ಒಳನೋಟ



ಮಾಲವ್ವಿಯ ಮನಿಜನ ಪಟ್ಟಾಭಿಷೇಕ ಶಾಸನ



ಮಾಲಂಬಿ–ಆಲೂರು ಮುಕ್ಕೊಡೆ ಜಿನ ಶಿಲ್ಪ ಮತ್ತು ವೇದಿಕಾ ಶಿವಲಿಂಗ



ಸುಳುಗೋಡು ಸೋಮವಾರ ಬಸವೇಶ್ವರ ದೇಗುಲ



ಸುಳುಗೋಡು ಸೋಮವಾರದ ಬಸವೇಶ್ವರ ದೇಗುಲಾವರಣದಲ್ಲಿ ಜಿನಬಿಂಬ

ಕಾಲಾಂತರದಲ್ಲಿ ಶಿವಾಲಯವಾಗಿರುವುದು ಇಲ್ಲಿಯ ಅವಶೇಷಗಳಿಂದ ಸೂಚಿತಗೊಳ್ಳುತ್ತದೆ. ದೇಗುಲದ ಮುಂಭಾಗದಲ್ಲಿ ನಾಲ್ದಿಸೆ ತ್ರಿಶೂಲದಂಥ ಚಾಚುಗಳಿರುವ ಸೂರ್ಯ ಮಂಡಲದ ನಾಲ್ಕು ವೃತ್ತಗಳು ಕಾಣಬರುತ್ತವೆ. ಬಹುಶಃ ಇದು ಸೂರಸ್ತಗಣದ ಸಂಕೇತವೂ ಆಗಿರಬಹುದು.

ಇನ್ನು ಆಲೂರಿನಲ್ಲಿ ಮುಕ್ಕೊಡೆಯ ಆಸೀನ ಜಿನ ವಿಗ್ರಹಗಳ ಉಬ್ಬುಶಿಲ್ಪಗಳು ಚೌಕಟ್ಟಿನಲ್ಲಿ ಒಂದರ ಮೇಲೆ ಒಂದಿದ್ದು ಚೌಕಾಕಾರದ ಶಿಲಾಮುಖದಲ್ಲಿವೆ. ನೆರೆಯ ತೆರೆದ ವೇದಿಕೆಯ ಮೇಲೆ ಶಿವಲಿಂಗ, ಬಸವ ವಿಗ್ರಹವಿದ್ದು ಪೂಜೆಗೊಳ್ಳುತ್ತಿವೆ.

ಈ ಅಂಶಗಳಿಂದ 'ಮಾಲವ್ವಿ' ರಾಜಧಾನಿ ಪರಿಸರವು ಜೈನಧರ್ಮದ ನೆಲೆಯಾಗಿದ್ದಂತೆ ಚೋಳರ ಕಾಲಕ್ಕೆ ಶಿವಾಲಯಗಳೂ ರೂಪುಗೊಂಡ ಸೂಚನೆ ವಿದಿತವಾಗುತ್ತದೆ. ಅದೊಂದು ರೀತಿ ಧಾರ್ಮಿಕ ಸಾಮರಸ್ಯವಾಗಿ ಬೆಳೆದಿತ್ತು.

ಕೊಡಗಿನ ಕೊಂಗಾಳ್ವರು, ಕೊಡಗಿನ ತೀರ ಉತ್ತರದಲ್ಲಿ 'ಮಾಲವ್ವಿ'ಯ ಅಸ್ತಿತ್ವಕ್ಕೆ ರಾಜಧಾನಿ ಶೋಭೆಗೆ ವಾರಸುದಾರರಾದರು. ಅವರಿಗೆ ಚೋಳರು ಪಟ್ಟ ಕಟ್ಟಿದಂತೆ ಉತ್ತರ ಕೊಡಗಿನ ದಕ್ಷಿಣ ಭಾಗದಲ್ಲಿ ಕೊಡಗು ಶ್ರೀರಂಗಪಟ್ಟಣದ ಉದ್ಭವಕ್ಕೆ ಕಾರಣರಾದರು. ಅದು ನಂಜರಾಯ ಪಟ್ಟಣದ ಪ್ರದೇಶದಲ್ಲಿತ್ತು. ಅಲ್ಲಿಯ ಕಾವೇರಿ ದಂಡೆಯ ಮೇಲೆ ಚೋಳ ಪ್ರತಿಷ್ಠಾ ವೀರಭದ್ರ ಗುಡಿಯನ್ನು ಪ್ರತಿಷ್ಠಾಪಿಸಿದರು.[೧೦] ಅಲ್ಲಿಯ ಕಾವೇರಿ ಪೂರ್ವ ದಂಡೆಯಾಚೆ (ದುಬಾರೆ ಕಾಡು) ಅರಣ್ಯದಲ್ಲಿ ಪಂಚಲಿಂಗೇಶ್ವರ ದೇಗುಲ (ಬಹುಶಃ ಪಂಚವನ್ ಮಹಾರಾಯನ ಹೆಸರಿಗಾಗಿ) ವನ್ನು ನಿರ್ಮಿಸಿದರು. ಇವೆಲ್ಲದರ ಹೊಣೆ, ಕೊಂಗಾಳ್ವರಿಗೆ ಇತ್ತು. ಕೊಡಗು ಶ್ರೀರಂಗಪಟ್ಟಣದ ಅಭಿವೃದ್ಧಿಯೂ ಅವರ ಕಾಲದಲ್ಲಿ ಆರಂಭಗೊಂಡಿತೆನ್ನಬೇಕು. ಕ್ರಿ.ಶ. ೧೧೭೪ರವರೆಗೆ ಅದನ್ನು ಅವರು ನಡೆಸಿಕೊಂಡು ಬಂದು ನಂತರ ಹಾಸನ ಜಿಲ್ಲೆ ಮೊಳತೆ ಬೀಡು ರಾಜಧಾನಿಗೆ ಹೋಗಿ ಆಳ್ವಿಕೆ ನಡೆಸಿದರು.[೧೧] ಕ್ರಿ.ಶ. ೧೧೫೦ರಲ್ಲಿ ಚಂಗಾಳ್ವರು, ಕೊಂಗಾಳ್ವರೊಡನಾದ ಯುದ್ಧದಲ್ಲಿ ಗೆಲ್ಲಗಲಾಗಲಿಲ್ಲ.[೧೨] ಅಂತಾಗಿ ನಂಜರಾಯ ಪಟ್ಟಣ ಪ್ರದೇಶದ ಕೊಡಗು ಶ್ರೀರಂಗಪಟ್ಟಣ ಚಂಗಾಳ್ವರ ಅಧೀನಕ್ಕೆ ಮಾಲವ್ವಿಯ ಕೊಂಗಾಳ್ವರಿರುವವರಿಗೂ ಬರಲಿಲ್ಲ. ಕ್ರಿ.ಶ. ೧೨೪೫ರ ಸುಮಾರಿನಲ್ಲಿ ಹೊಯ್ಸಳ ಸೋಮೇಶ್ವರನು ಚಂಗಾಳ್ವ ರಾಜಕುಮಾರರಾದ ಬೊಪ್ಪದೇವ ಮತ್ತು ಸೋಮದೇವರನ್ನು ಕೊಡಗು ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿಸಿ, ಆಡಳಿತಕ್ಕೆ ನಿಯುಕ್ತ ಮಾಡಿದ.[೧೩]

ಕೊಡಗಿನ ಕೊಂಗಾಳ್ವರು ತಮ್ಮ ಅಸ್ತಿತ್ವವನ್ನು ವೈವಿಧ್ಯಮಯವಾಗಿ ತೋರಿ, ಜಿನಧರ್ಮಿಗಳಾದರೂ, ಧಾರ್ಮಿಕ ಸಾಮರಸ್ಯ ತೋರಿದರು; ಕೊಡಗಿನ ಬೆಳವಣಿಗೆಗೆ, ಚೆಂಗಾಳ್ವರು ಮುಂದಾಗುವತನಕ ತಮ್ಮ ದೇಣಿಗೆಯನ್ನು ನೀಡಿದರು. ಸಾಹಿತ್ಯ ಕ್ಷೇತ್ರದ ಜೈನ ಪಂಡಿತರಿಗೆ, ಆಶ್ರಯದಾತರಾದರು, ಕೊಡಗು ಶ್ರೀರಂಗಪಟ್ಟಣದ ಅಸ್ತಿತ್ವ ಮತ್ತು ಆರ್ಥಿಕ ವ್ಯವಹಾರಗಳಿಗೆ ನಾಂದಿ ಹಾಕಿದರು. ('ಮಾಲವ್ವಿ' ಕುರಿತ ಕ್ಷೇತ್ರ ಕಾರ್ಯದಲ್ಲಿ ನೆರವಾದ ಕಿತ್ತೂರಿನ ಶ್ರೀ ಕೆ.ವಿ. ಮಂಜುನಾಥ್, ಎಚ್.ಎಮ್. ಗಿರೀಶ್, ಎಚ್.ಎಸ್. ಪ್ರೇಮನಾಥ್ ಅವರುಗಳಿಗೆ ನನ್ನ ಕೃತಜ್ಞತೆಗಳು.)

## ಮಾದ್ರೆಯ ವೀರಶಾಸನಗಳು

ಮಾದ್ರೆ ಗ್ರಾಮವು ಸೋಮವಾರಪೇಟೆ ತಾಲ್ಲೂಕು ಶನಿವಾರಸಂತೆಯಿಂದ ಸುಮಾರು ೮ ಕಿ.ಮೀ. ದೂರದಲ್ಲಿದೆ. ಪೌರಾಣಿಕವಾಗಿ, ಮಹಾಭಾರತದ ಪಾಂಡುವಿನ ಪತ್ನಿ ಮಾದ್ರಿಯ ಮಕ್ಕಳಾದ ನಕುಲ ಸಹದೇವರುಗಳಿಗೆ ಈ ಸ್ಥಳ ಬಹಳ ಮೆಚ್ಚುಗೆಯಾದ ಸ್ಥಳವಾಗಿತ್ತಂತೆ. ಅದಕ್ಕಾಗಿ ಅವರ ತಾಯಿಯ ಹೆಸರನ್ನಿಡಲಾಗಿದೆ ಎಂದು ಗ್ರಾಮೀಣರ ಅಂಬೋಣ. ಐತಿಹಾಸಿಕವಗಿ ಈ ಬೀಡು ೧೧ನೆಯ ಶತಮಾನದ ಕೊಂಗಾಳ್ವರು, ಚೆಂಗಾಳ್ವರು ಹಾಗೂ ೧೨ನೆಯ ಶತಮಾನದ ಹೊಯ್ಸಳರ ಇತಿಹಾಸದೊಡನೆ ಮೇಳೈಸಿಕೊಂಡಿದೆ. ಅವರ ಪರಸ್ಪರ ಕಾಳಗದ ಪ್ರದೇಶವೂ ಇದಾಗಿದ್ದು ಸ್ಥಳೀಯ ವೀರರ ವೀರಗಾಥೆಯನ್ನು ಇಲ್ಲಿನ ವೀರಗಲ್ಲುಗಳು ಹೇಳುವಂತಿವೆ. ಅರಳೀಮರ, ರಂಧ್ರ (ಗೂಡು) ದೊಳಗೆ ಲಿಂಗವನ್ನು ಅಡಕಗೊಳಿಸಿಕೊಂಡ ಬಿಲ್ವ ಮರಗಳು, ಪ್ರಾಚೀನ ರಾಮೇಶ್ವರಲಿಂಗ ಗುಡಿ, ಸೂರ್ಯಶಿಲ್ಪ ಇಲ್ಲುಂಟು. ಇವುಗಳ ಬದಿಯಲ್ಲಿ ಮೂರು ಅಪ್ರಕಟಿತ ವೀರಗಲ್ ಶಾಸನಗಳಿವೆ. ವೀರಶೈವ ಆಚಾರ್ಯ ಪರಂಪರೆಯ ಉಜ್ಜಯಿನಿ ಪೀಠದ ಶಾಖೆ ಮುದ್ದಿನಕಟ್ಟೆ ಮಠದೊಡನೆ ಇಲ್ಲಿನ ಗ್ರಾಮೀಣರ ಸಂಬಂಧ ಹಾಸುಹೊಕ್ಕಾಗಿದೆ. ಶಾಸನಗಳಿರುವ ನೆಲೆಯ ಎಡ ಮುಂಬದಿಗೆ ಲಿಂಗ ಅಡಕಗೊಳಿಸಿಕೊಂಡಿರುವ ಬಿಲ್ವ ವೃಕ್ಷವಿರುವುದು. ಈ ಮುದ್ದಿನಕಟ್ಟೆ ಮಠದ ಪ್ರಭಾವದ ಸಾಕ್ಷಿ ಎನ್ನುವಂತಿದೆ. ಈ ಪರಿಸರದಲ್ಲಿರುವ ಮೂರು ಅಪ್ರಕಟಿತ ವೀರಗಲ್ ಶಾಸನಗಳು ವಿಶಿಷ್ಟವಾಗಿವೆ; ಅದರ ಮೇಲ್ಭಾಗದಲ್ಲಿರುವ ಚಿತ್ರದುಬ್ಬುಶಿಲ್ಪಗಳು ಅರ್ಥಪೂರ್ಣವಾಗಿವೆ, ಆಕರ್ಷಕವಾಗಿವೆ.

ಮೊದಲನೆಯ ಶಾಸನ ೮ ಸಾಲಿನ ಮೂರು ಪಟ್ಟಿಗಳಲ್ಲಿ ಕಂಡರಿಸಿದ ಶಾಸನವಾಗಿದೆ. ಶಾಸನದ ಕೆಳಭಾಗದಲ್ಲಿ ಖಡ್ಗ ಜಳಪಿಸುವ ಅಶ್ವಾರೋಹಿ, ಖಡ್ಗ, ಗುರಾಣಿ ಧಾರಿಯಾದ ವೀರನೊಡನೆ ಪ್ರತಿವೀರ ಕಾಳಗವಾಡುತ್ತಿರುವ ದೃಶ್ಯವಿದೆ. ತುರುಸಿನ ಕಾಳಗದ ದೃಶ್ಯವಿದೆ. ೨ನೆಯ ಹಂತದಲ್ಲಿ ಆಸೀನ ವೀರನಿಗೆ ಅಪ್ಸರಾಮೌನವಿದೆ. ಮೇಲಿನ ಹಂತದಲ್ಲಿ ಅಗಲ ಹಸ್ತಗಳ ತೋಳ್‌ಭುಜಗಳನ್ನು ಊರಿ ಆಯತವಾಗಿ ರೂಪಿಸಿದ ಶಿಲ್ಪಚಾತುರ್ಯವಿದೆ. ಮೇಲ್‌ಭಾಗದಲ್ಲಿ ಪ್ರಣಾಮಭಂಗಿಯ ಕೊರಳಲ್ಲಿ ಲಿಂಗದ ವಸ್ತ್ರದ ಕಟ್ಟು ಸಹಿತನಾದ ಭಕ್ತವೀರ, ಶಿವಲಿಂಗ, ಧೂಪಾರತಿಯ ಶಿವಾರ್ಚಕ (ಯತಿ !) ಸೂರ್ಯ, ಚಂದ್ರರ ಉಬ್ಬುಶಿಲ್ಪಗಳಿವೆ. ಇಲ್ಲಿಯ ಶಿವಾರ್ಚಕನ ಜಟೆ ಅಗಲವಾದ ಬಾಗಿದ ನೀಳ ಜಟೆಯಾಗಿ ಶಿಲ್ಪಕ್ಕೆ ಗಾಂಭೀರ್ಯ ತಂದಿದೆ. ಕೊರಳಿನಲ್ಲಿ ಲಿಂಗದ ವಸ್ತ್ರದ ಕಟ್ಟು ಇರುವಂತೆ ತೋರುತ್ತದೆ. ಇಂಥ ನೀಳಜಟಾ ಅರ್ಚಕರು ತಮ್ಮಡಿಗಳಲ್ಲೂ ಕಂಡುಬರುವುದು ಗಮನಾರ್ಹ. ಈ ಶಾಸನದ ಅಕ್ಷರಗಳನ್ನು ಆಳವಾಗಿ ಕೆತ್ತಿದ್ದರೂ ಕೆಲವೆಡೆ ಅಸ್ಪಷ್ಟ ಅಕ್ಷರಗಳೂ ಇವೆ. ಶಬ್ದಸ್ಖಾಲಿತ್ಯವೂ ಇದೆ.

ಕೊಡಗಿನಲ್ಲಿ ಈವರೆಗೆ ಹೊಯ್ಸಳರ ನಾಲ್ಕು ಶಾಸನಗಳು ಮಾತ್ರ ಲಭ್ಯವಾಗಿದ್ದವು. ಅವು ಇಮ್ಮಡಿ ಬಲ್ಲಾಳ ಮತ್ತು ಮೂರನೆ ನರಸಿಂಹನ ಕಾಲದವು. ಕೆಲವು ಶಾಸನದಲ್ಲಿ ಹೊಯ್ಸಳ ಬಿರುದುಗಳು ಪೂರ್ಣ ದಾಖಲಾಗಿಲ್ಲ. ಸದ್ಯ ಲಭ್ಯ ಮೂರು ಶಾಸನಗಳು ಹೊಯ್ಸಳರ ಕಾಲದವಾಗಿ ಹೊಸ ಸೇರ್ಪಡೆಗಳಾಗಿವೆ.

### ೧ನೆಯ ವೀರಗಲ್ಲು ಶಾಸನ ಪಾಠ (ಕ್ರಿ.ಶ. ೧೧೭೯)

೧ ಶ್ರೀ ವಿಕಾರಿ ಸಂವಛರದ ಪುಸ್ಯ ಬ ೮ ರಂದು ಶತ್ವಲ್ಲ
೨ ಭ ಬಲಳದೇವರು ವಿಮಲಂಣಗವಿಧಿದಲ ಆಂಕಯ ದ
೩ ಣಾಯಕರ ಮಗ ಮಯಂಣ ಕೋಟೆ ಏರಿ ಬಂದು ಘಡ
೪ [ಬೆ]ಂಕಿಪಹದಟಿ ಆ ವಿಜಯದಿಲಂಣನವರು ಬಿದಿಕಟಿಕದಟಿ
೫ ಸಿದ್ದರಾಜಯ ಕಿಟಲ **ಮಾದ್ರೆಯಟ್ಟಿಯ**ವಾಸಿ ಹಸಿಲದಸಿ ಮಗ
೬ ಬಯಂಣನು ಚೆಣಗಮುಂಡ [.] ಹಟುಟಿಯಲಿ ಕಾದು ಸಗ್ಗಮೇರಿದ
೭ ಚಳ್ದಟಿದಾಬಟಿ . . . . . . .
೮ ಶ್ರೀಶ್ರೀಶ್ರೀ

ಇದು ಇಮ್ಮಡಿ ವೀರಬಲ್ಲಾಳನ ಕಾಲದ ಶಾಸನ. ಮಾದ್ರೆ ಸ್ಥಳದ ವೀರನು, ಕಾಳಗದಲ್ಲಿ ಹೋರಾಡಿ ವೀರಸ್ವರ್ಗವೇರಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ. ಕ್ರಿ.ಶ. ೧೧೭೯ರ ಇಮ್ಮಡಿ ಬಲ್ಲಾಳನ ಕಾಲದಲ್ಲಿ ನಡೆದ ಕಾಳಗದಲ್ಲಿ ಮಾದ್ರೆಸ್ಥಳದ ವೀರನು ಕೋಟೆ ಏರಿ ಹೋರಾಡಿ ಜಯ ತಂದುಕೊಟ್ಟ ವೀರಸ್ವರ್ಗವೇರಿದ ವಿಷಯವಿಲ್ಲದೆ ಎನ್ನಬಹುದು. ಕೊಂಗಾಳ್ವರು ಮತ್ತು ಚಂಗಾಳ್ವರು, ಹೊಯ್ಸಳರ ಪರವಾಗಿ ಮೊದಲು ಇದ್ದರೂ ವಿರೋಧಿಸತೊಡಗಿದಾಗ ಅವರನ್ನು ತಹಬಂದಿಗೆ ತರಲು ಇಮ್ಮಡಿ ಬಲ್ಲಾಳನು ನಡೆಸಿದ ಕಾಳಗದ ಸಂದರ್ಭ ಇದಾಗಿರುವಂತಿದೆ. ಶಾಸನದಲ್ಲಿ ಕೆಲವು ಶಬ್ದಗಳಿಗೆ ಅರ್ಥ ಸ್ಪಷ್ಟವಾಗಿ ನಿಲುಕುವುದಿಲ್ಲ.

ಕೋಟೆ ಏರಿ ಬಂದವನು ಅಂಕಯ ದಣ್ಣಾಯಕರ ಮಗ ಮಾಯಣ್ಣ. ಬಹುಶಃ ಕೋಟೆಗೆ ಬೆಂಕಿ ಹಚ್ಚಿದ. ಹಸಿಲ ದಾಸಿಯ ಮಗ ಬಯಂಣ ಮತ್ತು ಚೆಣಗಮುಂಡನು ಹಳುಳಿಯಲ್ಲಿ ಕಾಳಗವಿಟ್ಟು, ವೈರಿಗಳನ್ನು ಚದುರಿಸಿ ಸಗ್ಗವೇರಿದ ಎಂಬ ಅರ್ಥ ಬರುವಂತಿದೆ. ಶಿಲ್ಪದಲ್ಲಿ ಸೂಚಿತವಾದ ಅಶ್ವಾರೋಹಿಯೆ ಬಯಂಣನಿರುವಂತಿದೆ. ಖಡ್ಗದ ಭಂಗಿ, ಸೊಂಟದ ಖಡ್ಗದ ನೀಳಭಂಗಿ, ಪ್ರತಿವೀರನ ಎಡಗೈಯಲ್ಲಿ ಎತ್ತಿರುವ ಖಡ್ಗದ ನೀಳ ನೇರಭಂಗಿ, ಕಾಳಗದ ತೀವ್ರತೆಯನ್ನು ಬಿರುಸನ್ನು ತೋರುತ್ತದೆ.

ಕೊಂಗಾಳ್ವರು ಜೈನಧರ್ಮಾವಲಂಬಿಗಳಾಗಿದ್ದರು; ಅವರ ಏಳುಸಾವಿರ ಸೀಮೆಯ ಈ ಪ್ರದೇಶದ ಯುಳ್ಳೂರು ಬಸದಿ, ಮಾಲಂಬಿ ಬಳಿಯ ಆಲೂರು ಇವೆಲ್ಲ ಜೈನಕೇಂದ್ರಗಳೇ ಆಗಿದ್ದುವು. ಅಂಥ ನೆಲೆಯಲ್ಲಿ ಈ ವೀರಗಲ್ಲು ಶಿಲ್ಪದ ಕೈಲಾಸ ದೃಶ್ಯವನ್ನು ಗಮನಿಸಿದರೆ, ಶಿವಾರ್ಚಕನ ವಿಶಿಷ್ಟ ನೀಳಜಟೆ ಹಾಗೂ ಕೊರಳ ವಸ್ತ್ರದ ಲಿಂಗ ಗಮನಿಸಿದರೆ ಜೈನ ಪರಿಸರದಲ್ಲಿಯೂ ಶೈವ ಧರ್ಮದ ಪ್ರಬಲ ಅಸ್ತಿತ್ವದ ಕುರುಹನ್ನು ಇದು ತೋರುವಂತಿದೆ. ಇದಲ್ಲದೆ ಸನಿಹದ ಪಂಚಪೀಠಗಳಲ್ಲಿ ಒಂದಾದ ಉಜ್ಜಯಿನಿ ಪೀಠದ ಶಾಖಾಮಠವಾದ ಮುದ್ದಿನಕಟ್ಟೆ ಮಠಕ್ಕೂ ಮಾದ್ರೆಯ ಸಾಂಸ್ಕೃತಿಕ ಆಚರಣೆಗಳಿಗೂ ಅವಿಭಾಜ್ಯ ಸಂಬಂಧವಿದೆ. ಅಂತಾಗಿ ವೀರಶೈವ ಪ್ರಭಾವಕ್ಕೊಳಗಾಗಿದ್ದ ಮಡಿದ ವೀರನ ವೀರಶಾಸನಗಲ್ಲು ಇದಾಗಿರುವಂತಿದೆ.

### ೨ನೆಯ ವೀರಗಲ್ಲು ಶಾಸನ (ಕ್ರಿ.ಶ. ೧೧೩೫)

ಈ ವೀರಗಲ್ ಶಾಸನದಲ್ಲಿ ೯(+೭) ಸಾಲುಗಳಿವೆ. ಪ್ರಭಾವಳಿ ಪಟ್ಟಿಕೆಯ ಅಕ್ಷರಗಳಲ್ಲದೆ ಮೇಲಿನ ಪಟ್ಟಿಕೆಯಲ್ಲಿ ಮೂರು ಸಾಲು, ಕೆಳಗಿನ ಪಟ್ಟಿಕೆಯಲ್ಲಿ ಐದು ಸಾಲುಗಳಿವೆ. ಎರಡು ಹಂತದಲ್ಲಿ ಶಾಸನದ ಉಬ್ಬು ಶಿಲ್ಪಗಳಿವೆ. ಕೆಳಗಣ ಹಂತದಲ್ಲಿ ಮೂವರು ವೀರರು ಕಾಳಗ ಭಂಗಿಯಲ್ಲಿದ್ದಾರೆ. ಶಾಸನದ ಬಲಬದಿಯಲ್ಲಿರುವ ಈರ್ವ ವೀರರಲ್ಲಿ ಮುಂಚೂಣಿಯಲ್ಲಿರುವ ವೀರನ ಕೈಯಲ್ಲಿ ಬಿಲ್ಲಿನಿಂದ ಬಾಣ ಪ್ರಯೋಗದ ದೃಶ್ಯವಿದೆ; ಎಡಭಾಗದ ಪ್ರತಿ ವೀರನ ಕೈಯಲ್ಲಿ ಅಸ್ಪಷ್ಟವಾದ ರಕ್ಷಕ ವಸ್ತು (ಗುರಾಣಿ!) ವಿದೆ. ಬಲಗೈಯಿಂದ ಶೂಲವನ್ನು ಎತ್ತಿಹಿಡಿದು ವೀರ ಯುದ್ಧ ಕ್ರಿಯಾಭಂಗಿ ಯಲ್ಲಿದ್ದಾನೆ. ಮೇಲುಹಂತದಲ್ಲಿ ಕೈಲಾಸ ದೃಶ್ಯವಿದ್ದು ಆಸೀನ ಭಕ್ತವೀರ ತ್ರಪುಸಾಕಾರ ನೆತ್ತಿಯ ಸರ್ವಸಮ ಶೈಲಿಯ ಶಿವಲಿಂಗ, ನೀಳ ಬಾಗಿದ ಸಣ್ಣ ಗಾತ್ರದ ಜಟೆಯ ಶಿವಾರ್ಚಕನ ಉಬ್ಬು ಶಿಲ್ಪಗಳಿವೆ. ಪಟ್ಟಿಕೆಯ ಮೇಲ್ಭಾಗದ ಬಾಗಿದ ಪ್ರಭಾವಳಿ ಪಟ್ಟಿಕೆ ಭಾಗದಲ್ಲಿ ಅಕ್ಷರಗಳಿವೆ.

**ಶಾಸನ ಪಾಠ**

೧ಅ [ಸ್ವ]
೧ಆ [ಸ್ತಿ]
೧ಇ [ಶ್ರೀ]
೨ ವಿರೋಧಿ ಸಂವತ್ಸರದಿ ಅಷ್ವಹಾಬನೆಗಾಗಿ
೩ ಚಮಾದಧುಬಗೋಸರಸಗಿರಾಬಟಿ



ಮಾದ್ರೆಯ ಒಂದನೇ ವೀರಗಲ್ಲು ಶಾಸನ (ಕ್ರಿ.ಶ. ೧೧೮೯)



ಮಾದ್ರೆಯ ಎರಡನೇ ವೀರಗಲ್ಲು ಶಾಸನ (ಕ್ರಿ.ಶ. ೧೧೩೫)



ಮಾದ್ರೆಯ ಮೂರನೇ ವೀರಗಲ್ಲು ಶಾಸನ (ಕ್ರಿ.ಶ. ೧೧೨೮)



ಮಾದ್ರೆ ಗ್ರಾಮದ ಊರು ಬಾಗಿಲ ಬಳಿ
ಮೂರು ಶಾಸನಗಳ ಸಾಲು

೪ ಜಸಬಾಡ ಬಂಟಿ . ಕಾದಿಸ

೪೮ ಳ್ದಕ

೪೯ [.]

೫೦ [ಒ]

೫೧ ದೆ

೫ ಬಸಿತನಕಿಳಳ್ದ ಹರವೀರಾ ಚೂರದಯ್ಯದೋಳ್

೬ ಗನಪುರಿ ರಾಜ್ಯ ಭಗವಿತ್ಯಾ ಮದ್ರೆ ವಿಳಚಅಸ

೭ ಮಗರಳ್ದಗೆ . ಬುಗೊಜ್ವಿ ಬಹಳದುಸ

೮ ಚುಲರಲಿಂ . ಚಗಿ ಬಿಲಕಾಳ ಟಿಹ ಪೂಜ

೯ ದಿಗ ಶ್ರೀ ಸಾಮನ್ತಾದಿಗೆ ಶ್ರೀ ಕ್ಕೊಂ[ಗಾ]ಳ್ವಾದಿತ್ಯ ದೇವರು

ಶಿಲೆಯ ಮೇಲ್ಭಾಗದ (ಪ್ರಭಾವಳಿ ಪಟ್ಟಿ)ಯಲ್ಲಿಯೂ ಮಧ್ಯಭಾಗ ಪಟ್ಟಿಯಲ್ಲಿಯ ಒಂದೊಂದು ಅಕ್ಷರಗಳಿದ್ದು ಸದ್ಯದ ಶಾಸನಾಕ್ಷರಗಳಲ್ಲಿ ಕೆಲವು ತ್ರುಟಿತವಾಗಿರುವಲ್ಲಿ ಶಬ್ದದ ಅರ್ಥಗಳು ಅಸ್ಪಷ್ಟವಾಗಿರುವಲ್ಲಿ ಸರಿಯಾದ ಪಾಠವನ್ನು ಕೊಡಲು ಸಾಧ್ಯವಾಗಿಲ್ಲ. ಆದರೂ ಕೆಲವು ಶಬ್ದಗಳು ಗಮನಕ್ಕೆ ಬರುವಲ್ಲಿ ಸದ್ಯದ ಶಾಸನವು ಬಹುಶಃ ಕ್ರಿ.ಶ. ೧೧೩೫ರ ಕಾಲಕ್ಕೆ ಸೇರುವಂತಿದೆ. ಕ್ರಿ.ಶ. ೧೧೨೮ ರಲ್ಲಿಯೂ ಕೊಂಗಾಳ್ವರು ಹೊಯ್ಸಳರಿಗೆ ಸೋತು ಅಧೀನವಾಗಿ ಮುಂದುವರಿದದ್ದು ಇತಿಹಾಸ. ಸದ್ಯದ ಶಾಸನವು ಕ್ರಿ.ಶ. ೧೧೩೫ಕ್ಕೆ ಸೇರಬಹುದಾಗಿರುವಲ್ಲಿ ಕೊಂಗಾಳ್ವರ ಸಾಮಂತಿಕೆಯನ್ನು ದೃಢೀಕರಿಸಿದಂತಿದೆ. ಸ್ಥಳೀಯ ಕಾಳಗವೊಂದು ವೀರಚೋಳ ಕೊಂಗಾಳ್ವದೇವನ ಕಾಲದಲ್ಲಿ ನಡೆದು, ಅದನ್ನು ಈ ಶಾಸನವು ದಾಖಲಿಸಿರುವಂತಿದೆ. ಈ ಶಾಸನದ ಪಾಠವನ್ನು ಮತ್ತಷ್ಟು ಪರಿಷ್ಕರಿಸಲು ಸಾಧ್ಯವಿದೆ. ಸದ್ಯಕ್ಕೆ ಹರವೀರಚೂರದಯ್ಯ, ಗನಿಪುರಿ ಎನಿಸಿದ ಮಾದ್ರೆಯ ವಿಳಚರಸ ಇತ್ಯಾದಿಗಳು ಕೊಂಗಾಳ್ವದಿತ್ಯ ದೇವರ ಸಾಮಂತರಾಗಿದ್ದರು ಎಂಬ ಅರ್ಥ ನೀಡಬಹುದು.

**ಮೂರನೆ ವೀರಗಲ್ಲು ಶಾಸನ ಪಾಠ (ಕ್ರಿ.ಶ. ೧೧೨೮)**

೧ ಶ್ರೀ ಚಂದಸ್ರ ಮಂಡಳೇಸ್ವರ ನರಸಿಂಗದೇವರಾಯ

೨ ಧರಟಿಚ ಕ್ರೋಧಿ ಸಂವತ್ಸರದ ಆಷಡ ಸು (ಧರಶಕ!)

೩ ಸ್ರಾಸಿರದ ಆಯ್ವತ್ತನೆಯ ಗಟ್ಟಿದುಸಸಂ

೪ ನಬಟನಾದ ಮೂಱ್ಬುನಾಟಿಯಂಗ ಗಜ

೫ . ಬ ಟಿ ಪರಬುಧ ಪವಾಡ ಕಾಟಿಗ[ದೊಳ]

೬ [ಲು] ಕೊಂಗಾಳ್ವ ಬಿದ್ದೊಡೆ ಯರಗಟಿ ಹರಸಂ

೭ [ಮೆ] ಯರು ಬಿಂಮಕ್ಷಯ ರಾಜ್ಯದೋಳ್

೮ ಹಾಗಳಂಟಿಯಂ ಕೊಂಗಾಳ್ವರ ಚಟ್ಟಿಸಯ ಗಜ

೯ ವರಂಣ ಬರಾಮ ಕಾದು ಅಯಂಣಾಳ[ಕಾ]

೧೦ ಟಿ ಣ ಕ ಚ ಗೆ ಕಾದುಗಿಳ ಪುಸ್ಯಸವಲಂ

೧೧ . ವ ಗೆ ಕಾದುಕ್ಕಿ ಸಾಟಿಳ್ದಪಗೆ ಶ್ರೀ

೧೨ [ಚ] (ಕೆಳಗಿನ ಈ ಅಕ್ಷರದ ಮುಂದಿನ ಭಾಗದ ಸಾಲಿನ ಶಿಲೆ ಕಾಣಬರಲಿಲ್ಲ)

[ಟಿ = ಟಿ ಶಾಸನದಲ್ಲಿ ಹೀಗೆ ಸೂಚಿಸಲಾಗಿದೆ.]

ಸದ್ಯದ ಶಾಸನ ಎರಡು ಪಟ್ಟಿಕೆಗಳಲ್ಲಿ ಪಾಠದಲ್ಲಿ ಲಿಪಿ ಅಸ್ಪಷ್ಟತೆಯಿಂದಾಗಿ ಕೆಲವು ಅಕ್ಷರಗಳನ್ನು ಓದಲಾಗಿಲ್ಲ. ಸದ್ಯ ಓದಿರುವ ಪಾಠದ ಅಂಶಗಳನ್ನು ಗಮನಿಸಿದರೆ ಹೊಯ್ಸಳ ೧ನೇ ನರಸಿಂಹ (ವಿಜಯ ನಾರಸಿಂಹ), ತಂದೆ ವಿಷ್ಣುವರ್ಧನನ ಕಾಲದಲ್ಲಿ ಮಹಾಮಂಡಲೇಶ್ವರನಾಗಿ ಆಳುತ್ತಿದ್ದ. ಸದ್ಯದ ಶಾಸನ ಕ್ರಿ.ಶ. ಸುಮಾರು ೧೧೨೮ರ ಜುಲೈ ತಿಂಗಳ ಸಮಯದಲ್ಲಿ ಕೊಂಗಾಳ್ವರನ್ನು ಸೋಲಿಸಿದ ವಿಷಯವನ್ನು ಹೇಳುವಂತಿದೆ. ವಿಷ್ಣುವರ್ಧನನು ಪಟ್ಟಕ್ಕೆ ಬಂದ ಮೇಲೆ ಕೊಂಗಾಳ್ವರನ್ನು ಸೋಲಿಸಿದ್ದ. ಆದರೆ ವಿಷ್ಣುವರ್ಧನ ಕೊನೆಗಾಲದ (ಕ್ರಿ.ಶ. ೧೧೫೨) ಮುನ್ನ, ಕೊಂಗಾಳ್ವರು ಯುದ್ಧ ಸಾರಿದ ಸಂದರ್ಭದಲ್ಲಿ ಮಾದ್ರೆ ಪರಿಸರದಲ್ಲಿ ಯುದ್ಧ ನಡೆದು ಹೊಯ್ಸಳರಿಗೆ ಅವರು ಸೋತ ವಿಷಯದ ಸೂಚನೆ ಈ ವೀರ ಶಾಸನದಲ್ಲಿದೆ. ಆದರೂ ಶಾಸನದ ಪಾಠವನ್ನು ಮತ್ತಷ್ಟು ಪರಿಷ್ಕರಿಸಲು ಅವಕಾಶವಿದೆ.

ಶಾಸನದ ಉಬ್ಬುಶಿಲ್ಪದಲ್ಲಿ, ಎರಡು ಹಂತದ ಶಿಲ್ಪಗಳಿದ್ದು, ಕೆಳಹಂತ ಯುದ್ಧದ ದೃಶ್ಯವನ್ನು ಮೇಲಿನ ಹಂತ ಕೈಲಾಸದ ನೆಲೆಯನ್ನು ತೋರುವಂತಿದೆ. ಕಾಳಗದಲ್ಲಿ ಶಾಸನದ ಬಲಬದಿಯ ಈರ್ವ ವೀರರು ಬಿಲ್ಲು ಬಾಣ, ಶೂಲ, ಗುರಾಣಿಧಾರಿಗಳಾಗಿ ಪಾದ ಬಲ ಪಾರ್ಶ್ವೋದಯ ರಾಗಿದ್ದಾರೆ. ಎಡಬದಿಯ ಪ್ರತಿವೀರ ಶೂಲ ಮತ್ತು ಗುರಾಣಿ ಹಿಡಿದು ಪಾದ ಎಡಪಾರ್ಶ್ವೋದಯನಾಗಿದ್ದಾನೆ. ಕಾಳಗದ ತೀವ್ರತೆಯು ಬಹಳ ದಟ್ಟವಾಗಿ ಗೋಚರವಾಗುವಂತಿದೆ. ಕೈಲಾಸ ದೃಶ್ಯದಲ್ಲಿ ಆಸೀನ ಪ್ರಣಾಮಭಂಗಿಯ ಓರೆ ನೇರ ಜಟಾಗಂಟಿನ ವೀರ, ತ್ರಪುಸಾಕಾರದ ವರ್ಧಮಾನ ಶಿವಲಿಂಗ ಬಾಗಿದ ದಂಡಾಕಾರದ ಜಟಾಧಾರಿ ಪೂಜಾರ್ಚಕನಿದ್ದಾನೆ.

ಇಲ್ಲಿನ ಮೂರು ಶಾಸನಗಳು ಕ್ರಿ.ಶ. ೧೧೨೮, ೧೧೩೫, ೧೧೭೯ರ ಕಾಲದ ಶಾಸನಗಳಾಗಿ ಹೊಯ್ಸಳ-ಕೊಂಗಾಳ್ವರ ಸಂಬಂಧಿಯಾದವು. ಹೊಯ್ಸಳರು ಚೋಳರನ್ನು ಕ್ರಿ.ಶ. ೧೧೧೬ರಲ್ಲಿ ಪೂರ್ಣವಾಗಿ ಸೋಲಿಸಿದ ಮೇಲೆ ಚೋಳ ಪ್ರತಿಷ್ಠಾಪಿತ ಸಾಮಂತರಾದ ಕೊಡಗಿನ ಕೊಂಗಾಳ್ವರು

ಹೊಯ್ಸಳರ ಅಂಕೆಗೆ ಬಂದರು. ಕೊಂಗಾಳ್ವರು ಇಮ್ಮಡಿ ಬಲ್ಲಾಳ ಮತ್ತು ೧ನೇ ನರಸಿಂಹನ ಕಾಲದಲ್ಲಿ ಹೊಯ್ಸಳರಿಗೆ ಎದುರು ಬಿದ್ದರೂ ಗೆಲ್ಲಲಾಗಲಿಲ್ಲ. ಈ ಮೂರು ಶಾಸನಗಳೂ ಕೊಂಗಾಳ್ವರೆದುರು ಹೊಯ್ಸಳರ ಪರವಾಗಿ ಹೋರಾಡಿದ ವೀರರ ಶಾಸನಗಳಾಗಿ ಕಾಣುತ್ತವೆ.

**ಕ್ರಿ.ಶ. ೧೧೭೪ರ (ಮೂರನೆಯ ವೀರಗಲ್ಲು) ಶಾಸನ:** ಈ ಕಾಲಕ್ಕೆ ಇಮ್ಮಡಿ ಬಲ್ಲಾಳನ ಮಗ ಒಂದನೇ ನರಸಿಂಹ ಮಹಾಮಂಡಲೇಶ್ವರನಾಗಿದ್ದ. ಅವನು ಕೊಂಗಾಳ್ವರನ್ನು ಸೋಲಿಸಿದ ಸಂದರ್ಭ ಶಾಸನದಲ್ಲಿ ಉಕ್ತವಿರುವ 'ಕೊಂಗಾಳ್ವ ಬಿದ್ದೊಡೆ' ಎಂಬುದರಲ್ಲಿಯೆ ವಿದಿತವಾಗುತ್ತದೆ. ಮಾದ್ರೆ ಪ್ರದೇಶದಲ್ಲಿ ಈ ಕಾಳಗ ನಡೆದಿದ್ದರೂ ಮಾದ್ರೆಯ ಸ್ಥಳನಾಮ ಈ ಶಾಸನದಲ್ಲಿ ಕಾಣಬರುವುದಿಲ್ಲ. ನಾಡುಗಳ ಹೆಸರಾಗಿ ಸಂನ ಬಳಿನಾಡು, ಬಿಂಮಕ್ಷಯ ರಾಜ್ಯ ಹಾಗಳ್ಳಿ, ಕೊಂಗಾಳ್ವ ಚಳ್ವಿಷಯ, ಇತ್ಯಾದಿ ಪ್ರದೇಶಗಳ ಹೆಸರು ಕಾಣಬರುತ್ತವೆ. ವೀರರ ಬಿರುದುಗಳಾಗಿ ಗಜವರಂಣಬರಾಮ ಮೂರು ನಾಳಿಯುಂಗಜ, ಪರಬುಧ ಪವಾಡ ಇತ್ಯಾದಿಗಳು ಕಾಣಬರುತ್ತವೆ. ವ್ಯಕ್ತಿನಾಮಗಳಾಗಿ ಹರಸಂಮೆಯರು, ಆಯಂಣ ಎಂಬ ಹೆಸರುಗಳು ಕಾಣಬರುತ್ತವೆ.

ಮಾದ್ರೆಯಿಂದ ಹಿಡಿದು ಮಾಲಂಬಿಯವರೆಗೂ ಕಾಡಾನೆಗಳ ಹಾವಳಿ ಹೆಚ್ಚಿತ್ತು. ಅದನ್ನು ಇಂದಿನ ಗ್ರಾಮೀಣರೂ ನೆನಸುತ್ತಾರೆ. ಹೀಗಾಗಿ ಗಜಹಾವಳಿ ರಕ್ಷಕ ವೀರರೂ ಇಲ್ಲಿದ್ದ ಸೂಚನೆ ವೀರರ ಬಿರುದುಗಳಿಂದ ತಿಳಿಯುತ್ತದೆ. 'ಗಜವ(ವಾ) ರಂಣರಾಮ' ಎಂಬ ಗಜವೀರ (ವಾರಣ=ರಕ್ಷಣೆ) ಕಾಳಗದಲ್ಲಿ ಹೋರಾಡಿ ವೀರಸ್ವರ್ಗವೇರಿದ ವಿಷಯದ ವೀರಗಲ್ಲು ಇಲ್ಲಿದೆ. ಹರಸಮಯದವರು ಇಲ್ಲಿದ್ದರು ಎಂಬುದು ಶಾಸನದಲ್ಲಿ ಸೂಚಿತವಾಗಿರುವಂತೆ ವೀರಗಲ್ಲು ಶಾಸನದ ಮೇಲಿನ ಹಂತದ ಕೈಲಾಸದ ದೃಶ್ಯದಿಂದಲೂ ವಿದಿತವಾಗುತ್ತದೆ. ಆದರೆ ನಕಲು ತೆಗೆಯುವಲ್ಲಿ ಕೆಲವು ಅಕ್ಷರಗಳು ಸರಿಯಾಗಿ ಮೂಡಿಲ್ಲ; ಪಾಠವನ್ನು ಪರಿಷ್ಕರಿಸಿ ಮತ್ತೆ ನೋಡಲೂ ಸಾಧ್ಯವಿದೆ. ಕೆಲವು ಅಕ್ಷರಗಳು ತ್ರುಟಿತವಾಗಿರುವುದೂ ಈ ಬಗೆಗಿನ ಇನ್ನೊಂದು ಸಮಸ್ಯೆ. ೧೨ ಸಾಲಿನ ಈ ಶಾಸನದ ಕೊಂಗಾಳ್ವರ ಹೊಸ ಬಿರುದುಗಳೂ ಇಲ್ಲಿ ಕಾಣಬರುವಂತಿವೆ. ಈ ಅವಧಿಯಲ್ಲಿ ಕೊಡಗಿನಲ್ಲಿ ಕೊಂಗಾಳ್ವರ ದೊರೆಯಾಗಿದ್ದವನು ವೀರಚೋಳ ಕೊಂಗಾಳ್ವದೇವ : ಅಂದರೆ ಹೆಸರಿನಲ್ಲಿ 'ಚೋಳ' ಶಬ್ದ ಉಪಾಧಿಯಾಗಿ ಮುಂದುವರಿದಿರುವುದು ಕಾಣುತ್ತದೆ.

ಈ ಶಾಸನದಲ್ಲಿ ಬರುವ **ಯರಗಟಿ** ಎಂಬ ಊರು ಬಹುಶಃ ಗಂಗರ ಕಾಲದ ಕ್ರಿ.ಶ. ಸು. ೯೧೯ರ ಗುಡುಗೂರು ಶಾಸನದಲ್ಲಿ ಬರುವ ಯಳಘಳೆ(=ಉಲುಗುಲಿ ಇಂದಿನ ಗ್ರಾಮದ ಹೆಸರು.) ಎಂಬ ಪ್ರಸಿದ್ಧ ಗ್ರಾಮದ ಹೆಸರನ್ನು ಸೂಚಿಸುವಂತಿದೆ. ಹಾಗೂ ಆ ಊರಿನ ಹರಸಮಯದ ವೀರನನ್ನು ಉಲ್ಲೇಖಿಸುವಂತಿದೆ.

ಕ್ರಿ.ಶ. ೧೧೩೫ರ ವೀರಗಲ್ಲು (೨ನೆಯ ವೀರಗಲ್ಲು ಶಾಸನದಲ್ಲಿ ಕೊಂಗಾಳ್ವಾದಿತ್ಯ ದೇವನನ್ನು ಹೆಸರಿಸಿದೆ. ಕೊಂಗಾಳ್ವರಲ್ಲಿ (ಕ್ರಿ.ಶ. ೧೦೬೬-೧೧೦೦)ರ ರಾಜೇಂದ್ರ ಪ್ರಥುವೀ ಕೊಂಗಾಳ್ವನಿಗೆ 'ಅದಟರಾದಿತ್ಯ, ತ್ರಿಭುವನಮಲ್ಲ' ಎಂಬ ಬಿರುದುಗಳಿದ್ದುವು, 'ಅದಟರಾದಿತ್ಯ ಚೈತ್ಯಾಲಯ' ಎಂಬ ಬಸದಿಯ ಹೆಸರು ಕೊಡಗಿನ ಮಾಲಂಬಿಯ ನೆರೆಯ ಗ್ರಾಮ ಸುಳುಗೋಡು ಸೋಮವಾರ ಗ್ರಾಮದ ಬಸ್ತಿಗಿದೆ.[೧೪] ಹೀಗಾಗಿ ವೀರಚೋಳ ಕೊಂಗಾಳ್ವನ ಪೂರ್ವಜ ರಾಜೇಂದ್ರ ಪ್ರಥುವಿ ಕೊಂಗಾಳ್ವನು ಸಾಮಂತರನ್ನು ಹೊಂದಿದ್ದು ಅವರ ಪಾಲಿಗೆ ದೇವರು ಎಂದೋ ಅಥವಾ ಅವನ ಬಿರುದಿನಲ್ಲಿದ್ದ ಅದಟರಾದಿತ್ಯ ದೇವರಿಗೆ ಇದು ಅನ್ವಯವಾಗಿ ಜನರು ಹೊಂದಿದ ಭಕ್ತಿ ಗೌರವ ಸೂಚಕವೆನ್ನುವಂತಿದೆ. ಈ ಶಾಸನದಲ್ಲಿ ಆಷ್ವಹಾಬನೆ, ಗೋಸರಸ, ಹರವೀರ ಚೂರದಯ್ಯ ಗನಪುರಿ ರಾಜ್ಯ ಭಗವಿತ್ಯಾಮದ್ರೆ (ಗ್ರಾಮ). ಜಸಬಾಡ ಬಳಿ ಕಾದಿ, ಇತ್ಯಾದಿ ಶಬ್ದಗಳು ಅಸ್ಪಷ್ಟ ಅಕ್ಷರಗಳ ನಡುವೆಯೂ ಕಾಣಬರುತ್ತವೆ. ಬಹುಶಃ ಅಶ್ವಹಾಬನೆ-ಚಮೂಪತಿ (ಚಮೂದಧು)- ಅಶ್ವಸೇನೆಯ ಒಡೆಯ ಗೋಸರಸ ಗನಪುರಿ ರಾಜ್ಯ, ಭಗವತಿಯ 'ಮಾದ್ರೆ' ಗ್ರಾಮವಾಗಿದ್ದಂತೆ ತೋರುತ್ತದೆ. ಮಾದ್ರೆಯೊಂದು ಪ್ರಸಿದ್ಧ ರಾಜ್ಯಾಡಳಿತ ಪ್ರದೇಶವಾಗಿತ್ತು ಎಂಬ ಸೂಚನೆಯೂ ಇಲ್ಲಿರುವಂತಿದೆ.

(ಭಗವಿತ್ಯಾ) ಭಗವತಿ ಆರಾಧನೆ ಕೊಡಗಿನಲ್ಲಿ ಪ್ರಾಚೀನ ಪ್ರಸಿದ್ಧ. ಮಾದ್ರೆ ಗ್ರಾಮದಲ್ಲಿ ಕಾಷ್ಠ ಶಿಲ್ಪಗಳ ರೂಪದಲ್ಲಿ ಸುಗ್ಗಿಯಮ್ಮ, ಕೆಂಚಮ್ಮ, ದೇವೀರಮ್ಮ ದೇವತೆಗಳು ಹಾಗೂ ವೀರಭದ್ರರ ದೇಗುಲ ಸಂಯುಕ್ತವಿದೆ. ಇಲ್ಲಿಯ ಸಪ್ತಮಾತೃಕಾ (ಸಬತಾಯಿ) ಆರಾಧನಾ ಪ್ರತೀಕವಾದ ಸುಗ್ಗಿಕಟ್ಟೆ ಹಬ್ಬ ಪ್ರಸಿದ್ಧವಿದೆ. ರಾಮೇಶ್ವರಲಿಂಗ ಹಾಗೂ ಸೂರ್ಯ ಶಿಲ್ಪವೂ ಈ ವೀರಗಲ್ಲುಗಳ ನೆರೆಗೇ ಇದೆ.[೧೫] ಈ ಶಾಸನದಲ್ಲಿ 'ಹರವೀರ ಚೂರದಯ್ಯದೋಳ್ **ಗನಪುರಿ ರಾಜ್ಯ ಮದ್ರೆ**' ಎಂದಿರುವಲ್ಲಿ ಶಿವಾಚಾರದ ಚೂರದಯ್ಯ ಇಲ್ಲಿ ಸಾಮಂತನಾಗಿ ಆಳುತ್ತಿದ್ದನೇ! ಎಂಬ ಊಹೆಗೂ ಅವಕಾಶವಾಗುತ್ತದೆ. ಇನ್ನೊಂದು ಇಲ್ಲಿನ ವೀರಶಾಸನದಲ್ಲಿ, ಕೋಟೆಯ ಪ್ರಸ್ತಾಪ ಬರುತ್ತದೆ. ಅಂತಾಗಿ ಇದು ಹೊಯ್ಸಳರ ಕಾಲದಲ್ಲಿ ಕೊಡಗಿನಲ್ಲಿ ಒಂದು ಉಪ ರಾಜಧಾನಿ ಆಗಿತ್ತೆ? ಎಂಬ ಅಂಶವೂ ಸುಳುಹುದೋರುತ್ತದೆ. ಸನಿಹದಲ್ಲಿ ಮುದ್ದಿನಕಟ್ಟೆ ವೀರಶೈವ ಮಠವಿದ್ದು ಉಜ್ಜಯಿನಿ ಶಾಖೆಗೆ ಸೇರಿದೆ. 'ಹರವೀರ' ಎಂಬ ಶಾಸನೋಕ್ತ ಹೆಸರು ವೀರಗಲ್ಲು ಶಾಸನಗಳ ನೆರೆಗಿರುವ ಅರಳೀಮರದ ಗೂಡಿನಲ್ಲಿ

ಲಿಂಗವನ್ನಿಟ್ಟು ಪೂಜಿಸುವುದನ್ನು ನೋಡಿದರೆ ವೀರಶೈವ ಪ್ರಭಾವ ಹಾಗೂ ಒಂದು ಕಾಲದ ಶಿವಾಚಾರಸ್ಥರ ಮಠೀಯ ಪ್ರಭಾವದ ಸೂಚನೆಯೂ ಕಾಣುತ್ತದೆ ಪರಂಪರೆಯ ಲಕ್ಷಣವಾಗಿ. ಜಿನಧರ್ಮಿ ಕೊಂಗಾಳ್ವಾದಿತ್ಯ ದೇವರ ಹೆಸರು ಶಾಸನದಲ್ಲಿ ನಮೂದು ಇದ್ದರೆ, ವೀರಗಲ್ಲಿನ ಮೇಲಿನ ಹಂತದಲ್ಲಿ ಕೈಲಾಸದ ದೃಶ್ಯವಿರುವುದು ಧಾರ್ಮಿಕ ಸಾಮರಸ್ಯದ ಕುರುಹೆನ್ನುವಂತಿದೆ. ಜೊತೆಗೆ ಶೈವಧರ್ಮದ ಪ್ರಾಬಲ್ಯದ ಸೂಚನೆಯೂ ಆಗಿದೆ.

ಕ್ರಿ.ಶ. ೧೧೭೯ರ (೧ನೆಯ ವೀರಗಲ್ಲು) ಇಲ್ಲಿಯ ಇನ್ನೊಂದು ವೀರಗಲ್ ಶಾಸನವು ಇಮ್ಮಡಿ ವೀರಬಲ್ಲಾಳನನ್ನು ಹೆಸರಿಸುತ್ತದೆ. ಇದರಲ್ಲಿ ಸ್ಪಷ್ಟವಾಗಿ 'ಮಾದ್ರೆ' ಗ್ರಾಮದ ಹೆಸರಿದೆ. ಕೋಟೆಯ ಪ್ರಸ್ತಾಪವಿದೆ. ಈಗಾಗಲೇ ಹೇಳಿದಂತೆ ಅಂಕಯ ದಣಾಯಕರ ಮಗ ಮಾಯಣ್ಣ ಕೋಟೆ ಏರಿ ಆಕ್ರಮಿಸಲು ಬಂದಾಗ ಮಾದ್ರೆಯ ವೀರ ಹಸಿಲದಾಸಿಯ ಮಗ ಬಯಂಣ ಹಾಗೂ ಚಿನಗಾವುಂಡ ಹಳ್ಳುಳಿಯಲ್ಲಿ ಕಾದು ಶತ್ರುಸೇನೆಯನ್ನು ಚದುರಿಸಿ, ವೀರಸ್ವರ್ಗವೇರಿದ ಸಂಗತಿಯ ಸೂಚನೆ ಇದೆ. ಮಾದ್ರೆಯ ಈ ವೀರಶಾಸನಗಳು 'ಊರಬಾಗಿಲ' ಬಳಿ ಇದ್ದು, ಕೋಟೆಯೂ ಇದ್ದ ಬಗ್ಗೆ ತಿಳಿದುಬರುತ್ತದೆ. ಹೀಗಾಗಿ ೧೧೭೯ರ ಶಾಸನದಲ್ಲಿ ಬರುವ 'ಕೋಟೆ'ಯ ಪ್ರಸ್ತಾಪ ಗಮನಾರ್ಹ. ಹೀಗೆ ಮೂರು ವೀರಗಲ್ಲುಗಳು ವಿಶಿಷ್ಟ ಮಾಹಿತಿಗಳನ್ನು ನೀಡುತ್ತ ಕೊಡಗಿನಲ್ಲಿಯ ಶೈವ-ಜೈನ ಸಾಮರಸ್ಯ ಸಂದರ್ಭಗಳನ್ನೂ ಪೋಷಿಸುವಂತಿವೆ.

(ಈ ಮೂರು ಶಾಸನಗಳನ್ನು ಅಡ್ವೊಕೇಟ್ ಮಾದ್ರೆಯ ಶ್ರೀ ಎಂ.ಇ. ನಾಗೇಶ್, ಅವರು ತಮ್ಮೂರಿಗೆ ನನ್ನನ್ನು ಕರೆದುಕೊಂಡು ಹೋಗಿ ತೋರಿಸಿದ್ದರು. ಈ ದಿಸೆಯಲ್ಲಿ ನೆರವಾದ ಊರಿನ ಹಿರಿಯರಾದ ಶ್ರೀ ಬಸವೇಗೌಡರಾದಿಯಾಗಿ ಮಾದ್ರೆ ಗ್ರಾಮದ ಜನತೆಗೆ ನಾನು ಕೃತಜ್ಞ).

## ಆಧಾರಸೂಚಿ


೧. ಎ.ಕ. ಸಂ. ೧ (ಹೊಸತು), ೧೯೭೨, ಕೊಡಗು ಜಿಲ್ಲೆ, ಸೋಮವಾರಪೇಟೆ ೬೫ (ಮಾಲಂಬಿ) ಕ್ರಿ.ಶ. ಸುಮಾರು ೧೦೦೪ !

೨. ಎ.ಕ.ಸಂ. ೮ (ಹೊಸತು) ೧೯೮೪, ಹಾಸನ ಜಿಲ್ಲೆ, ಅರಕಲಗೂಡು ೧೩೩ (ಸುಳುಗೋಡು ಸೋಮವಾರ, ಕ್ರಿ.ಶ. ೧೦೭೯-೮೦).

೩. E.I. xvii, P. ೩೦೧, Lines ೬೯-೭೦.

೪. K. Mammen., *Kerala Culture,* 1942, PP. 80-81.

೫. ಷ. ಶೆಟ್ಟರ್., ೨೦೦೮, **ಶಂಗಂ ತಮಿಳಗಂ ಮತ್ತು ಕನ್ನಡನಾಡು-ನುಡಿ,** ಬೆಂಗಳೂರು.

೬. Kuppuram., *Imperial Cholas in Karnataka,* PP. 11-12.

೭. ಎ.ಕ. ಸಂ. ೧ (ಹೊಸತು)., ಅದೇ, ಸೋಮವಾರಪೇಟೆ, ೭೨ (ಮುಳ್ಳೂರು); ಸೋಮವಾರಪೇಟೆ ೬೮-೬೯.
(ಮುಳ್ಳೂರು, ೧೧ನೆಯ ಶತಮಾನ, ಸೋಮವಾರಪೇಟೆ, ೭೦ (ಮುಳ್ಳೂರು), ಸೋಮವಾರಪೇಟೆ ೮೭.
ನಂದಿಗುಂದ, ಕ್ರಿ.ಶ. ೧೧೭೫).

೮. ಎ.ಕ.ಸಂ. ೮ (ಹೊಸತು) ಅರಕಲಗೂಡು ೧೩೩, ಅದೇ.

೯. ಎ.ಕ.ಸಂ. ೮ (ಹೊಸತು) ಅ.ಗು. ೧೩೬ (ಸುಳುಗೋಡು ಸೋಮವಾರ, ಕ್ರಿ.ಶ. ೧೧೯೫).

೧೦. *Coorg District Gazetteer.,* (Ed) B.N. Satyan, 1965, Bangalore, PP. 44-45.

೧೧. ಎಂ.ಜಿ. ನಾಗರಾಜ್., 'ಕೊಡಗಿನ ಕೊಂಗಾಳ್ವರು ಮತ್ತು ಜೈನಧರ್ಮ', **ಇತಿಹಾಸ ದರ್ಶನ,** ಕ.ಇ.ಅ. ಸಂ. ೧೮/೨೦೦೩, ಪುಟ ೧೭೧.

೧೨. *Hassan District Gazetteer.,* P. 55.

೧೩. i. ಎ.ಕ.ಸಂ. ೮, ಅರಕಲಗೂಡು ೫೩; Hassan District Gazetteer, P. 59, Coorg District, Gazetteer, PP. cit, P. 48.
ii. ಎಂ.ಜಿ. ನಾಗರಾಜ್., 'ಕೊಡಗು ಶ್ರೀರಂಗಪಟ್ಟಣ', **ಇತಿಹಾಸ ದರ್ಶನ,** ಕ.ಇ.ಅ. ಸಂ. ೫/೧೯೯೦, ಪುಟ ೧೧೦.

೧೪. i. ಎ.ಕ.ಸಂ. ೪ (ಹೊಸತು), ೧೯೭೫, ಅ.ಗೂ. ೧೩೩ (ಸುಳುಗೋಡು ಸೋಮವಾರ, ಕ್ರಿ.ಶ. ೧೦೭೯-೮೦).
ii. ಎ.ಕ. ೫ (ಹೊಸತು), ೧೯೭೬, ಮೈಸೂರು ಜಿಲ್ಲೆ, ಕೃನ. ೬೬ (ಸಾಲಿಗ್ರಾಮ, ಕ್ರಿ.ಶ. ೧೦೭೯).
ii. ಎ.ಕ. ೮ (ಹೊಸತು), ೧೯೮೪, ಮೈಸೂರು ಜಿಲ್ಲೆ, ಹೊ.ನ. ೧೩೫. (ಗುಬ್ಬಿ, ೧೧-೧೨ನೇ ಶತಮಾನ).

೧೫. ಡಾ. ಎಂ.ಜಿ. ನಾಗರಾಜ್, ೨೦೧೦, **ಕೊಡಗಿನ ಸಾಂಸ್ಕೃತಿಕ ಜಾನಪದ ನೆಲೆಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ ೪೫.

ಸಂತೇಬೆನ್ನೂರು ಸುಮತೀಂದ್ರನಾಡಿಗ್*

# ಸಂತೇಬೆನ್ನೂರು ನಾಯಕರ ಮೂರು ಹೊಸ ಶಾಸನಗಳು

ವಿಜಯನಗರ ಅರಸರಿಂದ ಈಗಿನ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲೂಕು ಸಂತೇಬೆನ್ನೂರು ಅಮರ ಮಾಗಣಿಯಾಗಿ ಪಡೆದು, ಅಲ್ಲಿ ಪಾಳೇಪಟ್ಟು ಕಟ್ಟಿ ಆಳಿದ ಒಂದು ರಾಜವಂಶ ಸಂತೇಬೆನ್ನೂರು ನಾಯಕರು. ಈ ರಾಜವಂಶ ಆರಂಭದಲ್ಲಿ ಸಂತೇಬೆನ್ನೂರು ರಾಜಧಾನಿ ಮಾಡಿಕೊಂಡು, ನಂತರ ಇದರ ಸಮೀಪದ ಇದೇ ತಾಲೂಕಿನ ಬಸವಾಪಟ್ಟಣದ ಹೆಣ್ಣುಮಗಳನ್ನು ಮದುವೆಯಾಗಿ ಅಲ್ಲಿಗೆ ತಮ್ಮ ರಾಜಧಾನಿ ಬದಲಾಯಿಸಿಕೊಂಡರು, ತದನಂತರ ಬಿಜಾಪುರದ ಆದಿಲ್‌ಷಾಹಿ ಸುಲ್ತಾನನ ದಳಪತಿ ರಣದುಲ್ಲಾಖಾನ್ ಇವರ ಮೇಲೆ ದಾಳಿ ಮಾಡಿದಾಗ, ಅವನಿಗೆ ಶರಣಾಗಿ ಮುಂದೆ ತಮ್ಮ ರಾಜಧಾನಿಯನ್ನು ಈಗಿನ ಚಿಕ್ಕಮಗಳೂರು ಜಿಲ್ಲೆ ತರಿಕೆರೆಗೆ ಬದಲಾಯಿಸಿಕೊಂಡು, ಟಿಪ್ಪುಸುಲ್ತಾನನ ಕಾಲದವರೆಗೂ ಸುಮಾರು ಎರಡುವರೆ ಶತಮಾನಗಳ ಕಾಲ ಈಗಿನ ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಹಾವೇರಿ, ಜಿಲ್ಲೆಗಳ ಬಹುಭಾಗದ ಆಡಳಿತವನ್ನು ನಡೆಸಿದರು. ಸುಮಾರು ೨೫ಕ್ಕೂ ಹೆಚ್ಚು ನಾಯಕರು ಈ ವಂಶದ ಆಡಳಿತ ನಡೆಸಿರುವುದು ಇವರು ಬರೆಸಿದ ಶಿಲಾಶಾಸನಗಳು, ತಾಮ್ರಶಾಸನಗಳು, ಕೈಫಿಯತ್ತುಗಳು, ಕಡತಗಳು ಹಾಗೂ ಸಮಕಾಲೀನ ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ. ಈವರೆಗೆ ಈ ನಾಯಕರ ೫೬ ಶಾಸನಗಳು ಈಗಾಗಲೇ ಪ್ರಕಟವಾಗಿದ್ದು, ಈಚೆಗೆ ಅವರ ಮೂರು ಅಪ್ರಕಟಿತ ಶಿಲಾಶಾಸನಗಳು ಚಿಕ್ಕಮಗಳೂರು ಜಿಲ್ಲೆಯಲ್ಲಿ ದೊರೆತಿದ್ದು, ಅವುಗಳ ಬಗ್ಗೆ ಈ ಸಂಪ್ರಬಂಧದಲ್ಲಿ ವಿವೇಚಿಸಲಾಗಿದೆ.

ಈಗ ದೊರೆತಿರುವ ಈ ಮೂರು ಶಿಲಾಶಾಸನಗಳು ಚಿಕ್ಕಮಗಳೂರು ಜಿಲ್ಲೆ, ಕಸಬಾ ತಾಲೂಕಿನಲ್ಲಿ ದೊರೆತಿದ್ದು, ಅದರಲ್ಲಿ ಆ ತಾಲೂಕಿನ ಹೊಸಪೇಟೆ ಎಂಬ ಗ್ರಾಮದಲ್ಲಿ ಒಂದು, ಅದರ ಸಮೀಪದ ಗೊಣಕಲ್ಲಿನಲ್ಲಿ ಇನ್ನೊಂದು, ಹಾಗೆಯೇ ಮತ್ತೊಂದು ಅದರ ಅಸುಪಾಸಿನಲ್ಲಿಯೇ ಇರುವ ಹಿರೇಬಿದರೆ ಗ್ರಾಮದಲ್ಲೂ ದೊರೆತಿದೆ. ಈ ಮೂರು ಶಿಲಾ ಶಾಸನಗಳು ೪ ಕಿ.ಮೀ. ಅಂತರದಲ್ಲಿಯೇ ದೊರೆತಿದ್ದು, ಎಲ್ಲಾ ಶಾಸನಗಳು ಕಿರು ಶಾಸನಗಳಾಗಿದ್ದು, ಎಲ್ಲವೂ ಕನ್ನಡ ಭಾಷೆ ಮತ್ತು ಲಿಪಿಯಲ್ಲಿದೆ ಕೊರೆದಿರುವ ಶಾಸನದ ಲಿಪಿ ಭಾಷೆ ಶುದ್ಧವಾಗಿಲ್ಲ.

ದೊರೆತಿರುವ ಈ ಎಲ್ಲಾ ಶಿಲಾಶಾಸನದ ಬರೆಸಿದ ದೊರೆ ಒಬ್ಬನೇ ಆಗಿದ್ದ ಅದು ಒಂದೇ ಕಾಲ. ದಿನದಲ್ಲಿ ಬರೆಸಿದ ಶಾಸನಗಳಾಗಿರುವುದು ವಿಶೇಷ. ಇವುಗಳನ್ನು ಬರೆಸಿದ ದೊರೆ ಸಂತೇಬೆನ್ನೂರು ಸೀತಾರಾಮಪ್ಪ ನಾಯಕ ಎಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಎಲ್ಲಾ ಶಾಸನಗಳನ್ನು ಶಾ.ಶ. ೧೭೭೫ ನೇ ದುಂದುಭಿ ಸಂವತ್ಸರದ ಕೃಷ್ಣ ಶುದ್ಧ ೧೨ ರಂದೇ ಬರೆಸಲ್ಪಟ್ಟಿರುವುದಾಗಿ ನಮೂದಿಸಲಾಗಿದೆ.

**ಶಾಸನಗಳ ಸಾರಾಂಶ**

ಹೊಸಪೇಟೆಯಲ್ಲಿ ದೊರೆತಿರುವ ಶಾಸನ ೨೧ ಸಾಲುಗಳನ್ನು ಹೊಂದಿದ್ದು, ಅದೇ ತಾಲೂಕಿನಲ್ಲಿರುವ ಬಿಸಲ್ಗಣಿ ಮಠದ ಧರ್ಮಕ್ಕೆ ಗೊಣಕಲ್ಲ ಘಳದ (ಕಂಬಿ) ಹಳ್ಳಿ ಗ್ರಾಮವನ್ನು ದತ್ತಿ ಕೊಟ್ಟಿರುವುದನ್ನು ತಿಳಿಸಿದರೆ, ಗೊಣಕಲ್ಲ ಬಳಿ ಸಿಕ್ಕಿರುವ ಶಾಸನ ೨೪ ಸಾಲುಗಳ ಬರಹಗಳನ್ನೊಳಗೊಂಡಿದ್ದು, ಗೊಣಕಲ್ಲಿನ ಅಮ್ಮೆಯಗೌಡ ಎಂಬುವನಿಗೆ ೧೨ ಕೊಳಗ, ೮ ಪದಿರ್ಥ ಭೂಮಿಗದ್ದೆಯನ್ನು ಕುದುರೆಯ ಸತ್ತಿಗೆಗೆ ಕೊಡಮಾಡಿದ್ದನ್ನು ತಿಳಿಸುತ್ತದೆ. ಹಿರೇಬಿದರೆಯಲ್ಲಿ ಸಿಕ್ಕಿರುವ ಇನ್ನೊಂದು ಶಾಸನದಲ್ಲಿ ೧೨ ಸಾಲುಗಳು ಬರಹವಿದ್ದು, ಹಿರೇಬಿದರೆ ಮಲ್ಲೇಗೌಡ ಎಂಬುವನಿಗೆ ಭೂದಾನ (ಗದ್ದೆ) ಕೊಟ್ಟ ಬಗ್ಗೆ ತಿಳಿಸುತ್ತಿದ್ದು, ಶಾಸನದ ಕೆಳಭಾಗ ತೃಟಿತವಾಗಿ ದಾನ ಯಾವ ಕಾರಣ ಕೊಟ್ಟಿದ್ದು ಎಂಬ ವಿಚಾರ ಓದಲು ಬರುವಂತಿಲ್ಲ. ಈ ಮೂರು ಶಾಸನಗಳು ಈವರೆಗೆ ಪ್ರಕಟವಾದ ಯಾವ ಶಾಸನ ಸಂಪುಟ ದಲ್ಲಾಗಲೀ, ಇತರೆಡೆಗಾಗಲೀ ಈವರೆವಿಗೂ ಎಲ್ಲೂ ಪ್ರಕಟವಾಗಿಲ್ಲ.

ಈ ಮೂರು ಶಿಲಾ ಶಾಸನಗಳನ್ನು ಪರಿಶೀಲಿಸಿದಾಗ ಈ ಕೆಳಕಂಡ ಇನ್ನಷ್ಟು ಅಂಶಗಳು ನಮಗೆ ತಿಳಿದು ಬರುತ್ತದೆ.

೧. ಸಂತೇಬೆನ್ನೂರು ನಾಯಕರ ವಂಶದಲ್ಲಿ ಹಲವಾರು ಸೀತಾರಾಮಪ್ಪ ನಾಯಕ ಎಂಬ ಹೆಸರಿನ ನಾಯಕರು

* ಸಂತೇಬೆನ್ನೂರು.

ಆಡಳಿತ ನಡೆಸಿದ್ದು, ಇಲ್ಲಿ ನಮೂದಿಸಿದ ಸೀತಾರಾಮಪ್ಪ ನಾಯಕ ಯಾರು ಎಂಬುದು ಗೊಂದಲಕ್ಕೆ ಎಡೆಮಾಡಿದೆ.

೨. ಕಾರಣ ಈ ಶಾಸನದಲ್ಲಿ ಉಲ್ಲೇಖಿತ ಕಾಲಕ್ಕೂ ಅವರ ವಂಶಗಳ, ಕೈಫಿಯತ್ತು ಮತ್ತಿತರ ಶಾಸನಗಳಲ್ಲಿ ದೊರೆತ ಕಾಲಕ್ಕೂ ಸೀತಾರಾಮಪ್ಪ ನಾಯಕನ ಕಾಲಕ್ಕೂ ತಾಳೆಯಾಗುವುದಿಲ್ಲ. ಆದ್ದರಿಂದ ನಮೂದಿತ ಕಾಲ ತಪ್ಪಾಗಿರುವ ಸಾಧ್ಯತೆಯೇ ಹೆಚ್ಚು. ಈಗ ದೊರೆತ ಶಾಸನಗಳ ನಮೂದಿತ ಕಾಲ ಕ್ರಿ.ಶ. ೧೮೬೩ ಇತರೆ ದಾಖಲೆಗಳಂತೆ ಟಿಪ್ಪುಸುಲ್ತಾನ ಅಷ್ಟರಲ್ಲಿ ಇವರ ಆಡಳಿತವನ್ನು ಕಿತ್ತುಕೊಂಡಿದ್ದ (ಟಿಪ್ಪುಸುಲ್ತಾನ ಮರಣ ಹೊಂದಿ ಕಾಲ ಕ್ರಿ.ಶ. ೧೭೯೯).

೩. ಆ ವಂಶದ ಕೈಫಿಯತ್ತುಗಳಲ್ಲಿ (ಯಗಡಿ-ತರಿಕೆರೆ ಕೈಫಿಯತ್ತುಗಳು) ಇಬ್ಬರು, ಅವರ ವಂಶದ ಊರ್ಧ್ವಕೇಶಿ ಹನುಮಪ್ಪನಾಯಕ ವಂಶಾವಳಿಯಲ್ಲಿ ಆರು ಜನರು ಸೀತಾರಾಮಪ್ಪ ನಾಯಕ ಎಂಬ ಹೆಸರಿನವರು ಕಂಡುಬರುತ್ತಾರೆ. ಸೀತಾರಾಮಪ್ಪ ನಾಯಕ ಎಂಬುವನು ಇದೇ ದುಂಧುಭಿ ಸಂವತ್ಸರದಲ್ಲಿ ಬರೆಸಿದ ಕೂಡಲಿ-೫೮ (೧೬೮೨) ಶಾಸನ, ಪೂನಾದಲ್ಲಿರುವ ಅವನ ಹೆಸರಿನಲ್ಲಿರುವ ತಾಮ್ರಶಾಸನ (೧೬೮೩), ಅರಸನಗುಪ್ಪೆ, ಶಿಲಾಶಾಸನ (೧೭೪೭) ಈಗಾಗಲೇ ಪ್ರಕಟಗೊಂಡಿದ್ದು, ಈ ಶಾಸನಗಳಲ್ಲಿನ ಬರಹಗಳಿಗೂ, ಇದೇ ತಾಲ್ಲೂಕಿನ ಅರಸನ ಗುಪ್ಪೆಯಲ್ಲಿರುವ ಶಿಲಾಶಾಸನದ ಬರಹಗಳಲ್ಲಿ ಬಹಳಷ್ಟು ಸಾಮ್ಯತೆಗಳಿದ್ದು ಬಹುಶಃ ಅರಸನಗುಪ್ಪೆ, ಶಾಸನ ಬರೆಯಿಸಿದ ಸೀತಾರಾಮಪ್ಪ ನಾಯಕನೇ ಈ ಮೂರು ಶಿಲಾಶಾಸನ ಬರೆಸಿರಬಹುದೆಂಬ ನಿರ್ಣಯಕ್ಕೆ ಬರಬಹುದಾಗಿದೆ.

೪. ಅದರಂತೆ ಈ ಶಾಸನ ಕಾಲ ಶ ೧೭೮೫ ದುಂದುಭಿ ಅಲ್ಲ, ಶಕ ೧೬೬೫ನೇ ದುಂದುಭಿ (೧೭೪೨) ಎಂಬ ನಿರ್ಣಯವೇ ಸರಿಯೆನಿಸುತ್ತದೆ.

೫. ಈ ಮೂರು ಶಿಲಾಶಾಸನಗಳಲ್ಲಿ ನಾಯುಕ ಸಂತೇಬೆನ್ನೂರು ಸೀತಾರಾಮಪ್ಪ ಎಂಬ ಕರೆದು ಕೊಂಡಿದ್ದಾನೆ. ಆದರೆ ಆಗ ಈ ನಾಯಕನ ರಾಜಧಾನಿ ತರಿಕೆರೆ ಆಗಿತ್ತು. ಈ ಶಾಸನಗಳು ತರಿಕೆರೆಗೆ ಸಮೀಪ ದಲ್ಲಿಯೇ ದೊರೆತಿದೆ. ಆದ್ದರಿಂದ ಇವರು ಬಸವಾ ಪಟ್ಟಣ ತರಿಕೆರೆಯಿಂದ ರಾಜ್ಯಾಡಳಿತ ನಡೆಸಿದರು ತಮ್ಮನ್ನು ಸಂತೇಬೆನ್ನೂರು ನಾಯಕರೆಂದೇ ಗುರುತಿಸಿ, ಕರೆದುಕೊಂಡಿರುವುದರಿಂದ ಇವರನ್ನು ಬಸವಾಪಟ್ಟಣ, ತರಿಕೆರೆ ನಾಯಕರು ಎಂದು ಬಹಳಷ್ಟು ಇತಿಹಾಸ ದಾಖಲೆಗಳು ಕರೆದಿರುವುದು ಸರಿಯಲ್ಲ ಅವರನ್ನು ಸಂತೇಬೆನ್ನೂರು ನಾಯಕರೆಂದೇ ಕರೆಯುವುದು ಸಾಧುವಾಗಿದೆ. ಕೆಳದಿ ನೃಪವಿಜಯದಲ್ಲಿ ಸೀತಾರಾಮಪ್ಪ ನಾಯಕರನ್ನು ತರಿಕೆರೆಯವನೆಂದು ಕರೆದಿದ್ದಾರೆ. ಅದೇ ಬಿದನೂರನ್ನಾಳಿದ ಕೆಳದಿಯವರನ್ನೇ ಅದೇ ನೃಪವಿಜಯ ಕೆಳದಿಯರಸರೆಂದು ಕರೆದಿರುವುದು ಹೇಗೆ ಸಮಂಜಸವಾಗುತ್ತದೆ.

೬. ಈ ಶಾಸನದಲ್ಲಿ ಉಲ್ಲೇಖಿತ ಗೊಣಕಲ್ಲು, ಬಿಸಲ್ಗಣಿಮಠ, ಕಂಬೀಹಳ್ಳಿ ಹಿರೇಬಿದರಿ ಗ್ರಾಮಗಳು ಈಗಲೂ ಅಸ್ತಿತ್ವದಲ್ಲಿದ್ದು, ಬಿಸಲ್ಗಣಿಯಲ್ಲಿ ವೀರಶೈವಮಠ ಈಗ ಇಲ್ಲದಿದ್ದರೂ ಅಲ್ಲೊಂದು ಮಠ ಇದ್ದುದು ಶಾಸನ ತಿಳಿಸುತ್ತದೆ.

೭ ಸೀತಾರಾಮಪ್ಪ ಬರೆಸಿದ ಇತರ ತಾಮ್ರ ಶಾಸನಗಳಲ್ಲಿ ಅವನಿಗೆ ಸರ್ಜಾ ಸೀತಾರಾಮಪ್ಪ ನಾಯಕ ಎಂದು ಕರೆಯಲ್ಪಟ್ಟಿದ್ದು, ಅದೇಕೋ ಈ ಶಾಸನದಲ್ಲಿ ಆ ಬಿರುದು ಬಳಸಿಲ್ಲ.

೮. ಸಂತೇಬೆನ್ನೂರು ಸೀತಾರಾಮಪ್ಪ ನಾಯಕನ ಹೆಸರಿನಲ್ಲಿ ಅವನು ಬರೆಸಿದನೆನ್ನಲಾದ ೧೦ ಶಾಸನಗಳು ಈಗಾಗಲೇ ದೊರೆತಿದ್ದು, ಈ ೩ ಶಾಸನಗಳು ಸೇರಿ ಅವನ ಹೆಸರಿನಲ್ಲಿ ದೊರೆತ ಶಾಸನಗಳ ಸಂಖ್ಯೆ ೧೩ ಆಗುತ್ತದೆ.

೯. ಈ ಶಾಸನಗಳ ಪತ್ತೆಯಿಂದ ಅದರ ವಂಶದ ೫೯ ಶಾಸನಗಳು ದೊರೆತಂತಾಗಿದ್ದು ಇದರಿಂದ ಚಿಕ್ಕಮಗಳೂರು ಜಿಲ್ಲೆ, ತಾಲ್ಲೂಕು, ಸಂತೇಬೆನ್ನೂರು ನಾಯಕರ ವಂಶದ ಶಾಸನಗಳಿಗೆ ಇನ್ನಷ್ಟು ಹೊಸ ಶಾಸನಗಳು ಸೇರ್ಪಡೆಯಾದಂತಾಗಿದ್ದು, ಅದರಿಂದ ಕೆಲಹೊಸ ಸಂಗತಿ, ವಿಚಾರಗಳು ಬೆಳಕಿಗೆ ಬರಲು ಕಾರಣವಾಗಿದೆ.

**ಶಾಸನಗಳ ಪಾಠ**

**ಶಾಸನ-೧**

ಚಿಕ್ಕಮಗಳೂರು ತಾಲ್ಲೂಕು ಹೊಸಪೇಟೆಯ ದೊರೆತೋಟದಲ್ಲಿ ನಿಲ್ಲಿಸಿರುವ (೧' ೧" x ೩') ಪಾಚಿ ಹಸಿರು ಕಲ್ಲಿನ ಮೇಲಿರುವ ಶಾಸನ.

೧ ಶುಭಮಸ್ತು ನಮ
೨ ಸ್ತುಂಗ ಶಿರಸ್ತುಂಬಿ ಚಂದ
೩ ರ ಚಂಮರ ಚರ
೪ ತ್ರೈಲೋಕ್ಯ ನಗರರಂಭ
೫ ಮೂಲ ಸ್ತ[ಂಭಾ]ಯ ಸಂಭವೆ
೬ ಸ್ವಸ್ತಿ ಶಲಿವಹನ ಸ
೭ ಕ ೧೭೮೫ನೆಯ ದುಂ
೮ ದುಬಿ ಸಂವತ್ಸರ ಪು

೯ ಶ್ಯ ಶು ೧೨ ಶ್ರೀಮತ
೧೦ ಸಂತೆಬೆಂನೂರ ಸಿತರ
೧೧ [ದು]ಪ್ಪ ನಯಕರು ಬಿಸಿಲ್ಗ
೧೨ ಗಣಿ ಸ್ವಾಮಿಗಳ ಮ
೧೩ ಟದ ಧರ್ಮಕ್ಕೆ ಗೊಣ
೧೪ ಕಲ ಫಳದ [ಕಂಬಿ]
೧೫ ಹಳಿ ಗ್ರಮದ ಸನ್ತೆ
೧೬ ಮೈ ಹಾರ xxಹ
೧೭ ಣ ಬತ್ಮ xxನಲು
೧೮ xಮಟ xಟ ದ ಕ
೧೯ ರ್ಯ ಕ್ಕೆ ದ xx
೨೦ xಗ xಸ್ತ xಯ
೨೧ ನಮಗಿಯಲಿ

**ಶಾಸನ–೨**

ಅದೇ ಚಿಕ್ಕಮಗಳೂರು ತಾಲ್ಲೂಕು ಗೋಣಕಲ್ಲಿನ ಕಬ್ಬಿನ ಗದ್ದೆಯಲ್ಲಿ ನಿಲ್ಲಿಸಿರುವ (೧೧/೨' x ೪') ಗ್ರಾನೈಟ್ ಕಲ್ಲಿನ ಮೇಲಿರುವ ಶಾಸನ

೧ ನಮಸ್ತುಂಗ ಶಿರಶ್ಚುಂಬಿ ಚಾ
೨ ದ್ರ ಚಾಮರ ಚಾರದೆ
೩ ತ್ರೈಲೋಕ್ಯ ನಗರಾಂಭ ಮೂ
೪ ಲ ಸ್ತಂಭಯೆ ಶಂಭವೆ
೫ ಸ್ವಸ್ತಿ ಶ್ರೀ ವಿಜಯ ಭುದಯ
೬ ಶಾಲಿವಾಹನ ಶಖ ವರುಶ
೭ ಕಲಿಯುಗ ಸೌ ೧೭೮೫ ನೆಯ
೮ ಸಲುವ ದುಂದುಬಿ ಸಂವತ್ಸ
೯ ರದ ಪುಶ್ಯ ಶು ೧೨ ಫ ಶ್ರೀಮ
೧೦ ಸಂತೆಬೆಂನೂರು ಸಿತಾಶಾಮ
೧೧ ಪ್ಪ ನಾಯಕರು ಗೋಣಿಕಲ್ಲ
೧೨ ಅಮ್ಮೆಯ ಗೌಡಗೆ ಗದ್ದೆ
೧೩ ಡುಗಡಿ ನಗಡು ಗಡಗಡ
೧೪ ನೆರಡು ಕೊಳಗಕೆನ ೮
೧೫ ಯಂಚು ಪದಿರ್ವದ ಭೂಮಿ
೧೬ ಯನು ನವಿಂನ ಕುದುರೆ ಸತ್ತಿಗೆ ಗಳ
೧೭ ಕೆ ಗದೆ ಬ॥ ೫೦॥ ಉಭಯಂ
೧೮ ಗ/೦ ಕೆ ಗದೆ ಖಲ ಯಂ
೧೯ ಟ ನು ಖಂಡುಗದೆ ಪಾವೆಮಾ
೨೦ ಮೆರೆ ನೆಟ್ಟ ದಾನದ ಭೂಮಿಯಂನು
೨೧ ಪುತ್ರ ಪೌತ್ರ ಪಾರಂಪರೆ
೨೨ ಯ ಅನುಭವಿಸಿಕೊಂಡು
೨೩ ಬರುವುದೆಂದು ಬರೆಸಿ
೨೪ ಕೊಟ್ಟ ಶಿಲಾ ಶಾಸನ

**ಶಾಸನ–೩**

ಅದೇ ಚಿಕ್ಕಮಗಳೂರು ತಾಲ್ಲೂಕು ಹೊಸಪೇಟೆಗೆ ೨ ಕಿ.ಮೀ. ದೂರ ಇರುವ ಹಿರೇ ಬಿದಿರೆಯ ಮೂಗ ಚಂದ್ರಗೌಡರ ಮನೆ ಹತ್ತಿರವಿದ್ದ (೧'.೬" x ೩'.೬') ಪಾರಿ ಹಸಿರು ಕಲ್ಲಿನ ಮೇಲಿನ ಶಾಸನ

೧ ನಮಸ್ತುಂಗ ಶಿರಶ್ಚುಂಬಿ ಚಂ
೨ ದ್ರ ಚಾಮರ ಚಾರವೆ ತ್ರೈಲೋ
೩ ಕ್ಯ ನಗರರಂಭ ಮೂಲಸ್ತಂಭ
೪ ಯ ಶಂಭವೆ ಸ್ವಸ್ತಿ
೫ ಸರಿ ವಾಹನ
೬ ಸಕ ೧೭೮೫ ನೆಯ ದುಂದುಬಿ ಸಂ
೭ ವತ್ಸರದ ಪುಶ್ಯ ಶು ಬಿ x ಸ್ರಿಮ
೮ ತ ಸಂತೆಬೆಂನೂರು ಸಿತರಾ [ಮಪ್ಪ]ನಯ
೯ ಕರು ಹಿರೆ ಬಿದಿರೆ ಮಲ್ಲೆಗೌಡ
೧೦ ಉಳಿ ಚಿ
೧೧ ಗೌಡಗಳಿಗೆ ಕೊಟ
೧೨ ದ ಉ ಗದ್ದೆ ಖ ೨
೧೩ xxxxxx

(ಈ ಶಾಸನಗಳ ಬಗ್ಗೆ ಮಾಹಿತಿ ನೀಡಿ ಶಾಸನದ ನಕಲನ್ನು ನನಗೆ ಒದಗಿಸಿದ ಬೀರೂರಿನ ಶಾಸನಲಿಪಿ ತಜ್ಞ ಬಿ. ಇಸ್ಮಾಯಿಲ್‌ರವರಿಗೆ ನನ್ನ ಕೃತಜ್ಞತೆಗಳು.)

## ಆಧಾರಸೂಚಿ


೧. ಸಂತೇಬೆನ್ನೂರು ಸುಮತೀಂದ್ರ ನಾಡಿಗ್, **ಸಂತೇಬೆನ್ನೂರು ನಾಯಕರು,** (೨೦೦೮), ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ಬೆಂಗಳೂರು.
೨. ಪಿ. ಅಬ್ದುಲ್ ಸತ್ತಾರ್, **ತರೀಕೆರೆ ಪಾಳೆಯಗಾರರು,** (೧೯೯೭), ಶ್ರೀ ಲೋಕ ಪಾವನಿ ಪ್ರಕಾಶನ, ಪಾಂಡವಪುರ.
೩. **ಕರ್ನಾಟಕದ ಕೈಫಿಯತ್ತುಗಳು** (೧೯೯೪), ಸಂ. ಎಂ.ಎಂ. ಕಲುಬುರ್ಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪. ಎಫಿಗ್ರಾಫಿಯಾ ಆಫ್ ಕರ್ನಾಟಕ, ಶಾಸನ ಸಂಪುಟಗಳು, ಸಂ. ಬಿ.ಎಲ್. ರೈಸ್, ಮೈಸೂರು ಸರ್ಕಾರ, ಬೆಂಗಳೂರು.
೫. **ಕರ್ನಾಟಕ ಶಾಸನ ಸಂಗ್ರಹ** (೨೦. ೧೨–೧೩), ಚಿಕ್ಕಮಗಳೂರು ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
೬ **ಚಿಕ್ಕಮಗಳೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಪ್ರಾಚ್ಯ ವಸ್ತು ಇಲಾಖೆ,** ಮೈಸೂರು.
೭. ಶ್ರೀಯುತ ಜಗದ್ಗುರು ಶ್ರೀ ಕೂಡ್ಲಿ ಶೃಂಗೇರಿ ಸಂಸ್ಥಾನರ ಪ್ರಾಚೀನ ಶಾಸನ ಲೇಖನ ಸಂಗ್ರಹ ಭಾಗ–೨ (೧೯೬೫), ಶ್ರೀ ಕೂಡ್ಲಿ ಶೃಂಗೇರಿ ಮಠ, ಕೂಡಲಿ.
೮. **ಕೆಳದಿ ನೃಪವಿಜಯಂ** (೧೯೯೯), ಸಂ॥ ಕೆಳದಿ ಗುಂಡಾಜೋಯ್ಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಡಾ. ಕೆ.ಎಸ್. ಪಾಟೀಲ*

# ಸಮ್ಮಸಗಿಯ ಪಾರ್ಶ್ವನಾಥ ತೀರ್ಥಂಕರನ ಪಾದಪೀಠ ಶಾಸನ

ಹಾವೇರಿ ಜಿಲ್ಲೆಯ ಹಾನಗಲ್ಲ ತಾಲ್ಲೂಕಿನಿಂದ ೧೫ ಕಿ.ಮೀ. ಅಂತರದಲ್ಲಿರುವ ಸಮ್ಮಸಗಿ ಎಂಬ ಚಿಕ್ಕ ಗ್ರಾಮದಲ್ಲಿ ಈಶ್ವರದೇವಸ್ಥಾನದ ಬಲಭಾಗದಲ್ಲಿರುವ ಬಯಲು ಜಮೀನಿನಲ್ಲಿ ಉದ್ಯೋಗಖಾತ್ರಿ ಯೋಜನೆಯಡಿಯಲ್ಲಿ ಕಾಮಗಾರಿ ಕೆಲಸ ಕೈಗೊಂಡಿರುವ ಸಂದರ್ಭದಲ್ಲಿ ಕ್ರಿ.ಶ. ಸುಮಾರು ೧೧-೧೨ ನೆಯ ಶತಮಾನದ ಪಾರ್ಶ್ವನಾಥ ತೀರ್ಥಂಕರನ ಶಿಲ್ಪ ಬೆಳಕಿಗೆ ಬಂದಿದೆ.[೧] ಈ ಶಿಲ್ಪದ ಜೊತೆಗೆ ಬೀಸುವಕಲ್ಲು, ಗಡಿಗೆ ಮಡಿಕೆ, ಹೊರಳಕಲ್ಲು, ೧೮೩೨ ಮತ್ತು ೧೮೬೫ ರ ತೇದಿಯ ನಾಣ್ಯಗಳು ಹಾಗೂ ಒಂದು ಚೌಕಾಕಾರದ ಮನೆಯ ಅವಶೇಷಗಳು ದೊರೆತಿವೆ. ಪಾರ್ಶ್ವನಾಥನ ಶಿಲ್ಪವನ್ನು ಈಗ ಸದ್ಯದಲ್ಲಿ ಬೆಟ್ಟದ ಮೇಲಿರುವ ರೇಣುಕಾಂಬಾ ದೇವಸ್ಥಾನದಲ್ಲಿಡಲಾಗಿದೆ. ಈ ಶಿಲ್ಪದ ಪ್ರತಿಮಾಲಕ್ಷಣಗಳನ್ನು ಮತ್ತು ಪಾದಪೀಠದ ಮೇಲಿರುವ ಶಾಸನದಪಾಠ, ಸಾರಾಂಶ, ಮಹತ್ವವನ್ನು ಕುರಿತು ಚರ್ಚಿಸುವುದು ಪ್ರಸ್ತುತ ಸಂಲೇಖನದ ಉದ್ದೇಶವಾಗಿದೆ.

ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿರುವ ಈ ಶಿಲ್ಪವು ೧೩೬ ಸೆಂ.ಮೀ ಎತ್ತರ, ಮತ್ತು ೪೮ ಸೆಂ.ಮೀ ಅಗಲವಾಗಿದೆ. ಕಾಯೋತ್ಸರ್ಗದ ಭಂಗಿಯಲ್ಲಿರುವ ಪಾರ್ಶ್ವನಾಥನ ಹಿಂಭಾಗದಲ್ಲಿ ಬಲಪಾದ ದಡಿಯಿಂದ ಮುಡಿಯವರೆಗೂ ಅಂಕುಡೊಂಕಾಗಿ ಸುರಳಿ ಗೊಂಡಿರುವ ಸರ್ಪವು ಆತನ ಶಿರದ ಮೇಲ್ಭಾಗದಲ್ಲಿ ತನ್ನ ಏಳು ಹೆಡೆಗಳನ್ನು ಕೊಡೆಯಾಗಿ ಹಿಡಿದ ಹಾಗೆ ಬಿಚ್ಚಿಕೊಂಡಿದೆ. ಶಿಲ್ಪಫಲಕದ ಸುತ್ತಲೂ ಬಳ್ಳಿಯ ಅಲಂಕಾರವಿರುವುದು. ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಪಾದಗಳ ಬಲಬದಿಯಲ್ಲಿ ಧರಣೇಂದ್ರ ಯಕ್ಷ ಮತ್ತು ಎಡಬದಿಯಲ್ಲಿ ಪದ್ಮಾವತಿ ಯಕ್ಷಿ ಇದ್ದು, ಚತುರ್ಭುಜರಾದ ಇವರ ಮುಂದಿನ ಬಲಗೈ ಅಭಯ ಮುದ್ರೆಯಲ್ಲಿದ್ದು, ಎಡಗೈಯಲ್ಲಿ ಪಾಶವನ್ನು ಹಿಡಿದು ಕೊಂಡಿದ್ದಾರೆ. ಕಿರೀಟಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ತೋಳ್ಬಂಧಿ, ಕೈಗಡಗ, ಬೆರಳುಂಗುರ, ಕಟಿವಸ್ತ್ರ, ಕಾಲ್ಗಡಗ ಮೊದಲಾದ ವಸ್ತ್ರಾಭರಣ ಗಳನ್ನು ಧರಿಸಿಕೊಂಡು ಸುಖಾಸನದಲ್ಲಿ ಆಸೀನರಾಗಿದ್ದಾರೆ. ಒಂದೇ ಶಿಲೆಯಲ್ಲಿ ತೀರ್ಥಂಕರನ ಧ್ಯಾನ ಮುದ್ರೆಯ ಮುಖಭಾವ, ಶರೀರದ ಉಬ್ಬು ತಗ್ಗುಗಳು, ಸರ್ಪದ ವಿನಯತೆ, ಯಕ್ಷ-ಯಕ್ಷಿಯರ ಆಯುಧ ಮತ್ತು ವಸ್ತ್ರಾಭರಣ ಗಳನ್ನು ನೈಜವಾಗಿ ತೋರಿಸಲು ಅಂದಿನ ಶಿಲ್ಪಿಯ ಪ್ರಯತ್ನ ಯಶಸ್ವಿಯಾಗಿದೆ.

ಪಾರ್ಶ್ವನಾಥನ ಪಾದಪೀಠದ ಮೇಲೆ ಕ್ರಿ.ಶ.೧೧-೧೨ ನೆಯ ಶತಮಾನದ ಕನ್ನಡಲಿಪಿ ಮತ್ತು ಭಾಷೆಯಲ್ಲಿರುವ ಏಳು ಸಾಲುಗಳ ಶಾಸನವಿದೆ. ಅಕ್ಷರಗಳು ಸ್ಪಷ್ಟವಾಗಿವೆ. ಶಾಸನದಪಾಠ, ಸಾರಾಂಶ ಮತ್ತು ಮಹತ್ವವನ್ನು ಈ ಕೆಳಗಿನಂತೆ ಗಮನಿಸಬಹುದು.[೨]

**ಶಾಸನದ ಪಾಠ:**

೧. @ ಸ್ವಸ್ತಿಯುಮನಿಯುಮ ಶಶಾವಶ್ಯಕಕ್ಷಯಾ ಸಂಪಂನರುಮ

೨. ಪ್ಪ ಶ್ರೀ ಮೂಲಸಂಘದ ಶ್ರೀ ಮನ್ಮಹಾಮಣ್ಡಳಾ ಚಾ

೩. ರ್ಯ್ಯ ಕನಕಚಂದ್ರ ಸೈನ್ಧಾನ್ತದೇವರಗ್ರಶಿಷ್ಯರ್ತಿರಾ [ತ್ರ]

೪. ದೇವರ ಗುಡ್ಡುಗಳು ಬೆಲ್ಲದ ಮಸಣುಸೆಟ್ಟಿಯ ಮ

೫. ಗನಾದಿ ಸೆಟ್ಟಿಯು ಬೋಗಿಸೆಟ್ಟಿಯರುಂಮುಖ್ಯವಾ

೬. ಗಿ ಸಮಸ್ತ ನಗರಂಗಳ್ನಯೂರ್ಬರುಂ ಮಿ ಧರ್ಮ

೭. ಮಂ ಪ್ರತಿಪಾಳಿಸುವರು ‖ @ ಗುಣವೇ ಗಣಂ ‖

**ಶಾಸನದ ಸಾರಾಂಶ** : ಶ್ರೀಮೂಲ ಸಂಘದ ಶ್ರೀಮನ್ಮಹಾಮಂಡಳ ಆಚಾರ್ಯರಾದ ಕನಕಚಂದ್ರ ಸೈದ್ಧಾಂತ ದೇವರ ಅಗ್ರಶಿಷ್ಯರಾತ್ರದೇವರ ಗುಡ್ಡುಗಳು ಆದ ಬೆಲ್ಲದ ಮಸಣು ಸೆಟ್ಟಿಯ ಮಗನಾದ ಆದಿಸೆಟ್ಟಿ ಮತ್ತು ಬೋಗಿ ಸೆಟ್ಟಿಯರು ಹಾಗೂ ಸಮಸ್ತ ನಗರಂಗಳು, ಐಯ್ನೂರ್ವರು ಈ ಧರ್ಮವನ್ನು ಪ್ರತಿಪಾಳಿಸುವರು ಎಂದು ಹೇಳಲಾಗಿದೆ.

**ಶಾಸನದ ಮಹತ್ವ** : ಈ ಶಾಸನದಲ್ಲಿ ಪಾರ್ಶ್ವನಾಥ ದೇವರ ಹೆಸರಿಲ್ಲ. ಈ ದೇವರ ವಿಗ್ರಹವನ್ನು ನಿರ್ಮಿಸಿದ ಬಗ್ಗೆಯಾಗಲಿ ಅಥವಾ ಅದರ ಪ್ರತಿಷ್ಠಾಪನೆಯ ಕುರಿತು ಉಲ್ಲೇಖವಿಲ್ಲ. ಆದರೆ ಮಹಾಮಂಡಳಾಚಾರ್ಯರಾದ

* ಸಹಾಯಕ ಇತಿಹಾಸ ಪ್ರಾಧ್ಯಾಪಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು, ಕುಂದಗೋಳ ಜಿಲ್ಲೆ, ಧಾರವಾಡ.



ಪಾರ್ಶ್ವನಾಥ ತೀರ್ಥಂಕರ

ಕನಕಚಂದ್ರಸ್ಯೆದ್ಧಾಂತದೇವರು ಯಮನಿಯಮ ಶಶಾವಶ್ಯಕಕ್ಷ ಯಾಸಂಪನ್ನರು ಎಂದು ಹೇಳಲಾಗಿದೆ. ಕೊನೆಯಲ್ಲಿ ಗುಣವೇ



ತೀರ್ಥಂಕರ ಪಾದಪೀಠ ಶಾಸನ

ಗಣಂ ಎಂದು ಬರೆಯಲಾಗಿದೆ. ಆದ್ದರಿಂದ ಈ ವಿಗ್ರಹವನ್ನು ಬಹುಶಃ ಇವರು ಪ್ರತಿಷ್ಠಾಪಿಸಿ ಅದರ ಪೂಜೆ ಪುನಸ್ಕಾರದ ಜವಾಬ್ದಾರಿಯನ್ನು ಇವರು ಹೊತ್ತಿರಬಹುದು.

ಸಮ್ಮಸಗಿಯಲ್ಲಿ ಕ್ರಿ.ಶ. ೧೧-೧೨ ನೆಯ ಶತಮಾನದಲ್ಲಿ ಪಾರ್ಶ್ವನಾಥತೀರ್ಥಂಕರನ ಬಸದಿ ಅಸ್ತಿತ್ವದಲ್ಲಿತ್ತೆಂಬುದು ಈ ಶಾಸನಶಿಲ್ಪದಿಂದ ಸ್ಪಷ್ಟವಾಗುತ್ತದೆ. ಹಾನಗಲ್ಲ ಪರಿಸರದಲ್ಲಿದ್ದ ಮೂಲಸಂಘ, ಮುನಿ ಪರಂಪರೆಯ ಮೇಲೆ ಈ ಶಾಸನ ಹೊಸ ಬೆಳಕನ್ನು ಚೆಲ್ಲುತ್ತದೆ. ಶಾಸನೋಕ್ತ ಮೂಲಸಂಘದ ಶ್ರೀ ಮನ್ಮಹಾಮಂಡಳಾಚಾರ್ಯ ಕನಕಚಂದ್ರಸೈನ್ಧಾಂತದೇವರು ಮತ್ತು ರಾತ್ರದೇವರ ಗುಡ್ಡುಗಳು ಈ ಪ್ರದೇಶದ ಪರಿಸರದಲ್ಲಿ ಇದೇ ಪ್ರಥಮವಾಗಿ ಪರಿಚಯವಾಗಿದ್ದಾರೆ.[೩] 'ಬೆಲ್ಲದ ಮಸಣು' ಎಂಬ ಹೆಸರು ಗಮನಾರ್ಹವಾಗಿದೆ. ಹೀಗೆ ಕೆಲವು ಅಪರೂಪದ ವಿವರಗಳನ್ನೊದಗಿಸುವ ಈ ಶಾಸನ ಜೈನ ಧರ್ಮದ ಪ್ರಾದೇಶಿಕ ಅಧ್ಯಯನದ ದೃಷ್ಟಿಯಿಂದ ತುಂಬಾ ಮಹತ್ವದ್ದೆಂದು ಮನದಟ್ಟಾಗುತ್ತದೆ. ಪಾರ್ಶ್ವನಾಥನ ಹಣೆಯ ಮೇಲೆ ಗಂಧದ ತಿಲಕವು ಇನ್ನು ಇರುವುದು ವಿಶೇಷವಾಗಿದೆ.

(ಈ ಲೇಖನವನ್ನು ಸಿದ್ಧಪಡಿಸಲು ನೆರವಾದ ನನ್ನ ವಿದ್ಯಾಗುರುಗಳಾದ ಡಾ॥ ರು.ಮ. ಷಡಕ್ಷರಯ್ಯ, ಪ್ರಭಾರ ನಿರ್ದೇಶಕರು ಕನ್ನಡ ಸಂಶೋಧನಾ ಸಂಸ್ಥೆ, ಕ.ವಿ.ವಿ., ಧಾರವಾಡ ಇವರಿಗೆ ನನ್ನ ಕೃತಜ್ಞತೆಗಳು.)

## ಆಧಾರಸೂಚಿ

೧. **ಪ್ರಜಾವಾಣಿ** ದಿನಪತ್ರಿಕೆ ೨೦೦೯ ಸಪ್ಟಂಬರ ೧೩ ಭಾನುವಾರ.

೨. ಕಪ್ಪು ಷಾಯಿಂದ ತೆಗೆದ ಪಡಿಯಚ್ಚಿನಿಂದ ಓದಲಾಗಿದೆ.

೩. ಹಂಪ ನಾಗರಾಜಯ್ಯ, **ಯಾಪನೀಯ ಸಂಘ,** (೧೯೯೯) ಪುಟ-೩೨-೩೮.

ಮಧುಗಣಪತಿರಾವ್ ಮಡೆನೂರು*

# ಕೋಳೂರು ಹಾಗು ಆಣಂದೂರಿನ ಅಪ್ರಕಟಿತ ಶಾಸನಗಳು

ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕೋಳೂರು ಹಾಗು ಆಣಂದೂರು ಶಿವ ದೇವಾಲಯಗಳನ್ನು ೨೦೦೮ ರಲ್ಲಿ ಜೀರ್ಣೋದ್ಧಾರ ಮಾಡುವ ಸಮಯದಲ್ಲಿ ಮಹಿಷಮರ್ದಿನಿಯ ಪಾದಪೀಠಗಳ ಮೇಲೆ ಶಾಸನ ಗಳಿರುವುದು ಕಂಡುಬಂತು. ಈ ಎರಡು ವಿಗ್ರಹಗಳನ್ನು ಒಬ್ಬನೇ ಆದ ರೂವಾರಿ ಕಲಿಸೆಯ ಸೋಮಾಚಾರಿ ನಿರ್ಮಿಸಿರುವನು. ಎರಡೂ ಶಿಲ್ಪಗಳೂ ಗಾತ್ರ ಮತ್ತು ರಚನೆಯಲ್ಲಿ ಏಕರೂಪ ಸಾಮ್ಯತೆ ಪಡೆದಿವೆ; ಹಾಗು ಇವುಗಳ ರಚನೆಯ ಕಾಲವೂ ಒಂದೇ ಆಗಿರುವುದು ವಿಶೇಷ. ಸಾಮಾನ್ಯವಾಗಿ ಜೈನ ವಿಗ್ರಹಗಳ ಪಾದ ಪೀಠದಲ್ಲಿ ಚುಟುಕಾದ ಶಾಸನಗಳಿರುವುದು ಸರ್ವಸಾಮಾನ್ಯ. ಆದರೆ ಕೋಳೂರು ಮತ್ತು ಆಣಂದೂರುಗಳಲ್ಲಿನ ವೈದಿಕ ಮಹಿಷ ಮರ್ಧಿನಿಗಳ ಪಾದ ಪೀಠದ ಮೇಲೆ ಶಾಸನವಿರುವುದೇ ಅಪರೂಪ ಹಾಗು ವಿಶೇಷದ ಸಂಗತಿ.

ಈ ವಿಗ್ರಹಗಳು ೨೪ ಇಂಚು ಎತ್ತರವಾಗಿದ್ದು ೧೬ ಇಂಚು ಅಗಲವಿದೆ. ಕೋಣನ ಮೇಲಿನ ಮಹಿಷನನ್ನು ಅಂಗಾತ ಎಡಕ್ಕೆ ಕೆಡವಿ ಮುಂದಿನ ಎಡಗೈಯಿಂದ ತಲೆಯನ್ನು ಒತ್ತಿ ಹಿಡಿದು, ಮುಂದಿನ ಬಲಗೈಯಲ್ಲಿನ ತ್ರಿಶೂಲದಿಂದ ಉದರಕ್ಕೆ ಚುಚ್ಚಿದ್ದು ಕರುಳು ಹೊರಬಂದಿದೆ. ಹಿಂಭಾಗದ ಬಲಗೈಯಲ್ಲಿ ಚಕ್ರವನ್ನೂ, ಹಿಂಭಾಗದ ಎಡಗೈಯಲ್ಲಿ ಶಂಖವನ್ನೂ ದೇವಿಯು ಧರಿಸಿರುವಳು. ಆಣಂದೂರು ಶಾಸನದಲ್ಲಿ ಈ ದೇವಿಯನ್ನು ಭಗವತಿಯೆಂದು ಕರೆಯಲಾಗಿದೆ.

ಕೋಳೂರು ಹಾಗು ಮಜರೆ ಆಣಂದೂರು ಗ್ರಾಮಗಳು ಬಡಗಿನಾಡ ಮೂವತ್ತರ ಆಡಳಿತ ವ್ಯಾಪ್ತಿಯಲ್ಲಿ ಬರುತ್ತವೆ.[೧] ಬಡಗಿನಾಡಿನ ಕೇಂದ್ರವಾದ ಬೇಸೂರು ಕೋಳೂರಿನಿಂದ ಉತ್ತರಕ್ಕೆ ಎರಡು ಕಿ.ಮೀ. ದೂರದಲ್ಲಿದ್ದು, ಬಡಗಿನಾಡ ಮೂವತ್ತರ ಪೆರ್ಗಡೆ ಕನ್ನಯ ಕ್ರಿ.ಶ. ೧೧೯೦ ರಲ್ಲಿ ಕನ್ನೇಶ್ವರ ದೇವರನ್ನೂ, ಪರಿವಾರ ದೇವತೆಗಳನ್ನೂ, ಪ್ರತಿಷ್ಠಾಪಿಸಿ, ಕಳಸಾರೋಹಣ ಗೈದು, ಕನ್ನೆಗೆರೆಯನ್ನು ನಿರ್ಮಿಸಿ, ದೇವರಾಸಿಜೀಯರ ಕಾಲಂ ಕರ್ಚಿ, ದೇವರ ಅಂಗ ರಂಗ ಭೋಗಕ್ಕೆ ಬೆಸವೂರು, ಕೋಳೂರಲಿ ದತ್ತಿಗಳನ್ನು ನೀಡುವನು.[೨] ಮಹಾಮಂಡಲೇಶ್ವರ ಸಾಂತರ ತೈಲಪ, ಆತನ ಪತ್ನಿ ಖಾದೇವಿ, ಕುಮಾರ ಕಾವದೇವನಿಗೂ ಮತ್ತು ಪೆರ್ಗಡತಿ ಕನಕಬ್ಬೆ ಮಗ ಮೆಯ್ದುಯ್ಯ ಮೊದಲಾಗಿ ನಾಲ್ವರಿಗೆ ತ್ರಿಭೋಗಾಭ್ಯಾಂತರ ಸಿದ್ಧಿಯಾಗಲೆಂದು ಬೆಸವುರದ ಹಳ್ಳಿ, ಕೋಳೂರನ್ನೂ ದಾನ ನೀಡುವನು. ಮಜರೆ ಆಣಂದೂರು ಗ್ರಾಮವು ಕೋಳೂರಿನಿಂದ ಒಂದೂವರೆ ಕಿ.ಮೀ. ದೂರದಲ್ಲಿ ದಕ್ಷಿಣಕ್ಕಿದ್ದು, ಇಲ್ಲಿಂಯೂ ಒಂದು ಶಿವಾಲಯವಿರುತ್ತೆ. ಈ ಮೂರೂ ಗ್ರಾಮಗಳು ಒಂದೇ ಸರಳ ರೇಖೆಯಲ್ಲಿದ್ದು ಶರಾವತಿ ನದಿಯ ಪೂರ್ವದ ಬಲದಂಡೆಯಲ್ಲಿರುತ್ತವೆ. ಮಡೆನೂರು ಮತ್ತು ನಂತರದ ಲಿಂಗನಮಕ್ಕಿಯ ಕಟ್ಟೆಗೂ ಮೊದಲು ಅಂದರೆ ೧೯೪೦ ರ ದಶಕಕ್ಕೂ ಮೊದಲು ಇಕ್ಕೇರಿ, ಆವಿನಹಳ್ಳಿ ಹಾಗು ಪೂರ್ವ ದಿಕ್ಕಿನ ಹೊಸಗುಂದದಿಂದ ಬಂದು ಹಸಿರುಮಕ್ಕಿಯಲ್ಲಿ ಶರಾವತಿಯನ್ನು ದಾಟಿ, ಕೊಲ್ಲೂರು ಘಾಟಿಯನ್ನಿಳಿದ ಹೆದ್ದಾರಿಯೂ ಇಲ್ಲೇ ಹಾದು ಹೋಗುತ್ತಿತ್ತು ಮತ್ತು ಸೇತುವಿಗೆ ಸಂಪರ್ಕ ಕಲ್ಪಿಸಿತ್ತು.

ತಮಿಳುನಾಡಿನ ಶಿವ ಭಕ್ತಾಗ್ರೇಸರೆಯಾದ ಕೋಳೂರು ಕೊಡಗೂಸು ಮಹಿಮೆಯು ಈ ಮಲೆನಾಡು ಪ್ರಾಂತ್ಯಕ್ಕೂ ಹಬ್ಬಿರುವುದನ್ನು ಇಲ್ಲಿ ಕೋಳೂರು ಕೊಡಗೂಸು ದೇವಾಲಯ ನಿರ್ಮಿಸಿದ್ದುದರಿಂದ ಈ ಗ್ರಾಮಕ್ಕೆ ಕೋಳೂರು ಎಂದು ನಾಮಾಂಕಿತವಾಗಿರುವುದಾಗಿ ಜನರ ಅಭಿಪ್ರಾಯವಿದೆ. ಮಣ್ಣಿನ ಗೋಡೆಯಿಂದ ಕಟ್ಟಿದ್ದ ದೇವಾಲಯ ಸಂಪೂರ್ಣವಾಗಿ ಬಿದ್ದುಹೋಗಿ ಅರೆಗೋಡೆ ಮಾತ್ರ ನಿಂತಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು ಮುಂದಿನ ಅಂತರಾಳದ ಬಲಗಡೆ ವಿನಾಯಕನೂ, ಮಧ್ಯದಲ್ಲಿ ನಂದಿಯೂ, ಮತ್ತು ಎಡ ಭಾಗದಲ್ಲಿ ಮಹಿಷಾಸುರಮರ್ದಿನಿಯ ವಿಗ್ರಹವೂ ಇವೆ. ಹಿಂದೆ ಹೇಳಿದಂತೆ ಭಗವತಿಯು ನಾಲ್ಕು ತೋಳುಗಳನ್ನು ಹೊಂದಿದ್ದು ಬಲಗೈಯ ತ್ರಿಶೂಲದಿಂದ ಮಹಿಷಾಸುರನ ಉದರ ಬಗೆದಿರುವುದನ್ನು ಕಾಣುತ್ತೇವೆ. ದೇವಿಯ ಕಾಲಬಳಿ ಮಹಿಷನನ್ನೂ ಕೆತ್ತಲಾಗಿದೆ. ಭಗವತಿಯ ಪಾದದ ಪೀಠದಲ್ಲಿ ನಾಲ್ಕು ಸಾಲಿನ ಶಾಸನವಿದ್ದು ವಿಗ್ರಹ ಪ್ರತಿಷ್ಠಾಪನೆಯನ್ನು

* ಶ್ರೀ ಮಡೆನೂರು ನಿಲಯ, ೬೦ ಅಡಿ ಮುಖ್ಯರಸ್ತೆ, ೪/೩ನೇ ತಿರುವು, ಶರಾವತಿ ನಗರ, ಶಿವಮೊಗ್ಗ.

ಉಲ್ಲೇಖಿಸುತ್ತದೆ. ಈ ಶಾಸನವು ಕಲ್ಯಾಣ ಚಾಲುಕ್ಯರ, ಸುಮಾರು ಹನ್ನೆರಡನೇ ಶತಮಾನದ ಪೂರ್ವ ಕಾಲಕ್ಕೆ ಸಂಬಂಧಿಸಿದುದಾಗಿ ಕಂಡುಬರುತ್ತದೆ.

**ಕೋಳೂರಿನ ಶಾಸನ**

೧ ಪ್ರತಿಮ್ಮೆಯಂ ಮಡಿದ ಸ[ತಿ]ನ ೩

೨ ಜಗೆಉಡಿತಿ ಸಹಿತ ಮಾಡಿದ ಪ್ರ[ತಿ]

೩ ಮೆ ಕಲಿಸೆಯ ಸೋಮಾಚಾರಿ

೪ ಮಾಡಿದ ಮಂಗಳ ಮಹಾ ಶ್ರೀ.

ಶಾಸನದ ಮೊದಲ ಸಾಲು, ಇದು ಮೂರನೇ ಪ್ರತಿಮೆಯಾಗಿರುವುದಾಗಿ ತಿಳಿಸುತ್ತದೆ. ಪ್ರತಿಮೆಯ ಕೂಲು ನಿಲ್ಲುವ ಜಗತಿ ಕಲ್ಲನ್ನೂ [ತಳಚೌಕಟ್ಟು] ಸಹ ಮಾಡಿದುದಾಗಿಯೂ, ರೂವಾರಿ ಕಲಸೆಯ ಸೋಮಾಚಾರಿ ಪ್ರತಿಮೆಯನ್ನು ಕಡೆದುದಾಗಿಯೂ ಹೇಳುತ್ತದೆ. ಕೊನೆಯಲ್ಲಿ ಮಂಗಳ ಮಹಾ ಶ್ರೀ ಎಂದು ಮುಕ್ತಾಯವಾಗಿದೆ. ಹೆಚ್ಚಿನ ವಿವರಗಳು ದೊರೆಯುವುದಿಲ್ಲ. ಇಲ್ಲಿಂದ ನಾಡಮಡುವು ೧೬ ಕಿ.ಮೀ. ದೂರವೂ, ಆವಿನಹಳ್ಳಿಯ ೧೦ ಕಿ.ಮೀ. ದೂರವೂ, ನೇರವಾಗಿ ಪೂರ್ವಕ್ಕೆ ಹೊಸಗುಂದವು ೨೦ ಕಿ.ಮೀ. ದೂರವೂ. ಪಶ್ಚಿಮಕ್ಕೆ ೨೫ ಕಿ.ಮೀ. ದೂರದಲ್ಲಿ ಕೊಡಚಾದ್ರಿ ಪರ್ವತವೂ ಇದ್ದು ಮಧ್ಯೆ ಕೋಳೂರು ಇದೆ.

ಈ ಕೋಳೂರು ಕೊಡಗೂಸು ದೇವಾಲಯದ ಬಳಿಯ ಬಸವಣ ಕಲ್ಲು ಶಾಸನದ್ವಯ[3] ಕೋಳೂರನ್ನು ಬನವಾಸಿಯ ಮಧುಕೇಶ್ವರ ದೇವರಿಗೆ ದತ್ತಿಬಿಡಲಾಗಿದೆ. ಬನವಸೆಯನ್ನು ಶ್ರೀಮತು ಜಯಂತಿ, ವಿಜಯಂತಿ, ಕನಕಾಪುರವೆಂದು ಬಣ್ಣಿಸಲಾಗಿದೆ. ಇಲ್ಲಿ ಚಾತುರ್ಯಗೆಯ್ಯಲು ಮಧುಕನಾಥ ದೇವರಿಗೆ ರುಧಿರೋದ್ಗಾರಿ ಸಂವತ್ಸರದಲ್ಲಿ ಮಹಾಮಂಡಳೇಶ್ವರ ಗಡಿಯಂಕ ಸೂರ್ಯಮಂಡಲ ಮಂನೆಯ ತಂಮರಸನು ಗೋಪೊ ಬಡಗಿನಾಡ ಸಮಸ್ತ ಪ್ರಭುಗಳು ಮುಂತಾಗಿ ಸರ್ವಾಧಿಕಾರಿ ಗೋಪಂಣನವರು ಸಹಿತ ಮಧುಕ್ಯ ದೇವರಿಗೆ ಧಾರಾಪೂರ್ವಕವಾಗಿ ಕೊಟ್ಟರು ಎಂದು ಹೇಳುತ್ತದೆ. ಈ ಶಾಸನವು ಸುಮಾರು ಕ್ರಿ.ಶ. ೧೩ನೇ ಶತಮಾನದ ಹೊಸಗುಂದದ ತಂಮರಸನದ್ದಾಗಿರಲು ಸಾಧ್ಯವಿದೆ.

ಈ ಕೊಡಗೂಸು ದೇವಾಲಯದಿಂದ ಸ್ವಲ್ಪ ದೂರ ದಕ್ಷಿಣದಲ್ಲಿ ಒಂದು ಜಿನಶಾಸನವಿದ್ದು ಆದಿನಾಥನ ಜಿನದೇವಾಲಯವಿರುವುದನ್ನು ಉಲ್ಲೇಖಿಸುತ್ತದೆ.[4] ಈ ಶಾಸನವು ಆದಿನಾಥದೇವ ಪಾದಾರಾಧಕ ಸಮ್ಯಕ್ತ ರತ್ನಾಕರ ಜಿನ ಗಂಧೋದಕ ಪವಿತ್ರೀ ಕ್ರಿತೋತ್ತಮಾಂಗಯಪ್ಪ ರಾಜಿಯಬ್ಬೆ ಹೆಗ್ಗಡತಿ ೪೫ನೆಯ ವಿರೋಧಿಕೃತ ಸಂವತ್ಸರದ ಮಾಘ ಶುದ್ಧ ಪಂಚಮಿ ಬ್ರಿಹವಾರದಂದು ಕೋಳೂರಿನಲ್ಲಿ ಸುರಲೋಕ ಪ್ರಾಪ್ತಳಾಗುವಳು. ಇಲ್ಲಿ ಸರಸ್ವತಿ ಗಣಪುತ್ರ ಸುಮಂತ ಪಂಡಿತರಿದ್ದು ಅವರ ಶಿಷ್ಯ ರೂವಾರಿ ಸೋಮೋಜನ ಪುತ್ರ ದುರ್ಗೆಯನು ಕಲ್ಲನ್ನು ಕೆತ್ತಿರುತ್ತಾನೆ. ಕೋಳೂರು ಶೈವಪಂಥ ಹಾಗೂ ಜೈನಪಂಥದ ನೆಲೆಯಾಗಿದ್ದುದನ್ನು ತಿಳಿಸುತ್ತದೆ. ಅಂದು ಶೈವ ಹಾಗು ಜೈನ ಧಾರ್ಮಿಕ ಪಟ್ಟಣವಾಗಿ ಮೆರೆದು, ಇಂದು ಕಾಡು ಕೂಡಿ ಒಂದು ಮನೆಯ ಊರಾಗಿದೆ. ರೂವಾರಿ ದುರ್ಗೆಯನ ತಂದೆ ಸೋಮೋಜನು ಹಾಗು ದುರ್ಗೆಯ ವಿಗ್ರಹ ಕಡೆದ ಶಿಲ್ಪಿ ಸೋಮಾಚಾರಿಯು ಒಬ್ಬನೇ ಆಗಿರಲು ಸಾಧ್ಯವಿದೆ. ೧೨ನೇ ಶತಮಾನದ ಉತ್ತರಾರ್ಧ ಕಾಲವಿರಬಹುದಾಗಿದೆ.

**ಆಣಂದೂರು**

ಆಣಂದೂರು, ಇಂದು ಒಂದು ಮನೆಯ ಗ್ರಾಮವಾಗಿದ್ದು ಒಂದು ಕಾಲದಲ್ಲಿ ಪಟ್ಟಣವಾಗಿತ್ತು. ಇಲ್ಲಿ ಇಂದು ಒಂದು ಶಿವದೇವಾಲಯ, ಏಳು ಮಕ್ಕಳ ಚೌಡಮ್ಮ, ಕಾಲಭೈರವ ಹಾಗು ಮಹಾಸತಿ ದೇವಾಲಯಗಳಿವೆ. ಶಿವದೇವಾಲಯುವನ್ನು ೨೦೦೮ರಲ್ಲಿ ಪರಿಪೂರ್ಣ ಜೀರ್ಣೋದ್ಧಾರ ಕೈಗೊಂಡಿದ್ದು, ಇದು ಮೂರನೆಯ ಹಂತವಾಗಿದೆ. ಜೀರ್ಣೋದ್ಧಾರಕ್ಕೂ ಮೊದಲು ೨೦ ಅಡಿ ಅಗಲ, ೪೮ ಅಡಿ ಉದ್ದದ ೫ ಅಡಿ ಎತ್ತರದ ಜಮ್ಮಿಟ್ಟಿಗೆಯ ಅಧಿಷ್ಠಾನದ ಮೇಲೆ ಹೆಂಚಿನ ಮಾಡಿನ, ಆ ಮೊದಲು ಹುಲ್ಲಿನ ಹೊದಿಕೆಯ ದೇವಾಲಯವಿತ್ತು. ಒಟ್ಟು ಆರು ಅಂಕಣದ ಕಟ್ಟಡದಲ್ಲಿ ಪೂರ್ವ, ಪಶ್ಚಿಮದ ಒಂದೊಂದು ಅಂಕಣವನ್ನು ಹೊರತುಪಡಿಸಿ ಮಧ್ಯದ ನಾಲ್ಕು ಅಂಕಣಗಳನ್ನು ವಿಶಾಲವಾದ ಕೊಠಡಿಯಾಗಿ ನಿರ್ಮಿಸಲಾಗಿತ್ತು. ಪಶ್ಚಿಮ ಭಾಗದ ಒಂದು ಅಂಕಣವನ್ನು ಒಂದು ಅಡಿ ಎತ್ತರಿಸಿ ಅಲ್ಲಿ ಶಿವಲಿಂಗಪ್ಪ ಪೂರ್ವಾಭಿಮುಖವಾಗಿ ಪ್ರತಿಷ್ಠಾಪಿಸಲಾಗಿತ್ತು. ಇದನ್ನು ಗರ್ಭಗೃಹವೆಂದು ಕರೆಯಬಹುದು. ಇದರ ಮುಂದಿನ ಎರಡು ಅಂಕಣವೇ ಅಂತರಾಳವಾಗಿದ್ದು, ಶಿವನ ಎದುರಾಗಿ ನಂದಿಯೂ, ಬಲಭಾಗದಲ್ಲಿ ಒಂದು ಮಹಿಷಮರ್ದಿನಿ ವಿಗ್ರಹವೂ, ಎಡಭಾಗದಲ್ಲಿ ಮತ್ತೊಂದು ಮಹಿಷಮರ್ದಿನಿಯ ಶಿಲ್ಪ ಹಾಗು ಇದರ ಮತ್ತೂ ಎಡಕ್ಕೆ ನಾರಾಯಣನ ಶಿಲ್ಪವೂ ಸ್ಥಾಪಿಸಲ್ಪಟ್ಟಿದ್ದವು. ಇವುಗಳಿಂದ ಪೂರ್ವದ ಅಂಕಣದಲ್ಲಿ ಒಂದು ಅಡಿ ಎತ್ತರಿಸಿ ನೆಲಮಟ್ಟದಲ್ಲಿ ಒಂದು ಶಿವಲಿಂಗವನ್ನು ಹುದುಗಿಡಲಾಗಿತ್ತು. ಇದು ಮೂಲ ಲಿಂಗವಾಗಿದ್ದು, ಇದನ್ನು ಉದ್ಭವ ಲಿಂಗವೆಂದು ಪರಿಗಣಿಸಿದೆ. ಗೋಡೆಯ ಬಳಿ ಸಪ್ತ ಮಾತೃಕೆಯರ ಶಿಲ್ಪವೂ ಇದೆ. ದೇವಾಲಯದ ಉತ್ತರಕ್ಕೆ ಸುರಗಿ ಮರದ ಬುಡದಲ್ಲಿ ಕ್ಷೇತ್ರಪಾಲಕಿ ಏಳು ಮಕ್ಕಳ ತಾಯಿ ಎಂದೇ ಕರೆಯುವ ಚೌಡಮ್ಮನಿದ್ದು, ಅಕ್ಕ ಪಕ್ಕದಲ್ಲಿ

ಎರಡು ಒಕ್ಕೈ ಮಾಸ್ತಿಯ ಶಿಲ್ಪಗಳಿವೆ. ಇದಿಷ್ಟು ಈ ದೇವಾಲಯದ ಪರಿಚಯ.

ಈ ದೇವಾಲಯದ ಎಲ್ಲಾ ವಿಗ್ರಹಗಳೂ ಭಿನ್ನವಾದ್ದರಿಂದ ಮತ್ತು ಇಡೀ ದೇವಾಲಯ ಶಿಥಿಲಾವಸ್ಥೆ ತಲುಪಿದ ಕಾರಣ ಹೊಸದಾಗಿ ಜೀರ್ಣೋದ್ಧಾರ ಕಾರ್ಯ ೨೦೦೮ರಲ್ಲಿ ಕೈಗೊಳ್ಳಲಾಯಿತು. ಆಗ ಕಂಡು ಬಂತು ದುರ್ಗಿಯ ವಿಗ್ರಹದ ಪಾದಪೀಠದ ಶಾಸನವಿರುವುದು ಕಂಡುಬಂತು. ಲೇಖನದ ಪ್ರಾರಂಭದಲ್ಲಿಯೇ ಹೇಳಿದಂತೆ ೨೪ ಇಂಚು ಎತ್ತರದ, ೧೬ ಇಂಚು ಅಗಲದ ಮಹಿಷಾಸುರ ಮರ್ದಿನಿಯು ಚತುರ್ಭುಜಗಳನ್ನು ಹೊಂದಿರುವಳು. ಮಹಿಷನ ಮೇಲಿದ್ದ ಮಹಿಷಾಸುರನನ್ನು ಕೆಳಕ್ಕೆ ಕೆಡವಿ, ಎಡದ ಮುಂದಿನ ಕೈಯಿಂದ ರಾಕ್ಷಸನ ತಲೆಯನ್ನು ಒತ್ತಿ ಹಿಡಿದು, ಮುಂದಿನ ಬಲಗೈಯ ತ್ರಿಶೂಲದಿಂದ ಅಸುರನ ಹೊಟ್ಟೆಯನ್ನು ಬಗೆದಿದ್ದು ಕರುಳು ಹೊರಬರುತ್ತಿದೆ. ಬಲದ ಹಿಂದಿನ ಕೈಯಲ್ಲಿ ಚಕ್ರವೂ, ಎಡ ಹಿಂದಿನ ಹಸ್ತದಲ್ಲಿ ಶಂಖವನ್ನೂ ದೇವಿಯು ಧರಿಸಿರುವಳು. ವಿಗ್ರಹದ ಪಾದದ ಪೀಠದಲ್ಲಿ ಐದು ಸಾಲಿನ ಶಾಸನವನ್ನು ಕೆತ್ತಲಾಗಿದೆ.

**ಆಣಂದೂರು ಶಾಸನ ಪಾಠ**

೧ ಸೋಮೆಯ ಜೀಯನ ಮಗ ಅಣಂದೂ

೨ ರ ಬಂಮೆಯಜೀಯ ಮಾಡಿಸಿದ ನರಾ

೩ ಯಣ ದೇವರ ಭಗವತಿಯ ಪ್ರತಿಷ್ಠೆ

೪ ಯಂ ಮಾಡಿಸಿದಂ ॥ ಕಲಿಸೆಯ ಸೋಮ

೫ ಚರಿಯ ೨ ಬೆಸ ॥

ಶಾಸನ ಉಲ್ಲೇಖದಂತೆ ಆಣಂದೂರಿನಲ್ಲಿ ಸೋಮೆಯಜೀಯ ಹಾಗೂ ಆತನ ಮಗ ಬಂಮೆಯಜೀಯರೆಂಬವರಿರುವುದು ಕಂಡುಬರುತ್ತದೆ. ಬಂಮೆಯ ಜೀಯನು ನಾರಾಯಣ ದೇವರ ಮತ್ತು ಭಗವತಿಯನ್ನು ಪ್ರತಿಷ್ಠಾಪಿಸುವನು ಕಲಿಸೆಯ ಸೋಮಾಚಾರಿಯ ೨ ಬೆಸ ಎಂದಿದ್ದು, ಅಂದರೆ ಆತನು ನಾರಾಯಣ ಮತ್ತು ಭಗವತಿಯರ ಎರಡೂ ವಿಗ್ರಹಗಳ ರೂವಾರಿಯಾಗಿರುವುದನ್ನು ಉಲ್ಲೇಖಿಸುತ್ತದೆ.

ಕೋಳೂರಿನ ಭಗವತಿ ಮತ್ತು ಆಣಂದೂರಿನ ಈ ವಿಗ್ರಹಗಳನ್ನು ಏಕಕಾಲದಲ್ಲಿ ಕೆತ್ತಲ್ಪಟ್ಟು, ಪ್ರತಿಷ್ಠಾಪಿಸಿದ್ದು ಇವುಗಳ ಕಾಲ ಸುಮಾರು ಹನ್ನೆರಡನೇ ಶತಮಾನದ ಪೂರ್ವಾರ್ಧವಾಗಿದೆ.

ಈ ನಾರಾಯಣ ಭಗವತಿಯರ ಭಿನ್ನವಾದ ವಿಗ್ರಹಗಳನ್ನು ಇಲ್ಲಿನ ಶಿವದೇವಾಲಯದ ಅಂತರಾಳದ ಎಡಭಾಗದಲ್ಲಿ ಬೇರೆ ಕಡೆಯಿಂದ ತಂದು ಇಡಲಾಗಿರುವುದಾಗಿ ತಿಳಿದುಬರುತ್ತೆ. ಇವುಗಳ ದೇವಾಲಯವು ಪ್ರತ್ಯೇಕವಾಗಿಯೇ ಇದ್ದಿರಬಹುದಾಗಿದ್ದು ಆ ದೇವಾಲಯ ಬಿದ್ದು ಹೋಗಿ ಪೂಜೆ ಪುನಸ್ಕಾರಾದಿಗಳಿಲ್ಲದೇ ಇದ್ದುದರಿಂದ ಶಿವದೇವಾಲಯದಲ್ಲಿ ತಂದಿರಿಸಿರುವುದಾಗಿ ಕಂಡುಬರುವುದು. ಆದರೆ ಇಂದು ಆ ದೇವಾಲಯವಿದ್ದ ಸ್ಥಳವನ್ನು ಪತ್ತೆಮಾಡಲು ಸಾಧ್ಯವಿರುವುದಿಲ್ಲ.

ಆಣಂದೂರಿನ ಶಿವದೇವಾಲಯುವು ಮೂರು ಹಂತದಲ್ಲಿ ಜೀರ್ಣೋದ್ಧಾರವಾಗಿರುವುದು ಕಂಡುಬರುತ್ತದೆ. ದೇವಾಲಯದ ಪೂರ್ವದ ಕಡೆ ಭಿನ್ನವಾದ ಲಿಂಗವನ್ನು ಪಾಣಿಪೀಠ ಸಮೇತ ನೆಲಮಟ್ಟದಲ್ಲಿ ಹುಗಿದಿದ್ದು, ಇದು ಉದ್ಭವ ಲಿಂಗವಾಗಿರಲು ಸಾಧ್ಯವಿದೆ. ದೇವಾಲಯದ ಪಕ್ಕದಲ್ಲಿ ಕಲ್ಯಾಣಿ ಚಾಲುಕ್ಯರ ಒಂದು ಶಾಸನವಿದ್ದು ಮೇಲಿನ ಹದಿನೈದು ಪಂಕ್ತಿಗಳು ಕಾಣದೇ ಇರುವುದರಿಂದ ಪೂರ್ಣ ವಿವರ ದೊರೆಯುತ್ತಿಲ್ಲ. ಈ ಶಾಸನದಂತೆ ತಮ್ಮ ಬಾಸಯಣಂ.. ..ಗೆಯ್ಯುತ್ತಿರೆ ಕೂಗವಾಡಿ[ಕೊಳೂರು]ಯೊಳ ಮಾಣಂದೂರೊಳ್ ಸರ್ವಾಭ್ಯಾಂತರ ಸಿದ್ಧಿಗಾಗಿ ದೇವರಿಗೆ ಕೊಟ್ಟು ಕಲ್ಲನಿರಿಸಿದೆ[೫] ಎಂದಿದೆ. ಕಾಲ ಸುಮಾರಾಗಿ ಹನ್ನೆರಡನೇ ಶತಮಾನದ ಪೂರ್ವಾರ್ಧವೆನ್ನಬಹುದು. ಆಣಂದೂರಿನಲ್ಲಿದ್ದ ಶೆಟ್ಟಿಸಾತೆಯಮ್ಮನ ತಮ್ಮ ಸೆಟ್ಟಿ ಭೂಬಳ ಚಕ್ರವರ್ತಿ ಈ ದೇವಾಲಯದ ನಿರ್ಮಾಣ ವೆಚ್ಚವನ್ನು ಭರಿಸಿರುತ್ತಾನೆ. ಹನ್ನೊಂದನೇ ಶತಮಾನದ ಉತ್ತರಾರ್ಧ ಇಲ್ಲವೇ ಹನ್ನೆರಡನೇ ಶತಮಾನದ ಪೂರ್ವಾರ್ಧದಲ್ಲಿ ಸ್ಥಾಪಿಸಲ್ಪಟ್ಟಿದ್ದು, ಅಂದು ಆಣಂದೂರು ಪಟ್ಟಣವಾಗಿತ್ತು ಎಂಬ ಐತಿಹ್ಯವಿದೆ. ಕೆಲ ಕಾಲಾನಂತರ ಊರು ನಶಿಸಿಹೋಗಿ ಕಾಡು ಬೆಳೆಯಿತು.



ಕೋಳೂರು, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ



ಆಣಂದೂರು, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ



ಆಣಂದೂರು ಭಗವತಿ

ಪ್ರಸ್ತುತ ಊರಿಗೇ ಒಂದೇ ಮನೆಯಿದ್ದು ೧೯೪೮ ರಲ್ಲಿ ಆಣಂದೂರು ಮಂಜ ನಾಯ್ಕರು ಬಿದ್ದು ಹೋದ ದೇವಸ್ಥಾನ ವನ್ನು ಹಳೆಯ ಪಂಚಾಂಗದ ಮೇಲೆಯೆ ನಿರ್ಮಿಸಿದರು. ತದ ನಂತರವೂ ದೇವಾಲಯವು ಶಿಥಿಲಗೊಂಡ ಕಾರಣ, ಭಿನ್ನವಾಗಿದ್ದ ವಿಗ್ರಹಗಳನ್ನೂ ತೆಗೆಸಿ ಆಣಂದೂರ ಹಾಲ ಾಯಕರ ಮಕ್ಕಳು ಅಣ್ಣಪ್ಪ ಮತ್ತು ಸಹೋದರರು ೨೦೦೮ ಲ್ಲಿ ದೇವಾಲಯವನ್ನೇ ಹೊಸದಾಗಿ ನಿರ್ಮಿಸಿ ಹೊಸ ಲ್ಪಗಳನ್ನು ಕೆತ್ತಿಸಿ, ಗರ್ಭಗುಡಿಯಲ್ಲಿ ಶಿವಲಿಂಗ, ಎದುರು ಂದಿಯನ್ನೂ, ಅಂತರಾಳದಲ್ಲಿ ಗಣಪತಿ ಹಾಗು ಭಗವತಿ ಯನ್ನೂ ಪ್ರತಿಷ್ಠಾಪಿಸಿ ಕಳಸಾರೋಹಣಗೆಯ್ದರು. ಇಲ್ಲಿಗೆ ದೇವಾಲಯವು ಹೀಗೆ ಮೂರು ಹಂತದ ಜೀರ್ಣೋದ್ಧಾರ ನನ್ನು ಕಂಡಿದೆ. ಹೀಗೆ ನವೀಕರಣ ಕಾಲದಲ್ಲಿ ದುರ್ಗಿಯ ಾದ ಪೀಠದಲ್ಲಿನ ಶಾಸನ ಬೆಳಕಿಗೆ ಬರಲು ಸಾಧ್ಯವಾಯಿತು.

**ರೂವಾರಿ**

ಕೋಳೂರು ಮತ್ತು ಆಣಂದೂರು ವಿಗ್ರಹಗಳನ್ನು ಕೆತ್ತಿದವನು ರೂವಾರಿ ಕಲಿಸೆಯ ಸೋಮಾಚಾರಿ. ಕಲಿಸೆಯು ಸಾಗರ ಹಾಗು ಕೆಳದಿಯಿಂದ ಆರೆಂಟು ಕಿ.ಮೀ. ದೂರವಿದ್ದು ವೀರರಸ.[೬] ಹಾಗು ಬಾಳೆಯಮ್ಮವೆಗ್ಗಡೆ[೭]. ಮುಂತಾದ ಬಿಲ್ಲವ ಕುಲದವರ ಸ್ಥಾನಿಕ ಆಡಳಿತ ಕೇಂದ್ರವಾಗಿತ್ತು. ಇಲ್ಲಿ ಅನೇಕ ರೂವಾರಿಗಳಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿ ನೀಲಕಂಠ ದೇವಾಲಯವೂ ಇದೆ. ಕೋಳೂರಿಂದ ಸುಮಾರು ಹತ್ತು ಕಿ.ಮೀ. ದೂರವಿರುವ ಹರಕೆರೆ ಗ್ರಾಮದ ನುಜರೆ ಸೇತುವಿನಲ್ಲಿ ಕುಮಾರ ಪಂಡಿತರ ಗುಡ್ಡಿ



ಕೋಳೂರು ಭಗವತಿ

ಪೆಕ್ಕಮಸೆಟ್ಟಿಯು ಹೆಂಡತಿ ಮಲ್ಲವ್ವೆಯ ಕ್ರಿ.ಶ. ೧೨೫೯ರಲ್ಲಿ ಸಮಾಧಿ ವಿಧಿಯಾಗಿರುವ ಶಾಸನ ವನ್ನು ಕೆತ್ತಿದ ಕಲಿಸೆಯ ಸೋವೋಜ[೮] ಮತ್ತು ಸೇಣಿಗೆಯ ಶುಭಕೀರ್ತಿ ಪಂಡಿತರ ದೇವರ ಗುಡ್ಡಿ ಪೆಕ್ಕಮ ಶೆಟ್ಟಿಯ ಮಗಳು ಕಾಮವ್ವೆಯು ಕ್ರಿ.ಶ. ೧೨೪೩ರಲ್ಲಿ ಸಂನ್ಯಸನ ಸಮಾಧಿ ವಿಧಿಯಿಂದ ಸುರಲೋಕ ಪ್ರಾಪ್ತಳಾದಾಗ ಕಲ್ಲು ಕಡೆದ ರೂವಾರಿಯಾದ ಕಲಿಸೆಯ ಸೋವೋಜನೂ[೯] ಕೋಳೂರು, ಆಣಂದೂರ ಶಿಲ್ಪಿ ಸೋಮಾಚಾರಿ ಒಬ್ಬನೇ ಆಗಿರಲು ಸಾಧ್ಯವಿದೆ. ಇವರಲ್ಲದೆ ಕಲಿಸೆಯಲ್ಲಿ ರಾಮೋಜನ ಮಗ ಮಧುಕೋಜ, ವೀರೋಜ ಕೂಡ ಕಂಡುಬರುವರು. ಆಣಂದೂರು ಶಿವದೇವಾಲಯದ ರೂವಾರಿ[೧೦]. ಕೊಳಗಿಯ ಮಿಣ್ಣೋಜನ ಮಗ ಮೂಕ, ಬಡಗಿ ಅಣ್ಣೋಜ, ಹರಿಯಕೊಪ್ಪದ ದುಗ್ಗೋಜ.[೧೧], ಸಿಂಗೋಜನ ಮಗ ಬೀಮ.[೧೨], ಆವಿನ ಹಳ್ಳಿಯ ಮಹಾಯೋಧನೂ ಆದ "ವೈರಿ ಬಿರುದ ಬೇರುಂಡ" ಎಂದು ಖ್ಯಾತಿ ಪಡೆದ ಚವುಡೋಜನಮಗ ಸಾತೋಜ, ಪೊಂಬುಚದಲಿ ಹುಟ್ಟಿದ ರೂವಾರಿ ಆದಿತ್ಯಾಚಾರಿಯ ಮಗ ಪಾಂಡ್ಯಚಾರಿ, ಹೆಬ್ಬಸೆಯ ಕಲುಕುಟಿಗ ಸಿಂಗೋಜನ ಮಗ ಭೈರೋಜ, ತುಂಬೆಗಳದ ಅಬ್ಬಲೂರ ಸಂಕೋಜ, ಕಲಿಸೆಯ ಮದೋಜ[೧೩], ಇವರುಗಳು ಕೋಳೂರಿನ ಸುತ್ತಮುತ್ತ ಇದ್ದು ಆಸುಪಾಸಿನ ದೇವಾಲಯಗಳ ರೂವಾರಿಗಳಾಗಿರುವರು.

## ಆಧಾರಸೂಚಿ


೧. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೦೫, ಕೋಳೂರು.
೨. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೦೩, ಬೇಸುರು.
೩. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೦೫, ಕೋಳೂರು.
೪. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೦೬, ಕೋಳೂರು.
೫. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೭೨, ಆಣಂದೂರು.
೬. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೧, ಮರೂರು.
೭. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೫, ನಾಡಕಲಸಿ.
೮. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೬೧, ಹರಕೆರೆ ಬಸದಿ.
೯. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೧೬೨, ಹರಕೆರೆ ಬಸದಿ.
೧೦. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೭೨, ಆಣಂದೂರು.
೧೧. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೭೪, ಕಿಪಡಿ.
೧೨. ಎ.ಕ. VIII, ಸಾಗರ ತಾಲೂಕು, ಶಾ.ಸಂ. ೭೭, ಮತ್ತಿಗ.
೧೩. ಎ.ಕ. ನಗರ ತಾಲೂಕು, ಶಾ.ಸಂ. VIII, ಮತ್ತಿಗೋಡು.

ಡಾ. ಎಚ್.ಎಸ್. ಗೋಪಾಲರಾವ್*
ಸುರೇಶ್**

# ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ನೆರಳೂರು ಗ್ರಾಮದಲ್ಲಿ ದೊರೆತ ಶಾಸನಗಳು

ಚನ್ನಪಟ್ಟಣ-ಇಗ್ಗಲೂರು ರಸ್ತೆಯಲ್ಲಿರುವ ನೆರಳೂರು ಗ್ರಾಮಕ್ಕೆ ಒಂದು ಶಾಸನದ ಸುಳಿವಿನ ಬೆನ್ನುಹತ್ತಿ ಹೋದಾಗ ದೊರೆತದ್ದು ಐದು ಶಾಸನಗಳು. ಊರ ನಡುವೆ ಇರುವ ಬೋರೇದೇವರ ದೇವಸ್ಥಾನದ ನಿವೇಶನದಲ್ಲಿ ನಿಲ್ಲಿಸಿರುವ ಕಲ್ಲಿನಲ್ಲಿ ಶಾಸನವಿದೆ ಎಂಬ ಸುಳಿವು ನೀಡಿದವರು ಸ್ಥಳೀಯರಾದ ಶ್ರೀ ಸುರೇಶ್. ಸರ್ಕಾರಿ ಕಾಲೇಜಿನಲ್ಲಿ ಇತಿಹಾಸ ಬೋಧಕರೂ ಆಗಿರುವ ಅವರಿಗೆ ತಮ್ಮ ಊರಿನ ಇತಿಹಾಸವನ್ನು ತಿಳಿಯುವ ಕುತೂಹಲ ಇದ್ದುದು ಸಹಜ.

ಬೋರೇದೇವರ ದೇವಸ್ಥಾನದ ನಿವೇಶನದಲ್ಲಿ ನಿಲ್ಲಿಸಿರುವ ಚಪ್ಪಡಿಕಲ್ಲಿನ ಮೇಲಿನ ಶಾಸನವು ಲಿಪಿಸ್ವರೂಪದ ಆಧಾರದ ಮೇಲೆ ಕ್ರಿ.ಶ. ಸುಮಾರು ೧೩ನೆಯ ಶತಮಾನಕ್ಕೆ ಸೇರುತ್ತದೆ. ಶಾಸನವಿರುವ ಕಲ್ಲಿಗೆ ಸ್ವಲ್ಪ ಹಿಂದೆ ನಿಲ್ಲಿಸಿರುವ ಮೂರು ಹಂತದ ವೀರಗಲ್ಲೂ ಸಹ ಕ್ರಿ.ಶ. ಸುಮಾರು ೧೩ನೆಯ ಶತಮಾನಕ್ಕೇ ಸೇರುತ್ತದೆ. ಶಾಸನರಹಿತವಾದ ಆ ವೀರಗಲ್ಲಿನ ಮೇಲೆ ಮೂರು ಹಂತದ ಶಿಲ್ಪಗಳ ಕೆತ್ತನೆ ಇದ್ದು, ಕೆಳಗಿನ, ಅಂದರೆ ಮೊದಲ ಹಂತದಲ್ಲಿ ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಹೊರಾಡುತ್ತಿರುವ ವೀರನ ಮತ್ತು ನಡುವಿನ, ಅಂದರೆ ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಕೈಲಾಸಕ್ಕೆ ಕೊಂಡೊಯ್ಯುತ್ತಿರುವ ಮತ್ತು ಮೇಲಿನ, ಅಂದರೆ ಮೂರನೆಯ ಹಂತದಲ್ಲಿ ಮಧ್ಯದಲ್ಲಿ ಕೈಮುಗಿದು ಕುಳಿತಿರುವ ವೀರನ ಎಡಬದಿಯಲ್ಲಿ ಲಿಂಗ ಮತ್ತು ಅದನ್ನು ಅರ್ಚಿಸುತ್ತಿರುವ ಅರ್ಚಕನನ್ನೂ, ಬಲಬದಿಗೆ ವೃಷಭ ಮತ್ತು ಕಠಾರಿಯನ್ನು ಕೆತ್ತಲಾಗಿದೆ. ಎಂದರೆ ವೀರನು ಕೈಲಾಸವಾಸಿ ಆದನೆಂಬ ಸೂಚನೆಯನ್ನು ಶಿಲ್ಪ ನೀಡುತ್ತದೆ.

ಬೋರೇದೇವರ ದೇವಸ್ಥಾನದ ನಿವೇಶನದಲ್ಲಿ ನಿಲ್ಲಿಸಿರುವ ಶಾಸನವು ಹೊಯ್ಸಳ ೩ನೆಯ ನರಸಿಂಹನನ್ನು ಉಲ್ಲೇಖಿಸುವುದರಿಂದ ಅದರ ಕಾಲವನ್ನು ಕ್ರಿ.ಶ. ೧೩ನೆಯ ಶತಮಾನ ಎಂದು ನಿರ್ಧರಿಸಲಾಗಿದೆ. ಬೋರೇದೇವರ ದೇವಸ್ಥಾನದ ಬಳಿ ಶಾಸನದ ಪಡಿಯಚ್ಚು ತೆಗೆಯುತ್ತಿದ್ದ ಹೊತ್ತಿಗೆ, ಸಮೀಪದ ಹೊಲದ ಬದುವಿಗೆ ಸೇರಿಸಿ ನೆಟ್ಟಿದ್ದ ಮತ್ತೊಂದು ಶಾಸನದ ಜೊತೆಗೆ ಊರಿನ ಪ್ರವೇಶದಲ್ಲೇ ಇರುವ ವೈದ್ಯೇಶ್ವರ ದೇವಸ್ಥಾನದ ಆವರಣದ ಒಳಗೇ ಮೂರು ಶಾಸನಗಳಿರುವ ಮಾಹಿತಿ ದೊರೆಯಿತು. ಇವುಗಳ ಪಾಠಗಳನ್ನು ಕಾಲಾನುಕ್ರಮಣಿಕೆಯ ಪ್ರಕಾರ ನೀಡಲಾಗಿದೆ.

## ಒಂದನೆಯ ಶಾಸನ

ಇದು ಗ್ರಾಮದ ಹೊರಗಿರುವ ವೈದ್ಯನಾಥೇಶ್ವರ ದೇವಾಲಯದ ಮುಂದೆ ನಿಲ್ಲಿಸಿರುವ ಕಲ್ಲಿನ ಮೇಲೆ ಬರೆದ ಶಾಸನ. ಇದರಲ್ಲಿ ಹೊಯ್ಸಳ ದೊರೆ ವೀರಬಲ್ಲಾಳನ ಉಲ್ಲೇಖ ಇದೆ. ಇದು ನೆಜಿಲೂರ ವೈದ್ಯನಾಥೇಶ್ವರನಿಗೆ ನೀಡಿದ ದಾನವನ್ನು ದಾಖಲಿಸಿದೆ. ಲಿಪಿಸ್ವರೂಪದ ಕಾರಣದಿಂದ ಶಾಸನದ ಕಾಲವನ್ನು ಕ್ರಿ.ಶ. ಸುಮಾರು ೧೩ನೆಯ ಶತಮಾನದ ಆರಂಭ ಕಾಲ ಎಂದು ತಿಳಿಯಬಹುದು. ಶಿವಸ್ತುತಿಯೊಂದಿಗೆ ಅರಂಭವಾಗುವ ಶಾಸನವು ವೀರಬಲ್ಲಾಳನ ಆಳ್ವಿಕೆಯ ಜೊತೆಗೆ ಚೆಂನಪಟ್ಟಣದ ಹೆಸರನ್ನು ಉಲ್ಲೇಖಿಸಿದೆ. ಈ ಕಲ್ಲಿನ ಮೇಲೆ ದಿನವೂ ಸುರಿದ ಎಣ್ಣೆ ಹಾಗೂ ಮೇಲೆ ಹಚ್ಚಿದ ದೀಪವು ಶಾಸನದ ಬಹು ಭಾಗವನ್ನು ಹಾಳುಮಾಡಿದೆ. ಆದ್ದರಿಂದ ಒಟ್ಟು ೧೮ ಸಾಲುಗಳ ಪೈಕಿ ಮೊದಲ ೬ ಸಾಲುಗಳಲ್ಲಿನ ಕೆಲವು ಅಕ್ಷರಗಳನ್ನು ಮಾತ್ರ ಓದಲು ಸಾಧ್ಯವಾಗಿದೆ. ಶಾಸನದ ಪಾಠ ಕೆಳಕಂಡಂತಿದೆ.

### ಶಾಸನದ ಪಾಠ

೧. ಸ್ವಸ್ತಿ ನಮಶಿವಾಯ ------------- ಂಕರ ತಾಹ
೨. ಸ್ತ--------------------------ವೀರಬಳಾ
೩. ಳ ದೇವರಸರು ಪ್ರಿತ್ವಿರಾಜ್ಯವನಾಳುವಲ್ಲಿ--------
೪. ಚೆಂನಪಟ್ಟಣದ -----ದೇವರು-----ದರೂ-----
೫. --------------------------------
೬ ವಾಗಬೇಕೆಂದು ನೆಜಿಲೂರ ವೈದ್ಯನಾಥೇಶ್ವ
೭ --ವರಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ
೮. --ಲವು ---------------------------

*# ೧೪೪೪, ಸ್ವಸ್ತಿಶ್ರೀ ಸ್ಕಂದ, ಐ.ವೈ.ಡಿ. ರಸ್ತೆ, ಅರಿಸಿನಕುಂಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
** ಇತಿಹಾಸ ಉಪನ್ಯಾಸಕರು, ನೆರಳೂರು, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

೯. -----------------------------------

(ಇಲ್ಲಿಂದ ಮುಂದೆ ೧೮ನೆಯ ಸಾಲಿನವರೆಗೆ ಅಕ್ಷರಗಳು ಸ್ಪಷ್ಟವಿಲ್ಲ)

ಕ್ರಿ.ಶ. ೧೩ನೆಯ ಶತಮಾನದ ಮಧ್ಯಭಾಗದ ಹೊತ್ತಿಗೆ ಚೆನ್ನಪಟ್ಟಣ, ನೆಜಿಲೂರು ಹೊಯ್ಸಳ ಸಾಮ್ರಾಜ್ಯದ ಆಳ್ವಿಕೆಗೆ ಸೇರಿತ್ತು ಆ ಹೊತ್ತಿಗೆ ನೆಜಿಲೂರಿನ ವೈದ್ಯನಾಥೇಶ್ವರ ಪ್ರಸಿದ್ಧ ನಾಗಿದ್ದ ಎನ್ನುವ ವಿಷಯ ಈ ಶಾಸನದಿಂದ ಸ್ಪಷ್ಟವಾಗುತ್ತದೆ.

**ಎರಡನೆಯ ಶಾಸನ**

ಈ ಶಾಸನವನ್ನೂ ವೈದ್ಯನಾಥೇಶ್ವರ ದೇವಾಲಯದ ಮುಂದೆಯೇ ನೆಡಲಾಗಿದೆ. ಒಟ್ಟು ೧೩ ಸಾಲುಗಳಿರುವ ಈ ಶಾಸನದಲ್ಲಿ .... ಸಂಣ ಗಲುಡನ ಮತ್ತು ವೈದ್ಯನಾಥೇಶ್ವರನ ಹೆಸರಿದೆ. ಶಾಸನದಲ್ಲಿ ರುದಿರೋದ್ಗಾರಿ ಸಂವತ್ಸರದ ಶ್ರಾವಣ ಶುಕ್ಲ ಪಕ್ಷದ ಪಂಚಮಿಯ ಉಲ್ಲೇಖವಿದೆ. ಲಿಪಿಸ್ವರೂಪದ ದೃಷ್ಟಿಯಿಂದ ೧೩ನೆಯ ಶತಮಾನಕ್ಕೆ ಸೇರುವ ಈ ಶಾಸನದ ಕಾಲವನ್ನು ೧೨-೭-೧೨೬೩ ಎಂದು ನಿರ್ಧರಿಸಬಹುದಾಗಿದೆ. ಹೊಯ್ಸಳ ಸೋಮೇಶ್ವರನ ಆಳ್ವಿಕೆಯ ಕೊನೆಯ ದಿನಗಳಲ್ಲಿ ಎರಡು ಭಾಗವಾಗಿ ಒಡೆದಿದ್ದ ಹೊಯ್ಸಳ ಸಾಮ್ರಾಜ್ಯವು ಅವನ ಮೊಮ್ಮಗ ಮುಮ್ಮಡಿ ಬಲ್ಲಾಳನ ಕಾಲಕ್ಕೆ ಪುನಃ ಒಂದಾಗಿತ್ತು.

**ಶಾಸನದ ಪಾಠ**

೧. ---ವೈದ್ಯನಾಥೇಶ್ವರ
೨. ದೇವರಿಗೆ ರುದಿರೋದ್ಗಾರಿ ಸಂವತ್ಸರ
೩. ದ - ಸ್ರಾವಣ ಸು ೫ಲು ಸಂಣ -
೪. -ರ್ತ ಗಉಡ ದೇವರಸನು ಪ್ರಾತಸ್ನಾನ
೫. ನೈವೇದ್ಯ ನಡಉದಕ್ಕೆ ಯೆಲವದವಾಗಿ -
೬. ಯಲು ಕೊಟ್ಟರು ಖಂಡುಗ ಗದ್ದೆಗೆ ಯೆರಡು
೭ ವೇಳೆ ನೈವೇದ್ಯವ ನಡಸುವರು ಒಂದು ಬಾರಿ
೮. ಬೆಳೆದರೆ ಒಂದು ವೇಳೆ ಮಾಡುವರು ನಂಬಿ
೯. ಯರ ಜೀವಿತಕ್ಕೆ ಕೊಟದು ಹತ್ತು ಕೊಳಗ ಗದ್ದೆ ಅ
೧೦. ಂತು ಮೂವತ್ತು ಕೊಳಗ ಗದ್ದೆ ಇದಕೆ ಆರು ತ
೧೧. ಪ್ಪಿದವರು ಗಂಗೆಯ ತಡಿಯ ಕಪಿಲ
೧೨. ಯ ಕೊಂದ ಪಪಕೆ ಹೋಹರು ಗುರು
೧೩. ವಿನ ರಾಣಿವಾಸಕ್ಕೆ ತಪ್ಪಿದವರು

ಈ ಶಾಸನವು ಮುಮ್ಮಡಿ ಬಲ್ಲಾಳನ ಕಾಲಕ್ಕೆ ಸೇರುತ್ತದೆ. ಶಾಸನವು ಸಂಣ.... ರ್ತ ಗಉಡನು ವೈದ್ಯನಾಥೇಶ್ವರ ದೇವರಿಗೆ ಪ್ರಾತಃಸ್ನಾನ ನೈವೇದ್ಯ ನಡೆಯುವುದಕ್ಕಾಗಿ ಬಿಟ್ಟ ಭೂಮಿ ದಾನದ ವಿಷಯವನ್ನು ದಾಖಲಿಸಿದೆ. ದಾನಕ್ಕೆ ಸಂಬಂಧಿಸಿದ ಒಂದು ನಿಬಂಧನೆಯು ಕುತೂಹಲಕಾರಿಯಾಗಿದೆ. ಕೊಟ್ಟದ್ದು ಖಂಡುಗ ಗದ್ದೆ. ಅಂದರೆ ಒಂದು ಖಂಡುಗ ಭತ್ತವನ್ನು ಬೆಳೆಯುವ ಗದ್ದೆ. ಇದಲ್ಲದೆ ದೇವಸ್ಥಾನದಲ್ಲಿ ಪೂಜೆ ಮಾಡುವ ನಂಬಿಯರ ಜೀವಿತಕ್ಕೆ ಹತ್ತು ಕೊಳಗ ಗದ್ದೆಯನ್ನು ಪ್ರತ್ಯೇಕವಾಗಿ ನೀಡಲಾಗಿದೆ. ಒಟ್ಟು ಮೂವತ್ತು ಕೊಳಗ ಗದ್ದೆ ಎಂದು ನಮೂದಿಸಲಾಗಿರುವುದರಿಂದ ಒಂದು ಖಂಡುಗವು ಇಪ್ಪತ್ತು ಕೊಳಗಕ್ಕೆ ಸಮ ಎಂದು ತಿಳಿಯಬಹುದು. ಮೊದಲ ಒಂದು ಖಂಡುಗ ಗದ್ದೆಯು ದೇವರ ಪೂಜೆಗಳಿಗೇ ಸೀಮಿತವಾದದ್ದು. ಈ ಖಂಡುಗ ಗದ್ದೆಯ ಬೆಳೆಯಿಂದ ಎರಡು ವೇಳೆ ನೈವೇದ್ಯ ನಡೆಸಬೇಕು. ಆಕಸ್ಮಾತ್ ಒಂದು ಬಾರಿ ಬೆಳೆದರೆ ಒಂದು ವೇಳೆ ಮಾತ್ರ ನೈವೇದ್ಯ ಮಾಡಬೇಕು ಎಂಬ ಸೂಚನೆ ಇದೆ. ಅಂದರೆ ದಾನವಾಗಿ ನೀಡಿದ ಗದ್ದೆಯಲ್ಲಿ ಎರಡು ಬೆಳೆ ಬೆಳೆಯಲು ಅವಕಾಶವಿತ್ತು ಎಂದು ಸ್ಪಷ್ಟವಾಗುತ್ತದೆ. ನೀರಾವರಿ ಸೌಲಭ್ಯ ಚೆನ್ನಾಗಿದ್ದರೆ ಗದ್ದೆಯಲ್ಲಿ ಎರಡು ಬೆಳೆ ತೆಗೆಯುವುದು ಕಷ್ಟದ ಮಾತಲ್ಲ. ಎರಡು ಬೆಳೆ ತೆಗೆದರೆ ದೇವರಿಗೆ ಎರಡು ಹೊತ್ತು ನೈವೇದ್ಯ. ಆಕಸ್ಮಾತ್ ಯಾವುದೇ ಕಾರಣದಿಂದ ವರ್ಷದಲ್ಲಿ ಒಂದೇ ಬೆಳೆ ತೆಗೆದರೆ ಆಗ ದೇವರಿಗೆ ಒಂದು ಹೊತ್ತು ಮಾತ್ರ ನೈವೇದ್ಯ ಸಲ್ಲುತ್ತದೆ. ಈ ನಿಬಂಧನೆಯು ದೇವರ ನೈವೇದ್ಯದ ಮೇಲಿನ ನಿಯಂತ್ರಣವನ್ನು ಸೂಚಿಸುತ್ತದೆ.

ಶಾಪಾಶಯದ ಭಾಗದಲ್ಲಿ 'ಇದಕೆ ಆರು ತಪ್ಪಿದವರು ಗಂಗೆಯ ತಡಿಯ ಕಪಿಲೆಯ ಕೊಂದ ಪಾಪಕ್ಕೆ ಹೋಹರು' ಎಂಬ ಸಾಮಾನ್ಯ ಶಾಪದ ಜೊತೆಗೆ 'ಗುರುವಿನ ರಾಣಿವಾಸಕ್ಕೆ ತಪ್ಪಿದವರು' ಎಂದು ಸೂಚಿಸುತ್ತದೆ, ಎಂದರೆ ದಾನಕ್ಕೆ ತಪ್ಪಿ ನಡೆದವರು ಗುರುಪತ್ನೀಗಮನ ಮಾಡಿದಂತಾಗುತ್ತದೆ ಎಂಬ ಸೂಚನೆಯಾಗಿದೆ.

**ಮೂರನೆಯ ಶಾಸನ**

ಗ್ರಾಮದ ವೈದ್ಯನಾಥೇಶ್ವರ ದೇವಸ್ಥಾನದ ಮುಂದೆಯೇ ನೆಟ್ಟಿರುವ ಮತ್ತೊಂದು ಕಲ್ಲಿನ ಮೇಲಿನ ಶಾಸನದಲ್ಲಿ ಯಾವುದೇ ರಾಜನ ಉಲ್ಲೇಖವಿಲ್ಲ. ಈ ಶಾಸನದಲ್ಲಿಯೂ ನೆಜಿಲೂರು ಮತ್ತು ವಯಿಜನಾಥ ದೇವರಿಗೆ ಕೊಟ್ಟ ದಾನದ ಉಲ್ಲೇಖವಿದೆ. ಮಾಇನಾಯಕ ಎಂಬ ಸ್ಥಳೀಯ ನಾಯಕ ದಾನ ನೀಡಿದ ದಾಖಲೆ ಈ ಶಾಸನ. ಶಾಸನದಲ್ಲಿ ಒಂಭತ್ತು ಸಾಲುಗಳಿವೆ ಕಾಲದ ಉಲ್ಲೇಖ ಇಲ್ಲ. ಲಿಪಿಸ್ವರೂಪದ ದೃಷ್ಟಿಯಿಂದ ಶಾಸನದ ಕಾಲವು ಕ್ರಿ.ಶ. ಸುಮಾರು ೧೩ನೆಯ ಶತಮಾನ ಆಗುತ್ತದೆ.

### ಶಾಸನದ ಪಾಠ

೧. ಸರ್ವರು ಇಪ್ಪತ್ತೊಂದು ತಲೆಯ ಹತ್ತು

೨. ಸಳ ರಣಸರ ಕಡಲೆ ಕಾ–ಮ್ಮ –ಸುಮಖಯಾತ್ತಿಯ

೩. ಲೆಂ ನೆಜಿಲಕೆಜಿಯ ದೇವರಿಗೆ ಆಚಂದ್ರಾರ್ಕಸ್ಥಾಇ

೪. ಯಾಗಿ ಸಲ್ವುದೆಂತಾಗಿರೆ ಮಾಇ ನಾಯಕರು ಆ ನೆಜಿಲೂರ

೫. ನೂ ಕೊಟ್ಟದು ಸಮಸ್ತ ಗೌಡು ಸಹ ವಇಜ ನಾಥ ದೇವರಿಗೆ ಬರ

೬. ದು ಕೊಟ್ಟ ಸಿಲಾಸಾಸನಕೆ – ಆ ಮಾಇನಾಯಕರ ಸ್ವಹಸ್ತದೊಪ್ಪ

೭. -- ನೆಜಿಲೂರ ಮಕಣಿ ಸೂರ ಗೌಡುಗಳ– ವ ಶಿವಾ–

೮. ಲಾ ನಾಡ ಕಂಡುಡಿಗೆದೆಂದಾರಪ್ಪುಡೆದ ದೇವರ ಶ್ರೀಕಾರಿಯಕ್ಕೆ ಸಲುವು

೯. ದು

ನೇಜಿಲಕೆರೆಯ ದೇವರಿಗೆ ಮಾಇ ನಾಯಕ ಎಂಬ ವ್ಯಕ್ತಿ ನೀಡಿದ ದಾನವನ್ನು ಶಾಸನ ದಾಖಲಿಸಿದೆ. ಶಾಸನದ ಮೊದಲ ಎರಡು ಸಾಲುಗಳು ಒಗಟಿನಂತಿವೆ. ಎಲ್ಲರೂ ಇಪ್ಪತ್ತೊಂದು ತಲೆಯ ಹತ್ತು ಎಂಬ ಭಾಗದ ಅರ್ಥವನ್ನು ಸುಲಭವಾಗಿ ಬಿಡಿಸಲು ಸಾಧ್ಯವಾಗುತ್ತಿಲ್ಲ. ಇದು ಬಹುತೇಕ ಜಾನಪದೀಯ ದೇವರಿಗೆ ವಇಜನಾಥ ದೇವರ ಮೂಲಕ ನೀಡಿದ ದಾನ ಎಂದು ಊಹಿಸಲು ಅವಕಾಶಗಳಿವೆ. ಇಲ್ಲಿನ ಭಾಷೆಯು ಶಿಷ್ಟವಲ್ಲ. ದಾನವಾಗಿ ಕೊಟ್ಟಿರುವುದು ನೆಜಿಲೂರು ಗ್ರಾಮವನ್ನು. ಕ್ರಿ.ಶ. ಸುಮಾರು ೧೩ನೆಯ ಶತಮಾನದಲ್ಲಿ ನೆಜಿಲೂರು ಮತ್ತು ಅಲ್ಲಿನ ವಇಜನಾಥ ಅಥವಾ ವೈದ್ಯೇಶ್ವರ ದೇವರು ಆ ಭಾಗದಲ್ಲಿ ಪಡೆದಿದ್ದ ಗೌರವವನ್ನು ಇಲ್ಲಿನ ಬಹುತೇಕ ಎಲ್ಲಾ ಶಾಸನಗಳು ಸ್ಪಷ್ಟಪಡಿಸಿವೆ. ಈ ಮೊದಲೇ ಸೂಚಿಸಿರುವಂತೆ ದಾನವನ್ನು ನೀಡಿರುವುದು ನೇಜಿಲಕೆರೆಯ ದೇವರಿಗೆ. ವಇಜ/ವೈದ್ಯನಾಥನಲ್ಲದೆ, ಮತ್ತೊಬ್ಬ ದೇವತೆಯೂ ನೆರಳೂರಿನಲ್ಲಿದ್ದ ಸುಳಿವನ್ನು ಈ ಶಾಸನ ನೀಡುತ್ತದೆ. ಬಹುಶಃ ಊರಿಗೆ ಸಂಬಂಧಿಸಿದ್ದ ಈ ದೇವರು ಗ್ರಾಮದೇವತೆ ಯಾಗಿರಬೇಕು ಅಥವಾ ಬೋರೇದೇವರು ಎಂದು ರೂಪ ಬದಲಾಯಿಸಿಕೊಂಡಿರುವ ಭೈರೇದೇವರು ಎಂದರೆ ಭೈರವೇಶ್ವರ ಅಥವಾ ಬೀರೇಶ್ವರ ದೇವರಾಗಿರಬೇಕು. ಹಾಗೆ ಅದು ಬೀರೇಶ್ವರನಾದರೆ, ಅದಕ್ಕೂ ಮುಂದೆ ಪ್ರಸ್ತಾಪಿಸಲಿರುವ ಮತ್ತೊಂದು ಶಾಸನದ ಹಿಂದಿರುವ ವೀರಗಲ್ಲಿಗೂ ಸಂಬಂಧ ಇರಬೇಕು. ವೀರಗಲ್ಲುಗಳಿಗೆ ಗುಡಿ ಕಟ್ಟಿಸಿ ಪೂಜಿಸುವ ಮತ್ತು ವಾರ್ಷಿಕ ಹಬ್ಬಗಳನ್ನು ಆಚರಿಸುವ ಪದ್ಧತಿ ನಮ್ಮಲ್ಲಿ ಹೊಸದೇನಲ್ಲ.

### ನಾಲ್ಕನೆಯ ಶಾಸನ

ನೆರಳೂರು ಗ್ರಾಮದ ನಡುವೆ ರಸ್ತೆಯ ಬದಿಯಲ್ಲಿ ಬೋರೇದೇವರ ದೇವಸ್ಥಾನದ ನಿವೇಶನ ಎಂದು ಹೇಳಲಾಗುವ ಸ್ಥಳದಲ್ಲಿರುವ ವೀರಗಲ್ಲಿನ ಪಕ್ಕ ನಲ್ಲಿಸಿರುವ ಈ ಶಾಸನದಲ್ಲಿ ಹೊಯ್ಸಳ ವೀರನಾರಸಿಂಹನ ಮತ್ತು ನೆಜಲೂರಿನ ಉಲ್ಲೇಖ ಇದೆ. ಶಾಸನದ ಮೇಲ್ಭಾಗದಲ್ಲಿ ಗಂಡುಡುಗೆಯ ಗಂಡಭೇರುಂಡದ ಉಬ್ಬುಶಿಲ್ಪವಿದೆ. ಇದರ ಎರಡೂ ಬದಿಯಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಒಬ್ಬ ಸ್ತ್ರೀ ಮತ್ತು ಒಬ್ಬ ಪುರುಷನ ಉಬ್ಬುಶಿಲ್ಪಗಳಿದ್ದು, ಇವುಗಳ ತಲೆಯ ಮೇಲೆ ಗಂಡಭೇರುಂಡದ ಎರಡೂ ಕೈಗಳಿವೆ. ಈ ಉಬ್ಬುಶಿಲ್ಪಗಳ ಎಡಬದಿಯಲ್ಲಿ ಎಡಗಾಲನ್ನು ಎತ್ತಿ ನಿಂತಿರುವ ಹುಲಿಯ ಮತ್ತು ಬಲಬದಿಯಲ್ಲಿ ಕಳಶ ಮತ್ತು ಕಠಾರಿಯ ಉಬ್ಬುಶಿಲ್ಪಗಳಿವೆ. ಹುಲಿಯ ಮೇಲ್ಭಾಗದಲ್ಲಿ ಸೂರ್ಯ ಮತ್ತು ಕಳಶದ ಮೇಲ್ಭಾಗದಲ್ಲಿ ಚಂದ್ರನ ಕೆತ್ತನೆಗಳಿವೆ. ಇವು ಶಾಸನವು ವೀರತನಕ್ಕೆ ನೀಡಿದ ದಾನ ಎನ್ನುವುದನ್ನು ಸೂಚಿಸುತ್ತವೆ. ಕಾಲದ ಉಲ್ಲೇಖ ಇಲ್ಲ. ಲಿಪಿಸ್ವರೂಪದ ದೃಷ್ಟಿಯಿಂದ ಈ ಶಾಸನದ ಕಾಲವು ಕ್ರಿ.ಶ. ಸುಮಾರು ೧೩ನೆಯ ಶತಮಾನದ ಮಧ್ಯಭಾಗಕ್ಕೆ ಸೇರುತ್ತದೆ. ಶಾಸನದಲ್ಲಿ ಒಟ್ಟು ೧೯ ಸಾಲುಗಳಿವೆ. ಇವುಗಳ ಪೈಕಿ ಮೊದಲ ೧೨ ಸಾಲುಗಳು ಸ್ಪಷ್ಟವಾಗಿದ್ದು, ನಂತರದ ಆರು ಸಾಲುಗಳು ಬಹಳ ತ್ರುಟಿತಗೊಂಡಿವೆ.

### ಶಾಸನದ ಪಾಠ

೧. ಸ್ವಸ್ತಿಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮ

೨. ಹಾರಾಜಾರಾಜ ಪರಮೇಶ್ವರ ಯಾದವ ಕುಲಾಂಬರ

೩. ದ್ಯುಮಣಿ ಮಲೆರಾಜರಾಜ ಮಲೆಪರೊಳು ಗಂಡ ಗಂ

೪. ಡರಗಂಡ ಕದನಪ್ರಚಂಡ ಸನಿವಾರ ಸಿದ್ಧಿ ಗಿರಿದುರ್ಗ್ಗಮ

೫. ಲ್ಲ ಛಲದಂಕರಾಮ ಚೋಳರಾಯ ಸ್ಥಾಪನಾಚಾರಿ ಯಪಾಂ

೬. ಡ್ಯರಾಯ ಪ್ರತಿಷ್ಟಾಚಾರಿಯ ನಿಸ್ಸಂಕಪ್ರತಾಪಚ

೭. ಕ್ರವರ್ತಿ ಹೊಯ್ಸಳ ಭುಜಬಳ ವೀರನಾರಸಿಂಹ ದೇವ

೮. ರಸರು ಸ್ವಸ್ತಿಶ್ರೀಮತು ಕಸವಮುದ್ರ ಲೋಭಿರಾಯ

೯. ಗಜಂಕುಸ ಶ್ರೀವಾರಜನ ಹಳ ಶ್ರೀಬುಧಜನವಂದಿಜಗ

೧೦. ಚಕ್ರವರ್ತ್ತಿ ಕೀರ್ತಿದೇವರಸರಿಗೆ ಕಳಲೆ --ನು ಕೊಟ

೧೧. ರು ನೆಜಿಲೂರ ಚತುಸೀಮೆಯ ಬಿಟ್ಟ ಕ್ರಮವೆಂತೆಂದರೆ

೧೨. ಸಂಕಲು ಕೊಳಗ ---------------------

(ಮುಂದಿನ ಆರು ಸಾಲುಗಳು ಆಸ್ಪಷ್ಟ)

ಹೊಯ್ಸಳ ವೀರಬಲ್ಲಾಳನ ಬಹುತೇಕ ಬಿರುದಾವಳಿಗಳು ಈ ಶಾಸನದ ಮೊದಲ ಭಾಗದಲ್ಲಿ ಉಲ್ಲೇಖಗೊಂಡಿದ್ದರೂ ಇವೆಲ್ಲವೂ ವೀರನಾರಸಿಂಹ ದೇವನನ್ನು ಉದ್ದೇಶಿಸಿವೆ ಎಂದು ಶಾಸನ ಪಾಠ ಖಚಿತಪಡಿಸುತ್ತದೆ. ಇದು ಕೀರ್ತಿದೇವರಸ ಎಂಬ ವ್ಯಕ್ತಿಗೆ ನೀಡಿದ ದಾನವಾಗಿದೆ. ಕೀರ್ತಿದೇವರಸನಿಗೂ ಕಸವಮುದ್ರ ಲೋಭಿರಾಯ, ಗಜಾಂಕುಸ (ಶ), ಬುಧಜನ ವಂದಿತ,ಚಕ್ರವರ್ತಿ ಎಂಬ ಬಿರುದುಗಳಿವೆ. ದಾನ ನೀಡಿರುವುದು ನೆಜಿಲೂರಿನ ಭೂಮಿಯನ್ನೇ. ಇದರ ವಿವರಗಳು ತ್ರುಟಿತಗೊಂಡಿವುದರಿಂದ ಶಾಸನದ ಮುಂದಿನ ಭಾಗ ಆಸ್ಪಷ್ಟವಾಗಿದೆ. ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ವೀರನಾರಸಿಂಹನ ಹಿನ್ನೆಲೆಯಲ್ಲೇ ಹಿಂದಿನ ಶಾಸನಗಳ ಕಾಲವನ್ನೂ ಇವನ ಆಳ್ವಿಕೆಯ ಕಾಲಕ್ಕೆ ಸೇರಿಸುವ ಪ್ರಯತ್ನ ಮಾಡಲಾಗಿತ್ತು. ಕ್ರಿ.ಶ. ೧೨೫೩ರಿಂದ ೧೨೯೨ರವರೆಗೆ ಆಳಿದ ಮುಮ್ಮಡಿ ನರಸಿಂಹನ ಕಾಲಕ್ಕೆ ಈ ಶಾಸನ ಸೇರುತ್ತದೆ.

ಈ ಕಾಲದಲ್ಲಿ ಹೊಯ್ಸಳ ನಾಡಿನಲ್ಲಿ ಆನೇಕ ಸ್ಥಳೀಯ ನಾಯಕರು ಅಳುತ್ತಿದ್ದುದನ್ನು ಅನೇಕ ಶಾಸನಗಳು ಸೂಚಿಸುತ್ತವೆ. ಆ ಹೊತ್ತಿಗೆ ಚೆಂನಪಟ್ಟಣ ಮತ್ತು ನೆಜಿಲೂರುಗಳು ಕೀರ್ತಿದೇವರಸ, ಮಾಇ ನಾಯಕ ಮತ್ತು ಮತ್ತೊಬ್ಬ ಗಲುಡನ ಆಳ್ವಿಕೆಗೆ ಸೇರಿತ್ತು ಮತ್ತು ಇಲ್ಲಿನ ಪ್ರಸಿದ್ಧ ದೇವರು ವಇಜನಾಥ ಎಂದೂ ಕರೆಯಲಾಗುತ್ತಿದ್ದ ವೈದ್ಯನಾಥ ಆಥವಾ ವೈದ್ಯೇಶ್ವರ. ವಾಸ್ತುಶೈಲಿಯನ್ನು ಆಧರಿಸಿ ಈ ದೇವಾಲಯವನ್ನು ಗಂಗರ ಆಳ್ವಿಕೆಯ ಅಂತ್ಯ ಮತ್ತು ಚೋಳರ ಆಕ್ರಮಣದ ಆರಂಭ ಕಾಲಕ್ಕೆ ಸೇರಿಸಬಹುದು.

## ಐದನೆಯ ಶಾಸನ

ಬೋರೇದೇವರ ದೇವಸ್ಥಾನದ ನಿವೇಶನಕ್ಕೆ ಸಮೀಪ ಹೊಲವೊಂದರ ಬದುವಿನಲ್ಲಿ ಹೂತುಹೋಗಿದ್ದ ಶಾಸನ. ಈಗ ಇದನ್ನು ತೆಗೆದು ಊರಿನ ಮಧ್ಯೆ ಇರುವ ಆರಳಿಕಟ್ಟೆಗೆ ಒರಗಿಸಿಟ್ಟಿದೆ. ನಮ್ಮ ಕ್ಷೇತ್ರಕಾರ್ಯ ನಡೆಯುತ್ತಿದ್ದ ಸಂದರ್ಭದಲ್ಲಿ ಬದುವಿನಿಂದ ಹೊರತೆಗೆಯಲಾದ ಶಾಸನದ ಉತ್ತಮ ಛಾಯಾಚಿತ್ರವನ್ನಾಗಲೀ, ಉತ್ತಮ ಪಡಿಯಚ್ಚನ್ನಾಗಲೀ ತೆಗೆಯಲು ಸಾಧ್ಯವಾಗಲಿಲ್ಲವಾದ ಕಾರಣ ಇಲ್ಲಿ ಶಾಸನದ ಪೂರ್ಣ ಪಾಠವನ್ನು ನೀಡಲಾಗಿಲ್ಲ. ಈ ಶಾಸನದ ಮೇಲ್ಭಾಗದಲ್ಲಿಯೂ ಹಿಂದಿನ ಶಾಸನದಂತೆಯೇ ನಡುವೆ ಗಂಡಭೇರುಂಡ, ಆದರ ಎರಡೂ ಪಕ್ಕಗಳಲ್ಲಿ ಪುರುಷ ಮತ್ತು ಸ್ತ್ರೀ ಮತ್ತು ಬಲಬದಿಗೆ ಕಳಶ, ಕಠಾರಿಯ ಕೆತ್ತನೆ ಇದೆ.

ಶಾಸನದಲ್ಲಿ ಶೋಭಕೃತು ಸಂವತ್ಸರದ ಉಲ್ಲೇಖ ಇದೆ. ಹೆಚ್ಚು ಭಾಗ ಆಸ್ಪಷ್ಟ. ಶಾಸನದ ಪಡಿಯಚ್ಚಾಗಲೀ, ಛಾಯಾಚಿತ್ರವಾಗಲೀ ಸ್ಪಷ್ಟವಾಗಿಲ್ಲ ಲಿಪಿಸ್ವರೂಪದ ದೃಷ್ಟಿಯಿಂದ ಶಾಸನದ ಕಾಲ ಕ್ರಿಶ ಸು ೧೩ನೆಯ ಶತಮಾನದ ಅಂತ್ಯಕಾಲ ಅಂದರೆ ಈ ಮೇಲೆ ಚರ್ಚಿಸಲಾದ ನಾಲ್ಕು ಶಾಸನಗಳ ಕಾಲವೇ ಆಗುತ್ತದೆ. ಇಲ್ಲಿ ಉಲ್ಲೇಖಗೊಂಡಿರುವ ಕಾಲವು ಶೋಭಕೃತು ಸಂವತ್ಸರದ ಭಾದ್ರಪದ ಶು ೫ ಪಂಚಮಿ ಆಗಿರುವುದರಿಂದ ಇದರ ಕಾಲವು ೧೬-೯-೧೨೪೨, ಗುರುವಾರ ಆಗುತ್ತದೆ.

## ಶಾಸನದ ಪಾಠ

೧. ಶೋಭಕೃತು ಸಂವತ್ಸರದ ಭಾದ್ರಪದ ಬ ೫ ಮಿ . ಪ

೨. .... .. ಶ್ರೀಮತು ತ್ರಿಭುವನ ವಂದ್ಯಜನ ...........

೩. ......... ನಾಡ ವಲ್ಲರಸರು ನೆ........................

೪. ... ....ಭ್ರಮದವ ಸಿದಾಯ ಮಗ................

೫. .........................................................

ಶಾಸನದ ಇನ್ನೂ ಹಲವು ಸಾಲುಗಳನ್ನು ಓದಲು ಸಾಧ್ಯವಾಗಿಲ್ಲ. ಆದಕ್ಕೆ ಇನ್ನೂ ಅವಕಾಶಗಳಿವೆ. ನೆರಳೂರು ಗ್ರಾಮದ ಹೆಸರು ೧೩ನೆಯ ಶತಮಾನದಷ್ಟು ಪ್ರಾಚೀನ. ಅಗಿರುವ ಬದಲಾವಣೆ ಇಷ್ಟೆ. ಆಗ ನೆರಳೂರಿನ 'ಜಿ' ಈಗ 'ರ' ಕಾರವಾಗಿ ಬದಲಾಗಿದೆ. ಶಾಸನಗಳಲ್ಲಿ ಉಕ್ತವಾಗಿರುವ ವೈದ್ಯನಾಥೇಶ್ವರ ದೇವಸ್ಥಾನ ಇಂದಿಗೂ ಇದೆ. ದೇವರ ಪೂಜೆ ಮಾಡುತ್ತಿದ್ದವರು ನಂಬಿಯರು ಎಂದು ಕರೆಯಲಾಗುತ್ತಿದ್ದ ಶೈವ ಪಂಗಡದ ಜನ. ಇಲ್ಲಿನ ಆಕಾರವನ್ನು ರಾಜನ ಪರವಾಗಿ ಕೆಲವು ಗಉಡ ಕುಟುಂಬಗಳು ನೋಡಿಕೊಳ್ಳುತ್ತಿದ್ದುದರ ಸೂಚನೆಯನ್ನು ಶಾಸನಗಳು ನೀಡುತ್ತವೆ.

(ನೆರಳೂರಿನ ಕ್ಷೇತ್ರಕಾರ್ಯದ ಸಂದರ್ಭ ಪಡಿಯಚ್ಚು ತೆಗೆಯಲು ಮತ್ತು ಇನ್ನೂ ಹಲವು ರೀತಿಗಳಲ್ಲಿ ನೆರವಾದ ಸ್ನೇಹಿತ ಶ್ರೀ ಜಿ.ಕೆ.ದೇವರಾಜಸ್ವಾಮಿ, ಶ್ರೀ ಸುರೇಶ್ ಮತ್ತು ನೆರಳೂರಿನ ಇತರ ಗೆಳೆಯರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಇತಿಹಾಸದ ವಿದ್ಯಾರ್ಥಿಗಳ ಆಧ್ಯಯನಕ್ಕೆ ನೆರಳೂರು ಇಂದಿಗೂ ಪ್ರಮುಖ ಆಧ್ಯಯನ ಕೇಂದ್ರವಾಗಿಯೇ ಉಳಿದಿದೆ.)

ಡಾ. ಸಿದ್ಧಲಿಂಗ ಶಿವಾಚಾರ್ಯ ಸ್ವಾಮೀಜಿ*

# ಶಿವಮೊಗ್ಗ ನಗರದ ಅಪ್ರಕಟಿತ ತಾಮ್ರ ಶಾಸನ

ಶಿವಮೊಗ್ಗ ನಗರದ ವಿನೋಬನಗರದ P&T ಕಾಲನಿಯಲ್ಲಿ ವಾಸವಾಗಿರುವ ಶ್ರೀ ಹೆಚ್.ಎಸ್. ಮಹೇಶ್ವರಪ್ಪ ಎಂಬುವರಲ್ಲಿದ್ದ ತಾಮ್ರಶಾಸನ ಇತ್ತೀಚೆಗೆ ದೊರಕಿದೆ. ತಾಮ್ರದ ಹಲಗೆಯ ಎರಡೂ ಬದಿಗೆ ಶಾಸನವಿದೆ. ಮುಂಭಾಗದಲ್ಲಿ ೨೨ ಸಾಲುಗಳಿವೆ. ಹಿಂಭಾಗದಲ್ಲಿ ೨೨ ಸಾಲು ಶಾಸನವಿದೆ. ಕನ್ನಡ ಭಾಷೆಯಲ್ಲಿರುವ ಈ ತಾಮ್ರ ಶಾಸನದ ಆರಂಭದಲ್ಲಿ ನಮಸ್ತುಂಗ ಶಿರಶ್ಚುಂಬಿ ಸಂಸ್ಕೃತ ಶ್ಲೋಕದೊಂದಿಗೆ ಪ್ರಾರಂಭವಾಗಿದೆ. ಶಾಸನದ ಕೊನೆಯಲ್ಲಿ ಶ್ರೀ ಸದಾಶಿವ ಎಂಬ ಅಂಕಿತವಿದೆ. ಶಕ ವರುಷ ೧೫೫೩ (ಕ್ರಿ.ಶ. ೧೬೭೧)ರ ಈ ತಾಮ್ರಶಾಸನ ಸುಮಾರು ೨೦ ಸೆಂ.ಮೀ. ಅಗಲ, ೨೫ ಸೆಂ.ಮೀ. ಉದ್ದವಿದೆ.

ಕೆಳದಿ ಅರಸು ಸೋಮಶೇಖರ ನಾಯಕರು ಮಹಾಮಹತ್ತಿನ (ಮಠ) ವಳಗಾದ ಕುಪ್ಪಸ್ತಕಂತೆ ಮನೋಹರ ದೇವರ ಶಿಷ್ಯ ಕೆಂಪು ನಂಜಿ ದೇವರಿಗೆ ಮಠ ಕಟ್ಟಿಸಲು ನೀಡಿದ ದಾನ ಶಾಸನವಾಗಿದೆ. ಬಿದನೂರು ಬಾಳೆಕೊಪ್ಪದಲ್ಲಿ ಮಠ ಕಟ್ಟಿಸಿ ಶರಣು ಮಾಡಿದ ವಶೀಕೃತಮಠದ ಧರ್ಮಕ್ಕೆ ಬಿಟ್ಟ ತಾಮ್ರಶಾಸನ. ಮಧುವಂಕನಾಡ ಸೀಮೆಯೊಳಗಣ ಬೆಳುವೆಗ್ರಾಮದ ಭೂಮಿ ಉಂಬಳಿ ಮಾನ್ಯ ನೀಡಿದ ಉಲ್ಲೇಖವಿದೆ.

ಬೆಳುವೆ ಮಲ್ಲಿಕಾರ್ಜುನ ದೇವರಿಗೆ ಅಮೃತಪಡಿಗೆ ಭತ್ತ ಅಡಿಕೆ ತೋಟ ನೀಡಿದ ವಿವರಗಳಿವೆ. ವಿಶ್ವನಾಥಪುರದ ಅಗ್ರಹಾರ, ಮಲೆಯ ನಾರಾಯಣ ಮಲೆಯನೂ ಕೆಸರಗುತ್ತಿಯಲೂ ಅಗ್ರಹಾರ ದೇವಸ್ಥಾನದ ಧರ್ಮಕ್ಕೆ ನೀಡಿದ ವಿವರಗಳಿವೆ. ಈ ಭೂಮಿಗೆ ಲಿಂಗಮುದ್ರೆಕಲ್ಲು ನೆಟ್ಟು ಮಠಧರ್ಮಕೆ ಮತ್ತು ಗ್ರಾಮದ ಮಲ್ಲಿಕಾರ್ಜುನ ದೇವರ ವೆಚ್ಚಕ್ಕೆ ಪರಂಪರೆಯಾಗಿ ಅನುಭವಿಸಬಹುದೆಂದು ಉಲ್ಲೇಖವಾಗಿದೆ.

ಕೊನೆಯ ಆರು ಸಾಲುಗಳು ಸಂಸ್ಕೃತ ಭಾಷೆಯಲ್ಲಿದ್ದು ಶಾಪಾಶಯದ ಉಲ್ಲೇಖವಿದೆ. ಕೊನೆಯಲ್ಲಿ ಶ್ರೀ ಸದಾಶಿವ ಎಂಬ ಅಂಕಿತವಿದೆ. ಇದೊಂದು ಅಪ್ರಕಟಿತ ಶಾಸನವಾಗಿದ್ದು ಕೆಳದಿ ಹಿರಿಯ ಸೋಮಶೇಖರ ನಾಯಕನ ಕಾಲ (೧೬೬೪–೧೬೭೨)ಕ್ಕೆ ಸೇರಿದೆ. ಈ ತಾಮ್ರಶಾಸನದಲ್ಲಿ ಕಂಡುಬರುವ "ಮಹಾಮಹತ್ತಿನ ವಳಗಾದ" ಎಂದರೆ ಅಂದಿನ ಮಹಾಮಹತ್ತಿನ ಮಠ ಕವಲೆದುರ್ಗದ ಪರಂಪರೆಗೆ ಅಥವಾ ಆಡಳಿತಕ್ಕೆ ಸೇರಿದ ವಶೀಕೃತ ಮಠವಾಗಿದೆ.

ಸ್ಥಳ : ಶಿವಮೊಗ್ಗ ಕಾಲ ಶಾ.ಶ ೧೫೫೩ ಕ್ರಿ.ಶ. ೧೬೭೧ ಸಾರಾಂಶ : ಬಿದರೂರು ಬಾಳಕೊಪ್ಪದ ಮಠಕ್ಕೆ ಕೊಟ್ಟ ಬೆಳುವೆ ಗ್ರಾಮ ದಾನ ತಾಮ್ರ ಶಾಸನ.

**ಮುಂಭಾಗ :**

೧ ನಮಸ್ತುಂಗ ಶಿರಿರಶ್ಚುಂಭಿ ಚಂದ್ರಚಾಮರ ಚಾರವೇ । ತ್ರೈಲೋಕ್ಯ ನಗರಾರಂ

೨ ಭ ಮೂಲ ಸ್ತಂಭಾಯ ಶಂಭವೇ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ

೩ ಶಕ ವರುಷ ೧೫೫೩ ನೆಯ ಸಾಧಾರಣ ಸಂವತ್ಸರದ ಜ್ಯೇಷ್ಠ ಬ ೧೩ ಲು ಶ್ರೀ ಮ

೪ ತ್ಸಜ್ಜನ ಶಿವಾಚಾರ ಸಂಪನ ದ್ಯಾವಾಪ್ರುಥ್ವೀ ಮಹಾಮಹತ್ತಿನ ವಳಗಾ

೫ ದ ಕುಪ್ಪಸ್ತಕಂತ್ತೆ ಮನೋಹರ ದೇವರ ಶಿಶ್ಯರು ಕೆಂಪುನಂಜಿ ದೇವರಿಗೆ । ಶ್ರೀಮ

೬ ದೆಡವ ಮುರಾರಿ ಕೋಟೆಕೋಳಾಹಲ ವಿಶುದ್ಧವೈದಿಕಾದ್ವೈತ ಸಿದ್ದಾಂತ ಪ್ರತಿಷ್ಠಾ

೭ ಪಕ ಶಿವಗುರು ಭಕ್ತಿಪರಾಯಣರಾದ ಕೆಳದಿ ಸದಾಶಿವರಾಯನಾಯಕರ ವಂಶೋ

೮ ದ್ಭವರಾದ ಸಂಕಂಣನಾಯಕರ ಪ್ರಪೌತ್ರ ಸಿದ್ದಪನಾಯಕರ ಪೌತ್ರುರು ಶಿವಪ್ಪ

೯ ನಾಯಕನ ಪುತ್ರರಾದ ಸೋಮಶೇಖರನಾಯಕರೂ ಕೊಟ್ಟ ಧರ್ಮ ಶಾಸನದ ಕ್ರಮ

೧೦ ವೆಂತೆಂದರೆ ಬಿದಿರೂರ ಬಾಳೆಕೊಪ್ಪದಲೂ ನಂಮ ಹೆಸರಲೂ ಮಠವ ಕಟ್ಟಿ

೧೧ ಸಿ ನಿಮಗೆ ಶರಣು ಮಾಡಿದ ವಶೀಕೃತ ಮಠದ ಧರ್ಮಕೆ ಬಿಟ್ಟ ಸ್ವಾಸ್ತಿ

* ಭುವನಗಿರಿದುರ್ಗ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

೧೨ ಮದುವಂಕ ನಾಡ ಸೀಮೆಯೊಳಗಣ ಬೆಳುವೆ ಗ್ರಾಮದಿಂದ ಪ್ರಾಕುರೇಖೆ

೧೩ ಕುಳ ಅರೆವಾಸಿ ಯಿಂದ ಗ ೨೦೦ ಬಿರಾಡ ಗ ೧ ಕೆ @ ೨ । ಲೂ ಗ ೪೫ ಸಂ

೧೪ ದು ಮನ್ಯದಿಂದ ಗ ೪ ॥ ೦ ಅಂತು ಗ ೨೪೯ ॥ ೦ ಉಂಬಳಿ ಮಾನ್ಯದಿಂದ

೧೫ ಸೂಲದಂಗಡಿ ಯೀಶ್ವರ ಭಟ್ಟನ ಸ್ವಾಸ್ತೆ ಬೀಜ ಖ ೫ ಕೆ ಗಡಿಖ ಗ ೧೨ ಕೆ ಗ ೧ ॥

೧೬ ಗೌಡುಂಬಳಿಯಿಂದ ಬೀಜ ಖ ೪೫೩ ಕೆ ಭತ್ತ ಖ ೨೨೦ ಕೆ ಗ ೧ ಕೆ ಖ ೮ ಲೂ ಗ ೨೭ ॥

೧೭ ಕೆ ವಇವಿರ. ವಿಶ್ವನಾಥ ಪುರಕೆ ತೆರುವ ಬಗೆಲೂ ಬೀಜ ಖ ಕೆ ಭತ್ತ ಖ ೨೦ ಕೆ ಗ ೨೦

೧೮ ಮೆಲಾದು ಗ ೨೫ ಉಭಯಂ ಗ ೨೭ ॥ ) ಉಭಯಂ ಗ ೨೯ ದೇವವಸ್ತಾನದ ಮಿ

೧೯ ಗಿತೆಯಿಂದ ಬೆಳುವೆ ಮಲ್ಲಿಕಾರ್ಜು ದೇವರ ಸ್ವಾಸ್ತಿ ಬೀಜ ೯ ॥ ಕೆ ಗಡಿ ಭತ್ತ

೨೦ ಖ ೪೦ ॥ ದೇವತಾ ವೆಚ್ಚ ಅಮ್ರುತ ಪಡಿಗೆ ಖ ೨೫ @ ಶುಧ ಖ ೧೬ ॥ ಕೆ ಗ ೨ ॥ =

೨೧ ಅಂತು ರೇಖ ಗ ೨೮೦ ॥ ೦ ॥ = ಖರಸಂವತ್ಸರದಲೂ ಹೆಚಿದು ಕುಳವಾ

೨೨ ದಿಗಳ ಗೋಟ ಮರ ೪೦೦೦ ಕೆ ಅದಕೆ ಅಡಕೆ ಲಕ್ಕ ೮ ಕೆ ಗ ೮೦ ಕೆ ಗೆದೆ ತೆರು ಉತ್ತಾರ

**ಹಿಂಭಾಗ :**

೨೩ ಬೀಜ ಖ ೧೨ ಕೆ ಗ ೧೨ ಶುದ ಗ ೬೮ ಉಭಯಂಗ ೩೮೮ ॥ ೦ । = ಗೆ ಉತಾರ । ವಿಶ್ವನಾ

೨೪ ಥ ಪುರದ ಅಗ್ರಹಾರಕೆ । ಶಾರ್ವರಿ ಸಂವತ್ಸರದಲು ಉಂಬಳಿ ಮಾನ್ಯದಿಂದ ಬೀಜ

೨೫ ಖ ೫ ಕೆ ಭತ್ತ ಖ ೨೦ ಕೆ ಗ ೨ ॥ ೦ ಹಳಪ ಮಲೆಯನಾರಣ ಮಲೆಯನೂ ಕೆಸರಗುತ್ತಿಯಲೂ

೨೬ ಮಾಡಿದ ಅಗ್ರಹಾರ ದ್ದೆವಸ್ಥಾನದ ಧರ್ಮಕೆ । ಶೋಭಕೃತು ಸಂವತ್ರದಲು ಉತಾರ । ಶಾಸ

೨೭ ನ ಪ್ರಮಾಣು । ಕಾರಿಣದೆಯಿಂದ ಬೀಜ ಖ ೬೦ ರ ಗ ೪೦ ಬೊಂಮಡನ ಗದೆಯಿಂದ ಬೀಜ

೨೮ ಖ ೫ ಕೆ ಗ ೨೦ ಉಭಯಂ ಗ ೨೮೮ ॥ ೦ ॥ = ಸಂವತ್ಸರರದಲು ಹೆಚಿದು । ಗೌಡಗಳು ಅ

೨೯ ನುಭವಿಸಿ ಬರುಶಿದ ನಿಕರಂದಿ ಕೊಟ ಮರ ೨೦೦ ಬಾಳಿಗೆ ಮಾನಿಕೆರೆ ಮೊದಲು ಮರ ೧೫೦ ಉಭಯಂ

೩೦ ಮರ ೩೫೦ ಕೆ ಗ್ರಾಮಪ್ಪಂಥ ಅಡಕೆ ಸಾ ೭೦ ಕೆ ಗ ೭ ಉಭಯಂ ಗ ೨೯೫ ॥ ೦ ॥ = ಯಿಂನೂರ ತೊಂಭ

೩೧ ತೈದು ವರಹನು ಹಣ ಅದೂ ಬೆಲೆ ಗ್ರಾಮವನೂ ಶಿವಾರ್ಪ್ಪಿತವಾಗಿ ಬಿಟ್ಟೆ

೩೨. ವಾಗಿ ಯೀ ಭೂಮಿಗೆ ನೆಟ್ಟ ಲಿಂಗಮುದ್ರೆಕಲ್ಲಿನ ವಳಗಾದ ನಿಧಿಲ ನಿಕ್ಷೇಪ ಜಲಪಾಶಾ

೩೩ ಣ ಅಕ್ಷಿಣಿ ಆಬಾಮಿ ಸಿಧ ಸಾಧ್ಯಂಗಳೆಂಬ ಅಷ್ಟಭೋಗ ತೇಜಸ್ವಾಮ್ಯವನೂ ಪೂರ್ವ

೩೪ ಮರಿಯಾದೆಲಿ ಆಗು ಮಾಡಿಕೊಂಡು ಆ ಗ್ರಾಮದವಳಗೆ ಸಸಿಬಾಳೆತೆಂಗು ಮುಂ

೩೫ ತಾಗಿ ಹೊಸ್ತಾಗಿ ಆಗಾಮಿ ಮಾಡಿಕೊಂಎಲು ಆಂದ ಹುಟುವಳಿ ಸಹ ಮಠಧರ್ಮಕೆ

೩೬ ನಡಸಿ ಶಡ್ದರುಶನಕ್ಕೂ ನಿಡಿವಾಡಿಕೊಂಡು ಆ ಗ್ರಾಮದವಳಗಣ ಮಲ್ಲಿಕಾರ್ಜುನ ದೇವ

೩೭ ರ ದೇವತಾ ವಎಚವನೂ ನಡಸಿ ಕೊಂಡು ನಿಂಮ ಶಿಶ್ಯರು ಪರಂಪರೆಯಾಗಿ ಆಚಂದ್ರಾರ್ಕ್ಕಸ್ತಾ

೩೮ ಯಿಗಳಾಗಿ ಸುಖದಿಂದ ಅನುಭವಿಸಬಹುದೆಂದು ಕೊಟ್ಟ ಧರ್ಮ ಶಾಸನ । ಯಿದಕ್ಕೆ ದೆ

೩೯ ವ ಸಾಕ್ಷಿಗಳು ಆದಿತ್ಯಚಂದ್ರಾವನಿಲೋವಳಶ್ಚ । ದ್ಯೌರ್ಭೂಮಿರಾ ಹೊಪ್ರದಯಂ

೪೦ ಯಮಶ್ಚ ಅಹಶ್ಚರಾತ್ರಿಶ್ಚ ಉಭೇಚಸಂಧ್ಯೆ ಧರ್ಮಶ್ಚನಾತಿನರಸ್ಯ

೪೧ ಉರತ್ತಂ । ದಾನಪಾಲನಯೋರ್ಮಧ್ಯೆ ದಾನಾಚೆಯೋನುಪಾಲನಂ । ದಾನಾಸರ್ಗ

೪೨ ಮವಾಪ್ನೋತಿ ಪಾನದಾದಚ್ಚುತಂಪದಂ । ಸ್ವದತ್ತಾ ದ್ವಿಗುಣ ಪುಂಣ್ಯಂ

೪೩ ಪರದತ್ತಾನು ಪಾಲನಂ ಪರದತ್ತಾಪಹರೆನ ಸ್ವದತ್ತಂ ನಿಷ್ಫಲಂ ಭವೇತು । ಸ್ತಾ

೪೪ ನ ಮಾನ್ಯ ಪೂರ್ವ ಮರಯಾದೆ

(ಈ ಅಪ್ರಕಟಿತ ಶಾಸನವನ್ನು ಪ್ರಕಟಿಸಿರುವ ಕರ್ನಾಟಕ ಇತಿಹಾಸ ಅಕಾದೆಮಿಗೂ ಸಹಕರಿಸಿ ಡಾ. ಜಗದೀಶ್ ಮತ್ತು ಶ್ರೀ ಜಯದೇವಪ್ಪ ಜೈನಕೇರಿ ಅವರಿಗೆ ಕೃತಜ್ಞತೆಗಳು).

ಡಾ. ವೈ. ಉಮಾನಾಥಶೆಣೈ*

# ವೀರನರಸಿಂಹ ಬಂಗರಾಜ ವೊಡೆಯನ ಬಂಗಾಡಿಯ ತಾಮ್ರಶಾಸನ

ಬಂಗಾಡಿ ಎಂಬುದು ಬಂಗ್ವಾಡಿ, ಬಂಗವಾಟಿಕಾ ಎಂದು ಕರೆಯಲ್ಪಡುತ್ತಿದ್ದ ಒಂದು ಹಳೆಯ ಪೇಟೆ. ಇದು ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಈಶಾನ್ಯ ಮೂಲೆಯಲ್ಲಿದೆ. ಪೂರ್ವಕ್ಕೆ ಪಶ್ಚಿಮ ಘಟ್ಟಗಳು, ಉತ್ತರ ಮತ್ತು ವಾಯುವ್ಯಕ್ಕೆ ಕುದುರೆಮುಖ ಪರ್ವತಗಳು. ಬಳಿಯಲ್ಲಿ ನೇತ್ರಾವತಿ ನದಿ ಹರಿಯುತ್ತಿದೆ. ಕ್ರಿಶ. ಸುಮಾರು ಹನ್ನೆರಡನೇ ಶತಮಾನದ ಮಧ್ಯಭಾಗದಿಂದ ಇಲ್ಲಿಂದ ಬಂಗ ಎಂಬ ಹೆಸರಿನ ಅರಸು ಮನೆತನದವರು ಆಳುತ್ತಿದ್ದರು. ಅವರು ವಿಹರಿಸುತ್ತಿದ್ದ ಸ್ಥಳವಾದುದರಿಂದ ಇದು ಬಂಗವಾಟಿಕಾ ಎಂದು ಸಂಸ್ಕೃತದಲ್ಲಿಯೂ, ಬಂಗವಾಡಿ, ಬಂಗ್ವಾಡಿ ಹಾಗೂ ಬಂಗಾಡಿ ಎಂದು ಕನ್ನಡ - ತುಳು ಭಾಷೆಗಳಲ್ಲಿಯೂ ಕರೆಯಲ್ಪಡುತ್ತಿದೆ.

ಈ ಬಂಗ ಅರಸುಮನೆತನದವರು ತಮ್ಮನ್ನು ವಂಗದೇಶದಿಂದ ಬಂದವರೆಂದು ಹೇಳಿಕೊಳ್ಳುತ್ತಿದ್ದರು. ಈ ವಂಗ ದೇಶವು ಬಂಗಾಳವೇ ಎಂಬುದು ಇನ್ನೂ ಖಚಿತವಾಗಿಲ್ಲ. ಕೆಲವರು ತಮ್ಮನ್ನು ಗಂಗನಾಡು, ವಂಗನಾಡು ಕಡೆಯಿಂದ ಬಂದವರೆಂದೂ, ಗಂಗವಂಶದವರೆಂದೂ ಹೇಳಿಕೊಳ್ಳುತ್ತಿದ್ದರು. ಆದರೆ ಯಾವುದೂ ಖಚಿತವಾಗಿಲ್ಲ. ಆದರೂ ಇವರು ಬೇರೆ ಕಡೆಯಿಂದ ಇಲ್ಲಿಗೆ ಬಂದು ನೆಲೆಸಿದವರು ಎಂಬುದು ಇವರ ಆಚಾರ ವಿಚಾರ, ಕಟ್ಟುಪಾಡು ಸಂಪ್ರದಾಯಗಳಿಂದ ತಿಳಿಯುತ್ತದೆ. ಜೈನ ಧರ್ಮೀಯರಾದ ಇವರು ದಕ್ಷಿಣಕನ್ನಡ ಜಿಲ್ಲೆಯ ಜೈನ ಸಮಾಜದಲ್ಲಿ ಪ್ರಚಲಿತವಿದ್ದ ಅಳಿಯ ಸಂತಾನ ಪದ್ಧತಿಯನ್ನು ಎಂದೂ ಅನುಸರಿಸುತ್ತಿದ್ದುದು ಕಂಡುಬರುವುದಿಲ್ಲ. ಆಳುತ್ತಿದ್ದ ಅರಸನ ನಂತರ, ಆತನ ಮಗನೇ ಪಟ್ಟವೇರುತ್ತಿದ್ದುದು ಕಂಡುಬರುತ್ತದೆ.

ಈ ಬಂಗ ಅರಸರು ತಮ್ಮ ಶಿಲಾ-ತಾಮ್ರ ಶಾಸನದ ಸಮಕಾಲೀನ ದಾಖಲೆಗಳಲ್ಲಿ ತಮ್ಮನ್ನು ಶ್ರೀಮದ್ವೀರನರಸಿಂಹ ಬಂಗರಾಜ ವೊಡೆಯ ಎಂದು ಕರೆದುಕೊಂಡಿದ್ದಾರೆ. ಆಳ್ವಿಕೆ ನಡೆಸಿದ್ದ ರಾಣಿಯರು ಸಹ ಇದೇ ಹೆಸರಿನಿಂದ ಕರೆಯಲ್ಪಟ್ಟಿದ್ದಾರೆ. ಎಲ್ಲರಿಂದಲೂ ಏಕ ಪ್ರಕಾರವಾಗಿ ಬಳಸಲ್ಪಟ್ಟ ಈ ಹೆಸರು ಅವರ ಪಟ್ಟದ ಹೆಸರೆಂದೂ, ಕೆಲವು ಕಡೆ ಬರುವ ಪಾಂಡ್ಯಪ್ಪರಸ ಬಂಗ, ಲಕ್ಷ್ಮಪ್ಪರಸ ಬಂಗ, ಕಾಮರಾಜ ಬಂಗ, ವಿಟ್ಠಲದೇವಿ, ಶಂಕರದೇವಿ, ದಾವಳಿ ಬಂಗರಾಜ ಇತ್ಯಾದಿ ಹೆಸರುಗಳು ಅವರ ವೈಯುಕ್ತಿಕ ಹೆಸರುಗಳೆಂದು ಹೇಳಬಹುದು. ಈ ಅರಸುಮನೆತನದ ರಾಜರ ಹೆಸರುಗಳು ಬರುವ ಸುಮಾರು ೩೦-೪೦ ಶಾಸನಗಳಿದ್ದು, ಅವು ಇವರ ಮೂಲರಾಜಧಾನಿಯಾಗಿದ್ದ ಇದೇ ಬಂಗಾಡಿಯಿಂದ ಮತ್ತು ಇವರ ಆಳ್ವಿಕೆಯ ಭೂಭಾಗವಾಗಿದ್ದ ಮಂಗಳೂರಿನವರೆಗಿನ ಪ್ರದೇಶದಲ್ಲಿ ಕಂಡುಬರುತ್ತವೆ. ಬೇರೆ ಕಡೆಯ ಕೆಲವು ಶಾಸನಗಳಲ್ಲಿ ಹಾಗೂ ಪ್ರಾಚೀನ ದಾಖಲೆಗಳಲ್ಲಿಯೂ ಇವರ ಉಲ್ಲೇಖಗಳಿವೆ. ಇವರು ಬಂಗಾಡಿ ಮಾತ್ರವಲ್ಲದೆ, ನಂದಾವರ, ಮಂಗಳೂರು, ಬೆಳ್ತಂಗಡಿ, ಪುತ್ತೂರು ಮುಂತಾದ ಕಡೆಗಳಲ್ಲಿಯೂ ತಮ್ಮ ಅರಮನೆಗಳನ್ನು ಕಟ್ಟಿಕೊಂಡು ಆಡಳಿತ ನಡೆಸುತ್ತಿದ್ದರು.

ಪ್ರಸ್ತುತ ತಾಮ್ರಶಾಸನವು ಇವರ ಮೂಲ ಕೇಂದ್ರವಾಗಿದ್ದ ಬಂಗಾಡಿಯ ಶ್ರೀ ಶಾಂತಿನಾಥ ಬಸದಿಯ ಒಳಗಿನ ಮಂಟಪ ಒಂದರಲ್ಲಿ ಮೊಳೆಗಳಿಂದ ಕಂಬವೊಂದಕ್ಕೆ ಜೋಡಿಸಿಟ್ಟಿದ್ದ ಸ್ಥಿತಿಯಲ್ಲಿ ಕಂಡುಬಂದಿತ್ತು. ಇತ್ತೀಚೆಗೆ ಇಲ್ಲಿಯ ಅರಮನೆಯಲ್ಲಿ ವಾಸಿಸುತ್ತಿರುವ ಆ ವಂಶದ ಇಂದಿನ ಸದಸ್ಯರಾದ ಸುಮಾರು ೭೫ ವರ್ಷ ವಯಸ್ಸಿನ ಶ್ರೀ ಬಿ. ರವಿರಾಜ ಬಲ್ಲಾಳ ಎಂಬವರು ತನ್ನ ವಂಶದವರ ಇತಿಹಾಸದ ಕುರಿತು ಪುಸ್ತಕವೊಂದನ್ನು ಬರೆಯಬೇಕೆಂಬ ಯೋಜನೆಯಿಂದ ಈಗಾಗಲೇ ಈ ಅರಸುಮನೆತನದ ಕುರಿತಾಗಿ ಬರೆದಿರುವ ಗ್ರಂಥಗಳ ಹೊರತಾಗಿಯೂ ಇನ್ನಷ್ಟು ಆಕರ ಸಾಮಾಗ್ರಿಯನ್ನು ಹುಡುಕುತ್ತಿದ್ದಾಗ, ಈ ತಾಮ್ರ ಶಾಸನವು ಕಣ್ಣಿಗೆ ಬಿದ್ದಿತ್ತು. ಓದಿ ಕೊಡಬೇಕೆಂದು ನನ್ನನ್ನು ಕೇಳಿಕೊಳ್ಳಲಾಯಿತು. ೫೧ ಸೆಂಟಿಮೀಟರ್ ಉದ್ದ ಹಾಗೂ ಅಗಲವಾಗಿರುವ ಒಂದು ಚೌಕಾಕಾರದ ತಾಮ್ರಪಟದ ಮೇಲೆ, ಮಧ್ಯದ ೨೧ ಸೆಂಟಿಮೀಟರ್ ಉದ್ದ ಹಾಗೂ ಅಗಲವಿರುವ ಚೌಕ ಸ್ಥಳದಲ್ಲಿ ೨೧ ಪಂಕ್ತಿಗಳಲ್ಲಿ ಈ ಶಾಸನವನ್ನು ಬರೆಯಲಾಗಿದೆ. ಇಲ್ಲಿ ಬಳಸಿರುವುದು ಕನ್ನಡ ಭಾಷೆ ಹಾಗೂ ಕನ್ನಡ ಲಿಪಿ. ಪ್ರಾರಂಭ ಹಾಗೂ ಕೊನೆಯಲ್ಲಿ ಸ್ತುತಿ

* ಮುಖ್ಯಸ್ಥರು, ಇತಿಹಾಸ ವಿಭಾಗ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ.

ಶ್ಲೋಕಗಳಾವುವೂ ಇಲ್ಲ. ಸ್ವಸ್ತಿ ಶ್ರೀ ಎಂಬುದು ಮಾತ್ರಾ ಇದೆ. ಶಾಸನದ ಕಾಲ "ಶಾಲಿವಾಹನಶಕ ೧೪೫೭ನೆಯಲ್ಲೂ ಸಂದ ವರ್ತಮಾನ ಮನ್ಮಥ ಸಂವತ್ಸರದಲಿ ಭಾದ್ರಪದ ಮಾಸ ಶುದ್ಧ ೫" ಅಂದರೆ ಕ್ರಿ.ಶ. ೧೫೩೫ನೇ ಇಸವಿ ಸಪ್ಟಂಬರ್ ತಿಂಗಳ ೨ನೇ ತಾರೀಕು. ಅದು ಗುರುವಾರವಾಗಿತ್ತು. ಈ ಶಾಸನದ ಕರ್ತೃ "ಬಂಗವಾಡಿಯ ಸಿಂಹಾಸನದ ವೀರನರಸಿಂಹ ಬಂಗರಾಜವೊಡೆಯರು" ಈ ಮೇಲೆ ಹೇಳಿದ ಕಾಲದಲ್ಲಿ ಬಂಗಾಡಿಯಲ್ಲಿ ಆಳುತ್ತಿದ್ದವನು ಹಾವಳಿ ಬಂಗರಾಯ ಎಂಬವನು. ಈತನಿಗೆ ಬಂಗರ ಇನ್ನೊಂದು ಅರಮನೆಯಿದ್ದ ಬಂಟ್ವಾಳ ತಾಲೂಕಿನ ನಂದಾವರದಲ್ಲಿ ಪಟ್ಟವಾಗಿತ್ತು. ಅಲ್ಲಿದ್ದ ಗಣಪತಿ ದೇವಸ್ಥಾನದ ಸಮೀಪ ಶ್ರೀ ಶಂಕರನಾರಾಯಣ ದೇವಸ್ಥಾನವನ್ನು ಈತ ಕಟ್ಟಿಸಿದ್ದ ಎಂಬುದು ಅನ್ಯ ದಾಖಲೆಗಳಿಂದ ತಿಳಿದುಬರುತ್ತದೆ. ಈ ನಿರ್ಮಾಣದ ಮೂಲಕ ಈ ಬಂಗರಾಜನು ಜೈನ, ಶೈವ, ಗಾಣಪತ್ಯ ಹಾಗೂ ವೈಷ್ಣವ ಸಂಪ್ರದಾಯಗಳಿಗೆ ಸಮಾನ ಗೌರವ ತೋರಿಸುವ ಸಾಮರಸ್ಯದ ನೀತಿಯನ್ನು ತನ್ನ ಪ್ರಜೆಗಳಿಗೆ ಹಾಕಿಕೊಟ್ಟಿದ್ದ. ಶಂಕರ ಮತ್ತು ನಾರಾಯಣರ ಸಂಯುಕ್ತ ರೂಪದ ಆರಾಧನೆಯು ಇಲ್ಲಿ ಜನಪ್ರಿಯವಾಗುತ್ತಿದ್ದುದನ್ನು ಇದು ತಿಳಿಸುತ್ತದೆ.

ಶಾಸನದ ಸಾರಾಂಶವನ್ನು ಹೇಳುವುದಿದ್ದರೆ, ಈ ಶಾಸನದಲ್ಲಿ ಲಿಖಿತವಾಗಿರುವಂತೆ, ಮೇಲೆ ಉಲ್ಲೇಖಿಸಿದ ದಿನದಂದು ಬಂಗವಾಡಿಯ ಸಿಂಹಾಸನದ ವೀರನರಸಿಂಹ ಬಂಗರಾಜ ವೊಡೆಯನು ಸ್ಥಿರ ರಾಜ್ಯವನ್ನು ಆಳುತ್ತಿದ್ದಾಗ, ಇದೇ ಬಂಗಾಡಿಯ ಮುನ್ನತರ ಎಂಬ ಜೈನ ಗುಂಮಟ ದೇವಿ ಸೆಟ್ಟಿಯ ಕುಟುಂಬದ ಗುಂಮಟ ಸೆಟ್ಟಿ, ಚಂದುಸೆಟ್ಟಿ ಮತ್ತು ನೇಮಣ ಸೆಟ್ಟಿಯವರಿಗೆ ಸೇರಿದ ಜಾಗದಿಂದ, ಬಂಗವಾಡಿಯಲ್ಲಿರುವ ಶ್ರೀ ಶಾಂತಿನಾಥ ಚೈತ್ಯಾಲಯದಲ್ಲಿ ಸಿದ್ಧ ಚಕ್ರ ಆರಾಧನೆಗಾಗಿ ಒಟ್ಟು ೬೦ ಮುಡಿ ಭತ್ತವನ್ನು ಕೊಟ್ಟರು. ಬಂಗಾಡಿ ಸಾವಿರ ನಗರದವರನ್ನು ಮುಂದಿಟ್ಟುಕೊಂಡು ಈ ದಾನವನ್ನು ನೀಡಲಾಯಿತು. ಇದಕ್ಕೆ ಸಂಬಂಧಿಸಿ ಅರಸನಿಗೆ ಯಾವುದೇ ಕಂದಾಯವನ್ನು ಕೊಡಲಿಕ್ಕಿಲ್ಲ. ನೇಮಣ ಸೆಟ್ಟಿಯ ಅಳಿಯಂದಿರೂ ೬೦ ಮುಡಿ ಭತ್ತವನ್ನು ಈ ಆರಾಧನೆಗಾಗಿ ಕೊಡಬೇಕು. ಇದಕ್ಕೆ ಅರಸನ ಯಾವುದೇ ತೊಂದರೆ ತೊಡಕುಗಳಿಲ್ಲ. ಕೊಂಡೆ ಬೋಳು ಸಾಮಿ ಎಂಬವನೂ ೨೦ ಮುಡಿ ಭತ್ತವನ್ನು ಇದಕ್ಕೆ ಕೊಡಬೇಕು. ಅಂತೂ ಶಾಶ್ವತವಾಗಿ ಈ ಆರಾಧನೆಯನ್ನು ನಡೆಸುತ್ತಿರಬೇಕು.

**ಶಾಸನದ ಪೂರ್ಣ ಪಾಠ**

೧ ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೪೫೭ನೆಯ
೨ ಲೂ ಸಂದ ವರ್ತಮಾನ ಮನ್ಮಥ ಸಂವತ್ಸರದಲಿ ಭಾದ್ರಪದ ಮಾಸ ಶು
೩ ದ್ಧ ೫ಲೂ ಬಂಗವಾಡಿಯ ಸಿಂಹಾಸನದ ವೀರ ನರಸಿಂಹ ಬಂಗ
೪ ರಾಜ ವೊಡೆಯರು ಸ್ಥಿರ ರಾಜ್ಯಂ ಗೆಯ್ವ ಕಾಲದಲ್ಲಿ ಬಂಗವಾಡಿಯ



೫ ಲಿ ಮುನ್ನತರ ಬಳಿಯ ಗುಂಮಟ ದೇವಿ ಸೆಟ್ಟಿಯರ ಕುಟುಂಬದಲ್ಲಿ
೬ ಗುಂಮಟ ಸೆಟ್ಟಿ, ಚಂದು ಸೆಟ್ಟಿ, ನೇಮಣ ಸೆಟ್ಟಿಯರಿಗೆ ವೊಪ್ಪಿದ ಸಿರ್ವ
೭ ಯಂ ಬಾಳಿನಲ್ಲಿ ನೇಮಣ ಸೆಟ್ಟಿಯ ಬಾಗೆಯಿಂದ ಬರುವ ಭತ್ತ ಬ
೮ ಳ್ಳ ೩೦ ಲೆಕ್ಕದ ಭತ್ತ ಮೂಡೆ ೬೦ನೂ ನೇಮಣ ಸೆಟ್ಟಿ ಮಾಡಿದ ಧರ್ಮ ಬ
೯ ಂಗ ವಾಡಿಯು ಹಲರ ಬಸ್ತಿಯು ಶಾಂತೀಶ್ವರನ ಚೈತ್ಯಾಲಯ
೧೦ ದಲ್ಲಿ ತಂನ ಕುಟುಂಬದವರ ಉಭಯದಲ್ಲಿ ಸಾವಿರ ನಗರದ
೧೧ ಮುಂದಿಟ್ಟು ಸಿದ್ಧಚಕ್ರ ಆರಾಧನೆಗೆ ಆಚಂದಾರ್ಕ್ಕ ಸ್ಥಾಯಿ
೧೨ ಯಾಗಿ ನಡಸೂದಕ್ಕೆ ಧಾರೆಯನೆರೆದು ಯಂತ್ರಶಾಸನ ಪೂ
೧೩ ರ್ವ್ವಕವಾಗಿ ಮಾಡಿದ ಧರ್ಮ ಯೀ ಭೂಮಿಯ ಬಾಗೆಗೆ ಅರಸಿನ ಸಿ
೧೪ ದ್ಧಾಯ ಕಾಣಿಕೆ ವೊಸಗೆ ಯೆಲ್ಲವನೂ ಗುಂಮಟ ಸೆಟ್ಟಿ ಚಂದು
೧೫ ಸೆಟ್ಟಿಯವರು ಕೊಡುವರು ಯಿ ಬಾಗೆಯ ಗೆಯ್ವ ಗೇಣಿಗಾರರ
೧೬ ಕಯಿಂದ ನೇಮಣ ಸೆಟ್ಟಿಯ ಅಳಿಯಂದಿರು ಭತ್ತಮೂ
೧೭ ಡೆ ೬೦ನೂ ಆಗಸಿಕೊಟ್ಟು ಆ ಧರ್ಮವನು ನಡೆಸಿ ಕೊಂಬರು ಆ
೧೮ ಭತ್ತಕ್ಕೆ ವೋಟಿ ತೊಡಕು ಬಂದರೆ ನಗರದವರು ಆ ಭತ್ತವ ತೆಗಸಿಕೊಟ್ಟು
೧೯ ಆ ಧರ್ಮವ ನಡೆಸಿ ಕೊಡುವರು ॥ ಮತ್ತಂ ಕೊಂಡೆ ಬೊಳು ಸಾಮಿಯ
೨೦ ಆವ್ವಾಂದಿಂ ಭತ್ತ ಮೂಡೆ ೨೦ ಅಂತೂ ಭತ್ತ ಮೂಡೆ ೮೦
೨೦ ಆ ಭತ್ತದಿಂದ ಸಿದ್ಧ ಚಕ್ರ ಆರಾಧನೆಯ ನಡಸೂದು॥

ವೇಮಗಲ್‌ಮೂರ್ತಿ*

# ಯಲವಳ್ಳಿಯ ಅಪ್ರಕಟಿತ ಶಾಸನ

ಜಿಲ್ಲಾ ಕೇಂದ್ರವಾದ ಕೋಲಾರ–ಚಿಕ್ಕಬಳ್ಳಾಪುರದ ನಡುವಿನ ರಾಜ್ಯ ಹೆದ್ದಾರಿಯಲ್ಲಿ ಬರುವ ವೇಮಗಲ್ ಗ್ರಾಮವು ಹೋಬಳಿ ಕೇಂದ್ರವಾಗಿದ್ದು, ಈ ಊರಿನ ಪಶ್ಚಿಮಕ್ಕೆ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಹಳೆಯ ದೇಗುಲದ ಹಾಳು ಮಂಟಪವಿದ್ದ ಕುರುಹುಗಳು ಇಂದಿಗೂ ಕಂಡುಬರುತ್ತವೆ. ಸ್ಥಳೀಯರು ಈ ಗುಡಿಯನ್ನು 'ತಿರುಮಲರಾಯಗುಡಿ' ಎಂದು ಕರೆಯುತ್ತಾರೆ. ಈಗ ಇಲ್ಲಿ ನೂತನ ದೇಗುಲವನ್ನು ಕಟ್ಟಿ ವೆಂಕಟರಮಣಸ್ವಾಮಿಯ' ವಿಗ್ರಹವನ್ನು ಪ್ರತಿಷ್ಠಾಪಿಸಲು ಪ್ರಯತ್ನಗಳು ನಡೆಯುತ್ತಿದೆ.

ಈ ಗುಡಿ ಇರುವ ಪ್ರದೇಶವನ್ನು 'ಯಲವಳ್ಳಿ' ಎಂದು ಕರೆದರೂ ಇಂದು ಇದು ಬೇಚಾರಕ್ ಹಳ್ಳಿಯಾಗಿದೆ. ಈ ಗುಡಿ ಇರುವ ಸುತ್ತಮುತ್ತ ಪ್ರದೇಶವನ್ನು 'ಧರ್ಮಶೆಟ್ಟಿ' ಬೀಡು ಎನ್ನುತ್ತಾರೆ. ದೇಗುಲದ ಮುಂದೆ ಸುಮಾರು ೧೫' ಎತ್ತರದ ಗರುಡಗಂಬ ಇದ್ದು, ಇದರ ಮೇಲೆ ಪೂರ್ವಕ್ಕೆ ಲಿಂಗ ಮತ್ತು ಚಕ್ರವನ್ನು, ಪಶ್ಚಿಮಕ್ಕೆ ಶಂಖ, ಉತ್ತರಕ್ಕೆ ಹೂವನ್ನು, ದಕ್ಷಿಣಕ್ಕೆ ಆಂಜನೇಯ ಮೂರ್ತಿಯನ್ನು ಬಿಡಿಸಿದ್ದಾರೆ. ಈ ಗರುಡಗಂಬದ ಪಕ್ಕದಲ್ಲಿ ಮತ್ತೊಂದು ಕಂಬವಿದ್ದು ಇದು ಸುಮಾರು ೭ ೧/೨' ಎತ್ತರವಿದೆ. ಇದರಲ್ಲಿಯೂ ಸಹ ಪೂರ್ವಕ್ಕೆ ಶಂಖ, ಪಶ್ಚಿಮಕ್ಕೆ ಚಕ್ರ, ಉತ್ತರಕ್ಕೆ ಆಂಜನೇಯ ಹಾಗೂ ದಕ್ಷಿಣಕ್ಕೆ ಗರುಡಪಕ್ಷಿಯ ಚಿತ್ರವನ್ನು ಬಿಡಿಸಿದೆ.


ಈಗಿನ ದೇಗುಲದ ಮಂಟಪ


ಹಳೇ ದೇಗುಲದ ಮಂಟಪ

ದೇಗುಲದ ಪೂರ್ವಕ್ಕೆ ಹುಟ್ಟುಬಂಡೆಯೊಂದಿದ್ದು ಇದು ಪೂರ್ವ ಪಶ್ಚಿಮ x ಸುಮಾರು ೧೬' ಉದ್ದ, ಉತ್ತರ x ದಕ್ಷಿಣ ಸುಮಾರು ೧೦' ಅಗಲ ಹಾಗೂ ಭೂಮಟ್ಟದಿಂದ ಸುಮಾರು ೧ ೧/೨' ಎತ್ತರವಿದೆ. ಬಂಡೆಯ ಉತ್ತರಾಭಿ ಮುಖಕ್ಕೆ ಅಪ್ರಕಟಿತ ಶಾಸನವೊಂದಿದೆ. ಭಾಷೆ ಕನ್ನಡ, ಲಿಪಿಯೂ ಕನ್ನಡ. ಲಿಪಿಯ ಆಧಾರದ ಮೇಲೆ ಶಾಸನವು ವಿಜಯನಗರದ ಕಾಲಕ್ಕೆ ಸಂಬಂಧಪಟ್ಟಿದ್ದಾಗಿದೆ ಎಂದು ತಿಳಿಯುತ್ತದೆ.

*# ೧೭೨, ೭ನೇ ಮೈನ್, ೨ನೇ ಅಡ್ಡರಸ್ತೆ, ಶ್ರೀನಿವಾಸನಗರ, ಬೆಂಗಳೂರು.



ಶಾಸನವಿರುವ ಬಂಡೆ

ಶಾಸನ ಇರುವ ತೋಟದ ಜಮೀನು ವೇಮಗಲ್ಲಿನ ಶ್ರೀಮಾನ್ ಯರ್ರಪ್ಪ ಮತ್ತು ಅವರ ಮಕ್ಕಳಾದ ಶಂಕರಪ್ಪ ಎಂಬುವವರಿಗೆ ಸೇರಿದ್ದಾಗಿದೆ. ಶಾಸನದ ಅಕ್ಷರಗಳು ದಪ್ಪಗೆ ಕೊರೆದಿದ್ದರೂ ಅಲ್ಲಲ್ಲಿ ಅಸ್ಪಷ್ಟವಾಗಿದೆ. ಹಾಗೂ ಕೆಲವು ಕಡೆ ಸವೆದಿದೆ. ಚಕ್ಕೆ ಎದ್ದು ಹೋಗಿದೆ. ಐದು ಸಾಲುಗಳ ಶಾಸನ ಇದಾಗಿದೆ.

**ಶಾಸನದ ಪಾಠ**

೧ ——— ಮರವ ಬೈರವ . . . . ಯಲವನಹಳ್ಳಿ

೨ ಯ ತೋಟದ ತಿಂಮಂಗೆ ಭವ (ನವ) ಮಾಡಿದ (ಸ)ಂಮ

೩ ದ ಭುವನ . . . ಯಲ್ಲಮ ಬೈರವಯ್ಯನ ಹಳ್ಳಿಯ ಬೈಚನ ಸರ್ವರಿಗು ಕೈಮುಗುದು

೪ ಬೈರಮನಿಗೆ ೧ ಭಾಗ ಬಸವಯ್ಯಂಗೆ ೧ ಭಾಗ ಯಿಬ್ಬರಿಗು ಯೆರಡು ಭಾಗ

೫ . . . . . . . ಕೈಗಳು ಮುಗುದನು ಯಿದ ಬರದವ ತಿಂಮಂಣನು

ಶಾಸನದ ಅಳಿದುಳಿದ ಪಾಠದಿಂದ ಒಟ್ಟು ಅರ್ಥವನ್ನು ಹೀಗೆ ಅರ್ಥೈಸಬಹುದಾಗಿದೆ.

[ಪುರವ] ಮರವ ಭೈರವ ಯಲವಹಳ್ಳಿಯ ತೋಟದ ತಿಂಮಂಗೆ ಗುಡಿಯನ್ನು ಕಟ್ಟಿಸಿ, ಯಲ್ಲಮ, ಬೈರವಯ್ಯನ ಹಳ್ಳಿಯ ಬೈಚನು, ಸರ್ವರಿಗೂ ಕೈಮುಗಿದು, ಬೈರವನಿಗೆ ೧ ಭಾಗ, ಬಸವಯ್ಯರಿಗೆ ೧ ಭಾಗ ಹೀಗೆ ಇಬ್ಬರಿಗೂ ಯೆರಡು (೨) ಭಾಗ ಕೈಮುಗಿದು [ಪ್ರೀತಿಯಿಂದ] ಭೂದಾನವನ್ನು ಮಾಡಿದನು. ಇದನ್ನು ಬರೆದವ ತಿಂಮಂಣನು ಎಂದು ಅರ್ಥೈಸಬಹುದಾಗಿದೆ.

(ನನ್ನ ಈ ಮೇಲಿನ ಕ್ಷೇತ್ರ ಕಾರ್ಯದಲ್ಲಿ ನೆರವಾದ ಜಮೀನಿನ ಒಡೆಯರಾದ ಶಂಕರಪ್ಪ, ಸಂಜಯ್‌ಕುಮಾರ್, ಪ್ರಭಾಕರ ಹಾಗೂ ನನ್ನ ತಮ್ಮ ವಿ.ಎಸ್. ನಟರಾಜರವರಿಗೆ, ಶಾಸನ ಪಾಠವನ್ನು ಓದಲು ನೆರವಾದ ಆತ್ಮೀಯರಾದ ಸಂಕಂ ಗೋವರ್ಧನ್ ಹಾಗೂ ಎಸ್. ಗಂಗಾಂಬಿಕೆ ಯವರಿಗೂ ವಂದನೆಗಳು.)

ಎಸ್. ಕಾರ್ತಿಕ್*

# ಶಾಸನ ಸಂಪಾದನೆಯಲ್ಲಿ ಚಿಹ್ನೆಗಳ ಬಳಕೆ : ಸಮಸ್ಯೆಗಳು ಮತ್ತು ಪರಿಹಾರಗಳು

ಕರ್ನಾಟಕದ ಶಾಸನ ಸಂಪತ್ತು ಅತ್ಯಂತ ವಿಪುಲವಾದುದು. ಈ ಶಾಸನ ಸಂಪತ್ತು ಅನೇಕ ವಿದ್ವಾಂಸರ ಪರಿಶ್ರಮದ ಫಲವಾಗಿ ನಮಗೆ ಲಭ್ಯವಾಗಿದೆ. ಆದರೆ ಶಾಸನಗಳ ಸಂಪಾದನೆಯಲ್ಲಿ ಒಂದು ಕ್ರಮಬದ್ಧವಾದ ಏಕರೂಪತೆ ಕಂಡು ಬರುವುದಿಲ್ಲ. ಶಾಸನ ಸಂಪಾದನೆಯಲ್ಲಿ ಬಳಸುವ ಚಿಹ್ನೆಗಳ ಬಗೆಗೆ ಈವರೆಗೂ ಯಾವುದೇ ರೀತಿಯ ಬರಹ ಪ್ರಕಟವಾಗಿಲ್ಲ. ಎಂ.ಎಂ. ಕಲಬುರ್ಗಿ ಮುಂತಾದ ಕೆಲವರು ಮಾತ್ರ ಪ್ರಾಸಂಗಿಕವಾಗಿ ಇದರ ಬಗೆಗೆ ಪ್ರಸ್ತಾಪಿಸಿರುತ್ತಾರೆ. ಭಾರತ ಸರ್ಕಾರದ ಶಾಸನ ಇಲಾಖೆಯಲ್ಲಿ ಪ್ರಧಾನ ಶಾಸನತಜ್ಞರಾಗಿ ಕಾರ್ಯನಿರ್ವಹಿಸಿ ಈಗ ನಿವೃತ್ತರಾಗಿರುವ ಹಿರಿಯ ಶಾಸನ ತಜ್ಞರೊಬ್ಬರು ಇಡೀ ಭಾರತದಲ್ಲೇ ಈ ವಿಷಯದ ಬಗೆಗೆ ಬರಹ ಈವರೆಗೂ ಪ್ರಕಟವಾಗಿಲ್ಲವೆಂದು ತಿಳಿಸಿದ್ದಾರೆ. ಆದ ಕಾರಣ ಪ್ರಕೃತ ಲೇಖನವೇ ಈ ವಿಷಯದ ಬಗೆಗಿನ ಪ್ರಥಮ ಪ್ರಯತ್ನವಾಗಿದೆ ಎಂದು ನಮಗೆ ತೋರುತ್ತದೆ. ಈಗ ಇದರ ಬಗೆಗೆ ಹೆಚ್ಚಿನ ವಿಮರ್ಶೆ ನಡೆಯ ಬೇಕಿದೆ. ಶಾಸನ ಸಂಪಾದನೆಯ ಬಗೆಗೆ ಗ್ರಂಥವೊಂದು ಪ್ರಕಟವಾಗಬೇಕಾದ ಅಗತ್ಯವಿದೆ ಮತ್ತು ಶಾಸನ ಸಂಪಾದನೆ ಯನ್ನು ಬೋಧನೆಯ ವಿಷಯವಾಗಿ ವ್ಯಾಸಂಗದಲ್ಲಿ ಇಡ ಬೇಕಾದ ಅಗತ್ಯವಿದೆ. ಈಗ ಮೊದಲು ಶಾಸನ ಸಂಪಾದನೆ ಯಲ್ಲಿ ಸಾಮಾನ್ಯವಾಗಿ ಬಳಸುವ ಚಿಹ್ನೆಗಳನ್ನು ಮೊದಲು ಪರಿಚಯಿಸಿಕೊಂಡು ನಂತರ ಅವುಗಳ ಬಗೆಗೆ ವಿಶ್ಲೇಷಣೆಗೆ ತೊಡಗಬಹುದಾಗಿದೆ.

**ಕ)** [ ] ಊಹಾಪಾಠ

**ಖ)** [ * ] ಊಹಾಪಾಠ. ಅಕ್ಷರ ಸ್ಪಷ್ಟವಾಗಿ ಇಲ್ಲದೇ ಹೋದರೂ ಬಳಸಲಾಗುತ್ತದೆ ಮತ್ತು ಸಂಪಾದಕರು ಸಂದೇಹವಾಗಿ ಸೂಚಿಸುವ ಪಾಠ.

**ಗ)** . . . ಸಂಪೂರ್ಣ ತ್ರುಟಿತ ಮತ್ತು ೧೦ ಅಕ್ಷರಗಳಿಗಿಂತ ಹೆಚ್ಚಾಗಿ ಶಾಸನ ಪಾಠ ತ್ರುಟಿತವಾಗಿದ್ದರೆ ಈ ರೀತಿ ಚುಕ್ಕೆಗಳನ್ನಿಡುತ್ತಾರೆ.

**ಘ)** X X ಈ ಚಿಹ್ನೆಯನ್ನು ಶಾಸನ ಪಾಠ ತ್ರುಟಿತವಾಗಿದ್ದರೆ ಬಳಸುತ್ತಾರೆ ಮತ್ತು ಒಂದು ಸಾಲಿನಲ್ಲಿ ಇಷ್ಟೇ ಅಕ್ಷರಗಳು ತ್ರುಟಿತವಾಗಿವೆ ಎಂಬ ಅಂದಾಜಿದ್ದರೆ ಮಾತ್ರ ಅಷ್ಟೇ ಅಕ್ಷರಗಳ ಜಾಗದಲ್ಲಿ ಈ ಚಿಹ್ನೆಯನ್ನು ಬಳಸುತ್ತಾರೆ.

**ಚ)** ( ) ಮೂಲಪಾಠದಲ್ಲಿ ಯಾವುದಾದರೂ ಅಕ್ಷರಗಳು ತಪ್ಪಾಗಿದ್ದರೆ ಮೂಲಪಾಠದ ಪಕ್ಕದಲ್ಲಿಯೇ ದುಂಡುಕಂಸದಲ್ಲಿ ಸರಿಯಾದ ಅಕ್ಷರಗಳನ್ನು ನೀಡುತ್ತಾರೆ. ಉದಾ:– ರುಧಿರಂ (ರೋ)ದ್ಗಾರಿ. ಮತ್ತು ಅಧಿಕಪಾಠದ ಸೂಚನೆಗೂ ಬಳಸಲಾಗುತ್ತದೆ. ಉದಾ:–ಮಾರ್ಗಶಿ(ಶಿ)ರ.

**ಛ)** [॥*॥] ಶಾಸನಗಳಲ್ಲಿ ಪದ್ಯಗಳ ೪ ಪಾದಗಳೂ ಪೂರ್ಣವಾದ ಮೇಲೆ ಯಾವುದೇ ರೀತಿಯ ಗೆರೆಯನ್ನು ಸಾಮಾನ್ಯವಾಗಿ ಹಾಕಿರುವುದಿಲ್ಲ. ಅಂತಹ ಎಡೆಗಳಲ್ಲಿ ಬಳಸುವ ಚಿಹ್ನೆ.

[ ।*] ಪದ್ಯದ ಮೊದಲ ಪಾದ ಮುಗಿದ ನಂತರ ಬಳಸುವ ಚಿಹ್ನೆ.

[ ] ಮೂಲಪಾಠದಲ್ಲಿ ಯಾವುದಾದರೂ ಅಕ್ಷರಗಳು ತಪ್ಪಾಗಿದ್ದರೆ ಮೂಲಪಾಠದ ಪಕ್ಕದಲ್ಲಿಯೇ ಚೌಕಕಂಸದಲ್ಲಿ ಸರಿಯಾದ ಅಕ್ಷರಗಳನ್ನು ನೀಡುತ್ತಾರೆ. ಉದಾ:– ನೆಗಳ್ದ [ಟ್ದಿ] (ಕೆ.ಜಿ.ಕುಂದಣಗಾರ)

**ಜ)** ಶಾಸನಗಳಲ್ಲಿ ಸಾಧಾರಣವಾಗಿ ಛಂದಸ್ಸನ್ನು ಹೇಳಿರುತ್ತದೆ. ಆ ವಿವರಗಳಲ್ಲಿ ಏನಾದರೂ ತಪ್ಪಿದ್ದರೆ ಅಥವಾ ಶಾಸನಗಳಲ್ಲಿ ಛಂದಸ್ಸಿನ ಬಗ್ಗೆ ಯಾವುದೇ ವಿವರ ಇಲ್ಲದೇ ಹೋದರೆ ಆಯಾ ವಿವರಗಳನ್ನು ಅಡಿಟಿಪ್ಪಣಿಯಲ್ಲಿ ಸೂಚಿಸಲಾಗುತ್ತದೆ. ಉದಾಹರಣೆಗೆ ಎಪಿಗ್ರಾಫಿಯಾ ಕರ್ನಾಟಿಕಾದ ಪರಿಷ್ಕೃತ ಶಾಸನ ಸಂಪುಟಗಳನ್ನು (ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ) ಗಮನಿಸಬಹುದು.

**ಝ)** ಛಂದೋವೃತ್ತಗಳ ಪಾದಗಳಲ್ಲಿ ಅಕ್ಷರಗಳು ತ್ರುಟಿತವಾಗಿದ್ದರೆ ಗಣ ವಿಭಾಗಕ್ರಮ ಮತ್ತು ಛಂದಸ್ಸಿನ ಆಧಾರದ ಮೇಲೆ ತ್ರುಟಿತ ಭಾಗದಲ್ಲಿ ಲಘು ಗುರು ಚಿಹ್ನೆಗಳನ್ನು ಬಳಸುತ್ತಾರೆ. ಉದಾಹರಣೆಗೆ :

* # ೪೧೩, 'ಡಿ' ಗ್ರೂಫ್ ಎಂಪ್ಲಾಯೀಸ್ ಲೇಔಟ್, ೧ನೆಯ ಹಂತ, ೬ನೆಯ ಮುಖ್ಯರಸ್ತೆ, ಹೇರೋಹಳ್ಳಿ, ಬೆಂಗಳೂರು.

ಸ ಕುನ್ತಲಾವನ್ತಿಕಲಿಙ್ಗಕೋಸಲ

**ತ್ರಿಕೂಟಲಾಟಾನ್ಧ್ರ ∪ – ∪ ಜಾನಿಮಾನ್**

∪ – ∪ – – ∪ ∪ **ಶೌರ್ಯವಿಶ್ರುತಾ**

ನಪಿ ಸ್ವನಿರ್ದೇಶ ಗುಣಾತಿ – ∪ – ॥

*[ಇದು ೧೨ ಅಕ್ಷರಗಳ ಜತಜರ ವಿನ್ಯಾಸದ ವಂಶಸ್ಥ ವೃತ್ತ. ಇದನ್ನು ಪ್ರಕೃತ ಲೇಖಕನು ಪಾದಗಳಾಗಿ ವಿಂಗಡಿಸಿ ಬರೆದಿದ್ದಾನೆ. ಇದನ್ನು ಎನ್. ಲಕ್ಷ್ಮೀನಾರಾಯಣರಾಯರ* ***'ಅಜಂಟಾದ ೧೬ ನೆಯ ಗುಹೆಯಲ್ಲಿರುವ ವಾಕಾಟಕ ಹರಿಷೇಣನ ಶಾಸನ'*** *(Epigraphical Studies, Directorate of Archaeology and Museums, Mysore-1997, ಪುಟ. ೩೬೨) ಎಂಬ ಬರಹದಿಂದ ಉದಾಹರಿಸಿದೆ. ಕನ್ನಡ ಶಾಸನಗಳ ಸಂಪಾದನೆಯಲ್ಲಿ ಈ ವಿಧಾನವನ್ನು ಬಳಸಿರುವುದು ತುಂಬಾ ಕಡಿಮೆ. ನಮ್ಮ ಗಮನಕ್ಕೆ ಬಂದಂತೆ ಎಂ. ಎಂ. ಕಲಬುರ್ಗಿಯವರ ಧಾರವಾಡ ತಾಲ್ಲೂಕಿನ ಶಾಸನಗಳು ಕೃತಿಯಲ್ಲಿ ಈ ವಿಧಾನ ಬಳಕೆಯಾಗಿದೆ. ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳಲ್ಲಿ ಇದನ್ನು ಸಾಮಾನ್ಯವಾಗಿ ಬಳಸಲಾಗಿದೆ].*

ಟ) _________ ಕೆಲವು ಶಾಸನ ಸಂಪುಟಗಳಲ್ಲಿ ಪ್ರತಿಯೊಂದು ಶಾಸನಗಳಲ್ಲಿನ ಕಾಲವನ್ನು ಸೂಚಿಸಿರುವ ಭಾಗ, ರಾಜನ ಹೆಸರು ಬರುವ ಸ್ಥಳ ಇನ್ನೂ ಮುಂತಾದ ಪ್ರಮುಖ ಗಮನಾರ್ಹ ಭಾಗಗಳ ಕೆಳಗೆ ಈ ರೀತಿಯಾಗಿ ದಪ್ಪ ಗೆರೆ ಎಳೆದು ಸೂಚಿಸಲಾಗಿರುತ್ತದೆ. ಇದು ಸಾಮಾನ್ಯವಾಗಿ ಪಿ.ಬಿ. ದೇಸಾಯಿಯವರು ಸಂಪಾದಿಸಿರುವ ಶಾಸನಗಳು ಮತ್ತು ಶಾಸನ ಸಂಪುಟಗಳಲ್ಲಿ ಕಂಡುಬರುತ್ತದೆ.

ಠ) * ಸಂಪೂರ್ಣ ತ್ರುಟಿತವಾಗಿರುವ ಕಡೆ ಈ ಚಿಹ್ನೆಯನ್ನು ಬಳಸಲಾಗಿದೆ. ಉದಾಹರಣೆಗೆ ಪಿ.ಎನ್. ನರಸಿಂಹಮೂರ್ತಿಯವರಿಂದ ಸಂಪಾದಿತವಾಗಿರುವ ಕುಂದನಾಡಿನ ಶಾಸನಗಳು *{ಸ್ವಾಗತ ಸಮಿತಿ, ಅಖಿಲ ಭಾರತ ೭೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಉಡುಪಿ-೨೦೦೭}* ಸಂಪುಟವನ್ನು ನೋಡಬಹುದು.

ಡ) (?) ಶಾಸನ ಪಾಠದಲ್ಲಿ ಅರ್ಥೈಸಲು ಸಾಧ್ಯವಿಲ್ಲದ ಭಾಗಕ್ಕೆ ಪ್ರಶ್ನಾರ್ಥಕ ಚಿಹ್ನೆ ಹಾಕಲಾಗುತ್ತದೆ.

ಢ) [X] ತ್ರುಟಿತವಾಗಿರುವ ಭಾಗವನ್ನು ಸೂಚಿಸಲು ಬಳಸಿರುವ ಚಿಹ್ನೆ *{ನೋಡಿ: ಎಚ್.ಎಸ್.ಗೋಪಾಲರಾವ್, ಶಾಸನ ಸಂಕಲನ, ಅಳಿಲು ಸೇವಾ ಸಂಸ್ಥೆ, ಬೆಂಗಳೂರು-೨೦೦೧, ಪುಟ ೨೧}*

ಣ) (. . .) ತ್ರುಟಿತವಾಗಿರುವ ಭಾಗವನ್ನು ಸೂಚಿಸಲು ಬಳಸಿರುವ ಚಿಹ್ನೆ *{ನೋಡಿ: ಎಚ್.ಎಸ್. ಗೋಪಾಲರಾವ್, ಶಾಸನ ಸಂಕಲನ, ಅಳಿಲು ಸೇವಾ ಸಂಸ್ಥೆ, ಬೆಂಗಳೂರು-೨೦೦೧, ಪುಟ ೩೩}*

ಮೇಲೆ ನೀಡಿರುವುದು ಸಾಮಾನ್ಯವಾಗಿ ಇಂದು ಬಳಸಲಾಗುತ್ತಿರುವ ಚಿಹ್ನೆಗಳು. ಇವು ಪ್ರಮುಖ ಶಾಸನ ಸಂಪುಟಗಳು. ಎಪಿಗ್ರಾಫಿಯ ಇಂಡಿಕಾ ಮತ್ತು ಬೇರೆಡೆ ಪ್ರಕಟವಾಗಿರುವ [=ಪತ್ರಿಕೆಗಳು, ಅಭಿನಂದನ ಗ್ರಂಥಗಳು ಮುಂತಾದವುಗಳಲ್ಲಿ] ಶಾಸನಗಳು, ವೈಯಕ್ತಿಕ ಪ್ರಕಟನೆಗಳು ಮುಂತಾದವುಗಳಲ್ಲಿ ವ್ಯಾಪಕವಾಗಿ ಬಳಕೆಯಾಗಿವೆ. ಇವುಗಳಲ್ಲಿ ಕೆಲವು ಚಿಹ್ನೆಗಳ ಬಳಕೆ ಸಮರ್ಥನೀಯವಾಗಿದೆ. ಅವುಗಳ ಬಳಕೆಯಲ್ಲಿ ಯಾವುದೇ ಗೊಂದಲಗಳೂ ಇಲ್ಲ. ಆದ ಕಾರಣ ಯಾವ ಚಿಹ್ನೆಗಳ ಬಳಕೆಯಲ್ಲಿ ಗೊಂದಲಗಳಿವೆಯೋ ಅವುಗಳನ್ನು ಮುಂದೆ ವಿಶ್ಲೇಷಿಸಲಾಗಿದೆ. ಈ ಚಿಹ್ನೆಗಳನ್ನು ಹಲವು ಪ್ರಮುಖ ಶಾಸನ ಸಂಪುಟಗಳಲ್ಲಿ ಯಾವ ರೀತಿಯಾಗಿ ಬಳಸಲಾಗಿದೆ ಎಂಬುದನ್ನು ಕೆಳಗೆ ನೀಡಲಾಗಿದೆ.

***ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ -೧೧,***

[।*] ಸ್ವಸ್ತಿ ಎಂಬುದು ಮುಗಿದ ನಂತರ ಹಾಕುವುದು

[॥] ಶ್ಲೋಕ ಮತ್ತು ಪದ್ಯದ ಪಾದಗಳು ಮುಗಿದ ಕೂಡಲೆ ಹಾಕುವ ಚಿಹ್ನೆ

***ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ -೧೫***

[ಃ॥] ಶ್ಲೋಕ ಮುಗಿದ ಕೂಡಲೆ ಹಾಕುವ ಚಿಹ್ನೆ

॥ ಶ್ಲೋಕ ಮತ್ತು ಪದ್ಯದ ಪಾದಗಳು ಮುಗಿದ ಕೂಡಲೆ ಹಾಕುವ ಚಿಹ್ನೆ

[ಪದ್ಯ]– ಶಾಸನಪಾಠದಲ್ಲೇ ಪದ್ಯವೆಂದು ಇದ್ದರೆ ಸೂಚಿಸುವ ರೀತಿ

( ) ಅಕ್ಷರ ತಿದ್ದುಪಡಿ

[ಃ*] ॥ ಶ್ಲೋಕ ಮುಗಿದ ಕೂಡಲೆ ಹಾಕುವ ಚಿಹ್ನೆ

***ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ -೧೬***

[ ] ಊಹಾಪಾಠ

[*] ಅಕ್ಷರ ಸ್ಪಷ್ಟವಾಗಿ ಇಲ್ಲದೇ ಹೋದರೆ ಬಳಸಲಾಗುತ್ತದೆ

( ) ಅಧಿಕ ಪಾಠ

. . . ಸಂಪೂರ್ಣ ತ್ರುಟಿತ ಮತ್ತು ೧೦ ಅಕ್ಷರಗಳಿಗಿಂತ ಹೆಚ್ಚಾಗಿ ಶಾಸನ ಪಾಠ ತ್ರುಟಿತವಾಗಿದ್ದರೆ ಈ ರೀತಿ ಚುಕ್ಕೆಗಳನ್ನಿಡುತ್ತಾರೆ.

[॥*] ಶಾಸನ ಲಿಖಿತ ಪೂರ್ಣವಾದ ನಂತರ ಹಾಕುವ ಚಿಹ್ನೆ. ಶಾಸನದ ಆರಂಭದಲ್ಲಿ ಶುಭಮಸ್ತು, ಅಥವಾ ಶ್ಲೋಕ ಮುಗಿದ ಕೂಡಲೆ ಹಾಕುವ ಚಿಹ್ನೆ

[।*] ಪದ್ಯದ ಪಾದ ಮತ್ತು ಶ್ಲೋಕ ಮುಗಿದ ನಂತರ ಬಳಸುವ ಚಿಹ್ನೆ.

॥ ಶಾಸನ ಲಿಖಿತ ಪೂರ್ಣವಾದ ನಂತರ ಹಾಕುವ ಚಿಹ್ನೆ

***ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ)***

[ ] ಅಕ್ಷರ ಸ್ಪಷ್ಟವಾಗಿ ಇಲ್ಲದೇ ಹೋದರೆ ಬಳಸಲಾಗಿದೆ ಮತ್ತು ಸಂಪಾದಕರು ಸಂದೇಹವಾಗಿ ಸೂಚಿಸಿರುವ ಪಾಠ ಹಾಗೂ ಊಹಾಪಾಠ

[*] ಊಹಾಪಾಠ.

. . . ಸಂಪೂರ್ಣ ತ್ರುಟಿತ ಮತ್ತು ೧೦ ಅಕ್ಷರಗಳಿಗಿಂತ ಹೆಚ್ಚಾಗಿ ಶಾಸನ ಪಾಠ ತ್ರುಟಿತವಾಗಿದ್ದರೆ ಈ ರೀತಿ ಚುಕ್ಕೆಗಳನ್ನು ಇಡಲಾಗಿದೆ.

( ) ಮೂಲಪಾಠದಲ್ಲಿ ಯಾವುದಾದರೂ ಅಕ್ಷರಗಳು ತಪ್ಪಾಗಿದ್ದರೆ ಮೂಲಪಾಠದ ಪಕ್ಕದಲ್ಲಿಯೇ ದುಂಡುಕಂಸದಲ್ಲಿ ಸರಿಯಾದ ಅಕ್ಷರಗಳನ್ನು ನೀಡಲಾಗಿದೆ. ಉದಾ:– ರುಧಿರಂ (ರೋ)ದ್ಗಾರಿ. ಮತ್ತು ಅಧಿಕಪಾಠದ ಸೂಚನೆಗೂ ಬಳಸಲಾಗಿದೆ. ಉದಾ:–ಮಾರ್ಗಶಿ(ಶಿ)ರ.

[॥*॥] ಶಾಸನಗಳಲ್ಲಿ ಪದ್ಯಗಳ ೪ ಪಾದಗಳೂ ಪೂರ್ಣವಾದ ಮೇಲೆ ಯಾವುದೇ ರೀತಿಯ ಗೆರೆಯನ್ನು ಸಾಮಾನ್ಯವಾಗಿ ಹಾಕಿರುವುದಿಲ್ಲ. ಅಂತಹ ಎಡೆಗಳಲ್ಲಿ ಸಂಪಾದಕರು ಬಳಸಿರುವ ಚಿಹ್ನೆ.

[।*] ಪದ್ಯದ ಮೊದಲ ಪಾದ ಮುಗಿದ ನಂತರ ಸಂಪಾದಕರು ಬಳಸಿರುವ ಚಿಹ್ನೆ.

ಶಾಸನ ಸಂಪಾದನೆಯಲ್ಲಿ ಬಳಸಿರುವ ಚಿಹ್ನೆಗಳನ್ನು ಯಾರೊಬ್ಬರೂ ತಮ್ಮ ಬರಹಗಳಲ್ಲಿ, ಶಾಸನ ಸಂಪುಟಗಳಲ್ಲಿ ಸೂಚಿಸಿಲ್ಲ. ಒಬ್ಬಿಬ್ಬರು ವಿದ್ವಾಂಸರು ಮಾತ್ರ ಇಂತಹ ಸೂಚನೆಗಳನ್ನು ತಮ್ಮ ಬರಹಗಳಲ್ಲಿ ನೀಡಿರುತ್ತಾರೆ. ಈ ಸೂಚನೆಗಳನ್ನು ಮೊದಲು ಗಮನಿಸಬಹುದಾಗಿದೆ.

೧. . ಶಾಸನ ತಜ್ಞರಾದ ಎನ್. ಲಕ್ಷ್ಮೀನಾರಾಯಣ ರಾಯರು 'ಪಂಪನ ಆಶ್ರಯದಾತನಾದ ಅರಿಕೇಸರಿಯ ವಂಶ' ಎಂಬ ಲೇಖನದಲ್ಲಿ ತಾವು ಹೊಸದಾಗಿ ಪರಿಷ್ಕರಿಸಿಕೊಟ್ಟಿರುವ ವೇಮುಲವಾಡ ಶಾಸನದ ಪಾಠದಲ್ಲಿ ತಾವು ಬಳಸಿರುವ ಸಂಪಾದನೆಯ ಚಿಹ್ನೆಗಳನ್ನು ಸೂಚಿಸಿದ್ದಾರೆ. ಅವುಗಳನ್ನು ಕೆಳಗೆ ಲಕ್ಷ್ಮೀನಾರಾಯಣ ರಾಯರ ಬರಹದಲ್ಲಿರುವಂತೆಯೇ ನೀಡಲಾಗಿದೆ (Epigraphical Studies, Directorate of Archaeology and Museums, Mysore-1997, ಪುಟ.೪೧೦)

ಅ. ( ) ಎಂಬ ಆವರಣ ಚಿಹ್ನೆಗಳ ನಡುವೆ ಇರುವ ಅಕ್ಷರಗಳನ್ನು ತಿದ್ದುಪಡಿಯೆಂದು ತಿಳಿಯಬೇಕು.

ಆ. [*] ಎಂಬ ಚಿಹ್ನೆಗಳ ನಡುವೆ ಇರುವ ಅಕ್ಷರಗಳು ಮೂಲದಲ್ಲಿಲ್ಲ.

ಇ. [ ] ಎಂಬ ಚಿಹ್ನೆಗಳ ನಡುವೆ ಇರುವ ಅಕ್ಷರಗಳು ಮೂಲದಲ್ಲಿ ಸಂದೇಹಾಸ್ಪದವಾಗಿವೆ.

೨. ಈಚೆಗೆ ಪ್ರಕಟವಾಗಿರುವ ಕದಂಬರ ಅರೆತಲಗದ್ದೆಯ ಅಪೂರ್ವ ತಾಮ್ರಶಾಸನಗಳ ಭಂಡಾರ *{(ಸಂ) ಎಸ್.ಜಿ. ಸಾಮಕ್, ಜಗದೀಶ, ಎಂ.ವಿ. ರಮೇಶ ಜೋಯಿಸ್, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮}* ಎಂಬ ಶಾಸನ ಸಂಪುಟದಲ್ಲಿ ಶಾಸನ ಸಂಪಾದನೆಯಲ್ಲಿ ಬಳಸಿರುವ ಚಿಹ್ನೆಗಳನ್ನು ಪರಿವಿಡಿಯಲ್ಲಿ ಸೂಚಿಸಿದ್ದಾರೆ. ಆದರೆ ಅವುಗಳನ್ನು ಸರಿಯಾಗಿ ಬಳಸಿರುವುದಿಲ್ಲ. ಅವುಗಳನ್ನು ಕೃತಿಯಲ್ಲಿರುವಂತೆಯೇ ಕೆಳಗೆ ಉದಾಹರಿಸಲಾಗಿದೆ.

ಅ. ನಷ್ಟ ಭಾಗದ ಸೂಚನೆಗಾಗಿ . . . . . . . .
ಆ. ತಿದ್ದುಪಡಿ ಮಾಡಿದ ಪಾಠ ಸೂಚನೆಗಾಗಿ ( )
ಇ. ಮೂಲಸಂದೇಹವಾಗಿರುವ ಪಾಠಕ್ಕೆ [ ]
ಈ. ಮೂಲದಲ್ಲಿ ಇಲ್ಲದ ಪಾಠ ಸೂಚನೆಗಾಗಿ [*]
ಉ. ಬದಲಿ ಅಕ್ಷರ ಸೂಚನೆಗಾಗಿ [/]

ಮೇಲೆ ನೀಡಿರುವ ಚಿಹ್ನೆಗಳಲ್ಲಿ ಅಗತ್ಯವಿರುವವುಗಳನ್ನು ಮಾತ್ರ ಕುರಿತು ಪ್ರಯೋಗಗಳ ಸಹಿತವಾಗಿ ವಿಶ್ಲೇಷಣೆ ನಡೆಸಲಾಗಿದೆ ಹಾಗೂ ಲೇಖನದ ಕೊನೆಯಲ್ಲಿ ಅಂತಿಮವಾಗಿ ಬಳಸಬೇಕಾದ /ಬಳಕೆಗೆ ತರಬೇಕಾದ / ಚಿಹ್ನೆಗಳನ್ನು ವಿವರಗಳೊಂದಿಗೆ ನೀಡಲಾಗಿದೆ.

೧. ಚೌಕ ಕಂಸವನ್ನು [ ] ಸಾಧಾರಣವಾಗಿ ಊಹಾಪಾಠ ನಿಯೋಜನೆಗೆ ಬಳಸುತ್ತಾರೆ ಉದಾಹರಣೆಗಾಗಿ ಒಂದೆರಡು ಪ್ರಯೋಗಗಳನ್ನು ನೋಡಬಹುದು.

ಅ. ವಿಕ್ರಮಾದಿತ್ತಿಯನ್ ಭಾಣಕ[ನ್ದ]ರ್ಪ್ಪನ್ ***{S I I-9, part-1, Inscription no-2, line-5}***

ಆ. ಸಮಸ್ತ[ಭು]ವನಾಶ್ರಯ ***{S I I -9, part-1, Inscription no-83, line-1}***

ಕೆ.ಜಿ. ಕುಂದಣಗಾರರು [ ] ಈ ಕಂಸವನ್ನು ಊಹಾಪಾಠಕ್ಕೂ ತಪ್ಪಾಗಿರುವ ಅಕ್ಷರ ತಿದ್ದುಪಡಿ ಸೂಚಿಸಲೂ ಬಳಸಿದ್ದಾರೆ. ಉದಾಹರಣೆಗೆ

(ಅ). ಊಹಾಪಾಠಕ್ಕೆ ಉದಾಹರಣೆ : ಸ್ಥಾನದೊಳಣು ಬ್ರತವೆಂ[ಬ]ಯ್ದುಜಿಸೊಳಂ ***{Inscriptions in Northern** Karnataka and Kolhapur State - (Ed) K.G. Kundanagar, 1939.page 4, line-11-12}*

(ಆ). ಅಕ್ಷರ ತಿದ್ದುಪಡಿಗೆ ಉದಾಹರಣೆ : ನ್ರಿ [ನೃ] ಸಿಂಹಾವತಾರಂ *{Inscriptions in Northern Karnataka and Kolhapur State - (Ed) K.G. Kundanagar, 1939.page 17, line-5}*

ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕೃತ ಆವೃತ್ತಿಯಲ್ಲಿ ಚೌಕ ಕಂಸವನ್ನು ಅಕ್ಷರ ಸ್ಪಷ್ಟವಾಗಿ ಇಲ್ಲದೇ ಹೋದರೆ ಬಳಸಲಾಗಿದೆ ಮತ್ತು ಸಂಪಾದಕರು ಸಸಂದೇಹವಾಗಿ ಸೂಚಿಸುವ ಪಾಠಕ್ಕೂ ಹಾಗೂ ಊಹಾಪಾಠಕ್ಕೂ ಬಳಸಲಾಗಿದೆ . ಇದಕ್ಕೆ ಉದಾಹರಣೆ ಈ ರೀತಿಯಾಗಿದೆ

ಪಂಚನೇತ್ರಧ್ವಜ ವಿರಾಜಮಾ[ನ] *{ಸಂಪುಟ-೫, ತಿ. ನರಸೀಪುರ-೩೯, ಸಾಲು-೩}*

ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕೃತ ಆವೃತ್ತಿಯಲ್ಲಿ [*] ಈ ಚಿಹ್ನೆಯನ್ನು ಸಂಪೂರ್ಣ ಊಹಾಪಾಠಕ್ಕೆ ಬಳಸಲಾಗಿದೆ. ಉದಾ : ಊರ ಮಲೆವ [ಲಿ*] *{ಸಂಪುಟ-೫, ಮೈಸೂರು-೧೭೫, ಸಾಲು-೩}*

ಮೇಲೆ ನೀಡಿರುವ ಉದಾಹರಣೆಗಳಿಂದ ಚೌಕ ಕಂಸವನ್ನು ಎಷ್ಟುಬಗೆಯಲ್ಲಿ ಬಳಸಲಾಗಿದೆ, ಇದರಿಂದ ಹಲವು ಗೊಂದಲಗಳು ಉಂಟಾಗಿವೆ ಎಂಬುದು ಗಮನಕ್ಕೆ ಬರುತ್ತದೆ. ಇದನ್ನು ಶಾಸನ ಸಂಪಾದಕರು ಏಕರೀತಿಯಾಗಿ ಬಳಸಿದರೆ ಮಾತ್ರ ಗೊಂದಲ ಪರಿಹಾರ ಸಾಧ್ಯ. ಏಕರೂಪವಾಗಿ ಯಾವ ರೀತಿ ಬಳಸಬಹುದೆಂದು ಪ್ರಕೃತ ಲೇಖನದ ಕೊನೆಗೆ ಸೂಚಿಸಲಾಗಿದೆ.

೨. ದುಂಡುಕಂಸನ್ನು ಹಲವು ರೀತಿಯಲ್ಲಿ ಬಳಸಲಾಗಿದೆ. ದುಂಡು ಕಂಸದ ಬಳಕೆಯ ರೀತಿಯೇ ಎಲ್ಲಕ್ಕಿಂತ ಗೊಂದಲಕಾರಿಯಾಗಿದೆ. ಇದರ ಬಳಕೆ ಯಾವ ರೀತಿ ನಡೆದಿದೆ ಎಂದು ಉದಾಹರಣೆ ಸಮೇತವಾಗಿ ಕೆಳಗೆ ಸೂಚಿಸಲಾಗಿದೆ.

ದುಂಡುಕಂಸವನ್ನು ಅಧಿಕಪಾಠ ಸೂಚನೆಗೆ ಬಳಸುತ್ತಾರೆ. ಅಧಿಕ ಪಾಠ ಎಂದರೇನು? ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ಒಂದು ಪದದ ಪಕ್ಕದಲ್ಲಿಯೇ ಲಿಪಿಕಾರ ಅಥವಾ ಕಂಡರಣೆಕಾರ ಇವರುಗಳ ಕಾರಣದಿಂದ ಅದೇ ಪದ ಮತ್ತೆ ಬಂದಿರುತ್ತದೆ. ಅದನ್ನು ಮಾತ್ರ ಅಧಿಕಪಾಠವೆಂದು ಕರೆಯಬಹುದು. ಉದಾಹರಣೆಗೆ

(ಅ). ಚಾಗದ ಕಂಭ (ಚಾಗದ ಕಂಭ) ಮ[ನ್ನಿ]ಜಿಸಿ *{'ಕರೀಮ್ ನಗರ ಶಾಸನದಲ್ಲಿ ಪಂಪಭಾರತದ ಪದ್ಯಗಳು'- ಸೀತಾರಾಮ ಜಾಗೀರದಾರ, ಸಾಪೇಕ್ಷ, ಅತ್ತಿಮಬ್ಬೆ ಪ್ರಕಾಶನ, ಮೈಸೂರು-೨೦೦೦, ಪರಿಷ್ಕೃತ ದ್ವಿತೀಯ ಮುದ್ರಣ, ಪುಟ ೨೩}*

(ಆ). ಶೃಂಗಾರರಾಜವದಜಾಯತ ರಾಮ (ರಾಮ ರಾಮ) ರಾಜಃ *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ-೮,ಹಾಸನ-೯, ಸಾಲು-೧೨೫}*

(ಇ). ತೆಂಕಲು ಕಬಳಿಗೆ (ಬಳಿಗೆ) ಬಡಗಲು *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ-೮,ಹಾಸನ-೯, ಸಾಲು-೧೭೫}*

(ಈ). ಸ್ವಾರಾಜ್ಯ (ಸ್ವಾರಾಜ್ಯ) ದಂ ವಿಜಯತೇ *{S I I -9, part-1, Inscription no-292, line-12}*

(ಉ). ಕೇಶದೇವ(ವ)ಣ್ಣನು *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ-೧೨,ತರೀಕೆರೆ-೫೦, ಸಾಲು-೧೫-೧೬}*

(ಊ). ರಾಜ ಪರಮೇಶ್ವರ ಪರಮಭಟ್ಟಾರಕ ಪ್ರವರ್ದ್ಧಮಾನ ವಿಜಯರಾಜ್ಯ (ರಾಜ್ಯ) ರೊತ್ತರಭಿವೃದ್ಧಿಗೆ *{ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕುಣಿಗಲ್ ಕೆರೆ ಶಾಸನ- ಪಿ.ವಿ.ಕೃಷ್ಣಮೂರ್ತಿ, ಶಾಸನ ಮಂಥನ, ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು-೨೦೧೧, ಪುಟ ೨೦}* ಆದರೆ ಕೆಲವನ್ನು ಅಧಿಕಪಾಠವೆಂದು ಕರೆಯಲು ಸಾಧ್ಯವಿಲ್ಲ. ಇಂದಿನವರೆಗೂ ಅದನ್ನು ಅಧಿಕಪಾಠವೆಂದೇ ಕರೆಯ ಲಾಗುತ್ತಿದೆ. ಉದಾಹರಣೆಗೆ ಕೆಲವನ್ನು ನೋಡಬಹುದು.

ಅ. ದಕ್ಷಿಣವಾದ ಇಷ್ಟಕೆ ಪಡುವಲಾದ ಕಟಕೆರೆ (ಯ)- *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ-೮, ಹೊಳೆನರಸೀಪುರ-೪೭, ಸಾಲು-೪೪}*

ಆ. ಶಿಷ್ಟಪ್ರತಿಪಾಳನೆ(೦)ಯಂ *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ-೮, ಹೊಳೆನರಸೀಪುರ-೭೨, ಸಾಲು-೬}*

ಇ. ಯಿ(೦)ನ್ತೀ ಧರ್ಮ್ಮವಂ *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ-೮, ಹೊಳೆನರಸೀಪುರ -೭೨, ಸಾಲು-೧೪}*

ಈ. ಪಂಚಮಹಾಸಬ್ದ ಮಹಾಸಾಮ(೦)ನ್ತಾಧಿಪತಿ ಮಹಾಪ್ರಚ(೦)ಣ್ಡ *{S I I-9, part-1, Inscription no-196, line-15-16}*

ಉ. ಯಿದಕ್ಕೆ ಆರೊಬ್ಬರೂ ಅಳುಪಿದರೆ ಕಾಶಿಯಲಿ ತಂಮ ತಂದೆ ತಾಯಿ (ಕಾಶಿಯಲಿ) ಕೊಂದ ಪಾಪಕ್ಕೆ *{ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ), ಸಂಪುಟ- ೧೧, ಚಿಕ್ಕಮಗಳೂರು-೧೮೩, ಸಾಲು-೨೨-೨೩*

ಊ. ತೇಜದುರ್ಬೇಳು ಸಮುಂ (ಮು) ದ್ರಮುಂ ಗಳಿಯೆ ಪರ್ಬಿ ಪೊದಳ್ದುದು ದಿಗ್‌ಜಯಂ (ಇಂಡಿಯನ್ ಆ್ಯಂಟಿಕ್ವೆರಿ-೫, ಜನವರಿ ೧೮೭೬, ಪುಟ ೧೬). ಈ ಉದಾಹರಣೆಯಲ್ಲಿ ಮುಂ ಎಂಬುದು ಮು ಎಂದು ಇರಬೇಕೆಂದು ತಿದ್ದುಪಡಿ ಸೂಚಿಸಲಾಗಿದೆ. ಇದು ಸರಿಯೇ ಆದರೂ ಒಂದು ಅನುಸ್ವಾರ ಅನಗತ್ಯ ಪಾಠವಾಗಿ ಬಂದಿರು ವುದರಿಂದ ಈ ಉದಾಹರಣೆಯನ್ನು *'ತೇಜದುರ್ಬೇಳು*

*ಸಮು{೦}ದ್ರಮುಂಗಳಿಯೆ ಪರ್ಬಿ ಪೊದಳ್ದುದು ದಿಗ್‌ಜಯಂ'* ಎಂದು ಬರೆದು ಅನಗತ್ಯ ಪಾಠಕ್ಕೆ ಉದಾಹರಣೆಯೆಂದು ಹೇಳುವುದು ಸೂಕ್ತ.

ಮೇಲೆ ಉದಾಹರಿಸಿರುವ ಉದಾಹರಣೆಗಳಲ್ಲಿ ದುಂಡು ಕಂಸದೊಳಗಿನ ಪಾಠದಿಂದ ಯಾವುದೇ ಪ್ರಯೋಜನವಿಲ್ಲ. ಲಿಪಿಕಾರನ' ಅಥವಾ ಕಂಡರಣೆಕಾರನ ತಪ್ಪಿನಿಂದಾಗಿ ಈ ಪಾಠಗಳು ರೂಪುಗೊಂಡಿರುವ ಸಾಧ್ಯತೆಯಿದೆ. ಶಿಷ್ಟಪ್ರತಿ ಪಾಳನೆಯಂ ಎಂದೇ ಇರಬೇಕಾದ ಪಾಠದಲ್ಲಿ ಯಾವುದಕ್ಕೂ ಪ್ರಯೋಜನವಿಲ್ಲದ ನೆಂಯಂ ಎಂದು ಇದೆ. ಇದೇ ರೀತಿ ಮಿಕ್ಕ ಉದಾಹರಣೆಗಳಲ್ಲಿಯೂ ಇದೆ. ಇವುಗಳನ್ನು ಅಧಿಕಪಾಠವೆಂದು ಕರೆಯುವುದು ಸಮರ್ಥನೀಯವಲ್ಲ. ಇದನ್ನು ಅನಗತ್ಯ ಪಾಠವೆಂಬ ಹೆಸರಿನಿಂದ ಇನ್ನು ಮೇಲಾದರೂ ಕರೆಯುವುದು ಸೂಕ್ತ. ಈ ಹೆಸರನ್ನು ಪ್ರಕೃತ ಲೇಖಕನೇ ನೀಡಿರುತ್ತಾನೆ. ಇದಕ್ಕೆ ದುಂಡುಕಂಸದ ಬದಲು ಬೇರೆ ಚಿಹ್ನೆ ಬಳಸುವುದು ಉತ್ತಮ. ಇದನ್ನು ಪ್ರಕೃತ ಲೇಖನದ ಕೊನೆಯಲ್ಲಿ ಸೂಚಿಸಲಾಗಿದೆ.

ದುಂಡು ಕಂಸವನ್ನು ಅಕ್ಷರ ತಿದ್ದುಪಡಿ ಸೂಚಿಸಲು ಬಳಸಲಾಗುತ್ತಿದೆ. ಉದಾಹರಣೆಗೆ

ಅ. ಚರಾಚರಸಮೊ(ಮು)ತ್ಪತ್ತಿ ಬೀಜಂ ***{S I I -9, part-1, Inscription no-235, line-2}***

ಆ. ಶ್ರೀ ಸೋಮಲದೇವಿಯರ್ ಸ(ಶ)ಕ ವರ್ಷ ***{A Corpus of Inscriptions in The Kannada Districts of Hyderabad State-*** (Ed) P.B. Desai, A.P.G.A.S.-18, Hyderabad, 1958.Inscription No-3, line-5}

ಇ. ಸ್ವಸ್ತಿ ಶ್ರೀ ಭ(ಬ)ನವಸಿ ನ(ನಾ)ಡ [ಲೋ]ಕಟೆ ಅ(ಆ)ಳೆ ***{Progress Reports of the Kannada Research Institute for 1953-57,*** *Kannada Research Institute , Dharwar-1958, page 75}*

ಈ . ಶ್ರೀಮತು ತ್ರಿಭುವ(ಯ)ನಮಲ *{**ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ),** ಸಂಪುಟ-೧೧, ಚಿಕ್ಕಮಗಳೂರು-೩೪, ಸಾಲು-೩-೪}* (ಈ ಶಾಸನದಲ್ಲಿ ವ ಕಾರಕ್ಕೆ ಯ ಕಾರ ತಿದ್ದುಪಡಿಯೇ ಅಥವಾ ನ ಕಾರಕ್ಕೆ ಯ ಕಾರ ತಿದ್ದುಪಡಿಯೇ ತಿಳಿದು ಬರುವುದಿಲ್ಲ. ಆದರೆ ಇದನ್ನು ಅನಗತ್ಯ ಪಾಠವೆಂದು ತಿಳಿಯುವುದು ಸೂಕ್ತ).

ಉ. ವಿಜಯಾಧಿ(ದಿ)ತ್ಯನ್ ಆಳುಪೇನ್ದ್ರ ಪರಮೇಸ್ವ(ಶ್ವ)ರ ಆ(ಅ)ಧೀ(ಧಿ)ರಾಜರಾಜನ್ *{**ತುಳುನಾಡಿನ ಶಾಸನಗಳು (ಸಂಪುಟ-೧)**-(ಸಂ) ಕೆ.ವಿ. ರಮೇಶ್, ಎಂ.ಜೆ. ಶರ್ಮ, ಗೀತಾ ಬುಕ್ ಹೌಸ್, ಮೈಸೂರು, ೧೯೭೮, ಪುಟ ೩೮}*

ದುಂಡು ಕಂಸವನ್ನು ಊಹಾಪಾಠಕ್ಕೂ ಬಳಸಲಾಗಿದೆ. ಕೆಲವು ಉದಾಹರಣೆಗಳನ್ನು ನೋಡಬಹುದು. ಮೊದಲನೆಯ ಉದಾಹರಣೆ ಕೆಳಗಿನಂತಿದೆ

೧ ಸ್ವಸ್ತಿಶ್ರೀ ಪಿಂಗಳ ಸಂವತ್ಸರದ ಶ್ರಾವಣ ಸು
೨ ದ್ಧ ಸಪ್ತಮಿ ಸೋಮವಾರದಂದು (ಸಾ)ವನ
೩ ಗೂಳಿಬಾಚಿಯ ಬಂಟ ಚಂದ ಹರಿಯ
೪ ದಿನ ಮಾರ ಪಲಬರು (ಸು)ಡಲು ಹು
೫ ಲಿಯನಜೆದು ಸತ್ತ
೬ ಡವರಣ್ಣ (ಅ)ದಳ ಹ
೭ ರಿ (ಲ)(ಟ)ಪ
೮ (ಕಾ)ರ್ರ ಬೆಸ
೯ (ಲ)ಕಾ ಮಾ
೧೦ ಡಿದ ॥ *{'ಕೈದಾಳದ ಹುಲಿಬೇಟೆಯ ವೀರಗಲ್ಲು ಶಾಸನ'- ಎಚ್.ಎಸ್. ಗೋಪಾಲರಾವ್,* **ಶಾಸನ ಸಂಕಲನ,** *ಅಳಿಲು ಸೇವಾ ಸಂಸ್ಥೆ, ಬೆಂಗಳೂರು-೨೦೦೧, ಪುಟ ೨೭}*

ಎರಡನೆಯ ಉದಾಹರಣೆ :

೧ ಸ್ವಸ್ತಿ ಶ್ರೀ ಮತ್ಪಾಂಡ್ಯ ಚಕ್ರವರ್ತ್ತಿಯ
೨ ರಿ ರಾಯ ಗಜಕೇಸರಿ ರಾಯ ಭುಜ
೩ ಬಳ ವೀರ (ಪಾ)ಂಡ್ಯ ದೇವಾಳ್ವೇಂದ್ರ ದೇವರ್ಸರ ವಿಜ
೪ ಯ (ರಾಜ್ಯ) ಮುತ್ತರಾಭಿವ್ರಿದ್ಧಿ ಪ್ರವರ್ಧ(ಮಾ)
೫ ನ

*-{**ಕುಂದನಾಡಿನ ಶಾಸನಗಳು**-ಪಿ.ಎನ್. ನರಸಿಂಹ ಮೂರ್ತಿ, ಸ್ವಾಗತ ಸಮಿತಿ, ಅಖಿಲ ಭಾರತ ೭೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಉಡುಪಿ-೨೦೦೭, ಪುಟ ೮೦, ಶಾಸನ ಸಂಖ್ಯೆ-೪}*

ಮೇಲೆ ಸೂಚಿಸಿರುವಂತೆ ದುಂಡುಕಂಸವನ್ನು ಅಧಿಕ ಪಾಠ, ಅನಗತ್ಯ ಪಾಠ, ಅಕ್ಷರತಿದ್ದುಪಡಿ, ಊಹಾಪಾಠ ಎಲ್ಲಕ್ಕೂ ಬಳಸಲಾಗಿದೆ. ಇದರಿಂದ ಹಲವು ಗೊಂದಲಗಳು ಸೃಷ್ಟಿಯಾಗಿವೆ. ಇದು ಕಾರಣ ಪ್ರಕೃತ ಲೇಖನದ ಕೊನೆಗೆ ಅಧಿಕ ಪಾಠ, ಅನಗತ್ಯ ಪಾಠ, ಅಕ್ಷರತಿದ್ದುಪಡಿ, ಊಹಾಪಾಠ ಈ ಎಲ್ಲಕ್ಕೂ ಬೇರೆ ಬೇರೆ ಚಿಹ್ನೆಗಳನ್ನು ಸೂಚಿಸಲಾಗಿದೆ.

೩. ತ್ರುಟಿತ ಭಾಗಗಳನ್ನು ಸೂಚಿಸಲು ಬಳಸುವ ಚಿಹ್ನೆಗಳ ಬಳಕೆಯಲ್ಲಿ ಸಾಮಾನ್ಯವಾಗಿ ಯಾವುದೇ ಗೊಂದಲ ಗಳಿರದಿದ್ದರೂ ಅವುಗಳನ್ನು ಬಳಸುವ ರೀತಿ ಸಮರ್ಥನೀಯ ವಾಗಿಲ್ಲ. ನಾಲ್ಕು ಅಕ್ಷರ ತ್ರುಟಿತವಿರುವ ಕಡೆ ೬ ಚುಕ್ಕೆ ಹಾಕಿದರೆ ಒಪ್ಪುವುದು ಹೇಗೆ ?. ಇದರ ಬಳಕೆಯನ್ನು

ಇರುವುದರಲ್ಲಿ ಅಚ್ಚುಕಟ್ಟಾಗಿ ಕಾಣುವುದು ಸೌತ್ ಇಂಡಿಯನ್ ಇನ್ಸ್‌ಕ್ರಿಪ್‌ಷನ್ಸ್, ಎಪಿಗ್ರಾಫಿಯಾ ಇಂಡಿಕಾ, ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳಲ್ಲಿ ಮಾತ್ರ ಎಷ್ಟು ಅಕ್ಷರ ತ್ರುಟಿತವಾಗಿದೆ ಎಂಬುದರ ಆಧಾರದ ಮೇಲೆ ಚುಕ್ಕೆಗಳನ್ನು ಹಾಕಿದರೆ ಸಾಧ್ಯವಾದರೆ ಆ ಸ್ಥಳದಲ್ಲಿ ಪಾಠವನ್ನು ಪುನರ್ ರಚಿಸಬಹುದು. ಉದಾಹರಣೆಗೆ ಒಂದು ಶಾಸನದ [ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೫,ಭಾಗ-೨ *{ಆಂಧ್ರ ಪ್ರದೇಶದ ಕನ್ನಡ ಶಾಸನಗಳು} (ಸಂ) ಕೆ.ಆರ್. ಗಣೇಶ, ಆರ್. ಶೇಷಶಾಸ್ತ್ರಿ, ಕ.ವಿ.ವಿ.ಹಂ., ೨೦೦೧, ಪುಟ ೨೧೧, ಶಾಸನ ಸಂಖ್ಯೆ-೫೩೮]* ಆರಂಭ ಭಾಗವನ್ನು ಕೆಳಗೆ ನೀಡಲಾಗಿದೆ. ಚೌಕ ಕಂಸದೊಳಗಿನ ಪಾಠ ಪ್ರಕೃತ ಲೇಖಕನು ನೀಡಿರುವುದಾಗಿದೆ.

೧ ಸ್ವಸ್ತಿ ಸಮಸ್ತ ಭುವನಾ [ಶ್ರ]

೨ ಯ ಶ್ರೀ ಪೃಥ್ವೀವಲ್ಲಭ [ಮ]

೩ ಹಾರಾಜಾಧಿರಾಜ ರಾಜ [ಪರ]

೪ ಮೇಶ್ವರ ಪರಮಭಟ್ಟಾರಕ[ಂ ಶ್ರೀ]

೫ [ಸತ್ಯಾ]ಶ್ರಯಕುಳತಿಳಕ [ತ್ರಿಭು]

೬ [ವನಾ]ಭರಣಂ ಶ್ರೀ ತ್ರಿಭುವನ [ಮಲ್ಲ]

೭ [ದೇವ] ವಿಜಯರಾಜ್ಯಮುತ್ತ[ರಾ]

೮ [ಭಿವೃ]ದ್ಧಿ ಪ್ರವರ್ದ್ಧಮಾನ[ಮಾಚಂ]

೯ [ದ್ರಾರ್ಕ] ತಾರಂಬರಂ

ಕೆಲವೆಡೆ ಲಿಪಿಕಾರ, ಕಂಡರಣೆಕಾರ ಇವರುಗಳಿಂದ ಆಗಿರುವ ತಪ್ಪು, ಶಾಸನದ ಪಡಿಯಚ್ಚಿನಿಂದಾಗಿರುವ ದೋಷಗಳು, ಶಾಸನವನ್ನು ಪ್ರಕಟಿಸುವಾಗ ಆಗುವ ಅಚ್ಚಿನ ತಪ್ಪುಗಳು, ಸಂಪಾದಕರಿಂದಾಗುವ ದೋಷಗಳು ಈ ಕಾರಣಗಳಿಂದ ಕೆಲವೆಡೆ ತ್ರುಟಿತ ಭಾಗಗಳ ವಿವರಗಳು ಸರಿಯಾಗಿ ದೊರಕುವುದಿಲ್ಲ. ಇಂತಹ ಸಮಯದಲ್ಲಿ ತ್ರುಟಿತ ಭಾಗಗಳನ್ನು ಸಮರ್ಪಕವಾಗಿ ಸೂಚಿಸಲು ಸಾಧ್ಯವಾಗುವುದಿಲ್ಲ. ಇದಕ್ಕೆ ವಿನಾಯಿತಿಯನ್ನು ನೀಡಬಹುದು.

ಶಾಸನ ಸಂಪಾದನೆಯಲ್ಲಿ ಒಬ್ಬೊಬ್ಬರು ಒಂದೊಂದು ರೀತಿಯ ಚಿಹ್ನೆಗಳನ್ನು ಬಳಸುತ್ತಿರುವುದರಿಂದ ಮತ್ತು ಒಂದೇ ಚಿಹ್ನೆಯನ್ನು ಬೇರೆ ಬೇರೆ ಉದ್ದೇಶಗಳಿಗಾಗಿ ಬಳಸುತ್ತಿರುವುದರಿಂದ ಇಂದು ಅನೇಕ ಶಾಸನಗಳ ಪಾಠದಲ್ಲಿ ಗೊಂದಲ ಮತ್ತು ಅನಿಶ್ಚಿತತೆ ತುಂಬಿದೆ. ಇದಕ್ಕೆ ಶಾಸನಗಳನ್ನು ಸಂಪಾದಿಸಿರುವ /ಸಂಪಾದಿಸುತ್ತಿರುವ ಸಂಶೋಧಕರು ತಮ್ಮ ಸಂಪಾದನೆಯ ಕ್ರಮವೇ ಸರಿ, ಮಿಕ್ಕವರದ್ದು ಸರಿಯಿಲ್ಲ ಎಂದು ವೈಯಕ್ತಿಕತೆಯನ್ನು ತೋರುತ್ತಿದ್ದಾರೆ. ಇದರಿಂದಾಗಿ ತಪ್ಪುಗಳು ಸಂಭವಿಸುತ್ತಿವೆ. ಶಾಸನಗಳನ್ನು ಶುದ್ಧರೂಪವಾಗಿ ಹೊರ ತಂದಾಗ ಮಾತ್ರ ಶಾಸನ ಕವಿಗೆ ನ್ಯಾಯವನ್ನು ಒದಗಿಸಿಕೊಟ್ಟಂತಾಗುತ್ತದೆ. ಎಪಿಗ್ರಾಫಿಯ ಇಂಡಿಕಾ ಮತ್ತು Corpus Inscriptionum Indicarum ಸಂಪುಟಗಳಲ್ಲಿ ಹಾಗೂ ಕೆಲವು ಶಾಸನ ಸಂಪುಟಗಳಲ್ಲಿ ಮಾತ್ರ ಸಣ್ಣಪ್ರಮಾಣದ ಲಿಪಿಕಾರ ಸ್ಖಾಲಿತ್ಯಗಳನ್ನು ಗುರುತಿಸಿ ಅವುಗಳ ಶುದ್ಧರೂಪವನ್ನು ಅಡಿಟಿಪ್ಪಣಿಗಳಲ್ಲಿ ನೀಡಿರುತ್ತಾರೆ. ಪಠ್ಯದಲ್ಲಿ ಸಂಬಂಧಿತ ಭಾಗಕ್ಕೆ ಅಡಿಟಿಪ್ಪಣಿಯನ್ನು ಸೂಚಿಸುವ ಸಂಖ್ಯೆಯನ್ನು ನೀಡಿರುತ್ತಾರೆ. ಇಂತಹ ಮಾದರಿಯಲ್ಲಿ ಶಾಸನ ಸಂಪಾದನೆ ನಡೆಯಬೇಕು. ಆದರೆ ಈ ವಿಧಾನವನ್ನು ಬಲ್ಲವರ ಕೊರತೆ ಇಂದು ಕಂಡುಬರುತ್ತಿದೆ. ಪ್ರಕೃತ ಲೇಖನದಲ್ಲಿ ಸಂಕ್ಷಿಪ್ತವಾಗಿ ಶಾಸನ ಸಂಪಾದನೆಯಲ್ಲಿ ಬಳಸುವ ಚಿಹ್ನೆಗಳನ್ನು ಪರಿಚಯಿಸಿ ಅಗತ್ಯವಿರುವ ಕೆಲವನ್ನು ವಿಮರ್ಶಿಸಲಾಗಿದೆ. ಕೆಲವು ಚಿಹ್ನೆಗಳು ನಮ್ಮ ಗಮನಕ್ಕೆ ಬರದೇ ಇರಬಹುದು ಹಾಗೂ ಇನ್ನೂ ಕೆಲವು ಶಾಸನ ಸಂಪುಟಗಳನ್ನು ಬಳಸಿಕೊಳ್ಳಬೇಕಿತ್ತು ಎನ್ನಿಸಬಹುದು. ಪ್ರಕೃತ ಲೇಖನ ಮಾಡಬೇಕಾಗಿರುವ ಕೆಲಸಕ್ಕೆ ದಿಕ್ಸೂಚಿ ಮಾತ್ರವೇ ಆಗಿದೆ. ಈ ವಿಷಯದಲ್ಲಿ ವಿಸ್ತಾರವಾದ ವಿವೇಚನೆಗೆ ಅವಕಾಶವಿದೆ. ಶಾಸನ ಸಂಗ್ರಹಣೆ ಮತ್ತು ಪ್ರಕಟನೆ ಯಾವಾಗ ಆರಂಭಗೊಂಡಿತೊ ಅಂದಿನಿಂದ ಇಂದಿನವರೆಗೂ ಶಾಸನ ಸಂಪಾದನೆಯಲ್ಲಿ ಬಳಸಿರುವ/ಬಳಸುತ್ತಿರುವ ಚಿಹ್ನೆಗಳ ಬಗೆಗೆ ಪ್ರತ್ಯೇಕವಾಗಿ ಸಂಶೋಧನ ಬರಹ ಪ್ರಕಟವಾಗಬೇಕಿದೆ. ಗ್ರಂಥ ಸಂಪಾದನೆಯಲ್ಲಿ ಬಳಸುವ ಚಿಹ್ನೆಗಳನ್ನು, ಶಾಸನ ಸಂಪಾದನೆ ಯಲ್ಲಿ ಬಳಸುವ ಚಿಹ್ನೆಗಳನ್ನು ಸಮನ್ವಯಗೊಳಿಸಿ ಇದರ ಬಳಕೆಯ ಬಗೆಗೆ ಅಧ್ಯಯನ ನಡೆಯಬೇಕು. ಇದು ಆದಷ್ಟು ಜಾಗ್ರತೆಯಾಗಿ ನಡೆಯಲೆಂದು ಆಶಿಸುತ್ತೇವೆ. ಮುಂದೆ ಶಾಸನ ಸಂಪಾದನೆಯಲ್ಲಿ ಗೊಂದಲಗಳಿಲ್ಲದೆ ಬಳಸಬೇಕಾದ ಚಿಹ್ನೆಗಳನ್ನು ಸೂಚಿಸಲಾಗಿದೆ. *[ನಾವು ನೀಡಿರುವ ಚಿಹ್ನೆಗಳನ್ನೇ ಬಳಸಬೇಕೆಂಬ ನಿರ್ಬಂಧವನ್ನು ನಾವು ಹೇರುತ್ತಿಲ್ಲ. ಬೇರೆ ಬೇರೆ ಚಿಹ್ನೆಗಳನ್ನು ಕೂಡ ವಿಮರ್ಶಿಸಿ ಬಳಸಬಹುದಾಗಿದೆ. ಆದರೆ ಶಾಸನಗಳನ್ನು ಸಂಪಾದಿಸುವ ಸಂಶೋಧಕರು ಇನ್ನು ಮೇಲಾದರೂ ತಾವು ಬಳಸುವ ಚಿಹ್ನೆಗಳನ್ನು ವಿವರಣೆ ಸಹಿತವಾಗಿ ಸೂಚಿಸಿದರೆ ಗೊಂದಲಗಳಿಗೆ ಅವಕಾಶವಿರುವುದಿಲ್ಲ. ಇದು ಶಾಸನ ಸಂಪುಟಗಳನ್ನು ಸಂಪಾದಿಸುವವರಿಗೂ ಅನ್ವಯಿಸುತ್ತದೆ].*

೧. [ ] ಚೌಕ ಕಂಸ : ಇದನ್ನು ಬರಿಯ ಊಹಾಪಾಠಕ್ಕೆ ಮಾತ್ರ ಬಳಸಬೇಕು. ಅಕ್ಷರಗಳು ತ್ರುಟಿತವಾದೆಡೆ ಮಾತ್ರ ಊಹಾಪಾಠಕ್ಕೆ ಅವಕಾಶವಿರುತ್ತದೆ. ಉದಾಹರಣೆಗೆ:

೨. [॥*॥] : ಶಾಸನಗಳಲ್ಲಿ ಪದ್ಯಗಳ ೪ ಪಾದಗಳೂ ಪೂರ್ಣವಾದ ಮೇಲೆ ಯಾವುದೇ ರೀತಿಯ ಗೆರೆಯನ್ನು

ಸಾಮಾನ್ಯವಾಗಿ ಹಾಕಿರುವುದಿಲ್ಲ. ಅಂತಹ ಎಡೆಗಳಲ್ಲಿ ಸಂಪಾದಕರು ಬಳಸುವ / ಬಳಸಬೇಕಾದ ಚಿಹ್ನೆ.

೩. [॥*] : ಶಾಸನ ಲಿಖಿತ ಪೂರ್ಣವಾದ ನಂತರ ಸಂಪಾದಕರು ಹಾಕುವ ಚಿಹ್ನೆ. ಶಾಸನದ ಆರಂಭದಲ್ಲಿ ಶುಭಮಸ್ತು, ಅಥವಾ ಶ್ಲೋಕ ಮುಗಿದ ಕೂಡಲೆ ಸಂಪಾದಕರು ಹಾಕುವ ಚಿಹ್ನೆ

೪. [।*] : ಪದ್ಯದ ಒಂದು ಪಾದ ಮತ್ತು ಶ್ಲೋಕದ ಒಂದು ಪದ ಮುಗಿದ ನಂತರ ಸಂಪಾದಕರು ಬಳಸುವ / ಬಳಸಬೇಕಾದ ಚಿಹ್ನೆ.

೫. [॥] : ಶ್ಲೋಕ ಮತ್ತು ಪದ್ಯದ ಎರಡು ಪಾದಗಳು ಮುಗಿದ ಕೂಡಲೆ ಸಂಪಾದಕ ಹಾಕುವ/ಹಾಕಬೇಕಾದ ಚಿಹ್ನೆ

೬. [*] : ಅಕ್ಷರ ಸ್ಪಷ್ಟವಾಗಿ ಇಲ್ಲದೇ ಇದ್ದರೆ ಮಾತ್ರ ಬಳಸಬೇಕಾದ ಚಿಹ್ನೆ. ಉದಾಹರಣೆಗೆ :

೭. () : ಅಧಿಕ ಪಾಠಕ್ಕೆ ಮಾತ್ರ ಬಳಸಬೇಕಾದ ಚಿಹ್ನೆ

೮. {} : ಅನಗತ್ಯ ಪಾಠಕ್ಕೆ ಮಾತ್ರ ಬಳಸಬೇಕಾದ ಚಿಹ್ನೆ

೯. ಇ $ : ಅಕ್ಷರ ತಿದ್ದುಪಡಿಗೆ ಬಳಸಬೇಕಾದ ಚಿಹ್ನೆ

೧೦. X X : ಈ ಚಿಹ್ನೆಯನ್ನು ಶಾಸನ ಪಾಠ ತ್ರುಟಿತವಾಗಿದ್ದರೆ ಮಾತ್ರ ಬಳಸಬೇಕು ಮತ್ತು ಒಂದು ಸಾಲಿನಲ್ಲಿ ಇಷ್ಟೇ ಅಕ್ಷರಗಳು ತ್ರುಟಿತವಾಗಿವೆ ಎಂಬ ಅಂದಾಜಿದ್ದರೆ ಮಾತ್ರ ಅಷ್ಟೇ ಅಕ್ಷರಗಳ ಜಾಗದಲ್ಲಿ ಈ ಚಿಹ್ನೆಯನ್ನು ಬಳಸಬಹುದು.

೧೧. . . . : ಸಂಪೂರ್ಣ ತ್ರುಟಿತ ಮತ್ತು ೧೦ ಅಕ್ಷರಗಳಿಗಿಂತ ಹೆಚ್ಚಾಗಿ ಶಾಸನ ಪಾಠ ತ್ರುಟಿತವಾಗಿದ್ದರೆ ಮಾತ್ರ ಈ ರೀತಿ ಚುಕ್ಕೆಗಳನ್ನು ಇಡಬೇಕು ಹಾಗೂ ಇಷ್ಟೇ ಅಕ್ಷರಗಳು ತ್ರುಟಿತವಾಗಿವೆ ಎಂಬ ಅಂದಾಜಿದ್ದರೆ ಮಾತ್ರ ಬಳಸಬೇಕು.

೧೨. [?] : ಶಾಸನ ಪಾಠದಲ್ಲಿ ಅರ್ಥೈಸಲು ಸಾಧ್ಯವಾಗದ ಭಾಗಕ್ಕೆ ಹಾಕುವ / ಹಾಕಬೇಕಾದ ಚಿಹ್ನೆ ಒಂದು ಶಾಸನವನ್ನು ಪುನಸ್ಸಂಪಾದನೆಗೆ ಒಳಪಡಿಸಿದಾಗ ಅದರ ಸಂಪಾದಕರು ಹೊಸದಾಗಿ ಪಾಠಗಳನ್ನು ಸಂಯೋಜಿಸಿದರೆ/ಶಾಸನವನ್ನು ಪರಿಷ್ಕರಿಸಿದರೆ ಅದನ್ನು ಸೂಚಿಸಲು ಮೇಲೆ ಸೂಚಿಸಿರುವ ಚಿಹ್ನೆಗಳನ್ನೇ ಬಳಸಿ ಕೊಂಡು ಪ್ರತ್ಯೇಕವಾಗಿ ಬೇರೆ ರೀತಿಯಲ್ಲಿ ಸೂಚಿಸಿದರೆ ಉತ್ತಮ. ಯಾವ ರೀತಿ ಸೂಚಿಸಬಹುದೆಂದು ಕೆಳಗೆ ಸೂಚಿಸಿದೆ.

೧. *[ ]* ಚೌಕ ಕಂಸ : ಇದನ್ನು ಬರಿಯ ಊಹಾ ಪಾಠಕ್ಕೆ ಮಾತ್ರ ಬಳಸಬೇಕು. ಅಕ್ಷರಗಳು ತ್ರುಟಿತವಾದೆಡೆ ಮಾತ್ರ ಊಹಾಪಾಠಕ್ಕೆ ಅವಕಾಶವಿರುತ್ತದೆ.

೨. *[॥*॥]* : ಶಾಸನಗಳಲ್ಲಿ ಪದ್ಯಗಳ ೪ ಪಾದಗಳೂ ಪೂರ್ಣವಾದ ಮೇಲೆ ಯಾವುದೇ ರೀತಿಯ ಗೆರೆಯನ್ನು ಸಾಮಾನ್ಯವಾಗಿ ಹಾಕಿರುವುದಿಲ್ಲ. ಅಂತಹ ಎಡೆಗಳಲ್ಲಿ ಸಂಪಾದಕರು ಬಳಸುವ / ಬಳಸಬೇಕಾದ ಚಿಹ್ನೆ.

೩. * [॥*]* : ಶಾಸನ ಲಿಖಿತ ಪೂರ್ಣವಾದ ನಂತರ ಸಂಪಾದಕರು ಹಾಕುವ ಚಿಹ್ನೆ. ಶಾಸನದ ಆರಂಭದಲ್ಲಿ ಶುಭಮಸ್ತು, ಅಥವಾ ಶ್ಲೋಕ ಮುಗಿದ ಕೂಡಲೆ ಸಂಪಾದಕರು ಹಾಕುವ /ಹಾಕಬೇಕಾದ ಚಿಹ್ನೆ

೪. * [।*]* : ಪದ್ಯದ ಒಂದು ಪಾದ ಮತ್ತು ಶ್ಲೋಕದ ಒಂದು ಪದ ಮುಗಿದ ನಂತರ ಸಂಪಾದಕರು ಬಳಸುವ / ಬಳಸಬೇಕಾದ ಚಿಹ್ನೆ.

೫. * [॥]* : ಶ್ಲೋಕ ಮತ್ತು ಪದ್ಯದ ಎರಡು ಪಾದಗಳು ಮುಗಿದ ಕೂಡಲೆ ಸಂಪಾದಕ ಹಾಕುವ/ಹಾಕಬೇಕಾದ ಚಿಹ್ನೆ

೬. * [*]* : ಅಕ್ಷರ ಸ್ಪಷ್ಟವಾಗಿ ಇಲ್ಲದೇ ಇದ್ದರೆ ಮಾತ್ರ ಬಳಸಬೇಕಾದ ಚಿಹ್ನೆ. ಉದಾಹರಣೆಗೆ :

೭. *( )* : ಅಧಿಕ ಪಾಠಕ್ಕೆ ಮಾತ್ರ ಬಳಸಬೇಕಾದ ಚಿಹ್ನೆ

೮. *{ }* : ಅನಗತ್ಯ ಪಾಠಕ್ಕೆ ಮಾತ್ರ ಬಳಸಬೇಕಾದ ಚಿಹ್ನೆ

೯. *ಇ $* : ಅಕ್ಷರ ತಿದ್ದುಪಡಿಗೆ ಬಳಸಬೇಕಾದ ಚಿಹ್ನೆ

೧೦. * [X X]* : ಈ ಚಿಹ್ನೆಯನ್ನು ಶಾಸನ ಪಾಠ ತ್ರುಟಿತವಾಗಿದ್ದರೆ ಮಾತ್ರ ಬಳಸಬೇಕು ಮತ್ತು ಒಂದು ಸಾಲಿನಲ್ಲಿ ಇಷ್ಟೇ ಅಕ್ಷರಗಳು ತ್ರುಟಿತವಾಗಿವೆ ಎಂಬ ಅಂದಾಜಿದ್ದರೆ ಮಾತ್ರ ಅಷ್ಟೇ ಅಕ್ಷರಗಳ ಜಾಗದಲ್ಲಿ ಈ ಚಿಹ್ನೆಯನ್ನು ಬಳಸಬಹುದು.

೧೧. *[. . .]* : ಸಂಪೂರ್ಣ ತ್ರುಟಿತ ಮತ್ತು ೧೦ ಅಕ್ಷರಗಳಿಗಿಂತ ಹೆಚ್ಚಾಗಿ ಶಾಸನ ಪಾಠ ತ್ರುಟಿತವಾಗಿದ್ದರೆ ಮಾತ್ರ ಈ ರೀತಿ ಚುಕ್ಕೆಗಳನ್ನು ಇಡಬೇಕು ಹಾಗೂ ಇಷ್ಟೇ ಅಕ್ಷರಗಳು ತ್ರುಟಿತವಾಗಿವೆ ಎಂಬ ಅಂದಾಜಿದ್ದರೆ ಮಾತ್ರ ಬಳಸಬೇಕು.

೧೨. * [?]* : ಶಾಸನ ಪಾಠದಲ್ಲಿ ಅರ್ಥೈಸಲು ಸಾಧ್ಯವಾಗದ ಭಾಗಕ್ಕೆ ಹಾಕುವ / ಹಾಕಬೇಕಾದ ಚಿಹ್ನೆ

[ಈ ಲೇಖನವನ್ನು ಬರೆಯಲು ಪ್ರೋತ್ಸಾಹವನ್ನು ನೀಡಿ ಮಾರ್ಗದರ್ಶನವನ್ನು ಮಾಡಿ ಅಗತ್ಯವಿರುವ ಕೆಲವು ಮಾಹಿತಿಗಳನ್ನು ನೀಡಿದವರು ಶಾಸನ ತಜ್ಞರುಗಳಾದ ಮೈಸೂರು ಎಚ್.ಎಂ. ನಾಗರಾಜರಾಯರು ಮತ್ತು ಬೆಂಗಳೂರು ಪಿ.ವಿ. ಕೃಷ್ಣಮೂರ್ತಿಯವರು. ಇವರಿಗೆ ಕೃತಜ್ಞತೆ ಯನ್ನು ಸಲ್ಲಿಸುತ್ತೇನೆ].

ಡಾ. ಬಿ. ರಾಜಶೇಖರಪ್ಪ*

# ಲೋಕಿಕೆರೆಯಲ್ಲಿ ದೊರೆತ ಉಚ್ಚಂಗಿ ಪಾಂಡ್ಯರ ಕಾಲದ ಒಂದು ಹೊಸ ಶಾಸನ

ದಾವಣಗೆರೆ ಜಿಲ್ಲೆಯ ಲೋಕೀಕೆರೆ ಗ್ರಾಮದಲ್ಲಿ ಹೊಸದಾಗಿ ದೊರೆತಿರುವ ಒಂದು ಶಾಸನವನ್ನು ಬೆಳಕಿಗಿಡುವುದು ಈ ಸಂಪ್ರಬಂಧದ ಉದ್ದೇಶ. ಆ ಗ್ರಾಮದ ಈಶ್ವರ ದೇವಸ್ಥಾನದ ಬಲಬದಿಯಲ್ಲಿ, ನೆಲದಲ್ಲಿ ಮುಕ್ಕಾಲು ಭಾಗ ಹೂತುಹೋಗಿದ್ದ ಬಳಪದ ಕಲ್ಲಿನ ಒಂದು ದೊಡ್ಡ ಚಪ್ಪಡಿಯಲ್ಲಿರುವ ಶಾಸನ ಅದು. ಅಲ್ಲಿಯ ಗ್ರಾಮಸ್ಥರು ಕೆಲಕಾಲದ ಹಿಂದೆ, ಆ ಕಲ್ಲುಚಪ್ಪಡಿಯನ್ನು ಭೂಮಿಯಿಂದ ಬಿಡಿಸಿ ತೆಗೆದಾಗ, ಅದರಲ್ಲಿ ಶಾಸನ ಬರಹ ಇದ್ದುದನ್ನು ಗಮನಿಸಿದ ನನ್ನ ಹಿರಿಯ ಮಿತ್ರರಾದ ಶ್ರೀ ಸಂತೇಬೆನ್ನೂರು ಸುಮತೀಂದ್ರ ನಾಡಿಗ್ ಅವರು, ಆ ಶಾಸನ ಓದಲೆಂದು ಅಲ್ಲಿಗೆ ನನ್ನನ್ನು ಕರೆದೊಯ್ದಾಗ, ಆ ಕಲ್ಲುಚಪ್ಪಡಿಯ ಒಂದು ಬದಿಯಲ್ಲಲ್ಲ, ಎರಡು ಬದಿಗಳಲ್ಲೂ ಪೂರ್ಣವಾಗಿ ಶಾಸನ ಕೆತ್ತಿರುವುದು ಕಂಡುಬಂತು.

ಆ ಚಪ್ಪಡಿಯ ಸುಮಾರು ಏಳೂಮುಕ್ಕಾಲು ಅಡಿ ಎತ್ತರ, ಎರಡೂಕಾಲು ಅಡಿ ಅಗಲ, ಅರ್ಧ ಅಡಿ ದಪ್ಪ ಇದ್ದು, ಅದರಲ್ಲಿ ಐದು ಅಡಿ ಎತ್ತರ, ಎರಡೂಕಾಲು ಅಡಿ ಅಗಲ, ಈ ವ್ಯಾಪ್ತಿಯಲ್ಲಿ ಶಾಸನ ಬರಹವನ್ನು ಕಂಡರಿಸ ಲಾಗಿದೆ. ಎರಡೂ ಬದಿಯ ಬರಹ ಇರುವುದು ಕನ್ನಡ ಲಿಪಿಯಲ್ಲೇ ಆದರೂ, ಒಂದು ಬದಿಯ ಬರಹ ಪೂರ್ಣ ಸಂಸ್ಕೃತ ಭಾಷೆಯಲ್ಲಿ (೬೫ ಪಂಕ್ತಿ), ಇನ್ನೊಂದು ಬದಿಯ ಬರಹ ಮೇಲುಭಾಗದಲ್ಲಿ ಸುಮಾರು ಕಾಲು ಭಾಗ ಸಂಸ್ಕೃತ ಭಾಷೆಯಲ್ಲೂ, ಉಳಿದ ಕೆಳಗಿನ ಮುಕ್ಕಾಲು ಭಾಗ ಕನ್ನಡ ಭಾಷೆಯಲ್ಲೂ (ಎರಡೂ ಸೇರಿ ೬೭ ಪಂಕ್ತಿ) ಇದೆ. ಶಾಸನದ ಮೇಲುಭಾಗದ ಒಂದು ಪಾರ್ಶ್ವದಲ್ಲಿ ಕಲ್ಲು ಉದ್ದಕ್ಕೆ ಸ್ವಲ್ಪ ಒಡೆದುಹೋಗಿರುವುದರಿಂದ, ಬರಹದ ಬಹಳಷ್ಟು ಮೇಲುಭಾಗದಲ್ಲಿ ತುಂಬ ಕಚ್ಚುಗಳೂ ಹಾಗೂ ಸಾಕಷ್ಟು ಸವೆತವೂ ಉಂಟಾಗಿರುವುದರಿಂದ ಅಕ್ಷರಗಳು ಬಹಳಷ್ಟು ನಷ್ಟವಾಗಿ ಶಾಸನ ಬರಹದ ಪಾಠ ಪೂರ್ಣವಾಗಿ ದೊರೆಯದಂತಾಗಿದೆ. ಇದರ ಜೊತೆಗೆ ಅಲ್ಲಲ್ಲಿ ಕಾಗುಣಿತ ದೋಷಗಳೂ ಘಟಿಸಿವೆ. ಇಷ್ಟಾದರೂ ಶಾಸನದ ಒಟ್ಟು ಅಭಿಪ್ರಾಯವನ್ನು ಗ್ರಹಿಸಬಹುದಾಗಿದೆ. ಶಾಸನದ ಪಾಠ ಈ ಕೆಳಗಿನಂತಿದೆ :

ಮುಂಬದಿ

(ಸೂರ್ಯ) (ಚಂದ್ರ)

(ಅರ್ಚಕ) (ಶಿವಲಿಂಗ) (ನಂದಿ) (ಹಸು–ಕರು)

೧ . . . . ಶಿರಶ್ಚುಂಬಿ ಚಂದ್ರಚಾಮರ ಚಾರವೇ । ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ . . .

೨ . . . . ತ್ಥಸಿ . ತ್ಸಂಪೂಜಿತೋ ಯಸ್ಸುರೈತೇದಿ ಸರ್ವ್ವ ವಿಷ್ಣು . . . ಗಣಾಧಿಪ

೩ . . . . ವಾಯು ॥ ಜಯನ್ತೀ ಪ್ರಿಥು **ಪಾಠೀನ ವಪು** ಷೋ ವಿಕ್ರಮ ಕ್ರಮಾಃ ॥ ಹ . . . .

೪ . . . . . ಗ್ರ ಕ್ಷೋಭಿತಾಂಬೋಧಿ ಪಾಥಸಃ ॥ ಶ್ರೀಕಾನ್ತಸ್ಯ ಚಕಾಸ್ತಿ ನಾಭಿಸರ . .

೫ . . . ಭೋರುಹಂ ವಕ್ಷಃ ಕೌಸ್ತುಭ ರತ್ನ ಪೀಠ ವಸತೇರ್ಲ್ಲೀಲಾತಪತ್ರ ಶ್ರಿಯಃ ಯ .

೬ . . . ಸರ್ಗ್ಗ ಸರ್ಗ್ಗ ರಚನಾ ಬ್ಯಾಪಾರ ನಿಷ್ಣಾತ್ಮನಾಥಾದ್ರಾ ಸ್ರುಷ್ಟಿ ಧುರನ್ಧರೋ ಮು . .

೭ . . . ಗತ್ರಿರಾ ಸೂತ್ರಿತಃ ॥ ಆತ್ರೇರ್ಣ್ನೇತ್ರಾದಜ ನಿರಜನೀ ವಲ್ಲಭೋ ರಾಜಶಬ್ದ . . .

೮ . . . ಜಮಿವವರೇ ಭರ್ತ್ತುರ್ಬ್ಭೂತೇ ಭಜಸ್ತಿ ಕಿಂ ವಾಶೇಷ ತ್ರಿದಶ ಪರಿಷನ್ಮೌಲಿ ಮಾಲಾ . . .

೯ . . . ಪಿ ತ್ರಿಪುರ ಜಯನ ಶಿಖರಂ ಯಸ್ಯ ಲೇಖಾ । ತಸ್ಮಾನ್ನಿರ್ಮ್ಮಳಿತಾಖಿಲ ತ್ರಿ . . .

೧೦ . . . ತ ಚೇತಟ್ಟರೀಥಾ ಪೇ ನಿರ್ಬ್ಭರಮುನ್ಮೀಷತ್ಕುವಲ ಯಾಮೋದ ಪ್ರಪಂನೋದಯ . . .

೧೧ . . . ಪೂರ್ತಿ ದಕ್ಷಮಖಿಳಾಕ್ಷೋಣಿಭಿರುತ್ತಂ ಸಿತಂ ಗೋತ್ರಂ **ಯಾದವ ಭೂಭುಜಾಮ** . . .

೧೨ . . . ಯಥಾ ॥ ದೃಪ್ಯದ್ದಾನವಲುಪ್ಯಮಾನ ವಿಭವ ಸ್ವಾರಾಜ್ಯ ವಿಸ್ತಾರಕಾಸ್ಸಂಮ್ರಾಜಃ ಕ . . .

೧೩ . . . ಯ ಮುಖಾಸ್ತಸ್ಮಿನ್ನಭೂವಂ ನವಾ । ಕಂಸಧ್ವಂಸನ ಕೇಳಿಕೌತುಕ ವಶಾದ್ದೇವೋಪಿ ಲಕ್ಷ್ಮೀಪತಿರ್ವ್ವಿ . . .

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ), ೨ನೆಯ ಕ್ರಾಸ್ (ಪಶ್ಚಿಮ), ಜಯಚಾಮರಾಜೇಂದ್ರ ಬಡಾವಣೆ, ಚಿತ್ರದುರ್ಗ.

೧೪ . . . ಮೃಗ್ಯಮಾಣ ವರಣೋ ಯತ್ರಾವತೀರ್ಣ್ಣ ಸ್ವಯಂ । ತಸ್ಮಿನ್ಕುಲೇ ಚಿರಮರಾಜತ ಚೇದಿರಾಜೋ ರಾಜ . . .

೧೫ . . . ಧಾವಳಯಸ್ಯ ಯೋ ಸೌ ॥ **ಪಾಂಡ್ಯಾವನೀ** ವಿರಚಿತಶ್ಚಿರ ಪಕ್ಷ **ಪಾತ ಪಾಂಡ್ಯಖ್ಯಯೈವ** ಸುದೃಢಾಂ . . .

೧೬ . . . ಮಾಪ ॥ ಯಚ್ಚೂಡಾಗ್ರಮಶಂಕ ಕರ್ಣ್ಣಹತಿ. ಕ್ರಂಕಾರಿ ಪೌರಂದರಂ ಶೈಲೇಂದ್ರ ಪ್ರೆಥು ಸಾನು ಪೀ . . .

೧೭ . . . **ಶತ್ವಾಧೀನ ಚಿಹ್ನಶ್ಚ**ಯತೇ ಶಕ್ತಿ ವೆಕ್ತ ನಿಯಂತ್ರಣಶ್ಚ ವಿಫಲಾರಂ ಭೋಯದಂಭೋ ನಿಧಿ ಖ್ಯಾಪಂಡ್ಯ . . .

೧೮ . . . ರ ವೈಭವಾ ಸಹ ಮಹೋತೇಜಸ್ತತೋ ಜಾಯತೇ ॥ ಭ್ರೂಭಂಗ ಮಾತ್ರ ವಿಧುರೀಕೃತ ವೈರಿವರ್ಗ್ಗೋಚಿತ್ತಃ ಪಳ . .

೧೯ . . . ತಿ ತತ್ತನಯೋ ಬಭೂವ । **ಚಾಳುಕ್ಯ ಚೋಳ ನರಪಾಳಕ** ಯೋ ಸ್ವರಾಜ್ಯ ಸ್ವಾರಾಜ್ಯದಂ ವಿಜಯತೇ ಯು .

೨೦ ೧೮ . ಯಸ್ಯ ಶೌರ್ಯ್ಯಂ ॥ ವಂದೀಕೃತಾಖಿಳ ವಿರೋಧಿ ನ್ರಿಪಾ ವರೋಧ ಶ್ವಾಸ ಪ್ರಸಾನ್ತ ಸಮರ ಶ್ರಮಘರ್ಮ್ಮ ತೋಯಃ ೧೮

೨೧ ೧೯ ಯದಿಶ್ಚಿರ ಮರಾಜ **ದಿರುಕ್ಕವೇಳೋ** . ಳಾ ಚಳ ಸಲಿತೋ ಮ್ಮಳ ಕೀರ್ತ್ತಿ ಸಿಂಧುಃ ॥ ತಸ್ಯಾ ಚಿತ್ತನಯಃ ಪರಾಕ್ರಮ ಪರಾ ೧೯

೨೨ ೨೦ ಭೂತ ಪ್ರಭೂತದ್ವಿಷದ್ವೀರ ಶ್ರೀ ರಮಣೀ ಸ್ವಯಂ ಬರ ಪತಿ ಶ್ರೀ **ರಾಯಪಾಂಡ್ಯನೃಪಃ** ಭ್ರಾಮ್ಯದ್ಭೀಮ ಗದಾಭಿ ೨೦

೨೩ ೨೧ ಘಾತದಲಿತೈರ್ವೈರೀಭ ಕುಂಭಸ್ಥಳೈರ್ಯಸ್ಯ ಸ್ಥಾಪಿತ ಭಾರತೀ ಪುನರಭೂವತ್ಯುದ್ಧತಾ ಯುದ್ಧಭೂಃ॥ ನಮದ ೨೧

೨೪ ೨೨ ಖಿಳ ಸಪತ್ನೀ ಮೌಳಿ ರತ್ನಾಯತೋದ್ಯಾಭರಣ ನಖರ ಭಕ್ತಾ **ರಾಯಪಾಂಡ್ಯಸ್ಯ** ರಾಜ್ಞೀ ಸುಚರಿತ ಪರಿಪೂತಸ್ಥಿತ ೨೨

೨೫ ೨೩ ಸೂರೀಂದ್ರ ಸೂಕ್ತಾ ಸುಭಗಿಮಗುಣ ಸೀಮಾ **ಸೋಮದೇವಿ**ರ್ಬಭೂವ ॥ ಜಾತ್ಯಾ ಪರಸ್ಪರ ವಿರೋಧ ವತೋಃ ಸತೀತ್ವಸೌ ೨೩

೨೬ ೨೪ ನ್ದರ್ಯ್ಯಯೋಃ ಪ್ರಣವ ಭೂಮಿ ರಸಾವ ಸೂತ। ವಾಚಶ್ರಿಯಶ್ಚ ಪರಿಯೋಚಿತ ಭೂರಿ ವೈರಮೇಶಂ ಪ ಸಪದಿ **ಪಂಡಿತ ಪಾಂ** ೨೪

೨೭ ೨೫ **ಢ್ಯದೇವ** ॥ ಯತ್ಕೀರ್ತ್ತಿಃ ಪರಿಪಂಥಿ ಪಾರ್ತ್ಥಿವ ಯಶಶ್ವೇತಾಬ್ಜ ಚಂದ್ರ ದ್ಯುತಿರ್ಯ್ಯಚ್ಚಂಡಾ ಸುರ ಮರ್ತ್ಯ ವಾರ ವನಿತಾ ಸೌಂದರ್ಯ್ಯ ೨೫

೨೮ ೨೬ ಸಾಫಲ್ಯಕೃತ ಕಂಸತ್ವೌಸನ ವಂಶ ಮಂಡನ ಮಹಾ ಮುಕ್ತಾ ಮರ್ತ್ಯಕೀರ್ತ್ತನಾರ್ತ ತಸ್ಯಾಮುಪ್ಪು ರವೀಶ್ವರಾಃ ಕತಿನವಾ ೨೬

೨೯ ೨೭ ವಾಣೀಮಳಂಕುರ್ವ್ವತೇ ॥ ದರ್ಪೋದಾತ್ತ ಪರಾವನೀಪತಿ ವೃಡ ಪ್ರಾಣಾನಿ ಆ ಸ್ವಾದನ ಸ್ವಾಯದ್ಭೂರಿ ಭುಜಂಗಮ ೨೭

೩೦ ೨೮ ಶಿರೋ ವಿಶ್ರಾಂತ ವಿಶ್ವಂಭರಂ ಜ್ಯೋತ್ಸ್ನಾ ನಿರ್ಮ್ಮಳ ಕೀರ್ತ್ತಿ ಚರ್ಚ್ಚಿತ ಜಗಜ್ಜಾಲಂ ಕಳಾನಾಂ ನಿಧಿ ಸಾಸೂತೇ ಸ್ತು ಸುಧಾನ್ತರಂ ತದ ೨೮

೩೧ ೨೯ ನುಜಂ **ಶ್ರೀ ವೀರಪಾಂಡ್ಯ ನೃಪಂ** ॥ ಯೋ ವಾಯತ್ಕರವಾಳ ಕಾಳಭುಜಗ ಗ್ರಾಸಪ್ರಸತ್ಸ್ವಪ್ರಿಯ ಪ್ರಾಣ ತ್ರಾ ೨೯

೩೨ ೩೦ ಣ ಪರಾಯಣಗಿರಿವನಿತಾ ಜಿಹ್ವಾಂತ ಮಾತ್ರ ಶ್ರಯಾ ಅಥ ತೇ ಯುಧಿ **ವೀರಪಾಂಡ್ಯ ನೃಪತೇ** ಸ್ತ್ರೈ ವಿದ್ಯ ಮಧ್ಯೇಂಚಶಿ ೩೦

೩೩ ೩೧ ತೇ ಶೌರ್ಯ್ಯಸ್ಯ ಸ್ಯನಾಥೌ ಪ್ರಯಾತಿಕ ತಮಸ್ಸಾ ಕಲ್ಯತಃ ಕಲತಾಂ ॥ ಬೇಳಾಂ ಜಾತ ಸುರದ್ರುಮಂ ಜಳನಿಧೇ ರು ೩೧

೩೪ ೩೨ ದ್ಭೂತ ಸಂಹಾತ ವಿಮೇರೋರುದ್ಗತ ಭಾಸ್ಕರಾಂ ಜಳನಿಧೇ ರಾರಾಮಃ ಕುರ್ವ್ವತೀ ಸೇಯಂ **ರಾಯಮಹೀಶ್ವರಸ್ಯ** [ಮ] ೩೨

೩೫ ೩೩ ಹಿಷೀ ಪ್ರಾಸೂತ **ಕಾಮ್ಮಾಖ್ಯಯಃ** ವಿಖ್ಯಾತಂ **ನಿಗಳಂಕಮಲ್ಲ ವಿಜಯ ಶ್ರೀ ಪಾಂಡ್ಯ** ಪೃಥ್ವೀಪತಿಂ ॥ ಬ್ರಹ್ಮಾನಿ ೩೩

೩೬ ೩೪ ಪರಮೇಷ್ಠಿ ನಾಕತಿ ಜಗ ನಿರ್ಮ್ಮಾಣ ನಿಷ್ಠಾ ಕೃತಾನ್ಯೋಷಾಮತ್ರಿ ಮುನಿಯಿತುಂ ಪ್ರಭವತಿ ಪ್ರಾಯಃ ಪರಃ ಕಶ್ಚ ೩೪

೩೭ ೩೫ ನಃ ವಂಶೇ ಯಸ್ಯ ಪುರಾಂಶುವಾಂಶುಧ ಪುಷ್ಯ **ಕೃಷ್ಣಾಖ್ಯ** ಯಾನನ್ತರ ಭೂಯಃ **ಕಾಮ ನೃಪಾತ್ಮ**ನಾ ಚಯ ೩೫

೩೮ ೩೬ ದಯಂ ಲಕ್ಷ್ಮೀಪತಿರ್ವ್ವರ್ತ್ತತೇ ॥ ಕೆಂದ್ವೀಪಾನ್ತರದ . ನೋತ್ಸುಕ ಧಿಯಃ ಕಿಂನ್ನಾತಯೋ ಷಿದ್ರತಾಃ ಕಿನ್ತೇ ದುರ್ಬ್ಬಟಿ ದುರ್ವ್ವಪ ೩೬

೩೯ ೩೭ ಕ್ಷಿತಿ ಭರಾಮ್ನಾಯದ್ಭುಜಾ ಭೂಭುಜಃ ವೀರಶ್ರೀ ನಿಗಳಂಕಮಲ್ಲ ನೃಪತೇಃ ಸೇವಾಸುಧಾ ಸ್ವಾದಮನಂನ್ಯ ಕ್ರಿತ್ಯಾಪಿ ವಹ [೦ತೀ] ೩೭

೪೦ ೩೮ ಯತ್ಕಿತಿಪಯೇ ಗಾಗ್ರಿಹಂ ವಿಗ್ರಹೇ ॥ ಕೀರ್ತಿಂ ಜಗತ್ತಿತಯ ಜಗತ್ತಿತಯ ಚಂದನ ಪಂಕ ಚರ್ಚ್ಚಾಂನ ಪ್ರೇಕ್ಷತೇ **ವಿಜಯಪಾಂಡ್ಯ** [ನೃ] ೩೮

೪೧ ೩೯ ಪಸ್ಯ ನೂನಂ ಪ್ರತ್ಯರ್ತ್ಥಿ ಪಾರ್ತ್ಥಿವ ಕಳತ್ರ ಕಪೋಳ ಮಾತ್ರಮಾ ಪಾಂಡುರಯ್ಯ ಪರಿದ್ರಪ್ಯತಿ ಯತ್ಪ್ರತಾಪ [ಃ ॥ ]

೪೨ ೪೦ ವೇಲ್ಲತಿ ನಾಶ ಪಾಶ್ಯೂದ್ಭಟ ನಿಟಳ ತಟಭ್ರೂಕು . ಭ್ರಮಣಾಂ ಶಾಸೋಲ್ಲಾಸ ಪ್ರಯಾಸ ಪ್ರಕಟ ವಿಸ್ಮಮ ೪೦

೪೩ ೪೧ರ ಪ್ರಾಣ ನಾಸಿಕ ಕಾಣಾಂ ವಿಸ್ಫಾರೋಷ್ಠ ಪ್ರಕಂಪ ಸ್ಫುಟ ವಿಬುಧ ವಧೂ ಚುಂಬನಾಭರ್ತ್ಥಃ ಸ್ವೇಷಾಂ ರೋ ೪೧

೪೪ ೪೨ ಷಾನುಭಾವಾ ಯದರಿ ಮಹೀಭುಜಾವ್ಯಂ ಷಯತ್ಯಾಖ ನಾಶಂ ॥ ಏಕಃ ಕೋಪಿ ಸವೇಧಸಾ ನಿರುಪಮಃ ೪೨

೪೫ ೪೩ ಸೃಷ್ಟ್ಯೋಯದೀಯಾನ್ಗುಣಾಂ ಧೈರ್ಯ್ಯಾದಿ ನನ್ಕ ರ್ತ್ತು ಮತ್ರನತರಃ ಕಲ್ಯಃ ಕ್ವಚಿದ್ರಿಶ್ಯತೇ ಯತ್ತಸ್ಯ ಪ್ರಬಳ ಪ್ರ ೪೩

೪೬ ೪೪ ತಾಪೇ ವಿಧುರೇ ಪ್ರತ್ಯರ್ತ್ಥಿ ಪೃಥ್ವಿಪಃ ವೈರಾಕ್ರಾನ್ತಾ ಕುಲ ಭೂ ಭೃತೋ ಜಳದಯಸ್ತೀರ್ಣ್ಣಾ ವಿದೀರ್ಣ್ಣಾ ರವಿಃ ॥ ಅ ೪೪

೪೭ ೪೫ ಸ್ತು ಸ್ವಸ್ತಿ ನಮತ್ಸಮಸ್ತ ನೃಪತಿ ಶ್ರೇಣೀ ಕಿರೀಟ ಸ್ಫುರನ್ಮಾಣಿಕ್ಯ ಪ್ರಕರಾರ್ಚಿತರ್ಚ್ಚಿತ ಪದ ದ್ವಂದ್ವಾರವಿಂದ ಶ್ರಿ ೪೫

೪೮ ೪೬ ಯೇ । **ಶ್ರೀಮತ್ಕಾಮಮಹೀಭುಜೇ** ಪ್ರತಿಭಟಕ್ಷ್ಮಾಪಾಳ ಭಾಳಾಕ್ಷಃ ಬ್ರಾತಕ್ಷಾಳನ ದಕ್ಷ ದಕ್ಷಿಣ ಭು ೪೬

೪೯ ೪೭ ವ ನಿಸ್ತ್ರಿಂಶ ಧಾರಾಂಭಸೇ ॥ ಕನ್ಮಿರೋರ್ವ್ವಿವಳಯ ತಿಳಕ **ಶ್ರೀಧರಾಮಾತ್ಯ** ಸೂನೋರ್ದವಾಯ್ಯಸ್ಯ ಸ್ಥಿರ ಪದ ವಚಃ ಕಾಮಿನೀ ೪೭

೫೦ ೪೮ ದತ್ತ ಹಸ್ತಾನಿಜ್ಜತ್ಯೂಹಂ ವಿಹರತುತರಾಂ ಚಕ್ರವಾಳಾದ್ರಿ ಕುಜೇ । ಕಲ್ಪಾಂತರೇ ಕುಮುದ ವಿಶದಾ **ಕಾಮಭೂಪ** ೪೮

೫೧ ೪೯ ಸ್ಯ ಕೀರ್ತ್ತಿ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಣ್ಡಳೇಶ್ವರೇ **ಕಾಂಚೀಪುರವರಾಧೀಶ್ವರೇ** ಯದುವಂಶಾಂ ೪೯

೫೨ ೫೦ **ಬರದ್ಯುಮಣಿ** ಸುಭಟ ಚೂಡಾಮಣೀ ಮಹೇಂದ್ರಮಣಿ ಮಕುಟ ಕೋಟಿ ವಿಘಟಿತ ನಿಜ ವಿಜಯಕರ ಕಂ ೫೦

೫೩ ೫೧ ಕಣಂ ಲೀಲಾಮಾತ್ರ ಸಾಧಿತ ಸಪ್ತಕೊಂಕಣೇ । ಕನಕನಗ ಶಿಳಾತಳ ಸ್ಥಾಪಿತ **ಪಾಠೀನ ಲಾಂಛನ ಜಯಸ್ತಂಭಂ** ದೂರೀ ೫೧

೫೪ ೫೨ ಕೃತಾರಾತಿ ವೀರಾವಷ್ಟಂಭೇ ತಾಂಬ್ರಪರ್ಣ್ಣೀ ನಿರ್ಣ್ಣೀಕ್ತ ಮೌಕ್ತಿಕ ಯುಕ್ತಾನೇಕ ರತ್ನಾಕರಾ ಮುದ್ರಮುದ್ರಿತ ಸಮು ೫೨

೫೫ ೫೩ ದ್ರ ಭಾಂಡಾಗಾರಂ ಮಳಯಗಿರಿ ಕಂದರ ಚನ್ದನಂದನ ಮಧ್ಯದೇಶ ನಿವೇಶಿತ ಶ್ರಿಂಗಾರಾಂಗಾರೇ। ಕಿಂಕರೀಕೃತ ಭೂತವೇತಾ ೫೩

೫೬ ೫೪ ಳ ಮಂಡಳಂ ಸ್ವೀಕೃತಾನೇಕ ರಿಪುನೃಪತಿ ಮಂಡಳೇ । ಹೇಳಾ ಗೃಹೀತಾಹಿತಾನೇಕ ಜಳಶೈಳದುರ್ಗ್ಗಂ ವಂದೀಕೃತಾರಾ ೫೪

೫೭ ೫೫ ತಿ ವೀರ ಮಂಡಳಿಕವರ್ಗ್ಗ **ಶ್ರೀ ಶಂಕರನಾರಾಯಣ ದೇವ ಚರಣ ಸ್ಮರಣ** ಪರಿಣತಾಂತಷ್ಕಣಂ ಯಾದವಾಭರಣೆ । ಪಾಂ ೫೫

೫೮ ೫೬ ಡ್ಯ ಕುಳ ತಮಿಳಮಾರ್ತ್ತಂಡಂ । **ಪರಿಚ್ಛೇದಿಗಂಡೇ**। ರಾಜಿಗ ಚೋಳ ಮನೋಭಂಗಂ ಸಾಹಸೋತ್ತುಂಗೇ। ಇತ್ಯಖಿಳ ನಾಮಾವಳೀ ೫೬

೫೯ ೫೭ ಸಮಾಳಂಕೃತೇ ಶ್ರೀಮನ್ಮಹಾಮಣ್ಡಳೇಶ್ವರೇ **ವಿಜಯ ಪಾಂಡ್ಯದೇವೇ** ದಿಕ್ಕುಂಭಿ ಕುಂಭಕೂಟ ಸಮುನ್ನತೇನ ಪನ್ನೆಗ ೫೭

೬೦ ೫೮ ರಾಜಭೋಗ ನಿರ್ಬ್ಭರಾಭೋಗೇನ ಕಮಠಪತಿ ಕವಾಟ ಕರ್ಕ್ಕಶೇನ । ಸಕಳ ಭುವನ ಭವನಾಭಯ ದೀಕ್ಷಾದಾನ ೫೮

೬೧ ೫೯ ದಕ್ಷೇನ ದಕ್ಷಿಣಭುಜೇನ ಸಕಳ ಮವನೀ ತಳ ವಳಯಂ ಸರಸ ಮಳೆಯುಜ ಸ್ಥಾಸಕಮಿವ ಸವಿಳಾಸಮು ೫೯

೬೨ ೬೦ ದ್ವಹನ್ನನವರತ ಮಾ ಮದಖಿಳ ನರಪತಿ ಪಟಳ ಮಕುಟ ತಟ ಘಟಿತ ಮಶೃಣ ಮಣಿ ಮರೀಚಿ ವೀಚಿ ಸಂ ೬೦

೬೩ ೬೧ ಚಾರ ಸಂಭೇದಮೇದುರಚರಣ ನಖ ಕಿರಣ ಚಕ್ರವಾಳ ವಾಲ ಬ್ಯಜನ ಸಂತರ್ಪಿತ ಸಕಳ ಜಗಜ್ಜನ। ಶ್ರೀ ೬೧

೬೪ ೬೨ ಮದುತ್ತುಂಗ ನಗಾಭೇದಾನಾಂ ರಾಜಧಾನಿ ಮಧಿಷ್ಠಾಯ ದುಷ್ಟ ನಿಗ್ರ ಶಿಷ್ಟಾನುಗ್ರಹ ಪುರಸ್ಸರಂ ೬೨

೬೫ ೬೩ ಸುರಿ

ಹಿಂಬದಿ

(ಚಂದ್ರ) (ಸೂರ್ಯ)

(ಹಸುಕರು) (ಅರ್ಚಕ) (ಶಿವಲಿಂಗ) (ನಂದಿ)

೬೬ ೬೩ ಸುಖಸಂಕಥಾ ವಿನೋದೇನ ರಾಜ್ಯಂ ಕುರ್ವ್ವಂ ತತ್ಪಾಧಪದ್ಮೋಪಜೀವಿ । ಲೋ . ಸಿ ಮ ವಿಭವ ದಿವೇ ದಕ್ಷಾ . . . ೬೩

೬೭ ೬೪ . . ನ . . ದ . . ಂಣ . . ॥ . . ವೇ . . . ಕಾಲಸಿದೌದ್ವಿಗು . . ೬೪

೬೮ ೬೫ . . . . . ರ . . . ಬಾಣ ಮಾ . . . . . . ಯಬಾ . ಕ ಷುರ್ಯ . . ೬೫

೬೯ ೬೬ ಮ . ನಾಮ . . . ವಿ . . ಯಿ . . . ನ ಧರ್ಮ್ಮವ . . . . ಳಿಕಮಳ ಕು . . . ೬೬

೭೦ ೬೭ . ರ ಶ್ರೀ ನಿದಾನ . . ಪ . ಬ ಕಣನ. ರಜ್ಯ . . ರ ಯ . . . ನನ್ತ ಭೂತಿಃ ತಸ್ಯಾದಿ ಭಟ್ಟಾರಕ ನಾಮಧೇಯಃ ೬೭

೭೧ ೬೮ ತಾವಿದೇಯಃ ॥ ಬ್ರ ಭಾಗದೇಯ . ವ . . ಂವ ಸೂಸು . . ಭು ರೂ ಸದೇಯ . . . . ಖ : ೬೮

೭೨ ೬೯ ಧರ್ಮ್ಮವ . ದೇಯ . . ವಿಲಾಸ . . . ಣಾ . . . . ಸ್ನು . . . ಯಸ್ಯ ಕಾಮ . . ರ್ತ್ತಿ . . . ೬೯

೭೩ ೭೦ . . . . . . . . . . ಜನಾಸು . . ರ . . ಕಾಮ . . . ವನ . . ಪುರಾ . . . . ಮುರ

೭೪ ೭೧ . . . . . . ವರಭೂ . . . . . . . ಕ್ರ . . . ವ . . . ಣ . . . ॥ ಇ . ದ . . ವಿ . . . .

೭೫ ೭೨ ವಿಜ . . . . . . . . ಯ . . . . . . . . . . . . . . .

೭೬ ೭೩ ಯ . . . . . . . . . . . . . . . . . . . . . .

೭೭ ೭೪ ರಾ ಕಿ ಳ . ಪ್ರ . . . . . . . . . . . . . . . . . . . . .

೭೮ ೭೫ ಸು . . . . . . . . . . . . . . . . . . . ಃ ಕಥಿ .

೭೯ ೭೬ . . . . . . . . . . . . . . . . . . . ಯ .

೮೦ ೭೭ ಕ್ಷಿ ಮೇರಾಚ್ಛಾ . . . . . . . . . . . . ಹ .

೮೧ ೭೮ ವನಪ . . . . . . . . . . . . . . . ಮ .

೮೨ ೭೯ ಕೈರ . . . . . . . . . . ಶ್ವ . . . . . . . . . . . ಯನಃ ॥ .

೮೩ ೮೦ ಯ . . . . . . . . . . . . . . . . . . . . . .

೮೪ ೮೧ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರಧಾನಂ ಶ್ರೀಕರಣ ಸರ್ಬಾಧ್ಯಕ್ಷ . . ದಂಣ್ನಾಯಕಂ ಮ . .

೮೫ ೮೨ . ದ್ರ ಮಹಾಪಸಾಯಿತ ಕುಮಾರ **ವಿಜಯ ಪೆರ್ಮ್ಮಾಡಿ ದಂಣ್ನಾಯಕರು** ಸಕ ನೃಪಾತೀತ .

೮೬ ೮೩ . ಸಂವತ್ಸರಂ ೧೧೯೩ನೆಯ ಖರ ಸಂವತ್ಸರದ ಶ್ರಾವಣ ಮಾಸದ ಪೌರ್ನ್ನಮಿಯ ಆದಿವಾರ ಸೋಮ .

೮೭ ೮೪ ಗ್ರಹಣದಂದು **ಶ್ರೀಮದ್ವಿಜಯ ಪಾಣ್ಡ್ಯದೇವರ್ಸ** . ಪ್ರಸ್ಥಾನದಲು . . . ರೆಯ್ದು . . . .

೮೮ ೮೫ರ ಸಾಯಿರ ನಾಡ . . ಅಯ್ವತ್ತಾಱು . . ಗದೊಳಗಣ ಶ್ರೀಮದನಾದಿಯಗ್ರಹಾರಂ **ಲೊಕೆ** .

೮೯ ೮೬ **ಯು ಕೆಱೆಯುಶೇಷ** ಮುಹಾಜನಂಗಳ [ನೆರವಿ]ಯವ . . ಮತಿ [ಯ] **ಮಹಾದೈವ ಕೈಲಾಸದೊಡೆಯದೇ** .

೯೦ ೮೭ ವರಂಗಭೋಗ ನಿವೇದ್ಯ ನನ್ದಾದೀವಿಗೆ [ಜೀರ್ಣ್ನೋದ್ಧಾರ] . ಯ . . . . ಜೆ .

೯೧ ೮೮ ಯಂ ಶ್ರೀಮದ್ವಿಜಯ ಪಾಣ್ಡ್ಯದೇವರು ಸರ್ವ್ವ ನಮಶ್ಯಿವಾಯವಾಗಿ ಧಾರಾಪೂರ್ಬ್ಬಕಂ ಮಾಡಿಸಿ ॥

೯೨ ೮೯ ಕೊಟ್ಟ . . ಭೂಮಿಯ ಸ್ಥಳ ಹಿರಿಯ ಕೆಱೆಯ ಬ್ರಹ್ಮಯ್ಯನ ತುಂಚಿನ ತೆಂಕಣೆರೆಸೆಯಲು ತೋ .

೯೩ ೯೦ ಟ . . ನಭೂಮಿ ಕಂಬ ಸಾಸಿರ ಕಂಬ ೧೦೦೦ ಆನೆಯ ಬಾದಿಯಿಂದ ಗಣಮೆಯ್ಯ .

೯೪ ೯೧ ರದೆನೆಯ ಕ ನಾಡಿಂ ತೆಂಕಲು ತೋಟ . . ಕಂಬ ಸಾಸಿರ ಕಂಬ ೧೦೦೦ ಪ್ರಥ . . ಸ್ಥಳ ತ್ರಿಲೋಚನ .

೯೫ ೯೨ ಬಾಯಕಾಲಿಂ ತೆಂಕಲು ಮೂಲಗೆ ಕನದೇವರ ಮತ್ತರ್ . . ಹಡುವಲು ತೆಂಕಣ ಮೊದಲ್ ಕರ್ಣ್ನಾ .

೯೬ ೯೩ ಟಿಂ ಬಡಗಲು ಮೂಡಣಿಂ ಹಡುವ . ಮುನ್ತಾಗಿ ಯೊನ್ದು ಸ್ಥಳದಲು ಗರ್ದ್ದೆ ಮತ್ತರೈಯ್ದು .

೯೭ ೯೪ ದ್ದೆ ಮತ್ತರು ೫ ಪಾರ್ಬ್ಬತಿ ವಡಿಯಿನ್ದಂ ಮೂಡಲು ಮೂಱನೆಯ [ಕಣ್ಣೇ] ಜೆ ಬಡಗಲು . ೯೪

೯೮ ೯೫ ಲೆನೆ ಯಿ ಕನ್ನಾಟಿ ತೆಂಕಲು ಕಕುಕೆಱೆಯಿಂ ಹಡುವಲು ಗದ್ದೆ ಮತ್ತರೆರಡು ಕಂಬ ಮೂ ೯೫

೯೯ ೯೬ ಱು ಮತ್ತರು ೨ ಕಂಬ ೨೦೦ ಪ್ರತಿಯ ಸ್ಥಳ ಹಿರಿಯ ಕೆಱೆಯ ತೆಂಕಣ ಕೋಡಿಯ ೯೬

೧೦೦ ೯೭ [ತುಂ]ಬಿನ್ದ ಹಡು ಮುನ್ನಾಗಿ ಹೋದ **ಸುಬ್ರಹ್ಮಣ್ಯ ಬಾಯಿಕಾಲಿನ್ದ** ಬಡಗಲು ಮೂವತ್ತೊಂಭತ್ತು ೯೭

೧೦೧ ೯೮ ಗಳೆ ೩೯ . ಟ್ಟು ಬಡಗ ಮುನ್ನಾಗಿ ಹೋದ ಬಾಯಿಕಾಲಿಂ ಹಡುವಲು ಇಬ್ಬರ ಗ . . ಗಳೆ ೫೦ ಇನ್ನೆ . ೯೮

೧೦೨ ೯೯ . . ಗಳೆ ೫೦ರ ಕಡೆ ಮತ್ತರು ಮೂಱು ಮತ್ತರು ೩ ತಣ್ಣೀರೇರಿಯ ಕೆಳಗೆ . . ಮುನ್ದೆ ೯೯

೧೦೩ ೧೦೦ ಹೋದ ಬಾಯಿಕಾಲತ್ತಲ ಹೂದೋಂಟ ಕಂಬ ನೂಱೆಯ್ವತ್ತು ಕಂಬ ೧೫೦ ಆ ಬಾಯಿಕಾಲ ಬ ೧೦೦

೧೦೪ ೧೦೧ ಡಗಲು ಮೂಲಸ್ಥಾನ ದೇವರ ಗಳೆ ೧ ದೊಂದಿಂ ಹಡುವಲು ಕಂಬ ವಿನ್ನೂಱೆಯ್ವತ್ತು ಕಂಬ ೨೫೦ ೧೦೧

೧೦೫ ೧೦೨ ಬೆದ್ದಲೆ **ಕೋಲು ಗೂಟೆಯ** ದಾರಿಯಿನ್ದ ಹಡುವಲು ತೆಂಕಲು ಕೆಱೆಯ ಕೋಡಿಯಿಂ ಬಡಗ ೧೦೨

೧೦೬ ೧೦೩ ಲು ಹಡುವಲು ಹಾಲೆಗೆಱೆಯೊಳಗಣ. ಬಡಗ ಮುನ್ನಾಗಿ ಹೋದ ಬಂಡಿದಾರಿ ಯಿನ್ದ ಮೂ ೧೦೩

೧೦೭ ೧೦ ಡಲು ಬಡಗ ಬಿಳಿಯ ಕಲ್ಲಿಂ ತೆಂಕಲಿನ್ತು ನಾಲ್ಕುಂ ಸೀಮೆಯಿನ್ದೊಳಗುಳ್ಳ ಬೆದ್ದಲುಂ ಮತ್ತಂ ಕ ೧೦೪

೧೦೮ ೧೦೫ ಪ್ಪಡಿಗೆಱೆಯ ಮೂಡಗೋಡಿಯೊಳ ಮೆಯ್ಯಲು ಕರಿಯ ಭೂಮಿ ಮತ್ತರು ಮೂ ೧೦೫

೧೦೯ ೧೦೬ ಱು ಮತ್ತರು ೩ ತುಡುಕ ಬಡಗಣ [ಹಿಂ] ಬಾಗಿಲ ಮೂಡಲಗಟ್ಟಿನ್ದಂ ಬಡಗ ಮೂಡಲಾ ೧೦೬

೧೧೦ ೧೦೭ ಗಿ **ಕೋಲುಗೂಟೆಯ** ದಾರಿ ವರದೇವರ್ಗ್ಗೆ। ದೇವರ ತೆಂಕಣ ದೆಸೆಯಲು ಬೀಡಿಗೆ ನಾಲ್ಕು ಗ ೧೦೭

೧೧೧ ೧೦೮ ಳೆಯ ಸರವ ಬಿಟ್ಟು ತೆಂಕಲು ಹದಿನೇಳು ೧೭ ಕೋಲು ನೀಳ ಹಡುವಲು ಬ್ರಾಹ್ಮಣರ ೧೦೮

೧೧೨ ೧೦೯ ಮನೆಯಿನ್ದಂ ಮೂಡಲು ಗವನಿವರಂದೇವರ ಮೂಲೆ ಸೀಮೆ ॥ ನೇಜಿಲ ಕೆಱೆಯ ಕೆಳಗೆ ಮೊದ ೧೦೯

೧೧೩ ೧೧೦ ಲೇರಿಯಲ್ಲು ಪೂಜಾರಿಗೆ ಕಂಬ ಸಾಸಿರ ಕಂಬ ೧೦೦೦ ಅಲ್ಲಿ ಪರಿಚಾರಕರ್ಗ್ಗೆ ಬಿಟ್ಟ ಕಂಬ ಸಾ ೧೧೦

೧೧೪ ೧೧೧ ಸಿರಂ ಕಂಬಂ ೧೦೦೦ ಅಲ್ಲಿಂ ಬಡಗಲು ಪೂಜಾರಿಗೆ ಬೆತಲೆ ಮತ್ತರೊನ್ದು ಮತ್ತರಂ ೧ ಅಲ್ಲಿ ಪರಿ ೧೧೧

೧೧೫ ೧೧೩ ಯಾಯ ಬೆದ್ದಲ ಮತ್ತರೊನ್ದು ಮತ ೧। **ಶ್ರೀ ಕೈಲಾಸದೊಡೆಯ ದೇವರ ನಿವೇದ್ಯಕೆ** ೧೧೨

೧೧೬ ೧೧೪ ಊರೊಳಗಳ ದೇವರ್ಗ್ಗೆ [ಲ*] ಹೊಂಗೆ ವೀಸವೊಂದು ಅಯ್ವತಾಱುಂ ೧೧೪

೧೧೭ ೧೧೫ ಬಾಡದ ಕೊಡವೀಸ ಆಜ್ಞ್ಯಕಂ ಬೀರಬೀರವಣಂ ದೇವರ ೧೧೫

೧೧೮ ೧೧೬ ನಂದಾದೀವಿಗೆ ಗದವಣಂ ನಿವೇದ್ಯಕಂ ಬಿಟ್ಟರೀ ಧರ್ಮ್ಮ ೧೧೬

೧೧೯ ೧೧೭ ವಂ ಪ್ರತಿಪಾ . . ಶ್ರೀ ॥ ಸ್ವಸ್ತಿಶ್ರೀ ಮದನಾದಿಯಗ್ರಹಾರಂ **ಲೊಕ್ಕಿಯ ಕೆಱೆಯಶೇ** ೧೧೭

೧೨೦ ೧೧೮ ಷ ಮಹಾಜನಂಗಳಾವೂರ ಶ್ರೀ **ಕೈಲಾಸದೊಡೆಯ ದೇವರಂಗ** ಭೋಗಕ್ಕೆ ಧಾರಾಪೂರ್ವ್ವ ೧೧೮

೧೨೧ ೧೧೯ ಕಂಮ್ಮಾಡಿ ಕೊಟ್ಟ ಭೂಮಿ ಹಿರಿಯ ಕೆಱೆಯ ತೆಂಕಣ ಕೋಡಿಯೊಳಗೆ ಮಣಲ ೧೧೯

೧೨೨ ೧೨೦ ಕೆಱೆಯ ದಾರಿಯಿದ್ದ ತೆಂಕಲು ಹಡುವ ವಾಸುದೇವರಿಮ್ಮತರಂ ಕಳೆದಲ್ಲಿಂ ಮೂ ೧೨೦

೧೨೩ ೧೨೧ ಡಲು ಬೆದ್ದಲೆ ಮತ್ತರೆರಡು ಮತ್ತರು ೨ ಮಂಗಳ ಮಹಾ ಶ್ರೀ ಶ್ರೀ ಯಿನ್ತೀ ಧರ್ಮ್ಮ ೧೨೧

೧೨೪ ೧೨೨ ಮಂ ಪ್ರತಿಪಾಳಿಸಿದವರ್ಗ್ಗೆ ಸಾಸಿರ ಕವಿಲೆಯ್ಮನಳಂಕಾರ ಸಹಿತ ವೇದ ಪಾ ೧೨೨

೧೨೫ ೧೨೩ ರಗರಪ್ಪ ಬ್ರಾಹ್ಮಣರ್ಗ್ಗೆಯುತ್ತರಾಯಣ ಸಂಕ್ರಾನ್ತಿ ವ್ಯತೀಪಾತ ಸೂರ್ಯ್ಯಗ್ರ ೧೨೩

೧೨೬ ೧೨೪ ಹಣಂಗಳಲು ಧಾರಾಪೂರ್ಬ್ಬಕಂ ಕೊಟ್ಟ ಮಹಾಫಲಮಕ್ಕು । ಈ ಧರ್ಮ್ಮವನಾವನಾ ೧೨೪

೧೨೭ ೧೨೫ ಗಿಯೊರ್ಬ್ಬನಳಿದವಂಗೆ ಶ್ರೀ ವಾರಣಾಸಿ ಕುರುಕ್ಷೇತ್ರವಗ್ನಿತೀರ್ತ್ಥ ಭಾಸ್ಕರ ೧೨೫

೧೨೮ ೧೨೬ ಕ್ಷೇತ್ರದಲು ಸಹಸ್ರ ಬ್ರಾಹ್ಮಣ ಶೂತಾಧ್ಯಾಯಿಗಳಂ ಸಾಯಿರ ಕವಿಲೆ ೧೨೬

೧೨೯ ೧೨೭ ಯ ಕೊನ್ದ ಮಹಾಪಾತಕ ಮಕ್ಕು ॥ ಸ್ವದತ್ತಃ ಪರದತ್ತಃ ವಾಯೋಹರೇತಿ ವ ೧೨೭

೧೩೦ ೧೨೮ ಸುಂದರಾಂ ಷಷ್ಠಿರ್ವ್ವರ್ಷ ಸಹಸ್ರಾಣಿ
ವಿಷ್ಠಾಯಾಂ ಜಾಯತೇ ಕ್ರಿಮಿ ॥ ವಾಜೀ ೧೨೮

೧೩೧ ೧೨೯ ಕುಳ ಕಮಳ ಸೂರ್ಯ್ಯಃ ಭ್ರಾಜದ್ವಿಭು
ಸೋಮಣಾರ್ಯ್ಯ ತನೆಯಂ ಬರೆದಂ ರಾ ೧೨೯

೧೩೨ ೧೩೦ ಜಿಸುವೀ ಶಾಸನಮಂ ಸೌಜನ್ಯಾಭರಣನೆನಿಪ
ಮಹಾದೇವಾರ್ಯ್ಯಂ ॥ ಮಾಣಿಯೋಜಂ ೧೩೦

**ಶಾಸನದ ವಿವರ**

ಶಾಸನದ ಮುಂಬದಿಯಲ್ಲಿ ಮೊದಲ ಎರಡು ಪಂಕ್ತಿಗಳಾದ ಮೇಲೆ ಮೂರನೆಯ ಪಂಕ್ತಿಯಿಂದ, ಪ್ರತಿ ಪಂಕ್ತಿಯ ಆರಂಭದಲ್ಲಿ ಮತ್ತು ಅಂತ್ಯದಲ್ಲಿ ಪಂಕ್ತಿಯ ಕ್ರಮಸಂಖ್ಯೆಯನ್ನು ಹಾಕಲಾಗಿದೆ. ಆದರೆ ಆರಂಭದ ೨೦ ಪಂಕ್ತಿಗಳವರೆಗೆ ಅನೇಕ ಅಕ್ಷರಗಳ ಜೊತೆಗೆ ಆದ್ಯಂತರ ಕ್ರಮಸಂಖ್ಯೆಗಳೂ ನಷ್ಟವಾಗಿದೆ. ಅಲ್ಲಿಂದ ಮುಂದಿನ ಕ್ರಮಸಂಖ್ಯೆಗಳು ಅಲ್ಲಲ್ಲಿ ಕಚ್ಚುಗಳಾಗಿದ್ದರೂ ಉಳಿದುಬಂದಿದೆ. ಮುಂಬದಿಯಲ್ಲಿ ೬೩ರವರೆಗೆ ಸಂಖ್ಯೆಗಳನ್ನು ಹಾಕಲಾಗಿದೆ. ಮುಂಬದಿಯ ಆ ಕೊನೆಯ ಪಂಕ್ತಿಯಲ್ಲಿ ಎರಡೇ ಎಡು ಅಕ್ಷರಗಳನ್ನು ಮಾತ್ರ ಕೊಡಲಾಗಿದ್ದರೂ ಅದಕ್ಕೆ ೬೩ ಎಂದು ಕ್ರಮಸಂಖ್ಯೆ ಹಾಕಲಾಗಿದೆ. (ಆದರೆ ಅದನ್ನು ಗಣನೆಗೆ ತೆಗೆದುಕೊಂಡಿಲ್ಲವೇನೋ ಎಂಬಂತೆ) ಹಿಂಬದಿಯ ಬರಹದ ಮೊದಲ ಪಂಕ್ತಿಗೂ ೬೩ ಎಂದೇ ಕ್ರಮಸಂಖ್ಯೆ ಹಾಕಿದೆ. ಹೀಗೆ ಹಿಂಬದಿಯ ಬರಹ ೬೩ನೆಯ ಕ್ರಮಸಂಖ್ಯೆಯಿಂದ ಪ್ರಾರಂಭವಾಗಿ ೧೩೦ನೆಯ ಕ್ರಮಸಂಖ್ಯೆಯೊಂದಿಗೆ ಮುಕ್ತಾಯವಾಗಿದೆ. ಮಧ್ಯೆ ೧೧೨ರ ಸಂಖ್ಯೆ ಬಿಟ್ಟು ೧೧೩ ಎಂದು ಹಾಕಲಾಗಿದೆ. ಹೀಗಾಗಿ ಇಡೀ ಶಾಸನ ಬರಹ ಒಟ್ಟು ೧೩೨ ಪಂಕ್ತಿಗಳನ್ನು ಹೊಂದಿದೆ.

ಶಾಸನ ಬರಹದ ಅಭಿಪ್ರಾಯುವನ್ನು ಹೀಗೆ ಸಂಗ್ರಹಿಸಬಹುದು :

ಶಿವನಿಗೆ ನಮಸ್ಕಾರ : ಗಣಪತಿಗೆ ನಮಸ್ಕಾರ. ಚಂದ್ರನಿಂದ ಹುಟ್ಟಿಬಂದ ಯಾದವ ವಂಶ ಪರಂಪರೆಯಲ್ಲಿ ಪಾಂಡ್ಯ ದೇಶಕ್ಕೆ ರಾಜನಾದ ಚೇದಿರಾಜನು ಪಾಂಡ್ಯರಾಜ ಎಂದು ಹೆಸರಾದನು. ಅವನ ಮಗನೇ ಪರಾಕ್ರಮಿಯಾದ ಪಳಂತ ಪಾಂಡ್ಯ. ಅವನು ಚಾಳುಕ್ಯ ಚೋಳ ದೊರೆಗಳಿಗೆ ಸಾಮ್ರಾಜ್ಯ ವಿಸ್ತರಣೆಯಲ್ಲಿ ತನ್ನ ಪರಾಕ್ರಮದ ಕೊಡುಗೆಯನ್ನು ನೀಡಿದವನು. ಇವನ ಮಗ ಇರುಕ್ಕವೇಳ ಶೂರನಾದ ಇವನಿಗೆ ಮಗನಾಗಿ ಬಂದವನು ರಾಯಪಾಂಡ್ಯ. ಅವನಿಗೆ ಸಾಟಿಯೆನಿಸಿದ ಸತಿ ರಾಣಿ ಸೋಮದೇವಿ. ಇವರಿಬ್ಬರ ಮಗನೇ ಪಂಡಿತಪಾಂಡ್ಯದೇವ. ಇವನ ತಮ್ಮ ವೀರಪಾಂಡ್ಯ. ಇವರಿಬ್ಬರೂ ಸಹ ತಮ್ಮ ವಂಶದ ವೀರಪರಂಪರೆಯನ್ನು



ಶಾಸನದ ಹಿಂಭಾಗ



ಶಾಸನದ ಮುಂಭಾಗ



**ಕಳಸದೊಡೆಯ (ಈಶ್ವರ) ದೇವರ ದೇವಸ್ಥಾನ**

ಮುಂದುವರಿಸಿದರು. ಇವರ ತಮ್ಮ ಅಂದರೆ ರಾಯಪಾಂಡ್ಯನ ಇನ್ನೊಬ್ಬ ಮಗನೇ ವಿಜಯಪಾಂಡ್ಯ. ಇವನಿಗೆ ಕಾಮ ಎಂಬ ಇನ್ನೊಂದು ಹೆಸರೂ ಇತ್ತು. ವಿಜಯಪಾಂಡ್ಯನು ಕೂಡ ಮಹಾಶೂರನಾಗಿ ಶತ್ರುಭಯಂಕರನೆನಿಸಿದ್ದನು. ಸಪ್ತಕೊಂಕಣಗಳನ್ನು ಗೆದ್ದು, ಕನಕಪರ್ವತದ ಮೇಲೆ ಮತ್ಸ್ಯಲಾಂಛನವಿರುವ ಜಯಸ್ತಂಭವನ್ನು ಸ್ಥಾಪಿಸಿ ಕೀರ್ತಿ ಪಡೆದ ಹಿಂದಿನ ದೊರೆಗಳ ಪರಂಪರೆಯನ್ನು ಮುಂದುವರಿಸಿ, ಯಾದವವಂಶದ್ಯುಮಣಿ, ಪಾಂಡ್ಯಕುಲ ಕಮಲಮಾರ್ತಾಂಡ, ಶಂಕರನಾರಾಯಣ ದೇವರ ಪಾದಸ್ಮರಣೆಯನ್ನು ಸದಾ ಅಂತರಂಗದಲ್ಲಿ ಮಾಡುವವನೂ, ಭೂತ ಬೇತಾಳಗಳನ್ನು ತನ್ನ ಕಿಂಕರರನ್ನಾಗಿ ಮಾಡಿಕೊಂಡಿದ್ದವನು, ರಾಜಿಗ ಚೋಳನ ಆಸೆಯನ್ನು ಭಂಗಗೊಳಿಸಿದವನು, ಪರಿಚ್ಛೇದಿ ಗಂಡ ಎನಿಸಿದವನು ಎಂದು ಮುಂತಾಗಿ ಕೀರ್ತಿತನಾದವನು. ವಿಜಯಪಾಂಡ್ಯ ರಾಜ ಮಹಾಮಂಡಲೇಶ್ವರನಾಗಿ ಆಳುತ್ತಿದ್ದ ಕಾಲಕ್ಕೆ ಮಹಾಪ್ರಧಾನನಾಗಿದ್ದ ವಿಜಯ ಪೆರ್ಮ್ಮಾಡಿ ದಣ್ಣಾಯಕನು, ಶಾಲಿವಾಹನ ಶಕ ವರ್ಷ ೧೦೯೩ನೆಯ ಖರ ಸಂವತ್ಸರದ ಶ್ರಾವಣ ಮಾಸದ ಪೌರ್ಣಮಿಯ ಆದಿತ್ಯವಾರ ಚಂದ್ರಗ್ರಹಣದ ದಿನದಂದು ಶ್ರೀಮತ್ ಅನಾದಿ ಅಗ್ರಹಾರವೆನಿಸಿದ ಲೋಕ್ಕೆಯಕೆರೆಯ ಮಹಾಜನರಿಗೆ, ಆ ಸ್ಥಳದ ಮಹಾದೈವ ಕೈಲಾಸದೊಡೆಯ ದೇವರಿಗೆ, ಅದರ ಅಂಗಭೋಗ, ರಂಗಭೋಗ, ನೈವೇದ್ಯ, ನಂದಾದೀವಿಗೆ, ಜೀರ್ಣೋದ್ಧಾರ ಮುಂತಾದ ಸೇವೆಗಳಿಗಾಗಿ, ಕೆರೆಯ ಕೆಳಗಿನ ಗದ್ದೆ ಮತ್ತು ಇತರೆಡೆಯ ಬೆದ್ದಲು ಭೂಮಿಗಳನ್ನು ತೋಟ ಇವನ್ನು ಕೊಟ್ಟುದಲ್ಲದೆ, ಇಲ್ಲಿಯ ಪೂಜಾರಿಗೆ ಪರಿಚಾರಕರಿಗೆ ಸಹ ಕೆಲವು ಭೂಮಿಯನ್ನು ನೀಡಲಾಯಿತು. (ಕೆಲವು ಶಾಪಾಶಯಗಳ ನಂತರ) ಈ ಶಾಸನ ರಚಿಸಿದವನು ವಾಜಿಕುಲಕ್ಕೆ ಸೇರಿದ ಸೋಮಣಾರ್ಯನ ಮಗನಾದ ಮಹಾದೇವಾರ್ಯ ಮತ್ತು ಇದನ್ನು ಕಂಡರಿಸಿದವನು ಮಾಣಿಯೋಜ.

ಈ ಶಾಸನ ಹಾಕಿಸಿದ ಶಾಲಿವಾಹನ ಶಕವರ್ಷ ೧೦೯೩ನೆಯ ಖರ ಸಂವತ್ಸರದ ಕ್ರಿಸ್ತಶಕದ ೧೧೭೧ನೆಯ ವರ್ಷವಾಗುತತದೆ. ಇದು ಉಚ್ಚಂಗಿ ಪಾಂಡ್ಯರಾಜವಂಶದ ವಿಜಯಪಾಂಡ್ಯನ ಕಾಲದ್ದು ಎಂಬುದೂ ಇವನು ರಾಯಪಾಂಡ್ಯದೊರೆಯ ಮೂರನೆಯ ಮಗನೆಂಬುದೂ ಶಾಸನದಲ್ಲಿ ಸ್ಪಷ್ಟವಾಗಿದೆ. ಈ ರಾಜವಂಶದ ಚರಿತ್ರೆಯ ಎಷ್ಟೋ ಭಾಗ ಇನ್ನೂ ಅಸ್ಪಷ್ಟ ಸ್ಥಿತಿಯಲ್ಲೇ ಇದ್ದು ಆ ವಂಶದ ಒಂದು ಹಂತದ ವಂಶವೃಕ್ಷ ವಿವರವನ್ನು ಈ ಶಾಸನ ನೀಡುತ್ತದೆ. ಕಲ್ಯಾಣ ಚಾಳುಕ್ಯ ಚಕ್ರವರ್ತಿಗಳ ಅಧೀನರಾಗಿ ಈ ವಂಶದ ದೊರೆಗಳು ನೊಳಂಬ ಪಲ್ಲವರ ತರುವಾಯದಲ್ಲಿ ನೊಳಂಬ ವಾಡಿ ೩೨೦೦೦ ಪ್ರಾಂತವನ್ನು ಆಳಿದರೆನ್ನುವುದೂ ಇವರು ಹರಿಹರದ ಹರಿಹರೇಶ್ವರ (ಶಂಕರನಾರಾಯಣ) ದೇವರ ಭಕ್ತರಾಗಿದ್ದರೆನ್ನುವುದೂ ಈಗಾಗಲೇ ತಿಳಿದಿರುವ ಸಂಗತಿ. ಈ ಶಾಸನದಲ್ಲಿ ಎಷ್ಟೋ ಭಾಗ ತ್ರುಟಿತವಾಗಿರುವುದರಿಂದ, ಇವರು ಆಳುತ್ತಿದ್ದ ಪ್ರದೇಶ ರಾಜಧಾನಿ ಇವುಗಳ ವಿವರಗಳಾವುವೂ ಇಲ್ಲಿ ಲಭ್ಯವಾಗುವಂತಿಲ್ಲ. ಈಗಾಗಲೇ ಬೆಳಕಿಗೆ ಬಂದಿರುವ ಇದೇ ದೊರೆಯ ಮತ್ತು ಇದೇ ವಂಶದ ದೊರೆಗಳ ಇನ್ನು ಕೆಲವು ಶಾಸನಗಳಿಂದ ವ್ಯಕ್ತವಾಗುವ ಅವರ ರಾಜಕೀಯ ಸಾಧನೆಗಳೂ ಬಿರುದುಗಳೂ ಇಲ್ಲಿ ಇವೆ.

ಇದರಲ್ಲಿ ಬರುವ ಲೊಕ್ಕೆಯ ಕೆಱೆ ಇಂದು ಲೋಕೀಕೆರೆ ಎಂದು ಕರೆಯುವ, ಪ್ರಸ್ತುತ ಶಾಸನವಿರುವ ಗ್ರಾಮವೇ ಆಗಿದೆ. ಇದರಲ್ಲಿ ಕೋಲುಗೂಟೆ ಎಂಬುದಾಗಿ ಹೇಳಿರುವ ಸ್ಥಳ ಇಂದಿನ ಕೋಲುಕುಂಟೆ, ಮಣಲಕೆರೆ ಎಂದಿರುವ ಸ್ಥಳ ಈಗಿನ ಮಳಲ್ಕೆರೆ ಎನ್ನುವಲ್ಲಿ ಸಂದೇಹವಿಲ್ಲ. ಇದರಲ್ಲಿ ಕೈಲಾಸದೊಡೆಯ ದೇವರು ಎಂದು ಹೆಸರಿಸಲಾದ ದೇವರನ್ನು ಈಗ ಕೇವಲ ಈಶ್ವರ ದೇವರು ಎಂದಷ್ಟೇ ಕರೆಯಲಾಗುತ್ತಿದೆ. ಇದೇ ದೇವಸ್ಥಾನದೊಳಗಿನ ಒಂದು ಕಂಬದಲ್ಲಿರುವ ಕ್ರಿ.ಶ ೧೨೩೬ರ ಒಂದು ಶಾಸನದಲ್ಲಿ ರೇತೇಶ್ವರ ದೇವರು ಎಂದು ಹೇಳಿರುವ ದೇವರು ಕೂಡಾ ಇವೇ ದೇವರೇ ಆಗಿರುವ ಸಂಭವವಿದೆ. ಈ ಶಾಸನದಲ್ಲಿ ಬರುವ ಅನೇಕ ಕೆರೆಗಳ ಹೆಸರುಗಳು ಕುತೂಹಲಕಾರಿಯಾಗಿವೆ, ಉದಾ : ಹಿರಿಯ ಕೆಱೆ, ಕಕುಕೆಱೆ, ಹಾಲಗೆಱೆ, ಕಪ್ಪಡಿಗೆಱೆ, ನೇಜಿಲಕೆಱೆ ಮುಂತಾದವು. ಈ ಶಾಸನದಲ್ಲಿ ಕಾಲುವೆಗಳನ್ನು ಬಾಯಿಕಾಲ್ ಎಂದೂ ಕೆರೆ ತೂಬನ್ನು ತುಂಬು ಎಂದೂ ಕರೆಯಲಾಗಿದೆ. ಅವುಗಳಲ್ಲಿ ಸುಬ್ರಹ್ಮಣ್ಯ ಬಾಯಿಕಾಲ್ ಎಂಬೋರು ಬ್ರಹ್ಮಯ್ಯನ ತುಂಬು ಎಂಬ ಹೆಸರೂ ಗಮನ ಸೆಳೆಯುತ್ತದೆ. ಈ ಶಾಸನದಲ್ಲಿ ಬರುವ ಕೆರೆ–ಕಾಲುವೆ ತುಂಬುಗಳ ದಟ್ಟ

ವಿವರದಿಂದ ಒಂದು ಕಾಲಕ್ಕೆ ಇಲ್ಲಿ ನೀರಾವರಿ ಹಾಗೇ ತೋಟ ತುಡಿಕೆಗಳೂ ಗಣನೀಯ ಪ್ರಮಾಣದಲ್ಲಿದ್ದುದು ಸೂಚಿತವಾಗುತ್ತದೆ.

ಈ ಶಾಸನದಲ್ಲಿ ಬರುವ ಸಂಸ್ಕೃತ ಭಾಗ, ಈ ಹಿಂದೆ ಶ್ರೀ ಬಿ.ಎಲ್. ರೈಸ್ ಅವರಿಂದ ಪ್ರಕಟವಾಗಿರುವ ದಾವಣಗೆರೆ ತಾಲ್ಲೂಕಿನ' (ಶಾ.ಶಕ ೧೦೮೯ರ) ಕ್ರಿ.ಶ. ೧೧೬೭ರಲ್ಲಿ ಹಾಕಿಸಲಾದ ೩೯ ಸಂಖ್ಯೆಯ ಶಾಸನದ ಸಂಸ್ಕೃತ ಭಾಗವನ್ನು ಹೋಲುತ್ತದೆ. ಅದರಲ್ಲಿ ಒಟ್ಟು ೮೭ ಪಂಕ್ತಿಗಳಿದ್ದರೆ ಪ್ರಸ್ತುತ ಶಾಸನದಲ್ಲಿ ೧೩೨ ಪಂಕ್ತಿಗಳಿವೆ. ಉಚ್ಚಂಗಿ ಪಾಂಡ್ಯವಂಶದ ಮತ್ತು ವಿಜಯ ಪಾಂಡ್ಯನ ರಾಜಕೀಯ ಚರಿತ್ರೆಗೆ ಈ ಶಾಸನ ಹೆಚ್ಚಿನ ಸಂಗತಿಗಳನ್ನೇನೂ ಸೇರಿಸುವುದಿಲ್ಲವಾದರೂ ಪ್ರಾದೇಶಿಕ ಚರಿತ್ರೆಯ ದೃಷ್ಟಿಯಿಂದ ಈ ಶಾಸನ ಲೋಕೀಕೆರೆ ಸ್ಥಳದ ಚರಿತ್ರೆಯ ಬಗೆಗೆ ಒಂದಷ್ಟು ಸಂಗತಿಗಳನ್ನು ಹೇಳುತ್ತದೆ. ಅಷ್ಟಲ್ಲದೆ ಈ ಶಾಸನ, ಈವರೆಗೆ ದೊರೆತಿರುವ ಉಚ್ಚಂಗಿ ಪಾಂಡ್ಯರ ಶಾಸನಗಳಲ್ಲೇ ಪ್ರಾಯಃ ಅತ್ಯಂತ ದೀರ್ಘವಾದುದು ಎಂಬ ಪ್ರಾಶಸ್ತ್ಯಕ್ಕಂತೂ ಪಾತ್ರವಾಗಿದೆ ಎಂದು ಹೇಳಲೇಬೇಕು.

[ಈ ಶಾಸನವನ್ನು ನನ್ನ ಗಮನಕ್ಕೆ ತಂದ ಛಾಯಾಚಿತ್ರವನ್ನು ಕಳುಹಿಸಿಕೊಟ್ಟ ಶ್ರೀ ಸಂತೇಬೆನ್ನೂರು ಸುಮತೀಂದ್ರ ನಾಡಿಗ್ ಅವರಿಗೆ ಮತ್ತು ಸ್ಥಳೀಯವಾಗಿ ನೆರವಾದ ಶ್ರೀ ಎಸ್.ಬಿ. ಪುರಂದರ, ಶ್ರೀ ಬಿ. ವೀರಭದ್ರಪ್ಪ, ಶ್ರೀ ಎನ್. ಬಸಪ್ಪ ಮತ್ತು ಆ ಗ್ರಾಮಸ್ಥರಿಗೆ ಹಾಗೂ ಶ್ರೀ ವಿ.ಎಸ್. ಸಿದ್ಧಲಿಂಗಪ್ಪ ಸಿಪಿಐ, ದಾವಣಗೆರೆ ಅವರಿಗೆ ನನ್ನ ಕೃತಜ್ಞತೆಗಳು.]

ಡಾ. ಎನ್.ಆರ್. ಲಲಿತಾಂಬ*

# ಮಾವಂತರು-ಪಟ್ಟದ ಇಭದಾರುಕರು

ಕರ್ನಾಟಕದ ಪ್ರಾಚೀನ ಹಾಗೂ ಮಧ್ಯಕಾಲೀನ ಶಿಲ್ಪಗಳು, ಸ್ಮಾರಕಗಳು ಹಾಗೂ ಕಾವ್ಯಗಳು ಆನೆ ಕಾಳಗದ ಭೀಕರತೆಯನ್ನು ಅವುಗಳ ದಿವ್ಯ ಸೌಂದರ್ಯವನ್ನು, ಗಾಂಭೀರ್ಯವನ್ನೂ ವರ್ಣಿಸುವುದರ ಜೊತೆಗೆ ಅವುಗಳನ್ನೇರಿ ಹೋರಾಡುವ ಪರಾಕ್ರಮಿಗಳಾದ ವೀರಾಳುಗಳನ್ನು ಮನದುಂಬಿ ವರ್ಣಿಸಿವೆ. ಆದರೆ ಮದಿಸಿದ ಆನೆಗಳನ್ನು ಪಳಗಿಸಿ ಯುದ್ಧಕ್ಕೆ ಅವಶ್ಯಕವಾದ ತರಬೇತಿ ನೀಡುವ ಸಾಹಸಿಗಳಾದ ವೃತ್ತಿವೀರ ಮಾವಟಿಗರ ಬಗೆಗೆ ಮರೆತುಬಿಡುತ್ತವೆ. (ಯಶೋಧರಚರಿತೆ ಕಾವ್ಯದಲ್ಲಿ ಮಾವಟಿಗನನ್ನು ಖಳನನ್ನಾಗಿ ಚಿತ್ರಿಸಲಾಗಿದೆ) ಈ ಮಾವಟಿಗರು ತಮ್ಮ ವೃತ್ತಿಯಲ್ಲಿ ನಿಪುಣರಾಗಿದ್ದರು. ಯುದ್ಧದ ಆನೆಗಳನ್ನು ಪಟ್ಟದ ಆನೆಗಳನ್ನು ತಿದ್ದಿ ತರಬೇತುಗೊಳಿಸುವುದಲ್ಲದೆ ಅವರು ಸ್ವತಃ ಶೂರರಾಗಿದ್ದು, ರಣರಂಗದಲ್ಲಿ ಹೋರಾಟಕ್ಕೆ ಹೊರಟ ದಂಡನಾಯಕರನ್ನು ಅರಸರನ್ನು ಕಾಪಾಡುವ, ಆಯವರಿತು ಆನೆಗಳನ್ನು ನಡೆಸುವ, ಹುರಿದುಂಬಿಸಿ ಮುನ್ನುಗ್ಗಿಸುವ ಚಾಕಚಕ್ಯತೆಯೊಂದಿಗೆ ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕಾಗಿತ್ತು. ಮಾವಟಿಗನು ವೀರನ ಆಜ್ಞೆ ಅಪೇಕ್ಷೆಗಳನ್ನು ಸೂಕ್ಷ್ಮವಾಗಿ ಅರಿತು ಅದನ್ನು ಕಾರ್ಯಗತಗೊಳಿಸಲು ಆನೆಯನ್ನು ಪ್ರೇರೇಪಿಸಬೇಕಿತ್ತು. ಎಷ್ಟೋ ಬಲಿಷ್ಟವಾದ ಮದಗಜವಾದರೂ ಮಾವತಿಗನ ಮನವನ್ನರಿತು ನಡೆಯುತಿತ್ತು.

ಕಾವ್ಯಗಳು ಮಾವಟಿಗರನ್ನು ಕಡೆಗಣಿಸಿದ್ದರೂ ಶಾಸನಗಳು ಮಾವಟಿಗರಿಗೆ ಅರಸರು ನೀಡುತ್ತಿದ್ದ ಉಂಬಳಿಗಳು, ಮೈಜೀವಿತಗಳ ಬಗೆಗೆ ತಿಳಿಸಿರುವುದಲ್ಲದೆ, ಊರೊಡೆಯರಾಗಿ ಪಸಾಯತರಾಗಿ ಮಹಾ ಪರಾಕ್ರಮಿಗಳಾಗಿ ಅರಸರ ಸೇವೆ ಮಾಡಿದ, ಒಡೆಯರಿಗಾಗಿ ಪ್ರಾಣಾರ್ಪಣೆಮಾಡಿದ, ಹಲವಾರು ದಶಕಗಳು, ಶತಮಾನಗಳು ಈ ಕುಲಗಳು ಅರಸರ ಸೇವೆ ಮಾಡುತ್ತಾ ಪ್ರಾಣಾರ್ಪಣೆ ಮಾಡಿರುವುದು ತಿಳಿದು ಬರುತ್ತದೆ. ಆಧುನಿಕ ಯಂತ್ರಗಳ ಆವಿಷ್ಕಾರಗಳು, (ಜೆ.ಸಿಬಿ ಇತ್ಯಾದಿ) ಹೊಸಬಗೆಯ ಯುದ್ಧ ಪದ್ಧತಿಗಳು ಆನೆಗಳ ಅವಶ್ಯಕತೆಯನ್ನು ಕುಗ್ಗಿಸಿರುವ ಈ ಕಾಲದಲ್ಲಿ, ಆನೆಗಳು ಕೇವಲ ಮೆರವಣಿಗೆ ಮನರಂಜನೆಗೆ ಸೀಮಿತವಾಗುತ್ತಿರುವುದರಿಂದ ಅದನ್ನೇ ನಂಬಿರುವ ಮಾವಂತರ ಬದುಕು ದುಸ್ತರವಾಗಿ, ಕುಲವೃತ್ತಿ ನಾಶವಾಗುತ್ತಿದೆ. ಕಾಡುಗಳ ಒಳಗೆ ಜೆಸಿಬಿಗಳಿನ್ನೂ ನುಗ್ಗಿಲ್ಲವಾಗಿ ಅಲ್ಲಿ ಆನೆಗಳು ಕಾರ್ಯ ನಿರ್ವಹಿಸುತ್ತಿವೆ.

ಅರಸೀಕೆರೆ ತಾಲ್ಲೂಕಿನ ಮುದುಡಿ, ಕೋಳಿಗುಂದ ಮಾವೂತನೂರುಗಳಲ್ಲಿ ಅಂತಹ ಮಾವಟಿಗರ ಕುಲಗಳಿದ್ದುದು ತಿಳಿದುಬರುತ್ತದೆ. ಪ್ರಸ್ತುತ ಲೇಖನದಲ್ಲಿ ಸಾಹಸಿಗಳು ವೃತ್ತಿವೀರರೂ ಆದ ಮಾವಂತರ ಪರಿಚಯವನ್ನು ಮಾಡಿಕೊಡಲಾಗಿದೆ.

ಮಾವಟಿಗರೆಂದ ಕೂಡಲೇ ಕೇವಲ ಆನೆಯ ಸಾರಥ್ಯ ವಹಿಸುವ ಸೇವಕರಾಗಿಯಷ್ಟೇ ನಮಗೆ ಭಾಸವಾಗುತ್ತದೆ. ಆದರೆ ಅನೇಕ ವೀರಗಲ್ಲುಗಳ ಚಿತ್ರಗಳನ್ನು (ಮಾವುತನ ಹಳ್ಳಿಯ ಮರದ ಕೆತ್ತನೆ. ಅಣ್ಣವಸಯ್ಯನ ವೀರಗಲ್ಲಿನ ಚಿತ್ರ ಇತ್ಯಾದಿ) ಗಮನಿಸಿದಾಗ ಮಾವುತನ ಬಲಗೈಯ್ಯಲ್ಲಿ ಕಿರು ಅಂಕುಶವೂ ಎಡಗೈಯಲ್ಲಿ ಉದ್ದವಾದ ಬಲ್ಲೆ ಅಥವಾ ಬರ್ಜಿಗಳನ್ನು ಹಿಡಿದಿರುವುದನ್ನು ಗಮನಿಸಬಹುದು. ಇದು ಕೇವಲ ಆತ್ಮರಕ್ಷಣೆಗೆಂದು ಹೇಳಲು ಸಾಧ್ಯವಿಲ್ಲ. ಕೆಲವು ಮಾವಟಿಗರ ಪರಾಕ್ರಮ ವಿಶೇಷತೆಯನ್ನು ಹೇಳುವಾಗ ಮಾವಟಿಗ ಎದುರಾಳಿಯ ಆನೆಗೆ ಹಾರಿ ಉರವಣಿಸಿ ಅರಿಕರಿಘಟೆಯ ಮೊಗವನ್ನು ಅಡರಿ, ಎರಿದು, ಔಂಕಿ ಶತ್ರುವನ್ನು ಕೊಂದು ಗೆಲ್ಲುವುದರಲ್ಲಿ ಪರಿಣತ ಎಂದು ಮಾರಬೋವನ ಮಗ ಹೆಮ್ಮೆಯ ಮಾವಂತನೆಂಬ ವೀರನನ್ನು ಒಂದು ಶಾಸನ ಹೊಗಳಿದೆ*[1]

ಮತ್ತೊಬ್ಬ ಬೊಬ್ಬನ ಹೆಮ್ಮಯ್ಯನ ವಿಶೇಷತೆ ಅರಿಕರಿಘಟೆಯನ್ನು ಏರಿ ಶತ್ರುವಿನ ಶಿರಗಳೊಳು ಬಾಳನಿಕ್ಕಿ ಬಿರುದಾರುಕರ ಮರಿಮೀಸೆ ಮುಂಬಲ್ಲನ್ನು ದುರದೊಳು ಕೀಳುವ ಅದಟನಲ್ಲವೆ ಬೊಬ್ಬನ ಹೆಮ್ಮಯ್ಯನೆಂದು ಹೇಳಲಾಗಿದೆ.

ಪಟ್ಟದ ಇಭ ದಾರುಕರ ವಂಶದ ಮತ್ತೊಬ್ಬ (ಕಾಟೆಯ ಮಾವಂತ) ಮಾವಟಿಗನನ್ನು ಧುರದಲ್ಲಿ ಕಾಳಾಗ್ನಿರುದ್ರನನ್ನು ಹೋಲುತ್ತಿದ್ದನೆಂದು, ಮಾವಂತಮಲ್ಲನ ಗುಂಮ, ಮಾವನಿಯಂಕಕಾಱ, ಮಾವಗೆ ಮಲೆವರಗಂಡನೆಂದು

* ಸಹ ಪ್ರಾಧ್ಯಾಪ್ರಾಕರು, # ೩೩೫, 'ವಸಿಷ್ಠ', ೯ನೇ ಅಡ್ಡರಸ್ತೆ, ಸರಸ್ವತಿನಗರ, ವಿಜಯನಗರ, ಬೆಂಗಳೂರು.

ಹೊಗಳಿ, ಈತ ಪಸಾಯತನಾಗಿದ್ದನೆಂದೂ ಮುದುವಾಡಿಯನ್ನು ಸುಖದಿಂದ ಆಳುತ್ತಿದ್ದನೆಂದು ಹೇಳಿದೆ.

ಹೊಯ್ಸಳ ಇಮ್ಮಡಿವೀರನರಸಿಂಹನ ಪಾದಪದ್ಮೋಪಜೀವಿಯಾದ ಮಾವಂತ ನಾರಸಿಂಹನನ್ನು ಶ್ರೀಮನ್ಮಹಾಪ್ರದಾನ ಗಜಕೇಸರಿ ಬಿರುದಿನ ಮಾವಂತನಪ್ಪ ನಾರಸಿಂಹದೇವ ದಣ್ಣಾಯಕ ಎಂದು ಕರೆದಿದೆ.

ಇಮ್ಮಡಿವೀರಬಲ್ಲಾಳನ ಪಾದಪದ್ಮೋಪಜೀವಿಗಳಾಗಿ ಕೋಳಿಗುಂದವನ್ನು ಮೈಯಜೋಳಕ್ಕೆ ಆಳ್ವಿಕೆ ಮಾಡುತ್ತಿದ್ದ ಆನೆಯ ಮಾವಂತರ ಕುಲದ ಚಲದ ಚಾಗದ ಮಹಿಮೆಯನ್ನು ಮತ್ತೊಂದು ಶಾಸನ*[೨]. ವಿವರಿಸಿದೆ. ಇವರಲ್ಲಿ ಹಿರಿಯನಾದ ಕೋಟೆಯ ಮಾವಂತನನ್ನು ಮಹಾ ಪಸಾಯ್ತನೆಂದು ಕರೆದಿದೆ.

ಈ ಮೇಲಿನ ಉದಾಹರರ್ಣ ಗಳನ್ನೆಲ್ಲಾ ಗಮನಿಸಿದಾಗ ಮಾವಟಿಗರು ಕೇವಲ ಆನೆಯ ನಿಯಂತ್ರಕ ಸೇವಕರು ಎಂದು ಹೇಳಲು ಸಾಧ್ಯವಾಗುವುದಿಲ್ಲ. ಅದಕ್ಕಿಂತಲೂ ಹೆಚ್ಚಿನ ವೀರವೃತ್ತಿ ಅವರದಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇತರ ವೀರಪಡೆಗಳ ಹಾಗೆ ಮಾವಟಿಗರ ಕೂಡ ಜೋಳವಾಳಿಗಳೆಂದು ಕರೆಯಬಹುದು. ಕೋಳಿಗುಂದವನ್ನು ಆಳ್ವಿಕೆ ಮಾಡುತ್ತಾ ಹೊಯ್ಸಳ ಅರಸರ ಸೇವೆಯಲ್ಲಿ ವಂಶಪಾರಂಪಾರ್ಯವಾಗಿ ನಿರತರಾಗಿದ್ದು ಆನೆಯ ಮಾವಂತ ಕುಲದವರು ಮೈಜೋಳಕ್ಕೆ ಕೋಳಿಗುಂದವನ್ನು ಪಡೆದಿದ್ದರೆಂದು ಹೇಳಿದೆ. ಇಲ್ಲಿ 'ಮೈಜೋಳ'ವೆಂಬ ಪದ ಬಹಳ ಮುಖ್ಯ. ಮೈಜೋಳ, ಮೈಜೀವಿತ, ಜೋಳದಪಾಳಿ ಇತ್ಯಾದಿ ಹೆಸರಿನಲ್ಲಿ ಪಡೆದ ಒಡೆಯನ ಅನ್ನದ ಋಣವನ್ನು ತೀರಿಸಲು ಹೋರಾಡುವವರು, ಬಂಟರು, ಒಡೆಯನಿಗಾಗಿ ದೇಹವನ್ನು ಶ್ರಮಿಸುವ ಇಂತಹ ವೀರರ ಸೇವೆಗೆ ಬದಲಾಗಿ ಅರಸರು ನೀಡುತ್ತಿದ್ದ ಗ್ರಾಮಗಳ ಉಂಬಳಿ ಮೈಜೋಳ. ಶ್ರಮಕ್ಕೆ ಬದಲಾಗಿ ದೊರೆವ ಸಂಬಳವೆಂಬುದಕ್ಕೆ ಅನೇಕ ಉದಹರಣೆಗಳು ಶಾಸನಗಳಲ್ಲಿ ದೊರಕುತ್ತವೆ.

ಮೈಜೀವಿತಕ್ಕೆ ದಿಡುಗಿನ ವೃತ್ತಿಯ ಕಬ್ಬಳ್ಳಿಯನ್ನು ಮಾವನಂಕಕಾರ, ಗೋದೂವೆಘರಟ್ಟ ಎಂದು ಬಿರುದಾಂಕಿತನಾದ ಮಹಾಪಸಾಯ್ತ ದೇವೆಯನಾಯಕ ಆಳುತ್ತಿದ್ದನು*[೩] ಹಿರಿಯ ಬೇರುಂಡನ ಮೊತ್ತದ ಕೂಸ ಘಂಟೆಯ ಸಿಂಗಯ ನಾಗಯ್ಯ ಸಾತಿಯಬ್ಬೆಗೆರೆಯನ್ನು ಮೈಜೀವಿತಕ್ಕೆ ಆಳುತ್ತಿದ್ದುದನ್ನು ಶಾಸನ ಹೇಳಿವೆ.*[೪] ಈ ಉದಾಹರಣೆಯ ಹಿನ್ನೆಲೆಯಲ್ಲಿ ಮಾವಟಿಗರನ್ನೂ ಜೋಳವಾಳಿಗಳ ಗುಂಪಿಗೆ ಸೇರಿಸಬಯಸುತ್ತೇನೆ.

**ಪಟ್ಟದ ಇಭದಾರುಕರು**

ಮುದುವಾಡಿಯ ಶಾಸನವೊಂದು ಆ ಗ್ರಾಮವನ್ನು ಆಳ್ವಿಕೆ ಮಾಡುತಿದ್ದ ಆನೆಯ ಮಾವಂತರ ಕುಲವನ್ನು ಪರಿಚಯಿಸುತ್ತಾ ಅವರನ್ನು 'ಪಟ್ಟದ ಇಭದಾರು'ಕರೆಂದು ಕರೆದಿದೆ. ಮಾವಂತ ಕುಲದ ದಾಸಪಾಳ ಹಾಗೂ ಮಾಯುವ್ವೆಯರಿಗೆ ಕಾಟೆಯುಮಾವಂತ, ಮಲ್ಲಯ ಮಾವಂತರೆಂಬ ವೀರಮಾವಂತರು ಮಕ್ಕಳು. ಹಿರಿಯನಾದ ಕಾಟೆಯ ಮಾವಂತ 'ಆರೋಹಕ್ಕೆ ಉಪ್ಪರವಟ್ಟಂ' ಎಂಬ ಬಿರುದು ಪಡೆದಿದ್ದವನು. ತಮ್ಮನಾದ ಮಲ್ಲೆಯ ಮಾವಂತ ಹಾಗೂ ಅವರ ಅಳಿಯಂದಿರಾದ ಗುಂಮೆಯಮಾವನ್ತ, ಸೋಮೆಯ ಮಾವನ್ತ ಇತರ ಮಾವಂತರೊಡನೆ ಮುದುಡಿಯಲ್ಲಿ ಕೆರೆಯನ್ನು ಕಟ್ಟಿಸಿ, ಹೊಸದಾಗಿ ಹಿರಿಯ ಕೆರೆಯ ಕೆಳಗೆ ಗದ್ದೆಗಳನ್ನು ಮಾಡಿಸಿ ಸುಖದಿಂದ ಆಳ್ವಿಕೆ ಮಾಡುತ್ತಿದ್ದನು. ಅಲ್ಲಿನ ಅಮೃತೇಶ್ವರ ದೇವರಿಗೆ ಭೂದಾನ ಮಾಡಿದ್ದಾನೆ.

ಈ ಉಪ್ಪರವಟ್ಟ, ನಾಗತ್ತರಪಟ್ಟ ಎಂಬ ಬಿರುದುಗಳು ಒಂದು ಮಖ್ಯ ಅಧಿಕಾರ ಸೂಚಕವೂ ಆಗಿರಬಹುದು. ಉಪ್ಪರವಟ್ಟ ಎಂದರೆ ಮೇಲುಮಟ್ಟ ಉತ್ತಮ ದರ್ಜೆ ಎಂಬ ಅರ್ಥವಿದೆ.*[೫]. ಇನ್ನು ನಾಗತ್ತರಪಟ್ಟವೂ ಕೂಡ ಈ ನಾಗಾಯತರಿಗೆ ಸಲ್ಲುತ್ತಿದ್ದ ಅಧಿಕಾರವೆನಿಸುತ್ತದೆ. ನಾಗಾಯತರ>ನಾಗಾಯ್ತರ>ನಾಗತ್ತರ ಆಗಿರುವ ಸಾಧ್ಯತೆಯಿದೆ. ನಾಗಯತರೆಂದರೆ ಮಾವಟಿಗರು.*[೬] ಆನೆ ಸಾಗುವಾಗ ಅದರ ಪಕ್ಕದಲ್ಲಿಯೇ ಆರೆಕಾರರು, ನಾಗಾಯ್ತರೂ ಮೇಗಣಾರೋಹಕರು ಕಾಲ್ಗಾಪಿನಾಳುಗಳು ಇರುತ್ತಿದ್ದುದನ್ನು ರುದ್ರಭಟ್ಟ ಕವಿ ಹೇಳುತಾನೆ. ನಾಗತರ ಎಂದರೆ ಶ್ರೇಷ್ಠವಾದ ಆನೆ ಎಂಬ ಅರ್ಥವೂ ಯಿದೆ.*[೭].

ಕಾಟೆಯುಮಾವಂತನು ವೀರನಷ್ಟೇ ಅಲ್ಲ ಅತ್ಯಂತ ವಿನಯವಂತನೂ ಆಗಿದ್ದನು. ಎರಗಿದವರಿಗೆ ಶರಣಾಗತಿ ನೀಡಿ ಸಲಹುವವನು. ಗುರುವಿಗೆ, ರವಿಗೆ, ಹರಿಗೆ, ಶಿವನಿಗೆ ಅತಿ ಭಕ್ತನಾದ ಈತನಿಗೆ ಇತರ ಮಾವಂತರು ಸರಿದೊರೆಯಾಗಲಾರರು. ಅವನ ಕುಲದ ಚಲವು ವಿಶೇಷವೆಂದು ಹೊಗಳಿದೆ.

ಪಟ್ಟದ ಇಭದಾರುಕರ ಕುಲದ ಮುದುಡಿಯ ಮತ್ತೊಬ್ಬ ಪ್ರಸಿದ್ಧ ಮಾವಂತ ನರಸಿಂಹದೇವ. ಈತ ವೀರನರಸಿಂಹ ಹೊಯ್ಸಳ ಚಕ್ರವರ್ತಿಯಲ್ಲಿ ದಂಡನಾಯಕನಾಗಿದ್ದು, ತಮ್ಮ ಕುಲದೈವ ಅಮೃತೇಶ್ವರ ದೇವರಿಗೆ ಮಹಾಜನಗಳೊಂದಿಗೆ ಸೇರಿ ಬೂದಾನ ಬಿಟ್ಟಿದ್ದಾನೆ.

ಪಟ್ಟದ ಆನೆಗಳಿಗೆ ಮಾವಟಿಗರಾಗಲು ಇರಬೇಕಾದ ವಿಶೇಷ ಅರ್ಹತೆಗಳೇನು ಎಂಬುದು ಶಾಸನಗಳಿಂದ ತಿಳಿದುಬರುವುದಿಲ್ಲ. ಯುದ್ಧದ ಆನೆಗಳಿಗೂ, ಪಟ್ಟದ ಆನೆಗಳಿಗೂ ನೀಡಲಾಗುತ್ತಿದ್ದ ತರಬೇತಿಯಲ್ಲಿ ವ್ಯತ್ಯಾಸವೇನು? ಎರಡೂ ರೀತಿಯ ಆನೆಗಳನ್ನು ಪಳಗಿಸುವವರು ಮಾವಟಿಗರೇ. ಪಟ್ಟದ ಆನೆಗಳು ಉತ್ಸವಾದಿಗಳಲ್ಲಿ ಭಾಗವಹಿಸುತ್ತಿದ್ದು, ಜನಗಳ ಮಧ್ಯೆ ಸದಾ ಶಾಂತವಾಗಿ ಇರಬೇಕಾದುದರಿಂದ

ಇವುಗಳಿಗೆ ಬೇರೆ ರೀತಿಯ ತರಬೇತಿಯ ಅವಶ್ಯಕತೆ ಇರುತ್ತದೆ. ಹರಿಹರ ಗಿರಿಜಾಕಲ್ಯಾಣ(ಸಂ.ಪು.೨೭೪) ಹಾಗು ರುದ್ರಭಟ್ಟನ ಜಗನ್ನಾಥವಿಜಯದಲ್ಲಿ ಆನೆಗಳಿಗೆ ಶಿಕ್ಷಣವನ್ನು ನೀಡುತ್ತಿದ್ದ ಬಗೆಗೆ ತಿಳಿಸುತ್ತಾರೆ. 'ನೆರೆದಿಭಶಿಕ್ಷಕರ್ ಕಲಿಸಲೇರ್ವೆಸನಂ ಕಲುತಿರ್ಪ ಗಂಧ ಸಿಂಧುರ ಚಯಗಳಿದ್ದುವೆಂದು ರುದ್ರಭಟ್ಟ (ಜ.ವಿ.ಸಂ. ಪುರವರ್ಣನೆ) ಹೇಳಿದ್ದಾನೆ.

ಆನೆ, ಕುದುರೆಗಳಿಗೆ ತರಬೇತಿ ನೀಡುವ ವಿಶೇಷ ಪರಿಣತರಿರುತ್ತಿದ್ದರು. ವೈಹಾಳಿ ಬಯಲುಗಳಲ್ಲಿ ಈ ತರಬೇತಿಗಳು ನಡೆಯುತ್ತಿದ್ದವು. ಕೋಳಿಗುಂದ, ನೇರ್ಲಿಗೆಯ ಸಮೀಪದಲ್ಲಿರುವ ಬೋರೆಯನ್ನು ವ್ಯಾಳಿ ಬೋರೆ, ಆನೆಸತ್ತ ಬೋರೆ ಎಂದು ಕರೆಯುತ್ತಾರೆ. ಇಲ್ಲಿ ವೈಹಾಳಿ>ವ್ಯಾಳಿ ಆಗಿದೆ. ಈ ಬೋರೆ ಆನೆಗಳಿಗೆ ಹೋರಾಟಕ್ಕೆ ಬಿಡುವ ಜಾಗ ಎಂಬುದು ಸ್ಪಷ್ಟವಾಗುತ್ತದೆ. ಯುದ್ಧಮಲ್ಲ ಎಂಬ ರಾಜನ ಆನೆಗಳನ್ನು ಎಣ್ಣೆಯ ಬಾವಿಗಳಲ್ಲಿ ಮೀಯಿಸುತ್ತಿದ್ದ ವಿಷಯವನ್ನು, ಬೋದನಪುರದಲ್ಲಿ ನಿತ್ಯವೂ ಐನೂರು ಆನೆಗಳನ್ನು ಗಮನಿಸಿಕೊಳ್ಳತ್ತಿದ್ದುದನ್ನು ಪಂಪ ಹೇಳಿದ್ದಾನೆ.*೮ ಕೋಳಿಗುಂದದಲ್ಲಿನ ದೊಡ್ಡಕೆರೆಯ ಒಂದು ಭಾಗವನ್ನು ಆನೆಕಡ ಎಂದು ಕರೆಯುತ್ತಾರೆ. ಇಲ್ಲಿ 'ಮದ್ನ' ಮಾಡೋದು ಎಂದು ಸ್ಥಳೀಯರು ಹೇಳುತ್ತಾರೆ. 'ಮದ್ನ' ಎಂದರೆ ಮಜ್ಜನ, ಮಾರ್ಜನ, ಮರ್ಧನ ಯಾವುದುಬೇಕದರೂ ಆಗಬಹುದು. ಬಹುಶಃ ಇದು ಅನೆಗಳಿಗೆ ಎಣ್ಣೆಯನ್ನು ಲೇಪಿಸಿ, ಮರ್ಧನ (ತೀಡುವುದು) ಮಾಡಿ ಅಲ್ಲಿ ನೀರಾಟಕ್ಕೆ ಬಿಡುತ್ತಿದ್ದ ಜಾಗವೆಂದು ಭಾವಿಸಬಹುದು.

ಹೊಯ್ಸಳ ಮೂರನೇ ನರಸಿಂಹನ ಕಾಲದಲ್ಲಿ ಅವನ ಅರಮನೆಯ ಆಜಿವೈರಿಘರಟ್ಟ ಎಂಬ ಮದಿಸಿದ ಆನೆಯು ರಾಜಬೀದಿಯಲ್ಲಿ ಹೊಕ್ಕು ಜನಗಳನ್ನು ಕೊಲ್ಲುತ್ತಿದ್ದಾಗ ಆ ಕೊಲೆಯನ್ನು ಸೈರಿಸಲಾಗದೆ ಹೆಸಮೆಯಮಾವಂತನ ಮಗ ರಾಮಯ್ಯಮಾವಂತನು ಅದನ್ನು ಎದುರಿಸಿ ಏರಲು ಪ್ರಯತ್ನ ಮಾಡುವಾಗ, ಆ ವೈರಿಘರಟ್ಟ ಅವನನ್ನು ಎರಗಿ ಕೊಂದ ಘಟನೆಯನ್ನು ಹಳೇಬೀಡಿನ ಬೆಣ್ಣೆಗುಡ್ಡದ ಶಾಸನವೊಂದು*೯. ವಿಶೇಷವಾಗಿ ವರ್ಣಿಸಿದೆ. ರಾಮೆಯಮಾವಂತನ ಬಲುಹನ್ನು ಕಂಡ ಇಂದ್ರಾದಿ ದೇವತೆಗಳು ಮೆಚ್ಚಿ ತಮ್ಮ ಐರಾವತಕ್ಕೆ ಮಾವಂತನಾಗಬೇಕೆಂದು ಆಶಿಸಿ ಆ ವೈರಿಘರಟ್ಟ ಆನೆಗೆ ಅವನನ್ನು ಕಳುಹಬೇಕೆಂದೊಡೆ ಅದು ಅವನನ್ನು ಕೊಂದಿತೆಂದು, ರಾಮಯ್ಯಮಾವಂತನನ್ನು ದೇವೇಂದ್ರ ಮೊದಲಾದ ದೇವರ್ಕಳು ಐರಾವತವನ್ನೇರಿಸಿಕೊಂಡು ಹೋಗಿ ಶಿವಮಹದೇವನ ಸಮೀಪದಲ್ಲಿ ಇರಿಸಿದರೆಂದು ಕವಿ ಕಲ್ಪಿಸಿದ್ದಾನೆ. ಶ್ರೇಷ್ಠರಾದವರ ಸಾವಿನ ಸಂದರ್ಭದಲ್ಲಿ ಜನ ದೇವರಿಗೆ ಅವರು ಹೆಚ್ಚುಪ್ರಿಯರೆಂದು ಭಾವಿಸುವುದನ್ನು ಕಾಣಬಹುದು ಈ ಕಲ್ಪನೆಯಲ್ಲಿ ಮಾವಂತನ ಅವನ ದುರಂತದ ಬಗೆಗೆ ನೋವಿದ್ದರೂ ಅವನ ಬದುಕಿಗೊಂದು ಸಾರ್ಥಕತೆ ಯಿದೆ ಎಂಬ ಮೆಚ್ಚುಗೆ, ಸಮಾಧಾನವಿದೆ. ಏನೇ ಆಗಲೀ ಮಾವಟಿಗರ ಬದುಕು ಎಷ್ಟು ದುಸ್ಸಾಹಸವಾದುದು, ಕಠಿಣ ವಾದುದು ಎಂಬುದನ್ನು, ಯಾವಾಗಬೇಕಾದರೂ ಅಪಾಯ ಎರಗುವ ಸಂಭವವಿರುತ್ತಿತ್ತೆಂಬುದನ್ನು ಮನಗಾಣಬೇಕು.

ಬೆಣ್ಣೆಗುಡ್ಡದ ಮತ್ತೊಂದು ಶಾಸನದಲ್ಲಿ ಬ್ರಹ್ಮೇಶ್ವರ ದೇವಾಲಯದ ಜೀರ್ಣೋದ್ಧಾರದ ವಿಚಾರವಿದೆ. ಆ ಶಾಸನದಲ್ಲಿ ಆನೆಯ ಅಮಿತಗುರು ಹಾಗೂ ಅನೆಯ ಕೇತಗುರುಗಳ ಹೆಸರಿದೆ. ಈ ಶಾಸನದಲ್ಲಿ ಇವರ ವಂಶದ ಐದು ತಲೆಮಾರನ್ನು ಹೇಳಿದೆ. ಇವರಿಗೆ 'ಆನೆಯ' ಎಂಬ ಪ್ರಿಫಿಕ್ಸ (ಆದಿನಾಮ` ಸೇರಲು ಕಾರಣ ತಿಳಿಯುವುದಿಲ್ಲ. ಇವರು ಆನೆಯ ತ ಬೇತಿದಾರರೇ? ಅಥವಾ ಗಜವೈದ್ಯರು ಗಳೇ ಎಂಬುದು ತಿ ಯುವುದಿಲ್ಲ. ಅಥವಾ ಇವರು ಮಾವಟಿಗ ಕುಲದವರೆಂದು ಭಾವಿಸುವುದಾದರೆ, ಅವರ ಹೆಸರಿನೊಂದಿಗೆ 'ಗುರು' ಪದ ಸೇರಿಸಲು ಕಾರಣ ಏನೆಂಬುದು ಅಸ್ಪಷ್ಟವಾಗಿದೆ. ಶಾಸನ ಬಹಳ ಹಾಳಾಗಿದೆ. ಕೋಳಿಗುಂದದ ಸಮೀಪ ದಲ್ಲಿರುವ ಗ್ರಾಮ ದೇಸಾಣಿಯ ಶಾಸನವೊಂದು ಗಜವೈದ್ಯ ಜೈತುಗಿಯೆಂಬುವನನ್ನು ಉಲ್ಲೇಖಿಸಿದೆ.

### ಕೋಳಿಗುಂದದ ಮಾವಂತ ಕುಲದವರು

ಹೊಯ್ಸಳ ಇಮ್ಮಡಿವೀರಬಲ್ಲಾಳನ ಕಾಲದಲ್ಲಿ ಕೋಳಿ ಗುಂದದ ಮಾವಂತ ಕುಲ ಅತ್ಯಂತ ಪ್ರಸಿದ್ಧಿಯನ್ನು ಪ್ರಾಮುಖ್ಯತೆಯನ್ನು ಪಡೆದಿತ್ತೆಂಬುದು ಶಾಸನದಿಂದ ತಿಳಿದು ಬರುತ್ತದೆ. ಕೋಳಿಗುಂದವನ್ನು ಮೈಜೋಳಕ್ಕಾಗಿ ಯಾವಾಗ ಪಡೆದರೆಂಬುದನ್ನು ಶಾಸನಗಳು ತಿಳಿಸಿಲ್ಲ. ಕೋಳಿಗುಂದದ ಕ್ರಿ.ಶ. ೧೧೮೪ರ ತಿಭುವನಮಲ್ಲಹೊಯ್ಸಳ ವಿನಯಾದಿತ್ಯನ ಆಳ್ವಿಕೆಯನ್ನು ಹೇಳಿದೆ. ಮಹಾಪ್ರಚಂಡದಂಡನಾಯಕ, ವಿಭುದವರ, ಪರೋಪಕಾರಿಮಲ್ಲ, ವಿಜಯಸೂತ್ರಧಾರಿ, ಗಂಡಭೇರುಂಡ ಇತ್ಯಾದಿ ಬಿರುದಾಂಕಿತನಾದ ಮಹಾ ಮಣ್ಡಳೇಶ್ವರಾಧಿಪತಿ ಮಹಾಪ್ರಚಂಡ ದಂಡನಾಯಕನಾದ ಏಚಿಮಯ್ಯನ ಮಗ ಶ್ರೀಮನ್ಮಹಾಸಂಧಿವಿಗ್ರಹಿ ದಣ್ಡನಾಯಕ ಪೋಚಿಮಯ್ಯನು ಹಾಗೂ ರಾಚಿಮಯ್ಯರು ಕೋಳಿಗುಂದದ ಊರೊಡೆಯರಾಗಿದ್ದರು. ಇವರ ಆರು ಜನ ಭಂಟರಾದ ದೇವಪಾಳಯ್ಯ, ನಾಗತಿ, ಕಲ್ಲಿಕ, ಅರಬಲರಸ, ನಾಗಣ್ಣ ಹಾಗೂ ಕೇತಾಚಾರಿ ಇವರುಗಳು ಶಿವಾಲಯವನ್ನೆತ್ತಿಸಿದ್ದಾರೆ. ಇದನ್ನು ಬಂಟೇಶ್ವರವೆಂದು ಕರೆಯಲಾಗಿದೆ. ದೇವರಿಗೆ ರಾಚಿಮಯ್ಯ ಪೋಚಿಮಯ್ಯರು ಭೂದಾನ ನೀಡಿದ್ದಾರೆ. ಈ ಆರೂ ಜನ ಬಂಟರನ್ನು ಮಹಾ ಪುರುಷರೆಂದು ಶಾಸನ ಹೇಳಿದೆ.*೧೦. ಹೊಯ್ಸಳ ವಿಷ್ಣುವರ್ಧನನ ಮಹಾ

ಸಾಮಂತನಾಗಿದ್ದ ಬೊಪಯ್ಯನೆಂಬುವವನು ಕೋಳಿಗುಂದದ ಊರೊಡೆಯನಾಗಿದ್ದು ಇವನು ಜಕ್ಕಗೌಡ, ಚಟ್ಟಗೌಡ ಹಾಗೂ ಸಮಸ್ತ ಪ್ರಜೆಗಳೊಂದಿಗೆ ಬಂಟೇಶ್ವರ ದೇವರಿಗೆ ದಾನ ಬಿಟ್ಟ ವಿವರವಿದೆ. ಇವನನ್ನು ವಿಜಯಲಕ್ಷ್ಮೀಕಾಂತ, ಮಾವಂತವೈರಿದಿಕ್ಕುಂಜರ, ಮದಗಜಾರೂಢ ಎಂಬ ಬಿರುದುಗಳೊಂದಿಗೆ ಶಾಸನ ಹೊಗಳಿರುವುದನ್ನು ಗಮನಿಸಿದರೆ ಈತ ಮಾವಂತ ಕುಲದವನಿರಬೇಕೆನಿಸುತ್ತದೆ. (ಇದೇ ರೀತಿಯ ಬಿರುದನ್ನು ಮುದುವಾಡಿಯ ಮಾವಂತರಿಗೆ ಹೇಳಿದೆ) ಇದನ್ನು ಗಮನಿಸಿದರೆ ಈತ ಆನೆಕಾಳಗದಲ್ಲಿ ಪಳಗಿದವನೆಂದು, ಪಳಗಿಸುವವನೆಂದು ಅರ್ಥವಾಗುತ್ತದೆ. ಈ ಬೊಪ್ಪನ ಹೆಸರಿನ ಬೊಪ್ಪಘಟ್ಟವನ್ನು ಕ್ರಿ.ಶ. ೧೧೯೪ರ ಶಾಸನವೊಂದು ಉಲ್ಲೇಖಿಸಿದೆ.*[೧೧] ಈ ಬೊಪ್ಪನ ಮಗ ಹೆಂಮನನ್ನು(ಚಿಕ್ಕ ಹೆಮ್ಮೆಯ ಮಾವಂತ) ಅರಿಕರಿಘಟೆಗಳನ್ನೇರುವ ಪರಾಕ್ರಮಿ ಎಂದು ಹೇಳಿರುವುದು, ಈ ಮಾವಂಕುಲದ ಹೆಮ್ಮನ ತಂದೆ ಬೊಪ್ಪ ಕೂಡ ಮಾವಂತಕುಲದವನಾಗಿರಬಹುದೆಂಬುದಕ್ಕೆ ಆಧಾರವಾಗುತ್ತದೆ. ಅಂದರೆ ವಿನಯಾದಿತ್ಯನ ಕಾಲದ ಬಂಟರುಗಳಲ್ಲಿ ಮಾವಂತರೂ ಇದ್ದಿರು. ಅವರು ಕಟ್ಟಿಸಿದ ಬಂಟೇಶ್ವರಕ್ಕೆ ಬೊಪ್ಪ ದಾನ ನೀಡಿರುವುದು ಈ ಊಹೆಯನ್ನು ಬಲಪಡಿಸುತ್ತದೆ. ಒಟ್ಟಿನಲ್ಲಿ ವಿಷ್ಣುವರ್ಧನನ ಕಾಲದಲ್ಲಿ ಕೋಳಿಗುಂದವು ಮಾವಂತಕುಲದವರಿಗೆ 'ಮೈಜೋಳಕ್ಕೆ' ಆಳಲು ದೊರಕಿದೆ ಎಂದು ಹೇಳಬಹುದು.

ಹೊಯ್ಸಳ ೧ನೇ ನರಸಿಂಹನ ಶಾಸನವೊಂದರಲ್ಲಿ ಕೋಳಿಗುಂದದ ಮಯಮಾವಂತನು ತನ್ನ ಓಲಗಿಕಾರನಾದ ದೊಳ್ಳಬೊಮ್ಮ ಎಂಬುವವನಿಗೆ ತನ್ನ ಭೂಮಿಯಲ್ಲಿ ತೋಟಗದ್ದೆ ೧೮ ಕಂಬವನ್ನು ನೀಡಿದ್ದಾನೆ. ಜೊತೆಗೆ ದೋರಸಮುದ್ರದ ಕಲ್ಲವೆಗ್ಗಡೆ ನಿರ್ಮಿಸಿದ ಭೈರವದೇವರಿಗೆ ಹತ್ತು ಕೊಳಗ ಗದ್ದೆಯನ್ನು ದೇವಭೂಮಿಯಾಗಿ ಬಿಟ್ಟಿದ್ದಾನೆ. ಇವನು ಯಾರ ಮಗನೆಂಬುದು ತಿಳಿಯುವುದಿಲ್ಲ. ಬಹುಶಃ ಬೊಪ್ಪನಮಗನಿರಬಹುದು. ಇಲ್ಲಿ ನಮಗೆ ಮುಖ್ಯವಾದ ವಿಚಾರ, ಮಯಮಾವಂತ ಕೇವಲ ಸಾಮಾನ್ಯ ಮಾವಂತ ನಾಗಿರಲಿಲ್ಲ. ಆತನಿಗೆ ಅಪಾರ ಭೂಮಿಯ ಒಡೆತನವಿತ್ತು. ಅಲ್ಲದೆ ತನ್ನ ಕೈಕೆಳಗೆ ಓಲಗಿಕಾರ ನನ್ನು ಇಟ್ಟುಕೊಳ್ಳುವಷ್ಟು ಸ್ಥಾನಮಾನವಿತ್ತು ಎಂಬುದು. ಓಲಗಿಕಾರ ಎಂದರೆ ಇಲ್ಲಿ ಊಳಿಗದವನು, ಬಂಟನೆಂದು ತಿಳಿಯಬಹುದು.

**ಅಭಿವೃದ್ಧಿ ಕಾರ್ಯಗಳು**

ಇಮ್ಮಡಿವೀರಬಲ್ಲಾಳನ ಕಾಲದಲ್ಲಿ ಕೋಳಿಗುಂದದ ಮಾವಂತರ ಕುಲ ವಿಶೇಷವಾಗಿ ಪ್ರವರ್ಧಮಾನಕ್ಕೆ ಬಂದಿರುವುದನ್ನು ಶಾಸನಗಳಿಂದ ತಿಳಿಯಬಹುದು. ಇವನ ಕಾಲದಲ್ಲಿ ಅನೇಕ ಮಾವಂತರ ಕುಟುಂಬಗಳ ಉಲ್ಲೇಖ ಕಂಡುಬರುತ್ತದೆ. ಕ್ರಿ.ಶ. ೧೦೮೩ ರಿಂದ ೧೧೯೪ರ ಹೊತ್ತಿಗೆ ಆ ನೂರುವರ್ಷಗಳಲ್ಲಿ ಕೋಳಿಗುಂದದಲ್ಲಿ ಅನೇಕ ಕೆರೆ, ಕಟ್ಟೆ, ಕೊಳಗಳ, ದೇವಾಲಯಗಳ ನಿರ್ಮಾಣವಾಗಿದೆ. ದೇವರ ನಂದನವನಗಳು, ದೇವರತೋಟಗಳು ಇದ್ದು, ಅವುಗಳಿಗೆ ಕೆರೆಯಿಂದ ನೀರಾವರಿ ವ್ಯವಸ್ಥೆ ಇದ್ದುದನ್ನು ಈಗಲೂ ನೋಡ ಬಹುದು (ಈ ತೋಟವೀಗ ತೆಂಗಿನತೋಟವಾಗಿದ್ದರೂ ಹೂವಿನತೋಟವೆಂದು ಕರೆಯುತ್ತಾರೆ) ಈ ಮಾವಂತರು ವಿಶೇಷವಾಗಿ ಶೈವ ಸಂಪ್ರದಾಯದವರಾಗಿದ್ದರು. ಶಿವ ವಿನಾಯಕ ದೇವಲಯಗಳ ನಿರ್ಮಾಣ, ದಾನ ದತ್ತಿಗಳು ಹೇಚ್ಚಾಗಿ ಮಾಡಿದ್ದಾರೆ.

ಕ್ರಿ.ಶ. ೧೧೯೪ನೇ ಶಾಸನವು ಕೋಳಿಗುಂದವನ್ನು ಮಹಾ ಪಸಾಯತ ಕೋಟೆಯಮಾವಂತನ ನೇತೃತ್ವದಲ್ಲಿ ಮೆಯ್‌ಜೋಳಕ್ಕಾಗಿ ಹಿರಿಯಹೆಮ್ಮೆಯುಮಾವಂತ, ಚಿಕ್ಕಹೆಮ್ಮೆಯ ಮಾವಂತ (ಬೊಪ್ಪನ ಮಗ) ಜವನೆಯ ಮಾವಂತ, ಕೇತಯಮಾವಂತ, ದುಗ್ಗೆಯಮಾವಂತ, ಬೂಚೆಯ ಮಾವಂತರು ಆಳುತ್ತಿದ್ದರೆಂದು ಶಾಸನ ಹೇಳಿದೆ. ಪಸಾಯ್ತ ನಾದ ಕೋಟೆಯಮಾವಂತನ ಕಾಲದಲ್ಲಿ ಮೂಸ್ಥಾನದ ಕಲಿದೇವರ ದೇವಾಲಯ ಜೀರ್ಣೋದ್ಧಾರ ನಡೆದಿದೆ. ಈ ಶಾಸನವು ಪ್ರತಿಯೊಬ್ಬ ಮಾವಂತನ ವಿಶೇಷತೆಯನ್ನು ವಿವರವಾಗಿ ಬಿಡಿಸಿಟ್ಟಿದೆ.

ಕ್ರಿ.ಶ. ೧೧೯೫ರ ಶಾಸನವು*[೧೨] ಜವನೆಯ ಮವಂತನು ತನ್ನ ಮಾತಾಪಿತೃಗಳಿಗೆ ಶ್ರೇಯಸ್ಸಾಗಲೆಂದು ಕೋಳಿಗುಂದದ ಊರಮುಂದೆ ವಿನಾಯಕ ಪ್ರತಿಷ್ಠೆಯನ್ನು ಮಾಡಿ ಭೂಮಿಯನ್ನು ದಾನಬಿಟ್ಟಿದ್ದಾನೆ ಇವನು ತಂದೆ ಅನುಪನ ಗುಣನಿಳಯನೂ ಅನವರತದಾನಿಯೂ ಸತ್ಯನಿಧಿ, ತೇಜೋನಿಧಿ, ವಿನೆಯನಿಧಿಯಾದ ಚಟ್ಟಯ್ಯ ಮತ್ತು ಮಲಯ್ವೆಯರ ಮಗ. ಇವನ ಪರಾಕ್ರಮವು ಜವನನ್ನೇ ಜಕ್ಕಲಿಸುವಂತದ್ದಿತ್ತೆಂದು ಶಾಸನ ಹೊಗಳಿದೆ. ಇವನೊಂದಿಗೆ ಕೇತಯ್ಯ ಮಾವಂತನೂ ಭೂದಾನ ನೀಡಿದ್ದಾನೆ.

ಕ್ರಿ.ಶ. ೧೧೯೭ರ ಶಾಸನದಲ್ಲಿ*[೧೩] ಹಿರಿಯ ಹೆರ್ಮಾಡಿ ಮಾವಂತನ ನೇತೃತ್ವದಲ್ಲಿ ಚಿಕ್ಕ ಹೆಮ್ಮಯ್ಯಮಾವಂತ, ಜವನೆಮಾವಂತ, ಕೇತಯಮಾವಂತ, ಬೂಚೆಯ, ಮಾದೇವ ಮಾವಂತ, ಚೌಡಯ್ಯ ಕೋಳಿಗುಂದವನ್ನು ಆಳ್ವಿಕೆ ಮಾಡು ತ್ತಿದ್ದರು. ಚಟ್ಟಯ್ಯ ಮತ್ತು ಮಲ್ಲವ್ವೆಯರ ಮಗನಾದ ಕೇತಯ್ಯನು ಊರ ಮುಂದೆ ಶಿವಾಲಯವನ್ನು ಪ್ರತಿಷ್ಠೆ ಮಾಡಿಸಿ, ಭೂದಾನ ಮಾಡಿದ್ದಾನೆ. ಹಿಂದಿನ ವರ್ಷ ಮಾಘಶುದ್ಧಬಿದಿಗೆಯಂದು ಅವನ ಸೋದರ ಜವನೆಯಮಾವಂತ ವಿನಾಯಕ ದೇವಾಲಯ ಕಟ್ಟಿಸಿದ್ದಾನೆ. ಅವನೊಂದಿಗೆ ದಾನ ಮಾಡಿದ್ದ ಕೇತಯ್ಯ ಈಗ ತನ್ನ ಹೆಸರಿನಲ್ಲಿ ಕೇತೇಶ್ವರ ದೇವಾಲಯ

ಮಾಡಿಸಿ ಭೂಮಿ ದಾನವನ್ನು ಮಾಡಿದ್ದಾನೆ. ಕ್ರಿಶ. ೧೧೯೪ರ ಶಾಸನದಲ್ಲಿ*[೧೪] ಕೋಳಿಗುಂದದ ಸಮಸ್ತ ಮಾವಂತರು ಹಿರಿಯ ಹೆಮ್ಮೆಯ ಮಾವಂತ...... ಚೌಡಯ್ಯಮಾವಂತ ಮಲ್ಲಯ್ಯ ಮಾವಂತ(೭ಜನ)ರು ಹೆಗ್ಗಡೆ ಗಳೊಡಗೂಡಿ ಮಾದಿಗೌಡನೆಂಬುವವನಿಗೆ ಹೊಸದಾಗಿ ಗ್ರಾಮ ನಿರ್ಮಾಣ ಮಾಡಲು ಭೂದಾನ ಮಾಡಲು ಆತ ತರಗನುಡಿದು ಕನ್ನೆಗೆರೆ ಯನ್ನು ಕಟ್ಟಿಸಿ, ಊರುಮಾಡಿ ದೇವಾಲಯವನ್ನು (ತಂದೆ ತಾಯಿಗಳಿಗೆ ಶ್ರೇಯಸ್ಸಾಗ ಬೇಕೆಂದು) ದಾನ ಬಿಟ್ಟಿದ್ದಾನೆ.

ಕ್ರಿ.ಶ. ೧೨೩೪ರ ಶಾಸನದಲ್ಲಿ*[೧೫] ಬೊಪ್ಪಯ್ಯ ಮಾವಂತನ ಮಗ ಮಯಿಲಯ್ಯಮಾವಂತನು ಕೋಳಿ ಗುಂದವನ್ನು ಆಳುತ್ತಿರುವಾಗ ಕೋಳಿಗುಂದದಲ್ಲಿ ವಿಶೇಷವಾದ ವಿದ್ವಾಂಸರೂ ಪಂಡಿತರೂ ನೆಲೆಸಿದ್ದು, ಏಳುವೃತ್ತಿಯನ್ನು ಮಹಾಜನರಿಗೆ ಬಿಡಲಾಗಿತ್ತೆಂದು ತಿಳಿದುಬರುತ್ತದೆ. ಭಟ್ಟೋಪಾಧ್ಯಾಯರು, ತಿಪ್ಪಣ್ಣನಾಯಕರು, ಲಕ್ಷ್ಮೀಧರಪೆದ್ದಿಗಳು ಆತ್ತಕೂರ ಬಸವಣಕ್ರಮಿತರು, ರುದ್ರಪಯ್ಯ, ವೇದಾರ್ಥ ದಯ್ಯಂಗಳ ಅಳಿಯ ಮಾಧವದೇವನು, ತಿಪ್ಪಣ್ಣನಾಯಕರ ಕೇಶವ ದೇವನು, ಚತುರ್ಭಾಷೆಯ ಚಿಕ್ಕಭಾಸ್ಕರಪೆದ್ದಿಗಳು ಏಳುವೃತ್ತಿಯ ಮಹಾಜನಗಳಾಗಿದ್ದರು. ಇಲ್ಲಿ ಬಹುಶಃ ಬ್ರಹ್ಮಪುರಿ ಇದ್ದಿರುವ ಸಾಧ್ಯತೆಯಿದೆ. ಇಮ್ಮಡಿನರಸಿಂಹನ ಕಾಲದಲ್ಲಿ ಇಲ್ಲಿ ವಿಷ್ಣುದೇವಾಲಯವೊಂದು ನಿರ್ಮಾಣವಾಗಿ ವೈಷ್ಣವಧರ್ಮ ವ್ಯಾಪಿಸಿರುವುದನ್ನು ಗಮನಿಸಬಹುದು.

ಈ ಬ್ರಾಹ್ಮಣರಿಗೆ ನೀಡಲಾಗಿದ್ದ ಕಿರುಕಟ್ಟ, ಬಿದಿರಹಳ್ಳಿ ಯಲ್ಲಿ ಕನ್ನೆಗೆರೆಯನ್ನು ಕಟ್ಟಿ, ಕಲ್ಲನಿಕ್ಕಿ ಕೋಡಿ ತಿದ್ದಿಕೊಟ್ಟಿದ್ದಕ್ಕೆ ಬಂಟಗೌಡ ಮಾರಗವುಡರಿಗೆ ಅವರ ಮನಮೆಚ್ಚಿದ ಜಾಗದಲ್ಲಿ ಕೆರೆ ಕೊಡುಗೆ ನೀಡಿದ್ದಾರೆ. ಹೊಸ ಕೃಷಿಭೂಮಿಯನ್ನು ಅವರು ರೂಢಿಸಿಕೊಂಡು ಸಾಗುವಳಿ ಮಾಡಿದರಾದರೆ ಬತಭಾಗವನ್ನಿಕ್ಕುವ ಒಪ್ಪಂದ ಮಾಡಿದ್ದಾರೆ.

ಈ ಮಾವಂತರ ಕಾಲದಲ್ಲಿ ಕೋಳಿಗುಂದದ ಪಕ್ಕದಲ್ಲಿ ಮವೂತನಹಳ್ಳಿಯೂ ಕೂಡ ನಿರ್ಮಾಣಗೊಂಡಿದ್ದು, ಇಲ್ಲಿರುವ ಶ್ರೀ ಬಲ್ಲಾಳೇಶ್ವರ ನಾರಸೀಘೇದೇವರು ಹರಿಹರದೇವರ ತ್ರಿಕೂಟಾಚಲ ದೇವಾಲಯವು ನಿರ್ಮಾಣಗೊಂಡಿದೆ. ಅತ್ಯಂತ ಸುಂದರವಾದ ಶಿಲ್ಪಗಳು ನವರಂಗದಲ್ಲಿವೆ. ನವರಂಗದ ಭುವನೇಶ್ವರಿಯ ಸುಂದರ ಕೆತ್ತನೆಯು ಬಣ್ಣ ಲೇಪನದಿಂದ ಕೂಡಿ ಅತ್ಯಂತ ಆಕರ್ಷಕವಾಗಿದೆ. ಗರ್ಭಗುಡಿಯ (ಹರಿಹರ) ಮೇಲ್ಚಾವಣಿಯಲ್ಲೂ ಬಣ್ಣವನ್ನು ನೋಡಬಹುದು. ಈ ದೇವಾಲಯದ ಹೊರಭಾಗ ಶಿಲ್ಪಕಾರ್ಯ ಅರ್ಧದಲ್ಲೇ ನಿಂತಂತೆ ತೋರುತ್ತದೆ. ಈಗ ನಾಶವಾಗಿದೆ. ಈ ಗ್ರಾಮದಲ್ಲಿರುವ ಅನೇಕ ಮಾಸ್ತಿಕಲ್ಲುಗಳು, ವೀರಮಾಸ್ತಿ ಕಲ್ಲುಗಳು, ರಥಶಿಲ್ಪಗಳು, ಮಾವಂತರಿಗೆ ಸಂಬಂಧಿಸಿದಂತೆ ತೋರುತ್ತವೆ. ಶಿಲ್ಪದಲ್ಲಿ ಆನೆಯ ಪ್ರಾಧಾನ್ಯತೆ ಇದೆ. ಮಾಸ್ತಿಕಲ್ಲನ್ನು ಮಾವ್ತಮ್ಮ ಎಂದು ಗ್ರಾಮಸ್ತರು ಕರೆಯುವುದರಿಂದ ಈ ಊರ ಮಾಸ್ತಿಶಿಲ್ಪಗಳು ಮಾವುತಿಗ ಮತ್ತು ಅವನ ಮಡದಿಯಾಗಿರುವ ಸಾಧ್ಯತೆಯಿದೆ. ಈ ಊರಿನಗ್ರಾಮದೇವತೆ ಕರಿಯಮ್ಮ ಗಜಾರೂಢಳಾಗಿದ್ದಾ . ಮಾವುತನಹಳ್ಳಿಯಲ್ಲಿ ಆನೆಗಳನ್ನು ಕಟ್ಟುತ್ತಿದ್ದ ಕಲ್ಲಕೋ ಳನ್ನು ಇಂದಿಗೂ ನೋಡಬಹುದು.

ವಿಜಯನಗರ ಅರಸರಕಾಲದಲ್ಲಿ ಕೋಳಿಗುಂದವು ಮಾವಟಿಗರ ಆಳ್ವಿಕೆಯಲ್ಲಿದ್ದಂತೆ ತೋರುವುದಿಲ್ಲ.ಈ ಪ್ರದೇಶವು ಕ್ರಿ.ಶ. ೧೫೫೫ರ ವಿಜಯನಗರ ಅರಸ ರಾಮರಾಜನ ಆಳ್ವಿಕೆ ಕಾಲದಲ್ಲಿ ಹಿರಿಯಣ್ಣಗೊಂಡನ ವಂಶಸ್ಥನಾದ ಹೊಳೆಯ ಗಾಮುಂಡನು ಆಳ್ವಿಕೆಯಲ್ಲಿತ್ತು. ಸಿಂಗನಹಳ್ಳಿ ಅವನ ಪ್ರಮುಖ ಕೇಂದ್ರವಾಗಿತ್ತು. ಇವನು ಕೋಳಿಗುಂದದ ರಾಮದೇವರ ಗುಡಿಯ ಶಿಖರವನ್ನು ಜೀರ್ಣೋದ್ಧಾರ ಮಾಡಿಸಿದ್ದಾನೆ. ಇವನು ಕಣಿವೆ ರಾಮೇಶ್ವರ ದೇವರ ಶಿವಾಲಯವನ್ನು ಕಟ್ಟಿಸಿ ಪ್ರತಿಷ್ಠಾಪನೆ ಮಾಡಿ, ದೇವರಿಗೆ ಕೋಳಿಗುಂದ, ಬೆಳುವಳ್ಳಿ, ಮೊಸಳೆ ಗ್ರಾಮಗಳಲ್ಲಿ ಭೂದಾನ ನೀಡಿದ್ದಾನೆ. ಯಾವ ಮಾವಟಿಗರ ಹೆಸರೂ ಈ ಕಾಲದಲ್ಲಿ ಕಂಡುಬರುವುದಿಲ್ಲ.

ಒಟ್ಟಿನಲ್ಲಿ ಹೊಯ್ಸಳರ ಉದಯದೊಂದಿಗೆ ಪ್ರವರ್ಧ ಮಾನಕ್ಕೆ ಬಂದ ಮಾವಂತರು ಅವರ ಅಂತ್ಯದೊಂದಿಗೆ ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡಂತೆ ತೋರುತ್ತದೆ. ಆನೆಗೊಂದಿ ಸುತ್ತಮುತ್ತಲಿನ ಪ್ರದೇಶಗಳ ಶಾಸನಾಧ್ಯಯನ, ಕ್ಷೇತ್ರಕಾರ್ಯಗಳು ಅನಂತರದ ಮಾವಂತ ಕುಲದವರ ಮೇಲೆ ಬೆಳಕು ಚೆಲ್ಲಬಹುದು.

## ಆಧಾರಸೂಚಿ


೧. ಎ.ಕ. ೧೦. ಪರಿ ಅಕ ಶಾ.ಸಂ. ೨೯೯. ಕೋಳಿಗುಂದ. ೧೧೯೪
೨. ಎ.ಕ. ೧೦. ಪರಿ ಅಕೆ. ೨೯೯. ಕೋಳಿಗುಂದ ಕ್ರಿ.ಶ. ೧೧೯೪
೩. ಎ.ಕ. ೧೦. ಪರಿ.ಚ.ಪ. ಶಾ.ಸಂ. ೧೨೨. ಕಬ್ಬಳ್ಳಿ. ಕ್ರಿ.ಶ. ೧೧೮೬.
೪. ಎ.ಕ.೧೦. ಪರಿ. ಅಕೆ.ಶಾ.ಸಂ.೧೧೭–೧೮, ಹೊನ್ನಕಟ್ಟೆ. ಕ್ರಿ.ಶ.೧೨೨೯.
೫. ಕ.ಸಾ.ಪ. ನಿಘಂಟು.
೬. ಅದೇ.
೭. ಅದೇ.
೮. ಪ.ಭಾ. ೧.೧೭೯. ಎ.ಕ. ೯. ಪರಿ. ಬೇಲೂರು. ಶಾ.ಸಂ. ೩೧೮. ಕ್ರಿ.ಶ. ೧೨೯೧. ೧೦. ಎ.ಕ. ೧೦. ಪರಿ. ಅಕೆ. ಶಾ.ಸಂ. ೩೧೧. ಕೋಳಿಗುಂದ. ಕ್ರಿ.ಶ. ೧೦೮೩.
೧೧. ಎ.ಕ. ೧೦. ಪರಿ ಅಕ ಶಾ.ಸಂ. ೨೯೯. ಕೋಳಿಗುಂದ. ೧೧೯೪
೧೨. ಎ.ಕ. ೧೦. ಪರಿ. ಅಕೆ. ಶಾ.ಸಂ. ೩೦೧.
೧೩. ಎ.ಕ. ೧೦ ಪರಿ. ಅಕೆ. ಶಾ.ಸಂ. ೨೯೮.
೧೪. ಎ.ಕ. ೧೦. ಪರಿ. ಅಕೆ. ಶಾ.ಸಂ. ೨೬೨. ಮಾದನಹಳ್ಳಿ.
೧೫. ಎ.ಕ. ೧೦. ಪರಿ. ಅ.ಕೆ.ಶಾ.ಸಂ. ೩೧೨.

ಮಂಜುಳಾ ತಿ. ಯಲಿಗಾರ*

# ಹೊಯ್ಸಳರ ಜೈನ ಶಾಸನ ರೂವಾರಿಗಳು

ಮೂರ್ತಿಶಿಲ್ಪ, ಶಾಸನಗಳು ಮತ್ತು ದೇವಸ್ಥಾನಗಳನ್ನು ರೂಪಿಸುತ್ತಿದ್ದ ಕಲಾವಿದರನ್ನು ಶಿಲ್ಪಿಗಳೆಂದೂ, ರೂವಾರಿಗಳೆಂದೂ, ಶಿಲ್ಪಕಾರರೆಂದು ಕರೆಯುತ್ತಿದ್ದುದು ವಾಡಿಕೆಯಾಗಿದೆ. ಶಿಲ್ಪಿಗಳು ತಮ್ಮನ್ನು ಸರಸ್ವತಿ ಗಣಧಾಸಿಗಳೆಂದು ಕರೆದುಕೊಳ್ಳುತ್ತಾರೆ.[೧] ಇಂತಹ ಶಾಸನ ರೂವಾರಿಗಳು, ಶಿಲ್ಪಿಗಳನ್ನು ತಿಳಿಸುವಲ್ಲಿ ಶಾಸನಗಳ ಪಾತ್ರ ಬಹಳ ಪ್ರಮುಖವಾಗಿದೆ. ಇವಕ್ಕೆ ಹೊಯ್ಸಳರ ಕಾಲದ ಜೈನ ಶಾಸನಗಳು ಕೂಡಾ ಹೊರತಾಗಿಲ್ಲ. ಈ ಶಾಸನಗಳನ್ನು ಕಂಡರಿಸಿದ ಶಿಲ್ಪಿಗಳು ಹಲವು ಜೈನ ಶಾಸನಗಳಲ್ಲಿ ಕಂಡು ಬರುತ್ತಾರೆ. ಹೆಚ್ಚಾಗಿ ಶ್ರವಣಬೆಳಗೊಳದಲ್ಲಿದ್ದ ಶಾಸನಗಳಲ್ಲಿ ಕಂಡುಬರುವುದರಿಂದ ಹೊಯ್ಸಳರ ಪ್ರಸಿದ್ಧ ಜೈನ ಕೇಂದ್ರವಾದ ಈ ಬೆಳ್ಗೊಳದಲ್ಲಿಯೇ ಇವರು ವಾಸಿಸಿರಬೇಕೆಂದು ಊಹಿಸಬಹುದು. ಶಿಲ್ಪಿಗಳ ಕಲೆಯು ತಲೆಮಾರಿನಿಂದ ತಲೆಮಾರಿಗೆ, ತಂದೆಯಿಂದ ಮಗನಿಗೆ, ಸಹೋದರನಿಗೆ, ವಂಶಸ್ಥರಿಗೆ, ಹರಿದುಕೊಂಡು ಬಂದಿರುವುದನ್ನು ಈ ಶಾಸನಗಳು ದೃಢಪಡಿಸುತ್ತವೆ. ಬೇಲೂರು ಶಾಸನ ತಂದೆ ಮಕ್ಕಳು ಒಂದೇ ಜಿನಾಲಯದಲ್ಲಿ ನಿಯುಕ್ತರಾಗಿದ್ದನ್ನು ತಿಳಿಸುತ್ತದೆ.

**ಮಾಚೋಜ :** ಕಸಲಗೆರೆಯ ಶಾಸನದಲ್ಲಿ ರೂವಾರಿ ಮಾಚೋಜನ ಹೆಸರು ಉಕ್ತವಾಗಿದೆ. ಮಾಚೋಜನನ್ನು ಈ ಶಾಸನದಲ್ಲಿ "ಕಲುಕುಣಿ ನಾಡ ಆಚಾರ್ಯ, ಕಲಿಯುಗದ ವಿಶ್ವಕರ್ಮ" ಎಂದು ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಇದು ಕೂಡ ಅವನ ಸ್ಥಾನಮಾನ ಅಥವಾ ಬಿರುದನ್ನು ಸೂಚಿಸುತ್ತದೆ.[೨]

**ಕಲ್ಕುಟಿಕ ಕೇತೋಜ :** ರೂವಾರಿಗಳ ದೈವಭಕ್ತಿ ರೂಪದಲ್ಲಿ ಶಾಸನಗಳನ್ನು ಕಂಡರಿಸುತ್ತಿದ್ದುದರಿಂದ ಅವರಿಗೆ ಆಚಾರ್ಯ ಎಂಬ ಪದ ಜೈನ ಮತದ ಹಿನ್ನೆಲೆಯಾಗಿ ಬಳಸುತ್ತಿದ್ದಿರಬೇಕು. ಇವರು ಕಲ್ಲಿನಲ್ಲಿ ಶಾಸನವನ್ನು ಕೆತ್ತುತ್ತಿದ್ದರಿಂದ ಕಲ್ಕುಟಿಕ ಕೇತೋಜ ಎಂಬ ಹೆಸರು ಶಾಸನದಲ್ಲಿ ಬರುತ್ತದೆ.[೩]

**ಭೋಗದೇವ :** ಹೆಬ್ಬಂಡೆಯ ಶಾಸನವನ್ನು ಶ್ರೀಮತ್ ಕನಕನಂದಿ ತ್ರೈವಿದ್ಯದೇವರ ಶಿಷ್ಯ ಸೇನಭೋವ ಬೋಗದೇವನು ಬರೆದನೆಂದು ಶಾಸನದ ಕೊನೆಯಲ್ಲಿ ಪ್ರಸ್ತಾಪವಿದೆ.[೪]

**ಗಂಗಚಾರಿ :** ಶ್ರವಣಬೆಳಗೊಳದ ಮೇಘಚಂದ್ರ ತ್ರೈವಿಧ್ಯ ಸ್ಮಾರಕವನ್ನು ಪೆರ್ಗಡೆ ಚಾಮರಾಜನು ಬಳಪದಲ್ಲಿ ರೇಖಾಚಿತ್ರ ಬರೆದನು. ಇದನ್ನು ಶುಭಚಂದ್ರಸಿದ್ಧಾಂತದೇವರ ಶಿಷ್ಯನೂ, ರೂವಾರಿ ಮುಖತಿಲಕನೂ ಆದ ಗಂಗಚಾರಿ ಕಂಡರಿಸಿದನೆಂದು ಉಲ್ಲೇಖಿಸುತ್ತದೆ.[೫] ಸಾಣೇನಹಳ್ಳಿಯ ಶಾಸನವನ್ನು ಕೂಡ ಬಿರುದು ರುವಾರಿಮುಖ ತಿಲಕನಾದ ಗಂಗಾಚಾರಿಯೇ ಕಂಡರಿಸಿದನು.

**ತಿಲಕವರ್ಧಮಾನಚಾರಿ :** ಚಿಕ್ಕಬೆಟ್ಟದಲ್ಲಿ ಗಂಗರಾಜಸುತ ಏಚಣನ ಶಾಸನವನ್ನು ಹೊಯ್ಸಳಚಾರಿಯ ಮಗನಾದ ಗಂಗಚಾರಿ ವರ್ಧಮಾನಚಾರಿಯು ಕಂಡರಿಸಿದನೆಂದು ಉಲ್ಲೇಖಿಸುತ್ತದೆ.[೬] ಪೋಚಾಂಬಿಕೆಯ ಸಲ್ಲೇಖನ ಸ್ಮಾರಕ ಶಾಸನವನ್ನು ಗಂಗರಾಜನು ಪರೋಕ್ಷ ದಾನಕ್ಕಾಗಿ ಮಾಡಿಸಿದ ಶಾಸನವಾಗಿದೆ. ಇದನ್ನು ಪ್ರಭಾಚಂದ್ರಸಿದ್ಧಾಂತದೇವರ ಶಿಷ್ಯನಾದ ಪೆರ್ಗಡೆ ಚಾವರಾಜನು ಬರೆದನು. ರೂವಾರಿ ಹೊಯ್ಸಳಚಾರಿಯ ಮಗ ರೂವಾರಿ ತಿಲಕ ವರ್ಧಮಾನಚಾರಿ ಇದನ್ನು ಕಂಡರಿಸಿದನು.[೭]

**ತಿಲಕ ಹೊಯ್ಸಳಚಾರಿ :** ಹೊಯ್ಸಳಚಾರಿಯು ಕೂಡ ಶಾಸನ ರೂವಾರಿ ತಿಲಕನೆಂದು ಚಿಕ್ಕಬೆಟ್ಟ ಶಾಸನಗಳಿಂದ ತಿಳಿದುಬರುತ್ತದೆ. ಈ ರೂವಾರಿ ತಿಲಕ ವರ್ಧಮಾನಚಾರಿಯು ಶಾಸನ ಬಸದಿಯಲ್ಲಿ ನಿಂತಿರುವ ಗಂಗರಾಜನ ಶಾಸನವನ್ನು ಕಂಡರಿಸಿದನೆಂದು ಚಿಕ್ಕಬೆಟ್ಟದ ಶಾಸನ ತಿಳಿಸುತ್ತದೆ.[೮]

**ತಿಲಕ ಕಾಂವಾಚಾರಿ :** ಶಾಂತಲೆ ಮತ್ತು ಮಾಚಿಕಬ್ಬೆಯರ ಸ್ಮಾರಕ ಶಾಸನವನ್ನು ಕ್ರಿ.ಶ. ೧೧೩೧ರಲ್ಲಿ ಚಾರುಕೀರ್ತಿದೇವರ ಶಿಷ್ಯನಾದ ಬೋಕಿಮಯ್ಯನು ಬರೆದನು. ಬಿರುದಾಂತ ರೂವಾರಿ ಮುಖತಿಲಕನಾದ ಗಂಗಾಚಾರಿಯ ತಮ್ಮ ಕಾಂವಾಚಾರಿಯು ಈ ಶಾಸನ ಕಂಡರಿಸಿದನೆಂದು ತಿಳಿಸುತ್ತದೆ.[೯]

**ಹೆರ್ಗ್ಗಡೆ ಮರ್ದಿಮಯ್ಯ :** ಶುಭಚಂದ್ರರ ಸ್ಮಾರಕ ಶಾಸನಗಳನ್ನು ಶುಭಚಂದ್ರರ ಶಿಷ್ಯನಾದ ಹೆರ್ಗ್ಗಡೆ ಮರ್ದಿಮಯ್ಯನು

*ಸಂಶೋಧನಾ ವಿದ್ಯಾರ್ಥಿನಿ, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗ, ಕ.ವಿ.ವಿ. ಧಾರವಾಡ.

ಬರೆದನು. ರೂವಾರಿ ತಿಲಕನಾದ ವರ್ಧಮಾನಚಾರಿ ಇದನ್ನು ಕಂಡರಿಸಿದನು.

**ಚಾವಾಚಾರಿ :** ರಾಮಪಟ್ಟಣದ ಹೊಳೆಯ ದಡದ ಜೈನಬಸದಿಯ ಸ್ಥಳದಲ್ಲಿದ್ದ ಜೈನ ಶಾಸನವನ್ನು ಚಾವಾಚಾರಿ ಕಂಡರಿಸಿದನೆಂಬ ಉಲ್ಲೇಖವಿದೆ.[೧೦]

**ದಾಸೋಜ :** ಪ್ರಭಾಚಂದ್ರಸಿದ್ಧಾಂತದೇವರ ಸ್ಮಾರಕ ಶಾಸನವನ್ನು ಲಿಖಿತ ಮನೋಹರರೂ ಪರನಾರಿ ಸೋದರನೂ ಆದ ಗಂಗಣ್ಣನು ಬರೆದನು. ಸೇವುಣ ಬಲ್ಲರದೇವ ರೂವಾರಿ ರಾಮೋಜನ ಮಗ ದಾಸೋಜನು ಕಡೆದನು. ಈತನ ತಂದೆ ರಾಮೋಜನು ಸೇವುಣ ಬಲ್ಲರದೇವ ರೂವಾರಿಯಾಗಿದ್ದನೆಂದು ತಿಳಿಸುತ್ತದೆ.[೧೧]

**ಮಲ್ಲೋಜ :** ಬಸ್ತಿಹಳ್ಳಿಯ ಜಿನದೇವರ ಮುಂದೆ ಮಾನಸ್ತಂಭದಲ್ಲಿರುವ ಶಾಸನವನ್ನು ಶ್ರೀಮತು ಮಾಣಿಕ್ಯವೊಳಲು, ಮೂಲಸ್ಥ ಚನ್ದರಕೋಜನ ಸುಪುತ್ರನೂ ಪರವಾದಿ ಮಲ್ಲೋಜನು ಬರೆದನು.[೧೨]

**ಕಲಿದೇವ ಮಾಣಿವೋಜ :** ಕಬ್ಬಳ್ಳಿಯ ಹಳೇ ಊರ ನಿವೇಶನದಲ್ಲಿ ಬಿದ್ದಿರುವ ಶಾಸನವನ್ನು ನೆಲ್ಕುದುರೆಯ ಊರೊಡೆಯ ಕಲಿದೇವ ಮಾಣಿವೋಜನು ಸಮಸ್ತ ಪ್ರಭುಗಾವುಂಡಗಳ ಎದುರಿಗೆ ಅನುಮತದಿಂದ ಬರೆದನು.[೧೩]

**ಸಾವಂತ ಮಾರಯ್ಯ :** ಪುರಲೆಯ ವೀರಸೋಮೇಶ್ವರ ದೇವಾಲಯದ ಶಿವಲಿಂಗದ ಪಾಣಿಪಟ್ಟದ ಮೇಲೆ ಬರೆದ ಮೂರನೆಯ ಬಲ್ಲಾಳನಿಗೆ ಸಂಬಂಧಿಸಿದ ಶಾಸನವನ್ನು ಬರೆದವನು ಸಾವಂತ ಮಾರಯ್ಯನೆಂದು ತಿಳಿದುಬರುತ್ತದೆ.[೧೪]

**ಮಾಳೋಜ :** ಕರಿಗುಂದದ ಬಸದಿಯ ಶಾಸನವನ್ನು ಪುಟದೊಳು ಗೋಗ್ರಹಣವನ್ನುತ್ಕಟ ಮಾಗಿರೆ ಬರೆದು ಮೆಚ್ಚಿಪುದರೆಂ ಕಾಪಿಂದಿಟದಿಂ ಮೂರುಂರಾಯರ ಕಟಕದ ಬಿರುದಗ ಲೇಖಕೋಪಾಧ್ಯಾಯ ಮಾಳೋಜನು ಬರೆದನು. ಈತನ ಮಗ ರೂವಾರಿ ಮಾಳೋಜನು ಕಂಡರಿಸಿದನು.[೧೫]

**ರಾಮಣ್ಣ :** ತಿಗಡಿಹಳ್ಳಿಯ ಶಾಸನವು ರಾಮಣ್ಣನವರ ಬರಹವಾಗಿದ್ದು, ಕೊನೆಯಲ್ಲಿ ಮಲ್ಲಪ್ಪನವರ ಸಹಿ ಇದೆ.[೧೬]

## ಆಧಾರಸೂಚಿ


೧. ಎ.ಕ.ಸಂ. IX, ಶಾ. ಸಂ. ೧೫೫.
೨. ಎ.ಕ.ಸಂ. VII, ಶಾ. ಸಂ. ೧೭೦.
೩. ಎ.ಕ.ಸಂ. VII ಶಾ. ಸಂ. ೯೮.
೪. ಎ.ಕ.ಸಂ. XIII, ಶಾ. ಸಂ. ೮೯.
೫. ಎ.ಕ.ಸಂ. II, ಶಾ. ಸಂ. ೧೫೬.
೬ ಎ.ಕ.ಸಂ. II, ಶಾ.ಸಂ. ೧೪೯.
೭. ಎ.ಕ.ಸಂ. II, ಶಾ. ಸಂ. ೧೩೬.
೮. ಎ.ಕ.ಸಂ. ಶಾ. ಸಂ. ೮೨.
೯. ಎ.ಕ.ಸಂ. II, ಶಾ. ಸಂ. ೧೭೬.
೧೦. ಎ.ಕ.ಸಂ. IV, ಶಾ. ಸಂ. ೧೬.
೧೧. ಎ.ಕ.ಸಂ. II, ಶಾ. ಸಂ. ೧೭೩.
೧೨. ಎ.ಕ.ಸಂ. VI, ಶಾ. ಸಂ. ೧೦೬.
೧೩. ಎ.ಕ.ಸಂ. XII, ಶಾ. ಸಂ. ೪೩.
೧೪. ಎ.ಕ.ಸಂ. XIII, ಶಾ. ಸಂ. ೬೯.
೧೫. ಎ.ಕ.ಸಂ. X, ಶಾ. ಸಂ. ೨೪೨.
೧೬. ಎ.ಕ.ಸಂ. VII, ಶಾ. ಸಂ. ೧೦೫.

ಡಾ. ಎಸ್. ಶಿವರಾಮು*

# ಶಿವಾರದ ವೀರಗಲ್ಲುಗಳು ಮತ್ತು ಮಹಾಸತಿ ಕಲ್ಲುಗಳು

ಶಿವಾರ ಮಂಡ್ಯ ಜಿಲ್ಲೆ ಮತ್ತು ಅದೇ ತಾಲ್ಲೂಕಿಗೆ ಸೇರಿರುವ ಒಂದು ಗ್ರಾಮ. ಇದು ಜಿಲ್ಲಾ ಕೇಂದ್ರದಿಂದ ೧೮ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿರುವ ಹೊರಳಮ್ಮ (ಉರುಳಮ್ಮ) ಹಾಗೂ ಈಶ್ವರ ಪ್ರಾಚೀನ ದೇಗುಲಗಳು ಹೊಯ್ಸಳ ಹಾಗೂ ವಿಜಯನಗರಕ್ಕೆ ಸೇರಿರಬಹುದಾದ ನಾಲ್ಕು ವೀರಗಲ್ಲುಗಳು ಹಾಗೂ ಮೂರು ಮಾಸ್ತಿಕಲ್ಲುಗಳು ಇಲ್ಲಿಯ ಇತಿಹಾಸದ ಹೆಗ್ಗುರುತಾಗಿವೆ. ಊರ ಹೊರವಲಯದಲ್ಲಿ ಹೊರಳಮ್ಮ (ಉರುಳಮ್ಮ) ದೇಗುಲವಿದ್ದು, ಸಾಧಾರಣ ರೀತಿಯ ೧೨ ಕಲ್ಲು ಕಂಬಗಳ ಮಂಟಪವಿದೆ. ಅಲ್ಲದೇ ಸ್ತ್ರೀ ದೇವತೆಗಳ ಮೂರು ಉಬ್ಬುಶಿಲ್ಪ ಮೂರ್ತಿಗಳಿವೆ. ಅಲ್ಲೇ ಒಂದು ವಿಶಾಲವಾದ ಕೊಳವಿದೆ.

ಈಶ್ವರ ಶಿಲಾ ದೇಗುಲ ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿದ್ದಂತೆ ಕಂಡುಬರುತ್ತದೆ. ಗರ್ಭಗೃಹದಲ್ಲಿ ಲಿಂಗ, ಸುಖನಾಸಿಯಲ್ಲಿ ನಂದಿ ವಿಗ್ರಹವಿದ್ದು, ಗಣೇಶ ಹಾಗೂ ನಾಗ ಉಬ್ಬುಶಿಲ್ಪ ಮೂರ್ತಿಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ.

ವಿಜಯನಗರ ಕಾಲದಲ್ಲಿ ವೀರಶೈವಧರ್ಮ ಸ್ವೀಕರಿಸಿದ ಇಲ್ಲಿಯ ಜನ ಶಿವಾಲಯಮಠ ಸ್ಥಾಪಿಸಿರಬಹುದೆಂದು ಹೇಳಬಹುದು. ಇಲ್ಲಿ ವೀರಭದ್ರೇಶ್ವರ ದೇಗುಲ ಇದೆ. ಈ ಗ್ರಾಮಕ್ಕೆ ಮೊದಲು ಶಿವನವಾರ ಎಂದು ಕರೆಯಲಾಗುತ್ತಿತ್ತು ಎಂದು ಐತಿಹ್ಯಗಳಿಂದ ತಿಳಿದುಬರುತ್ತದೆ. ಅಂದಿನ ಕಾಲದಲ್ಲಿ ಶಿವಾಲಯ ಮಠದಲ್ಲಿ ಪ್ರತಿ ಸೋಮವಾರ ಶಿವನವಾರವೆಂದು ಶಿವನಪೂಜೆ ಆಚರಿಸುತ್ತಿದ್ದರು. ಹಾಗಾಗಿ ಶಿವನವಾರ ನಡೆಯುತ್ತಿದ್ದ ಈ ಊರಿಗೆ ಕಾಲ ಕಳೆದಂತೆ ಶಿವಾರ ಎಂದು ಹೆಸರು ಬಂದಿದೆ. ಹೀಗಾಗಿ ಈ ಹಿಂದೆ ಇದೊಂದು ಇತಿಹಾಸ ಪ್ರಸಿದ್ಧವಾದ ಧಾರ್ಮಿಕ ಸ್ಥಳವಾಗಿದ್ದಂತೆ ಕಂಡುಬರುತ್ತದೆ.

ಉದಾತ್ತವಾದ ಉದ್ದೇಶದಿಂದ ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಸ್ಮಾರಕವಾಗಿ ನಿಲ್ಲಿಸುವ ಕಲ್ಲುಗಳೇ ವೀರಗಲ್ಲುಗಳು. ವೀರನ ಸಾವನ್ನು ಹೇಳುವ ವೀರಗಲ್ಲು, ಅವನ ಹೆಸರನ್ನು ಶಾಶ್ವತವಾಗಿ ಮಾಡುತ್ತಿತ್ತಲ್ಲದೆ ಅವನ ಕಡೆಯವರಿಗೆ ಧೈರ್ಯ, ಶಕ್ತಿ ಉತ್ಸಾಹಗಳನ್ನು ತುಂಬುತ್ತಿತ್ತು. ವೀರನು ದೇವಲೋಕವನ್ನು ಸೇರಿದ ಪುರುಷನಾದ್ದುದರಿಂದ ಅವನ ವೀರಗಲ್ಲಿಗೆ ಕಳಸ, ಕನ್ನಡಿ, ಹೂವು, ತಾಂಬೂಲ, ಕೊಡೆಗಳ ಮರ್ಯಾದೆಯನ್ನು ಊರಿನ ಜನ ಸಲ್ಲಿಸುತ್ತಿದ್ದರು. ವೀರಗಲ್ಲಿಗೆ ಪೂಜೆ ಸಲ್ಲಲು ನೈವೇದ್ಯ ಹೂಗಳಿಗಾಗಿ ದತ್ತಿಗಳನ್ನು ಬಿಟ್ಟುಕೊಟ್ಟಿರುವುದೂ ಉಂಟು. ಅವನ ಸ್ಮಾರಕವಾಗಿ ಕೆಲವು ಸಲ ದೇವಾಲಯಗಳನ್ನು ಕಟ್ಟಿಸುತ್ತಿದ್ದರು.

**ಒಂದನೆಯ ವೀರಗಲ್ಲು :** ಸುಮಾರು ಐದು ಅಡಿ ಎತ್ತರ, ನಾಲ್ಕು ಅಡಿ ಅಗಲವಿರುವ ಈ ವೀರಗಲ್ಲು ಅರ್ಧ ಅಡಿ ದಪ್ಪನಾಗಿದ್ದು ಗ್ರಾನೈಟ್ ಶಿಲೆಯಿಂದ ಕೆತ್ತಲಾಗಿದೆ. ಇದರಲ್ಲಿ ಮೂರು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಮೊದಲನೆಯ (ಕೆಳ) ಹಂತದಲ್ಲಿ ಬಿಲ್ಲುಧಾರಿಯಾದ ವೀರನು ಎದುರಾಳಿಯೊಂದಿಗೆ ಹೋರಾಡುತ್ತಿರುವ ಚಿತ್ರವಿದೆ. ವೀರನ ಹಿಂಬಾಗದಲ್ಲಿ ಕತ್ತಿ ಗುರಾಣಿ ಹಿಡಿದಿರುವ ವ್ಯಕ್ತಿಯ ಚಿತ್ರಣವಿದೆ. ಎದುರಾಳಿ ವೀರನು ಗಂಟುಗಚ್ಚೆ ಹಾಕಿದ್ದು ತನ್ನ ಎತ್ತಿದ ಕೈಯಲ್ಲಿ ಒಂದು ಕುಡುಗೋಲಿನಾಕಾರದ ಆಯುಧವನ್ನು ಹಿಡಿದಿದ್ದಾನೆ. ಆ ವೀರನ ಹಿಂಭಾಗದಲ್ಲೂ ಕತ್ತಿ ಗುರಾಣಿ ಹಿಡಿದಿರುವ ಸಹಾಯಕ ವ್ಯಕ್ತಿಯ ಚಿತ್ರಣವಿದೆ. ಎರಡನೆಯ ಹಂತದಲ್ಲಿ ಹೋರಾಡಿ ವೀರ ಮರಣ ಹೊಂದಿದ ವೀರನನ್ನು ಸುರಾಂಗನೆಯರು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ, ವೀರನು ಪುಷ್ಪಕ ವಿಮಾನದಲ್ಲಿ ಕೈ ಮುಗಿದು ಪದ್ಮಾಸನದಲ್ಲಿ ಕುಳಿತಿರುವಂತೆಯೂ, ಅದನ್ನು ಹೊತ್ತು ಸುರಾಂಗನೆಯರು ಹಾರುತ್ತಿರುವಂತೆಯೂ ಬಿಡಿಸಲಾಗಿದೆ. ಮೂರನೆಯ ಹಂತದಲ್ಲಿ ವೀರನು ಸ್ವರ್ಗವನ್ನೂ ಮೀರಿದ ಶಾಶ್ವತವಾದ ಪದವಿಯನ್ನು ಪಡೆದನು ಎಂಬುದನ್ನು ಸೂಚಿಸುವ ಸಲುವಾಗಿ ಕೈಲಾಸದಲ್ಲಿರುವಂತೆ ಬಿಡಿಸಲಾಗಿದೆ. ಶಿವಲಿಂಗ ಮಧ್ಯೆ ಇದ್ದು, ವೀರಗಲ್ಲಿನ ಎಡಭಾಗಕ್ಕೆ ಅಂದರೆ ಶಿವಲಿಂಗದ ಮುಂದಿರುವಂತೆ ಬಸವನನ್ನು ಬಿಡಿಸಲಾಗಿದೆ. ಈ ಬಸವ ಲಿಂಗದ ಕಡೆ ತನ್ನ ಮುಖ ಹಾಕಿದೆ. ವೀರಗಲ್ಲಿನ ಬಲಬದಿಗೆ ವೀರನು ಪದ್ಮಾಸನದಲ್ಲಿ ಕುಳಿತು ಭಕ್ತಿಯಿಂದ ತನ್ನ ಎರಡೂ ಕೈಗಳಿಂದ ಮುಗಿಯುತ್ತಿದ್ದಾನೆ. ವೀರಗಲ್ಲಿನ ಈ ಹಂತದಲ್ಲಿ ಮೇಲ್ಭಾಗದಲ್ಲಿ ಎರಡೂ ಕಡೆಗಳಲ್ಲಿ ಸೂರ್ಯ

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಿರಿಯಾಪಟ್ಟಣ.

ಚಂದ್ರರನ್ನು ಬಿಡಿಸಲಾಗಿದೆ. ಮಧ್ಯೆ ಯಾಳಿಯ ಚಿತ್ರವಿದ್ದು ಈ ವೀರಗಲ್ಲು ವಿಶೇಷವೆನಿಸಿದೆ.

**ಎರಡನೆಯ ವೀರಗಲ್ಲು :** ಇದು ಸುಮಾರು ನಾಲ್ಕು ಅಡಿ ಎತ್ತರ, ಮೂರು ಅಡಿ ಅಗಲವಾಗಿದ್ದು, ಅರ್ಧ ಅಡಿ ದಪ್ಪನಾಗಿದೆ. ಇದನ್ನು ಗ್ರಾನೈಟ್ ಶಿಲೆಯಿಂದ ಮಾಡಲಾಗಿದೆ. ಇಲ್ಲಿ ಮೂರು ಹಂತದಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಮೊದಲನೆಯ (ಕೆಳ) ಹಂತದಲ್ಲಿ ಕುದುರೆ ಮೇಲೇರಿ ಹೋರಾಡುತ್ತಿರುವ ವೀರನ ಚಿತ್ರವಿದ್ದು, ಒಬ್ಬ ವೀರನು ಬಿಲ್ಲು ಬಾಣ ಹಿಡಿದು ವೀರಗಚ್ಚೆಯನ್ನು ಹಾಕಿ ಮೈಮೇಲೆ ವಿವಿಧ ಬಗೆಯ ಆಭರಣಗಳನ್ನು ಧರಿಸಿ ತಲೆಯ ಕೂದಲನ್ನು ದುಂಡಾಗಿ ಸುರಳಿಯಂತೆ ಸುತ್ತಿ ಕಟ್ಟಿದ್ದಾನೆ, ಈ ವೀರನ ಹಿಂಬದಿಯಲ್ಲಿ ಒಂದು ರಾಜ ಛತ್ರಿ ಇದೆ. ಎದುರಿಗೆ ಇಬ್ಬರು ವ್ಯಕ್ತಿಗಳು ತಮ್ಮ ಬಲಗೈ ಮೇಲಕ್ಕೆತ್ತಿದ್ದು ಉದ್ದವಾದ ಭರ್ಜಿಯನ್ನು ಹಿಡಿದಿದ್ದಾರೆ ಅದೇ ರೀತಿ ಎಡಗೈಯಲ್ಲಿ ಗುರಾಣಿ ಹಿಡಿದು ಹೋರಾಟಕ್ಕೆ ಸಜ್ಜಾಗಿದ್ದಾರೆ. ಎರಡನೆಯ ಹಂತದಲ್ಲಿ ಹೋರಾಡಿ ವೀರಮರಣ ಹೊಂದಿದ ವೀರನನ್ನು ದೇವಕನ್ಯೆಯರು ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿಕೊಂಡು ದೇವಲೋಕಕ್ಕೆ ಹಾರುವಂತೆಯೂ ಬಿಡಿಸಲಾಗಿದೆ. ಮೂರನೆಯ ಹಂತದಲ್ಲಿ ಮಂಟಪದೊಳಗೆ ಲಿಂಗದ ರಚನೆಯಿದ್ದು, ಇದರ ಪಕ್ಕದಲ್ಲಿ ನಂದಿಯನ್ನು ಕೆತ್ತಲಾಗಿದೆ. ನಂದಿಯ ಹಿಂಭಾಗದಲ್ಲಿ ಭಕ್ತನೊಬ್ಬನು ಕೈ ಮುಗಿದುಕೊಂಡು ನಿಂತಿದ್ದಾನೆ. ವೀರಗಲ್ಲಿನ ಬಲಬದಿಗೆ ವೀರನು ಪದ್ಮಾಸನದಲ್ಲಿ ಕುಳಿತು ಭಕ್ತಿಯಿಂದ ತನ್ನ ಎರಡೂ ಕೈಗಳಿಂದ ಮುಗಿಯುತ್ತಿದ್ದಾನೆ. ವೀರಗಲ್ಲಿನ ಮೇಲಿನ ಹಂತದಲ್ಲಿ ಶಿವಲಿಂಗವನ್ನೂ ಬಸವನನ್ನೂ ಸರಳ ಶಿಲ್ಪದಲ್ಲಿ ಬಿಡಿಸಿದೆ.

**ಮೂರನೆಯ ವೀರಗಲ್ಲು :** ಇದು ಸುಮಾರು ಐದು ಅಡಿ ಎತ್ತರ, ಎರಡು ಅಡಿಗಳ ಅಗಲವಾಗಿದ್ದು, ಬಳಪದ ಕಲ್ಲಿನಲ್ಲಿ ಕೆತ್ತಿರುವ ಈ ವೀರಗಲ್ಲಿನಲ್ಲಿ ನಾಲ್ಕು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ.

ಮೊದಲನೆಯ ಹಂತದಲ್ಲಿ ಇಬ್ಬರು ವ್ಯಕ್ತಿಗಳು ಸತ್ತು ವೀರ ಮರಣ ಹೊಂದಿರುವ ಶಿಲ್ಪಗಳಿವೆ. ಎರಡನೆಯ ಹಂತದಲ್ಲಿ ನಾಲ್ಕು ಜನ ವೀರರು ಕತ್ತಿಗುರಾಣಿಯನ್ನು ಹಿಡಿದು ಹೋರಾಟದಲ್ಲಿ ತೊಡಗಿರುವಂತೆ ಶಿಲ್ಪಗಳನ್ನು ಬಿಡಿಸಲಾಗಿದೆ. ಮೂರನೆಯ ಹಂತದಲ್ಲಿ ವೀರಮರಣವನ್ನಪ್ಪಿ ವೀರನನ್ನು ದೇವಕನ್ಯೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ, ವೀರನು ಪುಷ್ಪಕ ವಿಮಾನದಲ್ಲಿ ಕೈಮುಗಿದು ಪದ್ಮಾಸನದಲ್ಲಿ ಕುಳಿತಿರುವಂತೆಯೂ, ಅದನ್ನು ಹೊತ್ತು ಅಪ್ಸರೆಯರು ಹಾರುತ್ತಿರುವಂತೆಯೂ ಬಿಡಿಸಲಾಗಿದೆ. ನಾಲ್ಕನೆಯ ಹಂತದಲ್ಲಿ ಲಿಂಗ ಮತ್ತು ನಂದಿಯನ್ನು ಕೆತ್ತಲಾಗಿದ್ದು, ವೀರಗಲ್ಲಿನ ಬಲಬದಿಗೆ ವೀರನು ಪದ್ಮಾಸನದಲ್ಲಿ ಕುಳಿತಿದ್ದಾನೆ, ಇವನ ಪಕ್ಕದಲ್ಲಿ ಡೋಲುವಾದಕರು ಮತ್ತು ನೃತ್ಯಗಾರರನ್ನು ಕೆತ್ತಲಾಗಿದೆ.

**ನಾಲ್ಕನೆಯ ವೀರಗಲ್ಲು :** ಈ ವೀರಗಲ್ಲು ಸುಮಾರು ಆರು ಅಡಿ ಎತ್ತರ, ಮೂರು ಅಡಿ ಅಗಲ ಹಾಗೂ ಅರ್ಧ ಅಡಿ ದಪ್ಪನಾಗಿದೆ. ಗ್ರಾನೈಟ್ ಶಿಲೆಯಲ್ಲಿ ಕೆತ್ತಿರುವ ಈ ವೀರಗಲ್ಲಿನಲ್ಲಿ ನಾಲ್ಕು ಹಂತಗಳಲ್ಲಿ ಶಿಲ್ಪಗಳನ್ನು ಕೆತ್ತನೆ ಮಾಡಲಾಗಿದೆ. ಇದರ ಕೆಳಭಾಗವು ಭೂಮಿಯಲ್ಲಿ ಹೂತುಹೋಗಿದ್ದು, ಶಿಲ್ಪಗಳು ಅಸ್ಪಷ್ಟವಾಗಿವೆ. ಎರಡನೆಯ ಹಂತದಲ್ಲಿ ಇಬ್ಬರು ವೀರರು ಕತ್ತಿಗುರಾಣಿ ಹಿಡಿದು ಎದುರು ಬದುರಾಗಿ ವೀರಾವೇಶದಲ್ಲಿ ಹೋರಾಡುತ್ತಿರುವ ಶಿಲ್ಪಗಳಿವೆ. ಮೂರನೆಯ ಹಂತದಲ್ಲಿ ಹೋರಾಡಿ ವೀರಮರಣವನ್ನಪ್ಪಿದ ವೀರನನ್ನು ಸುರಾಂಗನೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ನಾಲ್ಕನೆಯ ಹಂತದಲ್ಲಿ ಲಿಂಗದ ಮುಂದೆ ಪದ್ಮಾಸನದಲ್ಲಿ ವೀರನು ಕುಳಿತಿರುವಂತೆ ಚಿತ್ರಿಸಲಾಗಿದೆ. ಪಕ್ಕದಲ್ಲಿ ನಂದಿಯ ಚಿತ್ರವಿದೆ.

## ಮಹಾಸತಿ ಕಲ್ಲುಗಳು

ಸಹಗಮನವನ್ನು ಮಾಡಿ 'ಮಹಾಸತಿ' ಯರಾದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳೇ "ಮಾಸ್ತಿಕಲ್ಲು"ಗಳು ಅಥವಾ "ಮಹಾಸತಿಕಲ್ಲು"ಗಳು ಎಂದು ಕರೆಯಲಾಗಿದೆ. ದಕ್ಷಿಣ ಭಾರತದಲ್ಲಿ ಕ್ರಿ.ಶ. ೧೧ನೆಯ ಶತಮಾನದವರೆಗೆ ಸಹಗಮನ ಪದ್ಧತಿಯು ಹೆಚ್ಚು ಪ್ರಚಾರಕ್ಕೆ ಬಂದಿರಲಿಲ್ಲ, ಎಲ್ಲೋ ವಿರಳವಾಗಿ ಮಾತ್ರ ರಾಣಿಯರು ತಮ್ಮ ಗಂಡಂದಿರ ಚಿತೆಗಳನ್ನೇರುತ್ತಿದ್ದರು. ಅಲ್ಲಿಯೂ ಬಲವಂತವಿರುತ್ತಿರಲಿಲ್ಲ, ಏರುವುದು ಬಿಡುವುದು ಅವರಿಷ್ಟವಾಗಿತ್ತು ಪತಿಯೇ ಪರದೈವ ವೆಂಬ ಭಾವನೆಯಿಂದ ಹೆಣ್ಣು ಸ್ವ ಪ್ರೇರಣೆಯಿಂದ ಆತ್ಮಾರ್ಪಣೆ ಮಾಡಿಕೊಳ್ಳುತ್ತಿದ್ದಳು. ಧರ್ಮಶಾಸ್ತ್ರ ಗ್ರಂಥಗಳಲ್ಲಿಯೂ ಒತ್ತಾಯದ ಸಹಗಮನಕ್ಕೆ ಒಪ್ಪಿಗೆ ನೀಡಿಲ್ಲ ಆದರೂ ಕೆಲವು ಕಡೆಗಳಲ್ಲಿ ಅದಕ್ಕೆ ಧಾರ್ಮಿಕ ವಿಧಿಯ ಸ್ವರೂಪ ಇದ್ದು ಒಂದು ಹೆಣ್ಣಿಗೆ ಇಷ್ಟವಿಲ್ಲದಿದ್ದರೂ ಆ ವಿಧಿ ನಡೆಯುತ್ತಿದ್ದಂತೆ ತೋರುತ್ತದೆ. ಮಹಾಸತಿಯ ಕಲ್ಲುಗಳು ಸ್ವ ಪ್ರೇರಣೆಯಿಂದ ಪತಿಯನ್ನು ಹಿಂಬಾಲಿಸಿದ ಮಹಾಸಾಧ್ವಿಯರ ಸ್ಮರಣೆಗಾಗಿ ನೆಟ್ಟವುಗಳು.

**ಒಂದನೆಯ ಮಹಾಸತಿ ಕಲ್ಲು :** ಇದೊಂದು ಅಪರೂಪದ ಮಾಸ್ತಿಕಲ್ಲು, ಈ ಮಹಾಸತಿಯ ಕಲ್ಲು ಚೌಕಾಕಾರ ವಾಗಿದ್ದು ನಾಲ್ಕು ಅಡಿ ಎತ್ತರ, ಒಂದು ಅಡಿ ದಪ್ಪನಾಗಿಯು ಮತ್ತು ಮೂರು ಅಡಿ ಅಗಲವಾಗಿದೆ. ಈ ವೀರಗಲ್ಲಿನಲ್ಲಿ ನಾಲ್ಕು ಹಂತಗಳಲ್ಲಿ ಶಿಲ್ಪಗಳನ್ನು ಬಿಡಿಸಲಾಗಿದೆ. ಇದರ ಕೆಳಭಾಗವು ಭೂಮಿಯಲ್ಲಿ ಹೂತುಹೋಗಿದೆ. ಆದರೂ

   

ಶಿಲ್ಪಗಳ ಅರ್ಧಭಾಗ ಕಂಡುಬರುತ್ತದೆ. ಈ ಅಸ್ಪಷ್ಟ ಶಿಲ್ಪಗಳಲ್ಲಿ ಹೋರಾಟದ ದೃಶ್ಯವಿದ್ದು, ಆಯುಧಗಳನ್ನು ಹಿಡಿದು ಹೋರಾಡುತ್ತಿರುವ ವ್ಯಕ್ತಿಗಳ ಕೆಲವು ಶಿಲ್ಪಗಳಿವೆ. ಎರಡನೆಯ ಹಂತದಲ್ಲಿ ಒಬ್ಬ ವೀರನು ಗಂಡುಗಚ್ಚೆ ಹಾಕಿಕೊಂಡು ಹೋರಾಡುವಂತೆಯೂ ಈ ವೀರನ ಹಿಂದೆ ಮೂವರು ರಾಣಿಯರು ಆಭರಣ ಧರಿಸಿಕೊಂಡು ನಿಂತಿರುವಂತೆ ಕೆತ್ತಲಾಗಿದ್ದು, ವೀರನ ಎದುರಿಗೆ ಎದುರಾಳಿಯ ಬಿಲ್ಲು, ಬಾಣಗಳನ್ನೂಡಿ ವೀರಾವೇಶದಿಂದ ಹೋರಾಡುವ ದೃಶ್ಯವಿದೆ. ಮೂರನೆಯ ಹಂತದಲ್ಲಿ ಪುಷ್ಪಕಮಂಟಪದಲ್ಲಿ ಸತಿಯಾದ ಮೂವರು ರಾಣಿಯರು ಅಂಜಲಿಬದ್ಧರಾಗಿ ಹಾಗೂ ವೀರನು ಪದ್ಮಾಸನದಲ್ಲಿ ಕುಳಿತಿದ್ದು, ಇವರನ್ನು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ದೇವಲೋಕಕ್ಕೆ ಹೋಗುತ್ತಿರುವ ಈ ಮಹಾಸತಿಯರಿಗೆ ಹಾಗೂ ವೀರನಿಗೆ ಗಜಗಳು ಹೂವಿನ ಹಾರವನ್ನು ಅರ್ಪಿಸಲು ಸಜ್ಜಾಗಿ ನಿಂತಿವೆ. ನಾಲ್ಕನೆಯ ಹಂತದಲ್ಲಿ ಲಿಂಗದ ರಚನೆಯಿದ್ದು, ಮಹಾಸತಿ ಕಲ್ಲಿನ ಎಡಭಾಗದಲ್ಲಿ ವೀರನು ಪದ್ಮಾಸನದಲ್ಲಿ ಕುಳಿತಿದ್ದಾನೆ ಹಾಗೆಯೇ ಮಹಾಸತಿಯಾದ ರಾಣಿಯರು ಅಂಜಲಿ ಬದ್ಧರಾಗಿ ಕುಳಿತಿರುವಂತೆಯೇ ಕೆತ್ತಲಾಗಿದೆ. ಮಹಾಸತಿ ಕಲ್ಲಿನ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಚಿತ್ರಗಳನ್ನು ಬಿಡಿಸಲಾಗಿದೆ.

 



**ಎರಡನೆಯ ಮಹಾಸತಿ ಕಲ್ಲು :** ಈ ಮಹಾಸತಿಕಲ್ಲು ಸುಮಾರು ಐದು ಅಡಿ ಎತ್ತರವಾಗಿದ್ದು ಒಂದು ಅಡಿ ದಪ್ಪನಾಗಿಯು ನಾಲ್ಕು ಅಡಿ ಅಗಲವಾಗಿದೆ. ಈ ಮಾಸ್ತಿಕಲ್ಲು ವಿಶಿಷ್ಟವಾಗಿದ್ದು, ಈ ಸ್ತಂಭದ ಮಧ್ಯದಿಂದ ಹೊರಚಾಚಿ ಅಭಯಹಸ್ತದ ರೀತಿ ಮೇಲಕ್ಕೆತ್ತಿದಂತಿರುವ ಎರಡು ದೊಡ್ಡ ತೋಳುಗಳ ಚಿತ್ರವಿದೆ. ಈ ರೀತಿಯ ಮಾಸ್ತಿಕಲ್ಲಿಗೆ "ಇಕ್ಕೈ ಮಾಸ್ತಿಕಲ್ಲು" ಅಥವಾ "ಎರಡುಕೈಮಾಸ್ತಿ" ಎಂದು ಕರೆಯ ಲಾಗಿದೆ. ಎರಡೂ ತೋಳುಗಳಲ್ಲೂ ತೋಳ್ಬಂದಿ ಹಾಗೂ ಮುಂಗೈಯಲ್ಲಿ ಕಡಗ ಮತ್ತು ಬಳೆಗಳನ್ನು ಸುಂದರವಾಗಿ ಕೆತ್ತಲಾಗಿದೆ. ಅಲ್ಲದೇ ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರನನ್ನು ಕೆತ್ತಲಾಗಿದೆ.

**ಮೂರನೆಯ ಮಹಾಸತಿ ಕಲ್ಲು :** ಈ ಮಹಾಸತಿ ಕಲ್ಲಿನ ಮೇಲ್ಭಾಗ ತ್ರಿಭುಜಾಕೃತಿಯಲ್ಲಿದ್ದು ವಿಶಿಷ್ಟವಾಗಿದೆ. ಇದೊಂದು ಕಂಬದಂತಿದ್ದು ಇದರ ಬಲಭಾಗಕ್ಕೆ ಚಾಚಿಕೊಂಡಿರುವ ಕೈಯನ್ನು ಕೆತ್ತನೆ ಮಾಡಲಾಗಿದೆ. ಇದನ್ನು "ಒಂಟಿ ಕೈ ಮಾಸ್ತಿ ಕಲ್ಲು ಅಥವಾ ಒಕ್ಕೈ ಮಾಸ್ತಿ ಕಲ್ಲು" ಎಂದು ಕರೆಯಲಾಗಿದೆ. ಈ ಕೈ ಅಭಯಹಸ್ತದ ರೀತಿಯಲ್ಲಿ ಮೇಲಕ್ಕೆ ಎತ್ತಲಾಗಿದೆ. ಮುಂಗೈಯಲ್ಲಿ ಕಡಗ ಬಳೆಗಳನ್ನು ಹಾಗೂ ತೋಳ್ಬಂದಿ ಹಾಕಿಕೊಂಡಿರುವಂತೆ ಕೆತ್ತನೆ ಮಾಡಲಾಗಿದೆ. ಇದರ ಮೇಲ್ಭಾಗದಲ್ಲಿ ಸೂರ್ಯ ಮತ್ತು ಚಂದ್ರನನ್ನು ಕೆತ್ತ ಾಗಿದೆ. ಈ ಮಹಾಸತಿ ಕಲ್ಲುಗಳಿಗೆ ಸ್ಥಳೀಯರು ಪೂಜ ಯನ್ನು ಸಲ್ಲಿಸುತ್ತಿದ್ದಾರೆ.

ಸಹಗಮನ ಮಾಡುವ ಸಂದರ್ಭದಲ್ಲಿ ಆ ಸ್ತ್ರೀ ಮುಟ್ಟಿದ ಪ್ರತಿ ವಸ್ತುವೂ ಪವಿತ್ರವೆಂದು ಜನರು ಆ ವಸ್ತುಗಳನ್ನು ಸಂಗ್ರಹಿಸುತ್ತಿದ್ದರು. ಸ್ತ್ರೀ ಯಾವುದೋ ನಂಬಿಕೆ ಮತ್ತು ಆದರ್ಶಕ್ಕಾಗಿ ಸಹಗಮನ ಮಾಡಿಕೊಂಡು ತನ್ನನ್ನು ತಾನೇ ಕೊಂದುಕೊಳ್ಳುತ್ತಾಳೆ, ಯುದ್ಧದಲ್ಲಿ ಸಾಯುವುದು ಸುಲಭ ಆದರೆ ಎಲ್ಲರ ಮುಂದೆ ತನ್ನನ್ನು ತಾನು ಕೊಂದುಕೊಳ್ಳುವುದು ಕಷ್ಟ. ಅಂತಹ ಸಂದರ್ಭದಲ್ಲಿ ವೀರನಿಗಿಂತ ಹೆಚ್ಚಿನ ನಿಷ್ಠೆ, ಧೈರ್ಯ, ಆದರ್ಶಪ್ರಿಯತೆ, ಗಂಡೆದೆ ಆ ಹೆಣ್ಣಿನಲ್ಲಿರ ಬೇಕಾಗುತ್ತದೆ. ಆದ್ದರಿಂದ ಮಾಸ್ತಿಕಲ್ಲು ವೀರಗಲ್ಲಿಗಿಂತ ಹೆಚ್ಚು ಮನಸ್ಸನ್ನು ಕಲಕುತ್ತದೆ. ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು ನಮ್ಮ ಪ್ರಾಚೀನ ಪರಂಪರೆಯ ಒಂದು ಭಾಗ. ಮಾಸ್ತಿಗಲ್ಲು ವೀರಗಲ್ಲಿಗೆ ಸಂಬಂಧಿಸಿದಂತಿರುವ ಜನಪದ ಕಥೆ, ಗೀತೆಗಳನ್ನು ಸಂಗ್ರಹಿಸುವುದು ಮುಖ್ಯ ಇದರಿಂದ ಒಂದು ನಾಡಿನ ಸಾಂಸ್ಕೃತಿಕ ಹಿನ್ನಲೆಯನ್ನು ಅಧ್ಯಯನ ಮಾಡಲು ಸಾಧ್ಯವಾಗುತ್ತದೆ.

## ಆಧಾರಸೂಚಿ


೧. ಡಾ. ಆರ್. ಶೇಷಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು**, ಬೆಂಗಳೂರು, ೨೦೦೪.

೨. ಪ್ರೊ. ಸಿ. ಸಿದ್ದರಾಜು ಆಲಕೆರೆ, **ಗ್ರಾಮದರ್ಶನ** (ಮಂಡ್ಯ ಜಿಲ್ಲೆಯ ಗ್ರಾಮಗಳ ಸಂಕ್ಷಿಪ್ತ ನೋಟ) ಸಂ. ೧, ಮಂಡ್ಯ, ೨೦೦೮.

೩. **ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, (ಸಂ). ಡಾ. ಆರ್. ಗೋಪಾಲ್, ಮೈಸೂರು, ೨೦೦೮.

೪. ಡಾ. ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಬೆಂಗಳೂರು, ೧೯೬೬.

೫. ಡಾ. ಎಂ. ಚಿದಾನಂದಮೂರ್ತಿ, **ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು**, ೧೯೭೫.

೬ ತೈಲೂರು ವೆಂಕಟಕೃಷ್ಣ, **ಮಂಡ್ಯ ಜಿಲ್ಲೆಯ ಸ್ಥಳನಾಮಗಳ ಅವಲೋಕನ**, ಮಂಡ್ಯ, ೨೦೦೮.

೭. ದೇಜಗೌ, **ಸುವರ್ಣ ಮಂಡ್ಯ**, ಮಂಡ್ಯ, ೧೯೯೪.

೮. ಸದಾನಂದ ಕನವಳ್ಳಿ, ಷ. ಶೆಟ್ಟರ್, **ಸಾವಿಗೆ ಆಹ್ವಾನ**, ಬೆಂಗಳೂರು, ೨೦೦೪.

೯. Prof. S. Settar, *Memorial Stones.* ( A study of their origin, significance and variety) Dharwad, 1982.

೧೦. Dr. M.B. Rajamani, *Forms of self sacrifies in Karnataka Society,* A Sociological Analysis.

ಡಾ. ಮುತ್ತುರಾಜು*

# ಪಿಟ್ಲಾಲಿ ಮತ್ತು ಕುಂದಲಗುರ ಪರಿಸರದ ಪ್ರಾಚೀನ ಹೊಸ ವೀರ ಮಾಸ್ತಿ ಸ್ಮಾರಕಗಳು

ಹಿರಿಯೂರು ತಾಲ್ಲೂಕಿನ ಆದಿವಾಲದ ಬಳಿ ಇರುವ ಪಿಟ್ಲಾಲಿಗ್ರಾಮ ಪ್ರಾಚೀನ ಸ್ಥಳಗಳಲ್ಲಿ ಒಂದು. ಇಲ್ಲೆಲ್ಲಾ ಕಬ್ಬಿಣದ ಅದಿರಿನ ಭೂಮಿ ಇದ್ದು ಪ್ರಾಚೀನ ಕಾಲದಿಂದಲೂ ಜನಜೀವನ ನಡೆದುಕೊಂಡು ಬರುತ್ತಿದೆ. ಇದಕ್ಕೆ ಪೂರಕವಾಗಿ ವೇದಾವತಿ ನದಿಯ ಸನಿಹದಲ್ಲಿ ಹರಿದು ಹೋಗುತ್ತದೆ.

ಪ್ರಸ್ತುತ ಗ್ರಾಮದ ಮುಖ್ಯ ರಸ್ತೆಯಲ್ಲಿರುವ ದೇವರಾಜ್ ಪಿ.ಆರ್. ಎಂಬುವರ ಹೊಲದಲ್ಲಿ ಮೂರು ವೀರ ಮಾಸ್ತಿ ಕಲ್ಲುಗಳು ಪತ್ತೆಯಾಗಿವೆ. ಒಂದರ ಪಕ್ಕದಲ್ಲಿ ಮತ್ತೊಂದನ್ನು ನಿಲ್ಲಿಸಲಾಗಿದೆ. ಬೃಹತ್ತಾದ ಒಂದು ವೀರಗಲ್ಲು ಐದು ಅಡಿ ಅಗಲ ಮತ್ತು ನಾಲ್ಕು ಅಡಿ ಎತ್ತರದ ಅಳತೆಯನ್ನು ಹೊಂದಿದ್ದು ಗ್ರಾನೈಟ್‌ನಿಂದ ಮಾಡಿದುದಾಗಿದೆ. ಹುಲಿಯೊಂದರ ಮೇಲೆ ಮೂರು ಜನ ಬುಡಕಟ್ಟಿನ ವೀರರು ಹೋರಾಡಿ ಹತರಾಗಿರುವ ಘಟನೆಯನ್ನು ಈ ವೀರಗಲ್ಲು ಪ್ರತಿಪಾದಿಸುತ್ತದೆ. ಶಿಲ್ಪದ ಬಲಭಾಗದಲ್ಲಿ ಹಸಿದ ಹುಲಿಯು ವೀರನೊಬ್ಬನ ಜಡೆಯನ್ನು ತನ್ನ ಮುಂಗಾಲುವಿನಿಂದ ಸೆಳೆಯುತ್ತಿದೆ. ತೆರೆದ ಬಾಯಿ ಮತ್ತು ಉದ್ದನೆಯ ಬಾಲದ ಸ್ಪಷ್ಟ ಚಿತ್ರಣವಿದೆ. ವೀರನು ತನ್ನ ಬಲದ ಕೈನಿಂದ ಖಡ್ಗವನ್ನು ಎತ್ತಿ ಹಿಡಿದಿದ್ದಾನೆ. ಎಡದ ಕೈನಿಂದ ತಾನು ಧರಿಸಿರುವ ವಸ್ತ್ರವನ್ನು ಬಳಸಿ ಹಿಡಿದಿದ್ದಾನೆ. ಈತನ ನಡುವಿನಲ್ಲಿ ಚಿಚ್ಚುಗತ್ತಿಯಿದೆ. ಇವನ ಮುಂದೆ ಇರುವ ಪ್ರಧಾನ ವೀರನೂ ಸಹ ತನ್ನ ಎದೆಯ ಭಾಗಕ್ಕೆ ಬರುವಂತೆ ತನ್ನ ಬಲದ ಕೈನಿಂದ ಖಡ್ಗವನ್ನು ಹಿಡಿದಿದ್ದು ಎಡದ ಕೈನಿಂದ ವಸ್ತ್ರ ಬಳಸಿ ಹಿಡಿದುಕೊಂಡಿದ್ದಾನೆ. ನಡುವಿನಲ್ಲಿ ಬಿಚ್ಚುಗತ್ತಿಯನ್ನು ಧರಿಸಿದ್ದಾನೆ.

ಈತನ ಬಳಿ ಇರುವ ಮತ್ತೋರ್ವ ವೀರನೂ ಸಹ ತನ್ನ ಬಲದ ಕೈನಲ್ಲಿ ಖಡ್ಗ ಹಿಡಿದಿದ್ದು ಎಡದ ಕೈನಲ್ಲಿ ಧನುಸ್ಸನ್ನು ಹಿಡಿದಿದ್ದಾನೆ. ಈ ಮೂರೂ ಜನ ವೀರರು ವಸ್ತ್ರ ಮತ್ತು ಆಭರಣಗಳಿಂದ ಅಲಂಕೃತರಾಗಿದ್ದಾರೆ. ಈ ಮೂವರು ವೀರರ ಶಿರದಲ್ಲಿ ಶಿರೋಮುಡಿ ಕಟ್ಟಿದ್ದು ಹೆಣೆದಿರುವ ಅಲಂಕೃತ ಜಡೆಗಳು ಇಳಿಬಿದ್ದಿವೆ.

ಕಮಾನಾಕಾರದ ಕಲ್ಲಿನ ಮೇಲ್ಭಾಗದ ಎರಡು ಕಡೆಗಳಲ್ಲೂ ಹರಿದು ಬಂದಿರುವ ಸರ್ಪಗಳು ಹೆಡೆ ಎತ್ತಿ ಒಂದಕ್ಕೊಂದನ್ನು ಬೆಸೆದುಕೊಂಡಿವೆ. ಇವುಗಳ ಮೇಲೆ ಸೂರ್ಯ ಚಂದ್ರರ ಚಿತ್ರಣಗಳನ್ನು ಕೆತ್ತಲಾಗಿದೆ. ಈ ಸ್ಥಳದಲ್ಲಿ ಗೊಲ್ಲರಹಟ್ಟಿ ಹಿಂದೆ ಇದ್ದಿದ್ದುದರ ಪ್ರತೀತಿ ಇಲ್ಲಿ ದೊರೆಯುವುದರಿಂದ ಗೊಲ್ಲರದೊಡ್ಡಿಯ ಮೇಲೆ ಆಕ್ರಮಣ ಮಾಡಿರುವ ಹುಲಿಯೊಂದನ್ನು ಈ ಮೂರು ಜನ ವೀರರೂ ಎದುರಿಸಿದ್ದಾರೆ. ಖಡ್ಗಗಳು ಮತ್ತು ಧನುಸ್ಸನ್ನು ಉಪಯೋಗಿಸಿದರೂ ಸಫಲರಾಗದ ಈ ಮೂರೂ ಜನ ಹತರಾಗಿದ್ದಾರೆ. ಒಂದೇ ಸ್ಥಳದಲ್ಲಿ ಒಂದು ಹುಲಿಯಿಂದ ಮೂರು ಜನ ವೀರರು ಹತರಾಗಿರುವುದು ಈವರೆಗೂ ಕರ್ನಾಟಕದಲ್ಲೆಲ್ಲೂ ಪತ್ತೆ ಆಗಿಲ್ಲ. ಬುಡಕಟ್ಟು ಜನಾಂಗವಾದ ಗೊಲ್ಲರು ಈ ವೀರರಾಗಿದ್ದಿರಬಹುದೆಂದು ಇವರ ಜಡೆ ಮತ್ತು ತುಂಬು ವಸ್ತ್ರಗಳಿಂದ ತಿಳಿದುಕೊಳ್ಳಬಹುದಾಗಿದೆ. ಸ್ಮಾರಕದ ಶಿಲಾಮಾಧ್ಯಮ ಮತ್ತು ಚಿತ್ರಣಗಳಿಂದ ಈ ವೀರಗಲ್ಲು ಸ್ಮಾರಕದ ಕಾಲವಮಾನ ಕ್ರಿ.ಶ. ಸುಮಾರು ಹದಿಮೂರನೇ ಶತಮಾನದ್ದೆಂದು ನಿರ್ಧರಿಸಬಹುದು. ಈ ಭಾಗದ ಬುಡಕಟ್ಟು ಜನರಾದ ಗೊಲ್ಲ ಜನಾಂಗದ ವೀರತನವನ್ನು ಈ ವೀರಗಲ್ಲು ಪ್ರತಿಪಾದಿಸುತ್ತದೆ.

ಎಡಬದಿಯಲ್ಲಿ ನೆಲೆಸಿರುವ ಸ್ಮಾರಕ ಶಿಲೆಯೊಂದು ವೀರಮಾಸ್ತಿಕಲ್ಲು ಆಗಿದ್ದು ಇದು ಮೂರೂವರೆ ಅಡಿ ಎತ್ತರ ಮತ್ತು ಮೂರೂವರೆ ಅಡಿ ಅಗಲದ ಮಾಪನವನ್ನು ಹೊಂದಿದೆ. ಬೂದುಬಣ್ಣದ ಗ್ರಾನೈಟ್ ಇದು ಆಗಿದ್ದು ವೀರ ಮತ್ತು ಸತಿಯರ ಚಿತ್ರಣವನ್ನು ಹೊಂದಿದೆ. ಶಿಲ್ಪದ ಬಲಭಾಗದಲ್ಲಿ ವೀರನು ನಿಂತಿದ್ದು ತನ್ನ ಬಿಚ್ಚುಗತ್ತಿಯನ್ನು ಬಲಗೈನಲ್ಲಿ ಕೆಳಮುಖವಾಗಿ ಹಿಡಿದಿದ್ದಾನೆ. ಎಡಗೈನಲ್ಲಿ ಖಡ್ಗವನ್ನು ಬಳಸಿ ಹಿಡಿದಿದ್ದಾನೆ. ಈ ವೀರನ ಮುಖದ ಭಾಗ ಹೊಡೆದುಹೋಗಿದೆ. ಈ ವೀರನ ಶಿರೋಮುಡಿಯಲ್ಲಿಯೂ ಹೊರಬಂದಿರುವ ಹೆಣೆದಿರುವ ಜಡೆಯ ಅಲಂಕಾರವಿದೆ. ಇದು ಬಲಗೈನಲ್ಲಿ ಕೆಳಮುಖವಾಗಿ ಹಿಡಿದಿರುವ ಬಿಚ್ಚುಕತ್ತಿವರೆಗೂ ಇಳಿಬಿದ್ದಿದೆ. ಇವನಿಗೆ

* ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಉಡುವಳಿ, ಹಿರಿಯೂರು ತಾ., ಚಿತ್ರದುರ್ಗ ಜಿಲ್ಲೆ.

ಕೈಕಡಗಗಳು ತೋಳು ಬಂದಿಗಳು ಕೊರಳ ಸರಗಳೇ ಅಲ್ಲದೇ ಕಾಲುಗಳಲ್ಲಿ ಕಡಗಗಳೂ ಇವೆ. ಮೊಣಕಾಲಿನವರೆಗೂ ಧರಿಸಿರುವ ವಸ್ತ್ರವು ಇವನಿಗೆ ಇದೆ. ಇವನ ಚಿತ್ರದ ಮುಂದೆ ಸತಿಪದ್ಧತಿ ಅನುಸರಿಸಿರುವ ಈತನ ಪತ್ನಿಯ ಚಿತ್ರವಿದೆ. ಈಕೆ ನಿಂತ ಭಂಗಿಯಲ್ಲಿದ್ದು ತನ್ನೆರಡೂ ಕೈಗಳನ್ನು ಶಿರದ ಕಡೆಗೆ ಬರುವಂತೆ ಎತ್ತಿಹಿಡಿದಿದ್ದಾಳೆ. ಬಲಗೈನಲ್ಲಿ ನಿಂಬೆಹಣ್ಣು ಮತ್ತು ಎಡಗೈನಲ್ಲಿ ಕನ್ನಡಿ ಹಿಡಿದಿದ್ದಾಳೆ. ಶಿರದಲ್ಲಿ ಹಿರಿದಾದ ತುರುಬು ಇದ್ದು ತುರುಬಿನಿಂದ ಇಳಿಬಿದ್ದಿರುವ ಹೆಣೆದಿರುವ ಅಲಂಕೃತ ಜಡೆ ಇಳಿಬಿದ್ದಿದೆ. ಮುಂಗೈಗಳಲ್ಲಿ ಖಡ್ಗಗಳು ಇದ್ದು ಕೊರಳಲ್ಲಿ ಸರಗಳು ಇವೆ. ಈಕೆಯು ಮೊಣಕಾಲಿನ ವರೆಗೂ ಇಳಿಬಿದ್ದಿರುವ ಪೋಷಾಕು ಧರಿಸಿದ್ದಾಳೆ. ಇವಳ ಶಿರದ ಹಿಂದೆ ಪ್ರಭಾವಳಿ ಇದ್ದು ಇದು ಅತ್ಯಂತ ದಪ್ಪನದಾಗಿದೆ. ಕೇದಿಗೆ ಎಲೆಗಳ ಪ್ರಭಾವಳಿ ಇದಾಗಿದೆ. ಪತಿಯು ರಾಜಕೀಯ ಕಾರಣವೊಂದರಿಂದ ಶತ್ರುಗಳ ಜೊತೆ ಹೋರಾಡಿ ಮಡಿಯಲಾಗಿ ವೀರನ ಪತ್ನಿಯು ಅಂದಿನ ಪದ್ಧತಿಯಂತೆ ಚಿತೆ ಏರಿ ಅಗ್ನಿಪ್ರವೇಶ ಮಾಡಿದ್ದಾಳೆ. ಪಂಚಕೋನಾಕೃತಿ ಯಾಕಾರದ ಈ ವೀರಮಾಸ್ತಿ ಕಲ್ಲಿನ ಮೇಲ್ಭಾಗದಲ್ಲಿ ಬೃಹತ್ತಾದ ಉದ್ದನೆಯ ಸರ್ಪದ ಚಿತ್ರಣವು ಹರಡಿದೆ. ಮೇಲೆ ಶಿವಲಿಂಗ ಬಸವ, ಸೂರ್ಯಚಂದ್ರರ ಚಿತ್ರಣಗಳು ಇವೆ. ಶಿಲ್ಪಕೆತ್ತನೆಯ ಚಿತ್ರಣ ಲಕ್ಷಣದಿಂದ ಈ ವೀರಮಾಸ್ತಿಕಲ್ಲು ಕ್ರಿ.ಶ. ಸುಮಾರು ೧೪ನೆಯ ಶತಮಾನಕ್ಕೆ ಸೇರುತ್ತದೆ. ಇದು ಸಹ ಬುಡಕಟ್ಟು ಜನಾಂಗವಾದ ಗೊಲ್ಲ ಜನಾಂಗದ ವೀರ ಮತ್ತು ತ್ಯಾಗವನ್ನು ನಿರೂಪಿಸುತ್ತದೆ.

ಇದರ ಪಕ್ಕದಲ್ಲೇ ಇರುವ ಮೂರೂವರೆ ಅಡಿ ಅಗಲ, ಎರಡೂವರೆ ಅಡಿ ಅಗಲದ ಗ್ರಾನೈಟ್‌ನ ಬೂದು ಬಣ್ಣದ ವೀರಗಲ್ಲಿನಲ್ಲಿ ಮೂವರು ವೀರರ ಚಿತ್ರಣಗಳು ಇವೆ. ಬಲಭಾಗದಲ್ಲಿರುವ ವೀರನು ತನ್ನ ಬಲದ ಕೈನಲ್ಲಿ ಖಡ್ಗವನ್ನು ಹಿಡಿದಿದ್ದು ಎಡಗೈನಲ್ಲಿ ಧನುಸ್ಸನ್ನು ಹಿಡಿದು ಕೊಂಡಿದ್ದಾನೆ. ಇವನಿಗೆ ಶಿರದಲ್ಲಿ ಹಿರಿದಾದ ತುರುಬು ಇದೆ. ಎದೆಯ ಆಭರಣ ಮುಂಗೈ ಮತ್ತು ತೋಳಿನ ಆಭರಣಗಳು ಇವನಿಗಿದ್ದು ವಸ್ತ್ರವನ್ನು ಧರಿಸಿದ್ದಾನೆ. ಈ ಸ್ಮಾರಕದ ಮಧ್ಯದಲ್ಲಿ ರುವ ವೀರ ತನ್ನ ಎದೆಯ ಭಾಗಕ್ಕೆ ಬರುವಂತೆ ಖಡ್ಗವನ್ನು ಎತ್ತಿ ಹಿಡಿದಿದ್ದು ಬಲದ ಕೈನಿಂದ ತಾನು ಧರಿಸಿರುವ ವಸ್ತ್ರದ ಅಂಚನ್ನು ಬಳಸಿ ಹಿಡಿದಿದ್ದಾನೆ. ಬಳಿಯಲ್ಲಿರುವ ಮೂರನೆಯ ವೀರನ ಚಿತ್ರವು ಹೊಡೆದು ಹಾಳಾಗಿದ್ದು ಖಡ್ಗವನ್ನು ತನ್ನ ಬಲಗೈನಲ್ಲಿ ಹಿಡಿದು ಎಡಗೈಯಲ್ಲಿ ಧನುಸ್ಸನ್ನು ಹಿಡಿದಿದ್ದಾನೆ. ಕ್ರಿ.ಶ. ಸುಮಾರು ಹದಿನೈದನೆಯ ಶತಮಾನಕ್ಕೆ ಸೇರುವ ಈ ವೀರಗಲ್ಲುವಿನ ನಿರ್ಮಾಣಕಾರ್ಯ ರಾಜಕೀಯ ಹೋರಾಟದ ಘಟನೆಯ ಸ್ಮಾರಕವಾಗಿದೆ. ಈ ಮೂರು ಜನ ವೀರರು ಶತ್ರುಗಳೊಡನೆ ಖಡ್ಗ ಮತ್ತು ಧನುಸ್ಸು ಬಾಣಗಳಿಂದ ಹೋರಾಡಿದ್ದಾರೆ. ಆದರೆ ವಿಫಲರಾಗಿ ಸಾವನ್ನಪ್ಪಿದ್ದಾರೆ.

ಬಳಿಯ ಕೂಡಲಹಳ್ಳಿ ಗ್ರಾಮದ ಮಧ್ಯೆ ಎರಡು ವೀರಗಲ್ಲುಗಳು ಒಂದು ವೀರ – ಮಾಸ್ತಿಕಲ್ಲುವಿನ ಸ್ಮಾರಕ ಇವೆ. ಇವುಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ನಿಲ್ಲಿಸಲಾಗಿದೆ. ಎರಡು ಅಡಿ ಎತ್ತರ ಮತ್ತು ಒಂದೂವರೆ ಅಡಿ ಅಗಲದ ವೀರಗಲ್ಲೊಂದು ಕಪ್ಪುಬಣ್ಣದ ಗ್ರಾನೈಟ್‌ನ ದಾಗಿದೆ. ಇದರಲ್ಲಿ ವೀರ ತನ್ನ ಕೈಗಳನ್ನು ಮುಗಿದು ನಿಂತಿದ್ದಾನೆ. ಇವನ ಶಿರದಲ್ಲಿ ಮುಡಿ ಇದ್ದು ತೊಳಿನಿಂದ ಖಡ್ಗವನ್ನು ಬಳಸಿ ಹಿಡಿದಿದ್ದಾನೆ. ಇವನು ತನ್ನ ಶತ್ರುಗಳ ಜೊತೆ ಯಾವುದೋ ಕಾರಣಕ್ಕಾಗಿ ಹೋರಾಡಿ ಮಡಿದಿದ್ದಾನೆ. ಸೂರ್ಯ ಚಂದ್ರರ ಕೆತ್ತನೆಗಳು ಸ್ಮಾರಕದ ಮೇಲ್ಭಾಗದಲ್ಲಿ ಇವೆ. ಕ್ರಿ.ಶ. ಸುಮಾರು ೧೪ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಇಲ್ಲೇ ಬಳಿಯಲ್ಲಿರುವ ಎರಡನೆಯ ವೀರಗಲ್ಲು ನಾಲ್ಕೂವರೆ ಅಡಿ ಎತ್ತರ ಮತ್ತು ನಾಲ್ಕು ಅಡಿ ಅಳತೆಯ ಮಾಪನವನ್ನು ಹೊಂದಿದೆ. ಇದೂ ಸಹ ಕಪ್ಪು ಬಣ್ಣದ ಗ್ರಾನೈಟ್ ಆಗಿದ್ದು, ಇದರಲ್ಲಿ ಮೂರು ಜನರ ಚಿತ್ರವಿದ್ದು ವೀರನೊಬ್ಬನು ತನ್ನ ಪರಶುವಿನಿಂದ ಎದುರಿಗಿರುವ ಇಬ್ಬರು ಖಡ್ಗಧಾರಿ ಶತ್ರುಗಳೊಡನೆ ಹೋರಾಡುತ್ತಿದ್ದಾನೆ. ಸಫಲನಾಗದೇ ಸಾವನ್ನಪ್ಪಿದ್ದಾನೆ. ಶಿಲ್ಪದ ಮೇಲೆ ಶಿವಲಿಂಗ ನಂದಿ ಸರ್ಪ ಹಾಗೂ ಸೂರ್ಯ ಚಂದ್ರರ ಕೆತ್ತನೆಗಳಿವೆ. ಈ ವೀರ ಯಾರು ? ಇವನ ಶತ್ರುಗಳು ಯಾರು ಎಂಬುದರ ವಿವರಣೆ ಶಿಲ್ಪದಲ್ಲಿ ಲಭ್ಯವಿಲ್ಲ. ಹೋರಾಟದ ಕಾರಣವೂ ಸಹ ಸ್ಪಷ್ಟವಾಗಿಲ್ಲ. ಈ ಸ್ಮಾರಕದ ಕಾಲವೂ ಸಹ ಸ್ಪಷ್ಟವಾಗಿಲ್ಲ. ಈ ಸ್ಮಾರಕದ ಕಾಲವೂ ಸಹ ಕ್ರಿ.ಶ. ಸುಮಾರು ಹದಿನೈದನೆಯ ಶತಮಾನವಾಗಿದೆ.

ಬಳಿಯಲ್ಲಿರುವ ಎರಡೂವರೆ ಅಡಿ ಅಗಲ ಮತ್ತು ಎರಡು ಅಡಿ ಕಪ್ಪು ಬಣ್ಣದ ಗ್ರಾನೈಟ್ ಶಿಲೆ ವೀರ ಮಾಸ್ತಿಕಲ್ಲುವಿನ ದಾಗಿದೆ. ಇದರಲ್ಲಿ ವೀರನು ಖಡ್ಗ ಹಿಡಿದು ನಿಂತಿದ್ದಾನೆ. ಈತನ ಎಡಭಾಗದಲ್ಲಿ ಸಹಗಮನಪದ್ಧತಿ ಅನುಸರಿಸಿರುವ ಇವನ ಸತಿ ಕೈಮುಗಿದು ನಿಂತಿದ್ದಾಳೆ. ಮಧ್ಯೆಯಲ್ಲಿ ಹೆಡೆ ಎತ್ತಿರುವ ಸರ್ಪದ ಚಿತ್ರಣವಿದೆ. ಸೂರ್ಯ ಚಂದ್ರ ಶಿವಲಿಂಗ ಮತ್ತು ನಂದಿಯ ಚಿತ್ರಣಗಳು ಮೇಲ್ಭಾಗದಲ್ಲಿ ಇವೆ.

ವೀರನು ಶತ್ರುಗಳ ಜೊತೆ ಖಡ್ಗವಿಡಿದು ಹೋರಾಡಿ ಮಡಿದಿದ್ದಾನೆ. ಇವನ ಪತ್ನಿ ಸತಿಪದ್ಧತಿ ಅನುಸರಿಸಿ ಪತಿಯನ್ನು ಸಾವಿನಲ್ಲಿಯೂ ಹಿಂಬಾಲಿಸಿದ್ದಾಳೆ.

ಇಲ್ಲಿನ ವೀರ ಮತ್ತು ವೀರ ಮಾಸ್ತಿ ಕಲ್ಲುಗಳಲ್ಲಿಯೂ ಸರ್ಪದ ಚಿತ್ರವು ಲಭ್ಯವಾಗಿದ್ದು ಇವರೂ ಸಹ ಬುಡಕಟ್ಟು ಜನರ ವರ್ಗಕ್ಕೆ ಸೇರಿದವರಾಗಿದ್ದಾರೆ. ಶಿಲ್ಪದ ದೃಷ್ಟಿಯಿಂದ ಇದು ಕ್ರಿ.ಶ. ಸುಮಾರು ಹದಿನೈದನೆಯ ಶತಮಾನಕ್ಕೆ ಸೇರುತ್ತದೆ.

ನದಿಗಳ ಸಂಗಮವಾದ ಪ್ರಾಚೀನ ಸ್ಥಳ ಕೂಡಲಳ್ಳಿಯು ಸಹ ವೀರ ಮತ್ತು ತ್ಯಾಗದ ಸ್ಥಳವಾಗಿದ್ದಿತು.

ಉಪ್ಪಲಗೆರೆ ಗ್ರಾಮವು ಆರನಕಟ್ಟೆ ರಸ್ತೆಯಲ್ಲಿದೆ. ಇಲ್ಲಿನ ರಂಗಜ್ಜ ಎಂಬುವರ ಅಡಿಕೆ ತೋಟದಲ್ಲಿ ಪೂರ್ವಾಭಿಮುಖ ವಾಗಿ ಒಂದು ವೀರ–ಮಾಸ್ತಿಕಲ್ಲನ್ನು ನಿಲ್ಲಿಸಿ ಪುಟ್ಟದೊಂದು ಗುಡಿಯನ್ನು ಕಟ್ಟಲಾಗಿದೆ. ಎರಡೂವರೆ ಅಡಿ ಎತ್ತರ ಮತ್ತು ಎರಡು ಅಡಿ ಅಗಲವನ್ನು ಹೊಂದಿದೆ. ಇದು ವೀರ ಮತ್ತು ಆತನ ಸತಿಯರು ಇರುವ ಚಿತ್ರವನ್ನು ಮಾತ್ರ ಹೊಂದಿದೆ. ಈ ಶಿಲ್ಪದಲ್ಲಿ ವೀರ ನಿಂತುಕೊಂಡಿದ್ದು ಬಲದ ಕೈಯನ್ನು ಇಳಿಬಿಟ್ಟಿದ್ದಾನೆ. ಎಡದ ಕೈನಲ್ಲಿ ಖಡ್ಗವನ್ನು ತಬ್ಬಿಕೊಂಡಿದ್ದಾನೆ. ಈತನು ಓರ್ವ ಎಡದ ಕೈನಲ್ಲಿ ಯುದ್ಧ ಪ್ರವೀಣನಾದ ವೀರನಾಗಿದ್ದನೆಂದು ತಿಳಿಯಬಹುದು. ಶಿರದಲ್ಲಿ ಶಿರೋಮುಡಿ ಇದ್ದು ಎಡಭಾಗಕ್ಕೆ ಬರುವಂತೆ ದಪ್ಪನೆಯ ಜಡೆಯನ್ನು ಹೊಂದಿದ್ದಾನೆ. ಕಿವಿಯಲ್ಲಿ ಆಭರಣಗಳು, ಕೊರಳಲ್ಲಿ ಮಣಿ ಸರಗಳು, ಕಾಲುಗಳಲ್ಲಿ ಕಡಗಗಳನ್ನು ಧರಿಸಿದ್ದಾನೆ. ವೀರಗಚ್ಚೆಯ ಅಲಂಕೃತ ಪೋಷಾಕು ಧರಿಸಿದ್ದಾನೆ. ಈತನ ಎಡಭಾಗದಲ್ಲಿ ಸತಿ ಹೋಗಿ ಮೃತ್ಯು ಹೊಂದಿದ ಈ ವೀರನ ಸತಿಯು ತಾಡಾಸನ ಭಂಗಿಯಲ್ಲಿ ನಿಂತಿದ್ದು ತನ್ನೆರಡೂ ಕೈಗಳಲ್ಲಿ ನಿಂಬೆಹಣ್ಣು ಮತ್ತು ಪಾನಪಾತ್ರೆಗಳನ್ನು ಹಿಡಿದಿದ್ದಾಳೆ. ಶಿರದಲ್ಲಿ ದೊಡ್ಡದಾದ ತುರುಬು ಇವಳಿಗಿವೆ. ಆಭರಣಗಳು ಅಸ್ಪಷ್ಟವಾಗಿವೆ. ಈಕೆ ಧರಿಸಿರುವ ವಸ್ತ್ರ ತನ್ನ ಪಾದಗಳವರೆಗೂ ಹಬ್ಬಿದೆ. ಪತಿಯು ಶತ್ರುಗಳೊಡನೆ ಹೋರಾಡಿ ಮಡಿದಿರುವು ದರಿಂದ ಈಕೆ ಚಿತೆ ಏರಿ ಅಗ್ನಿ ಪ್ರವೇಶ ಮಾಡಿದ್ದಾಳೆ. ಮೇಲೆ ಸೂರ್ಯ ಚಂದ್ರರ ಕೆತ್ತನೆಗಳಿವೆ. ಇಲ್ಲಿನ ವೀರನೂ ಸಹ ಬುಡಕಟ್ಟು ಜನಾಂಗಕ್ಕೆ ಸೇರಿದ್ದ ನೆಂಬುದಾಗಿ ಇವನ ಜಡೆ, ವಸ್ತ್ರ ಮತ್ತು ಆಭರಣಗಳಿಂದ ತಿಳಿಯಬಹುದಾಗಿದೆ. ಕ್ರಿ.ಶ. ಸುಮಾರು ಹದಿನಾರನೆಯ ಶತಮಾನಕ್ಕೆ ಈ ವೀರ ಮಾಸ್ತಿಕಲ್ಲು ಸೇರುತ್ತದೆ.

ಆರನಕಟ್ಟೆ ರಸ್ತೆಯಲ್ಲಿ ಕುಂದಲಗುರ ಗ್ರಾಮವಿದೆ. ಈ ಗ್ರಾಮದ ಹೊರವಲಯದಲ್ಲಿ ಪ್ರಾಚೀನ ರಂಗನಾಥ ದೇವಾಲಯವಿದೆ. ಈ ದೇವಾಲಯದ ಪ್ರಾಕಾರದ ಹೊರಗೆ ಮೂರು ವೀರಗಲ್ಲುಗಳು ಬಿದ್ದಿವೆ ಮೊದಲನೆಯ ವೀರಗಲ್ಲು ಮೂರುಕಾಲು ಅಡಿ ಎತ್ತರ ಮತ್ತು ಎರಡು ಅಡಿ ಅಗಲದ ಕೆಂಪು ಗ್ರಾನೈಟ್ ಸ್ಮಾರಕವಾಗಿದೆ. ವೀರನ ಚಿತ್ರವು ಮಾತ್ರ ಪ್ರಧಾನವಾಗಿದ್ದು ಕಲ್ಲಿನ ಮೇಲ್ಭಾಗ ಕಮಾನಾಕೃತಿ ಹೊಂದಿದೆ. ಇಲ್ಲಿ ವೀರನು ಎಡಗಾಲಿನ ಮಂಡಿ ಸ್ವಲ್ಪ ಭಾಗಿಸಿ ನಿಂತಿದ್ದು ಎಡದ ಕೈ ಮಡಿಚಿ ತಾನು ಧರಿಸಿರುವ ವಸ್ತ್ರದ ಗಂಟನ್ನು ಬಳಸಿ ಹಿಡಿದಿದ್ದಾನೆ. ಮೇಲ್ವಸ್ತ್ರದ ಅಂಚು ಅತ್ಯಂತ ಹಿರಿದಾಗಿದ್ದು ಎಡಗಡೆಗೆ ಹರಡಿ ಬಂದಿದೆ. ವೀರಗಚ್ಚೆಯ ಕೆಳ ಉಡುಪು ಇದ್ದು ಕಾಲು ಮತ್ತು ಮುಂಗೈಗಳಲ್ಲಿ ಕಡಗಗಳಿವೆ. ಬಲದ ಕೈಯನ್ನು ಇಳಿಬಿಟ್ಟಿದ್ದು ಇದರಲ್ಲಿ ಪ್ರಖರವಾದ ಖಡ್ಗ ಹಿಡಿದಿದ್ದಾನೆ. ಶಿರದಲ್ಲಿ ತುರುಬು ಇದ್ದು ಬಲಭುಜಕ್ಕೆ ತಾಗಿಸಿದಂತಹ ಕೇಶ ಜಡೆ ಹರಡಿದೆ. ಸ್ಮಾರಕದ ಅಂಚಿನ ಮೇಲೆ ಚಂದ್ರ ಸೂರ್ಯರ ಚಿತ್ರಣಗಳು ಇವೆ. ಇವನೂ ಸಹ ಬುಡಕಟ್ಟು ವರ್ಗಕ್ಕೆ ಸೇರಿದವನಾಗಿದ್ದು ಶತ್ರುಗಳ ಜೊತೆ ರಾಜಕೀಯ ಕಾರಣಕ್ಕಾಗಿ ಹೋರಾಡಿ ಹತನಾಗಿದ್ದಾನೆ. ಕ್ರಿ.ಶ. ಸುಮಾರು ಹದಿನಾಲ್ಕನೆಯ ಶತಮಾನಕ್ಕೆ ಸೇರುತ್ತದೆ.

ಬಳಿಯಲ್ಲಿರುವ ಎರಡನೇ ವೀರಗಲ್ಲು ನಾಲ್ಕು ಅಡಿ ಎತ್ತರ, ಎರಡು ಅಡಿ ಅಗಲದ ಅಳತೆಯನ್ನು ಹೊಂದಿದೆ. ಕೆಂಪನೆಯ ಬಣ್ಣದ ಗ್ರಾನೈಟ್ ಶಿಲ್ಪ ಇದಾಗಿದ್ದು ಕಲ್ಲಿನ ಎರಡು ಅಡಿಗಳಷ್ಟು ಮಾತ್ರದಲ್ಲಿ ಶಿಲ್ಪ ಮತ್ತು ಇತರ ಅಲಂಕಾರಗಳನ್ನು ಕಲಾತ್ಮಕವಾಗಿ ಬಿಡಿಸಲಾಗಿದೆ. ವೀರನು ಧನಸ್ಸುವಿಗೆ ಬಲಗೈನಿಂದ ಬಾಣವನ್ನು ಹೂಡಿ ಯುದ್ಧ ಮಾಡುವ ಭಂಗಿಯಲ್ಲಿ ನಿಂತಿದ್ದಾನೆ. ಶಿರದಲ್ಲಿ ತುರುಬು ಇದ್ದು ಕಿವಿಗಳಲ್ಲಿ ಕುಂಡಲಗಳಿವೆ. ಇವನ ಬೆನ್ನಿನಲ್ಲಿರುವ ಬತ್ತಳಿಕೆಯಲ್ಲಿ ಬಾಣಗಳ ಗುಚ್ಛ ಇವೆ. ಉತ್ತಮವಾದ ಪೋಷಾಕಿನ ಉಡುಗೆಯನ್ನು ಧರಿಸಿದ್ದಾನೆ. ಇವನ ಚಿತ್ರಣದ ಮೇಲೆ ಕಲ್ಲಿನಲ್ಲಿ ರೇಖಾಕೃತಿಗಳ ಅಲಂಕಾರಗಳನ್ನು ಎರಡೂ ಪಾರ್ಶ್ವ ಮತ್ತು ಮೇಲ್ಭಾಗದಲ್ಲಿ ಬಿಡಿಸಲಾಗಿದೆ. ಈ ಅಲಂಕಾರದ ಮೇಲ್ಭಾಗದಲ್ಲಿ ವೀರನಿಗೆ ಎದುರಾಗುವಂತೆ ಪುಟ್ಟ ಪ್ರಮಾಣದ ಆನೆಯೊಂದನ್ನು ಮಾತ್ರವೇ ಬಿಡಿಸಲಾಗಿದೆ. ಅಂದರೆ ವೀರನಿಗೆ ಒಂಟಿ ಸಲಗವೊಂದು ಆಕಸ್ಮಿಕವಾಗಿ ಎದುರಾದಾಗ ಅಥವಾ ಊರಿಗೆ ದಾಳಿ ಮಾಡಿದಾಗ ಇವನ್ನು ಹೆದರದೆ ತನ್ನ ಬಿಲ್ಲು ಬಾಣಗಳಿಂದ ಕೊಲ್ಲಲು ಯತ್ನಿಸಿದ್ದಾನೆ. ವಿಫಲನಾಗಿ ಮರಣವನ್ನಪ್ಪಿದ್ದಾನೆ. ಇದೊಂದು ಅತ್ಯಂತ ಗಮನಾರ್ಹ ವೀರಗಲ್ಲು ಆಗಿದೆ.

ನೆಲದಲ್ಲಿ ಬಹುತೇಕ ಹುದುಗಿಹೋಗಿದ್ದ ವೀರಗಲ್ಲು ಒಂದು ಮೂರೂವರೆ ಅಡಿ ಎತ್ತರ, ಎರಡು ಅಡಿ ಅಗಲದ ಕೆಂಪು ಬಣ್ಣದ ಗ್ರಾನೈಟ್ ಶಿಲ್ಪವಾಗಿದೆ. ಇಲ್ಲಿ ವೀರನ ಚಿತ್ರಣವು ಬಹುತೇಕ ಒಡೆದು ಮತ್ತು ಸವೆದು ಹಾಳಾಗಿದೆ. ಶಿರದಲ್ಲಿ ದೊಡ್ಡದಾದ ತುರುಬು ಹೊಂದಿರುವ ವೀರನು ಎಡಗೈಯನ್ನು ಮಡಚಿ ಕಟಿಹಸ್ತದ ಭಂಗಿಯಲ್ಲಿ ನಿಂತಿದ್ದಾನೆ. ಬಲದ ಕೈಯನ್ನು ಮುಂದೆ ಚಾಚಿದ್ದು ಏನನ್ನೋ (ಆಯುಧ ?) ಹಿಡಿದು ಕೊಂಡಿದ್ದಾನೆ. ಈತನ ಎರಡೂ ಪಾರ್ಶ್ವಗಳಲ್ಲೂ ಪುಟ್ಟ ಕಂಬ

ಸುರುಳಿಯಾಕಾರದ ಕಂಬಗಳ ಅಲಂಕಾರ ಕೆತ್ತನೆಯಿದ್ದು ನಡುನಡುವೆ ಪತ್ರಗುಚ್ಛ ಮತ್ತು ಬಳ್ಳಿಗಳ ಅಲಂಕಾರವಿದೆ. ಈತನ ಶಿರದ ಮೇಲೆ ಪಕ್ಷಿಯೊಂದರ ಅಲಂಕಾರವಿದೆ. ಇವನೂ ಸಹ ರಾಜಕೀಯ ಕಾರಣವೊಂದರಿಂದ ಶತ್ರುಗಳ ಜೊತೆ ಹೋರಾಡಿ ಮಡಿದಿದ್ದಾನೆ. ಶಿಲ್ಪದ ಅಲಂಕಾರ ಮತ್ತು ವಸ್ತ್ರ ಬಳಸಿ ಹಿಡಿದಿರುವ ಭಂಗಿಗಳನ್ನು ಗಮನಿಸಿದರೆ ಇವನೂ ಸಹ ಓರ್ವ ಪ್ರಮುಖ ವ್ಯಕ್ತಿ ಆಗಿದ್ದನೆಂದು ನಿರ್ಧರಿಸಬಹುದು. ಕ್ರಿ.ಶ. ಸುಮಾರು ಹದಿನೈದನೆಯ ಶತಮಾನಕ್ಕೆ ಈ ವೀರಗಲ್ಲು ಸ್ಮಾರಕ ಸೇರುತ್ತದೆ.

ಊರ ಮುಂದಿನ ಹೊರಭಾಗದಲ್ಲಿರುವ ಕಾಲಭೈರವ ದೇವಾಲಯದ ಹೊರಗಡೆಯ ನಾಗರಕಟ್ಟೆ ಮತ್ತು ಮುಂದಿನ ಹೊಲದಲ್ಲಿ ಸೇರಿ ನಾಲ್ಕು ವೀರಗಲ್ಲುಗಳು ಕಂಡುಬಂದಿವೆ. ಹೊಲದಲ್ಲಿ ಬಿದ್ದಿರುವ ವೀರಗಲ್ಲು ಒಂದು ಎರಡೂವರೆ ಅಡಿ ಎತ್ತರ ಮತ್ತು ಎರಡು ಅಡಿ ಅಗಲದ ಅಳತೆಯನ್ನು ಹೊಂದಿದೆ. ವೀರನೊಬ್ಬನ ಚಿತ್ರಣ ಮಾತ್ರ ಇಲ್ಲಿದ್ದು ಈ ವೀರನು ತನ್ನ ಎಡಭಾಗದ ಕಾಲನ್ನು ಮುಂದೆ ಇಟ್ಟಿದ್ದು ಯುದ್ಧ ಸನ್ನದ್ಧನಾಗಿದ್ದಾನೆ. ಬಲದ ಕೈನಲ್ಲಿ ಖಡ್ಗ ಎಡದ ಕೈನಲ್ಲಿ ಗುರಾಣಿ ಹಿಡಿದಿದ್ದಾನೆ. ಶಿಲೆಯ ಬಹುತೇಕ ಭಾಗ ಹೊಡೆದು ಮತ್ತು ಸವೆದು ಹೋಗಿರುವುದರಿಂದ ಯುದ್ಧದ ವಿವರಗಳು ಲಭ್ಯವಿಲ್ಲ. ವೀರನಿಗೆ ಶಿರದಲ್ಲಿ ಮಕುಟ ಮತ್ತು ಕರ್ಣಗಳಲ್ಲಿ ಕುಂಡಲಗಳಿವೆ. ಶಿಲ್ಪದ ಮೇಲೆ ಸೂರ್ಯ ಚಂದ್ರರ ರೇಖಾ ಚಿತ್ರವಿದೆ. ಈ ವೀರಗಲ್ಲು ಸ್ಮಾರಕದ ಕೆತ್ತನೆಯ ಶೈಲಿ ಮತ್ತು ಮಾಧ್ಯಮದ ಆಧಾರಗಳಿಂದ ಇದೊಂದು ಕ್ರಿ.ಶ. ಸುಮಾರು ಹನ್ನೆರಡನೇ ಶತಮಾನದ ವೀರಗಲ್ಲು ಸ್ಮಾರಕವೆಂದು ನಿರ್ಧರಿಸಬಹುದಾಗಿದೆ. ಅಲ್ಲದೇ ಈ ವೀರನೂ ಸಹ ರಾಜಕೀಯ ಕಾರಣವೊಂದರಿಂದ ಶತ್ರುಗಳೊಡನೆ ಖಡ್ಗ ಮತ್ತು ಗುರಾಣಿ ಹಿಡಿದು ಹೋರಾಡಿ ಹತನಾಗಿದ್ದಾನೆ.

ನಾಗರಕಟ್ಟೆಯ ಮೇಲೆ ಸಾಲಾಗಿ ನಿಲ್ಲಿಸಿರುವ ಮೂರು ವೀರಗಲ್ಲುಗಳಲ್ಲಿ ಒಂದು ಅತ್ಯಂತ ಅಗಲವಾಗಿದ್ದು ಇದು ಪೆಣ್ಬುಯಲ್ ವೀರಗಲ್ಲು ಆಗಿದೆ. ಆರು ಅಡಿ ಅಗಲ ಮತ್ತು ಮೂರು ಅಡಿ ಎತ್ತರದ ಕಪ್ಪು ಕಲ್ಲಿನ ಗ್ರ್ಯಾನೈಟ್ ಸ್ಮಾರಕ ಇದಾಗಿದೆ. ಇದರಲ್ಲಿ ಇಬ್ಬರು ವೀರರು ಮತ್ತು ಓರ್ವ ಮಹಿಳೆಯ ಚಿತ್ರಣಗಳು ಇವೆ. ಈ ವೀರಗಲ್ಲಿನ ಬಲಭಾಗದಲ್ಲಿ ಓರ್ವ ವೀರನು ಎತ್ತಿದ ತನ್ನ ಬಲದ ಕೈನಿಂದ ಖಡ್ಗವನ್ನು ಹಿಡಿದಿದ್ದಾನೆ. ಎಡದ ಕೈನಲ್ಲಿ ಹೆಗಲಿಗೆ ಇಳಿಬಿದ್ದಿರುವ ವಸ್ತ್ರವನ್ನು ಬಳಸಿ ಹಿಡಿದಿದ್ದಾನೆ. ಇವನಿಗೆ ಬಲಭಾಗಕ್ಕೆ ಎತ್ತಿ ಕಟ್ಟಿರುವ ಶಿರದ ತುರುಬಿನ ಅಲಂಕಾರವಿದ್ದು ಅದರಿಂದ ಹೊರಬಂದಿರುವ ಸುಂದರ ಜಡೆ ಇಳಿಬಿದ್ದಿದೆ. ಕಿವಿಗಳಲ್ಲಿ ಆಭರಣಗಳೇ ಅಲ್ಲದೇ ಮುಂಗೈ ಮತ್ತು ಕೊರಳಿನಲ್ಲಿ ಆಭರಣಗಳು ಇವೆ. ಶಾಂತಚಿತ್ತ ಭಾವವನ್ನು ಮುಖದಲ್ಲಿ ಗುರುತಿಸಬಹುದು. ಇವನ ಬದಿಯಲ್ಲಿ ತನ್ನ ಕಾಲುಗಳನ್ನು ಎಡಗಡೆಗೆ ಭಾಗಿಸಿ ಕೈ ಮುಗಿದು ನಿಂತಿರುವ ಮಹಿಳೆಯೊಬ್ಬಳ ಚಿತ್ರಣವಿದೆ. ಇವಳು ಭಯಭಕ್ತಿಗಳಿಂದ ತನ್ನ ವಸ್ತ್ರವನ್ನು ಕೈಗಳಲ್ಲಿ ಅದುಮಿ ಹಿಡಿದುಕೊಂಡಿದ್ದಾಳೆ. ಇವಳ ಶಿರದಲ್ಲಿಯೂ ಬಲಭಾಗಕ್ಕೆ ವಾಲಿರುವಂತಹ ತುರುಬು ಇದ್ದು ಅಲಂಕಾರಿಕ ವಾದ ಜಡೆ ನೀಳವಾಗಿ ಇಳಿಬಿದ್ದಿದೆ. ತೋಳಿನಲ್ಲಿ ಕಡಗಗಳು, ಕೊರಳಿನಲ್ಲಿ ಪದಕ ಇವಳಿಗೆ ಇದೆ. ತುಂಬುವಸ್ತ್ರವನ್ನು ಧರಿಸಿರುವುದೇ ಅಲ್ಲದೇ ಮುಂದೆ ಇರುವ ವೀರನ ಹೆಗಲ ವಸ್ತ್ರವನ್ನು ತಾನು ಧರಿಸಿ ನೋಡುತ್ತಿದ್ದಾಳೆ. ಇವಳ ಕಾಲುಗಳಲ್ಲಿಯೂ ಕಡಗಗಳಿವೆ. ಈಕೆಯ ಮುಂದುಗಡೆ ವೀರನೊಬ್ಬನ ಚಿತ್ರವಿದ್ದು ತನ್ನ ಎಡಕೈನಲ್ಲಿ ಎತ್ತರದ ಧನುಸ್ಸನ್ನು ಹಿಡಿದಿದ್ದು ಬಲಕೈನಲ್ಲಿ ಎತ್ತಿದ ಖಡ್ಗವನ್ನು ಹಿಡಿದಿದ್ದಾನೆ. ಇವನಿಗೂ ಶಿರದಲ್ಲಿ ಶಿರೋಮುಡಿ ಇದ್ದು ಅಲಂಕಾರ ಯುಕ್ತವಾದ ನೀಳ ಜಡೆ ಇಳಿಬಿದ್ದಿದೆ. ಮುಖದಲ್ಲಿ ರೌದ್ರರೂಪ ವ್ಯಕ್ತವಾಗುತ್ತಿದೆ. ಇವನಿಗೆ ಕಿವಿಯಲ್ಲಿ ಕುಂಡಲಗಳು ತೋಳು ಮುಂಗೈ ಮತ್ತು ಕಾಲುಗಳಲ್ಲಿ ಕಡಗಗಳು ಇವೆ. ಕೊರಳಪದಕ ನಡುಪಟ್ಟಿ ಕಂಠೀಹಾರದಂತಹ ವಸ್ತ್ರ, ವೀರಗಚ್ಚೆ ಇವುಗಳೆಲ್ಲ ಇವನೊಬ್ಬ ಪ್ರಮುಖ ಪಾಳೆಯಗಾರನೆಂಬುದನ್ನು ತಿಳಿಸುತ್ತಿವೆ. ಶತ್ರುಗಳು ತಮ್ಮ ಊರಿನ ಮಹಿಳೆಯನ್ನು ಅಪಹರಿಸಲು ಬಂದಾಗ ಈ ಇಬ್ಬರೂ ವೀರರು ವೀರಾವೇಶದಿಂದ ಹೋರಾಡಿ ಮಡಿದಿದ್ದಾರೆ. ಇವರ ಸ್ಮಾರಕವಾಗಿ ಈ ವೀರಗಲ್ಲು ನಿರ್ಮಾಣವಾಗಿದೆ. ಹಿರಿಯೂರು ತಾಲ್ಲೂಕಿನ ವೀರಗಲ್ಲು ಅಧ್ಯಯನದಲ್ಲಿ ದೊರೆತಿರುವ ಮೊಟ್ಟಮೊದಲ ಪೆಣ್ಬುಯಲ್ ವೀರಗಲ್ಲು ಇದಾಗಿದೆ. ಕ್ರಿ.ಶ. ಸುಮಾರು ಹದಿನಾಲ್ಕನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಮೂರು ಅಡಿ ಎತ್ತರ, ಎರಡು ಅಡಿ ಅಗಲದ ಕಪ್ಪು ಗ್ರ್ಯಾನೈಟ್‌ನ ಸುಂದರ ವೀರಗಲ್ಲು ಒಂದು ಬಳಿಯಲ್ಲಿದ್ದು ವೀರನೊಬ್ಬನ ಪ್ರಧಾನ ಚಿತ್ರವನ್ನು ಹೊಂದಿದೆ. ಈತ ತನ್ನ ಬಲಕೈನಲ್ಲಿ ನಾಲ್ಕು ಬಾಣಗಳನ್ನು ಎಡಕೈನಲ್ಲಿ ದೊಡ್ಡದಾದ ಧನಸ್ಸನ್ನು ಹಿಡಿದಿದ್ದಾನೆ. ಶಿರದಲ್ಲಿ ಕಟ್ಟಿದ ಮುಡಿ ಮತ್ತು ಮುಡಿಯಿಂದ ಬಲಗಡೆಗೆ ಇಳಿಬಿದ್ದ ನೀಳವಾದ ಆಕರ್ಷಕ ಜಡೆ ಇದೆ. ಮುಖದಲ್ಲಿ ಮೀಸೆ ಇದೆ. ಕೊರಳು ಮತ್ತು ಎದೆಯ ಮೇಲೆ ಮೂರು ಹಂತವಾಗಿ ಪದಕ ಮತ್ತು ಮಣಿಸರಗಳಿವೆ. ತೋಳು, ಮುಂಗೈ ಮತ್ತು ಕಾಲುಗಳಲ್ಲಿ ಕಡಗಗಳಿದ್ದು ನಡುವಿನಲ್ಲಿ ಬಿಚ್ಚುಕತ್ತಿ ಇದೆ. ಅಲಂಕಾರಿಕವಾದ ಪೋಷಾಕು ಧರಿಸಿದ್ದಾನೆ. ಯುದ್ಧವೊಂದರಲ್ಲಿ ಶತ್ರುಗಳ ಜೊತೆ ಬಿಲ್ಲು ಬಾಣಗಳಿಂದ ಕದನ ಮಾಡಿ ಅಸುನೀಗಿದ್ದಾನೆ. ಇವನ ಚಿತ್ರದ ಮೇಲ್ಭಾಗದಲ್ಲಿ ಸೂರ್ಯ, ಯತಿ, ಶಿವಲಿಂಗ, ನಂದಿ



ಬಬ್ಬೂರು ವೀರಮಾಸ್ತಿಗಲ್ಲು



ಕುಂದಲಗುರ ವೀರಗಲ್ಲು



ಕೊಪ್ಪಲಗೆರೆ ವೀರಮಾಸ್ತಿಗಲ್ಲು



ಟಿ. ನಾಗೇನಹಳ್ಳಿ ವೀರಮಾಸ್ತಿಗಲ್ಲು



ಕುಂದಲಗುರ ಭೈರವನ ಗುಡಿ ಬಳಿ ವೀರಗಲ್ಲು



**ಕುಂದಲಗುರ ರಂಗನಾಥ ದೇಗುಲದ ಬಳಿ ವೀರಗಲ್ಲು**

ಮತ್ತು ಚಂದ್ರರ ಕೆತ್ತನೆಗಳಿವೆ. ಕ್ರಿ.ಶ. ಸುಮಾರು ಹದಿಮೂರನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ.

ಬಳಿಯಲ್ಲಿರುವ ಮತ್ತೊಂದು ವೀರಗಲ್ಲು ಮೂರು ಅಡಿ ಎತ್ತರ ಮತ್ತು ಎರಡು ಅಡಿ ಅಗಲವನ್ನೇ ಹೊಂದಿದೆ. ಇಲ್ಲಿಯೂ ವೀರನ ಚಿತ್ರಣವೇ ಪ್ರಧಾನವಾಗಿದ್ದು ಎಡಕೈನಲ್ಲಿ ಬೃಹತ್ತಾದ ಧನುಸ್ಸನ್ನು ಹಿಡಿದಿದ್ದು ಬಲಗೈನಿಂದ ಬೆನ್ನಹಿಂದೆ ಇರುವ ಬತ್ತಳಿಕೆಯಿಂದ ಬಾಣವನ್ನು ತೆಗೆದುಕೊಳ್ಳುತ್ತಿದ್ದಾನೆ. ಇವನು ಸುಂದರವಾದ ಕೇಶರಾಶಿಯ ತುರುಬನ್ನು ಹೊಂದಿರುವುದೇ ಅಲ್ಲದೆ ಮುಖದಲ್ಲಿ ಮೀಸೆಯನ್ನು ಹೊಂದಿದ್ದಾನೆ. ತೋಳು ಮತ್ತು ಮುಂಗೈಗಳಲ್ಲಿ ಮಣಿಸರಗಳನ್ನು ಹೊಂದಿರುವುದಲ್ಲದೇ ಕೊರಳು ಮತ್ತು ಎದೆಗಳಲ್ಲಿ ಮಣಿಸರಗಳನ್ನು ಹೊಂದಿದ್ದಾನೆ. ನಡುಪಟ್ಟಿ ಇವನಿಗಿದ್ದು ಅಲಂಕಾರಿಕ ವಸ್ತ್ರ ಧರಿಸಿದ್ದಾನೆ. ಇವನೂ ಸಹ ತನ್ನ ಶತ್ರುಗಳ ಜೊತೆ ಧನುಸ್ಸು ಮತ್ತು ಬಾಣಗಳಿಂದ ಹೋರಾಡಿ ಮಡಿದಿದ್ದಾನೆ. ಸೂರ್ಯ ಮತ್ತು ಚಂದ್ರರ ಕೆತ್ತನೆಗಳು ವೀರಗಲ್ಲು ಗಳ ಮೇಲೆ ಇವೆ. ಕ್ರಿ.ಶ. ಸುಮಾರು ಹದಿಮೂರನೆಯ ಶತಮಾನಕ್ಕೆ ಈ ವೀರಗಲ್ಲು ಸಹ ಸೇರುತ್ತದೆ.

ಮೇಲಿನ ಪ್ರಾಚೀನ ವೀರ ಮತ್ತು ವೀರ ಮಾಸ್ತಿ ಕಲ್ಲುಗಳ ವಿಶಿಷ್ಟತೆಗಳು ಪಿಟ್ಲಾಲಿ ಮತ್ತು ಕುಂದಲಗುರ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ವೀರತನ ಮತ್ತು ತ್ಯಾಗದ ಗುಣಗಳು ಮನೆ ಮಾಡಿಕೊಂಡಿದ್ದು ಚಿತ್ರದುರ್ಗ ಜಿಲ್ಲೆಯ ಸೂಕ್ಷ್ಮ ಇತಿಹಾಸವನ್ನು ರಚಿಸುವಲ್ಲಿ ಹೊಸಬೆಳಕು ಚೆಲ್ಲಿವೆ.

ಡಾ. ಎಚ್. ಜಯಮ್ಮ ಕರಿಯಣ್ಣ*

# ದೇವರಾಯನದುರ್ಗದ ದೇವಾಲಯದ ಶಾಸನೋಕ್ತ ಪೂಜಾ ಕೈಂಕರ್ಯಗಳು

ಕನ್ನಡ ಶಾಸನಗಳನ್ನು ಅವಲೋಕಿಸಿದಾಗ ಪ್ರಾಚೀನ ಪೂಜಾ ರೀತಿಗಳು ದೊರೆಯುತ್ತವೆ. ಆದರೆ ಪೂಜಾ ವೆಚ್ಚಗಳ ವಿವರಗಳು ದೊರೆಯುವುದು ತೀರಾ ಕಡಿಮೆ. ಆದರೆ ಮಧ್ಯಕಾಲೀನ ಶಾಸನಗಳಲ್ಲಿ ಪೂಜಾ ವಿವರಗಳು ದೊರೆಯಲಾರಂಭಿಸುತ್ತವೆ. ಅದರಲ್ಲೂ ಶ್ರೀ ವೈಷ್ಣವ ಪ್ರಭಾವದ ದೇವಾಲಯಗಳ ಶಾಸನಗಳಲ್ಲಿ ಇಂತಹ ವಿವರಗಳು ಜಾಸ್ತಿ. ವಿಜಯನಗರದ ವೈಷ್ಣವ ಶಾಸನಗಳಲ್ಲಿ ಈ ವಿವರಗಳು ಇನ್ನೂ ಜಾಸ್ತಿ. ವಿಜಯನಗರ ಆಳ್ವಿಕೆ ಮುಗಿದ ಮೇಲೂ ವೈಷ್ಣವ ದೇವಾಲಯಗಳ ಪೂಜೆಗಳಲ್ಲಿ ಪೂಜಾ ವಿವರಗಳಲ್ಲಿ ಯಾವುದೇ ವ್ಯತ್ಯಾಸವಿಲ್ಲ. ದೇವರಾಯನ ದುರ್ಗದ ಶಾಸನಗಳು ಇದಕ್ಕೆ ಹೊರತಲ್ಲ. ಇಲ್ಲಿನ ಶಾಸನಗಳನ್ನು ಹಾಕಿಸಿದವನು ಮೈಸೂರು ಒಡೆಯರ ಕಾಲದಲ್ಲಿ ಅಧಿಕಾರಿಯಾಗಿದ್ದವನು ಬಿಳುಗಲೆ ದಾಸರಾಜಯ್ಯ. ಅರಸ ಚಿಕ್ಕದೇವರಾಜ ಒಡೆಯರು ತೀವ್ರ ಶ್ರೀ ವೈಷ್ಣವವಾದಿ. ಹೀಗಾಗಿ ದೇವರಾಯನ ದುರ್ಗದ ಶ್ರೀನರಸಿಂಹಸ್ವಾಮಿ ದೇವಾಲಯದಲ್ಲಿ ನಡೆಯುತ್ತಿದ್ದ ಪೂಜೆಗಳೂ ಸಹ ಶ್ರೀ ವೈಷ್ಣವ ರೀತಿಯದಾದುದರಿಂದ ಇಲ್ಲಿ ಪೂಜಾ ವಿವರಗಳು ವಿವರವಾಗಿ ಬಂದಿವೆ.

ಚಿಕ್ಕದೇವರಾಜ ಒಡೆಯರು ಕ್ರಿ.ಶ. ೧೬೭೮ರಲ್ಲಿ ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಿದ್ದಾಗ, ಶ್ರೀವತ್ಸಗೋತ್ರದ ಆಪಸ್ತಂಭಸೂತ್ರದ ಯಜುಶಾಖೆಯ ಬಿಳುಗುಲಿಯ ತಿಮ್ಮರಾಜಯ್ಯನ ಮೊಮ್ಮಗ, ಕೃಷ್ಣಯ್ಯನ ಮಗ ದಳವಾಯಿ ದಾಸರಾಜಯ್ಯ ತಿಮ್ಮಪ್ಪರಾಜಯ್ಯನವರು ಕರಗಿರಿ ನರಸಿಂಹಸ್ವಾಮಿ ದೇವರ ಸಾನಿಧ್ಯದಲ್ಲಿ ಕಲ್ಯಾಣ ಲಕ್ಷ್ಮೀದೇವಿ ಅಮ್ಮನವರ ಪ್ರತಿಷ್ಠೆ ಮಾಡಿಸಿದರು. ಈ ದೇವಿಯ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವ ಮುಂತಾದ ಸಕಲ ವಿಧದ ಅರ್ಚನಾವ್ರಿತ್ತಿ ಸೇವೆ ಮಾಡಿಕೊಂಡಿರಬೇಕೆಂಬ ಕಾರಣದಿಂದ ಕಾಶ್ಯಪ ಗೋತ್ರದ, ಭೋಧಾಯನ ಸೂತ್ರದ, ಯಜುಶಾಖೆಯ ಚಿಕ್ಕದೇವರಾಯದುರ್ಗದ ನರಸಯ್ಯನ ಮೊಮ್ಮಗನಾದ ಚಿಕ್ಕನರಸಯ್ಯನ ಮಗ ಅರ್ಚಕ ಅಳಸಿಂಗಾಚಾರ್ಯನಿಗೆ ವಹಿಸಿದ. ಪೂಜಾ ಕಾರ್ಯಗಳಿಗಾಗಿ ಆನೆ ಬಿದ್ದಜರಿ ಮರುಗಲನಾಡು ಚಿಕ್ಕದೇವರಾಯನದುರ್ಗ ಸ್ಥಳಕ್ಕೆ ಸಲ್ಲುವ ಅನುಪಿನ ಹಳ್ಳಿಯ, ಹೊಲಚಿನುವಾಡನ ಹಳ್ಳಿಯ ಗದ್ದೆ-ಈ ಎರಡೂ ಕ್ಷೇತ್ರಗಳನ್ನು ದಾನ ಮಾಡಿರುವುದನ್ನು ದೇವರಾಯನ ದುರ್ಗದ ಒಂದು ಶಾಸನ ಉಲ್ಲೇಖಿಸಿದೆ.

ಅದೇ ದೇವರಾಯನದುರ್ಗದ ಮತ್ತೊಂದು ತಾಮ್ರಶಾಸನ ಕ್ರಿ.ಶ. ೧೭೧೮ರಲ್ಲಿ ಮೈಸೂರು ಅರಸ ಕೃಷ್ಣದೇವರಾಜ ಒಡೆಯರು (ಇಮ್ಮಡಿ ಕೃಷ್ಣರಾಜ ಒಡೆಯರು) ಶ್ರೀರಂಗಪಟ್ಟಣದಲ್ಲಿ ಆಳುತ್ತಿರುವಾಗ ಭೃಗುಋಷೀಶ್ವರರಿಂದ ದೇವತಾರ್ಚನೆಯಾದ ಕಕುದ್ಗಿರಿ ಕ್ಷೇತ್ರದ (ಶಿವಗಂಗೆ) ಉತ್ತರ ಭಾಗದಲ್ಲಿರುವ ಹಾಗೂ ಕಾವೇರಿ ನದಿಗೆ ದಕ್ಷಿಣದಲ್ಲಿನ ಕಪಿಲಾನದಿಗೆ ಪೂರ್ವಭಾಗದಲ್ಲಿದ್ದ ತಾಯೂರು ಬಿಳುಗಲೆ ಪ್ರಭುಗಳಾದ ಶ್ರೀವತ್ಸಗೋತ್ರದ, ಆಪಸ್ತಂಭ ಸೂತ್ರದ ಯಜುಶ್ಯಾಖಾಧ್ಯಾಯಿಗಳ ವಂಶಸ್ಥರಾದ ತಿಮ್ಮರಾಜ ಒಡೆಯರ ಮೊಮ್ಮಗ ಕೆಂಪರಾಜ ಒಡೆಯರ ಮಗನಾದ ದಾಸರಾಜಯ್ಯನು, ವಿಜಯ ಸಂವತ್ಸರದ ಮಾಘಮಾಸದ ಭಾನುವಾರ ಪುಷ್ಯ ನಕ್ಷತ್ರದಲ್ಲಿ ಕರ್ಷಣಾದಿ ಪ್ರತಿಷ್ಠೆಯನ್ನು ಮಾಡಿಸಿ, ಲಕ್ಷ್ಮೀನರಸಿಂಹಸ್ವಾಮಿಯ ಸಕಲ ಸೇವೆಗಾಗಿ ಪುದುವಟ್ಟನ್ನು ಇಡುತ್ತಾನೆ. ಶ್ರೀಭಂಡಾರಕ್ಕೆ ಧಾರಾದತ್ತವಾಗಿ ಸಮರ್ಪಣೆ ಮಾಡಿದ್ದ ಪುದುವಟ್ಟಿನ ದ್ರವ್ಯದಿಂದ ದಾಸರಾಜಯ್ಯನು ಹಿಂದೆ ಸದಾಶಿವರಾಯರು ಸೋಮಸಾಗರದ ಅಗ್ರಹಾರದಲ್ಲಿ ನಾನಾ ಗೋತ್ರದ, ನಾನಾ ಸೂತ್ರದ ಬ್ರಾಹ್ಮಣರಿಗೆ ೧೮ ಗಣವೃತ್ತಿಯನ್ನು ಮಾಡಿ ಅದರಲ್ಲಿ ಕೆಲವರಿಗೆ ಒಂದು ವೃತ್ತಿಯಂತೆ, ಮತ್ತೆ ಕೆಲವರಿಗೆ ೧/೨ ವೃತ್ತಿಯಂತೆ, ಮತ್ತೆ ಕೆಲವರಿಗೆ ೧/೪ ವೃತ್ತಿಯಂತೆ ವಿಂಗಡಿಸಿ ದಾನವಾಗಿ ನೀಡಿರುವುದನ್ನು, ಸದಾಶಿವರಾಯರು ನೀಡಿದ ವೃತ್ತಿಗಳ ಬ್ರಾಹ್ಮಣರಿಂದ ಭೂಮಿಯನ್ನು ದಾಸರಾಜಯ್ಯನು ಕ್ರಯಕೊಟ್ಟು ಕೊಳ್ಳುತ್ತಾನೆ. ಆ ಭೂಮಿಯ ವೃತ್ತಿಯಿಂದ ಬರುವ ಎಲ್ಲಾ ಆದಾಯದಿಂದ ಲಕ್ಷ್ಮೀನರಸಿಂಹ ಸ್ವಾಮಿಯ ಸಕಲ ಬಗೆಯ ಸೇವೆಗಳೂ ಸಾಂಗವಾಗಿ ನಡೆಯುವಂತೆ ಗದ್ದೆ ಬೆದ್ದಲು, ಅಣೆ ಅಚ್ಚುಕಟ್ಟು, ಯಾತ, ಕಪಿಲೆ, ಕಾಡಾರಂಭ,

*ಆಶೀರ್ವಾದ, ನಂ. ೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ ೨ನೇ ಹಂತ, ಬೆಂಗಳೂರು.

ನೀರಾರಂಭ, ಸುಂಕ ಸುವರ್ಣದಾಯ ಸಕಲ ದವಸಾದಾಯ ಮೊದಲಾದ ಎಲ್ಲಾ ಆದಾಯವು ಸ್ವಾಮಿಯ ಶ್ರೀ ಭಂಡಾರಕ್ಕೆ ಸೇರುವಂತೆ ದಾಸರಾಜಯ್ಯನು ತಾತಾಚಾರ್ಯರ ರಹವಾಲಿನಲಿ (ನಿರ್ವಹಣೆಯಲ್ಲಿ) ನೋಡಿಕೊಳ್ಳುವಂತೆಯೂ ಲಕ್ಷ್ಮೀನರಸಿಂಹಸ್ವಾಮಿಯ ಅರ್ಚಕ ವೃತ್ತಿಯನ್ನು ತಾತಾಚಾರ್ಯರಿಗೆ ವಹಿಸಿ ಕೊಟ್ಟಿರುವುದನ್ನು, ತಾಮ್ರ ಶಾಸನದ ಮೂಲಕ ಬರೆಸಿ ದಾನ ಮಾಡಿದ ಉಲ್ಲೇಖವಿದೆ.

ದೇವರಾಯದುರ್ಗದ ಕ್ರಿ.ಶ. ೧೭೨೦ರ ಶಾಸನವು ಶಾರ್ವರಿ ಸಂವತ್ಸರ ವೈಶಾಖ ಶುದ್ಧ ೧೫ರಲ್ಲಿ ಶೂರಗಿರಿ ಲಕ್ಷ್ಮೀನರಸಿಂಹಸ್ವಾಮಿಯ ಪಡಿತರ ದೀಪಾರಾಧನೆ ಮುಂತಾದ ಸೇವೆಗಳನ್ನು ನಡೆಸಿಕೊಂಡು ಬರುವಂತೆ ದಾಸರಾಜಯ್ಯನು ಬರೆಸಿದ ಶಾಸನವಾಗಿದೆ. ಶೂರಗಿರಿ ಸೀಮೆಗೆ ಸೇರಿದ ಸೋಮಸಾಗರ ಅಗ್ರಹಾರದಲ್ಲಿ ಹತ್ತು ವೃತ್ತಿಗಳನ್ನು ಸಂಪಾದಿಸಿ ಮತ್ತು ಬಟಮಾನ್ಯದ ಭೂಮಿ ಬ ।೦ ಕೆ ಸಹ ಸೇರಿದಂತೆ ದಾಸರಾಜಯ್ಯನು ೪೪ ವರಹಗಳನ್ನು ಕೊಟ್ಟು ಕ್ರಯಲಬ್ಧವಾಗಿ ಕೊಳ್ಳುತ್ತಾನೆ. ಆ ವೃತ್ತಿಗಳಿಂದ ಬರುವ ಉತ್ಪತ್ತಿಯಿಂದ ಶ್ರೀಲಕ್ಷ್ಮೀನರಸಿಂಹಸ್ವಾಮಿಯ ಪಡಿತರ ದೀಪಾರಾಧನೆ ಮುಂತಾದ ಸೇವೆಗಳಿಗಾಗಿ ಉಪಯೋಗಿಸುವಂತೆ ಶಾಸನದಲ್ಲಿ ದಾಖಲಿಸಿದ್ದಾನೆ. ಒಂದೊಂದು ಪೂಜೆಗೂ ಇಂತಿಷ್ಟು ಎಂಬ ವಿವರವನ್ನು ಆಯಾ ಸಂದರ್ಭಕ್ಕೆ ಬಳಸುವ ವಸ್ತುಗಳನ್ನು ನೀಡಿರುವ ವಿವರ ಹೀಗಿದೆ.

| ಪೂಜೆ ವಿವರ | ಸಾಮಾನು | ಅಳತೆ / ಹಣ |
|---|---|---|
| ದಧ್ಯನ್ನ ನೈವೇದ್ಯಕ್ಕೆ | ಅಕ್ಕಿ | ದಿನವೊಂದಕ್ಕೆ ೪ ಸೇರು |
| | ಮೊಸರು | " ೨ ದುಡ್ಡು |
| | ಯಾಲಕ್ಕಿ | |
| | ಶುಂಠಿ, ಉಪ್ಪು | ಸಹ ೪ ಬಗೆಗೆ |
| | ನಂದಾದೀಪಕ್ಕೆ | " ೧ ಸೇರು |
| ಶಯನ ಮಂಟಪ ಸೇವೆಗೆ | | |
| ಸಜ್ಜಿಗೆ ಪರಮಾನ್ನಕ್ಕೆ | ಸಜ್ಜಿಗೆ | " ೧/೪ ಸೇರು |
| | ಸಕ್ಕರೆ | " ೧/೪ ಸೇರು |
| | ಹಾಲು | " ೧ ಸೇರು |
| | ಅಡಿಕೆ | " ಹತ್ತು |
| | ವೀಳ್ಯದೆಲೆ | " ಹತ್ತು |
| | ಲವಂಗ, ಯಾಲಕ್ಕಿ | " ೪ |
| | ಕರ್ಪೂರ ಸಹ | " ೧/೪ ತುಂಡು |
| | ನಂದಾದೀಪಕ್ಕೆ | |
| | ಬತ್ತಿ ಒಂದು | |
| | ವರ್ಷಕ್ಕೆ | ೧ ಗು |
| | ಕರ್ಪೂರ ಸಹ | |
| | ನಂದಾದೀಪಕ್ಕೆ ಬತ್ತಿ ೧ ವರುಷಕ್ಕೆ | |

ಮೇಲಿನ ಶಯನ ಮಂಟಪ ಸೇವೆಯ ಸಾಮಗ್ರಿಗಳಿಗೆ ಒಟ್ಟು ೧೦ ಹಣ ಇರಿಸಿದೆ.

**ಶುಕ್ರವಾರದ ಕಟ್ಲೆ ಅಭಿಷೇಕಕ್ಕೆ :** ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ತೆಂಗಿನಕಾಯಿ, ಬಾಳೆಹಣ್ಣು ಅಡಿಕೆ. ವೀಳ್ಯದೆಲೆ ಸೇರಿ ೯ ಬಗೆಗೆ ತಗಲುವ ವೆಚ್ಚ ಒಂದು ಶುಕ್ರವಾರಕ್ಕೆ ಕ್ರಯ ೧/೨ ಅಡ್ಡದ ಪ್ರಕಾರ ೧ ತಿಂಗಳಿಗೆ ಬರುವ ನಾಲ್ಕು ಶುಕ್ರವಾರಗಳಿಗೆ ತಗಲುವ ವೆಚ್ಚ ೨ ಅಡ್ಡದಂತೆ ೧೨ ತಿಂಗಳಲ್ಲಿ ಬರುವ ೪೮ ಶುಕ್ರವಾರಗಳಿಗೆ ೨೪ ಹಣ (ಹಣದ ಅರ್ಧಬೆಲೆಯ ಒಂದು ನಾಣ್ಯಕ್ಕೆ ಅಡ್ಡ ಎಂದು ಕರೆಯುವುದಾಗಿ ನಿಘಂಟುವಿನಲ್ಲಿದೆ)

ಶುಕ್ರವಾರ ಕಟ್ಲೆ ನೈವೇದ್ಯಕ್ಕೆ ಸಜ್ಜಿಗೆ ಮತ್ತು ಪರಮಾನಕ್ಕೆ ಒಂದು ವಾರಕ್ಕೆ–

ಒಂದು ಶುಕ್ರವಾರಕ್ಕೆ ಹಾಲು ಸೇರಿನಂತೆ, ೪೮ ಶುಕ್ರವಾರ (೧೨ ತಿಂಗಳಿಗೆ) ೪೮ ಸೇರು

ಸಕ್ಕರೆ ೧/೪ ಸೇರು " " ೧೨ ಸೇರು

ಸಜ್ಜಿಗೆ ೧/೨ ಸೇರು " " ೨೪ ಸೇರು

ಬಾಳೇಹಣ್ಣು ೨ " " ೯೬ ಹಣ್ಣು

ದೀಪಾರಾಧನೆಗೆ ಒಂದು ವಾರಕ್ಕೆ ಎಣ್ಣೆ ೨ ಸೇರು ೯೬ ಸೇರು

ಕಾರ್ತಿಕ ಶುದ್ಧ ೧೫ ರಂದು ಬ್ರಾಹ್ಮಣ ಸಮಾರಾಧನೆ, ದೇವತಾ ಉತ್ಸವ, ಮಂಟಪ, ಚರಪು, ದೀಪಾರಾಧನೆ ಮತ್ತು ಮೆರವಣಿಗೆಯಲ್ಲಿ ಬಳಸುವ ಬಾಣಬಿರುಸುಗಳನ್ನು ಕೊಳ್ಳುವುದೂ ಸೇರಿದಂತೆ ಒಟ್ಟು ೧೬ ೧/೨ ವರಹವನ್ನು ಬಳಸುವುದು.

ನೃಸಿಂಹಸ್ವಾಮಿಯ ನಿತ್ಯಗಟ್ಲೆ ಮಾಡುವ ದಧ್ಯನ್ನ ನೈವೇದ್ಯ, ನಂದಾ ದೀಪಾರಾಧನೆ, ಶಯನ ಮಂಟಪದ ಸೇವೆ ಶುಕ್ರವಾರದ ಕಟ್ಲೆ ಅಭಿಷೇಕ, ನೈವೇದ್ಯ, ಕಾರ್ತಿಕ ಮಾಸದ ಸಮಾರಾಧನೆ ಉತ್ಸವ ಚರಪು ಸೇವೆಯು ಸೇರಿದಂತೆ ೫ ಬಗೆಗೆ ಮತ್ತು ತಿಂಗಳುಗಟ್ಲೆ ದನಗಳನ್ನು ಕಟ್ಟಿ ಮೇಯಿಸಲು ಬೇಕಾಗುವ ಮೇವಿಗೆ ೧೨ ತಿಂಗಳ ಸಾಮಗ್ರಿಗಳಿಗೆ ತಗಲುವ ವೆಚ್ಚವನ್ನು ೪೪ ವರಹ ದ್ರವ್ಯಗಳಲ್ಲಿ ಶೂರಗಿರಿ ಲಕ್ಷ್ಮೀನರಸಿಂಹಸ್ವಾಮಿಯ ಸೇವೆ ನಡೆಯಲು ಆಚಂದ್ರಾರ್ಕ ಶಾಶ್ವತವಾಗಿ ನಡೆಯತಕ್ಕದ್ದೆಂದು ನೃಸಿಂಹಸ್ವಾಮಿಯ ಶ್ರೀಭಂಡಾರಕ್ಕೆ ಸೇರಬೇಕೆಂದು ದಾಸರಾಜಯ್ಯನು ಶಾಸನ ಬರೆಸಿದ್ದಾನೆ.

ಮೇಲಿನ ಸೇವೆಗಳಿಗಾಗಿ ೪೪ ವರಹ ಕೊಟ್ಟಿರುವುದನ್ನು ತಿಳಿಸುತ್ತದೆ. ಇದಲ್ಲದೆ ಶೂರಗಿರಿ ಸ್ವಾಮಿಗೆ ಸಲ್ಲುವ ಲಕ್ಕೂರ ವಳಿತವಾದ ತೀರ್ಥಕಟ್ಟೆ ಕೆಳಗೆ ಇದೇ ದಾಸರಾಜಯ್ಯನು ಹೊಸದಾಗಿ ಮಾಡಿಸಿದ ತೋಟದಲ್ಲಿ ೪೦೦೦ ಅಡಿಕೆ ಮರ. ೧೫೦ ತೆಂಗಿನ ಮರಗಳಿರುವುದನ್ನು ಇದೇ ಶಾಸನ ತಿಳಿಸುತ್ತದೆ.

ಈ ತೋಟದಿಂದ ಬರುವ ಹುಟ್ಟುವಳಿಯಲ್ಲಿ ಅರವತ್ತು ವರಹದಿಂದ ಲಕ್ಷ್ಮೀನರಸಿಂಹಸ್ವಾಮಿಗೆ ನಡೆಸಬೇಕಾದ ಸೇವಾ ವಿವರಗಳು ಹೀಗಿವೆ.

೧. ಚೈತ್ರ ಶುದ್ಧ ಒಂದರಿಂದ ಬಹುಳ ೩೦ರವರೆಗೆ ಅಂದರೆ ಒಂದು ತಿಂಗಳಲ್ಲಿ ನಾಲ್ಕು ಶುಕ್ರವಾರಗಳಂತೆ ಒಂದು ವರ್ಷದಲ್ಲಿ ಬರುವ ೪೮ ಶುಕ್ರವಾರಗಳು ಮಾತ್ರ ನಡೆಯುವ ಸೇವೆಗೆ ಬೇಕಾದ ಸಾಮಾನುಗಳು : ನೈವೇದ್ಯಕ್ಕೆ ಚರಪಿನ ಕಜ್ಜಾಯಕ್ಕೆ ಮತ್ತು ಅತಿರಸಕ್ಕೆ ಸೇರಿ ಬೇಕಾಗುವ ಅಕ್ಕಿ ೮ ೧/೪ ಬಳ್ಳ ೫೦ ಮತ್ತು ಯೆಣ್ಣೆ ೩ ಶೇರು. ಈ ಸಾಮಗ್ರಿಗಳಿಂದ ಆಗುವ ಕಜ್ಜಾಯ ೪೦ ರಂತೆ ೧೨ ತಿಂಗಳಲ್ಲಿ ಬರುವ ೪೮ ಶುಕ್ರವಾರಗಳಿಗೆ ೧೯೨೦ ಕಜ್ಜಾಯ, ಪೂಜೆಗೆ ಬಾಳೆಹಣ್ಣು ತೆಂಗಿನಕಾಯಿ, ಅಡಿಕೆ ವೀಳ್ಯದೆಲೆ ವಾರಕ್ಕೆ ೧/೨ ಕಟ್ಟಿನಂತೆ ೪೮ ಶುಕ್ರವಾರಗಳಿಗೆ ೨೪ ಕಟ್ಟು. ಕಡ್ಲೆ ವಾರ ಒಂದಕ್ಕೆ ೨ ಪಡಿಯಂತೆ ೪೮ ಶುಕ್ರವಾರಕ್ಕೆ ೯೬ ಪಡಿ.

೨. ಕಾರ್ತಿಕ ಶುದ್ಧದಿಂದ ವೈಶಾಖ ಬಹುಳದವರೆಗೆ ಏಳು ತಿಂಗಳು ಅಂದರೆ ೨೮ ಶುಕ್ರವಾರಗಳಲ್ಲಿ ನಡೆಯುವ ಗರುಡಸೇವೆ ಉತ್ಸವಕ್ಕೆ ವಾರ ಒಂದಕ್ಕೆ ಯೆಣ್ಣೆ ಒಂದು ಮಣ. ಈ ಉತ್ಸವಕ್ಕೆ ವಾಹನ ಕಟ್ಟಿದ ಜನರ ಕೂಲಿ ೧/೨ ದಂತೆ ನಿತ್ಯಗಟ್ಲೆ ಸಹಾ.

ಈ ಎಲ್ಲಾ ಸೇವೆಯ ಖರ್ಚನ್ನು ದಾಸರಾಜಯ್ಯನು ತಮ್ಮ ತೋಟದಿಂದ ಬರುವ ಹುಟ್ಟುವಳಿಯಲ್ಲಿ ಅರವತ್ತು ವರಹದಿಂದ ಲಕ್ಷ್ಮೀನರಸಿಂಹಸ್ವಾಮಿಯ ಸೇವೆಯನ್ನು ನಡೆಸುವಂತೆ ಶಾಸನ ಉಲ್ಲೇಖಿಸುತ್ತದೆ.

ಇದೇ ಕಾಲಕ್ಕೆ ಸೇರಿದ ಮತ್ತೊಂದು ಶಾಸನದಲ್ಲಿ ಶಾರ್ವರಿನಾಮ ಸಂವತ್ಸರದ ಕಾರ್ತಿಕ ಶುದ್ಧ ೧೫ ಗುರುವಾರದಂದು ನರಪತಿಮೈಸೂರ ಕೃಷ್ಣರಾಜ ವಡೆಯರು ಉಭಯ ಕಾವೇರಿ ಮಧ್ಯ ಪಶ್ಚಿಮರಂಗನಾಥಸ್ವಾಮಿಯ ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಿರುವಾಗ ಶೂರಗಿರಿ ದುರ್ಗದ ಲಕ್ಷ್ಮೀನರಸಿಂಹಸ್ವಾಮಿಯ ಪಡಿತರ, ದೀಪಾರಾಧನೆ ಮುಂತಾದ ಸೇವೆಗೆ ಇದೇ ದಾಸರಾಜಯ್ಯನು ಅರಸನಲ್ಲಿ ವಿಜ್ಞಾಪನೆ ಮಾಡಿಕೊಂಡು ಶೂರಗಿರಿ ಸೀಮೆಗೆ ಸಲ್ಲುವ ಹೆಗ್ಗುಂದದ ಹೋಬಳಿಯ ಗೊಟ್ಟಿಕೆರೆ ಗ್ರಾಮಕ್ಕೆ ಪ್ರತಿನಾಮ ಧೇಯವಾಗಿ 'ನರಸಿಂಹಪುರ' ಎಂದು ಹೆಸರು ನೀಡಿ ಮತ್ತು ಅದಕ್ಕೆ ಸೇರುವ ಉಪಗ್ರಾಮಗಳನ್ನು ಸಕಲ ಸಾಮಾಜಿಕ ಮತ್ತು ಸಕಲ ವಿದ್ವಾಂಸರ ಸಮಕ್ಷಮ ಕೃಷ್ಣರಾಜ ವಡೆಯರು ಶೂರಗಿರಿ ನರಸಿಂಹಸ್ವಾಮಿಯ ಸೇವೆಗೆ ಆ ಚಂದ್ರಾರ್ಕವಾಗಿ ನಡೆಯತಕ್ಕದೆಂದು ಉಲ್ಲೇಖಿಸಿದೆ.

ಮೇಲಿನ ನಾಲ್ಕು ತಾಮ್ರಶಾಸನಗಳು ಬೇರೆ ಸ್ಥಳದಲ್ಲಿ ವಾಸವಿದ್ದ ತಾಯೂರ ಬಿಳುಗಲೆ ದಾಸರಾಜಯ್ಯನು ತನ್ನ ಆಡಳಿತದ ಅವಧಿಯಲ್ಲಿ ದೇವರಾಯನ ದುರ್ಗದ ಕರಿಗಿರಿ ನರಸಿಂಹಸ್ವಾಮಿ ದೇವರ ಸಾನಿಧ್ಯದಲ್ಲಿ ಕಲ್ಯಾಣ ಲಕ್ಷ್ಮೀದೇವಿ ಅಮ್ಮನವರ ಪ್ರತಿಷ್ಠೆ ಮಾಡಿಸಿ ವಿವಿಧ ಸೇವೆಗಳಿಗಾಗಿ ದಾನ ನೀಡಿದ್ದಾನೆ. ಅಲ್ಲದೆ ಲಕ್ಷ್ಮೀನರಸಿಂಹಸ್ವಾಮಿಗೆ ಅನೇಕ ವಿಧದ ಸೇವಾ ಕಾರ್ಯಗಳಿಗೆ ತಗಲುವ ವೆಚ್ಚವನ್ನು ಲೆಕ್ಕಹಾಕಿ ಹಣವನ್ನು ಇಡುಗಂಟಾಗಿ ಇಟ್ಟು ಆ ಹಣಕ್ಕೆ ಅರ್ಚಕನ ಉಸ್ತುವಾರಿಯಲ್ಲಿ ನಡೆಯುವಂತೆ ನೇಮಕ ಮಾಡಿ ದಾನ ನೀಡಿರುವುದನ್ನು ಮೇಲಿನ ನಾಲ್ಕು ಶಾಸನಗಳು ತಿಳಿಸುತ್ತವೆ. ಕ್ರಿ.ಶ. ೧೬ನೆಯ ಶತಮಾನದಲ್ಲಿ ಪೂಜಾ ಸಾಮಾನಿನ ಲೆಕ್ಕದ ವಿವರವನ್ನು ಸ್ಪಷ್ಟವಾಗಿ ಊಹಿಸಲು ಮಾಹಿತಿ ಸಾಲದು. ಆದರೆ ಸೇವೆಗಳಿಗಾಗಿ ದಾನ ಮಾಡಿದ ವಸ್ತುಗಳ ವಿವರ ಅದಕ್ಕೆ ತಗಲುವ ವೆಚ್ಚದ ಬಗ್ಗೆ ಸ್ಥೂಲ ವಿವರವನ್ನು ನೀಡಿದೆ.

## ಆಧಾರಸೂಚಿ


೧. E.C. Vol. XII, ತುಮಕೂರು.

ಡಾ. ಬಿ. ಜಯಮ್ಮ*

# ಚಳ್ಳಕೆರೆ ತಾಲ್ಲೂಕಿನ ಸ್ಮಾರಕ ಶಿಲ್ಪಗಳು

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿ ಕೆಲವು ವಿಶಿಷ್ಟ ಹಾಗೂ ಮಹತ್ವವನ್ನುಳ್ಳ ಸ್ಮಾರಕ ಶಿಲ್ಪಗಳನ್ನು ಕಾಣಲಾಗಿದೆ. ಈ ಪ್ರದೇಶದಲ್ಲಿ ಸುಮಾರು ೨೦ ಶಾಸನ ಉಲ್ಲೇಖಿತ ಸ್ಮಾರಕ ಶಿಲ್ಪಗಳಿವೆ. ಶಾಸನುಲ್ಲೇಖಿತವಲ್ಲದ ಸ್ಮಾರಕ ಶಿಲ್ಪಗಳ ಸಂಖ್ಯೆಯೂ ಸಹ ಅತ್ಯಧಿಕವಾಗಿವೆ. ಈ ಸ್ಮಾರಕ ಶಿಲ್ಪಗಳಲ್ಲಿ ವೀರಗಲ್ಲು, ಮಹಾಸತಿಗಲ್ಲು ವೀರಸತಿಗಳನ್ನು ಕಾಣಲಾಗಿದೆ. ಇವುಗಳು ನೊಳಂಬಪಲ್ಲವ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ವಿಜಯನಗರ ಹಾಗೂ ಚಿತ್ರದುರ್ಗ ಪಾಳೆಯಗಾರರ ಕಾಲಕ್ಕೆ ಸೇರಿದವುಗಳಾಗಿವೆ. ಅಂದರೆ ಸುಮಾರು ಕ್ರಿ.ಶ. ೯ನೇ ಶತಮಾನದಿಂದ ಸುಮಾರು ಕ್ರಿ.ಶ. ೧೬–೧೭ನೇ ಶತಮಾನದವರೆಗಿನ ವೀರಗಲ್ಲುಗಳನ್ನು ಇಲ್ಲಿ ಕಾಣಲಾಗಿದೆ.

ಇಲ್ಲಿಯ ಆರಂಭ ಕಾಲದ ವೀರಗಲ್ಲುಗಳೆಂದರೆ ನೊಳಂಬಪಲ್ಲವ ಕಾಲದವು ಅವು ಚಿಕ್ಕಮಧುರೆಯ ಸಣ್ಣಜ್ಜಪ್ಪನ ಹೊಲದಲ್ಲಿರುವ ವೀರಗಲ್ಲುಗಳು. ಇವು ತುಂಬಾ ಅಪರೂಪದ್ದಾಗಿ ಕಾಣಿಸಿ ಮಹತ್ವದ್ದೆನಿಸಿವೆ. ಇಲ್ಲಿಯ ಒಂದು ಶಿಲ್ಪದ ವೀರ ತನ್ನ ಬಲಗೈಯಲ್ಲಿ ಕತ್ತಿಯನ್ನಿಡಿದು ತಲೆಗೆ ಸಮಾಂತರವಾಗಿ ಹಿಡಿದಿರುವನು ತನ್ನ ಎಡಗೈಯನ್ನು ತೊಡೆಯ ಮೇಲಿಟ್ಟಿರುವನು. ತಲೆಯ ಕೂದಲನ್ನು ಕಿರೀಟದಂತೆ ನೆತ್ತಿಯ ಮೆಲೆ ಕಟ್ಟಿರುವನು. ಕಿವಿಗಳಲ್ಲಿ ಕುಂಡಲ, ಕೈಗಳಲ್ಲಿ ಕಡಗ, ಕೊರಳಲ್ಲಿ ಹಾರ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿರುವನು. ಶಿಲ್ಪದ ಬಲಭಾಗದ ಮೂಲೆಯಲ್ಲಿ ಕೆಳಗಿನಿಂದ ಮೇಲಕ್ಕೆ ಒಂದು ಸಾಲಿನ ಶಾಸನವಿದೆ. ಈ ವೀರನನ್ನು ಗಮನಿಸಿದರೆ ಯಾರನ್ನೋ ಸಂಹಾರ ಮಾಡಲು ಸಿದ್ಧನಾದಂತಿದೆ.

ಇಲ್ಲಿಯೆ ಹತ್ತಿರದಲ್ಲಿ ಮತ್ತೊಂದು ವೀರಗಲ್ಲು ಇದೆ. ಇದರ ರಚನಾಶೈಲಿಯೂ ಸಹ ಮೇಲಿನ ವೀರಗಲ್ಲಿನಂತೆಯೇ ಇದೆ. ಶಿಲ್ಪದಲ್ಲಿ ವೀರ ಬಲಗೈಲಿ ಕತ್ತಿಯನ್ನಿಡಿದು ಮೇಲಕ್ಕೆತ್ತಿರುವನು. ಎಡಗೈಲಿ ಗುರಾಣಿಯಂತಹ ಆಯುಧ ಹಿಡಿದಿರುವನು. ವೀರ ನಿಂತಿರುವ ಭಂಗಿ ಹಾಗೂ ಆಯುಧಗಳನ್ನು ಹಿಡಿದಿರುವ ರೀತಿ ಗಮನಿಸಿದರೆ ಯಾರದೋ ರುಂಡವನ್ನು ಚಂಡಾಡುವಂತಿದೆ. ಇದಕ್ಕೆ ಪೂರಕವಾಗಿ ಈತನ ಕಾಲುಗಳ ಅಡಿಯಲ್ಲಿ ವ್ಯಕ್ತಿಯೊಬ್ಬ ಬಿದ್ದಿರುವನು ಅವನ ಕೈ ಕಾಲುಗಳು ಕಡಿದು ಬಿದ್ದಿರುವವು ಇಲ್ಲಿ ವೀರ ತನ್ನ ವೈರಿಯನ್ನು ಚಂಡಾಡಿ ಆತನ ಕೈಕಾಲುಗಳನ್ನು ಕೊಚ್ಚಿ ಹಾಕಿರುವುದು ಕಾಣುತ್ತದೆ. ಶಿಲ್ಪದ ಸುತ್ತಲೂ ಶಾಸನವಿದೆ. ಈ ಎರಡು ವೀರಗಲ್ಲುಗಳು ಈ ಪ್ರದೇಶದ ಅತಿ ಪ್ರಾಚೀನ ವೀರಗಲ್ಲು ಗಳಾಗಿವೆ. ಕಾಲಮಾನ ಸುಮಾರು ಕ್ರಿ.ಶ. ೯ನೇ ಶತಮಾನ.

ಇದೇ ಗ್ರಾಮದ ಮತ್ತೊಂದು ವೀರಗಲ್ಲು ಮೂರು ಹಂತಗಳಲ್ಲಿದೆ ಕೆಳಗಿನ ದೃಶ್ಯದಲ್ಲಿ ವೀರನನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಕುದುರೆ ಮೇಲೆ ಕುಳಿತ ವೈರಿಯನ್ನು ವೀರ ಕೆಳಗೆ ಎಳೆದುಕೊಂಡು ಅವನನ್ನು ಕೊಲ್ಲುತ್ತಿರುವಂತೆ ಚಿತ್ರಿಸಲಾಗಿದೆ. ನೆಲದ ಮೇಲಿರುವ ವೀರ ಕುದುರೆ ಮೇಲಿದ್ದ ವೈರಿಯನ್ನು ಬಗ್ಗುಬಡಿದಂತೆ ತೋರಿಸಲಾಗಿದೆ. ಎರಡನೇ ಹಂತದಲ್ಲಿ ಅಪ್ಸರೆಯರಿಬ್ಬರು ವೀರನನ್ನು ತಮ್ಮ ಭುಜದ ಮೇಲೆ ಹಾಕಿಕೊಂಡು ಹಾರುತ್ತಿರುವ ಭಂಗಿಯಲ್ಲಿರುವರು. ಮೂರನೇ ದೃಶ್ಯದಲ್ಲಿ ವೀರ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವನು. ಬದಿಗಳಲ್ಲಿ ಚಾಮರಧಾರಿಯರಿರುವರು (ಕಾಲ ಸುಮಾರು ಕ್ರಿ.ಶ. ೧೦ನೇ ಶತಮಾನ). ಇದೇ ಗ್ರಾಮದ ಕುಲ್ಲಜ್ಜ ಮಲ್ಲಪ್ಪನವರ ಹೊಲದಲ್ಲಿರುವ ಶಿಲ್ಪ ಸ್ವಲ್ಪ ಭಿನ್ನವಾಗಿ ಗೋಚರಿಸುವುದು. ಶಿಲ್ಪದಲ್ಲಿ ಒಂದೇ ದೃಶ್ಯವಿದೆ. ವೀರ ತನ್ನ ಬಲ ಕಂಕುಳಲ್ಲಿ ಚಾಮರ ಹಿಡಿದು ನಿಂತಿರುವನು. ಬಲಗೈಲಿ ಏನನ್ನೋ ಹಿಡಿದು ಕೆಳಗೆ ಇಳಿಬಿಟ್ಟಿರುವನು. ವಸ್ತ್ರಾಭರಣ ಭೂಷಿತ, ಬದಿಗಳಲ್ಲಿ ಈತನ ಸತಿಯರೀರ್ವರು ನಿಂತಿರುವರು. ಇವರು ತಮ್ಮ ಎರಡೂ ಕೈಗಳಲ್ಲಿ ನಿಂಬೆಹಣ್ಣು, ದರ್ಪಣ ಹಿಡಿದು ಕೈಗಳನ್ನು ಮೇಲಕ್ಕೆತ್ತಿ ನಿಂತಿರುವರು. ಇವರೂ ಸಹ ವಸ್ತ್ರಾಭರಣ ಭೂಷಿತರು ಇಲ್ಲಿ ವೀರ ಯಾವುದೋ ಕಾರಣಕ್ಕೆ ಮಡಿದಿದ್ದರಿಂದ ಆತನ ಸತಿಯರಿಬ್ಬರೂ ಸತ್ತು ಹೋಗಿರಬಹುದು. ಹಾಗಾಗಿ ಶಿಲ್ಪದಲ್ಲಿ ಸತಿ–ಪತಿಯರನ್ನು ಒಟ್ಟಾಗಿ ತೋರಿಸಲಾಗಿದೆ ಈ ಕಾಲದಲ್ಲಿ ವೀರ–ಸತಿಗಲ್ಲುಗಳ ಸಂಖ್ಯೆ ವಿರಳವೇ ಸರಿ ಶಿಲ್ಪದ

* ಸಹಾಯಕ ಪ್ರಾಧ್ಯಾಪಕರು, ಸ್ನಾತಕೋತ್ತರ ಇತಿಹಾಸ ವಿಭಾಗ, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ.



ಮೇಲ್ಭಾಗದಲ್ಲಿ ಸೂರ್ಯ-ಚಂದ್ರರಿರುವರು (ಕಾಲ ಸುಮಾರು ಕ್ರಿ.ಶ. ೧೦ನೇ ಶತಮಾನ)

ಇದೇ ಗ್ರಾಮದ ಮತ್ತೊಂದು ವೀರಗಲ್ಲು ತುಸು ಭಿನ್ನವಾಗಿದೆ. ಇದು ಮೂರು ಪಟ್ಟಿಕೆಗಳಲ್ಲಿದೆ ಕೆಳಗಿನ ದೃಶ್ಯದಲ್ಲಿ ವೀರ ಪೀಠದ ಮೇಲೆ ಕೈಮುಗಿದು ಕುಳಿತಿರುವನು. ಈತನ ಬಲ ಬದಿಯಲ್ಲಿ ಉದ್ದನೆಯ ಕತ್ತಿಯೊಂದು ಇದ್ದಂತಿದೆ. ಈ ವೀರನ ಎಡ ಬದಿಯಲ್ಲಿ ವ್ಯಕ್ತಿಯೊಬ್ಬ ವೀರನ ಕಡೆ ಮುಖ ಮಾಡಿ ನಿಂತಿರುವ ದೃಶ್ಯ ಗಮನಿಸಿದರೆ ಬಹುಶಃ ಯಾವುದೋ ವ್ಯಕ್ತಿಯನ್ನು ಇಲ್ಲಿ ಬಲಿ ನೀಡುತ್ತಿರಬಹುದೆಂದೆನಿಸುವುದು. ಎರಡನೇ ಹಂತದಲ್ಲಿ ಬಲಿಯಾದ ವ್ಯಕ್ತಿಯನ್ನು ಅಪ್ಸರೆಯರು ಹಾರುತ್ತಿರುವ ಭಂಗಿಯಲ್ಲಿ ದೇವಲೋಕಕ್ಕೆ ಕೊಂಡೊಯ್ಯುತ್ತಿರುವರು. ಮೂರನೇ ಹಂತದಲ್ಲಿ ವೀರ ಪೀಠದ ಮೇಲೆ ಕುಳಿತಿರುವನು. ಬದಿಗಳಲ್ಲಿ ಚಾಮರಧಾರಿಯರಿರುವರು. ಒಟ್ಟಾರೆ ಶಿಲ್ಪದಲ್ಲಿ ವ್ಯಕ್ತಿ ಬಲಿಯಾದ ಬಗ್ಗೆ ಹಾಗೂ ಆತ ಸ್ವರ್ಗ ಸೇರಿದ ಬಗ್ಗೆ ಮಾಹಿತಿ ದೊರೆಯುವುದು (ಕಾಲ, ಕ್ರಿ.ಶ. ೧೦-೧೧ನೇ ಶತಮಾನ).

ದೊಡ್ಡ ಉಳ್ಳಾರ್ತಿಯಲ್ಲಿ ನಾಲ್ಕು ವೀರಗಲ್ಲುಗಳನ್ನು ಕಾಣುತ್ತೇವೆ. ಇವುಗಳಲ್ಲಿ ಎರಡು ಉತ್ತಮ ರಚನೆ ಹೊಂದಿದ್ದರೆ ಮತ್ತೆರಡು ಸಾಮಾನ್ಯ ರಚನೆಯಲ್ಲಿವೆ. ಆದರೂ ಇವು ಅತ್ಯುತ್ತಮ ಮಾಹಿತಿ ಹೊಂದಿವೆ. ಮೊದಲೆರಡು ವೀರಗಲ್ಲು ಕಪ್ಪು ಶಿಲೆಯಲ್ಲಿ ಮೂರು ಹಂತಗಳಲ್ಲಿವೆ. ಒಂದನೇ ವೀರಗಲ್ಲಿನ ಕೆಳಹಂತದಲ್ಲಿ ವೀರ ಹಾಗೂ ವೈರಿ ಪಡೆಯವರು ಈಟಿ ಭರ್ಚಿಗಳನ್ನು ಹಿಡಿದು ಕಾದಾಡುತ್ತಿರುವರು. ವೈರಿ ಪಡೆಯಲ್ಲಿ ಕೇವಲ ಒಬ್ಬ ವ್ಯಕ್ತಿ ಮಾತ್ರ ಗೋಚರಿಸುವನು. ವೀರನ ಸಹಚರರು ನಾಲ್ಕೈದು ಜನರಿರುವರು ಎರಡನೇ ಹಂತದಲ್ಲಿ ಮಡಿದ ಮೂರು ಜನ ವೀರರನ್ನು ಅಪ್ಸರೆಯರು ತಮ್ಮ ಭುಜದ ಮೇಲೆ ಹಸ್ತಗಳನ್ನು ಹಾಕಿಕೊಂಡು ದೇವಲೋಕಕ್ಕೆ ಹಾರುತ್ತಿರುವ ಭಂಗಿಯಲ್ಲಿ ಕರೆದೊಯ್ಯುತ್ತಿರುವರು. ಮೂರನೇ ಹಂತದಲ್ಲಿ ಪ್ರಮುಖ ವೀರ ಮಧ್ಯದಲ್ಲಿ ದೊಡ್ಡದಾದ





ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿರುವನು. ಈತನ ತಲೆಗೆ ಸಮಾಂತರವಾಗಿ ಮತ್ತಿಬ್ಬರು ವೀರರು ಸಹ ಸುಖಾಸನದಲ್ಲಿ ಕುಳಿತಿರುವರು. ಇವರುಗಳ ಬದಿಯಲ್ಲಿ ತ್ರಿಭಂಗಿಯಲ್ಲಿ ಚಾಮರಧಾರಿಣಿಯರಿರುವರು. ಶಿಲ್ಪದ ಬಲ ಮೂಲೆಯಲ್ಲಿ ಕಿರಿದಾಗಿ ಕೈಮುಗಿದು ಕುಳಿತ ಒಬ್ಬ ಸ್ತ್ರೀಯನ್ನು ತೋರಿಸಲಾಗಿದೆ. ಪ್ರಾಯಶಃ ಅವಳು ವೀರನ ಸತಿ ಇರಬೇಕು ಶಿಲ್ಪದ ಎಡಮೂಲೆಯಲ್ಲಿ ಕೈ ಮುಗಿದು ನಮಸ್ಕರಿಸುತ್ತಿರುವ ಭಂಗಿಯಲ್ಲಿರುವ ಭಕ್ತನ ಕಿರು ಚಿತ್ರವಿದೆ (ಕಾಲ ಸುಮಾರು ಕ್ರಿ.ಶ. ೧೦ನೇ ಶತಮಾನ).

ಎರಡನೇ ವೀರಗಲ್ಲಿನ ಕೆಳಹಂತದಲ್ಲಿ ವೀರ ಹಾಗೂ ವೈರಿ ಪಡೆಯವರು ಬಿಲ್ಲು ಬಾಣ ಹಿಡಿದು ಹೋರಾಟ ಮಾಡುತ್ತಿರುವರು. ವೀರ, ವೈರಿ ಇಬ್ಬರ ಕಾಲ್ಗಳ ಕೆಳಗೂ ಸಹಚರರು ಸತ್ತು ಬಿದ್ದಿರುವರು. ವೀರನ ಹಿಂಭಾಗದಲ್ಲಿ ಬೆದರಿದ ಗೋವುಗಳನ್ನು ತೋರಿಸಲಾಗಿದೆ ಹಾಗಾಗಿ ಇದೊಂದು ಗೋಗ್ರಹಣ ಶಿಲ್ಪ ಎಂದು ಸ್ಪಷ್ಟವಾಗಿ ಹೇಳಬಹುದು. ಎರಡನೇ ಹಂತದಲ್ಲಿ ಮಡಿದ ವೀರರನ್ನು ಅಪ್ಸರೆಯರು ತಮ್ಮ ಭುಜದ ಮೇಲೆ ಹಸ್ತಗಳನ್ನು ಹಾಕಿಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿರುವರು. ಮೂರನೇ ಹಂತದಲ್ಲಿ ಮಡಿದ ವೀರ ಪೀಠದ ಮೇಲೆ ಕುಳಿತಿರುವನು. ಬದಿಗಳಲ್ಲಿ ತ್ರಿಭಂಗಿಯಲ್ಲಿ ಚಾಮರಧಾರಿಣಿಯರಿರುವರು. ವೀರನ ಬದಿಯಲ್ಲಿ ಕುಬ್ಜ ವ್ಯಕ್ತಿಯನ್ನು ತೋರಿಸಲಾಗಿದೆ.

ಇಲ್ಲಿಯ ಉಳಿದೆರಡು ವೀರಗಲ್ಲುಗಳು ಕೆಂಪು ಶಿಲೆಯಲ್ಲಿ ರಚನೆಯಾಗಿವೆ. ಅಲ್ಲದೆ ಅವೆರಡೂ ಶಿಲ್ಪಗಳು ಮೂರು ಹಂತಗಳಲ್ಲಿದ್ದು ಒಂದೇ ರೀತಿಯ ದೃಶ್ಯಗಳನ್ನು ಹೊಂದಿವೆ. ಒಂದನೇ ವೀರಗಲ್ಲಿನ ಕೆಳಗಿನ ದೃಶ್ಯದಲ್ಲಿ ಕುದುರೆ ಮೇಲೆ ಕುಳಿತ ವೀರ ಗಜದ ಮೇಲೆ ಕುಳಿತ ವೈರಿಗಳೊಡನೆ ಕಾದಾಡುತ್ತಿರುವನು, ವೀರನಿಗೆ ಸೇವಕನೊಬ್ಬ ಉದ್ದನೆಯ ಛತ್ರಿ ಹಿಡಿದಿರುವನು. ಇಲ್ಲಿ ವೈರಿ ಪಡೆಯಲ್ಲಿ ಎರಡು ಗಜಗಳು ಕಾಣುತ್ತಿದ್ದು ಒಂದೊಂದು ಗಜದ ಮೇಲೆ ನಾಲ್ಕೈದು ಜನ ಕುಳಿತಿರುವರು. ಅಷ್ಟೊಂದು ದೊಡ್ಡ ಗಾತ್ರದ ಆನೆಗಳನ್ನು ಇಲ್ಲಿ ತೋರಿಸಲಾಗಿದೆ. ವೀರನ ಕುದುರೆ ಆನೆಯ ಮೇಲೆ ಎರಗಿರುವುದು. ಕುದುರೆಯ ಮುಖಕ್ಕೆಲ್ಲಾ ಬಾಣಗಳು ನಾಟಿಕೊಂಡಿವೆ. ಗಜ ಕುದುರೆಯ ಕೆಳಗೆ ಅನೇಕ ವೈರಿಗಳು ಸತ್ತು ಬಿದ್ದಿರುವರು. ಎರಡನೇ ದೃಶ್ಯದಲ್ಲಿ ಮಡಿದ ವೀರನನ್ನು ನಾಲ್ವರು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವರು. ಮೂರನೇ ದೃಶ್ಯದಲ್ಲಿ ವೀರ ಪೀಠದ ಮೇಲೆ ಕುಳಿತಿರುವನು. ಬದಿಗಳಲ್ಲಿ ಅಪ್ಸರೆಯರಿರುವರು. ಎರಡನೇ ವೀರಗಲ್ಲು ಸಹ ಇದೇ ರೀತಿಯ ದೃಶ್ಯವನ್ನು ಹೊಂದಿದೆ ಈ ಎರಡೂ ವೀರಗಲ್ಲುಗಳಲ್ಲಿ ಕೆಳಗಿನ ದೃಶ್ಯ ಸ್ವಲ್ಪ ದೊಡ್ಡದಾಗಿದ್ದು ಎರಡು ಹಾಗೂ ಮೂರನೇ ದೃಶ್ಯಗಳು ಕಿರಿದಾಗಿವೆ. ಇವು ಕಲ್ಲಿನಲ್ಲಿ ಕೊರೆದಂತೆ ಕಂಡರಿಸಲಾಗಿದೆ. ಈ ನಾಲ್ಕು ವೀರಗಲ್ಲುಗಳ ಕಾಲ ಸುಮಾರು ಕ್ರಿ.ಶ. ೧೦ನೇ ಶತಮಾನ. ಇವುಗಳಲ್ಲದೆ ದೊಡ್ಡೇರಿ, ಚಿಕ್ಕಮಧುರೆ, ಮಹದೇವಪುರದಲ್ಲಿ ರಾಷ್ಟ್ರಕೂಟ ಕಾಲಕ್ಕೆ ಸೇರಿದ ವೀರಗಲ್ಲುಗಳು ಕಾಣಿಸಿವೆ.

ನೊಳಂಬ, ರಾಷ್ಟ್ರಕೂಟರ ಕಾಲದ ವೀರಗಲ್ಲುಗಳನ್ನು ಹೊರತುಪಡಿಸಿದರೆ ವಿಜಯನಗರ ಹಾಗೂ ಚಿತ್ರದುರ್ಗ ಪಾಳೆಯಗಾರರ ಕಾಲಕ್ಕೆ ಸೇರಿದ ಸ್ಮಾರಕ ಶಿಲ್ಪಗಳ ಸಂಖ್ಯೆಯೇ ಅತ್ಯಧಿಕ. ಪಾಳೆಯಗಾರರ ಕಾಲಕ್ಕೆ ಸೇರಿದ ಸುಂದರ ಕೆತ್ತನೆಯುಳ್ಳ ವೀರ–ಸತಿಗಲ್ಲುಗಳು ಕಾಮಸಮುದ್ರದಲ್ಲಿ ಕಾಣಿಸಿವೆ. ಇಲ್ಲಿಯ ಆರು ಶಿಲ್ಪಗಳಲ್ಲಿ ಐದು ಶಿಲ್ಪಗಳು ಒಂದೇ ರೀತಿಯಾಗಿವೆ. ಒಂದು ಶಿಲ್ಪದಲ್ಲಿ ವೀರ ಕೈ ಮುಗಿದು ನಿಂತಿದ್ದರೆ ಸತಿ ಬಲಗೈಲಿ ಏನನ್ನೋ ಹಿಡಿದು ಎಡಗೈ ಕೆಳಗೆ ಇಳಿ ಬಿಟ್ಟು ನಿಂತಿರುವಳು ಇವರ ವೇಷಭೂಷಣ ಗಮನ ಸೆಳೆಯುವಂತಿದೆ. ಬಹುಶಃ ಶಿಲ್ಪದಲ್ಲಿರುವರು ಪ್ರಮುಖ ಪುರುಷ ವ್ಯಕ್ತಿಗಳಿರಬೇಕು. ಪಾಳೆಯಗಾರರ ಕಾಲದಲ್ಲಿ ನಾಯಕ ಹಾಗೂ ಆತನ ಸತಿಯನ್ನು ಶಿಲ್ಪದಲ್ಲಿ ತೋರಿಸುವ ವಾಡಿಕೆ ಉಂಟು. ಆ ರೀತಿ ಏನಾದರೂ ನಾಯಕ ಆತನ

ಹೆಂಡತಿಯನ್ನು ಈ ಶಿಲ್ಪದಲ್ಲಿ ತೋರಿಸಿರಬಹುದು. ಉಳಿದ ಐದು ಶಿಲ್ಪಗಳಲ್ಲಿ ವೀರ ತನ್ನ ಬಲಕೈಯಲ್ಲಿ ಬಿಲ್ಲು ಅಥವಾ ವಸ್ತ್ರವನ್ನು ಹಿಡಿದು ಎಡಗೈಯನ್ನು ಕೆಳಗೆ ಇಳಿ ಬಿಟ್ಟು ನಿಂತಿರುವನು. ಸತಿಯರು ತಮ್ಮ ಬಲಗೈಯಲ್ಲಿ ನಿಂಬೆಹಣ್ಣು ಹಿಡಿದು ಮೇಲಕ್ಕೆತ್ತಿದ್ದರೆ ಎಡಗೈ ಕೆಳಗೆ ಇಳಿ ಬಿಟ್ಟಿರುವರು. ಈ ಶಿಲ್ಪಗಳಲ್ಲಿಯೂ ಸತಿ-ಪತಿಯರ ವೇಷ ಭೂಷಣಗಳು ಗಮನಸೆಳೆಯುವವು. ವೀರ ತನ್ನ ತಲೆಕೂದಲನ್ನು ತಲೆಯ ಮೇಲಕ್ಕೆ ಕಟ್ಟಿದ್ದರೆ ಸತಿ ತನ್ನ ತಲೆಕೂದಲನ್ನು ತಲೆಯ ಸ್ವಲ್ಪ ಬಲಭಾಗಕ್ಕೆ ಕಟ್ಟಿರುವಳು. ತಲೆಯ ಕೂದಲನ್ನು ಕೇದಿಗೆಯಿಂದ ಅಲಂಕರಿಸಿಕೊಂಡಿರುವಳು. ಇವುಗಳ ಕಾಲಮಾನ ಸುಮಾರು ಕ್ರಿ.ಶ. ೧೫-೧೬ನೇ ಶತಮಾನ.

ದೊಡ್ಡಉಳ್ಳಾರ್ತಿ ಹಾಗೂ ಓಬಯ್ಯನ ಹಟ್ಟಿಯಲ್ಲಿ ಕುದುರೆ ಮೇಲೆ ಕುಳಿತ ವೀರರ ಶಿಲ್ಪಗಳಿವೆ. ದೊಡ್ಡ ಉಳ್ಳಾರ್ತಿಯ ವೀರ-ಸತಿಗಲ್ಲಿನಲ್ಲಿ ವೀರ ಕುದುರೆ ಮೇಲೆ ಕುಳಿತಿರುವನು. ಬಲಗೈಲಿ ಕತ್ತಿ ಎಡಗೈಲಿ ಕುದುರೆಯ ಅಂಕುಶ ಹಿಡಿದಿರುವನು. ಕುದುರೆಯ ಮುಂಭಾಗದಲ್ಲಿ ಸತಿ ಕೈ ಮುಗಿದು ನಿಂತಿರುವಳು. ಇದೇ ಶಿಲ್ಪದ ಬದಿಯ ಭಾಗದಲ್ಲಿ ಸತಿ ಪತಿಯರಿಬ್ಬರು ಕೈ ಮುಗಿದು ನಿಂತಿರುವರು. ಕಾಲ ಸುಮಾರು ಕ್ರಿ.ಶ. ೧೬-೧೭ನೇ ಶತಮಾನ. ಓಬಯ್ಯನಹಟ್ಟಿಯ ವೀರಗಲ್ಲಿನಲ್ಲಿ ವೀರ ಕುದುರೆ ಮೇಲೆ ಕುಳಿತಿರುವನು. ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಅಂಕುಶ ಹಿಡಿದಿರುವನು. ಶಿಲ್ಪದ ಸುತ್ತ ಮೂರು ಗಿಣಿ ಹಾಗೂ ಒಂದು ನವಿಲನ್ನು ತೋರಿಸಲಾಗಿದೆ. ವೀರಗಲ್ಲಿನಲ್ಲಿ ಪಕ್ಷಿಗಳನ್ನು ತೋರಿಸಿರುವ ಈ ಬಗೆ ವಿಶೇಷವೆ ಸರಿ. ಶಿಲ್ಪದಲ್ಲಿ ಏತಕ್ಕಾಗಿ ಪಕ್ಷಿಗಳನ್ನು ತೋರಿಸಲಾಗಿದೆ ಎಂಬ ಬಗ್ಗೆ ಅಧ್ಯಯನ ಮಾಡಬೇಕಾಗಿದೆ. ಪ್ರಾಯಶಃ ಈತ ಕಾಡಿಗೆ ಪ್ರಾಣಿ ಅಥವಾ ಪಕ್ಷಿಗಳ ಬೇಟೆಗೆ ಹೋಗಿ ಮರಣ ಹೊಂದಿರಬಹುದು ಹಾಗಾಗಿ ಶಿಲ್ಪದ ಸುತ್ತಲೂ ಪಕ್ಷಿ ತೋರಿಸಿರಬಹುದು. ಕಾಲ ಸುಮಾರು ಕ್ರಿ.ಶ. ೧೫-೧೬ನೇ ಶತಮಾನ.

ಮಹಾದೇವಪುರ ಹಾಗೂ ಮೈಲನಹಳ್ಳಿಯ ವೀರಗಲ್ಲಿನಲ್ಲಿ ಕೋವಿ ಹಿಡಿದ ವೀರನ ಶಿಲ್ಪ ದೊರೆತಿವೆ. ಅಂದರೆ ಈ ಕಾಲಕ್ಕಾಗಲೇ ಕೋವಿ ಹಿಡಿದು ಕೂಡ ಹೋರಾಟ ಮಾಡುತ್ತಿದ್ದರು ಎಂದು ತಿಳಿಯಬಹುದು. ಕಾಲ ಸುಮರು ಕ್ರಿ.ಶ. ೧೫-೧೬ನೇ ಶತಮಾನ.

ಇವುಗಳಲ್ಲದೆ ವಲಸೆ-೩, ಮಹದೇವಪುರ-೬, ಮೈಲನಹಳ್ಳಿ-೫, ಪರಶುರಾಮಪುರ-೬, ದೊಡ್ಡೇರಿ, ಚಿಕ್ಕಮಧುರೆ, ಕೋಟೆಕೆರೆ, ಮತ್ಸಮುದ್ರ, ಗಂಜೀಗುಂಟೆ, ಪುರ್ಲಹಳ್ಳಿ-೫, ಯಾದಲಗಟ್ಟೆ (ಹಂದಿಬೇಟೆ), ಸಾಣಿಕೆರೆ, ಓಬಳಾಪುರ-೫, ಕಸವಗೊಂಡನಹಳ್ಳಿ, ತಳಕು, ಯಲಗಟ್ಟೆ, ಗೌರಸಮುದ್ರ, ನಾಗಗೊಂಡನಹಳ್ಳಿ-೮ (ಇವುಗಳಲ್ಲಿ ಒಂದು ಹುಲಿಬೇಟೆ) ಮುಂತಾದ ಸ್ಥಳಗಳಲ್ಲಿ ಸ್ಮಾರಕಶಿಲ್ಪಗಳು ಕಾಣಿಸಿವೆ.

## ಆಧಾರಸೂಚಿ


೧. **ಎಪಿಗ್ರಾಫಿಯಾ ಕರ್ನಾಟಿಕ,** ಸಂಪುಟ-೧೧, (ರೈಸ್ ಆವೃತ್ತಿ).
೨. ಎಂ.ಎ.ಆರ್.-೧೯೩೯.
೩. **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಡಾ. ಗೋಪಾಲ್ ಆರ್., ೨೦೦೫, ಹೊಸಪೇಟೆ.
೪. ಡಾ. ಡಿ.ವಿ. ಪರಮಶಿವಮೂರ್ತಿ, ೧೯೯೯, **ಕನ್ನಡ ಶಾಸನ ಶಿಲ್ಪ,** ಹಂಪಿ.
೫. ರಾಮದಾಸರೆಡ್ಡಿ., ೨೦೦೯, **ಚಿತ್ರದುರ್ಗ ಜಿಲ್ಲೆಯ ಪ್ರಾಕ್ಚಾರಿತ್ರಿಕ,** ಬೆಂಗಳೂರು.
೬ ಡಾ. ಶೇಷಶಾಸ್ತ್ರಿ ಆರ್., ೧೯೮೨, **ಕರ್ನಾಟಕದ ವೀರಗಲ್ಲುಗಳು,** ಬೆಂಗಳೂರು.
೭. ಸುರೇಶ ಬಿ., ೨೦೦೮, **ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು,** ಚಿತ್ರದುರ್ಗ.

ಡಾ. ಬೆಂ.ಶಾ. ಶ್ಯಾಮಲಾ ರತ್ನಕುಮಾರಿ*

# ಕ್ಯಾಲನೂರು ಗ್ರಾಮದ ಐತಿಹಾಸಿಕ ಸ್ಮಾರಕಗಳು

ಕ್ಯಾಲನೂರು ಕೋಲಾರ ಜಿಲ್ಲೆಯ ಕೋಲಾರ ತಾಲ್ಲೂಕು ವೇಮಗಲ್ ಹೋಬಳಿಗೆ ಸೇರಿದ ಗ್ರಾಮ. ಹಿಂದೆ ಈ ಗ್ರಾಮವು ೧೫೦ ಬ್ರಾಹ್ಮಣರ ಮನೆಗಳನ್ನೊಳಗೊಂಡ ಅಗ್ರಹಾರವಾಗಿದ್ದಿತು. ಈಗ ಕೋಲಾರ ಜಿಲ್ಲೆಯಲ್ಲಿನ ಅತಿ ದೊಡ್ಡ ಗ್ರಾಮವೆಂದು ಪರಿಗಣಿಸಲ್ಪಟ್ಟಿದೆ. ಕೋಲಾರ ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಜಿಲ್ಲೆಯ ಗ್ರಾಮ/ಉಪಗ್ರಾಮಗಳ ಪಟ್ಟಿಯಲ್ಲಿ ಕ್ಯಾಲನೂರು ಗ್ರಾಮ ಉಲ್ಲೇಖಗೊಂಡಿದೆ. ಹಾಗೆಯೇ ಕೋಲಾರ ಜಿಲ್ಲೆಯ ಕೆರೆಗಳ ಪಟ್ಟಿಯಲ್ಲಿ ಕ್ಯಾಲನೂರಿನ ಅಮಾನಿಕೆರೆ ಉಲ್ಲೇಖಗೊಂಡಿದೆ.

ಬೆಂಗಳೂರಿನಿಂದ ಚಿಂತಾಮಣಿಗೆ ಹೋಗುವ ರಸ್ತೆಯಲ್ಲಿ ಹಿಂಡಿಗನಾಳ ಕ್ರಾಸ್ ಅಥವಾ ಹೆಚ್. ಕ್ರಾಸ್ ನಿಲುಗಡೆಯಲ್ಲಿ ಇಳಿದು ಪೂರ್ವಾಭಿಮುಖವಾಗಿರುವ ಕೋಲಾರದ ರಸ್ತೆಯಲ್ಲಿ ಸುಮಾರು ೯ ಕಿ.ಮೀ. ಕ್ರಮಿಸಿದರೆ ಕ್ಯಾಲನೂರ್ ಕ್ರಾಸ್, ಅಲ್ಲಿಂದ ಒಂದೆರಡು ಕಿ.ಮೀ. ಒಳರಸ್ತೆಯಲ್ಲಿ ಮುಂಬಂದರೆ ಕ್ಯಾಲನೂರು ಗ್ರಾಮವನ್ನು ತಲುಪಬಹುದು. ಹೆಚ್. ಕ್ರಾಸ್‌ನಿಂದ ಕ್ಯಾಲನೂರಿಗೆ ರಿಕ್ಷಾಗಳು ದಿನವಿಡೀ ಸಂಚರಿಸುತ್ತದೆ. ಒಬ್ಬ ವ್ಯಕ್ತಿಗೆ ರಿಕ್ಷಾದಲ್ಲಿ ಹತ್ತು ರೂ. ಶುಲ್ಕವನ್ನು ನಿಗದಿಪಡಿಸಿದೆ.

ಕ್ಯಾಲನೂರು ಎಂಬ ಹೆಸರು ಈ ಗ್ರಾಮಕ್ಕೆ ಬಂದುದು ಹೇಗೆಂದರೆ ಜನರ ಹೇಳಿಕೆಯಂತೆ ತೆಲುಗಿನಲ್ಲಿ 'ಕಾಲಿಪೋಯಿನ ಊರು-ಕಾಲಿನ ಊರು-ಕ್ಯಾಲನೂರು' ಎಂದಾಗಿದೆ ಎಂದರೆ ಸುಟ್ಟುಹೋದ ಊರು. ಈ ಗ್ರಾಮದಲ್ಲೇ ಕರಗದಮ್ಮನ ಇನಾಮತಿ ಹೊಲದಲ್ಲಿ ಇರುವ ಶಾಸನ (ವಿಜಯನಗರದ ಕಾಲ)ದಲ್ಲಿ ಈ ಊರಿನ ಹೆಸರು 'ಕೆಲನೂರು' ಎಂದಿದೆ. 'ಕೆಲ' ಎಂದರೆ 'ಕೆಳಗೆ' ಅಥವಾ 'ಪಕ್ಕ' ಎಂಬ ಅರ್ಥಗಳಿವೆ. ಈ ಗ್ರಾಮವು ಚಿಕ್ಕಕೆರೆ ಮತ್ತು ದೊಡ್ಡಕೆರೆ ಪಕ್ಕದಲ್ಲಿ ಕೆರೆಕಟ್ಟೆಯ ಕೆಳಗೆ ಹೊಂದಿಕೊಂಡಂತೆ ಇದೆಯಾದ್ದರಿಂದ ಕೆರೆ ಪಕ್ಕದ ಊರು ಎಂಬ ಭೌಗೋಳಿಕ ಸ್ಥಳನಾಮವಾಗಿ 'ಕೆಲನೂರು' ಎಂಬ ಹೆಸರು ರೂಪುಗೊಂಡಿದೆ. ಕ್ಯಾಲನೂರು ಅಥವಾ ಕೆಲನೂರು ಕೆರೆಗೆ ಸುತ್ತಮುತ್ತಲಿನ ರಾಮಪುರ, ಕಾಡಹಳ್ಳಿ, ಕರೇನಹಳ್ಳಿ ಶಿಪ್ಪೇನಹಳ್ಳಿ, ಅಮ್ಮನಲ್ಲೂರು, ಚಂದಿಗಾನಹಳ್ಳಿಗಳ ಕೆರೆಗಳಿಂದ ನೀರು ಹರಿದು ಬರುತ್ತದೆ. ಆದುದರಿಂದ ಕೆಲನೂರಿನ ಕೆರೆ ನೀರಿನ ದೊಡ್ಡ ಆಕರವಾಗಿದ್ದು ಎರಡು ಕಟ್ಟೆಗಳನ್ನು ತೂಬುಗಳನ್ನೂ ಹೊಂದಿದ್ದು ಗ್ರಾಮಸ್ಥರ ಜೀವನದಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿದೆ.

ಈ ಗ್ರಾಮದಲ್ಲಿ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಅತ್ಯಂತ ಪ್ರಾಚೀನವಾದ ದೇವಾಲಯವೆಂದರೆ ಗ್ರಾಮದ ಹೊರ ಅಂಚಿನಲ್ಲಿ ಕೆರೆಯ ಕೆಳಗೆ ಇರುವ ಗಂಗರ ಕಾಲಕ್ಕೆ ಸೇರುವ ಸೋಮೇಶ್ವರ ದೇವಾಲಯ. ಈ ದೇವಾಲಯವು ಗಂಗರ ವಾಸ್ತುಶೈಲಿಯನ್ನು ಪ್ರತಿನಿಧಿಸುತ್ತದೆ ಎಂದರೆ ದೇವಾಲಯ ಕುಳ್ಳಾಗಿದೆ, ಗರ್ಭಗುಡಿ ಮತ್ತು ಅಂತರಾಳವನ್ನು ಮಾತ್ರ ಹೊಂದಿದೆ, ಗರ್ಭಗುಡಿಯ ಮೇಲೆ ಶಿಖರ ಈ ದೇವಾಲಯದ ಪ್ರಧಾನ ಹಾಗೂ ಗಮನಾರ್ಹ ಅಂಶಗಳೆಂದರೆ ಗರ್ಭಗುಡಿಯಲ್ಲಿರುವ ದೊಡ್ಡದಾದ ಭವ್ಯ ಶಿವಲಿಂಗ ಹಾಗೂ ಪ್ರಸ್ತರದ ಭಾಗದಲ್ಲಿರುವ ಹಂಸ, ಮಿಥುನ, ಯೋಗಿಗಳ ಚಿಕಣಿ ಶಿಲ್ಪಗಳು- ಇವು ಭೋಗ, ಯೋಗ ಮತ್ತು ಹಂಸತ್ವ (ಕೈವಲ್ಯ) ಗಳನ್ನು ಮಾನವ ಜೀವನದ ಮೂರು ಹಂತಗಳನ್ನು ದಿಗ್ದರ್ಶಿಸುತ್ತಿದೆ. ದೇವಾಲಯದ ಮುಂದೆ ಚಿಕ್ಕದಾದ ನಂದಿಶಿಲ್ಪವಿದೆ. ದೇವಾಲಯದ ಹೊರ ಪರಿಸರದಲ್ಲಿ ಮುಸಲ್ಮಾನರ ಕೆಲವು ಗೋರಿಗಳೂ ಇವೆ ಹಾಗೂ ಶಿಲಾಯುಗದ ಡಾಲ್ಮೆನ್‌ಗಳ ಮಾದರಿಗಳಿರುವುದನ್ನು ಗಮನಿಸಬಹುದಾಗಿದೆ.

ಊರಿನ ಮಧ್ಯಭಾಗದಲ್ಲಿರುವ ಇನ್ನೊಂದು ಪ್ರಮುಖ ದೇವಾಲಯವೆಂದರೆ ಚಂದ್ರಶೇಖರ ಅಥವಾ ಚಂದ್ರಮೌಳೇಶ್ವರ ದೇವಾಲಯ. ಹೊರ ದ್ವಾರವು ಹಂಪೆಯ ವಿಜಯವಿಠಲ ದೇವಾಲಯದ ಹೊರ ದ್ವಾರದ ಶೈಲಿಯಲ್ಲಿದೆ. ದ್ವಾರದ ವೇದಿ ಅಥವಾ ಅಧಿಷ್ಠಾನವು ತ್ರಿಪಟ್ಟ ಕುಮುದ, ಗಳ, ಕಪೋತ ಮುಂತಾದ ಪಂಚ ಭಾಗಗಳಿಂದ ಕೂಡಿದೆ. ದೇವಾಲಯದ ಒಳ ಆವರಣದಲ್ಲಿ ನಂದಿಸ್ತಂಭ, ಡಮರುಗ, ತ್ರಿಶೂಲ, ಮರದ ಘಂಟಾಸ್ತಂಭ, ಬಲಿಪೀಠ ಇವೆ. ದೇವಾಲಯದ ದ್ವಾರಸ್ತಂಭಗಳ ಮೇಲೆ ನಂದಿ, ಭಕ್ತ, ವರಾಹ, ಬಸವ ಶಿಲ್ಪಗಳಿವೆ. ಪ್ರವೇಶದ್ವಾರದ ಜಗಲಿಯ ಭಾಗದಲ್ಲಿ ಎಡಗಡೆ ಗಣೇಶ ಮಂಟಪವೂ ಮತ್ತು ಬಲಗಡೆ ನವಗ್ರಹ ಮಂಟಪವೂ

*# ೨೭, ವಿಶಾಲಾಕ್ಷಿ ಕೃಪ, ಶ್ರೀ ಪರಮಹಂಸ ರಸ್ತೆ, ೨ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು.

ಇವೆ. ನವರಂಗದ ಕಂಬಗಳು ಸಿಂಹಪೀಠವನ್ನು ಹೊಂದಿವೆ. ಸಿಂಹಗಳು ಮುಂಗಾಲುಗಳ ಮೇಲೆ ಕುಳಿತ ಭಂಗಿಯಲ್ಲಿವೆ ಮತ್ತು ಮುಖಭಾವವು ವೈವಿಧ್ಯದಿಂದ ಕೂಡಿವೆ. ಕಂಬಗಳ ಮೇಲೆ ಕಾಳಿಂಗಮರ್ದನ, ಕೂರ್ಮವಿಷ್ಣು, ಲಜ್ಜಾಗೌರಿ, ಮಿಥುನ, ಭೈರವ, ಕುಬ್ಜ, ದಂಡಧಾರಿಯತಿ ಮುಂತಾದ ಕೆತ್ತನೆಗಳಿವೆ. ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಗರ್ಭಗುಡಿಯ ಪ್ರವೇಶದ್ವಾರದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಗರ್ಭಗುಡಿಯಲ್ಲಿ ಕಾಶಿಯಿಂದ ತರಲ್ಪಟ್ಟ ಒಂದು ಚಿಕ್ಕ ಲಿಂಗವನ್ನು ಇತ್ತೀಚೆಗೆ ಮಾಡಿಸಿರುವ ಸುಂದರವಾದ ಕಮಲಪೀಠದ ಮೇಲೆ ಪ್ರತಿಷ್ಠಾಪಿಸಲ್ಪಟ್ಟಿದೆ. ಗರ್ಭಗುಡಿಯು ಪ್ರಾಚೀನವಾದರೂ ದೇವಾಲಯವು ನವೀಕರಣಗೊಂಡಿದೆ. ಇಳಿಜಾರು ಮಾಳಿಗೆಯಿದ್ದು ಮುಂಭಾಗದಲ್ಲಿ ಗೂಡುಗಳೊಳಗೆ ದೇವ ಪ್ರತಿಮೆಗಳು ಇವೆ. ಮಾಳಿಗೆಯ ನಾಲ್ಕೂ ಮೂಲೆಗಳಲ್ಲಿ ನಂದಿಶಿಲ್ಪವಿವೆ. ಅಷ್ಟೇನೂ ಎತ್ತರವಿರದ ಶಿಖರವೂ ಇದೆ. ಪ್ರಸ್ತರದಲ್ಲಿ ಮುಕ್ತಕ ಹಾರಾವಳಿ ಕಂಡುಬರುತ್ತದೆ.

ಚಂದ್ರಮೌಳೇಶ್ವರ ಮತ್ತು ಸೋಮೇಶ್ವರ ದೇವಾಲಯಗಳಲ್ಲಿ ಒಬ್ಬರೇ ಅರ್ಚಕರು. ದೀಕ್ಷಿತ ಮನೆತನದ ಟಿ.ಎನ್. ನಂಜುಂಡಯ್ಯ (ನಿವೃತ್ತ ಟೀಚರ್) ಪರೇಸಂದ್ರದವರು ಪ್ರಸ್ತುತ ಇಲ್ಲಿನ ಅರ್ಚಕರಾಗಿದ್ದಾರೆ. ಇವರು ಬೆಂಗಳೂರಿನಲ್ಲಿ ವಾಸ್ತವ್ಯ ಹೊಂದಿದ್ದು ಪ್ರತಿ ಶನಿವಾರ ಸಂಜೆ ಕ್ಯಾಲನೂರಿನಿಂದ ಹೊರಟು ಬೆಂಗಳೂರಿಗೆ ಬಂದು ಸೋಮವಾರ ೧೧ ಗಂಟೆಯ ವೇಳೆಗೆ ಕ್ಯಾಲನೂರಿಗೆ ವಾಪಸಾಗುತ್ತಾರೆ. ಆದುದರಿಂದ ಭಾನುವಾರಗಳಂದು ದೇವಾಲಯವು ಸಾಮಾನ್ಯವಾಗಿ ತೆರೆಯಲ್ಪಡುವುದಿಲ್ಲ.

ದೇವಾಲಯದ ಆವರಣದಲ್ಲಿ ರೇಷ್ಮೆ ಸಾಕಣೆಯ ಬಿದಿರಿನ ಚಂದ್ರಿಕೆಗಳನ್ನೂ ಇಟ್ಟಿದ್ದುದು ನಾನು ಅಲ್ಲಿಗೆ ಹೋದಾಗ ಒಮ್ಮೆ ಕಂಡುಬಂದಿತು. ಇದರಿಂದ ದೇವಾಲಯಕ್ಕೆ ಹೋಗಿಬರುವವರಿಗೂ ಸ್ವಲ್ಪ ತೊಂದರೆಯಾಯಿತು. ಆದುದರಿಂದ ಆ ವ್ಯವಸ್ಥೆಯನ್ನು ದೇವಾಲಯದಿಂದ ಹೊರಗೆ ಏರ್ಪಡಿಸುವುದು ಒಳಿತೆಂದು ನಾನು ಅಲ್ಲಿದ್ದವರಿಗೆ ಸೂಚಿಸಿದೆನಾದರೂ ಅದು ಎಷ್ಟುಮಟ್ಟಿಗೆ ಕಾರ್ಯಗತವಾಗುವುದೋ ತಿಳಿಯದು. ಸೋಮವಾರ ಶಿವರಾತ್ರಿ, ಚೈತ್ರಮಾಸದಲ್ಲಿ ವಿಶೇಷ ಪೂಜೆ, ರಥೋತ್ಸವಗಳಿರುತ್ತವೆ.

ಚಂದ್ರಮೌಳೇಶ್ವರ ದೇವಾಲಯದ ಸಮೀಪ ಬಲಬದಿಯ ಓಣಿಯಲ್ಲಿ ಶ್ರೀ ತಿರುಪಳ್ಳಿರಾಯಸ್ವಾಮಿಯ ಗುಡಿ ಇದೆ. ತಿರುಪಳ್ಳಿರಾಯನು ವೈಷ್ಣವ ಸಂತರಾದ ೧೨ ಜನ ಆಳ್ವಾರರಲ್ಲಿ ಎರಡನೆಯವನು. ಇಲ್ಲಿನ ಅರ್ಚಕರು ಮಡಪಳ್ಳಿ (ಕೈವಾರದಿಂದ ೧ ೧/೨ ಕಿ.ಮಿ.) ಯ ರಾಧಾಕೃಷ್ಣಯ್ಯನವರು ಪ್ರತಿದಿನ ಅಲ್ಲಿಂದಲೇ ಬಂದು ಪೂಜೆ ನೆರವೇರಿಸುತ್ತಾರೆ.

ತಿರುಪಾಲಪ್ಪ ಸ್ವಾಮಿಯ ದೇವಾಲಯದ ಹಿಂದೆ ಬೃಂದಾವನ ವೇಣುಗೋಪಾಲಸ್ವಾಮಿ ದೇವಾಲಯ ಇದೆ. ದೇವಾಲಯದ ಹಿಂಭಾಗವು ಸಂಪೂರ್ಣವಾಗಿ ಶಿಥಿಲವಾಗಿರುವುದರಿಂದ ವೇಣುಗೋಪಾಲಸ್ವಾಮಿಯ ವಿಗ್ರಹವನ್ನು ಅರ್ಚಕರು (ಶ್ರೀ ವೈಷ್ಣವರು) ತಮ್ಮ ಮನೆಯಲ್ಲೇ ಇರಿಸಿಕೊಂಡಿದ್ದಾರೆಂದು ತಿಳಿದುಬಂದಿದೆ. ಅರ್ಚಕರು ಸಿಗಲಿಲ್ಲವಾದ ಕಾರಣ ದೇವತಾಮೂರ್ತಿಯನ್ನು ನೋಡಲಾಗಲಿಲ್ಲ. ದೇವಾಲಯಕ್ಕೆ ಬೀಗಮುದ್ರೆ ಬಿದ್ದಿದೆ. ದೇವಾಲಯದ ಮುಂಭಾಗದಲ್ಲಿ ತುಳಸಿಗಿಡವಿರುವ ಬೃಂದಾವನ, ಅರಳಿಕಟ್ಟೆ, ಗರುಡಧ್ವಜ ಸ್ತಂಭ ಮತ್ತು ಮರದ ಘಂಟಾಸ್ತಂಭಗಳೂ ನಿಲ್ಲಿಸಲ್ಪಟ್ಟಿವೆ. ಹಾಗೂ ಬಲಿಪೀಠ, ನಾಗರಕಲ್ಲುಗಳೂ, ಎಡಮೂಲೆಯಲ್ಲಿ ಆಂಜನೇಯನ ಶಿಲ್ಪವಿರುವ ಹಾಗೂ ಅಳಿಸಿಹೋಗಿರುವ ಅಕ್ಷರಗಳುಳ್ಳ ಶಾಸನವಿರುವ (ಯಂತ್ರಕಲ್ಲು?) ಕಲ್ಲೊಂದನ್ನು ನಿಲ್ಲಿಸಿರುವುದು ಕಾಣಸಿಗುತ್ತವೆ.

ಬಸ್‌ಸ್ಟಾಂಡಿನ ಹಿಂಭಾಗದಲ್ಲಿ ಆರ್ಯ ವೈಶ್ಯರದೆಂದು ಹೇಳಲ್ಪಡುವ ಇನ್ನೊಂದು ಬೃಂದಾವನ ವೇಣುಗೋಪಾಲಸ್ವಾಮಿಯ ದೇವಾಲಯವಿದೆ. ಇಲ್ಲಿ ಮೂರಡಿ ಎತ್ತರದ ಸುಂದರವಾದ ವೇಣುಗೋಪಾಲನ ವಿಗ್ರಹವಿದೆ. ದೇವಾಲಯಕ್ಕೆ ವಿಶಾಲವಾದ ಆವರಣವಿದೆ. ದೇವಾಲಯದ ಮುಂಭಾಗದಲ್ಲಿ ಇಲ್ಲಿಯೂ ಗರುಡಗಂಬ, ಮರದ ಘಂಟಾಸ್ತಂಭ, ತುಳಸೀ ಬೃಂದಾವನ ಕಟ್ಟೆ, ನಾಗರಕಲ್ಲುಗಳೂ ಅರಳಿಕಟ್ಟೆ, ಬಲಿಪೀಠಗಳು ಕಂಡುಬರುತ್ತವೆ. ಇತ್ತೀಚೆಗೆ ಆವರಣದಲ್ಲಿ ಛತ್ರವೊಂದನ್ನು ಕಟ್ಟಿಸಲು ಸಿದ್ಧತೆಗಳು ಪ್ರಾರಂಭವಾಗಿವೆ. ಈ ದೇವಾಲಯವೂ ಸಾಮಾನ್ಯವಾಗಿ ಬೀಗ ಹಾಕಲ್ಪಟ್ಟಿರುತ್ತದೆಯಾದ್ದರಿಂದ ದೇವಾಲಯದ ಒಳಭಾಗಗಳ ವಿವರಗಳು ಅಲಭ್ಯ. ಪ್ರಾಯಶಃ ಬೃಂದಾವನ ವೇಣುಗೋಪಾಲಸ್ವಾಮಿ ದೇವಾಲಯದ ಕಲ್ಪನೆ ಹರಿದಾಸ ಪಂಥದ ಪ್ರಭಾವದಿಂದ ಮೂಡಿಬಂದಿದೆ ಎಂದು ಹೇಳಬಹುದು. ಶ್ರೀಪಾದರಾಜ ಮತ್ತು ಅವರ ಶಿಷ್ಯ ವ್ಯಾಸರಾಜರ ಪ್ರಭಾವ ಈ ಪ್ರದೇಶದಲ್ಲಿ ದಟ್ಟವಾಗಿ ಕಂಡುಬರುತ್ತದೆ.

ಕ್ಯಾಲನೂರು ಗ್ರಾಮದ ಪ್ರವೇಶಸ್ಥಳದಲ್ಲಿದೆ ಬಾವಿ ದೊಡ್ಡ ಆಂಜನೇಯ ದೇವಾಲಯ. ಈ ದೇವಾಲಯಕ್ಕೆ ಈ ಹೆಸರು ಬಂದಿರುವುದು ದೇವಾಲಯದ ಪಕ್ಕದಲ್ಲಿರುವ ದುಂಡು ಬಾವಿಯಿಂದ. ಇಲ್ಲಿ ಪ್ರತಿ ಶನಿವಾರ ಭಕ್ತರಿಗೆ ಊಟದ ವ್ಯವಸ್ಥೆ ಇದೆ. ಸಂಜೆ ಭಜನೆ ಕಾರ್ಯಕ್ರಮ ನಡೆಯುತ್ತದೆ. ಇದಲ್ಲದೆ ಕೆರೆಯ ಅಂಚಿನಲ್ಲಿ ಇನ್ನೊಂದು ಬಾವಿ ಆಂಜನೇಯ ದೇವಾಲಯವಿದೆ.

ಈ ಗ್ರಾಮದಲ್ಲಿರುವ ಗ್ರಾಮದೇವತೆಗಳ ಗುಡಿಗಳೆಂದರೆ ಕರಗದಮ್ಮ ಮತ್ತು ಸತ್ಯಮ್ಮನ ಗುಡಿಗಳು. ಕರಗದಮ್ಮನ ಭಕ್ತರಾದ ತಿಗುಳರು ಕರಗದುತ್ಸವವನ್ನು ನಡೆಸುತ್ತಾರೆ.

ಚಂದ್ರಮೌಳೇಶ್ವರ, ಸೋಮೇಶ್ವರ, ತಿರುಪಳ್ಳಿಯಪ್ಪ ಅಥವಾ ತಿರುಪಾಲಪ್ಪನ ಗುಡಿಯ ಹಿಂಭಾಗದಲ್ಲಿರುವ ಬೃಂದಾವನ'ವೇಣುಗೋಪಾಲ, ಬಾವಿದೊಡ್ಡ ಆಂಜನೇಯ ಮತ್ತು ಕರಗದಮ್ಮ– ಈ ಐದೂ ಇನಾಮತಿ ದೇವಾಲಯಗಳಾಗಿದ್ದು ಈ ದೇವಾಲಯಗಳಿಗೆ ಭೂಮಿಯನ್ನು ಮಾನ್ಯವಾಗಿ ನೀಡಲಾಗಿದೆ.

ಸೋಮೇಶ್ವರ ದೇವಾಲಯಕ್ಕೆ ಹೋಗುವ ದಾರಿಯಲ್ಲಿ ಶೆಟ್ಟಾರ್ಯ ಸ್ವಾಮೀಜಿ ಆಶ್ರಮವಿದ್ದು ಅಲ್ಲಿ ಭಕ್ತಾಂಜನೇಯನ ಚಿಕ್ಕ ಗುಡಿ ಇದೆ. ನೇರಮುಖ ಮಾಡಿ ಪ್ರಸನ್ನ ಮುಖಭಾವದಿಂದ ನಿಂತಿರುವ ಆಂಜನೇಯನ ಶಿಲ್ಪ ವಿಜಯನಗರದ ಶಿಲ್ಪಶೈಲಿಯಲ್ಲಿದೆ.

ಅಲ್ಲಿಂದ ಅನತಿದೂರ ಮುಂದೆ ಸಾಗಿದರೆ ಕುಂಬಾರ ಮಠವಿದೆ. ಅಲ್ಲಿ ಆರು ಸಮಾಧಿಗಳೂ ಇವೆ. ಅದನ್ನು ಗುರುಮೂರ್ತಪ್ಪನ ಮಠವೆಂದು ಕರೆಯುವರು. ಆ ಮಠದ ಗುರುಗಳು ದೇವಂಡಹಳ್ಳಿ (ದೇವನಹಳ್ಳಿ)ಯ ಗುರು ಪರಂಪರೆಗೆ ಸೇರಿದವರೆಂದೂ ಆ ಗುರುಗಳ ಹೆಸರಿನಿಂದಲೇ ಮಠಕ್ಕೆ ಗುರುಮೂರ್ತಪ್ಪನ ಮಠ ಎಂದು ಹೆಸರು ಬಂದಿದೆ ಎಂದು ಹೇಳಲಾಗುತ್ತಿದೆ.

ಈ ದೇವಾಲಯಗಳೇ ಅಲ್ಲದೆ ಕ್ಯಾಲನೂರಿನಲ್ಲಿ ಈ ಹಿಂದೆ ಕೋಟೆಯೂ ಇದ್ದಿತು. ಈಗ ಎರಡು ಕೂಚಾ ಕಲ್ಲುಗಳ ನಡುವೆ ಕೆಲವು ಮೆಟ್ಟಲುಗಳಿರುವ ಪ್ರವೇಶದ ಸ್ಥಳವನ್ನು ಕೋಟೆಯ ದ್ವಾರವೆಂದು ಹೇಳಲಾಗುತ್ತಿದೆ. ಈಗ ಈ ಸ್ಥಳವನ್ನು ಚಂದ್ರಶೇಖರ ದೇವಾಲಯದ ಅರ್ಚಕ ಮನೆತನದವರು (ಸಮೀಪದ ಪೆರೆಸಂದ್ರದವರು) ಕೊಂಡು 'ಜ್ಞಾನದೀಪಿಕಾ' ಎಂಬ ಖಾಸಗಿ ವಿದ್ಯಾಸಂಸ್ಥೆಯನ್ನು ಕಟ್ಟಿ ಈಗ್ಗೆ ೧೦ ವರ್ಷಗಳಿಂದ ನಡೆಸುತ್ತಿದ್ದಾರೆ. ಈ ಪ್ರದೇಶದಲ್ಲಿ ಶಾಲೆಯ ಹಿಂಭಾಗದ ಪರಿಸರದಲ್ಲಿ ಕಂದಕವಿದ್ದ ಕುರುಹುಗಳನ್ನು ಗುರುತಿಸಬಹುದಾಗಿದೆ.

ಕೆಲನೂರು ಗ್ರಾಮದಲ್ಲಿ ಎರಡು ಗೋವಿನ ಚಿತ್ರವಿರುವ ಭೂದಾನದ ಉಲ್ಲೇಖವಿರುವ ಎರಡು ಶಿಲಾಶಾಸನಗಳೂ, ಹುಲಿಯನ್ನು ಕೊಂದು ಹಸುಗಳ ರಕ್ಷಣೆ ಮಾಡಿದ ವೀರರಿಬ್ಬರ ಶಿಲ್ಪವನ್ನೂ ಹತ್ತನೇ ಶತಮಾನದ ಬರಹವುಳ್ಳ ವೀರಗಲ್ಲೂ ಮತ್ತು ಕೇವಲ ವೀರರ ಶಿಲ್ಪವಿರುವ ವೀರಗಲ್ಲು ಹಾಗೂ ಬೃಂದಾವನ ವೇಣುಗೋಪಾಲಸ್ವಾಮಿಯ ದೇವಾಲಯದ ಮುಂಭಾಗದ ತಳಪಾಯದ ಎಡಮೂಲೆಯಲ್ಲಿ ನಿಲ್ಲಿಸಲಾಗಿರುವ ಆಂಜನೇಯನ ಶಿಲ್ಪವಿರುವ ಪೂರ್ಣವಾಗಿ ಸವೆದು ಹೋಗಿರುವ ಅಕ್ಷರಗಳನ್ನುಳ್ಳ ಯಂತ್ರಕಲ್ಲು (?) ಹೀಗೆ ಐದು ಶಾಸನಗಳು ಕಂಡುಬಂದಿವೆ. ಎರಡು ಶಾಸನಗಳು ಭೂಮಿಯಲ್ಲಿ ಅರ್ಧಭಾಗ ಹೂತಿರುವುದರಿಂದ ಅದನ್ನು ಅಗೆದು ಶಾಸನವನ್ನು ಓದಬೇಕಾಗಿದೆ. ಮಳೆಯ ಕಾರಣದಿಂದ ಶಾಸನವನ್ನು ಹೂತಿರುವ ಭಾಗವನ್ನು ಅಗೆಯಲಾಗಲಿಲ್ಲ. ಆದ್ದರಿಂದ ಶಾಸನದ ಪೂರ್ಣ ಪಾಠವನ್ನು ಸಿದ್ಧಪಡಿಸುವ ಕಾರ್ಯವಿನ್ನೂ ಆಗಬೇಕಾಗಿದೆ. ಪ್ರಾಯಶಃ ಆ ನಾಲ್ಕೈದು ಶಾಸನಗಳ ವಿವರಗಳನ್ನೊಳಗೊಂಡಂತೆ ಇನ್ನೊಂದು ಲೇಖನವನ್ನು ಬರೆಯಲು ಶೀಘ್ರದಲ್ಲೇ ಯತ್ನವನ್ನು ಕೈಗೊಳ್ಳುತ್ತಿದ್ದೇನೆ.

(ಈ ಕ್ಷೇತ್ರಕಾರ್ಯದಲ್ಲಿ ಮಾಹಿತಿ ನೀಡಿ ಸಹಕರಿಸಿದ ಸ್ಥಳೀಯರಾದ ಶ್ರೀ ಶಿವಶಂಕರ್ ಮತ್ತು ಅವರ ಕುಟುಂಬ ದವರಿಗೂ, ಚಂದ್ರಶೇಖರ ದೇವಾಲಯದ ಅರ್ಚಕರಾದ ಶ್ರೀ ನಂಜುಂಡಯ್ಯನವರಿಗೂ ಹಾಗೂ ಮಿತ್ರರಾದ ಡಾ. ಹರಿಹರ ಶ್ರೀನಿವಾಸರಾವ್, ಶ್ರೀಮತಿ ಗಂಗಾಂಬಿಕಾ ಮತ್ತು ಅವರ ಶಿಷ್ಯನಿಗೂ ದಾನ ಶಾಸನವಿರುವ ಹೊಲದ ಮಾಲೀಕರಾದ ಶಿವಶಂಕರ ರೆಡ್ಡಿಯವರಿಗೂ ನನ್ನ ಕೃತಜ್ಞತೆಗಳೂ ಸಲ್ಲುತ್ತವೆ.)

ಡಾ. ಮಲ್ಲಿಕಾರ್ಜುನ ಕುಂಬಾರ*

# ರಾಜೂರ ಗ್ರಾಮದ ಶಾಸನೋಕ್ತ "ಜೋಗ ಗಾವುಂಡ"

ಪ್ರಾಚೀನ ಕರ್ನಾಟಕದಲ್ಲಿ ಬರುವ ಗಾವುಂಡರುಗಳ ಬಗ್ಗೆ ಶಾಸನಗಳು ಬಹಳಷ್ಟು ಬಣ್ಣಿಸುತ್ತವೆ. ಅಂದು ಭೌಗೋಳಿಕವಾಗಿ ವಿಸ್ತಾರವಾಗಿದ್ದ ರಾಜ್ಯವನ್ನು ಆಳ್ವಿಕೆಯ ದೃಷ್ಟಿಯಿಂದ ಮೂರು ಸ್ತರಗಳಲ್ಲಿ ವಿಂಗಡಿಸಲಾಗಿತ್ತು. ಅವುಗಳೆಂದರೆ ಮಂಡಲ, ನಾಡು ಮತ್ತು ಗ್ರಾಮಗಳು, ರಾಜಧಾನಿಯಲ್ಲಿ ರಾಜನೇ ನೇರವಾಗಿ ಆಳುತ್ತಿದ್ದರೆ, ಉಳಿದ ಭಾಗಗಳನ್ನು ಮಂಡಲಗಳನ್ನಾಗಿ ಮಾಡಿ ಪ್ರತಿ ಮಂಡಲಕ್ಕೂ ಮಂಡಲೇಶ್ವರರನ್ನು ನೇಮಿಸುತ್ತಿದ್ದರು. ಈ ಮಂಡಲಗಳನ್ನು ನಾಡುಗಳಾಗಿ ವಿಭಾಗಿಸಿ ನಾಡಗಾವುಂಡರನ್ನು ಮತ್ತು ಊರುಗಳಿಗೆ ಊರಗಾವುಂಡರನ್ನು ನೇಮಿಸುತ್ತಿದ್ದರು. ರಾಜನ ಕೆಳಗೆ ಮಂಡಲೇಶ್ವರರು, ಅವರ ಕೆಳಗೆ ನಾಡಗೌಂಡ ಹಾಗೂ ಕೆಳಸ್ತರದಲ್ಲಿ ಊರಗಾವುಂಡರಿರುತ್ತಿದ್ದರು.[೧]

ಗಾವುಂಡರು ಗ್ರಾಮಗಳನ್ನಾಳುತ್ತಿದ್ದರು. ಇವರನ್ನು ಶಾಸನಗಳು, ದಾನಿ, ಶೂರ, ದೇವರ ಪ್ರತಿರೂಪ ಎಂದು ಹೊಗಳುತ್ತವೆ. ಇವರು ಆ ಊರಿನ ಸಮಸ್ತ ಹೊಣೆಯನ್ನು ಹೊತ್ತು ದೈವಿಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ದೇವರಿಗೆ, ಊರಿಗೆ ಬಿಟ್ಟುಕೊಟ್ಟ ದಾನ, ದತ್ತಿಗಳನ್ನು ಪಾಲಿಸುತ್ತಾ, ಆ ದತ್ತಿಗಳಿಗೆ ಗಾವುಂಡರು ಧರ್ಮದರ್ಶಿಗಳಾಗುತ್ತಿದ್ದರು. ದತ್ತಿಗಳನ್ನು ಬಿಡುವಾಗ, ಊರಲ್ಲಿ ಉತ್ಸವಗಳು ನಡೆಯುವಾಗ ಅಲ್ಲಿ ಊರ ಗಾವುಂಡರು ಇರುತ್ತಿದ್ದರು. ಒಂದು ಊರಿನಲ್ಲಿ ದೇವಸ್ಥಾನಗಳು ನಿರ್ಮಾಣವಾಗುವ ಸಂದರ್ಭದಲ್ಲಿ ಬೇರೆ ಊರುಗಳನ್ನು ದತ್ತಿ ಕೊಡುವದು. ಸ್ವೀಕರಿಸುವದನ್ನು ಇವರು ನಿರ್ವಹಿಸುತ್ತಿದ್ದರು. ಇಂತಹ ಸಮಯದಲ್ಲಿ ತಮ್ಮ ಊರಿನ ಕಾಣಿಕೆಗಳನ್ನು ನೀಡುತ್ತಿದ್ದ ಆಯಾ ಊರಿನ ಗಾವುಂಡರ ಹೆಸರುಗಳನ್ನು ಶಾಸನಗಳಲ್ಲಿ ಕಾಣುತ್ತೇವೆ. ಈ ಗಾವುಂಡರ ಬಗ್ಗೆ ಊರಿನ ಜನರು ದೃಢವಾದ ವಿಶ್ವಾಸವನ್ನು ಇಟ್ಟಿರುತ್ತಿದ್ದರು.[೨] ಈ ಬಗ್ಗೆ ನಾಡಿನ ತುಂಬೆಲ್ಲ ಇರುವ ಅಪಾರ ಶಾಸನಗಳು ಇವರ ಬಗ್ಗೆ ಬೆಳಕು ಚೆಲ್ಲುತ್ತವೆ.

ಗದಗ ಜಿಲ್ಲೆಯ ರೋಣ ತಾಲೂಕಿನ ರಾಜೂರು ಗ್ರಾಮವು, ಶಾಸನಗಳಲ್ಲಿ ರಾಜೂರು, ರಾಜವೂರು ಎಂದು ಉಲ್ಲೇಖಿತಗೊಂಡಿದೆ. ಇದನ್ನು ಕಲ್ಯಾಣ ಚಾಲುಕ್ಯ ಅರಸನಾದ ಒಂದನೇಯ ಜಗದೇಕಮಲ್ಲನ (೧೧೩೭) ಆಳ್ವಿಕೆ ಸಂದರ್ಭದಲ್ಲಿ "ಕಿಸುಕಾಡೆಪ್ಪತ್ತರೊಳ್ ಅತಿಶಯಸಾಗರವೆನಿಸಿದ ಕುಂತಳ ಮಧ್ಯಪ್ರದೇಶದೊಳೆಸವ ರಮಣಿಯವೆನಿಸಿದ ರಾಜೂರ" ಎಂದು ವರ್ಣಿಸಲಾಗಿದೆ.

ಕಲ್ಯಾಣದ ಚಾಲುಕ್ಯರ ಸಾಮಂತರಾದ ಯಲುಬುರ್ಗಿಯ ಸಿಂದರ ಪ್ರತಿನಿಧಿಯಾಗಿ ರಾಜೂರನ್ನು 'ಜೋಗ ಗಾವುಂಡ' ಎಂಬವನು ನೋಡಿಕೊಳ್ಳುತ್ತಿದ್ದನು. ಇವನನ್ನು ಈ ಶಾಸನಗಳು "ವಂದಿಜನಕ, ತ್ಯಾಗದ ಕಣಿ" 'ತ್ರಿಭುವನಮಲ್ಲನ (ಕ.ಚಾ. ಚಕ್ರವರ್ತಿ) ಪಾದಾರಾಧಕ'ನೆಂದು ಬಣ್ಣಿಸಿವೆ. ಸಿಂದವಂಶದ ಅರಸರಲ್ಲಿ ಜೋಗಗಾವುಂಡ ಹಾಗೂ ಬಮ್ಮ ಎಂಬವರು ಪ್ರಮುಖ ಗಾವುಂಡರಾಗಿದ್ದರು. ಇಲ್ಲಿರುವ ಶಾಸನದಲ್ಲಿ 'ಶ್ರೀಜೋಗೇಶ್ವರದೇವರ ಸಾಪ್ರತಿಷ್ಠಿತಮಾಯ್ತು ಅತಿಶಯವೆತ್ತಿ। ಕರೆಯಿಸಿ ಐಯಿನೂರ್ಬರಿಗೆ ವಿಸ್ತರದಿಂ ವೀಳೆಯಮನಿತ್ತು ಪರಮ ಪ್ರಭು ಮನೋಹರ ಮೂರ್ತಿಗೆ ಗವರೇಶ್ವರ ದೇವರೆಂದುರತಿಚಂದ್ರಾರ್ಕವರಂ ‖ ......ರಾಜೂರ ಅರವತ್ತೋಕ್ಕಲು ಮುಖ್ಯವಾಗಿ ಜೋಗ ಗಾವುಂಡ"[೩] ಎಂದು ಉಲ್ಲೇಖಿಸಿಲ್ಪಟ್ಟಿದೆ. ಜೋಗಗಾವುಂಡನು ರಾಜೂರಿನಲ್ಲಿರುವ ಜೋಗೇಶ್ವರ ದೇವರ ಪ್ರತಿಷ್ಠೆ ಮಾಡಿಸಿ, ಊರಿನಲ್ಲಿರುವ ೫೦೦ ಜನರನ್ನು ಕರೆಯಿಸಿ, ಈ ದೇವರಿಗೆ ನಂತರ ಗವರೇಶ್ವರ ನೆಂದು ಹೆಸರಿಟ್ಟನು. ಆಗ ಅರವತ್ತೊಕ್ಕಲು ಮುಖ್ಯವಾದ ಜೋಗಗಾವುಂಡನು ದಾನ ಬಿಟ್ಟ ವಿಷಯವನ್ನು ಈ ಶಾಸನ ಹೇಳುತ್ತದೆ.[೪]

ಇಲ್ಲಿ ಉಲ್ಲೇಖಿತನಾಗಿರುವ ಜೋಗಗಾವುಂಡನ ಬಗ್ಗೆ ಇದೇ ತಾಲೂಕಿನ ನೆರೆಯ ಮಲ್ಲಾಪೂರದ ಶಾಸನವೊಂದು ಬೆಳಕು ಚೆಲ್ಲುತ್ತದೆ. ಇದು ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲನ ಕಾಲದ್ದಾಗಿದೆ. ಅದು ಜೋಗಗಾವುಂಡನ ವಂಶಾವಳಿಯನ್ನು ಸವಿಸ್ತಾರವಾಗಿ ಹೇಳುತ್ತಾ, ಬೆಳ್ವಲ-೩೦೦ ರಲ್ಲಿನ ಅಗ್ರಹಾರ ಬೆಳವಣಿಗೆಯ-೮೪ ಮಹಾಜನರಲ್ಲಿ ಬರ್ಮಗಾವುಂಡನೆಂಬ ಸುಪುತ್ರನಿದ್ದನು. ಈತನಿಗೆ ದೇವಲೋಕದರತಿ, ರಂಭೆಗೆ ಸಮಾನವಾಗಿರುವ "ಹೊಲ್ಲ ಗಾವುಂಡಿ" ಎಂಬ ಹೆಂಡತಿ ಇದ್ದಳು. ಈರ್ವರ ಗರ್ಭಸಂಜಾತ

* 'ವಚನ', ರಾಜೂರ, ರೋಣ ತಾಲ್ಲೂಕು, ಗದಗ ಜಿಲ್ಲೆ.

ಕೇತಗಾವುಂಡ, ಈತನ ಹೆಂಡತಿ ಕಂಚಿಗಾವುಂಡಿ ಎಂಬವಳು ಸ್ತ್ರೀರತ್ನದಂತಿದ್ದಳು. ಈ ದಂಪತಿಗಳ ವರಪುತ್ರನೇ ಜೋಗಗಾವುಂಡ. ಈತನನ್ನು ಪರಮಾರ್ಥ, ಸತ್ಯವಂತನೆಂದು, ಈತನಿಗೆ ದೇವಿಗೌಡತಿ ಎಂಬ ಕುಲವಧು ದೊರೆತದ್ದು ಈತನ ಪುಣ್ಯವೆಂದು ಈ ಶಾಸನವು ಹೇಳುತ್ತದೆ.[೫] ಉಲ್ಲೇಖಿತ ಜೋಗಗಾವುಂಡನೆ ರಾಜೂರಿನ ಶಾಸನೋಕ್ತವಾದ ಜೋಗಗಾವುಂಡನಾಗಿದ್ದಾನೆ. ರಾಜೂರಲ್ಲಿ ಜೋಗ ಗಾವುಂಡನನ್ನು ಉಲ್ಲೇಖಿಸುವ ಈ ಶಾಸನದ ಕಾಲ ಕ್ರಿ.ಶ. ೧೧೫೩–೧೧೫೪, ಈ ವಂಶಾವಳಿವುಳ್ಳ ಜೋಗಗಾವುಂಡ ಮಲ್ಲಪೂರದ ಶಾಸನದ ಕಾಲ ಕ್ರಿ.ಶ. ೧೧೫೬, ಆ ಕಾರಣ ಇಲ್ಲಿ ಬರುವ ಈರ್ವರು ಒಬ್ಬರೇ ಆಗಿದ್ದಾನೆ. ಶಾಸನಗಳ ಆಧಾರದಿಂದ ಒಬ್ಬನೇ ಗಾವುಂಡನು ಹಲವು ಊರುಗಳನ್ನು ಆಳುತ್ತಿದ್ದನೆಂದು ಶಾಸನಗಳು ಹೇಳುತ್ತವೆ. ಜೋಗಗಾವುಡಂನ ಉದಾಹರಣೆ ಅದಕ್ಕೆ ಪುಷ್ಟಿ ನೀಡುತ್ತದೆ.

ಇದೇ ತಾಲೂಕಿನ ಯರೇಬೇಲೇರಿಯಲ್ಲಿರುವ ಶಾಸನದಲ್ಲಿ ಬರುವ ಚಾವುಂಡಗಾವುಂಡ, ಜೋಮಗಾವುಂಡ, ಜೋಗಗಾವುಂಡ ಮತ್ತು ಜಕ್ಕೆಯಪ್ಪೆ ಎಂಬ ನಾಲ್ಕು ಹೆಸರುಗಳಲ್ಲಿ ಬರುವ ಈ ಜೋಗಗಾವುಂಡನು[೬] ಮಾತ್ರ ಬೇರೆ ಇರಬೇಕು. ಈ ಶಾಸನದ ಕಾಲ ಕ್ರಿ.ಶ. ೧೦೪೪. (ಆದರೆ ರಾಜೂರು ಶಾಸನದಲ್ಲಿ ಬರುವ ಕಲ್ಯಾಣ ಚಾಲುಕ್ಯ ಅರಸ ಒಂದನೇ ಜಗದೇಕಮಲ್ಲನ ಆಳ್ವಿಕೆಯಲ್ಲಿ ಕಾಲ ಕ್ರಿ.ಶ. ೧೦೩೩ ಇದ್ದ ಕಾರಣ ಈ ಬಗ್ಗೆ ವಿದ್ವಾಂಸರು ಈ ರಾಜನ ಹೆಸರು ತಪ್ಪಾಗಿ ಅಲ್ಲಿ ಉಲ್ಲೇಖಿತಗೊಂಡಿದೆ ಎಂದು ಆತಂಕ ವ್ಯಕ್ತಪಡಿಸಿದ್ದಾರೆ. ಆದರೆ ಮಲ್ಲಾಪುರ ಶಾಸನೋಕ್ತ ಅರಸನ ಕಾಲ ಮಾತ್ರ ಸರಿಯಾಗಿದೆ. ಅದರಲ್ಲಿರುವ ಕಲ್ಯಾಣ ಚಾಲುಕ್ಯ ಅರಸ ತ್ರೈಲೋಕ್ಯಮಲ್ಲನ (೧೧೫೩) ಉಲ್ಲೇಖವಿದ್ದು ಅವನ ಆಳ್ವಿಕೆ ಕಾಲ ಸರಿ ಹೊಂದುತ್ತದೆ.) ಮಲ್ಲಾಪುರದಲ್ಲಿರುವ ಶಾಸನವನ್ನು "ಸವಡಿಯ ಶಾನಭೋಗ ಕಪ್ಪೆಯರ ಚಾವುಂಡ" ಬರೆದರೆ, ಅದನ್ನು ಕಲ್ಲಿನ ಮೇಲೆ "ಲಕ್ಕುಂಡಿ ಬಸವೋಜ"ನು[೭] ಕೆತ್ತಿದನು. ಮಲ್ಲಾಪುರ ಶಾಸನದ ಶೈಲಿ, ರಾಜೂರು ಗ್ರಾಮದ ಶಾಸನದ ಶೈಲಿ ಎರಡೂ ಒಂದೇ ರೀತಿ ಇರುವದರಿಂದ ಎರಡೂ ಗ್ರಾಮಗಳನ್ನು ಪಾಲಿಸುತ್ತಿದ್ದ ಗ್ರಾಮಾಧಿಪತಿಯಾದ ಈ ಜೋಗಗಾವುಂಡನೇ ಆಗಿದ್ದು ರಾಜೂರು ಗ್ರಾಮದ ಶಾಸನವನ್ನು ಅವರಿಂದಲೇ ಬರೆಯಿಸಿರಬಹುದು.

ಜೋಗಗಾವುಂಡನ ಉಲ್ಲೇಖ ರಾಜೂರಿನ ಕ್ರಿ.ಶ. ೧೧೫೩ರಲ್ಲಿನ ಶಾಸನದಲ್ಲಿದ್ದರೆ, ಇಲ್ಲಿಂದ ಐದು ಕಿ.ಮೀ. ದೂರದ ಕಾಲಕಾಲೇಶ್ವರ ಕ್ಷೇತ್ರದ ಶಾಸನದಲ್ಲಿಯೂ ಕೂಡಾ ರಾಜೂರ ಗಾವುಂಡರ ಬಗ್ಗೆ ಉಲ್ಲೇಖವಿದೆ. ಯಾದವ ಸಿಂಘಣನ ಕಾಲದ (೧೨೨೦) ಯಲಬುರ್ಗಿಯ ಸಿಂದ ಅರಸರ ಆಳ್ವಿಕೆಯಲ್ಲಿ "ರಾಜೂರ ಮುಡಿಯರ ಕೇತ ಗಾವುಂಡನ ಸುಪುತ್ರ, ಕುಲದೀಪಕ, ಸಮಸ್ತ ಗುಣಸಪನ್ನರಪ್ಪ ಸಾಯಿಮಗಾವುಂಡ ಶ್ರೀಕಳಕೇಶ್ವರದೇವರ ಸತ್ರಕ್ಕೆ....."[೮] ಎಂದು ಶಾಸನ ಹೇಳುತ್ತದೆ. ಈ ಹಿನ್ನೆಲೆಯಲ್ಲಿ ಜೋಗಗಾವುಂಡನ ನಂತರ ರಾಜೂರು ಗ್ರಾಮದ ಅಧಿಪತಿಯಾಗಿ ಸಾಯಿಮ ಗಾವುಂಡ ಮತ್ತು ಅವನ ಮಗ ಕೇತಗಾವುಂಡರಿದ್ದರು. ಈ ಸಾಯಿಮುಗಾವುಂಡನು ಕಾಲಕಾಲೇಶ್ವರನಿಗೆ ಉಗುರ ಮೂನ್ನುರ್ಬರು, ಐನೂರುನಾಲ್ವರು, ಸಾಸಿರ್ಬುರುಂಗಳ ಸಮ್ಮುಖದಲ್ಲಿ ದತ್ತಿ ನೀಡಿದರೆಂದು ಶಾಸನವು ನಿರೂಪಿಸುತ್ತದೆ. ಇದರಲ್ಲಿಯೇ "ಬೆಂಡಿಯಜೋಗ"[೯] ಎಂಬವನ ಉಲ್ಲೇಖವಿದೆ. ಕೆಳಭಾಗದಲ್ಲಿ "ಬೊಮ್ಮಗೌಡ ಮತ್ತು ಅವನ ಮಗ...."[೧೦] ಎಂದು ಇದ್ದು, ಶಾಸನದ ಮುಂದಿನ ಭಾಗ ತ್ರುಟಿತವಾಗಿದೆ. ಇದು ವಿಜಯನಗರದ ಅರಸು ಎರಡನೆ ಹರಿಹರನ ಕಾಲಕ್ಕೆ ಸೇರಿದೆ. ಆದರೆ ಇಲ್ಲಿ ಯಾವ ಊರಿನ ಹೆಸರನ್ನು ಪ್ರಸ್ತಾಪಿಸ ಲಾಗಿಲ್ಲ. ಈ ಗ್ರಾಮಾಧಿಪತಿಗಳು ಕಲ್ಯಾಣಚಾಲುಕ್ಯರ ಕಾಲದಲ್ಲಿ ಗಾವುಂಡರಾಗಿದ್ದು, ವಿಜಯನಗರ ಅರಸರ ಕಾಲಕ್ಕೆ ಗೌಡರಾದ ರೆಂದು ಇದರಿಂದ ತಿಳಿದುಬರುತ್ತದೆ.

## ಆಧಾರಸೂಚಿ


೧. ಡಾ. ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, (೧೯೬೬), ಪುಟ ೩೪೧–೪೨.
೨. ಅದೇ ಪುಟ ೩೫೮–೫೯.
೩. SII XV-43, SII XV i 69, ರಾಜೂರ ಶಾಸನ.
೪. **ಧಾರವಾಡ ಜಿಲ್ಲಾ ಗ್ಯಾಸೆಟಿಯರ್**, (೧೯೯೫) (ಸಂ.) ಡಾ. ಸೂರ್ಯನಾಥ ಕಾಮತ್ (ಪುಟ ೧೦೦೧).
೫. SII XV-53, ಮಲ್ಲಾಪೂರ ಶಾಸನ.
೬ ಅದೇ
೭. SII XI-ii-120, ಯರೆಬೇಲೇರಿ ಶಾಸನ.
೮. SII XV-165, ಕಾಲಕಾಲೇಶ್ವರ ಶಾಸನ.
೯. ಅದೇ
೧೦. SII XV-245, ಕಾಲಕಾಲೇಶ್ವರ ಶಾಸನ.

ಡಾ. ಎಸ್.ಎಂ. ನಾಗಭೂಷಣ*

# ಕೊಪ್ಪಳ ಜಿಲ್ಲೆಯ ಶಾಸನಕವಿಗಳು ಹಾಗು ರೂವಾರಿಗಳು

ಕನ್ನಡ ಭಾಷೆ ಹಾಗು ಲಿಪಿಯ ಸಹಸ್ರಾರು ಶಾಸನಗಳ ಸಮಗ್ರ ಅಧ್ಯಯನ ಕುರಿತಂತೆ ಅನೇಕ ಶಾಸನತಜ್ಞರು ಯೋಚಿಸುತ್ತಿರುವ ಸಂದರ್ಭದಲ್ಲಿ ಅದರ ಒಂದು ಭಾಗವಾಗಿ "ಶಾಸನ ಕವಿಗಳು ಹಾಗು ರೂವಾರಿಗಳು" ವಿಷಯದಲ್ಲಿ ಸಮಗ್ರ ಕರ್ನಾಟಕದ ಶಾಸನಗಳನ್ನು ಅಂತ ಅಂತವಾಗಿ ಜಿಲ್ಲಾವಾರು ಶೋಧನಾ ಕಾರ್ಯವನ್ನು ಕೈ ಗೊಂಡು, ಈಗಾಗಲೆ ಬೆಳಗಾವಿ, ಬಳ್ಳಾರಿ, ಚಿಕ್ಕಮಗಳೂರು ಜಿಲ್ಲೆಗಳಿಗೆ ಸಂಬಂಧಿಸಿದ ಲೇಖನಗಳನ್ನು ಇತಿಹಾಸ ದರ್ಶನ ಸಂ. ೧೭,೧೮,೨೦,೨೧ ರಲ್ಲಿ ಪ್ರಕಟಿಸಲಾಗಿದೆ. ಇದೀಗ ಕೊಪ್ಪಳ ಜಿಲ್ಲೆಗೆ ಸಂಬಂಧಿಸಿದ "ಶಾಸನಗಳಲ್ಲಿ ಶಾಸನಕವಿಗಳು ಹಾಗು ರೂವಾರಿಗಳು" ಎಂಬ ಲೇಖನವನ್ನು ಇಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ.

ಒಂದು ಶಿಲಾಶಾಸನ ಅಥವಾ ತಾಮ್ರಶಾಸನ ನಿರ್ಮಾಣಗೊಳ್ಳಲು ಸರ್ವೇಸಾಮನ್ಯವಾಗಿ ಶಾಸನ ಕವಿ, ಬರಹಗಾರ, ಹಾಗು ರೂವಾರಿಗಳು ಶ್ರಮಿಸಬೇಕಾಗುತ್ತದೆ. ಪಾಠವನ್ನು ಕವಿ ಅಥವ ಪಂಡಿತನು ರಚಿಸಿ, ಹೇಳಿದರೆ, ಮುದ್ದಾದ ಲಿಪಿಯಲ್ಲಿ ಬರೆದವ ಬರಹಗಾರನಾಗುತ್ತಾನೆ. ಶಿಲೆಯ ಮೇಲೆ ಕೆತ್ತುವವನು ಶಿಲ್ಪಿ, ರೂವಾರಿ ಅಥವಾ ಸೂತ್ರಧಾರನೆನ್ನುತ್ತಾರೆ. ಹೀಗೆ ಒಂದು ಶಾಸನ ತಯಾರಾಗಲು ಕವಿ, ಬರಹಗಾರ, ಹಾಗು ಶಿಲ್ಪಿಗಳು ಶ್ರಮಿಸಬೇಕಾಗುತ್ತದೆ. ಆದರೆ ಎಲ್ಲಾ ಶಾಸನಗಳಲ್ಲಿ ಈ ಉಲ್ಲೇಖಗಳು ಇರಲೇಬೇಕೆಂದಿಲ್ಲ. ಎಲ್ಲೋ ಕೆಲವು ಶಾಸನಗಳಲ್ಲಿ ಕವಿ ಅಥವಾ ಬರಹಗಾರ ಅಥವಾ ರೂವಾರಿಯ ಹೆಸರುಗಳು ಅಪರೂಪವಾಗಿ ಹೆಸರಿಸಿರುತ್ತಾರೆ. ಕೊಪ್ಪಳ ಜಿಲ್ಲೆಯ ಸುಮಾರು ಶಾಸನಗಳಲ್ಲಿ ರೂವಾರಿಗಳ ಹೆಸರುಗಳು ಸಿಗುತ್ತವೆ. ಅಪರೂಪವಾಗಿ ಶಾಸನಕವಿಗಳ ಉಲ್ಲೇಖಗಳು ಲಭ್ಯವಾಗುತ್ತವೆ.

ಕರ್ನಾಟಕದಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳ ಸಂಖ್ಯೆ ಸ್ವಲ್ಪ ಕಡಿಮೆ ಎಂದೇ ಹೇಳಬಹುದು. ಕಾರಣ ಈ ಜಿಲ್ಲೆಗೆ ಸಂಬಂಧಿಸಿದಂತೆ ಶೋಧನಾಕಾರ್ಯದ ಕೊರತೆ ಇತ್ತೀಚೆಗೆ ಎದ್ದು ಕಾಣುತ್ತದೆ. ಡಾ.ಚನ್ನಬಸಯ್ಯ ಹಿರೇಮಠ ಇತ್ತೀಚೆಗೆ ಕೆಲವು ಶಾಸನಗಳನ್ನು ಪ್ರಕಟಿಸಿದ್ದಾರೆ. ಅಲ್ಲದೆ ಡಿ.ಜೆ. ಬೀಮ್ಸನ್ ರಾವ್, ಪ್ರೊ. ಜಿ.ವಿ. ವೀರಭದ್ರಪ್ಪ, ಬಿ.ಸಿ.ಪಾಟೀಲ್, ಮುಂತಾದವರು ಇದುವರೆಗೆ ಶಾಸನ ಸಾಹಿತ್ಯದಲ್ಲಿ ಕೆಲಸ ಮಾಡಿದ್ದಾರೆ. ಕೆಲವರು ಶಾಸನಗಳನ್ನು ಶೋಧಿಸಿ, ಪ್ರಕಟಿಸಿದ್ದಾರೆ. ಆ ಎಲ್ಲಾ ಶಾಸನಗಳನ್ನು ಸೇರಿಸಿ ಹಂಪಿ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ –೨ ರಲ್ಲಿ ಪ್ರಕಟಿಸಿದ್ದಾರೆ. ಆದರೂ ಶಾಸನಗಳ ಸಂಖ್ಯೆ ಕಡಿಮೆ ಎಂದೇ ಹೇಳಬಹುದು. ಇಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳ ಕಾಲಮಾನವನ್ನು ಅನುಸರಿಸಿ ಕಾಲನುಕ್ರಮವಾಗಿ ಲಭ್ಯವಿರುವ ಉಲ್ಲೇಖಗಳನ್ನು ಗುರುತಿಸ ಲಾಗಿದೆ.

ಕೊಪ್ಪಳದ ಶಾಸನ ಕ್ರಿ.ಶ. ೯೬೭ ನೇ ಶಾಸನವನ್ನು "ಇನ್ದಯ್ಯ" [೧] ಬರೆದ, ಇದು ಕೊಪ್ಪಳ ಜಿಲ್ಲೆಯ ಪ್ರಥಮ ಶಾಸನ ಬರಹಗಾರನನ್ನು ಉಲ್ಲೇಖಿಸಿದೆ. ಇದರ ನಂತರ ಬಳಗೇರಿ ಶಾಸನ ಕ್ರಿ.ಶ. ೧೦೦೨ ಶಾಸನದಲ್ಲಿ "ಸಾಸಿರ್ವ್ವರು ಹೇಳೆ ಮೋಜಾಳಿ ಸೇಷಯ್ಯನ ಲಿಖಿತಂ ಮಂಗಳಮಹಾಶ್ರೀ" [೨] ಈ ಶಾಸನದಲ್ಲಿ ಕವಿಗಳು ಹೇಳಿದ್ದನ್ನು ಬರಹಗಾರನಾದ ಶೇಷಯ್ಯನೆಂಬವನು ಬರೆದನೆಂದು ತಿಳಿದು ಬರುತ್ತದೆ. ಕುಕನೂರು ಶಾಸನ ಕ್ರಿ.ಶ.೧೦೦೫ ಈಶ್ವರ ಶೆಟ್ಟಿ ಬರೆಸಿದ [೩] ಕೊಪ್ಪಳದ ಶಾಸನ ೧೦೧೯ ನೇ ನಿಶಿಧಿ ಶಾಸನದಲ್ಲಿ ರೂವಾರಿ ಪಿಟ್ಟೋಜನ ಲಿಖಿತಂ [೪] ಕೊಪ್ಪಳದ ಕ್ರಿ.ಶ. ೧೦೨೩ ಶಾಸನವನ್ನು ಶ್ರೀಮನ್ ನರೇಂದ್ರ ಸೇನ ಪಂಡಿತನ ಶಿಷ್ಯ ಸಮಂತ ಭದ್ರ ಬಯಾರ [೫] ಶಾಸನ ಕವಿಯಾಗಿದ್ದಾನೆ. ಕೊಪ್ಪಳದ ೧೦೨೮ರ ಶಾಸನ ರೂವಾರಿ ಪ್ಪಿಟೋಜನ ಲಿಖಿತ [೬] ಎಂದು ಉಲ್ಲೇಖಿಸಿದೆ. ಕೊಪ್ಪಳದ ಮತ್ತೊಂದು ಶಾಸನ ಕ್ರಿ.ಶ. ೧೦೩೧ ರ ಶಾಸನದಲ್ಲಿ ಪುನಃ ಪಿಟ್ಟೋಜನ ಲಿಖಿತಂ ಮಂಗಳಂ॥ [೭] ಅಳವಂಡಿ ಶಾಸನ ೧೦೬೧ ಕರುವರ ಬರ್ಮ್ಮಂ ಬರೆಯಿಸಿದಂ ಬರೆದ ಮಲ್ಲನೀ ಶಾಸನಮಂ॥ [೮] ಎಂಬಲ್ಲಿ ಶಾಸನ ಬರಹಗಾರನ್ನು ಉಲ್ಲೇಖಿಸಿದೆ. ಕುಕನೂರು ೧೧ ನೇ ಶಾತಮಾನದ ಶಾಸನವನ್ನು " ಬರೆದಂ ಚಾವೋಜಂ ಕಣ್ಡರಿಸಿದ" [೯] ಅದೇ ಊರು ಕುಕನೂರು ಕ್ರಿ.ಶ. ೧೧೭೦ರ ಶಿಲಾಶಾಸನ ರಚಿಸಿದ ಕವಿ, ಬರೆದ ಬರಹಾಗಾರ ಮತ್ತು

* ಧಾರವಾಡ.

ಕಲ್ಲಿನಲ್ಲಿ ಕೆತ್ತಿದ ಶಿಲ್ಪಿಯ ಹೆಸರು ಹೀಗೆ ಮೂವರ ಹೆಸರನ್ನು ಉಲ್ಲೇಖಿಸಿದ ಅಪರೂಪದ ಶಿಲಾಶಾಸನವಾಗಿದೆ. ಈ ಶಾಸನವನ್ನು "ಪೋಗಳಲಗಸ್ತ್ಯೆ ರ ಕುಳತಿಳಕಂ ನೆಗಳ್ದ ಸುಕವಿ ಪರಮಾ........ಸುತಂ ನಲವಿಂ ಪೇಳ್ದ ಸಜ್ಜನತಿಲಕ ನಿನಲು ಮೆಚ್ಚನಾವನೀ ಶಾಸನಮಂ॥ ವರ ಕಾಶ್ಯಪ ಗೋತ್ರದ ದೇವರಾಜನಂಗನೆಯ ಮಾಳಿಯಕ್ಕನ ತನಯಂ ಬ (ರೆ)ದನಿದಂ ಶ್ರೀ ನಗೆವಡೆಯರ ತಿಲಕಂ ಗಣಕಂಡನಮ ಶಿವದೇವ ॥ಚನ್ನೋಜನ ಮಗ ಮದಾಮೋಜಂ ಬೆಸೆಕೆಯ್ದು ಬರೆದ ಶಾಸನಮಂ॥[೧೦] ಕವಲೂರು ಶಸನ ಕ್ರಿ.ಶ. ೧೧೭೭, "ಯೇ ಶಾಸನಮಂ ವಿರಚಿಸಿದಂ............. ಗಮ ಸೂ ರಿ ಚಾತುರ್ಭಾಷಾ ಚಕ್ರವರ್ತಿಕವಿ ಕಂದರ್ಪ್ಪಮ ॥"[೧೧]. ಇಲ್ಲಿ ಬಹುಶಃ ಕವಿ ಕಂದರ್ಪ ಬರೆದಿರಬಹುದು. ಕುಕನೂರು ಕ್ರಿ.ಶ. ೧೧೭೮ ರ ಶಾಸನವನ್ನು ರಚಿಸಿದ "ಗೋಮ ಕವಿ"[೧೨]ಗೆ ಭೂ ದತ್ತಿಯನ್ನು ಕೊಟ್ಟ ಉಲ್ಲೇಖವಿದೆ.. ಇಟಗಿ ತಾಮ್ರ ಶಾಸನ ೧೧೮೩ ರಲ್ಲಿ ಕವಿ ಹಾಗು ಬರಹಗಾರನ ನಾಮವನ್ನು ಉಲ್ಲೇಖಿಸಿದೆ. ಈ ತಾಮ್ರ ಶಾಸನದ, ೮೩, ೮೪, ನೇ ಸಾಲುಗಳಲ್ಲಿ ॥ ಲಿಖಿತಮಿದಂ ಪಂಡುತ ಲಕ್ಷ್ಮೀಧರೇಣ ॥ ಉತ್ಕೀರ್ಣಂ ರಾಜ ವಿಜ್ಞಾನಾ ಪಂದಯೇನ॥ ಮಂಗಳ ಮಹಾಶ್ರೀ॥[೧೩] ಹ್ಯಾಟಿ ಕೈಮರದ ಬಳಿಯಲ್ಲಿ ಒಂದು ನಂದಿ ವಿಗ್ರಹದ ಪೀಠದಲ್ಲಿ ೧೨ನೇ ಶತಮಾನದ ಲಿಪಿಯುಳ್ಳ ಶಾಸನದಲ್ಲಿ "ಕಲಿಯುಗ ವಿಶ್ವಕರ್ಮ ಶ್ರೀವರ್ಷಗಿರಿ ಓಝು ಮತ್ತು ಮಗ ಬಲ್ಲಮನುಂ ಗೆಯ್ದರ್"[೧೪] ಇಲ್ಲಿ ಬಲ್ಲಮ ರೂವಾರಿಯನ್ನು ಉಲ್ಲೇಖಿಸಿದೆ. ಕುಕನೂರು ತಾಮ್ರಶಾಸನ ಕ್ರಿ.ಶ. ೧೨ ನೇ ಶತಮಾನದ ಶಾಸನದಲ್ಲಿ "ರಂಗಯ್ಯನು ಬರೆಸಿದ – ರೂವಾರಿ ಲೋವಿಯಾದಾಸನ ಮಗ ಕಣುಗನ ಲಿಖಿತಂ"[೧೫]. ಪುರ ೧೨ನೇ ಶತಮಾನದ ಶಾಸನದಲ್ಲಿ ವಿಶೇಷವಾಗಿ ರೂವಾರಿಗಳಿಗೆ ಭೂದಾನ ನೀಡಿದ ಉಲ್ಲೇಖ ವಿದೆ. ಈ ಶಾಸನದ ೨೯ ರಿಂದ ೩೧ ನೇ ಸಾಲುಗಳಲ್ಲಿ ಶಾಸನ ಬರೆದ ರೂವಾರಿಯ ಉಲ್ಲೇಖ ಇಂತಿದೆ, ॥ ಇಂತಿ ಧರ್ಮ ಶಾಸನಂ ಭೂ ಮಂಡಳ ಧರೆದಿವಂ ಚಂದ್ರಾರ್ಕರುಳ್ಳಿನಂ ಸ್ಥಿರಾಯ ಧರ್ಮ್ಮವೆಂದು ವರೆದಂ॥ ಸೇನಭೋವ ಬಮಮ್ಮರಸಂ[೧೬] ಇವನ ಜೊತೆಗಿದ್ದ ಇಬ್ಬರು ರೂವಾರಿಗಳಾದ ಶಿಲ್ಪಿ ಕಾಚಾರ್ಯ್ಯಂ ಕಾಳೋಜಂ ಹಾಗು ಕಲ್ಲೋಜಂಗೆ ಭೂದಾನ ಮಾಡಿದ ಉಲ್ಲೇಖವಿದೆ. ಯಲಬುರ್ಗದ ೧೩ನೇ ಶತಮಾನದ ಶಾಸನದಲ್ಲಿ, ಈ ಶಾಸನ ರಚಿಸಿದ ರೂವಾರಿಯ ಹೆಸರನ್ನು ಶಾಸನದ ೬ನೇ ಸಾಲಿನಲ್ಲಿ ಉಲ್ಲೇಖ ಇಂತಿದೆ ॥ಧರೆ ರೂವಾರಿಚಕ್ರವರ್ತಿ ಪಾಲೋಜ ಶ್ರೀ ಶ್ರೀ ಶ್ರೀ ॥[೧೭]. ಕಾಮಟ ದುರ್ಗದ ಕ್ರಿ.ಶ ೧೩೧೫ ನೇ ಜೈನ ನಿಶಿಧಿ ಶಾಸನದಲ್ಲಿ ಬರೆದಾತ ಮೈದುನ ಮಾದಿ ಹೆಗ್ಗಡೆ ಮಂಗಳ ಶ್ರೀ ॥[೧೮]. ಕುಕನೂರು ಶಾಸನ ಕ್ರಿ.ಶ. ೧೩೯೭ ರ ಶಾಸನವನ್ನು ಕೆತ್ತಿದ ರೂವಾರಿ ಮುದ್ದಣಾ ಚಾರ್ಯ ಲಿಖಿತಂ ॥[೧೯] ಕುಕನೂರು ಕ್ರಿ.ಶ. ೧೪೫೨ ರ ಶಾಸನದಲ್ಲಿ ಅಲ್ಲಿಯ ದೇವಾಲಯ ತುರುಕರ ದಾಳಿಯಿಂದ ಹಾಳಾಗಿತ್ತು. ಹಾಳಾಗಿದ್ದ ದೇವಾಲಯದ ಬಾಗಿಲು ತೋರಣ ಮಂಟಪವನ್ನು ಪನಃ ಕೆತ್ತನೆ ಮಾಡಿ ಕಟ್ಟಿದ ರೂವಾರಿಗೆ ಭೂದಾನ ನೀಡಿದ ಉಲ್ಲೇಖ ಇಂತಿದೆ : ಸಂಗನಾಳ ಬಡಿಗ ಬಸವೋಜನ ಮಗ ಗುರೋಜಾ ಕಲ್ಲುಕುಟಿಗತನದ॥[೨೦] ಗೋಡೆಬಾಳದ ಕ್ರಿ.ಶ. ೧೫೧೨ ನೇ ವಿಜಯನಗರ ಶ್ರೀ ಕೃಷ್ಣ ದೇವರಾಯನ ಕಾಲದ ಶಾಸನದಲ್ಲಿ ಗೋಡೆಬಾಳ ಅಗ್ರಹಾರವನ್ನು ಪ್ರಭಾಕರ ಎಂಬ ಬ್ರಾಮ್ಮಣನಿಗೆ ದತ್ತಿ ನೀಡಿದ ಉಲ್ಲೇಖ, ಬರೆದ ರೂವಾರಿಯ ಹೆಸರನ್ನು ಕೊನೆಗೆ ಉಲ್ಲೇಖಿಸಿದೆ ॥ ಯಿ ಶಾಸನವ ಬರೆದ ಕೊಪಣದ ಕಂಮಾರೋಜನ ಮಗ ರಾಮೋಜ ಶ್ರೀ ॥[೨೧]. ಹೀಗೆ ಕೊಪ್ಪಳ ಜಿಲ್ಲೆಯ ಶಾಸನಗಳಲ್ಲಿ ಬಹಳ ವಿರಳವಾಗಿ ಆರಂಭ ಕಾಲದಿಂದ ಇದುವರೆಗೆ ಪ್ರಕಟಿತ ಶಾಸನಗಳನ್ನು ಆಧರಿಸಿ ಶೋಧಿಸಲಾಗಿದೆ. ಮುಂದೆ ಕ್ರಮವಾಗಿ ಶಾಸನ, ಗ್ರಾಮ, ಕಾಲ, ಶಾಸನಗಳ ಕವಿ, ಲಿಪಿಗಾರ, ರೂವಾರಿಗಳ ಉಲ್ಲೇಖಗಳು, ಮತ್ತು ಶಾಸನ ಪ್ರಕಟನೆಯ ಉಲ್ಲೇಖಗಳ ಪಟ್ಟಿಯನ್ನು ನೀಡಲಾಗಿದೆ.

## ಕೊಪ್ಪಳ ಜಿಲ್ಲೆಯ ಶಾಸನ ಕವಿಗಳು – ರೂವಾರಿಗಳು

| ಅ.ಸಂ. | ಶಾಸನಗಳು, ತಾಮ್ರ ಶಾಸನ ಗ್ರಾಮ ಸ್ಥಳ | ತಾಲೂಕು | ಕಾಲ ಕ್ರಿ.ಶ. | ಶಾಸನ ಕವಿ | ಬರಹಗಾರ | ರೂವಾರಿಗಳು, ಶಿಲ್ಪಿ | ಪ್ರಕಟಣೆ |
|---|---|---|---|---|---|---|---|
| ೧. | ಕೊಪ್ಪಳ | ಕೊಪ್ಪಳ | ೯೯೭ | -- | ಇಂದಯ್ಯ | -- | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ನಂ. ೯೦, ಪು. ೭೭ |
| ೨. | ಬಳಗೇರಿ | ಎಲಬುರ್ಗ | ೧೦೦೨ | -- | ಸಾಸೀರ್ವರು ಹೇಳೆ ಮೋಜಾಳಿ ಸೇಷಯ್ಯನ ಲಿಖಿತಂ ಮಂಗಳ ಮಹಾ ಶ್ರೀ | | ಕ.ವಿ.ಶಾ.ಸಂ.೨ ನಂ ೩೭, ಪು. ೧೯೭ |

| ೩. | ಕುಕನೂರು | " | ೧೦೦೫ | -- | ಈಶ್ವರ ಸೆಟ್ಟಿ ಬರಸಿದ | -- | ಕ.ವಿ.ಶಾ.ಸಂ, ೨ ನಂ ೫೦, ಪು. ೨೨೪ |
|---|---|---|---|---|---|---|---|
| ೪. | ಕೊಪ್ಪಳ | ಕೊಪ್ಪಳ | ೧೦೧೯ | -- | | ಪಿಟ್ಟೋಜನ ಲಿಖಿತಂ | ಕ.ವಿ.ಶಾ.ಸಂ,೨ ನಂ ೯೬, ಪು.೮೫ |
| ೫. | ಕೊಪ್ಪಳ | ಕೊಪ್ಪಳ | ೧೦೨೩ | ಶ್ರೀ ಮನ್ ನರೇಂದ್ರ ಸೇನ ಪಂಡಿತನ ಶಿಷ್ಯ ಸಮನ್ತ ಭದ್ರ ಭರೂರ | -- | | ಕ.ಪಿ.ಶಾ.ಸಂ. ೨, ನಂ. ೯೪, ಪು. ೮೧. |
| ೬. | ಕೊಪ್ಪಳ | ಕೊಪ್ಪಳ | ೧೦೨೮ | -- | -- | ಪಿಟ್ಟೋಜನ ಲಿಖಿತಂ | ಕ.ವಿ.ಶಾ.ಸಂ. ೨, ನಂ. ೯೭, ಪು. ೮೬ |
| ೭. | ಕೊಪ್ಪಳ | ಕೊಪ್ಪಳ | ೧೦೩೧ | -- | -- | ಪಿಟ್ಟೋಜನ ಲಿಖಿತಂ ಮಂಗಳಂ॥ | ಕ.ವಿ.ಶಾ.ಸಂ. ೨, ನಂ. ೧೨೧, ಪು. ೧೧೮ |
| ೮. | ಅಳವಂಡಿ | ಕೊಪ್ಪಳ | ೧೦೬೧ | -- | ಬರೆದ ಮಲ್ಲನೀ ಶಾಸನಮಂ | -- | ಕ.ವಿ.ಶಾ.ಸಂ. ೨, ನಂ. ೬, ಪು. ೧೪. |
| ೯. | ಕುಕನೂರು | ಯಲಬುರ್ಗ | ೧೧ | -- | -- | ರೋಣದ ಚಾವೋಜ ಕಂಣ್ಡರಿಸಿದ | ಕ.ವಿ.ಶಾ.ಸಂ. ೨, ನಂ. ೪೪, ಪು. ೨೧೦. |
| ೧೦. | ಕುಕನೂರು | ಯಲಬುರ್ಗ | ೧೧೭೦ | ಅಗಸ್ತ್ಯ ಗೋತ್ರದ ಸಜನ ತಿಲಕ ಹೆಳೆ | ಶಿವದೇವ ಬರೆದ | ಚಸ್ಣೋಜನ ಮಗ ದಾವೋಜ ಕೆತ್ತಿದ | ಕ.ವಿ.ಶಾ.ಸಂ. ೨, ನಂ. ೪೧, ಪು. ೨೧೪ |
| ೧೧. | ಕವಲೂರು | ಕೊಪ್ಪಳ | ೧೧೭೭ | ಚಾತ್ರುಭಾಷಾ | ಕಂದರ್ಪ ಬರೆದ | -- | ಕ.ವಿ.ಶಾ.ಸಂ. ೨, ನಂ. ೩, ಪು. ೯ |
| ೧೨. | ಕುಕನೂರು | ಯಲಬುರ್ಗ | ೧೧೭೮ | ಗೋಮ ಕವಿ | ಶ್ರೀಕರಣ ವೆರ್ಗ್ಗಡೆ | -- | ಕ.ವಿ.ಶಾ.ಸಂ. ೨, ನಂ. ೫೨, ಪು. ೨೩೦ |
| ೧೩. | ಇಟಗಿ (ತಾಮ್ರ ಶಾಸನ) | ಯಲಬುರ್ಗ | ೧೧೮೩ | ಆದಿತ್ಯ ದೇವ ಪಂಡಿತ ಲಕ್ಷೀಧರ | -- | ಉತ್ಕರ್ಣಂ ರಾಜವಿಜ್ಞನಿನಾ ಪಂರಯೋನ ಪಂದಯ್ಯ | ಕ.ವಿ.ಶಾ.ಸಂ. ೨, ನಂ ೬೯, ಪು. ೨೭೨ ನಾ.ಶಾ ಪುಟ ೧೯೨ |
| ೧೪. | ಹ್ಯಾಟಿ (ಕೈಮರದ ಬಳಿ) | ಕೊಪ್ಪಳ | ೧೨. ಶ.ಮಾನ. | -- | -- | (ನಂದಿ ಪೀಟ ದಲ್ಲಿನ ಶಾಸನ) ವಿಶ್ವಕರ್ಮ ಶ್ರೀವಷ್ಣರಿಓರು ಮತ್ತು ಅವನ ಮಗ ಬಲ್ಲವ ಕಂಣ್ಡರಿಸಿದ್ದಾರೆ. | ಕ.ವಿ.ಶಾ.ಸಂ. ೨, ೧೩೬, ಪು. ೧೩೩ |
| ೧೫. | ಕುಕನೂರು (ತಾಮ್ರ ಶಾಸನ) | ಯಲಬುರ್ಗ | ೧೨. ಶ.ಮಾ. | ಸೂರ ಗಣದ ಗಂಗಯ್ಯ ಬರೆಸಿದ | -- | ಲೋವಿಯ ದಾಸನ ಮಗಂ ಕಣುಗನ ಲಿಖಿತಂ | ಕ.ವಿ.ಶಾ.ಸಂ. ೨, ನಂ. ೫೬, ಪು. ೨೫೧ |
| ೧೬. | ಪುರ | ಕುಷ್ಟಗಿ | ೧೨. ಶ.ಮಾ. | -- | -- | ಈ ಶಾಸನಂ ಬರೆದವನು ಬಂಮರಸ (ಈ ಶಾಸನ ಬರೆದ | ಕ.ವಿ.ಶಾ.ಸಂ. ೨, ನಂ. ೧೩, ಪು. ೨೮೮ |

| | | | | | | | |
|---|---|---|---|---|---|---|---|
| | | | | | | ರೂವಾರಿಗಳಿಗೆ ಭೂದತ್ತಿ ನೀಡಿದ ಉಲ್ಲೇಖವಿದೆ. | |
| ೧೭. | ಯಲಬುರ್ಗ | ಯಲಬುರ್ಗ | ೧೩. ಶ.ಮಾ. | -- | -- | ಧರೆ ರೂವಾರಿ ಚಕ್ರವರ್ತಿ ಪಾಲೇಜ ಶ್ರೀ. ಶ್ರೀ. ಶ್ರೀ | ಕ.ವಿ.ಶಾ.ಸಂ. ೨, ನಂ.೬, ಪು. ೧೬೩ |
| ೧೮. | ಕಮ್ಮಟದರ್ಗ | ಕೊಪ್ಪಳ | ೧೩೧೫ | -- | ಬೀರಗಲ್ಲು ಬರೆದಾತ ಮೈದುನ ಮಾದಿ ಹೆಗ್ಗಡೆ ಮಂಗಳ ಶ್ರೀ | -- | ಕ.ವಿ.ಶಾ.ಸಂ. ೨, ನಂ.೧೬೪, ಪು. ೧೫೮ |
| ೧೯. | ಕುಕನೂರು (ತಾಮ್ರಶಾಸನ) | ಯಲಬುರ್ಗ | ೧೪೯೭ | -- | -- | ಶ್ರೀ ಮದ್ದಣಾ ಚಾರ್ಯಲಿಖಿತಂ | ಕ.ವಿ.ಶಾ.ಸಂ. ೨, ನಂ.೪೮, ಪು. ೨೨೧ |
| ೨೦. | ಕುಕನೂರು | ಯಲಬುರ್ಗ | ೧೪೫೨ | -- | -- | ಸಂಗನಾಳದ ಬಡಿಗ ಬಸವೋ ಮಗ ಗುರೋಜಾ ಕಲ್ಲುಕುಟಿಗ ತನ್ | ಕ.ವಿ.ಶಾ.ಸಂ. ೨, ನಂ.೪೯, ಪು. ೨೨೨ |
| ೨೧. | ಗೋಂಡಬಾಳು | ಕೊಪ್ಪಳ | ಕ್ರಿ.ಶ. ೧೫೧೨ | -- | -- | ಕಮಾ ರೋಜನ ಮಗ ರಾಮೋಜ ಶ್ರೀ | ಕ.ವಿ.ಶಾ.ಸಂ. ೨, ನಂ.೧೩೫, ಪು. ೧೩೩ |

ಡಾ. ಡಿ.ಎಂ. ನಾಗರಾಜು*

# ಮಂಡ್ಯ ಜಿಲ್ಲೆಯ ಶಾಸನಗಳ ಕೊಡುಗೆ

ಮಂಡ್ಯ ಜಿಲ್ಲೆಯ ಇತಿಹಾಸ ಸಂಸ್ಕೃತಿ ಶ್ರೀಮಂತವಾದುದು. ಕರ್ನಾಟಕ ರಾಜ್ಯದಲ್ಲಿ ಸಕ್ಕರೆನಾಡು, ಬತ್ತದ ಕಣಜವೆಂದೇ ಪ್ರಸಿದ್ಧಿಯಾಗಿರುವ ಕಾವೇರಿ ಮಾತೆಯ ಮಡಿಲಿನಿಂದ ಕಾವೇರಿಯ ನದಿಯಿಂದ ಕೃಷ್ಣರಾಜಸಾಗರ ಅಣೆಕಟ್ಟು ಹೊಂದಿರುವ ಈ ಮಂಡ್ಯ ಜಿಲ್ಲೆ ಹಚ್ಚಹಸುರಿನ ನಾಡು ಎಂದರೆ ತಪ್ಪಾಗುವುದಿಲ್ಲ. ಈ ಜಿಲ್ಲೆ ರಾಜಕೀಯವಾಗಿ, ಸಾಮಾಜಿಕವಾಗಿ ಧಾರ್ಮಿಕ ಹಾಗೂ ಆರ್ಥಿಕ ಪ್ರಗತಿಗೆ ತನ್ನ ಮಹತ್ತರ ಕೊಡುಗೆ ನೀಡಿದೆ. ಹಾಗೂ ಸಾಹಿತ್ಯ ಸಂಸ್ಕೃತಿಗಳ ಪ್ರದೇಶ ಕೂಡ ಎನ್ನುವುದು ಇಲ್ಲಿನ ಶಾಸನಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಮಂಡ್ಯ ಜಿಲ್ಲೆ ಒಟ್ಟು ೧೧೦೦ ಹೆಚ್ಚಿನ ಶಾಸನಗಳು ಲಭ್ಯವಾಗಿವೆ. ಇನ್ನು ಸಹ ಹೆಚ್ಚಿನ ಶಾಸನಗಳು ಬೆಳಕಿಗೆ ಬರಬಹುದು. ಈ ಜಿಲ್ಲೆಯನ್ನು ಗಂಗ, ರಾಷ್ಟ್ರಕೂಟ, ಚೋಳ, ಹೊಯ್ಸಳ, ವಿಜಯನಗರ, ಉಮ್ಮತ್ತೂರು ಪ್ರಧಾನರು, ಮೈಸೂರು ಒಡೆಯರು, ಹೈದರಾಲಿ ಟಿಪ್ಪುಸುಲ್ತಾನ್ ಆಳಿದ ಮನೆತನಗಳು, ನಂತರ ಬ್ರಿಟಿಷರು ಆಳಿದ್ದನ್ನು ಈ ಜಿಲ್ಲೆಯ ಶಾಸನಗಳಲ್ಲಿ ಕಾಣಬಹುದು.

ವಿಜಯನಗರ ಕಾಲದಲ್ಲಿ ತಾಮ್ರಶಾಸನಗಳು ಸಹ ಅತಿ ದೀರ್ಘವಾಗಿದ್ದವು. ಬಹುಪಾಲು ಶಾಸನಗಳು ಕನ್ನಡ ಲಿಪಿ ಮತ್ತು ಭಾಷೆಗಳಲ್ಲಿ ರಚಿತವಾಗಿದ್ದರೂ ಕೆಲವು ಶಾಸನಗಳು ಬೇರೆ ಬೇರೆ ಲಿಪಿ ಮತ್ತು ಭಾಷೆಗಳಲ್ಲಿವೆ. ಅದರಲ್ಲಿಯೂ ಕನ್ನಡವಲ್ಲದೆ ತಮಿಳು ಮತ್ತು ಗ್ರಂಥಲಿಪಿ, ಗ್ರಂಥಲಿಪಿ ಮತ್ತು ಸಂಸ್ಕೃತ ಭಾಷೆ, ನಾಗರಿಲಿಪಿ ಮತ್ತು ಕನ್ನಡ ಭಾಷೆಯವು. ತೆಲುಗು, ಪರ್ಷಿಯನ್ ಮತ್ತು ಅರೇಬಿಕ್, ಇಂಗ್ಲಿಷ್ ಲಿಪಿ ಮತ್ತು ಭಾಷೆಗಳಲ್ಲಿವೆ. ಕನ್ನಡ ಲಿಪಿಯ ಶಾಸನಗಳು ಹೆಚ್ಚಿನವು. ಹಾಗೆಯೇ ಪ್ರಾರ್ಥನಾ ಪದ್ಯಗಳು ಮತ್ತು ಫಲಶ್ರುತಿ ಶ್ಲೋಕಗಳು ಸಂಸ್ಕೃತದಲ್ಲಿರುವುದನ್ನು ನಾವು ಕಾಣಬಹುದು.

ಗಂಗರು ಈ ಪ್ರದೇಶದಲ್ಲಿ ಸುಮಾರು ಆರು ಶತಮಾನಗಳ ಕಾಲ ರಾಜ್ಯವಾಳಿದರೂ ಇಲ್ಲಿ ದೊರೆತಿರುವ ಅವರ ಶಾಸನಗಳ ಸಂಖ್ಯೆ ಅತಿ ಕಡಿಮೆ. ಶಿವಮಾರನ ಹಳ್ಳಿಗೆರೆ ತಾಮ್ರಶಾಸನವೇ ಮಂಡ್ಯ ಜಿಲ್ಲೆಯ ಅತಿ ಪ್ರಾಚೀನ ಶಾಸನ. ಕ್ರಿ.ಶ. ೭೧೩ರ ಗಂಗರ ವಂಶಾವಳಿಯನ್ನು ತಿಳಿಸುತ್ತದೆ. ಕೊಂಗುಣಿವರ್ಮನಿಂದ ಶಿವಮಾರನವರೆಗಿನ ಪಲ್ಲವ ಯುವರಾಜನ ಮಕ್ಕಳಾದ ಜಿಯ ಮತ್ತು ವೃದ್ಧ ಎಂಬುವರ ಬಿನ್ನಹದ ಮೇರೆಗೆ ಅರಸ ಭೂದಾನ ಮಾಡಿದ ವಿವರವಿದೆ. ಕ್ರಿ.ಶ. ೭೭೬-೭೭ರ ಶ್ರೀಪುರುಷನ ದೇವರಹಳ್ಳಿ ತಾಮ್ರಶಾಸನದಿಂದ ಶ್ರೀಪುರುಷ ಶಿವಮಾರನ ಸೋದರ ನವಕಾಮನ ಮೊಮ್ಮಗನೆಂಬ ಸಂಗತಿ ತಿಳಿದುಬರುತ್ತದೆ. ಕುಂದಾಚ್ಚಿ ಎಂಬಾಕೆ ಕಟ್ಟಿಸಿದ ಶ್ರೀಪುರದ ಲೋಕತಿಲಕ ಬಸದಿಗೆ ಅರಸ ದಾನವಿತ್ತದ್ದನ್ನು ತಿಳಿಸುತ್ತದೆ. ಗಂಜಾಮಿನ ತಾಮ್ರಶಾಸನ ಗಂಗ ವಂಶಾವಳಿಯನ್ನು ತಿಳಿಸುತ್ತದೆ. ಕ್ರಿ.ಶ. ೮ನೆಯ ಶತಮಾನದ ಶ್ರೀ ಪುರುಷನ ಹುಳ್ಳೇನಹಳ್ಳಿಯ ತಾಮ್ರಶಾಸನ ಬಾಣಪ್ರಭು ದಿಂಡಿಗ ಕಳ್ಬಪ್ಪು ೧೧೦೦ (ಶ್ರವಣಬೆಳಗೊಳ) ಪ್ರದೇಶವನ್ನು ಆಳುತ್ತಿದ್ದ ವಿಷಯವನ್ನು ತಿಳಿಸುತ್ತದೆ. ಗಂಗರ ಶಿಲಾಶಾಸನಗಳಲ್ಲಿ ಕ್ರಿ.ಶ. ೯-೧೦ ಶತಮಾನದ ವೀರಗಲ್ಲುಗಳೇ ಬಹಳ. ಶ್ರೀಪುರುಷನ ಪುರಿಗಾಲಿ ಶಾಸನ ಸಿಂಗಡಿ ಅರಸನೆಂಬಾತ ಪುವಗಾಮದ ಆಡಳಿತಾಧಿಕಾರಿಯಾಗಿದ್ದನೆಂದು ತಿಳಿಸುತ್ತದೆ. ಒಂದನೆಯ ಶಿವಮಾರನಿಂದ ಸತ್ಯವಾಕ್ಯ ಗೋವಿಂದನವರೆಗೆ ಗಂಗರಸರ ಶಾಸನಗಳಿಂದ ನೊಳಂಬ, ಬಾಣ ಮತ್ತು ಸಗರ ಕುಲದ ಅಧಿಪರು ಅಧೀನ ಅರಸರಾಗಿದ್ದರು. ಕ್ಯಾತನಹಳ್ಳಿ ಶಾಸನದಲ್ಲಿ ಭದ್ರಬಾಹು ಚಂದ್ರಗುಪ್ತರ ಉಲ್ಲೇಖವಿದೆ.

**ರಾಷ್ಟ್ರಕೂಟ :** ಚೋಳರು ಗಂಗ ರಾಷ್ಟ್ರಕೂಟರಿಗೆ ಸಮಾನ ಪ್ರತಿಸ್ಪರ್ಧಿಗಳಾಗಿದ್ದರು. ಗಂಗರಸ ಇಮ್ಮಡಿ ಬೂತುಗ ಕ್ರಿ.ಶ. ೯೩೬-೬೧ರಲ್ಲಿ ರಾಷ್ಟ್ರಕೂಟ ಸೇನೆಯ ನೇತೃತ್ವ ವಹಿಸಿ ತಕ್ಕೋಲಂ ಕದನದಲ್ಲಿ ಭಾಗವಹಿಸಿ ಚೋಳ ರಾಜಾದಿತ್ಯನನ್ನು ಇರಿದು ಕೊಂದ ವಿಷಯ ಚೋಳ ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಈ ದಿಸೆಯಲ್ಲಿ ಮದ್ದೂರು ತಾಲ್ಲೂಕಿನ ಆತಕೂರಿನ ಶಾಸನ ಬಹಳ ಪ್ರಮುಖವಾದುದು. ಈ ವೀರಗಲ್ಲಿನ ಶಾಸನದ ಪ್ರಕಾರ ಸಗರವಂಶದ ಮಣಲೇರ ಕಾಳಗದಲ್ಲಿ ಭಾಗವಹಿಸಿ ಹೋರಾಡಿದ. ಈತ ಬೂತುಗನಂಕಕಾರ. ಬೂತುಗನ ಪರಾಕ್ರಮಕ್ಕೆ ಮೆಚ್ಚಿದ ರಾಷ್ಟ್ರಕೂಟ ಚಕ್ರವರ್ತಿ ಬನವಸೆ ಮುಂತಾದ ಹಲವು ಪ್ರದೇಶಗಳನ್ನು ನೀಡಿದ. ರಾಜನು

* ಮೈಸೂರು.

ಮಣಲೇರನ ಶೌರ್ಯವನ್ನು ಮೆಚ್ಚಿದ. ಬೇಡಿಕೋ ಎಂದಾಗ ಆತ ಬಯಸಿ ಪಡೆದಿದ್ದು ಕಾಳಿ ಎಂಬ ಹೆಸರಿನ ಬೇಟೆನಾಯಿ ಯೊಂದನ್ನು ರಾಷ್ಟ್ರಕೂಟ ರಾಜನಲ್ಲಿ ಮಣಲೇರ ಪಡೆದ ಬೇಟೆನಾಯಿ ಬೆಳತೂರಿನ ಬಳಿಯಲ್ಲಿ ಒಂದು ಹಂದಿಯೊಡನೆ ಕಾದಾಡಿ ಸತ್ತಿತು. ಅದರ ಸ್ಮರಣಾರ್ಥ ಅಪೂರ್ವ ವೀರಗಲ್ಲು ಶಾಸನ ಹಾಕಿದೆ. ನಾಯಿ ಹಂದಿಗಳ ಹೋರಾಟದ ದೃಶ್ಯವನ್ನು ಶಾಸನದ ಕಲ್ಲಿನ ಮೇಲೆ ಕೆತ್ತಲಾಗಿದೆ. ಕ್ರಿ.ಶ. ೯೮೬-೮೭ರ ಕಾಡಕೂತ್ತನ ಹಳ್ಳಿಯ ಶಾಸನ ಬಲ್ಲಪ ಗಂಗವಾಡಿಗೆ ಬಂದುದನ್ನು ಉಲ್ಲೇಖಿಸುತ್ತದೆ. ಈ ಬಲ್ಲಪ ರಾಷ್ಟ್ರಕೂಟ ದೊರೆ ಕರ್ಕನೆಂದು ಗುರುತಿಸಿದೆ. ಹಾಗೆಯೇ ಕನ್ನಂಬಾಡಿಯ ಶಾಸನದಲ್ಲಿ ಕನ್ನರದೇವ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನೆಂದು ತಿಳಿಯಬಹುದು.

**ಚೋಳ :** ಚೋಳರ ಶಾಸನಗಳೆಂದರೆ : ಈ ಜಿಲ್ಲೆಯ ಮಂಡ್ಯ, ಮದ್ದೂರು, ಶ್ರೀರಂಗಪಟ್ಟಣ, ಪಾಂಡವಪುರ ತಾಲ್ಲೂಕಿನಲ್ಲಿ ಕಾಣುತ್ತೇವೆ. ಒಂದನೆಯ ರಾಜರಾಜ, ಒಂದನೆಯ ರಾಜೇಂದ್ರ ಮತ್ತು ಕುಲೋತ್ತುಂಗರ ಆಳ್ವಿಕೆಗೆ ಸೇರಿದ ಶಾಸನಗಳು. ಕ್ರಿ.ಶ. ೧೦೧೧ರ ಶಾಸನದಲ್ಲಿ ರಾಜರಾಜ ರಾಜ್ಯವಾಳುತ್ತಿದ್ದಾಗ ಚಿಕ್ಕವಂಗಲದ ಕಣ್ಣ ತುರುಗಾಳಗದಲ್ಲಿ ಕಾದಿ ಮಡಿದ ವಿಷಯ ತಿಳಿಸುತ್ತದೆ. ಈ ವೀರಗಲ್ಲು ಶಾಸನ. ಬಲಮುರಿಯ ಶಾಸನೋಕ್ತ ಪಂಚವನ್ ಮಾರಾಯನೇ ಯುವರಾಜ ಒಂದನೇ ರಾಜೇಂದ್ರ ನೆಂದು ಗುರುತಿಸಲಾಗಿದೆ. ಚೋಳನ ಗಂಧವಾರಣನೆನಿಸಿದ ಈ ಪಂಚವನ್ ಮಾರಾಯ ವೆಂಗಿ ಮತ್ತು ಗಂಗ ಮಂಡಲ ಗಳಿಗೆ ಮಹಾದಂಡನಾಯಕ ನಾಗಿದ್ದು, ಗಂಗವಾಡಿ, ರಟ್ಟವಾಡಿ, ನೊಳಂಬ, ಕೊಂಗು, ಆಂಧ್ರ ಮುಂತಾದ ಹತ್ತಾರು ನಾಡುಗಳ ಅರಸರನ್ನು ಸೋಲಿಸಿದ ವಿವರವಿದೆ. ಹಳೆಬೂದೂರಿನ ಶಾಸನ ಮತ್ತು ವೈದ್ಯನಾಥಪುರದ ಶಾಸನ ಇವನ ಸಾಧನೆಗಳನ್ನು ತಿಳಿಸುತ್ತದೆ. ಕ್ರಿ.ಶ. ೧೧೦೨-೦೩ರ ಬೊಮ್ಮೂರು ಅಗ್ರಹಾರದ ಶಾಸನ ಕುಲೋತ್ತುಂಗನ ಕಾಲದಲ್ಲಿ ಸಿರಿಯಕಲಸತ್ತವಾಡಿಯಲ್ಲಿ ಹಾಳು ಬಿದ್ದ ಜಲಾಶಯವನ್ನು ಮಾಂಡಲಿಕ ಪೋಮನ್ ಇರಾಮನ್ ಆದ ಪಿರುದರಾಯ ಬಯಂಕರ ಮಾರಾಯನ್ ಜೀರ್ಣೋದ್ಧಾರ ಮಾಡಿಸಿದ ಉಲ್ಲೇಖವಿದೆ.

**ಹೊಯ್ಸಳರು :** ಕರ್ನಾಟಕದ ಇತಿಹಾಸದಲ್ಲಿ ಹೊಯ್ಸಳರು ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ತಮ್ಮ ರಾಜಕೀಯ ಪ್ರಗತಿಯ ಹಾದಿಯನ್ನು ರೂಪಿಸಿಕೊಂಡರು. ಚೋಳರಿಂದ ಆಕ್ರಮಿತವಾಗಿದ್ದ ಗಂಗವಾಡಿಯನ್ನು ಕ್ರಿ.ಶ. ೧೨ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಹೊಯ್ಸಳರು ವಶಪಡಿಸಿಕೊಂಡು ಆಳಿದರು. ಅವರ ಶಾಸನಗಳು, ಭಾಷೆ, ನಿರೂಪಣೆ ಲಿಪಿ ಸೌಂದರ್ಯಗಳಿಂದ ಕನ್ನಡ ಶಾಸನಗಳಲ್ಲಿ ಅಗ್ರಸ್ಥಾನ ಪಡೆದಿವೆ. ಹೊಯ್ಸಳ ವಂಶದ ಉಗಮ ಕುರಿತು ಶಾಸನಗಳಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೧೧೫ರ ಬಂಡಿಗನವಿಲೆ ಶಾಸನ ಪೊಯ್ಸಳ ಅರಸನನ್ನು ಉಲ್ಲೇಖಿಸುತ್ತದೆ. ಪೊಯ್‌ಸಳ ಹುಲಿಯನ್ನು ಕೊಂದು ಹಾಕಿದನಿಂದ ಅವನ ವಂಶಜರಿಗೆ ಹೊಯ್ಸಳ ಎಂಬ ಹೆಸರು ಬಂದಿತು. ಮತ್ತು ಸಳ ಹುಲಿಯನ್ನು ಕೊಲ್ಲುತ್ತಿರುವ ಲಾಂಛನವೂ ಇಂದಿಗೂ ನಾವು ಕಾಣಬಹುದು. ಸಳ ವೀತಾಯುಧವ್ರತಧಾರಿಯಾಗಿದ್ದಾಗ ಈ ಘಟನೆ ನಡೆಯಿತೆಂದು ಶಾಸನ ತಿಳಿಸುತ್ತದೆ.

ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಮೊದಲ ಹೊಯ್ಸಳ ದೊರೆ ವಿನಯಾದಿತ್ಯ ತ್ರಿಭುವನಮಲ್ಲ ಎಂಬ ಬಿರುದಿನಿಂದ ಈತ ಚಾಲುಕ್ಯ ಸಾಮಂತನಾಗಿದ್ದನೆಂಬುದು ತಿಳಿಯುತ್ತದೆ. ಕೊಂಕಣ, ಆಳ್ವಖೇಡ, ಬಯಲ್ನಾಡು ಮುಂತಾದ ಪ್ರದೇಶಗಳನ್ನು ಆಳಿದ ಈತನಿಗೆ 'ದ್ವಾರಾವತೀಪುರವರಾಧೀಶ್ವರ' ಎಂಬ ಬಿರುದು ಇರುವುದನ್ನು ಶಾಸನಗಳಲ್ಲಿ ಕಾಣಬಹುದು. ಎರೆಯಂಗ ವಿನಯಾದಿತ್ಯ ಮಗ ಮಾಳವ ದೇಶವನ್ನು ಚಾಳುಕ್ಯರಿಗಾಗಿ ಜಯಿಸಿಕೊಟ್ಟು ಅರಸನಿಗೆ ನಿಷ್ಠೆಯಿಂದಿದ್ದನು. ಎರೆಯಂಗನ ಮಕ್ಕಳಾದ ಬಲ್ಲಾಳ, ವಿಷ್ಣು ಮತ್ತು ಉದಯಾ ದಿತ್ಯರು ದೋರಸಮುದ್ರದಲ್ಲಿ ಪರಮಾರ ರಾಜಕುಮಾರ ಜಗದೇವನ ಸೇನೆಯನ್ನು ಸದೆಬಡಿದರು. ಹೊಯ್ಸಳರಲ್ಲಿ ಪ್ರಮುಖನಾದ ವಿಷ್ಣುವರ್ಧನನ ಶಾಸನಗಳು ಗಮನಾರ್ಹ. ತಳಕಾಡುಗೊಂಡ ಮತ್ತೆ ನಂಗಲಿಯನ್ನು ಗೆದ್ದ. ಇವನ ಆಡಳಿತಕ್ಕೆ ಗಂಗವಾಡಿ, ನೊಳಂಬವಾಡಿ, ಬನವಸೆ, ಹಲಸಿಗೆ ಪ್ರದೇಶವು ಒಳಪಟ್ಟಿದ್ದವು. ಇತ್ತೀಚಿನ ಕ್ರಿ.ಶ. ೧೧೧೯ರ ಹಿರೇಮರಳಿ ಶಾಸನದಲ್ಲಿ ವಿಷ್ಣುವರ್ಧನನು 'ತಳಕಾಡಲು ಪೃಥ್ವಿರಾಜ್ಯ' ಎಂದು ಕರೆಯುವುದರಿಂದ ಗಂಗವಾಡಿಯನ್ನು ಗೆಲ್ಲುವಲ್ಲಿ ಪ್ರಧಾನ ಪಾತ್ರವಹಿಸಿದನು ಹಿರಿಯ ದಂಡನಾಯಕ ಗಂಗರಾಜ ಎನ್ನಬೇಕು.

ತಲಕಾಡಿನ ವಿಜಯ ಹೊಯ್ಸಳ ಇತಿಹಾಸದಲ್ಲಿ ಒಂದು ಸಾಧನೆ ಎಂದರೆ ತಪ್ಪಾಗಲಾರದು. ಹೊಯ್ಸಳ ಶಾಸನ ಹಾಗೂ ನಾಣ್ಯಗಳಲ್ಲಿ ತಳಕಾಡುಕೊಂಡ ಎಂಬ ಬಿರುದನ್ನು ನಾವು ಕಾಣಬಹುದು. ಈತನ ಸಾಧನೆಗಳನ್ನು ಅನೇಕ ಶಾಸನಗಳು ವರ್ಣಿಸುತ್ತದೆ. ಈತ ತನ್ನ ಅಣ್ಣ ಒಂದನೇ ಬಲ್ಲಾಳ ಬದುಕಿದ್ದಾಗಲೇ ರಾಜ್ಯವಾಳುತ್ತಿದ್ದನೆಂಬ ಸಂಗತಿಯನ್ನು ತಿಳಿಯಬಹುದು. ಹೊಸಕೋಟೆ ಶಾಸನವು ತಾಯಿ ತುಳುವಲದೇವಿ ಮತ್ತು ಆತ್ಮಾಗ್ರಜ ಗ್ರಿಪ ಭೂಪರ ಉಪಸ್ಥಿತಿ ಯಲ್ಲಿ ಈತ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಇವನ ರಾಣಿಯರಲ್ಲಿ ಪಿರಿಯರಸಿ ಪಟ್ಟ ಮಹಾದೇವಿ ಶಾಂತಲದೇವಿ, ಪಟ್ಟಮಹಿಷಿ ಲಕ್ಷ್ಮಾದೇವಿ, ಪಲ್ಲವರಾಜ ಪುತ್ರಿ

ಬಮ್ಮಲದೇವಿ ಹಾಗೂ ಕೊಂಗಾಳ್ವ ರಾಜಕುಮಾರಿ ಚಂದಲದೇವಿ ಇವರುಗಳನ್ನು ಈ ಜಿಲ್ಲೆಯ ಶಾಸನಗಳಲ್ಲಿ ಕಾಣಬಹುದು. ಒಂದನೇ ನರಸಿಂಹನು ವಿಷ್ಣುವರ್ಧನ ಮತ್ತು ಲಕ್ಷ್ಮಾದೇವಿಯ ಮಗ, ತಂದೆಯ ಅನೇಕ ಬಿರುದುಗಳನ್ನು ಧರಿಸಿದ್ದ. ಚಂಗಾಳ್ವನಂ ಕೊಂದ ಉಲ್ಲೇಖವಿದೆ. ಗಂಗವಾಡಿ, ನೊಣಂಬವಾಡಿ, ಬನವಸೆ, ಬೆಳ್ವಲ ಪ್ರದೇಶಗಳು ಈತನ ಅಧೀನಕ್ಕೊಳಪಟ್ಟಿದ್ದವು. ಇಮ್ಮಡಿ ಬಲ್ಲಾಳ ಈತ ಪಾಂಡ್ಯರಿಗೆ ಸೇರಿದ ಉಚ್ಚಂಗಿಯನ್ನು ಗೆದ್ದ ವಿವರವಿದೆ. ಕಳಚೂರಿ ಅರಸ ಸಂಕಮನ ಸೈನ್ಯದೊಡನೆ ಹೋರಾಡಿ ಮೃತನಾದ. ಈತನ ಸಾಮಂತ ಸಿಂದೆಯ ನಾಯಕ ಹಟ್ಟಿಗಾಳಗದಲ್ಲಿ ಜಯಶೀಲ ನಾದ. ಕ್ರಿ.ಶ. ೧೨೦೦ ರಲ್ಲಿ ಈತನ ರಾಜ್ಯ ಹೆದ್ದೂರೆ ಕೃಷ್ಣಾ ನದಿಯವರೆಗೆ ವಿಸ್ತರಿಸಿತ್ತು ಎಂದು ತಿಳಿಯಬಹುದು. ಕ್ರಿ.ಶ. ೧೨೪೨ರ ಚೋಳ ರಾಜ್ಯದ ನೆಲವೀಡಿನಿಂದ ಎಂದರೆ ಕಣ್ಣಾನೂರಿನಿಂದ ರಾಜ್ಯವಾಳಿದ ಎಂದು ಗೋವಿಂದನಹಳ್ಳಿ ಕ್ರಿ.ಶ. ೧೨೩೬ರ ಶಾಸನ ತಿಳಿಸುತ್ತದೆ. ಕ್ರಿ.ಶ. ೧೨೩೭ರ ಬಸರಾಳು ಶಾಸನದಲ್ಲಿ ಉಕ್ತನಾದ ಕೃಷ್ಣಕಂದರ ಸೇವುಣ ಅರಸನೆಂದು ಕೆಲವರು, ರಾಷ್ಟ್ರಕೂಟ ಅರಸನೆಂದು ಮತ್ತೆ ಕೆಲವರು ಗುರುತಿಸಿದ್ದಾರೆ. ಸೋಮೇಶ್ವರನ ರಾಜ್ಯವು ಪೂರ್ವದಲ್ಲಿ ಕಂಚಿ, ಬೇಲೂರು, ಉತ್ತರದಲ್ಲಿ ಕೃಷ್ಣಾನದಿ ದಕ್ಷಿಣದಲ್ಲಿ ಬಯಲ್ನಾಡಿನವರೆಗೆ ವಿಸ್ತರಿಸಿತ್ತು. ಕ್ರಿ.ಶ. ೧೨೬೦ರ ಕಸಲಗೆರೆ ಶಾಸನವು ಮುಮ್ಮಡಿ ನರಸಿಂಹನ ಸೋಮೇಶ್ವರನ ಉತ್ತರಾಧಿಕಾರಿಯಾದ ಈತ ಮಲೆಯದಂಡಿಗೆ ನಡೆದ ಸಂಗತಿಯನ್ನು ತಿಳಿಸುತ್ತದೆ. ವೈದ್ಯನಾಥಪುರ ಕ್ರಿ.ಶ. ೧೨೬೧ರ ಸೋಮೆಯ ದಂಡನಾಯಕನ ಅಳಿಯ ಕೇತಚಮೂಪತಿ (ದಂಡನಾಯಕ) ದಾನಿಯಾಗಿ ಕೆಳಲೆನಾಡಿನಲ್ಲಿರುವ ಮದ್ದೂರಿನ ವೈದ್ಯನಾಥ ದೇವರಿಗೆ ಬೇಡರಹಳ್ಳಿಯನ್ನು ದತ್ತಿ ನೀಡಿದ ವಿವರವಿದೆ. ಕ್ರಿ.ಶ. ೧೨೭೧ರ ಬೆಳ್ಳೂರಿನ ಶಾಸನ ಸೋಮೇಶ್ವರನ ವಿರುದ್ಧ ಹೋರಾಡಲು ಬಂದ ಸೇವುಣ ಮಹದೇವರಾಣೆಯನು ಯುದ್ಧ ಮಾಡಲಾಗದೆ ಓಡಿ ಹೋದನೆಂದು ತಿಳಿಸುತ್ತದೆ. ಕ್ರಿ.ಶ. ೧೩೦೩ರ ಬೆಟ್ಟನಹಳ್ಳಿಯ ಶಾಸನ ಮುಮ್ಮಡಿ ಬಲ್ಲಾಳನ ಕಾಲದಲ್ಲಿ ಬೆಮತೂರಕಲ್ಲು ಎಂದರೆ ಚಿತ್ರದುರ್ಗದ ಸೋಮೆಯ ನಾಯಕ ಮತ್ತು ಕಂಪಿಲನ ನಡುವೆ ಹೊಳಲಕೆರೆ ಯಲ್ಲಿ ಹೋರಾಟ ನಡೆಯಿತೆಂದು ತಿಳಿಸುತ್ತದೆ. ತೊಣ್ಣೂರಿನ ಶಾಸನ ಹೊಯ್ಸಳ ದೊರೆ ದಿಗ್ವಿಜಯಂಗಳ ಮಾಡಿ ಬಂದು ದೋರಸಮುದ್ರದಿಂದ ರಾಜ್ಯವಾಳುತ್ತಿದ್ದನೆಂದು ತಿಳಿಸುತ್ತದೆ. ಕ್ರಿ.ಶ. ೧೩೦೫ರ ಮರಡಿಪುರ ಮುಖ್ಯವಾದ ಶಾಸನ. ಇಲ್ಲಿ ಶಿವಶರಣರನೇಕರನ್ನು ಹೆಸರಿಸಿದ ಒಂದು ಪ್ರಶಸ್ತಿಯಿದೆ.

ಹೊಯ್ಸಳ ಅರಸರು ಸೊಸೆವೂರು ಅಥವಾ ಶಸಪುರ, ಬೇಲೂರು ಮತ್ತು ದೋರಸಮುದ್ರಗಳಿಂದ ಮಾತ್ರವಲ್ಲದೆ ತಲಕಾಡು, ಬಂಕಾಪುರ, ಕೋಡಾಲ, ಹಳ್ಳದಬೀಡು, ಕಣ್ಣಾನೂರು, ಲೊಕ್ಕಿಗುಂಡಿ ಇತ್ಯಾದಿ ನೆಲವೀಡುಗಳಿಂದಲೂ ರಾಜ್ಯಭಾರ ನಡೆಸಿದರೆಂದು ಈ ಜಿಲ್ಲೆಯ ಶಾಸನಗಳಿಂದ ತಿಳಿಯಬಹುದು. ಇಲ್ಲಿನ ರಾಜಮನೆತನಗಳಾದ ಚೋಳ, ಚಾಲುಕ್ಯ, ಕಳಚೂರಿ ಸೇವುಣ, ಕೊಂಗಾಳ್ವ, ಚಂಗಾಳ್ವ, ಪಾಂಡ್ಯ, ಕದಂಬ ಹಾಗೂ ಇತರರೊಡನೆ ಮಾಡಿದ ಯುದ್ಧ ಹಾಗೂ ರಾಜಕೀಯವಾಗಿ ಪಡೆದ ಸಂಪರ್ಕವನ್ನು ಇಲ್ಲಿನ ಶಾಸನಗಳ ಅಧ್ಯಯನದಿಂದ ತಿಳಿಯಬಹುದು.

**ವಿಜಯನಗರ :** ಕ್ರಿ.ಶ. ೧೩೫೪ರ ಅರುವನಹಳ್ಳಿಯ ಶಾಸನವು ವಿಜಯನಗರದ ಅರಸರ ಒಂದು ಪ್ರಾಚೀನ ಶಾಸನ. ವಿಜಯನಗರದ ಅರಸರಿಗೆ ಸಾಮಾನ್ಯವಾಗಿ ಅನ್ವಯವಾಗುವ ಬಿರುದುಗಳು ಅರಿರಾಯವಿಭಾಡ, ಭಾಷೆಗೆ ತಪ್ಪುವ ರಾಯರಗಂಡ, ಜೊತೆಗೆ ವರ್ತಮಾನರಾಯ ಪರಮೇಶ್ವರ, ಅಭಂಗರಾಯ ದಾನವಜನಾರ್ಧನ ಪ್ರಶಸ್ತಿಗಳು ಈ ಜಿಲ್ಲೆಯ ಒಂದನೆಯ ಬುಕ್ಕನಿಂದ ಮೂರನೆಯ ಶ್ರೀರಂಗರಾಯನವರೆಗಿನ ಒಟ್ಟು ೧೬ ರಾಜರನ್ನು ತಿಳಿಸುತ್ತದೆ. ಈ ರಾಜ್ಯಗಳಲ್ಲಿ ಕೃಷ್ಣದೇವರಾಯ, ಅಚ್ಯುತರಾಯ ಹಾಗೂ ಸದಾಶಿವರಾಯರ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ತಾಮ್ರ ಶಾಸನಗಳು ವಂಶಾವಳಿಯನ್ನು ತಿಳಿಸುತ್ತವೆ. ಹೆಚ್ಚಿನ ಶಾಸನಗಳು ದಾನದತ್ತಿ ಬಿಟ್ಟ ವಿಷಯವನ್ನು ನಿರೂಪಿಸುವ ದಾಖಲೆಗಳೇ ಆಗಿವೆ. ಕ್ರಿ.ಶ. ೧೪೪೬-೪೭ ಹೊಸಹಳ್ಳಿ ಶಾಸನ ಶ್ರೀ ವೀರಪ್ರತಾಪ ವಿಜಯ ಮಹಾರಾಯರು ರಾಜ್ಯಂಗೆಯುತಿರಲು ಇದೇ ಕಾಲದಲ್ಲಿ ಮಲ್ಲಿಕಾರ್ಜುನನೂ ಆಳುತ್ತಿದ್ದನೆಂದು ಶ್ರೀರಂಗಪಟ್ಟಣದ ಶಾಸನದಿಂದ ತಿಳಿದು ಬರುತ್ತದೆ. ಏಕಕಾಲದಲ್ಲಿ ಇಬ್ಬರು ಅರಸರು ಆಳುತ್ತಿದ್ದ ವಿಷಯವನ್ನು ಕ್ರಿ.ಶ. ೧೩೫೦೩ರ ಸಂತೆಬಾಚಹಳ್ಳಿ ಶಾಸನ ತಿಳಿಸುತ್ತದೆ. ವಿಜಯರಾಯ ಇಮ್ಮಡಿ ದೇವರಾಯನ ಮಗನೆಂದು ಗುರುತಿಸಿ ತುಳುವನರಸನಾಯಕ ಮೃತನಾಗಿದ್ದ ವಿಷಯ ತಿಳಿಸುತ್ತದೆ. ಕ್ರಿ.ಶ. ೧೫೪೫ರ ಹೊನ್ನೇನಹಳ್ಳಿ ತಾಮ್ರ ಶಾಸನದಲ್ಲಿ ಚಾರಿತ್ರಿಕ ಅಂಶಗಳು ಉಲ್ಲೇಖಿತವಾಗಿವೆ. ಅಚ್ಯುತರಾಯನ ತರುವಾಯ ಆತನ ಮಗ ವೆಂಕಟ ದೇವರಾಯ ಸ್ವಲ್ಪ ಕಾಲ ರಾಜ್ಯವಾಳಿ ಮೃತ್ಯುಗೀಡಾದ. ನಂತರ ಸದಾಶಿವರಾಯನು ತನ್ನ ಬಾವ ರಾಮನಿಂದ ಪಟ್ಟಾಭಿಷಿಕ್ತನಾದ. ಆಗ ಸುರಗಿರಿಯ ಶತ್ರುಗಳನ್ನು ಸದೆಬಡಿದ ಸಂಗತಿಯನ್ನು ಇದೇ ಶಾಸನದಲ್ಲಿ ಉಲ್ಲೇಖಿಸಿದೆ. ಕ್ರಿ.ಶ. ೧೬೨೩ರ ಹೊನ್ನಲಗೆರೆ ತಾಮ್ರ ಶಾಸನ ವೀರರಾಮ ದೇವರಾಯನನ್ನು

ಹೆಸರಿಸಿದ್ದರೂ ವಿಜಯನಗರ ಅರಸರ ಸಾಮಂತರಾಗಿದ್ದ ಮೈಸೂರು ಒಡೆಯರ ಸಂತತಿಗೆ ಸೇರಿದ ಚಾಮರಾಜೇಂದ್ರ ನನ್ನು ಶ್ರೀರಂಗಪಟ್ಟಣ ಖ್ಯಾತ ಭೋಜ ಸಿಂಹಾಸನಾಧಿಪ ಎಂದು ಉಲ್ಲೇಖಿಸಿರುವುದು ಗಮನಾರ್ಹ. ವಿಜಯನಗರ ಸಾಮ್ರಾಜ್ಯ ಛಿದ್ರಗೊಂಡು ಹತ್ತಾರು ಪಾಳೆಯಪಟ್ಟುಗಳು ಸ್ವತಂತ್ರವಾಗಿ ತಲೆಯೆತ್ತತೊಡಗಿದ್ದವು. ಶ್ರೀರಂಗಪಟ್ಟಣ ಪಟ್ಟಣದ ವಿಜಯನಗರ ಶಾಸನ ಕೊನೆಯದು. ಮೂರನೆಯ ಶ್ರೀರಂಗರಾಯಪೆನುಗೊಂಡಯಿಂದ ಆಳುತ್ತಿದ್ದ ನೆಂಬ ವಿಷಯ ತಿಳಿದುಬರುತ್ತದೆ.

**ಮೈಸೂರಿನ ಒಡೆಯರು :** ಮಂಡ್ಯ ಜಿಲ್ಲೆಯನ್ನು ಮೈಸೂರು ಒಡೆಯರು ಐದು ಶತಮಾನಗಳ ಕಾಲ ಆಳಿದರು. ಹೆಚ್ಚಿನ ಶಾಸನಗಳು ದಾನ, ಅಗ್ರಹಾರ ಸ್ಥಾಪನೆ, ಕೆರೆ ದೇಗುಲಗಳ ಜೀರ್ಣೋದ್ಧಾರಕ್ಕೆ ಸಂಬಂಧಪಟ್ಟವು. ರಾಜ ಒಡೆಯರಿಂದ ನಾಲ್ವಡಿ ಕೃಷ್ಣರಾಜ ಒಡೆಯವರೆಗಿನ ಶಾಸನಗಳು ಅನೇಕ ತಾಮ್ರಶಾಸನಗಳಲ್ಲಿ ಈ ರಾಜರ ವಂಶದ ಉಗಮವನ್ನು ವಿಷ್ಣುವಿನಿಂದ ಆರಂಭಿಸಿವೆ. ಈ ಹಿನ್ನೆಲೆಯನ್ನು ತಿಳಿಸುವುದು ತಮ್ಮ ವಂಶಕ್ಕೆ ಪ್ರಾಚೀನತೆಯ ಬಣ್ಣ ತಿಳಿಸುವುದಕ್ಕಾಗಿ ಶ್ರೀರಂಗಪಟ್ಟಣದ ಒಂದು ಶಾಸನ ಮತ್ತು ಮೇಲುಕೋಟೆಯ ಶಾಸನಗಳಲ್ಲಿ ಇಂಥ ಪ್ರಯತ್ನಗಳನ್ನು ಕಾಣಬಹುದು.

ಹೈದರ್ ಆಲಿ ಮತ್ತು ಟಿಪ್ಪುಸುಲ್ತಾನನ ಶಾಸನಗಳು ಮಂಡ್ಯ ಜಿಲ್ಲೆಯಲ್ಲಿ ದೊರೆತಿರುವ ಅವರ ರಾಜಕೀಯ ಕೊಡುಗೆಯ ಮೇಲೆ ಬೆಳಕು ಚೆಲ್ಲುತ್ತವೆ. ಈ ಶಾಸನಗಳು ಪರ್ಷಿಯನ್ ಮತ್ತು ಅರೇಬಿಕ್ ಭಾಷೆಯಲ್ಲಿವೆ. ಇಷ್ಟಲ್ಲದೆ ಕನ್ನಡ ಶಾಸನಗಳು ಕೂಡ ಇವೆ. ಈ ಶಾಸನಗಳಲ್ಲಿ ಈ ದೊರೆಗಳು ದೇವಸ್ಥಾನಗಳಿಗೆ ಮುಸಲ್ಮಾನರಿಗೂ ಅವರ ಸ್ಮಶಾನ ಭೂಮಿಗಳಿಗೂ ದತ್ತಿಕೊಟ್ಟ ವಿವರವಿದೆ. ಇನ್ನು ಕೆಲವು ಶಾಸನಗಳಲ್ಲಿ ಕೋಟೆಗಳನ್ನು ಮಸೀದಿಗಳನ್ನು, ಗೋರಿಗಳನ್ನು ಕಟ್ಟಿರುವ ವಿವರವಿದೆ. ಇನ್ನೂ ಅನೇಕ ಶಾಸನಗಳಲ್ಲಿ ರಾಜ್ಯಾಡಳಿತ, ವಿಷಯ, ದೇವರು ಮತ್ತು ಪ್ರವಾದಿಯ ಹೆಸರುಗಳು, ಟಿಪ್ಪುಸುಲ್ತಾನ, ಆತನ ಮಗ, ದಂಡನಾಯಕ ಇತರ ವ್ಯಕ್ತಿಗಳ ವಿಷಯಗಳಿವೆ. ಬ್ರಿಟಿಷ್ ಕಾಲದಲ್ಲಿ ೧೮೪೭-೫೦ರ ಮದ್ದೂರಿನ ಶಾಸನದಲ್ಲಿ ಮದ್ದೂರಿನ ಸೇತುವೆಯನ್ನು ಡಾಲ್‌ಹೌಸಿಯ, ಭಾರತದ ಗವರ್ನರ್ ಜನರಲ್ ಆಗಿದ್ದಾಗ ಮೇಜರ್ ಜನರಲ್ ಮಾರ್ಕ್ ಕಬ್ಬನ್ ಮೈಸೂರಿನ ಕಮೀಷನರ್‌ರವರಿಂದ ಸೇತುವೆಯನ್ನು ನಿರ್ಮಿಸಲಾಯಿತು.

**ಶಾಸನಗಳ ಕೊಡುಗೆ**

ಶಾಸನಗಳಲ್ಲಿರುವ ವಿಷಯ ವೈವಿಧ್ಯ ವಿಪುಲವಾದುದು. ಸಾಮಾನ್ಯವಾಗಿ ರಾಜರೋ ಅವರ ಅಧಿಕಾರಿಗಳೋ ಶಾಸನಗಳನ್ನು ಹಾಕಿಸುತ್ತಿದ್ದರಿಂದ ಆಯಾ ರಾಜರ ಬಗೆಗೆ ಅವರ ಪೀಳಿಗೆಯ ಬಗೆಗೆ ವಿವರಗಳಿರುತ್ತದೆ. ಇತರರು ಶಾಸನಗಳನ್ನು ಹಾಕಿಸಿದಾಗಲೂ ಆಗ ಆಳುತ್ತಿದ್ದ ತಮ್ಮ ರಾಜರ ಹೆಸರು ಇತರ ವಿವರಗಳಿರುವುದುಂಟು. ಆದ್ದರಿಂದ ರಾಜಮನೆತನಗಳ ರಾಜರ ಅವರ ಸಾಮಂತರ ಅಧಿಕಾರಿಗಳ ಇತಿಹಾಸವನ್ನರಿಯಲು ಈ ಶಾಸನಗಳು ಮೂಲಾಧಾರ ವಾಗುತ್ತವೆ. ಹಾಗೆಯೇ ಆಡಳಿತ ಪದ್ಧತಿ, ಆಡಳಿತ ಸೂತ್ರಗಳನ್ನು ಹಿಡಿದ ಅಧಿಕಾರಿಗಳ ಅಧಿಕಾರ ಸ್ಥಾನಗಳ ಹೆಸರುಗಳು, ಅವರ ಅಧಿಕಾರ ವ್ಯಾಪ್ತಿ, ಅಧಿಕಾರಿಗೂ ಗೊತ್ತುಪಡಿಸಿದ ಕೆಲಸ, ಹಾಗೆಯೇ ವ್ಯಾಪಾರ, ವ್ಯವಹಾರ ಸಂಘಗಳು, ಅವುಗಳ ಪ್ರಾಬಲ್ಯ ಸುಂಕ, ಸಾರಿಗೆಗಳು, ಭೂಸ್ವಾಮ್ಯ, ವೃತ್ತಿ ಪದ್ಧತಿಗಳು, ಆರ್ಥಿಕ ಸ್ಥಿತಿಗತಿ, ಮತ ಬೇರೆ ಬೇರೆ ಮತಗಳ ನಡುವೆ ಸೌಹಾರ್ದ ವೈಷಮ್ಯಗಳು, ದೇವಾಲಯ, ಬಸಿದಿ, ಮಠಗಳು, ದಾನಧರ್ಮದತ್ತಿಗಳು, ಅವುಗಳ ಪೂಜೆ ಪುನಸ್ಕಾರಗಳು ಮೇಲ್ವಿಚಾರಣೆ, ಸತ್ರಗಳು, ವಿದ್ಯಾಕೇಂದ್ರಗಳು, ಸಾಮಾಜಿಕ ರೀತಿನೀತಿ, ನಾಡಿನ ಜನಜೀವನ, ಊರು ಗ್ರಾಮಗಳ ವಿವರ ಕುಂಕಸುಬು, ಧಾರ್ಮಿಕ ವಿಧಿಗಳು, ಸಂಸ್ಕೃತಿ ಇವುಗಳ ಬಗ್ಗೆ ಶಾಸನಗಳಲ್ಲಿ ವಿವರ ಉಲೇಖವಿರುತ್ತವೆ. ಪುವಗಾಯದ ಪನ್ನಿರ್ವರು ಗಂಗ ಶ್ರೀಪುರುಷನ ಕಾಲದಲ್ಲಿ ಕೊಂಗಣಿ ಕೆರೆಯನ್ನು ಕಟ್ಟಿಸಿದುದು ಅತಿ ಪ್ರಾಚೀನ ಉಲ್ಲೇಖ ಗಳಲ್ಲೊಂದು. ಹಾಗೆಯೇ ಕ್ರಿ.ಶ. ೧೮೪೭ರ ಮಂಡ್ಯ ತಾಲ್ಲೂಕಿನ ಆಮೀಲ ಕಾಶ್ಯಪಗೋತ್ರದ ತಿರುಕುಡಿ ಶ್ರೀನಿವಾಸರಾವು ಮಂಡ್ಯದಲ್ಲಿ ಪ್ರಾಣದೇವರ ದೇವಸ್ಥಾನ ಸರೋವರ ಜನಗಳಿಗೆ ಉಪಯೋಗಕ್ಕಾಗಿ ಕಟ್ಟಿಸಿದುದು. ಬೊಮ್ಮೂರು ಅಗ್ರಹಾರ ಕ್ರಿ.ಶ. ೧೧೦೨-೦೩ರ ಶಾಸನದಲ್ಲಿ ಚೋಳ ಮಾಂಡಲಿಕ ಪೋಮನ್ ಇರಾಮನಾದ ವಿರುದ್ಧ ರಾಯ ಭಯಂಕರ ಮಾರಾಯನ್ ಎಂಬಾತ ಸಿರಿಯಕಲಸತ್ತೆ ಸಾಡಿಯದ ವಾನವನ್ ಮಾದೇವಿ ಚತುರ್ವೇದಿ ಮಂಗಲದಲ್ಲಿ ಇನ್ನೂರು ವರ್ಷಗಳಿಂದ ಹಾಳು ಬಿದ್ದ ಕೆರೆಯನ್ನು ಜೀರ್ಣೋದ್ಧಾರ ಮಾಡಿಸಿದ ವಿಷಯ, ಹೊಯ್ಸಳ ಅರಸರ ಮುಮ್ಮಡಿ ಬಲ್ಲಾಳ ಹರಿಹರಪುರದ ಕಟ್ಟೆಗೆ ಬಿಜಯಂಗೈದು ಆರೋಗಣೆಯ ಮಾಡಿ ಕಟ್ಟೆ ಕಾಲುವೆಯ ಚಿತ್ತತಿಸಿ ಕಟ್ಟೆ ಕಾಲುವೆಗಳಿಗೆ ನಿರ್ವಹಣೆಗೆ ದಾನ ನೀಡಿದ.

ಧಾರ್ಮಿಕವಾಗಿರುವ ಶಾಸನಗಳಲ್ಲಿ ಕ್ರಿ.ಶ. ೭೭೬-೭೭ರಲ್ಲಿ ಕುಂದಾಚ್ಚಿ ಎಂಬಾಕೆ ಕಟ್ಟಿಸಿದ ಶ್ರೀಪುರದ ಲೋಕತಿಲಕ

ವೆಂಬ ಬಸಿದಿಯೇ ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಲಭ್ಯವಾಗುವಂತಹ ಅತ್ಯಂತ ಪ್ರಾಚೀನ ಉಲ್ಲೇಖ. ಶೈವ, ವೈಷ್ಣವ ಹಾಗೂ ಜೈನ ಧರ್ಮವು ಸಮಾನವಾಗಿ ಬೆಳೆದವು. ದೇವಾಲಯಗಳ ಜೀರ್ಣೋದ್ಧಾರಕ್ಕೆ ಕ್ರಿ.ಶ. ೧೧೩೪ರಲ್ಲಿ ಹೊಯ್ಸಳ ಅರಸಿ ಬಮ್ಮಲದೇವಿ ನಾಗಮಂಗಲದ ಶಂಕರ ನಾರಾಯಣ ದೇವಾಲಯ ಜೀರ್ಣೋದ್ಧಾರವನ್ನು ಮಾಡಿದ ವಿವರವಿದೆ. ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಅನೇಕ ಪ್ರಾರ್ಥನಾ ಮಂದಿರಗಳು ನಿರ್ಮಾಣಗೊಂಡವು. ಶ್ರೀರಂಗಪಟ್ಟಣದಲ್ಲಿ ಗುಂಬಜಿಗೆ ಸೇರಿದ ಸುಮಾರು ೧೭೮೭ರ ಶಾಸನವು ಶ್ರೀರಂಗಪಟ್ಟಣದಲ್ಲಿ ಟಿಪ್ಪುವು ಕಟ್ಟಿಸಿದ ಬೃಹದಾಕಾರದವಾದ ಮಸೀದಿ ಹಾಗೂ ಅದರ ಕಾಲವನ್ನು ತಿಳಿಸುತ್ತದೆ. ೧೭೯೧ರಲ್ಲಿ ಶ್ರೀರಂಗಪಟ್ಟಣದ ಕೋಟೆ ನಿರ್ಮಾಣವಾಗಿದೆ ಎಂದು ಶ್ರೀರಂಗಪಟ್ಟಣ ಶಾಸನ ತಿಳಿಸುತ್ತದೆ.

ಭಾಷೆ ಮತ್ತು ಸಾಹಿತ್ಯ ದೃಷ್ಟಿಯಿಂದ ತಾಮ್ರ ಶಾಸನಗಳು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದವು. ದಾನವಿತ್ತ ಗ್ರಾಮದ ಸೀಮಾ ವಿವರ ಕೊಡುವಾಗ ಕನ್ನಡ ಭಾಷೆ, ತಮಿಳು ಶಾಸನಗಳು ಕೆಲವು ಪ್ರದೇಶಗಳಲ್ಲಿ ಹೊಯ್ಸಳರ ಕಾಲ ಕನ್ನಡ ಲಿಪಿ ಮತ್ತು ಭಾಷಾ ಸೌಂದರ್ಯ ನಿರೂಪಣೆ ಬಹಳ ಸೊಗಸಾಗಿತ್ತು.

ಕೊನೆಯದಾಗಿ ತಲಕಾಡು ಗಂಗರಿಂದ ಆರಂಭವಾಗಿ ಇತ್ತೀಚಿನ ಮೈಸೂರಿನ ಒಡೆಯರ್‌ವರೆಗಿನ ಎಲ್ಲಾ ರಾಜವಂಶಗಳೂ ಈ ಜಿಲ್ಲೆಯ ಸಂಪತ್ತಿನಿಂದ ಆಕರ್ಷಿಸಲ್ಪಟ್ಟ ಇಲ್ಲಿ ರಾಜ್ಯಭಾರ ನಡೆಸಿದ್ದು ಈಗ ಇತಿಹಾಸ. ಆದರೆ ಇದರ ಆಧಾರವಾಗಿ ಸಂಸ್ಕೃತ, ಕನ್ನಡ, ತಮಿಳು ಭಾಷೆಗಳಲ್ಲಿ ಬರೆಯಲಾದ ನೂರಾರು ಶಾಸನಗಳು ದೊರಕಿವೆ. ಇದರಿಂದ ಈ ಜಿಲ್ಲೆಯಲ್ಲಿ ಹೊಯ್ಸಳ ಶಾಸನಗಳ ಕೊಡುಗೆ ಅಪಾರ 'ವಾಗಿವೆ ಎಂದರೆ ತಪ್ಪಾಗಲಾರದು.

ಡಾ. ಎಸ್.ಕೆ. ಮೇಲಾಕಾರ*
ಡಾ. ಸಂಗಮೇಶ ಕಲ್ಯಾಣಿ**

# ಆದಿಲ್ ಶಾಹಿಗಳ ಅಪ್ರಕಟಿತ ಫರ್ಮಾನ ಮತ್ತು ಸನದುಗಳು

ಕವಿ ಕಾವ್ಯಗಳನ್ನು ಕಲ್ಪನೆ ಮಾಡಿ ಬರೆದರೆ, ಇತಿಹಾಸ ಆಧಾರಗಳನ್ನಿಟ್ಟುಕೊಂಡು ಬರೆದದ್ದಾಗಿದೆ. ಆದರೆ ಫರ್ಮಾನುಗಳು ಸನದುಗಳು ಬಾದಶಹರು ಬರೆಯಿಸಿದ್ದವುಗಳಾಗಿವೆ.

೧. ಫರ್ಮಾನುಗಳೆಂದರೆ – ಬಾದಶಹನ ಆಜ್ಞೆಗಳು – ಆದೇಶಗಳಾಗಿವೆ.

೨. ಸನದುಗಳೆಂದರೆ, ಜಹಗೀರು, ದಾನ, ದತ್ತಿ ಹಾಕಿಕೊಟ್ಟ ದಾಖಲೆಗಳು

ಆದಿಲ್‌ಶಾಹಿಗಳು ತಮ್ಮ ಆಡಳಿತಾವಧಿಯಲ್ಲಿ ಅಂತಹ ಸಾವಿರಾರು ಫರ್ಮಾನುಗಳು ಮತ್ತು ಸನದುಗಳನ್ನು ಹೊರಡಿಸಿದ್ದಾರೆ. ಅವು **ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಮತ್ತು ತಮಿಳುನಾಡಿನ** ದೇಸಾಯಿ, ದೇಶಪಾಂಡೆ, ದೇಶಮುಖ, ಜಹಗೀರದಾರರು, ಇನಾಮದಾರರು, ಕುಲಕರ್ಣಿಗಳು, ಜೋಯಿಸರು ಹಾಗೂ ಪಾಳೆಗಾರರ ಮನೆಗಳಲ್ಲಿ ಇಂದಿಗೂ ದೊರೆಯುತ್ತವೆ. ಮಂದಿರ ಮಠ ಮತ್ತು ಮಸೀದಿಗಳಿಗೆ ಹಾಕಿಕೊಟ್ಟ ಸನದುಗಳು ಕೂಡಾ ದೊರೆಯುತ್ತವೆ. ೨೦ನೇ ಶತಮಾನದ ಪ್ರಾರಂಭ ದಶಕಗಳಲ್ಲಿ ಭಾರತ ಇತಿಹಾಸ ಸಂಶೋಧಕ ಮಂಡಳ ಪುಣೆ ಮತ್ತು ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ ಧಾರವಾಡ, ಕನ್ನಡ ಸಂಶೋಧನ ಸಂಸ್ಥೆ, ಕ.ವಿ.ವಿ., ಧಾರವಾಡ, ಈ ಸಂಸ್ಥೆಗಳು ನಾಡಿನುದ್ದಗಲಕ್ಕೂ ಸಂಚರಿಸಿ ಸಾವಿರಾರು ಫರ್ಮಾನು–ಸನದುಗಳನ್ನು ಸಂಗ್ರಹಿಸಿ ಗಂಟುಕಟ್ಟಿ ಕಬಾರ್ಡುಗಳಲ್ಲಿ ಇಟ್ಟಿರುವುದು ತಿಳಿದು ಬಂದಿರುತ್ತದೆ. ಅವುಗಳ ಕುರಿತು ಹೆಚ್ಚಿನ ಅಧ್ಯಯನ ನಡೆದಾಗ ಆದಿಲ್‌ಶಾಹಿಗಳ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಚೆಲ್ಲುವಂತಹ ಅನೇಕ ಕುತೂಹಲಕಾರಿಯಾದ ವಿಷಯಗಳು ತಿಳಿಯಲು ಸಾಧ್ಯತೆಗಳಿವೆ. ಆ ನಿಟ್ಟಿನಲ್ಲಿ ಇತ್ತೀಚಿಗೆ ಅನೇಕ ಸನದು ಹಾಗೂ ಫರ್ಮಾನುಗಳನ್ನು ಸಂಗ್ರಹಿಸಿ ಅಧ್ಯಯನ ಪ್ರಾರಂಭಿಸಲಾಗಿದೆ. ಅವುಗಳಲ್ಲಿ ನನ್ನ ಗಮನಕ್ಕೆ ಬಂದ ಎರಡು ಅಪ್ರಕಟಿತ ದಾಖಲೆಗಳನ್ನು ಡಾ. ಸಂಗಮೇಶ ಕಲ್ಯಾಣಿ ಅವರ ಸಹಕಾರದಿಂದ ಪರಿಶೀಲನೆ ಗೊಳಪಡಿಸಿ ಅದರ ವಿಷಯವನ್ನು ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

ಮೊದಲನೆಯದು ಬಾಗಲಕೋಟ ಮಾಮಲೇದಾರ ಮನ್ನಿಕಟ್ಟಿ(ಕೇರಿ) ದೇಸಾಯಿ ಇವರಿಗೆ ಸಂಬಂಧಿಸಿದ್ದಾಗಿದೆ. ಅದರಲ್ಲಿ ರಾಜನ ಆದೇಶವು ಹೀಗೆ ಪಾಸಾಯಿತು: ಹಿಜರಿ ತಿಂಗಳು ೧೦೬೮ (೧೬೫೮–೫೯)ರ ನಮ್ಮ ದರ್ಬಾರದಲ್ಲಿದ್ದ ಒಬ್ಬ ಮಂತ್ರಿ (ಕ್ಯಾಬಿನೆಟ ಬಹದ್ದೂರ) ಬಹಳ ಧೈರ್ಯಶಾಲಿ ನುರಿತ ಸೇನಾಪತಿ ಇರುತ್ತಾರೆ. ಇವರು ಶಾಹಿ ಮನೆತನದ ಸಲುವಾಗಿ ಸಾಕಷ್ಟು ಸೇವೆ ಮಾಡಿರುತ್ತಾರೆ. ಈ ಮಂತ್ರಿಯವರ ಮಗನು ಸಹ ಒಬ್ಬ ಧೈರ್ಯಶಾಲಿ ಸೈನಿಕನಿದ್ದಾನೆ. ಇವನ ಹೆಸರು ಫಜಲ್‌ಖಾನ್ ಮಹಮ್ಮದ ಶಾಹಿ ಎಂದಿರುತ್ತದೆ. ನಾವು ಇವರನ್ನು ಈ ಭಾಗದ ಸುಬೇದಾರ ಸ್ಥಾನದಲ್ಲಿ ನೇಮಕ ಮಾಡಿ ರಾಜಸೈನ್ಯದೊಂದಿಗೆ ಕಳುಹಿಸಿರುತ್ತೇವೆ. ಕಾರಣ ನಿಮಗೆ ಆದೇಶ ಕೊಡುವುದೇನೆಂದರೆ ನೀವು ಈ ರಾಜಾಸೇನೆಯ ಆಜ್ಞೆ ಪಾಲಿಸುತ್ತಾ ಯುದ್ಧದಲ್ಲಿ ಸೇರಿಕೊಂಡು ರಾಜನ ಸೈನ್ಯಕ್ಕೆ ಸಹಾಯಮಾಡಿ ತಮ್ಮ ಒಳ್ಳೆಯ ಸೇವೆ ಅರ್ಪಿಸುತ್ತಾ ಇವರ ಹೆಸರು ಹಾಗೂ ಕೀರ್ತಿ ತರುವಂತೆ ಪ್ರಯತ್ನಿಸಬೇಕು. ಸೇನಾಪತಿಯು ಯಾವತ್ತು ಯಾವುದೇ ಕ್ಷಣದಲ್ಲಿ ದಯೆ ಆಜ್ಞೆ ಪಾಲನೆಯಲ್ಲಿ ಕೊಡಿರಿ. ನಮ್ಮ ಆದೇಶ ತಲುಪಿದ ಒಂದು ಕ್ಷಣವೂ ತಡ ಮಾಡದೆ ತಕ್ಷಣ ಸೈನ್ಯದಲ್ಲಿ ಸೇರಿರಿ. ಹಾಗೂ ಯುದ್ಧ ಭೂಮಿಯಲ್ಲಿ ನಿಮ್ಮ ಜಾಣತನ ತೋರಿರಿ. ಭಾಷಾರ ಆಜ್ಞೆಯ ಪ್ರಕಾರ ೧೦೬೮ರ ಹಿಜರಿ ಸನ್ ಜಮಾರಿ ಲಾವಂದ್‌ರಂದು ಹುಕುಂ ನೀಡಲಾಗಿದೆ ಎಂದು ಫರ್ಮಾನದಲ್ಲಿ ಬರೆಯಿಸಲಾಗಿದೆ.

ಈ ಫರ್ಮಾನದ ಸುಳುವನ್ನು ಆಧರಿಸಿ ಹೇಳುವುದಾದರೆ ಬಿಜಾಪೂರ ಎರಡನೆಯ ಅಲಿ ಆದಿಲ್‌ಶಾಹನ ಆಳ್ವಿಕೆ ಕಾಲದಲ್ಲಿ (ಅಂದರೆ ಕ್ರಿ.ಶ. ೧೬೫೦ರಿಂದ ೧೬೭೨) ಒಂದು ಕಡೆ ಮೊಗಲ ದೊರೆ ಔರಂಗಜೇಬನ ದಾಳಿಗಳು, ಇನ್ನೊಂದೆಡೆ ಶಿವಾಜಿಯ ದಾಳಿಗಳು ಬಿಜಾಪುರ ಆದಿಲ್‌ಶಾಹಿಗಳಿಗೆ ದೊಡ್ಡ ಸವಾಲುಗಳಾಗಿದ್ದವು. ಅದೇ ಸಂದರ್ಭದಲ್ಲಿ ಮೊಗಲರ ದೊರೆ ಷಹಜಹಾನನು ಅನಾರೋಗ್ಯದ ನಿಮಿತ್ಯವಾಗಿ ಔರಂಗಜೇಬನು (೧೬೫೭ರಲ್ಲಿ) ಆಗ್ರಾಕ್ಕೆ ತೆರಳಿದನು.

* ಮ್ಯೂಜಿಯಂ ಕ್ಯೂರೇಟರ್, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
** ಶಿಕ್ಷಕರು ಮತ್ತು ಮೋಡಿಲಿಪಿ ತಜ್ಞರು, ಮುಧೋಳ ಜಿಲ್ಲೆ, ಬಾಗಲಕೋಟೆ.



ಹಿಜರಿ ೧೧೬೭ಲ ಆದಿಲ್ ಶಾಹಿ ಫರ್ಮಾನ

ಆಗ ಇತ್ತ ಶಿವಾಜಿ ಜಂಜೀರಾದ ಮೇಲೆ ದಾಳಿ ಮಾಡಿದನು. ಆದರೆ ಬಿಜಾಪುರದ **ಪುತಃಖಾನದಿಂದ** ಎರಡು ಬಾರಿ ಸೋತನು ಇದರಿಂದ ಉತ್ಸಾಹಿತರಾದ ಆದಿಲ್‌ಶಾಹಿಗಳು ಶಿವಾಜಿಯನ್ನು ಸಂಪೂರ್ಣವಾಗಿ ಕೊನೆಗೊಳಿಸಲು ಅಫಜಲ್‌ಖಾನನೊಂದಿಗೆ ಭಾರಿ ಸೈನ್ಯ ಕಳುಹಿಸಿದರು. ಆದರೆ ಕ್ರಿ.ಶ. ೧೬೫೯ ನವ್ಹೆಂಬರ್ ೧೦ರಂದು ಪ್ರತಾಪಘಡದಲ್ಲಿ ಒಪ್ಪಂದದ ನೆಪದಲ್ಲಿ ಶಿವಾಜಿಯು ಅಫಜಲ್‌ಖಾನನನ್ನು ಕೊಂದನು. ಅಲ್ಲದೆ ಬಿಜಾಪೂರ ಸೈನ್ಯವನ್ನು ಹಿಮ್ಮೆಟ್ಟಿಸಿ ಕ್ರಿ.ಶ. ೧೬೬೦ರಲ್ಲಿ ದಾಬೋಲ್ ಕೋಟೆಯೊಂದಿಗೆ ಅನೇಕ ಪ್ರದೇಶಗಳನ್ನು ಗೆದ್ದು ಕೊಂಡನೆಂದು ತಿಳಿದು ಬರುತ್ತದೆ. ಮತ್ತು ಅಫಜಲಖಾನನ ಮರಣದ ನಂತರ ಬಿಜಾಪೂರ ಸೈನ್ಯದ ಮುಖಂಡತ್ವವನ್ನು ವಹಿಸಿಕೊಂಡು ಯುದ್ಧದಲ್ಲಿ ತೊಡಗಿದ ಆತನ ಮಗ ಫಜಲಖಾನನನ್ನು ಸಹ ಶಿವಾಜಿ ಸೈನ್ಯ **ಪನ್ಹಾಳ** ಹತ್ತಿರದ ಯುದ್ಧದಲ್ಲಿ ಸೋಲಿಸಿ **ಪನ್ಹಾಳ ಕೋಟೆ** ಮತ್ತು **ಕೊಂಕಣದ** ಅನೇಕ ಕೋಟೆಗಳನ್ನು ವಶಪಡಿಸಿಕೊಳ್ಳಲಾಯಿತೆಂದು "ಬಿಜಾಪೂರದ ಆದಿಲ್‌ಶಾಹಿ"(ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ ಪುಟ ೧೫೧-೧೫೫) ಎಂಬ ಸಂಶೋಧನಾ ಗ್ರಂಥದಲ್ಲಿ ವಿಶ್ಲೇಷಿಸಲಾಗಿದೆ. ಹೀಗೆ ಆದಿಲ್‌ಶಾಹಿಗಳು ಶಿವಾಜಿ ಮೇಲೆ ಯುದ್ಧ ಸಾರಿದ ಸಂದರ್ಭದಲ್ಲಿ ಅಫಜಲಖಾನನು ಮರಣ ಹೊಂದಿದ ನಂತರ ಆತನ ಮಗ ಫಜಲಖಾನನ ಸೈನ್ಯದಲ್ಲಿ ಸೇರಿಕೊಂಡು ರಾಜನ ಸೈನ್ಯಕ್ಕೆ ಸಹಾಯ ಮಾಡ ಬೇಕೆಂದು ಅನೇಕ ಫರ್ಮಾನುಗಳನ್ನು ಆಗ ಹೊರಡಿಸಲಾಯಿತೆಂದು ಹೇಳಲಾಗಿದೆ. ಆ ಕಾಲದಲ್ಲಿ ಹೊರಡಿಸಿದ ಫರ್ಮಾನು ಗಳಲ್ಲೊಂದಾದ ಮಹತ್ವದ ಫರ್ಮಾನು ಇದಾಗಿತ್ತೆಂದು ಗೋಚರಿಸುತ್ತದೆ.

ಇಲ್ಲಿ ದೊರೆತ ಫರ್ಮಾನದ ಸಾರವೇನೆಂದರೆ ಈಗ ನಾವು ಯುದ್ಧಕ್ಕೆ ಹೊರಟಿದ್ದೀವಿ. ಅದು ಕಾರಣ ನೀವು ನಮ್ಮೊಂದಿಗೆ ಬಂದು ಸೇರಬೇಕು. ಯುದ್ಧಕ್ಕೆ ಸಹಕಾರ ನೀಡಬೇಕೆಂದು ನೆರವಾಗಬೇಕೆಂದು ಬಾದಶಹರಿಂದ ಮಾಮಲೇದಾರ ಮನ್ನಿಕೇರಿ ದೇಸಾಯಿಯವರಿಗೆ ರಾಜನ ಆದೇಶವು ಹೀಗೆ ಪಾಸಾಯಿತೆಂದು ಉಲ್ಲೇಖವಾಗಿರುತ್ತದೆ.

**ಎರಡನೆಯದಾಗಿ ಈ ಫರ್ಮಾನು ಜೊತೆ ಸನದು ದಾಖಲೆಯೊಂದು ಲಭ್ಯವಾಗಿದೆ.** ಇದರಲ್ಲಿ ಬಾಗಲಕೋಟೆ ದೇಸಾಯಿಯವರಿಗೆ ಮಾಮಲೇದಾರ ತಹಶೀಲ್ದಾರ ಅವರಿಗೆ ಬಿಜಾಪೂರದ ಭಾಷಾರು ಹೇಳಿದ್ದು ಈ ರೀತಿ ಪ್ರಕಟಪಡಿಸುವು ದೇನೆಂದರೆ ೧೦೪೭ ಹಿಜರಿ ತಿಂಗಳಲ್ಲಿ (೧೬೪೮ನೇ ಇಸ್ವಿ) ಭಾಷಾನು ವಿಶೇಷ ಪ್ರಶಸ್ತಿ ಬರುವುದರಿಂದ ವಿನಾಮ ದಿಂದ ಮೇಲಿನ ಏಕ್(೧) ಕೇರಾ ಅದರ ಹೊರಗಡೆ ಇದ್ದು ಸಿಕ್ತ ಕುಂದರಿಯ ಗ್ರಾಮವನ್ನು ಕೊಟ್ಟಿದ್ದು ಇದೇ ಎಂದು ದಾಖಲಿಸಲಾಗಿದೆ.

ಒಟ್ಟಾರೆ ಈ ಎರಡು ದಾಖಲೆಗಳು ಅಪ್ರಕಟಿತವಾಗಿದ್ದು ಇವುಗಳು ಬಿಜಾಪೂರ ಆದಿಲ್‌ಶಾಹಿಗಳ ಚರಿತ್ರೆಯ ರಚನೆಯಲ್ಲಿ ಇತಿಹಾಸ ಅಧ್ಯಯನಕಾರರಿಗೆ ಅತ್ಯಮೂಲ್ಯವಾದ ಮಾಹಿತಿಯನ್ನು ನೀಡುತ್ತವೆ ಎಂದು ಹೇಳುಬಹುದಾಗಿದೆ.

# ಆಧಾರಸೂಚಿ


೧. ಕುಲಕರ್ಣಿ ಕೃಷ್ಣಕೋಲಾರ, ೧೯೯೯, **ಬುಸಾತಿನೆ ಸಲಾತಿನ** (ಅನು) ಪ್ರಸಾರಾಂಗ, ಕ.ವಿ.ವಿ., ಹಂಪಿ.

೨. ಡವಳಗಿ ಸಂಗನಗೌಡ, ೨೦೦೧, **ಬಿಜಾಪುರ ಒಂದನೆಯ ಅಲಿ ಆದಿಲ್‌ಶಾಹನ ಜೀವನ ಮತ್ತು ಸಾಧನೆ**, ಕ.ವಿ.ವಿ., ಧಾರವಾಡ.

೩. ಸಜ್ಜನ ವಿ. ಸತೀಶ, ೨೦೦೪, **ಬಿಜಾಪುರ ಆದಿಲ್‌ಶಾಹಿ ರಾಜ್ಯದ ಆಡಳಿತ ಪದ್ಧತಿ ಒಂದು ಅಧ್ಯಯನ**, ಕ.ವಿ.ವಿ., ಧಾರವಾಡ.

೪. ಬಿ. ಷೇಖ್‌ಅಲಿ, ೧೯೯೭, **ಕರ್ನಾಟಕ ಚರಿತ್ರೆ, ಸಂಪುಟ-೪**, ಪ್ರಸಾರಾಂಗ, ಕ.ವಿ.ವಿ., ಹಂಪಿ.

೫. **ಕನಾಟಕ ರಾಜ್ಯ ಗ್ಯಾಸೆಟಿಯರ್**, (ಸಂ.) ಸೂರ್ಯನಾಥ ಕಾಮತ್, ೧೯೮೪. ಬೆಂಗಳೂರು.

೬ **ಬಿಜಾಪುರ ಜಿಲ್ಲಾ ಗ್ಯಾಸೆಟಿಯರ್**, (ಸಂ.) ಡಾ. ಮುನಿಸ್ವಾಮಿ ಆರ್. ೧೯೯೯, ಬೆಂಗಳೂರು.

೭. ಶ್ರೀಮತಿ ರಮಾ ಜಿ. ಗುಂಡುರಾವ್. ೨೦೦೯, 'ಬಿಜಾಪೂರ ಮತ್ತು ಗುಲ್ಬರ್ಗಾ ನಗರದಲ್ಲಿರುವ ಆದಿಲ್‌ಶಾಹಿ ಹಾಗೂ ಬಹಮನಿ ಗೋರಿಗಳು', ಕ.ವಿ.ವಿ., ಧಾರವಾಡ, ಎಂ.ಫಿಲ್ ಪ್ರಬಂಧ.

೮. Abdul Goni Imartwale 2007, *History of Bijapur Subah* New Delhi.

೯. Cousen Henry and Rehatsek 1890 *'Notes on the Building and other Antiquarian Remains at Bijapur'*, Bombay.

೧೦. Cousens Henry 1961 *'Bijapur and its Architectural Remains'*, Bombay.

೧೧. Fercy Brown 1942 *Indian Architecture (The Islamic period)*, Bombay.

೧೨. Nayeem M.A. 2009, *The heritage of the Adil Shahis of Bijapur*, Bijapur.

೧೩. H.K.Sherwani & Joshi P.M. 1973, *History of Medival Deccan*, New Jeresy University.

ಡಾ. ಎಸ್.ವ್ಹಿ. ಅಯ್ಯನಗೌಡರ*

# ಕರ್ನಾಟಕ ಇತಿಹಾಸ ದಾಖಲೆಗಳಾಗಿ : ಹೆಳವರ ಹೊತ್ತಗೆಗಳು

ಹೆಳವರು : ಹೆಳವ (ಕ) ಕಾಲಿಲ್ಲದವ, ಕುಂಟ ಎಂದರ್ಥವಿದೆ (ಪುಟ-೪೨೨ ಕನ್ನಡ ಕಸ್ತೂರಿ ಕೋಶ). ಸುಭಾಸ ನಿಘಂಟುವಿನಲ್ಲಿ – ಹೆಳವ (ನಾ) ಕುಂಟ, Lame man ಎಂದಿದೆ.

ಡಾ. ನಿಂಗಣ್ಣ ಸಣ್ಣಕ್ಕಿಯವರು 'ಲಿಂಗಾಯತ' ಪತ್ರಿಕೆ ಸಂ. ೪, ಸಂ. ೯, ಡಿಸೆಂಬರ್ ೨೦೦೯ (ಪುಟ ೩೩ ರಿಂದ ೩೭) ರಲ್ಲಿ ಮನೆತನಗಳ ಇತಿಹಾಸ ಹೇಳುವ ವೃತ್ತಿಯವರನ್ನು ಹೆಳವರೆಂದು ಕರೆಯುತ್ತಾರೆ. ಹೀಗಾಗಿ 'ಹೆಳವ' ಶಬ್ದದ ಅರ್ಥ ಹೇಳುವವ–ಹೇಳುವವರು ಎಂದು ಕಂಡರೂ 'ಹೆಳವ' ಎಂದರೆ ಕಾಲಿಲ್ಲದವ, ಕುಂಟ ಎಂಬುದು ವಾಚಾರ್ಥ ಎಂದು ಹೇಳಿ, ಇವರ ಮೇಲೆ ಹುಟ್ಟಿಕೊಂಡ ದಂತ ಕಥೆಗಳನ್ನು ಸೂಚಿವರು. ಶಿವ ಮೆಚ್ಚಿಕೊಟ್ಟ (ಹೋರಿ) ಎತ್ತಿನ ಮೇಲೆ ಕುಳಿತು ಗಂಟೆ ಬಾರಿಸುತ್ತ ಬರುವವರು ಎನ್ನುವರು.

### ಹೆಳವರ ಪ್ರಕಾರಗಳು

ಡಾ. ನಿಂಗಣ್ಣ ಸಣ್ಣಕ್ಕಿ ಪ್ರಕಾರ –

೧. ಎತ್ತಿನ ಹೆಳವರು, ೨. ಚಾಪೆ ಹೆಳವರು, ೩. ಹಂದಿ ಹೆಳವರು, ೪. ದೂದಿ ಹೆಳವರು, ತಿತ್ತಿ ಹೆಳವರು, ೬. ಕೂಕಣಿ ಹೆಳವರು, ೭. ಮಂದಲ ಹೆಳವರು, ೮. ಕಂಬಿ ಹೆಳವರು (ಶ್ರೀ ಮಲ್ಲಿಕಾರ್ಜುನನ 'ಕಂಬಿ' ಹೊರುವವರು ; ಬಸವಣ್ಣನ ಕಾಲದಿಂದ ಲಿಂಗದೀಕ್ಷೆ ಪಡೆದವರು). ೯. ಅಡವಿ ಹೆಳವರು, ೧೦. ಊರ ಹೆಳವರು, ೧೧. ಸಾಧು ಹೆಳವರು, ೧೨. ಜಾತಿ ಹೆಳವರು, ೧೩. ತಂಬೂರಿ ಹೆಳವರು.

ಎಂದು ವರ್ಗೀಕರಿಸಿ ಎತ್ತಿನ ಹೆಳವರು 'ಕಡತ'ಗಳನ್ನು ಹೊಂದಿದ್ದು, ಅವು ಗ್ರಾಮಗಳಲ್ಲಿ ವಾಸಿಸುವ ವಂಶಾವಳಿ ಹೇಳುವದಾಗಿ ತಿಳಿಸುವರು. ಕಂಬಿ ಹೆಳವರು, ಶ್ರೀಶೈಲಕ್ಕೆ ಹೋಗಿ ದೀಕ್ಷೆ ಪಡೆದು ಲಿಂಗಾಯತರಾದವರು. ಶ್ರೀಶೈಲದಲ್ಲಿ ಇವರ ಮೂಲಮಠವಿದ್ದು, ಮಲ್ಲಯ್ಯನ ಸಂಕೇತವಾದ ಕಂಬಿಯನ್ನು ಹೊರುವರೆಂದು ಸೂಚಿಸುತ್ತಾರೆ.

ಹೆಳವರ ಸ್ಮರಣ ಶಕ್ತಿ ಅಸಾಧಾರಣ, ನಡೆದಾಡುವ ವಿಶ್ವಕೋಶವಿದ್ದಂತೆ ಅವರು. ರಾಜ–ಮಹಾರಾಜರ, ಜನಸಾಮಾನ್ಯರ ಇತಿಹಾಸ ವಂಶಾವಳಿ–ದಾಖಲಿಸುವ ಹೆಗ್ಗಳಿಕೆ ಇವರದಾಗಿದೆಯೆನ್ನುವರು.

### ಹೆಳವರ ಹೊತ್ತಗೆಗಳು

ಕಂಚು–ಕೋರಿಕಾಗದದಲ್ಲಿ ಲಭ್ಯವಾಗುವ ಇವುಗಳಲ್ಲಿ ಕೋರಿಕಾಗದ ೧೩ ೧/೨' X ೨೧/೨' ಅಗಲ X ಉದ್ದದಲ್ಲಿವೆ.

ಇವರು ಸ ಚಾರಿ–ಅರೆಸಂಚಾರಿ ಜನಾಂಗ ಒಕ್ಕಲು ಮನೆತನದವರ, ಗೌಡರ, ಓಲೆಕಾರಿಕೆ ಮಾಡುವವರ ೧) ಮೂಲಸ್ಥಳ, ೨) ದೇವರ ನಾಮಾವಳಿ, ೩) ವಲಸೆ ಬಂದ ಸ್ಥಳ, ೪) ಅವರ ಶೌರ್ಯಾದಿಗಳ ವರ್ಣನೆ, ೫) ಸಂಪಾದಿಸಿದ ಸಂಪತ್ತುಗಳ ವರ್ಣನೆ, ಅನುಭವಿಸಿದ ಅಧಿಕಾರ– ಮುಂತಾದವು ಒಕ್ಕಲು ಕುಲಗಳನ್ನು ಹಾಡಿ ಹೊಗಳುವರು. ಹೆಳವರ ಸಾಂಸ್ಕೃತಿಕ ಸಂಘಗಳನ್ನು ಕಟ್ಟಿಕೊಂಡಿರುವರು. (ಬೆಳಗಾಂವ ಜಿಲ್ಲಾ ಹಾರೂಗೇರಿ ತಾಲ್ಲೂಕು, ರಾಯಬಾಗ). ಕರ್ನಾಟಕದ ಹಳ್ಳಿಗಳ ಬಗೆಗೆ, ಅಲ್ಲಿ ವಾಸಿಸುವ ಜನಾಂಗಗಳ ಬಗೆಗೆ, ಸ್ಥಳಾಂತರಗೊಳ್ಳುತ್ತ ಬಂದ ಇತಿಹಾಸಗಳ ಬಗೆಗಿನ ಸ್ಥಳನಾಮ – ಗ್ರಾಮ ನಾಮ – ವ್ಯಕ್ತಿ ನಾಮಗಳ ವಂಶಾವಳಿಗಳ ಬಗೆಗಿನ ಮಾಹಿತಿಗಳು ಕರ್ನಾಟಕದಲ್ಲಿರುವ ಗ್ರಾಮಗಳ ವ್ಯಕ್ತಿನಾಮಾಂಕಿತಗಳ ಹೆಸರುಗಳನ್ನು ವಂಶ ಪಾರಂಪರ್ಯವಾಗಿ ಮೌಖಿಕವಾಗಿ, ಕಂಚು–ಕೋರಿಕಾಗದಗಳಲ್ಲಿ ಸಂಗ್ರಹಿಸುತ್ತ–ಸಂಕಲಿಸುತ್ತ ಬಂದಿರುವದು 'ಹೆಳವರ' ಸ್ತುತ್ಯ ಕಾರ್ಯವಾಗಿದೆ.

'ಹೆಳವರು' ಎನ್ನುವ ಜನಾಂಗ ಚಕ್ಕಡಿಬಂಡಿ, ಎತ್ತುಗಳ ಮೇಲೆ ದಿನಕ್ಕೊಂದು, ೫ ದಿನಕ್ಕೊಂದು ಹಳ್ಳಿಯನ್ನು ಅಡ್ಡಾಡುತ್ತ ಮನೆ ಮನೆಗೆ ಹೋಗಿ ವಂಶಾವಳಿ ಹೇಳುತ್ತ 'ಹರಕೆ' ಹಾಕಿ, ಊಟ ಮಾಡಿ, ಮನೆಗಳಿಗೆ, ಮನೆತನದವರಿಗೆ ದೇವರ ಹೆಸರಿನಲ್ಲಿ ಹರಕೆ ಕೊಟ್ಟು 'ಮನ–ಮನೆ' ಉಜ್ವಲವಾಗುವಂತೆ ಹರಸುವದು ಅವರ ಕಾಯಕ, ಹೆಳವರು ಮನೆಯ ಮಕ್ಕಳು ಎಂದೇ ಭಾವಿಸಿದ ಹಳ್ಳಿಯ ಜನ ತಾವು ಬಿತ್ತಿ ಬೆಳೆದ ಧಾನ್ಯಗಳನ್ನು 'ದಾನ' ಮಾಡುವದು, ಬಟ್ಟೆಗಳನ್ನು ದಾನವಾಗಿ ನೀಡುವದು, ಹಂಡೆ, ಕೊಡಪಾನ, ಬಂಗಾರದ ಉಂಗುರ,

* ಕನ್ನಡ ಪ್ರಾಧ್ಯಾಪಕರು, ಕ.ವಿ.ವಿ., ಧಾರವಾಡ. ಸ್ನಾತಕೋತ್ತರ ಕೇಂದ್ರ, ಹಾವೇರಿ.

ಆಭರಣಗಳನ್ನು 'ದಾನ' ಮಾಡುವದು, ಅವರ ಯೋಗಕ್ಷೇಮ ರಕ್ಷಕರಾಗಿ ಇಂದಿನವರೆಗೂ ನೋಡುತ್ತ ಬಂದಿರುವುದೂ ಅವರ 'ಕಾಯಕ' ಕಾರ್ಯವಾಗಿದೆ ; ಇವರ 'ದಾಸೋಹ'ವಾಗಿದೆ.

**ಹೊತ್ತಗೆಗಳ ವಸ್ತು**

ಹೆಳವರು ಹಾಡಿ ಹರಸುವ ಗದ್ಯ-ಪದ್ಯ ಭಾಗದ ತುಂಡುಗಳು ಧರ್ಮದ, ಆಧ್ಯಾತ್ಮದ – ನಂಬುಗೆಯ ಶಕ್ತಿಯ ದ್ಯೋತಕಗಳಾಗಿರುತ್ತವೆ. ಅವು "ಮಾನವನ ಸಂಬಂಧದ" ದೈವೀ ಸಂಪತ್ತಿನ ನುಡಿಗಳಾಗಿರುವವು. 'ಯೋಗ' ಶಕ್ತಿಯ ಸಂಕೇತಗಳೂ ಹೌದು. ತುಂಬಾ ನಂಬಿಕೆಯುನ್ನು ಕಾಯ್ದುಕೊಂಡು ಬಂದ ಇವರನ್ನು 'Nomadic People' ಎಂದೂ ಗುರುತಿಸಿ ಸರಕಾರವು ಅವರಿಗೆ 'ನಿವೇಶನ' ಕಟ್ಟಿಸಿ (ಹಳ್ಯಾಳ, ಗೋಕಾಕ, ಧಾರವಾಡ ಹತ್ತಿರ ಮುಂತಾದವುಗಳು) ಒದಗಿಸಿದ್ದುಂಟು. ಇವರಲ್ಲಿರುವ "ವಂಶಾವಳಿಯ ಹೊತ್ತಗೆಗಳನ್ನು" ತಮ್ಮ 'ಆಸ್ತಿ'ಗಳೆಂದು ಭಾವಿಸುವರು. ಉಳಿದವರು ಸ್ಥಿರಾಸ್ತಿ-ಚರಾಸ್ತಿಗಳನ್ನು ಹಂಚಿಕೊಳ್ಳುವಂತೆ, ಕೆಲವೊಂದು ತಾಲೂಕಿನ ಹಳ್ಳಿಗಳನ್ನು ಹಂಚಿಕೊಂಡು ಅಲ್ಲಿ ವಾಸಿಸುವ ಜನರ ವಂಶಾವಳಿಯ Recordsಗಳನ್ನು ಹಂಚಿಕೊಂಡು ಸಂರಕ್ಷಿಸಿಕೊಂಡು ಬಂದಿರುವರು. ಅವರವರ ಊರಿನ ಮನೆಗಳಿಗೆ ಹೋಗಿ ವಂಶಾವಳಿ ಹೇಳಿ, ಹರಕೆ ನೀಡಿ, 'ಕಾಯಕ'ಕ್ಕೆ ಪ್ರತಿಫಲ ಪಡೆದು ಬದುಕುವದುಂಟು.

ಭಾರತ ದೇಶದ, ಕರ್ನಾಟಕ ರಾಜ್ಯದ ಮೊದಲಿನ ಧಾರವಾಡ ಜಿಲ್ಲೆಯ ಈಗಿನ ಹಾವೇರಿ ಜಿಲ್ಲೆಯ ಜೇಕಿನಕಟ್ಟಿ ಗ್ರಾಮದ ನನ್ನ ಮನೆಯ ವಂಶಾವಳಿಯನ್ನು ಹೇಳಿ, ಧಾರವಾಡದ 'ಅನುಗ್ರಹ' (ನವೋದಯ ನಗರದ) ಮನೆಗೆ ಬಂದು ವಿವರ ನೀಡಿದ ಶ್ರೀ ಫಕೀರಪ್ಪ ಹೆಳವ (ಸುಮಾರು ೬೫-೭೦ ವರ್ಷ) ಅವನ ಹತ್ತಿರವಿದ್ದ 'ವಂಶಾವಳಿ' ದಾಖಲೆಯನ್ನು ನಾನು ಪಡೆದು (Xerox Copy) ನೆರಳಚ್ಚು ಪ್ರತಿಯೊಂದಿಗೆ ಪಡೆದು ವೀಕ್ಷಿಸಿದಾಗ ಒಂದು ಪ್ರತಿಯಲ್ಲಿ ಆರಂಭ ಭಾಗದಲ್ಲಿ ಶಕೆ ೧೦೦೦ ಇದ್ದುದ್ದು ಇನ್ನೊಂದು ನಕಲು ಪ್ರತಿಯಲ್ಲಿ ೧೦೨೬ ಶಕೆ ಇದ್ದುದು ಕಂಡುಬಂದಿತು. ನನ್ನ ತಲೆಮಾರಿಗೆ ೧೬-೧೭ ತಲೆಮಾರಿನ ವಂಶಾವಳಿ ಅದರಲ್ಲಿ ದಾಖಲೆಗೊಂಡದ್ದನ್ನು ವೀಕ್ಷಿಸಿದೆನು ಹಾಗೂ ಅವನು ಮೌಖಿಕವಾಗಿ ಒಂದು ದಂತಕಥೆ ಹೀಗೆ ಹೇಳಿದನು :

ನಮ್ಮ ಮೂಲ ಪುರುಷ 'ಹೆಳವ' ಕಾಲ್ಲಿಲ್ಲದವ (ಬರುಬ) ಆಗಿದ್ದನು. ಅವನಿಗೆ 'ದೈಹಿಕ ಕಾಯಕ' ಸಾಧ್ಯವಿರಲಿಲ್ಲ. ಶ್ರೀ ಬಸವೇಶ್ವರರು ಅವರಿಗೆ ಒಂದು 'ಕಾಯಕ' ಸೂಚಿಸಿದರು ; ಅದು 'ವಂಶಾವಳಿ' ದಾಖಲಿಸಿ ರಕ್ಷಿಸಿಕೊಂಡು ಬರುವಂಥದು. ಅಂದಿನ ಕಾಲದಲ್ಲಿ ವಾಹನಗಳ ಸೌಕರ್ಯ ಇರಲಿಲ್ಲ. ಎತ್ತುಗಳ ಮೇಲೆ ಸಂಚರಿಸಿ ಹಳ್ಳಿಗರ 'ವಂಶಾವಳಿ' ದಾಖಲಿಸುತ್ತ ಹಳ್ಳಿಗಳ ವಂಶವನ್ನು ಉಳಿಸಿ, ರಕ್ಷಿಸುತ್ತ ಬದುಕುವ ಕಾಯಕವದು. ಹಳ್ಳಿ-ಹಳ್ಳಿಗಳಲ್ಲಿ ವಾಸಿಸುವ ಜನಾಂಗಗಳ, ಕುಟುಂಬಗಳ ವಂಶಾವಳಿ ಪರಂಪರಾಗತವಾಗಿ ಬರೆದಿಡುತ್ತ, ರಕ್ಷಿಸುತ್ತ ಉಳಿಸಿ ಬಳಸಿ "ಐತಿಹಾಸಿಕ ಪರಂಪರೆ" ಉಳಿಸಿ ಬೆಳಗಿದ್ದಾರೆ. ಈ ಸಂದರ್ಭದಲ್ಲಿ ನಾನು ಕುತೂಹಲವಾಗಿದ್ದ ನನ್ನ ಮನ ಶರಣರ ಕಾಲದ ಕಡೆ ತಿರುಗಿತು. ಶ್ರೀ ಬಸವೇಶ್ವರರ ಬಗೆಗೆ ಅಧ್ಯಯನ ಮಾಡುತ್ತಿದ್ದ ನಾನು ಅವರಲ್ಲಿ ಲಭ್ಯವಾಗುವ ಕೋರಿ ಕಾಗದ (ಕಂಚಿನ ಪತ್ರದಲ್ಲಿ ಬರೆದಿಟ್ಟ) ಪ್ರತಿಗಳನ್ನು ವೀಕ್ಷಿಸಿ, ಅದರಲ್ಲಿ ಶಕೆಯ ದಾಖಲೆಯು ೧೦೦೦ ಶಕೆ ಇತ್ತು. ಅದಕ್ಕೆ ೭೮ ಕೂಡಿಸಿದೆ. ೧೦೭೮ ಇಸ್ವಿ ಬಂದಿತು. ಈ ಸಂದರ್ಭದಲ್ಲಿ ಶ್ರೀ ಬಸವೇಶ್ವರರು ಜೀವಂತವಿದ್ದರೆಂಬ ನಿರ್ಣಯಕ್ಕೆ ನಾನು ಬಂದೆನು. ಇನ್ನೊಂದು ಪ್ರತಿಯಲ್ಲಿ ೧೦೨೬ (ಶಕೆಗೆ '೭೮' ಕೂಡಿಸಿದೆ ಇಸ್ವಿ ಬರುವದು) ಶಕೆಗೆ ೭೮ ಕೂಡಿಸಿದಾಗ ೧೦೨೬+೭೮=೧೧೦೪ ಇಸ್ವಿ ಬಂದಿತು. ಪುನಃ ನಾನು ನಿರ್ಣಯಿಸಿ ೧೧-೧೨ ನೆಯ ಶತಮಾನದಲ್ಲಿ ಬಸವಣ್ಣ ಜೀವಂತವಿದ್ದನೆಂದು ಅವನು ೭೧ ವರ್ಷ ೩ ತಿಂಗಳು ಬದುಕಿದ್ದನೆಂಬ ನಿರ್ಣಯಕ್ಕೆ ಬಂದೆನು. ಬಸವಣ್ಣನೇ ಹೇಳಿಕೊಂಡಂತೆ–

೨೭ ವರ್ಷ ಕೂಡಲಸಂಗಮದಲ್ಲಿ

\+ ೩೬ ವರ್ಷ ಕಲ್ಯಾಣದಲ್ಲಿ

\-------------

೬೩ ವರ್ಷ ೩ ತಿಂಗಳು

೦೮ ವರ್ಷ ಬಾಲ್ಯ ಜೀವನ

\-------------

೭೧ ವರ್ಷ ೩ ತಿಂಗಳು ಬದುಕಿದ್ದನೆಂದು ಅವನ ವಚನ ಓದಿ ನಿರ್ಣಯಕ್ಕೆ ಬಂದೆನು. (ಸಿದ್ಧರಾಮನು ೧೦೦ ವರ್ಷಕ್ಕೆ ಮಿಕ್ಕಿ ಬದುಕಿದ್ದ).

ನನ್ನ ಮನೆತನದ ಜೇಕಿನಕಟ್ಟಿ ಹಲ್ಲಿ ಮನೆತನಗಳ ವಂಶಾವಳಿ ವೀಕ್ಷಿಸಿ, ಆರಂಭದ ಭಾಗ ಓದುತ್ತ ಹೋದಂತೆ, ಭಿನ್ನ ಭಿನ್ನ ವಂಶದವರ ಮೂಲ ತಾಣ ಯಾವುದು ? ಗುರು ಯಾರು ? ಮನೆಯ ದೇವಾನು-ದೇವತೆಗಳಾರು? ಯಾವ ಯಾವ ತಾಣಗಳಿಂದ ಅವರು ಸ್ಥಳಾಂತರಗೊಳ್ಳುತ್ತ, ಎಲ್ಲೆಲ್ಲಿ ನೆಲೆ ಪಡೆಯುತ್ತ ಬಂದಿರುವರೆಂದು, ಊರಿನ ಹೆಸರುಗಳು ಹೇಗೆ ಬಂದಿವೆಯೆಂಬುದನ್ನು ತಿಳಿಯುತ್ತ ಹೋದೆ, ಆ ಗದ್ಯಭಾಗದ ಆರಂಭ ಹೀಗಿದೆ :

ಕರ್ನಾಟಕ ರಾಜ್ಯದ ಹಾವೇರಿ ಜಿಲ್ಲೆಯ ಜೇಕಿನಕಟ್ಟಿಗೆ ಸಂಬಂಧಿಸಿದ ಹೊತ್ತಗೆಯಲ್ಲಿ ನಮ್ಮ ಮನೆತನಕ್ಕೆ ಸಂಬಂಧಿಸಿದ ವಂಶಾವಳಿ ಇದ್ದು ಅದರ ಆರಂಭ ಹೀಗಿದೆ :

**ಹೊತ್ತಿಗೆ ಆರಂಭ** : "ಶ್ರೀ ಗುರು ಪ್ರಸನ್ನ । ವಂಶಾವಳಿಯಾದಿ । ಶ್ರೀ ಶಾಲಿವಾಹನ ಶಕೆ ೧೦೦೦, ಹಿಜರಿ ೭೮೦ ವರುಷದಲ್ಲಿ ಹುಟ್ಟಿದ್ದು. ಇವರ ಬೆಡಗು ಹೊನ್ನಕೋರೆನವರು, ಗುರುಗಳು ಜೇಕಿನಕಟ್ಟಿ ಹಿರೇಮಠದ ಮುರಿಗಯ್ಯನವರು, ಮುನಿದೇವರು ಜೇಕಿನಕಟ್ಟಿ ಹುತ್ತಮಲ್ಲೇಶ್ವರ, ಶಿರಹಟ್ಟಿ ಫಕೀರಸ್ವಾಮಿ, ಇವರ ತಳ್ತಾ ಸಂಗರ-ಕೆಂಬಾಗಿ ದೇಶಗತಿ ಮಾಡಿದವರು. ಹೆಸರು ದೊಡ್ಡಬಸಪ್ಪ ದೇಸಾಯಿ ; ಸಣ್ಣಬಸಪ್ಪ ದೇಸಾಯಿ. ಹೆಣ್ಣು ಮಗಳು ನೀಲಗಂಗಮ್ಮ. ಆಗ ಡಿಳ್ಳಿ ಪಾಚ್ಯಾನ ಹೊಲದ ಕಂದಾಯ ಕೊಡು ಅಂದರ ನಾವು ಕೊಡುವದಿಲ್ಲ ಅಂತ ಯ್ಯಾಜೆ ಮಾಡಿ (೧೨ ಮಂದಿ ಕಡದು) ಅಗ್ರ ಬಿಟ್ಟು ಪರತ (ಪಾ)ಹಾನಗಲಕ್ಕೆ ಬಂದು ಬಿಟ್ಟು ರತ್ನಾಗಿರಿಗೆ ಬಂದ್ರು ಬಿಟ್ಟು ಬಂಕಾಪೂರಕ್ಕೆ ಬಂದ್ರು 'ನಾಯ್ಕತನ' ಪಡೆದರು. ಬಿಟ್ಟು ಕೆಂಗಾಪುರಕ್ಕೆ ಬಂದ 'ಗವಡ್ಕಿ' ಪಡೆದರು. ಮೂಲ ಹೆಸರು ದೊಡ್ಡಬಸಪ್ಪ ದೇಸಾಯಿ (ಮನೆತನದವರ ವಂಶಾವಳಿ ಕೆಳಗಿನಂತಿದೆ) :

ದೊಡ್ಡಬಸಪ್ಪ ದೇಸಾಯಿ
|
ಮಲ್ಲನಗೌಡ
|
ಬಸನಗೌಡ
|
ದೊಡ್ಡಹುತ್ತನಗೌಡ
|
ಈರನಗೌಡ
|
ಮಲ್ಲನಗೌಡ
|
ನಿಂಗನಗೌಡ
|
ದೊಡ್ಡನಿಂಗನಗೌಡ
|
ಫಕೀರಗೌಡ
|
ಮಲ್ಲನಗೌಡ
|
ಮರಿಗೌಡ
|
ಮಲ್ಲನಗೌಡ
|
ಸಣ್ಣ ಫಕೀರಗೌಡ
|
ಸಿದ್ಧನಗೌಡ (ದತ್ತಕಪುತ್ರ)

ಶಂಕರಗೌಡ (ಮಕ್ಕಳು)
೧. ದ್ಯಾಮನಗೌಡ
೨. ಭರಮಗೌಡ
೩. ಈಶ್ವರಗೌಡ
೪. ಕೆಂಚನಗೌಡ

ವಿರೂಪಾಕ್ಷಗೌಡ (ಮಕ್ಕಳು)
೧. ಶ್ರೀಕಂಠಗೌಡ
೨. ರಾಮನಗೌಡ
೩. ಚನ್ನಪ್ಪಗೌಡ
೪. ಸೋಮನಗೌಡ
೫. ಗುರುಪಾದಗೌಡ

ವೀರಭದ್ರಗೌಡ (ಮಕ್ಕಳು)
೧. ಬಾಪುಗೌಡ
೨. ಶ್ರೀಕಾಂತಗೌಡ
೩. ಸಿದ್ಧನಗೌಡ

ಮಹದೇವಗೌಡ (ಮಕ್ಕಳು)
೧. ಯಲ್ಲಪ್ಪಗೌಡ
೨. ಚಂದ್ರಗೌಡ
೩. ಫಕೀರಗೌಡ

ನಾಗನಗೌಡ (ಮಕ್ಕಳು)
೧. ಮಲ್ಲಿಕಾರ್ಜುನಗೌಡ
೨. ಪ್ರವೀಣಗೌಡ

ಶ್ರೀಕಂಠಗೌಡ-ಶಕುಂತಲಾ (ಹೆಂಡ್ತಿ-ಗೌಡಶ್ಯಾನಿ)
(ಅವಳಿ ಜವಳಿ ಮಕ್ಕಳು)
ವಿನಯಗೌಡ   ವಿಕಾಸಗೌಡ

'ಜೇಕಿನಗಡ್ಡಿ' ಕಡಿದು ಹುತ್ತದ ಮೇಲಿನ ಗಂಜಿಪೆಳಿ ಸವರಿ ಹುಗ್ಗಿ ಹೊಯ್ದು ಗೌಡ್ಕಿ ಪಡೆದರು. ಹುತ್ತಮಲ್ಲಯ್ಯ ಉದಿಸಿಕೊಂಡ.*

ಈ ಭಾಗ ಅವಲೋಕಿಸಿದ ನಂತರ ತಿಳಿದವು ಇಷ್ಟು:

೧೦೦೦ ಶಕೆಯಲ್ಲಿಯ ಹಸ್ತಪ್ರತಿ ಇದು. ಕೋರಿ ಕಾಗದದಿಂದ' ಊರಿಗೆ ಜೇಕಿನಕಟ್ಟಿಗೆ ಮೊದಲು 'ಜೇಕಿನಗಡ್ಡಿ' ಎಂಬ ಹೆಸರು ಇರುವದು. ಜೇಕು 'Kind of reed' ಇದೊಂದು ಹುಲ್ಲು ಜಾತಿ, ಇದರ ಕೆಳಗೆ ಒಂದು ಚಕ್ಕಿ ಗಡ್ಡಿ ಇದ್ದು, ಅದನ್ನು ಒಡೆದು ಮೂಸಿಸಿದರೆ ತುಂಬಾ ಸುವಾಸನೆ ಇರುವದು.

ಭಾಷಾಶಾಸ್ತ್ರ ದೃಷ್ಟಿಯಿಂದ ಭಾಷೆಯಲ್ಲಾಗುವ ಬದಲಾವಣೆಗಳ ಹಿನ್ನೆಲೆಯಲ್ಲಿ ಜೇಕಿನಗಡ್ಡಿ>ಜೇಕಿನಕಟ್ಟಿ ಆಗಿದೆಯೆಂದು ತಿಳಿಯಿತು.

* "ಹುತ್ತ ಮಲ್ಲಯ್ಯ"> (ಶ್ರೀ ಹುತ್ತ ಮಲ್ಲೇಶ್ವರ) ದೇವಾಲಯ ಊರಿನಲ್ಲಿರುವದೆಂದು ತಿಳಿಯುವದು. ಅದು ೧೧-೧೨ ಶತಮಾನದಷ್ಟು ಪ್ರಾಚೀನವೆಂದು ತಿಳಿಯುವದು.
* ನನ್ನ ಮನೆತನದ ಮೂಲ ಪುರುಷರ ಬೆಡಗ – ಹೊನ್ನ ಕೋರೆನವರು ; ಗುರುಗಳು ಜೇಕಿನಕಟ್ಟಿ ಹಿರೇಮಠದ ಮುರಿಗಯ್ಯನವರು ; ಮನೆದೇವರು– ಜೇಕಿನಕಟ್ಟಿ ಹುತ್ತ ಮಲ್ಲೇಶ್ವರ, ಶಿರಹಟ್ಟಿ ಫಕೀರಸ್ವಾಮಿ, ಮೂಲ ಊರು– ಕೆಂಬಾವಿ (ದೇಸಗತಿ ಊರು).

  ಮೂಲ ಪುರುಷರು – ದೊಡ್ಡ ಬಸಪ್ಪ ದೇಸಾಯಿ, ಸಣ್ಣ ಬಸಪ್ಪ ದೇಸಾಯಿ
* ಕಂದಾಯ ಕೊಡದಾಗದ್ದಕ್ಕೆ –

  ಕೆಂಬಾವಿ > ಹಾನಗಲ್ಲ > ರತ್ನಾಗಿರಿ > ಬಂಕಾಪುರ > ಜೇಕಿನಕಟ್ಟಿಗೆ ಸ್ಥಳಾಂತರಗೊಂಡು ಬಂದು ನೆಲೆಸಿದುದು.
* ನನ್ನ ತಲೆಮಾರಿಗೆ ೧೬ ತಲೆಮಾರಿನ ವಂಶಾವಳಿ ಇದ್ದುದು.
* ವಂಶಾವಳಿಯಲ್ಲಿ ೪ ಜನರಿಗಿದ್ದ ಮಲ್ಲನಗೌಡರ ಹೆಸರು ಶ್ರೀ ಹುತ್ತ ಮಲ್ಲಯ್ಯನ ಹೆಸರನ್ನು ಸೂಚಿಸುವವು.

ಹೀಗೆಯೇ ಊರ ಹತ್ತಿರವಿರುವ "ಕಾರಡಗಿ" ಗ್ರಾಮದ ಹೆಸರು "ಕಾರಣಗಿ" ಎಂದು ತಿಳಿಯುವುದು. ಕಾರಡಗಿಯ ವೀರಭದ್ರೇಶ್ವರ ದೇವಸ್ಥನದ ಸ್ತಂಭ ಶಾಸನದಲ್ಲಿ 'ಕಾರಡಗಿ'ಗೆ 'ಕಾರಣಗಿ' ಎಂಬ ಹೆಸರಿರುವದು ಬೆಳಕಿಗೆ ಬರುವದು. ಇದರಂತೆ ಮಂತ್ರವಾಡಿ ಶಾಸನ. ಸಿದ್ಧರಾಮ ಶರಣನಿಗೆ ಸಂಬಂಧಿಸಿದ್ದೆಂದು ತಿಳಿಯುವುದು. ಹೆಳವರ ಹೊತ್ತಗೆಗಳನ್ನು ವೀಕ್ಷಿಸುವುದರಿಂದ ಮಂತ್ರವಾಡಿಯ ಜನತೆಯ ವಂಶಾವಳಿ, ಊರಿನ ಇತಿಹಾಸವನ್ನು ಹೊತ್ತುಗೆಗಳಿಂದ ಗುರುತಿಸಬಹುದಾಗಿದೆ. ಇವು ಗ್ರಾಮನಾಮ – ಸ್ಥಳನಾಮ – ವ್ಯಕ್ತಿನಾಮ – ದೇವರ ನಾಮ – ಮುಂತಾದವುಗಳ ಆಕರ ಶೋಧನಗಳಾಗುತ್ತವೆಂದೂ ಇವು ಕರ್ನಾಟಕ ಇತಿಹಾಸ ಪರಂಪರೆ ಉಳಿಸಿಕೊಂಡು ಬಂದ ದಾಖಲೆಗಳಾಗುತ್ತವೆ–ಎಂಬುದನ್ನು ತಿಳಿಯಬಹುದಾಗಿದೆ.

ಸ್ಥಳನಾಮ – ಗ್ರಾಮನಾಮ – ಗ್ರಾಮದೇವ – ಮನೆತನದ ಗುರು, ಅಣ್ಣ ತಮ್ಮಂದಿರ, ತಂದೆ–ತಾಯಿಗಳ, ಗೌಡಕಿ ಮನೆತನದವರ, ಓಲೆಕಾರಕಿ ಮನೆತನದವರ ಇತಿಹಾಸ ದೊರಕಿಸುವ ಆಕರಗಳಾದ ಹೆಳವರ ಹೊತ್ತಗೆಗಳು ಮಹತ್ವಪೂರ್ಣ ದಾಖಲೆಗಳಾಗುತ್ತವೆಂದು ತಿಳಿಯುವದು.

ಇನ್ನೊಮ್ಮೆ ಹಾವೇರಿ ಜಿಲ್ಲೆಯ ದೇವಗಿರಿ–ಯಲ್ಲಾಪೂರ ಗ್ರಾಮದ 'ಹೆಳವರ ಹೊತ್ತಗೆ' ಅವಲೋಕಿಸಿದಾಗ ಆ ಊರಿನ ಗೌಡಕಿ ಮನೆತನದ – ಓಲೆಕಾರಕಿ ಮನೆತನದವರ ವಿವರ ಕೆಳಗಿನಂತಿರುವದನ್ನು (೧೨.೯.೨೦೧೦) ನೋಡಬಹುದು* ಹೊತ್ತಗೆ ಆರಂಭದಲ್ಲಿ ಶ್ರೀ ಗುರು ಪ್ರಸನ್ನ / ಯಾದಿವಂಶಾವಳಿ/ ಕಂಚಿನ ಪತ್ರದ ನಕಲು / ಶಕೆ ೧೧೨೬. ಇವರ ಬೆಡಗು– ಹೊನ್ನ ಕೋರೆನವರು, ಗುರುಗಳು – ಮುಂಡರಗಿ ಹಿರೇಮಠದ ಅನ್ನದಾನಯ್ಯಸ್ವಾಮಿ, ಮುನಿದೇವರು – ಮೈಲಾರಲಿಂಗ ಗುಡದಯ್ಯ, ದೂದಿಹಳ್ಳಿ – ದ್ಯಾಮವ್ವ ಆಧಿಸ್ಥಳಾ–ಯಳಮಲಿ ಗೌಡಕಿ. ಮಾಡಿದವರ ಹೆಸರು – ದೊಡ್ಡಲಿಂಗನಗೌಡ, ಸಣ್ಣಲಿಂಗನಗೌಡ, ಹೆಣ್ಣು ಮಗಳು– ನೀಲಾಗಂಗಮ್ಮ ಆದಾಗ್ಯೂ ೩೦ ಕೂರಗಿ ಜಮೀನು ಕಂದಾಯ ಸಂಬಂಧ ಬಿಟ್ಟು ರಟ್ಟಿಹಳ್ಳಿಗೆ ಬಂದರು, ಗೌಡಕಿ ಗಳಿಸಿದರು. ಅಲ್ಲಿಂದ ಕುರುಬಗೊಂಡಕ್ಕೆ ಬಂದರು ; ಬಿಟ್ಟು ಯಲ್ಲಾಪುರ ಗ್ರಾಮಕ್ಕೆ ಬಂದರು ; ಹೊಗಿಸವಾರ ಗವಡ್ಕಿ ಪಡೆದರು.

ಮೂಲಪುರುಷ –

ದೊಡ್ಡಲಿಂಗನಗೌಡ ಸಣ್ಣಲಿಂಗನಗೌಡ......... ವಂಶಾವಳಿ ಹೇಳುತ್ತ, ಹಾವೇರಿ ಹತ್ತಿರದ ನಾಗಮಟ್ಟಿಯಲ್ಲಿ ಕಿರಾಣಿ ಅಂಗಡಿ ಇಟ್ಟಿರುವುದಾಗಿ ತಿಳಿಸುತ್ತ, ಮುಂದಿನ ಕೊನೆಯ ಪೀಳಿಗೆಯ ಗೌಡರ ವಂಶದವರು (ಇಸ್ಲಾಂ ಧರ್ಮದ ಕನ್ಯೆ ಲಗ್ನವಾಗಿದ್ದಾಗ ತಿಳಿಸುವಂತೆ ದಾಖಲೆಯಲ್ಲಿ ದಾಖಲಿಸಿರುವದನ್ನು ಅವಲೋಕಿಸಿ Xerox Copy (ನೆರಳಚ್ಚು ಪ್ರತಿ) ಪಡದೆ.

ನನ್ನ ಮಾವಂದಿರಾದ (ಪತ್ನಿಯ ತಂದೆ) ಸದಾಶಿವಗೌಡ ಶಂಕರಗೌಡ ಪಾಟೀಲರು ಮೂಲತಃ ದೇವಗಿರಿ –

---

* ಶ್ರೀ ಶಿವಪುತ್ರಪ್ಪ ಫಕೀರಪ್ಪ ಇಂಗಳಗಿ ವಯಾ ೭೦ ಸಾ॥ ಶಿಲ್ತಿಬಾವಿ ತಾ: ಗೋಕಾಕ ಜಿಲ್ಲಾ: ಬೆಳಗಾಂವ (೮.೪.೨೦೦೪–೨೦೧೦)

ಯಲ್ಲಾಪುರದವರೆಂದು ಇವರ ಮನೆ ದೇವರು – ಮೈಲಾರಲಿಂಗ ಹಾಗೂ ದೂದಿಹಳ್ಳಿ ದ್ಯಾಮವ್ವನೆಂದೂ ಇವರ ಮನೆ ಸ್ವಾಮಿಗಳು – ಮುಂಡರಗಿ ಅನ್ನದಾನಯ್ಯ ಸ್ವಾಮಿಯೆಂದು, (ದಿನಾಂಕ ೧೨.೯.೨೦೧೦ರಂದು ೧.೩೦ p.m. ಸಂದರ್ಶಿಸಿದ ಹೆಳವನ ಹೆಸರು – ಶ್ರೀ ಮಾರುತೆಪ್ಪ ಮಲ್ಲಪ್ಪ ಜಂಗಮ ಊರು: ಹೂಲಿಕಟ್ಟಿ ತಾ: ಗೋಕಾಕ, ಜಿ: ಬೆಳಗಾಂವ ವಯಾ–೩೮ ಕಂಚಿನ ಪತ್ರ ಲಭ್ಯವಾಗುವ ಊರು–ಶಪ್ಪಾಡ್ಲ, ತಾಲೂಕ – ರಾಮದುರ್ಗ, ಜಿಲ್ಲಾ: ಬೆಳಗಾಂವ, ಈ ಜಿಲ್ಲೆಯ ಕಡೇಹಳ್ಳಿ ಬರೆದುಕೊಟ್ಟವರು – ಗುರುಸಿದ್ಧಸ್ವಾಮಿಯೆಂದು) ತಿಳಿಯಿತು. ಈಗ ಇವರ ವಾಸಸ್ಥಾನ ಹುಬ್ಬಳ್ಳಿಯ ಗೋಕುಲ ರಸ್ತೆಯ ನೆಹರು ನಗರವೆಂದು 'ಹೆಳವರ ಹೊತ್ತಗೆ'ಯಿಂದ ತಿಳಿಯುತಲ್ಲದೆ, ಈ ಮನೆತನದ ಮೂಲ ಪುರುಷ ದೊಡ್ಡಲಿಂಗನಗೌಡ – ಸಣ್ಣಲಿಂಗನಗೌಡಯೆಂದು ಇವರ ಕಾಲ ಶಕೆ ೧೧೨೬ + ೭೮ (೧೧೨೬ ಶಕೆ + ೭೮ + ೧೨೦೪ ಇಸ್ವಿ) ೧೨೦೪ ಇಸ್ವಿಯೆಂದು ತಿಳಿಯಿತು.

ದೇವಗಿರಿ – ಯಲ್ಲಾಪೂರ ಗ್ರಾಮ ದಪ್ತರುಗಳು ಮೊದ ಮೊದಲು ಲಕ್ಮಾಪುರದಲ್ಲಿದ್ದವು, ಈಗ ಅವು ದೇವಗಿರಿ ಯಲ್ಲಾಪುರ ಗ್ರಾಮ ಪಂಚಾಯಿತಿಗೆ ಬಂದುದಾಗಿ ಅಲ್ಲಿಯ ಕಾರ್ಯದರ್ಶಿ ಶ್ರೀ ಹೆಬಸೂರ ಅವರಿಂದ ತಿಳಿಯಿತು.

ಯಲ್ಲಾಪುರದ ವಾಲಿಕಾರಕಿ ಪಡೆದ ಜನಾಂಗದ ವಂಶಾವಳಿ ಇಂತಿದೆ :

ಆರಂಭ :

"ಶ್ರೀ ಗುರು ಪ್ರಸನ್ನ / ಯಾದಿ ವಂಶಾವಳಿ / ಕಂಚಿನ ಪತ್ರ ನಕಲು ಶಕೆ ೧೧೯೪ ರಲ್ಲಿ (ಈ) ಇವರ ಬೆಡಗು ಗುಜಲ್ಲವರು, ಮನಿದೇವರು – ಕದನ ಮಂಡಲಗಿ ಹನುಮಂತ ದೇವರು, ಯಲ್ಲಮ್ಮ, ಆದಿಸ್ಥಳಾ–ಯಳಮಲಿ ದೇಸಗತಿ ಮಾಡಿದವರ ಹೆಸರು ಸುರನಾಯಕ ಚಂದ್ರನಾಯಕ, ಹೆಣ್ಣು ಮಗಳು ಸೂರಮ್ಮ – ಚಂದ್ರಮ್ಮ. ಅಲ್ಲಿ ಯಾಜ್ಯಾ ಮಾಡಿಬಿಟ್ಟು ಲಿಂಗದಹಳ್ಳಿಗೆ ಬಂದರು. ಬಿಟ್ಟು ರಟ್ಟಿಹಳ್ಳಿಗೆ ಬಂದರು. ಬಿಟ್ಟು ಯಲ್ಲಾಪುರಕ್ಕೆ ಬಂದರು. ವಾಲೆಕಾರಕಿ ಪಡೆದರು".

ಮೂಲ ಪುರುಷ – ಸುರನಾಯಕ – ಚಂದ್ರನಾಯಕ...... ಬಾಗಿಲುಕೋಟೆಯಲ್ಲಿದ್ದಾರೆ. ಸಣ್ಣಯಲ್ಲಪ್ಪ ಹೆಣ್ತಿ ಯಲ್ಲಮ್ಮ, ತಿರುಕಪ್ಪ ಹೆಣ್ತಿ – ನೀಲಮ್ಮ ......." ಎಂಬ ಹೆಸರುಗಳು ಕಾಣಬರುವವು.

ಇಲ್ಲಿ ಈ ಪ್ರತಿ ಕಂಚಿನಪತ್ರದ ನಕಲಾಗಿದ್ದು ಇವರ ಕಾಲ ೧೧೯೪ ಶಕೆ + ೭೮ ಕೂಡಿಸಿದರೆ ಇಸ್ವಿ ಕ್ರಿ.ಶ. ೧೨೦೭ ಎಂದು ತಿಳಿಯುವದು. ಇವರ ಮನೆ ದೇವರು – ಕದರಮಂಡಲಗಿ ಹನುಮಂತ. ಹೆಣ್ಣು ದೇವರು – ಯಲ್ಲಮ್ಮ. ಯಳಮಲಿಯಿಂದ > ಲಿಂಗದಳ್ಳಿಗೆ, ಲಿಂಗದಳ್ಳಿಯಿಂದ > ರಟ್ಟಿಹಳ್ಳಿಗೆ, ಇಲ್ಲಿಂದ ಯಲ್ಲಾಪುರಕ್ಕೆ ಬಂದು ವಾಲಿಕಾರಿಕೆ ಹೊಂದಿ ನೆಲೆನಿಂತ ಕುಟುಂಬವೆಂದು ತಿಳಿಯುವದು. ಗಂಡ–ಹೆಂಡತಿಯರಿಬ್ಬರ ಹೆಸರೂ ದಾಖಲಿಸಿದ್ದುದು, ಮಕ್ಕಳ ಹೆಸರು ದಾಖಲಿಸಿದುದು ಇಲ್ಲಿನ ವಿಶೇಷತೆಯಾಗಿದ್ದು (ವೃತ್ತಿ) ಕಾಯಕ, ಯಲ್ಲಾಪುರ ಗ್ರಾಮದ ವಾಲಿಕಾರಿಕಿ ಆಗಿದೆಯೆಂದು ತಿಳಿಯುವದು.

*ಪುಟ ೧ : ಶಕೆ, ೧೦೦೦ (೭೮೦ ಹಿ. ಶಕೆ) ಬೆಡಗು – ಜಾಜನವರು,*

*ಮನಿ ದೇವರು – ಕೇದಾರಲಿಂಗ, ತುಳಜಾಭವಾನಿ, ಯಲ್ಲಮ್ಮ, ಗವಡ್ಕಿ ಪಡೆವದು ಸಣೋಜಿಗೌಡ, ಹಿರೇಹೊಳಿದಾಟಿ>ನಿಂಗದಾಳಕ್ಕೆ>ಬಳೋಡಿಗೆ (ಬಳೋಡಿಗ್ರಾಮದಲ್ಲಿ ತಸೀಲ್ದಾರರು).*

*ಪುಟ ೨ : ಸೊಲ್ಲಾಪುರ–ನೇಸರಗಿ–ಮನಿದೇವರು–ಕಾರಡಗಿ ಈರಣ್ಣ, ಗುಡ್ಡಾಪುರ ದಾನಮ್ಮ, ಬಸವಣ್ಣ–ಬಂಕಾಪುರ–ಹರಪನಹಳ್ಳಿ ಬಂದ್ರು (ಹಾರೂಬೀಡಿಹತ್ರ ಇನಾಮು ಹೊಂಗಲಗ್ರಾಮ) .. ಚನ್ನಪ್ಪ.*

*ಪುಟ ೪ : ೧೦೦೦ ಶಕೆ ೭೮೦ ಹಿಜರಿಸನ್ – ಬೆಡಗು – ದಂಡಾವತೇನವರು ಮನಿದೇವರು – ಬಸವಣ್ಣ ಗೋಡಿಬನ್ನೂರ ದೇಸಗತಿ ಹಿರೇಹೊಳಿ ದಾಟಿ ಉಪ್ಪನದಿನ್ನಿಗೆ ಬಂದರು.) ದೊ.ಸ. ಬಸಪ್ಪ ದೇಸಾಯಿ> ಬಸನಗೌಡ*

*ಪುಟ ೫ : ಶಾ. ಶಕೆ ೧೦೦೦ ಹಿಜರಿ ೭೮೦. ಬೆಡಗು – ಹೊನ್ನ, ಗುರು – ಶಿದಗೇರಿ ಕಾಡಸೋಮಿ, ಯಲ್ಲಮ್ಮ. ಮನಿದೇವರು–ಅಳತಗಿ ರಾಮಲಿಂಗದೇವರು, ಆನಿಗೊಳ ರಾಮಲಿಂಗ, ತಳಾ : ಕೆಂಬಾಗಿ (ಹೊಂಗಲ ಗ್ರಾಮದಲ್ಲಿ ಮಂಜನವರು).*

*ಪುಟ ೬ : ಗುರು – ಶಿದಗೇರಿ ಕಾಡಸ್ವಾಮಿ, ಮನಿದೇವರು – ಅಳಿಗಾಂವಿ ಬಸವಣ್ಣ, ಯಲ್ಲವ್ವಾ ತಳಾ : ಅಂಕಲಕೋಟಿ ಗೌಡ್ಕಿ, ಹೋಳಿವಾಂಟಿ ತೀಳಿಗಾಂವಿಗೆ ಬಂದರು. (ನರೇಂದ್ರ ಗ್ರಾಮದಲ್ಲಿ ಬೈಯರನವರು)*

*ಪುಟ ೮ : ಶಾ. ಶಕೆ ೧೦೦೦ ಹಿಜರಿ ೭೮೦. ಬೆಡಗು – ಹೊನ್ನಕೋರೆನವರು ಗುರುಗಳು – ಕೆಂಬಾಗಿ ಪಟ್ಟದಸ್ವಾಮಿ ಮನಿದೇವರು : ಸುತಗಟ್ಟಿ ಬಸವಣ್ಣ, ಯಲ್ಲಮ್ಮ, ತಳಾ–ಬಿದಿರಿಕೋಟಿ ಗೌವಡ್ಕಿ (ಡಿಳ್ಳಿಪಾಚಾನ ಜೊತೆಂಯ್ಯಾಜೆ ಮಾಡಿ ೭ ಮಂದಿ ಕಡಿದು) ಹಿರೇಹೋಳಿದಾಟಿ ನಿಂಗದಳಿಗೆ ಬಂದ್ರು>ಚಿಕ್ಕಕೊಪ್ಪ> ಸುತಗಟ್ಟಿ ಗೌಡ್ಕಿ*

*ಪುಟ ೯ : ಬೆಡಗು–ಹೊ.ಕೊ.ನವರು ಗುರು–ಕಿದಗೇರಿ ಕಾಡಸ್ವಾಮಿ, ಮನಿದೇವರು : ಬಸವಣ್ಣ, ಯಲ್ಲಮ್ಮ,*

ತಳಾ-ಬಿದ್ರಿಕೋಟೆ, ಅಜನಕಟ್ಟಿಗೆ ಬಂದವರು. ಗುಮ್ಮಗೋಳ>ನರೇಂದ್ರ> ಗರಕ (ಗ) > ನರೇಂದ್ರ

ಪುಟ ೧೦ : ಶಕೆ ೧೦೦೦೦ ಬೆಡಗು ಹೊ.ಕೋ ಮನಿದೇವರು – ಹಾರುಬೀಡಿ ವೀರಣ್ಣ, ತಳಾ : ಶಾಲಿಬಿದ್ರಿಕೋಟಿ ಗೌಡಕಿ. ಪೇಸಮೇರಕಾಲ – ಸವದಿತ್ತಿ>ಹಾರೂಬೀಡಿ> ಹುಲಕೊಪ್ಪ>ಗುಮ್ಮಗೋಳ

ಪುಟ ೧೧ : ಶಕೆ ೧೦೦೦೦, ೭೮೦ ಹಿ. ಸನ್, ಬೆಡಗು– ಶೆಕರು, ಮನೆದೇವರು : ಯಮನೂರ ರಾಜೆಭಾಕ್ಷಿಸ, ಹಿರೇಕುಂಬಿ ಫಕೀರಸ್ವಾಮಿ, ಪೂರ್ವಿಸ್ಥಳ – ತಾಳಿಕೋಟಿ – ಮುದ್ದೇಬಿಹಾಳ, ನಿಂಗದಹಳ್ಳಿ > ಕಣಕೆನಕೊಪ್ಪ ನರೇಂದ್ರ ಗ್ರಾಮದಲ್ಲಿ ವಾಲ್ಲೇಕಾರರು; ಹೂಸೇನಸಾಬ, ಇಮಾಮಸಾಬ> ಫಕೀರಸಾಬ> ನಜ್ಜೀರ್

ಪುಟ ೧೨ : ಶಕೆ ೧೦೦೦೦, ೭೮೦ ಹಿ.ಸ. ಬೆಡಗು – ಹೊ.ಕೊ. ಗುರು : ಕೆಂಬಾಗಿ ಪಟ್ಟದಸೋಮಿ, ಮನಿದೇವರು : ಚಿಂಚಲಿ ಮಾಯಮ್ಮ, ಯಲ್ಲಮ್ಮ, ಕಲ್ಯಾಳದ ಬಸವಣ್ಣ, ತಳಾ – ಪಲ್ಲೇದಗೌಡ್ಕಿ, ಊರು: ರಂಗವಳಿ (ಆಯಟ್ಟಿ–ಪಲ್ಲೇದವರ ವಂಶಾವಳಿ ಗಿರೆಪ್ಪಾ> ಬಸಪ್ಪಾ>ಶಿವಪ್ಪ>ಗಿರೆಪ್ಪಾ...

ಪುಟ ೧೩ : ಶ್ರೀ ಮಾಡಿ ವಂಶಾವಳಿ : ಕಂಚಿನ ಪತ್ರದ ಮೇಲಿನ ವೊತ್ತಾರು,

ಬೆಡಗು – ಮನ್ನೆನವರು, ದೇವರು – ತುಳಜಾಭವಾನಿ, ಖಾದರಲಿಂಗಾ, ತಳಾ : ಸೋಮನಗುದಿ> ಕೋಣೂರು>ಆಯಟ್ಟಿ (ಡೊಳ್ಳಿನವರ ವಂಶಾವಳಿ) ಯಲ್ಲಪ್ಪ>ದೊ. ಭೀಮಪ್ಪ>ಯಲ್ಲಪ್ಪ>ಭೀಮಪ್ಪ...ಸಾವವ್ವಾ (ಚಚಡಿಯಲ್ಲಿ ಯೆರಜೇರಿಯವರ ಮನಿಗೆ ಕೊಟ್ಟೈತಿ)

ಪುಟ ೧೪ : ೧೧೨೬ ಶಕೆ, ೭೮೦ ಹಿಜರಿ, ಬೆಡಗು – ರಾಚಳ್ಳಿ, ಮನಿದೇವರು – ಚುರಚಗೇರಿ ಹನುಮಂತ, ಯಲ್ಲ(ಮ್ಮ)ವ್ವಾ, ಪೂರ್ವಿಸ್ಥಳಾ – ಕಬ್ಬಿನ ಶಿರೂರ ಗೌಡ್ಕಿ, ಡಿಳ್ಳಿ ಪಾಚಾ ಹಿರೇಹೊಳಿದಾಟಿ ಕಲಕಂಬ> ಚುರಚಗೇರಿ (ಹನುಮಂತದೇವರ ಪ್ರಚುಳೆ)> ಮಾಚೇನಹಳ್ಳಿಗೆ ಬಂದ್ರು. ಮೂಲ ಪುರುಷ– ಹನುಮರೆಡ್ಡಿ>(ತಾರಿಕೊಪ್ಪದಲ್ಲಿ ಮಾಚೇನವರು), ಯಂಕಪ್ಪರಡ್ಡಿ>ಮುಡ್ಕಪ್ಪರೆಡ್ಡಿ>ಭರಮಪ್ಪ

ಪುಟ ೧೫ : ಶ್ರೀ ಯಾದಿ ವಂಶಾವಳಿ ೧ ನಕಲು. ಬೆಡಗು: ಹೊ.ಕೋ, ಗುರುಗಳು – ಕರಲವಾಡ ಹಿರೇಮಠದ ಪಟ್ಟದಸ್ವಾಮಿ, ಮನಿದೇವರು – ಮೈಲಾರ ಮಲ್ಲಯ್ಯ, ಯಲ್ಲಮ್ಮ, ತಳಾ : ಕಂಕನವಾಡಿ ಗೌಡ್ಕಿ, ೮೦ ಕೂರಗಿ ಜಮೀನು (೪ ಎಕರೆ + ೧ ಕೂರಿಗೆ) ಡಿಳ್ಳಿಪಾಚ್ಯಾ – (ರಂಗವಳ್ಳಿ > ಬ್ಯಾಹಟ್ಟೆ > ಯಮನೋರಿ > ಶ್ಯಾನವಾಡ > ನವಲಗುಂದ).

ಪುಟ ೧೬ : ಶ್ರೀಯಾದಿ ವಂಶಾವಳಿ, ಬೆಡಗು – ಬಿಳಿಆನೆಯವರು. ಮನಿದೇವರು – **ಪರ್ವತ ಮಲ್ಲಯ್ಯ,** ಬಸವಣ್ಣ, ಯಲ್ಲಮ್ಮ. ತಳಾ : ಗೋದಿಬರೊರ ಕುರುಬುಗೌಡ್ಕಿ, ಶಿದ್ದಪ್ಪ. ಡಿಳ್ಳಿ ಪಾಚ್ಯ, ಕಟಿಲಡಾಯ ಮಾಡಿ – ಮಾನೇದಹೊಲ (ಶ್ಯಾನವಾಡ > ಬಂಡಿವಾಡ)

ದಾನ : ಹೆಳವನಿಗೆ 'ಕರ' ಕೊಟ್ಟುದು. (ಬಸವರಾಜ ಗೂಳಪ್ಪ – ಕೆಂಪಣ್ಣವರ).

ಪುಟ ೧೭ : ಶಾ.ಶ. ೧೧೨೯ ಶಕೆ; ೭೮೦. ಬೆಡಗು – ಬೆಲ್ಲದ, ಆಚಮಟ್ಟಿ ಬಸವಣ್ಣ, ಪೂರ್ವಿಸ್ಥಳಾ – ರಂಗವಳ್ಳಿ ಗೌಡ್ಕಿ, ಪಂಚನಕೋಟಿ>ಶ್ಯಾನವಾಡ>ತೆಗ್ಗಿಹಳ್ಳಿ. ನವಲೂರ>ಮುನವಳ್ಳಿ ? ಗೋಕಾಕ.

ಪುಟ ೧೮ : ಶಾ.ಶ. ೧೧೨೬, ಹಿಜರಿ ೭೮೦ ಬೆಡಗು – ಹೊನ್ನಬನೆನವರು, ಮನಿದೇವರು – ಕೊಟಬಾಗಿ ರೇವಣಸಿದ್ದೇಶ್ವರ, ಪೂರ್ವಿಸ್ಥಳಾ – ಬಿದ್ರಿಕೋಟಿ ಗೌಡ್ಕಿ, ಹಿರೇಹೊಳಿದಾಟಿ ರಂಗವಳ್ಳಿ > ಕೊಟಬಾಗಿ > ಯರಗಟ್ಟಿ > ಅಮ್ಮಿನಬಾಂವಿ (ಯರಗಟ್ಟಿ ವಂಶಾವಳಿ) ಗೊಬ್ರಗುಂಪಿ > ಧಾರವಾಡ.

ಪುಟ ೧೯ : ಶ್ರೀಗುರು ಪ್ರಸನ್ನ ಬೆಡಗು – ಬನೆನವರು, ಮನಿದೇವರು – ಮೈಲಾರಲಿಂಗ ಗುಡದಯ್ಯ, ಪೂರ್ವಿಸ್ಥಳ – ಅಳಗುಂಡಿ ಗೌಡ್ಕಿ, ರಂಗವಳ್ಳಿ . ಯಲವಿಗಿ > ಚವಡಾಳ > ಕಳಲಕೊಂಡ

ಪುಟ ೨೧ : ಬೆಡಗು – ಹೊನ್ನಗುದ್ದಲೆನವರು, **ಗುರುಗಳು– ಉಚಗಾಂವಿ ಸೋಗಿನಮಠದ ಚೆನ್ನವೀರಯ್ಯ ಸ್ವಾಮಿಗಳು,** ವೈಜನಾಥ ನಂದಿಹಳ್ಳಿ ಬಸವಣ್ಣಾ, ಪರುತ ಮಲ್ಲಯ್ಯ ದೇವರು, ತಳಾ – ಪರೂತ ಪಾನಗಲ್ಲ ಶೆಟ್ಟಿಗಾರಿಕೆ ಮಾಡಿದವರು. ಪರುಶೆಟ್ಟಿ–ದಾನಪ್ಪಶೆಟ್ಟಿ ವಿಜಾಪುರ>ವೈಯಜನಾಂತ, ಹೆಬಸೂರ ಗ್ರಾಮ> ದುನಿಕಾಲಸಮರು>ಕಲಾದಿಗೆ>ಹುಬ್ಬಳ್ಳಿ ಮೂರುಸಾವಿರ ಮಠ (ಮಾದೇವಪ್ಪ)>ಗರಗ

ಪುಟ ೨೩ : ಶಾ. ಶಕೆ ೧೧೨೬, ಹಿಜರಿ ೭೮೦, ಬೆಡಗು– ಹೊನ್ನಕೋರೆನವರು, ಗುರುಗಳು–**ಅಂಕಲಗಿ ಅಡಿವೆಯ್ಯಸ್ವಾಮಿ,** ಮನಿದೇವರು–ಉಳವಿ ಬಸವಣ್ಣ, ಯಲ್ಲಮ್ಮಾ, ಪೂರ್ವಸ್ಥಳಾ–ಸದ್ಲಗಿ ಗವಡ್ಕಿ, ಗಿರಂಗದಳ್ಳಿ> ಧಾರವಾಡ ಗುಲಗಂಜಿಕೊಪ್ಪ

ಪುಟ ೨೪ ಬೆಡಗು – (೭೮೦ ಹಿ.ಶೆ.) ಹೊನ್ನದೇನೆನವರು, ಮನಿದೇವರು–ಮೈಲಾರಲಿಂಗ, ಯಲ್ಲಮ್ಮ, ಅಳಗುಂಡಿ ಗೌಡ್ಕಿ, ಕೆಮಲಾಪುರ>ಇಂಗಳಳ್ಳಿ>ಶಿರಟ್ಟಿ. ದಾನ: ಹೆಳವನಿಗೆ ದಾನವಾಗಿ ಹೋರಿಕರ ಕೊಟ್ಟುದು ತಾ. ೭–೫–೨೦೦೩.

ಪುಟ ೨೫ : ೭೮೦ ; ಬೆಡಗು – ಹೊನ್ನಕೋರೆನವರು ; ಗುರುಗಳು – ಶಿಶುನಳ್ಳಿ ಹಿರೇಮಠ ಶಿವಲಿಂಗಯ್ಯ ; ಮನಿದೇವರು – ಕಾರಡಗಿ ಈರಣ್ಣ, ತಳಾ – ಶಾಲಿಬಿದ್ರಿಕೋಟಿ ಗೌಡ್ಕಿ, ರಂಗವಳ್ಳಿ > ಕಾರಡಗಿ (ಸ್ತಂಭ ಶಾಸನದಲ್ಲಿ 'ಕಾರಣಗಿ' ಎಂದಿದೆ), ಇಂಗಳಳ್ಳಿ> ಶಿಶುನಹಳ್ಳಿ.

ಪುಟ ೨೬ : ಶಾ. ಶಕೆ ೧೧೨೬ ; ಹಿಜರಿ – ೭೮೦ ; ಬೆಡಗು – ಹೊನ್ನಕೋರೆನವರು. ಮನಿದೇವರು – ಕೋಳಿವಾಡ ಬಸವಣ್ಣ, ಯಲ್ಲಮ್ಮ, ಪೂರ್ವಿಸ್ಥಳಾ – ಅಕ್ಕಕೋಟಿಗೌಡ್ಕಿ, ರಂಗವಳ್ಳಿ > ನರೇಗಲ್ಲ > ಇಂಗಳಳ್ಳಿ > ಕೋಳಿವಾಡ > ಉಮಚಗಿ > ಧಾರವಾಡ ಗಾಂಧಿನಗರ, ಹುಬ್ಬಳ್ಳಿ.

ಪುಟ ೨೭ : ಶಾ. ಶಕೆ ೧೦೦೦ ; ಬೆಡಗು –ಚಿಟಮಲ್ಲದವರು, ಮನಿದೇವರು – ಸೊಗಲದ ಸೋಮಲಿಂಗ, ಯಕಟಪತಿ, ಹನುಮಂತದೇವರು, ತಳಾ – ಬಿದ್ರಿಕೋಟೆಗೌಡ್ಕಿ > ದುನಿಕಾಲ > ಯರಗುಪ್ಪಿ > ನಲೂಡಿ > ಕಲಘಟಗಿಯಲ್ಲಿ ಪೋಲಿಸರಿರುವರು) ದಾನ : ವೆಂಕರೆಡ್ಡಿ, ಭೀಮಾರೆಡ್ಡಿ ಯರಗುಪ್ಪಿ ಇವರು ೨-೫-೧೯೯೯ರಂದು ಹೆಳವರಿಗೆ ಕೊಡಪಾನ ಕೊಟ್ಟಿರುತ್ತಾರೆ.

ಪುಟ ೨೮ : ಶಕೆ ೧೦೦೦ ; ಬೆಡಗು – ದುಲಿಹಾಲನವರು, ಗುರುಗಳು – ಹಿರೇಕುಂಬಿ ಫಕೀರಸೋಮಿ, ಮನಿದೇವರು – ಹಿರೇಕುಂಬಿ ಆಮೂಕಶಿದ್ಧಾ, ಪಾಲಿಕೊಪ್ಪ ಬಸವಣ್ಣ, ಯಲ್ಲಮ್ಮ ದೇವರು ; ತಳಾ – ಬೀದಿಕೋಟಿ ಗೌಡ್ಕಿ, ನಲೂಡಿ > ಶಿರಗುಪ್ಪಿ > ಪಾಲಿಕೊಪ್ಪ > ಮಂಟೂರ

ಪುಟ ೨೯ : ಬೆಡಗು – ಮುತ್ತಿನ ಸತ್ತರಗಿ ನಾಮಾತ್ತಲಿವರು, ಗುರುಗಳು – **ಕಾರಡಗಿ ಹಿರೇಮಠದ ಪಟ್ಟದಸೋಮಿ** ಮನಿದೇವರು – ಕೊಡ್ಲವಾಡದ ವೀರಭದ್ರ, ದ್ಯಾಮವ್ವ, ತಳಾ – ಸಾದ – ನೂರದೇಸಗತಿ ಸಾದಾರ ಶ್ರೀಗೊಂಡದೇಸಾಯಿ ಹೆಣ್ತಿ ಲಕ್ಕಗೌಡಶ್ಯಾನಿ. ಕೊಡ್ಲವಾಡ > ವೀರಭದ್ರದೇವರು, ಶಿರಗುಪ್ಪಿ > ಗುಡಗೇರಿ > ಅದರಗುಂಚಿ > ಶೆರೇವಾಡ > ನೂಲ್ವಿ

ಪುಟ ೩೦ : ಶಾ. ಶಕೆ ೧೧೨೯ ; ಹಿಜರಿ ೭೮೦ ; ಗದಗದ ನೀಲಕಂಠಸ್ವಾಮಿ, ಮನಿದೇವರು : ಅಸುಂಡಿ ಬಸವಣ್ಣ, ಮಾಲಗಿತ್ತಿ ಡೊಲಿಸೋಮಿ, ಪರೂತ ಮಲ್ಲಯ್ಯ, ಅಳಗುಂಡಿ ಅಸುಂಡಿ>ಅಣ್ಣಿಗೇರಿ ಹಾಲಗಿ ರಾಚೋಟಿಸ್ವಾಮಿ.

ಪುಟ ೩೨ : ಕುಂಬಾರಕಿ ಗೌಡಿಕಿ, ಗುರು – ಕುಂದಾಪುರ ಮಡಿವಾಳಯ್ಯ, ಮನಿದೇವರು ; ಕಂಪಲಿ ಬಸವಣ್ಣ, ತಳಾ : ಸಾಲಿಬಿದ್ರಿಕೋಟಿ ಕುಂಬಾರಕಿ ಗೌಡಿಕಿ. ಹಿರೇಹೊಳಿ ದಾಟಿ > ಲಿಂಗದಳ್ಳಿ > ಹಿರೇನರ್ತಿ > ಕೌಜಗೇರಿ>ನರ್ತಿ > ಹಿರೇಗುಡದೂರ > ಯರಗುಂಪಿ

ಪುಟ ೩೩ : ಶಕೆ ೧೦೦೦, ಯಾದಿವಂಶಾವಳಿ, ಬೆಡಗು – ಚಿನ್ನತಕ್ಕಡಿ, ಹೊನ್ನಕೋರೆನವರು, ಗುರುಗಳು – ಹಾವಿನಾಳ ಹಿರೇಮಠದ ಪಟ್ಟದ ಸೋಮಿ, ಮನೆದೇವರು – ತುಪ್ಪದ (ಕೆಂಚವ್ವ), ಕೆಂಭವ್ವ, ಬಸವಣ್ಣಾ, ಸ್ಥಳಾ– ಶಾಲಬಿದ್ರಿ ಶಟಗಾರ್ಕಿ ಹೆಸರು ವೀರುವಶೆಟ್ಟಿ ದಾನಶೆಟ್ಟಿ, ಹಾವಿನಾಳ>ಸೌಂಶಿ (ಹತ್ತಿ) ಮುಳ್ಳಳ್ಳಿ ವಿಜಯನಗರ>ಯರಗುಪ್ಪಿ ೯೭ ರಿಂದ ೨೦೦೧ ರೂ ೨೦, ೨೦, ೨೦, ..... ಕೊಟ್ಟುದು.

ಪುಟ ೩೬ : ಶ್ರೀ ಗುರು ಪ್ರಸನ್ನ । ಯಾದಿ ವಂಶ್ಯಾವಳಿ ; ಬೆಡಗು – ಕೋರೆನವರ ; ಗುರುಗಳು – ಗುಂಜಳ ಹಿರೇಮಠದ ಪಠ್ಠದ ಸೋಮಿ, ಮನಿದೇವರು – ಗೌಡಗಟ್ಟಿ ಬಸವಣ್ಣ, ಕೊಡ್ಲವಾಡದ ವೀರಭದ್ರದೇವರು, ತಳಾ – ಹಿರೇಬಿದ್ರಿ ಗೌಡ್ರು, ಚೌಕಲಬ್ಬಿ > ಸಂಶಿ > ಶಿರಬಡಗಿ.

ಪುಟ ೩೭ : ಶಕೆ ೧೦೦೦ ; ಹಿಜರಿ ೭೮೦, ಮನಿದೇವರು – ಮುಳಗುಂದ ದಾವಲ ಮಲಕ ದೇವರು ; ಪೂರ್ವಿಸ್ಥಳಾ – ತಾಳಿಕೋಟೆ ಮುದ್ದೇಬಿಹಾಳ (ಕೀಲಿಕೈ ಹವಾಲದಾರಕಿ ವೃತ್ತಿ ಮಾಡಿದವರು, ರಂಗವಳಿ – ಸಂಶಿ ದೊ. ರಾಜೇಸಾಬ ಸ. ರಾಜೇಸಾಬ – ವಂಶಾವಳಿ ವಿವರ.

ಪುಟ ೩೮ – ಶಾ. ಶಕೆ ೧೧೨೯, ಹಿಜರಿ ೭೮೦, ಬಗಿ – ಪಡವಡಗಿ, ಮನಿದೇವರು – ಗದುಗಿನ ಈರಣ್ಣ ; ಪೂರ್ವಿಸ್ಥಳ – ಬನಾನಿಂಬರಗಿ ಮಠ ಮನೆ ಮಾಡಿದವರ ಹೆಸರು – ಹಿರೇಮಹಾಂತಯ್ಯ ಚಿಕ್ಕ ಮಹಾಂತಯ್ಯ ; ನಾಗಾವಿ > ತರ್ಲಗಟ್ಟ > ಶಿರೋಳ >(ಈರಯ್ಯ ದೊಡ್ಡಮನಿಗೌಡ್ರ ಮನಿಯಲ್ಲಿ ನಿಂತರು) ಶಿರಾಳ.

ಪುಟ ೩೯ : ಶಕೆ ೧೦೦೦ ; ಹಿಜರಿ ೭೮೦ ; ಬೆಡಗು – ಹೊನ್ನಕೋರೆನವರು.

ಮೇಲೆ ಲಭ್ಯವಾಗುವ ಮಾಹಿತಿಗಳಿಂದ ಲಭ್ಯವಾಗುವ ಇತಿಹಾಸ ಇಂತಿದೆ :

ಮೇಲೆ ಲಭ್ಯವಾಗುವ ಆಕರಗಳಲ್ಲಿ ಗ್ರಾಮನಾಮ – ವ್ಯಕ್ತಿನಾಮ – ದೇವರ ನಾಮಗಳು ಭಿನ್ನ ಭಿನ್ನ ಮತದವರು ಗೌಡಕಿ ಪಡೆದು ಆಳಿದ ವಿಷಯಗಳು, ಭಿನ್ನ ಭಿನ್ನ ಮತಗಳ, ಸಿಂಹಾಸನಗಳ, ಪೇಶ್ವೆಯವರ ಕಾಲ, ಬಗಿ, ಶಕೆ, ಲಭ್ಯವಾಗುವುದರ ಜೊತೆಗೆ ೧೧– ೧೨ನೇ ಶತಮಾನದಿಂದ ಇಂದಿನವರೆಗೂ ಗ್ರಾಮದಲ್ಲಿ ನೆಲೆಸಿದ ಕುಟುಂಬದವರ ವಂಶಾವಳಿ ರಕ್ಷಣೆ ಪ್ರಮುಖವಾಗಿ ಎದ್ದು ಕಾಣುವದು.

೧. ಶಕೆ ಲಭ್ಯವಾಗುವುದರಿಂದ ಕಾಲ ನಿರ್ಣಯ ಕಂಚಿನ ಪತ್ರದ ಮೇಲಿನ ವೊತ್ತಾರು. ಉದಾ : ೧೦೦೦, ೧೦೨೬, ೧೧೨೯ ಶಕೆಗಳು

೨. ವಂಶಾವಳಿಯಿಂದಾಗಿ ೧೬-೧೭-೧೮ ತಲೆಮಾರಿನ ಇತಿಹಾಸ. (ಯಾದಿ ವಂಶಾವಳಿ).

೩. ಗೌಡಕಿ, ಗೌಡರು, ನಾಯಕರು, ವಾಲ್ಮೀಕಿ, ಕುಂಬಾರರು, ಕೀಲಿಕೈ ಹವಾಲದಾರಕಿ । ಕುಂಬಾರ ಗೌಡ್ಕಿ, ನರೇಂದ್ರ ಗ್ರಾಮದಲ್ಲಿ ಪಾಲೆಕಾರರು- ಗೌಡರಾಗಿ ಆಳಿದ ವಿವರ.

೪. ಗ್ರಾಮನಾಮಗಳ ಮೂಲ ರೂಪ : ಉದಾ ಜೇಕಿನ ಗಡ್ಡಿ > ಜೇಕಿನಕಟ್ಟಿ, ಗುಂಡಲೂರು > ಗುಂಡೂರು; ಕಾರಣಗಿ > ಕಾರಡಗಿ : ಪಾನಗಲ್ಲ > ಹಾನಗಲ್ಲ - ಮುಂ.

೫. ವ್ಯಕ್ತಿ ನಾಮದಲ್ಲಿ - ಗಂಡುದೇವರ - ಹೆಣ್ಣು ದೇವರ ಹೆಸರುಗಳು ಲಭ್ಯ. ಉದಾ : ಜೇಕಿನಕಟ್ಟಿ ಹುತ್ತಮಲ್ಲೇಶ್ವರ, ಶಿರಹಟ್ಟಿ ಫಕೀರೇಶ್ವರ, ಮಲ್ಲನಗೌಡ, ಮಲ್ಲವ್ವ, ಮಲ್ಲೇಶಪ್ಪ, ಹುತ್ತಪ್ಪ, ಮಲ್ಲಯ್ಯ, ಸಣ್ಣ ಮಲ್ಲಪ್ಪ, ದೊಡ್ಡ ಮಲ್ಲಪ್ಪ, ಫಕೀರಯ್ಯ, ಫಕೀರಗೌಡ, ಫಕೀರಸ್ವಾಮಿ - ಮುಂ.

೬. ಬೆಡಗುಗಳ ಉಲ್ಲೇಖ : ಉದಾ : ಹೊರ್ನ ಕೋರೆನವರು, ಚೆನ್ನತಕ್ಕಡಿ ; ಬಗಿ-ಪಡವಡಗಿ.

೭. ಪೂರ್ವಿ ಸ್ಥಳದ ಉಲ್ಲೇಖ : ವಂಶಾವಳಿಯ ಜನರು ಮೂಲ ಯಾವ ತಾಣದವರೆಂದು, ಕಂದಾಯ ಕೊಡದೆ ಒಂದೊಂದು ತಾಣದಿಂದ ಮತ್ತೊಂದು ತಾಣಕ್ಕೆ ಬಂದ ವಿವರ ಲಭ್ಯ. ಉದಾ : ವಿಜಾಪುರ > ಕೆಂಬಾವಿ > ಹಾನಗಲ್ಲ > ಬಂಕಾಪುರ > ಕೆಂಗಾಪುರ > ಜೇಕಿನಕಟ್ಟಿ - ಮುಂ.

೮. ಮನೆದೇವರು : **ಪರ್ವತ ಮಲ್ಲಯ್ಯ, ಬಸವಣ್ಣ, ಕೊಟಬಾಗಿ ರೇವಣಸಿದ್ಧೇಶ್ವರ, ಚುರಚಗೇರಿ ಹನುಮಂತ, ಹಾಲಗಿ ರಾಚೋಟಿಸ್ವಾಮಿ, ದ್ಯಾಮವ್ವ ಮುಂ.**

೯. ಜಮೀನಿನ ಉಲ್ಲೇಖ ೮೦ ಕೂರಗಿ, ೬೦ ಕೂರಗಿ, ಮಾನೇದ ಹೊಲ, ಪೂಜಾರ ಹೊಲ.

೧೦. ಡಿಳ್ಳಿಪಾಚಾ, ದೇಶಗತಿ, ಸಾಬರ ವಂಶಾವಳಿ (ಉದಾ: ರಾಜೇಸಾಬ (ಕೀಲಿಕೈ ಹವಾಲದಾರಕಿ ವೃತ್ತಿ)

೧೧. ಆಯಾ ಮನೆತನದವರು ದಾನ ಮಾಡಿದ ವಿವರ, ದಿನಾಂಕ, ಕೊಡಪಾನ, ಹಂಡೆ, ಆಕಳಕರು, ಉಂಗುರ, ಬಂಗಾರ.

## ಫಲಿತಾಂಶ ಉಪಯೋಗ

* ಕರ್ನಾಟಕ ಇತಿಹಾಸ ಪರಂಪರೆಯಲ್ಲಿ ಹೆಳವರ ಹೊತ್ತಗೆಗಳು ಮಹತ್ವಪೂರ್ಣ ದಾಖಲೆಗಳು.
* ದಾಖಲೆಗಳು ಕಂಚಿನ ಕೋರಿ ಕಾಗದದ ಬರಹಗಳಾಗಿದ್ದುದು.
* ಇವುಗಳಲ್ಲಿ ಶಕೆ ಸೂಚಿಸಿದ್ದರಿಂದ ಯಾವ ಕಾಲದ್ದೆಂದು ತಿಳಿಯುವದು. ಉದಾ : ಜೇಕಿನಕಟ್ಟಿ ಶ್ರೀ ಹುತ್ತ ಮಲ್ಲೇಶ್ವರ ದೇವಸ್ಥಾನ ೧೧-೧೨ನೆಯ ಶತಮಾನ ದ್ದೆಂದು, ಜೇಕಿನಕಟ್ಟಿ ಊರು ೧೧-೧೨ನೇ ಶತಮಾನ ದಲ್ಲಿ ಇದ್ದ ಊರೆಂದು ತಿಳಿಯುವದು.
* ಗ್ರಾಮನಾಮಗಳ ಮೂಲ ಹೆಸರು ದಾಖಲೆಗಳಲ್ಲಿ ಲಭ್ಯ ಉದಾ : ಜೇಕಿನಗಡ್ಡಿ ; ಪಾನಂಗಲ್ಲು-ಮುಂತಾದವು.
* ವ್ಯಕ್ತಿಗಳ ಭಿನ್ನಭಿನ್ನ ನಾಮಗಳು - ಅವುಗಳ ಪುನರಾವರ್ತನೆ ವಂಶಾವಳಿಗಳಲ್ಲಿ ಕಾಣುವದು. ಉದಾ: ಮಲ್ಲಯ್ಯ, ಮಲ್ಲನಗೌಡ, ಮಲ್ಲೇಶಪ್ಪ - ಮುಂತಾದವು ಜೇಕಿನಕಟ್ಟಿ ಊರಿನ ದೇವರ ನಾಮಗಳು.
* ಊರಿನ ಗ್ರಾಮದೇವರು - ದೇವತೆ ಯಾವುದೆಂದು, ಮನೆ ದೇವರು - ಯಾವುದೆಂದು ತಿಳಿಯುವರು. ಉದಾ ಹುತ್ತಮಲ್ಲಯ್ಯ, ಶಿರಹಟ್ಟಿ ಫಕೀರಸ್ವಾಮಿ, ದ್ಯಾಮವ್ವ, ಯಲ್ಲವ್ವ-ಮುಂತಾದವು.
* ವಂಶಾವಳಿ (೮೦೦-೯೦೦ ವರ್ಷಗಳ) ಲಭ್ಯ. ಉದಾ: ೧೦೦೦ ಶಕೆ, ೧೦೨೬ ಶಕೆ, ಮುಂತಾದವು.
* ಇತರ ಮತಧರ್ಮದವರೊಂದಿಗೆ ಸಂಬಂಧ ಬೆಳೆಸಿ ಲಗ್ನವಾದ ವಿವರ. ಉದಾ : ಲಿಂಗಾಯತರೊಂದಿಗೆ ಇಸ್ಲಾಂಧರ್ಮದವರ ಲಗ್ನ.
* ಒಂದು ಊರಿಗಿಂತ ಇನ್ನೊಂದು ಊರಿಗೆ ಸ್ಥಳಾಂತರಗೊಂಡು ಭಿನ್ನ ಭಿನ್ನ 'ಕಾಯಕಗಳಲ್ಲಿ ತೊಡಗಿದ ವಿವರ ಸ್ಥಳಾಂತರಕ್ಕೆ ಕಾರಣಗಳು (ನಕಾಶದಲ್ಲಿ ಗುರುತಿಸಬಹುದು).
* ಊರಿನ ಗೌಡಕಿ - ಓಲೆಕಾರಕಿ ನಾಯಕತನ ಪಡೆದ ಇತಿಹಾಸ ಲಭ್ಯ.
* ವಾರಸಾ ಸರ್ಟಿಫಿಕೇಟ್ ಪಡೆಯಲು, ವಂಶಾವಳಿ ವಿವರ ನೀಡುವ ಈ ಹೊತ್ತಗೆಗಳು Authentic ಆಕರಗಳು.
* ಕೋರ್ಟ ನಿರ್ಣಯಗಳಲ್ಲಿ ಹೆಳವರ ಹೊತ್ತಗೆಗಳು, ವಕೀಲರಿಗೆ, ಜಜ್ಜುಗಳಿಗೆ ಪ್ರಥಮ - ಬಹುಮುಖ್ಯ Authentic ಆಕರಗಳು.

## ಸಂರಕ್ಷಣೆ

ಕರ್ನಾಟಕ ಇತಿಹಾಸ, ಪರಂಪರೆ ಉಳಿಸಿಕೊಳ್ಳಲು ಶಾಸನಗಳು, ತಾಡೋಲೆಗಳು ಭೂರ್ಜ ಪತ್ರಗಳು, ಕೈಫಿಯತ್ತುಗಳು, ಬಖೈರುಗಳು, ನಾಮೆಗಳಂತೆ, ಹೆಳವರ ಹೊತ್ತಗೆಗಳು ಪ್ರಮುಖ ಆಕರಗಳು, ಅವುಗಳ ರಕ್ಷಣೆ ಅಗತ್ಯ.

'ದಾಖಲೆ'ಗಳು ಪ್ರಾಚೀನ ಇತಿಹಾಸವನ್ನು ಹುದುಗಿಸಿಕೊಂಡು, ಅಲ್ಲಲ್ಲಿ 'ಪಳೆಯುಳಿಕೆ' ಗಳಾಗುತ್ತಿವೆ, ಪೂರ್ಣ ವಿವರ ತಿಳಿಯದಂತಾಗುತ್ತಿದೆ. ಆದ್ದರಿಂದ ಕರ್ನಾಟಕದ - ಕರ್ನಾಟಕ ಗ್ರಾಮ ನಾಮ - ವ್ಯಕ್ತಿ ನಾಮ - ದೇವಾಲಯ ನಾಮ - ಇತರ ವಿಷಯಗಳನ್ನು



ಆಕರ – ಹೆಳವರ ಹೊತ್ತಗೆಗಳು (ಅದರ ಮೊದಲ ಪುಟ)

ಪ್ರತಿಪಾದಿಸುವ ಮಹತ್ವಪೂರ್ಣ ದಾಖಲೆಗಳಲ್ಲಿ "ಹೆಳವರ ಹೊತ್ತಗೆಗಳು" ಕರ್ನಾಟಕದ ಇತಿಹಾಸವನ್ನು, ಹಳ್ಳಿಗಳ ಇತಿಹಾಸವನ್ನೂ, ವಂಶಪಾರಂಪರತೆಯನ್ನೂ ದಾಖಲಿಸುವ ಮಹತ್ವಪೂರ್ಣವಾದ ದಾಖಲೆಗಳಾಗಿರುವುದರಿಂದ ಕರ್ನಾಟಕ ರಾಜ್ಯದ 'ದಾಖಲು' ಸಂಪತ್ತಾದ "ಹೆಳವರ ಹೊತ್ತಗೆ"ಗಳನ್ನು (Xerox Copy) ನೆರಳಚ್ಚು ಪ್ರತಿ ಮಾಡಿಸಿ, ಉಳಿಸಿಕೊಳ್ಳಬೇಕು, ಇದಕ್ಕಾಗಿ ಸರಕಾರ ಸಂಪತ್ತನ್ನು ವಿನಿಯೋಗಿಸಬೇಕೆಂದು, ಈ ಕಾರ್ಯಕ್ಕೆ ಸಂಶೋಧಕರನ್ನು ಅಣಿಗೊಳಿಸಿ ಕರ್ನಾಟಕ ಇತಿಹಾಸ ಸಂಪತ್ತು ಉಳಿಸಿಕೊಳ್ಳಬೇಕೆಂದು ಸರಕಾರಕ್ಕೆ, ವಿಶ್ವವಿದ್ಯಾಲಯದ ಇತಿಹಾಸ ಹಾಗೂ ಕನ್ನಡ ವಿಭಾಗಗಳಿಗೆ, ಅಧ್ಯಯನ ಪೀಠಗಳಿಗೆ ನನ್ನ ಬಿನ್ನಹದ ವಿನಂತಿಯನ್ನು ನಿವೇದಿಸುತ್ತೇನೆ.

ಹೀಗೆ ಅನೇಕ ವಿಷಯಗಳನ್ನು ಹೊತ್ತುನಿಂತ ಹೆಳವರ ಹೊತ್ತಗೆಗಳು ಕರ್ನಾಟಕದ ಹಳ್ಳಿಗಳ, ತಾಲೂಕು–ಪಟ್ಟಣಗಳ ಜನರು ವಾಸಿಸುವ ಊರು, ವ್ಯಕ್ತಿ, ಆಸ್ತಿ, ವೃತ್ತಿ, ದೇವರನಾಮ, ಮಠ, ಬಗಿ, ಸ್ಥಳಾಂತರಗೊಂಡ ಭಿನ್ನ ಭಿನ್ನ ಸಂಸ್ಕೃತಿ ಚಿತ್ರಣಗಳ 'ಆಕರ ಕೋಶ'ಗಳಾಗಿವೆ. ಇವುಗಳ ರಕ್ಷಣೆ ಮಾಡಿ ಐತಿಹಾಸಿಕ ಪರಂಪರೆ ಉಳಿಸಬೇಕು.

ಕುಂ.ಬಾ. ಸದಾಶಿವಪ್ಪ*

# ಪ್ರಾಚೀನ ಬಳ್ಳಾರಿ ಜಿಲ್ಲೆ ಪಶ್ಚಿಮ ತಾಲ್ಲೂಕುಗಳಲ್ಲಿ ನೊಳಂಬ ಪಲ್ಲವ ನಿರ್ಮಿತ ಕೆರೆ

ಪ್ರಾಚೀನ ಕಾಲದಲ್ಲಿ ಬಾದಾಮಿ ಚಾಲುಕ್ಯರಿಗೂ ಕಂಚಿಯ ಪಲ್ಲವರಿಗೂ ಮೇಲಿಂದ ಮೇಲೆ ಕದನಗಳು ನಡೆಯುತ್ತಿದ್ದವು. ಆಗ ಸೋಲು ಗೆಲುವುಗಳು ರಾಜ್ಯದ ಗಡಿಗಳಲ್ಲಿ ಕಂಡುಬರುತ್ತಿದ್ದುವು. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಪಲ್ಲವರ ಸೇನಾ ನಾಯಕರು ಒಂದು ಚಿಕ್ಕ ರಾಜ್ಯವನ್ನು ಸ್ಥಾಪಿಸಿದರು. ಅದೇ ನೊಳಂಬಳಿಗೆ-೧೦೦೦ ವೆಂದು ಕರೆಸಿಕೊಂಡಿತು. ನೊಳಂಬಳಿಗೆ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಆಸುಪಾಸು ಪ್ರದೇಶವಾಗಿದ್ದಿತು. ಕಾಲ ಗತಿಸಿದಂತೆ ಅಂದರೆ ೯-೧೦ನೇ ಶತಮಾನದ ಹೊತ್ತಿಗೆ ಹೆಚ್ಚು ವರ್ಧಿಸಿ ನೊಳಂಬವಾಡಿ ೩೨೦೦೦ ಸಾವಿರ ವಾಯಿತು. ಇದು ಈಗಿನ ಕೋಲಾರ, ತುಮಕೂರು, ಬೆಂಗಳೂರು, ಬಳ್ಳಾರಿ, ಚಿತ್ರದುರ್ಗ. ಆಗ್ನೇಯ ದಿಕ್ಕಿನ ತಮಿಳುನಾಡು ಧರ್ಮಪುರಿ ನೈರುತ್ಯದಲ್ಲಿ ಮಂಡ್ಯ ಜಿಲ್ಲೆಯ ತಾಯೂರುವರೆಗೂ ಹಬ್ಬಿದ್ದಿತು. ಇವರ ವಂಶವೃಕ್ಷ ಅನಂತಪುರ ಜಿಲ್ಲೆಯ ಮಡಕಸಿರಾ ತಾಲೂಕಿನ ಹೆಂಜೇರು ಹೇಮಾವತಿಯ ಸಿದ್ದೇಶ್ವರ ದೇವಾಲಯದ ಕಂಬದಲ್ಲಿದೆ.

ಇವರಿಗೆ ರಾಜಮಹಾರಾಜ ಚಕ್ರವರ್ತಿಗಳಾಗುವ ಭಾಗ್ಯ ಫಲಿಸದಿದ್ದರೂ ಕಾಲಾಂತರದಲ್ಲಿ ಗಂಗ ಮತ್ತು ಚಾಲುಕ್ಯರ ಕೈಕೆಳಗೆ ತಮ್ಮ ಆಡಳಿತವನ್ನು ಪ್ರಾರಂಭಿಸಿ ರಾಷ್ಟ್ರಕೂಟ ಚಾಲುಕ್ಯರ ವಂಶಗಳಲ್ಲಿ ವೈವಾಹಿಕ ಸಂಬಂಧಗಳನ್ನು ಬೆಳೆಸಿ ದೀರ್ಘಕಾಲದವರೆಗೂ ಕರ್ನಾಟಕ ರಾಜ್ಯದ ಹಲವಾರು ಕಡೆಗಳಲ್ಲಿ ಆಡಳಿತವನ್ನು ಕ್ರಿ.ಶ. ೭೫೦ ರಿಂದ ೧೦೫೪ರ ವರೆಗೂ ನಡೆಸಿದ್ದುದು ಕಂಡುಬರುವುದು. ಇವರಲ್ಲಿ ತ್ರಿಣಯ-ಮಂಗಳನಿಂದ ತ್ರೈಲೋಕ್ಯಮಲ್ಲ ನನ್ನಿ ನೊಳಂಬ ಪಲ್ಲವ ಪೆರ್ಮಾನಡಿವರೆಗೂ ಆಳಿದ್ದು ಗೊತ್ತಾಗುವುದು.

ಕೊನೆ ಕೊನೆಗೆ ನೊಳಂಬರು ಬಳ್ಳಾರಿ ಜಿಲ್ಲೆಯ ಕಂಪಲಿಗೆ ಬಂದು ಅದನ್ನು ಮುಖ್ಯ ಪಟ್ಟಣವನ್ನಾಗಿ ಮಾಡಿಕೊಂಡು ಹಲವು ಭಾಗಗಳನ್ನು ಆಳಿದರು. ಆಗ ಅವರ ರಾಜ್ಯದ ವಿಸ್ತಾರ ಕಡಿಮೆಯಾಗಿದ್ದಿತು ಕೋಗಳಿ-೫೦೦, ಕದಂಬಳಿಗೆ-೧೦೦೦, ಬಲ್ಲಕುಂಧೆ-೩೦೦, ಕಣಿಯಕಲ್ಲು ೩೦೦, ಕುಡಿ ಹರವಿ-೭೦, ಕರಿವಿಡಿ-೩೦ ಪ್ರಾಂತಗಳನ್ನು ಒಳಗೊಂಡಿದ್ದಿತು. ಕೊನೆಯ ಅರಸ ತ್ರೈಲೋಕ್ಯಮಲ್ಲ ಮೊದಲ ಸೋಮೇಶ್ವರನ ಸಾಮಂತನಾಗಿದ್ದನು. ಸಿರುಗುಪ್ಪ ತಾಲೂಕು ಕಂಚುಗಾರ ಬೆಳಗಲ್ಲು ಗ್ರಾಮದ ಚೆನ್ನಬಸಪ್ಪನ ಮನೆಯ ಕಟ್ಟೆಯ ಕ್ರಿ.ಶ. ೨೨-೪-೯೮೧ರ ಶಾಸನದಲ್ಲಿ ವೀರ ನೊಳಂಬ ಪೆರ್ಮಾನಡಿದೇವನ ರಾಣಿ ರೇವಲ ದೇವಿಯು ದೇವರಿಗೆ ಅರವತ್ತು ಮತ್ತರು ಭೂದಾನ ನೀಡಿದಳು. ಹೀಗೆ ಸಿರುಗುಪ್ಪ ತಾಲೂಕಿನಿಂದ ಪಶ್ಚಿಮಕ್ಕೆ ಹಡಗಲಿ, ಹರಪನಹಳ್ಳಿ ತಾಲೂಕುಗಳಲ್ಲಿ ಆಡಳಿತ ನಡೆಸಿ ಕೆಲವು ಕೆರೆಗಳ ನಿರ್ಮಾಣಕ್ಕು ಕಾರಣರಾದರು. ಹಡಗಲಿ ತಾಲೂಕು ಮೋರಿಗೆರೆ ಉದ್ದಿ ಬಸವಣ್ಣನ ಗುಡಿ ಶಾಸನ ಕ್ರಿ.ಶ. ೨೮-೯-೧೦೪೫ರ ಪ್ರಕಾರ ಇದರಲ್ಲಿ ಬರುವ ನೊಳಂಬ ಘಟೆಯಂಕಾರ (ಇರಿವನೊಳಂಬ ನರಸಿಂಘ ದೇವನು) ನ ರಾಣಿ ಚಾಲುಕ್ಯ ಚಕ್ರವರ್ತಿಗಳ ಮನೆಯವಳು. ಅವಳ ಹೆಸರು ಮಹಾದೇವಿ. ಇವಳೇ ಅರಸಿಕೆರೆ ಕೆರೆಯ ನಿರ್ಮಾಣಕ್ಕೆ ಕಾರಣಳಾದಂತೆ ಮತ್ತೊಂದು ಕೆರೆಗೂ ಕಾರಣಳಾಗಿರಬೇಕೆ ? ಎಂಬುದು ಒಂದು ಅಂಶ. ಅರಸೀಕೆರೆಯ ಪಶ್ಚಿಮ ಭಾಗದ ಕಂಚಿಕೆರೆ ಗ್ರಾಮದ ಕೆರೆಯ ಬಗ್ಗೆ ತಿಳಿದುಕೊಳ್ಳುವುದು ಮತ್ತೊಂದು. ಕಂಚಿಕೆರೆಯ ಮಂದ್ಲಿ ಮಠದ ಮುಂದಿನ ಶಾಸನ ಕ್ರಿ.ಶ. ೨೩-೪-೧೦೩೯ರ ಪ್ರಕಾರ ನೊಳಂಬ ಪಲ್ಲವರ ಅಧೀನನಾದ ಸ್ಥಳೀಯ ಅರಸ ಬಾಚಿಮಯ್ಯನು ಲಿಂಗಪ್ರತಿಷ್ಠೆ ಮಾಡಿ ಗದ್ದೆದಾನ ಮಾಡಿದನು ಎಂದಿದೆ. ಈ ಲಿಂಗ ಪ್ರತಿಷ್ಠೆ ಮಾಡಿ ಗದ್ದೆದಾನ ಮಾಡುವ ಮೊದಲೇ ಕೆರೆ ನಿರ್ಮಾಣವಾಗಿರಬೇಕು. ಕೆರೆಯು ರಚನೆಯಾದ ಬಳಿಕ ಗ್ರಾಮ ಸ್ಥಾಪನೆಯಾಗಿ, ಅದಕ್ಕೆ ಕೆರೆಯ ಹೆಸರು ಉಂಟಾದಂತೆ ತೋರುವುದು. ಗ್ರಾಮ ಕೆರೆಯ ದಂಡೆಗೆ ಪೂರ್ವ ದಕ್ಷಿಣ ದಿಕ್ಕಿನಲ್ಲಿ ಒಂದು ಚಿಕ್ಕ ಪರ್ವತದ ಸುತ್ತು ಹಾಕಿದೆ.

ಕೆರೆಯ ಕೋಡಿ ಉತ್ತರ ದಿಕ್ಕಿನಲ್ಲಿದೆ. ಕೋಡಿಯಲ್ಲಿಯ ದೇವರನ್ನು ಕೋಡಿ ಸಿದ್ದೇಶ್ವರನೆಂದು ಊರವರು ಕರೆಯುವರು. ಈ ಸಿದ್ದೇಶ್ವರ ದೇವರು ನೊಳಂಬ ಪಲ್ಲವ ಅರಸರ ಮನೆ ದೇವರು. ಇನ್ನು ಊರಲ್ಲಿ ಬಹು ಜನರು ಸಿದ್ದಪ್ಪ ಸಿದ್ದವ್ವರೆಂದು ನಾಮಕರಣ ಮಾಡಿಕೊಂಡಿರುವರು.

*ಗೋಸಾಯಿಗುಡ್ಡ, ಹಂಪಿ-ಹರಿಹರ ಮಾರ್ಗ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ.





ಕೆಂಚಿಕೆರೆ ಕೋಡಿಸಿದ್ಧೇಶ್ವರ ದೇವರು

ಕೆಂಚಿಕೆರೆ ಕೋಡಿಸಿದ್ಧೇಶ್ವರ ದೇವಾಲಯ



ಕೆಂಚಿಕೆರೆ ಗ್ರಾಮದ ಕೆರೆ

ಈ ಭಾಗದ ಕಂಚಿಕೇರಿ, ಹಿರೇಮ್ಯಾಗಳಗೇರಿ, ಪುನಾಬಗಟ್ಟಿ, ನಂದಿಕಂಬ, ಉಚ್ಚಂಗಿದುರ್ಗ, ತೆಲಿಗಿ, ಅರಸಿಕೆರೆ, ಚಿರಸ್ತಹಳ್ಳಿ, ಕಡಬಗೆರೆ, ಸತ್ತೂರು, ಬಾಗಳಿ, ನಂದಿಬೇವೂರು ಗ್ರಾಮಗಳಲ್ಲಿ ನೊಳಂಬ ಪಲ್ಲವರ ಶಾಸನಗಳು ಹೆಚ್ಚಾಗಿ ಕಂಡುಬರುತ್ತವೆ. ಅರಸೀಕೆರೆ ಗ್ರಾಮದಿಂದ ಸುಮಾರು ೧೬ ಕಿ.ಮೀ. ಅಂತರ ನೈರುತ್ಯ ದಿಕ್ಕಿನಲ್ಲಿ ಕಂಚಿಕೆರೆ ಗ್ರಾಮ ಸಿಗುತ್ತದೆ. ಕಂಚಿಕೆರೆಯನ್ನು ಯಾರು ಕಟ್ಟಿಸಿದರು ಎಂಬುದಕ್ಕೆ ಸರಿಯಾದ ಪುರಾವೆಗಳು ಕಂಡುಬಂದಿಲ್ಲ. ಈ ಸ್ಥಳದಲ್ಲಿ ಮಂದ್ಲಿ ಮರದ ಶಾಸನ ಬಿಟ್ಟರೆ ಬೇರೆ ಶಾಸನಗಳಿಲ್ಲ. **ಕಂಚಿಯ ನೊಳಂಬ ಪಲ್ಲವರು ಕಟ್ಟಿಸಿದ ಕೆರೆ** ಎಂಬುದು ಜನರ ಆಡು ಭಾಷೆಗೆ ತಿರುಗಿ 'ನೊಳಂಬ ಪಲ್ಲವರು' ಹೋಗಿ ಬರೀ ಕಂಚಿ ಎಂಬುದೇ ಉಳಿದು, ಕಂಚಿಯವರ ಕೆರೆ ಕಂಚೀಕೆರೆಯಾಗಿರಬಹುದೇ? ಎಂಬುವ ಊಹೆಗೂ ಅವಕಾಶವಿದೆ. ಈ ಊಹೆಯನ್ನು ಕೆಳಗಿನ ಅಂಶಗಳು ಪುಷ್ಟೀಕರಿಸುತ್ತವೆ.

೧. ಈ ಭಾಗದಲ್ಲಿ–ನೊಳಂಬ ಪಲ್ಲವ ಅರಸರ ಶಾಸನಗಳು ಹೆಚ್ಚಾಗಿ ಕಾಣುತ್ತವೆ.

೨. ಸಿದ್ದೇಶ್ವರ ಲಿಂಗವನ್ನು ನೊಳಂಬ ಪಲ್ಲವರೇ ಸ್ಥಾಪಿಸಿರುವರು.

೩. ಕಂಚಿಯ ಹೆಸರು ಕೆರೆಗೆ ಕರೆಯಲಾಗಿದೆ.

೪. ನೀರಾವರಿ ಯೋಜನೆಗಳಿಗೆ ನೊಳಂಬ ಪಲ್ಲವ ಅರಸರ ರಾಣಿಯರು ಹೆಚ್ಚು ಗಮನಹರಿಸಿದ್ದಾರೆ.

ಡಾ. ಎನ್.ಎಸ್. ವೀರೇಶ ಉತ್ತಂಗಿ*

# ಸೋಗೆ : ಸ್ಥಳನಾಮ ವಿಶ್ಲೇಷಣೆ

ಸೋಗಿ, ಸ್ವಾಗಿ, ಸೋಗೆ ಎಂದು ಕರೆಯಲ್ಪಡುವ ಸೋಗಿಯು ಬಳ್ಳಾರಿ ಜಿಲ್ಲೆ ಹೂವಿನಹಡಗಲಿ ತಾಲ್ಲೂಕಿನಲ್ಲಿದೆ. ಇದು ಜನರ ಭಾಷೆಯಲ್ಲಿ 'ಸ್ವಾಗಿ' ಎಂದು ಕರೆಯಲ್ಪಡುತ್ತದೆ. ಇದನ್ನು ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಹಾಗೂ ವಿಜಯನಗರದ ಅರಸರು ತಮ್ಮ ಆಳ್ವಿಕೆಗೆ ಒಳಪಡಿಸಿ ಕೊಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿ ಕಲ್ಯಾಣದ ಚಾಲುಕ್ಯರ ದೇವಾಲಯಗಳು, ಮೂರ್ತಿಶಿಲ್ಪಗಳು ದೊರೆಯುತ್ತವೆ. ಬಹುತೇಕ ಶಾಸನಗಳು ಕಲ್ಯಾಣದ ಚಾಲುಕ್ಯರವೇ ಆಗಿವೆ. "ಸೋಗೆಯೂರೊಡೆಯರಂ" ಎಂದು ಒಂದೆರಡು ಶಾಸನಗಳು ದಾಖಲಿಸುವುದರಿಂದ ಇದೊಂದು ಆಡಳಿತದ ಉಪವಿಭಾಗವಾಗಿತ್ತೆಂದು ಗ್ರಹಿಸಬಹುದಾಗಿದೆ. ಡಾ. ಜೆ.ಎಂ. ನಾಗಯ್ಯನವರು ಇದನ್ನು 'ಸೋಗೆ-೧೨' ಎಂದು ಗುರುತಿಸುತ್ತಾರೆ.

'ಸೋಗೆ' ಎಂದರೆ ಏನು ? ಇದನ್ನು ಹಾಗೆ ಏಕೆ ಕರೆದರು ? 'ಸೋಗೆ' ಎಂಬ ಪದ ಸ್ಥಳವಾಚಕವೆ ? ಪ್ರಾಣಿವಾಚಕವೆ ? ಸೋಗೆಯ ಚಾರಿತ್ರಿಕ ಮಹತ್ವವೇನು ? ಎಂಬ ಮುಂತಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಪ್ರಸ್ತುತ ಲೇಖನದಲ್ಲಿ ಪ್ರಯತ್ನಿಸಲಾಗಿದೆ.

## 'ಸೋಗೆ' ಪದದ ನಿಷ್ಪತ್ತಿ ಮತ್ತು ಅರ್ಥ

ಈಗ ಸ್ವಾಗಿ, ಸೋಗಿ ಎಂದು ಕರೆಯಲ್ಪಡುವ ಈ ಸ್ಥಳವನ್ನು ಇಲ್ಲಿ ಶಾಸನಗಳು 'ಸೋಗೆ', 'ಸೋಗ್ವೆ', 'ಸೋಗೆಯೂರು' ಎಂದು ಕರೆದಿವೆ. ಕ್ರಿ.ಶ. ೧೦೩೮ರ ಚಾಲುಕ್ಯ ದೊರೆ ಜಗದೇಕಮಲ್ಲ ಜೀವನ ಆಳ್ವಿಕೆಯ ಶಾಸನವು "ಸೋಗೆಯುರೊ..."[೧] ಎಂದೂ, ಇದೇ ರಾಜವಂಶದ ತ್ರಿಭುವನ ಮಲ್ಲದೇವನ ಆಳ್ವಿಕೆಯ ಕ್ರಿ.ಶ. ೧೧೧೦ರ ಶಾಸನವು "ಸೋಗೆ..."[೨] ಎಂದೂ, ಕ್ರಿ.ಶ. ೧೨೨೧ರ ಶಾಸನವು "ಸೋಗೆಯೂರ..."[೩] ಎಂದು, ಕ್ರಿ.ಶ. ೧೨೨೬ರ ಹೊಯ್ಸಳ ವೀರಬಲ್ಲಾಳನ ೬ನೆಯ ವರ್ಷದ ಶಾಸನವು (ಇಮ್ಮಡಿ ವೀರನರಸಿಂಹದೇವನ ಕಾಲದ್ದು) "ಸೋಗ್ವೆ" ಎಂದು ಕರೆದಿವೆ. ಅಲ್ಲದೆ ಹೊಯ್ಸಳ ವಿಷ್ಣುವರ್ಧನ ವೀರಬಲ್ಲಾಳನ ಕಾಲದ ತ್ರುಟಿತ ಶಾಸನವು "ಸೋಗೆಪುರ..."[೪] 'ಸೋಗೆಯೂರು...[೫] ಎಂದು ಎಂದು ದಾಖಲಿಸಿವೆ. ಹಾಗೆಯೇ ಕ್ರಿ.ಶ. ೧೫೧೬ರ ಕೃಷ್ಣದೇವರಾಯನ ಕಾಲದ ಶಾಸನವು ಸಹ "ಸೋಗೆ..."[೬] ಎಂದು ದಾಖಲಿಸಿದೆ.

ಈ ಮೇಲಿನ ಎಲ್ಲಾ ಶಾಸನಗಳು ಸೋಗಿಯನ್ನು 'ಸೋಗೆ', 'ಸೋಗೆಪುರ' ಸೋಗೆಯೂರು ಮತ್ತು ಸೋಗ್ವೆಯೆಂದು ಕರೆದಿವೆ. ಹಾಗಾದರೆ 'ಸೋಗೆ' ಎಂದರೇನು? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಜೊತೆಗೆ ಇದರ ಮೂಲ ತಿಳಿಯುವುದು ಅವಶ್ಯವೆನಿಸಿದೆ.

ಸೋಗೆ>ಸೋಗೆಪುರ>ಸೋಗೆಯೂರು>ಸೋಗ್ವೆ (ನವಿಲುಗಳ ಸಮೂಹ)> ಸೋಗಿ ಎಂದಾದಂತೆ ಕಂಡುಬರುತ್ತದೆ. ಈ ಎಲ್ಲಾ ಪದಗಳು ಬಹುಶಃ ಒಂದೇ ಅರ್ಥ ಹೊಂದಿರುವಂತೆ ಕಂಡುಬರುತ್ತದೆ. ಸೋಗೆ ಎಂದರೆ "೧) ನವಿಲು, ಮಯೂರ, ೨) ನವಿಲಿನ ನೀಳವಾದ ಪುಚ್ಛ, ಬರ್ಹ, ೩) ತಾಳೆ ತೆಂಗು, ಅಡಿಕೆ ಮುಂತಾದ ಮರಗಳ ಎಲೆ, ಗರಿ, ೪) ಕಬ್ಬಿನ ಬುಡ ಹಾಗೂ ತುದಿಯಲ್ಲಿ ಪೊರೆಯಂತೆ ಚೂಪಾಗಿರುವ ಎಲೆ, ೫) ಉಟ್ಟ ಸೀರೆಯ ಉದ್ದವಾದ ನೆರಿಗೆ, ೬) ಉದ್ದ, ನೀಳ, ೭) (ಸ್ತ್ರೀಯರು ಸೀರೆಯನ್ನು ಉಡುವಾಗ) ನಿರಿಗೆಗಳನ್ನು ಬಾಳೆಕಾಯಿ ಆಕಾರದಲ್ಲಿ ಮೇಲಕ್ಕೆ ತಿರುವಿ ಸೊಂಟದಲ್ಲಿ ಮಡಿಸಿ, ಸಿಕ್ಕಿಸಿದ ಸೀರೆಯ ಅಂಚು, ಬಾಳೆಕಾಯಿ, ೮) ಕೊರಳಲ್ಲಿ ಶಾಲಿನಂತೆ ಹಾಕಿಕೊಳ್ಳುವುದು, ೯) ಕಣ್ಣಿನ ತುದಿ, ಕುಡಿ, ಕಡೆಗಣ್ಣು, ೧೦) ಕಣ್ಣಿನ ತುದಿಗೆ ತಿದ್ದುವ ಕಾಡಿಗೆಯ ರೇಖೆ, ಗೆರೆ, ೧೧) ಹಡಗಿನ ತುದಿ ಚೂಣಿ, ೧೨) ಒಳಭಾಗ, ಮಡಿಲು, ೧೩) ಜೊಂಪೆ ಗೊಂಚಲು, ಒಂದು ಬಗೆಯ ಮರ ಮತ್ತು ಅದರ ತಳಿರು, ೧೪) ಗಿಣಿ ಮುಂತಾದ ಪಕ್ಷಿಗಳಿಗಿರುವ ಬಾಲದಂತೆ ಉದ್ದವಾದ ಪುಚ್ಛ, ೧೬) ತುದಿ ಕೊನೆ"[೭] ಹೀಗೆ ಇನ್ನೂ ಮುಂತಾದ ಅರ್ಥವನ್ನು 'ಸೋಗೆ' ಎಂಬ ಪದ ಹೊಂದಿದೆ.

ಅಲ್ಲದೆ ಬೆಟ್ಟದಬುಡದಲ್ಲಿ ವಾಸಿಸುವ ಜನಸಮೂಹ ಎಂದೂ ಇದನ್ನು ಅರ್ಥೈಸಬಹುದಾಗಿದೆ. ಈ ಸ್ಥಳದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ೨ ಅಂಶಗಳಿಂದ ಈ ಊರಿಗೆ

*

'ಸೋಗೆ' ಎಂಬ ಹೆಸರು ಬಂದಿರುವುದು ತಿಳಿದುಬಂತು. ೧) ಬೆಟ್ಟಪ್ರದೇಶ, ೨) ನವಿಲು, ೩) ಕಬ್ಬು.

೧) ಸೋಗಿಯ ಜನರು ಹಿಂದೆ ಸೋಗಿಯ ಪಶ್ಚಿಮಕ್ಕೆ ಅನತಿ ದೂರದಲ್ಲಿರುವ ಬೆಟ್ಟದ ಬುಡದಲ್ಲಿ ವಾಸಿಸುತ್ತಿದ್ದರು. ಕಾಡು ಪ್ರಾಣಿಗಳ ಹಾವಳಿಯಿಂದ ತಪ್ಪಿಸಿಕೊಂಡು ಈಗಿರುವ ಸ್ಥಳದಲ್ಲಿ ಬಂದು ನೆಲೆಸಿದರೆಂದು ಸ್ಥಳೀಯರು ಹೇಳುತ್ತಾರೆ. ಆದ್ದರಿಂದ ಇವರು ಬೆಟ್ಟಪ್ರದೇಶದಿಂದ ಬಂದ ಜನರಾದ್ದರಿಂದ ಸೋಗೆಯವರು ಎಂದು ಹೆಸರು ಬಂದಿದೆ.

೨) ಈ ಊರಿನ ಬೆಟ್ಟಪ್ರದೇಶದ ಕಾಡಿನಲ್ಲಿ ಮತ್ತು ಈಗಲೂ ಊರಿನ ಪೂರ್ವಕ್ಕೆ ಇರುವ ತಗ್ಗು ದಿನ್ನಿ ಹೊಂದಿದ ೪೦ ಎಕರೆ ಪ್ರದೇಶದಲ್ಲಿ ನೂರಾರು ನವಿಲುಗಳು ವಾಸಿಸುತ್ತಿರುವುದನ್ನು ಕಾಣಬಹುದಾಗಿದೆ. ಅಂದರೆ ಇಲ್ಲಿ ನವಿಲುಗಳು ಹೆಚ್ಚಾಗಿ ವಾಸಿಸುವ ಕಾರಣ ಇದನ್ನು 'ಸೋಗಿ'ಯೆಂದು ಕರೆಯಲಾಗಿದೆ.

೩) ಸೋಗೆಯಲ್ಲಿ ಕಬ್ಬನ್ನು ಹಿಂದೆ ಬಹು ಎತ್ತರವಾಗಿ ಬೆಳೆಯುತ್ತಿದ್ದರು. ಈಗಲೂ ಸುಮಾರು ೫೦% ಕಬ್ಬು ಬೆಳೆಯುತ್ತಾರೆ. ಅಂದರೆ ಸುತ್ತಮುತ್ತಲಿನ ಹಳ್ಳಿಗಳಲ್ಲೇ ಅತಿ ಹೆಚ್ಚು ಕಬ್ಬನ್ನು ಇಲ್ಲಿ ಬೆಳೆಯುತ್ತಾರೆ. ಅಲ್ಲದೆ ತೆಂಗು ತಾಳೆ ಮರಗಳನ್ನು ಸಹ ಇಲ್ಲಿ ಬೆಳೆಯಲಾಗುತ್ತದೆ.

ಈ ಮೇಲಿನ ಎಲ್ಲಾ ಅಂಶಗಳಿಂದ ಈ ಸ್ಥಳಕ್ಕೆ 'ಸೋಗೆ' ಎಂದು ಹೆಸರು ಬಂದಿರಬಹುದಾಗಿದೆ.

'ಸೋಗಿ' ಎಂಬ ಹೆಸರಿನ ಮೂಲರೂಪ ಕೆಳಗಿನಂತೆ ಆಗಿರಬಹುದಾಗಿದೆ.

ಚೊಗೆ>ಚೋಗೆ>ತೋಕೆ>ಸೋಗೆ=ಸೋಗಿ

ತಮಿಳು ಭಾಷೆಯಲ್ಲಿ ತೋಕೈ, ಮಲಯಾಳಿ, ತೆಲುಗು, ನಾಯ್ಕಿ, ಪರ್ಜಿ ಭಾಷೆಗಳಲ್ಲಿ ತೋಕ, ತುಳು ಭಾಷೆಯಲ್ಲಿ ಸೋಗೆ, ಚೋಗೆ, ಗೊಂಡಿ ಭಾಷೆಯಲ್ಲಿ ತೊಕಾ, ಮರಾಠಿ ಭಾಷೆಯಲ್ಲಿ ಸೋಗಾ ಎಂಬ ಪದ ಬಳಕೆಯಾಗಿದೆ. ಕನ್ನಡದಲ್ಲಿ ಸೋಗೆ, ಸೋಗ್ವೆ ಎಂದು ಪದ ಬಳಕೆಯಾಗಿರುವುದನ್ನು ಕಾಣಬಹುದು. 'ತೋಕಾ' ಎಂಬ ಪದದಿಂದ 'ಸೋಗೆ' ಎಂಬ ಪದ ಬಂದಿರಬಹುದಾಗಿದೆ.

ತೋಕೆ ಎಂದರೆ 'ತಾಳೆ, ತೆಂಗು, ಅಡಿಕೆ ಮುಂತಾದ ಮರಗಳ ಎಲೆ, ಗರಿ, ಕಬ್ಬಿನ ಬಡು ಅಥವಾ ತುದಿಯಲ್ಲಿ ಪೊರೆಯಂತೆ ಚೂಪಾಗಿರುವ ಎಲೆ, ನವಿಲಿನ ಗರಿ ಸೋಗೆ, ತುದಿ, ಕೊನೆ' ಎಂದರ್ಥ. ಬಹುತೇಕ ದ್ರಾವಿಡ ಭಾಷೆಗಳಲ್ಲಿ 'ತೋಕೆ' ಎಂಬ ಪದ ಬಳಕೆಯಾಗಿದ್ದು, ಇದುವೇ ಸೋಗೆ ಎಂಬ ಪದದ ಮೂಲರೂಪವಾಗಿರುವಂತೆ ತೋರುತ್ತದೆ. ಬೆಟ್ಟಪ್ರದೇಶ, ನವಿಲು, ಕಬ್ಬು, ಈ ಮೂರು ಅಂಶಗಳಿಂದ ಕೂಡಿರುವ ಜನಸಮೂಹವನ್ನು 'ಸೋಗೆಯೂರು' ಎಂದು ಶಾಸನ ದಾಖಲಿಸಿದಂತಿದೆ.

ಹೊಯ್ಸಳರ ಕಾಲದ ತ್ರುಟಿತ ಶಾಸನವು 'ಸೋಗೆಯ ಪುರ' ಎಂದು ಕರೆದಿರುವುದನ್ನು ಗಮನಿಸಿದರೆ, ಅದೊಂದು ಬ್ರಾಹ್ಮಣರ ಅಥವಾ ವೈದಿಕ ಪರಂಪರೆಯುವರ ವಾಸಸ್ಥಾನವಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೨೧ರ ಶಾಸನವು ಹೇಳುವಂತೆ ಇಲ್ಲಿರುವ ಬ್ರಾಹ್ಮಣರು ಅಂದರೆ ಸೋಗೆಯೂರೊಡೆಯ ಕಲಿದಂಡಾಧಿಪ ನಾಗವರ್ಮ, ಆತನ ಮಗ ಮಾರಸಿಂಗನಾಯಕ ಈತನ ಮಗ ಬಸಂತಿಮ್ಮನಾಯಕ ಇವನ ಮಕ್ಕಳು ನಾಗವರ್ಮಯ್ಯನಾಯಕ, ಕಾಳಿಮಯ್ಯ ನಾಯಕ ಮತ್ತು ಮಹಾದೇವಯ್ಯನಾಯಕರು ವತ್ಸಗೋತ್ರದ ಬ್ರಾಹ್ಮಣರಾಗಿದ್ದರು. ಈ ವಂಶದವರು ಸುಮಾರು ೫೦ ವರ್ಷಗಳ ನಂತರ ಲಿಂಗಾಯತ ಧರ್ಮಕ್ಕೆ ಮತಾಂತರ ವಾದಂತೆ ತೋರುತ್ತದೆ. ಏಕೆಂದರೆ ಈ ಗ್ರಾಮದ ಲಿಂಗಾಯತ ಪಂಚಮಸಾಲಿಯ ಕೆಲಗೌಡರ ಮನೆತನದವು ಈ ನಾಗವರ್ಮನ ವಂಶಜರೆಂದು ಈಗಲೂ ಹೇಳಿಕೊಳ್ಳು ತ್ತಾರೆ.

ಸೋಗೆ, ಸೋಗಿ, ಸ್ವಾಗಿ ಎಂದು ಕರೆಯಿಸಿಕೊಳ್ಳುವ ಸೋಗಿಯ ನವಿಲು, ಬೆಟ್ಟಪ್ರದೇಶದಿಂದ ಕೂಡಿರುವ ಜನವಸತಿ ಸಮೂಹವಾಗಿದೆ. ಇಲ್ಲಿ ಕಬ್ಬನ್ನು ಹೆಚ್ಚಾಗಿ ಬೆಳೆಯುತ್ತಿರುವುದರಿಂದಲೂ ಈ ಹೆಸರು ಬಂದಿರಬಹುದಾಗಿದೆ. ಸೋಗಿ ಎಂಬ ಪದದ ಮೂಲರೂಪವು 'ತೋಕೆ' ಆಗಿದೆ. ಇದು ಬಹುತೇಕ ದ್ರಾವಿಡ ಭಾಷೆಗಳಲ್ಲಿ ಬಳಕೆಯಾಗಿರುವ ಪದವಾಗಿದೆ.

## ಆಧಾರಸೂಚಿ


೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿಜಿಲ್ಲೆ,** (ಸಂ) ಡಾ. ದೇವರಕೊಂಡಾರೆಡ್ಡಿ ಮತ್ತು ಇತರರು, ಪುಟ-೪೩೫, ಶಾ.ಸಂ. ೯೬.
೨. ಅದೇ ಪುಟ ೪೪೦, ಶಾಸನ ಸಂಖ್ಯೆ ೧೦೧.
೩. ಅದೇ ಪುಟ ೪೪೩, ಶಾಸನ ಸಂಖ್ಯೆ ೧೦೩.
೪. ಅದೇ ಪುಟ ೪೩೬, ಶಾಸನ ಸಂಖ್ಯೆ ೯೭.
೫. ಅದೇ ಪುಟ ೪೩೯, ಶಾಸನ ಸಂಖ್ಯೆ ೧೦೦.
೬ ಅದೇ ಪುಟ ೪೪೩, ಶಾಸನ ಸಂಖ್ಯೆ ೧೦೬.
೭. **ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, ಸಂಪುಟ ೮,** ಎನ್. ಬಸವಾರಾಧ್ಯ (ಪ್ರ.ಸಂ.), ಪುಟ ೮೭೯-೮೭೩೦.
೮. **ಸಂಕ್ಷಿಪ್ತ ಕನ್ನಡ ನಿಘಂಟು,** ಎನ್. ಬಸವರಾರಾಧ್ಯ (ಪ್ರ.ಸಂ.) ಪುಟ ೫೭೨.

ಗಂಗಾಂಬಿಕೆ ಎಸ್.*

# ಹೊಯ್ಸಳ ಮಹಾಪ್ರಧಾನ ಬಲ್ಲಪ್ಪದಂಡನಾಯಕ ಮತ್ತು ಅವನ ವಂಶೀಯರು

ಬಲ್ಲಪ್ಪದಂಡನಾಯಕನು ಹೊಯ್ಸಳ ಮೂರನೆಯ ಬಲ್ಲಾಳನ ಆಳ್ವಿಕೆಯ ಕಾಲದಿಂದ (ಕ್ರಿ.ಶ. ೧೨೯೧–೧೩೪೩) ವಿಜಯನಗರ ಸಾಮ್ರಾಜ್ಯದ ದೊರೆ ಒಂದನೆಯ ಬುಕ್ಕನ ವರೆಗೂ (ಕ್ರಿ.ಶ. ೧೩೫೬–೧೩೭೭) ರಾಜ್ಯರಕ್ಷಣೆಯಲ್ಲಿ ಮುಖ್ಯಪಾತ್ರ ವಹಿಸಿದ್ದನು. ಬಲ್ಲಪ್ಪದಂಡನಾಯಕನ ವಂಶೀಯರು ಕಲ್ಯಾಣದ ಚಾಲುಕ್ಯರ ದೊರೆ ಜಗದೇಕಮಲ್ಲನ ಆಳ್ವಿಕೆಯ ಕಾಲದಿಂದ (ಕ್ರಿ.ಶ. ೧೦೧೫–೧೦೪೩) ವಿಜಯನಗರದ ದೊರೆ ಮೊದಲನೆಯ ದೇವರಾಯನ ವರೆಗೂ (ಕ್ರಿ.ಶ. ೧೪೦೬–೧೪೨೨) ರಾಜ್ಯಾಡಳಿತದ ವಿವಿಧ ಹಂತಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ದಕ್ಷಿಣ ಕರ್ನಾಟಕದ ಕೆಲವು ಪ್ರದೇಶಗಳ ಸ್ಥಳೀಯ ಆಡಳಿತದಲ್ಲಿ ಬಲ್ಲಪ್ಪದಂಡನಾಯಕ ಮತ್ತು ಅವನ ವಂಶೀಯರ ಪಾತ್ರವನ್ನು ಗುರುತಿಸುವುದು ಈ ಬರಹದ ಉದ್ದೇಶವಾಗಿದೆ.

ಬಲ್ಲಪ್ಪದಂಡನಾಯಕನನ್ನು ಕುರಿತಂತೆ ಈಗಾಗಲೇ ಟಿಪ್ಪಣಿ ರೂಪದಲ್ಲಿ ಕೆಲವು ಮಾಹಿತಿಗಳು ದಾಖಲಾಗಿವೆ. ಡಾ. ಎ. ವೆಂಕಟಸುಬ್ಬಯ್ಯನವರು ಇಂಗ್ಲಿಷ್‌ನಲ್ಲಿ 'ಬಲ್ಲಪ್ಪದಂಡ ನಾಯಕ' ಎಂಬ ಶೀರ್ಷಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದಾರೆ[೧]. ಅವರು ಬಹಳ ಹಿಂದೆಯೇ (ಕ್ರಿ.ಶ. ೧೯೩೬) ಈ ದಂಡನಾಯಕನ ಬಗ್ಗೆ ಲಭ್ಯವಿದ್ದ ಮಾಹಿತಿಗಳನ್ನಾಧರಿಸಿ ಲೇಖನವನ್ನು ಪ್ರಕಟಿಸಿರುವುದು ಸ್ತುತ್ಯರ್ಹ ವಿಚಾರ.

## ಬಲ್ಲಪ್ಪದಂಡನಾಯಕ

ಬಲ್ಲಪ್ಪದಂಡನಾಯಕನು ಹೊಯ್ಸಳ ಮೂರನೆಯ ನರಸಿಂಹ ಮತ್ತು ಮೂರನೆಯ ಬಲ್ಲಾಳನಲ್ಲಿ ಮಂತ್ರಿಯಾಗಿದ್ದ ಸೋಮಯದಂಡನಾಯಕನ ಕಿರಿಯ ಮಗ. ಬಲ್ಲಪ್ಪದಂಡ ನಾಯಕನಿಗೆ ಸಿಂಗಯದಂಡನಾಯಕ ಎಂಬ ಅಣ್ಣನಿದ್ದನು. ಬಲ್ಲಪ್ಪದಂಡನಾಯಕನ ಹೆಸರು ಕನ್ನಡ ಶಾಸನಗಳಲ್ಲಿ ಬಲ್ಲಪ್ಪದಂಣಾಯಕ, ಬಲ್ಲಪ್ಪದಂಣಾಯಕ, ಬಲ್ಲಪ್ಪದಂಣಾಇಕ, ಬಲ್ಲಪ್ಪದಂನಾಯಕ, ವಲ್ಲಪದಂಣಾಇಕ, ವಲ್ಲಪ್ಪದಂಣಾಇಕ ಎಂಬುದಾಗಿ ಉಲ್ಲೇಖಗೊಂಡಿದ್ದರೆ, ತಮಿಳು ಶಾಸನಗಳಲ್ಲಿ ವಲ್ಲಪ್ಪದಂಣಾಯಕ, ವಲ್ಲಪ್ಪದೆಣ್ಣಕ್ಕರ್, ವಲ್ಲಪ್ಪದಣ್ಣಾಯಕ್ಕರ್, ವಲ್ಲಪ್ಪದೆಣ್ಣಾಯಕ್ಕರ್ ಎಂಬುದಾಗಿ ಪ್ರಯೋಗಗೊಂಡಿದೆ.

**ರಾಜ್ಯಾಡಳಿತದಲ್ಲಿ ಸ್ಥಾನ :** ಬಲ್ಲಪ್ಪದಂಡನಾಯಕನ ಮೊದಲ ಉಲ್ಲೇಖ ನಮಗೆ ಸಿಗುವುದು ಕ್ರಿ.ಶ. ೧೩೦೭ರ ವಿಭೂತಿಪುರದ ಶಾಸನದಲ್ಲಿ[೨] ಮಹಾಪಸಾಯಿತನಾದ ನಿನ್ರಾನ್ (ಮಾಸಂದಿನಾಡಿನ ಪಶ್ಚಿಮ ಭಾಗದ ಅಧಿಕಾರಿ.), ಸೆಂಬದೇವ, ವಿಲ್ಲಗಾಮುಂಡ ಮೊದಲಾದವರು ಪೆರುಎರಮೂರಿಗೆ ಹೊಂದಿಕೊಂಡಂತಿ ರುವ ಕಾಡನ್ನು ಕಡಿದು ಊರನ್ನು ಕಟ್ಟಿ, ಆ ಊರಿಗೆ 'ವಾಚ್ಚಿದೇವಪುರ' ಎಂದು ಹೆಸರಿಟ್ಟರು. ಆ ಊರಿನ ಹೊಲಗದ್ದೆ ಗಳನ್ನು ವಾಚ್ಚಿದೇವರು ಎಂಬ ಮಠಪತಿಗೆ ಮಡಪುರ ದತ್ತಿಯಾಗಿ ನೀಡಿದರು.[೩] (ವಾಚ್ಚಿದೇವಪುರವೇ ಈಗಿನ ವಿಭೂತಿಪುರ.) ಈ ದತ್ತಿಯನ್ನು ಬಲ್ಲಾಳನ ಬಾಳಿಗೂ ತೋಳಿಗೂ ಜಯವಾಗಲಿ ಮತ್ತು ಬಲ್ಲಪ್ಪದಂಡನಾಯಕನಿಗೆ ಶುಭವಾಗಲಿ ಎಂದು ಹಾರೈಸಿ ನೀಡಿರುವುದು ಶಾಸನೋಕ್ತ ವಾಗಿದೆ. ಈ ಶಾಸನದ ಕಾಲಕ್ಕೆ ಬಲ್ಲಪ್ಪದಂಡನಾಯಕನು ದಂಡನಾಯಕ ಪದವಿಯಲ್ಲಿದ್ದುಕೊಂಡು ಇನೆಯ ಬಲ್ಲಾಳನು ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವವನ್ನು ಸ್ಥಾಪಿಸುವ ನಿಟ್ಟಿನಲ್ಲಿ ನಡೆಸಿದ ತಮಿಳುನಾಡಿನಲ್ಲಿ ಹೊಯ್ಸಳರ ಪ್ರಭಾವ ವನ್ನು ಸ್ಥಾಪಿಸುವ ನಿಟ್ಟಿನಲ್ಲಿ ನಡೆಸಿದ ಯಾವುದೋ ಯುದ್ಧದಲ್ಲಿ ಅರಸನೊಂದಿಗೆ ಭಾಗಿಯಾಗಿದ್ದನೆಂದು ಊಹಿಸಬಹುದು.

ಈ ಶಾಸನದ ನಂತರ ಕ್ರಿ.ಶ. ೧೩೨೮ರ ವರೆಗೂ ಬಲ್ಲಪ್ಪದಂಡನಾಯಕನ ಉಲ್ಲೇಖವಿರುವ ಯಾವ ಶಾಸನವೂ ಸದ್ಯಕ್ಕೆ ಲಭಿಸಿರುವುದಿಲ್ಲ. ಏಕೆಂದರೆ ಈ ಅವಧಿಯಲ್ಲಿ ಬೆಂಗಳೂರು, ಆನೇಕಲ್, ಹೊಸಕೋಟೆ ಭಾಗಗಳಲ್ಲಿ ಬಲ್ಲಪ್ಪ ದಂಡನಾಯಕನ ಹಿರಿಯ ಸಹೋದರ ಸಿಂಗಯ ದಂಡನಾಯಕ ಮತ್ತು ಬೈಚಯದಂಡನಾಯಕರು ಆಡಳಿತ ಯಂತ್ರದ ಜವಾಬ್ದಾರಿ ಹೊತ್ತಿರುತ್ತಾರೆ. ಇನ್ನು ಕೋಲಾರ ಸುತ್ತಮುತ್ತಲಿನ ಭಾಗಗಳಲ್ಲಿ ಸಂಗಮನ ಪುತ್ರನೂ ೧ನೆಯ ಹರಿಹರನ ಸಹೋದರನೂ ಆದ ಕಂಪಣನು ಮಹಾ ಮಂಡಳೇಶ್ವರನಾಗಿ ಆಳ್ವಿಕೆ ನಡೆಸುತ್ತಿರುತ್ತಾನೆ.[೪] ಕಾಲದ

* D/o ಶಿವಕುಮಾರ್, # ಕೆ. ೨೭೨, ಅರಬ್ಬಿಕ್ ಕಾಲೇಜ್ ಪೋಸ್ಟ್, ವಿನೋಬನಗರ, ಕಾಡುಗೊಂಡನಹಳ್ಳಿ, ಬೆಂಗಳೂರು.

ಉಲ್ಲೇಖವಿರದ ಸೇಲಂ ಜಿಲ್ಲೆಯ ಶಂಖಗಿರಿ ತಾಲೂಕಿನ ಶಾಸನವು[೫] ಬಲ್ಲಪ್ಪದಂಡನಾಯಕನು ನಿರ್ಮಿಸಿದ ಅಗ್ರಹಾರದ ವಿಷಯವನ್ನು ಪ್ರಸ್ತಾಪಿಸುತ್ತದೆ. ಈ ಎಲ್ಲ ಶಾಸನಾಧಾರಗಳಿಂದ ೧೩೦೭ರಿಂದ ೧೩೨೮ರ ಅವಧಿಯಲ್ಲಿ ತಮಿಳುನಾಡಿನಲ್ಲಿ ಬಲ್ಲಪ್ಪದಂಡನಾಯಕನು ೩ನೆಯ ಬಲ್ಲಾಳನು ನಡೆಸುತ್ತಿದ್ದ ಯುದ್ಧಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದನೆಂದು ತೋರುತ್ತದೆ.

ಕ್ರಿ.ಶ. ೧೩೨೮ರ ತೇಕಲ್‌ನ ಎರಡು ಶಾಸನಗಳಲ್ಲಿ[೬] ಬಲ್ಲಪ್ಪದಂಡನಾಯಕನು ೩ನೆಯ ಬಲ್ಲಾಳನ ಬಾಳಿಗೂ ತೋಳಿಗೂ ಜಯವಾಗಲಿ ಎಂದು ಆಶಿಸುತ್ತಾ ಕೈವಾರನಾಡಿನ ಕಜ್ರಿಪಳ್ಳಿ ಮತ್ತು ಕೊಡಮ್ಬಲಿಯೂರಿನ ಪೂವ್ವೈಪಳ್ಳಿಯೊಳಗಣ ಸಕಲ ಸಂಪತ್ತನ್ನು ತೇಕಲ್‌ನ ವರದರಾಜಸ್ವಾಮಿಯ ವಿವಿಧ ಸೇವೆಗಳಿಗೆಂದು ದಾನವಾಗಿ ನೀಡಿದುದು ಉಲ್ಲೇಖಗೊಂಡಿದೆ. ಬಹುಶಃ ದಕ್ಷಿಣಭಾರತವನ್ನು ಮಹಮ್ಮದೀಯರ ದಾಳಿಯಿಂದ ರಕ್ಷಿಸಲು ಬಲ್ಲಾಳನು ನಡೆಸುತ್ತಿದ್ದ ಯುದ್ಧಗಳಲ್ಲಿ ಅವನಿಗೆ ವಿಜಯ ಲಭಿಸಲೆಂದು ಬಲ್ಲಪ್ಪದಂಡನಾಯಕನು ಈ ಶಾಸನಗಳಲ್ಲಿ ಹಾರೈಸಿರುವಂತಿದೆ.

ಕ್ರಿ.ಶ. ೧೩೩೭ರ ಚಿಂತಾಮಣಿಯ ಶಾಸನವು[೭] ಬಲ್ಲಪ್ಪ ದಂಡನಾಯಕನ ಬಾಹುಬಲದ ನೆರವಿನಿಂದ ವೀರಬಲ್ಲಾಳನು ವಿಜಯ ಸಾಧಿಸಿದ ಸಂದರ್ಭದಲ್ಲಿ, ವೀರಬಲ್ಲಾಳನೊಡಗೂಡಿ ಶತ್ರುಗಳೊಂದಿಗೆ ಕಾದಿ ಮಡಿದ ವೀರಪಂಮಣನ ಹೆಸರಿನಲ್ಲಿ ಕೈವಾರನಾಡಿನ ನಿವಾಸಿಗಳು ಕೆಲವು ಭೂದಾನಗಳನ್ನು ನೀಡಿದ ವಿಚಾರವನ್ನು ಒಳಗೊಂಡಿದೆ. ಕ್ರಿ.ಶ. ೧೩೩೮ರ ಕೋಲಾರದ ಶಾಸನವು[೮] ವಲ್ಲಪದಂಡನಾಯಕನ ಬಾಳಿಗೂ ತೋಳಿಗೂ ಜಯವಾಗಲಿ ಎಂದು ಹಾರೈಸಿ ಚೊಕ್ಕಪೆರುಮಾಳದಾಸನು ನೀಡಿದ ಭೂದಾನಗಳನ್ನು ತಿಳಿಸುತ್ತದೆ. ಈ ಎರಡು ಶಾಸನಗಳನ್ನು ಅವಲೋಕಿಸಿದರೆ, ಕ್ರಿ.ಶ. ೧೩೩೦ರ ನಂತರದಲ್ಲಿ ಮಧುರೆಯಲ್ಲಿ ಮಹಮ್ಮದೀಯರ ಆಳ್ವಿಕೆ ಸ್ಥಾಪನೆಗೊಂಡಿತ್ತು. ಅಲ್ಲಿ ಹಲವು ವರ್ಷಗಳಲ್ಲಿ ಅನೇಕ ಸುಲ್ತಾನರು ಅಧಿಕಾರ ಲಾಲಸೆಯಿಂದ ಕೊಲೆಗೀಡಾಗುತ್ತಿದ್ದರು. ಸುಲ್ತಾನರ ಉಪದ್ರವದಿಂದ ಮಧುರೆಯ ಪ್ರಾಂತ್ಯದಲ್ಲಿ ಶಾಂತಿ ನೆಲೆಸುವಂತೆ ಮಾಡಲು ೩ನೆಯ ಬಲ್ಲಾಳನೊಂದಿಗೆ ಬಲ್ಲಪ್ಪದಂಡನಾಯಕನು ಯುದ್ಧಗಳಲ್ಲಿ ಭಾಗವಹಿಸಿದ್ದಿರ ಬೇಕೆಂದು ಊಹಿಸಬಹುದೇ ?

ಕ್ರಿ.ಶ. ೧೩೪೨ರ ಹೊಸಕೋಟೆ ಶಾಸನದಿಂದ[೯] ಬಲ್ಲಪ್ಪದಂಡನಾಕನು ಈ ವೇಳೆಗೆ ೩ನೆಯ ಬಲ್ಲಾಳನಿಗೆ 'ಮಹಾಪ್ರಧಾನ' ನಾಗಿದ್ದನೆಂಬುದು ತಿಳಿದುಬರುತ್ತದೆ. ಹೊಸಕೋಟೆಯ ಮತ್ತೊಂದು ಶಾಸನವು (ಕ್ರಿ.ಶ. ೧೩೪೩)[೧೦] ಸ್ಪಷ್ಟವಾಗಿ ಬಲ್ಲಪ್ಪದಂಡನಾಯಕನನ್ನು ಮುಖ್ಯಮಂತ್ರಿ ಎಂತಲೇ ಕರೆದಿದೆ. ಅವನ ಶೌರ್ಯ ಮತ್ತು ದಕ್ಷತೆಯನ್ನು ಅನುಲಕ್ಷಿಸಿ ಮುಖ್ಯಮಂತ್ರಿ ಎಂತಲೇ ಕರೆದಿರುವಂತಿದೆ.

ಕ್ರಿ.ಶ. ೧೩೪೩ರ ಹಲಸುಬಾಳು ಗ್ರಾಮದ ಶಾಸನವು[೧೧] ೩ನೆಯ ಬಲ್ಲಾಳನ ಮಗ ವೀರವಿರೂಪಾಕ್ಷ ಬಲ್ಲಾಳನ ಪಟ್ಟಾಭಿಷೇಕವನ್ನು ಉಲ್ಲೇಖಿಸುತ್ತದೆ. ೪ನೆಯ ಬಲ್ಲಾಳ ಹಾಗೂ ಬಲ್ಲಪ್ಪದಂಡನಾಯಕರು ಒಟ್ಟುಗೂಡಿಯೇ ಹಳ್ಳಿ ಹಿರಿಯೂರಿನ ಕೆಲವು ಗೌಡಪ್ರಜೆಗಳಿಗೆ ಭೂದಾನಗಳನ್ನು ನೀಡಿರುವುದು ಪ್ರಸ್ತುತ ಶಾಸನದಲ್ಲಿ ಉಲ್ಲೇಖಗೊಂಡಿದೆ. ಈ ಹೊತ್ತಿಗಾಗಲೇ ಮಧುರೆಯಲ್ಲಿ ಸುಲ್ತಾನರನ್ನು ಬಡಿದೋಡಿಸುವ ಸಲುವಾಗಿ ನಡೆದ ತಿರುಚನಾಪಳ್ಳಿಯ ಕಾಳಗದಲ್ಲಿ ೩ನೆಯ ಬಲ್ಲಾಳನು ಹತನಾಗಿದ್ದನು. ಮುಂದೆ ಕ್ರಿ.ಶ. ೧೩೪೬ರಲ್ಲಿ ವೀರವಿರೂಪಾಕ್ಷ ಬಲ್ಲಾಳ ಅಥವಾ ನಾಲ್ಕನೆಯ ಬಲ್ಲಾಳನ ಮರಣದ ನಂತರ ೧ನೇ ಹರಿಹರನು ವಿಜಯನಗರ ಸಾಮ್ರಾಜ್ಯವನ್ನು ಪ್ರಬಲಗೊಳಿಸುವ ಮೂಲಕ ಮೂರನೆಯ ಬಲ್ಲಾಳನ ಸಂಕಲ್ಪವನ್ನು ನೆರವೇರಿಸುತ್ತಾನೆ. ಮೂರನೆಯ ಬಲ್ಲಾಳನ ಸೋದರಳಿಯನಾದ ಬಲ್ಲಪ್ಪ ದಂಡನಾಯಕನು ಒಂದನೆಯ ಹರಿಹರನ ಮಗಳನ್ನು ವರಿಸಿದ್ದನು. ಹೀಗಾಗಿ ೩ನೆಯ ಬಲ್ಲಾಳನಿಗೆ ಬಂಧುಗಳೇ ಆದ ಬಲ್ಲಪ್ಪದಂಡನಾಯಕ ಮತ್ತು ಒಂದನೆಯ ಹರಿಹರನು ಮಹಮ್ಮದೀಯರಿಂದ ರಾಜ್ಯ ರಕ್ಷಿಸಬೇಕೆಂಬ ೩ನೆಯ ಬಲ್ಲಾಳನ ಸಂಕಲ್ಪಕ್ಕೆ ಬದ್ಧರಾಗಿ ಹೊಯ್ಸಳ ಸಾಮ್ರಾಜ್ಯದಲ್ಲಿ ಶಾಂತಿಸ್ಥಾಪನೆಯ ಹೊಣೆಗಾರಿಕೆಯನ್ನು ಸುಕ್ಷೇಮವಾಗಿ ನಿರ್ವಹಿಸಿದ್ದರೆಂದು ತೋರುತ್ತದೆ. ಈ ರೀತಿಯಲ್ಲಿ ೧ನೆಯ ಹರಿಹರನು ಅಧಿಕಾರವನ್ನು ಕ್ರೋಢೀಕರಿಸಿಕೊಳ್ಳಲು ಬಲ್ಲಪ್ಪದಂಡನಾಯಕನ ನೆರವು ಅವಶ್ಯವಾಗಿ ಇದ್ದೇ ಇದ್ದಿತು. ಈ ವಿಜಯೋತ್ಸವವನ್ನು ಆಚರಿಸಲು ೧ನೆಯ ಹರಿಹರನು ತನ್ನ ಸಹೋದರರೊಡನೆ, ಅಳಿಯ ಬಲ್ಲಪ್ಪದಂಡನಾಯಕ, ಕುಮಾರ ಸೋಮಣ್ಣೊಡೆಯರೊಡನೆ ಶೃಂಗೇರಿಯ ವಿದ್ಯಾಪೀಠಕ್ಕೆ ಬರುತ್ತಾನೆ. ಅಲ್ಲಿ ವಿದ್ಯಾತೀರ್ಥರ ಉತ್ತರಾಧಿಕಾರಿ ಗಳಾಗಿದ್ದ ಭಾರತೀತೀರ್ಥ ಗುರುಗಳಿಗೆ, ಅವರಲ್ಲಿ ಪರಿಚಾರಕ ರಾಗಿರುವ ೪೦ ಜನ ಬ್ರಾಹ್ಮಣರಿಗೆ ಸಂತಳಿಗೆನಾಡಿನಲ್ಲಿರುವ ಕೆಲವು ಹಳ್ಳಿಗಳನ್ನು ಧಾರಾಪೂರ್ವಕವಾಗಿ ದತ್ತಿ ಬಿಟ್ಟನೆಂದು ಶೃಂಗೇರಿಯ ಕ್ರಿ.ಶ. ೧೩೪೬ರ ಶಾಸನ[೧೨] ತಿಳಿಸುತ್ತದೆ.

ಶೃಂಗೇರಿಯ ಮಠದ ತಾಮ್ರಶಾಸನವೊಂದು[೧೩] ಬಲ್ಲಪ್ಪ ದಂಡನಾಯಕನು ಮಾರಪ್ಪ ಒಡೆಯನೊಡಗೂಡಿ ಶೃಂಗೇರಿಗೆ ಬಂದು, ಭಾರತೀತೀರ್ಥ ಶ್ರೀಪಾದಂಗಳಿಗೆ ಹಾಗೂ ಅಲ್ಲಿನ ಪರಿಚಾರಕರಿಗೆ ಕೆಲವು ದಾನಗಳನ್ನಿತ್ತಿರುವುದನ್ನು ತಿಳಿಸುತ್ತದೆ.

ಮಾಲೂರಿನ ಶಾಸನದಲ್ಲಿ[೧೪] ಮತ್ತೊಂದು ಗಮನಾರ್ಹ ವಿಚಾರ ಉಲ್ಲೇಖಗೊಂಡಿದೆ. 'ಮಹಾಮಂಡಳೇಶ್ವರ',

'ಕಟಾರಿಸಾಳುವ' ಮುಂತಾದ ಬಿರುದುಗಳನ್ನಲಂಕರಿಸಿದ್ದ ಸಾಳ್ವ ತಿಪ್ಪರಾಜನ ಮಗ ಗೋಪರಾಜನು ಬಲ್ಲಪ್ಪದಂಡನಾಯಕ ಮತ್ತು ಅವನ ಸೋದರ ಸಿಂಗೆಯದಂಡನಾಯಕರು ತೇಕಲಿನಲ್ಲಿ ಕಟ್ಟಿಸಿದ ಕಲ್ಲಿನಕೋಟೆಯನ್ನು ಪುನಃಪ್ರತಿಷ್ಠೆ ಮಾಡಲು ತೀರ್ಮಾನಿಸುತ್ತಾನೆ. ಅದರಂತೆ ಅವನ ಅಧಿಕಾರಿಯಾದ ಸಿಂಗರಾಜನು ಕಲ್ಲಿನಕೋಟೆಯ ಒಳ-ಹೊರಭಾಗಗಳನ್ನು ದುರಸ್ಥಿಗೊಳಿಸುತ್ತಾನೆ. ಅಲ್ಲದೆ ತೇಕಲಿನಲ್ಲಿರುವ ವರದರಾಜ ದೇವರ ದೇಗುಲದಲ್ಲಿ ಮುಖಮಂಟಪದಲ್ಲಿ 'ರಾಜಗಂಭೀರ' ಎಂಬ ಕೊತ್ತಳವನ್ನು ನಿರ್ಮಿಸುತ್ತಾನೆ. ಇದರಿಂದ ಬಲ್ಲಪ್ಪದಂಡನಾಯಕನು ಈ ಭಾಗದ ರಕ್ಷಣೆಯ ದೃಷ್ಟಿಯಿಂದ ಕಲ್ಲಿನಕೋಟೆಯನ್ನು ನಿರ್ಮಿಸಿದ್ದನೆಂಬುದು ವೇದ್ಯವಾಗುತ್ತದೆ. ಜೊತೆಗೆ ದಂಡನಾಯಕನಾಗಿ ಕೋಟೆಯನ್ನು ಕಟ್ಟಿಸಿರುವುದು ರಾಜ್ಯಾಡಳಿತದಲ್ಲಿ ಆತನಿಗಿದ್ದ ವರಿಷ್ಠ ಸ್ಥಾನವನ್ನು ತಿಳಿಸುತ್ತದೆ.[೧೫]

"ಮೂರನೆಯ ಬಲ್ಲಾಳನ ಪ್ರಸಿದ್ಧ ದಂಡನಾಯಕರಲ್ಲಿ ಒಬ್ಬನಾದ ಬಲ್ಲಪ್ಪದಂಡನಾಯಕನು ಚಕ್ರವರ್ತಿಗೆ ಅತ್ಯಂತ ಆಪ್ತನಾಗಿದ್ದು ಆಡಳಿತದಲ್ಲಿ ವಿಶೇಷ ನೆರವನ್ನು ನೀಡುತ್ತಿದ್ದನು. ಅನೇಕ ಕ್ಷೋಭೆಗಳನ್ನು ಹತೋಟಿಗೆ ತಂದು ಪರಿಸ್ಥಿತಿಯನ್ನು ಸುಧಾರಿಸಿ ರಾಜ್ಯದಲ್ಲಿ ಶಾಂತಿ ಸ್ಥಾಪನೆಯನ್ನು ಮಾಡಿದ್ದನು" ಎಂಬ ಅಭಿಪ್ರಾಯ[೧೬] ಉಲ್ಲೇಖಾರ್ಹ. ಬೆಂಗಳೂರು, ಚಿಂತಾಮಣಿ, ಕೋಲಾರ, ಬಂಗಾರಪೇಟೆ, ಮಾಲೂರು ಸುತ್ತಮುತ್ತಲಿನ ಭಾಗಗಳಲ್ಲಿ ಸಂಗಮ ಅರಸರ ಆರಂಭದ ಶಾಸನಗಳು[೧೭] (ಕ್ರಿ.ಶ. ೧೩೪೬ಕ್ಕಿಂತಲೂ ಪೂರ್ವದ) ದೊರೆತಿರುವುದರಿಂದ ೩ನೆಯ ಬಲ್ಲಾಳನ ಅನುಪಸ್ಥಿತಿಯಲ್ಲಾಗಲೀ ಮತ್ತು ಅವನ ಮರಣದ ತರುವಾಯವಾಗಲೀ ಈ ಪ್ರದೇಶಗಳಲ್ಲಿ ಅರಾಜಕತೆ ತಲೆದೋರದಂತೆ ಬಲ್ಲಪ್ಪದಂಡನಾಯಕನು ನೋಡಿಕೊಂಡಿದ್ದನೆಂಬುದರಲ್ಲಿ ಸಂಶಯವಿಲ್ಲ.

**ಧಾರ್ಮಿಕ ನಿಷ್ಠೆ :** ಬಲ್ಲಪ್ಪದಂಡನಾಯಕನ ಉಲ್ಲೇಖವಿರುವ ಬಹುಪಾಲು ಶಾಸನಗಳಲ್ಲಿ ದಾನದತ್ತಿ ವಿಚಾರಗಳದ್ದೇ ಸಿಂಹಪಾಲು. ಅವುಗಳ ಸಂಕ್ಷಿಪ್ತ ನೋಟ ಇಂತಿದೆ :

ಕ್ರಿ.ಶ. ೧೩೨೮ರ ತೇಕಲ್ ಶಾಸನದ ಪ್ರಕಾರ,[೧೮] ಬಲ್ಲಪ್ಪ ದಂಡನಾಯಕನು ತೇಕಲ್‌ನಾಡಿನ ಆಳಂಬಾಳು ಹಳ್ಳಿಯನ್ನು ಮತ್ತು ಅದರ ಚತುಸ್ಸೀಮೆಯೊಳಗಣ ಸಕಲ ಸಂಪತ್ತನ್ನು ತೇಕಲ್ ವರದರಾಜಸ್ವಾಮಿಯ ಪೂಜಾ ಕೈಂಕರ್ಯ ಗಳಿಗಾಗಿ ಅದೇ ದೇಗುಲದ ಸ್ಥಾನಿಕ ತೊಕ್ಕಪೆರಮಾಳ ದಾಸನಿಗೆ ದಾನವಿತ್ತನು.

ಕ್ರಿ.ಶ. ೧೩೩೩ರ ತೇಕಲ್‌ನ ಮತ್ತೊಂದು ಶಾಸನವು[೧೯] ಬಲ್ಲಪ್ಪದಂಡನಾಯಕನು ತೇಕಲ್‌ನ ಶಿಂಗೀಶ್ವರ-ಒಡೆಯ-ನಾಯನಾರ್ ದೇವರ ಅರ್ಚಕರಾದ ಪಾಲಭಟ್ಟರಿಗೆ ಇದೇ ದೇಗುಲದ ನಿತ್ಯೋಪಯೋಗಕ್ಕೆಂದು ಮತ್ತು ದುರಸ್ಥಿಗೆಂದು ಕೆಲವು ಹಳ್ಳಿಗಳನ್ನು ದೇವದಾನವಾಗಿ ನೀಡಿದುದನ್ನು ತಿಳಿಸುತ್ತದೆ.

ಕ್ರಿ.ಶ. ೧೩೩೪ರ ಮರಲಹಳ್ಳಿಯ ಶಾಸನದ ಪ್ರಕಾರ,[೨೦] ಬಲ್ಲಪ್ಪದಂಡನಾಯಕನು ರಾಜರಾಜಪುರವೆನಿಸಿದ್ದ ತಳಕಾಡಿನಲ್ಲಿರುವ ಎಲುಪುರದ ಪಂಚಮಂಡದ ಸ್ಥಾನಪತಿ ಸೋಮಣ್ಣನೊಡಗೂಡಿ ಸರಗೂರಿನ ಸೆಟ್ಟಿಗೌಡನ ಮಗ ಮಾದಿಗೌಡನಿಗೆ ಹಾಹನವಾಡಿಯ ಹೊಲಗದ್ದೆಗಳನ್ನು ಧಾರಾಪೂರ್ವಕವಾಗಿ ನೀಡಿದನು.

ಕ್ರಿ.ಶ. ೧೩೩೬ರ ವಾಗಟದ ಎರಡು ಶಾಸನಗಳು[೨೧] ಬಲ್ಲಪ್ಪದಂಡನಾಯಕನು ಪುಲ್ಲಿಯೂರುನಾಡಿನ ವರದರಾಜ ಚತುರ್ವೇದಿಮಂಗಲದ ಮಹಾಜನರಿಗೆ ಕೆಲವು ಹಳ್ಳಿಗಳನ್ನು ದತ್ತಿ ಬಿಟ್ಟನೆಂಬುದನ್ನು ತಿಳಿಸುತ್ತದೆ. ಕ್ರಿ.ಶ. ೧೩೪೦ರ ತಿರುನಲ್ವೇಲಿಯ ಎರಡು ಶಾಸನಗಳು[೨೨] ಈತನು ನೀಡಿದ ದಾನವನ್ನು ತಿಳಿಸುತ್ತವೆಯಾದರೂ ದಾನದ ವಿವರ ಸ್ಪಷ್ಟವಿಲ್ಲ. ಕ್ರಿ.ಶ. ೧೩೪೧ರ ಶಾಸನವು[೨೩] ಬಲ್ಲಪ್ಪದಂಡನಾಯಕನು ಕೆಲುವಳಿನಾಡಿನಲ್ಲಿರುವ ಮಾರಪ್ಪನ ಕುಪ್ಪೆಯನ್ನು ನಾಗದೇವ ಮೊದಲಾದವರಿಗೆ ದಾನ ನೀಡಿದ ಎಂದು ತಿಳಿಸುತ್ತದೆ. ಕ್ರಿ.ಶ. ೧೩೪೬ರ ದೊಡ್ಡಕನ್ನಲ್ಲೆ ಗ್ರಾಮದ ಶಾಸನವು[೨೪] ಈತನು ಶೆವಿಡಪೆರ್ಗಡೆಗೆ ಉಡೈಯಾನ್‌ಪಳ್ಳಿಯೊಳಗಣ ಸಮಸ್ತವನ್ನು ಅಕರವಾಗಿ ದಾನವಿತ್ತುದಾಗಿ ತಿಳಿಸುತ್ತದೆ. ಕ್ರಿ.ಶ. ೧೩೬೧ರ ಬೇಗೂರಿನ ಶಾಸನವು[೨೫] ಬಲ್ಲಪ್ಪದಂಡನಾಯಕನ ಉಲ್ಲೇಖವಿರುವ ಕೊನೆಯ ಶಾಸನ. ಇದರ ಪ್ರಕಾರ, ಮಹಾಮಂಡಳೇಶ್ವರನಾದ ಅರಿಯಪ್ಪ ಒಡೆಯನೊಡಗೂಡಿ ನೀಡಿದ ದಾನದ ವಿಷಯವನ್ನು ಇದು ಒಳಗೊಂಡಿದೆ. ಈ ಶಾಸನದ ಕಾಲವು ಒಂದನೆಯ ಬುಕ್ಕನ ಆಳ್ವಿಕೆಯ ಕಾಲಕ್ಕೆ ಸೇರುತ್ತದೆಯಾದರೂ ಶಾಸನದಲ್ಲಿ ಉಕ್ತನಾಗಿರುವ ಅರಿಯಪ್ಪ ೨ನೆಯ ಹರಿಹರನಾಗಿದ್ದು ಕ್ರಿ.ಶ. ೧೩೬೧ರಲ್ಲಿ ಆತ ಮಹಾಮಂಡಳೇಶ್ವರನಾಗಿದ್ದಿರಬೇಕು.

ಈ ಎಲ್ಲ ದಾನ ಶಾಸನಗಳನ್ನು ಗಮನಿಸಿದಾಗ ಬಲ್ಲಪ್ಪದಂಡನಾಯಕನು ಶೈವ, ವೈಷ್ಣವ ದೇಗುಲಗಳಿಗೂ ಬ್ರಾಹ್ಮಣರಿಗೂ ಇಡಿಯಾಗಿ ಹಳ್ಳಿಗಳನ್ನೇ ದಾನ ನೀಡಿರುವುದು ಅವನ ಉದಾರತೆಯನ್ನು ಮತ್ತು ವಿಪುಲ ಅಧಿಕಾರವನ್ನು ಸೂಚಿಸುತ್ತದೆ. ಇವನ ಅಧೀನ ಅಧಿಕಾರಿಗಳಿಂದ ಬಲಿದೇವ, ಕಳವತಿ ಚವಡಿಯಕ್ಕರ್, ತಮಿವ ಚಿತ್ತವಿಟ್ಟಪ್ಪನವರ್, ದೇವಪ್ಪರು ನೀಡಿದ ದಾನಶಾಸನಗಳು[೨೬] ಹೊಸಕೋಟೆ, ಮಾಲೂರು, ಕೋಲಾರ, ಬಂಗಾರಪೇಟೆ ತಾಲೂಕುಗಳಲ್ಲಿ ದೊರಕಿವೆ.

ಒಟ್ಟಿನಲ್ಲಿ ಬಲ್ಲಪ್ಪದಂಡನಾಯಕನು ೩ನೆಯ ಬಲ್ಲಾಳನ ಆಳ್ವಿಕೆಯ ಅವಧಿಯಲ್ಲಿ ದಂಡನಾಯಕನಾಗಿ, ಮಹಾಪ್ರಧಾನಿಯಾಗಿ, ಮುಖ್ಯಮಂತ್ರಿಯಾಗಿ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸಿದ್ದನು. ಕೋಲಾರ, ಮಾಲೂರು, ಬಂಗಾರಪೇಟೆ, ಹೊಸಕೋಟೆ, ಬೆಂಗಳೂರು ಸುತ್ತಮುತ್ತಲಿನ ಪ್ರದೇಶಗಳಿಗೆ ಪ್ರಧಾನವಾಗಿ ಕಾರ್ಯನಿರ್ವಹಿಸಿದ್ದರು. ಅಲ್ಲದೆ ವಿಜಯನಗರ ಸ್ಥಾಪನೆಯ ಹಿನ್ನೆಲೆಯಲ್ಲಿ ಹರಿಹರನಿಗೆ ಬೆಂಬಲ ನೀಡಿದ್ದನು ಎನ್ನಬಹುದು.[೨೭]

ಬಲ್ಲಪ್ಪದಂಡನಾಯಕನಿಗೆ ವನನ್ ಎಂಬ ಮಗನಿದ್ದನೆಂದು ಶಾಸನೋಕ್ತ ಸಂಗತಿಯಾಗಿದೆ. ಕ್ರಿ.ಶ. ೧೩೩೦ರ ತೇಕಲ್ ಶಾಸನವು[೨೮] ತೇಕಲ್‌ನ ವರದರಾಜಸ್ವಾಮಿಯ ನಿತ್ಯಸೇವೆಗಳಿಗೆಂದು ವನನ್ ದತ್ತಿ ಬಿಟ್ಟಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೩೩೮ರ ಮಡಿಯೂರು ಶಾಸನವು[೨೯] ವನನ್ ಇದೇ ಊರಿನ ಸೋಮೇಶ್ವರ ದೇವರಿಗೆ ನೀಡಿದ ದಾನವನ್ನು ಪ್ರಸ್ತಾಪಿಸುತ್ತದೆ.

## ಬಲ್ಲಪ್ಪದಂಡನಾಯಕನ ಪೂರ್ವಿಕರು

ಕ್ರಿ.ಶ. ೧೨೬೮ರ ಹರಿಹರದ ಶಾಸನವು[೩೦] ಬಲ್ಲಪ್ಪದಂಡನಾಯಕನ ಪೂರ್ವಿಕರ ಬಗ್ಗೆ ತಿಳಿಸುವ ಬಹುಮುಖ್ಯ ದಾಖಲೆಯಾಗಿದೆ. ಪ್ರಕೃತ ಶಾಸನವು ತಿಳಿಸುವಂತೆ, "ಶ್ರೀ ಲಕ್ಷ್ಮೀನಾಭೀನಳಿನಜನಾದ ಬ್ರಹ್ಮನ ಪಾದಕಮಲಗಳಿಂದ..." ಉದಿಸಿದ ವಂಶದಲ್ಲಿ ದುದ್ದಿಯ ನಾಯಕನೆಂಬುವವನು 'ಪರಹಿತಾಕಾಂಕ್ಷಿ', 'ಸ್ವಾಮಿಸಂರಕ್ಷದಕ್ಷ', 'ಶಿಲಾಚಾರಾಗ್ರಗಣ್ಯ', 'ವೀರಲಕ್ಷ್ಮೀಲೋಲ'ನೆಂದು ಖ್ಯಾತಿ ವೆತ್ತಿದ್ದನು. ಈ ದುದ್ದಿಯನಾಯಕನ ಮಡದಿ ನಂನವೆ ನಾಯಕಿ. ಈ ದಂಪತಿಗಳ ಕುವರ ಮೈಲೆಯನಾಯಕ. ಈ ಮೈಲೆಯನಾಯಕನು ಕೀರ್ತಿವಂತ ಕಲ್ಯಾಣ ಚಾಲುಕ್ಯ ಸಾಮ್ರಾಜ್ಯಾಧಿಪನಾದ ಜಗದೇಕಮಲ್ಲ (೨ನೆಯ ಜಯಸಿಂಹ)ನ ಆಳ್ವಿಕೆಯ ಅವಧಿಯಲ್ಲಿ 'ಸಾತ್ವಿಕಂ', 'ಸಾಹಸಿ', 'ಗಂಡಪೆಂಡಾರಂ', 'ಗಾಯಿಗೋವಳಂ' ಎಂಬ ಬಿರುದುಗಳಿಂದ ಕೀರ್ತಿ ಪಡೆದಿದ್ದನು. ಇವನ ಸತಿ ರೆಬ್ಬಿಲಾನಾಯಕಿ. ಇವರ ಮಗನಾದ ಪೆರ್ಗಡೆನಾಯಕನು "ಅದ್ರಿಗಳಲ್ಲಿ ಹೇಮಾಚಲ ವಿರುವಂತೆ" ಅಸಮಾನ ಕೀರ್ತಿಯನ್ನು ಸಂಪಾದಿಸಿದ್ದನು. ಪೆರ್ಗಡೆನಾಯಕನ ಮಡದಿ ರೇಕವೆನಾಯಕಿ. ಈ ದಂಪತಿಗಳ ಹಿರಿಯ ಮಗ ಮೇಳನಾಯಕ, ಕಿರಿಯ ಮಗ ಸೋಮೆಯ ದಂಡನಾಯಕ. ಗಂಗಾಧರಾರ್ಯ ಎಂಬಾತನು ಸೋಮೆಯ ದಂಡನಾಯಕನಿಗೆ ಗುರುವಾಗಿದ್ದನು. ಈ ಸೋಮೆಯ ದಂಡನಾಯಕನ ಕಿರಿಯ ಮಗನೇ ಬಲ್ಲಪ್ಪದಂಡನಾಯಕ. ಸೋಮೆಯದಂಡನಾಯಕನ ಪೂರ್ವಿಕರ ಬಗ್ಗೆ ಈ ಶಾಸನವೊಂದನ್ನು ಹೊರತುಪಡಿಸಿದರೆ, ಸದ್ಯಕ್ಕೆ ಇನ್ಯಾವ ಮಾಹಿತಿಯೂ ತಿಳಿದುಬಂದಿಲ್ಲ.[೩೦ಅ] ಆದರೂ ಲಭ್ಯ ಶಾಸನಾಧಾರಗಳಿಂದ ಬಲ್ಲಪ್ಪದಂಡನಾಯಕ ಮತ್ತು ಅವನ ವಂಶೀಯರ ಬಗ್ಗೆ ಈ ಮುಂದಿನಂತೆ ತಿಳಿಯಬಹುದು.

## ಸೋಮೆಯ ದಂಡನಾಯಕ : (ಕ್ರಿ.ಶ. ೧೨೫೮–೧೩೦೩)

ಸೋಮೆಯದಂಡನಾಯಕನ ಉಲ್ಲೇಖವು ಮೈಸೂರು, ಮಂಡ್ಯ, ಬೆಂಗಳೂರು, ತುಮಕೂರು, ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ದೊರೆತಿರುವ ಒಟ್ಟು ೧೩ ಶಾಸನಗಳಲ್ಲಿ ಕಂಡುಬರುತ್ತದೆ. ಈ ಶಾಸನಗಳಲ್ಲಿ ಈತನ ಹೆಸರು ಸೋಮೆಯದಂಣ್ಣಾಯ್ಕ, ಸೋಮೆಯದಣ್ಣಾಯಕ, ಸೋಮಯದಂಡನಾಯಕ, ಸೋವಣದಂಣ್ಣಾಯಕ ಎಂಬುದಾಗಿ ಉಲ್ಲೇಖಗೊಂಡಿದೆ.

ಸೋಮೆಯದಂಡನಾಯಕನ ಪ್ರಥಮ ಉಲ್ಲೇಖ ಕಂಡುಬರುವುದು ತುರುವೇಕೆರೆಯ (ಕ್ರಿ.ಶ. ೧೨೫೮)ಯ ಶಾಸನದಲ್ಲಿ ಎಂದು ಗುರುತಿಸಲಾಗಿದೆ[೩೧]. ಅದರ ಪ್ರಕಾರ ಸೋಮೆಯದಂಡನಾಯಕನು ತುರುವೇಕೆರೆಯನ್ನು ಅಗ್ರಹಾರವನ್ನಾಗಿಸಿ, ಇದಕ್ಕೆ 'ವಿಜಯನಾರಸಿಂಹಪುರ' ಎಂದು ಹೆಸರಿಟ್ಟು ಈ ಅಗ್ರಹಾರವನ್ನು ತಾನೇ ನಿರ್ಮಿಸಿದ ಕೇಶವ ಮತ್ತು ಶಂಕರೇಶ್ವರ ದೇಗುಲಗಳ ನಿರ್ವಹಣೆಗಾಗಿ ಅಲ್ಲಿನ ಮಹಾಜನರಿಗೆ ಧಾರಾಪೂರ್ವಕವಾಗಿ ನೀಡಿದನು. (ಕ್ರಿ.ಶ. ೧೨೬೩ರ ತುರುವೇಕೆರೆಯ ಮತ್ತೊಂದು ಶಾಸನವು[೩೨] ಸೋಮಯ ದಂಡನಾಯಕನನ್ನು 'ಮಹಾಪ್ರಧಾನಿ', 'ಸಂಧಿವಿಗ್ರಹಿ' ಎಂದು ಕರೆದಿರುವುದಲ್ಲದೇ ಆತ ತುರುವೇಕೆರೆಯನ್ನು ೯೫ ವ್ರಿತ್ತಿಯಾಗುಳ್ಳ ಅಗ್ರಹಾರವನ್ನಾಗಿ ಮಾಡಿದ ವಿಚಾರವನ್ನೊಳಗೊಂಡಿದೆ. ಇದರಿಂದ ಮೂರನೆಯ ನರಸಿಂಹನ ಆಳ್ವಿಕೆಯಲ್ಲಿ ಸೋಮಯದಂಡನಾಯಕನು 'ಪಂಚಪ್ರಧಾನ' ಸಮಿತಿ ಎನಿಸಿದ ಮಂತ್ರಿಪರಿಷತ್ತಿನಲ್ಲಿ ಮಹಾಪ್ರಧಾನಿ, ಸಂಧಿವಿಗ್ರಹಿಯೂ ಆಗಿದ್ದುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೨೬೫ರ ಹಳೆಯಬೀಡಿನ ಶಾಸನವು[೩೩] ಮೂರನೆಯ ನರಸಿಂಹನು ಕಲುಕಣಿನಾಡ ಕಲ್ಲಂಗೊಜಿಯೊಡನೆ ಕರಡಿಯಹಳ್ಳಿ, ಅಜೆಯಹಳ್ಳಿ ಮೊದಲಾದ ೧೪ ಹಳ್ಳಿಗಳನ್ನು ತ್ರಿಕೂಟ ರತ್ನತ್ರಯ ಶಾಂತಿನಾಥ ಜಿನಾಲಯದಲ್ಲಿ ಜನನ ಆರಾಧನೆಗಾಗಿ ಮತ್ತು ಜಿನಾಲಯದ ಜೀರ್ಣೋದ್ಧಾರಕ್ಕಾಗಿ ಶ್ರೀ ಮೂಲಸಂಘದ ಶ್ರೀಮಾಘನಂದಿ ಎಂಬ ಜೈನ ಗುರುವಿಗೆ ದಾನ ನೀಡಿದುದನ್ನೂ ಈ ಧರ್ಮಕಾರ್ಯವು ಸೋಮೆಯದಂಡನಾಯಕನಿಂದ ಸುಪ್ರತಿಷ್ಠಿತವಾಯಿತೆಂದೂ ತಿಳಿಸುತ್ತದೆ. ೧೨ನೆಯ ಶತಮಾನದ ಮಧ್ಯದಿಂದ ಕ್ರಮೇಣ ತನ್ನ ಹಿಂದಿನ ಪ್ರಭಾವವನ್ನು ಕಳೆದುಕೊಳ್ಳುತ್ತಾ ಬಂದಿದ್ದ

ಜೈನಮತಕ್ಕೆ ಅರಸ ಮತ್ತು ಈ ದಂಡನಾಯಕ ನೀಡಿದ ಪ್ರೋತ್ಸಾಹವನ್ನು ಈ ಶಾಸನದಿಂದ ನಾವು ತಿಳಿಯಬಹುದು.

ಕ್ರಿ.ಶ. ೧೨೬೭ರ ತುರುವೇಕೆರೆಯ ಶಾಸನವು[೩೪] ಸೋಮೆಯದಂಡನಾಯಕನು ಶ್ರೀ ಪ್ರಸನ್ನ ಚನ್ನಕೇಶವದೇವರ ದೇಗುಲಕ್ಕೆ ಬಡಗವಾಗಿರುವ ಕೆಲವು ಪ್ರದೇಶಗಳನ್ನು ಅಲ್ಲಿನ ಮಹಾಜನರಿಗೆ ಧಾರೆಯೆರೆದನೆಂದು ತಿಳಿಸುತ್ತದೆ.

ಕ್ರಿ.ಶ. ೧೨೬೮ರ ಹರಿಹರದ ಶಾಸನವು[೩೫] ಈ ಮೊದಲೇ ತಿಳಿಸಿರುವಂತೆ, ಸೋಮೆಯದಂಡನಾಯಕನ ಪೂರ್ವಿಕರ ಬಗ್ಗೆ ಹಾಗೂ ಸೋಮನಾಥಪುರದ ನಿರ್ಮಾಣದ ಬಗ್ಗೆ ಹೇಳುತ್ತದೆ. ಅಲ್ಲದೆ ಸೋಮೆಯದಂಡನಾಯಕನು ಸೋಮನಾಥಪುರದಲ್ಲಿ ಕೇಶವ ದೇವಾಲಯ, ಪಂಚಲಿಂಗೇಶ್ವರ, ನೃಸಿಂಹೇಶ್ವರ, ಯೋಗನೃಸಿಂಹ ಮತ್ತು ಲಕ್ಷ್ಮೀನರಸಿಂಹ ದೇಗುಲಗಳನ್ನು ಕಟ್ಟಿಸಿದನು. ಹರಿಹರದಲ್ಲಿ ಹರಿಹರ ದೇಗುಲದ ಪ್ರವೇಶದ್ವಾರದ ಗೋಪುರದಲ್ಲಿ ಚಿನ್ನದ ಕಳಶವನ್ನಿಡಿಸಿದನೆಂದು ಈ ಶಾಸನ ತಿಳಿಸುತ್ತದೆ.

ಕ್ರಿ.ಶ. ೧೨೭೬ರ ಸೋಮನಾಥಪುರದ ಶಾಸನದಲ್ಲಿ[೩೬] ಸೋಮೆಯದಂಡನಾಯಕನನ್ನು ವೀರನರಸಿಂಹ (೩ನೆಯ ನರಸಿಂಹ)ನ 'ಪ್ರಿಯಪುತ್ರ' ಎಂದು ಕರೆದಿದೆ. ಮನೆಮಗ ಎಂಬರ್ಥದಲ್ಲಿ ಈ ಪದ ಪ್ರಯೋಗವಾಗಿರುವಂತೆ ತೋರುತ್ತದೆ. ಪ್ರಧಾನವಾಗಿ ಪ್ರಸ್ತುತ ಶಾಸನವು ಸೋಮೆಯ ದಂಡನಾಯಕನು ಸೋಮನಾಥಪುರದಲ್ಲಿ ಪ್ರತಿಷ್ಠಾಪಿಸಿದ ಕೇಶವ ದೇವರೇ ಮೊದಲಾದ ದೇವರುಗಳಿಗೆ ಪೂಜಾಕೈಂಕರ್ಯ ಗಳಿಗೆಂದು ದೊರೆಯು ೩,೦೦೦ ಗದ್ಯಾಣದ ಕರವನ್ನು ದತ್ತಿ ಬಿಟ್ಟಿದ್ದನೆಂದೂ (ಈ ದತ್ತಿಯನ್ನು ಬಿಟ್ಟ ಕಾಲ ಕ್ರಿ.ಶ. ೧೨೬೯) ಈ ದತ್ತಿಯನ್ನು ಸೋಮೆಯದಂಡನಾಯಕನ ಅಳಿಯಂದಿರಾದ ಚಿಕ್ಕಕೇತಯದಂಡನಾಯಕ ಮತ್ತು ಮಲ್ಲಿದೇವದಂಡನಾಕರಿರ್ವರೂ ವಿಭಾಗಿಸಿ ದೇವರ ಅಮೃತಪಡಿಯೇ ಮೊದಲಾದ ಸೇವೆಗಳಿಗೂ ದೇಗುಲದ ನಿಯೋಗಿಗಳ ಜೀವನನಿರ್ವಹಣೆಗೂ ಹಂಚಿದುದನ್ನೂ ತಿಳಿಸುತ್ತದೆ. (ಹೀಗೆ ಹಂಚಿದುದು ಕ್ರಿ.ಶ. ೧೨೭೬ರಲ್ಲಿ. ಈ ಎರಡು ಕಾಲಗಳ ಉಲ್ಲೇಖ ಶಾಸನದಲ್ಲಿ ಸ್ಪಷ್ಟವಾಗಿ ನಮೂದಾಗಿದೆ.)

ಕ್ರಿ.ಶ. ೧೨೮೬ರ ಸೋಮನಾಥಪುರದ ಶಾಸನವು[೩೭] ಸೋಮಯದಂಡನಾಯಕನು ತಾನು ಕಟ್ಟಿಸಿದ ಶೈವದೇವಾಲಯಗಳಿಗೆ ೭ ವೃತ್ತಿಗಳನ್ನು, ೧೪ ವೃತ್ತಿಗಳನ್ನು ವೈಷ್ಣವ ದೇಗುಲಗಳಿಗೂ ನೀಡಿದನೆಂಬ ವಿವರವನ್ನು ತಿಳಿಸುತ್ತದೆ.

ಕ್ರಿ.ಶ. ೧೨೯೧ರ ಬಾಣೂರಿನ ಶಾಸನವು[೩೮] 'ಉದ್ಭವ ಸರ್ವಜ್ಞ ಲಕ್ಷ್ಮೀಪುರ'ವೆಂದು ಹೆಸರಾದ ಬಾಣೂರನ್ನು ಬ್ರಹ್ಮಲೇಶ್ವರ ದೇವರಿಗೆ ದೇವದಾನವೃತ್ತಿಯಾಗಿ ನೀಡಲಾಗಿದ್ದು, ಇದನ್ನು ಸೋಮಯದಂಡನಾಯಕ ಮತ್ತು ಗೋಪಾಲ ದಂಡನಾಯಕರು ಪೋಷಿಸಿಕೊಂಡು ಬಂದ ವಿಚಾರವನ್ನೊಳ ಗೊಂಡಿದೆ. ಇದರಿಂದ ಸೋಮಯದಂಡನಾಯಕನ ಸಮಕಾಲೀನನಾಗಿ ಗೋಪಾಳದಂಡನಾಯಕನು ದಂಡ ನಾಯಕ ಪದವಿಯಲ್ಲಿದ್ದುದಕ್ಕೆ ಪುಷ್ಟಿಯೊದಗುತ್ತದೆ.

ಕ್ರಿ.ಶ. ೧೨೯೫ರ ನಾಯಕನಹಳ್ಳಿಯ ತ್ರುಟಿತ ಶಾಸನವು[೩೯] ಸೋಮಯದಂಡನಾಯಕನ ಅಧೀನ ಅಧಿಕಾರಿಯು ನೀಡಿದ ದಾನವನ್ನು ಪ್ರಸ್ತಾಪಿಸುತ್ತದೆ. ಈ ಶಾಸನದಲ್ಲಿ ಸೋಮಯದಂಡನಾಯಕನನ್ನು 'ಹಾತಿ' ಸೋಮೆಯದಂಡನಾಯಕ ಎನ್ನಲಾಗಿದೆ. ಇನ್ನು ಕೆಲವು ಶಾಸನಗಳಲ್ಲಿ 'ಪಾಡಿ' ಸೋಮೆಯ ದಂಡನಾಯಕ ಎಂತಲೂ ಉಲ್ಲೇಖಗೊಂಡಿದೆ. 'ಪಾಡಿ' ಎಂಬುದೇ 'ದಾತಿ' ಎಂದಾಗಿರ ಬಹುದು. 'ಪಾಡಿ' ಎಂಬುದಕ್ಕೆ 'ಪ್ರಾಂತ್ಯ' ಎಂಬರ್ಥ ವಿರುವುದರಿಂದ[೪೦] ಈ ಅರ್ಥಗ್ರಹಿಕೆಯ ಮೇರೆಗೆ ಸೋಮಯ ದಂಡನಾಯಕನು ಕ್ರಿ.ಶ. ೧೨೯೫ರ ವೇಳೆಗೆ ಪ್ರಾಂತ್ಯಾಧಿಕಾರಿ ಯಾಗಿದ್ದನೆಂದು ತೋರುತ್ತದೆ. ಇದಕ್ಕೂ ಪೂರ್ವದ ಶಾಸನಗಳನ್ನು ನೇರವಾಗಿ ಸೋಮೆಯದಂಡನಾಯಕನೇ ಹಾಕಿಸಿದ್ದನು. ಆದರೆ ೧೨೯೫ರ ನಂತರದ ಸೋಮೆಯ ದಂಡನಾಯಕನ ಉಲ್ಲೇಖವಿರುವ ಶಾಸನಗಳಲ್ಲಿ ಹೆಚ್ಚಿನವು ಆತನ ವಂಶೀಯರು ಮತ್ತು ಅಧೀನ ಅಧಿಕಾರಿಗಳು ಹಾಕಿಸಿದ್ದರಿಂದ ಆತನ ಬಿರುದುಗಳು ಕಂಡುಬಂದಿಲ್ಲವೆಂದೇ ತೋರುತ್ತದೆ.

ಕ್ರಿ.ಶ. ೧೨೯೮ರ ಬೇಲೂರಿನ ಶಾಸನವು[೪೧] ಸೋಮೆಯ ದಂಡನಾಯಕನು ಸೆಟ್ಟಿಹಳ್ಳಿಯ ಸಿದ್ಧಾಯದಲ್ಲಿ ೧೦೦ ಗದ್ಯಾಣ ಗಳನ್ನು ಬೇಲೂರಿನ ಚನ್ನಕೇಶವ ದೇವರ ವಿವಿಧ ಸೇವೆಗಳಿಗೆಂದು ಬಿಟ್ಟುಕೊಟ್ಟುದುದನ್ನು ತಿಳಿಸುತ್ತದೆ. ಇದೇ ಕಾಲದ ಬೇಲೂರಿನ ಮತ್ತೊಂದು ಶಾಸನವು[೪೨] ಚನ್ನಕೇಶವ ದೇಗುಲದ ಜೀರ್ಣಾವಸ್ಥೆಯಲ್ಲಿದ್ದ ಶಿಖರದ ಭಾಗವನ್ನು ಜೀರ್ಣೋದ್ಧಾರಗೊಳಿಸಿದ ವಿಷಯವನ್ನೊಳಗೊಂಡಿದೆ.

ಕಾಲದ ಉಲ್ಲೇಖವಿರದ ಹೊನ್ನಾಳಿಯ ೨ ಶಾಸನ ಗಳಲ್ಲಿ[೪೩] ಸೋಮೆಯದಂಡನಾಯಕನ ಹೆಸರು ಮಾತ್ರವೇ ಉಲ್ಲೇಖಗೊಂಡಿದ್ದು, ಉಳಿದ ವಿವರಗಳಿಲ್ಲ.

ಕ್ರಿ.ಶ. ೧೩೦೩[೪೪] ಹಾಗೂ ಕ್ರಿ.ಶ. ೧೩೨೨ರ ಬಾಗಿವಾಳಿನ ಶಾಸನಗಳು[೪೫] ಸೋಮೆಯದಂಡನಾಯಕನನ್ನು ೩ನೆಯ ಬಲ್ಲಾಳನ ಮೈದುನನೆಂದು ಸ್ಪಷ್ಟವಾಗಿ ತಿಳಿಸುತ್ತವೆ. ಮೂರನೆಯ ಬಲ್ಲಾಳನ ಸೋದರಿಯನ್ನು ವರಿಸಿದ ಸೋಮೆಯ ದಂಡನಾಯಕ ಹಾಗೂ ಮೂರನೆಯ ನರಸಿಂಹನ ಅಧೀನಲ್ಲಿದ್ದ ಸೋಮೆಯದಂಡನಾಯಕ ಒಬ್ಬನೇ

ಎಂಬುದಾಗಿ ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಈತನ ಅಂತ್ಯವನ್ನು ಕ್ರಿ.ಶ. ೧೩೦೩ರ ಬಾಗಿವಾಳಿನ ಶಾಸನ ತಿಳಿಸುತ್ತದೆ. ಇದರ ಪ್ರಕಾರ, ಬೆಮ್ಮತ್ತೂರಿನ ಪ್ರಾಂತ್ಯಾಧಿಕಾರಿಯಾಗಿದ್ದ ಸೋಮೆಯ ದಂಡನಾಯಕನು ಹೊಳಲ್ಕೆರೆಯಲ್ಲಿ ಕಂಪಿಲದೇವ (ಸೇವುಣರ ದಂಡನಾಯಕನಾದ ೩ನೆಯ ಸಿಂಗೆಯ ದಂಡನಾಯಕನ ಮಗ)ನೊಂದಿಗೆ ಹೋರಾಡಿ, ಅವನನ್ನು ಸೋಲಿಸಿ ತಾನು ಮಡಿದನು. ಈ ಕದನದಲ್ಲಿಯೇ ಚಿಟ್ಟನಹಳ್ಳಿಯೇ ವೀರ ಹಡಪದ ಸಾಯಣ್ಣನು ಸೋಮೆಯದಂಡನಾಯಕನೊಂದಿಗೆ ಕೂಡಿ ಕಾದಿ, ಶತ್ರುಗಳನ್ನು ಹೊಡೆದುರುಳಿಸುವ ಸಂದರ್ಭದಲ್ಲಿ ಸಾವನ್ನಪ್ಪಿದುದನ್ನು ಕ್ರಿ.ಶ. ೧೩೦೩ರ ಚಿಟ್ಟನಹಳ್ಳಿಯ ಶಾಸನ[೪೬] ತಿಳಿಸುತ್ತದೆ.

ಇವನಿಗೆ ನಿಯೋಗ ಯೋಗಂಧ, ಗಾಯಿಗೋವಳಂ, ನೀತಿಚಾಣಕ್ಯಂ ಎಂಬಿತ್ಯಾದಿ ಬಿರುದುಗಳಿದ್ದವು.

ಸೋಮೆಯ ದಂಡನಾಯಕನು ೩ನೆಯ ನರಸಿಂಹನ ಕಾಲದಲ್ಲಿ ದಂಡನಾಯಕ, ಮಹಾಪ್ರಧಾನಿ, ಸಂಧಿವಿಗ್ರಹಿಯಾಗಿ, ೩ನೆಯ ಬಲ್ಲಾಳನ ಕಾಲದಲ್ಲಿ ಪ್ರಾಂತ್ಯಾಧಿಕಾರಿಯಾಗಿ ಹೊಯ್ಸಳ ವಂಶಕ್ಕೆ ಆದಿಯಿಂದಲೂ ನಿಷ್ಠೆಯಿಂದಿದ್ದನು. ತನ್ನ ಅಂತ್ಯಕಾಲದಲ್ಲಿಯೂ ತನ್ನಧಿರಾಜರಿಗೆ ಉಪದ್ರವ ನೀಡುತ್ತಲೇ ಬಂದಿದ್ದ ಸೇವುಣರನ್ನು ಬಗ್ಗುಬಡಿಯುವಲ್ಲಿ ಯಶಸ್ವಿಯಾಗಿ, ಈ ಬಡಿದಾಟದಲ್ಲಿಯೇ ಅಸುನೀಗಿದನು[೪೬ಅ].

ಸೋಮೆಯದಂಡನಾಯಕನಿಗೆ ಮೇಳೆಯನಾಯಕನೆಂಬ ಹಿರಿಯ ಸಹೋದರನಿದ್ದನೆಂಬುದು ಈ ಮೊದಲೇ ಹೇಳಿದ ಹರಿಹರದ ಶಾಸನದಲ್ಲಿ ಉಲ್ಲೇಖಗೊಂಡಿದೆ. ಇದರ ಹೊರತಾಗಿ ಮೇಳಯನಾಯಕನ ಬಗ್ಗೆ ಅನ್ಯ ಶಾಸನಾಧಾರಗಳಿಲ್ಲ.

ಕ್ರಿ.ಶ. ೧೨೬೭ರ ಬೈರಾಪುರದ ಶಾಸನವು[೪೭] ಸೋಮಯದಂಡನಾಯಕನಿಗೆ ರೇಕವ್ವೆದಂಡನಾಯಕಿತಿ ಎಂಬ ಹಿರಿಯ ಸಹೋದರಿಯಿದ್ದ ವಿಚಾರವನ್ನು ತಿಳಿಸುತ್ತದೆ. ಪ್ರಸ್ತುತ ಶಾಸನದ ಪ್ರಕಾರ, ರೇಕವ್ವೆ ದಂಡನಾಯಕಿತಿಯ ಮಗಳು ತಿಪ್ಪವ್ವೆ ; ಅಳಿಯ ಬಿಜ್ಜಲೇಶ್ವರಪುರವೆನಿಸಿದ ಮಾಚನಹಳ್ಳಿಯ ಸ್ಥಾನಿಕನಾದ ಮಾರೆಯನಾಯಕ, ಈ ದಂಪತಿಗಳ ಕುವರಿ ಸೋಯಕ್ಕ. ರೇಕವ್ವೆ ದಂಡನಾಯಕಿತಿಯು ಬೊಮ್ಮಯನಾಯಕನಹಳ್ಳಿಯಲ್ಲಿ ಭೈರವೇಶ್ವರ ದೇಗುಲವನ್ನು ಕಟ್ಟಿಸಿ, ಆ ಗ್ರಾಮವನ್ನು ಭೈರವಪುರವೆಂಬ ಅಗ್ರಹಾರವನ್ನಾಗಿಸಿದಳು. ಈ ದೇಗುಲದ ನಾಲ್ಕು ವೃತ್ತಿಯ ಪ್ರಾಪ್ತಿಯೊಳಗಾದ ಗೃಹಕ್ಷೇತ್ರ ಅಷ್ಟಭೋಗ ತೇಜಸ್ವಾಮ್ಯಗಳನ್ನು ತನ್ನ ಮಗಳು, ಅಳಿಯ ಮತ್ತು ಮೊಮ್ಮಗಳಿಗೆ ಪ್ರೀತಿಯಿಂದ ದಾನ ಮಾಡಿದಳು. ಈ ಅಂಶವನ್ನು ಅನುಲಕ್ಷಿಸಿ, ಹೊಯ್ಸಳರ ಆಡಳಿತ ಯಂತ್ರದಲ್ಲಿ ಸ್ತ್ರೀಯೊರ್ವಳು ದಂಡನಾಯಕಿಯಾಗಿ ಜವಾಬ್ದಾರಿಯುತ ಪಾತ್ರವನ್ನು ನಿರ್ವಹಿಸುತ್ತಿದ್ದಳೆಂದು ಊಹಿಸಬಹುದೇ ?

### ಸಿಂಗೆಯದಂಡನಾಯಕ : (ಕ್ರಿ.ಶ. ೧೨೯೭–೧೩೨೨)

ಸಿಂಗೆಯದಂಡನಾಯಕ ಸೋಮೆಯದಂಡನಾಯಕನ ಹಿರಿಯ ಮಗ. ಹೊಸಕೋಟೆ, ಆನೇಕಲ್, ಕನಕಪುರ, ಚನ್ನಪಟ್ಟಣ ತಾಲೂಕುಗಳ ಶಾಸನಗಳಲ್ಲಿ ಸಿಂಗೆಯದಂಡನಾಯಕನ ಉಲ್ಲೇಖ ಕಂಡುಬರುತ್ತದೆ.

ಕ್ರಿ.ಶ. ೧೨೯೭ರ ಬನ್ನೇರುಘಟ್ಟದ ಶಾಸನವು[೪೮] ಸೋಮಯದಂಡನಾಯಕನ ಮಗ ಸಿಂಗಯದಂಡನಾಯಕನ ಸಮ್ಮುಖದಲ್ಲಿ ಪೊನ್ಮುಡಿಗನಾಡಿ (ಹೊಮ್ಮಳಿಗೆ ನಾಡು) ನೊಳಗಣ ಪೆರಿಯನಾಡಿನ ನಿವಾಸಿಗಳು ದಾಮೋದರ ಪೆರುಮಾಳ ದೇವರಿಗೆ ದತ್ತಿಯಾಗಿ ನೀಡಲ್ಪಟ್ಟ ಕೆಲವು ಹಳ್ಳಿಗಳ ಮೇಲಿನ ಎಲ್ಲ ತೆರಿಗೆಗಳನ್ನು ಮನ್ನಾ ಮಾಡಿದ ವಿಷಯವನ್ನು ತಿಳಿಸುತ್ತದೆ. ಇದರಿಂದ ತೆರಿಗೆ ಮನ್ನಾದಂತೆಯೇ ಮಹತ್ತ್ವದ ತೀರ್ಮಾನಗಳು ಸಿಂಗಯದಂಡನಾಯಕನ ಸಮಕ್ಷಮದಲ್ಲಿ ನಡೆಯುತ್ತಿದ್ದವು ಎಂದು ಊಹಿಸಬಹುದು.

ಕ್ರಿ.ಶ. ೧೩೦೨ರ ಆನೇಕಲ್‌ನ ತ್ರುಟಿತ ಶಾಸನವು[೪೯] ಸಿಂಗೆಯದಂಡನಾಕನು ಬೈಚಯನಾಯಕನೊಡಗೂಡಿ ಜಿಗುಣಿ ಪ್ರದೇಶವನ್ನು ಆಳುತ್ತಿರುವ ಸಂದರ್ಭದಲ್ಲಿ, ಮಾರಪ್ಪ ಎಂಬಾತನಿಗೆ ಈ ಇಬ್ಬರೂ ಕಟ್ಟುಕೊಡುಗೆಯಾಗಿ ಕೆಲವು ಭೂದಾನಗಳನ್ನು ನೀಡಿದುದನ್ನು ತಿಳಿಸುತ್ತದೆ. ೩ನೆಯ ಬಲ್ಲಾಳನು ತನ್ನ ಅಧಿಕಾರ ವಿಕೇಂದ್ರಿಕರಣದ ಹೊಸ ಆಡಳಿತಾತ್ಮಕ ತಂತ್ರ ಪ್ರಯೋಗದಲ್ಲಿ ದಂಡನಾಯಕರನ್ನು ನಾಡುಗಳ ಕಾರ್ಯಪಾಲಕರಾಗಿ ನೇಮಿಸಿದ್ದನು. ಇಂತಹ ಒಂದು ನಾಡಾದ ಹೊಮ್ಮಳಿಗೆ ನಾಡು (ಜಿಗುಣಿ, ಆನೇಕಲ್, ಬನ್ನೇರುಘಟ್ಟ) ಸಿಂಗಯದಂಡನಾಯಕನ ಆಳ್ವಿಕೆಗೆ ಕೆಲಕಾಲ ಒಳಪಟ್ಟಿತ್ತೆಂದು ಈ ಶಾಸನದಿಂದ ವೇದ್ಯವಾಗುತ್ತದೆ.

ಕ್ರಿ.ಶ. ೧೩೧೬ರ ಗಾಣಾಳುಕೊಪ್ಪ ಶಾಸನವು[೫೦] ಪಾಡಿಯ ಸಿಂಗಯದಂಡನಾಯಕನ ಅಧೀನ ಅಧಿಕಾರಿಯಾದ ಮಾಚೆಯನಾಯಕನು ಹೊಮ್ಮಳಿಗೆ ನಾಡಿನ ರಾಮದೇವ, ಮಳಿಯನಾಯಕ ಮೊದಲಾದವರೊಡಗೂಡಿ ಗಾಳಿಹಾಳು (>ಗಾಣಾಳು) ಎಂಬಲ್ಲಿ ಸಂತೆಯನ್ನು ನಿರ್ಮಿಸಿ, ಅಲ್ಲಿಯ ಪಟ್ಟಣಸ್ವಾಮಿಯ ಮಗ ಚೊಕ್ಕಸೆಟ್ಟಿಗೆ ಭೂದಾನಗಳನ್ನಿತ್ತಿದು ದನ್ನು ತಿಳಿಸುತ್ತದೆ. ಗ್ರಾಮಗಳಲ್ಲಿ ಸಂತೆಗಳನ್ನು ಸ್ಥಾಪಿಸಿ ಸಾಮ್ರಾಜ್ಯದಲ್ಲಿ ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿರಲು ಪ್ರಯತ್ನಿಸುತ್ತಿದ್ದರೆಂಬುದಕ್ಕೆ ಈ ಶಾಸನ ಪುಷ್ಟಿಯೊದಗಿಸುತ್ತದೆ.

ಕ್ರಿ.ಶ. ೧೩೧೮ರ ನುಗ್ಗನಹಳ್ಳಿಯ ಶಾಸನ[೫೧] ಸಿಂಗಯ ದಂಡನಾಯಕನು ಮಣ್ಣೆಯೂರನ್ನು ಬಲಾಚಿದೇವನಿಗೆ, ಕ್ರಿ.ಶ. ೧೩೨೦ರ ವಾಣಪುರದ ಶಾಸನ[೫೨] ವಿಯಿಗೌಡನಿಗೆ ಮೆಳೆಸಿಗೆರೆ ಗ್ರಾಮವನ್ನು ದಾನವಾಗಿ ನೀಡಿದುದನ್ನು ತಿಳಿಸುತ್ತವೆ. ದಂಡನಾಯಕನೋರ್ವ ಗ್ರಾಮಗಳನ್ನೇ ಇಡಿಯಾಗಿ, ದಾನ ನೀಡುವ ವಿಪುಲ ಅಧಿಕಾರವನ್ನು ಪಡೆದಿದ್ದನೆಂಬುದು ಈ ಶಾಸನಗಳಿಂದ ವಿದಿತವಾಗುತ್ತದೆ.

ಕ್ರಿ.ಶ. ೧೩೨೨ರ ಬಾಗಿವಾಳಿನ ಶಾಸನವು[೫೩] ಸಿಂಗೆಯ ದಂಡನಾಯಕನ ಮರಣದ ವಿಷಯವನ್ನು ತಿಳಿಸುತ್ತದೆ. ವೀರಪಾಂಡ್ಯನಿಗೂ ಮತ್ತು ಅವನ ಮಕ್ಕಳು ಸಮುದ್ರಪಾಂಡ್ಯ, ಪರಕಪಾಂಡ್ಯರಿಗೂ ಕಾಳಗವೇರ್ಪಟ್ಟಾಗ ಸಿಂಗಯ ದಂಡನಾಯಕನು ವೀರಪಾಂಡ್ಯನ ಪರವಾಗಿ ಹೋರಾಡಿ ಮೃತನಾದನು. ಇದೇ ಶಾಸನದಿಂದ ಸಿಂಗಯದಂಡನಾಯಕನು ಅಂಕೆಯದಂಡನಾಯಕನ ಅಳಿಯ ಎಂಬುದು ತಿಳಿದು ಬರುತ್ತದೆ.

ಕ್ರಿ.ಶ. ೧೩೨೨ರ ನಂತರದ ಬಲ್ಲಪ್ಪದಂಡನಾಯಕನಗೆ ಸಂಬಂಧಿಸಿದ ಶಾಸನಗಳಲ್ಲಿ ಸಿಂಗೆಯದಂಡನಾಯಕನ ಉಲ್ಲೇಖ ಮಾತ್ರವೇ ಕಂಡುಬರುತ್ತದೆ. ಹೊಸಕೋಟೆ ತಾಲೂಕಿನ ವಾಗಟ ಮತ್ತು ಸತ್ಯವಾರದ ೨ ಶಾಸನಗಳಲ್ಲಿ[೫೪] ಈತನ ಅಧೀನ ಅಧಿಕಾರಿಗಳು ನೀಡಿದ ದಾನದ ವಿಚಾರ ವಿದೆಯಷ್ಟೆ.[೫೫]

**ಇರುಗಿಸೆಟ್ಟಿ :** ಈತ ಸಿಂಗಯದಂಡನಾಯಕನ ಹಿರಿಯ ಮಗ. ಕ್ರಿ.ಶ. ೧೩೧೯ರ ಕೋಲಾರದ ಶಾಸನವು[೫೬] ಇರುಗಿ ಸೆಟ್ಟಿಯನ್ನು ವಡ್ಡವ್ಯವಹಾರಿ, ಉಭಯನಾನಾದೇಸಿಯರ ಮುಖ್ಯಸ್ಥ, ಕೊಲ್ಲಿಯ ಅಧಿಪತಿ, ಕೋಳಾಲನಾಡಿನ ನಾಡಪ್ರಭು ಎಂಬಿತ್ಯಾದಿಯಾಗಿ ಕೀರ್ತಿಸಿದೆ. ಈತ ಕೊತ್ತನೂರಿನಲ್ಲಿ ಕೈಲಾಸ ನಾಥನ ದೇಗುಲವನ್ನು ನಿರ್ಮಿಸಿ, ಅಲ್ಲಿನ ಪೆರಿಯ ಕಜಿಪಕಭಟ್ಟರೇ ಮೊದಲಾದ ವಿಪ್ರರಿಗೆ ಭೂದಾನಗಳಿತ್ತು ದುದನ್ನು ಪ್ರಕೃತ ಶಾಸನ ತಿಳಿಸುತ್ತದೆ. ಕ್ರಿ.ಶ. ೧೩೨೧ರ ತೇರುಹಳ್ಳಿಯ ಶಾಸನವು[೫೭] ಇರುಗಿಸೆಟ್ಟಿಗೆ 'ಮಹೇಶ್ವರ ರಕ್ಷಕ' ಎಂಬ ಬಿರುದಿದ್ದುದ್ದಾಗಿಯೂ, ಆತ ಗಂಗಾಧರೇಶ್ವರ ದೇವರ ಉತ್ಸವದ ಸೇವಾರ್ಥಿಯಾಗಿದ್ದುದನ್ನು ತಿಳಿಸುತ್ತದೆ.

ಕ್ರಿ.ಶ. ೧೩೩೦ ಕೋಲಾರದ ಶಾಸನವು[೫೮] ಇರುಗಿಸೆಟ್ಟಿಯು ಶಿವೈಕ್ಯನಾದ ವಿಷಯವನ್ನು ತಿಳಿಸುತ್ತದೆ.[೫೯] ಇವನ ಹಿರಿಯ ಮಗನ ಹೆಸರು ಇರುಗಿಸೆಟ್ಟಿಯೆಂದೇ. ಕ್ರಿ.ಶ. ೧೩೪೬ರ ಕೋಲಾರದ ಶಾಸನದ ಪ್ರಕಾರ,[೬೦] ಮಹಾ ಮಂಡಲೇಶ್ವರನಾದ ವೀರಬುಕ್ಕರಾಯನ ಮಂತ್ರಿ ಮಲ್ಲರಸನು ಕೋಳಾಲ ನಾಡಪ್ರಭುವಾದ ಈ ಇಟುಗಿಸೆಟ್ಟಿಗೆ ಸುಕ್ಕನಹಳ್ಳಿಯನ್ನು ಧಾರಾಪೂರ್ವಕವಾಗಿ ಕೊಡುಗೆಯಿತ್ತನು. ಕ್ರಿ.ಶ. ೧೪೦೪ರ ಕೊತ್ತನೂರಿನ ಶಾಸನವು[೬೧] ಈತನು ವೀರಭದ್ರ ದೇಗುಲವನ್ನು ಕೊತ್ತನೂರಿನಲ್ಲಿ ನಿರ್ಮಿಸಿ ವೀರಭದ್ರದೇವರ ಅಮೃತಪಡಿ ನೈವೇದ್ಯ ಇತರೆ ಪೂಜಾಕೈಂಕರ್ಯಗಳಿಗೆಂದು ಭೂದಾನಗಳನ್ನು ನೀಡಿದುದನ್ನು ತಿಳಿಸುತ್ತದೆ. ಕೋಲಾರ ದಲ್ಲಿಯೇ ದೊರೆತ ಕ್ರಿ.ಶ. ೧೩೭೯, ೧೩೮೪, ೧೪೫೦ ಈ ಕಾಲದ ಮೂರು ಶಾಸನಗಳಲ್ಲಿ[೬೨] ಇರುಗಿಸೆಟ್ಟಿಯ ಉಲ್ಲೇಖ ಕಂಡುಬರುವುದಾದರೂ ಸ್ಪಷ್ಟವಾಗಿ ಈತ ಸಿಂಗೆಯ ದಂಡನಾಯಕನ ಮೊಮ್ಮಗ ಎಂಬುದಕ್ಕೆ ಆಧಾರಗಳಿಲ್ಲ.

ಕೋಲಾರದ ಕ್ರಿ.ಶ. ೧೪೧೭ರ ಶಾಸನದ ಪ್ರಕಾರ,[೬೩] ಕೋಳಾಲನಾಡಿನ ಮಹಾಪ್ರಭು ಇರುಗಿಸೆಟ್ಟಿಯ ಇನ್ನೊಬ್ಬ ಮಗ ಬಯಿರಸೆಟ್ಟಿಯು ಕೆಂದತ್ತಿ ಸಮೀಪದ ಮಡಿವಾಳದಲ್ಲಿನ ಮೂಲೇಶ್ವರ ದೇವರ ಪೂಜಾಸೇವೆಗಳಿಗೆಂದು ಕೆಲವು ದತ್ತಿಗಳನ್ನು ಬಿಟ್ಟಿರುವನು.[೬೪]

**ಪೆಮ್ಮಿಸೆಟ್ಟಿ :** ಈತ ಸಿಂಗೆಯದಂಡನಾಯಕನ ಕಿರಿಯ ಮಗ. ಕ್ರಿ.ಶ. ೧೩೩೦ರ ಕೋಲಾರದ ಶಾಸನದಲ್ಲಿ[೬೫] ಪೆಮ್ಮಿಸೆಟ್ಟಿಯು ಕೆಲವು ಶೈವಬ್ರಾಹ್ಮಣರಿಗೆ ಭೂದಾನಗಳನ್ನು ನೀಡಿದುದು ಉಲ್ಲೇಖ ಗೊಂಡಿದೆ. ಕ್ರಿ.ಶ. ೧೩೩೦ರ ಕೋಲಾರದ ಮತ್ತೊಂದು ಶಾಸನವು[೬೬] ಪೆಮ್ಮಿಸೆಟ್ಟಿಯನ್ನು ಮಹಾವಡ್ಡ ವ್ಯವಹಾರಿ, ಉಭಯ ನಾನಾ ದೇಸಿಗಣದ ಮುಖ್ಯಸ್ಥ ಎಂಬುದಾಗಿ ಕರೆದಿದೆ. ಅಲ್ಲದೆ ಈತ ತನ್ನ ಅಣ್ಣ ಇರುಗಿಸೆಟ್ಟಿಯು ಶಿವೈಕ್ಯನಾಗಲು ಅವನ ಹೆಸರಿನಲ್ಲಿ ಇರುಗಸಮುದ್ರ ಎಂಬ ಕೆರೆಯನ್ನು ಮತ್ತು ಇರುಗೇಶ್ವರ ಎಂಬ ಶಿವ ದೇಗುಲವನ್ನು ನಿರ್ಮಿಸಿ, ಇರುಗೇಶ್ವರ ದೇವರ ಆರಾಧನೆಗಾಗಿ ಕೆಲವು ಭೂದಾನಗಳನ್ನು ನೀಡಿದುದನ್ನು ತಿಳಿಸುತ್ತದೆ.[೬೭]

ಪೆಮ್ಮಿಸೆಟ್ಟಿಗೆ ಪೆರಿಯ ಪೆರುಮಾಳಸೆಟ್ಟಿ ಎಂಬ ಮಗನಿದ್ದನು. ಕ್ರಿ.ಶ. ೧೩೭೯ರ ನೆಲವಾಗಲಹಳ್ಳಿ ಶಾಸನದ ಪ್ರಕಾರ[೬೮] ಪೆರಿಯ ಪೆರುಮಾಳಸೆಟ್ಟಿಯು ವೈಶ್ಯ ನಗರ್ತನಾಗಿದ್ದು ನೆಲವಾಗಲಹಳ್ಳಿಯಲ್ಲಿಯೇ ದೊಡ್ಡಕೆರೆಯನ್ನು ನಿರ್ಮಿಸಿದ್ದನು. ಈ ಕೆರೆಯ ಸಮೀಪದ ಭೂಮಿಯನ್ನು ಅಂಕಯನಾಯಕರೇ ಮೊದಲಾದವರು ನಂದಗುಡಿಯ ನಾರಾಯಣ ದೇಗುಲಕ್ಕೆ ಅಕರವಾಗಿ ನೀಡಿದರು. ಕ್ರಿ.ಶ. ೧೪೫೪ರ ಕೋಲಾರದ ಶಾಸನವು[೬೯] ಪೆರಿಯಪೆರುಮಾಳಸೆಟ್ಟಿಯು ಕೈವಾರ ನಾಡಿನ ಅಧಿಪ ನಾಗಣ್ಣ ಒಡೆಯರ ಮನೆ ಮಗನಾದ ಬ್ರಹ್ಮರಸರೇ ಮೊದಲಾದವರೊಡಗೂಡಿ ಸೀತಿ ಭೈರವ ದೇವರಿಗೆ ನೀಡಿದ ದಾನವನ್ನು ತಿಳಿಸುತ್ತದೆ. ಕ್ರಿ.ಶ. ೧೪೫೭ರ ಮುಳಬಾಗಿಲಿನ ಶಾಸನವು[೭೦] ಪೆರಿಯಪೆರುಮಾಳ ಸೆಟ್ಟಿಯು ವೈಶ್ಯ ನಗರ್ತ ನಾಗಿದ್ದುದನ್ನು ತಿಳಿಸುತ್ತದೆ.

ಮೇಲ್ಕಂಡ ಅಂಶಗಳ ಅವಲೋಕನದಿಂದ **ಸಿಂಗೆಯ ದಂಡನಾಯಕನ** ಮಕ್ಕಳಾದ **ಇರುಗಿಸೆಟ್ಟಿ** ಮತ್ತು **ಪೆಮ್ಮಿಸೆಟ್ಟಿಯರು** ಕೋಳಾಲನಾಡಿನಲ್ಲಿ ನಾಡಪ್ರಭುಗಳಾಗಿ ಪ್ರಾಬಲ್ಯ ಗಳಿಸಿದ್ದರು. ಅವರ ನಂತರದಲ್ಲಿ ಅವರ ಮಕ್ಕಳೇ ಈ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿಯೂ ನಾಡಪ್ರಭುಗಳಾಗಿ ಪ್ರವರ್ಧಮಾನಕ್ಕೆ ಬಂದಿರಬಹುದೆಂದು ತೋರುತ್ತದೆ.

**ಮಲ್ಲಿದೇವ ದಂಡನಾಯಕ :** ಈತ ಸೋಮಯದಂಡನಾಯಕನ ಅಳಿಯ. ಕ್ರಿ.ಶ. ೧೨೭೩ರ ಬೇಲೂರಿನ ಶಾಸನವು[೭೧] ಈತನನ್ನು ೩ನೆಯ ನರಸಿಂಹನ 'ಮನೆಮಗ' ಎಂದು ಕರೆದಿದೆ. ಈತನಿಗೆ ಗಾಯಿ ಗೋವಳು, ಗಂಡಪೆಂಡಾರಂ, ಮಾಂಡಳಿಕಬೂಬು ಮುಂತಾದ ಬಿರುದುಗಳಿದ್ದವು. ಮಲ್ಲಿದೇವ ದಂಡನಾಯಕನು ನಾಗೇಶ್ವರ ದೇಗುಲವನ್ನು ನಿರ್ಮಿಸಿ, ಆ ದೇವರ ಅಂಗರಂಗ ಭೋಗಕ್ಕೆ ಗೋಳಿಯ ಸೋಮನಹಳ್ಳಿಯ ಮುಂದಿನ ಕೆರೆಯ ಕೆಳಗೆ ಗಾಡಿಕೆಯ ಕೊಡಗಿಯ ತೋಟವನ್ನು ಧಾರಾಪೂರ್ವಕವಾಗಿ ದತ್ತಿ ಬಿಟ್ಟನು. ಕ್ರಿ.ಶ. ೧೨೭೬ಕ್ಕೆ ಸಲ್ಲುವ ಬೇಲೂರಿನ ಮತ್ತೆರಡು ಶಾಸನಗಳು[೭೨] ಮಲ್ಲಿದೇವ ದಂಡನಾಯಕ ಮತ್ತು ಚಿಕ್ಕಕೇತಯ ದಂಡನಾಯಕರು ಸೇವುಣ ರಾಮದೇವನ ಸೇನಾಪತಿ ಸಾಳುವ ತಿಕ್ಕಮನೊಂದಿಗೆ ಯುದ್ಧ ಮಾಡಿದರೆಂದೂ ಸೇವುಣ ಸೈನ್ಯವನ್ನು ದೋರಸಮುದ್ರದಿಂದ ಬೆಳವಾಡಿಯವರೆಗೆ ಓಡಿಸಿದರೆಂದು ದಾಖಲಿಸಿವೆ. ಈ ಅಂಶವನ್ನು ಲಕ್ಷಿಸಿದರೆ, ಸೋಮಯದಂಡನಾಯಕ ಮತ್ತು ಸಿಂಗೆಯದಂಡನಾಯಕ ಮಾತ್ರವಲ್ಲದೆ ಸೋಮಯ ದಂಡನಾಯಕನ ಅಳಿಯಂದಿರು ಸಹ ಹೊಯ್ಸಳ ಸಾಮ್ರಾಜ್ಯಕ್ಕೆ ಎದುರಾಗುತ್ತಲೇ ಇದ್ದ ಸೇವುಣರ ಪ್ರಬಲ ದಾಳಿಯನ್ನು ನಿರಂತರವಾಗಿ ಎದುರಿಸುತ್ತ ರಾಜ್ಯರಕ್ಷಣೆಗೆ ಕಟಿಬದ್ಧರಾಗಿದ್ದರೆಂದು ತೋರುತ್ತದೆ.[೭೩]

**ಚಿಕ್ಕಕೇತಯ ದಂಡನಾಯಕ :** ಈತನು ಸಹ ಸೋಮಯದಂಡನಾಯಕನ ಅಳಿಯ. ಇವನ ಮೊದಲ ಉಲ್ಲೇಖವಿರುವ ಶಾಸನ ಕ್ರಿ.ಶ. ೧೨೯೪ಕ್ಕೆ ಸೇರುತ್ತದೆ. ತುಮಕೂರಿನಲ್ಲಿ ದೊರೆತ ಈ ಶಾಸನದ ಪ್ರಕಾರ[೭೪] ೩ನೆಯ ನರಸಿಂಹನು ದೋರಸಮುದ್ರದ ನೆಲೆವೀಡಿನಲ್ಲಿದ್ದಾಗ, ಚಿಕ್ಕಕೇತಯದಂಡನಾಯಕನು ಆನೆಬಿದ್ದಸಜೆಯನಾಡಿ (ದೇವರಾಯನದುರ್ಗ)ನಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಈತನಿಗೆ ಗಾಯಿಗೋವಳು, ಗಂಡಪೆಂಡಾರಂ, ಪ್ರಜೆಮೆಚ್ಚೆಗಂಡ ಎಂಬಿತ್ಯಾದಿ ಬಿರುದುಗಳಿದ್ದವು. ಸೇವುಣರಿಗೆ ಸಹಕಾರ ನೀಡುತ್ತಿದ್ದ. ನಿಡುಗಲ್ ರಾಜ್ಯಾಧಿಪ ಇರುಂಗೋಳದೇವನ ಸೈನ್ಯಸಮೇತವಾಗಿ ಗೂಳೆಯನಾಯಕನು ಆನೆಬಿದ್ದಸಜೆಯ ನಾಡಿನ ಮೇಲೆ ದಾಳಿ ಮಾಡಿ ಗೋಗ್ರಹಣವನ್ನು ಮಾಡಲು, ಚಿಕ್ಕಕೇತಯ ದಂಡನಾಯಕನ ಪಾದಪದ್ಮೋಪಜೀವಿಯಾದ ಅಪ್ಪೆಯನಾಯಕನು ವೈರಿಯೊಡನೆ ಹೋರಾಡಿ, ಅವರನ್ನು ಸದೆಬಡಿದು ತುರುಗಳನ್ನು ರಕ್ಷಿಸಿ ತಾನು ಶಿವೈಕ್ಯನಾದನು. ಇಷ್ಟು ಹೊತ್ತಿಗಾಗಲೇ ಹೊಯ್ಸಳ ಸಾಮ್ರಾಜ್ಯ ೩ನೆಯ ನರಸಿಂಹ ಮತ್ತು ರಾಮನಾಥರಲ್ಲಿ ವಿಭಜನೆಯಾಗಿತ್ತು ; ಭ್ರಾತೃ ಕಲಹದಿಂದ ಬಲಹೀನವಾಗಿದ್ದ ಸಾಮ್ರಾಜ್ಯವನ್ನು ಸೇವುಣ ಮತ್ತು ನಿಡುಗಲ್ ಚೋಳರು ಆಕ್ರಮಿಸಲು ಉದ್ಯುಕ್ತರಾಗಿದ್ದರೆಂದು ಈ ಘಟನೆಯಿಂದ ಊಹಿಸಬಹುದಾಗಿದೆ.

ಕ್ರಿ.ಶ. ೧೨೭೬ರ ಬೇಲೂರಿನ ಶಾಸನದ ಪ್ರಕಾರ[೭೫] ಚಿಕ್ಕಕೇತಯದಂಡನಾಯಕನು ಮಹಾಪ್ರಧಾನನಾಗಿದ್ದನೆಂದು, ಇವನು ಹಿಂದೆಯೇ ತಿಳಿಸಿದಂತೆ ಮಲ್ಲಿದೇವ ದಂಡನಾಯಕನೊಡಗೂಡಿ ಸೇವುಣ ಸೈನ್ಯವನ್ನು ಹಿಮ್ಮೆಟ್ಟಿಸಿದ್ದನು. ಕ್ರಿ.ಶ. ೧೨೭೮ರ ಯಲಿಯೂರು ಗ್ರಾಮದ ಶಾಸನವು[೭೬] ಇವನನ್ನು ಮಹಾ ಪ್ರಧಾನ ಎಂದೇ ಸಂಬೋಧಿಸಿದೆ. ಈ ಸಂದರ್ಭದಲ್ಲಿಯೇ ಪೂರ್ವಾದಿರಾಯರ ಉನ್ನತಾಧಿಕಾರಿಗಳು ಹೊನ್ನಾವರದಲ್ಲಿದ್ದಾಗ, ಚೂಡನಾಥದೇವರಿಗೆ ಬೆಳ್ಳಿಯ ಹರಿವಾಣ, ಕಿರೀಟಗಳನ್ನು ಧಾರಣೆ ಮಾಡಿಸಿ ಚಿಕ್ಕಗಂಗವಾಡಿಯ ಬಾಣತಿಯಹಳ್ಳಿ ಮತ್ತು ಯಲಿಯೂರು ಗ್ರಾಮಗಳನ್ನು ಅಕರವಾಗಿ ದಾನ ಮಾಡಿದರು.

ಕ್ರಿ.ಶ. ೧೨೯೮ರ ಶಾಸನವು[೭೭] ಚಿಕ್ಕಕೇತಯ ದಂಡನಾಯಕನಿಗೆ ವೀರಸಿಂಗೆಯದಂಡನಾಯಕನೆಂಬ ಮಗನಿದ್ದುದಾಗಿಯೂ, ಆತನು ಮಱುಗಲನಾಡಸೀತಕಲ ರಾಮನಾಥದೇವರಿಗೆ ಕೆಲವು ಭೂದಾನಗಳನ್ನು ಇತ್ತುದಾಗಿಯೂ ತಿಳಿಸುತ್ತದೆ. ಕ್ರಿ.ಶ. ೧೨೯೮ರ ಯಲಿಯೂರು ಗ್ರಾಮದ ಶಾಸನವು[೭೮] ಚಿಕ್ಕಕೇತಯದಂಡನಾಯಕನಿಗೆ ಅಂಕೆಯ ದಂಡನಾಯಕನೆಂಬ ಮಗನಿದ್ದುದನ್ನು ತಿಳಿಸುತ್ತದೆ. ಕ್ರಿ.ಶ. ೧೨೭೬ರ ಬೇಲೂರಿನ ಶಾಸನವು[೭೯] ಸೇವುಣರ ರಾಮದೇವನ ಸೇನಾಧಿಪತಿ ಸಾಳುವ ತಿಕ್ಕಮ ಬೆಳವಾಡಿಗೆ ಬಂದು ಬೀಡು ಬಿಟ್ಟಿದ್ದಾಗ, ವಿಜಯದೇವ ಮತ್ತು ಹರಿಪಾಳರು ದೋರಸಮುದ್ರವನ್ನು ಮುತ್ತಿದ ಸಂದರ್ಭದಲ್ಲಿ ಅಂಕೆಯ ದಂಡನಾಯಕನು ಅವರನ್ನು ಸೋಲಿಸಿ ಓಡಿಸಿದುದನ್ನು ತಿಳಿಸುತ್ತದೆ. ಕ್ರಿ.ಶ. ೧೨೯೬ರ ಬಗ್ಗವಳ್ಳಿಯ ಶಾಸನವು[೮೦] ಅಂಕೆಯದಂಡನಾಯಕನು ಬರ್ಗವಳ್ಳಿಯನ್ನು 'ಲಕ್ಷ್ಮೀ ನರಸಿಂಹಪುರ' ಎಂಬ ಅಗ್ರಹಾರವನ್ನಾಗಿಸಿ, ಪಂಚಿಕೇಶ್ವರ ದೇಗುಲಕ್ಕೆ ಕೆಲವು ಭೂದಾನಗಳನ್ನು ನೀಡಿದ ವಿಷಯವನ್ನು ಒಳಗೊಂಡಿದೆ. ಕ್ರಿ.ಶ. ೧೨೯೯ ಬೇಲೂರಿನ ಶಾಸನವು (ತ್ರುಟಿತ) ಅಂಕೆಯದಂಡನಾಯಕನು ಮೂರನೆಯ ಬಲ್ಲಾಳನೊಡಗೂಡಿ ಭಾಗವಹಿಸಿದ ಯುದ್ಧವನ್ನು

ಪ್ರಸ್ತಾಪಿಸುತ್ತದೆ.[೮೧] ಅಂಕೆಯ ದಂಡನಾಯಕನಿಗೆ ಮಾಚಯ ದಂಡನಾಯಕನೆಂಬ ಅಳಿಯನಿದ್ದುದಾಗಿ ಕ್ರಿ.ಶ. ೧೩೧೪ರ ಹಾಸನದ ಶಾಸನವು[೮೨] ತಿಳಿಸುತ್ತದೆ. ಇದೇ ಕಾಲಕ್ಕೆ ಸಲ್ಲುವ ಅವ್ವೇರಹಳ್ಳಿಯ ಶಾಸನದಲ್ಲಿ[೮೩] ಮಾಚಯದಂಡನಾಯಕನು ತನ್ನ ತಾಯಿ ಮಾಯಕ್ಕನವರ ["ಅವ್ವೆ ಮಾಯಕ್ಕ"] ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿದನು. ಈ ಶಾಸನ ದೊರೆತಿರುವ ಗ್ರಾಮದ ಹೆಸರು ಅವ್ವೇರಹಳ್ಳಿಯಾಗಿದ್ದು, ಮಾಚಯದಂಡನಾಯಕನು ಕಟ್ಟಿಸಿದ ಕೆರೆಯ ನಿಮಿತ್ತವಾಗಿ ಇದಕ್ಕೆ ಈ ಹೆಸರು ಬಂದಿರಬಹುದು. ಕ್ರಿ.ಶ. ೧೩೧೪ರ ಬ್ಯಾಡರಹಳ್ಳಿಯ ಶಾಸನವು[೮೪] ಮಾಚಯದಂಡನಾಯಕನ ತಾಯಿ ಮಾಯಕ್ಕನವರು ಮಾಚಯದಂಡನಾಯಕನ ಹೆಸರಿನಲ್ಲಿ 'ಮಾಚಸಮುದ್ರ'ವನ್ನು ಕಟ್ಟಿಸಿದುದನ್ನು ತಿಳಿಸುತ್ತದೆ.[೮೫]

**ದೊರಭಕ್ಕರೆ ದಂಡನಾಯಕ :** ಈತ ಸೋಮಯದಂಡನಾಯಕನ ಮತ್ತೊಬ್ಬ ಅಳಿಯ. ಈತನಿಗೂ ಕೂಡ 'ಗಾಯಿಗೋವಳಂ', 'ಗಂಡಪೆಂಡಾರಂ', 'ಮಾಂಡಳಿಕಬೂಬು' ಎಂಬ ಬಿರುದುಗಳಿದ್ದವು. ಕ್ರಿ.ಶ. ೧೨೭೭ರ ಹಲ್ಲೂರಿನ ಶಾಸನ[೮೫ಅ] ಇವನ ಬಗ್ಗೆ ಮಾಹಿತಿ ನೀಡುವ ಏಕೈಕ ಶಾಸನವಾಗಿದೆ. ಚಿಕ್ಕಗಂಗವಾಡಿಯಲ್ಲಿರುವ ಮದ್ದೂರಿನ ಸ್ವಯಂಭೂಶ್ರೀ ವೈದ್ಯನಾಥದೇವರಿಗೆ ದೇವದಾನವಾಗಿ ಹಲುಗೂರು ಬೋಡರಹಳ್ಳಿಯ ಎಲ್ಲ ತೆರಿಗೆಗಳನ್ನು ಸರ್ವಬಾಧಾಪರಿಹಾರಾರ್ಥವಾಗಿ ನೀಡಿದನೆಂದು ಈ ಶಾಸನದಿಂದ ತಿಳಿದುಬರುತ್ತದೆ.

**ಬೊಮ್ಮಣ್ಣ :** ಕ್ರಿ.ಶ. ೧೨೬೫ರ ಚಿಕ್ಕಮಗಳೂರಿನ ಶಾಸನ[೮೬] ಇವನ ಬಗ್ಗೆ ತಿಳಿಸುತ್ತದೆ. ಆ ಪ್ರಕಾರ, ಈತನು ಸೋಮಯದಂಡನಾಯಕನ ಮಯ್ದುನ. ಈತ ಸೋಮಯದಂಡನಾಯಕನ ಅಕ್ಕ ರೇಕವ್ವೆದಂಡನಾಯಕಿತಿಯ ಪತಿಯೇ ಅಥವಾ ಅವನ ಮತ್ತೊರ್ವ ಸೋದರಿಯ ಪತಿಯೇ ಅಥವಾ ಅವನ ಹೆಂಡತಿಯ ಸೋದರನೇ ಎಂಬುದು ಸ್ಪಷ್ಟವಾಗಿಲ್ಲ. ತಳಿಗೆನಾಡಿನ ಸಮಸ್ತಗೌಡ ಪ್ರಜೆಗಳೊಡಗೂಡಿ ಅಲ್ಲಿನ ಶಿವದೇವಾಲಯಕ್ಕೆ ಕೆಲವು ಭೂದಾನಗಳನ್ನು ನೀಡಿದುದನ್ನು ಈ ಶಾಸನ ತಿಳಿಸುತ್ತದೆ.

ಈ ಎಲ್ಲ ಅಂಶಗಳನ್ನು ಈ ಕೆಳಕಂಡ ತೀರ್ಮಾನಗಳಿಗೆ ಬಂದಿರಬಹುದಾಗಿದೆ.

*೧. ಬಲ್ಲಪ್ಪದಂಡನಾಯಕನ ತಂದೆ ಸೋಮಯ ದಂಡನಾಯಕನು ಶೈವನಾಗಿದ್ದು, ಸೋಮನಾಥ ಲಿಂಗವನ್ನು ಸೋಮನಾಥಪುರದಲ್ಲಿ ಪ್ರತಿಷ್ಠಾಪಿಸುವ ಮೂಲಕ ಸೋಮನಾಥನ ಆರಾಧನಾ ಪಂಥವನ್ನು ದಕ್ಷಿಣದಲ್ಲಿ ಪ್ರಚುರಗೊಳಿಸಿದನು ಎಂಬ ಅಭಿಪ್ರಾಯವಿದೆ.[೮೭] ಇವನ ಮೊಮ್ಮಗನಾದ ಇರುಗಿಸೆಟ್ಟಿಯು ಶಿವೈಕ್ಯನಾದ ವಿಚಾರ ಶಾಸನೋಕ್ತವೇ ಆಗಿದೆ. ಆದುದರಿಂದ ಬಲ್ಲಪ್ಪದಂಡನಾಯಕನ ವಂಶೀಯರು ಮೂಲತಃ ಶೈವರಾಗಿದ್ದರೆನ್ನಬಹುದು. ಆದರೂ ಆಳರಸರಂತೆ ಜೈನ, ಶೈವ, ವೈಷ್ಣವ ದೇಗುಲಗಳಿಗೆ ವಿಪುಲವಾಗಿ ದಾನಗಳನ್ನು ನೀಡಿರುವುದು ಅವರ ಧರ್ಮಸಹಿಷ್ಣುತಾ ಮನೋಭಾವವನ್ನು ಸುವ್ಯಕ್ತಗೊಳಿಸುತ್ತದೆ.*

*೨. ಸೋಮಯದಂಡನಾಯಕನಿಗಿದ್ದ 'ನಿಯೋಗ ಯೋಗಂಧರ' ಎಂಬ ಬಿರುದು ಅವನು ವಾಣಿಜ್ಯ ಸಂಬಂಧಿ ವಿಚಾರಗಳಲ್ಲಿ ನಿಷ್ಣಾತನಾಗಿದ್ದುದನ್ನು ತಿಳಿಸುತ್ತದೆಂದು ಅಭಿಪ್ರಾಯಿಸಲಾಗಿದೆ.[೮೮] ಅವನ ಮೊಮ್ಮಕ್ಕಳ ಹೆಸರಿನಲ್ಲಿ 'ಸೆಟ್ಟಿ' ಎಂಬ ವಣಿಜವೃತ್ತಿ ಸೂಚಿಪದ ಮಿಳಿತವಾಗಿರುವುದನ್ನೂ ಅವನ ಮೊಮ್ಮಗ ಪೆರಿಯಪೆರುಮಾಳಸೆಟ್ಟಿಯನ್ನು ಶಾಸನಗಳು ಸ್ಪಷ್ಟವಾಗಿ ವೈಶ್ಯ ನಗರ್ತನೆಂದು ಕರೆದಿರುವುದನ್ನು ಗಮನಿಸಿದರೆ ಬಹುಶಃ ಬಲ್ಲಪ್ಪದಂಡನಾಯಕನ ವಂಶೀಯರು ಮೂಲತಃ ವರ್ತಕ ವರ್ಗ (ನಗರ್ತ)ಕ್ಕೆ ಸೇರಿದ್ದವರಿರಬಹುದು.*

*೩. ಬಲ್ಲಪ್ಪದಂಡನಾಯಕನ ವಂಶೀಯರಲ್ಲಿ ಅನೇಕರು ಸಂತೆನಿರ್ಮಾಣ, ಕೆರೆಕಟ್ಟೆಗಳನ್ನು ನಿರ್ಮಿಸಿದುದನ್ನು ಹಾಗೂ ಹಳ್ಳಿಗಳನ್ನು ಅಗ್ರಹಾರಗಳನ್ನಾಗಿಸಿ ಶಿಕ್ಷಣದ ಅಭಿವೃದ್ಧಿಗೆ ಅನುವು ಮಾಡಿಕೊಟ್ಟಿದುದು ಅವರ ಸಾರ್ವಜನಿಕ ಹಿತಾಸಕ್ತಿಯ ಧೋರಣೆಯನ್ನು ಬಿಂಬಿಸುತ್ತದೆ.*

*೪. ಈ ವಂಶೀಯರಿಗಿದ್ದ ಬಿರುದುಗಳನ್ನು ಅನುಲಕ್ಷಿಸಿದರೆ, ಅವು ಅವರ ದಕ್ಷತೆ, ಶೌರ್ಯ ಮತ್ತು ಮೌಲಿಕ ಸೇವೆಗಳಿಗೆ ಸಂದ ಗೌರವಗಳೆಂಬುದರಲ್ಲಿ ಸಂಶಯವಿಲ್ಲ.*

*೫. ೩ನೆಯ ಬಲ್ಲಾಳನು ತಮಿಳುನಾಡಿನಲ್ಲಿ ಯುದ್ಧನಿರತನಾಗಿದ್ದಾಗ ಇತ್ತ ಹೊಯ್ಸಳ ಸಾಮ್ರಾಜ್ಯವನ್ನು ಕಾಪಾಡುವ ಗುರುತರ ಜವಾಬ್ದಾರಿಯನ್ನು ನಿರ್ವಹಿಸುತ್ತ ಸೋಮೆಯದಂಡನಾಯಕನು ಪ್ರಬಲನಾಗಿರುತ್ತಾನೆ. ಸೋಮೆಯದಂಡನಾಯಕನ ಮರಣಾನಂತರದಲ್ಲಿ ೩ನೆಯ ಬಲ್ಲಾಳನು ಹೊಯ್ಸಳ ಸಾಮ್ರಾಜ್ಯದ ರಕ್ಷಣೆಯ ಕಡೆ ಹೊರಳಿದಾಗ, ಬಲ್ಲಪ್ಪ ದಂಡನಾಯಕನು ಹೊಯ್ಸಳ ಪ್ರಾಂತ್ಯದ ದಕ್ಷಿಣ ಭಾಗದಲ್ಲಿ ರಾಜ್ಯರಕ್ಷಣೆಯ ಮಹತ್ವದ ಕಾರ್ಯ ಭಾರವನ್ನು ಹೊತ್ತಿರುತ್ತಾನೆ.*

*೬. ಕ್ರಿ.ಶ. ೧೩೬೧ರ ಶಾಸನವೇ ಬಲ್ಲಪ್ಪದಂಡನಾಯಕನ ಉಲ್ಲೇಖವಿರುವ ಕೊನೆಯ ಶಾಸನ. ಇದಾದ ನಂತರದ ಕೆಲವೇ ವರ್ಷಗಳಲ್ಲಿ ಅಂದರೆ ಕ್ರಿ.ಶ. ೧೩೭೧ರಿಂದ ಈಚೆಗೆ ಹೊಸಕೋಟೆ, ಕೋಲಾರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಾಗಣ್ಣ ಒಡೆಯನೆಂಬ ವಿಜಯನಗರ ಸಾಮ್ರಾಟರ ಅಧೀನಧಿಕಾರಿ ಪ್ರವರ್ಧಮಾನಕ್ಕೆ ಬಂದಿರುವುದನ್ನು ಶಾಸನಗಳು ಸ್ಪಷ್ಟಗೊಳಿಸುತ್ತವೆ. ಅವನ*

# ಬಲ್ಲಪ್ಪದಂಡನಾಯಕನ ವಂಶಾವಳಿ



ಪ್ರಾಬಲ್ಯವೇ ಕಾರಣವಾಗಿ ಬಲ್ಲಪ್ಪದಂಡ ನಾಯಕನ ವಂಶೀಯರು ತೆರೆಮರೆಗೆ ಸರಿದಿರಬಹುದೆ? ತತ್ಕಾರಣವಾಗಿ ಇರುಗಿಸೆಟ್ಟಿ, ಪೆಮ್ಮಿಸೆಟ್ಟಿ ಮೊದಲಾದವರು ಕೋಲಾರ ಪ್ರಾಂತ್ಯದಲ್ಲಿ ತಮ್ಮ ಮೂಲವೃತ್ತಿಯಾದ ವ್ಯಾಪಾರ ವಹಿವಾಟುಗಳಲ್ಲಿ ತೊಡಗಿದ್ದಿರಬಹುದು ಎನಿಸುತ್ತದೆ.

ಒಟ್ಟಿನಲ್ಲಿ ಬಲ್ಲಪ್ಪದಂಡನಾಯಕನ ವಂಶೀಯರು ಕಲ್ಯಾಣದ ಚಾಲುಕ್ಯ ದೊರೆ ಜಗದೇಕಮಲ್ಲನ ಆಳ್ವಿಕೆಯ ಕಾಲದಿಂದ ವಿಜಯನಗರದ ದೊರೆ ಒಂದನೆಯ ದೇವರಾಯನ ಆಳ್ವಿಕೆಯ ಕಾಲದವರೆಗೂ ಕರ್ನಾಟಕದ ದಕ್ಷಿಣಭಾಗದ ಸ್ಥಳೀಯ ಆಡಳಿತದಲ್ಲಿ ಆಳರಸರಿಗೆ ನಿಷ್ಠಾವಂತ ಅಧಿಕಾರಿಗಳಾಗಿ ಕಾರ್ಯನಿರ್ವಹಿಸಿದ್ದಾರೆ. ಈ ವಂಶೀಯರ ಒಟ್ಟು ೬೫ ಶಾಸನಗಳು ಸ್ಥಳೀಯ ಚರಿತ್ರೆಯ ದೃಷ್ಟಿಯಿಂದ ಮುಖ್ಯವೆನಿಸಿವೆ.

[ಈ ಲೇಖನದ ವಿಷಯವನ್ನು ಸೂಚಿಸಿ, ಮಾರ್ಗ ದರ್ಶನ ನೀಡಿದ ನನ್ನ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿಯವರಿಗೂ ಹಾಗೂ ಲೇಖನವು ಸಿದ್ಧಗೊಳ್ಳುವ ಹಂತದಲ್ಲಿ ಸಲಹೆ ಸೂಚನೆಗಳನ್ನು ನೀಡಿದ ಗೆಳೆಯರಾದ ಶ್ರೀ ಎಸ್. ಕಾರ್ತಿಕ್ ಅವರಿಗೂ ಶ್ರೀ ಸಂಕಂ ಗೋವರ್ಧನ ಅವರಿಗೂ ನಾನು ಕೃತಜ್ಞಳಾಗಿದ್ದೇನೆ.]

# ಹೊಯ್ಸಳ ಮಹಾಪ್ರಧಾನ ಸೋಮಯದಂಡನಾಯಕ ಮತ್ತು ಅವನ ಮಕ್ಕಳಾದ ಸಿಂಗೆಯ ದಂಡನಾಯಕ ಹಾಗೂ ಬಲ್ಲಪ್ಪದಂಡನಾಯಕನ ಶಾಸನಗಳು ದೊರೆತಿರುವ ಸ್ಥಳಗಳು



❖ ಸೋಮಯದಂಡನಾಯಕನ ಶಾಸನಗಳು

○ ಸಿಂಗಯ್ಯ ದಂಡನಾಯಕನ ಶಾಸನಗಳು

✳ ಬಲ್ಲಪ್ಪದಂಡನಾಯಕನ ಶಾಸನಗಳು

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. A Venkatasubbayya : 'Ballappa Dandanayaka', *Journal of Indian History,* Vol. XV, Part-2, Madras, 1936. P. 149-160.

೨. ಎಪಿಗ್ರಾಫಿಯಾ ಕರ್ಣಾಟಿಕಾ (ರೈಸ್ ಆವೃತ್ತಿ), IX, ಬೆಂಗಳೂರು, ೧೩೩.

೩. ಈ ಶಾಸನದ ಸಾರಾಂಶವನ್ನು ಡಾ. ಪಿ.ವಿ. ಕೃಷ್ಣಮೂರ್ತಿಯವರ ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಪೂರ್ವ ತಾಲೂಕು ಒಂದು ಅಧ್ಯಯನ ಲೇಖನದಿಂದ ತೆಗೆದುಕೊಂಡಿರುತ್ತೇನೆ. (ಇತಿಹಾಸ ದರ್ಶನ ಸಂಪುಟ ೧೯, ೨೦೦೫).

೪. ಡಾ. ವಸುಂಧರಾ ಫಿಲಿಯೋಜಾರವರು ತಮ್ಮ 'ವಿಜಯನಗರ ಸಾಮ್ರಾಜ್ಯದ ಸ್ಥಾಪನೆ' ಕೃತಿಯಲ್ಲಿ ಕೋಲಾರದಲ್ಲಿರುವ ಕಂಪಣನ ಶಾಸನದ ಕಾಲವನ್ನು ಪುನರ್ ಪರಿಶೀಲಿಸಿ, ಇದೇ ಸಂಗಮ ದೊರೆಗಳ ಅತ್ಯಂತ ಪ್ರಾಚೀನ ಶಾಸನ (ಕ್ರಿ.ಶ. ೧೩೧೩) ಎಂದು ದೃಢೀಕರಿಸಿದ್ದಾರೆ. ಇದೇ ಶಾಸನದ ಕಾಲವನ್ನು ಲೂಯಿ ರೈಸ್‌ರವರು ಕ್ರಿ.ಶ. ೧೩೭೩ ಎಂದಿದ್ದಾರೆ. ಎಂ.ಜಿ. ನಾಗರಾಜ್ ಅವರು ಇವರಿಬ್ಬರೂ ನೀಡಿರುವ ಪಾಠವನ್ನು ಮತ್ತಷ್ಟು ಪರಿಷ್ಕರಿಸಿ (**ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಹೊಸಪೇಟೆ, ೨೦೦೪, ಪುಟ ೧೮೪–೧೮೬) ಈ ಶಾಸನದ ಕಾಲ ಕ್ರಿ.ಶ. ೧೩೧೩ ಎಂದಿದ್ದಾರೆ. ಎಂ.ಜಿ. ಮಂಜುನಾಥ್ ಅವರು (ವಿಜಯನಗರ ಅಧ್ಯಯನ, ಸಂಪುಟ ೧೦, ಪುಟ ೫) ಇದೇ ಶಾಸನವಿದ್ದ ಸ್ಥಳಕ್ಕೆ ಭೇಟಿ ನೀಡಿ ಶಾಸನದ ಪಡಿಯಚ್ಚು ತೆಗೆದು ಪಾಠಪರಿಶೀಲನೆ ಮಾಡಿ ಈ ಶಾಸನದ ಕಾಲ ಕ್ರಿ.ಶ. ೧೩೭೩ ಎಂದು ಅಭಿಪ್ರಾಯಪಟ್ಟಿದ್ದಾರೆ.

೫. ARIE-1977-78, Archeological survey of India, New Delhi, [Reprint], 1986, Page 117.

೬ ಎ.ಕ. X, (ರೈಸ್ ಆವೃತ್ತಿ), ಮಾಲೂರು, ೧೨, ೧೩.

೭. ಎ.ಕ. X, (ರೈಸ್ ಆವೃತ್ತಿ), ಚಿಂತಾಮಣಿ, ೫೩.

೮. ಅದೇ. ಕೋಲಾರ, ೧೬.

೯. ಎ.ಕ. IX, (ರೈಸ್ ಆವೃತ್ತಿ), ಹೊಸಕೋಟೆ, ೯೦.

೧೦. ಅದೇ. ೭೫.

೧೧. ಎ.ಕ. VI, (ರೈಸ್ ಆವೃತ್ತಿ), ಚಿಕ್ಕಮಗಳೂರು, ೧೦೫.

೧೨. ಅದೇ. (ರೈಸ್ ಆವೃತ್ತಿ), ಶೃಂಗೇರಿ, ೧. (ಈ ಶಾಸನದಲ್ಲಿ ಬಲ್ಲಪದಂಡನಾಯಕನು ಯಾ ೯ ಅಳಿಯನಾಗಿದ್ದನು ಎಂಬುದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ.)

೧೩. MAR. ೧೯೩೩, ಶೃಂಗೇರಿ, ೨.

೧೪. ಎ.ಕ. X, (ರೈಸ್ ಆವೃತ್ತಿ), ಮಾಲೂರು, ೧.

೧೫. ಈ ಶಾಸನದ ಸಾರಾಂಶವನ್ನು ಶ್ರೀ ಸಂಕಂ ಗೋವರ್ಧನ ಅವರ 'ತೇಕಲ್ ವರದರಾಜಸ್ವಾಮಿ ದೇವಾಲಯದ ಶಾಸನಗಳು' ಲೇಖನದಿಂದ ತೆಗೆದುಕೊಂಡಿರುತ್ತೇನೆ. [ಇತಿಹಾಸ ದರ್ಶನ, ಸಂಪುಟ ೨೧, ೨೦೦೬].

೧೬. **ಗುಣಮಧುರ**, (ಡಾ. ದೇವರಕೊಂಡಾರೆಡ್ಡಿಯವರ ಅಭಿನಂದನ ಗ್ರಂಥ). ಸಂಪಾದಕರು: ಡಾ. ಪಿ.ವಿ. ಕೃಷ್ಣಮೂರ್ತಿ ಮತ್ತು ಇತರರು ಬೆಂಗಳೂರು, ೨೦೧೦, ಪುಟ ೪೩೦.

೧೭. ಈ ಪ್ರದೇಶಗಳಲ್ಲಿ ಸಂಗಮ ಅರಸರ ಆರಂಭದ ಶಾಸನಗಳು ದೊರೆತಿರುವುದನ್ನು ಡಾ. ಕೂ.ಸ. ಅಪರ್ಣಾರವರು ಗುರುತಿಸಿದ್ದಾರೆ. (ನೋಡಿ: **ಸಂಗಮರ ಕಾಲದ ದೇವಾಲಯಗಳು**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೭–೦೮).

೧೮. ಎ.ಕ. X, (ರೈಸ್ ಆವೃತ್ತಿ), ಮಾಲೂರು, ೧೦.

೧೯. ಅದೇ. ೨೮.

೨೦. ಎ.ಕ. III, (ರೈಸ್ ಆವೃತ್ತಿ), ಮಳವಳ್ಳಿ, ೧೦೪.

೨೧. ಎ.ಕ. IX, (ರೈಸ್ ಆವೃತ್ತಿ), ಹೊಸಕೋಟೆ, ೧೩೪, ೧೩೭.

೨೨. ARIE-1902, Archeological survey of India, New Delhi, (Reprint) 1986, Page-10, 11.

೨೩. ಎ.ಕ. IX, (ರೈಸ್ ಆವೃತ್ತಿ), ಚನ್ನಪಟ್ಟಣ, ೧೮೫.

೨೪. ಅದೇ. ಬೆಂಗಳೂರು, ೪೭.

೨೫. ಅದೇ. ೧೦೧.

೨೬ ಎ.ಕ. IX, (ರೈಸ್ ಆವೃತ್ತಿ), ಹೊಸಕೋಟೆ ೯೦, ೯೬; ಎ.ಕ. X, (ರೈಸ್ ಆವೃತ್ತಿ), ಬಂಗಾರಪೇಟೆ, ೨೮; ಎ.ಕ. X, (ರೈಸ್ ಆವೃತ್ತಿ), ಮಾಲೂರು ೮೨; ಎ.ಕ. X, (ರೈಸ್ ಆವೃತ್ತಿ), ಕೋಲಾರ ೩೨.

೨೭. ಚಿತ್ರದುರ್ಗ [EC XI, (ರೈಸ್ ಆವೃತ್ತಿ), 04, 06], ಕೋಲಾರ [EC X, (ರೈಸ್ ಆವೃತ್ತಿ), 102], ಮುಳಬಾಗಿಲು [EC X. (ರೈಸ್ ಆವೃತ್ತಿ), 148], ಹೊಳಲ್ಕೆರೆ [EC XI, (ರೈಸ್ ಆವೃತ್ತಿ), 3], ಚಾಮರಾಜನಗರ [EC IV. (ರೈಸ್ ಆವೃತ್ತಿ), 64], ತಾಲೂಕುಗಳ ಶಾಸನೋಕ್ತ ಬಲ್ಲಪ್ಪದಂಡನಾಯಕರು ಸೋಮಯದಂಡನಾಯಕನ ಮಗ ಬಲ್ಲಪ್ಪದಂಡನಾಯಕನಿಗಿಂತ ಭಿನ್ನರು.

೨೮. ಎ.ಕ. X, (ರೈಸ್ ಆವೃತ್ತಿ), ಮಾಲೂರು, ೧೮.

೨೯. ಅದೇ. ಮುಳಬಾಗಿಲು, ೧೬೦.

೩೦. ಎ.ಕ. Xi (ರೈಸ್ ಆವೃತ್ತಿ), ದಾವಣಗೆರೆ

೩೦ಅ. ನಾಗಮಂಗಲ [EC. IV (ರೈಸ್ ಆವೃತ್ತಿ), 93] ಶಾಸನೋಕ್ತ ನಂನವೆ, ಅರಸೀಕೆರೆಯ [V. (ರೈಸ್ ಆವೃತ್ತಿ), 71, 130] ರೇಕಲೆ ಮತ್ತು ಚನ್ನರಾಯಪಟ್ಟಣ [V. (ರೈಸ್ ಆವೃತ್ತಿ), 210, 268], ದೇವನಹಳ್ಳಿ [IX. (ರೈಸ್ ಆವೃತ್ತಿ), 50] ಹೊನ್ನಾಳಿ [VII. (ರೈಸ್ ಆವೃತ್ತಿ), 38] ತಾಲೂಕುಗಳ ಶಾಸನೋಕ್ತ ಮೈಲೆಯನಾಯಕ ಇವರು ಸೋಮಯದಂಡನಾಯಕನ ಪೂರ್ವಿಕರಿಗಿಂತ ಭಿನ್ನರು.

೩೧. Dr. M. Radha Patel : 'Life and Times of Hoyasala Narasimha III, Prasaranga, Mysore, 2001, Page-30.

೩೨. ಎ.ಕ. XII, (ರೈಸ್ ಆವೃತ್ತಿ), ತಿಪಟೂರು, ೦೨.

೩೩. ಎ.ಕ. XV, (ಹಾಸನ ಜಿಲ್ಲೆಯ ಪುರವಣಿ ಸಂಪುಟ) ಬೇಲೂರು, ೩೪೨.

೩೪. ಎ.ಕ. XII,(ರೈಸ್ ಆವೃತ್ತಿ), ತಿಪಟೂರು, ೦೪.

೩೫. ಎ.ಕ. XI, (ರೈಸ್ ಆವೃತ್ತಿ), ದಾವಣಗೆರೆ, ೩೬.

೩೬. ಎ.ಕ. III, (ರೈಸ್ ಆವೃತ್ತಿ), ಟಿ. ನರಸೀಪುರ, ೯೭.

೩೭. ಅದೇ ೧೦೧.

೩೮. ಎ.ಕ. VI, (ರೈಸ್ ಆವೃತ್ತಿ), ಕಡೂರು, ೪೯ ಮತ್ತು ೬೮.

೩೯. ಎ.ಕ. IX, (ರೈಸ್ ಆವೃತ್ತಿ), ಕನಕಪುರ, ೪೭.

೪೦. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ), ಕ.ಸಾ.ಪ., ಬೆಂಗಳೂರು, ೨೦೦೧, ಪುಟ ೭೫೪.

೪೧. ಎ.ಕ. V, (ರೈಸ್ ಆವೃತ್ತಿ), ಬೇಲೂರು, ೬೬.

೪೨. ಅದೇ. ೨೪.

೪೩. ಎ.ಕ. VII, (ರೈಸ್ ಆವೃತ್ತಿ), ಹೊನ್ನಾಳಿ, ೧೧೩, ೧೧೪.

೪೪. ಎ.ಕ. [ಮೈಸೂರು ವಿ.ವಿ.] ಸಂಪುಟ-೮, ಹೊಳೆನರಸೀಪುರ, ೧೦೩.

೪೫. ಅದೇ 103A.

೪೬ ಅದೇ ಸಂಪುಟ ೬, ಕೃಷ್ಣರಾಜಪೇಟೆ, ೧೦೦.

೪೬ಅ. [VII.(ರೈಸ್ ಆವೃತ್ತಿ), ಸೊರಬ 75], [V.(ರೈಸ್ ಆವೃತ್ತಿ), ಚನ್ನರಾಯಪಟ್ಟಣ 205, 109, 242], [V.(ರೈಸ್ ಆವೃತ್ತಿ), ಅರಸೀಕೆರೆ 48], [VIII. (ರೈಸ್ ಆವೃತ್ತಿ), ನಗರ 8],[VIII. (ರೈಸ್ ಆವೃತ್ತಿ), ಸಾಗರ 31] ತಾಲೂಕುಗಳ ಶಾಸನಗಳಲ್ಲಿ ಹಾಗೂ ತಮಿಳುನಾಡಿನ ಧರ್ಮಪುರಿ ಜಿಲ್ಲೆ, ಧರ್ಮಪುರಿ ತಾಲೂಕಿನ [T.V. Mahalingam : A Topgraphical list of inscripitions in the Tamil Nadu and Keral. Vol. II & Iv, Inscriptions No.s 06, 05, 07] ಶಾಸನಗಳಲ್ಲಿ ಉಕ್ತನಾಗಿರುವ ಸೋಮಯದಂಡನಾಯಕರು ಬಲ್ಲಪದಂಡನಾಯಕನ ತಂದೆ ಸೋಮಯದಂಡನಾಯಕನಿಗಿಂತ ಭಿನ್ನರು.

೪೭. ಎ.ಕ. IV, (ರೈಸ್ ಆವೃತ್ತಿ), ಕೃಷ್ಣರಾಜಪೇಟೆ, ೧೨.

೪೮. ಎ.ಕ. IX, (ರೈಸ್ ಆವೃತ್ತಿ), ಆನೇಕಲ್, ೮೪.

೪೯. ಎ.ಕ. IX, (ರೈಸ್ ಆವೃತ್ತಿ), ಆನೇಕಲ್, ೮೦.

೫೦. ಅದೇ. ಕನಕಪುರ, ೦೬.

೫೧. ಅದೇ. ಚನ್ನಪಟ್ಟಣ, ೧೦.

೫೨. ಅದೇ. ೩೧.

೫೩. ಎ.ಕ. ಸಂಪುಟ ೮, [ಮೈಸೂರು ವಿ.ವಿ.]ಹೊಳೆನರಸೀಪುರ, ೧೦೩.

೫೪. ಎ.ಕ. IX, (ರೈಸ್ ಆವೃತ್ತಿ), ಹೊಸಕೋಟೆ, ೧೦೪, 140A.

೫೫. [V. (ರೈಸ್ ಆವೃತ್ತಿ),ಅರಸೀಕೆರೆ 149], [IV. (ರೈಸ್ ಆವೃತ್ತಿ),ಕೆ.ಆರ್. ಪೇಟೆ 02], [IX. (ರೈಸ್ ಆವೃತ್ತಿ),ಚನ್ನಪಟ್ಟಣ 12], [VIII.(ರೈಸ್ ಆವೃತ್ತಿ), ತೀರ್ಥಹಳಿ 116], [VII. (ರೈಸ್ ಆವೃತ್ತಿ), ಹೊನ್ನಾಳಿ 111], ಶಿವಮೊಗ್ಗ [MAR. 1938, 81], [V. (ರೈಸ್ ಆವೃತ್ತಿ),ಬೇಲೂರು 57], [IV. (ರೈಸ್ ಆವೃತ್ತಿ), ಹುಣಸೂರು 82], [XI.(ರೈಸ್ ಆವೃತ್ತಿ), ಚಿತ್ರದುರ್ಗ 4] ಮತ್ತು ಧರ್ಮಪುರಿ ತಾಲೂಕಿನ [A Topographical list Inscriptions in the Tamil Nadu & Kerala, Vol. IV. Inscriptions no. S. 7, 23, 34] ಶಾಸನೋಕ್ತ ಸಿಂಗೆಯದಂಡನಾಯಕರು ಬಲ್ಲಪ್ಪದಂಡನಾಯಕನ ಸಹೋದರ ಸಿಂಗೆಯದಂಡನಾಯಕನಿಗಿಂತ ಭಿನ್ನರು

೫೬ ಅದೇ. (ರೈಸ್ ಆವೃತ್ತಿ),ಕೋಲಾರ, ೮೨.

೫೭. ಅದೇ. (ರೈಸ್ ಆವೃತ್ತಿ), ೧೨೪ ಬಿ.

೫೮. ಅದೇ. (ರೈಸ್ ಆವೃತ್ತಿ),೭೧.

೫೯. [X. (ರೈಸ್ ಆವೃತ್ತಿ),ಕೋಲಾರ 113], [XII. (ರೈಸ್ ಆವೃತ್ತಿ),ಸಿರಾ 104], [IX. (ರೈಸ್ ಆವೃತ್ತಿ),ಕನಕಪುರ 6] ತಾಲೂಕುಗಳ ಶಾಸನೋಕ್ತ ಇರುಗಿಸೆಟ್ಟಿಯವರು ಸಿಂಗಯದಂಡನಾಯಕನ ಮಗ ಇರುಗಿಸೆಟ್ಟಿಗಿಂತ ಭಿನ್ನರು.

೬೦. ಎ.ಕ. X, (ರೈಸ್ ಆವೃತ್ತಿ),ಕೋಲಾರ, ೨೦೧.

೬೧. ಅದೇ. (ರೈಸ್ ಆವೃತ್ತಿ), ೭೩.

೬೨. ಅದೇ.(ರೈಸ್ ಆವೃತ್ತಿ), ೬೭, ೮೦, ೧೦೫ ಶಾಸನಗಳಲ್ಲಿ ಉಕ್ತವಾಗಿರುವ ಇರುಗಿಸೆಟ್ಟಿಗೂ ಸಿಂಗಯದಂಡನಾಯಕನಿಗೂ ಇರುವ ಸಂಬಂಧ ಸ್ಪಷ್ಟವಿಲ್ಲ.

೬೩. ಎ.ಕ. X, (ರೈಸ್ ಆವೃತ್ತಿ),ಕೋಲಾರ, ೮೩.

೬೪. [ಎ.ಕ. IX (ರೈಸ್ ಆವೃತ್ತಿ), ದೇವನಹಳ್ಳಿ ೫೩ ] [IX. (ರೈಸ್ ಆವೃತ್ತಿ), ಬೆಂಗಳೂರು 61], [X. (ರೈಸ್ ಆವೃತ್ತಿ), ಶ್ರೀನಿವಾಸಪುರ 11] ಶಾಸನಗಳಲ್ಲಿ ಉಕ್ತನಾಗಿರುವ ಬಯಿರಸೆಟ್ಟಿಯರು ಸಿಂಗಯದಂಡನಾಯಕನ ಮಗ ಬಯಿರಸೆಟ್ಟಿಗಿಂತ ಭಿನ್ನರು.

೬೫. ಎ.ಕ. X, (ರೈಸ್ ಆವೃತ್ತಿ),ಕೋಲಾರ, ೭೦.

೬೬ ಅದೇ. (ರೈಸ್ ಆವೃತ್ತಿ), ೭೧.

೬೭. [IX. (ರೈಸ್ ಆವೃತ್ತಿ), ಜಗಳೂರು 09] ಶಾಸನೋಕ್ತ ಪೆಮ್ಮಿಸೆಟ್ಟಿಯು ಸಿಂಗಯ ದಂಡನಾಯಕನ ಮಗನಾದ ಪೆಮ್ಮಿಸೆಟ್ಟಿಗಿಂತ ಭಿನ್ನನು.

೬೮. ಎ.ಕ. IX. (ರೈಸ್ ಆವೃತ್ತಿ), ಹೊಸಕೋಟೆ, ೫೦.

೬೯. ಎ.ಕ. X. (ರೈಸ್ ಆವೃತ್ತಿ), ಕೋಲಾರ, ೩೯.

೭೦. ಅದೇ. (ರೈಸ್ ಆವೃತ್ತಿ), ಮುಳಬಾಗಿಲು, ೭೪.

೭೧. ಎ.ಕ. V. (ರೈಸ್ ಆವೃತ್ತಿ), ಬೇಲೂರು, ೧೫೦.

೭೨. ಅದೇ. (ರೈಸ್ ಆವೃತ್ತಿ),೧೬೪, ೧೮೭.

೭೩. [IX, (ರೈಸ್ ಆವೃತ್ತಿ), ಚನ್ನಪಟ್ಟಣ 46], ಹೊನ್ನಾಳಿ [VII. (ರೈಸ್ ಆವೃತ್ತಿ), ಚನ್ನಪಟ್ಟಣ 07], ತಿಪಟೂರು [XII. (ರೈಸ್ ಆವೃತ್ತಿ), ಚನ್ನಪಟ್ಟಣ 40], ತಾಲೂಕುಗಳ ಶಾಸನೋಕ್ತ ಮಲ್ಲಿದೇವರ ದಂಡನಾಯಕರು ಹಾಗೂ ೩ನೆಯ ಬಲ್ಲಾಳರ ಸೋದರ ಮಲ್ಲಿದೇವನು, ಸೋಮಯದಂಡನಾಯಕನ ಅಳಿಯ ಮಲ್ಲಿದೇವದಂಡನಾಯಕರಿಗಿಂತ ಭಿನ್ನರು.

೭೪. ಎ.ಕ. XII. (ರೈಸ್ ಆವೃತ್ತಿ), ತುಮಕೂರು, ೪೯.

೭೫. ಎ.ಕ. V. (ರೈಸ್ ಆವೃತ್ತಿ), ಬೇಲೂರು, ೧೬೭.

೭೬. ಎ.ಕ. IX. (ರೈಸ್ ಆವೃತ್ತಿ), ಚನ್ನಪಟ್ಟಣ, ೬೫.

೭೭. ಎ.ಕ. XII. (ರೈಸ್ ಆವೃತ್ತಿ), ತುಮಕೂರು, ೫೬.

೭೮. ಎ.ಕ. V. (ರೈಸ್ ಆವೃತ್ತಿ), ಬೇಲೂರು, ೧೬೬.

೭೯. ಅದೇ.(ರೈಸ್ ಆವೃತ್ತಿ), ೧೬೫.

೮೦. ಎ.ಕ. VI. (ರೈಸ್ ಆವೃತ್ತಿ), ತರೀಕೆರೆ, ೮೮.

೮೧. ಎ.ಕ. ಸಂಪುಟ ೯, [ಮೈಸೂರು ವಿ.ವಿ.]ಬೇಲೂರು ೪೨೭.

೮೨. ಎ.ಕ. V. (ರೈಸ್ ಆವೃತ್ತಿ), ಹಾಸನ, ೧೮೧.

೮೩. ಅದೇ. (ರೈಸ್ ಆವೃತ್ತಿ), ೧೮೨.

೮೪. ಅದೇ. (ರೈಸ್ ಆವೃತ್ತಿ), ೧೬೪.

೮೫. ಅರಸೀಕೆರೆ [MAR 1837, page 131-136, MAR 1938, page 91 & 102], [XII. (ರೈಸ್ ಆವೃತ್ತಿ), ತಿಪಟೂರು 101, 104], ಕಡೂರು [VI. 110, 111, 124], ಸಾಗರ [VIII.(ರೈಸ್ ಆವೃತ್ತಿ), ತಿಪಟೂರು 29], [XI.(ರೈಸ್ ಆವೃತ್ತಿ), ಚಿತ್ರದುರ್ಗ 1] ತಾಲೂಕುಗಳ ಶಾಸನಗಳಲ್ಲಿ ಕಂಡುಬರುವ ಮಾಚಯದಂಡನಾಯಕರು ದಂಡನಾಯಕನ ಅಳಿಯನದ ಮಾಚಯದಂಡನಾಯಕನಿಗಿಂತ ಭಿನ್ನರು.

೮೫ಅ. ಎ.ಕ.IX. (ರೈಸ್ ಆವೃತ್ತಿ), ಕನಕಪುರ ೭೨

೮೬. ಎ.ಕ. ಸಂಪುಟ–೧೧, [ಮೈಸೂರು ವಿ.ವಿ.] ಚಿಕ್ಕಮಗಳೂರು, ೧೩೩.

೮೭. Dr. D.V. Devaraj : History of Somanathapura Temple complex, Directorate of Archeology and museums in Karnataka, Mysore, 1994, page-6.

೮೮. ಅದೇ. ಪುಟ ೨೦.

## ಇತರ ಆಧಾರ ಗ್ರಂಥಗಳು


೧. S. Settar : *The Hoysala temples,* Karnataka V.V. Dharawad and Kala yatra publications,. 1992.

೨. J. Duncan M. Derrett : *The Hoysalas,* oxford university press, 1957.

೪. D.C. Sircar : *Indian Epigraphical glossary,* Delhi, 1996.

ಡಾ. ಡಿ.ಎನ್. ಯೋಗೀಶ್ವರಪ್ಪ*

# ಮಗರೆ ಮುನ್ನೂರರ ಮೊದಲ ಬಾಡ ಕಳಿಕಟ್ಟೆಯ ಸಾಮಂತರು

ಅಂದು ಕಳಿಕಟ್ಟೆಯಾಗಿದ್ದ ಇಂದಿನ ಕಣಕಟ್ಟೆಯು ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಹೋಬಳಿ ಕೇಂದ್ರವಾಗಿದೆ. ಇಂದು ಬ್ರಾಹ್ಮಣರು ಮುಸಲ್ಮಾನರು ಹಾಗೂ ಹರಿಜನರೇ ಹೆಚ್ಚಾಗಿರುವ ಈ ಗ್ರಾಮದಲ್ಲಿ ಅನೇಕ ದೇವಾಲಯಗಳ ಅವಶೇಷಗಳು ಮತ್ತು ಪೂಜೆಗೊಳ್ಳುತ್ತಿರುವ ದೇವಾಲಯ ಹಾಗೂ ವಿಸ್ತಾರವಾದ ಕೆರೆಯನ್ನು ಕಾಣಬಹುದಾಗಿದೆ. ಮಂಡಲ ಪಂಚಾಯತಿ ಕೇಂದ್ರವಾಗಿರುವ ಈ ಊರಿನಲ್ಲಿ ಖಾಸಗಿ ಹೈಸ್ಕೂಲ್, ಕಾಲೇಜು, ಬ್ಯಾಂಕು, ಅಂಚೆಕಛೇರಿ ಇದೆ. ಇಂದು ಸಾಮಾನ್ಯ ಊರಾಗಿರುವ ಕಣಕಟ್ಟೆಯಲ್ಲಿ ಇದುವರೆಗೆ ೨೪ ಶಾಸನಗಳು ದೊರೆತಿವೆ. ಇವುಗಳಲ್ಲಿ ೨೦ ಶಾಸನಗಳು ಹೊಯ್ಸಳ ರಾಜರ ಕಾಲದವುಗಳಾಗಿದ್ದು ಉಳಿದವು ವಿಜಯನಗರದ ಆರಂಭಿಕ ಕಾಲಕ್ಕೆ ಸೇರಿವೆ. ಆದುದರಿಂದ ಈ ಊರು ಹೊಯ್ಸಳರ ಕಾಲದಲ್ಲಿ ಪ್ರಾಮುಖ್ಯತೆ ಪಡೆದ ಕೇಂದ್ರವಾಗಿತ್ತೆನ್ನಬಹುದು.

ಇಂಥಹ ಊರನ್ನು ಕುರಿತು ಮೊದಲ ಬಾರಿಗೆ ಡಾ. ಹನುಮನಾಯಕ ಅವರು ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ : ಕಳಿಕಟ್ಟೆ ಒಂದು ವಿಶ್ಲೇಷಣೆ ಎಂಬ ಲೇಖನವನ್ನು ಪ್ರಕಟಿಸಿದರು.[೧] ಈ ಲೇಖನವು ಆರ್ಥಿಕ ದೃಷ್ಟಿಕೋನವಿಟ್ಟು ಕೊಂಡು ಮಾತ್ರ ರಚಿಸಲಾಗಿದ್ದು, ನಗರೀಕರಣದ ಅಂಶಗಳನ್ನು ಕಣಕಟ್ಟೆಗೆ ಅನ್ವಯಿಸಲಾಗಿದೆ. ಆದ ಕಾರಣ ಇದೇ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಕಣಕಟ್ಟೆಯ ಸಮಗ್ರ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನ ಸದ್ಯ ಈ ನನ್ನ ಲೇಖನದಲ್ಲಿದೆ.

ಕಣಕಟ್ಟೆಯು ಪ್ರಮುಖ ವ್ಯಾಪಾರಿ ಮಾರ್ಗದಲ್ಲಿದ್ದು ಈ ಮಾರ್ಗವು ಹುಳಿಯಾರು, ಕಣಕಟ್ಟೆ, ಬಾಣಾವರ, ಜಾವಗಲ್, ದ್ವಾರಸಮುದ್ರ, ಬೇಲೂರುಗಳನ್ನು ನೇರವಾಗಿ ಸಂಪರ್ಕಿಸುತ್ತದೆ. ಇಂತಹ ಆಯಕಟ್ಟಿನ ಪ್ರದೇಶದಲ್ಲಿರುವ ಕಣಕಟ್ಟೆಯ ಪ್ರಾಚೀನ ಹೆಸರು ಕಳಿಕಟ್ಟೆ. ಈ ಪ್ರಾಚೀನ ಹೆಸರಿನ ಮೊದಲ ಉಲ್ಲೇಖ ನೊಳಂಬರಿಗೂ ಗಂಗರಿಗೂ ಕಳಿಕಟ್ಟೆಯಲ್ಲಿ ನಡೆದ ಯುದ್ಧದ ಬಗೆಗೆ ಇರುವ ವಿವರಣೆ ಶಾಸನದಲ್ಲಿ ಇದೆ.[೨] ಬಲಿವಂಶ ತಿಲಕನೆಂದೇ ಪ್ರಸಿದ್ಧಿಯಾಗಿದ್ದ ಸಾಮಂತ ಮುತ್ತರಸನು ಗಂಗರ ದೊರೆ ಸತ್ಯವಾಕ್ಯ ರಾಚಮಲ್ಲ ಪೆರ್ಮಾಡಿ ಎರೆಯಪ್ಪರಸನ ಸಾಮಂತನಾಗಿ ಆಸಂಧಿ ನಾಡನ್ನಾಳುತ್ತಿದ್ದನು. ಇವನಿಗೆ ಭುವನ ದಿಲೀಪ, ಕಲಿಕಲಿಸೂದ್ರಕ ಎಂಬ ಬಿರುದುಗಳಿದ್ದವು. ಈ ಸಂದರ್ಭದಲ್ಲಿ ನೊಳಂಬರಸ[೩] ಅಯ್ಯಪ್ಪದೇವನು[೪] ಗಂಗರ ಮೇಲೆ ಆಕ್ರಮಣ ಮಾಡಲು ಕಳಿಕಟ್ಟೆಯಲ್ಲಿ ಬೀಡುಬಿಟ್ಟಿದ್ದನು. ಆಗ ಗಂಗರು ಅವನನ್ನು ಎದುರಿಸಲು ತಮ್ಮ ಅಧೀನದಲ್ಲಿದ್ದ ಆಸಂಧಿ ನಾಡಿನ ಸಾಮಂತ ಮುತ್ತರಸನನ್ನು ಕಳುಹಿಸಿದರು. ಇವನ ಜೊತೆಯಲ್ಲಿ ಮುಳವಳ್ಳಿಯ ಗಂಗ ಸೇನಾಧಿಪತಿ ಮಾದಿವರ್ಮ[೫] ಮತ್ತು ಕಲಿಗಂಗ ಎಂಬುವರು ಸೇರಿಕೊಂಡರು. ಕಳಿಕಟ್ಟೆಯಲ್ಲಿ ಘನಘೋರ ಕದನ ನಡೆದು ಅಯ್ಯಪ್ಪದೇವನನ್ನು ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದರು. ಆದರೆ ಈ ಯುದ್ಧದಲ್ಲಿ ಇಬ್ಬರು ವೀರರು ಮಡಿದರು. ಈ ಕಳಿಕಟ್ಟೆ ಯುದ್ಧದ ಪರಿಣಾಮವಾಗಿ ಈ ವೀರರ ಪೈಕಿ ಸಾಮಂತ ಮುತ್ತರಸನ ವಂಶದವರಿಗೆ ಅರಕೆರೆ ಮತ್ತು ಕಳಿಕಟ್ಟೆಯನ್ನು ಪಡಿಮಾನ್ಯವಾಗಿ ಗಂಗರಸ ಎರೆಯಪ್ಪನು ನೀಡಿದನು ಎಂದು ಅರಕೆರೆ ಶಾಸನ ತಿಳಿಸಿದರೆ[೬] ಬದುಕಿ ಉಳಿದ ಮಾದಿವರ್ಮನಿಗೆ ಅವನ ಸಾಹಸ ಮೆಚ್ಚಿ ಗಂಗರಸರು ಕಲ್ನಾಡನ್ನು ನೀಡಿದರೆಂದು ಮುಗಳವಳ್ಳಿ ಶಾಸನವು ತಿಳಿಸುತ್ತದೆ.[೭] ಕಲಿಗಂಗ ಎಂಬುವನು ಯುದ್ಧದಲ್ಲಿ ಮರಣ ಹೊಂದಿದರೂ ಅವನ ವಂಶದವರಿಗೆ ಯಾವುದೇ ರೀತಿಯ ಸಹಾಯವಾಗಿಲ್ಲದಿದ್ದರೂ ಅವನ ಹೆಸರಿನಲ್ಲಿ ಕೇವಲ ವೀರಗಲ್ಲನ್ನು ಸ್ಥಾಪಿಸಲಾಗಿದೆ.[೮] ಇದರಿಂದ ಕಳಿಕಟ್ಟೆಯು ಗಂಗರ ಕಾಲದಲ್ಲಿಯೆ ಪ್ರಾಮುಖ್ಯತೆ ಪಡೆದ ಊರಾಗಿದ್ದು ಆಸಂಧಿನಾಡಿನ ಒಂದು ಭಾಗವಾಗಿ ಕಾರ್ಯ ನಿರ್ವಹಿಸುತ್ತಿತ್ತು ಎಂದು ಹೇಳಬಹುದು.

ಗಂಗ ಸಾಮ್ರಾಜ್ಯ ಪತನ ಹೊಂದಿದ ನಂತರ ಆ ರಾಜ್ಯದ ಬಹುಪಾಲು ಪ್ರದೇಶಗಳಿಗೆ ವಾರಸುದಾರರಾದ ಹೊಯ್ಸಳರಿಗೆ ಕಲ್ಯಾಣ ಚಾಲುಕ್ಯರು ಸಾರ್ವಭೌಮರಾದರೂ, ಪ್ರಾಯೋಗಿಕವಾಗಿ ಹೊಯ್ಸಳರೇ ಇಲ್ಲಿನ ಆಡಳಿತ ನಿರ್ವಹಣೆ ಮಾಡುತ್ತಿದ್ದುದು ಈಗಾಗಲೇ ಸಾಬೀತಾಗಿರುವ ಅಂಶವಾಗಿದೆ. ಗಂಗರ ಕಾಲದಿಂದಲೂ ರಾಜಕೀಯ ಆಗುಹೋಗುಗಳ

* ಸಹ ಪ್ರಾಧ್ಯಾಪಕ, ಇತಿಹಾಸ ವಿಭಾಗ, ಶ್ರೀ ಸಿದ್ಧಗಂಗಾ ಮಹಿಳಾ ಪದವಿ ಕಾಲೇಜು, ತುಮಕೂರು.

ಕೇಂದ್ರವಾಗಿ ಕಾರ್ಯ ನಿರ್ವಹಿಸುತ್ತಿದ್ದ ಆಸಂಧಿ ನಾಡು ಸಹಜವಾಗಿಯೇ ಹೊಯ್ಸಳರನ್ನು ಆಕರ್ಷಿಸಿತು. ಕ್ರಿ.ಶ. ೧೦೮೦ರ ವೇಳೆಗೆ ಹೊಯ್ಸಳರ ಆಶ್ರಯ ಪಡೆದ ಆಸಂಧಿ ಗಂಗರ ಶಾಖೆಯ ವೈಜರಸ ಎರೆಯಂಗನ ನಿಷ್ಠಾವಂತ ಸೇನಾನಿಯಾಗಿದ್ದನು.[೯] ಹೀಗೆ ಆಸಂಧಿಯ ಗಂಗ ಶಾಖೆಯೊಂದರ ಮೂಲಕ ಹೊಯ್ಸಳರು ತಮ್ಮ ಸೈನಿಕ ಶಕ್ತಿ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಂಡರು. ಆಸಂಧಿ ನಾಡಿನ ಗಡಿಪ್ರದೇಶವಾಗಿದ್ದ ಈ ಕಳಿಕಟ್ಟೆಯೂ ಕೂಡಾ ಹೊಯ್ಸಳರ ನಿಯಂತ್ರಣಕ್ಕೆ ಒಳಪಟ್ಟಿತು.

ಕಳಿಕಟ್ಟೆ ಆಸಂಧಿ ನಾಡಿಗೂ ಮತ್ತು ಮಗರೆ ನಾಡಿಗೂ ಇರುವ ಗಡಿ ಊರಾಗಿತ್ತು. ಮಗರೆ ನಾಡನ್ನು ಮಗರೆ ಮುನ್ನೂರು ಎಂದೂ ಆಸಂಧಿಯನ್ನು ಆಸಂಧಿ ಐನೂರು ಎಂದೂ ಕರೆಯಲಾಗುತ್ತಿತ್ತು. ಇವು ಗಂಗರ ಕಾಲದ ಪ್ರಸಿದ್ಧ ನಾಡುಗಳು. ಮಗರೆನಾಡು ಹೆಂಜೇರಿನಿಂದ ಆಳ್ವಿಕೆ ಮಾಡುತ್ತಿದ್ದ ನೊಳಂಬರಿಗೆ ಸೇರಿದ್ದ ಪ್ರದೇಶವಾಗಿದ್ದು ಅವರು ಕ್ರಿ.ಶ. ೯೭೪ರಲ್ಲಿ ಗಂಗದೊರೆ ಮಾರಸಿಂಹನಿಂದ ಸೋತು ತಮ್ಮ ರಾಜಧಾನಿಯನ್ನು ಕಂಪಿಲಿಗೆ ಬದಲಾಯಿಸಿ ಕಲ್ಯಾಣ ಚಾಲುಕ್ಯರಿಗೆ ನಿಷ್ಠರಾದರು. ಗಂಗರಾಜ್ಯಕ್ಕೆ ವಾರಸುದಾರರಾಗಿದ್ದ ಹೊಯ್ಸಳರ ದೃಷ್ಟಿ ಸಹಜವಾಗಿಯೇ ಮಗರನಾಡಿನ ಮೇಲೆ ಬಿದ್ದಿತ್ತು. ಆಗ ಮಗರ ರಾಜ್ಯವು ಕಲ್ಯಾಣ ಚಾಲುಕ್ಯರ ವಶದಲ್ಲಿತ್ತು.[೧೦] ನೊಳಂಬರು ತಮ್ಮ ಪೂರ್ವಜರಿಗೆ ಸೇರಿದ್ದ ಮಗರ ನಾಡನ್ನು ಪಡೆಯಲು ಹಾತೊರೆಯುತ್ತಿದ್ದರು. ಸಾಮಂತ ಭೀಮ, ಕಲ್ಯಾಣ ಚಾಲುಕ್ಯರ ಸಾಮಂತನಾಗಿದ್ದು, ಮಗರ ನಾಡಿನ ರಾಜಧಾನಿ ಹುಳಿಯಾರಿನಲ್ಲಿ ಆಳ್ವಿಕೆ ನಡೆಸುತ್ತಿದ್ದನು. ಇವನು ಹೊಯ್ಸಳ ವಿಷ್ಣುವರ್ಧನನ ಕಾಲಕ್ಕೆ (ಕ್ರಿ.ಶ. ೧೧೦೮-೧೧೪೨) ಹೊಯ್ಸಳರಿಗೆ ನಿಷ್ಠೆ ವ್ಯಕ್ತಪಡಿಸಿದನು. ಆದರೂ ಕೂಡಾ ವಿಷ್ಣುವರ್ಧನನಿಗೆ ಅವರ ಮೇಲೆ ನಂಬಿಕೆ ಇರಲಿಲ್ಲ. ಆದ್ದರಿಂದ ತನ್ನ ರಾಜ್ಯದ ರಕ್ಷಣೆಗೋಸ್ಕರ ಪ್ರಮುಖ ಆಯಕಟ್ಟಿನ ಪ್ರದೇಶಗಳನ್ನು ಬಲಪಡಿಸಿಕೊಳ್ಳಲು ನಿರ್ಧರಿಸಿದನು. ಇದರಿಂದಾಗಿ ಮಗರನಾಡು ಮತ್ತು ಆಸಂಧಿ ನಾಡಿಗೆ ಗಡಿಯಾಗಿದ್ದ ಕಳಿಕಟ್ಟೆಯನ್ನು ಅಭಿವೃದ್ಧಿಪಡಿಸಲು ಆಲೋಚಿಸಿ, ಸಮರ್ಥರಾದ ಅಧಿಕಾರಿಗಳನ್ನು ಸಾಮಂತರನ್ನು ಇಲ್ಲಿಗೆ ನೇಮಕ ಮಾಡುವುದರ ಮೂಲಕ ಆ ಭಾಗದ ಚಟುವಟಿಕೆಗಳ ಮೇಲೆ ಕಣ್ಣಿಡಲು ಯೋಚಿಸಿದನು.

ಕಳಿಕಟ್ಟೆಯನ್ನು **ಮಗರೆ ಮುನ್ನೂರರ ಮೊದಲ ಬಾಡ**[೧೧] ಎಂದು ಎಂಟು ಶಾಸನಗಳು ಹೇಳುತ್ತವೆ. ಮೊದಲ ಬಾಡ ಎನ್ನುವುದನ್ನು ಈಗಾಗಲೇ ಸಂಶೋಧಕರು ಪ್ರಮುಖ ಗ್ರಾಮ ಎಂದು ಗುರ್ತಿಸಿದ್ದಾರೆ.[೧೨] ಆದರೆ ಶಾಸನವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಆಸಂಧಿ ನಾಡಿಗೂ ಮಗರೆ ನಾಡಿಗೂ ಗಡಿಭಾಗದಲ್ಲಿರುವ ಈ ಗ್ರಾಮವು ಮಗರೆ ನಾಡಿಗೆ ಪ್ರವೇಶಿಸುವುದಕ್ಕೆ ಮೊದಲನೇ ಗ್ರಾಮವಾಗುತ್ತದೆ. ಏಕೆಂದರೆ ಕ್ರಿ.ಶ. ೧೧೨೯ ರಿಂದ ಕ್ರಿ.ಶ. ೧೨೦೮ ರೊಳಗಿನ ಅವಧಿಯಲ್ಲಿ ಕಣಕಟ್ಟೆಯಲ್ಲಿ ದೊರಕಿರುವ ಶಾಸನಗಳು ಈ ಊರನ್ನು ಮಗರೆ ಮುನ್ನೂರರ ಮೊದಲ ಬಾಡ ಎಂದು ಕರೆದಿದೆ. ಕ್ರಿ.ಶ. ೧೨೦೮ರ ನಂತರದ ಶಾಸನಗಳಲ್ಲಿ ಈ ಶಬ್ಧ ಪ್ರಯೋಗವಾಗದೆ ಕೇವಲ ಕಳಿಕಟ್ಟೆಯೆಂದೇ ಉಲ್ಲೇಖಮಾಡಿದೆ.[೧೩] ೧೦ನೇ ಶತಮಾನದ ಶಾಸನವು ಕೇವಲ ಕಳಿಕಟ್ಟೆಯೆಂದು[೧೪] ಉಲ್ಲೇಖಿಸಿದರೆ ಕ್ರಿ.ಶ. ೧೧೨೯ರಲ್ಲಿ ಮಗರೆ ಮುನ್ನೂರರ ಮೊದಲ ಬಾಡ ಕಳಿಕಟ್ಟೆ ಎಂದು ಮೊದಲ ಬಾರಿಗೆ ಉಲ್ಲೇಖವಾಗಿದೆ.[೧೫] ಆದ್ದರಿಂದ ೧೦ ರಿಂದ ೧೨ನೇ ಶತಮಾನದ ಮಧ್ಯಾವಧಿಯಲ್ಲಿ ಕಳಿಕಟ್ಟೆ ಮಗರೆ ಮುನ್ನೂರಕ್ಕೆ ಸೇರಿರಬೇಕು. ಮಗರೆ ನಾಡಿನ ಸಾಮಂತ ಭೀಮನ ಕಾಲದಲ್ಲಿ ಅವರು ಹೊಯ್ಸಳ ವಿಷ್ಣುವರ್ಧನನ (೧೧೦೮-೧೧೪೨) ಸಾಮಂತರಾಗಿದ್ದು ಆ ಸಂದರ್ಭದಲ್ಲಿ ಹೊಯ್ಸಳ ರಾಜ್ಯದ ದಕ್ಷಿಣಭಾಗದ ಒಂದು ಪ್ರಮುಖ ವ್ಯಾಪಾರಿ ಮಾರ್ಗದಲ್ಲಿದ್ದ ಈ ಗ್ರಾಮ ಆಯಕಟ್ಟಿನ ಸ್ಥಳದಲ್ಲಿದ್ದು ಮಗರೆ ನಾಡನ್ನು ಪ್ರವೇಶಿಸಲು ಮೊದಲನೆ ಗ್ರಾಮವಾಗಿತ್ತು ಎಂದು ಹೇಳಬಹುದು. ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿದ್ದ ಆಸಂಧಿ ನಾಡಿನ ಆಸಂಧಿ, ಮಗರೆ ನಾಡಿನ ಹುಳಿಯಾರು ನೀರ್ಗುಂದ ನಾಡಿನ ನೀರ್ಗುಂದ ಅರಸೀಕೆರೆ ಪ್ರದೇಶಗಳಂತೆ ಅಭಿವೃದ್ಧಿಪಡಿಸಲು ಅಲ್ಲದೆ ನೊಳಂಬವಾಡಿ ಮತ್ತು ಮಗರೆ ನಾಡನ್ನು ಬಗ್ಗುಬಡಿಯಲು ವಿಷ್ಣುವರ್ಧನನು ಯೋಚಿಸಿ ಕಳಿಕಟ್ಟೆಯನ್ನು ಚಿಮ್ಮುವ ಮೆಟ್ಟಿಲನ್ನಾಗಿ ಮಾಡಿ ಕೊಂಡನು.

**ಸಾಮಂತ ಸಿಂಗರಸ (ಕ್ರಿ.ಶ. ೧೧೨೫-೪೨) :** ಕಳಿಕಟ್ಟೆಯನ್ನು ಪ್ರಮುಖ ರಾಜಕೀಯ ಮತ್ತು ಆಡಳಿತ ಕೇಂದ್ರವನ್ನಾಗಿ ಮಾಡಲು ಹೊಯ್ಸಳ ವಿಷ್ಣುವರ್ಧನನು ಸಾಮಂತ ಸಿಂಗರಸನನ್ನು ನೇಮಕ ಮಾಡಿದನು ಎಂದು ಕ್ರಿ.ಶ. ೧೧೮೯ರ ಶಾಸನ ತಿಳಿಸುತ್ತದೆ.[೧೬]

> "ವಿಷ್ಣುವರ್ಧನ ಹೊಯ್ಸಳ ಬಿಟ್ಟಿದೇವನ ಬೆಸದಿಂ
> ಸಿಂಗರಸನರಸಿಯಕೆರೆಯಿಂದೆತ್ತಿಸಿತಂದು ಮಗರೆ
> ಮುಂನೂರರೊಳಗಣ ಮೊದಲ ಬಾಡಂ
> ಕಳಿಕಟ್ಟೆಯಂ................"

ಈ ಸಿಂಗರಸನು ಕಳಿಕಟ್ಟೆಗೆ ಬರುವುದಕ್ಕಿಂತ ಮೊದಲು ಅರಸೀಕೆರೆಯಲ್ಲಿದ್ದನು. ಈ ಅರಸೀಕೆರೆ ನೊಳಂಬವಾಡಿ ೩೨೦೦೦ದ ಕೋಗಳಿ ೫೦೦೦ ಕಂಪಣಮುತ್ತಗೆ ೩೦ ರಲ್ಲಿದೆ. (ಅಂದರೆ ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲ್ಲೂಕಿನಲ್ಲಿದೆ)

ಇಲ್ಲಿನ ನೊಳಂಬೇಶ್ವರನಿಗೆ ಸಿಂಘರಸನು ದಾನ ನೀಡಿದ್ದಾನೆ ಎಂದು ಶಾಸನವೊಂದರಲ್ಲಿ ಉಲ್ಲೇಖವಾಗಿದೆ.[೧೭]

ಸಾಮಂತ ಸಿಂಗರಸನ ತಂದೆ ಕಟ್ಟಾಳು ಪುಣಿಸಿಗ ತಾಯಿ ಚಟ್ಟಬ್ಬೆ. ಇವನು ಕಣಿಗಿಲುನ್ನಾಳಲು ಹುಟ್ಟಿದವನೆಂದು ಹೇಳಲಾಗಿದೆ.ಈ ಕಣಿಗಿಲು ತುಮಕೂರು ಜಿಲ್ಲೆಯ ಕುಣಿಗಲ್ ಆಗಿದ್ದು ಇದು ಕ್ರಿ.ಶ. ೧೧೩೮ರಲ್ಲಿ ಹೊಯ್ಸಳ ನಾಡಾಗಿತ್ತು. ಇದರಿಂದ ಅವನು ಕಣಕಟ್ಟೆಗೆ ಬರುವುದಕ್ಕಿಂತ ಮೊದಲು ಕಣಿಗಿಲು ನಾಡನ್ನು ಆಳ್ವಿಕೆ ಮಾಡುತ್ತಿದ್ದನೆಂದು ಹೇಳಬಹುದು. ನಂತರ ಅಲ್ಲಿಂದ ಅವನು ಅರಸೀಕೆರೆಗೆ ಹೋಗಿರಬಹುದು. ಇಂಥಹ ವೀರನಿಗೆ ಸಮಧಿಗತ ಪಂಚಮಹಾಶಬ್ದ, ಜಯಲಕ್ಷ್ಮಿಕಾನ, ಸೋಮಾನ್ವಯ ಕುಲಪ್ರದೀಪ, ಪರಭಳ ಸಾಧಕ, ಶಾರದಾದೇವಿ ಲಬ್ಧವರಪ್ರಸಾದ, ನೀತಿಚಾಣಾಕ್ಯ, ವೈರಿ ಮನೋಭಂಗ ಎಂಬ ಅನೇಕ ಬಿರುದುಗಳಿದ್ದವು. ಇವನ ಪೂರ್ವಿಕರೆಲ್ಲರೂ ವೀರರಾಗಿದ್ದರೆಂಬುದಕ್ಕೆ ಅವರಿಗೆ ಬಳಕೆಯಾಗಿರುವ ವಿಶೇಷಣಗಳು ಸಾಕ್ಷಿಯಾಗಿವೆ. ಉದಾ : ಕೂರಾಳು ಸುಭಗ, ಕಾಯ್ವರಗಂಡ ಭೂವಗ, ಕಟ್ಟಾಳು, ಕಾವನಿಪ ಪುಣುಸೆಗ.[೧೮]

ಇಂಥ ವೀರ ಕುಲದಲ್ಲಿ ಹುಟ್ಟಿ ಅರಸೀಕೆರೆಯಲ್ಲಿ ಹೊಯ್ಸಳ ಸಾಮಂತ ಅಧಿಕಾರಿಯಾಗಿ ಆಳ್ವಿಕೆ ಮಾಡುತ್ತಿದ್ದ ಸಿಂಗರಸನನ್ನು ಮಗರೆ ಮುನ್ನೂರರ ಮೊದಲ ಬಾಡ ಕಳಿಕಟ್ಟೆಗೆ ಹೊಯ್ಸಳ ವಿಷ್ಣುವರ್ಧನನು ನೇಮಕ ಮಾಡಿದನು. ಇವನನ್ನು ಏಕೆ ಅರಸೀಕೆರೆಯಿಂದ ಕಳಿಕಟ್ಟೆಗೆ ವರ್ಗಾವಣೆ ಮಾಡಲಾಯಿತು ಎಂಬುದಕ್ಕೆ ಕಾರಣಗಳು ತಿಳಿಯುವುದಿಲ್ಲ. ಪ್ರಾಯಶಃ ಮೊದಲೇ ನಾನು ಹೇಳಿದಂತೆ ಕಳಿಕಟ್ಟೆ ಆಯಕಟ್ಟಿನ ಸ್ಥಳ ಮಗರೆ ನಾಡಿಗೆ ಪ್ರವೇಶದ್ವಾರದಂತಿರುವ ಈ ಊರನ್ನು ಬಲಪಡಿಸುವುದರಿಂದ ಹೊಯ್ಸಳ ರಾಜ್ಯಕ್ಕೆ ತಡೆಗೋಡೆಯನ್ನು ನಿರ್ಮಿಸಬಹುದು ಎಂಬ ಆಲೋಚನೆಯಿಂದ ವಿಷ್ಣುವರ್ಧನನು ಇಂಥ ವೀರ ಕುಟುಂಬಕ್ಕೆ ಸೇರಿದ ಸಾಮಂತ ಸಿಂಗರಸನನ್ನು ಅಭಿವೃದ್ಧಿಯೇ ಕಾಣದಿದ್ದ ಒಂದು ಹಳ್ಳಿಗೆ ನೇಮಿಸಿರಬಹುದು. ಈ ವರ್ಗಾವಣೆ ಅವನಿಗೆ ನೀಡಿದ ಶಿಕ್ಷೆಯಂತೂ ಅಲ್ಲ. ಏಕೆಂದರೆ ಸಿಂಗರಸ ಇಲ್ಲಿಗೆ ಬಂದಮೇಲೆ ಅವನ ಯಾವ ಕಾರ್ಯಗಳಿಗೂ ವಿಷ್ಣುವರ್ಧನ ಅಡ್ಡಿ ಮಾಡದೆ ಇರುವುದು ಶಾಸನದಿಂದ ತಿಳಿಯುತ್ತದೆ.[೧೯]

ಸಾಮಂತ ಸಿಂಗರಸನು ಕ್ರಿ.ಶ. ೧೧೨೪ಕ್ಕಿಂತ ಕೆಲವು ವರ್ಷಗಳ ಮೊದಲು ಕಳಿಕಟ್ಟೆಗೆ ಆಗಮಿಸಿದನು. ಇವನ ಜೊತೆಯಲ್ಲಿ ನೈಷ್ಠಿಕ ಮತದಾಚಾರ್ಯ ಪರೇಶ್ವರ ಪಂಡಿತರ ಶಿಷ್ಯ ಕ್ರಿಯಾಶಕ್ತಿ ಪಂಡಿತರೂ, ಅಧಿಕಾರಿಗಳೂ, ವೀರರೂ ಆತನ ಪರಿವಾರವೆಲ್ಲ ಆಗಮಿಸಿತು. ಈ ಕುಟುಂಬದ ಆಗಮನದಿಂದ ಕಳಿಕಟ್ಟೆ ವಿಸ್ತಾರವಾಗತೊಡಗಿತು. ಶಿವಭಕ್ತನಾಗಿದ್ದ ಸಿಂಗರಸನು ಈ ಊರನ್ನು ದೇವಗೃಹಗಳಿಂದ ಅಲಂಕರಿಸಲು ತೀರ್ಮಾನಿಸಿದನು. ಕ್ರಿ.ಶ. ೧೧೨೪ರಲ್ಲಿ ಸಿಂಗೇಶ್ವರ ದೇವಾಲಯವನ್ನು ನಿರ್ಮಿಸಿ, ಆ ದೇವರ ಅಂಗಭೋಗ ನೈವೇದ್ಯ, ತಪೋಧನರ ಆಹಾರ ದಾನಕ್ಕೆ, ವಿದ್ಯಾದಾನಕ್ಕೆ ತನ್ನ ಗುರುಗಳಾದ ಕ್ರಿಯಾಶಕ್ತಿ ಪಂಡಿತರ ಪಾದವನ್ನು ತೊಳೆದು ಆ ಊರಿನ ಹಿರಿಯಕೆರೆಯ ಚಿಕ್ಕತೂಬಿನ ಬಯಲಲ್ಲಿ ಗದ್ದೆ ಮತ್ತು ದೇವಾಲಯದ ದಕ್ಷಿಣ ದಿಕ್ಕಿನಲ್ಲಿರುವ ಬೆದ್ದಲು ಭೂಮಿಯನ್ನು ದಾನ ಮಾಡಿದನು.[೨೦] ಇದರಿಂದ ಕ್ರಿ.ಶ. ೧೧೨೪ರ ವೇಳೆಗಾಗಲೇ ಕಣಕಟ್ಟೆಯಲ್ಲಿ ಕೆರೆ ಇದ್ದುದೂ, ಸಿಂಗೇಶ್ವರ ದೇವರು ಸಾಮಂತ ಸಿಂಗರಸನ ಹೆಸರಿನಲ್ಲಿ ನಿರ್ಮಾಣವಾದುದು ಎಂದು ಗೊತ್ತಾಗುತ್ತದೆ. ಈ ದಾನದಲ್ಲಿ ಕ್ರಿಯಾಶಕ್ತಿ ಪಂಡಿತರು ಸಿಂಗೇಶ್ವರ ದೇವರ ಸ್ತಾನಪತಿಯ ಮಗ ರಾಮದೇವರಿಗೆ ಸ್ವಲ್ಪ ಭಾಗವನ್ನು ಬಿಟ್ಟರು.[೨೧] ಇದರಿಂದ ಈ ಊರಿನಲ್ಲಿ ಈ ದೇವಾಲಯದ ಮೂಲಕ ಪುರೋಹಿತ ವರ್ಗ ಸೃಷ್ಟಿಯಾಗಿ, ರಾಜಕೀಯ ಕೇಂದ್ರವಾಗುವುದರ ಜೊತೆಗೆ ಧಾರ್ಮಿಕ ಕೇಂದ್ರವಾಗಿಯೂ ಬೆಳೆಯತೊಡಗಿತು. ಕ್ರಿ.ಶ. ೧೧೩೨ರಲ್ಲಿ ಇಲ್ಲಿ ಬೆಟ್ಟದ ಕಲಿದೇವರ ಲಿಂಗ ಪ್ರತಿಷ್ಠೆಯನ್ನು ಮಾಡಿ ಆ ದೇವರ ನೈವೇದ್ಯ, ನಂದಾದೀವಿಗೆ, ತಪೋಧನರ ಆಹಾರ ದಾನಕ್ಕೆ ಕಣಕಟ್ಟೆಯ ಹಿರಿಯಕೆರೆಯ ಕಲ್ಲುತೂಬಿನ ಬಳಿ ಗದ್ದೆ ಆ ಊರಿನ ಉತ್ತರಕ್ಕೆ ಬೆದ್ದಲು ಭೂಮಿಯನ್ನು ಸಿಕರಜ್ಜೀಯನ ಪಾದ ತೊಳೆದು ಧಾರಪೂರ್ವಕವಾಗಿ ನೀಡಿದನು.[೨೨] ಈ ದೇವಾಲಯವನ್ನು ಸಿಂಗರಸನು ಸಮಸ್ತ ಪ್ರಜೆಗಳನ್ನೂ ಸೇರಿಸಿಕೊಂಡು ನಿರ್ಮಿಸಿದ್ದು ಗಮನಾರ್ಹವಾಗಿದೆ. ಏಕೆಂದರೆ ದೇವಾಲಯ ನಿರ್ಮಾಣ ಮತ್ತು ದಾನ ಅಂದು ಉಳ್ಳವರಿಂದಲೇ ಆಗುತ್ತಿತ್ತು. ಆದರೆ ಸಿಂಗರಸನು ತನ್ನ ಪ್ರದೇಶದ ಎಲ್ಲ ಜನರನ್ನು ಈ ಕಾರ್ಯದಲ್ಲಿ ಭಾಗಿಯಾಗುವಂತೆ ಮಾಡಿರುವುದು ವಿಶೇಷ.

ಒಟ್ಟಾರೆ ಹೇಳುವುದಾದರೆ ಸಿಂಗರಸನು ಕಳಿಕಟ್ಟೆಯನ್ನು ಆಡಳಿತ ಕೇಂದ್ರವನ್ನಾಗಿ ಮಾಡಿದ್ದಲ್ಲದೆ ಅಲ್ಲಿ ಶೈವ ಪ್ರಾಧಾನ್ಯತೆ ಪಡೆಯಲು ಕಾರಣನಾದನು. ಇವನ ಆಗಮನದಿಂದ ಕಳಿಕಟ್ಟೆ ಮತ್ತು ಅರಸೀಕೆರೆಯ ಸಂಬಂಧಗಳು ಅಂದರೆ ಹೊಯ್ಸಳ ಮತ್ತು ನೊಳಂಬರ ಸಂಬಂಧಗಳು ಉತ್ತಮವಾದವು. ಇದರಿಂದಾಗಿ ಕಣಕಟ್ಟೆ ಪ್ರಗತಿ ಹೊಂದಿತು. ಇವನು ೧೧೨೪ರಿಂದ ಕ್ರಿ.ಶ. ೧೧೪೧ರವರೆಗೆ ಸುಮಾರು ೧೭ ವರ್ಷಗಳ ಕಾಲ ಕಣಕಟ್ಟೆಯಲ್ಲಿದ್ದನು. ಇವನ ನಂತರ ಇಲ್ಲಿಗೆ ಸಾಮಂತ ಗೋವಿಂದನು ಆಗಮಿಸಿದನು.



ಕಮ್ಮಟೇಶ್ವರ ಲಿಂಗ ಕ್ರಿ.ಶ. ೧೧೮೫



ಕಮ್ಮಟೇಶ್ವರ ದೇವಾಲಯ ಕ್ರಿ.ಶ. ೧೧೮೫



ಜಗತೀಶ್ವರ ಲಿಂಗ ಕ್ರಿ.ಶ. ೧೧೩೦



ನೀಲೇಶ್ವರ ಲಿಂಗ ಕ್ರಿ.ಶ. ೧೧೫೩.



ಸಿಂಗೇಶ್ವರ ಲಿಂಗ ಕ್ರಿ.ಶ. ೧೧೨೯



ಸಂಕೋಲೆ ಬಸವಣ್ಣ ಕ್ರಿ.ಶ. ೧೧೮೫

**ಸಾಮಂತ ಸಿಂಗರಸನ ವಂಶಾವಳಿ**

ಬೆನೆಗಂಗ + ಸೋವಬ್ಬೆ
|
ಕೂರಾಳು ಸುಬ್ಬಗ + ಮಾದಿಕಬ್ಬೆ
|
ಮಾರಸಿಂಗ + ಬಿಂಮಿಕಬ್ಬೆ
|
ಭೂವಗಂ + ಸೋವಬ್ಬೆ
|
ಕಟ್ಟಾಳು ಪುಣುಸೆಗ + ಚಟ್ಟಬ್ಬೆ
|
ಸಾಮಂತ ಸಿಂಗ (ಕ್ರಿ.ಶ. ೧೧೨೫ – ೧೧೪೧) ಕಣಕಟ್ಟೆಯಲ್ಲಿ ಆಳ್ವಿಕೆ

**ಸಾಮಂತಗೋವಿದೇವ (ಕ್ರಿ.ಶ. ೧೧೪೨–೫೦) :** ಸಾಮಂತ ಸಿಂಗರಸನ ನಂತರ ಸಾಮಂತ ಗೋವಿದೇವನು ಕಳಿಕಟ್ಟೆಯಲ್ಲಿ ಆಳ್ವಿಕೆ ಮಾಡಲಾರಂಭಿಸಿದನು. ಈತನು ಸಿತಗರ ಗಂಡನೆಂದೇ ಬಿರುದು ಪಡೆದಿದ್ದ ಸಾಮಂತ ಭೀಮ ಮತ್ತು ಚಟ್ಟಿಯಕ್ಕನ ಕಿರಿಯ ಪುತ್ರ. ಈತನಿಗೆ ಮಾಚ, ಸಾಮಂತ ಚಟ್ಟ, ಸಾಮಂತ ಮಲ್ಲ ಎಂಬ ಸಹೋದರರಿದ್ದರು. ಕ್ರಿ.ಶ. ೧೧೪೩ರ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಈತನು ಹುಳಿಯಾರು ಪುರವರಾಧೀಶ್ವರನಾಗಿದ್ದನು.[೨೩] ಇವನಿಗೆ ಅನೇಕ ಪ್ರಶಸ್ತಿಗಳಿದ್ದವು ಎಂಬುದನ್ನು ಅದೇ ಶಾಸನದಲ್ಲಿ ತಿಳಿಸಲಾಗಿದೆ. ಹೊಯ್ಸಳರ ಸಾಮಂತನಾಗಿದ್ದ ಈತನನ್ನು ವಿಷ್ಣುವರ್ಧನನ ಮಗನಾದ ಮೊದಲನೇ ನರಸಿಂಹನ ಕಾಲದಲ್ಲಿ (ಕ್ರಿ.ಶ. ೧೧೪೨ ರಿಂದ ೧೧೭೩) ಕಳಿಕಟ್ಟೆಗೆ ವರ್ಗಾಯಿಸಲಾಯಿತು. ಇವನು ಕಟ್ಟಾಶೈವ ಧರ್ಮೀಯನಾಗಿದ್ದು ಶಾಸನವು "ಶ್ರೀ ಜೈನಮಾರ್ಗ ಸ್ಥಗಿತ ಗುಣಕಳಾಳಪನು ದೃತ್ರತಾಪಂ"[೨೪] ಎಂದು ಹೊಗಳಿದೆ. ಅಂದರೆ ಕಣಕಟ್ಟೆಯಲ್ಲಿ ಜೈನಧರ್ಮದ ಬೆಳವಣಿಗೆಗೆ ತಡೆಹಾಕಿ ಶೈವಧರ್ಮ ಮೆರೆಯಲು ಅವಕಾಶ ಮಾಡಿಕೊಟ್ಟಂತೆ ಕಾಣುತ್ತದೆ. ಏಕೆಂದರೆ ಕಣಕಟ್ಟೆಯಲ್ಲಿ ವಿಷ್ಣುವರ್ಧನನ ಕಾಲ ಮತ್ತು ಅದಕ್ಕಿಂತ ಪೂರ್ವದಲ್ಲಿ ಜೈನಧರ್ಮವಿದ್ದುದನ್ನು ಶಾಸನ[೨೫] ಹಾಗೂ ೧೦ ಮತ್ತು ೧೧ನೇ ಶತಮಾನಕ್ಕೆ ಸೇರಬಹುದಾದ ಜೈನಬಸದಿಗಳ ಅವಶೇಷಗಳನ್ನಾಧರಿಸಿ ಹೇಳಬಹುದು. ಇಲ್ಲಿಗೆ ಕೇವಲ ಮೂರು ಕಿ.ಮೀ. ದೂರದಲ್ಲಿರುವ ಸೋಮಶೆಟ್ಟಿಹಳ್ಳಿ ಎಂಬ ಊರಿನಲ್ಲಿ ದೊರೆತಿರುವ ಬಂಡೆಗಲ್ಲು ಶಾಸನಗಳು ಈ ಸ್ಥಳವು ಜೈನರಿಗೆ ಪವಿತ್ರ ಸ್ಥಳವಾಗಿತ್ತೆಂದೂ, ಆ ಕಾಲದಲ್ಲಿ ಅಲ್ಲಿನ ಸುತ್ತಮುತ್ತಲ ಪ್ರದೇಶಗಳು ಜೈನಧರ್ಮ ಕೇಂದ್ರಗಳಾಗಿದ್ದವೆಂಬುದನ್ನು ಸೂಚಿಸುತ್ತದೆ. ಈ ಪ್ರದೇಶದಲ್ಲಿ ಪ್ರಬಲವಾಗಿದ್ದ ಜೈನಧರ್ಮಕ್ಕೆ ಪ್ರತಿಕ್ರಿಯೆಯಾಗಿ ಶೈವಧರ್ಮ ಬೆಳೆಸಿದ್ದರಿಂದಲೇ ಇವನಿಗೆ "ಜೈನಮಾರ್ಗ ಸ್ಥಗಿತ ಗುಣಾಕಳಾಳಪ" ಎಂಬ ಬಿರುದು ಬಂದಿದೆ ಎನ್ನಬಹುದು.

ಸಾಮಂತ ಗೋವಿದೇವನು ಶೈವ ಬ್ರಾಹ್ಮಣರಾದ ವ್ಯಾಕರಣೋತ್ತಮರು, ಶಾಸ್ತ್ರಜ್ಞರು, ಜ್ಯೋತಿಷಿಗಳು, ಶಬ್ದಶಾಸ್ತ್ರ ಕೌಮಾರರು, ತ್ರಿಕಾಲ ಜ್ಞಾನಿಗಳು, ಶಿವಾಗಮದಲ್ಲಿ ಪಾಂಡಿತ್ಯ ಸಂಪಾದಿಸಿದವರು ಮೊದಲಾದವರನ್ನು ಕಳಿಕಟ್ಟೆಯಲ್ಲಿ ನೆಲೆಸುವಂತೆ ಅವಕಾಶ ಮಾಡಿಕೊಟ್ಟನು. ಇವರ ಸಮೂಹದಲ್ಲಿನ ಆಳ್ವಿಭಟ್ಟಂಗೆ ಅಲ್ಲಿ ಕ್ರಿ.ಶ. ೧೧೪೩ರಲ್ಲಿ ಕಲಿಗೇಶ್ವರ ದೇವರ ಲಿಂಗಪ್ರತಿಷ್ಠೆ ಮಾಡಲು ಸಹಕರಿಸಿದನು. ಅವರು ಕಟ್ಟಿಸಿದ ದೇವಾಲಯದ ನಿರ್ವಹಣೆಗಾಗಿ ಅಂಗಭೋಗ ನೈವೇದ್ಯ, ಬ್ರಾಹ್ಮಣರ ಆಹಾರ ದಾನಕ್ಕೆ ಆಳ್ವಿಭಟ್ಟರ ಪಾದ ತೊಳೆದು ದೇವರಿಗೆ ಹಿರಿಯಕೆರೆಯ ಚಿಕ್ಕತೂಬಿನ ಮೊದಲೇರಿಯ ಬಯಲಲ್ಲಿ ೧ ಖಂಡುಗ ಗದ್ದೆ, ಅಡುವಗೆರೆಯ ಕೆರೆಯ ಹಿಂದೆ ೧ ಖಂಡುಗ ಗದ್ದೆಯನ್ನು ಗೋವಿದೇವನು ಬಿಟ್ಟನು. ಇದೇ ಅಲ್ಲದೆ ಈ ದೇವಾಲಯಕ್ಕೆ ಅಧಿಕಾರಿ ವರ್ಗದವರಿಂದಲೂ ಪ್ರೋತ್ಸಾಹ ಸಿಕ್ಕಿ ಹೆಚ್ಚು ದತ್ತಿಗಳು ಬರಲಾರಂಭಿಸಿದವು. ಹೊಯ್ಸಳ ಗೌಡನ ಮೊಮ್ಮಗ ಕಳಿಕಟ್ಟೆಯ ಸಾತೆಯ ನಾಯಕ ೧ ಖಂಡುಗ ಗದ್ದೆ ದೇವಾಲಯದ ಪಶ್ಚಿಮಕ್ಕೆ ಇದ್ದ ಬೆದ್ದಲು ಭೂಮಿಯನ್ನು, ಆಳ್ವಿಭಟ್ಟರು ದೇವಾಲಯದ ಪೂರ್ವಕ್ಕೆ ಇದ್ದ ಕೆರೆಗೆ ತೂಬನ್ನು ಮಾಡಿಸಿ ಎತ್ತರವಾದ ಭೂಮಿಯನ್ನು ಗದ್ದೆ ಮಾಡಿಸಿ ದೇವರಿಗೆ ಬಿಡಿಸಿದರು. ಅಲ್ಲದೆ ಅವರು ದೇವರ ನಂದಾದೀಪಕ್ಕಾಗಿ ಅಡುವಗೆರೆಯಲ್ಲಿ ಬೆದ್ದಲು ಭೂಮಿಯನ್ನು ಕೂಡಾ ಬಿಡಿಸಿದರು. ಅಂದು ಆಳ್ವಿಭಟ್ಟರು ಪ್ರಭಾವಶಾಲಿಯಾಗಿದ್ದರಿಂದಲೇ ಈ ಎಲ್ಲಾ ದತ್ತಿಗಳು ದೇವಾಲಯಕ್ಕೆ ಬಂದವು. ಕಳಿಕಟ್ಟೆಯಲ್ಲಿದ್ದ ಗಾಣಿಗರಾದ ಕೇಸಿಯಣ್ಣ, ಹೊಟ್ಟಯ್ಯ, ಕಾಳಸೆಟ್ಟಿಯವರನ್ನೊಳಗೊಂಡಂತೆ ಮಾರಯ್ಯ, ಕೇತಣ್ಣ, ಮಾಚಣ್ಣ, ಚೆಟ್ಟಯ್ಯ ಮುಂತಾದವರ ನ್ನೊಳಗೊಂಡ ತೈಲಿಗ (ಎಣ್ಣೆ) ಸಂಘದವರು ದೇವರ ನಂದಾದೀವಿಗೆಗೆ ನಿರ್ಧಿಷ್ಟ ಪ್ರಮಾಣದ ಎಣ್ಣೆಯನ್ನು ನೀಡಿದರು. ಮತ್ತು ಇದೇ ಸಂಘದವರು ದೇವಾಲಯದ ಕೆಲಸ ಕಾರ್ಯಗಳಿಗೆ ಪ್ರತಿವರ್ಷ ಗಾಣದಲ್ಲೊಂದು ಹಣವನ್ನು ದೇವರಿಗಾಗಿ ಸಂಗ್ರಹಿಸಿ ನೀಡತೊಡಗಿದರೆಂದು ಶಾಸನವು ತಿಳಿಸುತ್ತದೆ.[೨೬] ಇದರಿಂದ ಈ ದೇವಾಲಯಕ್ಕೆ ಸಾಮಂತನಿಂದಲೇ ಅಲ್ಲದೆ ಅಧಿಕಾರಿವರ್ಗ, ಪುರೋಹಿತ ವರ್ಗ ಹಾಗೂ ವ್ಯಾಪಾರಿ ವರ್ಗದಿಂದ ಹೇರಳವಾದ ದಾನ ಹರಿದುಬಂದು ದೇವಾಲಯ ಶ್ರೀಮಂತವಾಯಿತು.

ಹುಳಿಯಾರು ಪಟ್ಟಣದ ಪುರವರಾಧೀಶ್ವರನಾಗಿದ್ದ ಸಾಮಂತ ಗೋವಿದೇವ ವಿಷ್ಣುವರ್ಧನ ಮತ್ತು ಆತನ ಮಗ

ನರಸಿಂಹನ ಕಾಲದಲ್ಲಿ ಯುದ್ಧಗಳಲ್ಲಿ ವಿಶಿಷ್ಟ ಪಾತ್ರ ವಹಿಸಿ ಉಚ್ಚಂಗಿ ಪಾಂಡ್ಯರನ್ನು ಮತ್ತು ಹಾನಗಲ್ಲು ಕದಂಬರನ್ನು ಸೋಲಿಸಿದ್ದನು. ಹೊಯ್ಸಳರ ವಿಶ್ವಾಸಕ್ಕೆ ಪಾತ್ರನಾಗಿದ್ದ ಇವನು ಶೈವ ಪರವಾದ ಎಲ್ಲಾ ಕೆಲಸಗಳಿಗೆ ಕಳಿಕಟ್ಟೆಯಲ್ಲಿ ಉತ್ತೇಜನ ನೀಡಿದನು. ಇವನನ್ನು ಪುನಃ ಕಳಿಕಟ್ಟೆಯಿಂದ ಹುಳಿಯಾರಿಗೆ ಕಳುಹಿಸಲಾಯಿತು ಎಂಬುದಕ್ಕೆ ಕ್ರಿ.ಶ. ೧೧೫೦ರ ತಂಡಗದ ಶಾಸನವು ತಿಳಿಸುತ್ತದೆ. ಆ ಶಾಸನದಲ್ಲಿ "ಶ್ರೀಮುನ್ಮಹಾಸಾಮಂತ ಗೋವಿದೇವ ಮಗರೆನಾಡು ಮುನ್ನೂರು ಮಂ ದುಷ್ಟನಿಗ್ರಹ ಸಿಷ್ಟ ಪ್ರತಿ ಪಾಳನದಿಂ ಸುಕಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರೆ" ಎಂದು ಉಲ್ಲೇಖವಾಗಿದೆ.[೨೭] ಇದನ್ನು ಆಧಾರವಾಗಿಟ್ಟುಕೊಂಡು ಹೇಳುವುದಾದರೆ ಅವನು ಕಳಿಕಟ್ಟೆಯಲ್ಲಿ ಕ್ರಿ.ಶ. ೧೧೪೨ರಿಂದ ೧೧೫೦ರವರೆಗೆ ಇದ್ದನೆಂದು ಹೇಳಬಹುದು. ಇವನಿಗೆ ಮಹಾದೇವಿ ನಾಯಕಿತಿ ಮತ್ತು ಶ್ರೀಯಾದೇವಿ ಎಂಬ ಇಬ್ಬರು ಪತ್ನಿಯರಿದ್ದರು. ಇವರಲ್ಲಿ ಮಹಾದೇವಿ ಜೈನಧರ್ಮೀಯಳಾಗಿದ್ದಳು. ಅವಳು ಮರಣ ಹೊಂದಿದಾಗ ಪರೋಕ್ಷ ವಿನಯವಾಗಿ ಹೆಗ್ಗೆರೆಯಲ್ಲಿ ಕ್ರಿ.ಶ. ೧೧೬೧ರಲ್ಲಿ ಚನ್ನೆಪಾರ್ಶ್ವದೇವರ ಬಸದಿಯನ್ನು ನಿರ್ಮಿಸಿ, ಮಾಣಿಕನಂದಿ ಸಿದ್ಧಾಂತ ದೇವರ ಪಾದ ತೊಳೆದು ಅದನ್ನು ಅವರಿಗೆ ಬಿಟ್ಟುಕೊಟ್ಟನು. ತನ್ನ ಅಣ್ಣ ಸಾಮಂತ ಚಟ್ಟನ ಮಗನಿಂದ ಆ ದೇವರ ಅಷ್ಟವಿದಾರ್ಚನೆಗೆ ಮುನಿಗಳ ಆಹಾರ ದಾನಕ್ಕೆ ದತ್ತಿಯನ್ನು ಕೊಡಿಸಿದನು.[೨೮] ಇದರಿಂದ ಪತಿ ಪತ್ನಿಯರಿಬ್ಬರೂ ಬೇರೆ ಬೇರೆ ಧರ್ಮವನ್ನು ಅನುಸರಿಸುತ್ತಿದ್ದರೂ ಅವರ ಕುಟುಂಬದಲ್ಲಿ ಸಾಮರಸ್ಯತೆ ಇದ್ದುದು ಕಂಡುಬರುತ್ತದೆ.

ಒಟ್ಟಾರೆ ಹೇಳುವುದಾದರೆ ಮಗರೆ ನಾಡಿನ ಅಧಿಪತಿಗಳಾಗಿದ್ದ ಇವರ ಪೂರ್ವಿಕರು ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿ ಹೊಯ್ಸಳರ ಸಾಮಂತರಾದರು. ಆಗ ಮಗರೆ ನಾಡಿನ ಹುಳಿಯಾರಿನಲ್ಲಿದ್ದ ಗೋವಿದೇವನನ್ನು ಕಣಕಟ್ಟೆಗೆ ವರ್ಗಾಯಿಸಲಾಯಿತು. ಅಲ್ಲಿ ಅವನು ಅಧಿಕಾರದಲ್ಲಿದ್ದ ಸಮಯದಲ್ಲಿ ಶೈವಮಾರ್ಗವನ್ನು ಪ್ರೋತ್ಸಾಹಿಸಿ ಜೈನಮಾರ್ಗಕ್ಕೆ ಬಲವಾದ ಹೊಡೆತ ನೀಡಿದನು. ಶೈವ ದೇವಾಲಯಗಳಿಗೆ ಹೆಚ್ಚು ದತ್ತಿ ಬರಲು ಕಾರಣನಾದ ಇವನ ಪತ್ನಿ ಜೈನಧರ್ಮೀಯಳಾ[illegible]ದ್ದಳು. ಅವಳು ಮರಣ ಹೊಂದಿದಾಗ ಪರೋಕ್ಷ ವಿನಯ[illegible]ಗಿ ಹುಳಿಯಾರು ಬಳಿಯ ಹೆಗ್ಗೆರೆಯ ಜೈನಬಸದಿಯನ್ನು [illegible]ರ್ಮಿಸಿ ದಾನ ಕೊಡಿಸಿದನು. ಇಬ್ಬರೂ ಬೇರೆ ಬೇರೆ ಧರ್ಮವನ್ನನುಸರಿಸುತ್ತಿದ್ದರೂ ಕೌಟುಂಬಿಕ ಜೀವನಕ್ಕೆ ತೊಂದರೆಯಾಗಲಿಲ್ಲ. ಕ್ರಿ.ಶ. ೧೧೫೦ರ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಇವನು ಪುನಃ ಹುಳಿಯಾರಿನಲ್ಲಿ ರಾಜ್ಯಭಾರ ಮಾಡುತ್ತಿದ್ದನು. ಇದರಿಂದ ಒಟ್ಟು ೮ ವರ್ಷಗಳ ಕಾಲ ಕಳಿಕಟ್ಟೆಯಲ್ಲಿದ್ದಂತಹ ಸಮಯದಲ್ಲಿ ಆ ಊರು ಶೀಘ್ರಗತಿಯಲ್ಲಿ ಅಭಿವೃದ್ಧಿ ಹೊಂದಲು ಇವನ ಕೊಡುಗೆಯೂ ಇದೆ ಎನ್ನಬಹುದು. ಇಂಥ ಸಾಮಂತನ ವಂಶಾವಳಿಯನ್ನು ಶಾಸನಗಳನ್ನಾಧರಿಸಿ[೨೯] ಈ ಕೆಳಗೆ ನೀಡಲಾಗಿದೆ.

**ವಂಶಾವಳಿ**

ಅಹವ ಮಲ್ಲ (ದೊಡ್ಡಂಕ ಬಡಿವ)
+
ಹೊನ್ನಪ್ಪ
|
ಸಾಮಂತ ಭೀಮ (ಸಿತಗರ ಗಂಡ)
+ ಚಟ್ಟಿಯಕ್ಕ

| ಮಾಚ | ಸಾಮಂತ ಚಟ್ಟ | ಸಾಮಂತ ಮಲ್ಲ | ಸಾಮಂತ ಗೋವಿದೇವ |
|---|---|---|---|
| | | + ಶಾಂತಲಾದೇವಿ | + ಮಹಾದೇವಿ |
| | | \| | + ಶ್ರೀದೇವಿ |
| | | ಸಾಮಂತ ಬಿಟ್ಟಿದೇವ | \| |
| | | | ಬಲ್ಲೆಯ ನಾಯಕ |

**ಕೆಚ್ಚನ ಮಾಚೆಯನಾಯಕ** (ಕ್ರಿ.ಶ. ಸು. ೧೧೫೦–೮೦) : ಕಣಕಟ್ಟೆಯಲ್ಲಿ ದೊರಕಿರುವ ಕ್ರಿ.ಶ. ೧೧೫೩ರ ಶಾಸನವು "ಶ್ರೀ ಮನ್ಮಹಾಸಾಮಂತ ಕೆಚ್ಚನ ಮಾಚೆಯ ನಾಯಕ ಮಗರೆ ಮೂನೂರು........ ಮೊದಲ ಬಾಡದ ಕಳಿಕಟ್ಟೆಯಿಂ ಪಡೆದಾಳುತ್ತ ಮಿರ್ದು" ಎಂದು ಉಲ್ಲೇಖಿಸುತ್ತದೆ.[೩೦] ಆದ್ದರಿಂಧ ಕಣಕಟ್ಟೆಗೆ ಇವನು ಗೋವಿದೇವ ಕ್ರಿ.ಶ. ೧೧೫೦ರಲ್ಲಿ ಹುಳಿಯಾರಿಗೆ ವರ್ಗಾವಣೆಯಾಗಿ ಹೋದ ತಕ್ಷಣವೇ ಅಂದರೆ ಕ್ರಿ.ಶ. ಸುಮಾರು ೧೧೫೦ರಲ್ಲಿ ಸಾಮಂತನಾಗಿ ಬಂದಿರಬಹುದು. ಇವನು ಧರಿಸಿರುವ "ಸಿತಗರ ಗಣ್ಡ", "ದೊಡ್ಡಂಕ ಬಡಿವ" ಎಂಬ ಬಿರುದುಗಳನ್ನು ನೋಡಿದರೆ ಇವು ಮಗರೆ ನಾಡನ್ನು ಆಳ್ವಿಕೆ ಮಾಡುತ್ತಿದ್ದ ಅಹವ ಮಲ್ಲ ಮತ್ತು ಸಾಮಂತ ಭೀಮನ ಬಿರುದುಗಳಾಗಿವೆ. ಇವರು ಈ ಬಿರುದುಗಳನ್ನು ಹೊಯ್ಸಳ ವಿಷ್ಣುವರ್ಧನನಿಂದ ತಮ್ಮ ಸಾಹಸಗಳನ್ನು ಮೆರೆದು ಪಡೆದುಕೊಂಡಿದ್ದರು.[೩೧] ಇಂಥ ಬಿರುದುಗಳನ್ನು ಧರಿಸಿರಬೇಕಾದರೆ ಇವನು ಅವರ ವಂಶದವನೇ ಆಗಿರಬೇಕು. ಕಣಕಟ್ಟೆಯಲ್ಲಿ ಆಳ್ವಿಕೆ ಮಾಡಿದ್ದ ಗೋವಿದೇವನ ವಂಶಾವಳಿಯನ್ನು ನೋಡಿದಾಗ ಅವನ ತಂದೆ ಸಾಮಂತ ಭೀಮನ ಹಿರಿಯಪುತ್ರ ಮಾಚ ಎಂದಿರುವುದನ್ನು ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನಲ್ಲಿ ದೊರೆತಿರುವ ಅನೇಕ ಶಾಸನಗಳು ತಿಳಿಸುತ್ತವೆ.[೩೨] ಆದ್ದರಿಂದ ಕಚ್ಚನ ಮಾಚೆಯ ನಾಯಕನು ಮಗರೆ ನಾಡ ಮುನ್ನೂರನ್ನು ಆಳ್ವಿಕೆ ಮಾಡುತ್ತಿದ್ದ ಸಾಮಂತ ಕುಲಕ್ಕೆ ಸೇರಿದ್ದನೆಂದು ಹೇಳಬಹುದು. ಇವನ ತಂದೆ ಮಗರೆ ನಾಡಿನ ಸಾಮಂತ ಭೀಮ, ತಾಯಿ ಚಟ್ಟಿಯಕ್ಕ. ಇವನಿಗೆ ಸಾಮಂತ ಚಟ್ಟ, ಸಾಮಂತ ಮಲ್ಲ, ಸಾಮಂತ ಗೋವಿದೇವ ಎಂಬ ಸೋದರರಿದ್ದರು. ಎಲ್ಲರೂ ಹೊಯ್ಸಳರ ಕಾಲದಲ್ಲಿ ಸಾಮಂತಾಧಿಕಾರಿಗಳಾಗಿಯೇ ಕಾರ್ಯ ನಿರ್ವಹಿಸಿದವರು. ಇಂಥಹ ಪ್ರಭಾವಶಾಲಿಯಾದ ಕುಟುಂಬಕ್ಕೆ ಸೇರಿದ ಮಾಚೆಯ ನಾಯಕನು ಹಗೆಯ ಬೆಸಕೊಳ್ಬುಂ, ವಂದಿಜನ ಕಲ್ಪವೃಕ್ಷಂ, ರತ್ನಾಕರ ಸಾಹಿತ್ಯ ನಿಳೆಯರಪ್ಪ ಎಂಬ ಬಿರುದುಗಳನ್ನು ಸಮಸ್ತ ಪ್ರಶಸ್ತಿ ಸಹಿತ ಧರಿಸಿ ಕಣಕಟ್ಟೆಯಲ್ಲಿ ಸುಖದಿಂದ ಆಳ್ವಿಕೆ ಮಾಡುತ್ತಿದ್ದನೆಂದು ಶಾಸನದಲ್ಲಿ ದಾಖಲಾಗಿದೆ.[೩೩]

ಸಾಹಿತ್ಯದಲ್ಲಿ ಪಾಂಡಿತ್ಯವನ್ನು ಪಡೆದುಕೊಂಡಿದ್ದ ಈತನನ್ನು 'ಸಕಲ ಸಾಹಿತ್ಯ ಸರ್ವಜ್ಞ[೩೪] ಸಾಹಿತ್ಯ ನಿಳಯರಪ್ಪ' ಎಂದು ವರ್ಣಿಸಲಾಗಿದೆ. ಇವನ ಕಾಲದಲ್ಲಿ ಕಣಕಟ್ಟೆಯಲ್ಲಿ ನೀಲೇಶ್ವರ ದೇವಾಲಯ ನಿರ್ಮಾಣವಾಯಿತು. ಇದನ್ನು ಬಿಟ್ಟಬೋವ ಎಂಬುವನು ಕ್ರಿ.ಶ. ೧೧೫೩ರಲ್ಲಿ ನಿರ್ಮಿಸಿ ನೀಲೇಶ್ವರ ದೇವರ ಲಿಂಗಪ್ರತಿಷ್ಠೆಯನ್ನು ಮಾಡಿಸಿ ಕೆರೆಯನ್ನು ಸಹಾ ಕಟ್ಟಿಸಿದನು.[೩೬] ಆ ದೇವಾಲಯದ ನಿರ್ವಹಣೆಗೆ ಮತ್ತು ದೇವರ ಅಂಗಭೋಗ ಮತ್ತು ರಂಗಭೋಗ, ನೈವೇದ್ಯ, ನಂದಾದೀವಿಗೆಗೆ ಕಣಕಟ್ಟೆಯ ಪ್ರಜೆ, ಗೌಡಗಳು, ಜಗತಿ ಕೊತ್ತಳಿಗಳು ಒಳಗೊಂಡಂತೆ ಬಿಟ್ಟಬೋವನಾಯಕನು ನಿಡುಗಟ್ಟದ ಕೆರೆಯ ಪಶ್ಚಿಮ ಕೋಡಿಯ ಕಡೆಯಲ್ಲಿ ೩ ಸಲಗೆ ಗದ್ದೆಯನ್ನು ಲಾಕುಳಾಗಮಸಮಯ ಕೊಮಾರ ಸಿಂಗಿ ಪಂಡಿತರ ಪಾದತೊಳೆದು ದತ್ತಿ ಬಿಟ್ಟನು.[೩೭] ಇದೇ ದೇವಾಲಯಕ್ಕೆ ಮಾಚಯ ನಾಯಕನು ವೀರಬಲ್ಲಾಳನ ರಾಣಿಯಾದ (ಚಿತ್ತದರಸಿ) ಉಮಾದೇವಿಯ ಕೈಯಲ್ಲಿ ೩ ಸಲಗೆ ಗದ್ದೆ ಮತ್ತು ೩ ಸಲಗೆ ಬೆದ್ದಲು, ಒಟ್ಟು ಆರು ಸಲಗೆ ಭೂಮಿಯನ್ನು ದಾನವಾಗಿ ಕೊಡಿಸಿದನು.[೩೮]

ಈ ಬಿಟ್ಟಿಬೋವನನ್ನು ಅರವತ್ತು ಮಾನಸ ಎಕ್ಕಟಿಗರ ನಾಯಕನೆಂದು ಶಾಸನವು ಹೇಳಿ ಇವನ ಜೊತೆ ದುಗ್ಗಬ್ಬೆಯ ಕೇತಣ್ಣ ಮತ್ತು ಕಲ್ಲೆಯನನ್ನು ಹೆಸರಿಸಿದೆ.[೩೯] ಈ ಅರವತ್ತು ಮಾನಸ ಎಕ್ಕಟಿಗರು ಇವನ ಕಾಲದಲ್ಲಿ ಕಣಕಟ್ಟೆಯಲ್ಲಿದ್ದರೆಂದು ಈ ಶಾಸನದ ಆಧಾರದಿಂದ ಹೇಳಬಹುದು. ಇವರು ಜಗದ್ವಿಖ್ಯಾತರೂ, ಶರಣಾಗತ ವಜ್ರಪಂಜರರೂ ನುಡಿದಂತೆ ಗಂಡರೂ, ಶಿವಪೂಜಾ ಧುರಂದರರೂ, ಕಳಿಕಟ್ಟಿಯ ಜಗತೀಶ್ವರ ದೇವರ ಪಾದಪದ್ಮ ಬ್ರಿಂಗರು, ಬರಸಿಡಿಲಿ ನಂತವರು ವೀರಬಲ್ಲಾಳು ದೇವನ ಪಾದಾರಾಧಕರಾಗಿದ್ದರು. ಶಾಸನವು ಇವರನ್ನು ಅರಿಕೆಯ ಬೋವರೆಂದು ಕರೆದಿರುವುದು ವಿಶೇಷವಾಗಿದೆ.[೪೦] ಇವರು ತಮ್ಮ ನಾಯಕನ ಮಾರ್ಗದರ್ಶನ ದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಅರಸನ ನೆಚ್ಚಿನ ಆಳುಗಳು ಅಣುಗರೂ ಎನಿಸಿಕೊಂಡ ನಂಬಿಗಸ್ಥ ವೀರರಾಗಿದ್ದರು. ಎಕ್ಕಟಿಗ ಎಂಬುದಕ್ಕೆ ಒಂಟಿಗ, ಸಿಟ್ಟಿನವನು ಎಂಬ ಅರ್ಥವೂ ಎಕ್ಕಟಿ ಎಂದರೆ ಏಕಾಂತ ಎಂಬ ಅರ್ಥವೂ ಇದೆ.[೪೧] ಪ್ರಾಯಶಃ ಎಕ್ಕಟಿಗರು ನಿರ್ವಹಿಸುತ್ತಿದ್ದ ಅತ್ಯಂತ ಗುರುತರವಾದ ಹೊಣೆಗಾರಿಕೆಯಿಂದಾಗಿ ಅವರು ಬಹಳ ಗಂಭೀರ ಪ್ರವೃತ್ತಿಯವರೂ ಶಿಸ್ತಿನ ವ್ಯಕ್ತಿಗಳೂ ಆಗಿರುತ್ತಿದ್ದುದರಿಂದ ಸಾಮಾನ್ಯರಿಗೆ ಸಿಟ್ಟಿನವರಂತೆ ತೋರುತ್ತಿದ್ದರೆನಿಸುತ್ತದೆ. ಇವರನ್ನು ಯುದ್ಧದ ಸಂದರ್ಭದಲ್ಲಿ ಅರಸರ ಬೇಡಿಕೆಯ ಮೇರೆಗೆ ಕಳುಹಿಸಿಕೊಡಲಾಗುತ್ತಿತ್ತು. ಈ ಕಾರಣದಿಂದ ಕರೆಯ ಮೇರೆಗೆ ಸೇವೆ ನೀಡುವ ಇವರನ್ನು ಅರಿಕೆಯ ಬೋವರೆಂದು ಕರೆಯಲಾಗುತ್ತಿತ್ತು. ನಂತರ ಇವನ ಮಗನಾದ ಘಸಣಿ ಮಹದೇವನಾಯಕ ಕಣಕಟ್ಟೆಯ ಸಾಮಂತ ಪದವಿಯನ್ನ ಲಂಕರಿಸಿದನು. ಇದರಿಂದ ಇವನ ಆಗಮನದೊಂದಿಗೆ ಕಣಕಟ್ಟೆಯ ಆಡಳಿತದಲ್ಲಿ ವಂಶಪಾರಂಪರ್ಯ ಆಳ್ವಿಕೆ ಆರಂಭವಾಯಿತು.

**ಘಸಣಿ ಮಹದೇವನಾಯಕ** (ಕ್ರಿ.ಶ. ಸು. ೧೧೮೦–೮೬) : ಕಣಕಟ್ಟೆಯಲ್ಲಿ ವಂಶಪಾರಂಪರ್ಯ ಆಳ್ವಿಕೆ ಆರಂಭವಾದ ನಂತರ

ಸಾಮಂತತನವನ್ನು ಮೊದಲು ಸ್ವೀಕರಿಸಿದವನೆಂದರೆ ಘಸಣಿ ಮಹದೇವ ನಾಯಕ. ಇವನು ಕಣಕಟ್ಟೆಯಲ್ಲೇ ಆಳ್ವಿಕೆ ಮಾಡಿದ್ದ ಮಾಹಾಸಾಮಂತ ಕೆಚ್ಚನ ಮಾಚಯ ನಾಯಕನ ಮಗನಾಗಿದ್ದಾನೆ. ಸಮರ್ಥ ಅಧಿಕಾರಿಯಾಗಿದ್ದ ಈತನು ತನ್ನ ತಂದೆಯ ಪರಂಪರೆಯನ್ನೇ ಮುಂದುವರಿಸಿ, ಅನೇಕ ದಾನಕಾರ್ಯ ದೇವಾಲಯ ನಿರ್ಮಾಣದಂತಹ ಕೆಲಸಗಳನ್ನು ಕೈಗೊಂಡು ಕಣಕಟ್ಟೆಯಲ್ಲಿ ಧಾರ್ಮಿಕ ಕಾರ್ಯಗಳು ವಿಸ್ತಾರವಾಗಲು ಕಾರಣನಾಗಿದ್ದಾನೆ.

ಸಾಮಂತ ಘಸಣಿ ಮಹದೇವ ನಾಯಕನ ಆದೇಶದ ಮೇರೆಗೆ ಕಣಕಟ್ಟೆಯಲ್ಲಿ ನೆಲೆಸಿದ್ದ ಶ್ರೇಷ್ಠ ಶಿಲ್ಪಿಗಳಾಗಿದ್ದ ಬಮ್ಮೋಜ ಮತ್ತು ಮಾಚೋಜರು ಕಂಮಟೇಶ್ವರ ದೇವರ ಲಿಂಗವನ್ನು ಪ್ರತಿಷ್ಠಾಪಿಸಿ ಅದಕ್ಕೆ ಸುಸಜ್ಜಿತವಾದ ದೇವಾಲಯವನ್ನು ನಿರ್ಮಿಸಿ ಕಾಳಾಮುಖ ದೀಕ್ಷಿತರ ಮತ್ತು ಜಗತೇಶ್ವರ ಪಂಡಿತರ ಪಾದ ತೊಳೆದು ದೇವರ ಧಾರ್ಮಿಕಾದಿ ಕಾರ್ಯಗಳನ್ನು ನಡೆಸಲು ಅವರಿಗೆ ಬಿಟ್ಟುಕೊಟ್ಟರು.[೪೨] ಈ ದೇವಾಲಯವನ್ನು ಅಭಿವೃದ್ಧಿಪಡಿಸಲು ಮತ್ತು ಅದರ ನಿರ್ವಹಣೆಗೆ ಹೊಯ್ಸಳ ದೊರೆ ಒಂದನೇ ನರಸಿಂಹನ ಸಾಮಂತನಾಗಿದ್ದ ಘಸಣಿ ಮಹದೇವನು ದೇವರ ನೈವೇದ್ಯಕ್ಕೆ ನಂದಾದೀಪಕ್ಕೆ, ತಪೋಧನರ ಆಹಾರ ಮತ್ತು ದಾನಕ್ಕೆ ಕಣಕಟ್ಟೆಯ ಹಿರಿಯಕೆರೆ ಮತ್ತು ದಕ್ಷಿಣ ದಿಕ್ಕಿನಲ್ಲಿನ ಕೆರೆಯ ಕೆಳಗೆ ಒಟ್ಟು ೬೦೦ ಕಂಬ ಬೆದ್ದಲೆ ಭೂಮಿಯನ್ನು ಮತ್ತು ಒಂದು ಮತ್ತರು ಭೂಮಿಯನ್ನು ದಾನವಾಗಿ ನೀಡಿದನು. ಇವನ ನಂತರ ಅವನ ಮಗ ಸಾಮಂತ ಸೋಮೆಯ ನಾಯ್ಕನ ಆಳ್ವಿಕೆ ಆರಂಭವಾಯಿತು.

**ಸಾಮಂತ ಸೋಮೆಯನಾಯಕ** **(ಕ್ರಿ.ಶ. ಸು. ೧೧೮೬ರಿಂದ)** : ಸಾಮಂತ ಸೋಮೆಯ ನಾಯಕನ ಕೀರ್ತಿಯನ್ನು ಅವನ ಶಾಸನ ಈ ರೀತಿ ಬಣ್ಣಿಸುತ್ತದೆ. "ಕಟ್ಟಿದುರೊಳಾಂತ ಸುಬಟರ ನಿಟ್ಟೆಲುವಂ ಮುರಿದು ತೇದು ತಿಲಕಮನಿಡುವಂ ಸುಟ್ಟು ರಿಪುವ ರಿಪುಪುರಮಂ ನೆಟ್ಟನೆ"[೪೩] ಈ ವರ್ಣನೆಯನ್ನು ಗಮನಿಸಿದರೆ ಇವನೊಬ್ಬ ವೀರಯೋಧನೆನಿಸುತ್ತದೆ. ಸಿತಗರ ಗಂಡನೆಂಬ ತಮ್ಮ ಪೂರ್ವಿಕರ ಬಿರುದನ್ನು ಧರಿಸಿದ್ದ ಈತನು ಕಣಕಟ್ಟೆಯಲ್ಲಿ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ಅಲ್ಲಿನ ಎಲ್ಲ ವರ್ಗದ ಜನರ ವಿಶ್ವಾಸವನ್ನು ಗಳಿಸಿಕೊಂಡಿದ್ದು ಅವರ ಸಹಕಾರದಿಂದ ತಮ್ಮ ಪೂರ್ವಜರು ನಿರ್ಮಿಸಿದ್ದ ಜಗತೇಶ್ವರ ದೇವಾಲಯದ ಅಭಿವೃದ್ಧಿಯನ್ನು ಮಾಡಿದನು. ಕಣಕಟ್ಟೆಯಲ್ಲಿ ಅಂದು ಅವನು ಸಹಕಾರ ಪಡೆದಿದ್ದ ವರ್ಗಗಳೆಂದರೆ "ಸಮಸ್ತ ಜಗತಿ ಕೊತ್ತಳಿಗಳು, ಮಾರಬೋವ, ಬಿಟ್ಟಿಬೋವ, ಶಿವಧರ್ಮನಿಷ್ಠರು, ಗೋತ್ರಪವಿತ್ರರು, ಶ್ರೀರಾಮನಾಥ ದೇವರ ಆರಾಧಕರಾದ ಅರುವತ್ತು ಮಾನಸ ಎಕ್ಕಟಿಗರು, ಕಣಕಟ್ಟೆಯ ಸಮಸ್ತ ಪ್ರಜೆ ಗೌಡರು"[೪೪] ಇವರೆಲ್ಲರನ್ನು ಸೇರಿಸಿಕೊಂಡು ಜಗತೇಶ್ವರ ದೇವರ ಅಂಗಭೋಗ, ರಂಗಭೋಗ, ನಿತ್ಯನೈವೇದ್ಯ, ನಂದಾದೀವಿಗೆ, ದೇವಾಲಯದ ಮಠಪತಿಗಳು ತಪೋಧನರ ಆಹಾರ ದಾನಕ್ಕೆ ಕಾಳಾಮುಖರಾದ ಕಲ್ಯಾಣಶಕ್ತಿ ಪಂಡಿತರ ಪಾದ ತೊಳೆದು ಕಣಕಟ್ಟೆ ಹಿರಿಯಕೆರೆಯ ಚಿಕ್ಕತೂಬಿನ ಕೆಳಗೆ ನಾಲ್ಕು ಸಲಗೆ ಗದ್ದೆ ದಕ್ಷಿಣದಲ್ಲಿ ೩ ಸಲಗೆ ಗದ್ದೆ ನಿಡುಗಟ್ಟದಲ್ಲಿ ೩ ಮತ್ತರು ಬೆದ್ದಲು ಭೂಮಿಯನ್ನು ದತ್ತಿ ನೀಡಿದನು. ಈ ದಾನವೇ ಅಲ್ಲದೆ ತೈಲಿಗರ ಸಂಘದವರು ದೇವರಿಗೆ ೧ ಗಾಣವನ್ನು ಜೇಡ ಗೊತ್ಥಳಿಯವರು ೧ ಮಗ್ಗೆಯನ್ನು ಮಗುವೆ ಮಾಡಿದರೆ ವದು ಮತ್ತು ವರನ ಕಡೆಯವರು ತಲಾ ಒಂದೊಂದು ಹಣವನ್ನು ನೀಡಬೇಕೆಂದು ನಿರ್ಧರಿಸಲಾಯಿತು. ಈ ದೇವರಿಗೆ ಈ ಊರಲ್ಲಲ್ಲದೆ ಬೇರೆ ಕಡೆಯಿಂದಲೂ ಭೂದಾನ ಲಭ್ಯವಾಯಿತು. ಉದಾ: ನಿಡುವಳ್ಳಿಯ ಹಿರಿಯಕೆರೆಯ ಕೆಳಗೆ ೧ ಸಲಗೆ ಗದ್ದೆ ಜಗತೀಶ್ವರ ದೇವರ ಕಾರ್ಯಗಳಿಗೆ ನೀಡಲಾಗಿದೆ. ಸಮಸ್ತ ಜಗತಿಯ ಕೊತ್ತಳಿಯ ಮನೆತೆರಿಗೆ, ಮಗ್ಗತೆರಿಗೆ, ಕಟ್ಟತೆರೆಯೂ ಕೂಡಾ ಈ ದೇವರಿಗೆ ಸಲ್ಲಬೇಕು ಎಂದು ಶಾಸನದಲ್ಲಿ ಉಲ್ಲೇಖವಾಗಿದೆ.[೪೫]

ಒಟ್ಟಾರೆ ಕಣಕಟ್ಟೆಯಲ್ಲಿ ಆಳ್ವಿಕೆ ಮಾಡಿದ ಸಾಮಂತರನ್ನು ಕುರಿತು ಅಧ್ಯಯನ ಮಾಡಿದಾಗ ಈ ಕೆಳಕಂಡ ಅಂಶಗಳು ಸ್ಪಷ್ಟವಾಗುತ್ತವೆ.

*೧. ಆಸಂಧಿ ನಾಡಿನ ಮುತ್ತರನ ಸಂತತಿಯವರಿಗೆ ಕ್ರಿ.ಶ. ೮೯೦ರಲ್ಲಿ ಕೊಟ್ಟ ಕಳಿಕಟ್ಟೆ ಕ್ರಿ.ಶ. ೧೧೨೯-೩೦ರ ವೇಳೆಗೆ ಮಗರೆ-೩೦೦ರ ಮೊದಲ ಬಾಡವಾಗಿ ಮಾರ್ಪಟ್ಟಿತು.*

*೨. ಇದು ಹೊಯ್ಸಳರ ವಶವಾದ ಮೇಲೆ ಅವರು ಈ ಆಯುಕಟ್ಟಿನ ಗ್ರಾಮವನ್ನು ಅಭಿವೃದ್ಧಿಪಡಿಸಲು ಅರಸೀಕೆರೆಯಿಂದ ಸಾಮಂತ ಸಿಂಗರಸನನ್ನು ಕಳಿಕಟ್ಟೆಗೆ ವರ್ಗಾವಣೆ ಮಾಡಿದರು.*

*೩. ನಂತರ ಸಾಮಂತ ಗೋವಿದೇವ, ಕೆಚ್ಚನ ಮಾಚಯ ನಾಯಕ, ಘಸಣಿ ಮಹದೇವನಾಯಕ ಸಾಮಂತ ಸೋಮೆಯ ನಾಯಕ ಕ್ರಮವಾಗಿ ಆಳಿದರು.*

*೪. ಸಾಮಂತಾಧಿಕಾರಿಗಳ ಆಳ್ವಿಕೆಗೆ ಒಮ್ಮೆ ಒಳಪಟ್ಟ ಕಳಿಕಟ್ಟೆಯಲ್ಲಿ ಹೊಸ ಸಾಮಾಜಿಕ ವರ್ಗ-ದಂಡನಾಯಕರು, ಮಹಾಸಾಮಂತರು, ಪೆರ್ಗಡೆಗಳು, ಪ್ರಭುಗಾವುಂಡಗಳು ಮತ್ತು ಮಹಾಜನರು, ಸ್ಥಾನಿಕರು-ಹುಟ್ಟಿಕೊಂಡಿತು. ಈ ವರ್ಗ ಅಧಿಕ ಉತ್ಪಾದನೆಯನ್ನು ಸಂಗ್ರಹಿಸುವುದು ಮತ್ತು ವ್ಯಾಪಾರ ಮಾರ್ಗದ ಮೇಲೆ ತಮ್ಮ ಹಿಡಿತವನ್ನು ಸ್ಥಾಪಿಸುವುದರ ಜೊತೆಗೆ ಕೆರೆ,*

ಕಾಲುವೆ, ದೇವಾಲಯ, ದೇವರ ವಿಗ್ರಹ ಪ್ರತಿಷ್ಠಾಪನೆ, ದೇವಾಲಯಗಳಿಗೆ ಭೂಮಿ ಮತ್ತು ಹಣದ ರೂಪದಲ್ಲಿ ದಾನ ನೀಡುವುದನ್ನು ಆರಂಭಿಸಿತು. ಸ್ಥಳೀಯರನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವುದು ಇದರ ಹಿಂದಿನ ಉದ್ದೇಶವಾಗಿತ್ತೆನ್ನಬಹುದು.

೫. ಕಳಿಕಟ್ಟೆಯಲ್ಲಿ ತೈಲಿಗರು, ಎಕ್ಕಟಿಗರು, ನೇಕಾರರು, ಶಿಲ್ಪಿಗಳು ಇದ್ದರು. ಈ ಕುಶಲ ಕರ್ಮಿಗಳು ತಮ್ಮದೇ ಆದ ಸಂಘ ರಚಿಸಿಕೊಂಡು ವಾಣಿಜ್ಯ ಚಟುವಟಿಕೆಗಳನ್ನು ನಡೆಸಿದರು.

೬. ಕ್ರಿ.ಶ. ೧೧೨೯ ರಿಂದ ಕ್ರಿ.ಶ. ೧೧೮೫ರ ಅವಧಿಯಲ್ಲಿ ಕಣಕಟ್ಟೆಯಲ್ಲಿ ಸಿಂಗೇಶ್ವರ, ಕಲಿಗೇಶ್ವರ, ಬೆಟ್ಟದ ಕಲಿಗೇಶ್ವರ, ಜಗತೀಶ್ವರ, ನೀಲೇಶ್ವರ, ಕಮ್ಮಟೇಶ್ವರ ದೇವಾಲಯಗಳನ್ನು ಕಟ್ಟುವುದರ ಮೂಲಕ ಊರು ಧಾರ್ಮಿಕ ಕೇಂದ್ರವಾಗಿ ಬೆಳೆಯಿತು. ಇದರಿಂದ ಪುರೋಹಿತ ವರ್ಗಕ್ಕೆ ಹೆಚ್ಚು ಪ್ರಮಾಣದಲ್ಲಿ ಉದ್ಯೋಗವಕಾಶ ದೊರಕಿತು. ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಉತ್ತಮಗೊಂಡವು.

೭. ಕಳಿಕಟ್ಟೆಯು ಮೂರು ತೂಬುಗಳುಳ್ಳ ಒಂದು ವಿಶಾಲವಾದ ಕೆರೆಯ ಬದಿಯಲ್ಲಿದ್ದು ಕ್ರಿ.ಶ. ೧೧೨೯ ರಿಂದ ೧೨೦೦ರ ವೇಳೆಗೆ ಹರಿಯೋಜನ ಕೆರೆ, ಮಹದೇವನ ಕೆರೆ, ಕನ್ನಗೆರೆ, ಬಿಟ್ಟಿ ಸಮುದ್ರ,. ಮಂಗಯ್ಯನ ಕೆರೆಯನ್ನು ಕಟ್ಟಲಾಯಿತು. ಇದರಿಂದ ಹೆಚ್ಚು ಹೆಚ್ಚು ಪ್ರಮಾಣದ ಒಣಭೂಮಿಯುನ್ನು ನೀರಾವರಿಗೊಳಪಡಿಸಲು ಕಾರಣವಾಗಿ ಕೃಷಿಕ್ಷೇತ್ರದಲ್ಲಿ ಅಧಿಕ ಪ್ರಮಾಣದ ಉತ್ಪತ್ತಿಯಾಗಿ ಆರ್ಥಿಕ ಚಟುವಟಿಕೆ ತೀವ್ರಗತಿಯಲ್ಲಿ ನಡೆದು ಆದಾಯ ಹೆಚ್ಚಾಯಿತು.

೮. ಕಲ್ನಾಡಾಗಿದ್ದ ಕಳಿಕಟ್ಟೆ ಸಾಮಂತರ ಅಧೀನದಲ್ಲಿ ಆರ್ಥಿಕವಾಗಿ ತೀವ್ರಗತಿಯಲ್ಲಿ ಬೆಳೆದು ಹೊಯ್ಸಳರ ಕಾಲದಲ್ಲಿ ಒಂದು ಪ್ರಮುಖ ಪಟ್ಟಣವಾಗಿ ಬೆಳೆಯಿತೆನ್ನಬಹುದು.

## ಆಧಾರಸೂಚಿ


೧. ಡಾ. ಹನುಮನಾಯಕ, 'ಹೊಯ್ಸಳರ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ ಕಳಿಕಟ್ಟೆ', **ಇತಿಹಾಸ ದರ್ಶನ**, ಸಂ. ೧೩, ಪುಟ ೨೦೫ ರಿಂದ ೨೧೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು – ೧೯೯೮.

೨. ಎಕ ೧೦ ಅರಸೀಕೆರೆ ೩೧೬ ಅರಕೆರೆ. ೯ನೇ ಶತಮಾನ ಎಕ ೬ ಕಡೂರು ೧೪೦. ಎಕ ೧೧ ಚಿಕ್ಕಮಗಳೂರು ೯೯.

೩. ಅದೇ ೩೧೬.

೪. ಎಕ ೧೧ ಚಿಕ್ಕಮಗಳೂರು ೯೯ ಮುಗಳವಳ್ಳಿ ಎಕ ೧೨ ಕಡೂರು ೨೩೮ ಹಿರಿಯೂರು.

೫. ಅದೇ.

೬ ಎಕ ೧೦ ಅರಸೀಕೆರೆ ೩೧೬ ಅರಕೆರೆ.

೭. ಎಕ ೧೧ ಚಿಕ್ಕಮಗಳೂರು ೯೯ ಮುಗಳವಳ್ಳಿ.

೮. ಎಕ ೧೨ ಕಡೂರು ೨೩೮ ಹಿರಿಯೂರು.

೯. ಸಕಲೇಶ್ ಮ – **ಹೊಯ್ಸಳೋದಯ ಸಂಶೋಧನ** – ಪುಟ ೧೧೩, ಹಿಮಶೈಲ ಪ್ರಕಾಶನ, ಶಿವಮೊಗ್ಗ – ೨೦೦೨.

೧೦. ಎಕ ೧೬ ಚಿಕ್ಕನಾಯಕಹಳ್ಳಿ ೬೨ ಮುದ್ದೇನಹಳ್ಳಿ.

೧೧. ಎಕ ೧೦ ಅರಸೀಕೆರೆ ೭೩, ೮೫, ೯೫, ೮೬, ೮೨, ೮೮, ೭೨, ಕಣಕಟೆ.

೧೨. ಹನುಮನಾಯಕ – ಹೊಯ್ಸಳ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ – ಕಳಿಕಟ್ಟೆ, **ಇತಿಹಾಸ ದರ್ಶನ**, ಸಂ–೧೩, ಪುಟ ೨೦೬.

೧೩. ಎಕ ೧೦ ಅರಸೀಕೆರೆ ೮೭, ೯೦, ೯೧, ೮೯ ಕಣಕಟ್ಟೆ.

೧೪. ಎಕ ೧೦ ಅರಸೀಕೆರೆ ೩೧೬ ಅರಕೆರೆ ಎಕ ೧೧ ಚಿಕ್ಕಮಗಳೂರು ೯೯.

೧೫. ಎಕ ೧೦ ಅರಸೀಕೆರೆ ೭೩ ಕಣಕಟ್ಟೆ.

೧೬. ಅರಸೀಕೆರೆ ೮೮ ಕಣಕಟ್ಟೆ.

೧೭. ಕನ್ನಡ ವಿ.ವಿ. ಶಾ.ಸಂ.–೧ ಬಳ್ಳಾರಿ ಜಿಲ್ಲೆ, ಹರಪನಹಳ್ಳಿ, ಶಾ.ಸಂ. ೨೦೮, ಅರಸೀಕೆರೆ ಕ್ರಿ.ಶ.೧೧೧೧

೧೮. ಎಕ ೧೦ ಅರಸೀಕೆರೆ ೭೩ ಕಣಕಟ್ಟೆ ಕ್ರಿ.ಶ. ೧೧೨೯.

೧೯. ಅದೇ.

೨೦. ಅದೇ.

೨೧. ಅದೇ.

೨೨. ಅದೇ.

೨೩. ಎಕ ೧೦ ಅರಸೀಕೆರೆ ೯೫ ಕಣಕಟ್ಟೆ ಕ್ರಿ.ಶ. ೧೧೪೩.

೨೪. ಅದೇ.

೨೫. ಎಕ ೧೦ ಅರಸೀಕೆರೆ ೯೪ ಕಣಕಟ್ಟೆ.

೨೬. ಎಕ ೧೦ ಅರಸೀಕೆರೆ ೯೫ ಕಣಕಟ್ಟೆ ಕ್ರಿ.ಶ. ೧೧೪೩.

೨೭. ಎಕ ೧೨ ಚಿಕ್ಕನಾಯಕನಹಳ್ಳಿ ೧೮ ತಂಡಗ ಕ್ರಿ.ಶ. ೧೧೫೦.

೨೮. ಅದೇ ಚಿಕ್ಕನಾಯಕನಹಳ್ಳಿ ೨೧ ಹೆಗ್ಗೆರೆ ಕ್ರಿ.ಶ. ೧೧೬೧.

೨೯. ಎಕ ೧೦ ಅರಸೀಕೆರೆ ೯೫ ಕಣಕಟ್ಟೆ ೧೧೪೩.
ಎಕ ೧೨ ಚಿಕ್ಕನಾಯಕನಹಳ್ಳಿ ೧೭, ೨೦, ೨೧, ೨೭, ೩೫, ೪೦, ೪೩.

೩೦. ಎಕ ೧೦ ಅರಸೀಕೆರೆ ೮೬ ಕಣಕಟ್ಟೆ ಕ್ರಿ.ಶ. ೧೧೫೩.

೩೧. ಎಕ ೧೦ ಅರಸೀಕೆರೆ ೯೫ ಕಣಕಟ್ಟೆ ಕ್ರಿ.ಶ. ೧೧೪೩.

೩೨. ಎಕ ೧೨ (ಹಳೆ) ಚಿಕ್ಕನಾಯ್ಕನಹಳ್ಳಿ ೧೬, ೧೭, ೨೦, ೨೧, ೨೭, ೩೫, ೪೦, ೪೩.

೩೩. ಎಕ ೧೦ ಅರಸೀಕೆರೆ ೮೬ ಕಣಕಟ್ಟೆ ೧೧೫೩.

೩೪. ಎಕ ೧೦ ಅರಸೀಕೆರೆ ೮೮ ಕ್ರಿ.ಶ. ೧೧೮೯.

೩೫. ಎಕ ೧೦ ಅರಸೀಕೆರೆ ೮೬ ಕಣಕಟ್ಟೆ ಕ್ರಿ.ಶ. ೧೧೫೩.

೩೬ ಅದೇ.

೩೭. ಅದೇ.

೩೮. ಅದೇ.

೩೯. ಅದೇ ೮೮ ಕಣಕಟ್ಟೆ ೧೧೮೯

೪೦. ಅರಸರ, ಮಹಾಮಂಡಳೇಶ್ವರ ಪಾದಪದ್ಮೋಪಜೀವಿಗಳಾಗಿ ಸ್ಥಳೀಯ ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಿದ್ದ ಸಾಮಂತ ಅರಸರು ತಮ್ಮದೇ ಆದ ವಿಶಿಷ್ಟವಾದ ವೀರರ ಕಾಯ್ದಿಟ್ಟ ಅಂಗರಕ್ಷಕ ಪಡೆಯನ್ನು ಹೊಂದಿರುತ್ತಿದ್ದರು. ಮತ್ತು ಈ ಪಡೆಯು ಸ್ವಾಮಿ ಕಾರ್ಯ ದುರಂಧರರಾಗಿದ್ದು ವಿಶೇಷ ನಿಷ್ಠೆ ಪರಾಕ್ರಮಗಳಿಂದ ಕಾಳಗದಲ್ಲಿ ಅವರನ್ನು ರಕ್ಷಿಸುವ ಹಾಗೂ ಶತ್ರುವ್ಯೂಹವನ್ನು ಭೇದಿಸುವ ವಿಶಿಷ್ಟ ತರಬೇತಿ ಪಡೆದವರಾಗಿರುತ್ತಿದ್ದರು.

೪೧. ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಪುಟ ೧೭೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೨೦೦೧.

೪೨. ಎಕ ೧೦ ಅರಸೀಕೆರೆ ೮೨ ಕ್ರಿ.ಶ. ೧೧೮೫, ಕಮ್ಮಠೇಶ್ವರ ದೇವಾಲಯವು ಸಂಕೋಲೆ ಬಸವಣ್ಣ ಎಂದೇ ಈಗ ಪ್ರಸಿದ್ಧಿಯಾಗಿದ್ದು ಅದು ಕಲ್ಯಾಣಿ ಎದುರಿಗೆ ಇದೆ. ಪಾಳು ಬಿದ್ದಿರುವ ಈ ದೇವಾಲಯದಲ್ಲಿ ಪೂಜಾಧಿಕಾರ್ಯಗಳು ನಡೆಯುತ್ತಿವೆ.

೪೩. ಎಕ ೧೦ ಅರಸೀಕೆರೆ ೮೮ ಕಣಕಟ್ಟೆ ಕ್ರಿ.ಶ. ೧೧೮೫.

೪೪. ಅದೇ.

೪೫. ಅದೇ.

ಡಾ. ಗಿರಿಜಾ*

# ಕಲ್ಕಣಿನಾಡು ಒಂದೆ ಅಥವಾ ಎರಡೆ ?

ಸಂಡೂರು ತಾಲ್ಲೂಕಿನ ನಾರಿಹಳ್ಳ ಯೋಜನೆಯ ಪ್ರದೇಶದಲ್ಲಿ ಯೋಜನೆಯ ಕೆಲಸಕ್ಕೆ ಸಂಬಂಧಿಸಿದಂತೆ ನೆಲವನ್ನು ಅಗೆಯುವಾಗ ದೊರೆತ ಕ್ರಿ.ಶ. ೧೨೨೪ರ ಅವಧಿಯ ತಾಮ್ರ ಶಾಸನವು, ವೀರಬಲ್ಲಾಳನ ದಂಡನಾಯಕ ಅಮಿತಯ್ಯನು ಕಲ್ಕಣಿನಾಡ ಅಗ್ರಹಾರ ಶ್ರೀಪುರ ಗ್ರಾಮದ ಮಧ್ಯೆ ತ್ರಿಕೂಟ ದೇವಾಲಯ ಕಟ್ಟಿಸಿಕೊಂಡು ಕಸೀವುರ ಗ್ರಾಮವನ್ನು, ತ್ರಿಕೂಟ ದೇವಾಲಯದ ಜೀರ್ಣೋದ್ಧಾರಕ್ಕಾಗಿ ನೀಡಿ ಉಲ್ಲೇಖವನ್ನು ನೀಡುತ್ತದೆ.

ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಗ್ರಾಮದ ಮೂಲೆ ಸಿಂಗೇಶ್ವರ ದೇವಸ್ಥಾನದ ಬಾಗಿಲ ಬಲಕ್ಕೆ ನಿಲ್ಲಿಸಿರುವ ಕ್ರಿ.ಶ. ೧೨೨೩ ರ ಶಾಸನವು ವೀರನರಸಿಂಹನ ಮಹಾಸಾಮಂತ ಮೊರಸಾಧಿರಾಯನ ಎಡಗಯ್ಯ ಸೇನಾನಾಯಕ ಕಾಚಿದೇವನು ಕಲ್ಕಣಿನಾಡ ಬೆಳ್ಳೂರ ಸ್ಥಳದಲ್ಲಿ ತ್ರಿಕೂಟಗಳನ್ನು ನಿರ್ಮಿಸಿ ಆ ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ಸಿರಿರಂಗಪುರ, ಶ್ರೀರಂಗಪುರ, ಕರಿಯಜೀಯನಹಳ್ಳಿ, ತಗಚೆಗೆರೆಯಲ್ಲಿಯ ಕೆಲವು ಭೂಮಿಗಳನ್ನು ದತ್ತಿ ಬಿಡುವನು, ಈ ದತ್ತಿಯನ್ನು ಸಿಂದೆನಾಯಕ, ಮಾಚಿಮಯ್ಯರು ತೆಗೆದುಕೊಳ್ಳುವರು ಎಂದು ಹೇಳುವುದು.

ನಾಗಮಂಗಲ ಗ್ರಾಮದ ಕ್ರಿ.ಶ. ೧೧೩೪ರ ಶಾಸನವು ವಿಷ್ಣುವರ್ಧನನ ಪಟ್ಟದ ರಾಣಿ ಬಮ್ಮಲದೇವಿ ಕಲ್ಕಣಿ ನಾಡೊಳಗಣ ನಾಗಮಂಗಲದಲ್ಲಿ ಶಂಕರನಾರಾಯಣದೇವರ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿ ಅರಿಕನ ಕಟ್ಟದೇವರ ಸ್ನಾನ ನಿವೇದ್ಯ ಮೊದಲಾದ ಭೋಗಕ್ಕೆ ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ.

ಈ ಮೇಲಿನ ಮೂರು ಶಾಸನಗಳಲ್ಲಿ ಕಂಡುಬರುವ ಕಲ್ಕಣಿನಾಡು ಪ್ರದೇಶವು ಇಂದು ಯಾವ ಪ್ರದೇಶಕ್ಕೆ ಸೇರಿದೆ ಎಂಬುದು ಇಲ್ಲಿಯ ಮುಖ್ಯ ಚರ್ಚೆಯಾಗಿದೆ.

ಸಂಡೂರು ತಾಲ್ಲೂಕಿನ ಶಾಸನದಲ್ಲಿ ಉಲ್ಲೇಖ ವಾಗಿರುವ ಕಲ್ಕಣಿ ನಾಡಿನ ವಿಷಯದ ಬಗ್ಗೆ ಡಾ. ಚನ್ನಬಸವ ಹಿರೇಮಠರು ಈ ಕೆಳಗಿನಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ: ನಾಡೊಳಗಣ ಅಗ್ರಹಾರಂ ಶ್ರೀಪುರ' ಗ್ರಾಮ ಎಂದು ಉಲ್ಲೇಖಿಸಿದ್ದಾರೆ.

ಬಳ್ಳಾರಿ ತಾಲ್ಲೂಕಿನ ಕುರುಗೋಡು ಶಾಸನವು 'ಶ್ರೀಪುರವನ್ನು ಅಗ್ರಹಾರವ ಮಾಡುವ ಸಮಯದಲ್ಲಿ ಅಲ್ಲಿಯ ಸ್ವಯಂಭು ದೇವಾಲಯದ ಸ್ಥಾನಾಚಾರ್ಯರಾದ ಬಾಲ ಶಿವಾಚಾರ್ಯರಿಗೆ ಕೊತ್ತಲಜಿಂತೆ ಗ್ರಾಮವನ್ನು ನೀಡಿದ ಉಲ್ಲೇಖವಿದೆ (ಕ.ವಿ.ವಿ.ಶಾ. ಸಂ. ೧, ಶಾಸನ ಸಂಖ್ಯೆ ೧೮, ಬ.ತಾ. ಪುಟ ೨೬). ಈ ಎರಡು ಶಾಸನಗಳಲ್ಲಿಯ ಶ್ರೀಪುರ (ಶಿವಪುರ)ಗಳು ಬಹುಶಃ ಅಭಿನ್ನವೇ ಆಗಿರಬೇಕು ಎಂದು ಚನ್ನಬಸವ ಹಿರೇಮಠರು ತಿಳಿಸುತ್ತ ಇದು ಒಂದು ವೇಳೆ ನಿಜವಾದರೆ ಕಲ್ಕಣಿನಾಡು ಬಲ್ಲಕುಂದೆಯ ಉಪವಿಭಾಗವೆಂದು ಹೇಳಬೇಕಾಗುತ್ತದೆ ಎಂದಿದ್ದಾರೆ. ಈ ವಿಭಾಗವು ಇಂದಿನ ಹೊಸಪೇಟೆ ಕೂಡ್ಲಿಗಿ, ಸೊಂಡೂರು ತಾಲ್ಲೂಕಿನ ಕೆಲವು ಹಳ್ಳಿಗಳ ವ್ಯಾಪ್ತಿ ಪಡೆದಿತ್ತೆಂದು ಸ್ಥೂಲವಾಗಿ ಹೇಳಬಹುದು ಎಂದಿದ್ದಾರೆ. ಈ ಶಿವಪುರವು ಪೂರ್ವದಲ್ಲಿ ಹಂದಿಗೊಳ ದಕ್ಷಿಣದಲ್ಲಿ ಹೊನ್ನಳ್ಳಿಯ ಮಧ್ಯದಲ್ಲಿದ್ದಿತೆಂದು ತಾರಾನಗರ ಶಾಸನ ಹೇಳಿದೆ. ಇದಲ್ಲದೆ ದಣಾಯಕರ ಪ್ರಭುಸಾಮ್ಯಕ್ಕೆ ವೆಗ್ಗಡೆಯಹಳ್ಳಿ ಮತ್ತು ದಣಾಯಕನ ಕೆರೆಗಳನ್ನು ನೀಡಲಾಗಿತ್ತು ಕೊತ್ತಲಜಿಂತೆ ಗ್ರಾಮವು ಬಲ್ಲಕುಂದೆ ನಾಡಿನ ಪೂರ್ವ ಸೀಮೆಯಾಗಿದ್ದರೆ ಶಿವಪುರವು ಪಶ್ಚಿಮದ ಸೀಮೆಯಾಗಿರಬೇಕು ಎಂದಿರುವರು (ಪ್ರಾ.ಕ.ಆ.ವಿ. ಪುಟ ೧೨೧). ಒಟ್ಟಿನಲ್ಲಿ ಬಲ್ಲಕುಂದೆ ನಾಡಿನ ಉಪವಿಭಾಗಕ್ಕೆ ಸೇರಬಹುದಾದ ಕಲ್ಕಣಿನಾಡು ಎಂಬ ಆಡಳಿತ ವಿಭಾಗವು ಸಂಡೂರು ತಾಲ್ಲೂಕಿನ ಕೆಲವು ಹಳ್ಳಿಗಳ ವ್ಯಾಪ್ತಿಯನ್ನು ಒಳಗೊಂಡ ಪ್ರದೇಶವಾಗಿದ್ದಿತೆಂದು ಈ ಮೇಲಿನ ಶಾಸನಾಧಾರಗಳಿಂದ ಡಾ. ಚನ್ನಬಸವ ಹಿರೇಮಠರು ಅಭಿಪ್ರಾಯಪಡುತ್ತಾರೆ (ಸಂ.ತಾ. ೨೦, ಚೌ.ಅ. ೧೮೯).

ಆದರೆ ಡಾ. ಚನ್ನಬಸವ ಹಿರೇಮಠರು ಹೇಳಿರುವ ಸಂಡೂರು ತಾಲ್ಲೂಕಿನಲ್ಲಿ ಕಂಡುಬರುವ ಕಲ್ಕಣಿನಾಡು ಮತ್ತು ನಾಗಮಂಗಲ ತಾಲೂಕಿನಲ್ಲಿ ಕಂಡುಬರುವ ಎರಡು ಶಾಸನಗಳಲ್ಲಿಯ ಕಲ್ಕಣಿನಾಡುಗಳು ಒಂದೆ ಆಗಿವೆಯೇ ?

* ವೀರಭದ್ರೇಶ್ವರ ನಿಲಯ, # ೨೯೭/ಎ, ಟೀಚರ್ಸ್ ಕಾಲೋನಿ, ಎಂ.ಪಿ. ಪ್ರಕಾಶ್ ನಗರ, ಬಳ್ಳಾರಿ ಜಿಲ್ಲೆ, ಹೊಸಪೇಟೆ.

ಅಥವಾ ಬೇರೆ ಬೇರೆಯಾಗಿವೆ ? ಒಂದು ವೇಳೆ ಈ ಎರಡೂ ತಾಲ್ಲೂಕಿನಲ್ಲಿ ಕಂಡುಬರುವ ಕಲ್ಕಣಿನಾಡು ಒಂದೇ ಆಗಿದ್ದಲ್ಲಿ, ಸಂಡೂರು ತಾಲ್ಲೂಕಿನ ಶಾಸನೋಲ್ಲೇಖಿತ ಶ್ರೀಪುರ ಮತ್ತು ನಾಗಮಂಗಲ ತಾಲ್ಲೂಕಿನಲ್ಲಿಯ ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಸಿರಿರಂಗಪುರ, ಶ್ರೀರಂಗಪುರ, ತಗಚಗೆರೆ, ಕರಿಯಜೀಯ್ಯನ ಹಳ್ಳಿಗಳು ಈ ನಾಡಿನ ಆಸುಪಾಸಿನಲ್ಲಿಯೇ ಇರುವಂತೆ ಎಂಬ ಅನುಮಾನಕ್ಕೆ ಆಸ್ಪದವನ್ನುಂಟು ಮಾಡುತ್ತದೆ. ಏಕೆಂದರೆ ನಾಗಮಂಗಲ ತಾಲ್ಲೂಕಿನ 'ಬೆಳ್ಳೂರು' ಎಂಬುದು ಹಿಂದೆ 'ಸ್ಥಳ' ಎಂಬ ಆಡಳಿತ ವಿಭಾಗವಾಗಿದ್ದು, ಅದರಲ್ಲಿ ಸಂಡೂರು ತಾಲ್ಲೂಕಿನ ಶಾಸನೋಲ್ಲೇಖಿತ ಶ್ರೀಪುರ ಎಂಬುದು ಅಗ್ರಹಾರವಾಗಿರಬೇಕು. ಈ ಅಗ್ರಹಾರದಲ್ಲಿ ಮದುಮೃತೇಶ್ವರ, ವಾಮೇಶ್ವರ, ಲಕ್ಷ್ಮೀನಾರಾಯಣ ದೇವರುಗಳ ತ್ರಿಕೂಟ ದೇವಾಲಯಗಳನ್ನು ಕಟ್ಟಿಸಿ ಈ ತ್ರಿಕೂಟ ದೇವಾಲಯಗಳ ಉದ್ಧಾರಕ್ಕಾಗಿ ಕೊಂಡುಕಸೀವುರ ಎಂಬ ಗ್ರಾಮವನ್ನು ದಾನ ನೀಡಿರಬೇಕು ಮತ್ತು ಅದರಂತೆ ಇದೇ ಕಲ್ಕಣಿ ನಾಡಿನಲ್ಲಿ ಕಂಡುಬರುವ ಬೆಳ್ಳೂರು ಸ್ಥಳದಲ್ಲಿ ಸಿಂದೇಶ್ವರ ದೇವರ, ಗೋಪಾಳದೇವರ ಲಕ್ಷ್ಮೀನಾರಾಯಣ ದೇವರ ದೇವಾಲಯಗಳನ್ನು ನಿರ್ಮಿಸಿ ಈ ತ್ರಿಕೂಟ ದೇವಾಲಯಗಳ ಉದ್ಧಾರಕ್ಕಾಗಿ ಸಿರಿರಂಗಪುರ, ಶ್ರೀರಂಗಪುರ, ಕರಿಯಜಿಯ್ಯನಹಳ್ಳಿ, ತಗಚಗೆರೆ ಗ್ರಾಮಗಳ ಕೆಲವು ಭೂಮಿಗಳನ್ನು ದಾನ ನೀಡಿರಬೇಕು. ಅಲ್ಲದೆ ನಾಗಮಂಗಲ ತಾಲ್ಲೂಕಿನ ಮತ್ತೊಂದು ಶಾಸನ ತಿಳಿಸುವಂತೆ ನಾಗಮಂಗಲವು ಈ ಕಲ್ಕಣಿ ನಾಡಿನಲ್ಲಿಯ ಒಂದು ಗ್ರಾಮವಾಗಿತ್ತೆಂದು ಸ್ಪಷ್ಟವಾಗಿ ತಿಳಿಸುವುದು.

ಹಾಗೂ ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಮತ್ತು ನಾಗಮಂಗಲದಲ್ಲಿರವುದು ಶಿಲಾಶಾಸನಗಳಾಗಿದ್ದು, ಸಂಡೂರು ತಾಲ್ಲೂಕಿನಲ್ಲಿ ದೊರೆತಿರುವುದು ತಾಮ್ರಶಾಸನವಾಗಿದೆ.

ಇದನ್ನು ಗಮನಿಸಿದರೆ ಈ ತಾಮ್ರಶಾಸನವು ಬಹುಶಃ ಸಂಡೂರು ಪರಿಸರಕ್ಕೆ ಸೇರಿದ್ದಾಗಿರದೆ, ಅದು ನಾಗಮಂಗಲ ತಾಲ್ಲೂಕಿಗೆ ಸೇರಿದ ಯಾವುದೋ ಒಬ್ಬ ಬ್ರಾಹ್ಮಣರ ಮನೆತನಕ್ಕೆ ಸೇರಿದ್ದಾಗಿರಬೇಕು ಅನಿಸುತ್ತದೆ.

ಏಕೆಂದರೆ ಸಂಡೂರು, ಹೊಸಪೇಟೆ, ಕೂಡ್ಲಿಗಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡುಬರುವ ಯಾವ ಕಡೆಯೂ ಶ್ರೀಪುರ ಎಂಬ ಹೆಸರಿನ ಗ್ರಾಮ ಕಾಣಸಿಗುವುದಿಲ್ಲ.

ಆದರೆ ಈ ಹೆಸರಿನ ಗ್ರಾಮಗಳು ನಾಗಮಂಗಲ ತಾಲ್ಲೂಕಿನಲ್ಲಿ ಕಾಣಬಹುದಾಗಿದೆ. ಶ್ರೀಪುರ ಎಂಬುದು ಬಹುಶಃ ನಾಗಮಂಗಲ ತಾಲ್ಲೂಕಿನ ಸಿರೇಪುರವಾಗಿರಬೇಕು. ಅದರಂತೆ ಹೊಂನಾರಾಳಿ ಎಂಬುದು ಹೊನ್ನೆನಹಳ್ಳಿ ಆಗಿರಬೇಕು.

ಕಲ್ಕಣಿನಾಡಿನ ವಿಷಯವನ್ನು ತಿಳಿಸುವ ತಾಮ್ರಶಾಸನ ಸಂಡೂರು ತಾಲ್ಲೂಕಿನಲ್ಲಿ ದೊರೆತಿರುವುದನ್ನು ಗಮನಿಸಿದರೆ ಬಹುಶಃ ಕಲ್ಕಣಿ ನಾಡಿನಲ್ಲಿದ್ದ ಒಂದು ಬ್ರಾಹ್ಮಣ ಮನೆತನದವರಿಗೆ ಶ್ರೀಪುರ ಅಗ್ರಹಾರವನ್ನು ಮತ್ತು ತ್ರಿಕೂಟಾಚಲದ ಜೀರ್ಣೋದ್ಧಾರಕ್ಕಾಗಿ ಕೊಂಡು ಕಾಸೀವುರ ಗ್ರಾಮವನ್ನು ದಾನ ನೀಡಿರಬೇಕು. ಈ ದಾನವನ್ನು ಪಡೆದಂತ ಬ್ರಾಹ್ಮಣ ವಂಶದವರು ಕಾರಣಾಂತರಗಳಿಂದ ಈ ಸಂಡೂರು ಪ್ರದೇಶಕ್ಕೆ ವಲಸೆ ಬಂದಿರಬೇಕು. ಆ ಸಂದರ್ಭದಲ್ಲಿ ಈ ತಾಮ್ರ ಶಾಸನವನ್ನು ತಮ್ಮ ನಂತರದ ತಲೆಮಾರಿನವರಿಂದ ಸಂರಕ್ಷಿಸಲು ಸಾಧ್ಯವಾಗದೆ ಇದ್ದ ಸಂದರ್ಭದಲ್ಲಿ ಭೂಮಿಯಲ್ಲಿ ಹೂತಿಟ್ಟಿರಬೇಕು. ತದನಂತರದ ಕಾಲದಲ್ಲಿ ನಾರಿಹಳ್ಳ ಯೋಜನೆಯ ಕೆಲಸ ಪ್ರಾರಂಭವಾದ ಸಂದರ್ಭದಲ್ಲಿ ನೆಲ ಅಗೆಯುವಾಗ ಈ ತಾಮ್ರಪಟಗಳು ದೊರೆತಿವೆ.

ಒಟ್ಟಿನಲ್ಲಿ ಹೇಳುವುದಾದರೆ ಡಾ. ಚನ್ನಬಸವ ಹಿರೇಮಠರು ಊಹಿಸಿರುವ ಶ್ರೀಪುರ ಎಂಬ ಗ್ರಾಮವು ಹೊಸಪೇಟೆ, ಕೂಡ್ಲಿಗಿ, ಸಂಡೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡುಬರುವುದಿಲ್ಲ. ಅದರ ಬದಲು ಕೂಡ್ಲಿಗೆ ತಾಲ್ಲೂಕಿಗೆ ಸೇರಿದ ಶಿವಪುರ ಎಂಬ ಗ್ರಾಮವನ್ನು ಮಾತ್ರ ಕಾಣಬಹುದಾಗಿದೆ. ಈ ಶಿವಪುರವೇ ಶ್ರೀಪುರವಾಗಿದ್ದಿರಬೇಕು ಎಂದು ಅವರು ಹೇಳುತ್ತಾರೆ. ಆದರೆ ನಾಗಮಂಗಲ ತಾಲ್ಲೂಕಿನಲ್ಲಿ ಈ ಸಿರಿರಂಗಪುರ, ಶ್ರೀರಂಗಪುರ ಎಂಬ ಹೆಸರಿರುವ ಊರುಗಳನ್ನು ಕಾಣುತ್ತೇವೆ. ಅಲ್ಲದೆ ಈ ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಎಂಬುದು 'ಸ್ಥಳ' ಎಂಬ ಆಡಳಿತವಾಗಿತ್ತೆಂದು ಶಾಸನವು ತಿಳಿಸುವುದು. ಐದು ಹಳ್ಳಿಗಳು ಸೇರಿ ಒಂದು 'ಸ್ಥಳ' ಎಂಬ ಆಡಳಿತ ವಿಭಾಗ ನಿರ್ಮಾಣವಾಗುತ್ತಿತ್ತು. ಇಲ್ಲಿ ಈ ಎರಡು ಶಾಸನಗಳಲ್ಲಿಯ ಶ್ರೀಪುರ ಅಗ್ರಹಾರ, ಸಿರಿರಂಗಪುರ, ಶ್ರೀರಂಗಪುರ, ತಗಚಗೆರೆ ಕರಿಯ ಜೀಯನಹಳ್ಳಿ ಒಟ್ಟು ಶಾಸನೋಲ್ಲೇಖಿತ ಐದು ಗ್ರಾಮಗಳು ಸೇರಿ ಒಂದು ಸ್ಥಳ ಎಂಬ ಆಡಳಿತ ವಿಭಾಗವಾಗಿ ಈ ಬೆಳ್ಳೂರು ಸ್ಥಳ ಎಂಬ ಆಡಳಿತ ವಿಭಾಗವಾಗಿತ್ತೇ ಎಂಬ ಅನುಮಾನ ಉಂಟಾಗುತ್ತದೆ.

ಈ ಎಲ್ಲ ಅಂಶಗಳನ್ನು ಪರಿಗಣಿಸಿ ಈ ಕೆಳಗಿನ ತೀರ್ಮಾನಕ್ಕೆ ಬರಬಹುದಾಗಿದೆ :

೧. ಸಂಡೂರು ತಾಲ್ಲೂಕಿನಲ್ಲಿ ಕಂಡುಬರುವ ದೊರವಡಿನಾಡು ಬಲ್ಲಕುಂದೆನಾಡಿನ ಒಂದು ದೊಡ್ಡ ಉಪವಿಭಾಗವಾಗಿದ್ದು, ಸಂಡೂರು ತಾಲ್ಲೂಕಿನ ಸ್ವಾಮಿ ಮಲೆಯು (ಕುಮಾರಸ್ವಾಮಿ ಬೆಟ್ಟವನ್ನೊಳಗೊಂಡ ಪ್ರದೇಶ) ಬಲ್ಲಕುಂದೆ ನಾಡಿನ ಉಪವಿಭಾಗವಾಗಿದ್ದ ವಿಷಯ ಈಗಾಗಲೆ ಎಲ್ಲ ವಿದ್ವಾಂಸರ ಗಮನಕ್ಕೆ ಬಂದಿರುವ ವಿಷಯವಾಗಿದೆ.

೨. ಸಂಡೂರು ತಾಲ್ಲೂಕಿನ ತಾರಾನಗರ ಶಾಸನ ಮತ್ತು ಬಳ್ಳಾರಿ ತಾಲ್ಲೂಕಿನ ಕುರುಗೋಡು ಶಾಸನದಲ್ಲಿರುವ ಶ್ರೀಪುರ ಅಗ್ರಹಾರವು ಒಂದೆ ಆಗಿದ್ದಲ್ಲಿ ಕಲ್ಕಣಿನಾಡು ಬಲ್ಲಕುಂದೆ ನಾಡಿನ ಉಪವಿಭಾಗವಾಗುತ್ತದೆಂದು, ಇಲ್ಲದಿದ್ದರೆ ಇಲ್ಲವೆಂದು ಡಾ. ಚನ್ನಬಸವ ಹಿರೇಮಠರಿಂದ ತಿಳಿದುಬರುವುದು.

೩. ವಲಸೆಯ ಕಾರಣದಿಂದ ಈ ತಾಮ್ರಶಾಸನವು ನಾಗಮಂಗಲದ ಕಡೆಯಿಂದ ಸಂಡೂರು ಕಡೆಗೆ ಬಂದಿರುವ ಸಾಧ್ಯತೆ ಇದೆ.

೪. ಈ ಕಾರಣದಿಂದ ಕಲ್ಕಣಿನಾಡು ಎಂಬುದು ಸಂಡೂರು ಪರಿಸರದ್ದಾಗಿರದೆ ಅದು ನಾಗಮಂಗಲ ಪರಿಸರದ ನಾಡಾಗಿದೆ ಎಂದು ಹೇಳಲಾಗುವುದು.

೫. ಆದ್ದರಿಂದ ಈವರೆಗಿನ ವಿದ್ವಾಂಸರ ಅಭಿಪ್ರಾಯ ಈ ಕಾರಣದಿಂದ ಮಾನ್ಯವಾಗುವುದಿಲ್ಲ ಎಂದು ಹೇಳಲಾಗುತ್ತದೆ.

## ಆಧಾರಸೂಚಿ


೧. ಪ್ರಾಚೀನ ಕರ್ನಾಟಕ ಆಡಳಿತ ವಿಭಾಗ.

೨. ಕರ್ನಾಟಕ ಗ್ರಾಮನಾಮ ಸೂಚಿ.

೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧.
   ೧. ಸಂಡೂರು ತಾಲ್ಲೂಕು.
   ೨. ಬಳ್ಳಾರಿ ತಾಲ್ಲೂಕು.

೪. ಎ.ಕ. ಸಂ. ೭, ನಾಗಮಂಗಲ ತಾಲ್ಲೂಕು.

ಡಾ. ಬಿ. ಸುರೇಶ*

# ಗುಂಜಿಗನೂರಿನ ಐತಿಹಾಸಿಕ ದೇಗುಲ-ಶಿಲ್ಪಗಳು

ಕರ್ನಾಟಕದ ಮಧ್ಯಭಾಗದಲ್ಲಿರುವ ಚಿತ್ರದುರ್ಗವು ಐತಿಹಾಸಿಕವಾಗಿ ತುಂಬಾ ಮಹತ್ವ ಪಡೆದ ಜಿಲ್ಲೆಯಾಗಿದೆ. ಇದಕ್ಕೆ ಸಾಕ್ಷಿಯೆಂಬಂತೆ ಜಿಲ್ಲೆಯಾದ್ಯಂತ ಪ್ರಮುಖವೆನಿಸಿರುವ ಅನೇಕ ದೇವಾಲಯಗಳು, ಶಿಲ್ಪಗಳು, ಕೋಟೆ-ಕೊತ್ತಲಗಳು ಕಂಡುಬರುತ್ತವೆ. ಈ ನಿಟ್ಟಿನಲ್ಲಿ ಗುಂಜಿಗನೂರಿನಲ್ಲಿರುವ ಪ್ರಾಚ್ಯಾವಶೇಷಗಳನ್ನು ಹಾಗೂ ಗ್ರಾಮದ ಐತಿಹಾಸಿಕ ಮಹತ್ವವನ್ನು ಪ್ರಸ್ತುತ ಲೇಖನದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಚಿಕ್ಕಜಾಜೂರು ರೈಲ್ವೆ ಜಂಕ್ಷನ್‌ನಿಂದ ಉತ್ತರಕ್ಕೆ ಅಂದರೆ, ದಾವಣಗೆರೆಗೆ ಹೋಗುವ ರಸ್ತೆಯಲ್ಲಿ ಸುಮಾರು ೨ ಕಿ.ಮೀ. ಚಲಿಸಿ ಬಲಕ್ಕೆ ತಿರುಗಿ ೧ ಕಿ.ಮೀ. ಕ್ರಮಿಸಿದರೆ ಗುಂಜಿಗನೂರು ಗ್ರಾಮ ಸಿಗುತ್ತದೆ. ಗ್ರಾಮದಲ್ಲಿ ಐತಿಹಾಸಿಕ ಮಹತ್ವವನ್ನು ಸಾರುವ ಅನೇಕ ಕುರುಹುಗಳಿದ್ದು ಅವುಗಳಲ್ಲಿ, ಈಶ್ವರ ದೇವಾಲಯ, ವಿಷ್ಣು, ಸೂರ್ಯ, ಭೈರವ ಹಾಗು ಇನ್ನಿತರ ಶಿಲ್ಪಗಳು ಪ್ರಮುಖವಾಗಿವೆ. ಗ್ರಾಮದ ಉತ್ತರಕ್ಕೆ ಊರ ಹೊರಗಡೆ ಲೋಕೇಶ್ವರ/ಈಶ್ವರ ದೇವಾಲಯವಿದೆ. ದೇವಾಲಯದ ಪಕ್ಕದಲ್ಲೆ ಇರುವ ಕ್ರಿ.ಶ. ೧೧೨೮ರ ಶಾಸನವು ದೇವಾಲಯವನ್ನು, ಕುಂಭೇಶ್ವರ ದೇವಾಲಯ ಎಂದು ಹೆಸರಿಸುತ್ತದೆ. ಹೊರಗಿನಿಂದ ನೋಡಿದರೆ ಇದೊಂದು ಸಾಧಾರಣ ಹಾಗೂ ಸರಳ ದೇವಾಲಯವೆನಿಸುತ್ತದೆ. ಆದರೆ ಒಳ ಹೊಕ್ಕು ನೋಡಿದರೆ ವಾಸ್ತುಶೈಲಿ ದೃಷ್ಟಿಯಿಂದ ಇದೊಂದು ಪ್ರಮುಖ ದೇವಾಲಯವೆನಿಸದಿರದು. ಈ ಭಾಗದಲ್ಲಿ ಕಂಡುಬರುವ ದೇವಾಲಯಗಳಲ್ಲಿ ಹೆಚ್ಚಿನದಾಗಿ ಸ್ಥಳೀಯವಾಗಿ ಆಳ್ವಿಕೆ ನಡೆಸಿದ ಚಿತ್ರದುರ್ಗದ ಪಾಳೆಯಗಾರರ ಕಾಲಕ್ಕೆ ಸೇರಿದವುಗಳಾದರೆ, ನಂತರದವು ಪಾಳೆಯಗಾರರಿಗಿಂತಲೂ ಹಿಂದೆ ಆಳ್ವಿಕೆ ನಡೆಸಿದ ಹೊಯ್ಸಳ ಕಾಲಕ್ಕೆ ಸೇರಿದವುಗಳಾಗಿವೆ. ಆದರೆ ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸೇರಿದ ದೇವಾಲಯಗಳ ಸಂಖ್ಯೆ ಕಡಿಮೆ ಎಂದೇ ಹೇಳಬಹುದು. ಅಂತಹ ವಿರಳ ದೇವಾಲಯಗಳಲ್ಲಿ ಇದೂ ಒಂದು. ಶಾಸನವೇ ಉಲ್ಲೇಖಿಸುವಂತೆ ದೇವಾಲಯದ ಕಾಲಮಾನ ಕ್ರಿ.ಶ. ೧೨ನೇ ಶತಮಾನದ ಆದಿಭಾಗ.

ದೇವಾಲಯವು ದಕ್ಷಿಣಾಭಿಮುಖವಾಗಿದೆ. ತ್ರಿಕೂಟ ಶೈಲಿಯಲ್ಲಿರುವ ಈ ದೇವಾಲಯವು ಒಂದು ಮುಚ್ಚಿದ ಹಾಗು ಎರಡು ತೆರೆದ ಗರ್ಭಗೃಹಗಳನ್ನು ಹೊಂದಿದೆ. ಪ್ರಾಯಶಃ ಮುಚ್ಚಿದ ಗರ್ಭಗೃಹವೇ ಮುಖ್ಯ ಗರ್ಭಗೃಹವಾಗಿರಬಹುದು. ಈ ಗರ್ಭಗೃಹದಲ್ಲೇ ಶಿವಲಿಂಗವಿರುವುದರಿಂದ ಇದಕ್ಕೆ ಲೋಕೇಶ್ವರ (ಕುಂಭೇಶ್ವರ) ಎಂದು ಕರೆಯಲಾಗುತ್ತಿದೆ. ಪೂರ್ವಾಭಿಮುಖವಾಗಿರುವ ಮುಖ್ಯ ಗರ್ಭಗೃಹದಲ್ಲಿ ಶಿವಲಿಂಗ, ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿ ಸ್ಥಳೀಯವಾಗಿ ರಂಗನಾಥನೆಂದು ಕರೆಯಲ್ಪಡುವ ವಿಷ್ಣು ಹಾಗೂ ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದಲ್ಲಿ ಸೂರ್ಯ ಶಿಲ್ಪಗಳಿವೆ. ಹಾಗಾಗಿ ಇದನ್ನು ತ್ರೈಪುರುಷ ದೇವಾಲಯ ಎನ್ನಬಹುದು. ಇದೇ ರೀತಿಯಾಗಿ ಶಿವಲಿಂಗ, ವಿಷ್ಣು ಹಾಗು ಸೂರ್ಯ (ಸೂರ್ಯ ಪೀಠದ ಮೇಲೆ ಈಗ ಗಣೇಶ ಶಿಲ್ಪ ಇದೆ) ಶಿಲ್ಪಗಳಿರುವುದನ್ನು ಹುಬ್ಬಳ್ಳಿಯ ಭವಾನಿಶಂಕರ ದೇವಾಲಯ, ಬಾಗಳಿಯ (ದಾವಣಗೆರೆ) ಕಲ್ಲೇಶ್ವರ ಹಾಗು ಇನ್ನಿತರ ದೇವಾಲಯಗಳಲ್ಲಿ ಕಾಣುತ್ತೇವೆ. ಭವಾನಿಶಂಕರ ದೇವಾಲಯವನ್ನು ತ್ರೈಪುರುಷ ದೇವಾಲಯವೆಂದೇ ಗುರುತಿಸಲಾಗುತ್ತಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದ ಪ್ರವೇಶದ್ವಾರ ವಜ್ರ-ವಲ್ಲಿ-ಸ್ತಂಭ-ಪದ್ಮಶಾಖೆಗಳನ್ನು ಹೊಂದಿದೆ. ಈ ಶಾಖೆಗಳು ಲಲಾಟಪಟ್ಟಿಕೆಯಲ್ಲಿಯೂ ಮುಂದುವರೆದಿವೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಪೇಧ್ಯಭಾಗದಲ್ಲಿ ಪೂರ್ಣಕುಂಭದ ಅಲಂಕರಣವಿದೆ. ಮೂರು ಗರ್ಭಗೃಹಗಳ ಅಂತರಾಳಕ್ಕೆ ಹೊಂದಿಕೊಂಡಂತೆ ನಾಲ್ಕು ಕಂಬಗಳ ನವರಂಗವಿದೆ. ಉಳಿದೆರೆಡು ಗರ್ಭಗೃಹಗಳು ತೆರೆದ ಅಂತರಾಳಗಳನ್ನು ಹೊಂದಿವೆ. ಇಲ್ಲಿಯ ಕಂಬಗಳು ಕಲ್ಯಾಣದ ಚಾಲುಕ್ಯರ ಆರಂಭಕಾಲದ ದೇವಾಲಯಗಳ ಕಂಬಗಳ ಲಕ್ಷಣಗಳನ್ನು ಹೋಲುತ್ತವೆ. ಕಂಬಗಳು ಪೀಠ, ಚೌಕ, ಬಹುಮುಖ, ಚೌಕ, ವೃತ್ತಾಕಾರದ ಪಲಕ ಹಾಗೂ ಸರಳ ಬೋದಿಗೆಗಳನ್ನು ಹೊಂದಿವೆ. ಕೆಲವು ಕಂಬಗಳ ಪಾದದ ಚೌಕಭಾಗದಲ್ಲಿ ಇತ್ತೀಚೆಗೆ ಕೆತ್ತಲ್ಪಟ್ಟಿರುವ ಆಧುನಿಕ (ಶಿವಲಿಂಗ, ಅಕ್ಕಮಹಾದೇವಿ ಇತ್ಯಾದಿ) ಉಬ್ಬು ಶಿಲ್ಪಗಳಿವೆ.

* ಸಹಾಯಕ ಪ್ರಾಧ್ಯಾಪಕರು, ಸ್ನಾತಕೋತ್ತರ ಇತಿಹಾಸ ವಿಭಾಗ, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ.

ನಾಲ್ಕು ಕಂಬಗಳ ಮಧ್ಯೆ ನಾಟ್ಯವೇದಿಕೆ ಇದೆ. ಭುವನೇಶ್ವರಿಯಲ್ಲಿ ಮುಗುಚಿದ ಅರಳಿದ ಪದ್ಮದ ಸರಳ ಅಲಂಕರಣೆಯಿದೆ.

ದೇವಾಲಯದ ಮುಖ್ಯ (ದಕ್ಷಿಣ) ಪ್ರವೇಶದ್ವಾರ ಪಂಚಶಾಖೆಗಳನ್ನು ಹೊಂದಿದೆ. ಶಾಖೆಗಳಲ್ಲಿ ರತ್ನಪಟ್ಟಿಕಾ, ಲತಾಸುರುಳಿ, ಸ್ತಂಭಾಕೃತಿ, ವಲ್ಲಿ ಪದ್ಮದಳಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯಿದೆ. ಉತ್ತರಾಂಗದಲ್ಲಿ ದ್ರಾವಿಡಶೈಲಿಯ ೩ ಕಿರು ಶಿಖರಗಳ ಅಲಂಕರಣ ಇದೆ. ಇವುಗಳ ಮಧ್ಯಭಾಗದಲ್ಲಿ ಗಣೇಶ ಹಾಗು ಸರಸ್ವತಿಯರ ಕಿರು ಶಿಲ್ಪಗಳಿವೆ. ಪೇಧ್ಯದಲ್ಲಿ ದ್ವಿಭುಜದಾರಿ ದ್ವಾರಪಾಲಕರು, ಬದಿಗಳಲ್ಲಿ ಗಂಗಾ-ಯಮುನೆಯರಿರುವರು.

ದೇವಾಲಯವು ಜೀರ್ಣೋದ್ಧಾರಗೊಂಡಿರುವುದರಿಂದ ಬಾಹ್ಯಭಿತ್ತಿ ಸಂಪೂರ್ಣವಾಗಿ ಸಿಮೆಂಟ್ ಕಾಂಕ್ರೀಟಿನಿಂದ ಮುಚ್ಚಲ್ಪಟ್ಟಿದೆ. ಯಾವುದೇ ಅಲಂಕಾರಿಕ ಅಂಶಗಳು ಕಂಡುಬರುವುದಿಲ್ಲ. ದೇವಾಲಯದ ಮೇಲ್ಭಾಗದಲ್ಲಿ ಇಂದು ಶಿಖರಭಾಗ ಇಲ್ಲದಿದ್ದರೂ, ದೇವಾಲಯ ನಿರ್ಮಾಣಗೊಂಡ ಸಂದರ್ಭದಲ್ಲಿ ಶಿಖರವನ್ನು ನಿರ್ಮಿಸಿರುವ ಸಾಧ್ಯತೆಗಳಿವೆ. ಈ ಶಿಖರವು ಬಹುಶಃ ದ್ರಾವಿಡ ಮಾದರಿಯ ಶಿಖರವಾಗಿದ್ದಿರ ಬಹುದು. ಇದಕ್ಕೆ ಪುಷ್ಟಿ ನೀಡುವಂತೆ ದೇವಾಲಯದ ಪ್ರವೇಶದ್ವಾರದ ಉತ್ತರಾಂಗ ಭಾಗದಲ್ಲಿರುವ ದ್ರಾವಿಡಶೈಲಿಯ ವಿಮಾನಾಕೃತಿಗಳಿವೆ. ಕ್ರಿ.ಶ. ೧೩-೧೪ನೇ ಶತಮಾನದಲ್ಲಿ ದಕ್ಷಿಣ ಭಾರತದ ಮೇಲೆ ನಡೆಯುತ್ತಿದ್ದ ಮುಸ್ಲಿಂ ದಾಳಿಗಳಿಂದ ತಮ್ಮ ದೇವಾಲಯವನ್ನು ರಕ್ಷಿಸಿಕೊಳ್ಳಲು ಸ್ಥಳೀಯರು ಮಣ್ಣಿನಿಂದ ಮುಚ್ಚಿರುವ ಉದಾಹರಣೆಗಳು ಸಾಕ್ಷ್ಟಿವೆ. ಅದೇ ರೀತಿ ಈ ದೇವಾಲಯವನ್ನು ಸಹ ಸಂಪೂರ್ಣವಾಗಿ ಮಣ್ಣಿನಿಂದ ಮುಚ್ಚಲಾಗಿದ್ದಿತ್ತು. ಇತ್ತೀಚೆಗೆ ಗ್ರಾಮಸ್ಥರು ಮಣ್ಣನ್ನು ತೆಗೆದು ದೇವಾಲಯವನ್ನು ಸ್ವಚ್ಚಗೊಳಿಸಿದ್ದಾರೆ. ಈ ವೇಳೆಗಾಗಲೆ ಶಿಥಿಲಗೊಂಡಿದ್ದ ಗೋಪುರವನ್ನು ಜೀರ್ಣೋದ್ಧಾರ ಸಂದರ್ಭದಲ್ಲಿ ಸಂಪೂರ್ಣವಾಗಿ ತೆಗೆದು ಹಾಕಲಾಯಿತು ಎಂದು ಗ್ರಾಮಸ್ಥರು ಅಭಿಪ್ರಾಯಪಡುತ್ತಾರೆ.

ದೇವಾಲಯದ ವಾಸ್ತುಶೈಲಿ ಗಮನಿಸಿದರೆ ಈ ಭಾಗದಲ್ಲಿ ವಿರಳವೆಂದೇ ಹೇಳಬಹುದು. ಸಾಮಾನ್ಯವಾಗಿ ದೇವಾಲಯದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ಶಿಲ್ಪಗಳಿರುವುದು ವಾಡಿಕೆ ಆದರೆ ಇಲ್ಲಿ ಸೂರ್ಯ ವಿಷ್ಣು ಮಹೇಶ್ವರರಿರುವುದು ಸಹ ಮಹತ್ವದ್ದೆಂದೇ ಹೇಳಬಹುದು.

ದೇವಾಲಯದ ಪ್ರವೇಶದ್ವಾರ ಉತ್ತರಾಂಗ ಭಾಗದಲ್ಲಿರುವ ಗಣೇಶ ಮತ್ತು ಸರಸ್ವತಿ ಶಿಲ್ಪಗಳನ್ನು ಗಮನಿಸಿದರೆ ಪ್ರಾಯಶಃ ಇದೊಂದು ಶೈಕ್ಷಣಿಕ ಕೇಂದ್ರವಾಗಿದ್ದಿರಬೇಕನಿಸುತ್ತದೆ. ಶೈಕ್ಷಣಿಕ ಕೇಂದ್ರಗಳಾಗಿ ಪ್ರಾಚೀನ ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಾಣುವ ಹಾಗೆ ಇಲ್ಲಿಯೂ ಸಹ ವಿದ್ಯೆಗೆ ಅಧಿಪತಿಗಳಾಗಿರುವ ಗಣೇಶ ಹಾಗು ಸರಸ್ವತಿಯರನ್ನು ತೋರಿಸಲಾಗಿದೆ. ದೇವಾಲಯದ ಮುಂಭಾಗದ ಮತ್ತೊಂದು ಚಿಕ್ಕ ಗುಡಿಯಿತ್ತೆಂದು, ಅದರಲ್ಲಿ ಸರಸ್ವತಿಯ ಶಿಲ್ಪವಿತ್ತೆಂದು ಸ್ಥಳೀಯ ಉಪನ್ಯಾಸಕರಾದ ಜಿ.ಕೆ. ಶಿವಕುಮಾರರವರು ಅಭಿಪ್ರಾಯಪಡುವರು. ಆದರೆ ಸರಸ್ವತಿಗಾಗಿ ನಿರ್ಮಿಸಿದ ಗುಡಿ ಇಂದು ಸಂಪೂರ್ಣವಾಗಿ ನಾಶವಾಗಿದ್ದು ಆ ಭಾಗವನ್ನು ಸಿಮೆಂಟಿನಿಂದ ಆಧುನೀಕರಿಸಲಾಗಿದೆ. ಆದರೆ ದೇವಾಲಯದ ಸುತ್ತಲೂ ವಿಶಾಲವಾದ ಸ್ಥಳಾವಕಾಶವಿರುವುದನ್ನು ಗಮನಿಸಿದರೆ ಬಹುಶಃ ಇದೊಂದು ಶೈಕ್ಷಣಿಕ ಕೇಂದ್ರವಾಗಿದ್ದಿರಬೇಕೆಂದು ಹೇಳ ಬಹುದು.

## ಮೂರ್ತಿ ಶಿಲ್ಪಗಳು

**ಶಿವಲಿಂಗ :** ಮುಖ್ಯ ಗರ್ಭಗೃಹದಲ್ಲಿದೆ. ಚೌಕಾಕಾರದ ಪೀಠ, ಹಿಂಚಾಚು, ಮುಂಚಾಚು, ಪಾಣಿಬಟ್ಟಲು ಹಾಗು ರುದ್ರಭಾಗಗಳನ್ನು ಹೊಂದಿದೆ. ಕಪ್ಪು ಶಿಲೆಯಲ್ಲಿರುವ ಈ ಶಿವಲಿಂಗದ ರಚನಾ ವಿನ್ಯಾಸವನ್ನು ಗಮನಿಸಿದರೆ ಬಹುಶಃ ಇದರ ಕಾಲಮಾನ ಕ್ರಿ.ಶ. ೧೨ನೇ ಶತಮಾನದ್ದೆಂದು ಹೇಳಬಹುದು.

**ನಂದಿ :** ಪಶ್ಚಿಮಾಭಿಮುಖದ ಗರ್ಭಗೃಹದ ಮುಂಭಾಗದಲ್ಲಿ ಅಂದರೆ ಲಿಂಗುವಿಗೆ ಅಭಿಮುಖವಾಗಿ ನವರಂಗದಲ್ಲಿ ನಂದಿಶಿಲ್ಪವಿದೆ. ಪೀಠದ ಮೇಲಿರುವ ಈ ನಂದಿಯು ವಿವಿಧ ಆಭರಣಗಳಿಂದ ಅಲಂಕೃತಗೊಂಡಿದೆ.

**ವಿಷ್ಣು :** ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿದೆ. ಶಿಲ್ಪವು ಪೀಠದ ಮೇಲಿದ್ದು ಪೀಠದಲ್ಲಿ ಗರುಡನಿರುವನು. ಸುಮಾರು ನಾಲ್ಕು ಅಡಿ ಎತ್ತರವಿರುವ ವಿಷ್ಣು ಚತುರ್ಭುಜ ಧಾರಿಯಾಗಿದ್ದು, ಸಮಭಂಗದಲ್ಲಿರುವನು. ಕ್ರಮವಾಗಿ ಅಭಯ ಶಂಖ ಚಕ್ರ ಮತ್ತು ಗದೆಗಳನ್ನು ಹಿಡಿದಿರುವನು. ಕಿರೀಟಮುಖ, ವೈಜಯಂತಿ ಹಾರ, ಸರ, ಕಂಕಣ, ಕಿಂಕಿಣಿ, ಕಟಿವಸ್ತ್ರ ಇತ್ಯಾದಿಗಳನ್ನು ಈತನು ಧರಿಸಿರುವನು. ಶಿಲ್ಪದ ಸುತ್ತಲೂ ಪ್ರಭಾವಳಿಯಿದ್ದು, ಪ್ರಭಾವಳಿಯಲ್ಲಿ ದಶಾವತಾರ ಗಳನ್ನು ಕಂಡರಿಸಲಾಗಿದೆ. ವಿಷ್ಣುವಿನ ಬದಿಗಳಲ್ಲಿ ಶ್ರೀದೇವಿ-ಭೂದೇವಿಯರಿರುವರು. ಶಿಲ್ಪದ ರಚನಾವಿನ್ಯಾಸವನ್ನು ಗಮನಿಸಿದರೆ ಕ್ರಿ.ಶ. ೧೨ನೇ ಶತಮಾನ ಎನ್ನಬಹುದು.

**ಸೂರ್ಯ :** ಪಶ್ಚಿಮಾಭಿಮುಖವಾಗಿರುವ ಗರ್ಭಗೃಹದಲ್ಲಿದೆ. ಈ ಶಿಲ್ಪವೂ ಸಹ ವಿಷ್ಣುವಿನ ಶಿಲ್ಪದ ವಿಸ್ತೀರ್ಣ ಹಾಗು ಅದೇ ಮಾದರಿಯಲ್ಲಿದೆ. ಸೂರ್ಯನು ಎತ್ತರವಾದ ಪೀಠದಲ್ಲಿರುವನು. ಪೀಠದಲ್ಲಿ ಏಳು ಅಶ್ವಗಳನ್ನು

ತೋರಿಸಲಾಗಿದೆ. ದ್ವಿಭುಜಧಾರಿಯಾದ ಸೂರ್ಯನು ಸಮಭಂಗದಲ್ಲಿರುವನು. ತನ್ನ ಎರಡೂ ಕೈಗಳಲ್ಲಿ ಕಮಲದ ಮೊಗ್ಗನ್ನು ಹಿಡಿದಿರುವನು. ಕಮಲದ ಮೊಗ್ಗುಗಳನ್ನು ಅಲಂಕಾರಿಕವಾಗಿ ಕಂಡರಿಸಲಾಗಿದೆ. ಸೂರ್ಯನು ವಸ್ತ್ರಾಭರಣ ಭೂಷಿತನಾಗಿರುವನು. ಪ್ರಭಾವಳಿಯಲ್ಲಿ ದ್ವಾದಶ ಆದಿತ್ಯರನ್ನು ತೋರಿಸಲಾಗಿದೆ. ಸೂರ್ಯನ ಇಕ್ಕೆಲಗಳಲ್ಲಿ ಉಷಾ–ಪ್ರತ್ಯುಷೆಯರು ತ್ರಿಭಂಗಿಯಲ್ಲಿರುವರು. ಇವರೂ ಸಹ ವಸ್ತ್ರಾಭರಣಭೂಷಿತರಾಗಿದ್ದು, ತಮ್ಮ ಕೈಗಳಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವರು. ಶಿಲ್ಪದ ರಚನಾ ವಿನ್ಯಾಸ ಗಮನಿಸಿದರೆ ಇದೂ ಸಹ ದೇವಾಲಯ ನಿರ್ಮಾಣ ಕಾಲದ್ದೇ ಆಗಿದೆ ಎಂದು ಹೇಳಬಹುದು.

ದೇವಾಲಯದ ನವರಂಗದಲ್ಲಿ ಮತ್ತೊಂದು ಸೂರ್ಯಶಿಲ್ಪವಿದೆ. ಈ ಶಿಲ್ಪವೂ ಸಹ ಮೇಲ್ಕಾಣಿಸಿದ ಸೂರ್ಯಶಿಲ್ಪದಂತೆಯೆ ಇದ್ದು, ಆಕಾರ ಮತ್ತು ಗಾತ್ರದಲ್ಲಿ ಸ್ವಲ್ಪ ಕಿರಿದಾಗಿದೆ. ಆದರೆ ಇಲ್ಲಿ ಉಷಾ–ಪ್ರತ್ಯುಷೆಯರನ್ನು ಸೂರ್ಯನ ಪಾದದ ಇಕ್ಕೆಲಗಳಲ್ಲಿ ತೋರಿಸದೆ ಸ್ವಲ್ಪ ಮೇಲ್ಭಾಗದಲ್ಲಿ ಅಂದರೆ ಸೊಂಟದ ಬಳಿ ತೋರಿಸಲಾಗಿದೆ. ಇಲ್ಲಿನ ಪ್ರಭಾವಳಿಯಲ್ಲಿ ಯಾವುದೇ ರೀತಿಯ ಶಿಲ್ಪಗಳನ್ನು ತೋರಿಸಲಾಗಿಲ್ಲ. ಪೀಠದಲ್ಲಿ ಕಿರಿದಾಗಿ ಅಶ್ವಗಳನ್ನು ತೋರಿಸಲಾಗಿದೆ. ಈ ಶಿಲ್ಪವು ಸ್ವಲ್ಪ ನಂತರದ ಅಂದರೆ ೧೪–೧೫ನೇ ಶತಮಾನದ ಕಾಲದ್ದಿರಬಹುದು ಎನಿಸುತ್ತದೆ.

**ಭೈರವ :** ನವರಂಗದಲ್ಲಿರುವ ಸೂರ್ಯ ಶಿಲ್ಪದ ಪಕ್ಕದಲ್ಲೇ ಭೈರವ ಶಿಲ್ಪವಿದೆ. ಭೈರವನನ್ನು ಹೆಚ್ಚಾಗಿ ಸ್ಥಾನಿಕ ರೂಪದಲ್ಲಿ ಕಾಣುತ್ತೇವೆ. ಆದರೆ ಇಲ್ಲಿ ಆಸೀನ ಭೈರವನಿರುವನು. ದ್ವಿಭುಜಧಾರಿಯಾಗಿರುವ ಈತನು ತನ್ನ ಕೈಗಳಲ್ಲಿ ಕತ್ತಿ ಮತ್ತು ಕಪಾಲಗಳನ್ನು ಹಿಡಿದಿರುವನು. ನಗ್ನನಾಗಿರುವ ಈತ ವಿವಿಧ ಆಭರಣ ಹಾಗು ಕಿರೀಟ ಧರಿಸಿರುವನು. ಶಿಲ್ಪದ ಸುತ್ತಲೂ ಪ್ರಭಾವಳಿಯಿದೆ.

**ದುರ್ಗಿ :** ಭೈರವ ಶಿಲ್ಪದ ಪಕ್ಕದಲ್ಲೇ ದುರ್ಗಿಯ ಶಿಲ್ಪವಿದೆ. ಚತುರ್ಭುಜಧಾರಿಯಾಗಿರುವ ದುರ್ಗಿಯ ತನ್ನ ಕೈಗಳಲ್ಲಿ ಕ್ರಮವಾಗಿ ಕತ್ತಿ, ತ್ರಿಶೂಲ, ಡಮರುಗ ಹಾಗು ಕಪಾಲಗಳನ್ನು ಹಿಡಿದಿರುವಳು, ವಿವಿಧ ರೀತಿಯ ವಸ್ತ್ರಾಭರಣಗಳನ್ನು ಧರಿಸಿರುವಳು, ಶಿಲ್ಪದ ಸುತ್ತಲೂ ಪ್ರಭಾವಳಿಯಿದೆ.

ಕ್ರಿ.ಶ. ೧೨–೧೩ನೇ ಶತಮಾನದ ಸಂದರ್ಭದಲ್ಲಿ ಪ್ರಮುಖ ಶೈಕ್ಷಣಿಕ ಕೇಂದ್ರವಾಗಿದ್ದ ಗುಂಜಿಗನೂರು ಶಾಸನೋಲ್ಲೇಖ ಗ್ರಾಮವಾಗಿದೆ.

ಪ್ರತಿ ಸೋಮವಾರ ಹಾಗೂ ಅಮವಾಸೆ– ಹುಣ್ಣಿಮೆ ಯಂದು ಪೂಜೆ ಪುನಸ್ಕಾರಗಳು ನಡೆಯುವುದನ್ನು ಹೊರತು ಪಡಿಸಿದರೆ ಇನ್ನಿತರ ಯಾವುದೇ ರೀತಿಯ ಶೈಕ್ಷಣಿಕ ಅಥವಾ ಸಾಂಸ್ಕೃತಿಕ ಚಟುವಟಿಕೆಗಳು ಈ ದೇಗುಲ ಸಂದರ್ಭವಾಗಿ ನಡೆಯುತ್ತಿಲ್ಲ. ಕ್ರಿ.ಶ. ೧೨–೧೩ನೇ ಶತಮಾನದ ಸಂದರ್ಭದಲ್ಲಿ ಪ್ರಮುಖ ಶೈಕ್ಷಣಿಕ ಕೇಂದ್ರವಾಗಿದ್ದು ಈ ದೇವಾಲಯವನ್ನು ಸ್ಥಳೀಯರು ಜೀರ್ಣೋದ್ಧಾರ ಮಾಡುವ ಸಂದರ್ಭದಲ್ಲಿ ಸಿಮೆಂಟ್ ಕಾಂಕ್ರಿಟನ್ನು ಬಳಸಿರುವುದರಿಂದ ಮೂಲ ಸ್ವರೂಪಕ್ಕೆ ಧಕ್ಕೆಯುಂಟಾಗಿದೆ. ಈಗಲಾದರೂ ರಾಜ್ಯ ಪುರಾತತ್ವ ಇಲಾಖೆಯವರು ಇತ್ತ ಗಮನಹರಿಸುವುದರ ಮೂಲಕ ದೇವಾಲಯದ ಮೂಲ ಸ್ವರೂಪಕ್ಕೆ ದಕ್ಕೆಯುಂಟಾಗದಂತೆ ಜೀರ್ಣೋದ್ಧಾರ ಮಾಡುವ ಕೆಲಸ ತುಂಬಾ ಅವಶ್ಯಕವಾಗಿದೆ.

## ಆಧಾರಸೂಚಿ


೧. ಕ್ಷೇತ್ರ ಕಾರ್ಯ ವರದಿ.

೨. ಎಪಿಗ್ರಫಿಯಾ ಕರ್ನಾಟಿಕ, ಸಂಪುಟ–೧೧.

೩. ಪ್ರೊ. ಲಕ್ಷ್ಮಣ್ ತೆಲಗಾವಿ, **ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ** ೨೧ನೇ ಶತಮಾನ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ–೨೦೦೪.

೪. **ಮೈಸೂರು ಸ್ಟೇಟ್ ಗ್ಯಾಸೆಟಿಯರ್,** (ಸಂ). ಸತ್ಯನ್ ಬಿ.ಎನ್., ಚಿತ್ರದುರ್ಗ ಜಿಲ್ಲೆ, ಬೆಂಗಳೂರು–೧೯೬೭.

೫. ಡಾ. ಬಿ. ಸುರೇಶ್, **ಚಿತ್ರದುರ್ಗ–ದಾವಣಗೆರೆ ಜಿಲ್ಲೆಗಳ ದೇವಾಲಯಗಳು,** ಸಂಶೋಧನ ಪ್ರಕಾಶನ, ಚಿತ್ರದುರ್ಗ–೨೦೦೮.

ವ. ರಮೇಶ ಕಾರಂತ*

# ಕಿಕ್ಕೇರಿಯ ಅಮಾನಿಕೆರೆ

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸು.........ಇದು ಪ್ರಾಚೀನ ಕರ್ನಾಟಕದ ಜನರ ಆಶಯ ಹಾಗೂ ಆದರ್ಶ. ಇದಕ್ಕಾಗಿ ರಾಜ ಮಹಾರಾಜರಿಂದ ಹಿಡಿದು ಜನಸಾಮಾನ್ಯರವರೆಗೂ ತಮ್ಮ ತಮ್ಮ ಶಕ್ತ್ಯಾನುಸಾರ ಕೊಡುಗೆಯನ್ನು ನೀಡುತ್ತಾ ಬಂದಿದ್ದಾರೆ. ಕೆರೆಗಳು ಪ್ರಾಚೀನ ಕರ್ನಾಟಕ ನೀರಾವರಿ ಸಾಧನಗಳಲ್ಲಿ ಪ್ರಮುಖವಾದವು. ರಾಜರು ಪೆರ್ಗಡೆ ಮುಂತಾದ ಅಧಿಕಾರಿಗಳೂ ಸನ್ಯಾಸಿಗಳೂ ಕೆರೆಗಳನ್ನು ಕಟ್ಟಿಸಿದ ನಿದರ್ಶನಗಳಿವೆ. ಕಾಕುಸ್ಥವರ್ಮನು ಕಟ್ಟಿಸಿದ ತಟಾಕದ ವಿಷಯವು ತಾಳಗುಂದದ ಶಾಸನದಲ್ಲಿದೆ :

**ಸುಕೃತಿ ಭಿರವನೀಶ್ವರೈರಾತ್ಮ ನಿಶ್ರ್ಯೇಯಸಂ**
**ಪ್ರೇಪ್ಸುಭಿಸಾತಕರ್ಣ್ಯಾದಿಭಿಶ್ರ್ರದ್ಧಯಾಭ್ಯರ್ಚಿತೇ**
**ಇದಮುರುಸಲಿಲೋಪಯೋಗಾಶ್ರಯಂ ಭೂಪತಿಃ**
**ಕಾರಯಾಮಾಸ ಕಾಕುಸ್ಥವರ್ಮ್ಮಾ ತಡಾಕಮ್ಮ [ಹತ್]**

*

**"ಪೆರ್ಗಡೆ ಮಲ್ಲಿಯಣ್ಣ ಸ್ವಧರ್ಮದಿಂ ದೇವಾಲ್ಯಮಂ ಮಾಡಿಸಿ ಕನ್ನೆಗೆರೆಯಂ ಕಟ್ಟಿಸಿ ಆ ಕೆರೆಯಂ ದೇವರ್ಗೆಬಿಟ್ಟ...."**

– ಹೀಗೆ ಕರ್ನಾಟಕದ ಉದ್ದಗಲಕ್ಕೂ ಕಂಡು ಬರುವ ನೂರಾರು ದೇಗುಲಗಳು ಅವುಗಳಿಗೆ ಹೊಂದಿಕೊಂಡಂತೆ ಕಟ್ಟಿಸಿದ ಕೆರೆಗಳನ್ನು ಇಂದಿಗೂ ಕಾಣಬಹುದು ಇಂದು ಕೂಡಾ ಸರ್ಕಾರದ ತಹಸಿಲ್ದಾರರ ಕಛೇರಿಗಳಲ್ಲಿ ಪ್ರತಿಯೊಂದು ಗ್ರಾಮಗಳಿಗೆ ಸಂಬಂಧಿಸಿದಂತೆ ಇರುವ ಹತ್ತು ದಾಖಲೆಗಳಲ್ಲಿ 'ಕೆರೆದಾಖಲೆಯು' ಒಂದು. ಹೀಗೆ ಊರಿಗೊಂದು ಕೆರೆ ಇರುವುದು ಸರ್ವೆಸಾಮಾನ್ಯವಾದರೂ ಅಪರೂಪವೆಂಬಂತೆ ಕೆರೆಯೆ ಒಂದು ಗ್ರಾಮವಾಗಿ ಅಸ್ತಿತ್ವದಲ್ಲಿರುವ ಗ್ರಾಮಗಳಲ್ಲಿ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕಿನ ಕಿಕ್ಕೇರಿ ಹೋಬಳಿಯ 'ಅಮಾನಿಕೆರೆ' ಗ್ರಾಮವು ಒಂದು.

ಹಾಸನ ಜಿಲ್ಲೆಯ ಚನ್ನರಾಯಪಟ್ಟಣದಿಂದ ದಕ್ಷಿಣಕ್ಕೆ ೧೭ ಕಿ.ಮೀ. ದೂರ ಹಾಗೂ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕು ಕೇಂದ್ರದಿಂದ ಸುಮಾರು ೧೩ ಕಿ.ಮೀ. ಉತ್ತರಕ್ಕೆ ಇರುವ ಕಿಕ್ಕೇರಿ ಎಂಬ ಊರು ಮಂಡ್ಯ ಜಿಲ್ಲೆಯ ಅತ್ಯಂತ ಹಳೆಯ ಊರುಗಳಲ್ಲಿ ಒಂದು. ಇಲ್ಲಿ ದೊರೆತ ಪ್ರಾಚೀನ ಶಿಲಾಶಾಸನದ ಕಾಲ ಕ್ರಿ.ಶ. ೧೦೯೫ ಇದರಲ್ಲಿ "ಕಿಕ್ಕೇರ್ಯ್ಯ ಮೂಲಸ್ಥಾನ ಬ್ರಹ್ಮೇಶ್ವರ ದೇವರ್ಗೆ ಬಿಟ್ಟ ಗದ್ದೆ ಕಣ್ಡುಗ ೧೫ ಈ ಶಾಸನದಲ್ಲಿ ಉಲ್ಲೇಖಿಸಿರುವ ಕಿಕೇರಿ, ಕಿಕ್ಕೇರಿ ಕಿಕೇರಿಪುರ ಮುಂತಾದ ಹೆಸರುಗಳಿಂದ ಅಂದಿನಿಂದ ಇಂದಿಗೆ ಸುಮಾರು ಒಂದು ಸಾವಿರ ವರ್ಷಗಳಿಂದ ಅಸ್ತಿತ್ವದಲ್ಲಿದ್ದು ಕಿಕ್ಕೇರಿ ಹೋಬಳಿ ಕೇಂದ್ರವಾಗಿದೆ. ಇಲ್ಲಿನ ಬಮ್ಮವ್ವೆನಾಯಕಿತಿ ಕಟ್ಟಿಸಿದ ಬ್ರಹ್ಮೇಶ್ವರ ದೇಗುಲ, ಅದಕ್ಕೆ ಹೊಂದಿಕೊಂಡಂತಿರುವ "ಅಮಾನಿಕೆರೆಗ್ರಾಮ" ಹಾಗು ಅದೇ ಹೆಸರಿನ ಕೆರೆಯೂ ಅಷ್ಟೇ ಪುರಾತನವಾದುದು. ಮೂಲದಲ್ಲಿ ಈ ಕೆರೆಗೆ 'ಕನ್ನೆಗೆರೆ' ಎಂಬ ಹೆಸರಿದ್ದು ತದನಂತರ 'ದೊಡ್ಡಕೆರೆ', 'ಅಮಾನಿಕೆರೆ' ಎಂಬ ಹೆಸರಿರುವುದು ಕಂಡುಬರುತ್ತದೆ.

ಅಮಾನಿಕೆರೆ ಹಾಗೂ ಅದರ ಪಶ್ಚಿಮ ದಂಡೆಯಲ್ಲಿರುವ ಬ್ರಹ್ಮೇಶ್ವರ ದೇವಾಲಯ ಎರಡೂ ಸರಿಸುಮಾರಿಗೆ ಏಕಕಾಲದಲ್ಲಿ ನಿರ್ಮಿತಗೊಂಡವು. ಈ ಬಗ್ಗೆ ಮಾಹಿತಿ ನೀಡುವ ಕಿಕ್ಕೇರಿಯ ಶಾಸನ ಸಂಖ್ಯೆ ೩೭ (ಎ.ಕ.ಸಂ. ೬ ಕೃ.ಪೇ. ೪೯) ಇಲ್ಲಿನ ಅಮಾನಿಕೆರೆಯ ಪೂರ್ವದಂಡೆಯ ಕೆಳಗೆ ಪಾಳು ಮಲ್ಲೇಶ್ವರ ದೇಗುಲದ ಮುಂದಿದೆ. ಈ ಶಾಸನದ ಕಾಲ ಕ್ರಿ.ಶ. ೧೦೯೫–೯೬ ಈ ಶಾಸನದ ಪಾಠವಿಂತಿದೆ :

*ನಮಸ್ತುಂಗಶಿರಶ್ಚುಂಬಿಚಂದ್ರಚಾಮರಚಾರವೇ ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಸಂಭುವೇ ॥ ಒ ನಂಮ ಸಿವಾಯ*
*ಸ್ವಸ್ತಿ ಸಮಧಿಗತಪಂಚಮಹಾಸಬ್ದ ಮಾಹಾಮಂಣ್ಡಳೇ*
*ಸ್ವರಂ ದ್ವಾರಾವತೀಪುರವರಾಧೀಸ್ವರಂ ಯಾದವಕುಳಾಂ*
*ಬರದ್ಯುಮಣಿ ಸಮ್ಯಕ್ತ್ವಡೂಡಾಮಣಿ ಮಲಪರೊಳ್‌ಗಂಣ್ಡ*
*ಹೊಯ್ಸಳದೇವರು ಗಂಗಮಣ್ಡಳಮನಾಳುತ್ತ ಸುಖದಿನಿರೆ*
*ಸಖವರ್ಷ ೧೦೧೭ ಯುವ ಸಂವಚ್ಛರದ ಸೋಮವಾರ*
*ಸಂಕ್ರಾತಿಯಲು ಬಿಟ್ಟದೇವ*
*ಕಿಕ್ಕೇರ್ಯ್ಯ ಮೂಲಸ್ಥಾನ ಬ್ರಹ್ಮೇಸ್ವರದೇವರ್ಗೆ ಬಿಟ್ಟ ಗದ್ದೆ ಕಣ್ಡುಗ*
*೧೫*
*ಪುತ್ರಪವುತ್ರಕ ಬೂವನಹಳ್ಳಿಯಂ ಧಾರಾಪೂರ್ವಕಂ ಮಾಡಿಬಿಟ್ಟ*
*ಬ್ರಹ್ಮರಾಸಿಪಣ್ಡಿತರ್ಗೆ ಕಿಕ್ಕೇರಿಯನಾಳ್ತುಮೊನೆಯಳು ಬಿಣ್ಣಮ್ಮನ*
*ಪುತ್ರ ಸಾಮಂನ್ತ ಭೀಮಣ್ಣ ದೇವರಿಗೆ ಬಿಟ್ಟ ಕಲುಂಗಿನ ತೋಟಂ ಗಣ*

* ವಿಜಯ ಬ್ಯಾಂಕ್, ಸಾಸಲು, ಕೆ.ಆರ್. ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ.

........................................ದೇವೇಶ್ವರ ಮಹಾದೇವರ್ಗೆ
ಬ್ರಹ್ಮರಾಶಿಪಣ್ಡಿತರ ಪುತ್ರ

*ಪೆರ್ಗಡೆ ಮಲ್ಲಿಯಣ್ಣ ಸ್ವಧರ್ಮದಿಂ ದೇವಾಲ್ಯಮಂ ಮಾಡಿಸಿ ಕನ್ನೆಗೆರೆಯಂ ಕಟ್ಟಿಸಿ ಆ ಕೆರೆಯಂ ದೇವರ್ಗೆ ಬಿಟ್ಟ ಬ್ರಹ್ಮೇಶ್ವರವೆಂಬ ಪೆಸದನ ಮುವಾರ್ತ್ಥಮಾಗಿ ಮುದದಿಂದಂ ಸಿವದರ್ಮ್ಮ ಲಲಿತ ಅಇಬಗೆ ಕಿಕೇರಿ ಒಳುದಯ ಇಂ ಧರ್ಮ್ಮದ ನಿಂಮ್ಮ ಹೊಬುಹಂಗಳ್ ಶ್ರೀಬ್ರಹ್ಮೇಸ್ವರದ ಮಾರ್ಕ್ಕೆಒಳು ಪಂಚರ್ಗದೆಮಲ್ಲಿಬಳಾಲ ಆ ವಿಳಾಸಂಗಳಿಂ॥*

*ಸ್ವದತ್ತಂ ಪರದತ್ತಂ ವ್ವಾ ಓಹರೇ (ಪತಿ) ವಸುಂಧರಾಂ*
*ಷಷ್ಟಿವರಿಷಸಸ್ರಾಣಿವಿಷ್ಟಾ ಜಾಯ ತೇ ಕ್ರಿಮಿ ॥*

ಈ ಶಾಸನದ ಪ್ರಕಾರ ಬ್ರಹ್ಮರ್ಸಿ ಪಂಡಿತರ ಮಗ ಪೆರ್ಗಡೆ ಮಲ್ಲಿಯಣ್ಣನು ಬ್ರಹ್ಮೇಶ್ವರ ದೇಗುಲವನ್ನು ಮಾಡಿಸಿ ಕನ್ನೆಗೆರೆಯನ್ನು ಕಟ್ಟಿಸಿ ಅದನ್ನು ದೇವರಿಗೆ ಧಾರೆಯೆರೆದನು. ಆದರೆ ಕಿಕ್ಕೇರಿಯ ಶಾಸನ ಸಂಖ್ಯೆ ೨೭ (Ecvol iv. ಕೃ.ಪೇ ೫೩) ಬ್ರಹ್ಮೇಶ್ವರ ದೇಗುಲವನ್ನು ಹೊಯ್ಸಳ ನರಸಿಂಹ ದೇವರ ಮಹಾಸಾಮಂತ ಹುಲಿಯ ಜಂಗುಳಿಯ ಪ್ರಮುಖ ಮುಖ್ಯವಾದ ಸಾಮಂತ ಬರ್ಮಯ್ಯನರ್ದ್ಧಾಂಗ ಲಕ್ಷ್ಮಿಯನಿಪ॥ ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯಸ(ಹ)...ನೈಕ ಭೋಗ ಭಾಗಿನೀ ದ್ವಿತೀಯ ಲಕ್ಷ್ಮಿ ಸಮಾನೆಯುಂ ಗುಣ....ಶಿವಪಾದ ಶೇಖರೆಯುಂಮಪ್ಪ ಬಮ್ಮವ್ವೆನಾಯಕಿತಿ ಮಾಡಿಸಿದ ಬ್ರಹ್ಮೇಶ್ವರಕೆ...." ಎಂದಿದೆ. ಈ ಶಾಸನದ ಕಾಲ ಕ್ರಿ.ಶ. ೧೧೭೧ ಈ ಎರಡು ಶಾಸನದ ಕಾಲದಲ್ಲಿ ೭೬ ವರ್ಷಗಳ ಅಂತರವಿದ್ದು ಎರಡೂ ಶಾಸನಗಳು ಬ್ರಹ್ಮರಾಸಿ ಪಂಡಿತರಿಗೆ ದಾನವಾಗಿ ಕೊಟ್ಟಂತೆ ದಾನ ಶಾಸನಗಳಾಗಿವೆ. ಪ್ರಾಯಶಃ ಬ್ರಹ್ಮೇಶ್ವರ ದೇಗುಲವು ವಿಷ್ಣುವರ್ಧನ ಆಳ್ವಿಕೆಯ ಕಾಲದಲ್ಲಿ ರಚಿತವಾಗಿದ್ದು ಕೆರೆಯು ಒಂದನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಕಟ್ಟಲ್ಪಟ್ಟಿದೆ ಅಲ್ಲದೆ ದೇಗುಲವನ್ನು ಕಟ್ಟಿಸಿದುದು ಬಮ್ಮವ್ವೆ ನಾಯಕಿತಿ ಮತ್ತು 'ಕನ್ನೆಗೆರೆ'ಯನ್ನು ಆಕೆಯ ನೆನಪಿನಲ್ಲಿ ಪೆರ್ಗಡೆ ಮಲ್ಲಿಯಣ್ಣ ಕಟ್ಟಿಸಿರಬಹುದು ಎಂಬ ಅಭಿಪ್ರಾಯ ಸರಿಯಾದುದು ಎನ್ನಿಸುತ್ತದೆ.

'ಕನ್ನೆಗೆರೆ' 'ದೊಡ್ಡಕೆರೆ' ಎಂಬ ಶಾಸನಗಳಲ್ಲಿ ಗುರುತಿಸಲ್ಪಟ್ಟ ಕಿಕ್ಕೇರಿಯ ಅಮಾನಿಕೆರೆಗೆ 'ಅಮಾನಿಕೆರೆ' ಎಂದು ಯಾವಾಗ ಹೆಸರಿಸಲಾಯಿತೊ ತಿಳಿಯದು. ೧೯೨೪ರಲ್ಲಿ ಮೈಸೂರು ಇಲಾಖೆಯವರು ಪ್ರಕಟಿಸಿದ ಕೆರೆಯ ಸರ್ವೆ ನಕಾಶೆಯಲ್ಲಿ "ಕಿಕ್ಕೇರಿ ಅಮಾನಿಕೆರೆ" ಎಂದು ಹೆಸರಿದೆ. ೧೯೬೧ ರಲ್ಲಿ Director of Survey Settlement and land records ಅವರು ಹರಡಿಸಿದ ರೀಸರ್ವೆ ನಕಾಶೆಯಲ್ಲಿ 'ಅಮಾನಿಕೆರೆ' ಎಂದೇ ಗುರುತಿಸಿದೆ. ಈ ಕೆರೆಯ ಏರಿಯ ಆಗ್ನೇಯ ಮೂಲೆಯಲ್ಲಿ ಇಂಗ್ಲಿಷ್ ಅಕ್ಷರದಲ್ಲಿ ಕೊರೆದ ಶಿಲಾಫಲಕವೊಂದು ಇದ್ದು ಅದರಲ್ಲಿ 'ಕಿಕ್ಕೇರಿ ಅಮಾನಿಕೆರೆ'ಯ ಬಗೆಗೆ ಕೆಲವೊಂದು ಮಾಹಿತಿಗಳನ್ನು ತಿಳಿಸಲಾಗಿದೆ. ಈ ಶಿಲಾಫಲಕದ ಗಾತ್ರ ೨೮ ಇಂಚು ಅಗಲ ಹಾಗೂ ೫೧ ಇಂಚು ಎತ್ತರವಾಗಿದೆ ಇದರಲ್ಲಿ :

KIKKERI AMANIKERE
RE NO-190
C.A 50SQMILE
CAPACITY-580 UNITS
ATCHAKAT-ACRES-3727
REVENUE Rs. 2041

ಎಂದು ಬರೆಯಲಾಗಿದೆ ಇದರ ಪ್ರಕಾರ ಅಮಾನಿಕೆರೆಗೆ ಐವತ್ತು ಚದರ ಮೈಲುಗಳಷ್ಟು ಸುತ್ತಲಿನ ಪ್ರದೇಶಗಳಿಂದ ಜಲಪೂರಣವಾಗುತ್ತಿದ್ದು ಕೆರೆಯ ೫೮೦ ಯುನಿಟ್‌ಗಳ ಪ್ರಮಾಣದ ಜಲಸಂಗ್ರಹಣಾ ಸಾಮರ್ಥ್ಯವನ್ನು ಹೊಂದಿದೆ. ಈ ಕೆರೆಯಿಂದ ಸುಮಾರು ೩೭೨೭ ಎಕರೆ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗುತ್ತದೆ. ಕೃಷ್ಣರಾಜಪೇಟೆ ತಾಲ್ಲೂಕು ಕಛೇರಿಯ ಕೆರೆದಾಖಲೆಯಲ್ಲಿ ಕೆರೆಯ ಒಟ್ಟು ವಿಸ್ತೀರ್ಣ ೨೮೧ ಎಕರೆ ೨೯ ಗುಂಟೆಗಳು ಎಂದಿದೆ. ಅಮಾನಿಕೆರೆಯು ಸುಮಾರು ಏಳು ಮೈಲುಗಳಷ್ಟು ಸುತ್ತಳತೆಯನ್ನು ಹೊಂದಿದೆ.

ಅಮಾನಿಕೆರೆಯು ಒಂದು ಸ್ವತಂತ್ರ ಗ್ರಾಮವೂ ಆಗಿದ್ದು ಈ ಗ್ರಾಮಕ್ಕೆ ಒಬ್ಬ ಪಟೇಲ ಹಾಗೂ ಶ್ಯಾನುಭೋಗರೂ ಇದ್ದರು. ಈ ಗ್ರಾಮದ ವಂಶಪಾರಂಪರಿಕ ಪಟೇಲರಾಗಿ ದಾಸೇಗೌಡರು ಹಾಗೂ ಅವರ ಮಗ ಕಿಕ್ಕೇರಿಯ ನಂಜೇಗೌಡರು ಆಗಿದ್ದರು. ನಾಡಿನ ಖ್ಯಾತ ಸಂಸ್ಕೃತ ವಿದ್ವಾಂಸ ಕೆ.ಜಿ. ಸುಬ್ರಾಯಶರ್ಮರ ಹಿರಿಯರು ಅಮಾನಿಕೆರೆ ಶ್ಯಾನುಭೋಗರ ಮನೆತನಕ್ಕೆ ಸೇರಿದವರು. ಸದ್ಯ ಅಮಾನಿಕೆರೆ ಶ್ಯಾನುಭೋಗ ನರಸಿಂಹಯ್ಯನವರು ವಾಸಿಸುತ್ತಿದ್ದ ಮನೆ ಈಗಲೂ ಕಿಕ್ಕೇರಿಯಲ್ಲಿದೆ. ಅವರ ಸಂತತಿಯವರಾದ ಪುಟ್ಟಣ್ಣಯ್ಯ ಶಾಸ್ತ್ರಿಗಳು ಮತ್ತು ಅವರ ಮಗ ನರಸಿಂಹ ಅದೇ ಮನೆಯಲ್ಲಿ ವಾಸವಾಗಿದ್ದಾರೆ.

ಅಮಾನಿಕೆರೆಯನ್ನು ಮೀನು ವ್ಯವಸಾಯಕ್ಕಾಗಿ ಬಳಸುತ್ತಿದ್ದು, ಕೆರೆಯನ್ನು ವರ್ಷಕ್ಕೊಮ್ಮೆ ಹರಾಜು ಮಾಡುತ್ತಿದ್ದರು. ಕೆರೆ ಹರಾಜಿನ ಇಸ್ತಿಹಾರನಾಮೆಯೂ ಈ ಲೇಖನದೊಂದಿಗೆ ಇರಿಸಿದೆ ಕೆರೆ ಹರಾಜಿನಿಂದ ಬರುವ ಆದಾಯದ ೧/೫ ಭಾಗವು ಕೆರೆಗೆ ಹೊಂದಿಕೊಂಡಂತಿರುವ ಮೂರು ಮುಖ್ಯ ಗ್ರಾಮಗಳಾದ ಕಿಕ್ಕೇರಿ ಲಕ್ಷ್ಮೀಪುರ ಹಾಗೂ ಸೊಳ್ಳೇಪುರ ಗ್ರಾಮಗಳಿಗೆ ವಿನಿಯೋಗವಾಗುತ್ತಿದ್ದು, ಉಳಿದ ಹಣದ ೧/೧೦ ಭಾಗವು ಇನ್ನೂ ನಾಲ್ಕು ಸಣ್ಣ ಹಳ್ಳಿಗಳಾದ ಕೋಡಿಮಾರನಹಳ್ಳಿ, ಹೊಡಕಳ್ಳಿ, ಚೌಡೇನಹಳ್ಳಿ ಮತ್ತು ಬೂವನಹಳ್ಳಿಗಳಿಗೆ ವಿನಿಯೋಗವಾಗುತ್ತಿತ್ತು.

ಈ ಏಳು ಗ್ರಾಮಗಳ ರೈತರಿಂದ ಪ್ರತಿ ಎಕರೆಗೆ ನಾಲ್ಕು ರೂಪಾಯಿಗಳಂತೆ ಕೆರೆಯ ಉಸ್ತುವಾರಿ ಹಾಗೂ ಅಭಿವೃದ್ಧಿಗಾಗಿ ಹಣ ವಸೂಲಾಗುತ್ತಿತ್ತು. ಈ ಕೆರೆಯ ನೀರುಗಂಟಿ ಕೆಲಸವನ್ನು ಕಿಕ್ಕೇರಿಯ ಚೊಟ್ಟನಾಗಪ್ಪ ಹಾಗೂ ಆತನ ವಂಶಿಕರು ನಡೆಸಿಕೊಂಡು ಬರುತ್ತಿದ್ದರು.

ಅಮಾನಿಕೆರೆಗೆ ಉತ್ತರ ಹಾಗು ದಕ್ಷಿಣ ಭಾಗದಲ್ಲಿ ಎರಡು ಕೋಡಿಗಳು ಪೂರ್ವ ಭಾಗದ ಕೆರೆಯ ಏರಿಗೆ ಹೊಂದಿಕೊಂಡಂತೆ ಎರಡು ಕಡೆ ಎರಡು ತೂಬುಗಳನ್ನು ಅಳವಡಿಸಲಾಗಿದೆ. ಕೃಷಿ ಉದ್ದೇಶಕ್ಕಾಗಿ ಕೆರೆಯ ತೂಬನು ಎತ್ತರಿಸಿದಾಗ ಹೊರ ಹೋಗುವ ನೀರು ಕಿರುಕಾಲುವೆಗಳ ಮೂಲಕ ರೈತರ ಜಮೀನಿಗೆ ಸೇರುತ್ತದೆ.

ಹಿಂದೆ ಅಮಾನಿಕೆರೆಯ ಜಲದ ಮೂಲ ಮಳೆ ನೀರೇ ಆಗಿದ್ದು ಕೆರೆಯ ಸುತ್ತಲಿನ ಪ್ರದೇಶದಿಂದ ಹರಿದು ಬರುವ ನೀರು ಕೆರೆಯಲ್ಲಿ ಸಂಗ್ರಹವಾಗುತ್ತಿತ್ತು. ಕೆರೆಯ ಜಲಸಂಗ್ರಹಣಾ ಸಾಮರ್ಥ್ಯಕ್ಕಿಂತ ಅಧಿಕ ನೀರು ಕೆರೆಗೆ ಬಂದಾಗ ಎರಡು ಕೋಡಿಗಳ ಮೂಲಕ ಹರಿದು ಹೋಗುತ್ತಿತ್ತು. ಕೆರೆಯ ಉತ್ತರ ದಿಕ್ಕಿನಿಂದ ಹೊರ ಹರಿದು ಹೋಗುವ ನೀರು ಮುಂದೆ 'ಅಡಿಕೆಕೆರೆ' ಎಂಬ ಸಣ್ಣ ಕೆರೆಯನ್ನು ತುಂಬಿಸಿ ಅಲ್ಲಿಂದ ಹೆಚ್ಚಾದ ನೀರು ರಾಜಕಾಲುವೆಗೆ ಸೇರಿ ಅಲ್ಲಿಂದ ಹೇಮಾವತಿ ನದಿಗೆ ಸೇರುತ್ತಿತ್ತು. ಇತ್ತೀಚಿನ ವರ್ಷಗಳಲ್ಲಿ ಹಾಸನ ಜಿಲ್ಲೆಯ ಹೇಮಾವತಿ ನದಿಗೆ ಕಟ್ಟಿದ ಅಣೆಕಟ್ಟಿನಿಂದ ಹೆಚ್ಚಾಗಿ ಹರಿದು ಬರುವ ನೀರು ೫೩ನೇ ಕಾಲುವೆಯಿಂದ ಎರಡು ಶಾಖೆಗಳಾಗಿ ಹರಿದು ಒಂದು ಹಾಸನ ಜಿಲ್ಲೆಯ ತುರುವೆಕೆರೆಯ ಕಡೆಗೂ ಇನ್ನೊಂದು ಮಂಡ್ಯ ಜಿಲ್ಲೆಯ ಕಡೆಗೂ ಹರಿದು ಅಮಾನಿಕೆರೆಗೆ ಸೇರುತ್ತಿದ್ದ ಕಾರಣ ಕೆರೆಯಲ್ಲಿ ನಿರಂತರ ನೀರು ಸಂಗ್ರಹವಾಗುತ್ತಿದೆ. ಕೆರೆಯ ಭದ್ರತೆಯ ದೃಷ್ಟಿಯಿಂದ ಕೆರೆಯ ದಕ್ಷಿಣ ಭಾಗದ ಕೋಡಿಯ ದಂಡೆಯ ಒಂದು ಭಾಗವನ್ನು ಊರವರೆ ಒಡೆದು ಹೆಚ್ಚಿನ ನೀರು ಹೊರ ಹರಿಯುವಂತೆ ಮಾಡಿದ್ದಾರೆ ಆ ನೀರು ಕೋಡಿಮಾರನಹಳ್ಳಿ ಕೆರೆಯನ್ನು ತುಂಬಿಸಿ ಮುಂದೆ ಮಂದಗೆರೆ ಗ್ರಾಮದ ಬಳಿ ಹೇಮಾವತಿ ನದಿಯನ್ನು ಸೇರುತ್ತದೆ.

ಊರಿಗೊಂದು ಕೆರೆ ಇರುವುದು ಸರ್ವೇ ಸಾಮಾನ್ಯವಾದರೂ ಕೆರೆಯೇ ಒಂದು ಊರಾಗಿ ತನ್ನ ಉತ್ಪನ್ನದಿಂದ ಸುತ್ತಲಿನ ಏಳು ಹಳ್ಳಿಗಳಿಗೆ ಆಶ್ರಯವಾಗಿ ಆ ಊರುಗಳ ಅಭಿವೃದ್ಧಿಗೆ ಕಾರಣವಾಗಿರುವ ಕಿಕ್ಕೇರಿ ಹೋಬಳಿಯ 'ಅಮಾನಿಕೆರೆ' ಕರ್ನಾಟಕದ ಅಪೂರ್ವ ಪ್ರಾಚೀನ ಕೆರೆಗಳಲ್ಲಿ ಒಂದು ಎನ್ನಬಹುದಾಗಿದೆ.

ಈ ಸಂಪ್ರಬಂಧವು ರೂಪುಗೊಳ್ಳುವಲ್ಲಿ ಮಾಹಿತಿ, ದಾಖಲೆ, ನಕಾಶೆಗಳನ್ನು ನೀಡಿ ಉಪಕರಿಸಿದ ಕಿಕ್ಕೇರಿಯ ನಿವೃತ್ತ ಸರ್ವೆಯರ್ ಸೊಳ್ಳೇಪುರದ ಪುಟ್ಟೇಗೌಡರಿಗೂ ಅಮಾನಿಕೆರೆ ಶ್ಯಾನುಭೋಗರ ವಂಶಸ್ಥರಾದ ಕಿಕ್ಕೇರಿಯ ಪುಟ್ಟಣ್ಣಯ್ಯ ಶಾಸ್ತ್ರಿ ಹಾಗೂ ಅವರ ಮಗ ಚಿ. ನರಸಿಂಹ ಇವರುಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

**ಟಿಪ್ಪಣಿ :** ೧. "ಕೆರೆಯನ್ನು ಯಾರೆ ಕಟ್ಟಿರಲಿ ಅದರ ಯೋಗಕ್ಷೇಮದ ಹೊಣೆಯನ್ನು ಆ ಊರಿನ ಜನರು ಹೊರುತ್ತಿದ್ದರು. ಚಾವುಂಡಯ್ಯ ಎನ್ನುವವನು ಮಾಡಿಸಿದ ಕೆರೆಗೆ ಬಿಟ್ಟ ಭೂಮಿಯನ್ನು ಮಹಾಜನರು ಪ್ರತಿಪಾಲಿಸುವರು ಎಂದು ಒಂದು ಶಾಸನದಲ್ಲಿ ಹೇಳಿದೆ" ಡಾ॥ ಚಿಂದಾನಂದ ಮೂರ್ತಿ.

೨. ಇಸ್ತಿಹಾರ್ : ಇದರಿಂದಾ ಸಮಸ್ತ ಜನಗಳಿಗೂ ತಿಳಿಯಪಡ್ಸಿವದೇನೆಂದರೆ ಕಿಕ್ಕೇರಿ ಅಮಾನಿದೊಡ್ಡಕೆರೆ ಪಂಚಾಯತು ತಾ: ೨೪-೦೬-೧೯೧೪ರಲ್ಲು ಹರಾಜು ಮಾಡಿಸಲ್ಪಡುತ್ತೆ. ಇಷ್ಟವುಳ್ಳವರು ಛಡ್ ಸವಾಲ್ ಮಾಡಿ ಪಡಿಯಬಹುದು. ಹರಾಜಿನಲ್ಲಿ ಪಡಿಯತಕ್ಕವರು ಈ ಕೆಳಗೆ ಕಂಡ ಷರತ್ತುಗಳಿಗೆ ವಳಪಟ್ಟಿರಬೇಕು. ಕೆರೆ ಹಿಂದಲ ಫಸಲಿಗೆ ಸೀದಾ ಸಲಿಸುಹೋಗಲು ಆಪಂತ್ಸಿಕೊಂಡರೂ ಅಂದರೆ ತಯಾರಿಗೆ ಕೆರೆವಳಾಯದಿಂದ ಹೋಗತಕ್ಕ ತೊಟ್ಟಿಗೆ ಅಡ್ಡ ಕಟ್ಟಿ ವಟ್ಟಾರೆ ತೂಬಿಗೆ ಹೊಗುವುದಕ್ಕೆ ಆಪಂತ್ಸಿಕೊಡಂದ್ದು. ಹರಾಜು ತಾರೀಖು ಲಾಗಾಯಿತು ಇಪ್ಪತ್ತು ದಿವ್ಸದೊಳಗಾಗಿ ಮಾಡಿಕೊಳ್ಳಬೇಕು. ಯೀ ತನ್ಮಧ್ಯೆ ಮಳೆ ಬಂದು ಕೆರೆ ಭರ್ತಿಯಾದಲ್ಲಿ ಹರಾಜು ಮೊಬಲಗೂ ವಾಪ್ಸು ಕೊಡಲು ಅಥವಾ ಇದರಿಂದ ಆಗತಕ್ಕ ಲುಕ್ಸಾನಗೆ ನಾವು ಜವಾಬುದಾರರಲ್ಲ. ಹರಾಜು

## ಆಧಾರಸೂಚಿ


೧. ಡಾ॥ ಚಿದಾನಂದ ಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.**

೨. E.C. Vol. IV, ಕೃಪೇ ೪೯, ಕಿಕ್ಕೇರಿ ೩೭.

೩. **ಮೈಸೂರು ಗ್ಯಾಸೆಟಿಯರ್,** (ಸಂ.) ಸಿ. ಹಯವದನರಾವ್ (೧೯೨೮).

ಎನ್. ಪ್ರಸಾದ್*

# ಮಧ್ಯಯುಗೀನ ದಕ್ಷಿಣ ಕನ್ನಡದ ಭತ್ತದ ಗದ್ದೆಗಳ ಹೆಸರುಗಳು

ದಕ್ಷಿಣ ಕನ್ನಡ ಪ್ರದೇಶದಲ್ಲಿ ಭತ್ತದ ಗದ್ದೆಗಳನ್ನು ಅನೇಕ ಹೆಸರುಗಳಿಂದ ಗುರುತಿಸಲಾಗಿದೆ. ಈ ಹೆಸರುಗಳ ಆಧಾರದ ಮೇಲೆ ದಕ್ಷಿಣ ಕನ್ನಡ ಪ್ರದೇಶದ ಸಾಮಾಜಿಕ ಮತ್ತು ಆರ್ಥಿಕ ಜೀವನದ ಸ್ವರೂಪವನ್ನು ಅರಿಯಬಹುದು. ಈ ಪ್ರದೇಶದ ಶಾಸನೋಕ್ತ ಭತ್ತದ ಗದ್ದೆಗಳ ಹೆಸರುಗಳೇ ಇಲ್ಲಿಯ ಸಾಮಾಜಿಕ ರಚನೆ ಮತ್ತು ಭೂಸ್ವಾಮ್ಯದ ಆರ್ಥಿಕತೆಯ ಹಲವು ಮುಖಗಳನ್ನು ಪರಿಚಯಿಸುತ್ತವೆ.

ಭತ್ತದ ಗದ್ದೆಗಳ ಕೆಲವು ಹೆಸರುಗಳು ಗದ್ದೆಯಿರುವ ಭಾಗದ ಮಣ್ಣಿನ ಅಥವಾ ಭೂಮಿಯ ವಿಧಗಳನ್ನು ಸೂಚಿಸುತ್ತವೆ. ಕ್ರಿ.ಶ. ೧೫೪೯ಕ್ಕೆ ಸಲ್ಲುವ ಬಾರಕೂರಿನ ಶಾಸನದಲ್ಲಿ[೧] ಭತ್ತದ ಗದ್ದೆಗೆ **ಮೊರಬಿನ** ಗದ್ದೆ ಎಂಬ ಹೆಸರಿರುವುದು ತಿಳಿಯುತ್ತದೆ. ಪಿ. ಗುರುರಾಜ್ ಭಟ್‌ರವರು 'ಮೊರಬಿನ ಗದ್ದೆ ಎಂಬುದು ಕಳೆಗಳಿಂದ ತುಂಬಿಕೊಂಡಿರುವ ಗದ್ದೆಯನ್ನು ಸೂಚಿಸುತ್ತದೆ[೨] ಎಂದಿದ್ದಾರೆ. ಆದರೆ ಮೊರಬು ಎಂಬುದಕ್ಕೆ ಸ್ಥಳೀಯರು ಗಡಸು ಮಣ್ಣನ್ನು ಹೊಂದಿರುವ ಗದ್ದೆ ಎಂಬುದಾಗಿ ಅರ್ಥೈಸುತ್ತಾರೆ. 'ಹೊಯಿಗೆ ಗದ್ದೆ' ಎಂದರೆ ಮರಳು ಮಣ್ಣನ್ನು ಹೊಂದಿರುವ ಗದ್ದೆ[೩] ಇದೇ ಬಗೆಯ ಹೆಸರುಗಳು ಹಲವು ರೂಪಗಳಲ್ಲಿ ವಿವಿಧ ಶಾಸನಗಳಲ್ಲಿ ಅಂದರೆ, ಹೊಯಿಮಣ್ಣ ಮೆಕ್ಕೆ[೪] ಮತ್ತು ಹೊಯಿಗೆಯ ಗದ್ದೆ[೫] ಕಬ್ಬಯಲು[೬] ಅಥವಾ ಕಪ್ಪು ಮಣ್ಣನ್ನು ಒಳಗೊಂಡಿರುವ ಭತ್ತದ ಗದ್ದೆಗಳು ದಕ್ಷಿಣ ಕನ್ನಡದ ಹಲವು ಭಾಗಗಳಲ್ಲಿ ಇದ್ದುದಕ್ಕೆ ನಮಗೆ ಶಾಸನಾಧಾರಗಳಿವೆ. ಕೆಮ್ಮಣ್ಣು ಬಯಲು[೭] ಎಂಬುದು ಕೆಂಪು ಬಣ್ಣದ ಮಣ್ಣನ್ನು ಹೊಂದಿರುವ ಗದ್ದೆಯನ್ನು ಸೂಚಿಸುತ್ತದೆ. ಅಲ್ಲದೆ ಶಾಸನಗಳಲ್ಲಿ ಕೊಳೆತ ಮಣ್ಣಿನ ಗದ್ದೆ ಎಂಬ ಗದ್ದೆಯ ಹೆಸರು ಶಾಸನೋಕ್ತವಾಗಿದೆ.[೮] ಇದರರ್ಥ ಫಲವತ್ತಾದ ಮಣ್ಣನ್ನು ಹೊಂದಿರುವ ಗದ್ದೆ ಎಂಬುದಾಗಿದೆ. ಇದು ಸಮೃದ್ಧವಾದ ನೀರಿನ ಪೂರೈಕೆಯಿಂದ, ಸಾವಯವ ನೈಸರ್ಗಿಕ ಗೊಬ್ಬರಗಳಿಂದ ಫಲವತ್ತಾದುದಾಗಿದೆ. ಕುಂದಾಪುರ ತಾಲೂಕಿನ ಬಸರೂರಿನ ಶಾಸನದಿಂದ[೯] ಭತ್ತದ ಗದ್ದೆಗಳಿದ್ದ ಎರಡು ಕುತೂಹಲಕಾರಿಯಾದ ಹೆಸರುಗಳನ್ನು ಅರಿಯಬಹುದು. 'ಬೆಳುಗಲೆಂಬ ಗದ್ದೆ' ಮತ್ತು 'ಹಾಲಗದ್ದೆ' ಎಂಬೀ ಹೆಸರುಗಳಲ್ಲಿ ಬಿಳಿಕಲ್ಲಿನ ಚೂರುಗಳ ಮಿಶ್ರಣವಾದ ಮಣ್ಣನ್ನು ಬೆಳಗಲೆಂಬ ಗದ್ದೆಯ ಹೆಸರು ಸೂಚಿಸುತ್ತದೆ. ಹಾಲಗದ್ದೆ ಎಂಬುದು ಬಹುಶಃ ಬಿಳಿಬಣ್ಣವನ್ನು ಹೊಂದಿರುವ ಮಣ್ಣನ್ನು ಸೂಚಿಸುತ್ತದೆ ಎನಿಸುತ್ತದೆ.

ಈ ಪ್ರದೇಶದಲ್ಲಿ ನೀರಾವರಿ ಸೌಲಭ್ಯಗಳಿರುವುದು ಇಲ್ಲಿನ ಭತ್ತದ ಗದ್ದೆಗಳಿರುವ ವಿವಿಧ ಹೆಸರುಗಳಿಂದಲೇ ವಿದಿತವಾಗುತ್ತದೆ. ಕೆರೆಗಳು ನೀರೊದಗಿಸುವ ಪ್ರಮುಖ ಆಕರಗಳಾಗಿದ್ದು ಇವು ಸಾಮಾನ್ಯವಾಗಿ ಸಾರ್ವಜನಿಕರು ಅಥವಾ ಅಧಿಕಾರಿವರ್ಗದವರಿಂದ ನಿರ್ಮಾಣಗೊಂಡಿದ್ದವು. ಕೊಳ ಮತ್ತು ಗುಮ್ಮೆ ಎಂಬ ೨ ನೀರಿನ ಮೂಲಗಳು ಕೆಲವು ಶಾಸನಗಳಲ್ಲಿ ಉಕ್ತವಾಗಿವೆ. ಕೊಳ ಎಂಬುದು ನದಿಯೊಂದರ ಹರಹಿನಿಂದುಂಟಾದ ನೀರಿನ ಆಗರ. ಇನ್ನು ಗುಮ್ಮ ಎಂಬುದಕ್ಕೆ ನೀರಿನ ಹೊಂಡ ಎಂಬರ್ಥವಿದೆ. ಕ್ರಿ.ಶ. ೧೪೨೧ರ ಶಾಸನವೊಂದು[೧೦] ಹೊಸಕೆರೆಯ ಬಾಳು ಎಂಬ ಹೆಸರಿನ ಭತ್ತದ ಗದ್ದೆಯೊಂದರ ವಿಚಾರವನ್ನು ತಿಳಿಸುತ್ತದೆ. ಹೊಸದಾಗಿ ನಿರ್ಮಾಣವಾಗಿರುವ ಕೆರೆಯ ಸಮೀಪದ ಗದ್ದೆಯೆಂಬುದನ್ನು ಇದು ನಿಚ್ಚಳವಾಗಿ ಸೂಚಿಸುತ್ತದೆ.

ಕೊಳಗದ್ದೆ[೧೧] ಗುಮ್ಮೆಯ ಬಾಗಿಲ ಗದ್ದೆ[೧೨] ಎಂಬವು ಭತ್ತದ ಗದ್ದೆಗಳು ಕೊಳ ಮತ್ತು ಗುಮ್ಮೆಯ ಬಳಿ ಇದ್ದವೆಂಬುದನ್ನು ಸ್ಪಷ್ಟಪಡಿಸುತ್ತವೆ. ಕಟ್ಟು [ಒಡ್ಡು], ಬಂಡು [ತಡೆ]ಗಳು ನೀರನ್ನು ಸಂಗ್ರಹಿಸಲು ನಿರ್ಮಾಣಗೊಂಡವುಗಳಾಗಿದ್ದು, ಇವುಗಳ ಹೆಸರಿನಲ್ಲಿ ಸಹ ಭತ್ತದ ಗದ್ದೆಗಳಿವೆ. ಕ್ರಿ.ಶ. ೧೪೦೩ರ ಶಾಸನವೊಂದನ್ನು[೧೩] ಕಟ್ಟಿನಗದ್ದೆ ಎಂಬುದನ್ನು ಸೂಚಿಸುತ್ತದೆ.[೧೪] ಸಣ್ಣನದಿ ಅಥವಾ ತೊರೆಗೆ ಅಡ್ಡಲಾಗಿ ಕಟ್ಟಲಾದ ಒಂದು ಒಡ್ಡಿನ ಸಮೀಪದ ಗದ್ದೆಯಿಂದಿರಬಹುದು. ಈ ತಾತ್ಕಾಲಿಕ ಅಣೆಕಟ್ಟುಗಳು ಹಸಿಮಣ್ಣು ಮತ್ತು ಮರಮುಟ್ಟುಗಳಿಂದ ನಿರ್ಮಾಣಗೊಂಡವುಗಳಾಗಿವೆ. ದಕ್ಷಿಣ ಕನ್ನಡದ ಶಾಸನಗಳಲ್ಲಿ ಅಣೆಕಟ್ಟುಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಉಲ್ಲೇಖಗಳಿಲ್ಲ[೧೫] ಎಂಬ ಅಭಿಪ್ರಾಯ

* ಇತಿಹಾಸ ಅಧ್ಯಾಪಕರು, ಕುಕ್ಕೆಸುಬ್ರಹ್ಮಣ್ಯೇಶ್ವರ ಕಾಲೇಜು, ಸುಬ್ರಹ್ಮಣ್ಯ, ದಕ್ಷಿಣ ಕನ್ನಡ.

ನಿರಾಧಾರವಾದುದು. ನಮಗೆ ಅಣೆಕಟ್ಟುಗಳ ನಿರ್ಮಾಣದ ಬಗೆಗಿನ ನೇರವಾದ ಶಾಸನಗಳು ದೊರೆತಿಲ್ಲವಾದರೂ ಭತ್ತದ ಗದ್ದೆಗಳಿರುವ ಕಟ್ಟಿನ ಗದ್ದೆ ಎಂಬಿತ್ಯಾದಿ ಹೆಸರುಗಳೇ ಅಣೆಕಟ್ಟುಗಳ ರಚನೆಯ ಅಸ್ತಿತ್ವವನ್ನು ಸಾಧಾರವಾಗಿಯೇ ಪುಷ್ಟಿಗೊಳಿಸುತ್ತವೆ.

ಭತ್ತದ ಗದ್ದೆಗಳ ಅನೇಕ ಹೆಸರುಗಳ 'ಮಾರ್' ಎನ್ನುವ ಪ್ರತ್ಯಯದೊಡನೆ ಕಂಡುಬರುತ್ತದೆ.[೧೬] ಇದರ ಪೂರ್ಣರೂಪ 'ತಿಮಾರ್' ಎಂದರೆ ವಿಸ್ತಾರವಾದ, ಭತ್ತದ ಗದ್ದೆ ಎಂದು. ತುಳು ಮಾತನಾಡುವ ಪ್ರದೇಶಗಳಲ್ಲಿ ದಕ್ಷಿಣ ಭಾಗದಲ್ಲಿ ಭತ್ತದ ಗದ್ದೆಗಳಿಗೆ Kedu Timaro[೧೭] ಎಂಬ ಹೆಸರಿದೆ. ಇದಕ್ಕೆ ಕೆರೆಗಳ ಬಳಿಯಿರುವ ಭತ್ತದ ಗದ್ದೆ ಎಂಬರ್ಥವಿದೆ. ಇದಕ್ಕೆ ಕನ್ನಡ ಭಾಷಿಕ ಪ್ರದೇಶಗಳಲ್ಲಿ ಕೆರೆಗದ್ದೆ ಎಂದು ಕರೆಯಲಾಗುತ್ತದೆ.[೧೮] ಕ್ರಿ.ಶ. ೧೪೩೪ರ ಬಸರೂರು ಶಾಸನವು ಈ ಬಗೆಯ ಮಾಹಿತಿಯನ್ನು ನೀಡುತ್ತದೆ. 'ಕೆಂಚನ ಕೆರೆಯೆಂಬ ಬಾಳು'[೧೯] ಎಂಬ ಉಲ್ಲೇಖವು ಕೆರೆಯ ಕಟ್ಟಿನ ಗದ್ದೆ ಎಂಬುದು ಕೆರೆಯ ಸಮೀಪದ ಭತ್ತದ ಗದ್ದೆ[೨೦] ಎಂಬರ್ಥವನ್ನು ಸ್ಫುರಿಸುತ್ತದೆ. ಈ ಅಂಶಗಳನ್ನು ಅವಲೋಕಿಸಿದರೆ ಕೆರೆಯು ಗದ್ದೆಗಳಿಗೆ ನೀರನ್ನೊದಗಿಸುವ ಪ್ರಮುಖ ಆಕರವಾಗಿತ್ತು ಎಂಬುದು ವೇದ್ಯವಾಗುತ್ತದೆ. 'ನೀರು ಹರಿಯುವ ಸಾಲಿನ ಒಳಗುಳ್ಳ ಮಕ್ಕಿ'[೨೧] ಎಂಬುದು ಸಣ್ಣ ತೊರೆಯ ಆಸುಪಾಸಿನಲ್ಲಿರುವ ಭತ್ತದ ಗದ್ದೆಯೆಂಬುದನ್ನು ಸೂಚಿಸುತ್ತದೆ. ತೂಬಿನ ಸಮೀಪದ ಭತ್ತದ ಗದ್ದೆ ಎಂಬರ್ಥವನ್ನು 'ತೂಂಬಿನ ಬಾಗಿಲ ಹಾಳಿ'[೨೨]ಯೆಂಬುದು ಒಳಗೊಂಡಿದೆ.

ಶಾಸನೋಕ್ತ 'ಅಬಿಯ ಗದ್ದೆ'[೨೩] ಎಂಬುದು ಪುಟ್ಟ ಜಲಪಾತದ ಸನಿಹವಿರುವ ಗದ್ದೆಯನ್ನು ಸೂಚಿಸುತ್ತದೆ ಎನ್ನಬಹುದು. ಕೆಲವು ಗದ್ದೆಗಳ ಹೆಸರುಗಳಿಂದಲೇ ಅವುಗಳಿಗೆ ಮಳೆಯ ಹೊರತಾಗಿ ನೀರಿನ ಆಧಾರವೇ ಇಲ್ಲದುದು ತಿಳಿಯುತ್ತದೆ. ಉದಾಹರಣೆಗೆ, 'ಬನಗದ್ದೆ' ಎಂಬ ಉಲ್ಲೇಖವು[೨೪] ಪೂರ್ಣವಾಗಿ ಭತ್ತದ ಗದ್ದೆಯು ಬೇಸಾಯಕ್ಕಾಗಿ ಮಳೆನೀರನ್ನೇ ಅವಲಂಬಿಸಿರುವುದನ್ನು ತಿಳಿಸುತ್ತದೆ. ಈ ಬಗೆಯ ಆಧಾರಗಳು ವಿವಿಧ ಬಗೆಯ ನೀರಿನ ಆಕರಗಳನ್ನು ಅಧ್ಯಯನ ಮಾಡಲು ಮಾತ್ರವಲ್ಲದೆ ಹಲವು ರೀತಿಯ ಕೃಷಿಯೋಗ್ಯ ಭೂಮಿಯನ್ನು ಅಧ್ಯಯನ ಮಾಡಲು ಸಹಾಯ ಮಾಡುತ್ತದೆ. ಪಿ. ಗುರುರಾಜ ಭಟ್ ರವರು 'ಹಾನೆಯಬೈಲ ಗದ್ದೆ'[೨೫] ಎಂಬ ಭತ್ತದ ಗದ್ದೆಯೊಂದರ ವಿಚಾರದ ಬಗ್ಗೆ ಬೆಳಕು ಚೆಲ್ಲುತ್ತಾರೆ. ಅವರು ಹಾನೆ ಎಂಬುದು ಭತ್ತದ ಗದ್ದೆಯ ಅಳತೆಯಿರಬಹುದೆಂದು ಅಭಿಪ್ರಾಯಿಸಿದ್ದಾರೆ. ದಕ್ಷಿಣ ಕನ್ನಡದಲ್ಲಿ ಹಾನೆಯೆಂಬುದು ನೀರೆತ್ತುವ ಪ್ರಮುಖ ಸಾಧನವಾಗಿಯೂ ಇರುವ ಸಾಧ್ಯತೆಗಳು ಹೆಚ್ಚಿವೆ.

ಕೆಲವು ಭತ್ತದ ಗದ್ದೆಗಳಿಗೆ ಅವುಗಳ ಸಮೀಪವಿರುವ ಮರಗಳ ದೆಸೆಯಿಂದಲೇ ವಿಶಿಷ್ಟ ರೀತಿಯಲ್ಲಿ ಹೆಸರುಗಳು ಸಂದಿವೆ. ಉದಾಹರಣೆಗೆ, ಮಾವಿನಗದ್ದೆ[೨೬] ಆನೆ ಮಾವಿನ ಹಾಳಿ.[೨೭] ಮಾವಿನ ಹಣ್ಣಿನ ಗಾತ್ರದ ಪ್ರಭಾವವು ಗದ್ದೆಗಳ ಹೆಸರುಗಳ ಮೇಲುಂಟಾಗಿರುವುದು ಸೋಜಿಗವೇ ಸರಿ. ಬೋಗಿಯ ಗದ್ದೆ[೨೮] ಎಂಬುದು ಬೋಗಿ ಮರದ[೨೯] ಸನಿಹದ ಗದ್ದೆಯಾಗಿದೆ. ಹಂಗರು [ಸದಾ ಹಸಿರಾಗಿರುವ ಒಂದು ಸಸ್ಯ] ಮರಗಳ ಸಮೀಪದ ಗದ್ದೆ ಹಂಗರು ಗದ್ದೆ, ನೆಲ್ಲಿಮರದ ಒತ್ತಿನಲ್ಲಿರುವ ಗದ್ದೆ ನೆಲ್ಲಿಗದ್ದೆಯೆಂದು[೩೦] ಹುಣಿಸೆಮರದ ಸಮೀಪದ ಗದ್ದೆ ಹುಣಿಸೆಗದ್ದೆ[೩೧] ಎಂದು ಕರೆಯಲ್ಪಡುತ್ತದೆ. ತುಳು ಭಾಷಿಕ ಪ್ರದೇಶಗಳಲ್ಲಿನ ಶಾಸನಗಳಲ್ಲಿ ಹುಣಿಸೆ ಗದ್ದೆಯ ಹೆಸರು ಕ್ವಚಿತ್ತಾಗಿ ಕಂಡುಬರುತ್ತದೆ. ಕ್ರಿ.ಶ. ೧೪೩೩ರ ಕಾಂತಾವಾರದ ದಾಖಲೆಯಲ್ಲಿ[೩೨] 'ಪುಲೆ ಮರಣೆಯ ಗದ್ದೆ' ಎಂಬ ಉಲ್ಲೇಖ ಕಂಡುಬಂದಿದ್ದು, ಪುಲಿ ಎಂಬುದು ತುಳುಭಾಷೆಯ ಹುಳಿ ಎಂಬುದಕ್ಕೆ ಸೂಚಿಸುತ್ತದೆ. ಕೆಲವು ಶಾಸನಗಳಲ್ಲಿ 'ಹುಣಿಸೆ ಅಡಿಗದ್ದೆ'[೩೩] ಎಂಬ ಉಲ್ಲೇಖಗಳು ಕಂಡುಬರುತ್ತವೆ. ಇಲ್ಲಿ ಅಡಿ [Adi] ಎಂದರೆ ಭತ್ತದ ಗದ್ದೆಗಳ ಸಮೂಹ. 'ಹುಣಿಸೆ ಅಡಿಯ ಮಕ್ಕಿ' ಎಂದರೆ ಹುಣಿಸೆ ಮರದ ಬಳಿಯಿರುವ ಭತ್ತದ ಗದ್ದೆ[೩೪] ಕಾಡು ಹಲಸಿನ ಮರದ ಹತ್ತಿರವಿರುವ ಗದ್ದೆ ಎಂಬರ್ಥವನ್ನು 'ಪೆಜತಿಮರು'[೩೫] ಒಳಗೊಂಡಿದೆ. ಹಲಸಿನ ಗದ್ದೆ[೩೬] ಎಂಬುದು ಹಲಸಿನಮರದ ಮಗ್ಗುಲಿನ ಗದ್ದೆ, 'ಕಂಗಿ ತಿಮರಂ' ಎಂಬುದು 'ತೆಂಗಿನ ತೋಟದ ಬಳಿಯಿರುವ ಗದ್ದೆ' ಮತ್ತು ಕೇದಗೆಯ ಗದ್ದೆಯು[೩೭] ಕೇದಗೆ ಹೂವಿನ ಬಳಿಯ ಗದ್ದೆಯನ್ನು ಸೂಚಿಸುತ್ತದೆ. 'ಸಿಂಗಾರ ಗದೆ'[೩೮] ಎಂಬುದರ ಉಲ್ಲೇಖವು ಶಾಸನದಲ್ಲಿ ಕಂಡುಬರುತ್ತದೆ. ಇದು ಹನಯನ ಮರದ ಸಮೀಪದ ಗೋಳಿಯ ಗದ್ದೆ[೩೯] ಅಥವಾ ಗೋಳಿಗದ್ದೆಯ[೪೦] ಅರ್ಥವನ್ನೇ [ಆಲದ ಮರದ ಜಾತಿಗೆ ಸೇರಿದ ಒಂದು ಸಸ್ಯ] ಒಳಗೊಂಡಿದೆ. 'ಆಲಗದ್ದೆ'ಯು[೪೧] ಇದೇ ಅರ್ಥವನ್ನು ಧ್ವನಿಸುತ್ತದೆ. ತುಳು ಭಾಷಿಕ ಪ್ರದೇಶಗಳಲ್ಲಿನ ಶಾಸನಗಳಲ್ಲಿ 'ಹಂಗರು ಗದ್ದೆಯು' ಪೊಂಗರು ತಿಮರೆಂಬ ಹೆಸರನ್ನು[೪೨] ಪಡೆದಿರುವುದು ಕಂಡುಬರುತ್ತದೆ. ಹೀಗೆ ನಾವು ಭತ್ತದ ಗದ್ದೆಗಳ ಸಮೀಪ ಬೆಳೆದ ಮರಗಳಿಂದಲೇ ಅವುಗಳು ಹೆಸರು ಪಡೆದಿರುವುದುನ್ನು ಕಾಣಬಹುದು.

ಕೆಲವು ಪ್ರದೇಶಗಳು ಬೇಸಾಯಕ್ಕೆ ಯೋಗ್ಯ ಪ್ರದೇಶಗಳಾಗುವ ಹಂತದಲ್ಲಿ ಅವುಗಳಿಗೆ ಕೃಷಿ ಹರಹನ್ನು ಸೂಚಿಸುವ ಹೆಸರುಗಳೇ[೪೩] ಹಕ್ಕಿರುವುದು ಕಂಡುಬರುತ್ತದೆ ಬೇಸಾಯದ ವಿಸ್ತರಣೆಯನ್ನು ಕುರಿತಂತೆ ಮೂಡಬಿದರೆಯ ಶಾಸನ ವೊಂದು[೪೪] ತಿಳಿಸುತ್ತದೆ. ಮತ್ತೊಂದು ಶಾಸನವು 'ಕಳೆಯನು

ರೂಪುಮಾಡಿದ ಗದ್ದೆ'[೪೫]ಯನ್ನು ಉಲ್ಲೇಖಿಸುತ್ತದೆ. ಕಳೆ ಎಂಬುದು ಹುಲ್ಲಿನ ಒಂದು ಬಗೆಯಾಗಿದ್ದು, ಸಾಮಾನ್ಯವಾಗಿ ಅದು ನದಿಯ ಒತ್ತಿನಲ್ಲಿ ಕೃಷಿಗೊಳಪಡದ ಪ್ರದೇಶಗಳಲ್ಲಿ ಯಥೇಚ್ಛವಾಗಿ ಕಂಡುಬರುತ್ತದೆ.[೪೬] 'ದೇವರ ಕಳಿಯ ಬಯಲು'[೪೭] 'ಮೋಗಣ ಕಳಿಯೆಂಬ ಗದ್ದೆ'[೪೮] ಎಂಬ ಶಾಸನೋಕ್ತ ಆಧಾರಗಳು ಲಕ್ಷ್ಯಾರ್ಹವಾಗಿದೆ. ಕೆಲವೊಮ್ಮೆ ಒಂದು ಸ್ಥಳವನ್ನೇ 'ಕಳಿ' ಎಂದು ಕರೆಯಲಾಗಿದೆ. ಭೂಪ್ರದೇಶವನ್ನು ಕೃಷಿಗೆ ಉಪಯುಕ್ತವಾಗುವಂತಹ ಸ್ಥಿತಿಗೆ ತರುವ ಮತ್ತೊಂದು ಕ್ರಮವೆಂದರೆ ದಿಣ್ಣೆಗಳನ್ನು ಸಮತಟ್ಟುಗೊಳಿಸುವುದು. 'ಕಡಿದು ಮಾಡಿದ ಗದ್ದೆ'[೪೯] 'ಗುಡ್ಡೆಯ ಗದ್ದೆ'[೫೦] 'ಗುಡ್ಡೆಯ ಕಡಿದು ಗದ್ದೆ (ಮಾಡು)ವರೆ[೫೧] ಎಂಬಿತ್ಯಾದಿ ಉದಾಹರಣೆಗಳು ಕೃಷಿಯೋಗ್ಯವಲ್ಲದ ಪ್ರದೇಶಗಳನ್ನು ಕೃಷಿಯೋಗ್ಯಗೊಳಿಸಿರುವುದನ್ನು ಸ್ಪಷ್ಟವಾಗಿ ತಿಳಿಸುತ್ತವೆ.

'ಹೊಸಗದ್ದೆ' ಎಂದರೆ[೫೨] ಹೊಸದಾಗಿ ಬೇಸಾಯಕ್ಕೆ ಒಳಪಟ್ಟ ಪ್ರದೇಶ. ಇದೇ ಅರ್ಥವನ್ನು ತುಳುನಾಡಿನ ಶಾಸನಗಳಲ್ಲಿನ ಹೊಸತಿಮರೆಂಬ ಗದ್ದೆ[೫೩] ಮತ್ತು ಹೊಸತಿಮರು[೫೪] ಎಂಬುದನ್ನು ಸೂಚಿಸುತ್ತದೆ. ಹೊಸತಳಿ ತೋಟ ಎಂಬುದು ಕಳಿಯನ್ನು ತೋಟವಾಗಿ ಪರಿವರ್ತಿಸಿದುದನ್ನು ಸೂಚಿಸುತ್ತದೆ.[೫೬]

ಭತ್ತದ ಗದ್ದೆಗಳ ಹೆಸರುಗಳಲ್ಲಿ ಭೂ ಹಿಡುವಳಿದಾರರ ಹೆಸರುಗಳು ಮಿಳಿತವಾಗಿರುವುದನ್ನು ಕಾಣಬಹುದು. ಕ್ರಿ.ಶ. ೧೩೮೯ರ ಕದ್ರಿ ಶಾಸನದಲ್ಲಿನ 'ಬೊಮ್ಮನಗದ್ದೆ'[೫೭] ಎಂಬ ಉಲ್ಲೇಖವು ಬೊಮ್ಮ ಎಂಬುವವನ ಗದ್ದೆ ಎಂಬುದನ್ನು ತಿಳಿಸುತ್ತದೆ. ವಿಷ್ಣು ಕಾರಂತನ ಬಳಿಕೆ ಭೂಮಿ, ಶಂಭು ಮಾಲಿಂಗನ ಅಡಿ [Adi] ರಾಮನಾಯರ ಬಯಲು, ಬಸವಂತನ ಗದ್ದೆ[೫೮] ಬಾರಕೂರು ವಿಟ್ಟಪ್ಪನ ಬಾಳು[೫೯] ಬಿಂಡಮಂಜನ ಮಾಲಗದ್ದೆ[೬೦] ನರನ ಮೊಗರನ ಮೂಲಗದ್ದೆ[೬೧] ನಾರಣ ಸೆಟ್ಟಿಯಿಂದ ಮಂಡಗದ್ದೆ[೬೨] ರಾಮನ ಗದ್ದೆ[೬೩] ಎಂಬೀ ಶಾಸನೋಕ್ತ ಹೆಸರುಗಳನ್ನು ಈ ನಿಟ್ಟಿನಲ್ಲಿ ಗಮನಿಸಬಹುದು. ಮತ್ತೊಂದು ಕೌತುಕದ ಸಂಗತಿಯೆಂದರೆ, ಸ್ತ್ರೀಯೋರ್ವಳು ಭೂಸ್ವಾಮ್ಯವನ್ನು ಪಡೆದಿರುವುದು ಶಾಸನೋಕ್ತವಾಗಿದೆ. 'ಹೆಬರತಿ ಗದ್ದೆ'[೬೪] ಎಂಬುದು ಬ್ರಾಹ್ಮಣ ಸ್ತ್ರೀಯಾದ ಹೆಬರತಿ ಎಂಬುವವಳು ಭೂ ಒಡತಿಯಾಗಿದ್ದುದನ್ನು ಸೂಚಿಸುತ್ತದೆ.

ಭತ್ತದ ಗದ್ದೆಗಳ ಹೆಸರುಗಳು, ಗದ್ದೆಗಳಿರುವ ಸ್ಥಳವನ್ನು ಸಹ ಬಹಳ ಸ್ಪಷ್ಟವಾಗಿ ಸೂಚಿಸುತ್ತದೆ. ಉದಾಹರಣೆಗೆ, ಮನೆಯ ಮೆಟ್ಟಿಲ ಬಳಿಯೇ ಇರುವ ಭತ್ತದ ಗದ್ದೆಗಳಿಗೆ ಮೆಟ್ಟುಕಲ್ಲ ಗದ್ದೆ[೬೫] ಎಂದು ಕರೆಯಲಾಗಿದೆ. ಮನೆಯ ಮುಂದಣ ಗದ್ದೆಗಳಿಗೆ ಬಾಗಿಲಗದ್ದೆ ಎನ್ನಲಾಗಿದೆ. ಸಾಮಾನ್ಯವಾಗಿ ದೊಡ್ಡ ಮನೆತನಗಳ ಮುಂದಿನ ವಿಶಾಲವಾದ ಭತ್ತದ ಗದ್ದೆಗಳಿಗೆ ತುಳು ಭಾಷಿಕ ಪ್ರದೇಶಗಳಲ್ಲಿ 'ಬಾಕಿಲಮಾರ' [ಬಾಗಿಲ ಗದ್ದೆ] ಎಂದು ಕರೆಯಲಾಗುತ್ತದೆ.[೬೬] ಕೆಲವು ಶಾಸನಗಳಲ್ಲಿ ಮನೆಯ ಹಿರಿಮೆಯನ್ನು ಬಿಂಬಿಸುವ ಸಂದರ್ಭದಲ್ಲಿ 'ಹಿರಿಯಮನೆ ಬಾಗಿಲ ಗದ್ದೆ'[೬೭] 'ಕಲ್ಲಗದ್ದೆ'[೬೮] ಎಂಬುದಾಗಿ ಉಕ್ತಗೊಂಡಿದೆ. ಹೊರನೋಟಕ್ಕೆ ಕಲ್ಲಗದ್ದೆ ಎಂಬುದು ಸಣ್ಣಬಂಡೆಯ ಸಮೀಪದ ಗದ್ದೆಯನ್ನು ಸೂಚಿಸುತ್ತಿರುವಂತಿದೆ. ಬರಡ ಕಲ್ಲುಗದ್ದೆ ಎಂತಲೂ ಕೆಲವೊಮ್ಮೆ ಕರೆಯಲಾಗಿದೆ. ತುಳುಭಾಷಿಕ ಪ್ರದೇಶಗಳಲ್ಲಿ ಇದೇ 'ಕಲ್ಲಿಯ ಗದ್ದೆ'[೬೯] ಎಂದು ಕರೆಯಲ್ಪಡುತ್ತದೆ. ಈ ಭಾಗಗಳಲ್ಲಿ ಇದನ್ನು 'ಕಲ್ಲಿತಿಮರೊ'[೭೦] ಎಂದು ಕರೆಯುತ್ತಾರೆ. ಗುಳಿಯನಗದ್ದೆ[೭೧] ಗುಳಿಯಗದ್ದೆ[೭೨] ಗುಳಿಗದ್ದೆ[೭೩] ಎಂಬಿವು ಅತ್ಯಂತ ತಗ್ಗಾದ ಕಿರಿದಾದ ಪ್ರದೇಶಗಳಲ್ಲಿನ ಭತ್ತದ ಗದ್ದೆಗಳನ್ನು ಸೂಚಿಸುತ್ತದೆ.

ಕೆಲವು ಭತ್ತದ ಹೆಸರುಗಳಲ್ಲಿ ಜನರ ಕಲ್ಪನಾಶಕ್ತಿಯ ಕೌಶಲ್ಯ ಮತ್ತು ಜನಪದೀಯ ದೃಷ್ಟಿಕೋನವು ಬಿಂಬಿತವಾಗಿದೆ. 'ಕಂಡಿಕೆ ಎರೆಗದ್ದೆ'[೭೫] ಎಂಬುದು ಕಂಡಿಕೆಗದ್ದೆ[೭೬] ಅಥವಾ ಸಿಲ್ಲಗೊ ಸಿಹಮಾ ಎಂದು ಕರೆಯಲ್ಪಡುವ ಮೀನಿನ ಆಕಾರದ ಗದ್ದೆಯನ್ನು ಸೂಚಿಸುತ್ತದೆ. ಒಂದು ವೇಳೆ ಗದ್ದೆಯು ತುಂಬ ಚಿಕ್ಕದಾಗಿದ್ದರೆ ಅದನ್ನು ಕಂಡಿಕಡ ಹಳಿ ಎಂದು ಕರೆಯುತ್ತಿದ್ದರು. ತೊಟ್ಟಿಲಿನ ಆಕಾರದ ಗದ್ದೆಯನ್ನು 'ತೊಟ್ಟಿಲು ಗದ್ದೆ'[೭೭] ಎಂದೂ, ಬಟ್ಟಲಿನಾಕಾರದ ಗದ್ದೆಯನ್ನು 'ಬಟ್ಟಲು ಕಂಡಯ ಬಯಲು ಗದ್ದೆ'[೭೮] ಎಂತಲೂ, ಆರತಿ ತಟ್ಟೆಯ ಆಕಾರದ ಗದ್ದೆಯನ್ನು 'ಆರತಿ ಕಂಡಯೆಂಬ ಗದ್ದೆ'[೭೯] ಎಂದೂ ಕರೆಯಲಾಗುತ್ತಿತ್ತು. 'ಆರತಿ ಖಂಡ' ಎಂಬುದು ದೇಗುಲದಲ್ಲಿ ಆರತಿ ಸೇವೆಗಾಗಿ ನೀಡಿದ ದಾನದ ಭತ್ತದ ಗದ್ದೆಯಾಗಿರಬಹುದು. 'ಕುದುರೆ ಗದ್ದೆ'[೮೦] [ಕುದುರೆಯಾಕಾರದ ಗದ್ದೆ], ನೇವಳದ ಗದ್ದೆ[೮೧] [ಕಟಿಸೂತ್ರ/ಒಡ್ಯಾಣದ ಆಕಾರದ ಗದ್ದೆ] ಎಂಬಿವು ಇತರೆ ಲಕ್ಷ್ಯಾರ್ಹ ಉದಾಹರಣೆಗಳಾಗಿವೆ. 'ಆನೆಗಳೆಂಬ ಬಯಲಗದ್ದೆ'ಯು ಬಹುಶಃ ವಿಶಾಲ ವ್ಯಾಪ್ತಿಯ ಗದ್ದೆಯನ್ನು ಸೂಚಿಸುತ್ತಿರಬಹುದು.

ಭತ್ತದ ಗದ್ದೆಗಳ ಹೆಸರುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಆ ಗದ್ದೆಗಳ ವ್ಯಾಪ್ತಿಯನ್ನು ಸಹ ಗುರುತಿಸಬಹುದಾಗಿದೆ. ಮಾಳಗದ್ದೆ[೮೩]/ಮಾಳ್ಳಗದ್ದೆಯು[೮೪] ದೊಡ್ಡಪ್ರಮಾಣದ ಗದ್ದೆಯನ್ನು ಸೂಚಿಸುತ್ತದೆ. ಕೆಲವೊಮ್ಮೆ ಮಾಳಗದ್ದೆಯೇ ಹಿರಿಯ ಮಾಳ್ಳಗದ್ದೆ[೮೫] ಎಂಬುದಾಗಿ ಉಲ್ಲೇಖಗೊಂಡಿದೆ. 'ಹಳಿ'[೮೬]ಯು ಸಣ್ಣಪ್ರಮಾಣದ ಗದ್ದೆಯನ್ನು ಸೂಚಿಸುತ್ತದೆ. ಶಾಸನೋಕ್ತ 'ಕಿರುಗದ್ದೆ'[೮೭] ಎಂಬುದು ಇದೇ ಅರ್ಥವನ್ನೊಳಗೊಂಡಿದೆ. ವ್ಯಾಪ್ತಿಯ ಜೊತೆಗೆ ಗದ್ದೆಗಳಿದ್ದ ಸ್ಥಳದ ಬಗ್ಗೆಯೂ

ಸ್ಪಷ್ಟ ಮಾಹಿತಿಯನ್ನು ಅವುಗಳಿಗಿರುವ ಹೆಸರುಗಳಿಂದಲೇ ಅರಿಯಬಹುದಾಗಿದೆ. ಉದಾಹರಣೆಗೆ, ಮನೆ ಮುಂದಣ ಮಾಳ್ಳಗದ್ದೆ[೮೮] ಮಾಳಗದ್ದೆಗಳು ಹಲವು ಸಂದರ್ಭಗಳಲ್ಲಿ ಮನೆಯ ಮುಂದೆಯೇ ಅಸ್ತಿತ್ವದಲ್ಲಿದ್ದವು. ಮಕ್ಕಿಮಾಳಗದ್ದೆ[೮೯] ಎಂಬುದು ಮನೆಯಿದ್ದ ಜಾಗವನ್ನು ಸೂಚಿಸುತ್ತದೆ. ಏಕಕಾಲದಲ್ಲಿ ಇಂತಹ ಹೆಸರುಗಳು ಭೂಮಿಯ ವಿಧ ಮತ್ತು ಮನೆಯಿದ್ದ ಜಾಗವನ್ನು ಸೂಚಿಸುತ್ತವೆ. ಸಾಮಾನ್ಯವಾಗಿ ಮನೆಗಳು 'ಮಕ್ಕಿ' ಇರುವ ಕಡೆ [ಬೆಳೆ ಹುಲುಸಾಗಿ ಬೆಳೆಯದಿರುವ ಎತ್ತರವಾದ ಜಮೀನು] ಮತ್ತು 'ಬೆಟ್ಟು' [ಮರಗಳನ್ನು ಕಡಿದು ವ್ಯವಸಾಯಕ್ಕೆ ಅಣಿಗೊಳಿಸುವ ಗದ್ದೆ] ಗಳಿರುವೆಡೆಗಳಲ್ಲಿ ನಿರ್ಮಾಣವಾಗಿದ್ದವು.

ಕೆಲವೊಮ್ಮೆ ಭತ್ತದ ಗದ್ದೆಗಳ ಹೆಸರುಗಳಲ್ಲಿ ಜನರ ಧಾರ್ಮಿಕ ಮತ್ತು ಸಾಂಸ್ಕೃತಿಕ ಜೀವನದ ಗತಿಯನ್ನು ಗುರುತಿಸಬಹುದಾಗಿದೆ. 'ಗೋರಿಗದ್ದೆ'[೯೦] ಎಂಬುದು ಸ್ಮಾರಕವನ್ನು ಒಳಗೊಂಡ ಗದ್ದೆ ಎಂಬುದರ ಸೂಚಕವಾಗಿದೆ. ದಕ್ಷಿಣ ಕನ್ನಡವು ನಾಗಪೂಜೆಗೆ ಪ್ರಸಿದ್ಧವಾಗಿದೆ. ಇದರ ಪ್ರಭಾವ ಭತ್ತದ ಗದ್ದೆಗಳ ಹೆಸರುಗಳಲ್ಲಿಯೂ ಪ್ರತಿಬಿಂಬಿತವಾಗಿದೆ. ಉದಾಹರಣೆಗೆ, ನಾಗನಗದ್ದೆಯು[೯೧] ನಾಗಬನದ ಸಮೀಪದ ಗದ್ದೆಯೇ ಆಗಿರುತ್ತದೆ. ಹುತ್ತಿನ ಗದ್ದೆ[೯೨] / ವಲ್ಮೀಕ ಮಾಳ್ಳಗದ್ದೆ[೯೩] ಎಂಬುದು ಇದರ ಇತರ ಹೆಸರುಗಳಾಗಿವೆ. ಹುತ್ತ/ವಲ್ಮೀಕದ ಪೂಜೆಯು ದಕ್ಷಿಣ ಕನ್ನಡದಲ್ಲಿ ನಾಗಪೂಜೆಯೊಂದಿಗೆ ಸಂಬಂಧ ಹೊಂದಿದೆ. ಈ ಬಗೆಯ ಹೆಸರುಗಳು ನಾಗಾರಾಧನೆಯು ಜನರ ಧಾರ್ಮಿಕ ಜೀವನದಲ್ಲಿ ವಹಿಸಿದ ಪ್ರಮುಖ ಪಾತ್ರವನ್ನು ತಿಳಿಯಲು ಸಹಾಯಕವಾಗಿದೆ.

ಧಾರ್ಮಿಕ ಸಂಸ್ಥೆಗಳು ಶಕ್ತಿಶಾಲಿ ಭೂಮಾಲಿಕತ್ವವನ್ನು ಹೊಂದಿರುವುದಕ್ಕೆ ಭತ್ತದ ಗದ್ದೆಗಳ ಹೆಸರುಗಳೇ ಪ್ರಮಾಣೀಭೂತವಾಗಿವೆ. 'ಜಿನಗದ್ದೆ'ಯು[೯೪] ಜೈನಬಸದಿಗೆ ಸೇರಿದುದಾಗಿದೆ. 'ಮಂಜುನಾಥ ದೇವಸ್ವದ ಗದ್ದೆ'[೯೫]ಯು ಮಂಜುನಾಥ ಸ್ವಾಮಿಯ ದೇಗುಲದ ಸುಪರ್ದಿಗೆ ಸೇರುತ್ತದೆ. ಬಹುತೇಕ ಗದ್ದೆಗಳು ದೇವಸ್ವಗದ್ದೆಗಳಾಗಿದ್ದುದಕ್ಕೆ ಶಾಸನೋಲ್ಲೇಖವಿದೆ.[೯೬] ತುಳುಭಾಷಿಕ ಪ್ರದೇಶಗಳಲ್ಲಿ ಮಠದ ವಶದಲ್ಲಿದ್ದ ಜಮೀನುಗಳು 'ಮಠದ ಗದ್ದೆ'[೯೭] ಎಂಬುದಾಗಿ ಕರೆಯಲ್ಪಡುತ್ತಿದ್ದವು. ಮೂಡಬಿದರೆ ತಾಮ್ರದ ಶಾಸನವು ದೈವಕ್ಕೆ ದಾನವಾಗಿ ನೀಡಿದ 'ದೇವಬೆಟ್ಟು'[೯೮] ಎಂಬ ಭತ್ತದ ಗದ್ದೆಗಳ ಸಮೂಹದ ವಿಚಾರವನ್ನು ತಿಳಿಸುತ್ತದೆ.

ಭತ್ತದ ಗದ್ದೆಯ ಹೆಸರುಗಳಿಂದಲೇ ಸಾಮಾಜಿಕವಾಗಿ ಉತ್ತಮ ಸ್ಥಾನಮಾನವನ್ನು ಹೊಂದಿದ್ದ ಕುಟುಂಬದ ಬಗ್ಗೆಯೂ ಅರಿಯಬಹುದಾಗಿದೆ. ಮಾಳಗದ್ದೆ[೯೯] ಬಾಗಿಲಗದ್ದೆ[೧೦೦] ಎಂಬ ಉಲ್ಲೇಖಗಳು ಗದ್ದೆಗಳು ಮನೆಯನ್ನು ಪ್ರವೇಶಿಸುವ ದ್ವಾರದಲ್ಲಿಯೇ[೧೦೧] ಸ್ಥಿತಗೊಂಡಿದ್ದವೆಂಬುದನ್ನು ಸೂಚಿಸುತ್ತವೆ. ಇಂತಹ ಗದ್ದೆಗಳು ಗಣ್ಯ ಮನೆತನದ ದೊಡ್ಡ ಮನೆಯ ಮುಂದೆಯೇ ಕಂಡುಬರುತ್ತವೆ. 'ಮನೆಯ ಮುಂದಣ ಮಾಳಗದ್ದೆ'[೧೦೨] 'ತಮ್ಮಿಸೆಟ್ಟಿಯ ಬಾಗಿಲಗದ್ದೆ'[೧೦೩] ಎಂಬಿವು ಇದೇ ಅರ್ಥವನ್ನು ಒಳಗೊಂಡಿವೆ. ಮಾಳಗದ್ದೆಯ ಮುಂದಣ ಗದ್ದೆಯನ್ನು ಮಟ್ಟಗದ್ದೆ[೧೦೪] ಎನ್ನುತ್ತಿದ್ದರು.

'ಅಳಿಯಂದಿರ ಗದ್ದೆ'[೧೦೫] 'ಸೋದ್ರಣ್ಣ ಗದ್ದೆ'[೧೦೬] ಮತ್ತು 'ವಸುವೊರಬಳ್ಳಿಯ ಮಕ್ಕಳ ಬಾಳು'[೧೦೭] ಎಂಬ ಶಾಸನೋಲ್ಲೇಖಗಳು ಭತ್ತದ ಗದ್ದೆಗಳ ಹೆಸರುಗಳಿಂದ ಬಾಂಧವ್ಯದ ಬಗ್ಗೆ ಅರಿಯಲು ಸಹಾಯ ಮಾಡುತ್ತವೆ. ಪಿತ್ರಾರ್ಜಿತ ಆಸ್ತಿಯು ಈ ಭಾಗಗಳಲ್ಲಿ ಮಕ್ಕಳ ಸಂತಾನ ಮತ್ತು ಅಳಿಯ ಸಂತಾನಗಳಲ್ಲಿ ಪಾಲಾಗುತ್ತಿತ್ತು. 'ಮಕ್ಕಳ ಬಳು' ಎಂಬಿತ್ಯಾದಿ ಉದಾಹರಣೆಗಳು ಇದಕ್ಕೆ ಸಾಕ್ಷಿಯಾಗಿವೆ.

ಭತ್ತದ ಗದ್ದೆಗಳ ಹೆಸರುಗಳಿಂದ ಭೂಮಾಲಿಕತ್ವವನ್ನು ಪಡೆದಿದ್ದ ಸ್ಥಳೀಯ ಆಡಳಿತಾಧಿಕಾರಿಗಳ ಬಗ್ಗೆ ತಿಳಿಯಬಹುದಾಗಿದೆ. ಹಲರ ಬಾಗೆಯ ಕಳಿ[೧೦೮] ಹಲರ ಮಾಳ್ಳಗದ್ದೆ[೧೦೯] ಸೇನಬೋವರ ಬೆಟ್ಟು[೧೧೦] ಎಂಬೀ ಉದಾಹರಣೆಗಳು ಹಲರು ಮತ್ತು ಸೇನಬೋವರು ಭೂಮಾಲೀಕತ್ವವನ್ನು ಹೊಂದಿದ್ದರು ಎಂಬುದಕ್ಕೆ ಸಾಕ್ಷಿಯಾಗಿವೆ. ಅರವತ್ತು ಹಾನೆಗದ್ದೆ[೧೧೧] ಮೂವತ್ತು ಹಾನೆಗದ್ದೆ[೧೧೨] ಎಂಬ ಶಾಸನೋಕ್ತ ಉದಾಹರಣೆಗಳು ಭೂ ಅಳತೆಯನ್ನು ಸೂಚಿಸುತ್ತವೆ. 'ಕೊಯ್ಲು' ಎಂಬುದು ಪ್ರಸಿದ್ಧ ಮಾನದಂಡವಾಗಿದ್ದು, ಎರಡು ಕೊಯ್ಲು ಮತ್ತು ಮೂರು ಕೊಯ್ಲು[೧೧೩] ಎಂಬ ಉದಾಹರಣೆಯಲ್ಲಿ ಇದನ್ನು ಗುರುತಿಸಬಹುದಾಗಿದೆ.

ಸುಂಕ ಸಂಗ್ರಹಣ ಸ್ಥಳವೆಂದು ಕರೆಯಲ್ಪಡುತ್ತಿದ್ದ 'ಸುಂಕದ ಹಳಿ'ಯ[೧೧೪] ಬಗ್ಗೆಯೂ ಶಾಸನಾಧಾರವಿದೆ. ಭತ್ತದ ಗದ್ದೆಗಳ ಹೆಸರುಗಳು ವ್ಯಕ್ತಿಗಳಿಗೆ ಮತ್ತು ದೇಗುಲಗಳಿಗೆ ನೀಡಿದ ದಾನದ ಉದ್ದೇಶವನ್ನು ತಿಳಿಸುತ್ತದೆ. ಉದಾ : ಕೀಳು ಶಾಂತಿಗಾಗಿ ದೇಗುಲಕ್ಕೆ ನೀಡಿದುದನ್ನು 'ಕಿಳು ಶಾಂತಿಯ ಬೆಟ್ಟು'[೧೧೫] ಎಂಬುದು ತಿಳಿಸುತ್ತದೆ. ಭತ್ತದ ಗದ್ದೆಗಳ ಹೆಸರುಗಳಲ್ಲಿ ಬ್ರಾಹ್ಮಣೇತರರು ಸಹ ಭೂಒಡೆತನವನ್ನು ಹೊಂದಿದ್ದರೆಂಬುದನ್ನು ಗುರುತಿಸಬಹುದಾಗಿದೆ. ಉದಾ : ಕುಂಬಾರಗದ್ದೆ, ಆಚಾರಿ ಬೆಟ್ಟು[೧೧೬]; ವೇಶ್ಯೆಯರು ಸಹ ಭೂಒಡೆತನವನ್ನು ಪಡೆದಿದ್ದರೆಂಬುದಕ್ಕೆ 'ಸೂಳೆ ಮಕ್ಕಿ'[೧೧೭] ಎಂಬ ಶಾಸನ ಪ್ರಯೋಗ ಆಧಾರವೊದಗಿಸುತ್ತದೆ. ರಾಜವಂಶೀಯರ ಭೂಒಡೆತನವನ್ನು ಬಿಂಬಿಸುವಂತಹ ಅರಮನೆಯ ಗದ್ದೆ[೧೧೮] ಅರಿಶಿನ ಅಡಿ[೧೧೯] ಎಂಬ ಪ್ರಯೋಗಗಳು ಗಮನಾರ್ಹವಾದವು.

ಹೀಗೆ ಭತ್ತದ ಗದ್ದೆಯ ಹೆಸರುಗಳು ಭತ್ತದ ಗದ್ದೆಗಳ ಸ್ವಾಭಾವಿಕ ಲಕ್ಷಣ, ಮಣ್ಣಿನ ವಿಧ, ನೀರಾವರಿಯ ವ್ಯವಸ್ಥೆ,

ಮಣ್ಣಿನ ಉಪಯುಕ್ತತೆ, ಅಧಿಕಾರಿಗಳ ಮತ್ತು ಧಾರ್ಮಿಕ ಸಂಘಗಳ ಮಾಲಿಕತ್ವ, ಭೂಮಿಯ ಅಳತೆ, ಕುಟುಂಬದ ಸಾಮಾಜಿಕ ಅಂತಸ್ತು ಇತ್ಯಾದಿಗಳ ಬಗ್ಗೆ ಅಪಾರ ಮಾಹಿತಿಯನ್ನು ಒದಗಿಸುತ್ತವೆ. ಇಂದಿಗೂ ಇದೇ ಬಗೆಯ ಪದಗಳು ಅರ್ಥಗರ್ಭಿತವಾಗಿ ಮುಂದುವರೆದಿವೆ.

(ಕನ್ನಡಾನುವಾದ : ಎಸ್. ಗಂಗಾಂಬಿಕೆ)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Gururaj Bhat, *Studies in Tuluva History and Culture,* 1972., p. 203.

೨. *SII,* VII, No. 389.

೩. Gururaj Bhat, *Op.cit,* p. 203.

೪. *ARSIE,* 1961-62, No. 630.

೫. *SII,* IX, No. 525.

೬ *SII,* VII, No. 299.

೭. *SII,* IX, No. 452.

೮. *SII,* VII, No. 375.

೯. B. Vasantha Shetty, *Barakuru-A metropolitan City of Aniquity. Its History and Culuture,* an unpublished thesis, Mysore University, 1984, p. 568.

೧೦. *SII,* IX, No. 525.

೧೧. *SII,* VII, No. 357.

೧೨. *Ibid,* No. 525.

೧೩. *Ibid,* No. 346.

೧೪. *Ibid,* No. 325.

೧೫. *Ibid,* No. 389.

೧೬. *Ibid,* p. 73.

೧೭. Sediyapu Krishna Bhat, *Kelavu Desanamagalu,* Manipal, 1975, p. 33.

೧೮. *SII,* VII. No. 262.

೧೯. *ARSIE,* 1976-77, No. 157.

೨೦. *SII,* IX, pt. II, No. 444.

೨೧. *SII,* VII, No. 323.

೨೨. Vasanth Shetty, *Barakuru,* P. 364.

೨೩. *SII,* IX, No. 540.

೨೪. *Ibid,* No. 512.

೨೫. *Ibid,* VII, No. 389.

೨೬. Gururaj Bhat, *Op.cit,* p. 202.

೨೭. *SII,* IX, No. 465.

೨೮. *SII,* IX, No. 675.

೨೯. *SII,* VII, No. 351.

೩೦. *SII,* IX, PT. II, No. 620.

೩೧. *Ibid.*

೩೨. *Ibid.*

೩೩. *SII,* VII, No. 230.

೩೪. *Mudabidre copper plate inscription in the possession of Swamiji of Jaina Matha* Mudabidre.

೩೫. *SII,* IX, Pt. II, No. 512.

೩೬. *SII,* VII, No. 210.

೩೭. *SII,* IX, Pt. II, No. 620.

೩೮. *SII,* VII, No. 262.

೩೯. *SII,* IX, Pt. II, No. 674.

೪೦. *Ibid,* No. 620.

೪೧. *Ibid,* No. 632.

೪೨. *Ibid,* No. 465.

೪೩. *SII,* VII, No. 190.

೪೪. *Ibid,* No. 255.

೪೫. *Ibid,* Nos. 190, 319, 296 ; *SII,* IX, Pt. II, No. 512.

೪೬ *SII,* VII, No. 215.

೪೭. *SII,* IX, Pt. II, No. 471.

೪೮. *Ibid,* No. 632; *ARSIE,* 1970-71, No. 210.

೪೯. *SII,* VII, No. 385.

೫೦. *Ibid,* No. 255.

೫೧. *ARSIE,* 1978-79, No. 175.

೫೨. *SII,* VII, No. 299.

೫೩. *ARSIE,* 1976-77, No. 163.

೫೪. *SII,* IX, Pt. II, No. 620.

೫೫. *SII,* VII, No. 183.

೫೬ *Mudabidre copper plate inscription in the possession of Swamiji of Jaina Matha,* Mudabidre.

೫೭. *SII,* IX, Pt. II, No. 540.

೫೮. *SII,* VII, No. 190.

೫೯. *ARSIE*, 1968-69, A. 8, *ARSIE*, 1976-77, 160, *SII*, VII, No. 391, *SII*, VII, No. 324.

೬೦. *Mudukeri Copper plate inscription*, B. Vasantha Shetty, Barakuru *(A Metropolitan City of Antiquity). Its History and Culture.*

೬೧. *SII*, IX, Pt. II, No. 471.

೬೨. *Ibid*, No. 471.

೬೩. *ARSIE*, 1978-79, No. 173.

೬೪. *Kotekere Basadi Copper plate inscription*, Unpublished. Vasantha Madhava, *Mulikeya Itihasa*, Mulki, 1987, p. 74.

೬೫. *SII*, IX, Pt. II, No. 620. *Hebbara is one of the popular surnames among the Brahmanas in South Kanara. Wife or daughter of a Hebbara is called Hebbarati, thought it was not used by them in records.*

೬೬. *SII*, IX, Pt. II, No. 694.

೬೭. *SII*, VII, No's 210, 270, 299, 264, 261, 189.

೬೮. *SII*, IX, Pt. II, No. 457, 540.

೬೯. *ARSIE*, 1971-72, 186, 1970-71, 210.

೭೦. 1) Elinje copper plate inscription in *Mulikeya Itihasa*, p. 71.

೭೧. i) *Mudabidre copper plate inscription No. 7. In the possession of the Swamiji of Jaina Matha*, Mudabidre.

೭೨. *SII*, VII, No's 323, 389.

೭೩. *SII*, IX, Pt. II, No. 525.

೭೪. *SII*, VII, No. 299.

೭೫. *Ibid*, No. 262.

೭೬. *Ibid*, No. 319.

೭೭. *Ibid*, No. 326.

೭೮. *Ibid*, No. 389.

೭೯. 128, *Ibid.*, No. 225.

೮೦. *SII*, IX, Pt. II, No. 675.

೮೧. *Ibid*, No. 674.

೮೨. *Mudabidre inscription* No. 1 of Lalith Devi. Published in Karnataka Bharathi, Dharwar, Jan. 1985.

೮೩. Ibid.

೮೪. *Mudabidre copper plate inscription in the possession of the Swamiji of Jaina Matha*, Mudabidre Date 1563 A.D.

೮೫. *Ibid.*

೮೬. *Ibid.*

೮೭. *SII*, IX, Pt. II, No's. 542, 620.

೮೮. *SII*, IX, Pt. II, No. 674, *ARSIE*, 1976-77, No. 157.

೮೯. *Ibid.*, No. 465.

೯೦. *SII*, VII, No. 299, *SII*, IX, Pt. II, No. 465.

೯೧. *SII*, VII, No. 190.

೯೨. *SII*, IX, Pt. II, No. 512.

೯೩. *Ibid.*, No. 620.

೯೪. *Ibid.*, No. 620.

೯೫. *SII*, VII, No. 351.

೯೬. *Ibid.*, No. 314.

೯೭. *Ibid.*, No. 334.

೯೮. *Ibid.*, No. 323.

೯೯. *Ibid.*, No. 158.

೧೦೦. *SII*, IX, Pt. II, No. 694.

೧೦೧. *ARSIE*, 1930-31, No. 344.

೧೦೨. *Copper Plate inscription dated 1563 A.D. in the posession of the Swamiji of Jaina Matha*, Mudabidre.

೧೦೩. *SII*, IX, Pt. II, No. 620.

೧೦೪. *SII*, VII, No.'s 189, 261, 264, 270, 299.

೧೦೫. Kittel, *Kannada English Dictionary*, Vol. II, Revised Edition, Madras, 1970, p. 1293.

೧೦೬. SII, IX, Pt. II, No. 512.

೧೦೭. *Mudukeri Copper plate inscription*, B. Vasantha Shetty, *Barakuru (A Metropolitan City of Antiquity). Its History and Culture*, p. 568.

೧೦೮. *SII*, IX, Pt. II, No. 465.

೧೦೯. *SII*, IX, Pt. II, No. 190.

೧೧೦. *Ibid*, No. 264.

೧೧೧. *Mudukeri copper plate inscription* No. 1, B. Vasantha Shetty, Unpublished thesis, p. 568.

೧೧೨. *SII*, IX, Pt. II, No. 471.

೧೧೩. *SII*, VII, No. 370.

೧೧೪. *ARSIE*, 1976-77, No. 160.

೧೧೫. *SII*, IX, Pt. II, No. 457.

೧೧೬. *ARSIE*, 1970, No. 210.

೧೧೭. *SII*, VII, No. 299.

೧೧೮. *SII*, IX, Pt. II, No. 632.

೧೧೯. *SII*, VII, No. 189.

ವಸುಧಾ ಎನ್.*

# ಮಧ್ಯಕಾಲೀನ ಕರ್ನಾಟಕದಲ್ಲಿ ಮಹಿಳಾ ಸಂತರು

ಮಧ್ಯಕಾಲೀನ ಅವಧಿಯಲ್ಲಿ ಅಂದರೆ ೬-೭ನೇ ಶತಮಾನದಿಂದ ಪ್ರಾರಂಭವಾಗಿ ೧೬-೧೭ನೇ ಶತಮಾನದ ಈ ಕಾಲದಲ್ಲಿ ಭಾರತದಲ್ಲಿ ಮುಖ್ಯವಾಗಿ ಕರ್ನಾಟಕದಲ್ಲಿ ನಡೆದ ವೈಶಿಷ್ಟ್ಯಪೂರ್ಣ ಚಳುವಳಿ ಅಂದರೆ ಅದು 'ಭಕ್ತಿ ಚಳುವಳಿ'. ಇದು ಒಂದು ಮಹತ್ವಪೂರ್ಣ ಕಾಲ. ಈ ಕಾಲದಲ್ಲಿ ಕರ್ನಾಟಕದಲ್ಲಿ ಮಹಿಳಾ ಸಂತರ ಉದಯವಾಯಿತು.

ಸಾಮಾನ್ಯವಾಗಿ ಕುಟುಂಬದಲ್ಲಿ ಪುರುಷರ ಆಧಿಪತ್ಯವೇ ಇದ್ದುದರಿಂದ ಸ್ತ್ರೀಯರನ್ನು ಕೆಳದರ್ಜೆಯವರೆಂದು ಪರಿಗಣಿಸಲ್ಪಡುತ್ತಿತ್ತು. ಮನೆಯಲ್ಲಿ ಗಂಡು ಮಗುವಿನ ಜನನ ಉಚ್ಚವೆಂದೂ ಹೆಣ್ಣು ಮಗು ಶೋಕದಾಯಕವೆಂದೂ ಪರಿಗಣಿಸಲ್ಪಡುತ್ತಿತ್ತು. ಸುಮಾರು ಹನ್ನೊಂದನೇ ಶತಮಾನದ ಚನ್ನಪಟ್ಟಣ ಮತ್ತು ನಾಗಮಂಗಲ ತಾಲ್ಲೂಕುಗಳಲ್ಲಿರುವ ಶಾಸನಗಳು ಮಗನನ್ನು 'ಕುಲದೀಪಕ' ಎಂದು ಸಾರಿದರೆ ಹೆಣ್ಣುಮಕ್ಕಳ ವಿಷಯದಲ್ಲಿ ಮೌನ ತಾಳುತ್ತದೆ.

ಹನ್ನೊಂದನೇ ಶತಮಾನದ ನಂತರ ಮಹಮ್ಮದೀಯರ ಆಳ್ವಿಕೆಯ ಪರಿಣಾಮವಾಗಿ ಸ್ತ್ರೀಯರ ದರ್ಜೆಯಲ್ಲಿ ಮತ್ತಷ್ಟು ಕ್ಷೀಣತೆ ಕಂಡುಬಂದಿತು. ಮುಂದುವರಿದು ಮಹಮ್ಮದೀಯರ ದಾಳಿಗೆ ಮಾತ್ರ ಸೀಮಿತವಾಗದೆ ಎಲ್ಲ ವಿದೇಶೀ ದಾಳಿಯ ಕಾರಣದಿಂದಾಗಿ ಸ್ತ್ರೀಯರ ವಿಷಯದಲ್ಲಿ ವಿಶೇಷ ಕಟ್ಟುಪಾಡುಗಳನ್ನು ವಿಧಿಸಿ ಅವರುಗಳು ಮನೆಯಲ್ಲಿಯೇ ಇರುವಂತೆ ನಿರ್ಬಂಧವಾಗಿತ್ತು.

ಹೆಣ್ಣು ಮಕ್ಕಳನ್ನು ಮದುವೆಯ ನಂತರ ಬೇರೆ ಮನೆಗೆ ಕಳುಹಿಸಬೇಕಾದುದರಿಂದ ಅವರ ಜನನ ಒಂದು ಚಿಂತೆಯ ವ್ಯಾಕುಲದ ಮೂಲ ಎಂದು ಪರಿಗಣಿಸಲಾಗಿತ್ತು. ಪರಂಪರೆ, ಸಂಪ್ರದಾಯ ಮತ್ತು ಧರ್ಮಗ್ರಂಥಗಳ ಪ್ರಕಾರ ಅವಳು ವಯಸ್ಸಿಗೆ ಬರುವುದಕ್ಕೆ ಮುಂಚೆಯೇ ವಿವಾಹವಾಗಿ ಬಾಲ್ಯವಿವಾಹ ರೂಢಿಗೆ ಬಂದು ಅದು ಸಮಾಜದ ಅಲಿಖಿತ ಶಾಸನವಾಗಿತ್ತು. ಆಕೆ ಗಾಂಭೀರ್ಯದಿಂದ ಲಜ್ಜಾಶೀಲಳಾಗಿದ್ದು ಸಂಯಮ ಪಾಲನೆ ಮಾಡುತ್ತಿದ್ದು ಪುರುಷರನ್ನು ಆಕರ್ಷಿಸದೇ ಇರುವಂತಿರಬೇಕಿತ್ತು.

ವಾಡಿಕೆಯಲ್ಲಿದ್ದ 'ಬಹುಪತ್ನೀ ವ್ರತ' ಸಹ ಅವರ ಸ್ಥಾನಮಾನಗಳನ್ನು ಕಡಿಮೆ ಮಾಡಿತ್ತು. ಸ್ತ್ರೀಯರು ಪುರುಷರ ಸಮಾನ ಎಂದು ಭಾವಿಸದೆ ಅವಳು ಒಂದು ಉಪಭೋಗ ವಸ್ತು ಎಂದು ಕಾಣಲಾಗಿತ್ತು.

ಹೆಣ್ಣುಮಗಳು ಬಾಲ್ಯಾವಸ್ಥೆಯಲ್ಲಿಯೇ ಗಂಡನ ಮನೆ ಸೇರುತ್ತಿದ್ದರಿಂದ ಮತ್ತು ನಿರಕ್ಷರಳಾಗಿದ್ದುದರಿಂದ ಅವಳನ್ನು ಅಸಹಾಯಕ ಪರಿಸ್ಥಿತಿಗೆ ದೂಡುವುದಕ್ಕೆ ಅನುಕೂಲವಾಗುತ್ತಿತ್ತು. ಮನೆಗೆಲಸಗಳಲ್ಲದೆ ಬೇರೆ ಏನೂ ಗೊತ್ತಿರದೇ ಇದ್ದುದರಿಂದ, ತಂದೆಯ ಮನೆಯಲ್ಲಿ ಸೇವೆಯೇ ಅವಳ ಕೆಲಸವಾಗಿ, ಅದೇ ಅವಳ ಪಾತ್ರವೆಂದು ಅದೇ ಅವಳ ಕರ್ತವ್ಯ, ಧರ್ಮ ಎಂದು ಪರಿಗಣಿಸಲಾಯಿತು.

ಪಾತಿವ್ರತ್ಯವು ಸ್ತ್ರೀಯರ ಪವಿತ್ರ ಗುಣವೆಂದು ಭಾವಿಸಲ್ಪಟ್ಟು ಅದನ್ನು ಗೌರವಿಸುವುದೇ ಅವಳ ಧರ್ಮ ಎಂದು ಹೇಳಿ ಸಂಪ್ರದಾಯಬದ್ಧ ನಿಯಮಗಳಿಂದ ಆಕೆಯನ್ನು ಅಂಕೆಯಲ್ಲಿಟ್ಟುಕೊಳ್ಳುವುದಕ್ಕೆ ಇದು ಮತ್ತೊಂದು ಸಾಧನವಾಯಿತು.

ಮಹಿಳೆಯರ ಸಾಂಪ್ರದಾಯಿಕ ಪಾತ್ರಕ್ಕೆ ಕಟ್ಟುಪಾಡು ಹಾಕಿದ್ದು ಎರಡು ಪದ್ಧತಿಗಳು – ಒಂದು ಪರದಾ ಪದ್ಧತಿ ಇನ್ನೊಂದು ಸತಿ ಪದ್ಧತಿ. ಈ ಸಂಪ್ರದಾಯಗಳು ಅವರ ಸ್ಥಾನಗಳನ್ನು ಮತ್ತಷ್ಟು ಬಿಗಿ ಮಾಡಿತ್ತು. ಮರ್ಯಾದಸ್ಥರ ಮನೆ ಹೆಣ್ಣುಮಕ್ಕಳು ಮನೆಯ ಹೊರಗಡೆ ಕಾಲಿಡುತ್ತಿರಲಿಲ್ಲ.

ಮನೆತನದ ಹೆಣ್ಣುಮಕ್ಕಳು 'ರಕ್ಷಿತ' ಜೀವನ ನಡೆಸುತ್ತಿದ್ದ ಕಾರಣ, ವಿದೇಶೀ ಪ್ರವಾಸಿಗರಾದ ಡುಮಿಂಗೋ ಪೆಸ್, ನ್ಯೂನಿಜ್ ಮತ್ತು ಬಾರ್ಬೋಸಾ ಇವರ ಅಭಿಪ್ರಾಯಗಳು ದೇವದಾಸಿಯರಿಗೆ ಮಾತ್ರ ಸೀಮಿತವಾಗಿತ್ತು. ವ್ಯಭಿಚಾರ ಜೀವನದ ಅನಿವಾರ್ಯ ಭಾಗವಾಗಿ ಒಪ್ಪಿಗೆ ಪಡೆಯಿತು. ದೇವದಾಸಿಯರುಗಳು ಸಮಾಜದಲ್ಲಿ ಉನ್ನತ ಸ್ಥಾನವನ್ನೂ ಪಡೆದಿದ್ದರು.

ಮರ್ಯಾದಸ್ಥ ಗೃಹಿಣಿಯರ ಜೀವನ ಅವರ ಪತಿಯೊಂದಿಗೆ ಅಂತ್ಯವಾಗುತ್ತಿತ್ತು. ತನ್ನ ಗಂಡನ ಚಿತೆಯೊಡನೆಯೇ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೆಂಗಳೂರು.

ಚಿತೆ ಏರಿ ಜೀವನವನ್ನು ಅಂತ್ಯ ಮಾಡಿಕೊಳ್ಳುವ ಪದ್ಧತಿಯೇ ಸತಿ ಅಥವಾ ಸಹಗಮನ ಪದ್ಧತಿ. ಈ ಸತಿ ಶಬ್ದ ಮತ್ತು ಪದ್ಧತಿಯು ಶಿವನ ಸಂಗಾತಿ ಪಾರ್ವತಿಯು ದಕ್ಷನ ಮಗಳಾಗಿ ಸತಿ ಎಂಬ ಹೆಸರಿನಲ್ಲಿ ಅವತಾರ ಮಾಡಿದ್ದಾಗ ತನ್ನ ತಂದೆ ತನ್ನ ಗಂಡನಿಗೆ ಅವಮಾನ ಮಾಡಿದ್ದಕ್ಕಾಗಿ ನೊಂದು ಬೇಸರಿಸಿ ದಕ್ಷನು ಮಾಡುತ್ತಿದ್ದ ಯಜ್ಞನ ಯಜ್ಞ ಕುಂಡಕ್ಕೆ ಹಾರಿ ಪ್ರಾಣತ್ಯಾಗ ಮಾಡಿದ ಪ್ರಕರಣಕ್ಕೆ ಸಂಬಂಧಿಸಿದ್ದುದು. ಸತಿ ಪದ್ಧತಿಯು ಪತಿಯ ವಿಷಯದಲ್ಲಿ ತನಗಿದ್ದ ಶ್ರದ್ಧೆಯ ಅಂತಿಮ ಕಾರ್ಯ ಸಾಧ್ವಿಯಾದ ಪತ್ನಿಯ ಕ್ರಿಯೆ ಎಂದು ಪರಿಗಣಿಸಲ್ಪಟ್ಟಿತ್ತು.

ಸತಿ ಪದ್ಧತಿಯ ಪ್ರಾಚೀನತೆಯ ಬಗ್ಗೆ ಚರ್ಚೆ ಇದ್ದರೂ ಈ ಪದ್ಧತಿಯು ದಕ್ಷಿಣ ಭಾರತದಲ್ಲಿ ದೇಶೀಯವಾಗಿರದೆ ಮಧ್ಯಕಾಲೀನ ಕಾಲದಲ್ಲಿ ಇದು ದಕ್ಷಿಣಕ್ಕೆ ಬಂದಿತೆಂಬ ನಂಬಿಕೆ ಇದೆ.

ಈ ನಿರ್ದಯ ಪದ್ಧತಿಯ ಹಿಂದಿದ್ದ ಉದ್ದೇಶ ವಿಧೇಯಳಾದ ಹೆಂಡತಿಯು ತನ್ನ ಮರಣಾನಂತರವೂ ತನ್ನ ಗಂಡನ ಸೇವೆ ಮಾಡುತ್ತಿರಬೇಕೆಂಬುದು. ಲಿಂಗಾಯಿತ ಧರ್ಮದಲ್ಲಿಯೂ ಜಂಗಮ ಅಥವಾ ವೀರಶೈವದಲ್ಲಿ ಹೆಂಡತಿಯನ್ನು ತನ್ನ ಗಂಡನ ಶವದೊಡನೆ ಸಜೀವಳಾಗಿ ಕುಳ್ಳಿರಿಸಿ ಹೂಳುವ ಪದ್ಧತಿ ಇತ್ತು. ಹದಿನೈದನೇ ಶತಮಾನದ ಅಬ್ದುಲ್ ರಜಾಕ್‌ನ ಬರಹದಲ್ಲಿ ಈ ಪದ್ಧತಿಯ ಉಲ್ಲೇಖವಿದೆ. ಈ ಕ್ರಿಯೆಗೆ ಸಮ್ಮತಿಸಿದ ಹೆಂಗಸು ದೈವತ್ವವನ್ನು ಹೊಂದುತ್ತಾಳೆ ಎಂಬ ನಂಬಿಕೆಯಿತ್ತು ಮತ್ತು ಈ ದಂಪತಿಗಳು ಆಯಾಯ ಮನೆತನಕ್ಕೆ ವಂಶದ ದೇವತೆಗಳಾಗುತ್ತಿದ್ದರು.

ಯಾವ ಹೆಂಗಸು ತನ್ನ ಗಂಡನ ನಂತರವೂ ಜೀವಿಸುವುದಕ್ಕೆ ಆಯ್ಕೆ ಮಾಡಿಕೊಳ್ಳುತ್ತಿದ್ದಳೋ ಅವಳ ಜೀವನ ಬಹಳ ಕಷ್ಟಕರವಾಗಿರುತ್ತಿತ್ತು. ಅವಳು ಮುಂಡನ ಮಾಡಿಸಿ ಕೊಂಡು ತನ್ನ ಆಭರಣಗಳನ್ನೆಲ್ಲಾ ತೆಗೆದಿಟ್ಟು ಜನರ ಕಣ್ಣಿಗೆ ಕಾಣದಂತೆ ಇರಬೇಕಾಗಿತ್ತು. ಅವಳನ್ನು ನೋಡುವುದೇ ಅಮಂಗಳಕರ ಎಂದು ಪರಿಗಣಿಸಲಾಗುತ್ತಿತ್ತು.

ಮಹಿಳೆಯರ ಸಾಮಾಜಿಕ ಶೋಷಣೆಗೆ ಎರಡು ಪ್ರಮುಖ ಕಾರಣಗಳು : ಒಂದು ಅನಕ್ಷರತೆ ಮತ್ತೊಂದು ಆರ್ಥಿಕ ಅವಲಂಬನೆ.

ವಸ್ತುಗಳ ಉತ್ಪನ್ನ ಅಥವಾ ಉತ್ಪತ್ತಿಯಲ್ಲಿ ಸ್ತ್ರೀಯರ ಪಾತ್ರವು ಸಮಾಜದಲ್ಲಿ ಅವರ ಸ್ಥಾನವನ್ನು ನಿರ್ಧರಿಸುವುದರಲ್ಲಿ ಪ್ರಮುಖ ಪಾತ್ರವಹಿಸುತ್ತಿತ್ತು. ಹಳೇ ಗ್ರಂಥಗಳ ಪ್ರಕಾರ ನಗರ ವಾಸೀ ಮಹಿಳೆಯರಿಗಿಂತ ಗ್ರಾಮೀಣ ಮಹಿಳೆಯರು ಉತ್ಪಾದನಾ ಕಾರ್ಯದಲ್ಲಿ ಹೆಚ್ಚಿನ ಪಾತ್ರವಹಿಸುತ್ತಿದ್ದರು. ಇದು ಇಂದಿಗೂ ಸತ್ಯ. ಇಡೀ ಜಾನಪದ ಸಾಹಿತ್ಯವೂ ಈ ಆರ್ಥಿಕ ಚಟುವಟಿಕೆಗಳ ಮಧ್ಯೆಯೇ ಬೆಳೆಯಿತು. ಗ್ರಾಮೀಣ ಪಾರಂಪರಿಕ ಹಸ್ತಕೌಶಲ್ಯ ಕಲೆಗಳಲ್ಲಿ ಸ್ತ್ರೀಯರು ಬಹುಮುಖ್ಯ ಪಾತ್ರವನ್ನು ವಹಿಸುತ್ತಿದ್ದರು. ಈ ಎಲ್ಲಾ ವೃತ್ತಿಗಳಲ್ಲಿ ಮುಖ್ಯವಾಗಿ ಗ್ರಾಮೀಣ ಪರಿಸರದಲ್ಲಿ ಸ್ತ್ರೀಯರ ಪಾತ್ರ 'ಪೂರಕ' ವಾಗಿತ್ತಷ್ಟೆ ಅಲ್ಲದೇ ಯಾವಾಗಲೂ ಸ್ವತಂತ್ರವಾಗಿರ ಲಿಲ್ಲ. ಈ ಪರಿಸ್ಥಿತಿ ಸಮಾಜದಲ್ಲಿ ಪ್ರತಿಬಿಂಬಿಸಲ್ಪಟ್ಟು ಯಾವಾಗಲೂ ಸ್ತ್ರೀಯರ ಸ್ಥಾನಮಾನ ಪುರುಷರ ಸ್ಥಾನಮಾನಕ್ಕಿಂತ ಕೀಳು ಎಂಬ ಭಾವನೆ ಬೆಳೆದು ಬರುವುದಕ್ಕೆ ಕಾರಣವಾಯಿತು.

ಮಧ್ಯಕಾಲೀನ ಅವಧಿಯಲ್ಲಿ ಪುರುಷ ಸಂತರು "ಹೊನ್ನು ಮತ್ತು ಹೆಣ್ಣು" ಎರಡೂ ಪುರುಷರ ನೈತಿಕ ಅವನತಿಗೆ ಕಾರಣ ಎಂದು ಸಾರುತ್ತಿದ್ದರು. ಸ್ತ್ರೀಯರನ್ನು ಹೊಗಳಿದ್ದರೆ ಅದು ಅವಳು ಧಾರ್ಮಿಕ ಸದ್ಗುಣಿಯಾದ ಹೆಂಡತಿಯಾಗಿದ್ದರೆ ಮಾತ್ರ.

ಒಬ್ಬ ಸ್ತ್ರೀಯನ್ನು ಕೇವಲ ತಾಯಿಯಾಗಿ, ಮಗಳಾಗಿ, ಹೆಂಡತಿಯಾಗಿ ನೋಡುವುದು ಸರಿಯೆ ? ಆದರೆ ಆಧ್ಯಾತ್ಮಿಕ ಮಾರ್ಗ ಈ ರೂಢಿಬದ್ಧ ಕ್ರಮವನ್ನು ಭೇದಿಸುವುದರಲ್ಲಿ ಸಹಾಯವಾಯಿತು. ಪುರುಷ ಸಂಪರ್ಕದ ಅಭಿಲಾಷೆಯ ಮೇಲೆ ನಿಯಂತ್ರಣ ಸಾಧಿಸುವುದರಲ್ಲಿ ದೈವ ಸಾಕ್ಷಾತ್ಕಾರ ಪಡೆಯುವುದರಲ್ಲಿ ಸ್ತ್ರೀ ಯಶಸ್ವಿಯಾದಳು.

ಸ್ತ್ರೀ ಸಂತರು ಪುರುಷ ಸಂತರಂತೆ ಪ್ರಾಮುಖ್ಯತೆಗೆ ಬರದಿರಲು ಮುಖ್ಯ ಕಾರಣ ಅವರು ಪುರುಷ ಸಂತರಂತೆ "ಗುರು ಪರಂಪರೆ" ಅಥವಾ ಸನ್ಯಾಸಿ ಆಶ್ರಮಗಳನ್ನು ಸ್ಥಾಪಿಸಲಿಲ್ಲ. ಹಾಗಾಗಿ ಅವರ ಜೀವನ ಹಾಗೂ ರಚನೆಗಳು ಮರೆಮಾಚಲ್ಪಟ್ಟವು. ಸಂಪ್ರದಾಯಕ್ಕೆ ಕಟ್ಟುಬಿದ್ದು ಇವರ ಭಾವನೆಗಳನ್ನು, ರಚನೆಗಳನ್ನು ಅದುಮಿಟ್ಟರು.

ಈ ಸ್ತ್ರೀ ಸಂತರುಗಳ ಸಾಮಾಜಿಕ ಹಿನ್ನೆಲೆಯನ್ನು ಅವಲೋಕಿಸಿದಾಗ ಬಹಳಷ್ಟು ಮಂದಿ ಪ್ರಬಲ ಸಾಮಾಜಿಕ ವರ್ಗಕ್ಕೆ ಸೇರಿದ ಅರ್ಚಕ ಗುಂಪಿನವರು. ಆದಾದ ಮೇಲೆ ಆಡಳಿತ ಹಾಗೂ ವ್ಯಾಪಾರ ವರ್ಗದವರು, ನಂತರ ವೃತ್ತಿಪರ ಕಸಬುದಾರರು ಬರುತ್ತಾರೆ. ಬ್ರಾಹ್ಮಣ ಪಂಥದ ಸ್ತ್ರೀಯರಿಗೆ ಪವಿತ್ರ ಗ್ರಂಥ ಹಾಗೂ ಸಾಮಾಜಿಕ ಜ್ಞಾನದ ಪರಿಚಯವಿದ್ದರೆ, ಇತರ ಜನಾಂಗದ ಮಹಿಳೆಯರಿಗೆ ಪುರುಷರೊಡನೆ ಇದ್ದ ಆರ್ಥಿಕ ಸಮಾನತೆಯೇ ಅವರಲ್ಲಿ ಜಾಗೃತಿಗೆ ಕಾರಣವಾಯಿತು.

ಕರ್ನಾಟಕದಲ್ಲಿ ಶೈವ ಸಂತರ ಸಂಖ್ಯೆ ವೈಷ್ಣವ ಸಂತರ ಸಂಖ್ಯೆಗಿಂತ ಜಾಸ್ತಿ ಇತ್ತು. ವಂಚಿತರಾಗಿದ್ದರೂ ಉಚ್ಚ ವರ್ಗದ ಸ್ತ್ರೀಯರಿಗೆ ಶಾಸ್ತ್ರ ಪರಿಚಯ ಕೌಟುಂಬಿಕ ಹಿನ್ನೆಲೆ ಇದ್ದರೆ,

ಕೆಳಜಾತಿಯಿಂದ ಬಂದವರಿಗೆ ಜಾನಪದ ಪದ್ಧತಿಯ ಅರಿವಿತ್ತು. ಅವರ ಭಾಷೆ, ಆಡುಭಾಷೆ ಆಗಿದ್ದಿದ್ದುರಿಂದ ದೇಶಭಾಷೆಯ ಸಾಹಿತ್ಯಕ ಬೆಳವಣಿಗೆಗೆ ಅದ್ಭುತ ಕೊಡುಗೆ ಆಯಿತು.

ಸ್ತ್ರೀ ಸಂತರಲ್ಲಿ ಎರಡು ಗುಂಪು – ಒಂದು ಆಧ್ಯಾತ್ಮಿಕ ಪಂಥ, ಎರಡನೆಯದು ಸಾಮಾಜಿಕ ಪರಂಪರೆಯ ಮೇಲೆ ಅಭಿಪ್ರಾಯ' ಉಳ್ಳವರು. ಅಕ್ಕಮಹಾದೇವಿಯವರಂತಹ ಬಂಡಾಯಗಾರರು ಒಂದು ಕಡೆಯಾದರೆ, ಶಾಂತ ಸೌಮ್ಯ ಧರ್ಮಶ್ರದ್ಧೆ ಇದ್ದ ಸದ್ಗೃಣಿಯರು ಮತ್ತೊಂದೆಡೆ.

ಈ ಸಂತ ಮಹಿಳೆಯರು ಎಷ್ಟೇ ನಿರ್ಬಂಧ ಇದ್ದರೂ ಸಾಹಿತ್ಯದ ಮೂಲಕ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ. ಕೆಲವು ಶಿವಶರಣೆಯರು ತಮ್ಮ ಅತೃಪ್ತ ಆಸೆಗಳನ್ನು ಗಂಭೀರವಾಗಿ ಹೊರಹಾಕಿದ್ದರೆ, ಮತ್ತೆ ಕೆಲವರು ಧೈರ್ಯದಿಂದ ಅತೃಪ್ತ ಅಭಿಲಾಷೆಗಳನ್ನೂ ಕೂಡ ವ್ಯಕ್ತಪಡಿಸಿದ್ದಾರೆ.

ಕೆಲವು ಸ್ತ್ರೀ ಸಂತರು ವೈವಾಹಿಕ ಜೀವನಕ್ಕೆ ವಿರೋಧ ವ್ಯಕ್ತಪಡಿಸಿದ್ದಾರೆ. ಇದಕ್ಕೆ ಅಕ್ಕಮಹಾದೇವಿ ಉತ್ತಮ ಉದಾಹರಣೆ. ಆಕೆಯ ವಿವಸ್ತ್ರತೆಯನ್ನು ಅನುಭವ ಮಂಟಪದಲ್ಲಿ ಟೀಕಿಸಿದಾಗ ಆಸೆ ದಿಟ್ಟತನದಿಂದ ಉತ್ತರಿಸಿದ್ದು ಏನೆಂದರೆ "ಕೂದಲಿನಿಂದ ತನ್ನನ್ನು ರಕ್ಷಿಸಿಕೊಂಡಿರುವುದು ತನಗಾಗಿ ಅಲ್ಲ, ಬೇರೆಯವರನ್ನು ಪ್ರಲೋಭನೆಯಿಂದ ತಡೆಗಟ್ಟಲು".

ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಅಕ್ಕಮಹಾದೇವಿಗೆ ಪ್ರೀತಿ ಪ್ರೇಮದ ಬಗ್ಗೆ ವಿಶ್ವಾಸವಿರಲಿಲ್ಲವೆ ? ಇತ್ತು ! ಆದರೆ ಅದು ಸಾಂಸಾರಿಕ ಪ್ರೀತಿ ಅಲ್ಲ, ಅದು ತನ್ನ ದೇವನಾದ ಚೆನ್ನಮಲ್ಲಿಕಾರ್ಜುನನ ಜೊತೆ ಅನುಭವಿಸುವ ದೈವಿಕ ಸಾನ್ನಿಧ್ಯ.

ಇದೇ ಭಾವನೆಯನ್ನು ಬೆಳಸಿದವರೇ ಮೂರನೇ ಗುಂಪಿನ ಸ್ತ್ರೀ ಸಂತರು. ಇವರು ಸಾಂಸಾರಿಕ ವಿವಾಹದಲ್ಲಿ ಆಸಕ್ತಿ ತೋರದೆ, ತಾವು ಭಗವಂತನ ವಧುಗಳೆಂದೇ ನಂಬಿಕೆ ಇಟ್ಟ ಗುಂಪು. ಅಕ್ಕನ ವಚನಗಳಲ್ಲಿ ಈ ನಿಲುವು ಸ್ಪಷ್ಟವಾಗಿದೆ. "ಭಕ್ತನೇ ಮದುವಣಗಿತ್ತಿ. ಲಿಂಗವೇ ಮದುವಣಿಗ". ಎಂಬ ತತ್ವವೇ ವೀರಶೈವ ಸಿದ್ಧಾಂತದ ಅಡಿಗಲ್ಲು.

ಇವರ ರಚನೆಗಳಲ್ಲಿ ಅವರ ಮನೋಭಾವ, ಪ್ರಾಪಂಚಿಕ ಸುಖ ಸಂತೋಷಗಳ ಬಗ್ಗೆ ಇದ್ದ ತಿರಸ್ಕಾರ, ಅನುಭವಿಸುತ್ತಿದ್ದ ಆಧ್ಯಾತ್ಮ ಸುಖ, ಸಮಾಜದಿಂದ ತಾವು ಬೇರೆ ಎಂಬ ಪರಕೀಯ ಭಾವನೆ ಎದ್ದು ಕಾಣುತ್ತದೆ.

ವಚನ ಸಾಹಿತ್ಯದಲ್ಲಿ ಸ್ತ್ರೀ ಸಂತರು ಮಾಡುತ್ತಿದ್ದ ವೃತ್ತಿಯನ್ನು ಅವರ ಹೆಸರಿನ ಪೂರ್ವಪರವಾಗಿ ಸೇರಿಸಿರುವುದನ್ನು ಕಾಣಬಹುದು. ಉದಾಹರಣೆಗೆ ಆಯ್ದಕ್ಕಿ ಲಕ್ಕಮ್ಮ, ಕದಿರೆ ರೇಮವ್ವ, ಕೊಟ್ಟಣದ ಸೋಮವ್ವ ಇತ್ಯಾದಿ. ಅವರ ದಿನನಿತ್ಯದ ಕಾರ್ಯವೃತ್ತಿಯನ್ನು ಅವರ ಕೃತಿಗಳಲ್ಲಿ ಮತ್ತೆ ಮತ್ತೆ ಬರುವುದನ್ನು ಕಾಣಬಹುದು.

ಮಧ್ಯಕಾಲೀನ ಕರ್ನಾಟಕದಲ್ಲಿ ಬಂದಂಥ ಮತ್ತೊಂದು ಭಕ್ತಿ ಬೆಳವಣಿಗೆಗೆ ಎಂದರೆ – ಸೂಫಿ ಪಂಥ. ಸೂಫಿ ಪಂಥದ ಜಾನಪದ ಸಂಗೀತದಲ್ಲಿ ಎರಡು ಪ್ರಮುಖ ವಿಧಗಳು. ಚರಕ ನಾಮ ಮತ್ತು ಚಕ್ಕಿನಾಮ. ರಿಚರ್ಡ್ ಈಟನ್ ತನ್ನ ಪ್ರಬಂಧ "ಸೂಫ್ಥಿ ಫೋಕ್ ಲಿಟರೇಚರ್ ಅಂಡ್ ಎಕ್ಸ್ ಪ್ಯಾನ್‌ಶೆನ್ ಆಫ್ ಇಸ್ಲಾಂ (Sufi Folk literature and Expansion of Islam)" ನಲ್ಲಿ ಸ್ತ್ರೀಯರೇ ಈ ಗೀತೆಗಳ ರಚನಕಾರರು ಮತ್ತು ಪ್ರಸಾರಕಾರರು ಎಂದು ವಿವರಿಸುತ್ತಾರೆ. ಇದು ತೆಲಗು ಮತ್ತು ಉರ್ದು ಭಾಷೆಯ ಬೆಸುಗೆಯಾದ ದಕ್ಕಣಿಯಲ್ಲಿದೆ. ಈಟನ್‌ರವರು ಒಂದು ಚಕ್ಕಿನಾಮ ಕನ್ನಡ ಲಿಪಿಯಲ್ಲಿ ಇರುವುದನ್ನು ತಿಳಿಸಿದ್ದಾರೆ.

ಈ ಸ್ತ್ರೀ ಸಂತರ ಉದಯ, ನಿರ್ಮಾಣ ಕಲೆ, ಸಮಾಜದ ಮೇಲೆ ಅರ್ಥಗರ್ಭಿತವಾದ ಪ್ರಭಾವ ಬೀರಿತ್ತು. ರಚನೆಗಳು ತೀಕ್ಷ್ಣವಾಗಿದ್ದು, ವೈಯಕ್ತಿಕ ಪರಿಶೋಧನೆ ಯಾಗಿದ್ದು, ಭಗವಂತನನ್ನು ಹುಡುಕುವ ಯತ್ನವಾಗಿತ್ತು. ಅವರ ಟೀಕೆ, ವ್ಯಾಖ್ಯಾನಗಳು ಪರೋಕ್ಷವಾಗಿತ್ತು. ಸಾಮಾಜಿಕ, ಸಾಂಪ್ರದಾಯಿಕ ವರ್ತನೆಗಳನ್ನು ತಿರಸ್ಕರಿಸಿದ್ದ ಸ್ಪಷ್ಟ ಉದಾಹರಣೆಗಳು ಇವೆ.

ಉಚ್ಚ ವರ್ಗದವರು ಇವರ ಅಭಿಪ್ರಾಯಗಳಿಗೆ ಅಡ್ಡಿ ಮಾಡಿದರು. ಇವರನ್ನು ಕೇಳಿಸಿಕೊಂಡವರು ಕೇವಲ ಕೆಳವರ್ಗದ ಕೆಲಸಗಾರರ ಮಟ್ಟಿಗೆ ಸೀಮಿತವಾಗಿತ್ತು.

ಆದರೆ ಆಶ್ಚರ್ಯವೇನೆಂದರೆ ಇಂದಿನ ಯುಗದಲ್ಲಿ ಈ ಸ್ತ್ರೀ ಸಂತರನ್ನು ಜನರು ಒಪ್ಪಿ ಪೂಜ್ಯಭಾವದಿಂದ ಕಾಣುತ್ತಾರೆ. ಈ ಸ್ತ್ರೀ ಸಂತರ ಭಾವನೆಗಳು ಮತ್ತು ಅಭಿಪ್ರಾಯಗಳು ಜನರಲ್ಲಿ ತಂದಿರುವ ಬದಲಾವಣೆಯೇ ಈ ಮಾತಿಗೆ ಪ್ರತ್ಯಕ್ಷ ಸಾಕ್ಷಿ.

ಡಾ. ವಿ. ನಂಜುಂಡಸ್ವಾಮಿ*

# ಮರಿತೋಂಟದಾರ್ಯರ "ವೀರಶೈವಾನಂದ ಚಂದ್ರಿಕೆ" ಗ್ರಂಥದ ಕ್ರಿಯಾಕಾಂಡದಲ್ಲಿ "ಭೂಪಾಲ ವಂಶಾವಳಿ" ಕೆಳದಿ ಅರಸರ ಇತಿಹಾಸ

ಕನ್ನಡನಾಡಿನ ಇತಿಹಾಸದಲ್ಲಿ ಕೆಳದಿ ಅರಸರಿಗೆ ವಿಶೇಷವಾದ ಸ್ಥಾನವಿದೆ. ಇವರ ಆಸ್ಥಾನದಲ್ಲಿ ಅನೇಕ ಕನ್ನಡ, ಸಂಸ್ಕೃತ ಕೃತಿಗಳು ರಚನೆಯಾದವು. ಅವುಗಳಲ್ಲಿ ಸಾಕಷ್ಟು ಗ್ರಂಥಗಳು ಸಂಪಾದನೆಗೊಂಡು ಮುದ್ರಣವಾಗಿಲ್ಲ. ಮುದ್ರಣವಾಗಿದ್ದರೂ ಮುದ್ರಣ ಗ್ರಂಥವನ್ನು ಹುಡುಕುವುರು ಹಸ್ತಪ್ರತಿ ಹುಡುಕಿದಷ್ಟು ಕಷ್ಟ. ಈ ಅರಸರ ಆಶ್ರಯದಲ್ಲಿ ಅಪೂರ್ವವಾದ ಸಾಹಿತ್ಯ ಸೇವೆಯನ್ನು ಸಲ್ಲಿಸಿದ ಮರಿತೋಂಟದಾರ್ಯರ ಕಾಲ ಸುಮಾರು ೧೭೨೦. ಮೂಲತಹ ಮರಿತೋಂಟದಾರ್ಯರು ಡಂಬಳ ವಿರಕ್ತ ಮಠದ ವಿರಕ್ತಮೂರ್ತಿ. ಇವರು ರಚಿಸಿದ ಎರಡು ಕೃತಿಗಳ ಬಗ್ಗೆ ಮಾತ್ರ ನಮಗೆ ಮಾಹಿತಿ ಇರುವಂತಹದು.

೧. ತತ್ವಪ್ರದೀಪಿಕಾ ಅಥವಾ ವೀರಶೈವಸಿದ್ಧಾಂತ ಶಿಖಾಮಣಿ ವ್ಯಾಖ್ಯಾ (ಸಂಸ್ಕೃತ)

೨. ವೀರಶೈವಾನಂದ ಚಂದ್ರಿಕೆ.

'ಸಿದ್ಧಾಂತ ಶಿಖಾಮಣಿ' ಗ್ರಂಥಕ್ಕೆ ಸಂಸ್ಕೃತದಲ್ಲಿ ಟೀಕೆಯನ್ನು ರಚಿಸಿ ಅಖಿಲ ಭಾರತ ಮಟ್ಟದಲ್ಲಿ 'ಸಿದ್ಧಾಂತ ಶಿಖಾಮಣಿ' ಗ್ರಂಥಕ್ಕೆ ವಿಶೇಷವಾದ ಸ್ಥಾನವನ್ನು ತಂದುಕೊಟ್ಟದ್ದು ಮರಿತೋಂಟದಾರ್ಯರ ಟೀಕೆ; ಇಂತಹ ಮಹತ್ತ್ವಾದ ಗ್ರಂಥಗಳನ್ನು ಸಂಪಾದಿಸಿದವರು ಕರ್ಣಾಟಕ ಭಾಷಾರತ್ನಂ ಅಸ್ಥಾನ ಮಹಾವಿದ್ವಾನ್ ಶ್ರೀ ಆರ್. ಕರಿಬಸವ ಶಾಸ್ತ್ರಿಗಳು. ಕೃತಿ ಪ್ರಕಾಶಕರು ಮೈಸೂರುಸ್ಟಾರ್ ಪತ್ರಿಕೆಯ ಸಂಪಾದಕರಾಗಿದ್ದ ಮೈಸೂರಿನ ವೈ. ವೀರಸಂಗಪ್ಪನವರು. ಪುಸ್ತಕದ ಮುಖಪುಟದಲ್ಲಿ "ಶ್ರೀಮದ್ ಷಟ್ಸ್ಥಲ ಬ್ರಹ್ಮನಾ ಶಿವಯೋಗಿ ನಾಮ್ನಾ ರೇಣುಕಾಚಾರ್ಯೇಣ ಪ್ರಣೀತಂ ಸಿದ್ಧಾಂತ ಶಿಖಾಮಣ್ಯಾಖ್ಯಂ ಇದಂ ಶ್ರೀಮತ್ಪದವಾಕ್ಯ ಪ್ರಮಾಣ ಪಾರಾವೀರ ಧುರೀಣ ಮರಿತೋಂಟದಾರ್ಯೇಣ ವಿರಚಿತಯಾ ತತ್ವಪ್ರದೀಪಿಕಾಖ್ಯಯೇ". ೩೫೪ನೇ ಪುಟದ ಈ ಗ್ರಂಥ ಮೊದಲು ಮುದ್ರಣವಾದದ್ದು. ತಾರಣಾಬ್ದ ಮಾಘ ಕೃಷ್ಣ ಪಂಚಮಿ ಸೌಮ್ಯವಾಸರ. ಇದು ಇಂಗ್ಲೀಷ್ ತೇದಿ ೧೮೮೫ಕ್ಕೆ ಸರಿಹೊಂದುತ್ತದೆ. ಆ ನಂತರ ಈ ಕೃತಿಯ ಕನ್ನಡ ಗದ್ಯಾನುವಾದ ಮೈಸೂರು ಆತ್ಮವಿಚಾರ ಮಂದಿರದ ಸಂಸ್ಥಾಪಕರಾದ ಶ್ರೀ ಎಂ.ಎಲ್. ನಾಗಣ್ಣನವರಿಂದ ಸಂಪಾದನೆಗೊಂಡು ಮೊದಲನೆಯ ಭಾಗ ೧೯೫೪ರಲ್ಲಿ ಎರಡನೆಯ ಭಾಗವು ೧೯೬೧ರಲ್ಲಿ ಮುದ್ರಣವಾಗಿದೆ. ಇದೇ ಗ್ರಂಥವು ದೇವನಾಗರಿ, ತೆಲುಗು, ಮರಾಠಿ, ತಮಿಳು, ಹಿಂದಿ ಇಂಗ್ಲೀಷ್ ಭಾಷೆಯಲ್ಲಿ ಮುದ್ರಣ ಕಂಡಿದೆ. ಅಧ್ಯಾಯದ ಕಡೆಯಲ್ಲಿ ಈ ಪುಷ್ಪಿಕೆ ಇದೆ.

> **ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತ ಶಿಖಾಮಣಿ ಪ್ರಸಾದಿನಸಪ್ತವಿಧಸ್ಥಳ ಪ್ರಸಂಗೋ ನಾಮೈಕಾದಶೀಯಪರಿಚ್ಛೇದಸ್ಸಮಾಪ್ತಃ**

ಗದಗಿನ ತೋಂಟದಾರ್ಯ ಮಠದ ಇತಿಹಾಸವನ್ನು ತಿಳಿಸುವ "ನಿರಂಜನ ಜಂಗಮ ವಂಶದರ್ಪಣ" ವನ್ನು ಪ್ರಾಚೀನ ಸಾಹಿತ್ಯ ಮತ್ತು ಕಾಗದ ಪತ್ರಗಳಿಂದ ೧೯೧೯ರಲ್ಲಿ ಗದಗಿನ ಬಸವಪ್ಪ ವೀರಪ್ಪ ಕೋಟಿಯವರು ಸಿದ್ಧಮಾಡಿದರು. ಈ ಕೃತಿ ರಚನೆಗೆ ಅಪ್ರಕಟಿತ ವೀರಶೈವಾನಂದ ಚಂದ್ರಿಕೆ ಗ್ರಂಥವನ್ನು ಬಳಸಿಕೊಂಡಿದ್ದಾರೆ.

ಶ್ರೀ ಜಗದ್ಗುರು ತೋಂಟದ ಕೌದೀ ಮಹಾಂತ ಸ್ವಾಮಿಗಳು ಅರ್ಧನಾರೀಶ್ವರ ಸ್ವಾಮಿಗಳಿಗೆ ಷಟ್‌ಸ್ಥಲಾಚಾರ್ಯ ಪಟ್ಟವನ್ನು ಕೊಟ್ಟು ಶೂನ್ಯಸ್ಥಲವನ್ನು ಹೊಂದಿದ ನಂತರದಲ್ಲಿ ಸೋಮಶೇಖರರಾಜನ (೧೬೬೩-೧೬೭೨) ಚಿರಂಜೀವಿಯಾದ ವೀರಭದ್ರನಾಯಕನೆಂಬುವನ ಧರ್ಮಪತ್ನಿಯಾದ ಮಲ್ಲಾಂಬಿಕೆಯ ಹೃದಯಗತವಾದ ತಮ್ಮ ಮೇಲಿನ ಭಕ್ತಿ ಭಾವವನ್ನು ಸಮಾಧಿ ದೃಷ್ಟಿಯಿಂದ ತಿಳಿದು ನಿನಗೆ ನಿನ್ನಂಥ ಭಕ್ತಿ ಸಂಪನ್ನವಾದ ಬಸವಪ್ಪನಾಯಕನೆಂಬ ಸತ್ಪುತ್ರನು ಜನಿಸುವನು ಎಂದು ಆಜ್ಞಾಪಿಸಿ ಒಂದು ವಿಭೂತಿಯ ಘಟ್ಟಿಯನ್ನು ಕರುಣಿಸಿ ತಮ್ಮ ನಿಜವಾಸವಾದ ಡಂಬಳ ಸಂಸ್ಥಾನಕ್ಕೆ ತೆರಳಿದರು. ಈ ಅರ್ಥದಲ್ಲಿ ಪ್ರಮಾಣವು ವೀರಶೈವಾನಂದಚಂದ್ರಿಕಾ ಕ್ರಿಯಾಕಾಂಡದಲ್ಲಿದೆ.

ಅವಾಗ್ಗೆ ವೇದಾಗಮಾದಿ ಸಕಲ ವಿದ್ಯಾವೈದುಷದಿಂದ ಮಂಡಿತರಾಗಿ ಷಟ್‌ಸ್ಥಲಜ್ಞಾನಲಾಭಕ್ಕೋಸ್ಕರ ತರತರ ಭಕ್ತಿಯಿಂದ ತಮ್ಮ ಕೈಂಕರ್ಯವನ್ನು ಮಾಡುತ್ತಿದ್ದ ಮರಿತೋಂಟದಾರ್ಯರೆಂಬ ದೇಶಿಕಮೂರ್ತಿಗೆ

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು.

ದಯೆಯಿಂದ ಷಟ್‌ಸ್ಥಲ ತತ್ತ್ವೋಪದೇಶವನ್ನು ಪಡೆಯುವ ಬೂದಿಬಸಪ್ಪನಾಯಕನೆಂಬವನಿಗೆ ಕಾಲಾಂತರದಲ್ಲಿ ಹೆಸರನ್ನು ಪಡೆಯುವ ಬೂದಿಬಸವಪ್ಪನಾಯಕನೆಂಬವನಿಗೆ ಉಪದೇಶಿಸುವ ಬಗೆಯಿಂದ **ವೀರಶೈವಾನಂದ ಚಂದ್ರಿಕೆ**ಯೆಂಬ ಗ್ರಂಥವನ್ನು ರಚಿಸೆಂದು ಆಜ್ಞಾಪಿಸಿದರು. ಈ ಅರ್ಥದಲ್ಲಿ ಪ್ರಮಾಣವು ಇದೇ ವೀರಶೈವಾನಂದಚಂದ್ರಿಕಾ ಕ್ರಿಯಾಕಾಂಡದಲ್ಲಿದೆ.

ಇತ್ತಲಾ ಸ್ವಾಮಿಗಳು ನಿರೂಪಿಸಿ ದಯಪಾಲಿಸಿದ ವಿಭೂತಿಯ ಮಹತ್ತ್ವದಿಂದ ಮಲ್ಲಾಂಬಿಕಾ ಗರ್ಭದಿಂದ ಅನೇಕ ರಾಜಲಕ್ಷಣ ಲಕ್ಷಿತನಾದ ಗುರುಲಿಂಗ ಜಂಗಮ ಭಕ್ತಿಸಂಪನ್ನವಾದ ಪುತ್ರನು ಜನಿಸಿದನು. ಆ ಕುಮಾರನು ಮಾತಾಪಿತೃಗಳು ವಿಧಿಪ್ರಕಾರವಾಗಿ ಹನ್ನೆರಡನೆಯ ದಿವಸದಲ್ಲಿ ಬಸವಪ್ಪನಾಯಕನೆಂದು ಕರೆದರು. ಬಳಿಕ ಶಿಶುವು ಒಂದು ವರ್ಷ ವಯಸ್ಸುಳ್ಳುದಾಗಲಾಗಿ ವೀರಭದ್ರನಾಯಕನ ಭಕ್ತತಿಶಯವನ್ನು ನೆನೆದು ಪುನಃ ಕೆಳದಿ ಸಂಸ್ಥಾನಕ್ಕೆ ಮಹಾಸ್ವಾಮಿಗಳು ದಯಮಾಡಿಸಿದರು. ಆಗ್ಗೆ ಮಹಾಸನ್ನಿಧಿಯ ಪಾದದಲ್ಲಿ ಈಡಾಡಿಸಿದ ಶಿಶುವನ್ನು ಕೃಪಾದೃಷ್ಟಿಯಿಂದ ನಿರೀಕ್ಷಿಸಿ 'ಬೂದಿಬಸವನೇ ಬಾಯೆಂದು' ಕರುಣಿಸಿ ಕರೆದದ್ದರಿಂದ 'ಬೂದಿಬಸವಪ್ಪ' ನೆಂಬ ನಾಮಧೇಯಾಂತರವು ಲೋಕದಲ್ಲಿ ವಿಖ್ಯಾತವಾಯಿತು.

ಮರಿತೋಂಟದಾರ್ಯರ ಬಗ್ಗೆ ಹಲವು ಕಾಗದ ಪತ್ರಗಳು ಗದಗನ ತೋಂಟದಾರ್ಯ ಮಠದಲ್ಲಿ ಇದ್ದಿರಬಹುದು. ಆದರೆ ಅಂತಹ ಕಾಗದ ಪತ್ರಗಳು ವಿದ್ವಾಂಸರ ಅವಲೋಕನೆಗೆ ಲಭ್ಯವಾಗಿಲ್ಲ. "ಜಗದ್ಗುರು ತೋಂಟದ ಶ್ರೀಮದರ್ಧನಾರೀಶ್ವರ" ಪುರಾಣವು ಬಳ್ಳಾರಿಯ ಸರ್ವದರ್ಶನ ತೀರ್ಥ ಪಂಡಿತ ವೈ. ನಾಗೇಶಶಾಸ್ತ್ರಿಗಳಿಂದ ರಚನೆಗೊಂಡು ಶ್ರೀ ತೋಟಪ್ಪ ವೀರಪ್ಪ ಕೋಟಿ ಗದಗ ಇವರಿಂದ ೧೯೬೮ರಲ್ಲಿ ಪ್ರಕಟಗೊಂಡಿದ್ದು ಪ್ರಕಾಶಕರ ಮಾತಿನಲ್ಲಿ (ಪುಟ iii.)

"ಶ್ರೀ ಅರ್ಧನಾರೀಶ್ವರ ಮಹಾಸ್ವಾಮಿಗಳವರ ಶಿವಯೋಗ ವೈಭವದ ಘನತೆಯನ್ನು ಅರಿಯಬೇಕಾದರೆ ಡಂಬಳ, ಕೆಳದಿ, ಹರಪನಹಳ್ಳಿ ಮುಂತಾದ ಅವನಿಪಾಲರೂ ಮಹಾಸ್ವಾಮಿಗಳವರ ಪಾದಪದ್ಮಂಗಳಿಗೆ ಭಕ್ತಿಪೂರ್ವಕವಾಗಿ ಅರ್ಪಿಸಿದ ದಾನ-ದತ್ತಿಗಳಿಂದ ಅರಿಯಬಹುದಾಗಿದೆ.

. . . . . . ಶ್ರೀ ಅರ್ಧನಾರೀಶ್ವರ ಮಹಾಸ್ವಾಮಿಗಳವರ ದಿವ್ಯಪ್ರಭಾವಕ್ಕೆ ಮಣಿದು ಭೂಪಾಲಕರು ಶ್ರೀಗಳವರ ಪಾದಪದ್ಮಾರಾಧಕರದಂತೆ ಶ್ರೀ ಮರಿತೋಂಟದಾರ್ಯ, ಮೌನಪ್ಪಯ್ಯ ಪಂಡಿತ ಮುಂತಾದ ವಿದ್ವನ್ಮಣಿಗಳೂ ಸಹ ನಮ್ಮ ಜ್ಞಾನದೃಷ್ಟಿಯನ್ನು ಹಿಂಗಿಸಿಕೊಳ್ಳಲು ಶ್ರೀಗಳವರ ದಿವ್ಯ ಸಾನ್ನಿಧ್ಯಾವನ್ನಾಶ್ರಯಿಸಿ ಬಂದದ್ದು ಇಲ್ಲಿ ಗಮನಾರ್ಹವಾಗಿದೆ.

ಹೀಗೆ ಮಹಾಸ್ವಾಮಿಗಳಲ್ಲಿ ಪೂರ್ಣಭಕ್ತಿ-ನಿಷ್ಠೆಗಳನಿಟ್ಟ ರಾಜಮನೆತನಗಳಲ್ಲಿ ಒಬ್ಬರಾದ ಕೆಳದಿಯ ಸಂಸ್ಥಾನಿಕರು ಬಂದು ಶ್ರೀ ಅರ್ಧನಾರೀಶ್ವರ ಮಹಾಸ್ವಾಮಿಗಳನ್ನು ಬಿನ್ನವಿಸಿಕೊಂಡು ಶ್ರೀಗಳವರು ತಮ್ಮಲ್ಲಿ ಶಿವಾನುಭವ ಚರಮೂರ್ತಿಗಳಾಗಿದ್ದ ಪ್ರಕಾಂಡ ಪಂಡಿತ ಶ್ರೀಮರಿತೋಂಟದಾರ್ಯರನ್ನೇ ಕೆಳದಿಗೆ ಕಳಿಸಿಕೊಟ್ಟರು. ಕೆಳದಿಯ ಆಸ್ಥಾನದಲ್ಲಿ ಶ್ರೀ ಮರಿತೋಂಟದಾರ್ಯರು ವೀರಶೈವಾನಂದ ಚಂದ್ರಿಕೆ ರಚಿಸಿದ್ದಾರೆ. ಸಿದ್ಧಾಂತಶಿಖಾಮಣಿಯ ತತ್ತ್ವಪ್ರದೀಪಿಕೆ ವ್ಯಾಖ್ಯೆಯು ಅವರು ಡಂಬಳದಲ್ಲೇ ಇದ್ದಾಗಲೇ ರಚನೆಯಾಗಿರಬೇಕು ಅದರಲ್ಲಿ ಕೆಳದಿ ಅರಸರ ಉಲ್ಲೇಖ ಬರುವುದಿಲ್ಲ.

ನನಗೆ ನೋಡಲು ಲಭ್ಯವಾದ ಕಾಗದ ಹಸ್ತಪ್ರತಿಯಲ್ಲಿ ಮೊದಲ ಹನ್ನೆರಡು ಶ್ಲೋಕಗಳನ್ನು ಓದಲು ಸಾಧ್ಯವಾದದ್ದು.

**ಜ್ಞಾನಾನುಗ್ರಹಪಾತ್ರತಾಂ ಉಪಗತಃ ತಸ್ಯ ಅತಿಮಾತ್ರ ಸ್ವಯಂ**
**ತೋಂಟಸ್ವಾಮಿ ಅಥ ಸೋಮಶೇಖರನೃಪಸ್ಯ ಇಷ್ಟಾರ್ಥ ದಾನೇಚ್ಛಯಾ ।**
**ಅಗತ್ಯ ಅತಿಶಂಮೇನ ತತ್ಕೃತಮಹಾಪೂಜಾ ಪ್ರಹೃಷ್ಟಾಶಯಃ**
**ದತ್ವಾ ವಾಂಛಿತಮಸ್ಯ ಸರ್ವ ಜಗತೀ ಕ್ಷೇಮಂಕರೋ ಅರಾಜತ ॥ ೧೨ ॥**

**ವಿದ್ಯಾ ಯಸ್ಯ ವಧೂಃ ಕ್ಷಮಾಪ್ಯನುಚರೀತೋಷಃ ಸುತಶ್ಚ ಪ್ರಸೂಃ ಭಕ್ತಿಃ**
**ಸಾಪ್ತಸುಹೃತ್ ಶಮಃ ಜನಯಿತಾ ಚಾರೋಥ ಮೈತ್ರಾದಯಃ ।**
**ಪುತ್ರ್ಯಃ ಕ್ಷೇತ್ರಮಶೇಷಮೇವ ಭುವನಂ ಧರ್ಮೋ ಮಹದ್ವಾಹನಂ**
**ಸಪ್ತ ಸತ್ಯಮಭೂತ್ ಸುನಿಸ್ಪೃಹತ ಯಂ ದೇಶೇಷು ಸಂಚಾರಿಣಃ ॥ ೧೩ ॥**

**ತೋಟಸ್ವಾಮೀ ತದಾನೀಂ ಹೃದಯಜುಷಮಸಿ ಪ್ರೇಕ್ಷ್ಯ ಮಲ್ಲಾಂಬಿಕಾಯಾ**
**ಭಕ್ತಿಂ ಸುಜ್ಞಾನ ದೃಷ್ಟ್ಯ ನಿರುಪಮ ದಯಯಾ ತಾವಕಾಭಿಷ್ಟ ಸಿದ್ಧಿಃ**
**ಜಾಯೇತ ಕ್ಷಿಪ್ರಂ ಇತ್ಥಂ ಪ್ರಮುದಿತಹೃದಯಃ ಕೀರ್ತಯಿತ್ವಾ**
**ಸ ಪಶ್ಚಾತ್ ಸ್ಥಾನಂ ಖಂಡಂ ಬಲಾಖ್ಯಂ ಪ್ರಗತಿಮನವಿಧೌ ಶೇಮುಷೀಂ ಚ ಪೂತಾನೀತ್ ॥ ೧೪ ॥**

ಹನ್ನೆರಡು, ಹದಿಮೂರು ಮತ್ತು ಹದಿನಾಲ್ಕನೇ ಶ್ಲೋಕಗಳಲ್ಲಿ ಸೋಮಶೇಖರ ನೃಪನ ಇಷ್ಟಾರ್ಥ ಮಲ್ಲಾಂಬಿಕಾ ಅಶೀರ್ವಾದ ಮಾಡಿ ಮಕ್ಕಳು ಇಲ್ಲದ ದಂಪತಿಗಳಿಗೆ ಪುತ್ರನನ್ನು ಅನುಗ್ರಹಿಸಿದ್ದು.

ನಿರ್ಗತ್ಯ ಅಥ ದೇಶಿಕಃ ಸ್ವವಸತಿಂ ಸಂಪ್ರಾಪ್ಯ ಮಾಂ ಪ್ರೇಮತೋ
ಜ್ಞಾನಾನುಗ್ರಹಪಾತ್ರತಾಮಪಿ ನಯನ್ ಕಾರುಣ್ಯಪಾಥೋ ನಿಧಿಃ ।
ವಾಚಂ ಮೇ ಮರಿತೋಂಟದಾರ್ಯಮನಸಿ ಪ್ರಕ್ಷಿಪ್ಯ ಕಾಲಾಂತರೇ
'ವತ್ಸ ಏತತ್ ವಚನಾ ರೂಪಂ ಉಚಿತಂ ಕುರು' ಇತಿ ಅವಾದೀತ್ ಚ ಮರ್ಮ ॥ ೧೫ ॥

ಈ ಹದಿನೈದನೇ ಶ್ಲೋಕ ಮರಿತೋಂಟದಾರ್ಯರು ಸಿದ್ಧಾಂತಶಿಖಾಮಣಿಗೆ ಟೀಕೆ ಬರೆದದ್ದು "ವತ್ಸ ಏತತ್ ವಚನಾನುರೂಪಂ" ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ಲೋಕಾನಾಂ ಅವನಾರ್ಥಂ ಉದ್ಧತತರಾನ್ ಮೂಳಾದಿದೈ ತ್ಯೋತ್ಕರಾನ್
ಸಂಹೃತ್ಯಾಖಿಲ ಧರ್ಮಭರಿತೇ ರಾಜ್ಯೇ ನಿವಾಸೇದ್ ಯಯಾ ।
ಶ್ರೀಮತ್ಕೊಲ್ಲಾಪುರೇ ಸ್ಥಿತಾತ್ರ ಕೆಳದೀಭೂಪ ಪ್ರಸಾದೋ ನ್ಮುಖೀ ಭದ್ರಾಣೀ
ಅರ್ಪಯಿತುಂ ಜನಾಯ ದಯಯಾ ಉನ್ನಿದ್ರಾತಿ ಮೂಕಾಂಬಿಕಾ ॥ ೧೭ ॥

ಕೆಳದಿ ಅರಸರು ಕೊಲ್ಲೂರು ಮೂಕಾಂಬಿಕೆಯನ್ನು ಭಕ್ತಿಯಿಂದ ಪೂಜಿಸುತ್ತಾ ಇದದ್ದುನ್ನು ಕವಿ ದಾಖಲಿಸಿದ್ದಾನೆ.

ತಸ್ಯ ಪ್ರಭುಃ ನಿಜಗುಣೋನ್ನತಿಲಬ್ಧಕೀರ್ತಿಕೆ ಸಾಮ್ರಾಜ್ಯ ಯೋಗ್ಯ ಶುಭಲಕ್ಷಣ ಲಕ್ಷಿತಾಂಗಃ ।
ಚಂದ್ರಾವತಂಸ ಚರಣಾರ್ಚನಸಕ್ತ ಚಿತ್ತಃ ಚೌಡಪ್ಪನಾಯಕ ಇತಿ ಪ್ರಥಿತೋ ಬಭೂತ ॥ ೧೮ ॥

ಕೆಳದಿ ಅರಸರ ಮೊದಲ ನಾಯಕ ಚೌಡಪ್ಪನನ್ನು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

ಪುತ್ರಃ ತಸ್ಯ ಸದಾಶಿವಕ್ಷಿತಿಪತಿಃ ಜಿಷ್ಣೋಃ ಜಯಂತೋ ಯಥಾ
ಸ್ವಾಲೋಕೇನ ವಿಜೃಂಭಯನ್ ಮೃಗದೃಶಾಂ ಕಂದರ್ಪದರ್ಪೋದಯಮ್ ।
ನಾಮ್ನೋ ಸ್ವೇನ ಮಹಾಗ್ರಹಾರಂ ಅಕರೋತ್ ವಿದ್ವನ್ಮಣಿ ಶ್ರೇಣಿಭಿಃ ಶಂಭೋಃ
ಆಯತನಂ ತದರ್ಚನ ಕೃತೆ ಕ್ಷೇತ್ರಾರ್ಪಣಂ ಚಾಧಿಕಮ್ ॥ ೨೦ ॥

ಸದಾಶಿವನಾಯಕ ಸದಾ ಶಿವಪೂಜಾಸ್ತಕನಾಗಿದದ್ದು, ಮಹಾಗ್ರಹಾರಗಳನ್ನು ನಿರ್ಮಾಣ ಮಾಡಿದನ್ನು ಅವರ ಆಸ್ಥಾನದಲ್ಲಿ ವಿದ್ವನ್ಮಣಿಗಳು ನೆಲೆಸಿದ್ದನ್ನು ಮರಿತೋಂಟದಾರ್ಯ ಹೇಳಿದ್ದಾನೆ.

ವಂಶೋಚ್ಛ್ರಾಯವಿಧಾಯಕಸ್ಯ ಕೆಳದೀ ರಾಮೇಶ್ವರಸ್ಯಾಲಯಂ
ಭಕ್ತ್ಯಾಚಾರುಶಿಲಾಮಯಂ ಮಠಮಪಿ ಶ್ರೀ ವೀರಶೈವೋಚಿತಂ ।
ನಿರ್ಮಾಯ ಸ್ಥಿರವೈಭವಾಹ ಬಹುಳ ದ್ರವ್ಯಪ್ರದಾ
ಶ್ರೀಧರಾಂ ತತ್ಸಾತ್ಕೃತ್ಯ ರರಕ್ಷ ಸರ್ವವ್ಯಸುಧಾಂ ಕೋಶಂ ಚ ಸಂವರ್ಧವನ್ ॥ ೨೪ ॥

ಈ ಶ್ಲೋಕದಲ್ಲಿ ಕೆಳದೀ ರಾಮೇಶ್ವರಾಲಯವನ್ನು ಶಿಲಾಮಾಯದಿಂದ ನಿರ್ಮಿಸಿದ್ದು ಕೆಳದಿಯಲ್ಲಿ ಶಿಲಾಮಯ ವೀರಶೈವ ಮಠವನ್ನು ನಿರ್ಮಿಸಿದ್ದು ಈ ಶ್ಲೋಕ ಸ್ಪಷ್ಟವಾಗಿ ತಿಳಿಸುತ್ತದೆ.

ತಸ್ಯಾತ್ಮಜಾತಭೂತಾಂ ಭುವೆ ಪುಣ್ಯವಂತಾವತ್ಯುಜ್ವಲೌ
ಖಲು ಯಥೈಕ ಪದಾಭಿಧೇಯೌ ।
ಧರ್ಮೈಕತಾನಧಿಷಣಾ ವಿದಿತಪ್ರತಾಪಾ
ಸಂಕಣ್ಣನಾಯಕ ಸಮಾಹ್ವಯತಃ ಪ್ರಸಿದ್ಧೌ ॥ ೨೫ ॥

ಜಾಯಾನತ್ರ ವಸುಂಧರಾತಳಮವನ್ ಬಾಹುಪ್ರತಾಪಾರ್ಜಿತಂ
ನಿತ್ಯೈವ ಪ್ರಕೃತೀ ನಿಜಾನುಚರಾವಾನಂದಮನ್ ಏತದಾ ।
ಯಾತ್ರೋತ್ಸಾಹಸಮನ್ವಿತೋ ಅನುಜವಶಂ ಕೃತ್ವಾ ಸುತಾಕ್ಷ್ಮಾಮಪಿ
ಸ್ವೈರಂ ಸ್ವೈರನುಗೈಃ ಸಮಂ ನಿರಗಮತ್ ಸಂಕಣ್ಣಪೃಥೀವಿಪತಿಃ ॥ ೨೬ ॥

ನಾನಾದೇಶ ವಿಶೇಷ ದರ್ಶನಭವಃ ಕಾಶೀಂ ಭವಾಶೀವಿಷಗ್ರಸ್ತಾಂ
ಅವಲೋಕನಾದಮ್ಯ ತದಾ ಪ್ರಾಪ್ಯ ಪ್ರಹೃಷ್ಟಾಶಯಃ ।
ಮ್ಲೇಛಾದೀಶ್ವರ ಪಾದುಷಾಹವಸತಿಂ
ಡಿಳ್ಳೀ ಪುರೀಂ ಚಕ್ರಮಾತೇ ಸಂಲೇಭಿ ಬಹು ವಿಕ್ರಮೈಕವಸತಿಃ ಸಂಕಣ್ಣ ಭೂಮಿಪತಿಃ ॥ ೨೭ ॥

ಸಂಕಣ್ಣ ಪೃಥ್ವೀಪತಿಯ ಬಗ್ಗೆ ಆತನ ಉತ್ತರಭಾರತದ ಯಾತ್ರೆಯ ಬಗ್ಗೆ ದೆಹಲಿ, ಕಾಶಿಯಾತ್ರೆ ಬಗ್ಗೆ ಕಾಶಿಯಲ್ಲಿ ಕಾಶಿ ವಿಶ್ವೇಶ್ವರ ದೇವಸ್ಥಾನವನ್ನು ಮ್ಲೇಂಛರು ಆಕ್ರಮಿಸಿ ಕೊಂಡಿದನ್ನು ಸ್ವತಂತ್ರವಾಗಿಸಿ ಮತ್ತೆ ಮಠಧರ್ಮವನ್ನು ನಡೆಯುವಂತೆ ಮಾಡಿದ. ಈತನಲ್ಲಿ ಇದ್ದ ನಾಗರಮರಿ ಆಯುಧರ ಬಗ್ಗೆ ಶ್ಲೋಕ ೨೦ರಲ್ಲಿ ಇದ್ದ "ಈಶಾನುಗ್ರಹಲಬ್ಧ ನಾಗರಮರೀ ಸಂಜ್ಞಾಢ್ಯ ಖಂಡ್ಗೋತ್ತಮಂ" ಎಂದಿದೆ.

ಪಶ್ಚಾದ್ಭೂಮಿಪತಿಃ ತಮಚ್ಛಿನದಸೌ ಖಡ್ಗೇನ ಯುದ್ಧೋದ್ಧತಂ
ಮ್ಲೇಛಾನಾಮಧಿಪಃ ಪ್ರಹೃಷ್ಟಬಿರುದಾನಿ ಅಸ್ಮೈಪ್ರದಾಯಾಧಿಕಂ ।
ಕಾಶೀಕ್ಷೇತ್ರಪುರೆ ಪ್ರಯೋಗ ಗಮಯೋರ್ಬಹ್ವೀಂ ಮಠಾರ್ಥಂ
ಭವಂ ಪ್ರಾದಾದೇಷ ಮಠಾನ್ವಿಧ್ವಾಯ ಧರಣೀಂ ತತ್ವಾದ ಕಾರ್ಷೀಚ್ಚ ತಾಂ ॥ ೩೨ ॥

ಈ ಹಿಂದೆ ಕಾಶೀ, ಪ್ರಯಾಗ, ಗಯಾ ಕ್ಷೇತ್ರದಲ್ಲಿ ಇದ್ದ ಮಟಗಳು ಮ್ಲೇಂಛರಿಂದ ತೊಂದರೆ ಉಂಟಾಗಿದ್ದು ಅವುಗಳನ್ನು ಪರಿಹರಿಸಿ ಮತ್ತೆ ಆಯಾ ಕ್ಷೇತ್ರದಲ್ಲಿ ಮಠಧರ್ಮವನ್ನು ನಡೆಯುವಂತೆ ಮಾಡಿದ.

**ಆಗಂತಾನೆ ತತಃ ಕ್ವಚಿತ್ ಪಶ್ಯನ್ ಅಘೋರೇಶ್ವರಂ ತಸ್ಯ।**
**ಸ್ಥಾಪನಕಾರಣಾತ್ಪ್ರತಿಕೃತಿಂ ಚಿತ್ರಾತ್ಮನಾ ಲೇಖಿತಾಂ ।**
**ಅವ್ಯತ್ರಾಪಿ ತಟಾಕಮಧ್ಯೆ ತಟಾಕಮಧ್ಯೆ ವಸತಿಂ ಶ್ರೀ**
**ವೀರಭದ್ರೇಶ್ವರಂ ಸ್ವಪ್ನಾತ್ತಂ ಚ ಸಮಾನವನ್**
**ನಿಜಪ್ರವೀಂ ಸಂಕಣ್ಣ ಭೂಪೋ ಅದಿಶತ್ ॥ ೩೩ ॥**

**ಇಕ್ಕೇರಿ ನಗರೆ ಶಿಲಾಮಯಂ ಅಸೌ ನಿರ್ಮಾಸ್ಯ**
**ದೇವಾಲಯಂ ಪ್ರಖ್ಯಾತೆ ಕೆಳದಿ ಸ್ಥಳೆ ಚ**
**ವಿಧಿವನ್ಮೋದಾದಘೋರೇಶ್ವರಂ ।**
**ಪ್ರತ್ಯಷ್ಠಾಪಯವಾಗಮೋಕ್ತ ವಿಧಿನಾ ಶ್ರೀ ವೀರಭದ್ರಂ ಚತಂ**
**ಪೂಜಾವೈಭವ ಬದ್ಧಯೆ ವಸುಮತೀಂ ಭಕ್ತ್ಯಾತಯೋಃ**
**ಪ್ರಾರ್ಪಯತ್ ॥ ೩೪ ॥**

ಸಂಕಣ್ಣನಾಯಕ ಉತ್ತರದೇಶದಲ್ಲಿ ತಟಾಕ ಮಧ್ಯದಲ್ಲಿ ಇದ್ದ ಅಘೋರೇಶ್ವರನ ದರ್ಶನ ಮಾಡಿಕೊಂಡು ಅ ಅಘೋರೇಶ್ವರನ ವಿಗ್ರಹದ ಚಿತ್ರವನ್ನು ಬರೆದುಕೊಂಡು ಬಂದು ಅದೇ ತರಹದ ವಿಗ್ರಹವನ್ನು ಶಿಲಾಮಯವಾಗಿ ನಿರ್ಮಿಸಿದ ಅಘೋರೇಶ್ವರ ದೇವಾಲಯವನ್ನು ಇಕ್ಕೇರಿ ನಗರದಲ್ಲಿ ಕೆಳದಿ ನರಗದಲ್ಲಿ ನಿರ್ಮಿಸಿದ. ಅಘೋರೇಶ್ವರ ದೇವಾಲಯ ನಿರ್ಮಾಣ ಮಾತ್ರ ಎಂದು ವೀರಭದ್ರಸ್ವಾಮಿಯೆ ಕನಸಿನಲ್ಲಿ ಬಂದು ಹೇಳಿದ್ದು. ಅದರಂತೆ ಸಂಕಣ್ಣನಾಯಕ ದೇವಾಲಯ ನಿರ್ಮಾಣ ಮಾಡಿಸಿದ. ವಿಧಿಪೂರ್ವಕವಾಗಿ ಅಘೋರೇಶ್ವರನನ್ನು ಸ್ಥಾಪನೆ ಮಾಡಿದ. ಶ್ಲೋಕ ೩೫ರಲ್ಲಿ "ಸಂಕಣ್ಣ ಕ್ಷಿತಿಪಾಹ್ವಯೇನ ಕೆಳದೀ ದೇಶೆ ಮಹಾ ಶೀಲವಾನ್" ಎಂದು ಕರೆದಿದ್ದಾನೆ.

**ತತಸ್ಸ ರಾಮರಾಜನಾಯಕೆ ನಿಜಾಗ್ರಜಾತ್ಮಜೆ**
**ನ್ಯಧತ್ತ ಚ ಕ್ಷಮಾಧರಾಂ ನಿರೀತಿರಕ್ಷಣಶ್ರಮೆ ।**
**ಸ್ವಯಂ ದ್ವಿಷೋ ನಿಷೂದಯನ್ನಯಂ ನಂಮೇನ**
**ರಾಜಯನ್**
**ಪ್ರಜಾಯಶಃ ಪ್ರವರ್ಧಯನ್ನವರ್ಧತಸ್ಸ ವೈಭವೈಃ ॥ ೩೬ ॥**

ರಾಮರಾಜನಾಯಕ (೧೫೭೧-೧೫೮೩) ರಾಜ್ಯವಾಳುತ್ತಾ ಇದ್ದು ಕ್ಷಮಾಧರು ಗುಣವುಳ್ಳವನು, ಪ್ರಜೆಗಳ ಯಶಸ್ಸನ್ನು ಸದಾ ಬಯಸುವಂತಹವನು

**ತತೋನುಜಸ್ಯ ವೆಂಕಟಪ್ಪನಾಯಕ ಕ್ಷಮಾಪತೆಃ**
**ಅಖರ್ವಗರ್ವಧೂರ್ವಹಃ ಪ್ರತಾಪ ಭೂಪನಿಗ್ರಹಾತ್ ॥**
**ವಿಶಿಷ್ಯ ಪೂರ್ವತೋಧಿಕಾಗಮಂತತೋ ವಸುಂಧರಾಂ**
**ವಿತನ್ವತೆ ಏಳೆ ಯಶೋ ದಿಶಾಂ ಮುಖೇಷ್ವ ಶೋಭತ**
**॥ ೩೭ ॥**

ಹಿರಿಯ ವೆಂಕಟಪ್ಪನಾಯಕ (ಕ್ರಿ.ಶ. ೧೫೮೩-೧೬೩೦) ಕ್ಷಮಾಗುಣವುಳ್ಳವನು, ಬಹು ಪ್ರತಾಪಿಯಾಗಿದ್ದ. ಶ್ಲೋಕ ೩೮ರಲ್ಲಿ "ವೀರಾಂಬಾಪುರ ನಾಯಕ ಸ್ವಜನನೀ ನಾವಮ್ನಾಗ್ರಹಾರಂ" ಎಂಬ ವಾಕ್ಯವಿದ್ದು ಹಿರಿಯ ವೆಂಕಟಪ್ಪನಾಯಕ ತನ್ನ ತಾಯಿ ನೀಲಾಂಬ ಹೆಸರಿನ ಅಗ್ರಹಾರ ನಿರ್ಮಾಣ ಮಾಡಿದ್ದನ್ನು ಹೇಳುತ್ತದೆ. ೩೯ನೇ ಶ್ಲೋಕದಲ್ಲಿ ವೆಂಕಟಭೂಪತಿ "ಶಿವಾಷ್ಟಪದೀಂ" ಗ್ರಂಥಕ್ಕೆ ಕಾವ್ಯಾಖ್ಯಾನ ಮಾಡಿರುವುದನ್ನು ಹೇಳುತ್ತದೆ.

**ಭೂಯೋಽಯಂ ಮಠಾಗ್ರಹಾರ ಕರಣೈಃ ಸದ್ರಾಜ್ಯ**
**ಸಂಪಾದನೈಃ**
**ಗ್ರಂಥಾನಾಂ ರಚನೈಃ ಚ ದುಷ್ಟದಮನೈಃ ಶಿಷ್ಟೊ**
**ಪ್ರಜಾರಂಜನೈಃ ॥**
**ಪ್ರತ್ಯರ್ಥಿ ಕ್ಷಿತಿಪಾಲ ಶಿಕ್ಷಣಪಟುಸ್ಸ್ವೀಯ ಪ್ರತಾಪೈರಪಿ**
**ಖ್ಯಾತಂ ।**
**ಪ್ರಾಪ್ಯ ದಿಗಂತರೇಷು ಶುಶುಭ ಶ್ರೀ ವೆಂಕಟಕ್ಷ್ಮಾಪತಿಃ**
**॥ ೪೦ ॥**

ಕೆಳದೀ ರಾಜ್ಯ ವಿಸ್ತರಿಸಿದ್ದು ಗ್ರಂಥಗಳನ್ನು ರಚಿಸಿದ್ದು ದುಷ್ಟರನ್ನು ಶಿಕ್ಷಿಸಿದ್ದು ಶಿಷ್ಟರನ್ನು ರಕ್ಷಿಸಿದ್ದು ಇವನೆ ವೆಂಕಟಕ್ಷ್ಮಾಪತಿ ಎಂದು ಕರೆದಿದ್ದಾನೆ.

**ಭದ್ರಪ್ಪ ನಾಯಕ ಇತಿ ಪ್ರಥಿತೋಽಸ್ಯ ಪ್ರತಃ**
**ಶ್ರೀವೀರಭದ್ರನೃಪಸಂಜ್ಞಿತಮಾಸ ಪುತಂ ।**
**ಸೋಮಂಬತಾ (?) ಮಹಾಭುಜಾಪರಿಪಾಲಿತಾಂ**
**ಕ್ಷಾಂ ನೀತ್ಯಾ ಮಹೋನ್ನತಯಶಸ್ಸತತಂ ರರಕ್ಷ ॥ ೪೧ ॥**

ವೆಂಕಟಪ್ಪನಾಯಕ ಮಗನಾದ ಭದ್ರಪನು ಮೊದಲೇ ಶಿವೈಕ್ಯನಾದ್ದರಿಂದ ಅವನ ಮಗ ವೀರಭದ್ರಪ್ಪ ಪಟ್ಟಕ್ಕೆ ಬಂದಿದ್ದನ್ನು ಈ ಶ್ಲೋಕ ಸ್ಪಷ್ಟಪಡಿಸುತ್ತದೆ. ಇದರ ಮುಂದಿನ ಶ್ಲೋಕದಲ್ಲಿ "ಶ್ರೀ ವೀರಭದ್ರನೃಪತಿರ್ನಿಜಯಪುರತೋ ಶ್ರೀ ಪಾದುಷಾಹ ಮುಖತೋ ಬಹುಮಾನ ಪೂರ್ವಂ" ಅರ್ಥಾತ್ ಬಿಜಾಪುರದ ಬಾದಷ ವೀರಭದ್ರ ನೃಪಾಲನನ್ನು ಬಹುಮಾನ ಕೊಟ್ಟು ಸತ್ಕರಿಸಿದನ್ನು ತಿಳಿಸುತ್ತದೆ.

**ಗೌರೀಭರ್ತುರನುಗ್ರಹೇಣ ಸ ಮಹಾಕಾಲೋ**
**ಗಣಾಧೀಶ್ವರಃ**
**ಸಂಕಣ್ಣಕ್ಷಿತಿಪೋದರೆ ಶಿವಮತಂ ಪ್ರೋದ್ಧರ್ತುಃ ಉತ್ಪದ್ಯತೆ।**
**ಇತ್ಥಂ ಕ್ಷೋಣೀತಳೇತ್ರ ತೋಟದ ಮಹಾಸಿದ್ಧೇಶ್ವರೆ**
**ರಾಶೀವರಾ (?)**
**ಸಂಜಾತಸ್ತಸಂಪತ್ತಕಚ್ಚ ವಿದಿತಃ ಸಿದ್ಧಭೂಪಾಖ್ಯಯಾ ॥ ೪೩ ॥**

ಈ ಶ್ಲೋಕದಲ್ಲಿ ದೊಡ್ಡ ಸಂಕಣ್ಣನಾಯಕ (೧೫೪೬-೧೫೭೦) ಇವರ ಕಾಲದಲ್ಲಿ ತೋಂಟದ ಮಹಾಸಿದ್ಧೇಶ್ವರರು ಅರ್ಥಾತ್ ಸಿದ್ಧಲಿಂಗೇಶ್ವರರು ಜೀವಿಸಿದ್ದು ಸ್ಪಷ್ಟವಾಗಿ ತಿಳಿಸುತ್ತದೆ.

**ದ್ವಿತೀಯಸಂಕಣ್ಣಮಹೀಶಪುತ್ರಃ ಸಿದ್ಧಪ್ಪ**
**ಭೂಪಾಲತನೊಭವೋ ಯಃ ।**
**ಶಿವಪ್ಪ ಭೂಪಸ್ಯ ತು**
**ವೀರಭದ್ರಮಹೇಶ್ವರಾತ್ಪ್ರಾಪ ಧರಾಧಿಪತ್ಯಂ ॥ ೪೬ ॥**

ಕೆಳದಿಯ ಚಿಕ್ಕಸಂಕಣ್ಣನ ಮಗ ಸಿದ್ಧಪ್ಪ ಭೂಪಾಲನ ಮಗ ಶಿವಪ್ಪ (೧೬೪೬–೧೬೬೧) ರವರೆಗೆ ರಾಜ್ಯವಾಳಿದವನು ಶಿವಪ್ಪನಾಯಕನಿಗೆ ವೀರಭದ್ರನಾಯಕ ಹೆಸರಿನ ಮಗ ಇದ್ದದ್ದು ಅವನೆ ಮುಂದೆ ಭದ್ರಪ್ಪನಾಯಕ (೧೬೬೨–೧೬೬೪) ರಾಜ್ಯವಾಳಿದ್ದು.

**ಪ್ರಖ್ಯಾತಸ್ಯ ಶಿವಪ್ಪ ನಾಯಕನೃಪಃ ಪೂರ್ವಂ ದಿದಿಕ್ಷುಃ**
**ಸ್ಥಿತಾನ್ ಪ್ರತ್ಯರ್ತಿಕ್ಷಿತಿಪಾಲಾನ್ ಭುಜಲೋತ್ಥಾಖರ್ವಗ**
**ರ್ವೋದ್ಧತಾನ್ ॥**
**ಯುದ್ಧೆ ಬಾಹುಪರಾಕ್ರಮೇಣ ಮಹತಾ ನಿರ್ಜಿತ್ಯ**
**ನಿತ್ಯೋರ್ಜಿತಾನ್ ।**
**ಕನ್ಯಾಧೇನು ಸಹಸ್ರಕಾಳ ಪುರುಷತ್ಸರ್ಗಾದಿ ಧರ್ಮಾನ್ಯ**
**॥ ೪೭ ॥**

ಪ್ರಖ್ಯಾತವಾದ ಶಿವಪ್ಪನಾಯಕ ಯುದ್ಧರಂಗದಲ್ಲಿ ಅಸೀಮ ಭುಜಬಲ ಪರಾಕ್ರಮಿ ಕನ್ಯಾದಾನ, ಗೋದಾ್ರ, ಸಹಸ್ರಕಾಳ ಪುರುಷತ್ಸರ್ಗಾದಿ ದಾನಗಳನು ಮಾಡಿದವನು.

**ತಸ್ಯಾನುಜೋ ವೆಂಕಟಭೂಮಿಪಾಲಂ**
**ಶಿವಕ್ಷಿತಿಶಾದಧಿಗತ್ಯ ರಾಜ್ಯಂ ।**
**ಬಾಹುಪ್ರತಾಪೋನ್ನತ ಧರ್ಮಕೀರ್ತಿ**
**ನಿತ್ಯಪ್ರಜಾರಂಜನತತ್ಪರೋಽಭೂತ್ ॥ ೪೮ ॥**

ಶಿವಪ್ಪನಾಯಕನ ಮಲಿತಮ್ಮನಾದ ವೆಂಕಟಪ್ಪನಾಯಕನು (೧೬೬೧–೧೬೬೨) ಕೇವಲ ಒಂದು ವರ್ಷ ಕಾಲ ರಾಜ್ಯವಾಳಿದನು ಧರ್ಮಕೀರ್ತಿ ಪಡೆದವನಾಗಿದ್ದನು. ಮುಂದಿನ ಶ್ಲೋಕದಲ್ಲಿ "ಶ್ರೀಭದ್ರಕ್ಷಿತಿಪಾಲಕೋ ವಸುಮತಿಂ ಸುಪ್ರಾಪ್ಯ ತಸ್ಮಾದಯಂ" । (೪೯) । ಶಿವಪ್ಪನಾಯಕನ ಜೇಷ್ಠ ಪುತ್ರನಾದ ಭದ್ರಪ್ಪನಾಯಕನು (೧೬೬೨–೧೬೬೪) ರಾಜ್ಯವಾಳಿದನು.

**ಏತಸ್ಮಾದನು ಸೋಮಶೇಖರನೃಪಃ ಖ್ಯಾತೋನುಜನ್ಮಾ**
**ಶಿವಕ್ಷೋಣಿಪಾಲಮಣೇ ದ್ವಿತಯಃ ತತ್ಪಾಲಕಾಜ್ಞಾಮಮನ್।**
**ಸಾಮ್ರಾಜ್ಯಾನು ಸಮ್ರಾಜ್ಯನುಭನೈಕಸೂಚನಪರೈಃ ಅಂಗಸ್ಥಿತೈಃ**
**ಲಕ್ಷ್ಣೈಃ ಧನ್ಯಾಂ ಸತ್ಕುಲಶಾಲಿನಿ ಮುದವಹತ**
**ವ್ಯಾಮನನ್ಯಾದೃಶೀಂ ॥ ೫೦ ॥**

ಸೋಮಶೇಖರಾನಯಕ (೧೬೬೪–೧೬೭೨) ಬಹಳ ಖ್ಯಾತವಾದ ಅರಸನಾಗಿದ್ದು ಮುಂದಿನ ೫೧ನೇ ಶ್ಲೋಕದಲ್ಲಿ "ಸೋಮಶೇಖರ ಮಹೀಪಾಲ ಸಃ ಚೆನ್ನಾಂಬಿಕಾ ಮೂಕಾಂಬಾಂಶ ಸಮುದ್ಭನಾ ಸಹೃದಯ ಭಾರ್ಯಾನ್ಯಭಾಸಿಷ್ಟಿ ಸಾ" ಸೋಮಶೇಖರ ಮಹೀಪಾಲನ ಧರ್ಮಪತ್ನಿ ಚೆನ್ನಾಂಬಿಕೆ ಈಕೆ ಮೂಕಾಂಬಿಕೆ ಅಂಶಸಂಭೂತಳು ಎಂದು ಹೇಳಲಾಗಿದೆ. ಹಾನಗಲ್ಲ ಬಸವಾಧೀಶನ ಬಗ್ಗೆ ೫೩ನೇ ಶ್ಲೋಕದಲ್ಲಿ ಪ್ರಸ್ತಾಪವಾಗಿದೆ ಈತ ಬಹುದೊಡ್ಡ ವಿದ್ವಾಂಸ ಸ್ವಾಮಿ ಈತನ ಬಗ್ಗೆ ನಮಗೆ ಹೆಚ್ಚಿನ ಮಾಹಿತಿ ಇಲ್ಲ.

**ರಕ್ಷಂತಿ ಪ್ರತಿರಕ್ಷತಾಂ ಕ್ಷಿತಿಮಿಯಂ ಸಂಪಾದಯಂತೀ ।**
**ಸ್ವತೋ ರಾಜ್ಯಂ ಪ್ರಾಜ್ಯಮೌರ್ಯ ಶೌರ್ಯವಿಭವೈರು**
**ನೀಲಯಂತೀ ದ್ವಿಷಿಃ ॥**
**ಕೀರ್ತಿಂ ಸ್ಫೂರ್ತಿಮತೀಂ ದಿಶಾಸು ಸಂಪಾದಯಂತೀ**
**ಪ್ರಜಾಃ ಕುರ್ನಾಣಾಮುದಿತಾಸ್ಸುತೇನ ಸಹಸಾ ಭಾತಿ ಸ್ಮ**
**ಚೆನ್ನಾಂಬಿಕಾ ॥ ೫೪ ॥**

ಕೆಳದಿ ಚೆನ್ನಮ್ಮಾಜಿ (೧೬೭೨–೧೬೯೭) ಕೆಳದಿ ರಾಜ್ಯವನ್ನು ಆಳಿದ್ದು ಈ ಶ್ಲೋಕ ಸ್ಪಷ್ಟಪಡಿಸುತ್ತದೆ. ಪ್ರಜೆಗಳನ್ನು ಅತ್ಯಂತ ಅಭಿಮಾನದಿಂದ ಸಲಹಿದನ್ನು ಆಕೆ ಅತ್ಯಂತ ಶೌರ್ಯದಿಂದ ಪ್ರಜೆಗಳ ಕಾಪಾಡಿದನ್ನು ಈ ಶ್ಲೋಕ ಸ್ಪಷ್ಟಪಡಿಸುತ್ತದೆ.

**ತಸ್ಯಾಃ ಶ್ರೀ ಬಸವಪ್ಪನಾಯಕ ಇತಿ ಖ್ಯಾತೋ**
**ನೃಪಾಲೋತ್ತಮಃ**
**ಪಶ್ಚಾತ್ ತತ್ಪರಿಪಾಲಿತಂ ವಸುಮತೀಂ ನೀತ್ಯಾರರಕ್ಷ**
**ಸ್ವಯಂ॥**
**ಪ್ರತ್ಯುರ್ವೀಪತಿ ಗರ್ವಪರ್ವತಭಿವಾ ವಜ್ರಾಯಮಾಣೋಲ್ಲ**
**ಸದ್ದೋರ್ದಂಡೋದಿತ ಚಂಡವಿಕ್ರಮಯಣ ನಿತ್ಯಂ**
**ಪ್ರಜಾರಂಜಯನ್ ॥ ೫೫ ॥**

ಚೆನ್ನಮ್ಮಾಜಿಯ ದತ್ತಕಪುತ್ರ ಬಸವಪ್ಪನಾಯಕ (೧೬೯೭–೧೭೧೪) ಬಳ್ಳಿಯ ಶೌರ್‍ಯವಂತನು ಪ್ರತಿನಿತ್ಯ ಪ್ರಜೆಗಳಿಗೆ ಒಳ್ಳೆಯದನ್ನು ಬಯಸುವಂಥವನು.

**ಸುಧಾಮಧುರೆಯಾ ಗಿರಾ ಬಸವಭೂಮಿಪಾಲಾಗ್ರಣೀ**
**ಸುಭಾಷಿತ ಸುರವೃತಂ ಸ ಶಿವತತ್ವರತ್ನಾಕರಂ**
**ಸುಧಾಕರಮಚೇಕತೇರದನು ಸೂಕ್ತಿಶಬ್ದಾತ್ ಇಮಂ**
**ಕೃತಿ ತ್ರತಯಂ ಅಪ್ಯದಸ್ತರಸ ಸನ್ಮನತುಷ್ಟಯೇ ॥ ೫೮ ॥**

ಈ ಶ್ಲೋಕದಿಂದ ಬಸವಭೂಪಾಲ ಅಥವಾ ಹಿರಿಯ ಬಸವಪ್ಪನಾಯಕ ರಚಿಸಿದ ಸುಭಾಷಿತ ಸುರದ್ರುತಂ, ಶಿವತತ್ತರತ್ನಾಕರ, ಸೂಕ್ತಿಸುಧಾಕರ ಗ್ರಂಥಗಳನ್ನು ರಚಿಸಿದ್ದು ಈ ಶ್ಲೋಕದಿಂದ ಸ್ಪಷ್ಟವಾಗುತ್ತದೆ.

ಶಿವತತ್ವರತ್ನಾಕರ ಈ ಹಿಂದೆ ದೇವನಾಗರಿಲಿಪಿಯಲ್ಲಿ ಸಂಪಾದನೆಗೊಂಡು ಪ್ರಕಟವಾಗಿತ್ತು. ಚಿತ್ರದುರ್ಗ ಬೃಹನ್ ಮಠದಿಂದ ಕೃತಿಯ ಒಂದು ಭಾಗ ಕನ್ನಡ ಟೀಕಾ ಸಮೇತ ಮುದ್ರಣವಾಗಿದೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಕನ್ನಡ ಟೀಕಾ ಸಮೇತ ಎರಡು ಸಂಪುಟಗಳಲ್ಲಿ ಕೃತಿ ಪ್ರಕಟವಾಗಿದೆ. 'ಸುಭಾಷಿತ ಸುರದ್ರುಮಂ' ಹಸ್ತಪ್ರತಿ ಲಭ್ಯವಿದ್ದು

ಪ್ರಕಟವಾಗಿಲ್ಲ. 'ಸೂಕ್ತಿ ಸುಧಾಕರ' ಹಸ್ತಪ್ರತಿಯ ಬಗ್ಗೆ ವಿವರ ಲಭ್ಯವಿಲ್ಲ.

**ಶ್ರೀ ಸಿದ್ಧಾಂತಶಿಖಾಮಣಿ ನಾಮ್ನಾ ಗ್ರಂಥಸ್ಯ ನಿಶ್ಚಯನ್**
**ವ್ಯಾಖ್ಯಾಂ ।**
**ಶ್ರೀ ವೀರಶೈವವರ್ಯೋನಾನಂದಯತಿ ಸ್ಮ ಬಸವ**
**ಭೂಮೀಂದ್ರ ॥ ೫೯ ॥**

ಹಿರಿಯ ಬಸವಪ್ಪನಾಯಕ ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕ್ಕೆ ಟೀಕೆ ಬರೆದಿರುವುದನ್ನು ಮೇಲಿನ ಶ್ಲೋಕ ಸ್ಪಷ್ಟಪಡಿಸುತ್ತದೆ. ಇಲ್ಲಿಯವರೆಗೂ ಹಸ್ತಪ್ರತಿ ಬಗ್ಗೆ ಎಲ್ಲಿಯೂ ಮಾಹಿತಿ ಇಲ್ಲ. ಕಾಲಗರ್ಭದಲ್ಲಿ ಅಡಗಿರುವ ಈ ಕೃತಿಯನ್ನು ಯುವ ವಿದ್ವಾಂಸರು ಹುಡುಕಬೇಕು.

ಬಸವಪ್ಪನಾಯಕನಿಗೆ ಇಬ್ಬರು ಗಂಡುಮಕ್ಕಳು. ಮೊದಲನೆಯವನು ಸೋಮಶೇಖರ, ಎರಡನೆಯವನು ವೀರಭದ್ರ. ಈ ವಿಷಯವನ್ನು ೬೧ನೇ ಶ್ಲೋಕ ಸ್ಪಷ್ಟ ಮಾಡುತ್ತದೆ. ಬಸವನಾಯಕನ ನಂತರ ಸೋಮಶೇಖರ ನಾಯಕ ಅರ್ಥಾತ್ ಕಿರಿಯರ ಸೋಮಶೇಖರನಾಯಕ (೧೭೧೫-೧೭೪೦) ರಾಜ್ಯವಾಳಿದ್ದನ್ನು ೬೨ ಶ್ಲೋಕ ಸ್ಪಷ್ಟವಾಗಿ ತಿಳಿಸುತ್ತದೆ.

**ಶ್ರೀ ವೀರಭದ್ರ ವಸುಧಾಪತಿಸ್ತದಾನೀಂ ತಸ್ಯಾನುಜಃ**
**ಪರಶಿವಾರ್ಚವಸಕ್ತಚಿತ್ತಃ ।**
**ಶೈವಾಗಮಶ್ರವಣಭಾವಿತ ತತ್ತ್ವ ಬೋಧಪ್ರೋದ್ಯತ್ಸಯ**
**ಖಾನುಭವ ಭೂಮಿರಭೂದಜಸ್ತಂ ॥ ೬೫ ॥**

ಹಿರಿಯ ಬಸವಪ್ಪನಾಯಕನ ಕರಿಯ ಮಗ ಇಷ್ಟ ಲಿಂಗಾರ್ಚನದಲ್ಲಿ ಬಹಳ ಭಕ್ತಿಯುಳ್ಳವನು. ಶೈವಾಗಮ ಅರ್ಥಾತ್ ವೀರಶೈವಾಗಮದ ಶ್ರವಣದಲ್ಲಿ ತತ್ತ್ವಬೋಧನೆ ಕೇಳುವುದರಲ್ಲಿ ಬಹಳ ಅಸಕ್ತಿ ಉಳ್ಳವನು. ಶ್ರೀ ಗುರು ಲಿಂಗಜಂಗಮ ಸೇವೆಯಲ್ಲಿ ಬಹಳ ಆಸಕ್ತಿವುಳ್ಳ ವೀರಭದ್ರ ರಾಜನ ಧರ್ಮಪತ್ನಿ ಮಲ್ಲಾಂಬಿಕಾ ಎಂದು ೬೪ನೇ ಶ್ಲೋಕ ಸ್ಪಷ್ಟಪಡಿಸುತ್ತದೆ.

**ಪೂರ್ವಂ ವಿಶೃತ ಮಾದಿರಾಜ ಮಹತಃ ಶ್ರೀಮಾಲಾಂ**
**ಬೋದಲಾತ್**
**ಪ್ರವ್ಯಕ್ತೋ ಬಸವೇಶ್ವರೋದ್ಯಬಸವಕ್ಷ್ಮಾಪಾಖ್ಯಯಾವರ್ಧತೆ।**
**ಪ್ರಾದುರ್ಭೂಯ ಸ ವೀರಭದ್ರನೃಪತೇ ಮಲ್ಲಾಂಬಿಕಾಯಾಂ।**
**ಕ್ಷಿತಾವುದ್ಧರ್ತುಂ ಪುನರೇವ ಧರ್ಮನಿಚಮಾನ್ ಶ್ರೀ**
**ವೀರಶೈವೋಚತಾನ್ ॥ ೬೬ ॥**

ಈ ಹಿಂದೆ ಮಾದಿರಾಜ – ಮಾದಲಾಂಬಿಕೆಯರಿಗೆ ಬಸವೇಶ್ವರ ಜನಿಸಿದಂತೆ ವೀರಭದ್ರ – ಮಲ್ಲಾಂಬಿಕೆಯವರಿಗೆ ಜನಿಸಿದ ಬಸಪ್ಪನಾಯಕ ಇವನನ್ನೆ ಇತಿಹಾಸಗಾರರು ಕಿರಿಯ ಬಸಪ್ಪನಾಯಕ (೧೭೩೯-೧೭೫೪) ಗುರುತಿಸಿದ್ದಾರೆ.

**ಕಾಲೇ ಗತೇ ಕಿಯತಿ ಸಂತತಿ ಶೈವಯೋಗನಿಷ್ಠಾಪರೋ**
**ಮಹತಿ ಡಂಬಳನಾಮ್ನಿ ದೇಶೆ ।**
**ಯೋಸ್ಯಾಮ್ಯಹಂ ಮಹಿತನಿರ್ಮಲ ಲಿಂಗರೂಪಂ**
**ಸಿದ್ಧೇಶ್ವರಾಕೃತಿಭೃತಿಃ ನನು ಮಾಂ ನಂಮೇತಿ ॥ ೬೭ ॥**

ಡಂಬಳ ನಗರದಲ್ಲಿ ಲಿಂಗರೂಪದಲ್ಲಿ ನೆಲೆಸಿರುವ ಸಿದ್ಧೇಶ್ವರನ ಕೃಪೆಯಿಂದ ಕೆಳದಿ ಅರಸರ ಅಸ್ಥಾನಕ್ಕೆ ಮರಿತೋಂಟದಾರ್ಯನನ್ನು ಕಳುಹಿಸಲಾಯಿತು. ಈ ವಿವರವನ್ನು ೭೪ನೇ ಶ್ಲೋಕ ಸ್ಪಷ್ಟವಾಗಿ ತಿಳಿಸುತ್ತದೆ. "ವಿಖ್ಯಾತೋ ಮರಿತೋಂಟದಾರ್ಯಯತಿಃ ಇತಿ ಏಕದೃಶಾಭಿಖ್ಯಯಾ ಸಜ್ಞತ್ಸ್ಯ ಬಸವಕ್ಷ್ಮಾಪತಿಮಣಿ ಹರ್ಷಪ್ರತಕರ್ಷಿಂ ಶ್ರಿತಃ ಎನ್ನಲಾಗಿದೆ. ಕೆಳದಿ ಆಸ್ಥಾನಕ್ಕೆ ಬಂದ ಮರಿತೋಂಟದಾರ್ಯರು ವೀರಶೈವಾನಂದ ಚಂದ್ರಿಕೆಯನ್ನು ರಚಿಸಿದ್ದು ಅಂತ್ಯದ ಪ್ರಶಸ್ತಿ ವಾಕ್ಯ ಸ್ಪಷ್ಟವಾಗಿ ಎಲ್ಲಾ ವಿವರವನ್ನು ತಿಳಿಸುತ್ತದೆ.

**ಇತಿ ಶ್ರೀಮದವಾದಿ ನಿರಂಜನ ಜಂಗಮಾಪರಾವತಾರ**
**ತೋಟದ ಸಿದ್ಧೇಶ್ವರ ಪ್ರಸಾದಾಸಾವಿತ ಶಾಂಭವಾಗ-**
**ಮೂಲಬೋಧಿಮರ್ಥ ಜನಿತ ನಿರಕ್ತ**
**ಏಕೋತ್ತರಶತಸ್ಥಲಭೇದ ಭಿನ್ನ ಷಟ್ಸ್ಥಲ-**
**ತತ್ತ್ವಬೋಧ ಸುದಾಸ್ವಾದಾನಂದ**
**ಸಂದೋಹ ಪ್ರದಾಯತಾ-**
**ಚಾರ್ಯವರ್ಷ ಮರಿ**
**ತೋಂಟದಾರ್ಯ ವಿರಚಿತ**
**ಎಡವ ಮುರಾರಿ ಕೋಟೆಕೋಲಾಹಲೈಕಾಂಗಿ ವೀರ**
**ವೈರಿಸಪ್ತಾಂಗಹರಣ**
**ಪಶ್ಚಿಮಸಮುದ್ರಾಧೀಶ್ವರ ವಿಶುದ್ಧ ವೈದಿಕಾದ್ವೈತ ಸಿದ್ಧಾಂತ**
**ಪ್ರತಿಷ್ಠಾಪನಾಚಾರ್ಯ ಕೆಳದೀ ಸದಾಶಿವರಾಯನಾಯಕ**
**ವಂಶದುಗ್ಧಾರ್ಣವ ಪೂರ್ಣಚಂದ್ರ ವೀರಭದ್ರ ದರಣೇಂದ್ರ**
**ಧರ್ಮಪತ್ನಿ ಮಲ್ಲಾಂಬಾಹೃದಯನಂದನ ಬಸವ**
**ಸುಧಾಸಂಕ್ರದನೋಪದೇಶ ವೀರಶೈವಾನಾನಂದ**
**ಚಂದ್ರಿಕಾಯಾಂ ಕ್ರಿಯಾಕಾಂಡೇ**
**ಭೂಪಾಲ ವಂಶಾವಳಿ ಪ್ರಬಂಧ**
**ಸಂಗತಿ ನಿರೂಪಣ ನಾಮ**
**ಪ್ರಥಮ ಪ್ರಕರಣಂ**

ಮೇಲಿನ ಭೂಪಾಲ ವಂಶಾವಳಿ ಅಧ್ಯಯನದಿಂದ ಮರಿತೋಂಟದಾರ್ಯ ವೀರಶೈವಾನಂದ ಚಂದ್ರಿಕೆ ರಚನೆಯಾದದ್ದು ಕಿರಿಯ ಬಸವಪ್ಪನಾಯಕ ಅಥವಾ ಬೂದಿ ಬಸವನಾಯಕನ ಕಾಲದಲ್ಲಿ (೧೭೩೯-೧೭೫೪). ಮೈಸೂರು ಹೊಸಮಠದ ಬಸವಲಿಂಗಸ್ವಾಮಿಗಳ ಸಂಪಾದನೆ ಪ್ರಕಟಿಸಿದ ಷಟ್ಸ್ಥಲ ಕೌಮುದಿಯು (೧೯೨೭) ರ ಗ್ರಂಥದ ಪ್ರಸ್ತಾವನೆಯಲ್ಲಿ ಬಸವಲಿಂಗಸ್ವಾಮಿಗಳು ಪರಿಶೀಲಿಸಿದ

'ವೀರಶೈವಾ ನಂದ ಚಂದ್ರಿಕೆ' ಗ್ರಂಥದಲ್ಲಿ ಉಲ್ಲೇಖವಾದ ಕಾಲ ಶಾಲೀವಾಹನ ೧೬೬೬ರಲ್ಲಿ ಇದು ಇಂಗ್ಲೀಷ್ ತೇದಿ ಕ್ರಿ.ಶ. ೧೭೪೪ ಸರಿಹೋಗುತ್ತದೆ.

ಈ ಹಿಂದೆ ವೀರಶೈವಾನಂದ ಚಂದ್ರಿಕೆ ವಾದಕಾಂಡ ದೇವನಾಗರಿ ಲಿಪಿಯಲ್ಲಿ ೧೯೩೬ರಲ್ಲಿ ಮುದ್ರಣವಾಗಿದ್ದು ಈ ಕೃತಿ ಸಂಪಾದಕರು ಬೆಳಗಾವಿಯ ಚಂದ್ರಶೇಖರ ಮಠದ ನ್ಯಾಯಾಚಾರ್ಯ ದರ್ಶನ ವಿಶಾರದ ಶ್ರೀ ಗುರುಲಿಂಗದೇವ; ಈ ಕೃತಿಯನ್ನು ಪ್ರಕಟಿಸಲು ಸಹಕರಿಸಿದವರು ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರು ಗಂಗಾಧರ ಸಂಸ್ಕೃತ ಕಾಲೇಜಿನ ಅಧ್ಯಾಪಕರಾದ ಶ್ರೀ ಸೋಮಶೇಖರ ಶಾಸ್ತ್ರಿಗಳು. ಕೃತಿ ಮುದ್ರಣವಾಗಿದ್ದು ಹಿತಚಿಂತಕ ಪ್ರೆಸ್ ರಾಮಘಾಟ್ ಬನಾರಸ್‌ನಲ್ಲಿ ಪ್ರಸ್ತಾವನೆಯಲ್ಲಿ ಅರ್ಧ ಪುಟದಷ್ಟು ಕನ್ನಡ ಲಿಪಿಯನ್ನು ಬಳಸಲಾಗಿದೆ. ಇದು ಅಂದಿನ ದಿನಕ್ಕೆ ನಿಜವಾದ ಸಾಹಸವೆ.

ವಾದಕಾಂಡ ಕನ್ನಡ ಟೀಕೆ ಸಮೇತ ಮೈಸೂರು ನಗರದ ಅಸ್ಥಾನ ಮಹಾವಿದ್ವಾ ವೇ॥ ಬ್ರಂ॥ ಶ್ರೀ ಸಿರಸಿ ಗುರುಶಾಂತಶಾಸ್ತ್ರಿಗಳಿಂದ ಸಂಪಾದನೆಗೊಂಡು ಬೆಂಗಳೂರು ನಗರದ ಬೇಲಿಮಠದ ವೆ॥ ಬ್ರ॥ ನಿ॥ ಪ್ರ॥ ಶ್ರೀ ಚರಮೂರ್ತಿ ಸಿದ್ಧಲಿಂಗಸ್ವಾಮಿಗಳಿಂದ ೧೯೬೦ರಲ್ಲಿ ಪ್ರಕಟವಾಗಿದೆ. ಕ್ರಿಯಾಕಾಂಡ, ವಾದಕಾಂಡ, ಕಥಾಕಾಂಡಗಳಿಂದ ಕೂಡಿದ ಈ ಗ್ರಂಥದ ಇನ್ನು ಎರಡು ಕಾಂಡಗಳು ಸಂಪಾದನೆಗೊಂಡು ಪ್ರಕಟವಾಗಬೇಕಿದೆ. ಶಿರಸಿ ಗುರುಶಾಂತ ಶಾಸ್ತ್ರಿಗಳು ಕ್ರಿಯಾ ಕಾಂಡವನ್ನು ಕನ್ನಡ ಗದ್ಯಾನುವಾದ ಸಮೇತ ಸಿದ್ಧಪಡಿಸಿದ್ದು ವಾದಕಾಂಡ ಹಿಂಬದಿಯ ಪುಟದಿಂದ ತಿಳಿದುಬರುತ್ತದೆ. ಆದರೆ ಅವರು ಸಿದ್ಧ ಮಾಡಿದ ಹಸ್ತಪ್ರತಿ ಬಗ್ಗೆಯೂ ಮಾಹಿತಿ ಇಲ್ಲ.

(ಈ ಲೇಖನ ಬರೆಯಲು ಸಂಸ್ಕೃತ ಶ್ಲೋಕಗಳನ್ನು ತಿದ್ದಿಕೊಟ್ಟ ಶ್ರೀ ಟಿ.ಕೆ. ನಂಜುಂಡಪ್ಪನವರಿಗೆ ಧನ್ಯವಾದಗಳು.)

ಶ್ರೀಮತಿ ಹನುಮಂತಮ್ಮ ಎಂ.*

# ವಿ.ಆರ್. ಹನುಮಂತಯ್ಯನವರ 'ವಿಜಯನಗರ ಸಾಮ್ರಾಜ್ಯ ಚರಿತ್ರೆ'

ದಕ್ಷಿಣ ಭಾರತದ ಪ್ರಮುಖ ರಾಜಮನೆತನವಾದ ವಿಜಯನಗರ ಸಾಮ್ರಾಜ್ಯದ ಇತಿಹಾಸ ಮತ್ತು ಸಂಸ್ಕೃತಿ ಕುರಿತು ಕನ್ನಡದಲ್ಲಿ ಅನೇಕ ವಿದ್ವಾಂಸರು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ವಿ.ಆರ್. ಹನುಮಂತಯ್ಯನವರ (ಕ್ರಿ.ಶ. ೧೮೭೬-೧೯೭೧) ವಿಜಯನಗರ ಸಾಮ್ರಾಜ್ಯ ಚರಿತ್ರೆಯೂ ಒಂದು.

**ಜೀವನ :** ಬೆಂಗಳೂರು ಉತ್ತರ ತಾಲೂಕು ಹೆಸರಘಟ್ಟ ಹೋಬಳಿಯ ವಿಶ್ವನಾಥಪುರ ಇವರ ಮೂಲ ಸ್ಥಳ. ತಂದೆ ಬೀದಿಮನೆ ರಂಗಣ್ಣ ತಾಯಿ ತಿಮ್ಮಕ್ಕ. ಹುಟ್ಟಿದ್ದು ೧೮೭೬ರಲ್ಲಿ. ಶಾಲೆ ಕಲಿತಿದ್ದು ಬೆಂಗಳೂರಿನ ಕಾಟನ್‌ಪೇಟೆಯ ಪ್ರಾಥಮಿಕ ಶಾಲೆಯಲ್ಲಿ. ಇವರು ಮೆಟ್ರಿಕ್ಯೂಲೇಷನ್‌ವರೆಗೆ ಕಲಿತು ಸುಮಾರು ಎರಡು ದಶಕಗಳ ಕಾಲ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸುವುದರ ಜೊತೆಗೆ ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಸಂಶೋಧನಾ ಕ್ಷೇತ್ರದತ್ತ ಆಸಕ್ತಿಯನ್ನು ಹೊಂದಿದ್ದರು. ಕನ್ನಡ, ಇಂಗ್ಲಿಷ್, ಹಿಂದಿ, ತೆಲುಗು, ತಮಿಳು ಹಾಗೂ ಮರಾಠಿ ಹೀಗೆ ಬಹು ಭಾಷೆಗಳನ್ನು ಬಲ್ಲವರಾಗಿದ್ದರು. ಕನ್ನಡದ ಜೊತೆಗೆ ಈ ಎಲ್ಲಾ ಭಾಷೆಗಳನ್ನು ಕಲಿತು ಪಾಂಡಿತ್ಯವನ್ನು ಪಡೆದುಕೊಂಡಿದ್ದರು. ಇವರು ಮೂಲತಃ ಹಂಪಿಯ ಭಾಗದವರೇ ಎಂದು ವಂಶಜರು ಹೇಳುತ್ತಾರೆ. ಇವರ ಪೂರ್ವಿಕರು ಯಾವುದೋ ಸಂದರ್ಭದಲ್ಲಿ ಬೆಂಗಳೂರಿನತ್ತ ವಲಸೆ ಹೋಗಿರಬಹುದು ಎಂಬುದು ನನ್ನ ಅಭಿಪ್ರಾಯ. *(ಹೆಚ್ಚಿನ ಮಾಹಿತಿಗಾಗಿ ಇತಿಹಾಸ ಮತ್ತು ಸಂಸ್ಕೃತಿ ಸಂಶೋಧಕ ವಿ.ಆರ್. ಹನುಮಂತಯ್ಯ, ಡಾ. ಎಫ್.ಟಿ. ಹಳ್ಳಿಕೇರಿ ಅವರ ಲೇಖನವನ್ನು ನೋಡಿರಿ).*

**ಸಾಹಿತ್ಯ ಕೃತಿಗಳು**

ಕನ್ನಡ ಸಾಹಿತ್ಯ, ಸಂಸ್ಕೃತಿ, ಸಮಾಜ ಚರಿತ್ರೆಗೆ ಸಂಬಂಧಿಸಿದಂತೆ ಹನುಮಂತಯ್ಯನವರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವುಗಳಾವುವೆಂದರೆ,

*೧. ಕುರುಬರ ಚರಿತ್ರೆ - ೧೯೨೬.*
*೨. ಭಾರತದೇಶದ ಕುರುಬರ ಚರಿತ್ರೆ - ೧೯೫೮.*
*೩. ವಿಜಯನಗರ ಸಾಮ್ರಾಜ್ಯ ಚರಿತ್ರೆ - ೧೯೫೨.*
*೪. ಸಂಕ್ಷಿಪ್ತ ವಿಜಯನಗರ ಸಾಮ್ರಾಜ್ಯ ಚರಿತ್ರೆ.*
*೫. ಭೋಜರಾಜ ಕಾಳಿದಾಸ ಚರಿತ್ರೆ - ೧೯೬೧.*
*೬. ಆನೆಗೊಂದಿ ಮಹಾಸಂಸ್ಥಾನ ಚರಿತ್ರೆ.*

**ಲೇಖನಗಳು**

*೧. ಒಬ್ಬ ಕುರುಬರ (ಗೊಲ್ಲರ) ಗುರುವಿನ ಮಹತ್ವದ ಸನ್ನದು (ಮೂಲ) ಹ.ಎಂ. ಫತುಲ್ಲಖಾನರು (ಅನು) ವಿ.ಆರ್. ಹನುಮಂತಯ್ಯ.*
*೨. ಶ್ರೀ ಕನಕದಾಸರು ಕುರುಬರಲ್ಲವೇ ?*
*೩. ಕುರುಬರು ಏಕೆ ಲಿಂಗವನ್ನು ಕಟ್ಟಿಕೊಳ್ಳಬೇಕು ?*

**'ವಿಜಯನಗರ ಸಾಮ್ರಾಜ್ಯ ಚರಿತ್ರೆ' ಕೃತಿ ಅವಲೋಕನ**

ವಿಜಯನಗರ ಸ್ಥಾಪನೆ ದಕ್ಷಿಣ ಭಾರತದ ಇತಿಹಾಸ ದಲ್ಲೇ ಒಂದು ಅದ್ವಿತೀಯ ಘಟನೆಯಾಗಿದೆ. ಉತ್ತರ ಭಾರತ ದಲ್ಲಿ ಪ್ರಾಬಲ್ಯ ಪಡೆದಿದ್ದಂತೆ ಮುಸ್ಲಿಮ್ ದೊರೆಗಳು ದಕ್ಷಿಣ ಭಾರತವನ್ನು ವಶಪಡಿಸಿಕೊಳ್ಳಲು ಮುಂದಾದರು. ಮಹಮ್ಮದ್ ಬಿನ್ ತುಘಲಕನ ದಾಳಿ ಅಧಿಕಗೊಂಡಿತು. ದಕ್ಷಿಣ ದೇಶವು ಮುಸ್ಲಿಂರ ಕೈಯಲ್ಲಿ ವಶವಾಗುವಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಅವರ ಆಡಳಿತ ಪ್ರಭಾವವನ್ನು ತಗ್ಗಿಸಲು ಹಾಗೂ ಹಿಂದೂ ಮತ್ತು ಸಂಸ್ಕೃತಿಯನ್ನು ರಕ್ಷಿಸಲು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಯಿತು. ಈ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ಸಂಗಮನ ಐವರು ಮಕ್ಕಳಾದ ಹರಿಹರ, ಬುಕ್ಕ, ಕಂಪಣ್ಣ, ಮಾರಪ್ಪ ಮತ್ತು ಮುದ್ದಣ್ಣನಿಗೆ ಸಲ್ಲುತ್ತದೆ. ಇವರಲ್ಲಿ ಹರಿಹರ ಮತ್ತು ಬುಕ್ಕ ವಿಜಯನಗರ ರಾಜ್ಯ ಸ್ಥಾಪನೆಯಲ್ಲಿ ಹೆಚ್ಚಿನ ಪಾತ್ರವಹಿಸಿದರು. ಕ್ರಿ.ಶ. ೧೩೩೬ರಲ್ಲಿ ಇವರು ಈ ನೂತನ ರಾಜ್ಯವನ್ನು ಸ್ಥಾಪಿಸಿದರು.

ವಿಜಯನಗರ ಸಾಮ್ರಾಜ್ಯವನ್ನು ನಾಲ್ಕು ವಂಶಗಳಿಗೆ ಸೇರಿದ ಅರಸರು ಆಳಿದರು. ಸಂಗಮ ವಂಶದ ಅರಸರು ಕ್ರಿ.ಶ. ೧೩೩೬ ರಿಂದ ೧೪೮೫ ರವರೆಗೆ, ಸಾಳುವ ವಂಶದ ಅರಸರು ಕ್ರಿ.ಶ. ೧೪೮೫ ರಿಂದ ಕ್ರಿ.ಶ. ೧೫೦೫ ರವರೆಗೆ,

* W/o ಎಂ.ಎಸ್. ರುದ್ರಯ್ಯ, C/o ಬಸಮ್ಮ ಮುಗಲಿ, ಮೂರನೆಯ ವಾರ್ಡ್, ಮರಿಯಮ್ಮನಹಳ್ಳಿ, ಹೊಸಪೇಟೆ.

ತುಳುವ ವಂಶದ ಅರಸರು ಕ್ರಿ.ಶ. ೧೫೦೫ ರಿಂದ ಕ್ರಿ.ಶ. ೧೫೭೦ ರವರೆಗೆ, ಅರವೀಡು ವಂಶದ ಅರಸರು ಕ್ರಿ.ಶ. ೧೫೭೦ ರಿಂದ ಕ್ರಿ.ಶ. ೧೬೪೬ ರವರೆಗೆ ಆಳಿದರು ಎಂದು ತಿಳಿಸುವ ಹನುಮಂತಯ್ಯನವರು ಇದುವರೆಗೆ ವಿಜಯನಗರ ಸಾಮ್ರಾಜ್ಯವನ್ನು ಆಳಿದ ಅರಸರ ಕಾಲನಿರ್ಣಯದಲ್ಲಿ ವಿದ್ವಾಂಸರು ವ್ಯಕ್ತಪಡಿಸಿದ ಅಭಿಪ್ರಾಯವನ್ನೇ ಇಲ್ಲಿ ದಾಖಲಿಸಿದ್ದಾರೆ.

ಕ್ರಿ.ಶ. ೧೩೩೬ ರಿಂದ ೧೬೪೬ ರವರೆಗೆ ಮೆರೆದ ವಿಜಯನಗರ ಸಾಮ್ರಾಜ್ಯವು ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ರಕ್ಷಿಸಲೆಂದೇ ಸ್ಥಾಪಿಸಲ್ಪಟ್ಟಿತು. ಮೂರು ಶತಮಾನಗಳಿಗೂ ಹೆಚ್ಚು ಕಾಲ ಆಳಿದ ವಿಜಯನಗರ ಸಾಮ್ರಾಜ್ಯದ ಅರಸರು ಹಿಂದೂ ಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸಿದುದು ಮಾತ್ರವಲ್ಲದೆ ಅದನ್ನು ಚೆನ್ನಾಗಿ ಬೆಳೆಸಿದರು.

ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದ ಸಂಸ್ಕೃತಿಗೆ ನೀಡಿರುವ ಕೊಡುಗೆ ಅಪಾರವಾಗಿದೆ. ಈ ಸಾಮ್ರಾಜ್ಯವು ಆಡಳಿತ ವ್ಯವಸ್ಥೆ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಕ್ಷೇತ್ರಗಳಿಗೆ ತನ್ನದೇ ಆದ ಕೊಡುಗೆಗಳನ್ನು ನೀಡಿತು. ಅನೇಕ ರಾಜಕೀಯ ಒತ್ತಡದಲ್ಲಿ ಉದಯಿಸಿದ ವಿಜಯನಗರ ಸಾಮ್ರಾಜ್ಯವು ತನ್ನದೇ ಆದಂತಹ ತತ್ವ ಹಾಗೂ ಪರಾಕ್ರಮದಿಂದಾಗಿ ಆಳ್ವಿಕೆ ಮಾಡಿ ಬೃಹತ್ ಸಾಮ್ರಾಜ್ಯವೆನಿಸಿಕೊಂಡು ಭಾರತದ ಚರಿತ್ರೆಯಲ್ಲಿಯೇ ಅಲ್ಲದೇ ಪ್ರಪಂಚದ ಚರಿತ್ರೆಯ ಪುಟಗಳಲ್ಲಿ ತನ್ನ ಛಾಪನ್ನು ಮೂಡಿಸಿತು. ಇಂತಹ ಬೃಹತ್ ಸಾಮ್ರಾಜ್ಯವನ್ನು ಕ್ರಮವಾಗಿ ನಾಲ್ಕು ವಂಶದವರು ಆಳ್ವಿಕೆ ಮಾಡಿದರೆಂದು ಆಧಾರಗಳಿಂದ ತಿಳಿಯಬಹುದು.

**ಚರಿತ್ರೆ ಕೃತಿಯ ಸ್ವರೂಪ :**

೧೯೫೭ರಲ್ಲಿ ಪ್ರಕಟಗೊಂಡ ವಿ.ಆರ್. ಹನುಮಂತಯ್ಯನವರ ವಿಜಯನಗರ ಸಾಮ್ರಾಜ್ಯ ಚರಿತ್ರೆ ಕೃತಿಯು ಸುಮಾರು ಇಪ್ಪತ್ತೈದು ವರ್ಷಗಳಿಂದ ತಾವು ಸಂಗ್ರಹಿಸಿದ ಅನೇಕ ಆಧಾರಗಳ ಸಹಾಯದಿಂದ ಪ್ರಕೃತ ಗ್ರಂಥವನ್ನು ತಿಳಿಗನ್ನಡದಲ್ಲಿ ಬರೆದು ಕನ್ನಡ ಲೋಕಕ್ಕೆ ಉಪಕಾರ ಮಾಡಿದ್ದಾರೆ. ಅಲ್ಲದೆ ವಿಜಯನಗರ ಸಾಮ್ರಾಜ್ಯದ ಗತವೈಭವವನ್ನು ನೆನಪಿಸಿ ಕೊಟ್ಟಿದ್ದಾರೆ. ಈ ಕೃತಿಯು ೧೧೪ ಪುಟಗಳನ್ನೊಳಗೊಂಡಿದೆ. ಇಂದು ನಮ್ಮಲ್ಲಿ ಕಂಡುಬರುವ ಗೊಲ್ಲರು, ಕುರುಬರು, ದನಗಾರರು, ಹಾಲುಮತಸ್ಥರಾಗಿದ್ದು ಅವರು ಯಯಾತಿ ಎಂಬ ಚಂದ್ರವಂಶದ ಅರಸನ ಯದುಪೂರು ಎಂಬ ಮೂಲ ಪುರುಷರಿಗೆ ಸೇರಿದ್ದೆಂಬುದಕ್ಕೆ ಪೌರಾಣಿಕ ಆಧಾರಗಳು ದೊರೆಯುತ್ತವೆ. ಆರ್ಯರು ಮೊದಲಿಗೆ ಪಶುಪಾಲಕರಾಗಿದ್ದರೆಂಬುದು ಸುಪ್ರಸಿದ್ಧವಾಗಿಯೆ ಇರುತ್ತದೆ. ಅಷ್ಟೇ ಏಕೆ ಭಾರತೀಯ ಆರಾಧ್ಯ ಮೂರ್ತಿಗಳಾದ ಶ್ರೀಕೃಷ್ಣನು, ಗೋಪಾಲಕನು, ಸಾಕ್ಷಾತ್ ಪರಮೇಶ್ವರನು ಪಶುಪತಿ ಎಂಬ ಪವಿತ್ರ ಹೆಸರುಗಳಿಂದ ಭೂಷಿತರಾಗಿದ್ದಾರೆ. ಕ್ರಿ.ಶ. ಐದನೆಯ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ಸ್ಥಾಪಿತವಾಗಿದ್ದ ಪಲ್ಲವ, ನೊಳಂಬ, ಕುರುಬ, ಕದಂಬ, ಹೊಯ್ಸಳ ಎಂಬ ಹೆಸರುಗಳಿಂದ ವಿರಾಜಿಸಿದವರು. ಪುರಾತನ ಕುರುವಂಶ ಸಂಬಂಧವುಳ್ಳವರೆಂದು ತಿಳಿದು ಬರುತ್ತದೆ. ಆದ್ದರಿಂದ ವಿಜಯನಗರ ಅರಸರ ಮೂಲ ಪುರುಷರು ಕ್ಷೀರಸಾಗರ ಸಂಭವ, ಕ್ಷೀರವಂಶ ಮುಂತಾದ ವಿಶೇಷಣಗಳಿಂದ ಹಾಲುಮತದವರೆಂದು ಸಮರ್ಥಿಸಿರುವುದು ಮನನೀಯವಾಗಿರುತ್ತದೆ ಎಂದು ಎಂ.ಜಿ. ನಂಜುಂಡರಾಧ್ಯರು ಈ ಕೃತಿಯ ಮುನ್ನುಡಿಯಲ್ಲಿ ಹೇಳಿದ್ದಾರೆ.

ಹನುಮಂತಯ್ಯನವರು ಈ ಕೃತಿಯಲ್ಲಿ ಹಕ್ಕಬುಕ್ಕರು ಕುರುಬ ಸಮುದಾಯಕ್ಕೆ ಸೇರಿದವರು ಎಂಬುದಕ್ಕೆ ಇರುವ ಆಧಾರ ಗ್ರಂಥಗಳ ವಿವರ, ಈ ಸಾಮ್ರಾಜ್ಯ ಸ್ಥಾಪನೆಗೆ ಮೊದಲಿದ್ದ ಭರತಖಂಡ ಭಯಂಕರ ಪರಿಸ್ಥಿತಿ, ಚರಿತ್ರಾರಂಭ, ಕೃಷ್ಣದೇವರಾಯನ ಕಾಲದಲ್ಲಿದ್ದ ಅಷ್ಟದಿಗ್ಗಜಗಳೆಂಬ ಕವಿಗಳು ಮತ್ತು ಅವರ ಕೃತಿಗಳು, ವಿಜಯನಗರದ ದಸರಾ ಮಹೋತ್ಸವದ ಸಂಕ್ಷಿಪ್ತ ವರ್ಣನೆ, ಅಮಾತ್ಯ ಅಪ್ಪಾಜಿಯವರ ಅಲ್ಪ ಪರಿಚಯ, ರಾಮರಾಯನ ಬಖೈರು ಅಥವಾ ತಾಳಿಕೋಟೆ ಯುದ್ಧ ವಿಜಯನಗರ ಪಟ್ಟಣದ ಸಂಕ್ಷಿಪ್ತ ವರ್ಣನೆ ಎಂಬ ಅಧ್ಯಾಯಗಳಲ್ಲಿ ವಿಜಯನಗರ ಅರಸು ಮನೆತನದ ಚರಿತ್ರೆಯನ್ನು ಅಚ್ಚುಕಟ್ಟಾಗಿ ಪರಿಚಯಿಸುವ ಪ್ರಯತ್ನ ಇಲ್ಲಿದೆ. ಮತ್ತು ವಿಷಯ ಸ್ಪಷ್ಟತೆಗಾಗಿ ಅಲ್ಲಲ್ಲಿ ಛಾಯಾಚಿತ್ರಗಳನ್ನು ಜೋಡಿಸಲಾಗಿದೆ.

* ವಿಜಯನಗರ ಅರಸರು ಕುರುಬರೆಂಬ ಅಭಿಪ್ರಾಯವಿದೆ. ವಿಜಯನಗರ ಕಾಲದ ಪ್ರವಾಸಿಗಳಾದ ಇಬ್ನಬತೂತ, ನ್ಯೂನಿಜ ಮೊದಲಾದವರ ಅಭಿಪ್ರಾಯದ ಪ್ರಕಾರ ಸಂಗಮ ವಂಶಸ್ಥರು ಕುರುಬರು. ಸಂಗಮ ಎನ್ನುವುದು ಕುರುಬರಲ್ಲಿರುವ ಒಂದು ಬೆಡಗು. ಇದರಿಂದಾಗಿ ಸಂಗಮನ ವಂಶಸ್ಥರು ಕುರುಬರು ಎಂಬ ಅಭಿಪ್ರಾಯವಿದೆ. ಹಕ್ಕ-ಬುಕ್ಕರೆಂಬ ಸಹೋದರರು ಮೊದಲಿಗೆ ಓರಂಗಲ್ ಅರಸರ ಬಳಿ ಭಂಡಾರಿಗಳಾಗಿ ಕೆಲಸ ಮಾಡುತ್ತಿದ್ದರು. ಮಹಮ್ಮದ್ ಬೀನ್ ತುಘಲಕನ್ ದಾಳಿಗೆ ಓರಂಗಲ್ ತುತ್ತಾದ್ದರಿಂದ ಸಹೋದರರು ಆನೆಗೊಂದಿ ಅರಸರ ಆಸ್ಥಾನದಲ್ಲಿ ಮಂತ್ರಿ ಹಾಗೂ ಭಂಡಾರಿಗಳಾಗಿ ಸೇವೆ ಸಲ್ಲಿಸತೊಡಗಿದರು. ಕ್ರಿ.ಶ. ೧೩೩೪ರಲ್ಲಿ ಸುಲ್ತಾನ್ ಆನೆಗೊಂದಿಯನ್ನು ವಶಪಡಿಸಿ

ಕೊಂಡನು. ಹಕ್ಕ-ಬುಕ್ಕರು ಸುಲ್ತಾನರ ವಶವಾದರು. ಕಾಲಾನಂತರ ಸ್ಥಳೀಯ ಜನರ ಅಸಹಕಾರದಿಂದಾಗಿ ಸರದಾರನಿಗೆ ಆಡಳಿತ ಮಾಡಲಾಗಲಿಲ್ಲ. ಹೀಗಾಗಿ ಸುಲ್ತಾನ ಹಕ್ಕ-ಬುಕ್ಕರಿಗೆ ಈ ಪ್ರಾಂತ್ಯದ ರಾಜ್ಯಭಾರವನ್ನು ಬಿಟ್ಟುಕೊಟ್ಟನು. ನಂತರ ಸಹೋದರರು ಸ್ವತಂತ್ರವಾಗಿ ಸಾಮ್ರಾಜ್ಯ ನಿರ್ಮಿಸಿದರೆಂದು ರಾಬರ್ಟ್ ಸಿವೆಲ್‌ರು ತಮ್ಮ 'ಮರೆತು ಹೋದ ಸಾಮ್ರಾಜ್ಯ ಕೃತಿ'ಯಲ್ಲಿ ತಿಳಿಸಿದ್ದಾರೆ.

* ಮಹಾತಪಸ್ವಿಯಾದ ವಿದ್ಯಾರಣ್ಯರಿಗೆ ಒಂದು ದೊಡ್ಡ ನಿಧಿ ದೊರೆತು ಅದರಿಂದ ವಿಜಯನಗರವೆಂಬ ಪಟ್ಟಣವನ್ನು ಕಟ್ಟಿ ರಾಜ್ಯ ಸ್ಥಾಪನೆ ಮಾಡಿ ತಾನೇ ಕೆಲಕಾಲ ಆಳಿ ತಮ್ಮ ಮರಣ ಕಾಲದಲ್ಲಿ ಒಬ್ಬ ಕುರುಬ ಜಾತಿಯವನಿಗೆ ಒಪ್ಪಿಸಿದರು. ಆದ್ದರಿಂದ ಈ ಕುರುಬ ಜಾತಿಯವರೇ ವಿಜಯನಗರ ರಾಜ್ಯಕ್ಕೆ ಮೂಲ ಪುರುಷರಾದರು ಎಂಬ ಅಭಿಪ್ರಾಯ ರಾಬರ್ಟ್ ಸಿವೆಲ್‌ರ "ಫರ್ಗ್ಗಾಟನ್ ಎಂಪೈರ್ ಆಫ್ ವಿಜಯನಗರ" ಮತ್ತು ಬಿ. ಸೂರ್ಯನಾರಾಯಣರಾವ್ ಎಂಬುವರು ಬರೆದಿರುವ "ದಿ ನೆವರ್ ಟುಬಿ ಫರ್ಗ್ಗಾಟ್ ಎಂಪೈರ್ ಆಫ್ ವಿಜಯನಗರ" ಎಂಬ ಕೃತಿಯ ೨೫, ೨೬ ಪುಟಗಳಲ್ಲಿ ಕಂಡುಬಂದಿದೆ.

* ತುಂಗಭದ್ರಾ ತೀರದ ಒಂದು ಗುಹೆಯಲ್ಲಿ ಶ್ರೀ ವಿದ್ಯಾರಣ್ಯ ಮಹಾಸ್ವಾಮಿಗಳು ಘೋರವಾದ ತಪಸ್ಸನ್ನು ಮಾಡುತ್ತಿರುವಾಗ ಪ್ರತಿ ದಿನವೂ ಬುಕ್ಕನೆಂಬ ಕುರುಬನು ಹಾಲನ್ನು ತಂದುಕೊಡುತ್ತಿದ್ದನು. ವಿದ್ಯಾರಣ್ಯರು ಶೃಂಗೇರಿ ಮಠದಲ್ಲಿ ಜಗದ್ಗುರುಗಳಾದಾಗ ಇವರು ಹಂಪೆಗೆ ಮತ್ತೆ ಬಂದರು. ಆಗ ವಿಜಯನಗರವು ಅರಾಜಕವಾಗಿತ್ತು. ರಾಜ್ಯಕ್ಕೆ ರಕ್ಷಕರು ಇರಲಿಲ್ಲ. ಎಲ್ಲೆಲ್ಲಿ ಹುಡುಕಿದರೂ ತಮ್ಮ ರಕ್ತಸಂಬಂಧಿಗಳು ಸಿಕ್ಕಲಿಲ್ಲ. ಆಗ ಹಿಂದೆ ಇವರಿಗೆ ಹಾಲು ತಂದುಕೊಡುತ್ತಿದ್ದ ಬುಕ್ಕರೆಂಬ ಕುರುಬರನ್ನು ಕರೆಯಿಸಿ ಆ ರಾಜ್ಯಕ್ಕೆ ಪಟ್ಟಾಭಿಷಿಕ್ತನನ್ನಾಗಿ ಮಾಡಿದರು. ಈ ಬುಕ್ಕರಾಯನು ವಿದ್ಯಾರಣ್ಯ ಸ್ವಾಮಿಗಳ ಪ್ರಭಾವದಿಂದ ಕರ್ನಾಟಕ ದ್ರಾವಿಡಾಂಧ್ರ ರಾಜ್ಯಗಳನ್ನೆಲ್ಲಾ ಗೆದ್ದು ರಾಜ್ಯವನ್ನು ವಿಸ್ತರಿಸಿದನು ಎಂಬ ಅಭಿಪ್ರಾಯ ಇದೆ.

* ಕ್ರಿ.ಶ. ೧೪೭೫ರಲ್ಲಿ ಹಿಂದೂಸ್ಥಾನದಲ್ಲಿ ಪ್ರವಾಸ ಮಾಡಿದ್ದ ನಿಕಟಿನ್ ಎಂಬ ರಷ್ಯಾ ದೇಶದ ಯಾತ್ರಿಕನು ವಿಜಯನಗರಕ್ಕೆ ಬಂದಿದ್ದಾಗ ಹೇಳಿದ ಅಭಿಪ್ರಾಯ ಈ ವಿಜಯನಗರದಲ್ಲಿರುವ ಹಕ್ಕ ಬುಕ್ಕರೆಂಬ ಸಹೋದರರು ಪೂರ್ವದಲ್ಲಿ ಬನವಾಸಿಯ ಅರಸರಾಗಿದ್ದ ಕದಂಬರ ವಂಶದವರು ಎಂದು ಹೇಳಿದ್ದಾರೆ.

* ವಿದ್ಯಾರಣ್ಯರ ಕಾಲಜ್ಞಾನದ ಪ್ರಕಾರ ಹೊಯ್ಸಳ ಸೇನಾಧಿಪತಿಯಾಗಿದ್ದ ಸಂಗಮನು ಮರಣ ಹೊಂದಿದನು. ಇವನ ಮಕ್ಕಳಾದ ಹಕ್ಕ ಮತ್ತು ಬುಕ್ಕರು ಅಲೆದಾಡುತ್ತಾ ಘಟ್ಟದ ಮೇಲಿನ ಕುರುಬರ ಬಳಿಯಲ್ಲಿ ಆಶ್ರಯ ಹೊಂದಿದರು. ಒಂದು ದಿನ ಬೇಟೆಯಾಡುತ್ತಾ ಬಿಸಿಲಿನ ಬೇಗೆ ನೀಗಿಸಿ ಕೊಳ್ಳಲು ಒಂದು ದೊಡ್ಡ ಆಲದ ಮರದ ಕೆಳಗೆ ಹಾಸುಗಲ್ಲಿನ ಮೇಲೆ ಮಲಗಿದ್ದರು. ಆಗ ಒಂದು ನಾಗರಹಾವು ಇವನ ತಲೆಯ ಮೇಲೆ ಹೆಡೆ ತೆಗೆದು ಆಡುತ್ತಿದ್ದಿತು. ಶ್ರೀ ವಿದ್ಯಾರಣ್ಯರೆಂಬ ಯತಿಗಳು ಕಂಡು ಆಶ್ಚರ್ಯಗೊಂಡರಲ್ಲದೇ ಈ ಸಹೋದರರನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು. ಅವನಿಗೆ ೧೨೩ ರಾಜನೀತಿ ವಿದ್ಯೆಗಳನ್ನು ಭೋದಿಸಿ ರಾಜ್ಯ ಸ್ಥಾಪನೆ ಮಾಡಲು ಸಹಕರಿಸಿದರು. ಹೀಗಾಗಿ ಕುರುಬರಾಗಿದ್ದ ಹಕ್ಕಬುಕ್ಕರು ಹೊಸ ಸಾಮ್ರಾಜ್ಯವನ್ನು ಸ್ಥಾಪಿಸಿದರು.

* ಶ್ರೀ ಶೃಂಗೇರಿ ಜಗದ್ಗುರುಗಳ ಪರಂಪರೆಯನ್ನು ಪ್ರತಿಪಾದಿಸುವ ಗುರುವಂಶ ಕಾವ್ಯ ಎಂಬ ಸಂಸ್ಕೃತ ಗ್ರಂಥದಲ್ಲಿ ಹಕ್ಕಬುಕ್ಕರು ಹಾಲುಮತದವರು ಎಂತಲೇ ಉಕ್ತವಾಗಿರುತ್ತದೆಂದು ಶ್ರೀ ಕಾಶಿನಾಥ ಶಾಸ್ತ್ರಿಗಳು ರಚಿಸಿರುವ "ವಿಜಯನಗರ ಸಾಮ್ರಾಜ್ಯವೂ ರೇಣುಕಾಚಾರ್ಯರೂ" ಎಂಬ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ.

* ಶ್ರೀ ಹೊಸಕೆರೆ ಚಿದಂಬರಯ್ಯನವರ ವಿದ್ಯಾರಣ್ಯ ಕಾವ್ಯಂ ೧೯೩೪ರಲ್ಲಿ ಬರೆದ ಪದ ಈ ರೀತಿ ಕಂಡುಬಂದಿದೆ.

**ಸರಿದೋರ್ಪದೆ ನಿಮಗಿದು ಕೇ ।**
**ಸರಿತಾನೆ ಶುನಕನೆನಿಸಿ**
**ಕೊಳ್ವುದು ಧರೆಯೊಳ್ ॥**
**ಸರಿಯಿಲ್ಲದ ಬಲವಿಂರ್ದ್ದುಂ**
**ಸರಿಯೇನೀಂ ಕುರುಬನೆನಿಸಿ**
**ಕೊಳ್ವುದುನಾಡೊಳ್ ॥**

ಅಂದರೆ, ಆನೆಗೊಂದಿಯ ಮೇಲೆ ಮುಸಲ್ಮಾನರು ದಾಳಿಯಿಟ್ಟಾಗ ಬುಕ್ಕರಾಯನ ಹೆಂಡತಿ ಹೊನ್ನಮ್ಮನು ತನ್ನ ಗಂಡನಿಗೆ ಹುರಿದುಂಬಿಸಿದುದು ಈ ಮೇಲಿನ ಪದವಾಗಿದೆ.

**ಕುರುಬ ಕುಲದೊಳಗೊಬ್ಬ ।**
**ಧರಣಿ ಪಾಲಕ ಹುಟ್ಟಿ ॥**
**ಉರವಣಿಸಿ ಕದನ ಹೆಚ್ಚಲು ।**
**ಹಂಪೆಯಲಿ ಕರಿಯ ಮೆಟ್ಟವನು ಸರ್ವಜ್ಞ॥**

ಸರ್ವಜ್ಞಮೂರ್ತಿಯವರ ಕಾಲಜ್ಞಾನದಿಂದ ತಿಳಿದು ಬಂದಿದೆ.

**ಸುರಿತಾಳನ ವರೆದ್ದೂ**
**ಸಿರಿವರಿಯೆ ರಾಮನನು ।**

ಕುರುಬರಿಗೆ ಪಟ್ಟ
ಹದಿಮೂರು ಜನತನಕ ॥

ಬರಿಸಿಡಿಲು ಉರಿಘಾಳಿ
ಮೆರೆವ ತುರುಕರ ಧಾಳಿ ।
ಧರೆಯ ತುಂಬುವ ಧೂಳಿ
ಶರಮಂದ ಕೇಳಿ ॥

ಬಲ್ಲಾಳರೊಳೊಂಬತ್ತು ।
ಗೊಲ್ಲರು ಹದಿಮೂರು ನಿಲ್ಲದಾಳುವರು ॥
ಬಲ್ಲಾಳದೊಳಗೋರ್ವ ಬಲ್ಲಿದ ತಳವಾರ ।
ನಲ್ಲಿಂದ ಹೊಸ ಮಲೆಯಲ್ಲಿ ಸೇರುವನು ॥

ಈ ಮೇಲಿನ ಪದ ಶರಣಲೀಲಾಮೃತದೊಳಗಿನ ಕಾಲಜ್ಞಾನದಿಂದ ತಿಳಿದುಬಂದಿದೆ.

* ಹೊಳಲ್ಕೆರೆ ತಾಲೂಕು ತಾಳೀಕಟ್ಟೆ ಗ್ರಾಮದ ಹಳ್ಳದ ಗುಡಿಯಲ್ಲಿ ನೆಟ್ಟಿದ ಶಿಲಾಶಾಸನದಲ್ಲಿ ವಿಜಯನಗರದ ಸ್ಥಾಪನಾ ವಿಷಯಗಳೂ ಮತ್ತು ಆ ರಾಜರ ಹೆಸರೂಗಳು ಉಲ್ಲೇಖ ವಿದ್ದುದು ಕಂಡುಬಂದಿದೆ.

* ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿಯ ಕೃತಿಯಲ್ಲಿ ಅತ್ತಲುತ್ತರ ದೇಶದೊಳ್ ತುಂಗಾಭದ್ರಾ ತೀರದೊಳ್ ವಿದ್ಯಾನಗರಿಯನಾಳ್ದ ಹರಿಹರ ಬುಕ್ಕರ್ಮೊದಲಾದ ಕರುಬ ರಾಯರ್ ಅನಂತರದೊಳ್ ಅರಸುಗೆಯ್ದ ತುಳುವಕುಳಾದೀಶ್ವರ ನರಸಿಂಗ ಕೃಷ್ಣಾಚ್ಯುತರೆಂಬ ರಾಯರೈವರ ತರುವಾಯಂ ಎಂದು ಹೇಳಲಾಗಿದೆ.

* ಇದೇ ರೀತಿ ಕೆಳದಿನೃಪ ವಿಜಯದಲ್ಲಿ ಹಕ್ಕ ಬುಕ್ಕರು ಕುರುಬರೊಡನೆ ಮದುವೆಯಾಗಿದ್ದರು ಎಂದು ಬರೆಯ ಲಾಗಿದೆ.

* ವಿಜಯನಗರ ಪ್ರಥಮ ರಾಜವಂಶವಾದ ಸಂಗಮ ವಂಶ ಸುಮಾರು ೧೫೦ ವರ್ಷಗಳ ಕಾಲ ರಾಜ್ಯವಾಳಿ ದಕ್ಷಿಣ ಭಾರತದಲ್ಲಿ ರಾಜಕೀಯ ಸಾರ್ವಭೌಮತ್ವವನ್ನು ಸ್ಥಾಪಿಸಿತು. ಈ ವಂಶದ ಹಕ್ಕ ಒಡೆಯರ್, ಬುಕ್ಕ ಒಡೆಯರ್, ೨ನೆಯ ಬುಕ್ಕರಾಯ, ೨ನೆಯ ದೇವರಾಯರು ಸುಪ್ರಸಿದ್ಧ ಅರಸರು. ವಿಜನಯಗರದಂತಹ ಬಲಾಢ್ಯ ರಾಜ್ಯ ಸ್ಥಾಪಿಸಿದ ಕೀರ್ತಿ ಕುರುಬ ಕುಲದ ಮಹನೀಯರಿಗೆ ಸಲ್ಲುತ್ತದೆ. ಇಂದಿಗೂ ಅಸ್ತಿತ್ವದಲ್ಲಿರುವ ಸಾಮಂತ ಕುಲಕ್ಕೆ ಸೇರಿದ ಒಡೆಯರನ್ನು ಕಾಣಬಹುದು.

* ದೇವಗಿರಿಯ ಯಾದವರು ಮತ್ತು ಸಂಗಮ ವಂಶ ದವರು ತಮ್ಮನ್ನು ಯದು ವಂಶೀಯರೆಂದು ಕರೆದು ಕೊಂಡಿರುವುದು ಅವರ ಜಾತಿ ಸೂಚಕವನ್ನು ತಿಳಿಸುತ್ತದೆ. ವಿಜಯನಗರ ಸಂಗಮ ವಂಶದವರು ಹೊಯ್ಸಳರ ರಾಜಕೀಯ ಮತ್ತು ಸಾಂಸ್ಕೃತಿಕ ಉತ್ತರಾಧಿಕಾರಿಗಳೆಂದು ಇತಿಹಾಸದಿಂದ ಸ್ಪಷ್ಟವಾಗಿದೆ.

ಈ ಒಂದು ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾದ ಹಕ್ಕ-ಬುಕ್ಕರು ಕುರುಬರು ಎಂದು ಅಭಿಪ್ರಾಯ ವಾಗುತ್ತದೆ.

ಹನುಮಂತಯ್ಯನವರ "ವಿಜಯನಗರ ಸಾಮ್ರಾಜ್ಯ ಚರಿತ್ರೆ" ಕೃತಿಯು ಬಹುಮುಖ್ಯವಾಗಿ ವಿಜಯನಗರ ಸ್ಥಾಪನೆಯಾಗಲು ಸಹಾಯಕವಾದ ಹಿಂದಿನ ರಾಜರ ವಿವರಗಳು ಹಾಗೂ ಒಂದು ಕನ್ನಡ ಸಾಮ್ರಾಜ್ಯ ಸ್ಥಾಪನೆಯಾಗಬೇಕಿದ್ದ ಆ ಹೊತ್ತಿನಲ್ಲಿರುವ ಮೂಲ ಸಾಂಸ್ಕೃತಿಕ ಒತ್ತಡಗಳೇನು ? ಎಂಬುದನ್ನು ಹಿನ್ನೆಲೆಯಾಗಿಟ್ಟು ಅದರ ಸುತ್ತ ಅನೇಕ ವಿಚಾರಗಳನ್ನು ಆಧಾರಗಳ ಸಮೇತ ಒದಗಿಸಿದ್ದಾರೆ. ಹಾಗೂ ವಿದೇಶಿ ವಿದ್ವಾಂಸರ ಅಭಿಪ್ರಾಯ ಗಳನ್ನು, ಸಾಹಿತ್ಯ ಕೃತಿಗಳನ್ನು, ಲೇಖನಗಳನ್ನು ಸಮಗ್ರವಾಗಿ ಗ್ರಹಿಸಿಕೊಂಡು ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಹೇಗೆ ಆಯಿತು ? ಏಕೆ ಆಯಿತು ? ಮತ್ತು ಸ್ಥಾಪನೆ ಮಾಡಲು ಉತ್ಸುಕರಾಗಿದ್ದ ಹಕ್ಕ-ಬುಕ್ಕರ ಮತ್ತು ವಿದ್ಯಾರಣ್ಯರ ಶ್ರಮವ ಕುರಿತು ತಿಳಿಸುವಲ್ಲಿ ಅವರ ಆಲೋಚನೆಗಳಿವೆ. ಜೊತೆಗೆ ಹಕ್ಕ ಬುಕ್ಕರು ಕುರುಬ ಸಮುದಾಯದವರು ಎಂಬುದಕ್ಕೆ ಹಲವಾರು ನಿದರ್ಶನಗಳನ್ನು ನೀಡಿ ಅವರು ಕುರುಬರೇ ಎಂಬುವುದರ ಕಡೆಗೆ ಹನುಮಂತಯ್ಯನವರ ಚಿಂತನೆ ಬೆಳೆದಿದೆ.

## ಕೃತಿಯ ವಿಶಿಷ್ಟತೆ

೧. ಈ ಕೃತಿಯು ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದ ಉದಯಕ್ಕೆ ಕಾರಣರಾದ ವಿದ್ಯಾರಣ್ಯರನ್ನು ಕುರಿತು ಮಾಹಿತಿ ನೀಡುತ್ತದೆ.

೨. ವಿಜಯನಗರದ ಸ್ಥಾಪಕರಾದ ಹಕ್ಕಬುಕ್ಕರನ್ನು ಕುರಿತು ಮಾಹಿತಿ ನೀಡುವುದರ ಜೊತೆಗೆ ಅವರು ಮೂಲತಃ ಕುರುಬ ಸಮುದಾಯದವರು ಎನ್ನುವುದನ್ನು ವಿವರಿಸುತ್ತದೆ.

೩. ಈ ಕೃತಿಯಲ್ಲಿ ಹನುಮಂತಯ್ಯನವರು ವಿದೇಶಿ ವಿದ್ವಾಂಸರು ನೀಡಿದ ಹೇಳಿಕೆಗಳನ್ನು ಪರಿಶೀಲಿಸಿ ಅದಕ್ಕೆ ಬೇಕಾದ ಪೂರಕವಾದ ಮತ್ತು ಪರಿಪೂರ್ಣವಾದ ಸತ್ಯಾಸತ್ಯತೆಗಳನ್ನು ಕುರಿತು ಆಲೋಚನೆಯನ್ನು ಮಾಡಿದ್ದಾರೆ.

೪. ವಿಜಯನಗರ ಸಾಮ್ರಾಜ್ಯವನ್ನು ಆಳಿದ ನಾಲ್ಕು ವಂಶಗಳ ಮಾಹಿತಿಯನ್ನು ನೀಡುತ್ತಾ ಆಯಾ ಕಾಲದ ಜನರ ಆಡಳಿತ ಕುರಿತು ಹಾಗೂ ಅವರ ಸಾಮಾಜಿಕ ಕಳಕಳಿಯ ಕುರಿತ ವಿವೇಚನೆಯನ್ನು ಮಾಡಿದ್ದಾರೆ.

೫. ಈ ಕೃತಿಯು ಅನೇಕ ಶಾಸನ ಸಂಪುಟ, ಕರ್ನಾಟಕ ಗೆಜಿಟಿಯರ್, ಕೈಫಿಯತ್ತು ಆಧಾರ ಗ್ರಂಥಗಳನ್ನು ಬಳಸಿಕೊಂಡು ವಿಜಯನಗರ ಸಾಮ್ರಾಜ್ಯ ಕುರಿತು ನಿಲುವುಗಳೇನು ಎಂಬುವುದರ ಕುರಿತು ವಿವೇಚನೆಯಿದೆ.

೬. ಪಶುಪಾಲನಾ ಸಂಸ್ಕೃತಿಯನ್ನು ತಿಳಿಸುತ್ತಾ ಹಕ್ಕಬುಕ್ಕರು ಪಶುಪಾಲನಾ ಸಂಸ್ಕೃತಿಗೆ ಸೇರಿದವರು ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ವಿ.ಆರ್. ಹನುಮಂತಯ್ಯನವರು ಶಾಲಾ ಶಿಕ್ಷಕರಾಗಿದ್ದುಕೊಂಡು ಸಂಶೋಧನಾತ್ಮಕ ಹಿನ್ನೆಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಶ್ರೀಮಂತಿಕೆಯನ್ನು ಎತ್ತಿ ಹಿಡಿಯುವಲ್ಲಿ ತುಂಬಾ ಪರಿಶ್ರಮಪಟ್ಟಿದ್ದಾರೆಂದು ಹೇಳಬಹುದು.

## ಆಧಾರಸೂಚಿ


೧. ವಿ.ಆರ್. ಹನುಮಂತಯ್ಯ, **ವಿಜಯನಗರ ಸಾಮ್ರಾಜ್ಯ ಚರಿತ್ರೆ,** ೧೯೫೨, ಬೆಂಗಳೂರು.

೨. **ಜೀರ್ಣ ವಿಜಯನಗರ ದರ್ಶನ,** ೨೦೦೯, (ಸಂ) ಪ್ರೊ. ಲಕ್ಷ್ಮಣ್ ತೆಲಗಾವಿ.

೩. ಬಿ. ಸೂರ್ಯನಾರಾಯಣರಾವ್, ದಿ ನೆವರ್ ಟುಬಿ ಫರ್ಗ್ಗಾಟ್ ಎಂಪೈರ್ ಆಫ್ ವಿಜಯನಗರ.

೪. **ಹೈದ್ರಾಬಾದ್ ಕರ್ನಾಟಕದ ಕುರುಬರ ಚಾರಿತ್ರಿಕ ಅಧ್ಯಯನ,** (ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ) ಉಮೇಶ ಗುರಿಕಾರ, ೨೦೦೭.

**ಲೇಖನಗಳು**

೧. 'ಅಪ್ರತಿಮ ಶೋಧಕ, ಸಾಹಿತಿ ದಿ. ಶ್ರೀಮಾನ್ ವಿ.ಆರ್. ಹನುಮಂತಯ್ಯನವರು', **ಮಾತೃದೇವೋಭವ** ಮಾಸ ಪತ್ರಿಕೆ, ೧೯೮೨ (ಸಂ) ಚಂದ್ರಕಾಂತ ವಗ್ಗಯ್ಯ, ಬೆಂಗಳೂರು.

೨. ಚಿಕ್ಕಣ್ಣ ಯಣ್ಣೆಕಟ್ಟೆ, 'ಧೀಮಂತ ಇತಿಹಾಸಕಾರ ಶ್ರೀ ವಿ.ಆರ್. ಹನುಮಂತಯ್ಯ', **ಗುರುವಂದನ,** (ಸಂ) ಎಂ. ಕರಿಯಪ್ಪ, ೨೦೦೭.

೩. ಡಾ. ಎಫ್.ಟಿ. ಹಳ್ಳಿಕೇರಿ, 'ಇತಿಹಾಸ ಮತ್ತು ಸಂಸ್ಕೃತ ಸಂಶೋಧಕ ವಿ.ಆರ್. ಹನುಮಂತಯ್ಯ', **ಇತಿಹಾಸ ದರ್ಶನ,** ೨೦೦೯.

ಡಾ. ಎನ್.ಜಿ. ಸಂತೋಷ್* ಡಾ. ಆರ್. ಅನುರಾಧ ಪಟೇಲ್** ಡಾ. ಹೆಚ್. ವಿಷ್ಣುವರ್ಧನ***

# ಕರ್ನಾಟಕದಲ್ಲಿ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಕೃಷಿ ಉಪಕರಣಗಳು

ಕೃಷಿಯ ಬೆಳವಣಿಗೆ ಒಮ್ಮೆಲೇ ಪ್ರವರ್ಧಮಾನಕ್ಕೆ ಬಂದುದಕ್ಕೆ ಆಯಾ ಕಾಲಘಟ್ಟದಲ್ಲಾಗುತ್ತಿದ್ದ ಬದಲಾವಣೆಯ ಪರಿಣಾಮಗಳು ಈ ಕ್ಷೇತ್ರದ ಮೇಲೆ ಪ್ರಭಾವ ಬೀರತೊಡಗಿತು. ಇದು ಸಹಜ ಪ್ರಕ್ರಿಯೆ ಕೂಡ ಹೌದು. ಕೃಷಿಯ ಬೆಳವಣಿಗೆ ಬದಲಾಗುವುದರ ಜೊತೆಗೆ ಅವರು ಬಳಸುತ್ತಿದ್ದ ಸಲಕರಣೆಗಳು ಕೂಡ ಮಣ್ಣಿನ ಫಲವತ್ತತೆಯಲ್ಲಿ ಪ್ರಧಾನ ಪಾತ್ರವಹಿಸಿದವು. ಇದರಿಂದ ಭೂಮಿ ಫಲವಂತಿಕೆ ಪಡೆಯುವುದರ ಜೊತೆಗೆ ಇಳುವರಿ ಕೂಡ ಅಧಿಕವಾಗಲು ಕಾರಣವಾಗುತ್ತದೆ. ಈ ಹಿನ್ನಲೆಯಲ್ಲಿ ಅಂದಿನ ದಿನಮಾನಗಳಲ್ಲಿ ಬಳಸುತ್ತಿದ್ದ ಕೃಷಿಯ ಉಪಕರಣಗಳ ಬಳಕೆ ಮತ್ತು ಅವುಗಳಿಂದಾಗುತ್ತಿದ್ದ ಪೂರಕ ಪರಿಣಾಮವನ್ನು ಸಂಕ್ಷಿಪ್ತವಾಗಿ ಚರ್ಚಿಸಲು ಯತ್ನಿಸಲಾಗಿದೆ.

ಈ ವಿಷಯವನ್ನು ಕುರಿತು ಚಾರಿತ್ರಿಕ ಹಿನ್ನೋಟವನ್ನು ಗಮನಿಸುವುದಾದರೆ ಭಾರತದ ಭೂಖಂಡದಲ್ಲಿ ಪ್ರಥಮ ಬಾರಿಗೆ ಮಹರ್‌ಘಡ್ ಪ್ರದೇಶದಲ್ಲಿ ಕೃಷಿ ಕುರಿತಾದ ಕುರುಹುಗಳು ಸಿಗುತ್ತವೆ. ಕಾಲಕ್ರಮೇಣ ಉತ್ತರ ಭಾರತದಲ್ಲಿ ತಾಮ್ರದ ಬಳಕೆ ಪ್ರಾರಂಭವಾಗಿ ಕಬ್ಬಿಣವು ಕೃಷಿಯ ಉಪಕರಣಗಳ ವಿಷಯದಲ್ಲಿ ಮಹತ್ತರವಾದ ಪರಿಣಾಮ ವನ್ನುಂಟು ಮಾಡಿತು. ದಕ್ಷಿಣ ಭಾರತದ ಪ್ರದೇಶವು ಇದರಿಂದ ಹೊರತಾಗಿರಲಿಲ್ಲ. ಆದರೆ ಮಧ್ಯಕಾಲಿನ ಮತ್ತು ಮಧ್ಯಕಾಲಿ ನೋತ್ತರ ಕರ್ನಾಟಕದ ರಾಜಮನೆತನಗಳು, ಹಲವು ಸಾಮಂತ ಮನೆತನಗಳು ಈ ವಿಷಯದಲ್ಲಿ ಗಂಭೀರ ಪಾತ್ರವಹಿಸಿವೆ.

ಗ್ರಾಮೀಣ ಜನರ ಬದುಕನ್ನು ಇಡಿಯಾಗಿ ಆವರಿಸಿ ಕೊಂಡಿರುವಂತಹದು ವ್ಯವಸಾಯ. ಅವರು ಮಾಡುವ ಎಲ್ಲಾ ಕೆಲಸಗಳೂ, ಆಡುವ ಎಲ್ಲಾ ಮಾತುಗಳೂ ಒಂದಲ್ಲ ಒಂದು ರೀತಿಯಲ್ಲಿ ವ್ಯವಸಾಯದ ಜೊತೆಗೆ ತಳಕು ಹಾಕಿಕೊಂಡಿರು ತ್ತದೆ. ಕೃಷಿ, ಉಪಕರಣಗಳ ತಯಾರಿಕೆಗೆ ತಾಂತ್ರಿಕರಾದ ಬಡಗಿ, ಕಮ್ಮಾರ, ಚಮ್ಮಾರ ಮುಂತಾದವರಿಂದ ನೆರವು ಪಡೆಯುತ್ತಾನೆ. ಕರ್ನಾಟಕದಲ್ಲಿ ವಿಜಯನಗರ ಮತ್ತು ವಿಜಯನಗರೋತ್ತರ ಅರಸರ ಕಾಲದ ಜನರು ತಾವು ಜೀವನದ ಆಧಾರವನ್ನಾಗಿ ನಂಬಿದ್ದ ಕೃಷಿಯನ್ನು ಕೈಗೊಳ್ಳಲು ವಿವಿಧ ವ್ಯವಸಾಯ ಉಪಕರಣಗಳನ್ನು ಬಳಸುತ್ತಿದ್ದರು. ಅವುಗಳ ಬಳಕೆ ಇಂದಿಗೂ ಒಕ್ಕಲಿಗರಲ್ಲಿದೆ. ಈ ಉಪಕರಣಗಳು ವಿಜಯನಗರ ಪೂರ್ವದಲ್ಲಿಯೂ ಬಳಕೆಯಲ್ಲಿದ್ದವು. ಇವುಗಳನ್ನು ತಿಳಿಯಲು ಶಾಸನಗಳು, ಸಾಹಿತ್ಯಕ ಗ್ರಂಥಗಳು, ವಿದೇಶಿ ಸಾಹಿತ್ಯ ಮತ್ತು ಜನರ ಗಾದೆ ಮಾತುಗಳು ಸಹಕಾರಿಯಾಗಿವೆ.

ಕೃಷ್ಣದೇವರಾಯನು ಹೇಳುವಂತೆ ರೈತನಾದವನು ತನ್ನ ಹೊಲವನ್ನು ಉತ್ತು ಮುಳ್ಳು, ಹುತ್ತಗಳಿಲ್ಲದಂತೆ ಮಾಡಿ, ಕಳೆಗಳನ್ನು ಆರಿಸಿ, ಕಿತ್ತು ಹಾಕಿ, ಬೆಳೆಗೆ ತಕ್ಕ ಬೀಜ ಬಿತ್ತಬೇಕು ಎಂದಿದ್ದಾನೆ. ಕೃಷಿ ಭೂಮಿಯನ್ನು ಸಾಗುವಳಿ ಮಾಡಲು ಉಪಯೋಗಿಸುತ್ತಿದ್ದ ಉಪಕರಣಗಳೆಂದರೆ ಎತ್ತು, ನೇಗಿಲು, ನೊಗ, ಕುಂಟೆ, ಕೂರಿಗೆ ಮುಂತಾದ ಉಪಕರಣಗಳು ರೈತನಿಗೆ ಬೇಕೇ ಬೇಕು. ಈ ಉಪಕರಣಗಳನ್ನು ಹತಾರುಗಳು, ಮುಟ್ಟುಗಳು, ಗಳೇವುಗಳು ಎಂದು ಕರೆಯಲಾಗುತ್ತಿದೆ. ಅವು ಎಷ್ಟು ಅವಶ್ಯಕ ಎಂಬುದನ್ನು **'ಹತಾರ ಇಲ್ಲದವರು ಹೊತಾರೆ ಬಾ' 'ಮುಟ್ಟು ಇಲ್ಲದಾತ ಮೂರು ಮನೆಗೋದರೆ ಕೆಟ್ಟಿತವನ ಒಕ್ಕಲುತನ'** ಮುಂತಾದ ಗಾದೆ ಮಾತುಗಳಲ್ಲಿ ಮನದಟ್ಟು ಮಾಡುತ್ತಾರೆ. ನೇಗಿಲು, ಕುಂಟೆ ಎಡೆಕುಂಟೆ, ಕೂರಿಗೆ, ಸಡ್ಡೆ, ನೊಗ, ಹಲುಬೆ ಮುಂತಾದವುಗಳು ಉಳುಮೆಯ ಉಪಕರಣಗಳಾದರೆ ರೋಣಗಲ್ಲು, ಕೈಹಲುಬೆ, ನೆರೆಕೋಲು, ಗೋರು, ಪುಟ್ಟಿ, ಮೊರ, ಬರಲು ಒಕ್ಕಲು ಮಾಡುವ ಸಂದರ್ಭದ ಉಪಕರಣಗಳಾಗಿವೆ. ನೇಗಿಲು ನೆಲವನ್ನು ಹೂಳಲು ಬಳಸುತ್ತಿದ್ದ ಪ್ರಮುಖ ಸಾಧನ. ಹರಗಲು ಕುಂಟೆ, ಬಿತ್ತಲು ಕೂರಿಗೆ, ಸಾಲು ಮುಚ್ಚಲು ಕೊರಡು ಬೇಕು. ಇವೆಲ್ಲವನ್ನು ಹೂಡಲು ಎತ್ತುಗಳ ಕೊರಳಿಗೆ ನೊಗ ಬೇಕು. ಮಣ್ಣಿನ ಗುಣ, ಬೆಳೆಯ ಕ್ರಮಕ್ಕೆ ಅನುಗುಣವಾಗಿ ಉಪಕರಣಗಳೂ ಭಿನ್ನವಾಗುತ್ತವೆ. ಇವೆಲ್ಲವೂ ಮರದ ಉಪಕರಣಗಳಾಗಿವೆ. ಬಡಗಿ ಮತ್ತು ಕಮ್ಮಾರರಿಂದ ಇವುಗಳ ನಿರ್ಮಾಣ ಮತ್ತು ದುರಸ್ತಿ ಆಗಾಗ್ಗೆ ನಡೆಯುತ್ತದೆ.

ಎತ್ತು ಮತ್ತು ಕೋಣಗಳನ್ನು ಭಾರ ಹೊರುವ ಅಲ್ಲದೆ ಪ್ರಾಣಿಗಳಿಗಾಗಿ ಮತ್ತು ಗಾಡಿಯನ್ನು ಎಳೆಯಲು ಹೊಲವನ್ನು

* ದಾವಣಗೆರೆ.

ಹೂಳಲು ಬಳಸುತ್ತಿದ್ದರು. ಗುಡ್ಡಗಾಡು ಪ್ರದೇಶದಲ್ಲಿ ಪ್ರವಾಸ ಮಾಡುವ ವರ್ತಕರು ತಮ್ಮ ವ್ಯಾಪಾರ ಸರಕುಗಳನ್ನು ಸಾಗಿಸಲೂ ಇವನ್ನು ಬಳಸುತ್ತಿದ್ದರು. ಪ್ರಾಚೀನ ಕಾಲ ದಿಂದಲೂ ಉಪಕರಣಗಳನ್ನು ಪವಿತ್ರ ವಸ್ತುಗಳೆಂದು ಪರಿಗಣಿಸಲಾಗಿದೆ. ವಾಲ್ಮೀಕಿ ರಾಮಾಯಣದಲ್ಲಿ ಒಕ್ಕಲಿಗರ ಕೇರಿಯಲ್ಲಿನ ರೈತರು ಕುಡ, ಕೂರಿಗೆ, ಗುದ್ದಲಿ, ಕೊಡಲಿ, ಮಿಣಿ, ನೊಗ, ಬಂಡಿ, ಬೀಜದ ಮೂಡೆ, ಕುಡಗೋಲು ಮುಂತಾದ ಉಪಕರಣಗಳ ಬಗ್ಗೆ ಜನರು ಮಾತಾಡುತ್ತಿದ್ದರು. ಅದರಲ್ಲಿ **ನೇಗಿಲಿಗೆ**[೧] ಮೊದಲನೆಯ ಸ್ಥಾನ. ಕೃಷ್ಣದೇವರಾಯನು ರೈತರ ನೇಗಿಲು ಬಲದಿಂದಲೇ ರಾಜ್ಯ ಸುಭಿಕ್ಷವಾಗಿದೆ ಎಂದು ತಿಳಿಸುತ್ತಾನೆ[೨]. ಇದನ್ನು ನೆಲ ಹೂಳಲು ಮತ್ತು ಸಾಲು ಹೊಡೆಯಲು ಬಳಸಲಾಗುತ್ತದೆ. ಶೂದ್ರರ ಭುಜಗಳ ಮೇಲೆ ನೇಗಿಲ್ಲನಿಟ್ಟು ಕೊಂಡು ಹೊಲಗಳನ್ನು ಉತ್ತು ಬೆಟ್ಟದಷ್ಟು ರಾಶಿಗಳನ್ನು ಬೆಳೆಸುತ್ತಿದ್ದರು ಎಂದು ಕೃಷ್ಣದೇವರಾಯನು ತನ್ನ ಆಮುಕ್ತಮೌಲ್ಯದಲ್ಲಿ ತಿಳಿಸುತ್ತಾನೆ[೩]. **ಕುಂಟೆಗೆ**[೪] ವ್ಯವಸಾಯದಲ್ಲಿ ಎರಡನೆಯ ಸ್ಥಾನ. ಇದು ನೆಲವನ್ನು ಹಗುರ ಮಾಡಲು, ಹರಗಲು, ಹೆಂಡೆಗಳನ್ನು ಹೊಡೆಯಲು ಸಾಲು ಮುಚ್ಚಲು ಇದು ಬಳಕೆ ಆಗುತ್ತದೆ.

ಸರ್ವಜ್ಞ ವಚನವು ವ್ಯವಸಾಯದಲ್ಲಿ ಕುಂಟೆ ಹೊಡೆಯುವ ಚಿತ್ರಣವನ್ನು ಹೀಗೆ ತಿಳಿಸುತ್ತಾನೆ. ಎತ್ತೊಮ್ಮೆ ಹೂಡುವುದು ಎತ್ತೊಮ್ಮೆ ಹರಗುವುದು ಬಿತ್ತೊಮ್ಮೆ ಹರಗಿ ಕಳೆದೆಗೆದರಾ ಬೆಳೆಯು ! ಎತ್ತಗ್ಯೆ ಯುದ್ಧ ಸರ್ವಜ್ಞ, ಹುಲ್ಲು, ಸೊಪ್ಪೆದಂಟು, ಸೆದೆ, ರಂಟೆಗಳಂತಹ ಕಲ್ಮಶಗಳನ್ನು ತೆಗೆಯಲು, ಭೂಮಿಯನ್ನು ಹದ ಮಾಡಲು ಕುಂಟೆ ಅತ್ಯಾವಶ್ಯಕವಾಗಿದೆ. ಕನಕದಾಸರು ಹೊಲದಲ್ಲಿ ಕುಂಟೆ ಹೊಡೆಯುವ ಚಿತ್ರಣವನ್ನು ಕೊಟ್ಟಿದ್ದಾರೆ. ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮಮಾಡಿ ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ. ತಾತ್ಸಾರ ಮಾಡುವ ರೈತರನ್ನು ಕುರಿತು ಸರ್ವಜ್ಞನು 'ಉತ್ತೊಮ್ಮೆ ಹರಗದಲೆ ಬಿತ್ತೊಮ್ಮೆ ನೋಡದಲೆ, ಹೊತ್ತೇರಿ ಹೊಲಕೆ ಹೋದರೆ ಅವತನ್ನ ನೆತ್ತರವ ಸುಡುವ ಸರ್ವಜ್ಞ' ಎಂದಿದ್ದಾನೆ. **ಕೂರಿಗೆಯನ್ನು**[೫] ಸಾಲು ಹೊಡೆಯು ವಾಗಲೇ ಬೀಜ ಬಿತ್ತಲು ಬಳಸಲಾಗುತ್ತದೆ. ಕೊರಡನ್ನು ಸಾಲು ಮುಚ್ಚಲು, ಹೆಂಡೆ ಒಡೆಯಲು ಬಳಸಲಾಗುತ್ತದೆ. **ನೊಗ**[೬] ಎತ್ತಿನ ಹೆಗಲ ಮೇಲೆ ಹಾಕಬೇಕಾದುದರಿಂದ ನುಣುಪು ಬರುವ ಮರದಿಂದ ಇದನ್ನು ತಯಾರು ಮಾಡಲಾಗುತ್ತದೆ. ಇದು ಎಲ್ಲದಕ್ಕೂ ಬೇಕಾದ ಉಪಕರಣವಾಗಿದೆ. **ಬಂಡಿ**[೭] ಅಂದಿನ ಕಾಲದ ಸಾರಿಗೆಯ ಪ್ರಮುಖ ಸಾಧನ ಹಾಗೂ ಕೃಷಿಯ ಸಾಧನಗಳಲ್ಲಿ ಪ್ರಮುಖವಾದ ಸಾಧನ. ಸಗಣಿ, ಗೊಬ್ಬರ, ಹುಲ್ಲು, ಮೇವು, ದವಸ ಧಾನ್ಯಗಳ ಸಾಗಣೆಗೆ ಬಳಕೆಯಾಗುವ ಶ್ರೀಮಂತ ಉಪಕರಣ. ಇದನ್ನು ಎತ್ತು, ಕೋಣಗಳನ್ನು ಕಟ್ಟಿಕೊಂಡು ಎಳೆಸುತ್ತಿದ್ದರು. **ಬಾರಿಕೋಲು**[೮] ಎತ್ತುಗಳನ್ನು ಬೆದರಿಸಲು ಉಪಯೋಗಿಸುವ ಸಾಧನ. ಎರಡು ಮೊಳ ಮರದ ಕೋಲಿಗೆ ಒಂದು ತುದಿಗೆ ಚರ್ಮದ ಸೆಳೆಯನ್ನು ಕಟ್ಟಿರುತ್ತಾರೆ. **ಕವಣೆ**[೯] ಕಲ್ಲನ್ನು ಇಟ್ಟು ತಿರುಗಿಸಿ ಬೀಸಿ ಹೊಡೆಯುವುದಕ್ಕಾಗಿ ಮಾಡಿಕೊಂಡ ಸಾಧನ. ಇದನ್ನು ಪೈರು ಬಂದ ಸಂದರ್ಭದಲ್ಲಿ ಕಾಳು ತಿನ್ನಲು ಬಂದ ಪಕ್ಷಿಗಳನ್ನು ಬೆದರಿಸಲು ಬಳಸುತ್ತಾರೆ. (ಅಟ್ಟಳೆಯನಡರಿಯತಿ ಭರದಿ ಕವಣೆಗೆ ಕಲ್ಲನಿಟ್ಟು... ಗದ್ದೆಗಳ ಸಾಲಿಗೆರಗುವ ರಾಜಕೀರ ಪಾರವತವನು ಇಟ್ಟು ಪಾರಿಸುವ... ಅವಲೆಯರು : ಮಂಚಿಕೆಯ ಹಾಕಿ... ಹಕ್ಕಿಯ ಓಡಿಸರಯ್ಯ) **ಕುಡುಗೋಲು**[೧೦] ಬಾಗಿದ ಒಳ ಅಂಚಿನಲ್ಲಿ ಹರಿತವುಳ್ಳ ಕತ್ತಿ. ಇದನ್ನು ತೆನೆ, ಪೈರನ್ನು ಕೊಯ್ಯಲು ಬಳಸಲಾಗುತ್ತಿತ್ತು. ಕನಕದಾಸರ ಮೋಹನ ತರಂಗಿಣಿಯಲ್ಲಿ ಬೆಳೆದ ಕಬ್ಬನ್ನು ಕುಡುಗೋಲಿನಿಂದ ಕಡಿಯುವ ಚಿತ್ರವನ್ನು ತಿಳಿಸುತ್ತಾರೆ. **ಹಗ್ಗ**[೧೧], **ನೂಲಿನ ಹಗ್ಗ**[೧೨], **ಸೇದುವ ಹಗ್ಗ**[೧೩], ಇವುಗಳನ್ನು ನಾರಿನಿಂದ ತಯಾರಿಸುತ್ತಾರೆ. **ಮಿಣೆ**[೧೪] ಚರ್ಮದಿಂದಮಾಡಿದ ಹಗ್ಗವಾಗಿದೆ. ಹಗ್ಗವನ್ನು ದನ ಕರು ಎತ್ತುಗಳನ್ನು ಕಟ್ಟಲು, ಹುಲ್ಲು ಸೊಪ್ಪೆಯನ್ನು ಹೊರೆಕಟ್ಟಲು ಹಗ್ಗಗಳನ್ನು ಬಳಸುತ್ತಾರೆ. ಸೇದುವ ಹಗ್ಗವನ್ನು ಬಾವಿಯಿಂದ ನೀರು ಎಳೆಯಲು ಇಲ್ಲವೆ ಬಂಡಿಯಲ್ಲಿ ಹುಲ್ಲು, ಸೊಪ್ಪೆಯನ್ನು ಹೊಲದಿಂದ ಕಣಕ್ಕೆ ತರಲು ಸೇದುವ ಹಗ್ಗದಿಂದ ಕಟ್ಟಿ ತರುತ್ತಾರೆ. ಮಿಣೆಯನ್ನು ನೇಗಿಲು, ಕುಂಟೆ ಬಂಡಿಗಳ ನೊಗಕ್ಕೆ ಸೇರಿಸಿ ಕಟ್ಟಲು ಬಳಸುತ್ತಾರೆ.

ಕನಕದಾಸರು ಪಾರಮಾರ್ಥಿಕ ಕೃಷಿಯನ್ನು ಸಹಜ ಕೃಷಿಯ ಹಲವು ಉಪಮೆಗಳೊಂದಿಗೆ ಬಿತ್ತರಿಸಿದ್ದಾರೆ. ದೇವರನ್ನು ಸದಾ ನೆನೆದು ಆನಂದಿಸಬೇಕು. ದೇವರೆಂದರೆ ಅಂತರಂಗದಲ್ಲಿ ಬೆಳೆಯಬೇಕಾದ ಬೆಳೆ, ನಾರಾಯಣ ಎಂಬ ಬೀಜವನ್ನು ಬಿತ್ತಬೇಕು. ನಾಲಿಗೆಯೇ ಬಿತ್ತಲು ಬಳಸಬೇಕಾದ **ಕೂರಿಗೆ, ಹೃ**ದಯವೇ ಹೊಲ, ಶರೀರವೇ **ನೇಗಿಲು,** ಉಸಿರಿನ ಉಚ್ವಾಸ ನಿಶ್ವಾಸಗಳೇ ಹೂಡಿರುವ **ಎತ್ತುಗಳು,** ಜ್ಞಾನ ಮತ್ತು ಅರಿವುಗಳೇ ಅದಕ್ಕೆ ಕಟ್ಟಿರುವ **ಹಗ್ಗ,** ಕಾಮ, ಕ್ರೋಧ, ಮದ, ಮತ್ಸರಾದಿಗಳು ಆ ಹೊಲದಲ್ಲಿ ಬೆಳೆಯುವ ಕಳೆಗಳು ಅವನ್ನು ಕೀಳಬೇಕು ಎಂದಿದ್ದಾರೆ.

**ಬುಟ್ಟಿ, ಬೆತ್ತದ ಬುಟ್ಟಿ**[೧೫] ಇದನ್ನು ಕಾಯಿಪಲ್ಯ, ಹಣ್ಣು-ಹೂಗಳನ್ನು ತುಂಬಲು ಉಪಯೋಗಿಸುತ್ತಾರೆ. ಕಪಿಲೆಯನ್ನು ಬಾವಿಯಿಂದ ಜಮೀನಿಗೆ ನೀರನ್ನು ಎತ್ತಲು ಬಳಸುತ್ತಾರೆ. ಮೊರವನ್ನು ಧಾನ್ಯವನ್ನು ಚೀಲಕ್ಕೆ ತುಂಬಲು, ಕಾಳು ಮಿಶ್ರಿತ ಹೊಟ್ಟು ತೂರಲು ಉಪಯೋಗಿಸುವ ಸಾಧನ. (ತೂರಿದರೆ

ತನಿಹೊಟ್ಟು ಗಾಳಿಗೆ ಹಾರುವುದು) **ಗಾಣ**[೧೬] ಎಣ್ಣೆ ಇಲ್ಲವೆ ಕಬ್ಬಿನ ರಸವನ್ನು ತೆಗೆಯುವ ಸಾಧನವಾಗಿದೆ. ಗಾಣವನ್ನು ಕುರಿತು ಸರ್ವಜ್ಞನು **ಎತ್ತು ಗಾಣವನು** ಹೊತ್ತು ತಾ ನಿತ್ಯದಿ ಸುತ್ತಿ ಬಂದಂತೆ ಸರ್ವಜ್ಞ ಎಂದಿದ್ದಾನೆ. ಕೊಪ್ಪರಿಕೆಯನ್ನು ಗಾಣದಿಂದ ಬಂದ ಕಬ್ಬಿನ ರಸವನ್ನು ಕೊಪ್ಪರಿಕೆಯಲ್ಲಿ ಹಾಕಿ, ಅದನ್ನು ಬೆಂಕಿಯಿಂದ ಕಾಯಿಸುತ್ತಾ ಬೆಲ್ಲ, ಸಕ್ಕರೆ ತಯಾರಿಸುತ್ತಾರೆ. **ಕೊಳಗ**[೧೭] ಧಾನ್ಯ ಶೇಖರಿಸುವ ಕಡಾಯಿ ಪಾತ್ರೆ ಅಥವಾ ಧಾನ್ಯವನ್ನು ಅಳೆಯುವ ಮಾಪನವಾಗಿದೆ. **ಸೇರು**[೧೮] ಚಿಕ್ಕ ಪ್ರಮಾಣದ ಅಳತೆ, ಮನೆ ಮತ್ತು ಅಂಗಡಿಗಳಲ್ಲಿ ಧಾನ್ಯವನ್ನು ಅಳೆಯಲು ಉಪಯೋಗಿಸುತ್ತಾರೆ. **ಮೂಡೆ,** (ಗುಡಾಣ) ಇದರಲ್ಲಿ ಕಾಳುಗಳನ್ನು ಸಂಗ್ರಹಿಸುತ್ತಿದ್ದರು (ಮೂಡಭಕ್ತಿಗೆ ಕೇಡಿಲ್ಲ, **ಮೂಡೆ** ರಾಗಿಗೆ ಭಯವಿಲ್ಲ). **ಮಡಕೆಗಳಲ್ಲಿ**[೧೯] ಎಣ್ಣೆಯನ್ನು ತುಂಬಿಡುತ್ತಿದ್ದರು. **ಗೋಣಿಚೀಲಗಳಲ್ಲಿ**[೨೦] ಧಾನ್ಯವನ್ನು ಸಂಗ್ರಹಿಸಲು ಮತ್ತು ಮೂಟೆಗಳ[೨೧] ಮೂಲಕ ಬೇರೆ ಸ್ಥಳಗಳಿಗೆ ಸಾಗಿಸಲು ಬಳಸುತ್ತಿದ್ದರು.

**ಬಡಗಿ**[೨೨] ಮರಗೆಲಸ ಮಾಡುವವರಾಗಿದ್ದ ಇವರು ಕೃಷಿಗೆ ಅವಶ್ಯವಾದ ರೈತರ ಜೀವನಕ್ಕೆ ಆಧಾರವಾದ ವಸ್ತುಗಳನ್ನು ತಯಾರಿಸುತ್ತಿದ್ದರು. ಬಂಡಿ, ನೇಗಿಲು, ಕುಂಟೆ, ಕೂರಿಗೆ ಹಲುಬೆ, ಬಗಣಿ, ಸೂಲ ತಯಾರಿಕೆ ಇವರ ಪ್ರಮುಖ ಕೆಲಸವಾಗಿದ್ದವು. **ಕಮ್ಮಾರ**[೨೩] ಕಬ್ಬಿಣ ಕೆಲಸಗಾರನಾಗಿದ್ದನು. ಇವನು ಹಾರೆ, ಗುದ್ದಲಿ, ಕುಳ, ಕುಡಗೋಲು, ಕತ್ತರಿ, ಕೊಡಲಿ, ಬಾಚಿ, ಮೊಳೆ, ಸುತ್ತಿಗೆ, ಕತ್ತರಿ ಮುಂತಾದವುಗಳನ್ನು ತಯಾರಿಸುತ್ತಿದ್ದನು. **ಬೇಗಾರ**[೨೪] ಅಥವಾ **ಮಣೆಗಾರ** ಇವನನ್ನು ಮನೆಮಗ ಎಂದು ಸಂಬೋಧಿಸುವುದುಂಟು. ಇವನು ಕೆರ, (ಚಪ್ಪಲಿ) ನೊಗಸುತ್ತು, ಬಾರುಕೋಲು, ಪಟಗಣ್ಣಿ, ಕಪಿಲೆಬಾನಿ ಮುಂತಾದ ಚರ್ಮದ ವಸ್ತುಗಳನ್ನು ತಯಾರಿಸು ತ್ತಿದ್ದನು.

ಮುಖ್ಯವಾಗಿ ವಿಜಯನಗರ ಕಾಲದ ಕೃಷಿ ಉತ್ಪಾದನೆಗೆ ಸಂಬಂಧಿಸಿದಂತೆ ಅನೇಕ ಮಹತ್ವದ ಸಂಗತಿಗಳು ಚರ್ಚಿಸಲ್ಪಟ್ಟಿದ್ದು ಮಧ್ಯಕಾಲೀನ ಕರ್ನಾಟಕವನ್ನಾಳಿದ ವಿಜಯ ನಗರದ ದೊರೆಗಳು ಒಂದು ವ್ಯವಸ್ಥಿತವಾದ ಕೃಷಿ ಉತ್ಪಾದನಾ ಪದ್ಧತಿಯನ್ನು ಅನುಸರಿಸುವುದರ ಮೂಲಕ ತಮ್ಮ ಅಧೀನ ಮಾಂಡಳೀಕರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ ಎಂದು ತರ್ಕಿಸಬಹುದಾಗಿದೆ.

## ಆಧಾರಸೂಚಿ


೧. ಬುಕಾನನ್, ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಅಂಡ್ ಮಲಬಾರ್, ಸಂಪುಟ–೩, ಲಂಡನ್, ೧೮೦೭, ಪುಟ ೩೪೩.
೨. ಡಾ॥ ನಿರುಪಮಾ, **ಶ್ರೀ ಕೃಷ್ಣದೇವರಾಯನ ಆಮುಕ್ತ ಮಾಲ್ಯದ**, ಪ್ರಸಾರಾಂಗ, ಕ.ವಿ.ವಿ. ಹಂಪಿ ೨೦೧೦, ಪುಟ ೧೩.
೩. ಅದೇ, ಪೂರ್ವೋಕ್ತ, ಪುಟ ೧೩.
೪. ವಿರೂಪಾಕ್ಷಿ ಪೂಜಾರಹಳ್ಳಿ, ತರಿಕೇರೆ ಪಾಳೆಗಾರ ಸರ್ಜಪ್ಪನಾಯಕನ ಕಥಾಸಾರ, ಪ್ರಸಾರಾಂಗ, ಕ.ವಿ.ವಿ., ಹಂಪಿ, ಪುಟ ೫೩.
೫. ಅದೇ.
೬. ಬುಕಾನನ್, ಪೂರ್ವೋಕ್ತ, ಪುಟ ೩೪೩.
೭. **ದೇವಕವಿ ಕೃತ ಮರುಳಸಿದ್ಧನ ಕಾವ್ಯ**, ಪಂಡಿತ ಎಸ್. ಬಸಪ್ಪ (ಸಂ.), ತರಳಬಾಳು ಪ್ರಕಾಶನ, ಸಿರಿಗೆರೆ, ಚಿತ್ರದುರ್ಗ ತಾಲ್ಲೂಕು.
೮. **ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು**, ಇಂದುಬಾಯಿ ಟಿ.ಕೆ. (ಸಂ.), ಪದ್ಯ ೨೮, ಪುಟ ೭೬.
೯. ಅದೇ, ಪುಟ ೭೬, ವಿಜಯನಗರ ಕಾಲದ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಪುಟ ೩೩೨.
೧೦. ಅದೇ.
೧೧. ಪಂಡಿತ ಎಸ್. ಬಸಪ್ಪ (ಸಂ.), ಪೂರ್ವೋಕ್ತ, ೨ನೇ ಸಂಧಿ, ಪದ್ಯ ೫೨, ಪುಟ ೨೬.
೧೨. ಡಾ॥ ನಿರುಪಮಾ, ಪೂರ್ವೋಕ್ತ, ಪುಟ ೪೨.
೧೩. ಡಾ॥ ನಿರುಪಮಾ, ಪೂರ್ವೋಕ್ತ, ಪುಟ ೧೬.
೧೪. ಪಂಡಿತ ಎಸ್. ಬಸಪ್ಪ (ಸಂ.), ಪೂರ್ವೋಕ್ತ, ಪುಟ ೨೬.
೧೫. ಡಾ॥ ನಿರುಪಮಾ, ಪೂರ್ವೋಕ್ತ, ಪುಟ ೭೦.
೧೬. ಕ.ವಿ.ವಿ.ಶಾ.ಸಂ.–೧, ಹರಪನಹಳ್ಳಿ ೩, ಕ್ರಿ.ಶ. ೧೫೨೪.
೧೭. ಎ.ಕ. XI, ದಾವಣಗೆರೆ ೨೩, ಕ್ರಿ.ಶ. ೧೪೧೦.
೧೮. ಕ.ವಿ.ವಿ.ಶಾ.ಸಂ.–೧, ಹರಪನಹಳ್ಳಿ ೧೮, ಕ್ರಿ.ಶ. ೧೭೭೯.
೧೯. ಡಾ॥ ನಿರುಪಮಾ, ಪೂರ್ವೋಕ್ತ, ಪುಟ ೫.
೨೦. ಅದೇ, ಪುಟ ೫.
೨೧. ಅದೇ, ಪುಟ ೨೧.
೨೨. ಕ.ವಿ.ವಿ.ಶಾ.ಸಂ.–೧, ಹರಪನಹಳ್ಳಿ ೧೯, ಕ್ರಿ.ಶ. ೧೭೦೦.
೨೩. **ಶಾಸನ ಅಧ್ಯಯನ, ಸಂಪುಟ–೨,** (ಸಂ.) ಭಟ್‌ಸೂರಿ ಸಂಚಿಕೆ–೨, ಪ್ರಸಾರಾಂಗ, ಕ.ವಿ.ವಿ., ಹಂಪಿ.
೨೪. ಅದೇ.

ಡಾ. ಜೆ.ಕೆ. ಮಲ್ಲಿಕಾರ್ಜುನಪ್ಪ*

# ಹರಪನಹಳ್ಳಿ ಪಾಳೇಗಾರರ ಕಾಲದ ಬಂಡ್ರಿ

ವಿಜಯನಗರ ಸಾಮ್ರಾಜ್ಯ ಪತನಾನಂತರ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಹೊಸ ಅಧ್ಯಾಯವೊಂದು ಪ್ರಾರಂಭವಾಯಿತು. ಕ್ರಿ.ಶ. ೧೫೬೫ ರಿಂದ ೧೮೫೭ ರವರೆಗೆ ಮತ್ತು ಅನಂತರ ದೇಶದ ಸ್ವಾತಂತ್ರ್ಯದವರೆಗೆ ಕರ್ನಾಟಕದಲ್ಲಿ ಪ್ರಾದೇಶಿಕವಾಗಿ ಚಿಕ್ಕ-ಪುಟ್ಟ ರಾಜ ಮನೆತನಗಳು ಅಸ್ತಿತ್ವಕ್ಕೆ ಬಂದು, ಇಲ್ಲಿಯ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಇತಿಹಾಸ ಹಾಗೂ ಪರಂಪರೆಯನ್ನು ಸಂರಕ್ಷಿಸಿಕೊಂಡು ಹೋಗುವಲ್ಲಿ ಮಹತ್ತರವಾದ ಪಾತ್ರವಹಿಸಿವೆ.

ಇಂತಹ ಚಿಕ್ಕ ಪುಟ್ಟ ರಾಜ್ಯಗಳಲ್ಲಿ ಪ್ರಮುಖವಾದವುಗಳೆಂದರೆ : ಮೈಸೂರಿನ ಒಡೆಯರು, ಕೆಳದಿ ನಾಯಕರು, ಯಲಹಂಕ ಪ್ರಭುಗಳು, ಚಿತ್ರದುರ್ಗ ಪಾಳೆಯಗಾರರು ಮುಂತಾದವರನ್ನು ಪ್ರಮುಖವಾಗಿ ಗುರುತಿಸುತ್ತೇವೆ. ಮೈಸೂರು ಹಾಗೂ ಕೆಳದಿ ದೊಡ್ಡ ರಾಜ್ಯಗಳಾಗಿದ್ದು, ಇವುಗಳ ಹೊರತಾಗಿಯೂ ರಾಜ್ಯದ ನಾನಾ ಭಾಗಗಳಲ್ಲಿ ಅನೇಕ ಚಿಕ್ಕಪುಟ್ಟ ಪಾಳೇಪಟ್ಟುಗಳು ಸ್ಥಳೀಯವಾಗಿ ಅಸ್ತಿತ್ವಕ್ಕೆ ಬಂದು ಇತಿಹಾಸದ ಮೇಲೆ ಬೀರಿರುವ ಪ್ರಭಾವವನ್ನು ಕಡೆಗಣಿಸುವಂತಿಲ್ಲ. ಇಂತಹ ಪಾಳೇಪಟ್ಟುಗಳ ಅಸ್ತಿತ್ವ ಹಾಗೂ ಅವರ ಇತಿಹಾಸವನ್ನು ಡಾ. ಸಿ.ಆರ್. ಶ್ಯಾಮಲ ಅವರು **"ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ"** ಎಂಬ ಕೃತಿಯಲ್ಲಿ ಗುರುತಿಸಿದ್ದಾರೆ. ಇಂತಹ ಅನೇಕ ಪಾಳೇಪಟ್ಟುಗಳು ಬಳ್ಳಾರಿ, ಚಿತ್ರದುರ್ಗ, ತುಮಕೂರು ಮುಂತಾದ ಜಿಲ್ಲೆಗಳಲ್ಲಿ ಅಸ್ತಿತ್ವಕ್ಕೆ ಬಂದವು, ವಿಶೇಷವಾಗಿ ಬಳ್ಳಾರಿ ಜಿಲ್ಲೆಯ ಕುರುಗೋಡು, ಬಳ್ಳಾರಿ, ಸಂಡೂರು, ಹತ್ತಿಬೆಳಗಲ್ಲು, ವಡ್ಡು, ದರೋಜಿ, ಕೆಂಚನಗುಡ್ಡ, ಜರಿಮಲೆ, ಗುಡೇಕೋಟೆ, ಹರಪನಹಳ್ಳಿ, ಮುಂತಾದ ಕಡೆ ಪಾಳೆಯಗಾರರು ತಮ್ಮ ಪಾಳೇಪಟ್ಟುಗಳನ್ನು ನಿರ್ಮಿಸಿಕೊಂಡು ಆಡಳಿತ ನಡೆಸಿದ್ದರು. ಈ ಪಾಳೆಪಟ್ಟುಗಳಲ್ಲಿಯೇ ಬಹಳ ಪ್ರಮುಖವಾದ ಪಾಳೆಪಟ್ಟು ಎಂದರೆ ಹರಪನಹಳ್ಳಿ. ಇಲ್ಲಿ ಆಡಳಿತ ನಡೆಸಿದ ಇವರು ಹರಪನಹಳ್ಳಿ ಪಾಳೆಗಾರರು ಎಂದೇ ಹೆಸರಾಗಿದ್ದಾರೆ. ಇವರು ಕ್ರಿ.ಶ. ೧೫೬೫ರಲ್ಲಿ ಅಸ್ತಿತ್ವಕ್ಕೆ ಬಂದು ೧೮೫೭ ರವರೆಗೆ ಆಡಳಿತ ನಡೆಸಿದ್ದಾರೆ.

ಕುಂಬಾ ಸದಾಶಿವಪ್ಪನವರು **'ಹರಪನಹಳ್ಳಿ ಪಾಳೇಗಾರರ ಇತಿಹಾಸ ದರ್ಶನ'** ಎಂಬ ಕೃತಿಯಲ್ಲಿ ಸುಮಾರು ೧೬ ಜನ ಪಾಳೇಗಾರರನ್ನು ಹೆಸರಿಸಿದ್ದಾರೆ. ಹರಪನಹಳ್ಳಿ, ಉಚ್ಚಂಗಿದುರ್ಗ, ಬಾಗಳಿ ಇವರ ಪ್ರಮುಖ ಆಡಳಿತ ಕೇಂದ್ರಗಳಾಗಿದ್ದವು. ಈ ಹಿಂದೆ ಬಳ್ಳಾರಿ ಜಿಲ್ಲೆಗೆ ಸೇರಿದ್ದ ಹರಪನಹಳ್ಳಿ, ಪ್ರಸ್ತುತ ದಾವಣಗೆರೆ ಜಿಲ್ಲೆಗೆ ಸೇರಿದ ಒಂದು ತಾಲ್ಲೂಕು ಕೇಂದ್ರವಾಗಿದೆ. ಹರಪನಹಳ್ಳಿ ಪ್ರಾಚೀನ ಕಾಲದಲ್ಲಿ ಒಂದು ಅಗ್ರಹಾರವಾಗಿದ್ದು ಹರಿಪುರ, ಹರಿಪ್ಪನಹಳ್ಳಿ, ಹರಪ್ನಹಳ್ಳಿ, ಹರಪನಹಳ್ಳಿ ಎಂಬ ಹೆಸರುಗಳಲ್ಲಿ ಉಲ್ಲೇಖಗೊಂಡಿದೆ. ಇದು ಪ್ರಾಚೀನ ಕಾಲದ ಒಂದು ಅಗ್ರಹಾರವಾಗಿತ್ತು ಎಂಬುವುದರ ಪ್ರತೀಕವಾಗಿ ಇಂದೂ ಸಹ ಇಲ್ಲಿಯ ಬ್ರಾಹ್ಮಣ ಬೀದಿಯಲ್ಲಿರುವ ಬ್ರಾಹ್ಮಣರ ಮನೆಗಳನ್ನು ಹಾಗೂ ಮನೆಯ ಒಳಗಡೆ ಸ್ವಂತ ನೀರಿನ ಬಾವಿ, ಇತ್ಯಾದಿಗಳ ಮೂಲಕ ಗುರುತಿಸಬಹುದಾಗಿದೆ. ಸದ್ಯ ಈ ಹರಪನಹಳ್ಳಿ ಪಾಳೇಗಾರ ಕಾಲದ ಐತಿಹಾಸಿಕ ಪ್ರಾಮುಖ್ಯ ಸ್ಥಳಗಳಲ್ಲಿ ಒಂದಾದ "ಬಂಡ್ರಿ" ಮಹತ್ವವನ್ನು ಕುರಿತು ವಿವರಿಸಲಾಗಿದೆ.

ಹರಪನಹಳ್ಳಿ ಪಾಳೇಗಾರರು ಬಳ್ಳಾರಿ ಜಿಲ್ಲೆಯ ಸಮಕಾಲೀನ ಪಾಳೇಗಾರರಲ್ಲಿಯೇ ಬಹು ಪ್ರಬಲರಾಗಿದ್ದರು. ಸದಾ ಬರಗಾಲ ಮತ್ತು ಪ್ರಾಕೃತಿಕ ಸಂಪನ್ಮೂಲಗಳ ಕೊರತೆಯಲ್ಲಿಯೇ ಇದ್ದರೂ ಸಹ, ಈ ನಾಡಿನ ಪಾಳೇಗಾರರು ಸಮಕಾಲೀನ ರಾಜಕೀಯ ಇತಿಹಾಸ ಮತ್ತು ಸಂಸ್ಕೃತಿಯ ಮೇಲೆ ಬಹು ಪ್ರಭಾವ ಬೀರಿದ್ದಾರೆ. ಸೈನಿಕವಾಗಿಯೂ ಪ್ರಬಲರಿದ್ದು ತಮ್ಮ ನೆರೆಹೊರೆಯ ರಾಜ್ಯಗಳೊಂದಿಗೆ ರಾಜತಾಂತ್ರಿಕ ಸಂಬಂಧ ಹಾಗೂ ಪ್ರಭಾವಗಳನ್ನು ಹೊಂದಿದ್ದರು ಎಂದು ಹೇಳಬಹುದು. ಅನೇಕ ವೇಳೆ ತಮ್ಮ ಅಸ್ತಿತ್ವದ ಉಳುವಿಗಾಗಿ ಹೋರಾಟ ಮತ್ತು ಯುದ್ಧಗಳನ್ನು ಮಾಡಿದ್ದಾರೆ. ಈ ಪಾಳೇಗಾರರು ಜರಿಮಲೆ, ಗುಡಿಕೋಟೆ, ತರೀಕೆರೆ, ಬಸಾಪುರ ಚಿತ್ರದುರ್ಗ ಮುಂತಾದ ಪಾಳೇಗಾರರೊಂದಿಗೆ ಸ್ನೇಹ ಸಂಬಂಧಗಳನ್ನು ಹೊಂದಿದ್ದರು. ಬಲಿಷ್ಠ ಸೇನಾ ಪಡೆಯನ್ನು ಕಟ್ಟಿಕೊಂಡಿದ್ದು, ಹೋರಾಟದ ಮೂಲಕ ಉಚ್ಚಂಗಿದುರ್ಗಕೋಟೆ, ಹನಸಿಕೋಟೆ,

* ಸಹಾಯಕ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಎ.ಆರ್.ಜಿ. ಕಲಾ ಮತ್ತು ವಾಣಿಜ್ಯ ಕಾಲೇಜು, ದಾವಣಗೆರೆ.

ಬೆಳ್ಳಾಡುಕೋಟೆ, ಹೊಳಲುಕೋಟೆ, ಹಲಗಿಲವಾಡ ಕೋಟೆ, ಹುಲಗಿಕೋಟೆ, ಬಿದರಳ್ಳಿಕೋಟೆ, ಹಾಲಘಟ್ಟಿ ಕೋಟೆ, ಉಜ್ಜನಿಕೋಟೆ, ತೂಲಹಳ್ಳಿಕೋಟೆ ಮುಂತಾದ ಕೋಟೆಗಳ ಮೇಲೆ ತಮ್ಮ ಹಿಡಿತ ಹೊಂದಿದ್ದರು ಎಂದು ದಾಖಲಿಸಿದ್ದಾರೆ. ಆದರೆ ಹರಪನಹಳ್ಳಿ ಪಾಳೇಗಾರರ ಇತಿಹಾಸಕ್ಕೆ ಒಂದು ಸ್ಪಷ್ಟ ಹಾಗೂ ಬಲಿಷ್ಠ ಶಕ್ತಿಯನ್ನು ತಂದುಕೊಡುವ ಬಂಡ್ರಿ ಕುರಿತಂತೆ ಯಾವುದೇ ಉಲ್ಲೇಖಗಳು ಇರುವುದಿಲ್ಲ. ಡಾ. ಎಂ. ಕೊಟ್ರೇಶರವರು ತಮ್ಮ **'ಬಳ್ಳಾರಿ ಜಿಲ್ಲೆಯ ಕೋಟೆ ಕೊತ್ತಲುಗಳು'** ಎಂಬ ಸಂಶೋಧನ ಪ್ರಬಂಧದಲ್ಲಿ **ಬಂಡ್ರಿ** ಕುರಿತಂತೆ ಉಲ್ಲೇಖಿಸಿದ್ದಾರೆ. **ಬಂಡ್ರಿ** ಐತಿಹಾಸಿಕ ಮಹತ್ವ ನಿಜಕ್ಕೂ ಬಹಳ ಹೆಚ್ಚಿನದಾಗಿದೆ.* ಇಂದು ಐತಿಹಾಸಿಕ ಮಹತ್ವ ಸಾರುವ ಇಲ್ಲಿಯ ಕುರುಹುಗಳು ವಿನಾಶದ ಅಂಚಿನಲ್ಲಿರುವಲ್ಲಿ ಸರ್ಕಾರದ ಹಾಗೂ ಸಂಘ ಸಂಸ್ಥೆಗಳ ಗಮನ ಸೆಳೆಯುವ ಉದ್ದೇಶಕ್ಕಾಗಿ ಈ ಪ್ರಬಂಧವನ್ನು ಸಾದರಪಡಿಸಲಾಗಿದೆ.

ಐತಿಹಾಸಿಕ **ಬಂಡ್ರಿ** ಹರಪನಹಳ್ಳಿ ತಾಲ್ಲೂಕಿನಲ್ಲಿದ್ದು, ಹರಪನಹಳ್ಳಿಯಿಂದ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಹರಪನಹಳ್ಳಿ-ಹಡಗಲಿ ಮಾರ್ಗದಲ್ಲಿರುವ ಈ ಕುಗ್ರಾಮದ ವಾಯವ್ಯಭಾಗದಲ್ಲಿ ಸುಮಾರು ಎತ್ತರದಲ್ಲಿ ವಿಶಾಲ ಬೆಟ್ಟ ಇದೆ, ಇದನ್ನು ಬಳಸಿಕೊಂಡಂತೆ ಕೋಟೆಯನ್ನು ನಿರ್ಮಿಸಲಾಗಿತ್ತೆಂಬುದು ಅವಶೇಷಗಳ ಪರಿಶೀಲನೆಯಿಂದ ತಿಳಿದುಬರುತ್ತದೆ.

ಕೋಟೆಯ ವಾಸ್ತು ರಚನೆ, ಗಾತ್ರ ಮತ್ತು ಪ್ರದೇಶವನ್ನು ಅವಲೋಕಿಸಿದರೆ ಇದೊಂದು ಅತ್ಯುತ್ತಮವಾಗಿ ಹಾಗೂ ವ್ಯವಸ್ಥಿತವಾಗಿ ನಿರ್ಮಾಣಗೊಂಡಿದ್ದ ಕೋಟೆಯಾಗಿತ್ತೆಂದು ಹಾಗೂ ಪಾಳೇಗಾರರ ಒಂದು ಪ್ರಬಲ ರಕ್ಷಣಾ ಕೇಂದ್ರವಾಗಿತ್ತೆಂದು ಅಭಿಪ್ರಾಯಪಡಬಹುದಾಗಿದೆ. ಆಯಕಟ್ಟಿನ ಸ್ಥಳದಲ್ಲಿ ಈ ಕೋಟೆಯ ನಿರ್ಮಾಣವಾಗಿದ್ದು ಕೋಟೆಯ ಪ್ರಮುಖ ಲಕ್ಷಣಗಳನ್ನು ಹೊಂದಿದೆ. ಇದರ ನಿರ್ಮಾಪಕರನ್ನು ಕುರಿತಂತೆ ಸ್ಪಷ್ಟ ದಾಖಲೆಗಳು ಕಂಡುಬರುವುದಿಲ್ಲ. ಹರನಪನಹಳ್ಳಿ ಪಾಳೇಗಾರರ ಸಾಮಂತರಾಗಿದ್ದ ಗೋಣಿಬಸಪ್ಪ, ಚಿಗಟೇರಿ, ಶಿವಪ್ಪನಾಯಕ ಸೇರಿ ನಿರ್ಮಿಸಿದ ರೆಂಬ ಪ್ರತೀತಿ ಇದೆ ಎಂದು ಡಾ. ಎಂ. ಕೊಟ್ರೇಶರವರು ದಾಖಲಿಸಿದ್ದಾರೆ. ಇಲ್ಲಿಯ ಅವಶೇಷಗಳು ಹಾಗೂ ಭೌಗೋಳಿಕ ಹಿನ್ನೆಲೆ ಗಮನಿಸಿದರೆ ಈ ಕೋಟೆ ಒಂದು ಬೃಹತ್ ನಿರ್ಮಾಣವಾಗಿತ್ತೆಂದೂ, ಸುತ್ತಲೂ ಸರಾಸರಿ ೧೫-೨೦ ಅಡಿ ಎತ್ತರವಾದ ಹಾಗೂ ಸುಮಾರು ೫ ಅಡಿಗಳಷ್ಟು ಅಗಲವಾದ ರಕ್ಷಣೆಯ ಗೋಡೆ ಹೊಂದಿತ್ತೆಂದು ಹೇಳಬಹುದು. ಈ ರಕ್ಷಣಾ ಗೋಡೆಗೆ ಹೊಂದಿಕೊಂಡಂತೆ ವೈರಿಗಳ ಆಗಮನವನ್ನು ಬಹುದೂರದಿಂದಲೇ ಗುರುತಿಸಲು ಅನುಕೂಲವಾಗುವಂತೆ ಸುಮಾರು ೮-೧೦ ವೀಕ್ಷಣಾ ಗೋಪುರಗಳು ಇದ್ದವೆಂದು ಸ್ಥಳೀಯರು ಹೇಳುತ್ತಾರೆ. ಇವುಗಳಲ್ಲಿ ಒಂದು ಮಾತ್ರ ಉತ್ತಮ ಸ್ಥಿತಿಯಲ್ಲಿ ಇದ್ದು ೨ ಅಥವಾ ೩ ಕಾವಲು ಗೋಪುರಗಳನ್ನು ಅವಶೇಷಗಳ ಮೂಲಕ ಗುರುತಿಸಬಹುದು. ಈ ಕಾವಲು ಗೋಪುರದಿಂದ ಕಣ್ಣು ಹಾಯಿಸಿದರೆ ಸುವಾರು ೨-೩ ಕಿ.ಮೀ. ದೂರದಿಂದಲೇ ವೈರಿಗಳ ಬರುವಿಕೆಯನ್ನು ಗುರುತಿಸಲು ಸಾಧ್ಯವಾಗುತ್ತಿತ್ತೆಂದು ಊಹಿಸಬಹುದು.

ಬಂಡ್ರಿ ಕೋಟೆ ಒಂದು ಉತ್ತಮ ವಾಸ್ತು ರಚನೆ ಉಳ್ಳ ಪ್ರವೇಶ ದ್ವಾರವನ್ನು ಹೊಂದಿದೆ. ಈ ಪ್ರವೇಶ ದ್ವಾರದ ಮೂಲಕ ನಾವು ಕೋಟೆಯನ್ನು ಪ್ರವೇಶಿಸಿದಾಗ ಎಡ ಮತ್ತು ಬಲಭಾಗದಲ್ಲಿ ಸುಮಾರು ೮ ಅಂಕಣಗಳನ್ನು ಹೊಂದಿದ ಹಜಾರವಿದೆ. ಬಹುತೇಕ, ಈ ಹಜಾರದಲ್ಲಿ ಕಾವಲುಗಾರರು ಇರುತ್ತಿದ್ದಿರಬಹುದು. ಮುಖ್ಯದ್ವಾರವನ್ನು ಮುಚ್ಚಿದಾಗ ಒಳಪ್ರವೇಶಿಸಲು ಹೆಬ್ಬಾಗಿಲಿನ ಪಾರ್ಶ್ವಗಳಲ್ಲಿ ಚಿಕ್ಕ ಪ್ರವೇಶದ್ವಾರಗಳಿವೆ. ಕಟ್ಟಿಗೆಯಿಂದ ತಯಾರಿಸಿದ ದಪ್ಪನೆಯ ಬೃಹತ್ (ಬಾಗಿಲು) ಕದಗಳನ್ನು ಇಟ್ಟಿದ್ದರೆಂದು ಹೇಳಬಹುದು. ಶಿಲ್ಪ ದೃಷ್ಟಿಯಿಂದ ಅಂತಹ ಯಾವುದೇ ಕುರುಹುಗಳು ಸಿಗದಿದ್ದರೂ ವಾಸ್ತು ದೃಷ್ಟಿಯಿಂದ ಇದೊಂದು ಪ್ರಮುಖ ಕೋಟೆಯಾಗಿದೆ ಎನ್ನಬಹುದು. ಈ ಕೋಟೆಯ ಪ್ರವೇಶದ್ವಾರದ ಮೇಲ್ಭಾಗದಲ್ಲಿ ಕಾವಲು ಕಾಯಲು ಅನುಕೂಲವಿತ್ತೆಂದು ಕಂಡುಬರುತ್ತದೆ. ಬಂದೂಕಿನ ನಳಿಕೆಗಳನ್ನು ಇಟ್ಟುಕೊಳ್ಳಲು ಕಿಂಡಿಗಳಿವೆ. ಸ್ಥಳೀಯ ಶಿಲೆಗಳನ್ನು ಉಪಯೋಗಿಸಿಕೊಂಡು ಕೋಟೆಯನ್ನು ನಿರ್ಮಿಸಿರುವಂತಿದೆ.

ಕೋಟೆಯ ಒಳಭಾಗದಲ್ಲಿ ಆಂಜನೇಯ ದೇವಸ್ಥಾನ ನೈರುತ್ಯ ಭಾಗದಲ್ಲಿ ನುಪ್ಪಿನಪ್ಪ ದೇವಸ್ಥಾನ ಇದೆ. ಇದರ ಸಮೀಪದಲ್ಲಿಯೇ ದಾದಣ್ಣ ರಂಗಣ್ಣರ ಚಿಕ್ಕ ಚಿಕ್ಕ ಗುಡಿಗಳಿವೆ. ಬಂಡಿ ಬಸಪ್ಪನ ದೇವಸ್ಥಾನ ಸಹ ಈ ಕೋಟೆಗೆ ಸಮೀಪದಲ್ಲಿದೆ. ಕೋಟೆಯ ಒಳಭಾಗವನ್ನು ಪರಿಶೀಲಿಸಿದಾಗ ಹರಪನಹಳ್ಳಿ ಪಾಳೇಗಾರರ ಕಾಲದಲ್ಲಿ ಕೋಟೆಯ ಒಳಗಡೆಯೇ ಜನವಸತಿ ಇತ್ತೆಂದು ಹೇಳಬಹುದು. ಕೆಲ ಮಡಿಕೆ-ಕುಡಿಕೆಗಳು ಸಹ ಪರಿಶೀಲನೆಯ ಕಾಲದಲ್ಲಿ ದೊರೆತಿವೆ. ಒಟ್ಟಾರೆ ಹರಪನಹಳ್ಳಿ ಪಾಳೇಗಾರ ಕಾಲದಲ್ಲಿ **ಬಂಡ್ರಿ** ಒಂದು ಪ್ರಧಾನ ಸೈನಿಕ ಆಯಕಟ್ಟಿನ ಸ್ಥಳವಾಗಿತ್ತೆಂದು ಅಭಿಪ್ರಾಯಪಡಬಹುದಾಗಿದೆ. ಹರಪನಹಳ್ಳಿ ಪಾಳೇಗಾರರ ಕೇಂದ್ರ ಸ್ಥಾನವಾಗಿದ್ದ ಹರಪನಹಳ್ಳಿಯಲ್ಲಿಯೇ ಒಂದು ಕೋಟೆ ಇತ್ತು. ಆದರೆ ಇದು ಸಂಪೂರ್ಣ ನಾಶವಾಗಿದ್ದು ಅದರ ವಾಸ್ತು ಕುರುಹುಗಳಾವವು ಕೂಡ ಇಂದು ಕಂಡುಬರುವುದಿಲ್ಲ.



**ಹರಪನಹಳ್ಳಿ ಪಾಳೇಗಾರರ ಕಾಲದ ಬಂಡ್ರಿ**



**ಪಾಳೆಯಗಾರರ ಕಾಲದ ಬಂಡ್ರಿ**

ಆದರೆ ಇದಕ್ಕೆ ಅಪವಾದವೆನ್ನುವಂತೆ ಬಂಡ್ರಿಯಲ್ಲಿ ಹರಪನಹಳ್ಳಿ ಪಾಳೇಗಾರರ ಕಾಲದ ಕೋಟೆಯ ಹೆಬ್ಬಾಗಿಲಿನ ವಾಸ್ತು ಹಾಗೂ ಒಂದು ಕಾವಲು ಗೋಪುರ ಅತ್ಯುತ್ತಮವಾಗಿ ಕಂಡುಬರುತ್ತಿರುವುದು ಈ ಕಾಲದ ಇತಿಹಾಸದ ಅಧ್ಯಯನಕ್ಕೆ ಅತ್ಯುತ್ತಮ ವಾಸ್ತು ದಾಖಲೆಯಾಗಿದೆ ಎನ್ನಬಹುದಾಗಿದೆ. ಆದ್ದರಿಂದಾಗಿ ಈ ಬಂಡ್ರಿಕೋಟೆಯ ಮಹತ್ವ ಹೆಚ್ಚಿನದಾಗಿದೆ ಎಂದು ಹೇಳಬಹುದು. ಇಷ್ಟೊಂದು ಐತಿಹಾಸಿಕ ಮಹತ್ವ ಇರುವ ಈ ಕೋಟೆ ಒಂದು ಸಂತಸದ ಸಂಗತಿಯಾದರೆ ಸ್ಥಳ ಪರಿಶೀಲನೆಯ ಸಂದರ್ಭದಲ್ಲಿ ಕಂಡು ಬಂದ ಇನ್ನೊಂದು ಆಘಾತಕಾರಿಯಾದ ಅಂಶವೆಂದರೆ ; ಈ ಕೋಟೆ ಇರುವ ಹೆಬ್ಬಂಡೆಯನ್ನು ಕಲ್ಲು ಗಣಿ ಮಾಫಿಯಾ ಸರ್ಕಾರದ ಅನುಮತಿಯಿಂದಲೋ ಅಥವಾ ಅನುಮತಿ ಇಲ್ಲದೆಯೋ ಸುತ್ತಲೂ ಸುಮಾರು ೫೦-೬೦ ಅಡಿಗಳಷ್ಟು ಆಳದಲ್ಲಿ ಅಗಿದಿದ್ದಾರೆ ಈ ಕಲ್ಲುಗಳನ್ನು ಹೆಬ್ಬಲು ಸ್ಫೋಟಕಗಳನ್ನು ಬಳಸುತ್ತಾರೆ. ಇಲ್ಲಿರುವ ಐತಿಹಾಸಿಕ ಕೋಟೆಯ ಅಸ್ತಿತ್ವವನ್ನು ನಿಖರವಾಗಿ ಸಾರುವ ಪ್ರವೇಶದ್ವಾರ ಈ ಕಲ್ಲು ಗಣಿಗಾರಿಕೆ ನಡೆಸುವ ಹೆಬ್ಬಂಡೆಗೆ ಅಂಟಿಕೊಂಡು ೪-೫ ಅಡಿಗಳ ಅಂತರದಲ್ಲಿದೆ. ಕೆಲ ಯುವಕರು ತಮ್ಮ ಊರಿನ ಕೋಟೆಯ ಬಗ್ಗೆ ಹೆಮ್ಮೆಯನ್ನು ವ್ಯಕ್ತಪಡಿಸುತ್ತಾ ಕಲ್ಲು ಗಣಿ ಚಟುವಟಿಕೆಯನ್ನು ನಿಲ್ಲಿಸುವಂತೆ ಮನವಿ ಮಾಡಿಕೊಳ್ಳುತ್ತಾರೆ. ಈ ಗಣಿಯಲ್ಲಿ ನಿಂತಿರುವ ನೀರಿನಲ್ಲಿ ಹೆಣ್ಣು ಮಕ್ಕಳು ಬಟ್ಟೆ ಒಗೆಯುತ್ತಾರೆ. ಊರಿನ ಜನ ತಮ್ಮ ದನಕರುಗಳ ಮೈತೊಳೆಯುವುದು, ನೀರು ಕುಡಿಸುವುದು ಮಾಡುತ್ತಾರೆ. ಐತಿಹಾಸಿಕ ಸ್ಮಾರಕಗಳನ್ನು ರಕ್ಷಿಸುವುದು ನಮ್ಮ ಜವಾಬ್ದಾರಿಯಾಗಿದೆ. ಆದರೆ ಈ ಲಕ್ಷಣಗಳಾವುವೂ ಇಲ್ಲಿ ಕಂಡುಬರದಿರುವುದು ವಿಷಾದನೀಯ ಸಂಗತಿಯಾಗಿದೆ.

ಸರ್ಕಾರ, ಜಿಲ್ಲಾಡಳಿತ, ತಹಶೀಲ್ದಾರರು ಈ ಕೂಡಲೇ ಕಲ್ಲು ಗಣಿಗಾರಿಕೆ ಚಟುವಟಿಕೆಯನ್ನು ನಿಲ್ಲಿಸಲು ಕ್ರಮ ಕೈಕೊಳ್ಳ ಬೇಕಿದೆ. ಸರ್ಕಾರ ಮತ್ತು ಜನಪ್ರತಿನಿಧಿಗಳು ಇದಕ್ಕೆ ಸ್ಪಂದಿಸಿದರೆ ಹರಪನಹಳ್ಳಿ ಪಾಳೆಗಾರರ ಐತಿಹಾಸಿಕ ಮಹತ್ವ ಸಾರುವ ಈ ಕೋಟೆಯ ಮುಖ್ಯಭಾಗವನ್ನಾದರು ಸಂರಕ್ಷಿಸಲು ಸಾಧ್ಯವಾಗುತ್ತದೆ.

(ನಾನು ಪ್ರಸ್ತುತ ಸಂಪ್ರಬಂಧ ಸಿದ್ಧಪಡಿಸಲು ಬಂಡ್ರಿ ಸ್ಥಳ ಪರಿಶೀಲನೆಯನ್ನು ದಿನಾಂಕ ೩ನೇ ಅಕ್ಟೋಬರ್ ೨೦೧೦ ಭಾನುವಾರದಂದು ನನ್ನ ಸಹೋದ್ಯೋಗಿ ಜೆ.ವಿ. ಮಲ್ಲಿಕಾರ್ಜುನ ಹಾಗೂ ನನ್ನ ಪುತ್ರ ಅಶ್ವಿನ್ ಕುಮಾರ್ ಜೊತೆಗೂಡಿ ನಡೆಸಲಾಯಿತು.

ಈ ಸಂಪ್ರಬಂಧವನ್ನು ಸಿದ್ಧಪಡಿಸಲು ನನಗೆ ಸ್ಫೂರ್ತಿ ಹಾಗೂ ಸಲಹೆ ಸಹಕಾರಗಳನ್ನು ನೀಡಿದ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಎಂ. ಕೊಟ್ರೇಶರವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.)

## ಆಧಾರಸೂಚಿ

೧. ಡಾ. ಕೊಟ್ರೇಶ್. ಎಂ., **ಬಳ್ಳಾರಿ ಜಿಲ್ಲೆಯ ಕೋಟೆ – ಕೊತ್ತಲುಗಳು ಒಂದು ಅಧ್ಯಯನ**, ಪಿಹೆಚ್.ಡಿ., ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, (ಅಪ್ರಕಟಿತ).
೨. ಡಾ. ಯೋಗೀಶ್ವರಪ್ಪ. ಡಿ.ಎನ್., **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು**, ಧಾತ್ರಿ ಪುಸ್ತಕ, ಬೆಂಗಳೂರು, ೨೦೦೯.
೩. ಸದಾಶಿವಪ್ಪ. ಕುಂ.ಬಾ., **ಹರಪನಹಳ್ಳಿ ಪಾಳೇಗಾರರ ಇತಿಹಾಸ ದರ್ಶನ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೬.
೪. ಡಾ. ಶ್ಯಾಮಲ ಸಿ.ಆರ್., **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೮.

ಡಾ. ಅಮರೇಶ ಯತಗಲ್*

# ಸುರಪುರ ಸಂಸ್ಥಾನದ ರಾಣಿಯರು

ಗುಲಬರ್ಗಾ ಜಿಲ್ಲೆಯ ಸುರಪುರ ಸಂಸ್ಥಾನವು ಕ್ರಿ.ಶ. ೧೬೩೬ ರಿಂದ ಕ್ರಿ.ಶ. ೧೮೫೮ ರವರೆಗೆ ಅಸ್ತಿತ್ವದಲ್ಲಿತ್ತು. ಗಡ್ಡಿಪಿಡ್ಡ ನಾಯಕ ಈ ಸಂಸ್ಥಾನದ ಸ್ಥಾಪಕ. ಇಲ್ಲಿ ೧೨ ಜನ ನಾಯಕ ಅರಸರು ಇಲ್ಲಿ ಆಳ್ವಿಕೆ ಮಾಡಿದ್ದಾರೆ. ಈ ಅರಸರುಗಳಂತೆಯೇ ಅನೇಕ ರಾಣಿಯರೂ ಆಳ್ವಿಕೆ ಮಾಡಿದ ಕುರುಹುಗಳಿವೆ. ಆದರೆ ಈ ರಾಣಿಯರ ಕುರಿತಾಗಿ ಸಂಶೋಧನೆ ಯಾಗಿಲ್ಲ. ಇವರ ಕುರಿತಾಗಿ ಅನೇಕ ದಾಖಲೆಗಳು, ಸ್ಮಾರಕ ಗಳು, ಮೌಖಿಕ ಸಾಹಿತ್ಯ ಮಾಹಿತಿಯನ್ನು ಒದಗಿಸುತ್ತವೆ. ಈ ಸಂಸ್ಥಾನದ ರಾಣಿಯರು ರಾಜಕಾರಣದಲ್ಲಿ ಭಾಗವಹಿಸಿ ರುವುದಲ್ಲದೆ, ರಾಜತಂತ್ರಗಳಿಗೆ ಸಂಬಂಧಿಸಿದ ವಿಷಯಗಳನ್ನು ಅರಸನೊಂದಿಗೆ ಚರ್ಚಿಸುತ್ತಿದ್ದರು. ರಾಜ್ಯಕ್ಕೆ ಸಂಬಂಧಿಸಿದ ಕೆಲವು ಮಹತ್ವದ ಕಾರ್ಯಗಳಲ್ಲಿ ನೇರವಾಗಿ ಭಾಗವಹಿಸುವ ಹಕ್ಕು ರಾಣಿಯರಿಗಿದ್ದಿತ್ತು. ಇಂಥ ಅನೇಕ ರಾಣಿಯರಲ್ಲಿ ರಾಣಿ ಅಮ್ಮಾನಾಗತಿ (ಅವ್ವನಾಗತಿ), ರಾಣಿಕಾಂತಮ್ಮ, ರಾಣಿ ರಂಗಮ್ಮ ಹಾಗೂ ರಾಣಿ ಈಶ್ವರಮ್ಮ ಮುಂತಾದವರು ಸುರಪುರ ಸಂಸ್ಥಾನದ ಆಡಳಿತವನ್ನು ಕೈಗೆತ್ತಿಕೊಂಡ ದೃಷ್ಟಾಂತ ಗಳಿವೆ.

ಯಾವುದೇ ಒಂದು ಸಂಸ್ಥಾನ, ರಾಜ್ಯ, ಸಾಮ್ರಾಜ್ಯಕ್ಕೆ ಅರಸರಿರುವಂತೆ, ರಾಣಿಯರೂ ಇರುತ್ತಾರೆ. ಪ್ರಧಾನ ಪುರುಷ ವ್ಯವಸ್ಥೆಯಲ್ಲಿ ಬಹುಪತ್ನಿತ್ವ ಸಹಜವೆಂಬಂತೆ ಜಾರಿಯಲ್ಲಿದೆ. ಈ ಶತಮಾನದ ಹಳೆತಲಮಾರಿನ ಜಮೀನ್ದಾರರು ಹಾಗೂ ಇತರೆ ಸ್ಥಿತಿವಂತರು ಬಹುಪತ್ನಿತ್ವವನ್ನು ಕಾಯ್ದುಕೊಂಡು ಬಂದಿದ್ದನ್ನು ಕಾಣಬಹುದಾಗಿದೆ. ಹಾಗೆಯೇ ಅರಸು ಮನೆತನಗಳಲ್ಲಿ ಅರಸನಾದವನು ಹಲವಾರು ಹೆಣ್ಣುಗಳನ್ನು ವಿವಾಹವಾಗಬಹುದಾಗಿತ್ತು ಎಂಬುದನ್ನು ಇತಿಹಾಸದಿಂದ ಅರಿಯಬಹುದು. ಅರಸನನ್ನು ವಿವಾಹವಾದ ಹೆಣ್ಣುಗಳನ್ನೆಲ್ಲಾ ರಾಣಿಯರೆಂದು ಕರೆಯಲಾಗುತ್ತಿತ್ತು. ಅದರಲ್ಲಿ ಹಿರಿಯ ಳಾದವಳು ಮತ್ತು ಎಲ್ಲಾ ರೀತಿಯಲ್ಲಿಯೂ ಅರ್ಹತೆ ಹೊಂದಿದವಳು ಪಟ್ಟದರಾಣಿ (ಪಟ್ಟದರಸಿ) ಯಾಗುತ್ತಿದ್ದಳು. ಇವಳಿಗಿರುವ ಅಧಿಕಾರ ಇತರೇ ರಾಣಿಯರಿಗೆ ಇರುತ್ತಿರಲಿಲ್ಲ.

'ಪಟ್ಟದರಸಿ' ಎನ್ನುವಲ್ಲಿ 'ಪಟ್ಟ' ಮತ್ತು 'ಅರಸಿ' ಎನ್ನುವ ಎರಡು ಪದಗಳು ಬಳಕೆಗೊಂಡಿವೆ. 'ಪಟ್ಟ' ಎಂದರೆ ಶುದ್ಧವಾದ, ಮಡಿವಸ್ತ್ರವಾದ ರೇಷ್ಮೆ, ಸಿಂಹಾಸನ, ಅಧಿಕಾರ, ಪದವಿ ಎಂದು; 'ಅರಸಿ' ಎಂದರೆ ರಾಜನ ಪತ್ನಿ ಎಂದರ್ಥ. ಅಂದರೆ ಶುದ್ಧವಾದ ಮಡಿವಸ್ತ್ರವನ್ನು ಹಣೆಗೆ ಕಟ್ಟಿಕೊಂಡ ಪತ್ನಿ ಹಾಗೂ ಅಧಿಕಾರ, ಸಿಂಹಾಸನ, ಪದವಿಯನ್ನು ಪಡೆದ ರಾಜನ ಪತ್ನಿಯೇ ಪಟ್ಟದರಸಿ[1] ಎಂಬ ಅರ್ಥವನ್ನು ಸೂಚಿಸುತ್ತದೆ. ರಾಣಿಯರನ್ನು ಸಾಮಾನ್ಯವಾಗಿ ಅರಸಿ, ಪಿರಿಯರಸಿ, ಪಟ್ಟಮಹಾದೇವಿ, ಅಗಸತಿ, ರಾಣಿ ಎಂದು ಕರೆಯಲಾಗುತ್ತಿದ್ದಿತು.[2] ಪಟ್ಟಮಹಾದೇವಿ ಅಂದರೆ ರಾಜನ ಕೂಡ ಪಟ್ಟಕಟ್ಟಿಸಿಕೊಂಡ ರಾಣಿ[3] ಪಟ್ಟಕಟ್ಟು ಎಂದರೆ ಪಟ್ಟಂಗಟ್ಟು; ಅಧಿಕಾರ ವಹಿಸಿಕೊಡುವುದು.[4] ಪಟ್ಟ ಎನ್ನುವುದಕ್ಕೆ ಅಧಿಕಾರ ಎಂಬ ಅರ್ಥವನ್ನು ನೀಡಬಹುದು. ಪಟ್ಟದರಸಿ ಎಂದರೆ ಅಧಿಕಾರವುಳ್ಳ ಅರಸಿ ಎಂದು ಭಾವಿಸಬಹುದಾಗಿದೆ. ಒಟ್ಟಿನಲ್ಲಿ 'ಪಟ್ಟ' ಎನ್ನುವುದು ಉನ್ನತ ಸ್ಥಾನವನ್ನು ಸೂಚಿಸುವ ಪದವಾಗಿದೆ. ಪಟ್ಟದರಸ, ಪಟ್ಟದರಸಿ, ಪಟ್ಟದಾನೆ, ಪಟ್ಟದ ಕುದುರೆ ಇವುಗಳೆಲ್ಲವೂ ಇತರ ಪ್ರಾಣಿಗಳಿಗಿಂತ ಅಥವಾ ಅರಸ, ಅರಸಿಯರಿಗಿಂತ ಭಿನ್ನ ಎಂಬುದನ್ನು ಸೂಚಿಸುವ, ಶುದ್ಧತೆಯನ್ನು ತಿಳಿಸುವ ಪದವಾಗಿ ಬಳಕೆಗೊಂಡಿರುವುದು ಕಂಡುಬರುತ್ತದೆ.

ಸುರಪುರ ಅರಸುಮನೆತನದ ಪಟ್ಟದರಾಣಿಯಾಗು ವವಳು ಹಲವು ಪ್ರಮುಖ ಲಕ್ಷಣಗಳನ್ನು ಉಳ್ಳವರಾಗಿರ ಬೇಕೆಂಬ ನಿಯಮವಿತ್ತು. ಮುಖ್ಯವಾಗಿ ಪಟ್ಟದರಸಿಯಾಗು ವವಳು ಸ್ವಜಾತಿಯವಳಾಗಿರಬೇಕು ಹಾಗೂ ವಿಜಾತಿ ಬೆಡಗಿನವಳಾಗಿರಬೇಕು. ನಾಯಕ ಅರಸುಮನೆತನಗಳಲ್ಲಿ ನಾಯಕ ಜಾತಿಯವಳೇ ಆಗಿರಬೇಕು. ವಿಜಾತಿ ಬೆಡಗು ಎಂದರೆ ನಾಯಕ ಅರಸುಮನೆತನಗಳಲ್ಲಿ ಉದಾಹರಣೆಗೆ ಸುರಪುರದ ಅರಸರು ಗೋಸಲವರು, ಗುಡಗುಂಟಿ ಅರಸರೂ ಗೋಸಲವರು. ಇವರೀರ್ವರಿಗೂ ಕೊಡುಕೊಳ್ಳುವಿಕೆ (ವೈವಾಹಿಕ ಸಂಬಂಧ) ನಡೆಯುತ್ತಿರಲಿಲ್ಲ. ಅದೇ ದೇವದುರ್ಗ

* ಅಧ್ಯಾಪಕರು, ಸರ್ಕಾರಿ ವಸತಿ ಗೃಹಸಂಖ್ಯೆ-೧೧, ಐ.ಬಿ. ಹಿಂದುಗಡೆ, ಲಿಂಗಸೂಗೂರು, ರಾಯಚೂರು.

ದವರು ಜಂಪಲ ಬೆಡಗಿನವರು. ಅವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳಸಬಹುದಾಗಿತ್ತು. ಈ ಪದ್ದತಿ ಅರಸು ಮನೆತನವಲ್ಲದ ಸಾಮಾನ್ಯ ನಾಯಕರಲ್ಲಿಯೂ ಇದೆ. ಪಟ್ಟದರಸಿಯಾಗುವವಳು ಅಂಗ ಊನತೆಯುಳ್ಳವಳಾಗಿರ ಬಾರದು, ಎಲ್ಲಾ ರೀತಿಯಿಂದಲೂ ಸುಲಕ್ಷಣವುಳ್ಳವ ಳಾಗಿರಬೇಕು. ಅಂದರೆ ಆಚಾರ-ವಿಚಾರಗಳಲ್ಲಿ ರೂಪಲಾವಣ್ಯ ಗಳಲ್ಲಿ ಉನ್ನತ ಸ್ಥಾನದಲ್ಲಿರಬೇಕು. ಅರಸನಿಗೆ ಸಮಾನವಾದ ಅಂತಸ್ತಿನ ಇಲ್ಲವೆ ಗೌರವಯುತ ಮನೆತನದವಳಾಗಿರಬೇಕು. ವಿವೇಕವುಳ್ಳವಳು, ಕಲೆಯ ಜ್ಞಾನ ಅರಿತವಳು, ಧಾರ್ಮಿಕ ಸಹಿಷ್ಣುತೆಯುಳ್ಳವಳೂ ಆಗಿರಬೇಕಿತ್ತು. ಈ ಎಲ್ಲಾ ನಿಯಮ ಗಳನ್ನು ಕಡ್ಡಾಯವಾಗಿ ಪಾಲಿಸಲಾಗುತ್ತಿತ್ತು.

ಈ ಸಂಸ್ಥಾನದ ಹೆಂಡತಿಯರಿಗೆ (ರಾಣಿಯರಿಗೆ) 'ನಾಗತಿ'ಯರೆಂದು ಕರೆಯುತ್ತಿದ್ದರು. 'ನಾಗತಿ' ಎಂಬುದಕ್ಕೆ ನಿಘಂಟುವಿನಲ್ಲಿ ಬೇರೆ ಬೇರೆ ಅರ್ಥಗಳುಂಟು. 'ನಾಗತಿ' ಎಂಬುದಕ್ಕೆ 'ಅಮ್ಮ' ಎಂಬ ಸಂಬಂಧ ವಾಚಿ, ವಾರ್ಗಿಕ ಸೇರಿ 'ನಾಗತಿಯಮ್ಮ' ಎಂಬ ಹೆಸರಾಗಿ ಬಳಕೆಯಾಗಿದೆ.೫ 'ನಾಗತಿ' ಎಂಬುದು 'ರಾಜ' 'ಗೌಡ' 'ಅರಸ' ಎಂಬ ಪುಲ್ಲಿಂಗ ಸೂಚಕ ಹಾಗೂ ವೃತ್ತಿವಾಚಿ ಪದಗಳಿಗೆ ಸಂವಾದಿಯಾಗಿ ಅವರ ಹೆಂಡತಿಯರಿಗೆ 'ರಾಣಿ', 'ಗೌಡತಿ', 'ಅರಸಿ' ಎಂಬ ಪದಗಳು ಅಂಟುವುದು ಸಹಜ. ಅದೇ ರೀತಿ 'ನಾಗತಿ' ಎಂಬುದು ನಾಯಕ ಎಂಬುದರ ಸ್ತ್ರೀಲಿಂಗ ರೂಪವಾಗಿ ನಾಯಕ ಅರಸರ ಹೆಂಡತಿಯರ ಹೆಸರುಗಳಿಗೆ ಅಂಟಿಕೊಂಡಿರುವುದುಂಟು. ನಾಗತಿ ಎಂಬುದು ನಾಯಂಕಿತಿ, ನಾಯಕಿತಿನಿ, ನಾಯಿಕಿತಿ, ನಾಗತಿ ಎಂಬ ರೂಪಗಳಲ್ಲಿ ಬಳಕೆಯಾಗಿದೆ.

ಸುರಪುರ ಅರಸರ ಮಡದಿಯರಿಗೆ ಹೆಚ್ಚಾಗಿ ರಾಣಿಯ ರೆಂದೇ ಕರೆಯುವ ರೂಢಿಯಿದ್ದಿತು. ಸುರಪುರದ ಮೊಂಡಗೈ ವೆಂಕಟಪ್ಪನ ಪತ್ನಿ ರಾಣಿ ಓಂಕಾರಮ್ಮ, ಮುಮ್ಮಡಿ ಪಾಮನಾಯಕನ ಪತ್ನಿ ರಾಣಿ ತಿಮ್ಮಮ್ಮ, ಇಮ್ಮಡಿ ವೆಂಕಟಪ್ಪ ನಾಯಕನ ಪತ್ನಿ ರಾಣಿ ಲಕ್ಷ್ಮಮ್ಮ ಹೀಗೆ ಮುಂದುವರೆಯುತ್ತದೆ. ಈ ಮನೆತನಗಳಲ್ಲಿ ಈಗಲೂ ಈ ರೀತಿ ಕರೆಯುವುದು ಚಾಲ್ತಿಯಲ್ಲಿರುವುದನ್ನು ಕಾಣಬಹುದು.

ಪಟ್ಟದರಾಣಿಯನ್ನು ಆಯ್ಕೆ ಮಾಡುವಾಗ ರಾಜನು ಯುವರಾಜನಾಗಿದ್ದಾಗಲೇ ಯುವರಾಜ ಪಟ್ಟಕಟ್ಟಿ ಆತನಿಗೊಬ್ಬಳು ಯುವರಾಣಿಯನ್ನು ಹಿರಿಯರು ಆಯ್ಕೆಮಾಡಿ ಯುವರಾಣಿಗೆ ಪಟ್ಟಕಟ್ಟುತ್ತಿದ್ದರು. ಇವರೇ ಮುಂದೆ ಪಟ್ಟದರಸಿ ಹಾಗೂ ಪಟ್ಟದರಾಣಿಯರಾಗುತ್ತಿದ್ದರು.

ಪಟ್ಟದರಸಿಗೆ ಮಕ್ಕಳಾಗದಿದ್ದ ಪಕ್ಷದಲ್ಲಿ ಪಟ್ಟದರಸಿಯ ಬದಲಿಗೆ ಮತ್ತೊಬ್ಬ ರಾಣಿಯನ್ನು ಪಟ್ಟಕ್ಕೆ ಕೂಡಿಸಲಾಗುತ್ತಿತ್ತು. ಸಾಮಾನ್ಯವಾಗಿ ಅರಸನ ಪಟ್ಟವನ್ನು ಬಾಲ್ಯದಲ್ಲಿಯೆ ಕಟ್ಟಿದಾಗ ಇಂತಹ ಸಮಸ್ಯೆಗಳು ತಲೆದೋರುವುದುಂಟು. ಆದರೆ ಯುವರಾಜ, ಯುವರಾಣಿಯರಿಗೆ ಪಟ್ಟಕಟ್ಟಿ, ಹಲವಾರು ವರ್ಷ ಅವರು ಯುವರಾಜ, ಯುವರಾಣಿಯರಾಗಿಯೇ ಬಾಳಬೇಕಾಗುತ್ತದೆ. ಯುವರಾಜ ರಾಜನಾಗಿ ಪಟ್ಟಕ್ಕೆ ಕೂಡುವಹೊತ್ತಿಗೆ ಪಟ್ಟದ ಯುವರಾಣಿಗೆ ಮಕ್ಕಳಾಗದಿದ್ದ ಪಕ್ಷದಲ್ಲಿ ಬೇರೊಬ್ಬಳನ್ನು ಪಟ್ಟದರಸಿಯಾಗಿ ಆಯ್ಕೆ ಮಾಡಿಕೊಳ್ಳಲಾಗುತ್ತಿತ್ತು. ಕೆಲವು ಅರಸರಿಗೆ ಇಬ್ಬರು ಪಟ್ಟದ ರಾಣಿಯರಿದ್ದ ಬಗ್ಗೆ ತಿಳಿಯುತ್ತದೆ. ಇನ್ನೂ ಕೆಲವು ಸಲ ಪಟ್ಟದರಾಣಿ ಮಡಿದರೆ ಎರಡನೆಯ ರಾಣಿ, ಪಟ್ಟದರಾಣಿಯಾಗಿ ಬಡ್ತಿ ಹೊಂದುತ್ತಿದ್ದಳು. ಸುರಪುರದ ಇಮ್ಮಡಿ ವೆಂಕಟಪ್ಪ ನಾಯಕನ ಪಟ್ಟದರಾಣಿ ಲಕ್ಷ್ಮಮ್ಮ ಮಡಿದ ಮೇಲೆ ರಾಣಿ ಕಾಟಮ್ಮ ಪಟ್ಟದರಾಣಿಯಾಗಿ ಬಡ್ತಿ ಹೊಂದುತ್ತಾಳೆ. ಸಾಮಾನ್ಯ ವಾಗಿ ಪಟ್ಟದರಸನೊಂದಿಗೆ ರಾಣಿಗೂ ಪಟ್ಟಕಟ್ಟಲಾಗುತ್ತಿದ್ದರೂ ಕೆಲವು ಸಂದರ್ಭಗಳಲ್ಲಿ ಮಾತ್ರ ರಾಜನಿಗೆ ಮೊದಲು ಪಟ್ಟಾಭಿಷೇಕವಾಗಿ ತರುವಾಯ ರಾಣಿಯ ಆಯ್ಕೆ ನಡೆದು ಆಕೆಗೆ ಪಟ್ಟಕಟ್ಟಿ ಪಟ್ಟದರಾಣಿಯಾಗಿ ನೇಮಿಸಲಾಗುತ್ತಿತ್ತು.

ಪಟ್ಟದರಾಣಿಯು ರಾಜಕಾರ್ಯಗಳಲ್ಲಿ ಭಾಗವಹಿಸುವ ಗುಣವುಳ್ಳವಳಾಗಿರುತ್ತಿದ್ದಳಲ್ಲದೇ, ಮುಖ್ಯವಾದ ರಾಜತಂತ್ರ ಗಳಿಗೆ ಸಂಬಂಧಿಸಿದ ವಿಷಯಗಳನ್ನು ಹಾಗೂ ಪ್ರಮುಖ ಹಬ್ಬ-ಉತ್ಸವಗಳಿಗೆ ಸಂಬಂಧಿಸಿದ ವಿಷಯಗಳನ್ನು ಸ್ವತಃ ರಾಜನು ಪಟ್ಟದರಾಣಿಯೊಂದಿಗೆ ಸಮಾಲೋಚಿಸುತ್ತಿದ್ದನು. ರಾಜ್ಯಕ್ಕೆ ಸಂಬಂಧಿಸಿದ ಕೆಲವು ಮಹತ್ವದ ಕಾರ್ಯಗಳಲ್ಲಿ ನೇರವಾಗಿ ಭಾಗವಹಿಸುವ ಹಕ್ಕು ಪಟ್ಟರಾಣಿಗೆ ಇತ್ತು. ದತ್ತು ಸ್ವೀಕಾರದ ಸಂದರ್ಭದಲ್ಲಿ ಈಕೆಯ ಪಾತ್ರವು ಪ್ರಮುಖ ವಾಗಿರುತ್ತಿತ್ತು.

ಪಟ್ಟದರಾಣಿಯಾದವಳು ರಾಜ್ಯದ ಕೆಲವು ಭಾಗಗಳನ್ನು ಆಯ್ಕೆಮಾಡಿಕೊಂಡು ಆಳಬಹುದಾಗಿತ್ತು. ಪಟ್ಟದರಸನ ಸ್ಥಾನದ ನಂತರದ ಸ್ಥಾನವೇ ಪಟ್ಟದರಾಣಿಯದಾಗಿರುತ್ತಿತ್ತು. ನಂತರ ಮಹಾಪಧಾನ, ದಂಡನಾಯಕ, ಸಾಮಂತ ಅರಸರು ಮುಂತಾದವರಿರುತ್ತಿದ್ದರು. ಪಟ್ಟದರಾಣಿ ರಾಜನ ಅನುಪಸ್ಥಿತಿ ಯಲ್ಲಿ ರಾಜ್ಯವಾಳುವ ಅಧಿಕಾರವನ್ನು ಪಡೆದಿದ್ದಳು. ಆದರೆ ತಮ್ಮ ಮಕ್ಕಳನ್ನು ಮುಂದಿಟ್ಟುಕೊಂಡು ಸುರಪುರದ ರಾಣಿ ಅಮ್ಮಾನಾಗತಿ ರಾಣಿ ಕಾಂತಮ್ಮ, ರಾಣಿ ರಂಗಮ್ಮ ರಾಣಿ ಈಶ್ವರಮ್ಮ ಅಧಿಕಾರ ನಡೆಸಿದವರಲ್ಲಿ ಪಮುಖರಾಗಿದ್ದಾರೆ. ಆದರೂ ನಮ್ಮ ಐತಿಹಾಸಿಕ ದಾಖಲೆಗಳು ರಾಣಿಯರು ರಾಜ್ಯಕ್ಕೆ ನೀಡಿದ ಕೊಡುಗೆಯನ್ನು, ಅವರ ವಿಶೇಷವಾದ ಶ್ರಮವನ್ನೂ ಕಡೆಗಣಿಸಿವೆ. ಒಂದು ರಾಜ್ಯದ ಅಭಿವೃದ್ಧಿಗೆ ರಾಜರಂತೆಯೇ ತಮ್ಮ ಅಮೂಲ್ಯವಾದ ಸೇವೆಯನ್ನು

ತೆರೆಮರೆಯಲ್ಲಿ ಸಲ್ಲಿಸಿದ ಅದೆಷ್ಟೋ ರಾಣಿಯರ ಚರಿತೆಯು ದಾಖಲಾಗಬೇಕಿದೆ. ಈ ಮನೆತನದ ರಾಣಿಯರೂ ಕೂಡ ಇಂತಹ ತೆರೆಮರೆಯ ಸೇವೆಯನ್ನು ಅಪಾರವಾಗಿ ಮಾಡಿದ್ದಾರೆ. ಘೋಷಾದಂತಹ ಪದ್ಧತಿಯಿದ್ದರೂ ಅವರು ರಾಜ್ಯದ ಅಭಿವೃದ್ಧಿಯಲ್ಲಿ ತೊಡಗಿಸಿಕೊಂಡದ್ದುಂಟು.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕ (ಕ್ರಿ.ಶ. ೧೭೭೩-೧೮೦೨) ನು ಕೆಲ ಆಪ್ತರ ಸಹಾಯದಿಂದ ಮದ್ಯಪಾನ ಸೇವನೆಗೆ ಅಂಟಿಕೊಂಡಾಗ, ಪಟ್ಟದರಾಣಿ ಲಕ್ಷ್ಮಮ್ಮ ಅರಸನನ್ನು ಕುಡಿಯುವ ಚಟದಿಂದ ದೂರಮಾಡಲು ಪ್ರಯತ್ನಿಸಿದರೂ ಆಗಲಿಲ್ಲ. ಆಗ ಆಕೆ ವಯಸ್ಸಾದ ಮುಜುಮದಾರನಿಗೆ ಹೇಳಿದಾಗ, ಮುಜುಮದಾರ ರಾಜನ ಕುಡಿತವನ್ನು ಬಿಡಿಸಿದ. ಆಗ ಅರಸ ಎಲ್ಲಾ ಕುಡಿಯುವ ಪದಾರ್ಥಗಳನ್ನು ಒಡೆಯಿಸಿ ತನ್ನ ಆಪ್ತರಾದ ಕುಡುಕರಿಗೆ ಬರಕೂಡದೆಂದು ಅಪ್ಪಣೆಗೈದನು. ಅರಸನು ಈ ದುಶ್ಚಟವನ್ನು ಬಿಟ್ಟಿದ್ದಕ್ಕಾಗಿ ಪಟ್ಟದರಾಣಿ ಲಕ್ಷ್ಮಮ್ಮ ಮುಜುಮದಾರನಿಗೆ ಉಡುಗೊರೆ ನೀಡಿ ಮರ್ಯಾದೆ ಮಾಡಿದಳು.[೬] ಈ ರೀತಿ ಪಟ್ಟದರಾಣಿ ಯಾದವಳು ತನ್ನ ಕುಟುಂಬದ ಕುರಿತಾಗಿ ಅಪಾರ ಕಾಳಜಿಯನ್ನು ವಹಿಸಬೇಕಾಗಿದ್ದಿತು.

ಅರಸರು ಬಹುಪತ್ನಿಯರನ್ನು ಹೊಂದಿರುತ್ತಿದ್ದರು. ಕನಿಷ್ಠ ಇಬ್ಬರು ಪತ್ನಿಯರನ್ನಾದರೂ ಹೊಂದಿರುವುದು ದಾಖಲೆಗಳಿಂದ ಗೊತ್ತಾಗುತ್ತದೆ. ಸುರಪುರದ ಮೊದಲ ಅರಸ ಗಡ್ಡಿಪಿಡ್ಡನಾಯಕನಿಗೆ ೬ ಜನ, ಹಸರಂಗಿ ಪಾಮನಾಯಕನಿಗೆ ೫ ಜನ, ಪೀತಾಂಬರ ಬಹಿರಿ ಪಿಡ್ಡನಾಯಕನಿಗೆ ೪ ಜನ, ಇಮ್ಮಡಿ ಪಾಮನಾಯಕನಿಗೆ ಇಬ್ಬರು, ಮುಮ್ಮಡಿ ಪಿಡ್ಡನಾಯಕನಿಗೆ ೩ ಜನ, ಇಮ್ಮಡಿ ವೆಂಕಟಪ್ಪನಾಯಕನಿಗೆ ೧೬ ಜನ ಪತ್ನಿಯರಿದ್ದರು. ಸುರಪುರದ ಅರಸರಲ್ಲಿ ಈತನೇ ಅತಿ ಹೆಚ್ಚು ರಾಣಿಯರನ್ನು ಹೊಂದಿದವನು. ಈ ರೀತಿ ಅಂತಃಪುರದಲ್ಲಿ ರಾಣಿಯರಿದ್ದಾಗ ಸವತಿ ಮತ್ಸರಕ್ಕೂ ಅವಕಾಶ ವಿರುತ್ತಿತ್ತು. ಆ ಸಂದರ್ಭದಲ್ಲಿ ಎಲ್ಲರನ್ನೂ ಸಮಜಾಯಿಸಿ ಕೊಂಡು ಹೋಗುವ ಜವಾಬ್ದಾರಿ ಪಟ್ಟದರಾಣಿಯ ಮೇಲೆ ಇರುತ್ತಿತ್ತು. ಹೀಗಾಗಿ ಈಕೆ ಸಮತೋಲನ ದೃಷ್ಟಿಕೋನವನ್ನು ಹೊಂದಿರಬೇಕಾಗುತ್ತಿತ್ತು.

## ರಾಣಿ ಅಮ್ಮಾನಾಗತಿ(ಅವ್ವನಾಗತಿ) (ಕ್ರಿ.ಶ.೧೬೮೭-೧೬೮೯)

ಪಾಮನಾಯಕನು ಕಿ.ಶ. ೧೬೮೭ರಲ್ಲಿ ನಿಧನನಾದ ಮೇಲೆ ಅವನ ಅಣ್ಣನ ಮಗನಾದ ಪೀತಾಂಬರ ಬಹರಿ ಪಿಡ್ಡನಾಯಕನು ಅಧಿಕಾರಕ್ಕೆ ಬಂದನು. ಈತನ ಪಾರಂಭದ ಆಳ್ವಿಕೆಯ ಅವಧಿಯಲ್ಲಿ ಅಮ್ಮಾನಾಗತಿಯು ಸುಮಾರು ಎರಡು ವರ್ಷಗಳ ಕಾಲ ಆಡಳಿತ ಮಾಡಿದ್ದಾಳೆ. ಈಕೆಯನ್ನು ಅವ್ವನಾಗತಿಯೆಂತಲೂ ಕರೆಯುತ್ತಿದ್ದರು. ಈ ಮಹಾರಾಣಿಯು ಸೌಂದರ್ಯದ ಖನಿಯಾಗಿದ್ದು, ಚತುರ ಬುದ್ಧಿಯುಳ್ಳವಳೂ ಆಗಿದ್ದಳು. ಈಕೆಯ ಅಧಿಕಾರಾವಧಿಯಲ್ಲಿ ಸುರಪುರ ಸಂಸ್ಥಾನದ ಬೇಡ ಸೈನಿಕರ ಗುಂಪು ಈಕೆಯನ್ನು ಆರಾಧ್ಯದೈವ ಹಾಗೂ ತಾಯಿಯ ಸಮಾನವೆಂದು ಭಾವಿಸಿದ್ದರು.

## ರಾಣಿ ಕಾಂತಮ್ಮ(ಕ್ರಿ.ಶ. ೧೮೦೧-೧೮೦೩)

ರಾಜಾ ಇಮ್ಮಡಿ ವೆಂಕಟಪ್ಪನಾಯಕನ ಪತ್ನಿ ರಾಣಿ ಕಾಂತಮ್ಮ ತನ್ನ ಮಗ ಬಾಪುಸಾಹೇಬನ ಮಗಳಾದ ವೆಂಕಟ ರಂಗಮ್ಮಳನ್ನು ಸಿಂಹಾಸನದ ಮೇಲೆ ಕೂಡಿಸಿ ರಾಜ್ಯಭಾರ ವನ್ನು ತಾನೇ ವಹಿಸಿಕೊಂಡಿದ್ದಳು.[೭] ಆಗ ರಾಜಪರಿವಾರ ಮತ್ತು ಸೈನಿಕ ಸರದಾರರು ಸುತ್ತಮುತ್ತ ವೈರಿಗಳಿರುವಾಗ ರಾಣಿಯು ಸಂಸ್ಥಾನದ ಗದ್ದುಗೆಯೇರುವುದರಿಂದ ತೊಂದರೆ ಯಾಗುತ್ತದೆಂದು ಹೇಳಿದರು. ಆಗ ಸುರಪುರದಿಂದ ಹೋಗಿ ಕರ್ನೂಲದಲ್ಲಿ ನೆಲೆಸಿದ್ದ ಮಗ ರಮಣಪ್ಪನಾಯಕನ ಮಗ ಪಿಡ್ಡನಾಯಕನಿಗೆ ಪಟ್ಟಗಟ್ಟಲು ಎಲ್ಲರೂ ಒಪ್ಪಿ ಪಟ್ಟಕ್ಕೆ ಕೂಡಿಸಿ ದರು. ಪಿಡ್ಡನಾಯಕನು ರಾಣಿ ಕಾಂತಮ್ಮಳ ಅನುಮತಿಯಂತೆ ರಾಜ್ಯಭಾರವನ್ನು ಪ್ರಾರಂಭಿದನು.

## ರಾಣಿ ರಂಗಮ್ಮ (ಕ್ರಿ.ಶ. ೧೮೧೮-೧೮೨೭)

ಮುಮ್ಮಡಿ ರಾಜಾದೇವೇಂದ್ರ ವೆಂಕಟಪ್ಪ ನಾಯಕ (ಕ್ರಿ.ಶ. ೧೮೧೮-೧೮೨೭) ನ ಪತ್ನಿ ರಾಣಿ ರಂಗಮ್ಮ. ಈಕೆಯು ತಿರುಪತಿಯ ವೆಂಕಟರಮಣನ ಅನನ್ಯ ಭಕ್ತಳು, ಆತನ ಕೃಪೆಗೆ ಪಾತ್ರಳಾಗಿದ್ದವಳು. ಇಂದಿಗೂ ಸುರಪುರದ ಅರಸು ವಂಶಸ್ಥರು ಮೂರು ವರ್ಷಕ್ಕೊಮ್ಮೆ ರೇಷ್ಮೆಯ ನವಾರ (ಮಂಚಕ್ಕೆ ಉಪಯೋಗಿಸುವ ಪಟ್ಟಿ)ವನ್ನು ತಿರುಪತಿಗೆ ಕಳುಹಿಸುವ ಸಂಪ್ರದಾಯವಿದೆ. ರಾಣಿ ರಂಗಮ್ಮಳ ಕುರಿತಾಗಿ ಸುರಪುರದಲ್ಲಿ ಈಗಲೂ ಅನೇಕ ಹಾಡುಗಳಿವೆ. ಅವು ಕನ್ನಡ ಮತ್ತು ತೆಲುಗಿನಲ್ಲಿವೆ.

**"ಮಂಗಳಮನಿ ಪಾಡರೆ ಅಂಗನುಲಾರ**
**ರಂಗುಗನು ಸುರಪುರ ಮುನೇಲಿನ/ಕುರಂಗ ಲೋಚನುಡೈನ ಮನಶ್ರೀ**
**ರಂಗಮಾಂಬನು ಬ್ರೋಚು ಗರುಡ/ತುರಂಗುಡೌ ಗೋಪಾಲ ಸ್ವಾಮಿಕಿ ॥**

---

**ಕರಿರಾಜ ವರದುನಕು,ಕರುಣಾಸಾಗರುಡನ ಬಿರುದನಕು**
**ಸರಸ ಕೌಲಿಕ ಕಂಠಿ ಚಾಮರ ಮುಲಿಚ್ಚಿನ ರಂಗಮಾಂಬನು**
**ತಿರುಪತೀ ಶುಂಡಗುಚು ಬ್ರೋಚಿನ, ಮುರಲಿಧರುನ ಕುದುದಿತಕ**

ಹರುನಕು ಮಂಗಳ ಮನಿ[೮]--- ಇಂತಹ ಅನೇಕ ಹಾಡು ಗಳಿವೆ.

ರಾಣಿ ರಂಗಮ್ಮ ಕವಯಿತ್ರಿಯಾಗಿದ್ದಳು. ಈಕೆಯ ಸಾಹಿತ್ಯ ರಚನೆಗಳು ಇದ್ದವೆಂದು ಹೇಳುತ್ತಾರೆ. ಅವುಗಳ ಕುರಿತು ಸಂಶೋಧನೆಯಾಗಬೇಕಿದೆ. ಈ ರಾಣಿಯ ಹೆಸರಿನಿಂದಲೇ 'ರಂಗಂಪೇಟೆ' (ಕ್ರಿ.ಶ.೧೮೨೨) ಯನ್ನು ನಿರ್ಮಿಸಲಾಗಿದೆ. ಈ ಊರು ಇಂದಿಗೂ ಸುರಪುರದ ಪಕ್ಕದಲ್ಲಿದೆ.

## ರಾಣಿ ಈಶ್ವರಮ್ಮ (ಕ್ರಿ.ಶ. ೧೮೪೩-೧೮೫೭)

ಕೃಷ್ಣಪ್ಪನಾಯಕ ಕಿ.ಶ. ೧೮೪೩ರಲ್ಲಿ ಅನಾರೋಗ್ಯ ಹಾಗೂ ಚಿಂತೆಯಿಂದ ತೀರಿಕೊಂಡಾಗ, ಮಗ ನಾಲ್ವಡಿ ವೆಂಕಟಪ್ಪನಾಯಕನಗೆ ಕೇವಲ ಏಳು ವರ್ಷ. ಆಗ ಸಂಸ್ಥಾನದ ಆಡಳಿತವನ್ನು ರಾಣಿ ಈಶ್ವರಮ್ಮ ವಹಿಸಿಕೊಂಡಳು. ಆಕೆಯ ಪತಿ ಕೃಷ್ಣಪ್ಪನಾಯಕನು ಕ್ಯಾ.ಗ್ರಿಸ್ಲೆಯೊಂದಿಗೆ ಒಂದು ಒಪ್ಪಂದ ಮಾಡಿಕೊಂಡಿದ್ದ. ಕೃಷ್ಣಪ್ಪನಾಯಕ ನಿಜಾಮ ಮತ್ತು ಇತರರೊಂದಿಗೆ ಹಣದ ವ್ಯವಹಾರ ಮಾಡಿದ್ದನು. ಬಹಳಷ್ಟು ಒತ್ತಡಕ್ಕೊಳಗಾಗಿದ್ದನು. ಆಗ ನಿಜಾಮ ಪ್ರತಿವರ್ಷ ರೆಸಿಡೆಂಟನ ದ್ವಾರ ರೂ.೪೦,೦೦೦ ಕೊಡತಕ್ಕದ್ದು. ಇದರ ಜಮಾನತಗಾಗಿ ನೆಲೋಗಿ ಹಾಗೂ ಅಂದೋಲಾ ಒತ್ತಿ ಇಡತಕ್ಕದ್ದು. ಹಣಮಪ್ಪ ನಾಯಕನಿಗೆ ತಿಂಗಳ ರೂ. ೫೦೦ ಕೊಡತಕ್ಕದ್ದು. ಝುಲ್ಲಿಪಾಳಿ ಅಂಕಪ್ಪನಾಯಕನಿಗೆ ಆತನ ಜಾಗೀರವಾಗಿ ಕೊನೆಯವರೆಗೂ ನಡೆಸಬೇಕು. ಸುರಪುರವನ್ನು ನಿಜಾಮ ಹಾಗೂ ಬ್ರಿಟಿಷ್ ಸರಕಾರದ ಮಾಂಡಲೀಕರೆಂದೂ ಒಪ್ಪಿಕೊಳ್ಳತಕ್ಕದ್ದು ಎಂದು ಠರಾವಾಗಿತ್ತು.[೯] ಈ ಒಪ್ಪಂದವನ್ನು ಈಕೆ ಧಿಕ್ಕರಿಸಿದಳು. ರೆಸಿಡೆಂಟನಾದ ಗ್ರಿಸ್ಲೆಯ ವಿರುದ್ಧ ತನ್ನ ೧೨,೦೦೦ ಬೇಡರ ಪಡೆಯನ್ನು ಅವರ ವಿರುದ್ಧ ಸಜ್ಜುಗೊಳಿಸಿದಾಗ, ಗ್ರಿಸ್ಲೆ ಸುರಪುರದಿಂದ ನಿರ್ಗಮಿಸಿದನು.

ನಂತರ ಮೆಡೋಸ್ ಟೇಲರ್ ಸುರಪುರಕ್ಕೆ ಆಗಮಿಸು ತ್ತಾನೆ. ನಯವಿನಯದಿಂದ ರಾಣಿ ಈಶ್ವರಮ್ಮನೊಂದಿಗೆ ನಡೆದುಕೊಳ್ಳುತ್ತಾನೆ. ಮಗ ನಾಲ್ವಡಿ ವೆಂಕಟಪ್ಪನಾಯಕನ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತೇನೆಂದು ಹೇಳುತ್ತಾನೆ. ಜೊತೆಗೆ ಆಕೆಯನ್ನು ತನ್ನ ತವರು ಮನೆಯಾದ ರತ್ನಗಿರಿಗೆ ಹೋಗುವಂತೆ ಮಾಡುತ್ತಾನೆ. ನಂತರ ಆಕೆ ಸುರಪುರಕ್ಕೆ ಮರಳಿ ಆಗಮಿಸುವ ಹೊತ್ತಿಗೆ ಮೆಡೋಸ್ ಟೇಲರ್ ನಾಲ್ವಡಿ ವೆಂಕಟಪ್ಪನಾಯಕನನ್ನು ತನ್ನ ಅಧೀನದಲ್ಲಿಟ್ಟುಕೊಂಡು, ಮರಳಿ ಬಂದ ರಾಣಿ ಈಶ್ವರಮ್ಮ ರಾಜಕೀಯ ಅಧಿಕಾರದಲ್ಲಿ ಕೈಹಾಕ ಕೂಡದೆಂದು, ಆಕೆಗೆ ತಿಂಗಳಿಗೆ ಒಂದು ಸಾವಿರ ರೂಪಾಯಿ ಗಳನ್ನು ಖರ್ಚು ವೆಚ್ಚಕ್ಕಾಗಿ ಕೊಡುವುದಾಗಿ ಹೇಳಿದಾಗ, ಸಿಡಿಮಿಡಿಗೊಂಡ ಆಕೆ ತನ್ನ ಮಗನಲ್ಲಿ ಸ್ವಾತಂತ್ರ್ಯದ ಕಿಡಿ ಪ್ರಜ್ವಲಿಸುವಂತೆ ಮಾಡುತ್ತಾಳೆ. ತಾಯಿಯ ಪ್ರಭಾವವೇ ಮುಂದೆ ನಾಲ್ವಡಿ ವೆಂಕಟಪ್ಪನಾಯಕನಿಗೆ ಪ್ರೇರಣೆಯಾಗಿ ದಕ್ಷಿಣಭಾರತ ದಲ್ಲಿಯೇ ಬ್ರಿಟಿಷರ ವಿರುದ್ಧ ಕ್ರಾಂತಿಯ ಕಹಳೆ ಊದಿದ ಕೀರ್ತಿಗೆ ಪಾತ್ರನಾಗುತ್ತಾನೆ.

ಹೀಗೆ ತನ್ನ ಜೀವನದುದ್ದಕ್ಕೂ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ ಈಕೆ ಮೇ ೨೭,೧೮೫೭ರಲ್ಲಿ ತೀರ್ಥಯಾತ್ರೆಗೆ ತೆರಳುವಾಗ ಲಿಂಗಸೂಗೂರಿನಲ್ಲಿ ನಿಧನ ಹೊಂದುತ್ತಾಳೆ.[೧೦] ನಿಜಾಮ ಹಾಗೂ ಬ್ರಿಟಿಷರ ಅಧಿಕಾರವನ್ನು ಧಿಕ್ಕರಿಸಿದ್ದ ಈ ಮಹಿಳೆಯ ಚಾಣಾಕ್ಷತೆಯನ್ನು ಮೆಚ್ಚಲೇಬೇಕು. ಈಕೆಯ ವ್ಯಕ್ತಿತ್ವವನ್ನು ಸಾರುವ ರಾಜಾ ವೆಂಕಟಪ್ಪ ನಾಯಕನ ದುಂದುಮೆಯಲ್ಲಿ ನುಡಿಯೊಂದು "ಮೃಗಜಾತಿ ಶೂರ"[೧೧] ಎಂದರೆ, ಸುರಪುರದ ಪ್ರಸಿದ್ಧ ಲಾವಣಿ ಅರ್ಥಾತ್ ಬಂಡಾಯದ ಲಾವಣಿಯಲ್ಲಿ "ಅವ್ವಾ ಈಶ್ವರಮ್ಮನ ವರವೀರಪುತ್ರ"[೧೨] ಎಂಬ ನುಡಿ ರಾಣಿ ಈಶ್ವರಮ್ಮ ಹಾಗೂ ಪುತ್ರ ನಾಲ್ವಡಿ ವೆಂಕಟಪ್ಪನಾಯಕನ ವ್ಯಕ್ತಿತ್ವದ ಕುರಿತಾಗಿ ವಿವರಿಸುತ್ತದೆ. ಎಲ್ಲರ ಬಾಯಲ್ಲೂ ರಾಣಿ ಈಶ್ವರಮ್ಮ ಅವ್ವ ಆಗಿದ್ದಳು, ಪ್ರಜೆಗಳನ್ನು ತನ್ನ ಮಕ್ಕಳಂತೆ ಕಂಡಿದ್ದಳು.

ಈ ರೀತಿ ಸುರಪುರದ ರಾಣಿಯರು ಆಡಳಿತದಲ್ಲಿ ಹಾಗೂ ಸಾರ್ವಜನಿಕ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು. ಅರಸರು ರಾಣಿಯರಿಗೆ ಇಂಥ ಕೆಲಸಗಳಿಗೆ ಸ್ವಾತಂತ್ರ್ಯವನ್ನು ನೀಡಿದ್ದರಿಂದ ಕೆರೆಗಳನ್ನು, ಬಾವಿಗಳನ್ನು, ದೇವಾಲಯಗಳನ್ನು ನಿರ್ಮಿಸಿದ್ದಲ್ಲದೇ, ದಾನದತ್ತಿ ನೀಡಿ, ಸಾರ್ವಜನಿಕ ಕೆಲಸಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ಅಲ್ಲದೇ ಧಾರ್ಮಿಕ ವಿಷಯಗಳಲ್ಲಿಯೂ ಇವರು ಯಾವುದೇ ಅಡ್ಡಿ ಆತಂಕಗಳನ್ನು ಒಡ್ಡುತ್ತಿರಲಿಲ್ಲ.

ಸುರಪುರದ ರಾಜಧಾನಿಯ ಸುತ್ತಲಿನ ಹಳ್ಳಿಗಳು ಅರಸರ ತಾಯಿ ಮತ್ತು ಪತ್ನಿಯರ ಹೆಸರಿನಲ್ಲಿ ಸ್ಥಾಪನೆ ಯಾಗಿವೆ. ಅವುಗಳಲ್ಲಿ ಹಸರಂಗಿ ಪಾಮನಾಯಕನು ತನ್ನ ರಾಣಿ ಅಮ್ಮಾನಾಗತಿ ನೆನಪಿಗಾಗಿ ಅಮ್ಮಾಪುರವನ್ನೂ, ಪೀತಾಂಬರ ಬಹರಿ ಪಿಡ್ಡನಾಯಕನು ತನ್ನ ತಾಯಿ ಲಕ್ಷ್ಮಮ್ಮನ ಸ್ಮರಣೆಗಾಗಿ ಲಕ್ಷ್ಮೀಪುರವನ್ನು, ಮೊಂಡುಗೈ ವೆಂಕಟಪ್ಪನಾಯಕ ತನ್ನ ತಾಯಿ ರುಕ್ಮಣಿಯಮ್ಮನ ಹೆಸರಿನಲ್ಲಿ ರುಕ್ಮಾಪುರವನ್ನು ಹಾಗೂ ಅತ್ತಿಗೆ ಸತ್ಯಮ್ಮನ ಹೆಸರಿನಲ್ಲಿ ಸತ್ಯಂಪೇಟೆಯನ್ನು, ಮುಮ್ಮಡಿ ವೆಂಕಟಪ್ಪನಾಯಕನು ತನ್ನ ರಾಣಿ ರಂಗಮ್ಮನ ಸವಿನೆನಪಿಗಾಗಿ ರಂಗಂಪೇಟೆ ಗ್ರಾಮವನ್ನು ಅಲ್ಲದೇ ಸಿದ್ದಾಪುರ, ವೆಂಕಟಾಪುರ ಗ್ರಾಮಗಳೂ ಹೀಗೆಯೇ ನಿರ್ಮಾಣವಾದವು. ಶಾಲಿವಾಹನ ಶಕೆ ೧೭೨೬ ರಕ್ತಾಕ್ಷಿ ಸಂವತ್ಸರದ ಮಾರ್ಗಶಿರ ಅಷ್ಟಮಿಯ ಗೋಧೂಳಿ ಶುಭ ಸಮಯದ ಸೋಮವಾರ ದಂದು ಪಿಡ್ಡನಾಯಕನು ವೆಂಕಮಾಂಬಳ ಮನವಿ ಮೇರೆಗೆ

ವನದುರ್ಗ ಕೋಟೆಯನ್ನು ನಿರ್ಮಾಣ ಮಾಡಿದನು.[೧೩] ಹೀಗೆ ಈ ಅರಸರು ತಮ್ಮ ರಾಣಿಯರ ಹೆಸರಿನಲ್ಲಿ ನಿರ್ಮಿಸಿದ ಗ್ರಾಮ, ದೇಗುಲ, ಕೆರೆ, ಬಾವಿಗಳು ಅವರ ಗೌರವಾದರಗಳ ಪ್ರತಿಬಿಂಬವಾಗಿದ್ದವಲ್ಲದೆ ಜನರ ಮನದಾಳದಲ್ಲಿ ಯಾವತ್ತೂ ನೆಲೆಯೂರಿರಲಿ ಎಂಬ ಭಾವನೆಯೂ ಇವರಲ್ಲಿತ್ತು.

ಪಟ್ಟದರಾಣಿಯರಿಗೆ ಸ್ವತಂತ್ರವಾದ ಅಂತಃಪುರವಿರುತ್ತಿತ್ತು. ಅದರಂತೆ ಸವತಿ ಮತ್ಸರ ತೋರಿಸಬಾರದು ಎಂಬ ಕಾರಣಕ್ಕೆ ಪತಿಯೊಬ್ಬ ಅರಸಿಗೂ ಪತ್ಯೇಕ ಅಂತಃಪುರಗಳನ್ನು ಅರಸರು ವ್ಯವಸ್ಥೆ ಮಾಡಿರುತ್ತಿದ್ದರು. ಅಂತಃಪುರವನ್ನು ಕಾಯಲು ಕಾವಲುಭಟ್ಟರು, ಹಲವಾರು ರಕ್ಷಣಾ ಸ್ತ್ರೀಯರು, ದಾಸಿಯರು, ರಾಣಿಯ ಆಪ್ತಸಖಿಯರು, ಪರಿಚಾರಕರು ಇರುತ್ತಿದ್ದರು. ಅಂತಃಪುರಕ್ಕೆ ಹೋಗಲು ಈ ಸಿಬ್ಬಂದಿಗಳಲ್ಲದೇ ಅರಸ, ಯುವರಾಜ ಮತ್ತು ಕೆಲವು ಬಾರಿ ರಾಜಪುರೋಹಿತರಿಗೆ ಮಾತ್ರ ಅವಕಾಶವಿರುತ್ತಿತ್ತು.

ರಾಣಿಯರ ಅಂತಪುರದ ಖರ್ಚುವೆಚ್ಚಗಳನ್ನು ರಾಜನು ನಿಯಂತಿಸುತ್ತಿದ್ದ. ಅದರ ನಿರ್ವಹಣೆಗೆ ಬೇಕಾಗುವ ಒಟ್ಟು ಬಾಬ್ತುಗಳು ಪಟ್ಟದ ರಾಣಿಯ ಸ್ವಾಧೀನದಲ್ಲಿರುತ್ತಿದ್ದವು. ಆಕೆಯು ಎಲ್ಲರಿಗೂ ಅವರವರ ಭಾಗಗಳನ್ನು ತಲುಪಿಸುವ ವ್ಯವಸ್ಥೆ ಮಾಡುತ್ತಿದ್ದಳು. ಇದರ ವಿವರವನ್ನು ಕಪಟರಾಳ ಕೃಷ್ಣರಾವ್ ಅವರು ಸುರಪುರದ ಅಂತಃಪುರದ ಖರ್ಚನ್ನು ಈ ರೀತಿ ಹೇಳುತ್ತಾರೆ.

| | |
|---|---|
| ನಾಗರಪಂಚಮಿ | ರೂ. ೫೦೦ |
| ಗೋಕುಲಾಷ್ಟಮಿ | ರೂ. ೨೫೦ |
| ವೃಂದಾವನಪೂಜೆ | ರೂ. ೨೫೦ |
| ಸಂಕ್ರಾಂತಿಹಬ್ಬ | ರೂ. ೨೦೦ |
| ರಾಮನವಮಿ | ರೂ. ೧೫೦ |

ಮಾರ್ನವಮಿ(ಮಹಾನಮಿ)ರೂ. ೪೫೦ ಈ ಹಬ್ಬದ ಇನಾಮಿನ ಸಲುವಾಗಿ ರೂ. ೨೭೫ಗಳು.

ಗೌರಿ ಮತ್ತು ದವನದ
ಹುಣ್ಣಿಮೆಗಳ ಉಪವಾಸ
ಪಾರಣೆಗಳ ಸಲುವಾಗಿ ರೂ. ೧೦೮
ದೀಪಾವಳಿ ರೂ. ೧೨೦೦ ಮತ್ತು ಸೀರೆ ಕುಪ್ಪಸಗಳು
ಯುಗಾದಿ ರೂ. ೧೫೦೦ ಮತ್ತು ಸೀರೆ ಕುಪ್ಪಸಗಳು
ಗಹಣಕಾಲದಲ್ಲಿ ದಕ್ಷಿಣೆ
ಕೊಡಲು ರೂ. ೧೦೦
ಶುಕವಾರ ಲಕ್ಷ್ಮೀಪೂಜೆಗಾಗಿ ರೂ. ೪೦
ಶ್ರಾವಣದ ಲಕ್ಷ್ಮೀಪೂಜೆಗಾಗಿ ರೂ. ೩೦೦

ಇದಲ್ಲದೆ ಪಟ್ಟದರಾಣಿ ಮತ್ತು ಇತರ ರಾಣಿಯರಿಗೆ, ದಾಸಿಯರು, ಪ್ರತಿಯೊಬ್ಬ ರಾಣಿಯ ತೋಷಾಖಾನ, ಸೀರೆ, ಕುಪ್ಪಸ, ಒಡವೆ, ಆಭರಣಗಳು, ಕಸ್ತೂರಿ, ಕೇಸರಿ, ಕುಂಕುಮ, ಹಲ್ಲುಪುಡಿ, ಚಿಕ್ಕಅಂಟು, ಚದರಂಗ, ಗಂಜೀಪು, ಹಣಗಿಗಳು, ಕನ್ನಡಿ, ಪುಸ್ತಕಗಳು, ಬೆಳ್ಳಿತಾಟು, ಬಟ್ಟಲು ಮಂತಾದವುಗಳನ್ನು ಬೈತಲಕಡ್ಡಿ, ಎಲೆ, ಅಡಿಕೆ ಮುಂತಾದವುಗಳ ವ್ಯವಸ್ಥೆಯ ಸಲುವಾಗಿ ಸಾತಾನಿ ಹೆಣ್ಣುಮಕ್ಕಳನ್ನು ನೇಮಿಸಲಾಗುತ್ತಿತ್ತು.[೧೪] ಅಲ್ಲದೆ ರಾಣಿವಾಸದ ಪರಿಚಾರಕರಿಗೂ ವಿವಿಧ ರೀತಿಯ ಖರ್ಚನ್ನು ನೀಡಲಾಗುತ್ತಿತ್ತು.

ಇಷ್ಟೆಲ್ಲಾ ಪಟ್ಟದರಾಣಿಯರಿಗೆ ಸಕಲ ಸವಲತ್ತುಗಳಿದ್ದರೂ ಘೋಷಾಪದ್ಧತಿಯನ್ನು ಅನುಸರಿಸಬೇಕಾಗಿದ್ದಿತು. ಅಂತಃಪುರ ದಿಂದ ಹೊರಬರಬೇಕಾದರೆ ಅವರಿಗಾಗಿ ಮೀಸಲಿರಿಸಿದ ಮೇಣೆಗಳಲ್ಲಿಯೇ ಬರಬೇಕಾಗಿದ್ದಿತು. ಹೊರಗಿನ ಗಾಳಿ, ಬೆಳಕು ಕಾಣದಾಗಿತ್ತು. ಅಪರೂಪಕ್ಕೊಂದು ಬಾರಿ ವಿಹಾರಕ್ಕೆ ಹೋಗುತ್ತಿದ್ದರು. ಸುರಪುರದ ಪಟ್ಟದರಸಿಗೆ ಬೋನ್ಹಾಳ ಕೆರೆಯಲ್ಲಿ ನೌಕಾವಿಹಾರ ಸೌಲಭ್ಯ ಒದಗಿಸಲಾಗಿತ್ತು. ಬೇಸಿಗೆ ಕಾಲಕ್ಕೆ ಜಲದುರ್ಗಕ್ಕೆ ಜಲವಿಹಾರಕ್ಕೆಂದು ಬರುತ್ತಿದ್ದ ಬಗ್ಗೆ ಮೆಡೋಸ್ ಟೇಲರ್ 'The story of my life' ಕೃತಿಯಲ್ಲಿ ಬರೆದಿದ್ದಾನೆ.

ಏಷ್ಟೇ ನಿರ್ಬಂಧಗಳಿದ್ದರೂ ಒಬ್ಬ ಪಟ್ಟದರಾಣಿ ಪಟ್ಟಾಭಿಷಿಕ್ತ ಅರಸನೊಂದಿಗೆ ತಾನೂ ಪಟ್ಟಾಭಿಷಿಕ್ತಳಾಗಿ, ಆತನ ಏಳ್ಗೆಯಲ್ಲಿ ಸಹಕರಿಸುತ್ತಾ ಅಂತಃಪುರದ ಸಹರಾಣಿಯ ರೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುತ್ತಾ ಪ್ರಜೆಗಳ ಹಾಗೂ ರಾಜ್ಯದ ಹಿತಕ್ಕಾಗಿ ಆಕೆ ಶ್ರಮಿಸಬೇಕಾಗಿದ್ದಿತು. ಆಕೆಗೆ ಅರಸ ಹಾಗೂ ಇತರ ರಾಣಿಯರು, ರಾಜ್ಯದ ಪ್ರಜೆಗಳೂ ಪ್ರಥಮ ಪ್ರಾಧಾನ್ಯತೆಯನ್ನು ನೀಡುತ್ತಿದ್ದರಲ್ಲದೇ ಪಟ್ಟದರಸನನ್ನು ಪ್ರತ್ಯಕ್ಷ ದೇವರು ಎಂದು ಭಾವಿಸಿದಂತೆ ಪಟ್ಟದರಸಿಯನ್ನು ಪ್ರತ್ಯಕ್ಷ ದೇವತೆಯೆಂದು ಭಾವಿಸಲಾಗುತ್ತಿತ್ತು.

ಸುರಪುರದ ರಾಣಿಯರ ಕುರಿತಾಗಿ ರಚಿಸಲ್ಪಟ್ಟ ಅನೇಕ ಜನಪದ ಹಾಡುಗಳು ಅದರಲ್ಲೂ ಆರತಿ ಪದಗಳು, ಬೀಸುವ, ಕುಟ್ಟುವ ಪದಗಳು ಸುರಪುರದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಜೀವಂತವಾಗಿವೆ. ಇವುಗಳನ್ನು ಸಂಗ್ರಹಿಸುವ ಕಾರ್ಯ ನಡೆಯಬೇಕಿದೆ. ಈ ಮನೆತನದ ಉಳಿದ ಅರಸರ ಕುರಿತಾಗಿ ಜನಪದ ಸಾಹಿತ್ಯ ಅಷ್ಟೇನೂ ರಚಿಸಲ್ಪಡಲಿಲ್ಲ, ಆದರೆ ರಾಣಿಯರ ಕುರಿತಾಗಿಯೇ ಜನಪದ ಸಾಹಿತ್ಯ ಹುಟ್ಟಿಕೊಂಡಿರು ವದು ವಿಶೇಷ. ಕಾರಣ ಇವರು ಜನರಿಗೆ ಹತ್ತಿರವಾಗಿದ್ದರಲ್ಲದೇ ಜನೋಪಯೋಗಿ ಕಾರ್ಯಗಳನ್ನು ಮಾಡಿದ್ದಾರೆ. ಇಂದಿಗೂ ಇವರ ಹೆಸರನ್ನು ಆ ಭಾಗದ ಜನ ತಮ್ಮ ಮಕ್ಕಳಿಗೆ ಇಡುವದರ ಮೂಲಕ ತಮ್ಮ ಋಣವನ್ನು ತೀರಿಸುತ್ತಿದ್ದಾರೆ. ಹೀಗಾಗಿ

ಇಂದು ಸ್ಥಳೀಯ ಮೌಖಿಕ ಆಕರಗಳ ಮೂಲಕ ಮತ್ತೊಮ್ಮೆ ಇಂತಹ ರಾಣಿಯರ ಚರಿತ್ರೆಯನ್ನು ಕಟ್ಟಿಕೊಡಬೇಕಾಗಿದೆ. ಹೀಗಾಗಿ ಮೌಖಿಕ ಆಕರಗಳು ಸ್ಥಳೀಯ ಚರಿತ್ರೆಯ ಅಧ್ಯಯನ ದಲ್ಲಿ ಲಿಖಿತ ದಾಖಲೆಗಳಂತೆಯೇ ಮಹತ್ವವಾದವು ಗಳಾಗಿರುವುದರಿಂದ ಇತಿಹಾಸದಲ್ಲಿ ಬಿಟ್ಟುಹೋದ ಅಮೂಲ್ಯ ಹಾಗೂ ಸತ್ಯದ ಘಟನೆಗಳನ್ನು ಗುರುತಿಸಿ ಇಂತಹ ರಾಣಿಯರ ಚರಿತ್ರೆಯನ್ನು ಪುನರ್‌ರಚಿಸುವ ಅಗತ್ಯತೆ ಇದೆ.

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,** ೧೯೮೯, ಪುಟ–೪೬೬.

೨. ಶಿರೂರ ಬಿ.ವ್ಹಿ., **ಶ್ರವಣಬೆಳಗೊಳ: ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಮಹತ್ವ,** ಕ.ವಿ.ವಿ. ಧಾರವಾಡ, ೧೯೭೬, ಪುಟ ೩೭೯.

೩. EC-XX(ಂ) ಏ1,170,11th cen.

೪. HAS XVIII,16,1191: EC III (R) GU 219,10th Cen.

೫. **ಎಪಿಗ್ರಾಫಿಯ ಕರ್ನಾಟಕ,** XIV, ಎಳಂದೂರು, ೯೬–೧–೨೦೦೦.

೬ ಕಪಟರಾಳ ಕೃಷ್ಣರಾವ್, **ಸುರಪುರ ಸಂಸ್ಥಾನ ಇತಿಹಾಸ,** ೧೯೭೭, ಪುಟ–೧೨೯–೧೩೦.

೭. ಭಾಸ್ಕರ್‌ರಾವ್ ಮುಡಬೂಳ, **ಮರೆತುಹೋದ ಸುರಪುರ ಇತಿಹಾಸ,** ೨೦೦೧, ಪುಟ–೩೪.

೮. ಟಿ. ಸುಚರಿತಾ, 'ಮರೆಯಲಾಗದ ಮಾಣಿಕ್ಯಗಳು', ಎ. ಕೃಷ್ಣಸುರಪುರ (ಸಂ), ಸಗರನಾಡ ದರ್ಶನ, ೧೯೮೫, ಪುಟ–೨೪೦.

೯. ಜೆ. ಅಗಸ್ಟಿನ್, 'ನಾಡಿನ ಇತಿಹಾಸದ ಮಿನುಗುತಾರೆ: ಸುರಪುರದ ಈಶ್ವರಮ್ಮ', ಅಮರೇಶ ಯತಗಲ್ (ಸಂ), **ಏಕಲವ್ಯ,** ಸ್ಮರಣ ಸಂಚಿಕೆ, ೨೦೦೫. ಪುಟ–೧೭.

೧೦. ಅದೇ, ಪುಟ–೧೯.

೧೧. ಬಿ.ಆರ್. ಸುರಪುರ (ಸಂಗ್ರಹ), ರಾಜಾ ವೆಂಕಟಪ್ಪ ನಾಯಕನ ದುಂದುಮೆ, **ಸಗರನಾಡ ದರ್ಶನ,** ೧೯೮೫. ಪುಟ–೨೬೬.

೧೨. ಹಾಲ್ಗೇರಿ ಚನ್ನಬಸವಯ್ಯ ಮಾಸನೂರ, **ಸುರಪುರದ ಬಂಡಾಯದ ಲಾವಣಿ,** ಪ್ರ: ರಾಜಗೋಪಾಲಾಚಾರ್ಯ, ಕನಕಗಿರಿ, ೧೯೫೩.

೧೩. ರಂಗರಾಜ ದೇವೇಂದ್ರಪ್ಪ, **ಸುರಪುರ ಸಂಸ್ಥಾನ: ಒಂದು ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್.ಡಿ ಮಹಾಪ್ರಬಂಧ, ೧೯೯೫, ಪುಟ–೨೦೫.

೧೪. **ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ,** ೧೯೭೭, ಪುಟ–೭೮.

ಡಾ. ಬಿ. ಸುಧಾಮಣಿ*

# ಬಸವ ಕವಿಯ ಸಿದ್ಧಲಿಂಗ ಕಾವ್ಯದಲ್ಲಿನ ಚಾರಿತ್ರಿಕ ಅಂಶಗಳು

ಸಿದ್ಧಲಿಂಗಕಾವ್ಯ ೧೮೮೨ರಲ್ಲಿ ವೀರಶೈವ ಕವಿ ಬಸವ ಎಂಬಾತ ರಚಿಸಿರುವ ಒಂದು ಶಿಷ್ಟ ಕಾವ್ಯ. ಇದನ್ನು ಮೈಸೂರಿನ ಮಾನಸಗಂಗೋತ್ರಿಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಡಾ. ವೈ.ಸಿ. ಭಾನುಮತಿಯವರು ೨೦೦೬ರಲ್ಲಿ ಸಂಪಾದಿಸಿದ್ದಾರೆ.[೧] ಕಾವ್ಯವು ೧೫ ಸಂಧಿಗಳಲ್ಲಿ ೪೩೮ ಪದ್ಯಗಳನ್ನು ಒಳಗೊಂಡಿದೆ.[೨] ಕಾವ್ಯದಲ್ಲಿ ಐತಿಹಾಸಿಕ ಅಂಶಗಳಿಗೆ ಪೌರಾಣಿಕ ಲೇಪನ ಮಾಡಿದ್ದರೂ ಸಮಕಾಲೀನ ಸಾಮಾಜಿಕ–ಸಾಂಸ್ಕೃತಿಕ ಇತಿಹಾಸ ರಚನೆಗೆ ಗಣನೀಯ ಪ್ರಮಾಣದಲ್ಲಿ ಮಾಹಿತಿಗಳು ಲಭ್ಯವಿದೆ. ಹಾಗಾಗಿ ಇದೊಂದು 'ಅರೆ ಐತಿಹಾಸಿಕ' ಕಾವ್ಯ ಎನ್ನಲಡ್ಡಿಯಿಲ್ಲ.

ಸಿದ್ಧಲಿಂಗ ಕಾವ್ಯದಲ್ಲಿ ಸೂಳೆಕೆರೆ ಬಗ್ಗೆ ವಿವರಣೆ ಇದೆ. ಸಮಕಾಲೀನ ಸಮಾಜದ ವರ್ಗವ್ಯವಸ್ಥೆ, ಶಿಷ್ಟ ಹಾಗೂ ಜಾನಪದ ವಿವಾಹದ ವರ್ಣನೆ, ಉಡುಪು–ಆಭರಣ, ಪದ್ಧತಿಗಳು ಇತ್ಯಾದಿ ಆಚರಣೆಗಳ ಕುರಿತು ದೀರ್ಘ ವಿವರಣೆ ಇದೆ. 'ಸೂಳೆಕೆರೆ' ಈ ಕಾವ್ಯದ ವಸ್ತು, ಹಾಗೂ 'ಸಿದ್ಧೇಶ' ಕಾವ್ಯದ ನಾಯಕ. ಕಾವ್ಯದಲ್ಲಿ ಉಲ್ಲೇಖವಾಗಿರುವ ಸೂಳೆಕೆರೆ ಇಂದಿನ ಚೆನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿರುವ ಶಾಂತಿಸಾಗರವೇ ಆಗಿದೆ.[೩] 'ಸಿದ್ಧೇಶ' ಆ ಕೆರೆಯ ಪೂರ್ವದ ತುದಿಯಲ್ಲಿರುವ ಸಿದ್ಧೇಶ್ವರ ಗುಡಿಯ ದೇವರು. ಕವಿ ಬಸವ ಪ್ರಾಯಃ ಆ ಸ್ಥಳಕ್ಕೆ ಸೇರಿದವನಾಗಿದ್ದು, ಸಿದ್ಧೇಶ್ವರ ದೇವರ ಭಕ್ತನಾಗಿದ್ದಿರಬೇಕು.

ಶಿಷ್ಟ ಸಾಹಿತ್ಯದಲ್ಲಿ ಕೆರೆಯೊಂದನ್ನು ವಸ್ತುವಿಷಯ ವನ್ನಾಗಿ ಮಾಡಿಕೊಂಡು ರಚನೆಯಾದ ಕಾವ್ಯಗಳು ಬಹಳ ವಿರಳ.[೪] ಸಿದ್ಧಲಿಂಗ ಕಾವ್ಯವು ಸೂಳೆಕೆರೆಯನ್ನು ಕಾವ್ಯದ ವಸ್ತುವನ್ನಾಗಿಸಿಕೊಂಡಿರುವುದು ಒಂದು ವಿಶೇಷ. ಮೇಲ್ನೋಟಕ್ಕೆ ಈ ಕೆರೆಯನ್ನು ವೇಶ್ಯೆಯೊಬ್ಬಳು ಕಟ್ಟಿಸಿದ್ದಿರ ಬೇಕೆಂಬ ಅನುಮಾನವೂ ಬರುವುದುಂಟು. ಆದರೆ ಕಾವ್ಯದಲ್ಲಿ ಸಿಗುವ ಮಾಹಿತಿಯೇ ಬೇರೆ. ಕರ್ನಾಟಕ ಚರಿತ್ರೆಯಲ್ಲಿ ವೇಶ್ಯೆಯರು ತಮ್ಮ ಗಳಿಕೆಯ ಸ್ವಲ್ಪ ಭಾಗವನ್ನು ದಾನ ಧರ್ಮಗಳಿಗಾಗಿ ಮೀಸಲಿಟ್ಟಿರುವುದಕ್ಕೆ ಹಾಗೂ ಕೆರೆ–ಕಟ್ಟೆಗಳನ್ನು ನಿರ್ಮಿಸಿರುವುದಕ್ಕೆ ಮಾಹಿತಿಗಳು ಲಭ್ಯವಿವೆ.[೫] ಅದೇ ರೀತಿ ವೇಶ್ಯೆಯರ ಹೆಸರಿನಲ್ಲಿ ಕಟ್ಟಿಸಿರುವ ಕೆರೆ–ಕಟ್ಟೆ– ಕಾಲುವೆಗಳಿವೆ.[೬] ಜನಪದರ ಪ್ರಕಾರ ಈ ಕಾವ್ಯದಲ್ಲಿ ಬರುವ 'ಸೂಳೆಕೆರೆ' ಸ್ವರ್ಗವತೀ ಪಟ್ಟಣವನ್ನಾಳುತ್ತಿದ್ದ ವಿಕ್ರಮರಾಜನ ಮಗಳು ಶಾಂತವ್ವೆ ಕಟ್ಟಿಸಿದ್ದು. ಶಾಂತವ್ವೆ ದೇವರೊಂದಿಗೆ ಸಂಪರ್ಕ ಸಂಬಂಧ ಹೊಂದಿದ್ದಳು. ವಿಷಯ ತಿಳಿದ ರಾಜ ಮಗಳನ್ನು 'ಸೂಳೆ' ಎಂದು ದೂಷಿಸಿದ. ಇದರಿಂದ ನೊಂದ ಆಕೆ ಪಾಪ ಪರಿಹಾರಾರ್ಥವಾಗಿ ಕೆರೆಯನ್ನು ಕಟ್ಟಿಸಿದಳು. ರಾಜ ಸೂಳೆ ಎಂದು ಕರೆದಿದ್ದರಿಂದ ಆ ಕೆರೆಗೆ ಸೂಳೆಕೆರೆ ಎಂದು ಹೆಸರಿಸಿದಳು ಎಂಬುದು ಸ್ಥಳೀಯರ ಮನದಲ್ಲಿರುವ ಕಥೆ. ಈ ಕೆರೆಯ ನಿರ್ಮಾಣ ಕಾಲ ನಿಖರವಾಗಿ ತಿಳಿದು ಬಂದಿಲ್ಲವಾದರೂ ಸುಮಾರು ೧೧–೧೨ನೇ ಶತಮಾನದಲ್ಲಿ ನಿರ್ಮಿಸಿದ್ದಿರಬೇಕೆಂದು ಹೇಳಲಾಗಿದೆ. ಅದೇನೇ ಇದ್ದರೂ ಮಧ್ಯಕಾಲೀನ ದಕ್ಷಿಣ ಭಾರತದ ಮಾನವ ನಿರ್ಮಿತ ಕೆರೆಗಳಲ್ಲಿ ಬೃಹತ್ತಾದುದೆಂಬ ಹೆಗ್ಗಳಿಕೆ ಶಾಂತಿಸಾಗರಕ್ಕಿದೆ.[೭]

ಬಸವ ಕವಿಯ ಪ್ರಕಾರ ವಿಕ್ರಮರಾಜ ಸ್ವರ್ಗವತೀ ಪಟ್ಟಣದ ದೊರೆ.[೮] ಈತನ ಮಗಳಾದ ಶಾಂತವ್ವೆಯನ್ನು ಸಿದ್ಧೇಶನಿಗೆ (ಶಿವನ ಅಂಶ) ಕೊಟ್ಟು ವಿವಾಹ ಏರ್ಪಡಿಸಲಾಯಿತು. ವಿವಾಹದ ನಂತರ ರಾಜ ತನ್ನ ಅಳಿಯನನ್ನು ಕುರಿತು ಧರ್ಮದ ನೆಲೆಯನ್ನು ತಿಳಿಸಬೇಕೆಂದು ಕೋರಿದಾಗ ಆತ ತೋಟರಚನೆ, ಗಿಡ ನೆಡುವುದು, ದೇವಾಲಯ ನಿರ್ಮಾಣ, ಜಂಗಮರಿಗೆ–ಬ್ರಾಹ್ಮಣರಿಗೆ ದಾನಧರ್ಮ ಮಾಡುವುದು, ಕೆರೆ–ಬಾವಿ ಕಟ್ಟಿಸುವುದು ಇತ್ಯಾದಿ ಧಾರ್ಮಿಕ ಕಾರ್ಯಗಳನ್ನು ಮಾಡಿಸಬಹುದೆಂದು ತಿಳಿಸಿದ.

ರಾಜ ವಿಕ್ರಮನಿಗೆ ಅಳಿಯ ತಿಳಿಸಿದ ಧಾರ್ಮಿಕ ಕಾರ್ಯಗಳಲ್ಲಿ ಕೆರೆ ಕಟ್ಟಿಸುವುದು ಬಹುಜನೋಪಯೋಗಿ ಕಾರ್ಯವೆಂದೆನಿಸಿ ಕೆರೆಯೊಂದನ್ನು ಕಟ್ಟಿಸಲು ತೀರ್ಮಾನಿಸಿದ. ಸಿದ್ಧಲಿಂಗ ಕಾವ್ಯದಲ್ಲಿ ಕೆರೆ ಕಟ್ಟಿಸಲು ಸೂಕ್ತ ಸ್ಥಳ ಹುಡುಕುವ ಕಾರ್ಯದಿಂದ ಅದು ಪೂರ್ಣಗೊಂಡು ಕೆರೆಗೆ ಹೆಸರಿಡುವ ವರೆಗಿನ ಎಲ್ಲ ಘಟ್ಟಗಳ ವಿವರಣೆ ಇದೆ. ಕೆರೆಗೆ ಸೂಕ್ತ ಸ್ಥಳವನ್ನು ಆಯ್ಕೆ ಮಾಡುವುದು ಮಹತ್ವದ, ಜವಾಬ್ದಾರಿ

* ಅಸೋಸಿಯೇಟ್ ಪ್ರೊಫೆಸರ್, ಮಹಾರಾಣಿ ಮಹಿಳಾ ಕಲಾ ಮತ್ತು ವಾಣಿಜ್ಯ ಕಾಲೇಜು, ಮೈಸೂರು.

ಯುತವಾದ ಕೆಲಸವಾಗಿತ್ತು. ಸ್ವತಃ ರಾಜ ಆ ಕಾರ್ಯವನ್ನು ನಿಭಾಯಿಸಲು ಸಾಧ್ಯವಿಲ್ಲವೆಂದು ಭಾವಿಸಿ ಕೆರೆಗೆ ಸಂಬಂಧಿಸಿದ ಪೂರ್ಣ ಜವಾಬ್ದಾರಿಯನ್ನು ಅಳಿಯ ಸಿದ್ಧೇಶನಿಗೆ ವಹಿಸಿದ. ಸಿದ್ಧೇಶ ಹರಿದ್ರಾವತಿ ತೀರದಲ್ಲಿ ಸುರಗಿರಿಯನ್ನು ಕೆರೆ ನಿರ್ಮಾಣಕ್ಕೆ ಸೂಕ್ತ ಸ್ಥಳವೆಂದು ರಾಜನಿಗೆ ತಿಳಿಸಿದ. ನಂತರ ಸುರಗಿರಿಯಲ್ಲಿ ವಾಸಿಸುತ್ತಿದ್ದ ಜನಗಳಿಗೆ ಅಲ್ಲಿ ಕೆರೆ ಕಟ್ಟಿಸುವ ರಾಜನ ಇಂಗಿತವನ್ನು ಡಂಗುರ ಸಾರಿಸಿ ತಿಳಿಸಲಾಯಿತು. ಆ ಜನರಿಗೆ ನೂತನವಾಗಿ ಆನೆಕೆರೆ ಎಂಬ ಪಟ್ಟಣವೊಂದನ್ನು ನಿರ್ಮಿಸಿಕೊಡಲಾಯಿತು. ಜನರು ತಮ್ಮ ಕುಟುಂಬ ಹಾಗೂ ಎಲ್ಲ ವಸ್ತುಗಳೊಂದಿಗೆ ಮನೆ ಹಿರಿದು ಮರ, ಕಂಬ, ತೊಲೆ, ಜಂತೆ ಹಾಗೂ ಪದಾರ್ಥಗಳಾದ ಕೊಡ, ಚರಿಗೆ, ಗಿಂಡಿ, ಧಾನ್ಯ, ಬೆಳ್ಳಿ–ಬಂಗಾರ, ತಾಮ್ರ–ಕಂಚು, ನೀಲ–ಮುತ್ತು–ರತ್ನ ಇತ್ಯಾದಿ ಬಂಡಿಗಳಲ್ಲಿ ತುಂಬಿಸಿಕೊಂಡು ಹಾಗೂ ಕುದುರೆ ಮತ್ತು ಎತ್ತುಗಳ ಮೇಲೆ ಹೇರಿಕೊಂಡು ನೂತನ ಪುರ ಆನೆಕೆರೆಗೆ ಸಾಗಿದರು. ಇವೆಲ್ಲವನ್ನು ಸಾಗಿಸುವ ಹೊಣೆಗಾರಿಕೆಯನ್ನು ಸಿದ್ಧೇಶನೇ ಹೊತ್ತಿದ್ದನು.

ಒಂದು ಕಡೆಯಿಂದ ಜನರನ್ನು ಸಾಗಿಸುತ್ತಿದ್ದಂತೆ ಕೇರಿಗಳನ್ನು ಕೀಳಿಸುವ ಕಾರ್ಯವನ್ನೂ ಆರಂಭಿಸಲಾಯಿತು. ಕೇರಿಗಳನ್ನು ಕೀಳುವ ವಿಷಯವನ್ನು ಕವಿ ದೀರ್ಘವಾಗಿ ವರ್ಣಿಸಿದ್ದಾನೆ. ವಿವಿಧ ವೃತ್ತಿಗಳನ್ನವಲಂಬಿಸಿದ್ದವರು ಪ್ರತ್ಯೇಕ ಕೇರಿಗಳಲ್ಲಿ ವಾಸಿಸುತ್ತಿದ್ದರು. ಕವಿ ಸುಮಾರು ೩೦ ಕೇರಿಗಳ ಉಲ್ಲೇಖ ಮಾಡಿದ್ದಾನೆ. ಮಾಲೆಗಾರರ ಕೇರಿ, ಮಂತ್ರಗಾರರ ಕೇರಿ, ಜಾಲಗಾರರ ಕೇರಿ, ಕೋಲುಗಾರರು, ನೀಲಮಾರುವ, ವಾಣಿಜರ, ಗಂಧಿಗರ, ಶೆಟ್ಟಿಯರ, ಮುಚ್ಚಿಗರ, ಗಾಣಿಗರ, ಭೂಸುರರ, ಕೆಲಸಿಗರ...ಇತ್ಯಾದಿ ಕೇರಿಗಳ ವಿವರ ಇದೆ.[೯] ಒಂದು ಕಡೆಯಿಂದ ಕೇರಿಗಳನ್ನು ಕೀಳುತ್ತಿದ್ದ ಮಂದಿ ಸೂಳೆಗೇರಿಗೆ ತೆರಳಿದಾಗ ಮಣಿಭದ್ರೆ ಎಂಬ ವೇಶ್ಯೆ ಮಾತ್ರ ತನ್ನ ಮನೆಯಿಂದ ಹೊರಬಂದಿರಲಿಲ್ಲ. ಕಾವ್ಯದ ಪ್ರಕಾರ ಸೂಳೆಗೇರಿಯಲ್ಲಿ ೭೭೦ ಮನೆಗಳಿದ್ದವು. ಅವರೆಲ್ಲರಿಗೆ ಮಣಿಭದ್ರೆ ನಾಯಕಿ, ಆಕೆ ಶಿವಭಕ್ತೆ. ಕೇರಿ ಕೀಳುವ ಮಂದಿ ಅವಳ ಮನೆಗೆ ಹೋದಾಗ ಆಕೆ ತನ್ನ ಭವ್ಯವಾದ ಮನೆಯ ಅಂಗಳದಲ್ಲಿ ನಿಂತು ಧ್ಯಾನ ಮಾಡುತ್ತಿದ್ದಳು. ಅವಳ ತಪಸ್ಸಿಗೆ ಭಂಗ ತರಲು ಹೆದರಿದ ಮಂದಿ ವಿಷಯವನ್ನು ಸಿದ್ಧೇಶನಿಗೆ ಮುಟ್ಟಿಸಿದರು. ಸಿದ್ಧೇಶ ತಾನೇ ಸ್ವತಃ ಅಲ್ಲಿ ಬಂದು ನೋಡಿದಾಗ ಆಕೆ ತನ್ನ ಭಕ್ತೆ ಎಂಬುದಾಗಿ ತಿಳಿದ. ಸಿದ್ಧೇಶನನ್ನು ಕಂಡ ಮಣಿಭದ್ರೆ ಭಕ್ತಿಯಿಂದ ಆತನಿಗೆ ಕೈಮುಗಿಯಲು ಸಿದ್ಧೇಶ ತಪಸ್ಸಿನಲ್ಲಿ ನಿರತಳಾಗಿದ್ದ ಆಕೆಯ ಇಂಗಿತವನ್ನು ಕೇಳಿದ. ಆಕೆ ವಿಕ್ರಮರಾಜನು ಕೆರೆ ಕಟ್ಟಿಸುತ್ತಿರುವ ವಿಚಾರ ತನಗೆ ತಿಳಿದಿದೆ; ಕೆರೆ ಪೂರ್ಣಗೊಂಡಾಗ ಅದಕ್ಕೆ ತನ್ನ ಹೆಸರನ್ನಿಡಬೇಕೆಂದು ಕೋರಿದಳು. ಅದಕ್ಕೆ ಸಿದ್ಧೇಶ ಸಮ್ಮತಿಸಿದ. ಮಣಿಭದ್ರೆ ಅಂತಹ ಆಸೆಯನ್ನೇಕೆ ಹೊಂದಿದ್ದಳು ಎಂಬುದನ್ನಾಗಲೀ, ಸಿದ್ಧೇಶ ಅದಕ್ಕೆ ಸಮ್ಮತಿಸಿದ್ದೇಕೆ ಎಂಬ ವಿಷಯವನ್ನಾಗಲೀ ಕಾವ್ಯದಲ್ಲಿ ತಿಳಿಸಿಲ್ಲ. ನಂತರ ಮಣಿಭದ್ರೆಯೂ ಕೂಡ ಹೊಸ ನಗರಕ್ಕೆ ತೆರಳಿದಳು.

ಕೆರೆಯ ನಿರ್ಮಾಣಕ್ಕೆ ರಾಜನ ಆದೇಶದಂತೆ ಎಲ್ಲ ಪುರಗಳು ಹಾಗೂ ಗ್ರಾಮಗಳಿಂದ ಮಂದಿಯನ್ನು ವೀಳಯ ಕೊಟ್ಟು ಕರೆಸಲಾಯಿತು. ೯೦೦೦ ಕಾಮಾಟಿಗರು, ೩೦೦೦ ಒಡ್ಡರು ಈ ಕಾರ್ಯಕ್ಕೆ ಲಭ್ಯವಾದರು. ಅವರೆಲ್ಲರಿಗೆ ಹಾರೆ, ಗುದ್ದಲಿ ಇತ್ಯಾದಿ ಕೆರೆ ನಿರ್ಮಾಣಕ್ಕೆ ಅಗತ್ಯವಾದ ಸಲಕರಣೆಗಳನ್ನು ನೀಡಲಾಯಿತು. ಈ ಮಂದಿಯ ಬಗ್ಗೆ ತಿಳಿಸುವಾಗ ಕವಿ ಸಹಜವಾಗಿ ಗ್ರಾಮೀಣರು ಬಾಹ್ಯ ಲಕ್ಷಣ, ದೈಹಿಕ ಊನ ಇವುಗಳನ್ನು ಬಳಸಿ ಅಡ್ಡ ಹೆಸರಿನಿಂದ ಕರೆಯುತ್ತಿದ್ದುದನ್ನು ಎತ್ತಿ ತೋರಿದ್ದಾನೆ. ಉದಾಹರಣೆಗೆ ಗೂನು ಬೆನ್ನಿನ ತಿಮ್ಮ, ಜಿಡ್ಡು ಕೂದಲ ಲಕ್ಕ, ಕರಿಯ ಮೋರೆಯ ಹನುಮ ಇತ್ಯಾದಿ.

ಕೆರೆಯ ನಿರ್ಮಾಣಕ್ಕೆ ಮುನ್ನ ಸಿದ್ಧೇಶ್ವರನ ಗುಡಿ ನಿರ್ಮಿಸಲಾಯಿತು. ಮೊದಲು ನಾಲ್ಕು ಮೂಲೆಗೂ ನಾಲ್ಕು ಕಂಬ ನಿಲ್ಲಿಸಿ, ನಾಲ್ಕು ಬೋದಿಗೆ ಇಟ್ಟು, ಹಾಸುಗಲ್ಲ ಹಾಸಿ, ಗೋಡೆಕಟ್ಟಿ, ಕಮಲಗಳನ್ನು ಕೆತ್ತಿ ಗುಡಿ ಕಟ್ಟಲಾಯಿತು. ನಂತರ ಬಿರುಸಿನಿಂದ ಕೆರೆ ಕಟ್ಟುವ ಕಾರ್ಯ ಕೈಗೆತ್ತಿಕೊಳ್ಳಲಾಯಿತು. ಈ ಕಾರ್ಯಕ್ಕಾಗಿ ೧೩೦೦ ಬಂಡಿಗಳು ಹಾಗೂ ೧೦೧೫ ಕೋಣಗಳನ್ನು ಬಳಸಿಕೊಳ್ಳಲಾಯಿತು. ಬಂಡಿಗಳಲ್ಲಿ ಕಡವೂರ ಗುಡ್ಡದಿಂದಲೂ, ಕೋಣಗಳ ಸಹಾಯದಿಂದ ದೇವಗಿರಿ ವಾರೆಯಿಂದ ಕಲ್ಲು–ಮಣ್ಣನ್ನು ಹೇರಿಸಲಾಯಿತು.

ಸಾಹಿತ್ಯ ವಿದ್ವಾಂಸರ ಪ್ರಕಾರ ಕೆರೆ ನಿರ್ಮಾಣದ ದೀರ್ಘ ವಿವರಣೆ ಪದ್ಮರಾಜ ಪುರಾಣವನ್ನು ಬಿಟ್ಟರೆ ಬಹುಶಃ ಸಿದ್ಧಲಿಂಗ ಕಾವ್ಯದಲ್ಲಿ ಲಭ್ಯ. ಬಸವ ಕವಿ ಕೆರೆಯ ನಿರ್ಮಾಣ ಕೆಲಸವನ್ನು ಬಹಳ ನೈಜವಾಗಿ ವಿವರಿಸಿದ್ದಾನೆ.

**ಒಂದೆಡೆ ಕಲ್ಮಣ್ಣ ಹೇರುವರ್ ಸಾರುವರ್**
**ಒಂದೆಡೆ ಕಲ್ಲೆತ್ತಿ ಹಾಕುವರ್ ನೂಕುವರ್**
**ಒಂದೆಡೆ ಮಣ್ಣಿನಿಂ ಮೆತ್ತುವರ್ ಒತ್ತುವರ್ ಕಲ್ಮೊಳೆಯಂ ಕಡಿವರ್**
**ಒಂದು ಕಡೆಯಳತೆಯಂ ಮಾಡುವರ್ ನೋಡುವರ್**
**ಒಂದು ಕಡೆ ಹಾರೆಯಿಂ ಬಗಿಯುವರ್ ಒಗೆಯುವರ್**
**ಒಂದು ಕಡೆ ಸೊನ್ನೆಯಿಂದೆತ್ತುವರ್ ಮುತ್ತುವರ್ ಕಲ್ಲುಗಾರೆಯ ಮಾಳ್ಪರು**[೧೦]

ನಿರಂತರವಾಗಿ, ಬಿರುಸಿನಿಂದ ಹನ್ನೆರಡು ಸಾವಿರ ಮಂದಿ ಕೆರೆಯ ಕಟ್ಟುವಿಕೆಯ ಕಾರ್ಯದಲ್ಲಿ ತೊಡಗಿಕೊಂಡರು.

ಕೆರೆ ನಿರ್ಮಿಸಿದ ನಂತರ ಏರಿ ಹಾಗೂ ಮೂರು ತೂಬುಗಳನ್ನು ನಿರ್ಮಿಸಲಾಯಿತು.[೧೧] ಕೆರೆ ನಿರ್ಮಾಣ ಮುಗಿದ ನಂತರ ಬಂದ ಮಳೆಗೆ ಕೆರೆ ತುಂಬಿತು. ಜನಪದರ ಸಂಪ್ರದಾಯದಂತೆ ಕವಿ ರಾಜನಿಂದ ಹಾಗೂ ಪ್ರಜೆಗಳಿಂದ ಗಂಗೆ ಪೂಜೆ ನಡೆದ ವಿಷಯವನ್ನು ವರ್ಣಿಸಿದ್ದಾರೆ.

ವಿಕ್ರಮರಾಜ ಗಂಗೆ ಪೂಜೆ ಮಾಡಿದ ಸಂದರ್ಭದಲ್ಲಿ ಅಳಿಯ ಸಿದ್ಧೇಶ ತಾನು ವೇಶ್ಯೆ ಮಣಿಭದ್ರೆಗೆ ನೀಡಿದ್ದ ವಚನವನ್ನು ತಿಳಿಸಿ ಆಕೆಯ ಹೆಸರನ್ನೇ ಹೊಸದಾಗಿ ಕಟ್ಟಿಸಿರುವ ಆ ಕೆರೆಗೆ ಇಡಬೇಕೆಂದು ಕೋರಿದ. ಅದಕ್ಕೊಪ್ಪಿದ ರಜ ಸಂತೋಷದಿಂದ 'ಸೂಳೆಕೆರೆ' ಎಂದು ಹೆಸರಿಸಿದ ಎಂಬುದಾಗಿ ಕಾವ್ಯ ತಿಳಿಸುತ್ತದೆ. ಇಲ್ಲಿ ಗಮನಕ್ಕೆ ಬರುವ ಒಂದು ವಿಷಯವೆಂದರೆ ಕೆರೆಗೆ ಮಣಿಭದ್ರೆಯ ಹೆಸರನ್ನಿಡದೆ ಆಕೆಯ ವೃತ್ತಿಯ ಹೆಸರನ್ನಿಟ್ಟಿರುವುದು ; ಜೊತೆಗೆ ಅಂದಿನ ಸಮಾಜದಲ್ಲಿ ವೇಶ್ಯಾವೃತ್ತಿಯು ಬಗ್ಗೆ ಕೀಳುಭಾವನೆ ಇಲ್ಲದಿದ್ದುದು ಗಮನಾರ್ಹ. ಅದನ್ನೂ ಇತರ ವೃತ್ತಿಗಳಂತೆಯೇ ಒಂದು ವೃತ್ತಿ ಎಂದು ಭಾವಿಸಿದ್ದರಿಂದಲೇ 'ಸೂಳೆಕೆರೆ' ಎಂದು ಹೆಸರಿಸಿದಾಗ ಯಾರಿಂದಲೂ ವಿರೋಧ ವ್ಯಕ್ತವಾದಂತೆ ಕಂಡುಬರುವುದಿಲ್ಲ.

ಕಾವ್ಯದಲ್ಲಿ ಉಲ್ಲೇಖವಾಗಿರುವ ಈ ಕೆರೆಗೆ 'ಶಾಂತಿಸಾಗರ' ಎಂದು ಪುನಾ ನಾಮಕರಣ ಮಾಡಲಾಗಿದೆ.[೧೨] ಬಹುಶಃ ಜನಪದರಲ್ಲಿ ಶಾಂತವ್ವೆ ಈ ಕೆರೆಯ ನಿರ್ಮಾತೃ ಎಂಬ ನಂಬಿಕೆಯಿರುವ ಹಿನ್ನೆಲೆಯಲ್ಲಿ ಅದು 'ಶಾಂತಿಸಾಗರ' ಆಗಿದ್ದಿರಬೇಕು. ಈ ಕೆರೆಯನ್ನು ಹಿರೇಹಳ್ಳ ಮತ್ತು ಸೊಪ್ಪಿನ ಹಳ್ಳಕ್ಕೆ ಅಡ್ಡಲಾಗಿ ಕಟ್ಟಲಾಗಿದ್ದು, ಕೆರೆ ಏರಿ ೧೧೦೦ ಅಡಿ ಉದ್ದ ಹಾಗೂ ೬೦ ಅಡಿ ಅಗಲವಾಗಿದೆ. ಕೋಡಿ ೨೦೦' ಉದ್ದವಿದೆ. ಕೆರೆಯ ನೀರಿನ ಶೇಖರಣಾ ಸಾಮರ್ಥ್ಯ ೩ ಟಿ.ಎಂ.ಸಿ. [Thousand million cubic feet] ಕೆರೆಗೆ ಈಗ ಸಿದ್ದನಾಲೆ ಹಾಗೂ ಬಸವನಾಲೆ ಎಂಬ ಎರಡು ನಾಲೆಗಳಿವೆ. ಭದ್ರ ಬಲದಂಡೆ ಕಾಲುವೆ ಕೆರೆ ಪಕ್ಕದಲ್ಲೇ ಹರಿಯುತ್ತಿರುವ ಕಾರಣ ಕಾಲುವೆಯಲ್ಲಿ ಹೆಚ್ಚಾದ ನೀರು ಶಾಂತಿಸಾಗರಕ್ಕೆ ಹರಿದು ಇಡೀ ವರ್ಷ ಕೆರೆಯಲ್ಲಿ ನೀರು ಇರುತ್ತದೆ. ನಮಗೆ ಲಭಿಸಿರುವ ಮಾಹಿತಿ ಪ್ರಕಾರ ನೂರು ವರ್ಷಗಳಿಂದ ಕೆರೆ ಒಣಗಿಲ್ಲ. ಚಿತ್ರದುರ್ಗವೂ ಸೇರಿದಂತೆ ಹಲವು ತಾಲೂಕುಗಳಿಗೆ ಕುಡಿಯುವ ನೀರನ್ನು ಶಾಂತಿಸಾಗರದಿಂದ ಒದಗಿಸಲಾಗುತ್ತಿದೆ. ೧೫-೨೦ ಗ್ರಾಮಗಳಿಗೆ ನೀರಾವರಿಗೆ ಈ ಕೆರೆ ನೀರುಣಿಸುತ್ತಿದೆ. ಕಾವ್ಯದ ಪ್ರಕಾರ ಈ ಕೆರೆಯು ೧೯ನೇ ಶತಮಾನದ ಅಂತ್ಯದಲ್ಲಿ ನಿರ್ಮಾಣವಾಗಿದೆ. ಇಂದಿಗೂ ಕೆರೆಯ ಪೂರ್ವ ಕೊನೆಯಲ್ಲಿರುವ ಸಿದ್ಧೇಶ್ವರ ದೇವರ ಜಾತ್ರೆ ಶಿವರಾತ್ರಿ ಸಂದರ್ಭದಲ್ಲಿ ಜರುಗುತ್ತಿದೆ. ಈ ಕೆರೆಯು ಗಾತ್ರ ಹಾಗೂ ಪಾತ್ರದ ದೃಷ್ಟಿಯಿಂದ ಮಹತ್ವವೆನಿಸಿದೆ.

ಕಾವ್ಯದಲ್ಲಿ ಲಭ್ಯವಿರುವ ಇತರ ಮಾಹಿತಿಗಳೆಂದರೆ ಶಿಷ್ಠ ಹಾಗೂ ಜನಪದರ ವಿವಾಹ ಸಂದರ್ಭದಲ್ಲಿನ ಹಲವಾರು ಆಚರಣೆಗಳು. ವಧೂ-ವರರನ್ನು ಅಲಂಕರಿಸುವ ರೀತಿ, ವರನನ್ನು ಮೆಟ್ಟಕ್ಕಿ ಕುಕ್ಕಿಯ ಮೇಲೆ ನಿಲ್ಲಿಸುವುದು, ವಿವಾಹಕ್ಕೆ ಸಭೆಯ ಒಪ್ಪಿಗೆ ಪಡೆಯುವುದು, ಹಾಲು-ತುಪ್ಪದಲ್ಲಿ ವಧೂವರರ ಕೈ ಅದ್ದಿಸುವುದು, ಸೆರಗಿಗೆ ಜೀರಿಗೆ ಬೆಲ್ಲ ಕಟ್ಟುವುದು, ಅಕ್ಕಿಧಾರೆ, ನವ ಮಧುಮಕ್ಕಳನ್ನು ಊರಲ್ಲಿ ಮೆರವಣಿಗೆ ಮಾಡಿಸುವುದು, ಹಸೆ ಜಗಲಿಯಲ್ಲಿ ಕೂರಿಸಿ ವಸ್ತ್ರಗಳಿತ್ಯಾದಿ ಮುಯ್ಯಿ ಮಾಡುವುದು, ನಾಗವಲಿ ಶಾಸ್ತ್ರ ಇತ್ಯಾದಿ ಪದ್ಧತಿಗಳ ವರ್ಣನೆ ಇದೆ. ಈ ಆಚರಣೆಗಳು ಬಹುತೇಕ ಗ್ರಾಮೀಣ ಪ್ರದೇಶಗಳಲ್ಲಿನ ವಿವಾಹಗಳಲ್ಲಿ ಇಂದಿಗೂ ಮುಂದುವರಿದಿರುವುದನ್ನು ಗಮನಿಸಬಹುದು.

ವಧೂ-ವರರ ಉಡುಗೆ, ತೊಡುಗೆಗಳನ್ನು ವರ್ಣಿಸಲಾಗಿದೆ. ನಿಲುವಂಗಿ ಮುಂಡಾಸು, ತಲೆಗೆ ಮೇಲ್ಮುತ್ತಿನ ತುರಾಯಿ, ಕಂಠಾಗ್ರದೊಳ್ ಚಂದ್ರಹಾರ, ಶಿವದಾರ, ಪಟ್ಟೆಯುಡಿದಾರ, ಪಾದಕ್ಕೆ ರನ್ನದಾವುಗೆ, ಕನಕ ಜರತಾರಿ ಪಂಚೆ, ರುದ್ರಾಕ್ಷಮಾಲೆ, ಭಸ್ಮ, ಕರ್ಣಕುಂಡಲ ಇತ್ಯಾದಿ ವರನ ಉಡುಗೆಗಳು. ಅದೇ ರೀತಿ ವಧುವಿನ ಸಿಂಗಾರದಲ್ಲಿ ಆಭರಣಗಳಿಗೆ ಹೆಚ್ಚು ಪ್ರಾಧಾನ್ಯ ನೀಡಿರುವುದು ಕಂಡು ಬರುತ್ತದೆ. ಓಲೆ, ಮೂಗುತಿ, ಕಪ್ಪು ಬಂದಿಗೀರ್ಬಳೆ, ಕಾಲು ಸರಪಣಿ, ಡಾಬು, ಕಡಗ, ಕಟ್ಟಾಣಿಸರ, ಜಡೆ ಬಂಗಾರ, ನಕ್ಷತ್ರಮಾಲೆ, ತೋಳಬಂದಿ, ಬುಗುಡಿ, ಜಡೆಬಿಲ್ಲೆ, ಬೈತಲೇ ಬಟ್ಟು, ಕಾಲುಂಗುರ, ಮುತ್ತಿನ ದಂಡೆ, ಚಂದ್ರಹಾರ, ರನ್ನದಾವುಗೆ ಇತ್ಯಾದಿ ಆರಭಗಳ ಉಲ್ಲೇಖವಿದೆ.

ವಿವಾಹಕ್ಕೆ ಸ್ವರ್ಗವತೀ ಪಟ್ಟಣ ವಿವಿಧ ಹೂಗಳು, ಅಮೂಲ್ಯ ಹರಳುಗಳು, ನವರತ್ನಗಳಿಂದ ಅಲಂಕೃತ ಗೊಂಡಿದ್ದರ ವಿವರಣೆ ಮಾಡುವಲ್ಲಿ ಕವಿ ಅಂದು ಬೆಳೆಯುತ್ತಿದ್ದ ವಿವಿಧ ಹೂಗಳ ಬಗ್ಗೆ ತಿಳಿಸಿದ್ದಾನೆ. ಅದೇ ರೀತಿ ಕವಿ ಮಗು ಹುಟ್ಟಿದ ಸಂದರ್ಭದಲ್ಲಿನ ಆಚರಣೆಗಳು ನಾಮಕರಣ, ಮಗುವನ್ನು ತೊಟ್ಟಿಲಿಗೆ ಹಾಕುವುದು ಇತ್ಯಾದಿ ವಿವರಿಸಿದ್ದಾನೆ.

ಅಂತೆಯೇ ಆಳುವ ವರ್ಗದವರ ಪ್ರಧಾನ ಮನರಂಜನೆ ಬೇಟೆಯಾಗಿದ್ದು ಆ ಬಗ್ಗೆ ಕಾವ್ಯದಲ್ಲಿ ವಿವರಣೆ ಲಭ್ಯ. ಬೇಟೆಯ ಮೂಲಕ ವರ್ಣಿಸಿರುವ ಕಾಡಿನ ಮರ-ಗಿಡಗಳು, ವಿವಿಧ ಪ್ರಾಣಿ-ಪಕ್ಷಿಗಳು, ಬೇಟೆಯ ವಿಧಾನ ಇತ್ಯಾದಿಗಳ ಮಾಹಿತಿ ಲಭ್ಯ.

ಒಟ್ಟಾರೆ ಬಸವ ಕವಿಯ ಸಿದ್ಧಲಿಂಗ ಕಾವ್ಯವು ಶಿಷ್ಟ ಕಾವ್ಯದಲ್ಲಿ ವಿರಳವೆನಿಸಿರುವ ಕೆರೆಯೊಂದನ್ನು ವಸ್ತುವಾಗಿ ಹೊಂದಿದ್ದು ಸಮಕಾಲೀನ ಸಮಾಜ ಹಾಗೂ ಸಾಂಸ್ಕೃತಿಕ ಜೀವನವನ್ನು ತೆರೆದಿಟ್ಟಿದೆ.

(ಈ ಕಾವ್ಯವನ್ನು ಸಂಪಾದಿಸಿರುವ ಡಾ. ವೈ.ಸಿ. ಭಾನುಮತಿ ಅವರಿಗೆ ಕೃತಜ್ಞತೆಗಳು. ಈ ಕಾವ್ಯ ೨೦೦೬ರಲ್ಲೇ ಪ್ರಕಟಗೊಂಡಿದ್ದರೂ ಇತಿಹಾಸಕಾರರು ಇದನ್ನು ಬಳಸಿಕೊಂಡಿಲ್ಲ. ಸೂಳೆಕೆರೆಯಂತಹ ಒಂದು ಪ್ರಮುಖ ಕೆರೆ ಬಗ್ಗೆ ಮೊದಲ ಬಾರಿಗೆ ದಾಖಲೆ ರೂಪದಲ್ಲಿ ಮಾಹಿತಿ ಇದರಲ್ಲಿ ಲಭ್ಯವಿದೆ. ಹಾಗೂ ಸಮಕಾಲೀನ ಸಾಮಾಜಿಕ-ಸಾಂಸ್ಕೃತಿಕ ಇತಿಹಾಸ ರಚನೆಗೆ ಸಾಕಷ್ಟು ಮಾಹಿತಿ ಇದರಲ್ಲಿ ಲಭ್ಯವಿದೆ. ಕರ್ನಾಟಕ ಇತಿಹಾಸ ಅಕಾದೆಮಿಯ ಸಮ್ಮೇಳನಕ್ಕೆ ರಾಜ್ಯದ ಎಲ್ಲ ಭಾಗಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ವಿದ್ವಾಂಸರು ಆಗಮಿಸುತ್ತಾರಾದ್ದರಿಂದ ಕಾವ್ಯದೆಡೆಗೆ ವಿದ್ವಾಂಸರ ಗಮನ ಸೆಳೆಯುವ ಉದ್ದೇಶದಿಂದ ಈ ಲೇಖನ ರಚಿಸಲಾಗಿದೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಒಂದೇ ಗ್ರಂಥದಲ್ಲಿ ಎರಡು ಕಾವ್ಯಗಳಿವೆ. ಒಂದು ಪ್ರಸ್ತುತ ಲೇಖನಕ್ಕೆ ಬಳಸಿಕೊಂಡಿರುವ ಸಿದ್ಧಲಿಂಗಕಾವ್ಯ ; ಮತ್ತೊಂದು ಸದಾಶಿವ ಕವಿ ವಿರಚಿತ ಮಹಾಕೂಟ ಮಹಾತ್ಮ್ಯ.

೨. ಈ ಕಾವ್ಯದ ಹಸ್ತಪ್ರತಿಯಲ್ಲಿ 'ಸಿದ್ಧಲಿಂಗ ಕಾವ್ಯ' ಎಂದಿದೆ. ಕಾವ್ಯದ ಒಳಭಾಗದಲ್ಲಿ 'ಸಿದ್ಧಲಿಂಗೇಂದ್ರ ಕಾವ್ಯ' ಎಂಬುದಾಗಿ ಬರೆಯಲಾಗಿದೆ.

೩. ದಾವಣಗೆರೆ ಜಿಲ್ಲೆ ಅಸ್ತಿತ್ವಕ್ಕೆ ಬರುವ ಮುನ್ನ ಸೂಳೆಕೆರೆ ಶಿವಮೊಗ್ಗ ಜಿಲ್ಲೆಗೆ ಸೇರಿತ್ತು. 'ಶಾಂತಿ ಸಾಗರ' ಎಂಬ ಹೆಸರಿಡಲು ಜನಪದರ ಮನದಲ್ಲಿ ಪರಂಪರಾನುಗತವಾಗಿ ಉಳಿದುಕೊಂಡು ಬಂದಿರುವ ಕಥೆ ಪ್ರಕಾರ ವಿಕ್ರಮರಾಜನ ಮಗಳು ಶಾಂತವ್ವೆ ಈ ಕೆರೆ ಕಟ್ಟಿಸಿದಳು. ಹಾಗಾಗಿ ಅವಳ ಹೆಸರನ್ನಿಡಲಾಯಿತು.

೪. ಜನಪದ ಸಾಹಿತ್ಯದಲ್ಲಿ ಕೆರೆ-ಕಟ್ಟೆ-ಕಾಲುವೆಗಳಿಗೆ ಪ್ರಾಧಾನ್ಯ ಇದೆ. ಕಾರಣ ಅವು ಜನಪದರ ಜೀವನಾಡಿ. ಆದರೆ ಶಿಷ್ಟ ಸಾಹಿತ್ಯದಲ್ಲಿ ಇದು ವಿರಳ.

೫. ವೇಶ್ಯೆಯರೇ ನಿರ್ಮಿಸಿರುವ ಕೆರೆಗಳು ಕರ್ನಾಟಕದಲ್ಲಿ ಸಾಕಷ್ಟಿವೆ. ದಕ್ಷಿಣ ಕನ್ನಡ ಜಿಲ್ಲೆಯ ಪಾಂಗಳದ ಸೂಳೆಕೆರೆ ಇದಕ್ಕೊಂದು ಉದಾಹರಣೆ.

೬ ಮೊದಲನೇ ಕಂಠೀರವ ನರಸರಾಜರ ಕಾಲದಲ್ಲಿ ನಿರ್ಮಿಸಲಾದ ಬಂಗಾರ ದೊಡ್ಡಿನಾಲೆಯನ್ನು ಇಲ್ಲಿ ಉದಾಹರಿಸಬಹುದು.

೭. ಈ ಸೂಳೆಕೆರೆಗೆ ಮಧ್ಯಕಾಲೀನ ದಕ್ಷಿಣ ಭಾರತದ ಮಾನವ ನಿರ್ಮಿತ ಬೃಹತ್ ಜಲಾಶಯ ಎಂಬ ಹೆಗ್ಗಳಿಕೆ ಇದೆ. ಇದರ ಸುತ್ತಳತೆ ೬೪ ಕಿ.ಮೀ. ಇದೆ.

೮. ಈಗ ಕೆರೆ ಇರುವ ಸ್ಥಳವೇ ಕಾವ್ಯದ ಪ್ರಕಾರ ಸ್ವರ್ಗವತೀ ಪಟ್ಟಣವಾಗಿತ್ತು.

೯. ಸಂಧಿ ೧೩ ; ಪದ್ಯ-೩೫, ೩೬.

೧೦. ಸಂಧಿ ೧೪ ; ಪದ್ಯ-೧೦, ಪುಟ ೯೧.

೧೧. ತೂಬುಗಳಿಗೆ ಹಾಕಲಾಗಿದ್ದ ಮರದ ಬಿರಡೆಗಳನ್ನು ತೆಗೆದು ಆ ಸ್ಥಾನದಲ್ಲಿ ಈಗ ಕಬ್ಬಿಣದ ಬಿರಡೆಗಳನ್ನು ಜೋಡಿಸಲಾಗಿದೆ.

೧೨. ಶಾಂತವ್ವೆ ಹೆಸರಿನಲ್ಲಿ ಶಾಂತಿಸಾಗರ ಎಂದು ನಾಮಕರಣ ಮಾಡಲಾಗಿದೆ. ಲೇಖನ ಮಂಡನೆಯಾದ ನಂತರ ಹಿರಿಯ ವಿದ್ವಾಂಸರಾದ ಡಾ. ಹೆಚ್. ಚಂದ್ರಶೇಖರ್‌ರವರು ತಿಳಿಸಿದ ಪ್ರಕಾರ ಶ್ರೀ ಜೆ.ಎಚ್. ಪಟೇಲ್‌ರವರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಈ ಕೆರೆಗೆ ಪುನಃ ಸೂಳೆಕೆರೆ ಎಂದೇ ಕರೆಯಬೇಕೆಂದು ಸರ್ಕಾರದ ಅಧಿಸೂಚನೆ ಹೊರಡಿಸಲಾಗಿದೆ. ಆದರೂ ಜನಸಾಮಾನ್ಯರು, ಪತ್ರಿಕೆಗಳು ಅದನ್ನು ಶಾಂತಿಸಾಗರ ಎಂದೇ ಕರೆಯುತ್ತಿವೆ.

ಮಹೇಂದ್ರಕುಮಾರ ಕೆ.ಸಿ.*

# ಬೇಲೂರಿನ ಅರಸ ಮೂರನೆ ವೆಂಕಟಾದ್ರಿನಾಯಕ (೧೬೪೯-೧೬೭೦)

ವಿಜಯನಗರ ಚಕ್ರವರ್ತಿಗಳು ತಮ್ಮ ಸಾಮ್ರಾಜ್ಯವನ್ನು ಕಟ್ಟಿ ಆಳ್ವಿಕೆ ಮಾಡುವ ಸಂದರ್ಭದಲ್ಲಿ ತಮ್ಮ ಅನುಕೂಲಕ್ಕಾಗಿ ಅಮರನಾಯಕನನ್ನು ನೇಮಿಸಿ, ಅವರಿಗೆ ಭೂ ಪ್ರದೇಶಗಳನ್ನು ಅಮರವಾಗಣಿಯಾಗಿ ನೀಡುತ್ತಿದ್ದರು. ಹೀಗೆ ಭೂ ಪ್ರದೇಶಗಳನ್ನು ಪಡೆದ ಅಮರನಾಯಕರು ಕ್ರಿ.ಶ. ೧೫೬೫ರ ತಾಳಿಕೋಟೆ ಯುದ್ಧದ ನಂತರ ತಾವು ನಿಷ್ಠರಾಗಿದ್ದ ವಿಜಯನಗರ ಚಕ್ರವರ್ತಿಗಳಿಂದ ಸ್ವತಂತ್ರರಾಗಲು ಮುಂದಾಗಿ, ತಮ್ಮ ಆಳ್ವಿಕೆಯನ್ನು ವಂಶಪಾರಂಪರ್ಯಗೊಳಿಸಿ, ತಾವು ನೆಲಸಿದ ಪ್ರದೇಶಗಳ ಮೇಲೆ ಸಂಪೂರ್ಣ ಒಡೆತನವನ್ನು ಸಾಧಿಸಿ, ಅಮರನಾಯಕತನದಿಂದ ಅರಸರಾಗಿ ಪರಿವರ್ತನೆಗೊಂಡು ಆಳ್ವಿಕೆಯನ್ನು ಪ್ರಾರಂಭಿಸಿದರು. ಈ ರೀತಿಯಾಗಿ ಆಳ್ವಿಕೆ ಆರಂಭಿಸಿದವರಲ್ಲಿ ಬೇಲೂರು ನಾಯಕರು ಸಹ ಪ್ರಮುಖರು.

ಬೇಲೂರನ್ನು ಕೇಂದ್ರವನ್ನಾಗಿ ಮಾಡಿಕೊಂಡು ಸುಮಾರು ಮೂರು ಶತಮಾನಗಳ ಆಳ್ವಿಕೆ ಮಾಡಿದ ಬೇಲೂರು ಅರಸರು, ತಮ್ಮ ಆಡಳಿತ ಅವಧಿಯಲ್ಲಿ ಬೇಲೂರು ಮತ್ತು ಐಗೂರುಗಳನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಗುರುತಿಸಿಕೊಂಡಿದ್ದರು. ಇವರು ರಾಜಕೀಯ ವೈಪರೀತ್ಯಗಳಿಂದಾಗಿ ಬೇಲೂರಿನಿಂದ ಐಗೂರಿಗೆ ತಮ್ಮ ಆಡಳಿತ ಕೇಂದ್ರವನ್ನಾಗಿ ಬದಲಾಯಿಸಿದರು. ಹೀಗೆ ಐಗೂರಿನಲ್ಲಿ ನೆಲೆನಿಂತು ತಮ್ಮ ಆಳ್ವಿಕೆಯನ್ನು ಆರಂಭಿಸಿದವರಲ್ಲಿ ಮೂರನೇ ಕೃಷ್ಣಪ್ಪ ನಾಯಕನ ಮಗ ಮೂರನೇ ವೆಂಕಟಾದ್ರಿ ನಾಯಕ ಪ್ರಮುಖರು. ಇದಕ್ಕೆ ಸಾಕ್ಷಿಯಾಗುವ ಪ್ರಮುಖ ಆಕರಗಳೆಂದರೆ ಶಾಸನಗಳು, ಲಿಂಗಣ್ಣ ಕವಿಯ ಕೆಳದಿನೃಪವಿಜಯ, ಬಿ. ರಾಮಕೃಷ್ಣರಾವ್ ಸಂಪಾದಿಸಿರುವ ಶ್ರೀಮನ್ಮಹಾರಾಜರವರ ವಂಶಾವಳಿ, ಸಿ. ಹಯವದನ್‌ರಾವ್‌ರವರ ಮೈಸೂರು ಗ್ಯಾಜಟೀಯರ್ ; ಸಂಪುಟ–೨, ಭಾಗ–೩, ಕೆ.ಎನ್. ಚಿಟ್ನೀಸ್‌ರವರ ಕೆಳದಿಪಾಲಿಟಿ, ಕೆ.ಡಿ. ಸ್ವಾಮಿನಾಥನ್‌ರವರ ದಿ ನಾಯಕಾಸ್ ಆಫ್ ಇಕ್ಕೇರಿ, ಕೆ.ಎಸ್. ಶಿವಣ್ಣ ಸಂಪಾದಿಸಿರುವ ಕರ್ನಾಟಕ ಚರಿತ್ರೆ ಸಂ. ೩, ರಾಜಾರಾಮ ಹೆಗಡೆ ಮತ್ತು ಅಶೋಕ ಶೆಟ್ಟರ್ ಸಂಪಾದಿಸಿರುವ ಮಲೆ ಕರ್ನಾಟಕದ ಅರಸುಮನೆತನಗಳು ಪ್ರಮುಖವಾದವು.

ಎರಡನೇ ವೆಂಕಟಾದ್ರಿನಾಯಕನ ಮಗ ಮೂರನೇ ಕೃಷ್ಣಪ್ಪನಾಯಕನು ಕ್ರಿ.ಶ. ೧೬೪೩ರ ಸುಮಾರಿಗೆ ಅಧಿಕಾರಕ್ಕೆ ಬಂದನು. ಇವನು ಅಧಿಕಾರಕ್ಕೆ ಬಂದಾಗ ಬೇಲೂರು, ಕೆಳದಿ ಮುಂತಾದ ಸಣ್ಣ ಪುಟ್ಟ ರಾಜ್ಯಗಳು ಬಿಜಾಪುರದ ಆದಿಲ್ ಷಾಹಿಗಳ ಹಿಡಿತದಲ್ಲಿ ಇದ್ದವು. ಆದಿಲ್‌ಷಾಹಿಗಳು ಮೈಸೂರಿನೊಂದಿಗೆ ಯುದ್ಧಮಾಡಿ ಸೋಲನ್ನು ಅನುಭವಿಸಿದ ಮೇಲೆ ಮೈಸೂರಿನವರ ಸ್ನೇಹವನ್ನು ಬಯಸಿದ ಮೂರನೇ ಕೃಷ್ಣಪ್ಪನಾಯಕನು ಕಂಠೀರವನರಸರಾಜರಿಗೆ ಕಪ್ಪಕಾಣಿಕೆಗಳನ್ನು ಒಪ್ಪಿಸಿದನು. ಕೆಳದಿಯಲ್ಲಿ ವೀರಭದ್ರನಾಯಕನ ಚಿಕ್ಕಪ್ಪ ಮತ್ತು ಸೈನ್ಯಾಧಿಕಾರಿಯಾಗಿದ್ದ ಶಿವಪ್ಪನಾಯಕನು ಹಾಲೇರಿಯ ಅರಸನನ್ನು ಸೆರೆಹಿಡಿದನು. ಇದರಿಂದ ಹೆದರಿದ ಹಾಲೇರಿ ರಾಜನ ಸತಿ ಬೇಲೂರಿನ ಕೃಷ್ಣಪ್ಪನಾಯಕನ ಮೊರೆಹೊಕ್ಕು ತನ್ನ ಪತಿಯನ್ನು ಬಿಡುಗಡೆಗೊಳಿಸಬೇಕೆಂದು ಕೇಳಿಕೊಂಡಳು.[೧] ಆಗ ಮಧ್ಯಪ್ರವೇಶಿಸಿದ ಮೂರನೇ ಕೃಷ್ಣಪ್ಪನಾಯಕನು ಹಾಲೇರಿಯ ರಾಜನನ್ನು ಬಿಡುಗಡೆಗೊಳಿಸಿದನು. ಮೂರನೇ ಕೃಷ್ಣಪ್ಪನಾಯಕನ ಮಧ್ಯಪ್ರವೇಶವು ಶಿವಪ್ಪನಾಯಕನಿಗೆ ಮತ್ತೊಂದು ಪ್ರಬಲ ಶಕ್ತಿ ರೂಪುಗೊಳ್ಳುತ್ತಿವೆಯೋ ಎಂಬ ಅನುಮಾನಕ್ಕೆ ನಾಂದಿ ಹಾಡಿತು. ಈ ಅನುಮಾನವು ನಿಜವಾದದ್ದು ಬಿಜಾಪುರದವರ ಪ್ರಭಾವ ಕ್ಷೀಣಿಸುತ್ತಿದ್ದಂತೆ ಮೈಸೂರಿನ ಒಡೆಯರ ಸ್ನೇಹ ಬೆಳೆಸಿದಾಗ. ಇದರಿಂದ ಕೋಪಗೊಂಡ ಶಿವಪ್ಪನಾಯಕನು ಬೇಲೂರಿನ ಮೇಲೆ ಯುದ್ಧ ಸಾರಿದನು. ಈ ಸಮಯದಲ್ಲಿ ಕಂಠೀರವ ನರಸರಾಜ ಒಡೆಯರು ಕೃಷ್ಣಪ್ಪನಾಯಕನಿಗೆ ಬೆಂಬಲ ನೀಡಿದರು.[೨] ಆದರೂ ಕೃಷ್ಣಪ್ಪನಾಯಕನ ಸಕ್ಕರೆ ಪಟ್ಟಣವನ್ನು ಕಳೆದುಕೊಂಡ ಹಾಗೂ ಇವನ ಮಗ ಮೂರನೇ ವೆಂಕಟಾದ್ರಿ ನಾಯಕನು ಶಿವಪ್ಪನಾಯಕನ ಸೆರೆ ಆದನು.[೩] ಇದರಿಂದ ಹೆದರಿದ ಕೃಷ್ಣಪ್ಪನಾಯಕ ತನ್ನ ಮಗನನ್ನು ಸೆರೆಯಿಂದ ಬಿಡಿಸಿಕೊಂಡು ಶಾಂತಿಯಿಂದ ಇರಲು ಒಪ್ಪಿದನು. ಆದರೆ

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ

ಮೂರನೇ ಶ್ರೀರಂಗನು ರಾಜ್ಯಭ್ರಷ್ಟನಾಗಿ 'ರಾಜ್ಯವೇ ಇಲ್ಲದ ರಾಜನಾಗಿ' ಅಲೆಯುತ್ತಿರುವಾಗ ಶಿವಪ್ಪನಾಯಕನು ತನ್ನ ರಾಜನಿಷ್ಠೆಯನ್ನು ಪ್ರದರ್ಶಿಸಿ ಶ್ರೀರಂಗರಾಯನಿಗೆ ಆಶ್ರಯ ನೀಡಿದನು. ಮೂರನೇ ಕೃಷ್ಣಪ್ಪ ನಾಯಕನು ಶ್ರೀರಂಗರಾಯರ ಕಾರ್ಯಕ್ಕೆ ಕರ್ತನಾದವನು[೪] ಎಂದು ಹೇಳಿಕೊಂಡಿದ್ದರೂ, ಶ್ರೀರಂಗರಾಯನಿಗೆ ಆಶ್ರಯ ನೀಡದಿದ್ದುದು ಶಿವಪ್ಪನಾಯಕನಿಗೆ ಸಹಿಸಲಾರದ ಕೋಪಕ್ಕೆ ಕಾರಣವಾಯಿತು. ಇದನ್ನೇ ನೆಪವಾಗಿಟ್ಟುಕೊಂಡು ಶಿವಪ್ಪನಾಯಕನು ಬೇಲೂರನ್ನು ಆಕ್ರಮಿಸಲು ಮುಂದಾದನು. ಕಾಕತಾಳಿಯವೆಂಬಂತೆ ಮೂರನೇ ಕೃಷ್ಣಪ್ಪ ನಾಯುಕನು ಹಿಂದೆ ಶಿವಪ್ಪ ನಾಯಕನೊಂದಿಗೆ ಆಗಿದ್ದ ಒಪ್ಪಂದವನ್ನು ಮುರಿದು ಸಕ್ಕರೆ ಪಟ್ಟಣದ ಆದಾಯವನ್ನು ತಾನೇ ಸ್ವೀಕರಿಸಿದ್ದನು. ಇದರಿಂದ ಕೋಪಗೊಂಡ ಶಿವಪ್ಪನಾಯಕನು ತನ್ನ ಮಿತ್ರರನ್ನು ಸೇರಿಸಿಕೊಂಡ ಬೇಲೂರಿನ ಮೇಲೆ ಯುದ್ಧಸಾರಿ ಅವನಿಂದ ಬೇಲೂರನ್ನು ವಶಪಡಿಸಿಕೊಂಡು ಶ್ರೀರಂಗರಾಯನಿಗೆ ಒಪ್ಪಿಸಿದನು.[೫] ಇದರಿಂದ ಮೂರನೇ ಕೃಷ್ಣಪ್ಪನಾಯಕನು ಬೇಲೂರಿನಿಂದ ತನ್ನ ಮಗನೊಂದಿಗೆ ಉಳಿದ ಸೈನ್ಯವನ್ನು ಕಟ್ಟಿಕೊಂಡು ಬಲಂ ಅಥವಾ ಐಗೂರು ಸೀಮೆಗೆ ಓಡಿಹೋದನು.

ಮೂರನೇ ಕೃಷ್ಣಪ್ಪ ನಾಯಕನು ಶಿವಪ್ಪನಾಯಕನೊಡನೆ ಯುದ್ಧದಲ್ಲಿ ಸೋತು ಬಲಂ (ಐಗೂರು) ಪ್ರಾಂತದಲ್ಲಿ ನೆಲೆನಿಂತನು. ಇದರಿಂದಾಗಿ ಬೇಲೂರು ಪ್ರದೇಶದ ಒಡೆತನವನ್ನು ಕಳೆದುಕೊಂಡ ಇವನು ತನ್ನ ಮಗನಿಗೆ ನೀಡಿದ್ದು ತನ್ನ ರಾಜ್ಯದ ಅರ್ಧಭಾಗವನ್ನು ಮಾತ್ರ ಇದು ಸಹ ಸ್ಥಿರವಾದ ಭೂಪ್ರದೇಶವಾಗಿರಲಿಲ್ಲ. ಇಂತಹ ಸಂದರ್ಭದಲ್ಲಿ ಅಧಿಕಾರಕ್ಕೆ ಬಂದ ಮೂರನೇ ವೆಂಕಟಾದ್ರಿ ನಾಯಕನು ನೆಪಮಾತ್ರಕ್ಕೆ ರಾಜನಾಗಿದ್ದು ಐಗೂರಿನಿಂದ ಆಡಳಿತವನ್ನು ಮಾಡಲು ಆರಂಭಿಸಿದ ಮೊದಲ ರಾಜನಾದನು. ಇದಕ್ಕೆ ಪೂರ್ವದಲ್ಲಿ ಬೇಲೂರಿನಿಂದ ಆಡಳಿತ ನೋಡಿಕೊಳ್ಳುತ್ತಿದ್ದ ಮೂರನೇ ವೆಂಕಟಾದ್ರಿ ನಾಯಕನ ಪೂರ್ವಜರು ಈಗಿನ ಬೇಲೂರು ಮೂಡಿಗೆರೆ, ಕಡೂರು, ಸಕಲೇಶಪುರ, ಹಾಸನ, ಅರಕಲಗೂಡು, ಆಲೂರು ತಾಲ್ಲೂಕುಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಆದರೆ ೩ನೇ ಕೃಷ್ಣಪ್ಪ ನಾಯಕನಿಂದ ಬೇಲೂರು, ಹಾಸನ, ಸಕ್ಕರೆ ಪಟ್ಟಣಗಳನ್ನು ಕಸಿದುಕೊಂಡ ಶಿವಪ್ಪ ನಾಯಕನು ಬೇಲೂರು ನಾಯಕರ ಗಮನ ಬೇರೆ ಪ್ರದೇಶಗಳಲ್ಲಿ ನೆಲೆ ನಿಲ್ಲುವಂತೆ ಮಾಡಿತು. ಈ ರೀತಿಯಾಗಿ ಮೂರನೇ ವೆಂಕಟಾದ್ರಿ ನಾಯಕನು ಐಗೂರಿನಿಂದ ಅರಕಲಗೂಡು[೬], ಸಕಲೇಶಪುರ,[೭] ಮೂಡಿಗೆರೆ[೮] ಪ್ರದೇಶಗಳ ಆಡಳಿತವನ್ನು ನೋಡಿಕೊಳ್ಳಲು ಆರಂಭಿಸಿದ. ವೆಂಕಟಾದ್ರಿ ನಾಯಕನು ಇಲ್ಲಿಯು ಸಹ ನೆಮ್ಮದಿಯಿಂದ ಇರಲಾಗಲಿಲ್ಲ. ಕಾರಣ, ಶಿವಪ್ಪನಾಯಕನು ೩ನೇ ಶ್ರೀರಂಗರಾಯನನ್ನು ಬೇಲೂರು ಸಿಂಹಾಸನದಲ್ಲಿ ಕೂರಿಸಿ ಅವರ ಮೆಚ್ಚುಗೆಯನ್ನು ಪಡೆದು ಹೆಚ್ಚಿನ ಭೂ ಪ್ರದೇಶಗಳನ್ನು ಗೆಲ್ಲಲು ಮುಂದಾದನು. ಇದಕ್ಕೆ ತಡೆಯನ್ನು ಒಡ್ಡುವ ಕಾರ್ಯದಲ್ಲಿ ಮೈಸೂರು ರಾಜ ದೇವರಾಜ ಒಡೆಯರು ಪ್ರತಿತಂತ್ರವನ್ನು ರೂಪಿಸಲು ಮುಂದಾದರು. ಇದರ ಪರಿಣಾಮ ೩ನೇ ವೆಂಕಟಾದ್ರಿ ನಾಯಕನು ಹುಲಿ ಮತ್ತು ಸಿಂಹದ ಮುಂದೆ ಕಟ್ಟಿದ ಕುರಿಯಂತಾದನು.

ಬಿದನೂರಿನ ಶಿವಪ್ಪನಾಯುಕನು ಮೂರನೇ ಶ್ರೀರಂಗನಿಗೆ ಬೇಲೂರು ಮತ್ತು ಸಕ್ಕರೆ ಪಟ್ಟಣಗಳ ಆಡಳಿತವನ್ನು ವಹಿಸಿಕೊಟ್ಟ ನಂತರ ಮೈಸೂರಿನವರ ಕೃಪಾಕಟಾಕ್ಷದಲ್ಲಿದ್ದ ಮೂರನೇ ವೆಂಕಟಾದ್ರಿ ನಾಯಕನ ಆಳ್ವಿಕೆಯಲ್ಲಿದ್ದ ಬಲಂ ಮತ್ತು ಅರಕಲಗೂಡುಗಳ ಮೇಲೆ ಯುದ್ದ ಸಾರಿ ಅವುಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡನು. ಇಲ್ಲಿಂದ ಪುನಃ ಮುಂದೆ ಸಾಗಿ ಕೊಡಗನ್ನು ತನ್ನ ವಶಕ್ಕೆ ತೆಗೆದುಕೊಂಡನು.[೯] ಈ ಸಂದರ್ಭದಲ್ಲಿ ಐಗೂರಿನ ಮೂರನೇ ವೆಂಕಟಾದ್ರಿ ನಾಯಕನು ಕೇವಲ ಮೂಕ ಪ್ರೇಕ್ಷಕನಾಗಿದ್ದನೇ ಹೊರತು ಯಾವುದೇ ಯುದ್ಧಲ್ಲಿ ತೊಡಗಲಿಲ್ಲ. ಇವನಿಗೆ ತನ್ನ ನೆಲೆಯನ್ನು ಉಳಿಸಿಕೊಂಡರೆ ಸಾಕೆಂದು ಅರಿತ ವೆಂಕಟಾದ್ರಿ ನಾಯಕನು ಅರಣ್ಯ ಮಧ್ಯದಲ್ಲಿ ಇದ್ದ ಐಗೂರಿನಲ್ಲಿ ತನ್ನ ನೆಲೆಯನ್ನು ಭದ್ರಗೊಳಿಸುವ ಕಾರ್ಯದಲ್ಲಿ ಮಗ್ನನಾಗಿದ್ದನು. ಎಚ್. ತಿಪ್ಪೇರುದ್ರಸ್ವಾಮಿಯವರು ಬೇಲೂರಿನಲ್ಲಿ ಮೂರನೇ ಶ್ರೀರಂಗರಾಯುನನ್ನು ಓಡಿಸಿದನೆಂದು ಹೇಳಿದ್ದಾರೆ.[೧೦] ಆದರೆ ವೆಂಕಟಾದ್ರಿ ನಾಯಕ ಈ ವೇಳೆಯಲ್ಲಿ ಐಗೂರಿನ ಸುತ್ತಮುತ್ತ ತನ್ನ ಆಡಳಿತವನ್ನು ಭದ್ರಗೊಳಿಸಲು ಕಷ್ಟಪಡುತ್ತಿದ್ದನು.

ಕೊಡಗಿನವರೆಗೆ ದಿಗ್ವಿಜಯ ಸಾಧಿಸಿದ್ದ ಶಿವಪ್ಪ ನಾಯಕನು ಮೈಸೂರರಸರ ಹಿಡಿತದಲ್ಲಿ ಇದ್ದ ಶ್ರೀರಂಗಪಟ್ಟಣ ವನ್ನು ಜಯಿಸಲು ಯೋಜನೆಯನ್ನು ರೂಪಿಸಿದನು. ಇದಕ್ಕೆ ಬೇಲೂರಿನಲ್ಲಿ ಕೇವಲ ನೆಪಮಾತ್ರಕ್ಕೆ ಚಕ್ರವರ್ತಿಯಂತಿದ್ದ ಮೂರನೇ ಶ್ರೀರಂಗರಾಯನು ಶಿವಪ್ಪನಾಯಕನ ಈ ವಿಸ್ತರಣಾ ಕಾರ್ಯಕ್ಕೆ ಬೆಂಬಲಿಗನಾಗಿದ್ದನು.[೧೧] ಇವನ ಜೊತೆಗೆ ಉಳಿದ ಸಣ್ಣ ಪುಟ್ಟ ರಾಜರ ಬೆಂಬಲವು ದೊರೆಯಿತು. ಈ ಎಲ್ಲಾ ಬೆಂಬಲದಿಂದ ಕ್ರಿ.ಶ. ೧೬೬೦ರಲ್ಲಿ ಶ್ರೀರಂಗಪಟ್ಟಣದ ಮೇಲೆ ಯುದ್ಧ ಸಾರಿದರು. ಈ ಯುದ್ಧದಲ್ಲಿ ದೇವರಾಜ ಒಡೆಯರು ಕೆಳದಿ ಸೈನ್ಯವನ್ನು ಸೋಲಿಸಿ ಯುದ್ಧರಂಗದಿಂದ ಹಿಮ್ಮೆಟ್ಟಿಸಿದರು. ಯುದ್ಧರಂಗದಲ್ಲಿಯೇ ಅಸ್ವಸ್ಥನಾಗಿದ್ದ ಶಿವಪ್ಪ ನಾಯಕ ಕ್ರಿ.ಶ. ೧೬೬೦ರಲ್ಲಿ ಮರಣ ಹೊಂದಲಾಗಿ

ವೆಂಕಟಪ್ಪನಾಯಕನು ಸಿಂಹಾಸನ ಏರಿದನು. ಇವನು ಸಹ ಮೈಸೂರಿನವರೊಡನೆ ಯುದ್ಧವನ್ನು ಮುಂದುವರೆಸಿದ. ಮತ್ತೊಂದೆಡೆ ಮೈಸೂರು ಸೈನ್ಯವು ೧೬೬೦ರ ಯುದ್ಧದ ಗೆಲುವಿನಿಂದ ಅರಕಲಗೂಡು ಪ್ರದೇಶಕ್ಕೆ ಪ್ರವೇಶಿಸಿತು. ಈ ಪ್ರದೇಶವು ಮೊದಲು ಮೈಸೂರು ಸಾಮ್ರಾಜ್ಯದ ಪ್ರದೇಶವಾಗಿದ್ದು, ಇದನ್ನು ಶಿವಪ್ಪ ನಾಯಕ ತನ್ನ ಹಿಡಿತಕ್ಕೆ ತೆಗೆದುಕೊಂಡಿದ್ದನು.[೧೨] ಅದನ್ನು ಪುನಃ ಪಡೆಯಲು ಮುಂದಾದಾಗ ಹೊಸದಾಗಿ ಅಧಿಕಾರಕ್ಕೆ ಬಂದಿದ್ದ ಕಿರಿಯ ವೆಂಕಟಪ್ಪನಾಯಕ ನವಚೈತನ್ಯದಿಂದ ಕೂಡಿದ್ದ ಒಂದು ಸೇನಾ ತುಕಡಿಯನ್ನು ಮೈಸೂರು ಸೈನ್ಯದ ವಿರುದ್ಧ ಕಳಿಸಿದ. ಈ ಎರಡು ಸೈನ್ಯಗಳ ನಡುವೆ ಕ್ರಿ.ಶ. ೧೬೬೧ರಲ್ಲಿ ಹೆಬ್ಬಾಲೆ ಮತ್ತು ಕಣಗಾಲು ಪ್ರದೇಶದಲ್ಲಿ ಯುದ್ಧ ನಡೆದು ಮೈಸೂರು ಸೈನ್ಯ ಸೋಲನ್ನು ಅನುಭವಿಸಿತು.[೧೩] ಈ ಯುದ್ಧದಲ್ಲಿಯ ಮೂರನೇ ವೆಂಕಟಾದ್ರಿ ನಾಯಕ ತಟಸ್ಥನಾಗಿದ್ದನು. ಇದಕ್ಕೆ ಕಾರಣವಿದ್ದಿತು. ಕೆಳದಿ ಮತ್ತು ಮೈಸೂರಿನ ನಡುವೆ ಯುದ್ಧ ಸಮಯದಲ್ಲಿ ೩ನೇ ವೆಂಕಟಾದ್ರಿ ತನಗೆ ಆಶ್ರಯ ನೀಡಿದ್ದ ಮೈಸೂರಿನೊಂದಿಗಾಗಲಿ,[೧೪] ಬೇಲೂರಿನಿಂದ ತನ್ನನ್ನು ನೆಲೆ ಕಳೆದುಕೊಳ್ಳುವಂತೆ ಮಾಡಿದ ಕೆಳದಿಯವರೊಂದಿಗಾಗಲಿ ಗುರುತಿಸಿಕೊಳ್ಳಲಿಲ್ಲ. ಒಂದು ವೇಳೆ ಮೈಸೂರಿನೊಂದಿಗೆ ತನ್ನನ್ನು ಗುರುತಿಸಿಕೊಂಡರೆ ಈ ಯುದ್ಧದಲ್ಲಿ ಮೈಸೂರು ಸೇನೆ ಸೋತರೆ ವಿನಾಕಾರಣ ಮತ್ತೆ ಕೆಳದಿಯವರ ಕೆಂಗಣ್ಣಿಗೆ ಗುರಿಯಾಗಿ ಪುನಃ ಎಲ್ಲಿ ನೆಲೆ ಕಳೆದುಕೊಳ್ಳುವೆನೂ ಎಂಬ ಭಯ. ಹಾಗೆಯೇ ಕೆಳದಿಯವರೊಂದಿಗೆ ಗುರುತಿಸಿ ಕೊಂಡಿದ್ದೇ ಆದರೆ ಮೈಸೂರಿನವರು ನೀಡಿದ್ದ ಆಶ್ರಯವನ್ನು ಎಲ್ಲಿ ಕಿತ್ತುಕೊಳ್ಳುವರೊ ಎಂಬ ಭಯ, ೩ನೇ ವೆಂಕಟಾದ್ರಿ ನಾಯಕ ತಟಸ್ಥವಾಗಿರಲು ಕಾರಣವಾಗಿದ್ದಿತು. ಹೀಗೆ ತಟಸ್ಥನಾಗಿದ್ದ ೩ನೇ ವೆಂಕಟಾದ್ರಿ ನಾಯಕನಿಗೆ ಬೇಲೂರಿನ ಸಿಂಹಾಸನ ಪುನಃ ಸಿಗುವ ಲಕ್ಷಣಗಳು ಗೋಚರಿಸ ತೊಡಗಿದವು. ಆದಿಲ್‌ಷಾಹಿಯ ಸೈನ್ಯ ಮಹಾರಾಷ್ಟ್ರದ ಪನ್ಹಾಲಾವನ್ನು ಆಕ್ರಮಿಸಿದಾಗ ಶ್ರೀರಂಗರಾಯನು ಜನವರಿ ೧೬೬೧ರಲ್ಲಿ ಪೆನಗೊಂಡೆಯನ್ನು ತನ್ನ ವಶಕ್ಕೆ ತೆಗೆದುಕೊಂಡು ಅಲ್ಲಿ ನೆಲೆಸಿದನು. ಅಲ್ಲಿ ಏಪ್ರಿಲ್‌ವರೆಗೆ ಇದ್ದು ಪುನಃ ಬೇಲೂರಿಗೆ ಬಂದು ೧೬೬೨ರ ಫೆಬ್ರವರಿಯಿಂದ ಪೆನಗೊಂಡೆಯಲ್ಲಿ ಆಳ್ವಿಕೆಯನ್ನು ಆರಂಭಿಸಿದನು. ಆದರೂ ಇವನ ಪ್ರಭಾವ ೧೬೬೪ರವರೆಗೂ ಇದ್ದಿತು. ಮೂರನೇ ಶ್ರೀರಂಗನು ಪೆನಗೊಂಡೆಗೆ ಹೋಗಿ ನೆಲೆಸಿದ ನಂತರ ಇಲ್ಲಿಯ ಆಡಳಿತವನ್ನು ೩ನೇ ವೆಂಕಟಾದ್ರಿ ನಾಯಕನಿಗೆ ವಹಿಸಿಕೊಟ್ಟಂತೆ ಕಾಣುತ್ತದೆ. ವೆಂಕಟಾದ್ರಿನಾಯಕನು ತನ್ನ ಆರಂಭದ ವರ್ಷಗಳಲ್ಲಿ ಹಾಕಿಸಿದ ಶಾಸನಗಳಲ್ಲಿ "ಬೇಲೂರಿನ ಕೃಷ್ಣಪ್ಪ ನಾಯಕರ ಕುಮಾರ ವೆಂಕಟಾದ್ರಿನಾಯಕರು" ಎಂದು ಬರೆಯಲಾಗಿದೆ.[೧೫] ಅಂದರೆ ಇವರು ಸ್ವತಂತ್ರರಾಗಿದ್ದು ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶದಲ್ಲಿ ದಾನ ನೀಡಿದರೆ ಯಾವುದೇ ಪ್ರಭುತ್ವದ ಅಧೀನತೆಗೆ ಒಳಪಡುತ್ತಿರಲಿಲ್ಲ. ಆದರೆ ಮೂರನೇ ಶ್ರೀರಂಗರಾಯರು ಬೇಲೂರು ಸಿಂಹಾಸನದಿಂದ ಪೆನಗೊಂಡೆಗೆ ತೆರಳಿದ ನಂತರ ಬೇಲೂರು ಸಿಂಹಾಸನ ಮೂರನೇ ವೆಂಕಟಾದ್ರಿ ನಾಯಕನಿಗೆ ದೊರಕಿದುದರ ಬಗ್ಗೆ ಅರಕಲಗೂಡಿನ ಒಂದು ಶಾಸನ ಸ್ಪಷ್ಟಪಡಿಸುತ್ತದೆ.[೧೬] ಇದರಲ್ಲಿ "ವಿಜಯನಗರದ ಶ್ರೀರಂಗರಾಯದೇವ ಮಹರಾಯರ ಕಾರ್ಯಕ್ಕೆ ಕರ್ತರಾದ ಕೃಷ್ಣಪ್ಪ ನಾಯಕರ ಮಗ ವೆಂಕಟಾದ್ರಿ ನಾಯಕರು" ಎಂದಿದೆ. ಈ ವೇಳೆಗೆ ಬೇಲೂರು ಮೂರನೇ ವೆಂಕಟಾದ್ರಿ ನಾಯಕನ ಹಿಡಿತದಲ್ಲಿ ಇದ್ದಿತು.

ಆದರೆ ಮೈಸೂರು ಮತ್ತು ಕೆಳದಿಯವರ ರಾಜ್ಯವಿಸ್ತರಣ ನೀತಿ ಮಾತ್ರ ನಿಲ್ಲಲಿಲ್ಲ. ಕೆಳದಿಯಲ್ಲಿ ವೆಂಕಟಪ್ಪನಾಯಕನ ಉತ್ತರಾಧಿಕಾರಿಯಾಗಿ ಭದ್ರಪ್ಪನಾಯಕನು ಅಧಿಕಾರಕ್ಕೆ ಬಂದನು. ಇವನು ಅರಕಲಗೂಡು ತಾಲ್ಲೂಕಿನಲ್ಲಿರುವ ಹೆಬ್ಬಾಲೆಯನ್ನು ಮೈಸೂರಿನವರಿಂದ ಬಿಡಿಸಲು ಯುದ್ಧ ಕೈಗೊಂಡನು. ಭದ್ರಪ್ಪ ನಾಯಕನು ಶಿವಲಿಂಗ ನಾಯಕ ನೊಂದಿಗೆ ಸೈನ್ಯ ಕಳುಹಿಸಿ ಮೈಸೂರನ್ನು ಆಕ್ರಮಿಸಲು ಕಳಿಸಿದಾಗ ಶಿವಲಿಂಗನಾಯಕನು ಬೇಲೂರಿಗೆ ಹೋಗಿ ಅಲ್ಲಿ ಶ್ರೀರಂಗರಾಯನಿಂದ ಮತ್ತಷ್ಟು ಸೈನ್ಯ ಪಡೆದು ವೆಂಕಟಪ್ಪನ ಕಾಲದಲ್ಲಿ ಮೈಸೂರಿನವರ ಆಕ್ರಮಣಕ್ಕೆ ಒಳಗಾಗಿದ್ದ ಹೆಬ್ಬಾಲೆಯನ್ನು ಆಕ್ರಮಿಸಿ ಮೈಸೂರು ಕಡೆಗೆ ಹೊರಟರು. ಆ ಹೊತ್ತಿಗೆ ಮೈಸೂರು ಸೈನ್ಯ ಕಣನೂರು ಕೋಟೆಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡಿತು.[೧೭] ಬಿದನೂರು ಸೈನ್ಯ ಆ ಸ್ಥಳಕ್ಕೆ ಬಂದು ಬಾರಿ ಶ್ರಮದಿಂದ ಆಕ್ರಮಿಸಿದರು. ಇಂತಹ ಕಷ್ಟಕಾಲದಲ್ಲಿ ದೇವರಾಜ ಒಡೆಯರು ಕಳಲೆಯ ದಿವಾನ್ ಕಾಂತಯ್ಯನೊಂದಿಗೆ ಹೆಚ್ಚು ಸೈನ್ಯ ಬಲವನ್ನು ಕಳುಹಿಸಿದರು. ಇವನು ಕ್ರಿ.ಶ. ೧೬೬೨ ಮಾರ್ಚ್‌ನಲ್ಲಿ ಕಣಗಾಲದಲ್ಲಿ ನೆಲೆನಿಂತು ಯುದ್ಧದ ಸ್ಥಿತಿಗತಿಯನ್ನು ಕಾಯುತ್ತ ಕುಳಿತಿದ್ದನು. ಸರಿಯಾದ ಸಮಯ ನೋಡಿ ದಿವಾನ್ ಕಾಂತಯ್ಯ ಯುದ್ಧರಂಗಕ್ಕೆ ಬಂದನು. ಇಲ್ಲಿ ನಡೆದ ಬಾರಿ ಯುದ್ಧದಲ್ಲಿ ಮೈಸೂರು ಸೈನ್ಯ ಸೋತು ಹಿಂದೆ ಸರಿಯಿತು. ಅದೇ ಸಮಯದಲ್ಲಿ ಶಿವಲಿಂಗನಾಯಕನು ಬಾಣ ತಗುಲಿ ಯುದ್ಧರಂಗದಲ್ಲೇ ಮಡಿದನು.[೧೮]

ಆದರೆ ಮೈಸೂರಿನವರು ಸುಮ್ಮನಿರದೆ ದಳವಾಯಿ ಕಾಂತಯ್ಯನ ಉತ್ತರಾಧಿಕಾರಿ ದಳವಾಯಿ ನಚಿನಾಥಯ್ಯನು ದೊಡ್ಡದೇವರಾಜ ಒಡೆಯರ ಆಜ್ಞಾನುಸಾರ ಬಿದನೂರಿನವ ರೊಡನೆ ಪುನಃ ಯುದ್ಧವನ್ನು ಮುಂದುವರಿಸಿ ಹಾಸನ,

ಸಕ್ಕರೆ ಪಟ್ಟಣ, ವಸ್ತಾರೆ, ವಸುದಾರೆ ಮತ್ತು ಹೊನ್ನಾವಳ್ಳಿಯನ್ನು ೧೬೬೩ರ ಡಿಸೆಂಬರ್‌ನಲ್ಲಿ ಗೆದ್ದು ಸೈನಿಕರನ್ನು ಸೆರೆಹಿಡಿದು 'ಗಂಗಾಧರ' ಎಂಬ ಆನೆಯನ್ನು ವಶಪಡಿಸಿಕೊಂಡರು.[೧೯] ಆದರೆ ಸುಮ್ಮನಿರದ ಭದ್ರಪ್ಪ ನಾಯಕನು ಮೈಸೂರಿನವರೊಂದಿಗೆ ವಾಮಮಾರ್ಗದಲ್ಲಿ ಯುದ್ಧವನ್ನು ಮುಂದುವರಿಸಿ ಬೇಲೂರಿನಲ್ಲಿದ್ದ ಮೂರನೇ ಶ್ರೀ ರಂಗರಾಯನನ್ನು ಯುದ್ಧಕ್ಕೆ ಕರೆತಂದನು. ಕ್ರಿ.ಶ. ೧೬೬೩ರಲ್ಲಿ ಭದ್ರಪ್ಪ ನಾಯಕನೊಂದಿಗೆ ಆದ ಯುದ್ಧವನ್ನು ಶ್ರೀ ಮನ್ಮಹಾರಾಜರವರ ವಂಶಾವಳಿಯಲ್ಲಿ ಶಿವಪ್ಪನಾಯಕನೊಂದಿಗೆ ಯುದ್ಧ ಮಾಡಿ, ಅವರಿಂದ ಕೆಲವು ಪ್ರದೇಶಗಳನ್ನು ಗೆದ್ದು ಖಂಡೆ ಹಣವನ್ನು ಗೊತ್ತು ಮಾಡಿದರು ಎಂದಿದೆ.[೨೦] ಆದರೆ ಶಿವಪ್ಪನಾಯಕ ೧೬೬೦ ರಲ್ಲಿಯೇ ಮರಣ ಹೊಂದಿದ್ದು ಇವರು ಖಂಡೆ ಹಣವನ್ನು ನಿಗದಿ ಪಡಿಸಿದ್ದು ಭದ್ರಪ್ಪನಾಯಕನಿಗೆ. ಈ ರೀತಿ ಅವಮಾನಕ್ಕೆ ಗುರಿಯಾದ ಭದ್ರಪ್ಪನಾಯಕ ಶ್ರೀರಂಗರಾಯರೊಂದಿಗೆ ಮತ್ತೆ ಮೈಸೂರಿನ ಮೇಲೆ ಯುದ್ಧಕ್ಕೆ ಮುಂದಾದನು. ಶ್ರೀರಂಗರಾಯನಿಗೆ ೧೬೬೩ರ ಯುದ್ಧವು ಭೀತಿಯನ್ನುಂಟು ಮಾಡಿದ್ದರೂ, ಬಿದನೂರಿನವರ ಮೇಲೆ ಇದ್ದ ನಂಬಿಕೆಯಿಂದ ಯುದ್ಧಕ್ಕೆ ತೆರಳಿದನು. ಈ ಯುದ್ಧದಿಂದ ಪ್ರಮುಖ ಕೋಟೆಗಳಾಗಿದ್ದ ಹಾಸನ ಮತ್ತು ಸಕ್ಕರೆಪಟ್ಟಣಗಳು ಶ್ರೀರಂಗರಾಯರ ಕೈತಪ್ಪಿದ್ದರಿಂದ ಅವನ ಸ್ಥಾನ ತುಂಬ ದುರ್ಬಲವಾಗಿತ್ತು. ಅಲ್ಲದೆ ತನ್ನ ಸಾಮ್ರಾಜ್ಯದ ವ್ಯಾಪ್ತಿಯು ಕಿರಿದಾಗಿದ್ದಿತು. ದೇವರಾಜ ಒಡೆಯರು ಭದ್ರಪ್ಪನೆದುರು ದೊರೆತ ವಿಜಯದಿಂದ ಉತ್ಸುಕರಾಗಿ ಬೇಲೂರಿನಲ್ಲಿದ್ದ ಶ್ರೀರಂಗನನ್ನು ಕರ್ನಾಟಕದ ಪ್ರದೇಶದಿಂದಲೇ ಹೊರದೂಡಬೇಕೆಂದು ಸಂಕಲ್ಪಿಸಿದನು. ಕಾರಣ ಈ ಪ್ರದೇಶಗಳಿಂದ ಬರುತ್ತಿದ್ದ ಆದಾಯವೆಲ್ಲವು ಶ್ರೀರಂಗರಾಯನಿಗೆ ಸೇರುತ್ತಿದ್ದುದು ದೊಡ್ಡ ದೇವರಾಜಒಡೆಯರಲ್ಲಿ ಕಣ್ಣುರಿಯನ್ನುಂಟುಮಾಡಿತ್ತು. ಇದರಿಂದಾಗಿ ಆದಷ್ಟು ಬೇಗ ಶ್ರೀರಂಗರಾಯನನ್ನು ಬೇಲೂರಿನಿಂದ ಹೊರದೂಡದೇ ಹೋದರೆ ಉಳಿದ ಸಣ್ಣ ಪುಟ್ಟ ರಾಜರನ್ನು ಹಿಡಿತಕ್ಕೆ ತರಲು ಸಾಧ್ಯವಿಲ್ಲವೆಂದು ೧೬೬೩ರಲ್ಲಿ ಶ್ರೀರಂಗರಾಯನೊಂದಿಗೆ ಯುದ್ಧ ಮಾಡಿ ಅವನನ್ನು ಸೋಲಿಸಿ ಅವನ ಸಹಾಯಕ್ಕೆ ಬಂದಿದ್ದ ಭದ್ರಪ್ಪನಾಯಕನನ್ನು ಸೋಲಿಸಿದರು.[೨೧]

ಈ ರೀತಿಯ ಯುದ್ಧ ಕಾರ್ಯಾಚರಣೆಯಿಂದ ಮೂರನೇ ವೆಂಕಟಾದ್ರಿನಾಯಕನಿಗೆ ಬೇಲೂರು ಪುನಃ ತನ್ನ ಕೈಸೇರುವುದು ಎಂಬ ಕನಸನ್ನು ಕಾಣಲು ಆರಂಭಿಸಿದನು. ಬಿದನೂರಿನಲ್ಲಿ ಭದ್ರಪ್ಪನಾಯಕನು ಮರಣ ಹೊಂದಿ ಅವನ ಉತ್ತರಾಧಿಕಾರಿಯಾಗಿ ಅಧಿಕಾರಕ್ಕೆ ಬಂದ ಒಂದನೇ ಸೋಮಶೇಖರನಾಯಕನು ಮೈಸೂರಿನವರೊಂದಿಗೆ ಮೊದಮೊದಲು ಹೋರಾಟ ನಡೆಸಿ ಅವರ ಗರ್ವವನ್ನು ಅಡಗಿಸಿ ನಂತರ ಚಿಕ್ಕೋಡು, ಬೆಳಗೋಡು, ಕಣತ್ತೂರು, ಅಬ್ಬಿಣ ಮತ್ತು ಬೇಲೂರನ್ನು ವಶಪಡಿಸಿಕೊಂಡನು.[೨೨] ಆದರೆ ಇದು ಹೆಚ್ಚು ದಿನ ಉಳಿಯಲಿಲ್ಲ ಪ್ರಬಲರಾಗಿದ್ದ ದೊಡ್ಡ ದೇವರಾಜ ಒಡೆಯರು ಅವುಗಳನ್ನು ಮತ್ತೆ ತಮ್ಮ ವಶಕ್ಕೆ ತೆಗೆದುಕೊಂಡರು. ಈ ವೇಳೆಗೆ ಬಿದನೂರಿನಲ್ಲಿ ಆಂತರಿಕ ಭಿನ್ನಾಭಿಪ್ರಾಯಗಳು ತಲೆದೋರಲಾರಂಭಿಸಿದ್ದು, ಸೋಮಶೇಖರ ನಾಯಕನ ಯುದ್ಧಾಸಕ್ತಿಯು ಕಡಿಮೆಯಾಗುತ್ತಾ ಹೋಯಿತು. ಇದರಿಂದಾಗಿ ಮೈಸೂರಿನವರೊಂದಿಗೆ ಶಾಂತ ರೀತಿಯಲ್ಲಿಯಲ್ಲಿರಲು ತನ್ನ ರಾಯಬಾರಿ ಪುರುಷೋತ್ತಮಯ್ಯನೊಂದಿಗೆ ಆನೆಗಳು, ಕುದುರೆಗಳು, ನಗನಾಣ್ಯಗಳನ್ನು ಕೊಟ್ಟು ಕಳುಹಿಸಿದನು.[೨೩] ಇದರಿಂದ ೩ನೇ ಶ್ರೀರಂಗರಾಯನಿಗೆ ಬಿದನೂರಿನ ಬೆಂಬಲ ಕಡಿಮೆಯಾಯಿತು. ಇದು ವೆಂಕಟಾದ್ರಿ ನಾಯಕನಿಗೆ ಬಯಸದೇ ಬಂದ ಭಾಗ್ಯವಾಗಿತ್ತು. ಇಷ್ಟೆಲ್ಲ ಯುದ್ಧಗಳು ನಡೆದರೂ ವೆಂಕಟಾದ್ರಿನಾಯಕ ಮಾತ್ರ ಯಾವುದೇ ಬಣದ ಜೊತೆಯಲ್ಲಿ ಗುರುತಿಸಿಕೊಳ್ಳದೇ, ತನ್ನ ಪಾಡಿಗೆ ತಾನಿದ್ದು ಹೇಗಿದ್ದರು ಸ್ವತಂತ್ರನಾಗಲು ಸಾಧ್ಯವಿಲ್ಲ. ಕೊನೆಯ ಪಕ್ಷ ಬೇಲೂರಿನ ಸಿಂಹಾಸನವಾದರು ದೊರಕೀತೆ ಎಂದು ಆಲೋಚಿಸಿ ಕಾಯುತ್ತ ಕುಳಿತನು. ಕ್ರಿ.ಶ. ೧೬೬೫ರಲ್ಲಿ ಅರಕಲಗೂಡಿನ ಪೆಮ್ಮನಹಳ್ಳಿಯಲ್ಲಿನ ಒಂದು ಶಾಸನ ಬೇಲೂರು ವೆಂಕಟಾದ್ರಿನಾಯಕರು ಎಂದಿದೆ.[೨೪] ಇದರಲ್ಲಿ ವೆಂಕಟಾದ್ರಿ ನಾಯಕನು ಯಾವ ಚಕ್ರವರ್ತಿಯ ಹೆಸರನ್ನು ಹೇಳದೆ ಸ್ವತಂತ್ರವಾಗಿ ತನ್ನ ಪ್ರದೇಶದ ಒಳಗೆ ದಾನ ನೀಡಿದ್ದಾನೆ. ಈ ವೇಳೆಗೆ ೩ನೇ ಶ್ರೀರಂಗರು ಬೇಲೂರನಿಂದ ತನ್ನ ಮೂಲ ನೆಲೆಗೆ ಹಿಂದಿರುಗಿದ್ದನ್ನು ಈ ಶಾಸನ ತಿಳಿಸುತ್ತದೆ. ಹೀಗೆ ಕೆಳದಿಯವರ ಮತ್ತು ಶ್ರೀರಂಗರಾಯನ ಉಪಟಳವಿಲ್ಲದೆ ಮೈಸೂರಿನವರ ಅಧೀನದಲ್ಲಿ ೩ನೇ ವೆಂಕಟಾದ್ರಿ ನಾಯಕನು ಪುನಃ ತನ್ನ ಮೊದಲಿನ ಪ್ರದೇಶಗಳ ಆಳ್ವಿಕೆಯನ್ನು ನೋಡಿಕೊಂಡು ಕಾಲಕಾಲಕ್ಕೆ ಮೈಸೂರಿನವರಿಗೆ ತೆರಿಗೆ, ಸೈನ್ಯ ಮುಂತಾದ ಸವಲತ್ತುಗಳನ್ನು ಒದಗಿಸುತ್ತಾ ೧೬೭೦ ರವರೆಗೆ ಆಳ್ವಿಕೆ ಮಾಡಿದನು. ಸಕಲೇಶಪುರ ತಾಲ್ಲೂಕಿನಲ್ಲಿ ೧೬೭೦ರಲ್ಲಿ ವೆಂಕಟಾದ್ರಿ ನಾಯಕನು ಹಾಕಿಸಿದ ಕೊನೆಯ ಶಾಸನದಿಂದ ಇದು ತಿಳಿದುಬರುತ್ತದೆ.[೨೫]

ಹೀಗೆ ಮೊದಲಿನಿಂದಲೂ ಐಗೂರು ಬೇಲೂರು ಅರಸರ ಆಳ್ವಿಕೆಗೆ ಒಳಪಟ್ಟಿದ್ದರೂ, ಮೊದಲು ಈ ಐಗೂರನ್ನು ಕೇಂದ್ರವನ್ನಾಗಿ ಆಳ್ವಿಕೆ ಮಾಡಿದವನು ಮೂರನೇ ವೆಂಕಟಾದ್ರಿನಾಯಕನೆ. ಶ್ರೀರಂಗರಾಯನು ಪೆನಗೊಂಡೆಗೆ ಕ್ರಿ.ಶ. ೧೬೬೬ರ ವೇಳೆಗೆ ಹೋದರೂ ಈ ಅರಸನು ಬೇಲೂರಿನಲ್ಲಿ ಇದ್ದ ತಮ್ಮ ಕೇಂದ್ರವನ್ನು ಬಿಟ್ಟು

ಐಗೂರಿನಿಂದಲೇ ಆಳ್ವಿಕೆಯನ್ನು ಆರಂಭಿಸಿದರು. ಆದರೂ ಮುಂದಿನ ಅರಸರು ತಮ್ಮ ಪೂರ್ವಜರ ಹೆಸರು ಹೇಳುವಾಗ ಬೇಲೂರನ್ನು ತಮ್ಮ ಹೆಸರಿನ ಮೊದಲು ಸೇರಿಸಿ ಹೇಳುತ್ತಿದ್ದರು. ನಂತರ ಕಾಲದಲ್ಲಿ ಬೇಲೂರು ಮೈಸೂರಿನವರ ನೇರ ಹತೋಟಿಗೆ ಒಳಗಾಯಿತು.

## ಆಧಾರಸೂಚಿ


೧. **ಕರ್ನಾಟಕ ರಾಜ್ಯ ಗ್ಯಾಜಟಿಯರ್, ಕೊಡಗು ಜಿಲ್ಲೆ, (ಸಂ).** ಸೂರ್ಯನಾಥಕಾಮತ್., (ಬೆಂಗಳೂರು, ೧೯೯೨) ಪುಟ ೮೦.
೨. ಬಿ. ಮುದ್ದಾಚಾರಿ., **ಮೈಸೂರು ಮರಾಠ ಬಾಂಧವ್ಯ,** (ಮೈಸೂರು, ೧೯೭೫) ಪುಟ ೭೧.
೩. **ಕೆಳದಿ ನೃಪವಿಜಯ,** (ಸಂ). ಆರ್. ಶಾಮಶಾಸ್ತ್ರಿ (ಮೈಸೂರು, ೧೯೭೩) ಪುಟ ೯೬.
೪. ಎಪಿಗ್ರಾಫಿಯ ಕರ್ನಾಟಿಕ ಸಂ. ೮., ಆಲೂರು, ೧ (ಇನ್ನು ಮುಂದೆ ಎ.ಕ. ಎಂದು ಓದುವುದು)
೫. ಆರ್. ಶಾಮಶಾಸ್ತ್ರಿ (ಸಂ), ಪೂರ್ವೋಕ್ತ, ಪುಟ ೧೦೦.
೬ ಎ.ಕ. ಸಂ. ೮., ಅರಕಲಗೂಡು, ೧೪೮.
೭. ಎ.ಕ. ಸಂ. ೯., ಸಕಲೇಶಪುರ, ೨೭ ಮತ್ತು ೬೩.
೮. ಎ.ಕ. ಸಂ. ೧೧., ಮೂಡಿಗೆರೆ, ೧೦೩.
೯. ಕೆ.ಎನ್. ಚಿಟ್ನಿಸ್., ಕೆಳದಿ ಪಾಲಿಟಿ, (ಧಾರವಾಡ, ೧೯೭೪) ಪುಟ ೧೮–೧೯.
೧೦. ಎಚ್. ತಿಪ್ಪೇರುದ್ರಸ್ವಾಮಿ., **ಶಿಸ್ತುಗಾರ ಶಿವಪ್ಪನಾಯಕ,** (ಮೈಸೂರು, ೧೯೬೬), ಪುಟ ೮೦.
೧೧. **ಮೈಸೂರು ಗ್ಯಾಜಿಟಿಯರ್ ಸಂಪುಟ ೨, ಭಾಗ–೪,** (ಸಂ). ಸಿ. ಹಯವದನರಾವ್., (ದೆಹಲಿ, ೧೯೮೪), ಪುಟ ೨೪೪೧.
೧೨. ಕೆ.ಎನ್. ಚಿಟ್ನಿಸ್., ಪೂರ್ವೋಕ್ತಿ, ಪುಟ ೧೯.
೧೩. ಆರ್. ಶಾಮಶಾಸ್ತ್ರಿ., (ಸಂ), ಪೂರ್ವೋಕ್ತ, ಪುಟ ೧೦೫.
೧೪. ಬಿ. ರಾಮಕೃಷ್ಣರಾವ್., **ಶ್ರೀಮನ್ಮಹಾರಾಜರವರ ವಂಶಾವಳಿ,** (ಮೈಸೂರು, ೧೯೧೬), ಪುಟ ೧೦೩.
೧೫. ಎ.ಕ. ಸಂಪುಟ ೯., ಸಕಲೇಶಪುರ, ೨೭ ; ಎ.ಕ. ಸಂಪುಟ ೧೧., ಮೂಡಿಗೆರೆ, ೧೦೩.
೧೬. ಎ.ಕ. ಸಂಪುಟ ೮., ಅರಕಲಗೂಡು, ೮.
೧೭. ಆರ್. ಶಾಮಶಾಸ್ತ್ರಿ., (ಸಂ), ಪೂರ್ವೋಕ್ತ, ಪುಟ ೧೦೫.
೧೮. ಅದೇ., ಪುಟ ೧೦೬.
೧೯. ಕೆ.ಡಿ. ಸ್ವಾಮಿನಾಥನ್., **ದಿ ನಾಯಕಾಸ್ ಆಫ್ ಇಕ್ಕೇರಿ,** (ಮದ್ರಾಸ್, ೧೯೫೭), ಪುಟ ೧೦೬.
೨೦. ಬಿ. ರಾಮಕೃಷ್ಣರಾವ್., ಪೂರ್ವೋಕ್ತ, ಪುಟ ೯೭.
೨೧. ಎ. ಸತ್ಯನಾರಾಯಣ., ಹಿಸ್ಟರಿ ಆಫ್ ದಿ ಒಡೆಯರ್ಸ್ ಆಫ್ ಮೈಸೂರು, (ಮೈಸೂರು, ೧೯೯೬), ಪುಟ ೧೪೩.
೨೨. **ಲಿಂಗಣ್ಣ ಕವಿಯ ಕೆಳದಿ ನೃಪವಿಜಯ,** (ಸಂ). ಕೆಳದಿ ಗುಂಡಾಜೋಯಿಸ್., (ಬೆಂಗಳೂರು, ೧೯೯೯), ಪುಟ ೧೫೪.
೨೩. ಕೆ.ಡಿ. ಸ್ವಾಮಿನಾಥನ್., ಪೂರ್ವೋಕ್ತ, ಪುಟ ೧೧೨.
೨೪. ಎ.ಕ. ಸಂಪುಟ ೮., ಅರಕಲಗೂಡು, ೧೪೮.
೨೫. ಎ.ಕ. ಸಂಪುಟ ೯., ಸಕಲೇಶಪುರ, ೬೩.

ಡಾ. ಚೆನ್ನಕ್ಕ ಪಾವಟೆ*

# ಸಿರಸಂಗಿಯ ಹಬ್ಬೆಯನಾಯಕ

ಸಿರಸಂಗಿ ಹೆಸರು ಮೂಲತಃ ಋಶ್ಯಶೃಂಗಿ. ಪ್ರಾಚೀನ ಕಾಲದಲ್ಲಿ ರಿಷಿಶೃಂಗಿಪುರ, ರಿಷ್ಯಶೃಂಗಪುರ, ಹಿರಿಸಿಂಗಿ ಈಗ ಅದೇ ಸಿರಸಂಗಿ. ಇಂಥ ವಿಭಿನ್ನ ನಾಮಧೇಯ ಪಡೆದ ಸಿರಸಂಗಿ ಪ್ರಸಿದ್ಧವಾದ ಐತಿಹಾಸಿಕ ಸಂಶೋಧನಾತ್ಮಕ ಸ್ಥಳ. ಚಿನ್ನದ ಪೂವೆನಿಪ ಬೆಳುವಲ–ಅದರಲ್ಲಿ ಶ್ರೇಷ್ಠವಾದ ಕಂಪಣ, ಕೊಳನೂರು ಮೂವತ್ತರ ಲೋಕಸ್ತುತವೆನಿಪ ಬಾಡ ರಿಶ್ಯಶೃಂಗಪುರ.

ರಿಶ್ಯಶ್ರಿಂಗಿ ಎಂದರೆ ತಲೆಯ ಮೇಲೆ ಎರಡು ಕೋಡುಳ್ಳ ಯತೀಶ್ವರನ ಹೆಸರು. ವಿಭಾಂಡಮುನಿ ಆತನಿಂದ ಈ ಊರಿಗೆ ರಿಶ್ಯಶ್ರಿಂಗಿ ಎಂಬ ಹೆಸರು ಬಂದಿತೆಂದು ಅಲ್ಲಿಯ ಶಾಸನ ತಿಳಿಸಿದೆ. 'ರಾಮ ಲಕ್ಷ್ಮಣರು ರಾವಣ ಮೊದಲಾಗಿ ಸಮಸ್ತದಾನವರಂ ಸಂಹರಿಸಿ ಮಗುಳ್ದದಯೋಧ್ಯೆಗೆ ಬರುತ್ತಂ ಕಿಷ್ಕಿಂದೆ ಪರ್ವತೋಪಮುಖಣ್ಣದ ತನ್ಮುನೀಂದ್ರಾಶ್ರಮಕ್ಕೆ ಬಂದಲ್ಲಿ, ನಿಜ ನಾಮಾಂಕಿತ ರಾಮೇಶ್ವರ, ಲಕ್ಷಣೇಶ್ವರ, ಹನ್ಮಂತೇಶ್ವರಗಳ ಪ್ರತಿಷ್ಠಾಪಿಸಿದರದವರಿಂತಗಣ್ಯ ಪುಣ್ಯಾಕರಮುವನುಧ್ರಾ ಸ್ತುತಿಯೊಳಿದು ಮನುಶಾಂತಕ್ಷೇತ್ರಂ ರಿಶಿಪಳ್ಳಿಯೆನಿಸಿತಿಗಳು ವೀರಕ್ಷೇತ್ರವೆನಿಸಿತ್ತು. ಶತ್ರುಕುಳ ತ್ರಾಸಿಗೆ ಹಬ್ಬಣಂಗೆ ನೆಲೆಯಾದುದರಿಂ', ಎಂದು ಶಿರಸಂಗಿಯ ಪ್ರಾಚೀನ ಇತಿಹಾಸದ ಮೌಲ್ಯವನ್ನು ಅಲ್ಲಿಯ ಕಾಳಮ್ಮನ ಗುಡಿ ಎದುರಿನ ಭವ್ಯವಾದ ಶತಪದ್ಯಗಳಿಂದ ಕೂಡಿದ ಚಿಕ್ಕ ಚಂಪೂ ಕಾವ್ಯದಂತಿರುವ ಶಾಸನ ವಿವರಿಸಿದೆ.

ಸಿರಸಂಗಿಯ ಪರಿಸರ ಅಷ್ಟೇ ಪೂಜ್ಯನೀಯ ಪ್ರದೇಶ. 'ಪಾಪಿಗಳೇ ಪುಗಲ್ವೇಡಿ ಕೋಪಿಗಳೇ ಪುಗಲ್ವೇಡಿ' ಎಂದು ಸಾರುತ್ತಿರುವ, ಶುಕ ಕೋಗಿಲೆಗಳ ನೀನಾದದಿಂದ, ಪ್ರಕೃತಿಯ ಸಲಿಲ ಝುರಿಯಿಂದ, ರಮ್ಯತೆಯನ್ನು ಅಧಿಕಗೊಳಿಸಿ ಕೊಂಡಿರುವ ಸೊಗಲ ಸೋಮೇಶ್ವರ, ಏಳುಕೊಳ್ಳದ ಎಲ್ಲಮ್ಮ, ಹೂಲಿಯ ಪ್ರಾಚೀನ ಪಂಚವಣ್ಣಿಗೆ ಮಠ, ಇದರ ಮಧ್ಯದಲ್ಲಿ ಮುನವಳ್ಳಿಯ ಪಂಚಲಿಂಗೇಶ್ವರ ಮಠ, ಸಿರಸಂಗಿಯ ಕಾಳಿಕಾದೇವಿಯ ದೇವಸ್ಥಾನಗಳಿವೆ.

ಇಂಥ ಅಪೂರ್ವ ವರ್ಣನೆಯಲ್ಲಿ ಬರುವ ಕುಂತಳ ನಾಡಿನ ಒಪ್ಪುವ ಹೂ ಬೆಳವಲ. ಅದರಲ್ಲಿ ಶ್ರೇಷ್ಠವಾದ ಮುಕುರದಂತಿರುವ ಕೊಳನೂರು ಮೂವತ್ತಕ್ಕೆ ಮುಖ್ಯ ಪಟ್ಟಣ ವೆನಿಸಿದುದು ಸಿರಸಂಗಿ ಗ್ರಾಮ. ಅಂದು 'ಕಾಂಚಿ ದೇಶದ ಚಲ್ವಿಂದ ಮೇಲೆನಿಪುದು' ಎಂಬಲ್ಲಿ ಪ್ರಾಚೀನ ಸಿರಸಂಗಿಯ ಬಗೆಗಿದ್ದ ಸೃಷ್ಟಿ, ಸೌಂದರ್ಯ ಅವರ್ಣನೀಯ ದೃಶ್ಯ ಮನಂಬುಗು ವಂತಿದೆ. ಅಷ್ಟೇ ಅಲ್ಲ ಅಂದು ಪ್ರಕೃತಿ ಸೌಂದರ್ಯ, ಜಗನ್ಮಾತೆ ಕಾಳಿಕಾದೇವಿಯ ಅಭಯ ಹಸ್ತದಲ್ಲಿ ನೆಲೆನಿಂತಿರುವ ಸಿರಸಂಗಿಯ ಸೌಂದರ್ಯ ಮನಬಿಚ್ಚಿ ತನ್ನ ಶೋಭೆಯನ್ನು ಬಿತ್ತರಗೊಂಡಿದೆ.

ಹಬ್ಬೆಯನಾಯಕನ ಹೆಂಡತಿ ಹಿರಿಯ ನಾಯಕಿತಿ ಮಲ್ಲವ್ವೆ. ಸಿರಸಂಗಿಗೆ ಐಯ್ಯಾವಳೆ ಐನೂರ್ವರರು ವರ್ತಕ ಸಂಘದವರನ್ನು ಕರೆಸಿಕೊಂಡು ಅವರಿಂದ ದಾನ ಕೊಡಿಸಿದ ಮಹಾನುಭಾವನೀತ. ವ್ಯಾಪಾರಿ ಕುಲದ ಹಬ್ಬೆಯನಾಯಕ ಹಬ್ಬೇಶ್ವರ ದೇವರನ್ನು ಪ್ರತಿಷ್ಠಾಪಿಸುವಲ್ಲಿ ತನ್ನ ಸಮಸ್ತ ಐಯ್ಯಾವಳೆ ಐನೂರ್ವರು ಸೆಟ್ಟಿ, ಸೆಟ್ಟಿಗುತ್ತ ಮುಮ್ಮರಿದಂಡ, ಪಟ್ಟಣದ ಸೆಟ್ಟಿಗುತ್ತರು, ಇವರೆಲ್ಲರು ಸೇರಿ ಹಬ್ಬೇಶ್ವರ ದೇಗುಲಕ್ಕೆ ದಾನದತ್ತಿ ಕೊಟ್ಟಿರುವರು.

ಒಂದು ದಿನ ಹೆಂಡತಿ ಮಕ್ಕಳೊಂದಿಗೆ ಸುಖವಾಗಿ ವಿನೋದದಿಂದಿರುವಾಗ 'ಸಂಪತ್ತಿನಲ್ಲಿ ಪುಣ್ಯ ಸಂಪತ್ತು ಮೇಲೆಂದು' ಬಗೆದು ಹಬ್ಬೆಯನಾಯಕ ಅಸಮರ್ಥರ ಅಧಿಕಾರವನ್ನು ತ್ಯಜಿಸಿದ. ವೀರಲಕ್ಷ್ಮೀ ಸಮರ್ಥ ವ್ಯಕ್ತಿಯನ್ನು ಹುಡುಕಿಕೊಂಡು ತೆರಳುವಂತೆ, ತಾನು ಅಸಹಾಯ ಶೂರನಾಗಿದ್ದು ಸುಭಾಷಿತ ನುಡಿಗಳು ಆತನ ಮನದಾಳವನ್ನು ಎಚ್ಚರಿಸಿವೆ. ಸಿರಸಂಗಿಯ ಶಾಸನ ಈ ಸಂದರ್ಭವನ್ನು ತುಂಬ ಚೆನ್ನಾಗಿ ಸೂಚಿಸಿದೆ.

ಹಬ್ಬೆಯನಾಯಕ ಸುಭಾಷಿತಗಳನ್ನು ಮನದಂದು ಈ ರೀತಿ ತೀರ್ಮಾನ ಮಾಡುತ್ತಾನೆ.

"ಸಂಪತ್ತುಗಳೆಲ್ಲೆಲ್ಲ ಪುಣ್ಯ ಸಂಪತ್ತೆ ದೊಡ್ಡದು.

ಈಶ್ವರ ಪ್ರತಿಷ್ಠೆಯ ಮಾಡಿದ ನಂತರ ಎಲ್ಲ ಪ್ರತಿಷ್ಠೆಗಳು ಬರುತ್ತವೆ.

ಯಾರು ಪ್ರತಿಮೆಗಳನ್ನು ಪ್ರತಿಷ್ಠಾಪಿಸುತ್ತಾರೋ ಅವರ ಹೆಸರೇ ಆ ಪ್ರತಿಮೆಗೆ ಬರುತ್ತದೆ."

* ಪ್ರಾಧ್ಯಾಪಕರು, ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಎಂದು ಬಗೆದು ಧರ್ಮ ಕಾರ್ಯಕ್ಕೆ ಸಿದ್ಧತೆ ಮಾಡಿಕೊಂಡಿರುವನು. ಆತನ ದತ್ತಿ 'ನಿಜ ಸಂಪತ್ತಿ ದತ್ತಿ' ಎನಿಸಿದಂತೆ ದೈವಸೇವೆಗೆ ತನ್ನ ಬದುಕನ್ನು ಮುಡುಪಾಗಿಟ್ಟುಕೊಂಡಿರುವನು.

ಹಬ್ಬೆಯನಾಯಕ ಧರ್ಮಚಿತ್ತನಾಗಿ ಶಕವರ್ಷ ೧೧೧೦ಲ ನೆಯ ವಿಶ್ವಾವಸು ಸಂವತ್ಸರದ ಪುಷ್ಯ ಮಾಸದ ಪೌರ್ಣಮಾಸೆ ಸೋಮವಾರ ಅಂದರೆ ಕ್ರಿ.ಶಕ ೧೧೮೬ರ ಪುಣ್ಯ ದಿನದಲ್ಲಿ ಕೈಕೊಂಡ ಅಪೂರ್ವ ದಾನ ಸಿರಸಂಗಿಯ ಇತಿಹಾಸವನ್ನು ಬದಲಿಸಿದೆ. ಆತ ಕೈಕೊಂಡ ದಾನ ಆತನ ಬಳಿವಿಡಿದು ಬಂದ ಎಲ್ಲರೂ ದಾನ ಕೈಕೊಳ್ಳುವಂತೆ ಪ್ರೇರೆಪಿಸಿದೆ. ಸಿರಸಂಗಿಯಲ್ಲಿ ಹಬ್ಬೆಯನಾಯಕ ಕೈಕೊಂಡ ಅಪರಿಮಿತ ದೈವ ಭಕ್ತಿಯನ್ನು,

> **ಸ್ತಿರವೆನಿಪ್ಪ ರಿಶ್ಯಶೃಂಗೀ**
> **ಪುರದೋಳು ಹಬ್ಬೇಶ್ವರ ಪ್ರತಿಷ್ಠೆಯ ಮಂ**
> **ದಿರಮಂ ಕಲ್ವೆಸನೊಪ್ಪು**
> **ತ್ತಿರೆ ಹಬ್ಬೆಯ ನಾಯಕಂ ವಿನಿರ್ಮಿಸಿದಂ !!**

ಹಬ್ಬೇಶ್ವರ ಹಾಗೂ ಪ್ರಸನ್ನ ಭೈರವೇಶ್ವರದೇವರನ್ನು ಪ್ರತಿಷ್ಠಾಪಿಸಿದದನ್ನು,

> **ಶ್ರೀಮತು ಪ್ರಸನ್ನ ಬೈರವ**
> **ಧಾಮಮನಾ ಭೈರವ ಪ್ರತಿಷ್ಠೆಯುಮಂ ಪ್ರೋ**
> **ಧಾಮಂ ಹಬ್ಬೆಯ ನಾಯಕಂ ನೀ ಮಹಿ**
> **ಪೊಗಳುತ್ತಿರಲು ವಿನಿರ್ಮಿಸಿ ನೆಗಳ್ದಂ !!**

ಎಂದು ಸಾರಿದೆ. ಹಬ್ಬೆಶ್ವರ ಹಾಗೂ ಪ್ರಸನ್ನ ಭೈರವೇಶ್ವರ ದೇವಾಲಯಗಳನ್ನು ಕಲ್ವೆಸದಿಂದ ಪ್ರತಿಷ್ಠಿಸಿ ದೇವರ ಅಂಗ ರಂಗ ಭೋಗಕ್ಕೆ ಜೀರ್ಣೋದ್ಧಾರಕ್ಕೆ, ಅಲ್ಲಿಯ ಆಚಾರ್ಯ ವಾಮಶಕ್ತಿದೇವರ ಕಾಲಂ ತೊಳೆದು ಧಾರಾಪೂರ್ವಕ ದತ್ತಿ ಕೊಟ್ಟಿರುವರು. ಹಬ್ಬೆಯನಾಯಕ ಹಾಗೂ ಮೊದಲಿನ ಸಂಬಂಧಿಕರಾದ ಆರು ಗೌಂಡುಗಳ ಮನೆತನದ ಕೆಲ ಮಹನೀಯರು ಮೂಲಿಗ ಮುಖ್ಯವಾಗಿ ಪಾದಪೂಜೆಯಿಂ ಕೊಟ್ಟು ಎಂಟುಹಿಟ್ಟು ಪಂಚಮಠ ಸ್ಥಾನಗಳ ಸನ್ನಿಧಿಯಲ್ಲಿ ನಾಲ್ಕು ಮತ್ತರು ಎರೆಭೂಮಿಯನ್ನು ಬಿಟ್ಟಿರುವರು.

ಊರಿನ ಹಿರಿಯರೊಬ್ಬರು ದೇವಕಾರ್ಯ ಮಾಡಿದರೆ ಆತನ ಬೆಂಬಳಿವಿಡಿದು ಎಲ್ಲರೂ ದಾನ ಮಾಡುವುದು ಕನ್ನಡ ನಾಡಿನ ರೂಢಿ. ಸಿರಸಂಗಿ ಗ್ರಾಮದ ಪ್ರಮುಖರು ದೇವಸ್ಥಾನ ಕಟ್ಟಿಸಿ, ಜೀರ್ಣೋದ್ಧಾರ ಕೈಕೊಂಡು ಧರ್ಮಕಾರ್ಯ ಸಲ್ಲಿಸುವ ಕ್ರಮವನ್ನು ಮನಗಂಡ ಅಂದಿನ ವ್ಯಾಪಾರಿವರ್ಗ, 'ಅಯ್ಯಾವಳೆ ಐನುರ್ವರು' ಸ್ವಾಮಿಗಳ ಮನಸ್ಸಿನ ಮೇಲೆ ಪರಿಣಾಮ ಬೀರದಿರಲ್ಲಿಲ್ಲ. ಅಂದು ವರ್ತಕರಾದವರು ಮದುವೆ ದತ್ತಕ ಪ್ರಸಂಗ, ಸಾಲ ಬಡ್ಡಿ, ದೇವರಿಗೆ ಮುಡಿಪು ಮುಂತಾದ ಸಂದರ್ಭಗಳಲ್ಲಿ ಭಾಗವಹಿಸಿ, ತಮ್ಮ ಕೈಲಾದ ಮಟ್ಟಿಗೆ ದಾನ ದತ್ತಿ ಸಲ್ಲಿಸುವ ಆಶಯ ಹೊಂದಿದ್ದರು.

ಸಿರಸಂಗಿಯಲ್ಲಿ ಐಯಾವೊಳೆ ಐನೂರ್ವರು ಸ್ವಾಮಿಗಳ್ ಶ್ರೀಮತು ಸಮಯ ಚಕ್ರವರ್ತಿ ಜಯದೇವಯ್ಯಸೆಟ್ಟಿಯರು, ಸೋವಿಸೆಟ್ಟಿ, ಮುಖ್ಯ ಎರಡರುನೂರರೆಂಟು ಪಟ್ಟಣದ ಸೆಟ್ಟಿಗುತ್ತರು, ಸ್ಥಳದ ಸಮಸ್ತ ಮುಮ್ಮರಿದಂಡಗಳು ಕೂಡಿ, ಮೂರು ಸಾಸಿರದ ನಾಲ್ಕು ಪಟ್ಟಣದ ಸೆಟ್ಟಿಗುತ್ತರು ಉಭಯ ನಾನಾ ದೇಸಿಗಳುಂ, ಬಿರುದರಂ, ಬೀರವಣಿಗರುಂ, ಗವರೆಗಳು, ಗಾತ್ರಿಗರು, ಐಯ್ವತ್ತೊಕ್ಕಲು, ಸಮಸ್ತ ನಖರಂಗಳು ಸಿರಸಂಗಿಯಲ್ಲಿ ಶ್ರೀಮತು ಹಬ್ಬೇಶ್ವರ ದೇವಾಲಯತನದೊಳ ಅಶೇಷಂ ಬಯ್ಯಸಣಿಗೆಯಾಗಿರ್ದು ಹಬ್ಬೇಶ್ವರ ದೇವಕಾರ್ಯಕ್ಕೆ ಅಲ್ಲಿಯ ವಾಮಶಕ್ತಿ ಪಂಡಿತದೇವರಿಗೆ ಬಿಟ್ಟ ದತ್ತಿಯ ವಿವರ ಕೆಳಗಿನಂತಿದೆ.

| | |
|---|---|
| ಸಿರಸಂಗಿಯ ಅವಂಚಿ ಪಂಚವಣ್ಣಿಗೆ ಮೆಳುಸು ಧ್ಯಾನವರ್ಗ | ಅಡಿಕೆ ಬಿಟ್ಟ ಮತ್ತರು ಮತ್ತ ಐದು |
| ಸಿರಸಂಗಿಯ ನಖರಂಗಳ ಹಬ್ಬೇಶ್ವರದೇವ ಚೈತ್ರ (ಪರ್ವಕೆ ಪ್ರಕ್ಷೇಪವಂಗಡಿಗೆ) | ಬಿಟ್ಟ ಹಾಗವೊಂದು |
| ಪವಿತ್ರಾರೋಪಣದ ಪರ್ವಕ್ಕೆ | ಬಿಟ್ಟ ಹಾಗವೊಂದು |
| ಆ ಸ್ಥಳದೊಳಗೆ ಬಂದ ದೇವದವಸ | ಬಿಟ್ಟ ವೊಕ್ಕಲಿಂಗೆ ಭತ್ತ ಬಳ್ಳವೊಂದು |
| ಆರುಕಾರರಲ್ಲಿ ಆ ದೇವರ ದೇವಕಾರ್ಯಕ್ಕೆ | ಹೇರಿಂಗೆ ಭತ್ತ ವರಮಾನ |
| ಆ ದೇವರ ವಿಳೇಯವ ನಡೆವಂತು ಬಂದ ಗಾತ್ರಿಗರಲು | ಬಿಟ್ಟ ಎಲೆ ಹೇರಿಂಗೆ ನೂರು ಹೊರೆ ಹೊರೆ ಗಯ್ವತ್ತು |
| ಅಲ್ಲಿಯ ಐವತೊಕ್ಕಲ ದೇವರ ನಂದಾದೀವಿಗೆಗೆ | ಬಿಟ್ಟ ಗಾಣಂಗಳು |
| ತೊಡವನಿತರಲು ಹೊಯ್ವ ಗಾಣಗಳು ಪ್ರತ್ಯೇಕ ನೋಡಿಕೊಂಬಂತಾಗಿ | ಬಿಟ್ಟ ಧಾರಂಣ್ಣೆ ಯುದ್ಧ ಸೊಳಸ |
| ಅರುವರ್ಗಾವುಂಡುಗಳ ಅರುವಣ ನೆರೆಯ ಮತ್ತರಿಂಗೆ. | ಬಿಟ್ಟ ಹಾಗವೊಂದು |

ಹೀಗೆ ಗ್ರಾಮದ ಸಮಸ್ತ ವ್ಯಾಪಾರಿ ಹಬ್ಬೆಶ್ವರ ದೇವರಿಗೆ ದಾನದತ್ತಿ ಬಿಟ್ಟುದಲ್ಲದೆ,

ಸ್ವಸ್ತಿ ಸಮಸ್ತ ಶ್ರೀಮನ್ಮಹಾವಡ್ಡವ್ಯವಹಾರಿ ಸಿರಿಕುಮಾರ ನಾಯಕರು, ಕಾಟುರ ನಾಯಕರು, ಬಳ್ಳಾರ ನಾಯಕರು, ಮಲೆಯಚಸೆಟ್ಟಿ, ಕೊಂಡನಂಬಿಸೆಟ್ಟಿ, ಮುಖ್ಯ ಸಮಸ್ತ ಲಾಳ, ಮಲೆಯಾಳ, ನಾನಾದೇಸಿಗಳು ಸಿರಿಸಂಗಿಯಲ್ಲಿ ಮಹಾನಾಡಾಗಿ ಕುಳ್ಳಿರ್ದು,

ದೇಸಿಯ ಹಿರಿಯ ಬೀರವಣಿಗೆ ಹಬ್ಬೆಯನಾಯಕ ಪ್ರತಿಷ್ಠಿಸಿದ ಹಬ್ಬೆಯ ದೇವಕಾರ್ಯಕ್ಕೆ ಕುದುರೆಗೆ ಪ್ರತ್ಯೇಕ ಬಿಟ್ಟ ಹಾಗವೊಂದು, ಎಂದು ಸಿರಸಂಗಿಯ ಶಾಸನ ವಿವರಿಸಿದೆ.

ಇಲ್ಲಿ ನಾವು ಗಮನಿಸುವ ಆಕರ್ಷಣೆ ಎಂದರೆ, ಹಬ್ಬೆಯ ನಾಯಕನದು ಬೈಸಕುಲ. ಅಂದರೆ ವ್ಯಾಪಾರಿ ಕುಲ. ವ್ಯಾಪಾರಿ ಕುಲದ ಹಬ್ಬೆಯನಾಯಕರ ಹಬ್ಬೇಶ್ವರ ದೇವರನ್ನು ಪ್ರತಿಷ್ಠಿಸುವಲ್ಲಿ ತನ್ನ ಸಮಸ್ತ ಅಯ್ಯಾವಳೆ ಐನೂರ್ವರು ತಂಡದ ಸೆಟ್ಟಿ, ಸೆಟ್ಟಿಗುತ್ತ, ಮುಮ್ಮರಿದಂಡ, ಪಟ್ಟಣದ ಸೆಟ್ಟಿಗುತ್ತರು, ಕೂಹುಂಡಿ ಮೂರುಸಾವಿರದ ನಾಲ್ಕು ಪಟ್ಟಣದ ಸೆಟ್ಟಿಗುತ್ತರು, ಉಭಯ ನಾನಾದೇಸಿಗಳು, ಬಿರುದರು, ಬೀರವಣಿಗರು, ಗವರೆಗಳು, ಗಾತ್ರಿಗರು, ಅರುವತ್ತೊಕ್ಕಲು ಸಮಸ್ತ ನಖರಂಗಳು ಇಷ್ಟೆಲ್ಲ ವಿಭಿನ್ನ ವ್ಯಾಪಾರಿ ಬಳಗವನ್ನು ಸಿರಸಂಗಿಯಲ್ಲಿ ಸೇರಿಸಿ 'ಬಯ್ಯಸಣಿಗೆಯಾಗಿರ್ದ್ದ' ಸಮಸ್ತ ವ್ಯಾಪಾರಸ್ಥರು ಒಟ್ಟಿಗೆ ಸೇರಿದ್ದು, ಹಬ್ಬೇಶ್ವರ ದೇವರಿಗೆ ದಾನ ಕೊಟ್ಟದ್ದು, ಆತನ ಎದೆಗಾರಿಕೆಯನ್ನು ತೋರಿಸುವಂತಿದೆ. ಇಷ್ಟೇ ಅಲ್ಲ ಅಂದಿನ ಸಿರಸಂಗಿ ಜನತೆ ತೆಲುಗು, ತಮಿಳು, ಮಲೆಯಾಳದಂತಹ, ಬೇರೆ ಬೇರೆ ರಾಜ್ಯಗಳ ಅಷ್ಟೇ ಏಕೆ ಹೊರದೇಶದ ವ್ಯಾಪಾರಗಳನ್ನು ಆಕರ್ಷಿಸಿದ್ದು ಗಮನಾರ್ಹ.

'ಅಯ್ಯಾವಳೆ ಐನೂರ್ವರಂಥ' ಮಹತ್ವದ ಅಖಿಲ ಭಾರತ ಮಟ್ಟದ ವ್ಯಾಪಾರಿ ಸಂಘವೇ ಸಿರಸಂಗಿಗೆ ಆಗಮಿಸಿ ಹಬ್ಬೇಶ್ವರದೇವಕಾರ್ಯದಲ್ಲಿ ಭಾಗಿಯಾಗಿ, ತಮ್ಮ ಸೇವೆ ಸಲ್ಲಿಸಿರುವುದನ್ನು ಮನಗಂಡರೆ, ೧೨ನೆಯ ಶತಮಾನದಲ್ಲಿ ಸಿರಸಂಗಿ ಸಾಧಿಸಿದ ಗಮನಾರ್ಹ ಸಾಧನೆ ಅರಿವಿಗೆ ಬರುತ್ತದೆ. ಇಂಥ ಅಖಿಲ ಭಾರತದ ಮಟ್ಟದ ವ್ಯಾಪಾರಿ ಸಂಸ್ಥೆಯನ್ನು ಸಿರಸಂಗಿಗೆ ಆಹ್ವಾನಿಸಿ, ಅಂದು ಸಿರಸಂಗಿಯನ್ನು ಮೆರೆಯಿಸಿದ ಹಬ್ಬೇಯ ನಾಯಕನಂತಹ ಮಗನನ್ನು ಪಡೆದುದು ಲೋಕೋತ್ತರ ಸಾಧನೆಯಲ್ಲದೆ ಬೇರೆನು.

ಡಾ. ಎಸ್.ಎಲ್. ಶ್ರೀನಿವಾಸಮೂರ್ತಿ*

# ಮೆಕೆಂಜಿಯ ದೇಶೀಯ ಸಹಾಯಕ : ದಸ್ತೂರ ನಾರಾಯಣರಾವ್ ಮುತ್ಸದ್ದಿ

ಟಿಪ್ಪು ಸುಲ್ತಾನನ ನಿಧನಾನಂತರ ಮೈಸೂರು ಸಂಸ್ಥಾನ ಹಾಗೂ ಅದರ ಸುತ್ತಲಿನ ಪ್ರಾಂತ್ಯಗಳು ಸರ್ವೇಕ್ಷಣೆಯನ್ನು ಕೈಗೊಳ್ಳುವ ಮೂಲಕ ಕಾಲಿನ್ ಮೆಕೆಂಜಿಯು ದಕ್ಷಿಣ ಭಾರತದ ಪುರಾತತ್ವ ಶೋಧನೆಗೆ ಚಾಲನೆಯನ್ನು ನೀಡಿದ. ಈತನಿಗೆ ನೆರವಾದವನು ಕವೆಲ್ಲಿ ವೆಂಕಟ ಬೋರಯ್ಯ ಎಂಬ ದೇಶೀಯ ವಿದ್ವಾಂಸ ಎಂಬ ಅಂಶವು ಚಿರಪರಿಚಿತ. ಆದರೆ ಈತ ಮಾತ್ರವಲ್ಲದೆ ಸುಮಾರು ೧೬–೧೮ ಮಂದಿ ದೇಸೀಯ ವಿದ್ವಾಂಸರ ನೆರವೂ ಮೆಕೆಂಜಿಗೆ ಇತ್ತು ಎಂಬುದು ಎಚ್.ಎಚ್. ವಿಲ್ಸನ್ನನ 'ಮೆಕೆಂಜಿ ಸಂಗ್ರಹದ ಸೂಚಿ'ಯಿಂದ ತಿಳಿದುಬರುತ್ತದೆ. ಅವರುಗಳೆಂದರೆ :

| | |
|---|---|
| ೧. ಕೃಷ್ಣರಾವ್ | ೨. ಆನಂದರಾವ್ |
| ೩. ವೆಂಕಟರಾವ್ | ೪. ನಾರಾಯಣರಾವ್ |
| ೫. ಕವೆಲ್ಲಿ ವೆಂಕಟಲಕ್ಷ್ಮಯ್ಯ | ೬. ಕವೆಲ್ಲಿ ವೆಂಕಟರಾಮಸ್ವಾಮಿ |
| ೭. ಮೋಬರಾವ್ | ೮. ಸೇವರಾವ್ |
| ೯. ಶ್ರೀನಿವಾಸಯ್ಯ | ೧೦. ಮಲ್ಲಯ್ಯ |
| ೧೧. ರಾಮದಾಸ್ | ೧೨. ನಿತಾಲನಾಯನ |
| ೧೩. ಗುಂಡಪ್ಪ ಸಿಂಗ್ರಾಚಾರಿ | ೧೪. ಧರ್ಮಯ್ಯ (ಮತ್ತು ಅವನ ಮಗ) |
| ೧೫. ಅಬ್ದುಲ್ ಅಜೀಜ್ | ೧೬. ಸ್ವಾಮಿನಾಥಶಾಸ್ತ್ರೀ |
| ೧೭. ಇಂಗ್ಲಿಷ್ ಸುಬ್ಬರಾವ್ | |

ಮೇಲ್ಕಂಡ ವಿದ್ವಾಂಸರಲ್ಲಿ ಕವೆಲ್ಲಿ ಸೋದರನ್ನು ಬಿಟ್ಟರೆ ಇತರರ ಬಗ್ಗೆ ಹೆಚ್ಚಿನ ಅಧ್ಯಯನಗಳಾಗಿಲ್ಲ. ಈ ಹಿನ್ನೆಲೆಯಲ್ಲಿ ಪಟ್ಟಿಯಲ್ಲಿ ನಾಲ್ಕನೆಯ ಹೆಸರಾಗಿ ನಮೂದಾಗಿರುವ ನಾರಾಯಣರಾವ್ ಎಂಬಾತನ ಬಗ್ಗೆ ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಿದೆ.*

* ಈತನ ಬಗ್ಗೆ ವೆಸ್ಲಿಯನ್ ಯೂನಿವರ್ಸಿಟಿಯ ಫಿಲಿಪ್ ಬಿ. ವ್ಯಾಗನರ್ ರವರು 'Precolonial Intellectuals and the Productin of colonial Knonledge' ಎಂಬ ಲೇಖನವನ್ನು ೨೦೦೩ರಲ್ಲಿ Journal of Comparative Studies in Society and History ಎಂಬ ಪತ್ರಿಕೆಯ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ಆದರೆ ಅವರು ತಮ್ಮ ಬರಹಕ್ಕೆ ಮುಖ್ಯವಾಗಿ ತೆಲುಗು ಆಕರಗಳನ್ನು ಬಳಸಿದ್ದಾರೆ. ನಾನು ವ್ಯಾನಗರ್ ಅವರ ಲೇಖನದಿಂದ ಕೆಲವು ಸಂಗತಿಗಳನ್ನು ಪಡೆದುಕೊಂಡದ್ದೇನಾದರೂ ಅವರು ಗಮನಿಸಿರದ ಕನ್ನಡ ಆಕರಗಳನ್ನು ಬಳಸಿಕೊಂಡಿದ್ದೇನೆ.

ಮೆಕೆಂಜಿ ದಾಖಲೆಗಳ ಪ್ರಕಾರ ಈತನ ಪೂರ್ಣ ಹೆಸರು ದಸ್ತೂರ ನಾರಾಯಣರಾವ್ ಮುತ್ಸದ್ದಿ ಮೂಲತಃ ಆರ್ಕಾಟ್‌ನ ನಿಯೋಗಿ ಬ್ರಾಹ್ಮಣನಾಗಿದ್ದ. ಈತ ಅಲ್ಲಿಯ ನವಾಬನ ಆಸ್ಥಾನದಲ್ಲಿ ಕೆಲಸದಲ್ಲಿದ್ದ. ತೆಲುಗು, ಮರಾಠಿ, ಕನ್ನಡ, ತಮಿಳು, ಸಂಸ್ಕೃತ, ಹಿಂದೂಸ್ಥಾನಿ, ಪರ್ಷಿಯನ್ ಹಾಗೂ ಇಂಗ್ಲಿಷ್ ಭಾಷೆಗಳನ್ನು ಈತ ಬಲ್ಲವನಾಗಿದ್ದ. ನವಾಬನ ದರ್ಬಾರಿನಲ್ಲಿ ಗಣ್ಯ ಹುದ್ದೆಯನ್ನು ನಿರ್ವಹಿಸುತ್ತಿದ್ದ. ಈತ ಕಂದಾಯದ ಮಾಹಿತಿಯ ವಿವರಗಳನ್ನು ಚೆನ್ನಾಗಿ ಬಲ್ಲವನಾಗಿದ್ದ. ೧೮೦೩ ರಿಂದ ೧೮೧೮ರವರೆಗೆ ಹದಿನೈದು ವರ್ಷಗಳ ಕಾಲ ಈತ ಮೆಕೆಂಸ್ಸಿಯ ಸಹಾಯಕನಾಗಿ ಕಾರ್ಯನಿರ್ವಹಿಸಿದ್ದರ ವಿವರಗಳು 'ಮೆಕೆಂಜಿ ಸಂಗ್ರಹ'ದಲ್ಲಿವೆ. ಈ ಅವಧಿಯಲ್ಲಿ ಆತ ನೂರಕ್ಕೂ ಹೆಚ್ಚು ಪತ್ರ, ವರದಿ ಮತ್ತು ದಾಖಲೆಗಳ ಅನುವಾದಗಳನ್ನು ಸಿದ್ಧಪಡಿಸಿದ್ದು ಇವೆಲ್ಲವೂ ಲಂಡನ್ನಿನ ಬ್ರಿಟಿಷ್ ಲೈಬ್ರರಿಯಲ್ಲವೆ ಎಂದು ವ್ಯಾಗನರ್ ದಾಖಲಿಸಿದ್ದಾರೆ. ತಿರುಪತಿಯಿಂದ ಮೈಸೂರಿನವರೆಗೆ; ಪೂನಾ–ಅಹಮದ್ ನಗರಗಳವರೆಗೆ ಈತ ಸುತ್ತಾಡಿ ದಾಖಲೆಗಳನ್ನು ಸಂಗ್ರಹಿಸಿದ್ದಾನೆ. ಅಹಮದ್ ನಗರ ಜಿಲೆಯ ಅಂಕಿ ಅಂಶಗಳ ವಿಶ್ಲೇಷಣೆ ; ಎಲ್ಲೋರ, ವಾರಂಗಲ್ ಮುಂತಾದ ಸ್ಥಳಗಳಲ್ಲಿಯ ಪ್ರಾಚೀನ ಸ್ಮಾರಕಗಳ ವಿವರಣಾತ್ಮಕ ಸೂಚಿ ಮುಂತಾದವುಗಳನ್ನು ಈತ ಸಿದ್ಧಪಡಿಸಿದ್ದಾನೆ.

ನಾರಾಯಣರಾವ್ ಕ್ರಿ.ಶ. ೧೮೧೦ರಲ್ಲಿ ತೆಲುಗು ಭಾಷೆಯಲ್ಲಿ 'ಶ್ರೀಶೈಲ ದೇವಾಲಯ ಕೈಫಿಯತ್ತು' ಎಂಬ ಕೃತಿಯನ್ನು ಬರೆದಿದ್ದಾನೆ ಎಂದು ಫಿಲಿಪ್ ವ್ಯಾಗನರ್ ದಾಖಲಿಸಿದ್ದಾರೆ. ಆದರೆ ಅದಕ್ಕೂ ಮುನ್ನವೇ ಆತನು ಕನ್ನಡ ಭಾಷೆಯಲ್ಲಿ ಮೂರು ಕೈಫಿಯತ್ತುಗಳನ್ನು ರಚಿಸಿರುವುದನ್ನು ಅವರು ಗಮನಿಸಿಲ್ಲ.[೧] ಅವುಗಳ ವಿವರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಗಮನಿಸಬಹುದು.

## ಬಳ್ಳಾರಿ ತಾಲ್ಲೂಕಿನ ಕುರುಗೋಡು ಕೈಫಿಯತ್ತು

ಇದು ಸಾಕಷ್ಟು ದೀರ್ಘವಾದ ಕೃತಿಯಾಗಿದ್ದು ಭೌಗೋಳಿಕ ವಿವರಗಳು ; ದೇವಾಲಯಗಳು, ಶಾಸನಗಳು, ಈ ಪ್ರಾಂತ್ಯವನ್ನು ಆಳಿದ ವಿಜಯನಗರದ ಅರಸರ ವಿವರ,

* ಮುಖ್ಯಸ್ಥ, ಕನ್ನಡ ವಿಭಾಗ, ವಿಜಯ ಪದವಿಪೂರ್ವ ಕಾಲೇಜು, ಆರ್.ವಿ. ರಸ್ತೆ, ಬಸವನಗುಡಿ, ಬೆಂಗಳೂರು.

ಅವರ ನಂತರ ವಿಜಾಪುರದ ಬಾದಶಹರು ಅದನ್ನು ಗೆದ್ದಿದ್ದು, ದೇಸಾಯಿ, ನಾಡಗೌಡ, ದೇಶಕುಲಕರ್ಣಿ ಮುಂತಾದವರ ವಿವರಗಳು, ಅವರ ಸಂತತಿ, ಹಂಡೆನಾಯಕರ ವಂಶಾವಳಿ ಮುಂತಾದ ವಿವರಗಳಿವೆ. ಕೃತಿಯ ಕೊನೆಯಲ್ಲಿ "ದಸ್ತೂರ ನಾರಾಯಣರಾವ್ ಮುತ್ಸದ್ದಿ. ಮುತ್ತೈನ ಮೆಸ್ತರ್ ವಾರ್ಡು ಸಾಹೇಬ್ ಅಶಿಷ್ಟಂಟ್ ಪೈಮಾಯಿಸಿ ಸರದಾರ್, ಯಿಲಾಖೆ ಮೇಜರ್ ಕಾಲನ್ ಮೆಕೆಂಜಿ ಸಾಹೇಬ ತಾರೀಖು ೧೨ ಮಾಹೆ ಅಗಟೋಬರ ಸನ್ ೧೮೦೯ ಯಿಸವಿ. ದರ ಜಾಗಾ ಕುರುಗೋಡು" ಎಂಬ ಹೇಳಿಕೆ ಇದೆ.[೨]

### ಬಳ್ಳಾರಿ ತಾಲ್ಲೂಕಿನ ಭಟ್ಟರಹಳ್ಳಿಯ ಕೈಫಿಯತ್ತು

ಇದಕ್ಕೆ 'ಕೊಮಾರಾಮನ ಕೈಫಿಯತ್ತು' ಎಂಬ ಇನ್ನೊಂದು ಹೆಸರೂ ಇದೆ. ಅದಕ್ಕೆ ಕಾರಣ ಇದು ಕುಮಾರರಾಮನ ಶೌರ್ಯ-ಪರಾಕ್ರಮಗಳನ್ನೇ ಪ್ರಧಾನವಾಗಿ ಕುರಿತದ್ದಾಗಿರುವುದು. ಭಟ್ಟರಹಳ್ಳಿಗೆ ಹಿಂದೆ ಕಾಟಗೊಂಡನಹಳ್ಳಿ ಎಂಬ ಹೆಸರು ಇದ್ದದ್ದು, ಗೋವಿಂದಭಟ್ಟ ಮತ್ತು ಗೋಪಾಲಭಟ್ಟ ಎಂಬ ಅಣ್ಣತಮ್ಮಂದಿರಿಗೆ ಇದನ್ನು ಕುಮಾರರಾಮನು ಸರ್ವಮಾನ್ಯವಾಗಿ ಕೊಟ್ಟು ಹೆಸರನ್ನು ಭಟ್ಟರಹಳ್ಳಿ ಎಂದು ಬದಲಿಸಿದ್ದು ಮುಂತಾದ ವಿವರಗಳೂ ಇದರಲ್ಲಿವೆ. ಈ ಕೃತಿಯನ್ನೂ ೧೮೦೯ರ ಅಕ್ಟೋಬರಿನಲ್ಲಿ ದಸ್ತೂರ ನಾರಾಯಣರಾವ್ ಮುತ್ಸದ್ದಿಯು ಬರೆದಿರುವುದಾಗಿ ಅಂತ್ಯದಲ್ಲಿ ನಮೂದಿಸಿದೆ.

### ಹತ್ತಿ ಬೆಳಗಲ್ಲು ಕೈಫಿಯತ್ತು

ಗುಳ್ಯಂ ತಾಲ್ಲೂಕಿನ ಹತ್ತಿ ಬೆಳಗಲ್ಲು ಎಂಬ ಗ್ರಾಮದ ಚರಿತ್ರೆಯನ್ನು ಈ ಕೈಫಿಯತ್ತು ವಿವರಿಸಿದೆ. ಇಬ್ಬರು ಗೊಲ್ಲ ಅಣ್ಣ ತಮ್ಮಂದಿರು ಈ ಊರಿನ ದೇವಾಲಯಗಳನ್ನು ಕಟ್ಟಿಸಿದ್ದು; ಬೇಡರನಾಯಕ ಆಳ್ವಿಕೆ, ಟೀಪೂ ಸುಲ್ತಾನನ ದಾಳಿ, ಮೊಘಲರ ಆಕ್ರಮಣ ಇತ್ಯಾದಿ ವಿವರಗಳಿವೆ. ಈ ಕೈಫಿಯತ್ತಿನ ರಚನೆಯ ಕಾಲ ನಮೂದಾಗಿಲ್ಲ.

### ಶಾಸನ ತಜ್ಞ

ಮುತ್ಸದ್ದಿ ನಾರಾಯಣರಾವ್ ಕೇವಲ ದಾಖಲೆಗಳ ಸಂಗ್ರಾಹಕ ಮತ್ತು ಕೈಫಿಯತ್ತುಗಳ ಲೇಖಕ ಮಾತ್ರವಲ್ಲದೆ ಪ್ರಾಚೀನ ಶಾಸನಗಳನ್ನು ಓದಬಲ್ಲ ತಜ್ಞನೂ ಆಗಿದ್ದನೆಂದು ಅವನ ಬರಹಗಳಿಂದಲೇ ತಿಳಿದುಬರುತ್ತದೆ. ಮೆಕೆಂಜ್ಸಿಗೆ ಆತ ಕಳುಹಿಸಿರುವ ವರದಿಗಳಲ್ಲಿ ಹಲವು ಶಾಸನಗಳ 'ಕಣ್‌ಪ್ರತಿ' (Eye Copy) ಗಳೂ ಇರುವುದನ್ನು ಗಮನಿಸಿ ವ್ಯಾಗನರ್ ಆತನ ಲಿಪಿಶಾಸ್ತ್ರದ ತಿಳುವಳಿಕೆಯನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ:

"Narrain Row and his colleagues hed no problems reading inscriptions in the Hala-Kannada Script dating back to as early as the eleventh Century, but the still earlier Seventh-Century forms of this script-which they called "Poorwad-Halla-Canara" or "Earlier of Kannada", implicitly revealing that they recognized it to be an earlier old genealogical form of Hala-Kannada Seems to have remanied undeciphered by any of Mackenzie's Collaborators. But the most important print to recognize here is that they nonetheless proceeded to make faithful copies of these undeciphered inscriptions..."[3]

ಕುರುಗೋಡು ಕೈಫಿಯತ್ತಿನಲ್ಲಿ ವೊರವಾಯ ಎಂಬ ಗ್ರಾಮದಲ್ಲಿರುವ ನಾಲ್ಕು ಶಾಸನಗಳು ಹಾಗೂ ಕುರಗೋಡಿನಲ್ಲಿ ಇರುವ ಎರಡು ಶಾಸನಗಳ ಸಾರಾಂಶವನ್ನು ನಾರಾಯಣ ರಾಯನು ನೀಡಿದ್ದು ಬಹುಮಟ್ಟಿಗೆ ಶಾಸನದ ಭಾಷೆಯನ್ನೇ ಇಲ್ಲಿ ಉಳಿಸಿಕೊಂಡಿದ್ದಾನೆ. ಪದ್ಯಗಳು ಇದ್ದಲ್ಲಿ ॥ವೃತ್ತ॥ ಎಂಬ ಸೂಚನೆಯಿದೆ. ಪ್ರಮುಖವಾದ ವಿಷಯವೆಂದರೆ ಈ ಆರೂ ಶಾಸನಗಳ ವಿವರಗಳು 'ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್' ನ ಒಂಭತ್ತನೇ ಸಂಪುಟದ ಮೊದಲ ಭಾಗದಲ್ಲಿ ದಾಖಲಾಗಿರುವುದು.[೪] ಹಾಗಾಗಿ ನಾರಾಯಣರಾಯನ ಬರವಣಿಗೆ ಕ್ಷೇತ್ರ ಕಾರ್ಯದಿಂದ ಪುಷ್ಟವಾದದ್ದು ಎನ್ನುವುದರಲ್ಲಿ ಸಂಶಯವಿಲ್ಲ. ಈತನ ಕೈಕೆಳಗೆ ವೆಂಕಟರಾವ್ ಎಂಬ ಗುಮಾಸ್ತನು ಕೆಲಸ ಮಾಡುತ್ತಿದ್ದು ಆತ ಗುಲ್ಬರ್ಗ ಮತ್ತು ಮಳಖೇಡ ಪ್ರದೇಶಗಳಲ್ಲಿ ಪ್ರಾಚೀನ ಕನ್ನಡ ಶಾಸನಗಳು ಹಾಗೂ ಚಾರಿತ್ರಿಕ ಕೃತಿಗಳನ್ನು ಸಂಗ್ರಹಿಸಿದನೆಂಬ ಅಂಶವನ್ನು ಮೆಕೆಂಜಿ ಸಂಗ್ರಹದಲ್ಲಿ ಉಲ್ಲೇಖಿಸಲಾಗಿದೆ.

### ಆಧಾರಸೂಚಿ


೧. ಇವು ಡಾ. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿರುವ **'ಕರ್ನಾಟಕದ ಕೈಫಿಯತ್ತುಗಳು'** ಎಂಬ ಕೃತಿಯಲ್ಲಿ ಸೇರಿವೆ. (ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪).

೨. ಕಲಬುರ್ಗಿ ಎಂ.ಎಂ., ಪೂರ್ವೋಕ್ತ, ಪುಟ ೪೬೫.

೩. ಫಿಲಿಪ್ ವ್ಯಾಗನರ್, ಪೂರ್ವೋಕ್ತ, ಪುಟ ೮೦೧.

೪. ಶಾಸನ ಸಂಖ್ಯೆಗಳು : ೯೨, ೨೫೨, ೨೯೬, ೨೯೭, ೩೨೨, ೩೨೪.

ಗುರುಪ್ರಕಾಶ ಹೂಗಾರ*

# ಸುರಪುರ ಸಂಸ್ಥಾನದ ಸಾಹಿತ್ಯಿಕ ಕೊಡುಗೆಗಳು

ಸಗರನಾಡು ವಿಶಾಲ ಕರ್ನಾಟಕದ ಒಂದು ಪ್ರಮುಖ ಭಾಗ. ಕೃಷ್ಣಾ-ಭೀಮೆಯರು ಮೈದೊಳೆಯುವ ಈ ನಾಡನ್ನು ಶಾಸನ ಗ್ರಂಥಗಳಲ್ಲಿ "ಸಗರನಾಡು" ಎಂದು ಕರೆಯಲಾಗಿದೆ. ಡಾ. ಎಸ್.ಕೆ. ಅರುಣಿಯವರು ಕೃಷ್ಣಾ ಕೊಳ್ಳ ಪ್ರದೇಶದಲ್ಲಿ ನಡೆಸಿದ ಉತ್ಖನನಗಳಿಂದ ಈ ಪ್ರದೇಶವು ಪ್ರಾಗೈತಿಹಾಸಿಕ ಕಾಲದಲ್ಲಿ ಮಾನವನ ನೆಲೆಯಾಗಿತ್ತು ಎಂದು ತಿಳಿದುಬಂದಿದೆ. ಈ ಭಾಗವು ಮೌರ್ಯ, ಶಾತವಾಹನ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ವಿಜಯನಗರ, ಬಹಮನಿ, ಆದಿಲಶಾಹಿಗಳು ಆಳಿದ ಪ್ರದೇಶ ಇದಾಗಿತ್ತು. ಸಗರನಾಡಿನ ಕೇಂದ್ರ ಸ್ಥಾನ ಸುರಪುರವಾಗಿದ್ದು, ಇದು ಈಗ ನೂತನ ಯಾದಗಿರಿ ಜಿಲ್ಲೆಯಲ್ಲಿದೆ.

ಗೋಸಲ ವಂಶದ ನಾಯಕರು ಕ್ರಿ.ಶ. ೧೬೩೬-೧೮೫೮ರ ವರೆಗೆ ಸ್ವತಂತ್ರವಾಗಿ ಆಳ್ವಿಕೆ ನಡೆಸಿದರು. ಸುರಪುರ ಅವರ ರಾಜಧಾನಿ ಕೇಂದ್ರವಾಗಿತ್ತು. ಆದ್ದರಿಂದ ಇವರನ್ನು ಸುರಪುರದ ನಾಯಕರು ಅಥವಾ ಬೇಡರು ಎಂದು ಕರೆಯಲಾಗಿದೆ. ಸುರಪುರದ ಅರಸರು ಶೂರ, ವೀರ ಕಲಿಗಳಾಗಿದ್ದು ಸಮಕಾಲೀನ ಬಲಿಷ್ಠ ರಾಜವಂಶಗಳಾದ ಬಿಜಾಪುರದ ಆದಿಲ್‌ಶಾಹಿಗಳು, ಮರಾಠರು, ನಿಜಾಮ, ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಹಾಗೂ ಮೊಗಲರ ದಾಳಿಗಳನ್ನು ಸಮರ್ಥವಾಗಿ ಎದುರಿಸಿ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಂಡ ಶ್ರೇಯಸ್ಸು ಇವರದಾಗಿದೆ. ಸುರಪುರದ ಅರಸರು ರಾಜಕೀಯದ ಜೊತೆಗೆ ವಿಜಯನಗರದ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸಿದರು. ಆ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಇವರು ನೀಡಿದ ಕೊಡುಗೆ ಮಹತ್ವದಾಗಿದೆ.

ಸುರಪುರ ಸಂಸ್ಥಾನದ ಅರಸರು 'ಗೋಸಲ' ವಂಶದವರು. ಗೋವುಗಳ ರಕ್ಷಕರಾಗಿದ್ದರಿಂದ ಇವರನ್ನು 'ಗೋಸಲ' ವಂಶದವರೆಂದು ಕರೆಯಲಾಗಿದೆ ಎಂಬ ಅಭಿಪ್ರಾಯವೂ ಇದೆ. ಇವರು ಬೇಡ ಜನಾಂಗಕ್ಕೆ ಸೇರಿದವರಾಗಿದ್ದರೆಂದು ಭಾರ್ಗವ ಪುರಾಣದಿಂದ ತಿಳಿದುಬರುತ್ತದೆ. ಮೇಡೋಸ ಟೇಲರನ ಪ್ರಕಾರ "ಈ ಮನೆತನದ ಆರಂಭಿಕರು ಮೈಸೂರು ರಾಜ್ಯದ ರತ್ನಗಿರಿಯಿಂದ ಬಂದವರೆಂದು ತಿಳಿಸಿದ್ದಾನೆ. ಇವರ ಮೂಲ ಪುರುಷ ನರಸಿಂಹನಾಯಕನಾಗಿದ್ದು, ವಿಜಯನಗರದ ಕೃಷ್ಣಾ ಮತ್ತು ತುಂಗಭದ್ರಾ ಪ್ರದೇಶಗಳ ರಕ್ಷಣೆಗಾಗಿ ನೇಮಕವಾಗಿದ್ದರು.

ಮುದ್ದಗಲಿನ ಕಿಲ್ಲೆದಾರ ಮುಸ್ತಾಫಖಾನ್, ನರಸಿಂಹ ನಾಯಕನ ವಂಶಜ ಕಲ್ಲಪ್ಪನಾಯಕನನ್ನು ಮುದುಗಲ್ಲಿಗೆ ಕರೆತಂದನು. ಕಲ್ಲಪ್ಪನಾಯಕನಿಗೆ ಏಳು ಜನ ಮಕ್ಕಳಿದ್ದರು. ಅವರೆಲ್ಲರನ್ನು 'ಹನುಮಪ್ಪನಾಯಕ' ಎಂದು ಹೆಸರಿಸಲಾಗಿದೆ. ಈತನ ಕೊನೆಯ ಮಗನಾದ ಚಿನ್ನ ಹಣಮಪ್ಪನಾಯಕ ಮತ್ತು ಅವನ ಮಕ್ಕಳು ಸುರಪುರ ತಾಲೂಕಿನ ಕಕ್ಕೆರಿಯಲ್ಲಿ ಬಂದು ನೆಲೆಸಿದರು. ಇವನ ವಂಶಜರೆ ಸುರಪುರ ಸಂಸ್ಥಾನದ ಮೂಲ ಅರಸರಾಗಿದ್ದರು. ಇವನ ನಂತರದ ಆರು ತಲೆಮಾರುಗಳ ಕುರಿತು ಮಾಹಿತಿ ದೊರೆತಿಲ್ಲ. ನಂತರದಲ್ಲಿ ಜಕ್ಕಪ್ಪ ದೇಸಾಯಿಯು ಎರಡನೆಯ ಮಗನಾದ ಗಡ್ಡಿ ಪಿಡ್ಡನಾಯಕನು ಸುರಪುರದಲ್ಲಿ ಸ್ವತಂತ್ರ ಸಂಸ್ಥಾನ ಸ್ಥಾಪಿಸಿದನು. ಗೋಪಾಲಸ್ವಾಮಿ ಇವರ ಅಧಿದೇವತೆಯಾಗಿದ್ದ. ಹನುಮಧ್ವಜ ಇವರ ಲಾಂಛನ ವಾಗಿದ್ದಿತು.

ಸುರಪುರ ಸಂಸ್ಥಾನವನ್ನು ಹನ್ನೆರಡು ಅರಸರು ಎರಡುನೂರು ಇಪ್ಪತ್ತೆರಡು ವರ್ಷಗಳ ಕಾಲ ಸಮರ್ಥವಾಗಿ ಆಳಿದರು. ಅವರ ಆಳ್ವಿಕೆಯ ವಿವರ ಈ ಕೆಳಗಿನಂತಿದೆ.

೧. ಗಡ್ಡಿ ಪಿಡ್ಡನಾಯಕ-(ಕ್ರಿ.ಶ. ೧೬೩೬-೧೬೬೬)

೨. ಹಸರಂಗಿ ಪಾಮನಾಯಕ-(ಕ್ರಿ.ಶ. ೧೬೬೬-೧೬೮೭)

೩. ಪಿತಂಬರಿ ಬಹರಿ ಪಿಡ್ಡನಾಯಕ-(ಕ್ರಿ.ಶ. ೧೬೮೭-೧೭೨೬)

೪. ಇಮ್ಮಡಿ ಪಾಮನಾಯಕ-(ಕ್ರಿ.ಶ. ೧೭೨೬-೧೭೪೧)

೫. ಮುಮ್ಮಡಿ ಪಿಡ್ಡನಾಯಕ-(ಕ್ರಿ.ಶ. ೧೭೪೨-೧೭೪೬)

೬. ಮೋಂಡಗೈ ವೆಂಕಟಪ್ಪನಾಯಕ-(ಕ್ರಿ.ಶ. ೧೭೪೬-೧೭೫೨)

೭ ಮುಮ್ಮಡಿ ಪಾಮನಾಯಕ-(ಕ್ರಿ.ಶ. ೧೭೫೨-೧೭೭೩)

೮. ಇಮ್ಮಡಿ ವೆಂಕಟಪ್ಪನಾಯಕ-(ಕ್ರಿ.ಶ. ೧೭೭೩-೧೮೦೨)

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರಕಾರಿ ಪ್ರಥಮ ದರ್ಜೆ ಕಾಲೇಜು, ಜೇವರ್ಗಿ, ಗುಲಬರ್ಗ ಜಿಲ್ಲೆ.

೯. ನಾಲ್ವಡಿ ರಾಜಾ ಪಿಡ್ಡನಾಯಕ-(ಕ್ರಿ.ಶ. ೧೮೦೨-೧೮೧೮)

೧೦. ಮುಮ್ಮಡಿ ರಾಜಾ ದೇವೇಂದ್ರ ವೆಂಕಟಪ್ಪನಾಯಕ-(ಕ್ರಿ.ಶ. ೧೮೧೮-೧೮೨೭)

೧೧. ರಾಜಾ ಕೃಷ್ಣಪ್ಪನಾಯಕ-(ಕ್ರಿ.ಶ. ೧೮೨೭-೧೮೪೩)

೧೨. ನಾಲ್ವಡಿ ರಾಜಾವೆಂಕಟಪ್ಪ ನಾಯಕ-(ಕ್ರಿ.ಶ. ೧೮೪೩-೧೮೫೮)

ಸುರಪುರದ ಅರಸರು ಆರಂಭದಲ್ಲಿ ವಿಜಯನಗರದ ಅರಸರ ಆಳ್ವಿಕೆಯಲ್ಲಿ ಕಾರ್ಯನಿರ್ವಹಿಸಿದ್ದರಿಂದ ಇವರು ಕೂಡ ವಿಜಯನಗರ ಪರಂಪರೆಯನ್ನು ಮುಂದುವರೆಸಿದರು. ಅನೇಕ ಪಂಡಿತರು, ಕವಿಗಳು, ಶಿಲ್ಪಿಗಳು, ವಿದ್ವಾಂಸರಿಗೆ ಆಶ್ರಯ ನೀಡಿ ಇಲ್ಲಿನ ಭಾಷೆ, ಸಂಸ್ಕೃತಿಯ ಬೆಳವಣಿಗೆಗೆ ಅಪಾರ ಪ್ರೋತ್ಸಾಹ ನೀಡಿದರು. ಆ ಮೂಲಕ ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳ ಅಭಿವೃದ್ಧಿಗೆ ಕಾರಣರಾದರು. ಆರಂಭಿಕ ಅರಸರಾದ ಗಡ್ಡಿ ಪಿಡ್ಡನಾಯಕ, ಹಸರಂಗಿ ಪಾಮನಾಯಕ, ಪಿತಂಬರಿ ಬಹರಿ ಪಿಡ್ಡನಾಯಕ, ಇಮ್ಮಡಿ ಪಾಮನಾಯಕ, ಮುಮ್ಮಡಿ ಪಿಡ್ಡನಾಯಕ, ಮೋಂಡಗ್ಯೆ ವೆಂಕಟಪ್ಪನಾಯಕ ಇವರ ಕಾಲದ ಸಾಹಿತ್ಯದ ಚಟುವಟಿಕೆಗಳ ಕುರಿತು ಹೆಚ್ಚಿನ ಮಾಹಿತಿ ತಿಳಿದು ಬಂದಿಲ್ಲ. ಆದರೆ ಈ ಕಾಲದಲ್ಲಿ ಲಾವಣಿ ಪದಗಳು, ಜನಪದ ಗೀತೆಗಳು, ತತ್ವಪದಗಳು ರಚನೆಯಾದವೆಂದು ಕೆಲವು ಉಲ್ಲೇಖಗಳಿಂದ ತಿಳಿದುಬರುತ್ತದೆ. ಅಲ್ಲದೆ ಈ ಅರಸರು ಮೊದಲು ತಮ್ಮ ರಾಜ್ಯವನ್ನು ಬಲಪಡಿಸುವುದರ ಕಡೆ ಹೆಚ್ಚು ಗಮನ ಕೊಟ್ಟಿದ್ದರಿಂದ ಇವರಿಗೆ ಸಾಹಿತ್ಯದ ಕಡೆ ಹೆಚ್ಚು ಗಮನ ನೀಡಲು ಸಾಧ್ಯವಾಗಲಿಲ್ಲ.

ಮೋಡಂಗ್ಯೆ ವೆಂಕಟಪ್ಪನಾಯಕನ ನಂತರ ಬಂದ ಪಾಮನಾಯಕನು ಸ್ವತಃ ಮಹಾನ್ ಪಂಡಿತನಾಗಿದ್ದು, ಅಲಂಕಾರ ಶಾಸ್ತ್ರಗಳನ್ನು ಬಲ್ಲವನಾಗಿದ್ದನು. ಇವನು ತನ್ನ ಆಸ್ಥಾನದಲ್ಲಿ ಅನೇಕ ಪಂಡಿತರಿಗೆ, ಕವಿಗಳಿಗೆ ಆಶ್ರಯ ನೀಡಿದ್ದನು. ಸ್ವತಃ ಕವಿಯಾಗಿದ್ದ ಈತನು ಮಹಾನ್ ಭಗವದ್ಭಕ್ತರಾದ ಹನ್ನೆರಡು ಜನ ಆಳ್ವಾರರ ಚರಿತ್ರೆಯನ್ನು ಹೊಂದಿದ "ಭಾರ್ಗವ ಪುರಾಣ" ಎಂಬ ಕೃತಿಯನ್ನು ತೆಲುಗು ಭಾಷೆಯಲ್ಲಿ ರಚಿಸಿದನು. ಇದು ಮೂಲತಃ ಸಂಸ್ಕೃತ ಭಾಷೆಯ ಕೃತಿಯನ್ನು ಅನುವಾದಿಸಿದನು. ಇದನ್ನು ವಿಶಿಷ್ಟಾದ್ವೈತ ಸಂಪ್ರದಾಯಕ್ಕನುಗುಣವಾಗಿ ಎಂಟು ಆಶ್ವಾಸಗಳನ್ನಾಗಿ ವಿಭಜಿಸಿದ್ದಾನೆ. ಇದೊಂದು ವಿಶಿಷ್ಟ ಕೃತಿಯಾಗಿದೆ.

ಇವರ ಕಾಲದ ಪಂಡಿತರಲ್ಲಿ ಅಣ್ಣಯ್ಯ ದೀಕ್ಷಿತರು ಅತ್ಯಂತ ಶ್ರೇಷ್ಠ ಪಂಡಿತರಾಗಿದ್ದರು. ಇವರನ್ನು ಪಾಮನಾಯಕನು ತಿರುಮಲದ ಬಳಿಯ ಬುಕ್ಕಪಟ್ಟಣ ಎಂಬ ಅಗ್ರಹಾರದಿಂದ ಕರೆತಂದನು. ಇವರ ಕಾಲದಿಂದ ಸುರಪುರದಲ್ಲಿ ರಾಜಗುರುಗಳ ಪರಂಪರೆ ಆರಂಭವಾಯಿತು. ಅಣ್ಣಯ್ಯ ದೀಕ್ಷಿತರು ವೇದ, ವ್ಯಾಕರಣ, ನ್ಯಾಯ ಮೀಮಾಂಸೆ, ಅಲಂಕಾರ, ದರ್ಶನ ಮುಂತಾದ ವಿಷಯಗಳಲ್ಲಿ ಅಪಾರ ಪಾಂಡಿತ್ಯ ಗಳಿಸಿದ್ದರು. ಇವರು ಸುಮಾರು ಇಪ್ಪತ್ತಕ್ಕಿಂತ ಹೆಚ್ಚು ಕೃತಿಗಳನ್ನು ರಚಿಸಿದರೆಂದು ಬುಚ್ಚಿ ವೆಂಕಟಾಚಾರ್ಯರು ತಮ್ಮ "ವೇದಾಂತ ಕಾರಿಕಾವಲೀ" ಗ್ರಂಥದಲ್ಲಿ ತಿಳಿಸಿದ್ದಾರೆ. ಇವರ ಕೆಲವು ಗ್ರಂಥಗಳು ಮದ್ರಾಸಿನ ಕೇಂದ್ರ ಗ್ರಂಥಾಲಯದಲ್ಲಿ ಲಭ್ಯವಿದೆ. ಇವರು ರಚಿಸಿದ ಕೆಲವು ಕೃತಿಗಳ ವಿವರ ಈ ಕೆಳಗಿನಂತಿದೆ.

೧. ತತ್ವ ಗುಣಾದರ್ಶ : ಈ ಕೃತಿಯು ಶಾಂಭವ ಮತ್ತು ವಿಜಯ ಎಂಬ ಶೈವ ಮತ್ತು ವೈಷ್ಣವಕ್ಕೆ ಸೇರಿದ ಎರಡು ಕಲ್ಪನಾ ಪಾತ್ರಗಳ ಸಂವಾದದ ಮೂಲಕ ತತ್ವಾರ್ಥಗಳನ್ನು ಚರ್ಚಿಸುವ ಮುಖಾಂತರ ವಿಶಿಷ್ಟಾದ್ವೈತ ಮತದ ಶ್ರೇಷ್ಠತೆಯನ್ನು ಎತ್ತಿ ಹಿಡಿದಿದ್ದಾರೆ. ಇದು ಚಂಪೂ ಕಾವ್ಯದಲ್ಲಿದ್ದು ಅತ್ಯಂತ ಸುಂದರ, ಸರಳ, ಶೈಲಿಯಲ್ಲಿ ಬರೆಯಲಾಗಿದೆ.

೨. ರಸೋದಾರಣ ಬಾಣ : ಇದು ರೂಪಕ ಸಾಹಿತ್ಯದ ಅದ್ವಿತೀಯ ಕೃತಿಯಾಗಿದೆ. ಇದರಲ್ಲಿ 'ವಿಟ'ನೆಂಬ ವ್ಯಕ್ತಿ ಈ ಕೃತಿಯ ನಾಯಕ. ಇವನು ತನ್ನ ಮತ್ತು ಇತರರ ಅನುಭವಗಳನ್ನು ಪ್ರೇಕ್ಷಕರನ್ನು ಉದ್ದೇಶಿಸಿ ಹೇಳುವ ಕಥಾವಸ್ತು ಹೊಂದಿದೆ. ಇದು ಗದ್ಯ ಮತ್ತು ಪದ್ಯ ಮಿಶ್ರಿತವಾಗಿದ್ದು ಸಮಕಾಲೀನ ಜನಜೀವನದ ಮೇಲೆ ಬೆಳಕು ಚಲ್ಲುತ್ತದೆ.

೩. ಅಭಿನವ ಕರ್ಣಾಮೃತ : ಈ ಕೃತಿ ಎಪ್ಪತ್ತೆರಡು ಶ್ಲೋಕಗಳನ್ನು ಹೊಂದಿದೆ. ಇದರಲ್ಲಿ ಭಗವಾನ್ ಶ್ರೀ ಕೃಷ್ಣನನ್ನು ಸ್ತುತಿಸಲಾಗಿದೆ. ಈ ಕೃತಿಯ ಹಸ್ತಪ್ರತಿಗಳನ್ನು ರಾಜಸ್ಥಾನದ ಬೀಕನೇರ ಗ್ರಂಥಾಲಯುದಲ್ಲಿ ಸಂಗ್ರಹಿಸಲಾಗಿದೆ.

೪. ಕಾವ್ಯಾಲಂಕಾರ ಸಂಗ್ರಹ : ಇದು ಕಾವ್ಯ ಮೀಮಾಂಸೆಗೆ ಸಂಬಂಧಿಸಿದ ವಿಷಯಗಳನ್ನು ಅರಿಯಲು ಒಂದು ಕೈಪಿಡಿಯಂತಿದೆ. ಇವುಗಳ ಜೊತೆಗೆ ಆನಂದ ತಾರತಮ್ಯ ಖಂದನಮ್, ವ್ಯವಹಾರಿಕ ಸತ್ಯತ್ವ ಖಂಡನ ಸಾರ, ಶ್ರೀನಿವಾಸ ಸ್ತುತಿ, ನರಸಿಂಹ ಸ್ಮೃತಿ ಮುಂತಾದ ಕೃತಿಗಳನ್ನು ರಚಿಸಿದರು.

ಶ್ರೀನಿವಾಸಚಾರ್ಯರು ಈ ಕಾಲದ ಮತ್ತೊಬ್ಬ ಪ್ರಮುಖ ಪಂಡಿತರಾಗಿದ್ದರು. ಇವರು ಅಣ್ಣಯ್ಯ ದೀಕ್ಷಿತರ

ಸಹೋದರರಾಗಿದ್ದರು. ಇವರನ್ನು ಚಿನ್ಮಯವಾರಲು ಎಂದು ಕರೆಯುತ್ತಿದ್ದರು. ಇವರು ಸುಮಾರು ೪೪ ಕೃತಿಗಳನ್ನು ರಚಿಸಿದರೆಂದು ತಿಳಿದು ಬಂದಿದೆ. ಅವುಗಳ ವಿವರ ಈ ಕೆಳಗಿನಂತಿದೆ. ೧. ತತ್ವ ಮಾರ್ತಾಂಡ, ೨. ನಯದುಮ್ಯಣಿ, ೩. ಹರಿಗುಣದರ್ಪಣ, ೪. ಭೇದ ದರ್ಪಣ, ೫. ಗುಣ ಮೀಮಾಂಸ, ೬. ಸಿದ್ಧಾಂತ ಚಿಂತಾಮಣಿ, ೭. ತಾರತಮ್ಯ ಖಂಡನ, ೮. ವಿಜಯ ಪರಾಜಯ ಮುಂತಾದ ಗ್ರಂಥಗಳ ಉಲ್ಲೇಖಗಳ ವಿವರ ವೀರರಾಘವೀಯ ಗ್ರಂಥದಲ್ಲಿ ಕಂಡುಬರುತ್ತದೆ. ಬುಚ್ಚಿ ವೆಂಕಟಾಚಾರ್ಯರ 'ವೇದಾಂತ ಕಾರಿವಾಕಲೀ' ಗ್ರಂಥದಲ್ಲಿ ಸರಣಿ ವಿವರಣೆ, ದತ್ತರತ್ನ ದೀಪಿಕಾ, ನೀತಿ ಶತಕಂ, ವಾದಾವಳಿ, ಬ್ರಹ್ಮಾನಂದಯ ಖಂಡನಂ, ಜಯಂತಿ ನಿರ್ಣಯ ಮುಂತಾದ ಕೃತಿಗಳನ್ನು ರಚಿಸಿದ್ದಾರೆಂದು ಉಲ್ಲೇಖಿಸಲಾಗಿದೆ. ಇವರು ತಮ್ಮ ಕೃತಿಗಳಲ್ಲಿ ತನ್ನ ಆಶ್ರಯದಾತನಾದ ಪಾಮನಾಯಕನ ಕುರಿತು ಬರೆದಿದ್ದಾರೆ; ೧೭೬೩ರಲ್ಲಿ ಮರಣ ಹೊಂದಿದರೆಂದು ತಿಳಿದುಬಂದಿದೆ. ಇವರ ಮರಣದ ನಂತರ ನಿರ್ಮಿಸಿದ ವೃಂದಾವನಗಳನ್ನು ಈಗಲೂ ಸುರಪುರದ ಸಿದ್ದಾಪುರ ರಸ್ತೆಯಲ್ಲಿ ಕಾಣಬಹುದಾಗಿದೆ.

ಪಾಮನಾಯಕನ ದರ್ಬಾರಿನಲ್ಲಿ ಇನ್ನೂ ಅನೇಕ ಜನ ಪಂಡಿತರಿದ್ದರು. ಅವರಲ್ಲಿ ತೆಲುಗು ಭಾಷಾ ಪಂಡಿತರಾದ ಪರವಸ್ತು ವೆಂಕಯ್ಯ, ಕನ್ನಡದ ಕವಿ ಉದ್ದಾರ ತಿಪ್ಪಣ್ಣ, ಶೃಂಗಾರ ಶಾಸ್ತ್ರ ಪಂಡಿತ ತೋಟಯ್ಯ, ಚಲುವಯ್ಯ, ಗೋಪಯ್ಯ, ರಾಜವೈದ್ಯ ಅಂಕಣ್ಣ, ವೈದ್ಯ ದೇವಿಕೇರಿ ತಿಮ್ಮಪ್ಪ, ತಿಮ್ಮಭಟ್ಟ, ಸಂಗಾವಿ ತುಕ್ಕಣ್ಣ, ಶನಯ್ಯ ಪ್ರಮುಖರಾಗಿದ್ದರು. ರಾಮಾನುಜ ಎಂಬ ಪಂಡಿತರು ವಾಸಂತಿಕ ಪರಿಣಯ ಎಂಬ ಕೃತಿಯನ್ನು ರಚಿಸಿದರು. ಕವಿ ಶ್ರೇಷ್ಠರಿಂದ ಪುರಾಣಗಳನ್ನು ಹೇಳಿಸುವ ಪದ್ಧತಿ ರೂಢಿಯಲ್ಲಿತ್ತು. ಸುಬ್ಬಾಶಾಸ್ತ್ರಿಗಳು ವಿಷ್ಣು ಪುರಾಣವನ್ನು, ರಾಮಾನುಜಯ್ಯ ಭಾರ್ಗವ ಪುರಾಣವನ್ನು, ಪದ್ದನ ಕವಿ ಮತ್ಸ್ಯ ಪುರಾಣವನ್ನು ಹೇಳುವುದರಲ್ಲಿ ನಿಪುಣರಾಗಿದ್ದರು.

ಪಾಮನಾಯಕನ ನಂತರ ಬಂದ ಇಮ್ಮಡಿ ವೆಂಕಟಪ್ಪ ನಾಯಕನು ತನ್ನ ತಂದೆಯಂತೆ ಸಾಹಿತ್ಯ ಪ್ರಿಯನಾಗಿದ್ದು ಅನೇಕರಿಗೆ ಆಶ್ರಯ ನೀಡಿದ್ದನು. ಈತನ ಕಾಲದ ಪಂಡಿತರಲ್ಲಿ ಕೀರಿಟಿ ವೆಂಕಟಾಚಾರ್ಯರು ಪ್ರಮುಖರಾಗಿದ್ದರು. ಇವರು ಅಣ್ಣಯ್ಯ ದೀಕ್ಷಿತರ ಎರಡನೆಯ ಮಗನಾಗಿದ್ದು ತಂದೆಯ ಪರಂಪರೆಯನ್ನು ಮುಂದುವರೆಸಿದರು. ಇವರು ತೆಲುಗು ಮತ್ತು ಸಂಸ್ಕೃತ ಭಾಷೆಯ ಪ್ರಖ್ಯಾತ ಪಂಡಿತರಾಗಿದ್ದು, ಸುರಪುರದ ರಾಜಗುರುಗಳಾಗಿ ಕಾರ್ಯ ನಿರ್ವಹಿಸಿದರು. ಇವರು ಕೂಡ ಅನೇಕ ಕೃತಿಗಳನ್ನು ರಚಿಸಿದರು. ಅವುಗಳಲ್ಲಿ ಪ್ರಮುಖವಾದವು ಈ ಕೆಳಗಿನಂತಿವೆ: ೧. ಗಜಸೂತ್ರವಾದಾರ್ಥ (ಅಲಂಕಾರ ಗ್ರಂಥ), ೨. ಶೃಂಗಾರ ತರಂಗಿಣಿ (ನಾಟಕ), ೩ ಅಂಚಲಾತ್ಮಜ ಪರಿಣಯಮು (ಇದನ್ನು ಹೈದರಾಬಾದಿನ ಸಾಳ್ವ ಕೃಷ್ಣಮೂರ್ತಿಯವರು ಪ್ರಕಟಿಸಿದ್ದಾರೆ). ೪. ಅಲಂಕಾರ ಕೌಸ್ತುಭಃ ೫. ಕೃಷ್ಣ ಭಾವಶತಕಂ, ೬. ಝುಂಝಾಮಾರುತಂ (ನ್ಯಾಯಶಾಸ್ತ್ರ ಗ್ರಂಥ), ೭. ಯತಿರಾಜದಂಡಕಮ್.

ಇವರು ಕೆಲವು ವರ್ಷಗಳ ನಂತರ ಪುಣೆಯ ಪೇಶ್ವೆಯ ಆಸ್ಥಾನಕ್ಕೆ ಭೇಟಿ ನೀಡಿ ಅಲ್ಲಿನ ಅನೇಕ ಪಂಡಿತರನ್ನು ಸೋಲಿಸಿ ಪೇಶ್ವೆಯಿಂದ "ಕಿರೀಟ" ಪಡೆದರು, ಆದ್ದರಿಂದ ಅವರು ಕಿರೀಟ ವೇಂಕಟಾಚಾರ್ಯರೆಂದೆ ಪ್ರಸಿದ್ಧಿ ಪಡೆದರು. ಇವರು ತರ್ಕಾಲಂಕಾರ, ವಾಚಸ್ಪತಿ ಕವಿತಾ ಧುರಂಧರ ಎಂಬ ಬಿರುದುಗಳನ್ನು ಪಡೆದಿದ್ದರು. ಪರಾಂಕುಶ ರಾಮಾನುಜರು ಇವರ ಸಮಕಾಲೀನ ರಾಗಿದ್ದರು. ಇವರು ಜೋತಿಷ್ಯ ಶಾಸ್ತ್ರದಲ್ಲಿ ಅಪಾರ ಪಾಂಡಿತ್ಯ ಗಳಿಸಿದ್ದರು. ಪುರುಷಕಾರಿ ಕೇಶವಯ್ಯನವರು "ಕವಿ ಪುಂಗವ" ಎಂದು ಬಿರುದಾಂಕಿತರಾಗಿದ್ದರು. ಇವರು 'ದಶರಥಿ ಚರಿತ್ರೆಗೆ' 'ನಿರೋಷ್ಠರ ರಾಮಾಯಣ' ಕೃತಿಗಳನ್ನು ರಚಿಸಿದರು.

ವೆಂಕಟಪ್ಪನಾಯಕನ ನಂತರ ಬಂದ ರಾಜ ಪಿಡ್ಡನಾಯಕನ ಕಾಲದ ಸಾಹಿತ್ಯಿಕ ಚಟುವಟಿಕೆಗಳ ಕುರಿತು ಹೆಚ್ಚಿನ ಮಾಹಿತಿ ದೊರೆತಿಲ್ಲ. ಈತನ ನಂತರ ಬಂದ ದೇವೇಂದ್ರ ವೆಂಕಟಪ್ಪನಾಯಕನು ಸ್ವತಃ ಉದ್ದಾಮ ಪಂಡಿತನಾಗಿದ್ದನು. ಈತನ ರಾಣಿ ರಂಗಮ್ಮಳು ಒಳ್ಳೆಯ ಕವಯಿತ್ರಿಯಾಗಿದ್ದಳು. ಸುರಪುರ ಸಂಸ್ಥಾನ ಇವರ ಪ್ರೋತ್ಸಾಹದಿಂದಾಗಿ ಅನೇಕ ವಿದ್ವಜ್ಜನರ, ಪಂಡಿತರ, ಕವಿಗಳ ಆಶ್ರಯ ತಾಣ ವಾಗಿತ್ತು.

ಸುರಪುರ ಸಂಸ್ಥಾನದ ಪಂಡಿತರನ್ನು ಪರೀಕ್ಷಿಸುವ ಉದ್ದೇಶದಿಂದ ಹರಪನಹಳ್ಳಿಯ ಅರಸ ಅನೇಕ ಪಂಡಿತರನ್ನು ವಿವಿಧ ಸ್ಥಳಗಳಿಂದ ಕರೆಯಿಸಿಕೊಂಡು, ತನ್ನ ಆಸ್ಥಾನ ಪಂಡಿತ ರೊಂದಿಗೆ ಸುರಪುರಕ್ಕೆ ಬರುವುದಾಗಿ ತಿಳಿಸಿದನು. ಇದನ್ನು ಒಪ್ಪಿದ ಅರಸ ವೆಂಕಟಪ್ಪನು ಸುರಪುರ ಸಮೀಪದ ಸಿದ್ದನ ತೋಟದಲ್ಲಿ ಸ್ಪರ್ಧೆಯ ಸಲುವಾಗಿ ಎಲ್ಲಾ ರೀತಿಯ ತಯಾರಿಗಳನ್ನು ಮಾಡಿದನು. ಸ್ಪರ್ಧೆ ಆರಂಭವಾಯಿತು. ಇದರಲ್ಲಿ ಗಾಯಕರು, ವೀಣೆ ನುಡಿಸುವವರು, ಪೀಟಿಲು ವಾದಕರು, ಕವಿಗಳು, ಚಿತ್ರಕಾರರು, ಶಿಲ್ಪಿಗಳು, ಜ್ಯೋತಿಷಿಗಳು, ವೇದಾಂತ ಪಂಡಿತರು, ಹಾಸ್ಯಗಾರರು ಮುಂತಾದವರ ಮಧ್ಯ ತೀವ್ರ ಸ್ಪರ್ಧೆ ನಡೆದು ಅಂತಿಮವಾಗಿ ಸುರಪುರದವರು ಸ್ಪರ್ಧೆಗಳಲ್ಲಿ ಜಯ ಸಾಧಿಸಿದರು. ಈ ಕಾರ್ಯಕ್ಕಾಗಿ ವೆಂಕಟಪ್ಪ ನಾಯಕನು ಮೂರು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿದನು.

ಲೋಕಯ್ಯನವರ ಕೃತಿಯಲ್ಲಿ ಈ ಕಾರ್ಯಕ್ರಮದ ಉಲ್ಲೇಖ ಕಂಡುಬರುತ್ತದೆ:

> **ಬೆಳೆಸಿದನು ಕವಿಗಳನ್ನೂ ಸುರಪುರದೊಳಗೆ,**
> **ವರಕವಿಗಳು ನುಸಿತಲಿಕೆ,**
> **ಲಲಿತ ಪಂಡಿತ ಗಾಯಕರ ದೈವಜ್ಞ, ವೈದ್ಯರನೆ,**
> **ವಿಲ್ಪಸಿತ ಸುಬೆದಾರರನ ನಿ**
> **ರ್ಮಲ ರಸಜ್ಞರ ಕಾರ್ಯ ರಚನಾರನಾ**
> **ಸಲೆ ಬಟರ ಚಿತ್ರಗಾರರ ಅತಿಧನಿಕರನ ಮಾಡಿ**
> **ಗಗನ ಸುರಪುರಕನ್ನಲೇಸಿ**
> **ಜಗದ ಸುರಪುರ ಎಂದ ಸರ್ವರು,**
> **ಅಗಣಿತದಿ ದೇಶ ದೇಶಕೆ ಹೆಸರು ಪಡೆದಾನು,** ಎಂದಿದೆ.

ಈತನ ನಂತರ ಬಂದ ಕೃಷ್ಣಪ್ಪ ನಾಯಕನು ಸಾಹಿತ್ಯಕ್ಕೆ ಪ್ರೋತ್ಸಾಹ ಮುಂದುವರೆಸಿದನು. ಹಯಗ್ರೀವಾಚಾರ್ಯ ಪಂಡಿತರು 'ಹವಗ್ರೀವ ಚಂದ್ರಿಕ' ಎಂಬ ವ್ಯಾಕರಣ ಕೃತಿಯನ್ನು ರಚಿಸಿದರು. ಅಷ್ಟಾವಧಾನಿ ವೆಂಕಯ್ಯಶಾಸ್ತ್ರಿಗಳು ಅಷ್ಟಾವಧಾನಿ, ಶತಾವಧಾನಿ ವಿದ್ಯೆಯಲ್ಲಿ ನಿಪುಣರಾಗಿದ್ದರು. ಇವರು "ಯುಧಿಷ್ಠರಾಶ್ವಮೇಧ" ಕೃತಿಯನ್ನು ರಚಿಸಿದರು. ನರಸಿಂಹ ಶಾಸ್ತ್ರಿಯವರು "ಆರ್ಯ ರಾಮಾಯಣ", "ಪರಮೇಶ್ವರ ದೀಪಿಕಾ", "ದ್ವಾದಶಿಕಂ", ಮುಂತಾದ ಕೃತಿಗಳನ್ನು ರಚಿಸಿದರು. ಪುರುಷ ಕೇಶವಯ್ಯನವರು "ದಶರಥನಂದ ಚರಿತೆ" ಮತ್ತು 'ವೆಂಕಟೇಶ ಮಹಾತ್ಮೆ' ಕೃತಿಗಳನ್ನು ಬರೆದಿದ್ದಾರೆ.

ಹೆಬ್ಬಾಳ ರಾಮಶಾಸ್ತ್ರಿಯವರು ಜೋತಿಷ್ಯ ಶಾಸ್ತ್ರದಲ್ಲಿ ಅದ್ವಿತೀಯರಾಗಿದ್ದರು. ಇವರು ಹೇಳಿದ ಕೃಷ್ಣಪ್ಪನಾಯಕನ ಮಗ ವೆಂಕಟಪ್ಪನಾಯಕನ ಜಾತಕದ ಭವಿಷ್ಯ ನಿಜವಾಗಿತ್ತೆಂದು ಮೇಡೋಸ ಟೇಲರ ತಿಳಿಸಿದ್ದಾನೆ. ಇವರ ಮನೆತನದವರೂ ಇಂದಿಗೂ "ಸುರಪುರ ಪಂಚಾಂಗ"ವನ್ನು ಹೊರಡಿಸುತ್ತಾರೆ. ಕೊಂಡಾಪುರದ ವರಾದಾಚಾರ್ಯರು, ವಿಜಾಪುರದ ರಂಗಯ್ಯ, ಕನ್ನಡ ಪಂಡಿತರಾಗಿದ್ದರು. ಆನಂದಾಸ ಎಂಬ ಕೀರ್ತನ ಕಾರರೂ ಮೈಸೂರು ರಾಜ್ಯದಲ್ಲಿಯೂ ಮನ್ನಣೆ ಹೊಂದಿದ್ದರು. ಕಂಠವೀಣೆ ಶೀನಯ್ಯ ಕರ್ನಾಟಕ ಸಂಗೀತದ ಮಹಾನ್ ಕಲಾವಿದರಾಗಿದ್ದರು.

ಕೃಷ್ಣಪ್ಪನಾಯಕನು ಸಿದ್ದನ ತೋಟದಲ್ಲಿ "ಅನಂತಶಯನ ಯಾಗವನ್ನು" ಮಾಡಿಸಿದನು. ಇದರ ಪ್ರಯುಕ್ತ ಗುಂಟೂರು, ನೆಲ್ಲೂರು, ಪಂಡರಾಪುರ ಮುಂತಾದ ಸ್ಥಳಗಳಿಂದ ವಿದ್ವಾಂಸರನ್ನು ಕರೆಯಿಸಿದನು. ಈ ಯಾಗ ಪೂರ್ಣಗೊಳಿಸಿದ ನಂತರ ಬ್ರಾಹ್ಮಣರಿಗಾಗಿ ರಂಗಮ್ಮಪೇಟೆಯಲ್ಲಿ ಒಂದು ಅಗ್ರಹಾರ ನಿರ್ಮಿಸಿದನು. ೪೦ ಬ್ರಾಹ್ಮಣ ಕುಟುಂಬಗಳು ನೆಲೆಸುವಂತೆ ಒಂದು ಮನೆ, ಮತ್ತು ೪೦ ಭಿಘೆ ಜಮೀನನ್ನು ಇನಾಮಾಗಿ ನೀಡಿದನು. ನಾಲ್ಮಡಿ ವೆಂಕಟಪ್ಪನವರ ಕಾಲದ ರೆಸಿಡೆಂಟನಾಗಿದ್ದ ಮೆಡೋಸ ಟೇಲರನು "ದಿ ಸ್ಟೋರಿ ಆಫ್ ಮೈ ಲೈಫ್" ಕೃತಿಯನ್ನು ರಚಿಸಿದನು. ಮೇಲ್ಕಂಡ ಕೃತಿಗಳ ಜೊತೆಗೆ ಸ್ಥಳೀಯವಾದ ಲಾವಣಿ ಸಾಹಿತ್ಯದ ಸೃಷ್ಟಿ ಕೂಡ ಆಯಿತು. ಅದಕ್ಕೆ ಮೇಡೋಸ ಟೇಲರನ ಕುರಿತ ಒಂದು ಲಾವಣಿ.

> **"ಏನು ಶಿಸ್ತಿತ್ತೊ ಸುರಪುರ–ಎಲ್ಲೆಲ್ಲಿ ಇಲ್ಲದಬಾರ**
> **ಕೇಮಲಸಾಹೇಬ ಚಾತುರ ! ಮಾಡಿದ ಪಿತೂರಿ"**

ಹೀಗೆ ಸುರಪುರ ಸಂಸ್ಥಾನ ಪ್ರಾದೇಶಿಕತೆಯಲ್ಲಿ ಚಿಕ್ಕದಾಗಿದ್ದರು, ಸಮಕಾಲೀನ ಬಲಿಷ್ಠ ರಾಜವಂಶಗಳ ಮಧ್ಯ ಬಲಿಷ್ಠವಾಗಿ ನಿಂತು, ಇಲ್ಲಿನ ಸಾಹಿತ್ಯ, ಶಿಕ್ಷಣ, ಕಲೆ, ವಾಸ್ತುಶಿಲ್ಪಕ್ಕೆ ಇವರು ನೀಡಿದ ಕೊಡುಗೆ ಮಹತ್ವದಾಗಿದೆ.

## ಆಧಾರಸೂಚಿ


೧. ತಿ.ತಾ. ಶರ್ಮ : **ಸುರಪುರದ ಶೂರ ನಾಯಕರು.**

೨. ದೇಸಾಯಿ ಪಾಂಡುರಂಗರಾಯರು, **ಮದಗಜ ಮಲ್ಲ.**

೩. ಕಪಟರಾಳ ಕೃಷ್ಣರಾಯರು, **ಸುರಪುರ ಸಂಸ್ಥಾನದ ಇತಿಹಾಸ.**

೪. ಶ್ರೀಕೃಷ್ಣಮಾಚಾರ್ಯ, **ಮರೆಯಲಾಗದ ಸುರಪುರ ರಾಜರ ಚರಿತ್ರೆ.**

೫. ಕೇಶವಯ್ಯ : **ದಶರಥಿ ಚರಿತ್ರೆ.**

೬. ಭಾಸ್ಕರರಾವ್ ಮುಡಬೊಳ, **ಮರೆತು ಹೋದ ಸುರಪುರದ ಇತಿಹಾಸ.**

೭. **ಸಗರನಾಡ ದರ್ಶನ** : ಮಹಾಕವಿ ಲಕ್ಷ್ಮೀಶ ವಾಚನ ಸಂಘ ಸುರಪುರ.

೮. ಪುರುಷಕಾರಿ ಲೋಕಯ್ಯ : **ಸುರಪುರ ರಾಜರುಗಳ ಚರಿತ್ರೆ** (ಗೋಸಲ ವಂಶ).

೯. *Gulbarga District Gazetteer*, Government of Karnataka (Pages 65-70).

೧೦. Medos Tylor : *The Story of my life.*

ವಸುಂಧರದೇಸಾಯಿ ಮಹಾಪುರುಷ*

# ವಿರೂಪಾಕ್ಷ ವಸಂತೋತ್ಸವ ಚಂಪೂ ಗ್ರಂಥಕರ್ತೃ ಶ್ರೀ ಮಹಾದೇವಪ್ಪಯ್ಯ ಮಹಾಪುರುಷರು

ಮೂಲ ಸಂಸ್ಕೃತದಲ್ಲಿರುವ ಈ ಗ್ರಂಥವನ್ನು ಪ್ರೊ. ಕೆ.ಎಸ್. ಕಣ್ಣನ್ ಅವರು ಕನ್ನಡಕ್ಕೆ ಅನುವಾದಿಸಿ ಸುಂದರವಾಗಿ ವಿಶ್ಲೇಷಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿದೆ. ರಚನಕಾರನ ಹೆಸರು ನಿಖರವಾಗಿ ತಿಳಿದುಬಂದಿಲ್ಲವಾದ್ದರಿಂದ 'ಅಹೋಬಲ' ಎಂದು ಊಹೆ ಮಾಡಿದ್ದಾರೆ.

ಈ ಕೃತಿಯ ಕಾಲ, ಉಲ್ಲೇಖವಾದ ಸ್ಥಳಗಳು ಮತ್ತು ನಿಜವಾದ ಕರ್ತೃ ಯಾರು ಎಂಬುದರ ಕುರಿತು ಈಗಾಗಲೇ ಹಲವು ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ಪ್ರಬಂಧಗಳು ಮಂಡನೆಯಾಗಿವೆ. ನನ್ನ "ಶ್ರೀ ಗುರು ಬಿಷ್ಟಪ್ಪಯ್ಯ ಮತ್ತು ವಿಜಯ ನಗರೋತ್ತರ" ಎಂಬ ಸಂಶೋಧನೆಯಲ್ಲಿ ಈ ಗ್ರಂಥದ ಬಗ್ಗೆ ನಿಖರವಾದ ಮಾಹಿತಿ ಸಿಕ್ಕಿದೆ.

"ಮಹಾಪುರುಷ ಸಂಸ್ಥಾನ ರಂಗಾಪುರ" ಕುಟುಂಬದ ಅಂದರೆ ಬಿಷ್ಟಪ್ಪಯ್ಯ ಮತ್ತು ಅವರ ಮೊಮ್ಮಗ ಮಹಾದೇವಪ್ಪಯ್ಯ ಅವರ ಬದುಕು ಸಾಧನೆಗಳ ಬಗ್ಗೆ ಸ್ಪಷ್ಟ ಮಾಹಿತಿ ಇರುವ ಯಾರೇ ಆದರೂ ಈ ಗ್ರಂಥವನ್ನು ಓದತೊಡಗುತ್ತಿದ್ದಂತೆಯೇ ಇದನ್ನು ರಚಿಸಿದ್ದು ಸ್ವತಃ ಮಹಾದೇವಪ್ಪಯ್ಯರೇ ಎಂದು ಸ್ಪಷ್ಟವಾಗುತ್ತದೆ. ಗ್ರಂಥದ ಮುನ್ನುಡಿಯಲ್ಲಿ ಡಾ. ಎಚ್.ಜಿ. ಲಕ್ಕಪ್ಪಗೌಡರು 'ಹಂಪಿಯವರ ಮತ್ತು ಸುತ್ತಲ ವಾತಾವರಣದ ಭಿನ್ನ ಭಿನ್ನ ಚಿತ್ರಗಳ ಕೌದಿಯನ್ನು ಹೊಲೆದಂತೆ ಈ ಕೃತಿಯ ಬಂಧವಿದೆ. ಇಲ್ಲಿ ಐಕ್ಯವನ್ನು ಮತ್ತು ಸಾವಯವ ಸಂಬಂಧವನ್ನು ಹುಡುಕುವುದೇ ಸರಿಯಲ್ಲ. ಕವಿ, ಮನಸ್ಸು ಬಂದಂತೆ, ತನಗೆ ಹೊಳೆದ ಎಲ್ಲ ವಿಷಯಗಳನ್ನೂ ತುರುಕುತ್ತ ಹೋಗುತ್ತಾನೆ. (ಪುಟ vii) ಎಂದು ಹೇಳಿದಂತೆ ಕವಿ ತಾನು ಕಂಡ ಆಯೋಜಿಸಿದ ಉತ್ಸವ ಮತ್ತು ಅನುಭವಿಸಿದ ಘಟನೆಗಳನ್ನೆಲ್ಲ ಈ ಕೃತಿಯಲ್ಲಿ ದಾಖಲಿಸಿದ್ದಾನೆ.

ಕ್ರಿ.ಶ. ೧೭೦೧ರಲ್ಲಿ ಜನಿಸಿದ ಬಿಷ್ಟಪ್ಪಯ್ಯ ಅವರ ಪುತ್ರ ಶಿವಪ್ಪಯ್ಯರ ಪುತ್ರ ಮಹಾದೇವಪ್ಪಯ್ಯ ಅವರು ಕ್ರಿ.ಶ. ೧೭೧೭ರಲ್ಲಿ ಹಂಪಿ ಗೋಪುರಕ್ಕೆ ಒಂದು ಲಕ್ಷ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಏರ್ಪಡಿಸುವ ಮೂಲಕ ಅತ್ಯಂತ ವಿಜೃಂಭಣೆಯಿಂದ ಕಲಶ ಸಮಾರೋಹ, ನಂತರ ಕಾಲಕಾಲಕ್ಕೆ ವಿರೂಪಾಕ್ಷೋತ್ಸವಗಳನ್ನೂ ಆಯೋಜಿಸಿದ್ದರು.[೧] ಅವರೂ ಕೂಡ ಬಿಷ್ಟಪ್ಪಯ್ಯ ಅವರು ಸಿದ್ಧಿಸಿಕೊಂಡಿದ್ದ ಆಯುರ್ವೇದ, ರಸಶಾಸ್ತ್ರ, ಜ್ಯೋತಿಷ್ಯ, ಖಗೋಲಶಾಸ್ತ್ರ, ಯೋಗ, ಆಧ್ಯಾತ್ಮ ಮುಂತಾದ ಎಲ್ಲ ವಿದ್ಯೆಗಳಲ್ಲೂ ಪರಿಣಿತರಾದ ಸಂಸ್ಕೃತ ವಿದ್ವಾಂಸರಾಗಿದ್ದರು.[೨] ಡಂಬಳದ ಸಂಸ್ಥಾನಿಕರ ಮಗಳನ್ನು ಮದುವೆಯಾಗಿದ್ದ ಮಹಾದೇವಪ್ಪಯ್ಯರಿಗೆ ಬೇಗನೇ ಮಕ್ಕಳಾಗಲಿಲ್ಲ. ಹಾಗಾಗಿ ಒಂದು ಮಗುವನ್ನು ದತ್ತು ಪಡೆದರು. ನಂತರ ಮಗ ಹುಟ್ಟಿದ. ಆದರೆ ದತ್ತಕ ರದ್ದುಗೊಳಿಸದೇ ಆತನಿಗೆ ತಮ್ಮ ಇನಾಂ ಗ್ರಾಮವಾದ ಕೊಪ್ಪಳ ಜಿಲ್ಲೆಯ ತಾಮ್ರಗುಂಡಿ ಎಂಬ ಹಳ್ಳಿಯನ್ನು ಬಿಟ್ಟುಕೊಟ್ಟು ಆತನಿಗೂ 'ಮಹಾಪುರುಷ' ಉಪನಾಮ ಕೊಟ್ಟಿದ್ದರು.[೩]

ಶ್ರೀ ಗುರು ಬಿಷ್ಟೇಶರ ಸಮಾಜೋದ್ಧಾರ ಮತ್ತು ಮಹಾದೇವಪ್ಪಯ್ಯರ ಕಾರ್ಯಗಳಿಗೆ ಪ್ರತಿಯಾಗಿ ಶೃಂಗೇರಿ ಪೀಠದಿಂದ ಕ್ರಿ.ಶ. ೧೭೩೦ರಲ್ಲಿ ಮಹಾದೇವಪ್ಪಯ್ಯರಿಗೆ ಅರವತ್ತು ಬಿರುದು ಬಾವಲಿ ನೀಡಿ ಸನ್ಮಾನ ಸಂದಿದೆ.[೪]

ಅದೇ ವರ್ಷ ಮೈಸೂರು ಅರಸರು ಮಹಾದೇವಪ್ಪಯ್ಯರಿಗೆ ವಿವಿಧ ವಿಷಯಗಳಲ್ಲಿ ವಿಶೇಷವಾಗಿ ಜ್ಯೋತಿಷ್ಯ ಶಾಸ್ತ್ರದಲ್ಲಿ ಇದ್ದ ಪಾಂಡಿತ್ಯವನ್ನು ಪರೀಕ್ಷಿಸಿ ಸನ್ಮಾನ ಮಾಡಿದ್ದಾರೆ.[೫]

ಮಹಾದೇವಪ್ಪಯ್ಯರು ಹಂಪಿಯಲ್ಲಿ ಉತ್ಸವಗಳನ್ನು ನಡೆಸುವ ಕಾಲಕ್ಕೆ ಶ್ರೀ ಬಿಷ್ಟೇಶಕೃತ ರಸಲಿಂಗವನ್ನೂ ಹಂಪಿಗೆ ಒಯ್ಯುತ್ತಿದ್ದರು. ಪಂಪಾಪತಿಯ ಜೊತೆಗೆ ಆ ರಸಲಿಂಗಕ್ಕೂ ಎಲ್ಲ ರೀತಿಯ ಪೂಜೆ ಪುನಸ್ಕಾರಗಳು ಜರಗುತ್ತಿದ್ದವು. ಆಗ ಮಹಾದೇವಪ್ಪಯ್ಯರಿಗೂ ರಾಜರಿಗೆ ಸಲ್ಲಿಸುತ್ತಿದ್ದ ವಿಶೇಷ ಗೌರವಾದರಗಳು ಸಲ್ಲುತ್ತಿದ್ದವು. ಆ ಸಂದರ್ಭದಲ್ಲಿ ಮಹಾದೇವಪ್ಪಯ್ಯರು ತಮ್ಮ ಅಜ್ಜ ನಿರ್ಮಿಸಿಕೊಟ್ಟ ವಿದ್ಯಾರಣ್ಯ ಶ್ರೀಗಳು ಧರಿಸುವ ಚಿನ್ನದ ಕಿರೀಟ ಧರಿಸುತ್ತಿದ್ದರು.[೬]

ಇಂತಹ ಎಲ್ಲ ಹಿನ್ನೆಲೆ ಮತ್ತು ಮಹಾದೇವಪ್ಪಯ್ಯರು ವಾಸಿಸಿದ್ದ ಬಿದಿರಹಳ್ಳಿ, ರಂಗಾಪುರ ಗ್ರಾಮಗಳ ಕುರಿತು ಮಾಹಿತಿ ಇರುವ ಯಾರೇ ಆದರೂ 'ವಿರೂಪಾಕ್ಷ ವಸಂತೋತ್ಸವ ಚಂಪೂ' ಗ್ರಂಥವನ್ನು ಓದತೊಡಗುತ್ತಿದ್ದಂತೆಯೇ ಅದನ್ನು ರಚಿಸಿದ್ದು ಸ್ವತಃ ಮಹಾದೇವಪ್ಪಯ್ಯರೇ

* # ೩೬೫, ಶ್ರೀನಿವಾಸನಗರ, ೨ನೇ ಬ್ಲಾಕ್, ೪ನೇ ಮುಖ್ಯರಸ್ತೆ, ೩ನೇ ಹಂತ, ಬನಶಂಕರಿ, ಬೆಂಗಳೂರು.

ಎಂದು ಥಟ್ಟನೇ ಹೊಳೆಯುತ್ತದೆ. ಕವಿ ಉದ್ದೇಶ ಪೂರ್ವಕವಾಗಿ ಕೊಟ್ಟ ಕೆಲ ಮಹತ್ವದ ಸುಳಿವುಗಳೊಡನೆ ಆತ ಗ್ರಂಥದಲ್ಲಿ ಸೇರಿಸಿದ ಹಲವು ವಾಸ್ತವಿಕ ಅಂಶಗಳೂ ನಮಗೆ ಸ್ಪಷ್ಟ ಸುಳಿವುಗಳಾಗಿ ಪರಿಣಮಿಸಿವೆ. ಹೆಜ್ಜೆ ಹೆಜ್ಜೆಗೂ ಪುರಾವೆಗಳು ಸಿಗುತ್ತವೆ. ಅವುಗಳಲ್ಲಿ ಮಹತ್ವವಾದವುಗಳೆಂದರೆ :

* *ಕವಿ 'ವಿಷ್ವಪೇಶ ಗೋಪುರ'ದ ಬಗ್ಗೆ ಒಮ್ಮೊಮ್ಮೆ ಎಳೆದು ತಂದಂತೆಯೂ ತೋರುವಂತೆ ಪದೇ ಪದೇ ಉಲ್ಲೇಖ ಮಾಡಿದ್ದಾನೆ.*

* *ಈ ಗ್ರಂಥದಲ್ಲಿ ವಿದ್ವಾಂಸರೇ ಹೇಳಿದಂತೆ ವಿಷ್ವಪೇಶ ಗೋಪುರ ಎಂದರೆ ಇಂದಿನ ಬಿಷ್ಟಪ್ಪಯ್ಯ ಗೋಪುರ (ಪುಟ ೧೦) ಮತ್ತು 'ಈ ಗ್ರಂಥದಲ್ಲಿ ಪೂರ್ವ ಮಹಾ ಗೋಪುರಕ್ಕೆ ಐತಿಹಾಸಿಕ ಮಹತ್ವವಿದೆ' (ಪುಟ ೫೧೫) ಎಂದು ಪ್ರೊ. ಕೆ.ಎಸ್. ಕಣ್ಣನ್ ಹೇಳಿದ್ದಾರೆ.*[೭]

* *'ಮಹಾಗೋಪುರದ ಶಿಖರ ಸ್ಥಳಗಳಲ್ಲಿ ಪ್ರವರ್ತನೆ ಗೊಂಡಂತಹ ವಿರೂಪಾಕ್ಷದೇವ ಮಹೋತ್ಸವ' (ಪುಟ ೧೨೮) ಈ ವಾಕ್ಯದಿಂದ ಅದು ಕಲಶ ಸಮಾರೋಹ, ಶಿಖರ ಸ್ಥಳದಲ್ಲಿ ನಡೆಯುತ್ತಿದೆ ಎಂದು ಸ್ಪಷ್ಟವಾಗುತ್ತದೆ. ಗೋಪುರದಲ್ಲಿ ಹೊಳೆಯುವ ಬಂಗಾರದ ಶೃಂಗಗಳ ಉಲ್ಲೇಖ ಮತ್ತೆ ಮತ್ತೆ ಬಂದಿದೆ.*

* *ಸರ್ವ ದ್ವಿಜ ಸಮಾರಾಧನೆಯನ್ನು ಪಂಚಾನನೋತ್ಸವ ದಿಂದ.....ಸತ್ಪುರುಷ ಶ್ರೇಷ್ಠನಾದ ಶ್ರೀ ವಿಷ್ವಪೇಶ ಗುರು ಶಿಷ್ಯನ ಅನುಮತಿಯಿಂದ ಪ್ರಾಚೀನ (ಹಳೆಯ) ಮಹಾಗೋಪುರದ ಎರಡನೆಯ ಒಳಭಾಗವನ್ನು ಹತ್ತಿತು ಪುಟ ೭೬, ಶ್ಲೋಕ ೫೫.*

*ಇದು ಅತ್ಯಂತ ಮಹತ್ವವಾದ ಶ್ಲೋಕವಾಗಿದೆ. ಜನತೆ, ಶ್ರೀ ಗುರು ಬಿಷ್ಟೇಶರ ಶಿಷ್ಯನ ಅನುಮತಿ ಪಡೆದರು ಎಂದರೆ ಆ ಸಮಾರಂಭದ ಯಜಮಾನರು ಗುರು ಬಿಷ್ಟೇಶರ ಶಿಷ್ಯರು ಎಂದಾಯಿತು.*[೮]

*ಪಂಚ ಕಲಶಗಳನ್ನು ಇರಿಸಿದ್ದರಿಂದ 'ಪಂಚಾನನೋತ್ಸವ' ಎಂದು ಕರೆದಿದ್ದಾರೆ. ಇನ್ನು 'ಜನತೆ ಹಳೆಯ ಗೋಪುರವನ್ನು ಹತ್ತಿದರು' ಎಂಬಲ್ಲಿನ 'ಹಳೆಯ ಗೋಪುರ' ಎಂಬ ಅಂಶದ ಬಗ್ಗೆ ಕೆಲ ವಿದ್ವಾಂಸರು ಅನುಮಾನ ವ್ಯಕ್ತಪಡಿಸುತ್ತಾರೆ. ಮೂಲ ಸಂಸ್ಕೃತದಲ್ಲಿ 'ಪ್ರಾಚೀನ' ಎಂಬುದನ್ನು 'ಹಳೆಯ' ಎಂದು ಭಾಷಾಂತರಿಸಿದ್ದಾರೆ. ಈ ಗೋಪುರವಂತೂ ಹಳೆಯದಲ್ಲ. (ನಿರ್ಮಾಣ ಕ್ರಿ.ಶ. ೧೬೬೦–೯೪) ಮುಂದೆ ಮತ್ತೆ ಮತ್ತೆ 'ಪ್ರಾಚೀನ ಗೋಪುರ'ದ ಭಾಷಾಂತರವನ್ನು ಲೇಖಕರು 'ಪ್ರಾಚಿ' ಎಂದರೆ ಪೂರ್ವ, ಪ್ರಾಚೀನ ಗೋಪುರ ಎಂದರೆ ಹಳೆಯ ಗೋಪುರ ಎಂಬುದರ ಬದಲು ಪೂರ್ವದ ಗೋಪುರ ಎಂದರೆ ಸಂಮಂಜಸವಾಗುತ್ತದೆ ಎಂದಿದ್ದಾರೆ. (ಪುಟ ೧೫೧ರಲ್ಲಿ ೫೧೩ನೆಯ ಶ್ಲೋಕ) ಅದರಂತೆ ೫೫ನೆಯ ಶ್ಲೋಕದ ಭಾಷಾಂತರವನ್ನೂ ಪೂರ್ವದ ಗೋಪುರದ ಎರಡನೆಯ ಒಳಭಾಗ ಎಂದು ಮಾಡಿದರೆ ಸೂಕ್ತವಾಗುತ್ತದೆ. ಅನುಮಾನ ಪರಿಹಾರವಾಗುತ್ತದೆ.*

* *ಇನ್ನೊಂದು ಮಹತ್ವದ ಶ್ಲೋಕ ೧೯೨ರಲ್ಲಿ 'ವಿಷ್ವಪೇಶ ಪ್ರಶಿಷ್ಯನಾದ ವಿಪ್ರಸದ್ ಬ್ರಹ್ಮಚಾರಿ....ಫಲ ಆರ್ತಿಕಗಳನ್ನು ಶಂಕರನಿಗೆ ಅರ್ಪಿಸಿದನು.*

*ರಂಗಾಪುರ ಸಂಸ್ಥಾನದ ಸ್ಥಾಪಕ ಗುರು ಬಿಷ್ಟೇಶರ ಮಗನ ಮಗನಾದ ಮಹಾದೇವಪ್ಪಯ್ಯರು ಹದಿನಾರು ವರ್ಷದವರಿದ್ದಾಗ ಕಲಶ ಇಡಿಸಿದ್ದು ಆ ಅಂಶವನ್ನೇ 'ವಿಷ್ವಪೇಶರರ ಪ್ರಶಿಷ್ಯ, ಬ್ರಹ್ಮಚಾರಿ' ಎಂದು ತಮ್ಮನ್ನೇ ಉಲ್ಲೇಖಿಸಿಕೊಂಡಿದ್ದಾರೆ.*

* *ಇನ್ನು ಸಮಾರಂಭದಲ್ಲಿ ಉಪಸ್ಥಿತರಿದ್ದ ರಾಜರು ಮತ್ತು ಗ್ರಂಥದಲ್ಲಿ ಉಲ್ಲೇಖವಾದ ಸ್ಥಳಗಳಿಂದ ನಮಗೆ ಸಿಗುವ ಸುಳಿವು, ಪುರಾವೆಗಳೂ ಹೇರಳವಾಗಿವೆ.*

**ಶ್ರೀ ರಾಶಿದೇಶಾಧಿಪತಿ :** ಕವಿ ತಾನು ಶ್ರೀ ರಾಶಿ ದೇಶಾಧಿಪತಿಯ ಆಶ್ರಿತ ಮತ್ತು ಆ ರಾಜ ಲಿಂಗಾಯಿತ ಎಂದು ಹೇಳಿದ್ದಾನೆ.

ಗುರು ಬಿಷ್ಟೇಶರು ನೆಲೆಸಿದ್ದ ರಂಗಾಪುರ ತಾಲ್ಲೂಕು ಹೂವಿನ ಹಡಗಲಿ, ಜಿಲ್ಲೆ ಬಳ್ಳಾರಿ ನಂತರ ಮಹಾದೇವಪ್ಪಯ್ಯ ರಿಗೆ ಇನಾಂ ಆಗಿ ಸಂದಿತು. ರಂಗಾಪುರ ಸಂಸ್ಥಾನಾಧೀಶ್ವರ ರೆಂದೇ ಪ್ರಖ್ಯಾತರಾಗಿದ್ದ ಮಹಾದೇವಪ್ಪಯ್ಯರ ರಂಗಾಪುರ, ಬಿದಿರಹಳ್ಳಿ ಮತ್ತು ವಿಠ್ಠಲಾಪುರ ಗ್ರಾಮಗಳು ಶಿರಹಟ್ಟಿ ಸಂಸ್ಥಾನಕ್ಕೆ ಒಳಪಟ್ಟಿದ್ದವು. ಶಿರಹಟ್ಟಿ ಸಂಸ್ಥಾನಿಕರು ಲಿಂಗಾಯಿತರು ಮತ್ತು ವಿಠ್ಠಲಾಪುರ ಗ್ರಾಮವನ್ನೂ ಸಹಿತ ಅವರೇ ಮಹಾದೇವಪ್ಪಯ್ಯ ರಿಗೆ ಇನಾಂ ನೀಡಿದ್ದಾರೆ.

ಡಂಬಳದ ದೊರೆ ಬರೆದ 'ಶಿವಾಷ್ಟಕ' (ಪುಟ ೨೯) ಮೊದಲು ಗದಗ ನಂತರ ಡಂಬಳ ಕೊನೆಗೆ ಸೊರಟೂರಿನಲ್ಲಿ ನೆಲೆ ನಿಂತಿದ್ದ ಡಂಬಳದ ದೇಸಾಯಿಯವರು ಗುರು ಬಿಷ್ಟೇಶ್ವರ ದೊಡ್ಡ ಭಕ್ತರಾಗಿದ್ದು ರಂಗಾಪುರ ಸಂಸ್ಥಾನಕ್ಕೆ ಪ್ರಮುಖ ಆಧಾರಸ್ತಂಭದಂತೆ ಇದ್ದವರು. ಕವಿಯ ಆಪ್ತ ಸ್ನೇಹಿತನಾದ ಈ ದೊರೆಯಿಂದ ಮಹಾದೇವಪ್ಪಯ್ಯರಿಗೆ ತಾಮ್ರಗುಂಡಿ (ಜಿಲ್ಲೆ ಕೊಪ್ಪಳ) ಇನಾಂ ಆಗಿ ಸಂದಿದೆ. ಮುಂದೆ ಮಹಾದೇವಪ್ಪಯ್ಯ ಡಂಬಳದ ದೊರೆಯ ಮಗಳನ್ನೇ ವಿವಾಹವಾಗಿದ್ದಾರೆ. ಆಪಟೆ ಅನಂತರಾಯರು ಬರೆದ 'ಶ್ರೀ ಬಿಷ್ಟಪ್ಪಯ್ಯನವರು' ಪುಸ್ತಕದಲ್ಲಿ 'ಶಿವಪಾರ್ಯಾಷ್ಟಕ' ಎಂಬ ಸ್ತೋತ್ರವಿದೆ. ಅದೇ ಡಂಬಳದ ದೊರೆ ಬರೆದ ಶಿವಾಷ್ಟಕ ಎಂದು ನನ್ನ ಅಭಿಪ್ರಾಯ.[೯]

**ಭುಜಂಗನಗರಾಧೀಶ :** ಹಾವನೂರಿನ ಹನುಮಂತಗೌಡ ಬಹದ್ದೂರ್ ದೇಸಾಯಿಯವರಿಂದ ಮಹಾದೇವಪ್ಪಯ್ಯರಿಗೆ

‘ಮೇವುಂಡಿ’ (ಜಿಲ್ಲೆ ಹಾವೇರಿ) ಎಂಬ ಗ್ರಾಮ ಇನಾಂ ಆಗಿ ಸಂದಿದೆ. ಅವರ ಕುಲದೈವ ಹಾವನೂರಿಗೆ ಸಮೀಪದಲ್ಲಿರುವ ಮೈಲಾರದ ಮೈಲಾರೇಶ್ವರ. ಆದ್ದರಿಂದ ಮಲ್ಲಾರಗಿರಿ ಎಂದರೆ ದೇವರಗುಡ್ಡ ಅಲ್ಲದೇ ಮೈಲಾರ ಎಂದು ನನ್ನ ಅನಿಸಿಕೆ.

**ಲಕ್ಷ್ಮಣೇಶ್ವರಪುರಿಯ ರಾಜ :** ಲಕ್ಷ್ಮೇಶ್ವರ ಸವಣೂರು ನವಾಬರಿಂದ ಇನಾಂ ಪಡೆದಿದ್ದ ಲಕ್ಷ್ಮೇಶ್ವರವೇ ಶಿರಹಟ್ಟಿ ಸಂಸ್ಥಾನಿಕರ ಮೂಲ ಸ್ಥಳ. ಅದರ ಒಂದು ಕವಲು ನಂತರ ಶಿರಹಟ್ಟಿಯಲ್ಲಿ ನೆಲೆಸಿತು. (ಅವರ ವಂಶಸ್ಥರು ಈಗ ಮುಂಡರಗಿ ತಾಲೂಕಿನ ಹಮ್ಮಿಗೆ ಗ್ರಾಮದಲ್ಲಿದ್ದಾರೆ.)

**ಹರಪುರದ ಒಡೆಯ :** ಹರಪನಹಳ್ಳಿ ನಾಯಕರು ಗುರು ಬಿಷ್ಟೇಶರ ಸ್ವಗ್ರಾಮ ‘ಸೋಗಿ’ ಹರಪನಹಳ್ಳಿ ಸಂಸ್ಥಾನಕ್ಕೆ ಸೇರಿತ್ತು. ಬಿಷ್ಟೇಶರ ಅಧ್ಯಯನ, ರಸಶಾಸ್ತ್ರ ಪ್ರಯೋಗ, ಆಧ್ಯಾತ್ಮ ಸಾಧನೆಗಳಿಗೆ ಸೋಗಿಯಲ್ಲಿ ಅನುಕೂಲವಾಗದೇ ಇದ್ದಾಗ ಈ ನಾಯಕರು ಬಿಷ್ಟೇಶರಿಗೆ ಹಗರಿಬೊಮ್ಮನಹಳ್ಳಿ ತಾಲೂಕಿನ ‘ಹನಸಿ’ ಗ್ರಾಮದಲ್ಲಿ ೮೦ ಎಕರೆ ಭೂಮಿ ನೀಡಿ ಅನುಕೂಲ ಮಾಡಿಕೊಟ್ಟಿದ್ದಾರೆ.[೧೦]

**ವಂಶನಗರೇಶ :** ಬಿದಿರಹಳ್ಳಿ, ರಂಗಾಪುರ, ಬಿದಿರಹಳ್ಳಿ, ವಿಠ್ಠಲಾಪುರ ಗ್ರಾಮಗಳು ಬಿಷ್ಟೇಶರು ನೆಲೆ ನಿಂತ ಹಳ್ಳಿಗಳು. ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಈ ಮೂರು ಹಳ್ಳಿಗಳು ಒಂದೇ ಎಂಬಂತೆ ಹೆಣೆದುಕೊಂಡಿವೆ. ಮಹಾದೇವಪ್ಪಯ್ಯರ ತಾಯಿ ಬಿದಿರಹಳ್ಳಿ ಜೋಯಿಸರ ಮಗಳು. ಗರ್ಭದಲ್ಲಿರುವಾಗಲೇ ತಂದೆ ಸ್ವರ್ಗಸ್ಥರಾಗಿದ್ದರಿಂದ ಮಹಾದೇವಪ್ಪಯ್ಯ ದೊಡ್ಡವರಾಗುವವರೆಗೆ ಬಿದಿರಹಳ್ಳಿಯ ಎಲ್ಲ ಸದ್ಗೃಹಸ್ಥರೇ ರಂಗಾಪುರ ಸಂಸ್ಥಾನವನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಬಂದಿದ್ದರು. ಹೀಗಾಗಿ ಕವಿ ಬಿದಿರಹಳ್ಳಿಯ ಹೆಸರನ್ನು ಸೇರಿಸಿದ್ದಾನೆ. ಆದರೆ ಅಲ್ಲಿ ಯಾರೂ ರಾಜರು ಇರದೇ ಇದ್ದುದರಿಂದ ಉಪಾಯವಾಗಿ ‘ರಾಜವರ್ಣನೆ’ ಕೈಬಿಟ್ಟಿದ್ದಾನೆ.

ಇಷ್ಟಲ್ಲದೇ ಬಳ್ಳಾರಿ ಸಂಸ್ಥಾನಿಕರಿಂದ ‘ಶಿರಗುಪ್ಪಿ’ಯಲ್ಲಿ ೨೨ ಶ್ರೀ ಕೋಟಿ ದೇಸಾಯಿಯವರಿಂದ ಆರೆ ಬಸವನಕೊಪ್ಪ (ಕಲಘಟಗಿ ತಾಲ್ಲೂಕು) ತಡಸ, ಗಿಡದ ಹುಬ್ಬಳ್ಳಿ ದೇಸಾಯಿಯವರಿಂದ ಅಂಬ್ಲಿಕೊಪ್ಪ (ಕಲಘಟಗಿ ತಾಲ್ಲೂಕು) ಗ್ರಾಮಗಳಲ್ಲದೇ ಬಹುತೇಕ ಉತ್ತರ ಕರ್ನಾಟಕದ ಪ್ರತಿಯೊಬ್ಬ ಸಂಸ್ಥಾನಿಕರೂ ರಂಗಾಪುರ ಸಂಸ್ಥಾನಕ್ಕೆ ಗ್ರಾಮಗಳನ್ನೂ ಹೇರಳವಾದ ಭೂಮಿಯನ್ನೂ ದಾನ ಮಾಡಿದ್ದಾರೆ. ಆಯಾ ಗ್ರಾಮಗಳಲ್ಲಿರುವ ಗುಡಿ, ಕೆರೆ, ಬಾವಿಗಳು ಮೌಖಿಕವಾಗಿ ಬಿಷ್ಟಪ್ಪಯ್ಯ ಬಾವಿ, ಗುಡಿ ಎಂದು ಕರೆಯಲ್ಪಡುತ್ತವೆ. ಆ ಎಲ್ಲ ಸಂಸ್ಥಾನಿಕರೂ ಮುಂದೆ ಮಹಾದೇವಪ್ಪಯ್ಯರು ನಡೆಸಿದ ಕಲಶ ಸಮಾರೋಹದಲ್ಲಿ ಉತ್ಸಾಹದಿಂದ ಭಾಗವಹಿಸಿದ್ದಾರೆ ಎಂದು ಈ ಗ್ರಂಥದಿಂದ ತಿಳಿದುಬರುತ್ತದೆ.

ಇನ್ನು ಗ್ರಂಥದಲ್ಲಿ ಉಲ್ಲೇಖವಾದ ಕೆಲ ಸ್ಥಳಗಳಿಂದ ಸಿಗುವ ಸುಳಿವು ಪುರಾವೆಗಳೆಂದರೆ :

**ಪುರಾತನ ಶ್ವೇತಾಶ್ವತ್ಥ :** ಶ್ರೀಗಿರಿ (ಶ್ರೀ ಗುರು ಭಟ್ಟಾರ್ಯ) ‘ಮಹಾಪುರುಷ’ ಈ ಸ್ಥಳ ಪಂಪಾಂಬಿಕೆ ಗುಡಿ ಸಮೀಪದಲ್ಲಿದೆ. ಪುಟ ೪೬, ೪೭, ೬೨, ೬೯.

ಬಿದಿರಹಳ್ಳಿಯಲ್ಲಿ ಗುರು ಬಿಷ್ಟೇಶರು ತುಂಗಭದ್ರಾ ನದೀ ತಟದಲ್ಲಿ ಅಶ್ವತ್ಥನಾರಾಯಣರ ವಿಗ್ರಹ ಸ್ಥಾಪಿಸಿದ್ದಾರೆ. ಅದರ ಎದುರಿನಲ್ಲಿ ವಿಶಾಲವಾದ ಅಶ್ವತ್ಥ ಮರವಿದೆ. ಅದರ ಅಡಿಯಲ್ಲಿ ತಮ್ಮ ಪತ್ನಿ ಗೋಪುರಕ್ಕಾಗಿ ಆತ್ಮಬಲಿ ನೀಡಿದ ಸಂಕೇತವಾಗಿ ಒಂದು ವಿಶಿಷ್ಟ ಸ್ಮಾರಕ ಶಿಲೆಯನ್ನೂ ಪ್ರತಿಷ್ಠಾಪಿಸಿದ್ದಾರೆ. ಅದರ ಸಮೀಪದಲ್ಲಿ ನದಿಯಲ್ಲಿರುವ ದುರ್ಗದಕಲ್ಲು ಎಂಬ ಕಲ್ಲಿನ ಮೇಲೆ ಕುಳಿತೇ ಅವರು ಜಲಸಮಾಧಿ ಹೊಂದಿದ್ದು. ಅಲ್ಲಿ ‘ಉದ್ಭವ’ ಎಂದು ಹೇಳಲಾಗುವ ಶಿವಲಿಂಗವಿದ್ದು ಗುರು ಬಿಷ್ಟೇಶರು ಎಂದೇ ಅರ್ಚಿಸಲ್ಪಡುತ್ತಿದೆ. ಆ ಲಿಂಗದ ಮೇಲೆ ಅಕ್ಕಿಕಾಳು ತೇಲುತ್ತವೆ. ಬಿಲ್ವಪತ್ರೆ ಮುಳುಗುತ್ತವೆ ಎಂದು ಪ್ರತೀತಿ. ಸಮೀಪದಲ್ಲಿ ಗ್ರಾಮದೇವತೆಯ ಗುಡಿ ಇದೆ. ಆಗಷ್ಟೇ ಬಿಷ್ಟಪ್ಪಯ್ಯರ ಅವತಾರ ಮುಗಿದಿದ್ದು ಆ ಸ್ಥಳ ಜಾಗೃತ ಧಾರ್ಮಿಕ ಕೇಂದ್ರವಾಗಿತ್ತು. ಅದನ್ನೇ ಕವಿ ಇಲ್ಲಿ ವರ್ಣಿಸಿದ್ದಾನೆ. ಗುರು ಬಿಷ್ಟಪಾರ್ಯ ಎಂದು ತೀರವಾಗಿ ಹೇಳುವ ಬದಲು ಗುರು ಭಟ್ಟಾರ್ಯ ಮಹಾಪುರುಷ ಎಂದು ಹೇಳಿದ್ದಾನೆ.

* *ಮಹಾದೇವಪ್ಪಯ್ಯರ ತಾಯಿಯ ಹೆಸರು ತ್ರಿವೇಣ್ಯಂಬಾ. ‘ಅದುವೇ ಅಂಬಾತ್ರಯ ಮಹಿಮಾತಿಶಯ ವರ್ಣನೆ’ ಯಾಗಿದೆ.*

* ***ವಿಶಿಷ್ಟ ಶಿವಕ್ಷೇತ್ರ :*** *ರಸಲಿಂಗಗಳಿಗೆ ಪೌರಾಣಿಕವಾಗಿ ಬಹಳ ಮಹತ್ವವಿದೆ. ಕಾಶ್ಯಾದಿ ಸರ್ವಲಿಂಗೇಭ್ಯೋ ರಸಲಿಂಗಾರ್ಚನ ಪರಃ । ಎಂದು ರಸಗ್ರಂಥದಲ್ಲೂ ಪುರಾಣದಲ್ಲೂ ಹೇಳಿದ್ದಾರೆ. ಅದರಲ್ಲೂ ಗುರು ಬಿಷ್ಟೇಶರು ಮಾಡಿದ ಈ ರಸಲಿಂಗ, ಎಲ್ಲ ರಸಲಿಂಗ ಗಳಿಗಿಂತಲೂ ದೊಡ್ಡದು ಎಂಬ ಹೆಗ್ಗಳಿಕೆ ಹೊಂದಿದೆ. ಅದುವೇ ಈ ಗ್ರಂಥದಲ್ಲಿ ಉಲ್ಲೇಖವಾದ ಪುಣ್ಯಪ್ರದವಾದ ಶಿವಕ್ಷೇತ್ರ ಅಂದರೆ ರಂಗಾಪುರ.*

**ಬಿಲಾಂತಃ ಸ್ಥಿತ ರಂಗನಾಥ :** ಹಂಪಿಯ ಅನಂತಶಯನ ಹೊಳಲಿನಲ್ಲಿದೆ. ಮೂಲ ಲಕ್ಷ್ಮಿ, ಬ್ರಹ್ಮರ ವಿಗ್ರಹಗಳಿಗೆ ತಕ್ಕನಾದ ಗರ್ಭಗೃಹದಲ್ಲಿ ಆ ವಿಗ್ರಹಗಳು ಭಗ್ನವಾಗಿದ್ದರಿಂದ ಅವನ್ನು ತೆಗೆದು ಈ ಅನಂತಶಯನನನ್ನು ಬಿಷ್ಟಪ್ಪಯ್ಯರು ಸ್ಥಾಪಿಸಿದ್ದಾರೆಂದು ಪ್ರತೀತಿ. ಆ ಭಿನ್ನ ವಿಗ್ರಹಗಳು ಮೂಲೆಯಲ್ಲಿವೆ. ಈ ಅನಂತಶಯನನಿಗೆ ಆ ಗರ್ಭಗೃಹ ತೀರ ಚಿಕ್ಕದಾಗಿ ಇಕ್ಕಟ್ಟಾಗಿತ್ತು. (ಈಗ ದೊಡ್ಡದು ಮಾಡಿದ್ದಾರೆ). ಅದೇ ಬಿಲಾಂತಃಸ್ಥಿತ ರಂಗನಾಥ ಆಗಿದೆ.

* *ಗದಾಧರಪುರ ಪುಟ ೫೪ ಅಂದರೆ ಅಗ್ರಹಾರದ ಬದಲು ಗದಗ ಎಂದೂ ಕಪೋತಗಿರಿಗೆ ಕಪಗುಡ್ಡೆಯ ಬದಲು ಕಪ್ಪತಗುಡ್ಡ ಎಂದು ಆಗಬೇಕು ಎಂದು ನನ್ನ ಅನಿಸಿಕೆ.*
* *ಕವಿಯು ಉತ್ಸವವನ್ನು 'ಮಹಾದೇವೋತ್ಸವ' ಎಂದೇ ಕರೆದಿದ್ದಾರೆ. 'ಮಹಾದೇವ–ಮಾಧವ–ಉತ್ಸವ', 'ಜನರೆಲ್ಲ ಮಾಡುತ್ತಿದ್ದ ಮಹಾದೇವ ನಾಮೋಚ್ಚರಣ', 'ಮಹಾದೇವಕಾಮಧ್ವನಿ' ಹೀಗೆ ಗ್ರಂಥದ ಉದ್ದಕ್ಕೂ 'ಮಹಾದೇವ' ಮತ್ತು ಅವರಿಗಾಗಲೇ ಬಂದಿದ್ದ ಬಿರುದಾದ 'ಮಹಾಪುರುಷ' ಪದಗಳನ್ನು ಪದೇ ಪದೇ ಬಳಸುವ ಮೂಲಕ ಕವಿ ತನ್ನ ಕುರಿತು ಸುಳಿವು ನೀಡಿದ್ದಾನೆ.*
* *ಕೈಲಾಸ ಪರ್ವತದಲ್ಲಿ ವಾಸ ಮಾಡುವ ಈಶ್ವರನ ತೇಜಃಪುಂಜದ ಸಾಕ್ಷಾತ್ಕಾರ ಉಳ್ಳವನು ನಾನು ಪುಟ ೧೮೩.*

*ತನ್ನ ತೇಜಸ್ಸಿಗೆ ಅಭಿಮುಖವಾಗಿ ನಿಂತಿದ್ದ ಪುಟ ೨೩೬.*

ಅಂದಿನ ಪ್ರಕ್ಷುಬ್ಧ ವಾತಾವರಣದ ಸಂಕಷ್ಟಮಯ ದಿನಗಳಲ್ಲಿ ಹಲವಾರು ಅಸಾಮಾನ್ಯ ಮಹತ್ಕಾರ್ಯಗಳನ್ನು ಮಾಡಿದ್ದ ಬಿಷ್ಟೇಶರೂ ನಂತರ ಅವರದ್ದೇ ಹಾದಿಯಲ್ಲಿ ಸಾಗಿದ್ದ ಮಹಾದೇವಪ್ಪಯ್ಯರೂ 'ಸಾಕ್ಷಾತ್ ವಿರೂಪಾಕ್ಷೇಶ್ವರನ ಅವತಾರ' ಎಂದೇ ಪರಿಗಣಿಸಲ್ಪಟ್ಟಿದ್ದರು. ತತ್ಕಾಲೀನ ಶ್ರೀಮತ್ ಶಂಕರಾಚಾರ್ಯರು ಮಹಾದೇವಪ್ಪಯ್ಯ ಅವರನ್ನು ಕುರಿತು ರಚಿಸಿದ ಸ್ತೋತ್ರದ ಒಂದು ಚರಣ ಇಂತಿದೆ.

**ವದಂತ್ವನ್ಯೋ ಲೋಕಾ ಜಗತಿ ಬಹುಧಾ**
**ಮೂಢಮತಯೋ ।**
**ವಿರೂಪಾಕ್ಷಃ ಸಾಕ್ಷಾದಿತಿ ಮನಸಿಮೇ ನಿಶ್ಚಿತಮಿದಂ ॥**

ಮತ್ತು ವಿವಿಧ ಸಂಸ್ಥಾನಿಕರು ನೀಡಿದ ಸನ್ಮಾನ ಪತ್ರಗಳು ಇವರಿಬ್ಬರನ್ನೂ ಸಾಕ್ಷಾತ್ ವಿರೂಪಾಕ್ಷಾವತಾರಿ ಎಂದೇ ಸಂಬೋಧಿಸಿವೆ. ಇದೇ ಅಂಶವನ್ನು ಮೊದಲ ಬಾರಿಗೆ ಕುಲದೈವ ಪಂಪಾಪತಿಯ ಎದುರಿನಲ್ಲಿ ನಿಂತಾಗ ತನಗುಂಟಾದ ಅನುಭೂತಿಯ ಅನುಭವವನ್ನು ಕವಿ ವರ್ಣಿಸಿದ್ದಾನೆ.

* *ಸಂತಾನಾಪೇಕ್ಷೆಯಿಂದ ಪಂಪಾಪತಿಗೆ ಉತ್ಸವ ನಡೆಸಿದ ರಸಿಕ ದಂಪತಿಗಳ ಉಲ್ಲೇಖವಿದೆ.*
* *ಮಹಾದೇವಪ್ಪಯ್ಯರಿಗೆ ವಿವಾಹವಾಗಿ ಬಹುಕಾಲ ಸಂತಾನವಾಗಿರಲಿಲ್ಲ. ಒಂದು ಮಗುವನ್ನು ದತ್ತು ಪಡೆದರು. ನಂತರ ಮಗು ಹುಟ್ಟಿತು.*[೧೧]
*ಮೊದಲು ಕಲಶ ಸಮಾರೋಪ ನಂತರ ಮತ್ತೊಮ್ಮೆ ಸಂತಾನ ಅಪೇಕ್ಷೆಯಿಂದ ವಿರೂಪಾಕ್ಷನಿಗೆ ನಡೆಸಿದ ಉತ್ಸವಗಳನ್ನು ನೆಪವಾಗಿಟ್ಟುಕೊಂಡು ಈ ಗ್ರಂಥ ರಚನೆಯಾಗಿದೆ ಎಂದು ಗೊತ್ತಾಗುತ್ತದೆ.*
* *ಆರತಿ ಮಾಡಲಾದ ಶಿವಮೂರ್ತಿಗಳೆರಡನ್ನೂ ಬಲಗಡೆಯಿಂದ ಮತ್ತೆ ಮತ್ತೆ ಅವಲೋಕಿಸಿ ನಾನು ಕೃತಾರ್ಥನಾದೆ. ಆನಂದಬಾಷ್ಪದಿಂದ ಶ್ರೀ ಸಾಂಬಶಂಕರ ಹಾಗೂ ಸದಾಶಿವರ ಭವ್ಯ ಮೂರ್ತಿಗಳಿಗೆ ಹೀಗೆ ಪದೇ ಪದೇ ರಥೋತ್ಸವದ ಸಂದರ್ಭದಲ್ಲಿ ರಥದಲ್ಲಿ ಎರಡು ಶಿವಮೂರ್ತಿಗಳಿವೆ ಎಂದು ಉಲ್ಲೇಖವಾಗಿದೆ.*

ಸಾಮಾನ್ಯವಾಗಿ ಪಂಪಾಪತಿ ಮತ್ತು ಪಾರ್ವತಿಯರ ಉತ್ಸವ ಮೂರ್ತಿಗಳನ್ನು ರಥದಲ್ಲಿರಿಸುತ್ತಾರೆ. ಆದರೆ ಮಹಾದೇವಪ್ಪಯ್ಯರು ತಾವು ಉತ್ಸವ ನಡೆಸುವ ಕಾಲಕ್ಕೆ ಗುರು ಬಿಷ್ಟೇಶಕೃತ ಚರ ರಸಲಿಂಗವನ್ನೂ ಹಂಪಿಗೆ ಒಯ್ಯುತ್ತಿದ್ದರು. ಪಂಪಾಪತಿಗೆ ಸಲ್ಲುವ ಎಲ್ಲ ರೀತಿಯ ಅರ್ಚನೆಗಳು ಆ ರಸಲಿಂಗಕ್ಕೂ ಸಲ್ಲುತ್ತಿದ್ದವು ಹಾಗೆಯೇ ರಥೋತ್ಸವದ ಸಂದರ್ಭದಲ್ಲಿ ಆ ಲಿಂಗವನ್ನೂ ರಥದಲ್ಲಿ ಇಟ್ಟಿದ್ದರಿಂದ ಕವಿ ಮತ್ತೆ ಮತ್ತೆ ಸ್ಪಷ್ಟವಾಗಿ ಎರಡೂ ಶಿವಮೂರ್ತಿಗಳು ಎಂದು ಉಲ್ಲೇಖಿಸಿದ್ದಾನೆ. ಮತ್ತು ತಾನು ಮೊದಲ ಬಾರಿಗೆ ಆ ಲಿಂಗವನ್ನು ಹಂಪಿಗೆ ತಂದು ಉತ್ಸವ ನಡೆಸಿ ಪಂಪಾಪತಿಯ ಪಕ್ಕದಲ್ಲಿ ಅದನ್ನು ಇರಿಸಿದಾಗ ಭಾವೋದ್ದೀಪ್ತನಾಗಿ ಆನಂದಬಾಷ್ಪ ಸುರಿಸಿದ್ದಾನೆ.

* *ಇನ್ನು ಕವಿ ತನಗೆ ಸಂಬಂಧಿಸಿದಂತೆ ಹಲವಾರು ಬಗೆಯ ವಿವಿಧ ವಿಶೇಷಣಗಳನ್ನು ಬಳಸಿಕೊಳ್ಳುವ ಮೂಲಕ ತನ್ನನ್ನು ಉಲ್ಲೇಖಿಸಿಕೊಂಡಿದ್ದಾನೆ. ಅವುಗಳೆಂದರೆ :*

ಕವಿಯಾದ ಯಜಮಾನನಿಗೆ (ಪುಟ ೭೪.)

ಅಯ್ಯಾ ದ್ವಿಜಶ್ರೇಷ್ಠನೇ, ಕವಿಯೇ (ಪುಟ ೮೬.)

ಶಿವಭಕ್ತರಲ್ಲಿ ಶ್ರೇಷ್ಠನೇ, ವಿದ್ವಾಂಸನೇ (ಪುಟ ೧೧೧.)

ಈ ಕವಿ, ದ್ವಿಜರಾಜ, ಚಂದ್ರ, ವಿಪ್ರಶ್ರೇಷ್ಠ, ಅತಿ ಬುದ್ಧಿಶಾಲಿಯಾದ ಬ್ರಾಹ್ಮಣ, ಸತಿಯ ಪತಿಯಾದ ವಿದ್ವಾಂಸ, ಮುಂತಾದ ವಿಪ್ರರು ಪಂಪಾಪತಿ ಸಂತರ್ಪಣದ ವಿಧಾನವನ್ನು ಸಂಕಲ್ಪಿಸಿದ್ದರೇನೋ ಸರಿ. (ಪು. ೧೭೮) ವಿಷ್ಟೇಶರ ಪ್ರಶಿಷ್ಯ ಬ್ರಹ್ಮಚಾರಿ ಮುಂತಾದ ಉಲ್ಲೇಖಗಳೆಲ್ಲ ಕವಿಯೇ ಆ ಸಮಾರಂಭಗಳ ಯಜಮಾನನೆಂದು ಸ್ಪಷ್ಟಪಡಿಸುತ್ತವೆ.

* *ಕವಿಯು ನಾನಾ ಶಾಸ್ತ್ರಜ್ಞನೆಂದು ತೋರುತ್ತದೆ. (ಪುಟ ೧೦.)*

ಆ ಬಳಿಕ ನಾಡೀ ಪರೀಕ್ಷಣಾ ವಿಕ್ಷಣನಾದ ಶಂಕರಭಟ್ಟಯ್ಯ (ಪುಟ ೨೮೬.) ಮಹಾದೇವಪ್ಪಯ್ಯರೂ ಜ್ಯೋತಿಷ್ಯಶಾಸ್ತ್ರ, ಆಯುರ್ವೇದ ವೈದ್ಯಕೀಯಗಳಲ್ಲಿ ಪಾರಂಗತರಾಗಿದ್ದು ತಮ್ಮ ಎಲ್ಲ ಆಸಕ್ತಿದಾಯಕ ಕ್ಷೇತ್ರಗಳನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

## ವಿದ್ಯಾನಗರದ ನರಪತಿ ರಾಜ

ಮಹಾದೇವಪ್ಪಯ್ಯ ಅವರು ಕ್ರಿ.ಶ. ೧೭೧೭ರಲ್ಲಿ ತಾವು 'ಬಿಷ್ಟಪ್ಪಯ್ಯನ ಗೋಪುರ'ಕ್ಕೆ ಕಲಶ ಇಡಿಸಿದ್ದು ಮತ್ತು ಕ್ರಿ.ಶ. ೧೭೩೦ ರಿಂದ ೧೭೩೫ರ ಮಧ್ಯದಲ್ಲಿ ಸಂತಾನ ಫಲಾಪೇಕ್ಷೆಯಿಂದ ಆಯೋಜಿಸಿದ್ದ ವಿರುಪಾಕ್ಷೋತ್ಸವಗಳನ್ನೇ ವಿಷಯವಾಗಿಸಿಕೊಂಡು ರಚಿಸಿದ್ದ ಕೃತಿ ಇದು. ಆ ಸಮಯದಲ್ಲಂತೂ ವಿಜಯನಗರದ ರಾಜರು ಹಂಪಿಯಲ್ಲಿ ಇರಲಿಲ್ಲವಷ್ಟೆ ಕ್ರಿ.ಶ. ೧೬೫೮ರಲ್ಲಿ ಕೊನೆಯ ಶ್ರೀರಂಗರಾಯರು ಕೆಳದಿ ದೊರೆಯ ಆಶ್ರಯ ಪಡೆಯುವುದರೊಂದಿಗೆ ಅನಾಥವಾದ ಹಂಪಿಯ ರಕ್ಷಣೆಯ ಹೊಣೆ ಹೊತ್ತ ಗುರು ಬಿಷ್ಟಪ್ಪಯ್ಯರು ಸಾಮ್ರಾಜ್ಯದ ಪ್ರತಿಷ್ಠೆಗೆ ತಕ್ಕನಾದ ಭವ್ಯ ದ್ವಾರ ಗೋಪುರ ನಿರ್ಮಿಸಿದರು. ಪಂಪಾಪತಿಗೆ ಚಿನ್ನದ ಮುಖವಾಡ ವಿದ್ಯಾರಣ್ಯ ಶ್ರೀಗಳಿಗೆ ರತ್ನಖಚಿತ ಕಿರೀಟ ಸಮರ್ಪಿಸಿದರು. ಮುಂದೆ ಅವರ ಮೊಮ್ಮಗ ವಿಜೃಂಭಣೆಯಿಂದ ಕಲಶ ಸಮಾರೋಪ ಮುಂತಾದ ಸಮಾರಂಭಗಳನ್ನು ನಡೆಸುವ ಮೂಲಕ ಆ ಕಾರ್ಯಗಳನ್ನು ಮುಂದುವರೆಸಿಕೊಂಡು ಬಂದರು. ರಾಜರು ಮಾಡುವಂಥ ಮಹತ್ಕಾರ್ಯಗಳನ್ನು ಈ ಮಹಾಪುರುಷರು ಮಾಡಿದರು. ಈ ಎಲ್ಲ ಹಿನ್ನೆಲೆಯೊಡನೆ 'ವಿದ್ಯಾನಗರದ ನರಪತಿರಾಜನ' ಬಗ್ಗೆ ಕವಿಯು ಮಾಡಿದ ವರ್ಣನೆಗಳನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ಕವಿಯೇ ಅಂದರೆ ಮಹಾದೇವಪ್ಪಯ್ಯರೇ ವಿದ್ಯಾನಗರೇಶ ಎಂದು ಸ್ಪಷ್ಟವಾಗುತ್ತದೆ.

* *ರಾಜ ಶುದ್ಧ ವಿಭೂತಿ ಧರಿಸಿದ ಶ್ರೌತ ಸ್ಮಾರ್ತ ಪುಟ ೮೬-೮೧ ಶ್ಲೋಕ.*

ಈತನೇ ರಾಜಪದಕ್ಕೆ ಪಾತ್ರನು. ಪುಟ ೮೮.

ವಿದ್ಯಾನಗರೇಶ್ವರ ನರಪತಿ ಪರಿಕಲ್ಪಿತ ಮಹೋತ್ಸವ, (ಪುಟ ೧೫೮, ಶ್ಲೋಕ ೨೭೭.)

ಮಾಧವ-ನವರಾತ್ರೋತ್ಸವ ಯಜ್ಞಪ್ರವರ್ತಕ-ದ್ವಿಜಯ ಮಾಡುತ್ತಿದ್ದುದನ್ನು ಕಂಡು ಆ ಸತಿಯ ಪತಿ ಶಂಕರ ಪ್ರೀತಿಗೆಂದು ಆಚರಿಸಿದ.

ನಿತ್ಯೋತ್ಸವಾದಿ ವಾರ್ಷಿಕೋತ್ಸವಗಳನ್ನು ಕಲ್ಪಿಸಿದ್ದಾನೆ. (ಪುಟ ೨೩೭.)

ಸಂತಾನಾಪೇಕ್ಷೆಯಿಂದ ಸತಿಯೊಡನೆ ಸಮಾಗಮ ನಡೆಸಿದ 'ವಿದ್ವಾಂಸ'ನು ಪಂಪಾಪತಿಯ ಸಂಪ್ರೀತಿಗಾಗಿ ಇಂದು ಅನೇಕ ವಿಪ್ರರಿಗೆ ಸಮಾರಾಧನವಾಗಬೇಕು ಎಂದು ತೀರ್ಮಾನಿಸಿದನು. ವಿದ್ಯಾನಗರಾಧೀಶನ ದರ್ಶನವಿರುವಲ್ಲೇ (ಪುಟ ೧೭೬) ಇಂಥವೇ ಮುಂತಾದ ವರ್ಣನೆಗಳು ಕವಿ, ಸಮಾರಂಭಗಳ ಆಯೋಜಕ ಮತ್ತು ವಿದ್ಯಾನಗರೀಶ ಎಲ್ಲವೂ ಒಬ್ಬನೇ ವ್ಯಕ್ತಿ ಎಂದು ಸ್ಪಷ್ಟವಾಗುತ್ತದೆ.

* *೨೩೧ನೆಯ ಶ್ಲೋಕ ಪುಟ ೧೫೮ರಲ್ಲಿ ಚಂದ್ರ ಮತ್ತು ರಾಜನನ್ನು ಸಮೀಕರಿಸಿ ವರ್ಣಿಸಿದ ಒಂದು ಮಹತ್ವದ ಶ್ಲೋಕದಲ್ಲಿ ಕವಿ ತನ್ನ ಬಗ್ಗೆ ಸುಳಿವು ಕೊಟ್ಟಿದ್ದಾನೆ. ಈ ರಾಜ (ಚಂದ್ರ) ಅತ್ರಿಮುನಿಯ ನೇತ್ರದಿಂದ ಹುಟ್ಟಿದವನು.*
* *ಅತ್ರಿಯ ನೇತ್ರದಿಂದ ಜನಿಸಿದುದರಿಂದ (ಪುಟ ೧೪೧.)*
* *ಸೋ ಅಸ್ಮಾಕಂ ಬ್ರಾಹ್ಮಣಾನಾಂ ರಾಜಾ ಯಜುರ್ವೇದ ಸಂಹಿತೆಯ ಉಲ್ಲೇಖವಿದೆ. (ಪುಟ ೧೪೯.)*
* *ಮಹಾದೇವಪ್ಪಯ್ಯರದು ಅತ್ರಿಗೋತ್ರ ಮತ್ತು ಯಜುರ್ವೇದ ಶಾಖೆ.*
* *ಈ ಚಂದ್ರ (ರಾಜ) ಮೈಸೂರಿಗೆ ಒಡೆತನವನ್ನಾಗಲೀ ಚಂದ್ರಶೈಲದ ಹತ್ತುವಿಕೆಯನ್ನಾಗಲೀ ಹೊಂದಲೇ ಇಲ್ಲ. ಹಾಗಿರಲು ಆತನನ್ನು ರಾಜಾ ಎಂಬುದಾಗಿ ಹೇಗೆ ತಿಳಿಯುವೆ ? (ಪುಟ ೮೮. ಶ್ಲೋಕ ೮೬.)*

ಈ ಒಂದು ವಿಶಿಷ್ಟ ಪ್ರಶ್ನೆಯನ್ನು ಹುಟ್ಟಿಸುವ ಮೂಲಕ ಕವಿ ತನ್ನ ಬಗೆಗಿನ ಸುಳಿವನ್ನು ಇನ್ನೂ ಸ್ಪಷ್ಟಗೊಳಿಸುತ್ತಿದ್ದಾನೆ.

ಉತ್ಸವಗಳ ಆಯೋಜಿತನಾಗಿ ರಾಜ ಮರ್ಯಾದೆಯನ್ನು ಪಡೆಯುತ್ತಿರುವ ಈತನನ್ನು ರಾಜನೆಂದು ಹೇಗೆ ತಿಳಿಯುವುದು ? ಅದಾಗಲೇ ಪ್ರವರ್ಧಮಾನಕ್ಕೆ ಬಂದಿದ್ದ ಮೈಸೂರು ರಾಜನೂ ಅವನಲ್ಲ, ಪತನಗೊಂಡ ವಿಜಯನಗರ ರಾಜರ ವಂಶಸ್ಥರು ಆಗ ವಾಸವಾಗಿದ್ದ ಚಂದ್ರಗಿರಿಯನ್ನೂ ಅವನು ಹತ್ತಿಲ್ಲ ಎಂಬ ವರ್ಣನೆಯಿಂದ ಆಯೋಜಕ ಮೈಸೂರು ರಾಜನಲ್ಲ, ಚಂದ್ರಗಿರಿಯಿಂದ ಬಂದ ರಾಜನಲ್ಲ ಎಂದು ಸ್ಪಷ್ಟವಾಗುತ್ತದೆ.

* ಈತನೇ ರಾಜನಾಗುತ್ತಾನೆ; ಈತನೇ ರಾಜಪದಕ್ಕೆ ಪಾತ್ರನು. ಈ ವಾಕ್ಯಗಳು ಆತ ನಿರ್ದಿಷ್ಟವಾಗಿ ರಾಜನಲ್ಲದಿದ್ದರೂ ರಾಜರು ಮಾಡಬೇಕಾದ ಕೆಲಸಗಳನ್ನು ಮಾಡಿದ್ದರಿಂದ ಆ ಸಂದರ್ಭದಲ್ಲಿ ರಾಜಮರ್ಯಾದೆ ಆತನಿಗೆ ಸಲ್ಲುತ್ತಿದೆ ಎಂದು ಗೊತ್ತಾಗುತ್ತದೆ. (ಗುರು ಬಿಷ್ಟೇಶರ ವಂಶಸ್ಥರು ರಸಲಿಂಗದೊಡನೆ ಹಂಪಿಗೆ ಬಂದರೆ ಅವರಿಗೆ ರಾಜಮರ್ಯಾದೆ ನೀಡಬೇಕೆಂಬ ನಿಯಮ ಈಗಲೂ ಇದೆ.)

ಒಟ್ಟಿನಲ್ಲಿ ಈ ಕೃತಿಯಲ್ಲಿ ಉಲ್ಲೇಖವಾದ 'ವಿಷ್ಟಪೇಶರ ಪ್ರಶಿಷ್ಯ' ಈ ಕವಿ, 'ಸತಿಯ ಪತಿಯಾದ ವಿದ್ವಾಂಸ' 'ಅಹೋ ಬಲ' 'ಬುದ್ಧಿಶಾಲಿ ಬ್ರಾಹ್ಮಣ, ದ್ವಿಜಶ್ರೇಷ್ಠ, ವಿದ್ಯಾನಗರೀಶ, ಸಂತಾನಾಪೇಕ್ಷಿಪತಿ, ನಾಡೀವೈದ್ಯ ಎಲ್ಲವೂ ಈ ಕೃತಿಯ ಕರ್ತೃವೇ ಅಂದರೆ ಮಹಾದೇವಪ್ಪಯ್ಯ ಮಹಾಪುರುಷ ಅವರೇ ಎಂದು ಗೊತ್ತಾಗುತ್ತದೆ.

ಅವರು ವರ್ಷಕ್ಕೊಂದು ಬಾರಿ ಈ ಉತ್ಸವವನ್ನು ನಡೆಸುವ ಪದ್ಧತಿ (ನಿಯಮ) ಆರಂಭಿಸಿದ್ದರು. (ಪುಟ ೨೪೯, ಶ್ಲೋಕ ೭೪೭.) ಆ ನಿಯಮವನ್ನು ಮಹಾಪುರುಷ ಕುಟುಂಬವು ಕ್ರಿ.ಶ. ೧೮೫೭ರವರೆಗೆ ಚಾಚೂತಪ್ಪದಂತೆ ಪಾಲಿಸಿ ಕೊಂಡು ಬಂದಿತು. ಮುಂದೆ ಅವಿಭಕ್ತವಾಗಿದ್ದ ಕುಟುಂಬ ಬೇರೆ ಬೇರೆಯಾಯಿತು. ಕುಟುಂಬದ ಹಿರಿಯರು ಏಕಕಾಲದಲ್ಲಿ ಮರಣ ಹೊಂದಿದ್ದೂ ಮುಂತಾದ ಕಾರಣಗಳಿಂದ ಆ ನಿಯಮ ಸ್ಥಗಿತಗೊಂಡಿದೆ.

* *ಮಹಾದೇವಪ್ಪಯ್ಯ ಅವರು ದೊಡ್ಡ ಸಂಸ್ಕೃತ ವಿದ್ವಾಂಸರಾಗಿದ್ದು, ರಂಗಾಪುರದಲ್ಲಿ ಒಂದು ದೊಡ್ಡ ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಿದ್ದರು. ಈಗ ವಿಠ್ಠಲಾಪುರದಲ್ಲಿರುವ ಅವರ ವಂಶಸ್ಥರಲ್ಲಿ (ನನ್ನ ಸೋದರರು) 'ಶ್ರೀ ಗುರು ಬಿಷ್ವೇಶ ಗ್ರಂಥಾಲಯ' ಹೆಸರಿನ ಹಸ್ತಪ್ರತಿಗಳ, ಪುಸ್ತಕಗಳ ಸಂಗ್ರಹವಿದೆ. ಅದರಲ್ಲಿ ೧೭ ಮತ್ತು ೧೮ನೆಯ ಶತಮಾನಗಳ ಸಂಸ್ಕೃತ ಹಸ್ತಪ್ರತಿಗಳ ಹಲವು ಕಟ್ಟುಗಳಿವೆ. ಆಸಕ್ತರು ಅಧ್ಯಯನ ಮಾಡಬಹುದು.*

(ಸಿಕ್ಕಷ್ಟೇ ಕಾಂಡಗಳನ್ನು ಜೋಪಾನವಾಗಿ ಕಾದಿರಿಸಿದ ಎಲ್ಲ ವಿದ್ವಾಂಸರಿಗೂ ಉತ್ತಮವಾಗಿ ಭಾಷಾಂತರಿಸಿ ವಿಶ್ಲೇಷಿಸಿದ ಪ್ರೊ. ಕೆ.ಎಸ್. ಕಣ್ಣನ್‌ರಿಗೂ ಮತ್ತು ಪ್ರಕಾಶಿಸಿದ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೂ ಕವಿಯ ವಂಶಸ್ಥಾದ (ಹತ್ತನೆಯ ತಲೆಮಾರಿನವಳಾದ) ನನ್ನ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಹಸ್ತಪ್ರತಿ ಸಂಪುಟ ೨೩/೨೦೦೮ರ ಇತಿಹಾಸ ದರ್ಶನದಲ್ಲಿ ಪ್ರಕಟವಾಗಿದೆ ಮತ್ತು ಆಪಟೆ ಅನಂತರಾಯರು ಬರೆದ 'ಹಂಪೆಯ ವಿರುಪಾಕ್ಷ ದೇವಾಲಯದ ಗೋಪುರ ನಿರ್ಮಾಪಕ ಶ್ರೀ ಬಿಷ್ಟಪ್ಪಯ್ಯನವರು' ಪುಸ್ತಕದ ೯೪-೯೫ ಪುಟ.

೨. ಅದೇ ಹಸ್ತಪ್ರತಿ, ಅದೇ ಪುಸ್ತಕ ಮತ್ತು ಅವರ ವಂಶಸ್ಥರಲ್ಲಿರುವ ಹಲವು ೧೭, ೧೮ನೇ ಶತಮಾನದ ಸಂಸ್ಕೃತ ಹಸ್ತಪ್ರತಿಗಳು.

೩. ಮೌಖಿಕವಾಗಿ ನಮ್ಮ ಹಿರಿಯರಿಂದ ಕೇಳಿದ್ದು. ಸ್ವಂತ ಮತ್ತು ದತ್ತಕ ಕುಟುಂಬಗಳಿಗೆ ದೊಡ್ಡ ವ್ಯಾಜ್ಯ ಉಂಟಾಗಿ ಇದೇ ತಾಮ್ರಗುಂಡಿಯ ಹಕ್ಕನ್ನು ಕುರಿತು ಅಂದಿನ ಇನಾಂ ಕಮೀಷನರ್ ಅವರು ಕ್ರಿ.ಶ. ೧೮೫೭ರಲ್ಲಿ ನೀಡಿದ ತೀರ್ಪಿನ ಕುರಿತು ಡಾ. ಹರಿಹರ ಶ್ರೀನಿವಾಸರಾವ್ ಅವರು ಮಂಡಿಸಿದ ಪ್ರಬಂಧ ೨೦೧೦ರ ಸಂಚಿಕೆ ಯಲ್ಲಿ ಪ್ರಕಟವಾಗಿದೆ.

೪. ಮೌಖಿಕ, ಅದೇ ಹಸ್ತಪ್ರತಿ, ಅದೇ ಪುಸ್ತಕ ಮತ್ತು ಆ ಬಿರುದುಗಳುಳ್ಳ ಹಲವು ಹಸ್ತಪ್ರತಿಗಳು.

೫. ನಾವು ಮೌಖಿಕವಾಗಿ ಕೇಳಿ ತಿಳಿದಿದ್ದ ಈ ಘಟನೆ ಯಥಾವತ್ತಾಗಿ ಕೆ. ವಾಸುದೇವಾಚಾರ್ಯರು ಮೈಸೂರು ಅರಸರು ಕುರಿತು ಬರೆದ ನೆನಪುಗಳು ಗ್ರಂಥದಲ್ಲಿ ದಾಖಲಾಗಿದೆ.

೬. ಆ ಕಿರೀಟ ಕರ್ಣಕುಂಡಲಗಳನ್ನು ಬಿಷ್ಟಪ್ಪಯ್ಯ ಅವರೇ ಮಾಡಿಸಿ ಕೊಡುಗೆಯಾಗಿ ನೀಡಿದ್ದು. ಈ ಪ್ರಬಂಧ ಸಂಪುಟ ೨೪, ೨೦೦೯ರ ಸಂಚಿಕೆಯಲ್ಲಿ ಪ್ರಕಟವಾಗಿದೆ. ಮಹಾದೇವಪ್ಪಯ್ಯರನ್ನು ವರ್ಣಿಸುವ ಒಂದು ಶ್ಲೋಕದಲ್ಲಿ ಅವರು ಕಿರೀಟ ಧರಿಸಿ ಶೋಭಿಸುತ್ತಿದ್ದರು ಎಂದು ಹೇಳಿದೆ. ಮೌಖಿಕ.

೭. ಮಹಾಗೋಪುರಕ್ಕೆ ಕಲಶ ಇರಿಸುವ ಸಮಾರಂಭವಾಗಿದ್ದರಿಂದ ಸಹಜವಾಗಿಯೇ ಕವಿ ತನ್ನ ಅಜ್ಜ ನಿರ್ಮಿಸಿ ತಾನು ನಡೆಸಿದ ಉತ್ಸವವೇ ಗ್ರಂಥದ ಮುಖ್ಯ ವಿಷಯವಾಗಿದ್ದರಿಂದ ಆ ಗೋಪುರಕ್ಕೆ ಮಹತ್ವ ಕೊಟ್ಟಿದ್ದಾನೆ.

೮. ಗುರು ಬಿಷ್ವೇಶರು ಹಲವಾರು ಸಾಮಾಜಿಕ ಧಾರ್ಮಿಕ ಕಾರ್ಯಗಳನ್ನು ಮಾಡಿ ಗುರು ಎನಿಸಿಕೊಂಡವರು. ರಂಗಾಪುರದಲ್ಲಿ ತಾವು ನಿರ್ಮಿಸಿದ್ದ ಹಲವು ಚಿನ್ನದ ವಿಗ್ರಹಗಳನ್ನು ಇರಿಸಿಕೊಂಡಿದ್ದರಿಂದ ರಂಗಾಪುರವೂ ಸೇರಿದಂತೆ ಹಲವಾರು ಹಳ್ಳಿ ಇನಾಂ ಆಗಿ ಸಂದಿದ್ದು ರಂಗಾಪುರ ದೊಡ್ಡ ಮಠವೇ ಆಯಿತು. ಆ ಭಕ್ತರೆಲ್ಲ ಸೇರಿ ಮಹಾದೇವಪ್ಪಯ್ಯ ನೇತೃತ್ವದಲ್ಲಿ ಆಯೋಜಿಸಿದ ಸಮಾರಂಭವಾದ್ದರಿಂದ ಅಲ್ಲಿ ಅವರೇ ಅಧಿಕಾರಿ ಪುರುಷರಾಗಿದ್ದಾರೆ.

೯. ಮಹಾದೇವಪ್ಪಯ್ಯ ತಂದೆಯ ಹೆಸರು ಶಿವಪ್ಪಯ್ಯ 'ಶಿವಪ್ಪಾರ್ಯ ಬಾಲಂಭಜೇ ನಿತ್ಯ ಕಾಲಂ' ಎಂದಿರುವ ಈ ಅಷ್ಟಕ ವಿಶಾಲ ದೃಷ್ಟಿಯಲ್ಲಿ ಗಣಪತಿಯ ಸ್ತೋತ್ರ ಎಂದೂ ವೈಯಕ್ತಿಕವಾಗಿ ಮಹಾದೇವಪ್ಪಯ್ಯರ ಕುರಿತಾಗಿದ್ದು ಎಂದೂ ಅರ್ಥ ಬರುವ ಸುಂದರ ಸ್ತೋತ್ರವಾಗಿದೆ. ಅದೇ ಪುಸ್ತಕದಲ್ಲಿ ಇನ್ನೂ ಹಲವಾರು ಸ್ತೋತ್ರಗಳಿದ್ದು ಎಲ್ಲದಕ್ಕೂ ರಚನಾಕಾರರ ಹೆಸರು ಲಭ್ಯ ಇವೆ. ಶಿವಪಾರ್ಯಾಷ್ಟಕಕ್ಕೆ ಮಾತ್ರ ಹೆಸರು ಇಲ್ಲ. ಅದೇ ಡಂಬಳದ ದೊರೆ ಬರೆದದ್ದಾಗಿರಬಹುದು.

೧೦. ಅಲ್ಲಿನ ಗುಡಿ 'ಬಿಷ್ವೇಶ್ವರಸ್ವಾಮಿ ಗುಡಿ' ಎಂದು ಅರ್ಚಿಸಲ್ಪಡುತ್ತಿದೆ. ತುಸು ಭೂಮಿ ಮಹಾಪುರುಷ ಕುಟುಂಬದ ಜೋಯಿಸರ ಹೆಸರಿನಲ್ಲಿದೆ.

೧೧. ಮೌಖಿಕ ಮತ್ತು ಇನೇ ಟಿಪ್ಪಣಿ.

ಡಾ. ಎಚ್. ಎಸ್. ಉಷಾರಾಣಿ*

# ಮಂಡ್ಯ ಜಿಲ್ಲೆಯ ಪ್ರಮುಖ ಕುಲಗಳು

ಆಳರಸರಾಗಿ ಮೆರೆದವರ ಅಧ್ಯಯನ ಹೆಚ್ಚಿನ ಗಮನ ಸೆಳೆದುದು ಸಹಜ. ಇತ್ತೀಚೆಗೆ ರಾಜ್ಯದ, ನಾಡಿನ ಏಳಿಗೆಗೆ ಶ್ರಮಿಸಿದ ನೂರಾರು ಕುಟುಂಬಗಳ ಅಥವಾ ಕುಲಗಳ ಅಧ್ಯಯನ ಸಂಶೋಧಕರನ್ನು ಆಕರ್ಷಿಸುತ್ತಿದೆ. ಆಧುನಿಕ ಇತಿಹಾಸ ನಿರ್ಲಕ್ಷಿತ ವರ್ಗಗಳ ಅಧ್ಯಯನಕ್ಕೆ ಹೆಚ್ಚು ಒತ್ತು ನೀಡುತ್ತಿರುವ ಸಂದರ್ಭದಲ್ಲಿ ಇಂಥ ನಿರ್ಲಕ್ಷಿತ ಅಂಶಗಳಾದ ಕುಲಗಳ ಅಧ್ಯಯನ ಬಹಳ ಪ್ರಮುಖವಾಗುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ನಿರ್ಲಕ್ಷ್ಯಕ್ಕೊಳಪಟ್ಟ ವಿಷಯದ ಅಧ್ಯಯನ ಅಮೂಲ್ಯ ಮಾಹಿತಿಯನ್ನು ಒದಗಿಸುತ್ತಿದೆ.[1] ಈ ಜಿಲ್ಲೆ ಯಾವುದೇ ರಾಜವಂಶದ ರಾಜಧಾನಿ ಆಗಿರಲಿಲ್ಲ. ಆದರೆ ಸಾಮ್ರಾಜ್ಯದ ಭದ್ರತೆಗೆ ಶ್ರಮಿಸಿ ಸಾಂಸ್ಕೃತಿಕ ಬೆಳವಣಿಗೆಯನ್ನೇ ಹಲವು ಕುಟುಂಬಗಳು ಮಹತ್ತರ ಪಾತ್ರವಹಿಸಿದ್ದುದಂತೂ ಹೌದು. ಅಂಥ ಕುಲಗಳ ಬಗ್ಗೆ ಅವಲೋಕಿಸುವುದೇ ಪ್ರಸ್ತುತ ಪ್ರಬಂಧದ ಉದ್ದೇಶ.

ಸಕ್ಕರೆ ಸೀಮೆ ಎಂದೇ ಖ್ಯಾತಿ ಗಳಿಸಿರುವ ಜಿಲ್ಲೆಯ ಪ್ರಧಾನ ಕಸುಬು ಕೃಷಿ. ಈ ಜಿಲ್ಲೆ ಗಂಗರ 'ಗಂಗವಾಡಿ ತೊಂಭತ್ತಾರು ಸಾವಿರ' ಪ್ರದೇಶದಲ್ಲಿ ವ್ಯಾಪಿಸಿದ್ದು, ಚೋಳರ ಕಾಲದಲ್ಲಿ ಮುಡಿಗೊಂಡಚೋಳ ಮಂಡಲದ ರಾಜೇಂದ್ರ ಚೋಳ ವಳನಾಡಿನಲ್ಲಿ ಸಮಾವೇಶಗೊಂಡಿತ್ತು. ಹೊಯ್ಸಳರ ಕಾಲದಲ್ಲಿ ಕುರುವಂಕ, ಕಲ್ಕುಣಿ, ಕಬ್ಬಾಹು ಮತ್ತು ಬಡಿಗೆರೆ ನಾಡು ಹೆಚ್ಚು ಪ್ರಸಿದ್ಧವಾದ ಆಡಳಿತ ಘಟಕಗಳಾಗಿದ್ದು ಅವುಗಳಲ್ಲಿ ಜಿಲ್ಲೆಯ ವಿವಿಧ ಭಾಗಗಳು ಸೇರ್ಪಡೆಯಾಗಿದ್ದವು. ವಿಜಯನಗರದ ಅರಸರು ಈ ಭೂಭಾಗವನ್ನು ಹೊಯ್ಸಳ ರಾಜ್ಯವೆಂದೇ ಗುರುತಿಸಿದ್ದರು.[2] ಇದರಿಂದ ಹೊಯ್ಸಳರ ಪ್ರಭಾವ ಇಲ್ಲಿ ಹೆಚ್ಚಾಗಿದ್ದುದು ಕಂಡುಬರುತ್ತದೆ.

ನಾಡಿನ ಕೃಷಿಕರು ತಮ್ಮ ಕೃಷಿಕಾರ್ಯದೊಂದಿಗೆ ಸೇನಾವೃತ್ತಿ, ಆಡಳಿತಾತ್ಮಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮುಂದಾಗುತ್ತಿದ್ದು ರಾಜರ ಪ್ರಶಂಸೆ ಗೌರವಕ್ಕೆ ಪಾತ್ರರಾಗಿದ್ದರು. ಕೃಷಿ ಸಮುದಾಯದ ವಿವಿಧ ಪಂಗಡಗಳು ನಾನಾ ಸಾಮರ್ಥ್ಯಗಳಲ್ಲಿ ಜಿಲ್ಲೆಗೆ ಸಲ್ಲಿಸಿದ ಸೇವೆಯನ್ನು ಪರಿಶೀಲಿಸೋಣ.



ತೆನದಂಡ ಕುಲದ ಹರಿಹರ ದಂಡನಾಥ ನಿರ್ಮಿಸಿದ ಬಸರಾಳು ಮಲ್ಲಿಕಾರ್ಜುನ ದೇವಾಲಯ

ಶಾಸನಗಳಲ್ಲಿ ಕುಲದೀಪಕ, ಕುಲತಿಲಕ, ಕುಲಕಮಲ ಮಾರ್ತಾಂಡ ಕುಲದ ಗೌರವ, ಕುಲವಧು ಪದಗಳು ಕುಲಕ್ಕೆ ಸಂಬಂಧಿಸಿದಂತೆ ಉಕ್ತವಾಗಿವೆ. ತೆನದಂಕ, ಕುರುವಂದ, ಬೆಳ್ಳಿ, ಸಂಕಿಯರು, ಕೊಮ್ಮೆಯರು, ಮದುರೆಯರು, ಗುದಿಯರು, ಗಾರುವಂದರು, ಬಾರಂದರು, ಗಣಕ (ಕರಣಿಕ), ಎಮ್ಮೆ, ಬಡವಾರರು, ಮುಗಿಲ, ಮೊರೆ, ಬೊಲರು, ತೆಳ್ಳರು ಮತ್ತು ಲೋಹಿತ ಇತ್ಯಾದಿಗಳು ಶಾಸನೋಕ್ತ ಕುಲಗಳು. ಡಾ. ಸೂರ್ಯನಾಥ ಕಾಮತ್ ಅವರು 'ಒಕ್ಕಲುತನ ಮತ್ತು ಒಕ್ಕಲಿಗರು', 'ಇತಿಹಾಸ ಅನ್ವೇಷಣೆ' ಕೃತಿಯಲ್ಲಿ ಕುಲವೈವಿಧ್ಯ ಚಿತ್ರಿಸುವಲ್ಲಿ ಜಿಲ್ಲೆಯ ಕುರುವಂದ, ಬೆಳ್ಳಿಯರು, ಸಂಕಿಯರು ಮತ್ತು ತೆನದಂಕರನ್ನು ಪ್ರಸ್ತಾಪಿಸಿದ್ದಾರೆ.

**ಕುಲಗಳ ಭೌಗೋಳಿಕ ನೆಲೆಗಳು :** ಕೆ.ಆರ್. ಪೇಟೆ ತಾಲೂಕಿನಲ್ಲಿ ನೆಲೆಸಿದ್ದ ಕುಲಗಳಲ್ಲಿ **ಬೆಳ್ಳಿಯರು, ಸಂಕಿಯರು** ಮತ್ತು **ಮುಗಿಲ** ಮನೆತನಗಳ ಬಗ್ಗೆ ಶಾಸನೋಲ್ಲೇಖಗಳಿವೆ. ಕ್ರಿ.ಶ. ೧೨೫೬ ಮತ್ತು ಕ್ರಿ.ಶ. ೧೨೯೧ರ ಅಗ್ರಹಾರ ಬಾಚಹಳ್ಳಿಯ ಶಾಸನಗಳು[3] ಮುಗಿಲ ಕುಲದ ಬಗ್ಗೆ ಬೆಳಕು ಚೆಲ್ಲುತ್ತವೆ. ಈ ಶಾಸನಗಳ ಪ್ರಕಾರ ಹೊಯ್ಸಳ ಎರೆಯಂಗನಿಂದ ಸೋಮೇಶ್ವರನವರೆಗೆ ಸ್ವಾಮಿನಿಷ್ಠೆ ವ್ಯಕ್ತಪಡಿಸಿದ್ದ ಮುಗಿಲರಲ್ಲಿ ಗಂಡನಾರಾಯಣಶೆಟ್ಟಿ ಮತ್ತು

* ಪ್ರಾಧ್ಯಾಪಕರು, ವಿದ್ಯಾವರ್ಧಕ ಮಹಾವಿದ್ಯಾಲಯ, ಟಿ. ನರಸೀಪುರ, ಮೈಸೂರು ಜಿಲ್ಲೆ.

ಮಾರವ್ವೆ ನಾಯಕಿತ್ತಿಯರ ಪರಂಪರೆಯವರನ್ನು ಹೆಸರಿಸಿ ಪ್ರಶಂಸಿಸಲಾಗಿದೆ. ಅದರಂತೆ ಮುಗಿಲ ಕುಲಕಮಲ ಮಾರ್ತಾಂಡರು, ತಿಂಕವಾಳಿಯ ನಾಯಕರು, ನಾಯಕರ ಸೇನಾನಾಯಕರು, ಮಹಾಸಾಮಂತರು ಕಬ್ಬಾಹು ನಾತ್ವಾಳರು, ಸೇವುಣ ಸೈನ್ಯ ವಿಭಾಡರು ಎಂಬುದಾಗಿ ಪರಿಚಯಿಸ ಲ್ಪಟ್ಟಿದ್ದಾರೆ. ಇದರಿಂದ ಈ ಕುಲದವರು ಕಬ್ಬಾಹು ನಾಡನ್ನಾಳುತ್ತಿದ್ದು ಸಾಮಂತರ ಸ್ಥಾನಮಾನ ಗಳಿಸಿದ್ದರಲ್ಲಿ ಸಂದೇಹವಿಲ್ಲ. ಇವರ ಪ್ರಾಮಾಣಿಕತೆ ನಿಷ್ಠೆಗೆ ಅಗ್ರಹಾರ ಬಾಚಹಳ್ಳಿಯ ಪುಣಿಸವುಯ್ಯ ದೇವಾಲಯದ ಆವರಣದಲ್ಲಿರುವ ಗರುಡಗಂಭಗಳೇ ಸಾಕ್ಷಿ. ಇವರು ಹೊಯ್ಸಳರಿಗೆ ಅಂಗರಕ್ಷಕರಾಗಿದ್ದುದು, ಗರುಡ ಪದ್ಧತಿಗೆ ನಿದರ್ಶನ. ಈ ಕುಲದ ಹೊಯ್ಸಳಸೆಟ್ಟಿ, ಮಾಚವ್ವೆ ನಾಯಕತ್ತಿ, ಕೂರೆಯ ನಾಯಕ-ಮಾರವ್ವೆನಾಯಕಿತ್ತಿ, ಲಬ್ಬೆಯ ನಾಯಕ, ಗಂಗಾದೇವಿ, ಕಂನೆಯನಾಯಕ, ವುಂಮವ್ವೆ, ಜವನವ್ವೆ ಮತ್ತು ಕಲ್ಲವ್ವೆ ಹಾಗೂ ಅವರೊಂದಿಗೆ ಲೆಂಕರು ಲೆಂಕಿತಿಯರು ಪ್ರಾಣತ್ಯಾಗ ಮಾಡಿದ್ದನ್ನು ಅವಲೋಕಿಸಿದಾಗ ಅಂದಿನ ಸಮಾಜದ ಆಳುವ ವರ್ಗದಲ್ಲಿದ್ದ ನೈತಿಕ ಮೌಲ್ಯ ವೇದ್ಯವಾಗುತ್ತದೆ.

ತಾಲ್ಲೂಕಿನ ಜಾಕನಕೆರೆ ಶಾಸನ[೩] ಬೆಳ್ಳಿಯರ ಕುಲದೀಪಕನೆನಿಸಿದ್ದ ಕಲ್ಲಗಾವುಂಡನ ಪೂರ್ವಜರು ಮತ್ತು ಆತನ ಸಾರ್ವಜನಿಕ ಕಾರ್ಯಗಳನ್ನು ದಾಖಲಿಸಿದೆ. ಪೂರ್ವಜರಲ್ಲಿ ದಂಮ್ಮಿಗವುಡ-ಬೊಂಮುಗವುಡಿ, ಹರಿಯಗವುಂಡ, ಹಿರಿಯಗವುಂಡಿ ಮಾರದೇವ ಮತ್ತು ಮಾಚಿಗವುಂಡಿಯರನ್ನು ಹೆಸರಿಸಿದೆ. ಕಲ್ಲಗಾವುಂಡ ತನ್ನ ಅಜ್ಜ ದಂಮಗವುಂಡನ ಹೆಸರಿನಲ್ಲಿ ದಂಮ್ಮೇಶ್ವರ ದೇವಾಲಯ ಕಟ್ಟಿಸಿ, ಹಿರಿಯರಿಗೆ ಗೌರವ ಸೂಚಿಸಿದ್ದಾನೆ. ಈತ ಅನ್ನದಾನಕ್ಕೂ ಹೆಸರುವಾಸಿಯಾಗಿದ್ದನಂತಿದೆ.

ಹೊಯ್ಸಳ ವೀರನರಸಿಂಹನ ಕಾಲದ ಕೈಗೋನಹಳ್ಳಿ ವೀರಗಲ್ಲು ಶಾಸನ[೪] ಕುರುವಂಕನಾಡಿನ ಸಂಕಿಯರ ಕುಲದವರನ್ನು ರಣರಂಗಧೀರರೆಂದು ವರ್ಣಿಸಿ ಮಾದಿಗೌಡನ ಪುತ್ರರಾದ ಕಹಿಗೌಡ, ಕರಕಗೌಡ, ಭುವಗೌಡ, ಗೌಡಗೊಡ್ಡ, ರಾಯಗೌಡ್ಡ ಮತ್ತು ಮುರಿರಾಯ ಗೌಡ್ಡನನ್ನು ಹೆಸರಿಸಿದೆ. ಇವರು ರಕ್ಷಣಾ ಕಾರ್ಯದಲ್ಲಿ ನಿರತರಾಗಿದ್ದಾಗ ಸಾವನ್ನಪ್ಪಿದ್ದನ್ನು ದಾಖಲಿಸಿದೆ. ಉಳಿದಂತೆ ಹೆಚ್ಚಿನ ವಿವರಗಳಿಲ್ಲ. ಗೌಡಗುಡ್ಡೆಗೆ ಪರೋಕ್ಷ ವಿನಯವಾಗಿ ಅಂದರೆ ಆತನ ಸ್ಮರಣಾರ್ಥ ಮಾಡಿಸಿದ ಕಲ್ಲು ಎಂದಿದೆಯಷ್ಟೆ.

ಪಾಂಡವಪುರ ತಾಲೂಕಿನಲ್ಲಿ ಎಮ್ಮೆ, ಕೊಮ್ಮೆ, ಬೊಲರು, ಸಂಕಿಯರು, ಬಳೆಗಾರರು, ಗಂಗಡಿಕಾರರ ಚಟುವಟಿಕೆಗಳ ಬಗ್ಗೆ ಮಾಹಿತಿ ದೊರೆಯುತ್ತದೆ. ತಿರುಮಲ ಸಾಗರ ಛತ್ರದ ಶಂಭು ದೇವಸ್ಥಾನದ ಮುಂದಿರುವ ಕ್ರಿ.ಶ. ೧೧೨೫ರ ಶಾಸನ[೫] ಬಳೆಗಾರ ಕುಲದ ಬೀವಿಸೆಟ್ಟಿ ಮತ್ತು ಬೋಕಜ್ಜಿ ಪುತ್ರರಾದ ಬಿಮ್ಮಣ್ಣನು ಇಂಗಿಲಿಕನಕುಪ್ಪೆಯ ಸ್ವಯಂಭು ದೇವರಿಗೆ ಎರಡು ದೇವಾಲಯ ಮಾಡಿಸಿ ಉತ್ತರ ದಿಕ್ಕಿನಲ್ಲಿ ಕಾಲುವೆ ನಿರ್ಮಿಸಿ, ಧರ್ಮರಾಸಿ ಪಂಡಿತ ದೇವರಿಗೆ ಬಿಟ್ಟುಕೊಟ್ಟದ್ದನ್ನು ದಾಖಲಿಸಿದೆ. ತಮ್ಮ ಕುಲ ವೃತ್ತಿಯನ್ನು ಶಾಶ್ವತಗೊಳಿಸಿದ್ದರೂ ಅವರು ಸಿದ್ಧಪಡಿಸಿ ಮಾಡುತ್ತಿದ್ದ ಬಳೆಗಳ ಪ್ರಸ್ತಾಪ ಮಾಡಿಲ್ಲ. ಸಮಾಜ ಸೇವಾ ಕಾರ್ಯಕ್ಕೆ ತಮ್ಮನ್ನು ತೊಡಗಿಸಿಕೊಂಡಿದ್ದರೆಂದು ಗೊತ್ತಾಗುತ್ತದೆ. ಇದರಿಂದ ಗ್ರಾಮಗಳಲ್ಲಿ ಬಳೆಗಾರರ ಕೊಡುಗೆಯನ್ನು ತಿಳಿಯಬಹುದು.

ಈ ತಾಲ್ಲೂಕಿನ ಮಾಳನಹಳ್ಳಿ ೧೧೮೫ರ ಶಾಸನ[೬] ಕುರುಕ್ಕಿನಾಡ ಮಾಳನಹಳ್ಳಿಯ ಎಮ್ಮೆಯರ ಕೊಲ(ಕುಲ)ದ 'ಚೌಕಗವುಂಡನ ಮಗ ಹರದಗಾವುಂಡ ಹರದ ಸಮುದ್ರ ಕಟ್ಟಿಸಿ, ದೇವಾಲಯವನೆತ್ತಿಸಿ ಹರದೇಶ್ವರ ದೇವರ್ಗ್ಗೆ ಬಿಟ್ಟಮಣ್ಣ ದತ್ತಿ' ಎಂದು ನೀರಾವರಿ ಕ್ಷೇತ್ರಕ್ಕೆ ಎಮ್ಮೆಯಿರ ಕೊಡುಗೆಯನ್ನು ಸ್ಮರಿಸುವಂತೆ ಮಾಡಿದೆ.

ಹೊಯ್ಸಳ ನರಸಿಂಹದೇವನ ಸುಂಕತೊಂಡನೂರು ಶಾಸನ[೭] **ಕೊಮ್ಮಕುಲದ** ಕೊಮ್ಮರಾಜ ಮತ್ತು ದೇಚಲೆಯನ್ನು ಹೆಸರಿಸುತ್ತದೆ. ಅಲ್ಲದೆ 'ದೇಶಾಧಿಕಾರಿ ಕಮ್ಮ ಕುಲೇಶರ್ದ್ವಿಜವಂಶತಿಳಕನ ಪ್ರತಿಮೆಯಳ ಕೌಶಿಕಗೋತ್ರ' ಎಂದು ಉಲ್ಲೇಖಿಸುತ್ತದೆ. ಇದರಿಂದ ಕಮ್ಮ ಕೊಮ್ಮೆಯರು ಕೌಶಿಕ ಗೋತ್ರಕೆ ಸೇರಿದವರೆಂದೂ ದ್ವಿಜವಂಶದವರೆಂದು ತಿಳಿಯಬಹುದೇ ? ಅಂದರೆ ಕ್ಷತ್ರಿಯರಾಗಿರಬಹುದೇ ? ಆದರೆ ಸಾಕಷ್ಟು ಮಾಹಿತಿಗಳಿಲ್ಲ.

ಈ ತಾಲೂಕಿನ **ಸಂಕಿಯರು** ರಕ್ಷಣಾ ಕಾರ್ಯಕ್ಕೆ ಹೆಚ್ಚು ಒತ್ತು ಕೊಟ್ಟಂತಿದೆ. ಕ್ರಿ.ಶ. ೧೨೮೩-೮೪ರ ಪಟ್ಟ ಸೋಮನಹಳ್ಳಿಯ ಶಾಸನ[೮] 'ಸಂಕಿಯರ ಕುಲದ ಸಾವಂತನ ಮಗ ಮಲ್ಲಯ್ಯ ವೀರ ಸ್ವರ್ಗ ಸೇರಿದ ಸ್ಮರಣಾರ್ಥ ನಿಲ್ಲಿಸಿದ ಕಲ್ಲು ಎಂಬ ಅಂಶ ಅವರ ಸಾಹಸ ಪ್ರವೃತ್ತಿಯನ್ನು ಪುಷ್ಟೀಕರಿಸುತ್ತದೆ.

ಇನ್ನು ಕ್ರಿ.ಶ. ೧೪೪೬-೪೭ರ ಹೊಸಹಳ್ಳಿಯ ಶಾಸನ[೯] **ಬೊಲರು** ಕುಲದವರು ಸತ್ತವರ ಸ್ಮರಣಾರ್ಥ ವೃಂದಾವನ ಕಟ್ಟಿಸಿದ್ದನ್ನು ತಿಳಿಸುತ್ತದೆ. ಇದನ್ನು ಧರ್ಮರಾಜರ ಕುಮಾರ ತಿರುಮಲರಾಜರ ಧರ್ಮಕ್ಕೆಂದು ಕಟ್ಟಿಸಿದೆ ಎಂದು ಹೇಳಲಾಗಿದೆ. ಶಾಸನದ ಕಾಲ ವಿಜಯನಗರಕ್ಕೆ ಅನ್ವಯಿಸುತ್ತಿದ್ದು ಹೆಚ್ಚಿನ ವಿವರಗಳಿಲ್ಲ.

ವಿಜಯನಗರದರಸರ ತರುವಾಯ ಸಾಮಾಜಿಕ ಉಪದ್ರ ಕಂಡುಬಂದಾಗ ಸ್ಪಂದಿಸಿದ **ಗಂಗಡಿಕಾರರ** ಬಗ್ಗೆ

ಕನ್ನಂಬಾಡಿ ಶಾಸನ[೧೦] ತಿಳಿಸುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಈ ಸೀಮೆಯಲ್ಲಿ ಮಹೇಶ್ವರಿ ಉಪದ್ರದಿಂದ ವಾಂತಿಭ್ರಾಂತಿಯಾಗಿ ಜನ ಮರಣ ಹೊಂದುತ್ತಿದ್ದರು. ಆಗ 'ಈ ಕಣ್ವಪುರಿ ಕ್ಷೇತ್ರದಲ್ಲಿದ್ದ ನಾಲ್ಕನೇ ವರ್ಣದಲ್ಲಿ ಗಂಗಡಿಕಾರರಲ್ಲಿ ಜನಿಸಿದ ಬೋಗೆಗೌಡನ ಪೌತ್ರನಾದ ಮರಿನಂಜೇಗೌಡನ ಪುತ್ರನಾದ ಬೋಗೌಡನ ಪತ್ನಿ ತಿಂಮಂಮನ ಪುತ್ರಿಯಾದ ನಂಜಮ್ಮ' ಎಂಬ ಕನ್ನಿಕೆ ಮೇಲೆ ಶ್ರೀ ಅಂಮನವರು ಅವಿರ್ಭವಿಸಿ, ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ನಾಲ್ಕು ವರ್ಣದಲ್ಲೂ ಮನೋಭಿಲಾಷೆಗಳು ಉಪದ್ರಗಳು ಪರಿಹಾರವಾದ್ರಿಂದ ಹಾಗೂ ಬಂದ ಕಾಣಿಕೆಯಲ್ಲಿ ನಂಜಯನು ಕನ್ನಂಬಾಡಿ ಗ್ರಾಮ ಮಧ್ಯದಲ್ಲಿ ನೂತನ (ಹೊಸ) ದೇವಸ್ಥಾನ ಕಟ್ಟಿಸಿ ಭೂತಗಣಕ್ಕೆ ಅಧಿಷ್ಠಾನ ದೇವತೆಯರಾದ ಮಹಾಕಾಳಿ ಮಹಾಲಕ್ಷ್ಮಿ, ಸರಸ್ವತಿ ಅಮ್ಮನವರನ್ನು ಪರಿವಾರ ಸಮೇತ ಪ್ರತಿಷ್ಠಾಪಿಸಿದ ಎಂದಿದೆ. ಈ ಘಟನೆ ಅಂದು ಸಮಾಜದಲ್ಲಿ ಇಳಿಮುಖವಾಗುತ್ತಿದ್ದ ಶ್ರದ್ಧೆ ಭಕ್ತಿಯ ಬಗ್ಗೆಯೂ, ಅದರಿಂದುಂಟಾಗುತ್ತಿದ್ದ ಸಾಮಾಜಿಕ ತೊಂದರೆ ಬಗ್ಗೆ ಹಾಗೂ ಪರಿಹಾರ ಕ್ರಮಗಳು ಆತ್ಮಾವಲೋಕನಕ್ಕೆ ಎಡೆಮಾಡಿ ಕೊಟ್ಟಿತ್ತೆಂದು ವೇದ್ಯವಾಗುತ್ತದೆ. ಇಲ್ಲಿ ಗಂಗವಾಡಿಯ ಗಂಗಡಿಕಾರರು ನೆಲೆಸಿದ್ದ ಬಗ್ಗೆ ಸೂಚ್ಯವಾಗಿ ತಿಳಿಯುತ್ತದೆ.

ಮಂಡ್ಯ ತಾಲೂಕಿನಲ್ಲಿ ತೆನದಂಕರು, ಮದುರೆ ಮತ್ತು ಗುದಿಯರ ಚಟುವಟಿಕೆಗಳನ್ನು ಕಾಣಬಹುದು. ಕ್ರಿ.ಶ. ೧೨೨೧ರ ಹಂಪಾಪುರ ಶಾಸನ[೧೧] **ಗುದಿಯರ** ಕುಲದ ಕರೆಗೌಡನ ಮಗ ರಂಗಗೌಡನು ಕಾದಾಡಿ ಸತ್ತಾಗ ಆತನಿಗೆ ವೀರಗಲ್ಲು ನಿಲ್ಲಿಸಿದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೨೩೪ರ ಬಸರಾಳು ಶಾಸನ[೧೨] ತೆನದಂಕ ಕುಲದ ಹರಿಹರನ ವ್ಯಕ್ತಿತ್ವವನ್ನು ದಾಖಲಿಸಿದೆ. ಇವನು ನಾಲ್ವತ್ತು ನಾಯಕರ ಗಂಡ, ಪ್ರಧಾನ ಚೂಡಾರತ್ನ, ಸಮರ ಪ್ರಚಂಡ, ನಿಯೋಗ ಯೋಗಂಧರನೆಂದೂ, ದಾನಗಳಲ್ಲಿ ಕನ್ಯಾದಾನ, ಭೂದಾನ, ಗೋದಾನ, ವಿದ್ಯಾದಾನ, ವಾಹನ ಕನಕ ಪಯೋದಾನ ಮತ್ತು ದೇವತಾ ಮಂದಿರ ನಿರ್ಮಾಣದಲ್ಲಿ ಅಗ್ರಗಣ್ಯನೆಂದು ಸ್ತುತಿಸಲಾಗಿದೆ. ಈತನ ಅಜ್ಜ ಚಿಕ್ಕಹಡೆನಾಳ ವಿಷ್ಣುವರ್ಧನನ ಗೌರವಕ್ಕೆ ಪಾತ್ರನಾಗಿದ್ದ. ತಮ್ಮ ಕುಲದ ಗೌರವ ಮರ್ಯಾದೆಯನ್ನು ಕಾಯ್ದುಕೊಂಡಿದ್ದ ಹರಿಹರ ಮತ್ತು ಆತನ ಸಹೋದರರಾದ ಸಿಂಗೆಯ ನಾಯಕ ಮತ್ತು ಮಾರೆಯ ನಾಯಕರು ಸೇರಿ ತಂದೆ ಮಲ್ಲೆಯನ ಹೆಸರಿನಲ್ಲಿ ಮಲ್ಲಿಕಾರ್ಜುನ ದೇವಾಲಯ, ತಾಯಿ ಗುಜ್ಜಲೆ ಹೆಸರಿನಲ್ಲಿ ಕೆರೆ ಕಟ್ಟಿಸಿ ಕುಲದ ಕೀರ್ತಿ ಹೆಚ್ಚಿಸಿದರು. ಇಂದಿಗೂ ಮಲ್ಲಿಕಾರ್ಜುನ ದೇವಾಲಯ ಬಸರಾಳಿನ ಪ್ರಮುಖ ಆಕರ್ಷಣೆಯಾಗಿ ಉಳಿದಿದೆ. ಕ್ರಿ.ಶ. ೧೧೬೭ರ ತೊಂಡಾಳು ಶಾಸನ[೧೩] (ಹುಣಸೂರು ತಾಲೂಕು) ತೆನದಂಕರ ಬೋಗೆಯ ಸಾವಂತನ ಮಗ ಹರದ ಗಾವುಂಡನು ತಾಳೆಯೆ ಸಾವಂತ ಗವುಡ ನೊಡವುಟ್ಟಿದ ತಮುತ್ತಯ್ಯರ ಮಕ್ಕಳು ಕಟ್ಟಿಸಿದ ಕೆರೆ ಎತ್ತಿಸಿದ ದೇವಾಲ್ಯಕೆ ಗದ್ದೆ ಬೆದ್ದಲೆ ಬಿಟ್ಟ ದತ್ತಿ ದಾಖಲಿಸುತ್ತದೆ. ಕ್ರಿ.ಶ. ೧೧೬೯ರ ಕೆಂಪನಪುರ ಶಾಸನ[೧೪] (ಚಾಮರಾಜನಗರ ತಾಲೂಕು) ಹೊಮ್ಮದ ತೆನದಕರ ಕ್ಷೇತ್ರಗೌಂಡನನ್ನು ಅದೇ ತಾಲೂಕಿನ ಕ್ರಿ.ಶ. ೧೨೮೯ರ ಬಾಗಳಿ ಶಾಸನ[೧೫] ತೊನದಕರ ಜಗಗೌಡನ ಮಗ ಮಾದಿಗೌಡನನ್ನು ಹೆಸರಿಸಿದೆ. ಉಲ್ಲೇಖಿತ ಶಾಸನಗಳು ತೆನದಂಕ ಕುಲಗಳು ಮೈಸೂರು ಜಿಲ್ಲೆಯಲ್ಲೂ ನೆಲೆಸಿದ್ದುದರ ಸುಳಿವು ನೀಡುತ್ತದೆ. ಸಾರ್ವಜನಿಕರ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದುದನ್ನು ಸ್ಪಷ್ಟಪಡಿಸುತ್ತವೆ.

ಮದುರೆಯರ ಕುಲ–ಅಗ್ರಹಾರ ಮಲ್ಲಿಕಾರ್ಜುನಪುರವಾದ ಗುತ್ತಲ ಗೋಪಾಲದೇವನ ಮಕ್ಕಳು ವಿಸ್ಸಂಣಗಳು ಅಲ್ಲಪ್ಪನು ಕಾಣಂ ಕ್ರಯಿಕೊಂಡ ಬಸದಿ ಹಳ್ಳಿಯ ಮದುರೆಯದ ಕುಲದ ಕೆಂಚಗವುಡನ ಮಕ್ಕಳು ಗವುಡಿತಂಮಗೆ ಕೊಡಗೆದೆರೆಯಾಗಿ ಕೊಟ್ಟ ವಿವರವನ್ನು ಗುತ್ತಲು ಶಾಸನ ದಾಖಲಿಸಿದೆ[೧೬] ಭೂಮಿ ಹಾಗೂ ಮನೆ ಕೊಟ್ಟದ್ದಕ್ಕೆ ಸಾಕ್ಷಿಗಳಾಗಿದ್ದವರಲ್ಲಿ 'ಧರಣಿ ದೇವನಾಗಣ್ಣ ಗುತ್ತಲ ನಾಲ್ವರು ಗವುಡಗಳು ಸ್ಥಾನಿಕರು ನಾಲ್ವರು ಕುಂಬಾರು ಹೆಗ್ಗಡಿಗಳು ಕನಬೋವನೊಳಗಾದ ನಾಲ್ವ ಬೋವಗಳು ಅಜೋಜ ಜಕೋಜ ಅಸಗರ ಭೀಮ ನಾಇಂದ ಹೆಬಹೊಲೆ ಮಂಡನಯಾರ' ಎಂಬ ವಿವರ ಇದೊಂದು ಮಹತ್ವದ ಕೊಡಗೆಯಾಗಿದ್ದು ಸ್ಥಳೀಯ ಪ್ರಜೆಗಳ ಸಮ್ಮುಖದಲ್ಲಿ ನೀಡಲಾಗಿತ್ತೆಂದು ಹಾಗೂ ಸಮಾಜದ ವಿವಿಧ ವರ್ಗಗಳ ಪ್ರತಿನಿಧಿಗಳಿದ್ದುದನ್ನು ಸ್ಪಷ್ಟಪಡಿಸುತ್ತದೆ.

ನಾಗಮಂಗಲ ತಾಲೂಕಿನ ಭೀಮನಹಳ್ಳಿ ಶಾಸನದಲ್ಲಿ[೧೭] ಕೊಮ್ಮೆಯ ಮೇರುವೆನಿಸಿದ್ದ ಮದ್ದಗೌಡನ ತಂಮ ಹೆಂಮಗೌಡನ ತಂಮ ಮಾದಿಗೌಡರು ತಮ್ಮ ಕುಲ ಕೊಮ್ಮೇಶ್ವರ ದೇವರ ಪ್ರತಿಷ್ಠೆ ಮಾಡಿಸಿ ದೇವರ ಪೂಜೆ ಪುನಸ್ಕಾರ ಭೋಗ ನಿತ್ಯನೈವೇದ್ಯ ನಂದಾದೀವಿಗೆಗೆ ದತ್ತಿ ಕೊಟ್ಟು ಅದನ್ನು ಮಾದಜೀಯನ ಮಕ್ಕಳು ಬೀಚಜೀಯ ಸಂಕಜೀಯವರು ಕುಂದದೆ ನಡೆಸಬೇಕೆಂದು ಹೇಳಲಾಗಿದೆ. ಕೊಮ್ಮ ಕುಲದವರು 'ನಂಜನಗೂಡು ತಾಲ್ಲೂಕಿನಿಂದ ನಾಗಮಂಗಲ ತಾಲೂಕಿನವರೆಗೆ ವಿಸ್ತರಿಸಿದ್ದನ್ನು ಮನಗಾಣಬಹುದು.' ತಗಡೂರಿನ ಪ್ರಭುಗಳಾಗಿ[೧೮] ದೀರ್ಘಕಾಲ ಪ್ರಭಾವ ಬೀರಿದ್ದ ಕೊಮ್ಮೆಯರ ಶಾಖೆಗಳು ವಿಸ್ತರಿಸತ್ತೆಂಬುದು ಸ್ಫುಟವಾಗುತ್ತದೆ.

ಕ್ರಿ.ಶ. ೧೧೩೯–೪೦ರ ಮುದಿಗೆರೆ ಶಾಸನ[೧೯] **ಗಾರಂದರ ಕುಲ** ಕಮಳ ಮಾರ್ತಾಂಡನೆನಿಸಿದ್ದ ಚಾಮಗವುಂಡನ ಮಗ ಬಿನ್ನಾಂಡಿ ಮುದಿಗೆರೆಯನ್ನಾಳುತ್ತಿದ್ದ. ಆತನ ತಾಯಿ, ಅಜ್ಜ ಮತ್ತು ಅಜ್ಜಿ ಸ್ವರ್ಗಸ್ಥರಾದಾಗ ಅವರ ಹೆಸರಿನಲ್ಲಿ ಲಿಂಗ ಪ್ರತಿಷ್ಠೆ ಮಾಡಿ ಗರಂಜೇಶ್ವರ ದೇವರೆಂದು ಹೆಸರಿಸಿ ದತ್ತಿ ಬಿಡಲಾಯಿತೆಂದು ಉಲ್ಲೇಖಿಸಿದೆ. ಇದು ಪರೋಕ್ಷ ವಿನಯಕ್ಕೆ ಮತ್ತೊಂದು ನಿದರ್ಶನ.

**ಮೊಡೆ ಕುಲದ** ಪೆರುಮಾಳದೇವ ದಂಡನಾಯಕ ಹೊಯ್ಸಳರ ಘನತೆ ಗೌರವ ಹೆಚ್ಚಿಸಲು ಶ್ರಮಿಸಿದ್ದ. ಈತನ ಬಗ್ಗೆ ಬೆಳ್ಳೂರು ಶಾಸನಗಳು[೨೦] ಇಲ್ಲಿಯೂ ಆತ ಕಾರ್ಯನಿರತನಾದುದನ್ನು ತಿಳಿಸುತ್ತದೆ. ಅದರಂತೆ ಬೆಳ್ಳೂರಿನಲ್ಲಿ ಅಲ್ಲಾಳ ಸಮುದ್ರ ಕೆರೆ ಕಟ್ಟಿಸಿ ಅಗ್ರಹಾರದ ಒಡೆತನ ಗಳಿಸಿದ್ದನ್ನು ದಾಖಲಿಸಿವೆ.

ಹೊಯ್ಸಳರ ಮತ್ತೊಬ್ಬ ಖ್ಯಾತ ದಂಡನಾಯಕ ಕಾಚಿದೇವ. ಈತ ಕುರುವಂದ ಕುಲಕಮಲನೆನಿಸಿದ್ದ. ಇವನನ್ನು ವರ್ಣಿಸಿರುವ ಪರಿ ಹೀಗಿದೆ. ಮೊರಸಾಧಿರಾಯ, ಹಟ್ಟಿಕಾಳಗಕ್ಕೆ ಮಲೆವ ಸಾವಂತರಗಂಡ, ಪ್ರತಾಪ ಕಂಠೀರವ ಅಪರಿಮಿತಿ ದಾನಸಾರವೃಷ್ಟಿ, ವೀರರಾಜೇಂದ್ರ ಹೊಯ್ಸಳ, ಎಡಗೈಯ ಸೇನಾದಂಡ ನಾಯಕ, 'ಚತುರ್ಥವಂಶ'ದಲ್ಲಿ ಜನಿಸಿದವನೆಂದು ಹೇಳಲಾಗಿದೆ. ಎಡಗೈಯ ಸೇನಾನಾಯಕನೆಂದರೆ ಎಡಚನಾಗಿದ್ದು ಎಡಗೈ ಬಳಕೆಯವನೆಂದು ಅರ್ಥೈಸಿ ಕೊಳ್ಳುವುದು ಸಹಜ. ಮಹಮದ್ ಕರೀಂ ಉಲ್ಲಾ ಅವರು ತಮ್ಮ 'ನಾಗಮಂಗಲ ದರ್ಶನ' ಕೃತಿಯಲ್ಲಿ ಕಾಚಿದೇವ 'Left wing commander' ಎಂದು ಅರ್ಥೈಸಿದ್ದಾರೆ (ಪುಟ ೭೭) ಕಾಚಿದೇವ ತನ್ನ ಅಜ್ಜ ಸಿಂಧನಾಯಕನ ಹೆಸರಿನಲ್ಲಿ ಶ್ರೀ ಸಿಂಧೇಶ್ವರ ದೇವಾಲಯವನ್ನೂ ಲಕ್ಷ್ಮಿನಾರಾಯಣ ಮತ್ತು ಗೋಪಾಲ ದೇವರನ್ನು ಪ್ರತಿಷ್ಠಾಪಿಸಿ ದೇವರ ಶ್ರೀ ಕಾರ್ಯಗಳಿಗೆ ದತ್ತಿ ಬಿಟ್ಟದ್ದನ್ನು ಬೆಳ್ಳೂರಿನ ಶಾಸನ[೨೧] ತಿಳಿಸುತ್ತದೆ. ಮಹಾಸತಿ ದೇಕಬ್ಬೆಯ ಪತಿ ನವಿಲೆನಾಡಿನ ಏಚನು ಕುರುವಂದ ಕುಲದವನು ಎಂದು ಚಿಳತೂರು ಶಾಸನದಲ್ಲಿದೆ.[೨೨]

ಚನ್ನಬಸವಪ್ಪ ಎಸ್. ಪಾಟೀಲರು 'ನಾಗಮಂಗಲದ ಪ್ರಭುಗಳು' ಲೇಖನದಲ್ಲಿ[೨೩] ಈ ತಾಲೂಕಿನ ಲೋಹಿತಕುಲದ ಸಿಂಗಣ್ಣ ಒಡೆಯ ಆತನ ಪತ್ನಿ ಸೀತಾಂಬಿಕಾ ಮಕ್ಕಳು ತಿಮ್ಮಣ್ಣ ಮತ್ತು ದೇವರಾಜರ ಬಗ್ಗೆ ತಿಳಿಸಿದ್ದಾರೆ. ವಿಜಯನಗರದರಸ ಮಲ್ಲಿಕಾರ್ಜುನನ ಪ್ರಧಾನನಾಗಿದ್ದ ತಿಮ್ಮಣ್ಣ ದಂಡನಾಯಕನ ವಂಶಸ್ಥರು ೧೪೯೫ ರವರೆಗೆ ಸಾಮಂತರಾಗಿದ್ದರು.

ಮದ್ದೂರು ತಾಲೂಕಿನ ಬಾರಂದರು, ತೆಳ್ಳರು ಮತ್ತು ಬಡವಾರ ಕುಲದವರು ಗಮನಾರ್ಹರು. ಇವರ ಬಗ್ಗೆ 'ಬೆಲ್ಲೂರು, ಹಾಗಲಹಳ್ಳಿ ಮತ್ತು ಅರವನಹಳ್ಳಿ ಶಾಸನಗಳು ಉಪಯುಕ್ತವಾಗಿವೆ. ಕ್ರಿ.ಶ. ೧೧೦೮ರ ಶ್ರೀರಂಗಪಟ್ಟಣ ಶಾಸನ ಮೂಲಕ ಬಾರಂದರ ಮಂಚಗೌಡನನ್ನು ಹೆಸರಿಸಿದೆ. ಕ್ರಿ.ಶ. ೧೨೦೦ರ ಬೆಲ್ಲೂರು ಶಾಸನ[೨೪] ಬಾರಂದರ ಚಿಕ್ಕೆಗೊಂಡನ ಮಗ ಕಾಬ್ವೆಯ ಗೋರಕ್ಷಣೆಯಲ್ಲಿ ಪರಲೋಕ ಸೇರಿದ ಪ್ರಯುಕ್ತ ವೀರಗಲ್ಲು ನಿಲ್ಲಿಸಿದ್ದನ್ನು ತಿಳಿಸುತ್ತದೆ. ಅದೇ ರೀತಿ ಕ್ರಿ.ಶ. ೧೨೬೪ರ ಬೆಲ್ಲೂರ ಶಾಸನ[೨೫] ಬಾರಮದರ ಕಾಳಗೌಡನ ಮಗ ಭೂಮಿಕಾರ ಬೀರಗೌಡನಹಳ್ಳಿಯ ಅಸಗರ ಗೊರವಹಂದಿಯನ್ನು ಕೊಂದು ಸ್ವರ್ಗ ಸೇರಿದ್ದಕ್ಕಾಗಿ ಮಾಡಿಸಿದ ವೀರಗಲ್ಲನ್ನು ದಾಖಲಿಸುತ್ತದೆ. ಇದು ರಕ್ಷಣೆ ಕಾರ್ಯದಲ್ಲಿ ನಿರತರಾಗಿದ್ದರೆಂದು ತಿಳಿಯಪಡಿಸುತ್ತದೆ.

ತೆಳ್ಳರು ನಾಡವಮಾಂಡಳಿಕರಾಗಿ ಹೊಯ್ಸಳರ ಲೆಂಕರಾಗಿದ್ದುದನ್ನು ಹಾಗಲಹಳ್ಳಿ ಶಾಸನದಲ್ಲಿ[೨೬] ಕಾಣಬಹುದು. ಅದರಂತೆ ದೇಸಿಯಪ್ಪನ ಮಕ್ಕಳಾದ ಬೊಂಮ್ಮದೇವ ಮತ್ತು ಸೋಮಯ್ಯ ನಾಡಮಾಂಡಳಿಕ ರಾಗಿದ್ದು ತೆಳ್ಳರ ಕುಲಕೆ ತಿಲಕರೆನಿಸಿದ್ದರು ಹಾಗೂ ಸಾಮಂತದೇವ ಗೋತ್ರ ಚಿಂತಾಮಣಿ ಹೊಯ್ಸಳ ಲೆಂಕರೆಂದು ಗುರುತಿಸಲ್ಪಟ್ಟಿದ್ದಾರೆ. ಈ ಶಾಸನದಲ್ಲಿ ಎರೆಯಂಗನನ್ನು ಹೆಸರಿಸಲಾಗಿದೆ. ಮತ್ತೊಂದು ಶಾಸನ[೨೭] ತಿಪ್ಪೂರ ತೀರ್ಥದ ತಳಂ ಕುಲದ ಚಾಮಗವುಡನ ಮಗ ಆದಿತ್ಯಗವುಡ ಬೊಪ್ಪ ಸಮುದ್ರದಲ್ಲಿ ತುರುಗಳ ಕಾಳಗದಲ್ಲಿ ಹೋರಾಡಿ ಮಡಿದ ಸ್ಮರಣಾರ್ಥ ನಿಲ್ಲಿಸಿದ ವೀರಗಲ್ಲು ಎಂದಿದೆ. ಹಾಗಲಹಳ್ಳಿಯ ಕ್ರಿ.ಶ. ೧೭೦೦ರ ಶಾಸನ[೨೮] ಶ್ರೀ ತಿಪ್ಪೂರು ತೀರ್ಥದ ಹಳ್ಳಿ ಹಾದಿರವಾಗಿಲ ಭೂಮಿಕಾರರು ತೆಳ್ಳರ ಕುಲದ ಎರೆಯಂಗ ಗಾವುಂಡನ ಮಗ ದೇವಗಾವುಂಡ ಆತನ ಮಗ ಕಾವಗಾವುಂಡನ ಮಗ ಚಾಮಗಾವುಂಡನು ಕಲ್ಲಗಾಣ ಮಾಡಿಸಿದನೆಂದು ದಾಖಲಿಸಿದೆ. ಇದರಿಂದ ತಿಪ್ಪೂರು ತೆಳ್ಳರ ಕುಲದವರ ನೆಲೆಯಾಗಿತ್ತೆಂಬುದರಲ್ಲಿ ಸಂದೇಹವಿಲ್ಲ ದೀರ್ಘಕಾಲ ಈ ನಾಡಿನಲ್ಲಿ ನೆಲೆ ನಿಂತಿದ್ದುದಂತೂ ನಿಜ. ಇವರು ಸ್ಥಳೀಯ ಮತ್ತೊಂದು ಕುಲದೊಂದಿಗೆ ವ್ಯವಹರಿಸುತ್ತಿದ್ದುದನ್ನು ಕಾಣುತ್ತೇವೆ. ಆ ಕುಲವೇ ಬಡವಾರರು.

ಬಡವಾರರಿಗೆ ಸಂಬಂಧಿಸಿದಂತೆ ಅರುವನಹಳ್ಳಿಯ ಶಾಸನಗಳು ಅಮೂಲ್ಯ ಮಾಹಿತಿಯನ್ನೊದಗಿಸುತ್ತವೆ. ಕ್ರಿ.ಶ. ೧೩೧೬ರ ಮೂರನೇ ಬಲ್ಲಾಳನ[೨೯] ಶಾಸನ ಬಡವಾರ ಕುಲದ ಕೀರ್ತಿದೇವನಿಗೆ ಅರುವನಹಳ್ಳಿ ಬಿಟ್ಟು ಕೊಟ್ಟದ್ದನ್ನು ಉಲ್ಲೇಖಿಸಿದೆ. ಕೀರ್ತಿದೇವನನ್ನು 'ಆನೆಯನು ಹಡದು ತಂದ ಕಂಸರದೇವ' ಎಂದು ಹೇಳಿದಂತಿದೆ. ಕ್ರಿ.ಶ. ೧೩೫೮ರ ಶಾಸನ[೩೦] 'ಕೀರ್ತಿದೇವತನೂಭವ ಬಾಚಪ್ಪ ಸುಖೀಭವ' ಎಂದು ಉದ್ಗರಿಸಿ, ಆತ ಆಸ್ಥಾನ ಜಗಚೆಟ್ಟಿ, ಬಡಿವಗೋತ್ರೇಣ ಸವಿತ್ರೇಯಕರ ಚಾರಿತ್ರಂ ಭಟ್ಟಾರ ಬಾಚಪ್ಪನವರು ಮಾಡಿದ

ಪುರುಷಾರ್ಥ ಸಕಲ ಧರ್ಮಂಗಳಂ ಪೇಳ್ವೆಂ ಎಂದು, ಆತ ಬುಕ್ಕರಾಯ ಸಮುದ್ರ, ಕೀರ್ತಿ ಸಮುದ್ರ, ಬಾಚಪ್ಪನಕೆರೆ, ಚವುಡಪ್ಪನ ಕಾಲುವೆ, ತಾಯಿ ಹೆಸರಲ್ಲಿ ಮಾಳವ್ವೆಕೆರೆ ಕಟ್ಟಿಸಿ, 'ತೆಂಗಿನ ತೋಟ ಮಾಡಿಸಿ, ನಾಲ್ಕು ದಿಕ್ಕಿನಲ್ಲಿ ಸಾಲುಮರ ನೆಡಿಸಿ, ಚತುಸೀಮೆಯೊಳಗೆ ಇಕ್ಕಿಸಿದಂಥಾ ಅರಳಿ ಮರಗಳಿಗೆ ಮುಂಜಿಯನು ಮಾಡಿಸಿ ತನ್ನ ಹೆಸರಿನಲ್ಲಿ ಬಾಚಪಟ್ಟಣ ಕಟ್ಟಿಸಿದ್ದನ್ನು ಅರುಹುತ್ತದೆ. ಕ್ರಿ.ಶ. ೧೩೬೨ರ ಶಾಸನ[೩೧].

ಬಾಚಪ್ಪನ ತಮ್ಮ ದೇವಪ್ಪ ಸ್ವರ್ಗಸ್ಥನಾದಾಗ ಆತನ ಅರಸಿ ಬಯಿಚಕ್ಕನಿಗೂ ಸೇರಿದಂತೆ  ವೀರಗಲ್ಲು ನೆಡೆಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೩೭೪ರ ಶಾಸನ[೩೨] ಬಹು ಸ್ವಾರಸ್ಯಕರ ಮಾಹಿತಿಯನ್ನೊಳಗೊಂಡಿದೆ. ಸಹೋದರರಾದ ಹಿರಿಯ ಬಾಚಪ್ಪ ಮತ್ತು ಕಿರಿಯ ಬಾಚಪ್ಪನವರ ನಡುವೆ **ದಾಯಾದಿ ಸಂಬಂಧ ವಿಭಾಗ ಪತ್ರದ ಕಲ್ಲು ಶಾಸನದ ಓಲೆ** ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಅಲ್ಲದೆ ಇಬ್ಬರ ನಡುವೆ ಹಂಚಿಕೆಯಾದ ಊರು, ಒಕ್ಕಲು, ಕೆರೆ ತೋಟ, ಗದ್ದೆ ಬೆದ್ದಲು ವಸ್ತು ವಾಹನ, ಬಂಗಾರ, ಬೆಳ್ಳಿ, ಕಂಚು ಮುಟ್ಟುಪತ್ರ, ಸಾಲ, ಎಂಮ್ಮೆ, ಎತ್ತು, ತೊತ್ತು ದ್ರವ್ಯ ದಾಂನ್ಯ ಹಾಗ, ಚೆನ್ನ, ಮಾನ ಭತ್ತ ಎನಳ್ಳ 'ಸಕಲ ಪ್ರಾಪ್ತವನು' ಹಿರಿಯ ಬಯಿಚಪ್ಪ ಕಿರಿಯ ಬಯಿಚಪ್ಪ ಈ ಹಳ್ಳಿಯ ಸಮಸ್ತ ಗವುಡು ಪ್ರಜೆಗಳ ಮುಂದಿಟ್ಟು ಪಾಬೆಯಪ್ಪನವರ ಕೈಯಲ್ಲಿ ಹಂಚಿಕೊಂಡು ಕೊಟ್ಟ ವಿಭಾಗ ಪತ್ರವು ಚರಾಚರ ಆಸ್ತಿ ವಿತರಣಾ ಕ್ರಮವನ್ನು ದಾಖಲಿಸಿದೆ.

ಇದಕ್ಕೆ ಸಾಕ್ಷಿಗಳಾಗಿದ್ದವರಲ್ಲಿ ಹಾದರವಾಗಲು ಸಾಯನಾಯಕರ ಮಕ್ಕಳು, ಮಡಿಯನ ಹಳ್ಳಿಯ ಮಾಇಗವುಡನ ಮಕ್ಕಳು ಸಾವಂತ್ತಗಉಡ, ಹುಲಿಕೆರೆಯ ಜಗ್ಗಗೌಡನ ಮಕ್ಕಳು ಮಂಚೆಗೌಡ, ಮಾಲಗಾರನಹಳ್ಳಿಯ ರಂಗಗವುಡ, ಚಉಡಿಗಉಡ, ಅರಸನಕೆರೆಯ ಪದುಮಳಾನವರ ಮಕ್ಕಳು ಇರುಗಂನ್ನಾಂಗಳ ಬರಹ ಎಂದಿದೆ. ಹೀಗೆ ಆಸ್ತಿ ಹಂಚಿಕೆಯಾದ ಬಳಿಕ ಸಾರ್ವಜನಿಕ ಸೇವೆಗೆ ತನ್ನನ್ನು ಮುಡಿಪಾಗಿಸಿಕೊಂಡಿದ್ದ ಭಟ್ಟಾರ ಬಾಚಪ್ಪ ಹೆಚ್ಚು ಕಾಲ ಜೀವಿಸಿದಂತಿಲ್ಲ.

ಕ್ರಿ.ಶ. ೧೩೮೧ರ ಶಾಸನ[೩೩] ಪ್ರಕಾರ, ಆತ ಬಾಚಪಟ್ಟಣದ ಅಡಕೆ ತೋಟ, ಕಂಪಣನ ಅಡಕೆ ತೋಟ, ನಾಗವ್ವೆ ಕೆರೆ ನಿರ್ಮಿಸಿ ಮಲ್ಲಿಕಾರ್ಜುನ ದೇವತಾ ಪ್ರತಿಷ್ಠೆ ಮಾಡಿಸಿದ್ದ. ಅಲ್ಲದೆ ಕನಕದಂಡಿಗೆ ಕನಕಚಾಮರ ಕನಕಛತ್ರಂಗಳಂ ಧರಿಸಿ ನಿಜಕಳುತ್ರ ಸಹಿತವಾಗಿ ತುಂಗಾಭದ್ರಾ ತೀರದಲ್ಲಿ ವಿರೂಪಾಕ್ಷನ ಸಾನಿಧ್ಯದಲ್ಲಿ ಪರಮಪದಗೈದಾಗ ಆತನ ಹಿರಿಯ ಮಗ ಬುಕ್ಕಂಣ ಪ್ರಾಯಶ್ಚಿತ್ತ ಮಾಡಿ ಅಸ್ಥಿಯನ್ನು ವಾರಣಾಸಿಗೆ ಕಳುಹಿಸಿ ಶಿಲಾಶಾಸನ ಪ್ರತಿಷ್ಠೆ ಮಾಡಿದ್ದನ್ನು ತಿಳಿಯಬಹುದು.

ಕ್ರಿ.ಶ. ೧೩೮೮ರ ಬೊಪ್ಪಸಂದ್ರ ಶಾಸನ[೩೪] ಭಟ್ಟಾರ ಬಾಚಪ್ಪ ಗತಿಸಿದ ಬಳಿಕ ಆತನ ಮಕ್ಕಳಾದ ಬುಕ್ಕಣ್ಣ, ಕಂಪಣ್ಣ ಮತ್ತು ಚೌಡಪ್ಪನವರಿಗೆ ಗ್ರಾಮದೇವರುಗಳ ಕಳಶ ಕಂನಡಿಗೆಂದು ಹಾಗೂ ಗೌಡಿಕೆಗಾಗಿ ಬೊಪ್ಪ ಸಮುದ್ರವನ್ನು ಸರ್ವಬಾಧಾ ಪರಿಹಾರವಾಗಿ ಕೊಡಗೆ ನೀಡಿದ್ದನ್ನು ದಾಖಲಿಸಿದೆ. ಇದಕ್ಕೆ ಹರಿಹರರಾಯನ ಆಣೆ ರಾಮಭದ್ರಾ ದೇಜಾವೆಯರಾಣೆ ಎಂಬ ಅಂಶ ಸಮಾಜದಲ್ಲಿ ಮನೆ ಮಾಡಿದ್ದ ನಂಬಿಕೆಯನ್ನು ಪ್ರತಿಬಿಂಬಿಸುತ್ತದೆ. ಇನ್ನು ಕ್ರಿ.ಶ. ೧೩೯೨ರ ಹಾಗಲಹಳ್ಳಿ ಶಾಸನ[೩೫] ಅರುವನಹಳ್ಳಿಯ ಭಟ್ಟಾರ ಬಾಚಪ್ಪನವರ ಮಕ್ಕಳಾದ ಬುಕ್ಕಣ್ಣ ಕೀರ್ತಿದೇವ, ಕಂಪಣ್ಣ ಚೌಡಪ್ಪರಿಗೆ ತಿಳ್ಳರ ಕುಲದ ಸಾಯನಾಯಕ ಮಕ್ಕಳಾದ ದೇವಪ್ಪನವರು, ಸಹದೇವನಾಯಕನ ಮಕ್ಕಳಾದ ರಾಮಣ್ಣ ಅಲ್ಲಪ್ಪನೊಳಗಾದವರು ಸಾಲವಾಗಿ ಕೊಂಡ ಗ ೧೭೦೦ ವರಹಗಳಿಗೆ ಪ್ರಾಯಶಃ ಕೊಡಲಾಗದೆ ಹಾದರವಾಗಿಲ ಭೂಮಿ ಬಿಟ್ಟು ಕೊಟ್ಟದನ್ನು ದಾಖಲಿಸಿದಂತಿದೆ. ಇದರಿಂದ ಬಡವಾರ ಕುಲ ಮತ್ತು ತೆಳ್ಳರ ಕುಲದವರು ಹೊಯ್ಸಳ ಕಾಲದಿಂದ ನೆಲೆ ನಿಂತಿದ್ದು ಪರಸ್ಪರ ವ್ಯವಹರಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಇವರಲ್ಲಿ ಬಡವಾರ ಕುಲದವರು ತಮ್ಮ ಗೌರವ, ಪ್ರತಿಷ್ಠೆ ಉಳಿಸಿಕೊಂಡಿದ್ದು ನೀರಾವರಿ, ಕೃಷಿ ಹಾಗೂ ದೇವತಾ ಕಾರ್ಯಗಳಿಗೆ ಹೆಚ್ಚಿನ ಮಹತ್ವ ನೀಡಿದ್ದರು. ಇದರಿಂದ ಆ ಬಡವಾರರ ಕುಲ ಹೆಚ್ಚಿನ ಮನ್ನಣೆ ಗಳಿಸಿತ್ತೆಂದು ಅಂದಾಜು ಮಾಡಬಹುದು.

ಹೀಗೆ ಜಿಲ್ಲೆಯ ಹಲವು ಕುಲಗಳ ಅಧ್ಯಯನದಿಂದ ಸ್ಥಳೀಯ ಹಾಗೂ ಹೊರನಾಡುಗಳಿಂದ ವಲಸೆ ಬಂದ ಕೃಷಿಕರು ಕೃಷಿಯೋಧ ವರ್ಗಗಳಾಗಿ ಮಾರ್ಪಟ್ಟು ರಕ್ಷಣಾ ಕಾರ್ಯದಲ್ಲಿ ಪ್ರಧಾನಿಗಳಾಗಿ, ಸೀಮಂತರಾಗಿಯೂ ಹೊಯ್ಸಳರಿಗೆ ಸೇವೆ ಸಲ್ಲಿಸಿದ್ದರು. ಉದಾಹರಣೆಗೆ ಕುರುವಂದರು, ತೆನದಂಕರು, ಕೊಮ್ಮೆಯರು ಮೈಸೂರು ಜಿಲ್ಲೆಯ ವಿವಿಧೆಡೆಗಳಲ್ಲಿಯೂ ಕಂಡುಬರುತ್ತಾರೆ. ಶಾಸನೋಕ್ತ ಮೊರಸಾಧಿರಾಯ ಚತುರ್ಥವಂಶ ಎಂಬ ಪದಗಳು ಇವರು ಮೊರಸುನಾಡಿನಿಂದ (ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳ ಭಾಗ) ಬಂದವರೆಂದೂ ನಾಲ್ಕನೇ ವರ್ಗಕ್ಕೆ ಸೇರಿದವರೆಂದೂ ಸ್ಪಷ್ಟವಾಗಿದೆ. ಕೃಷಿ ಮೂಲದವರ ಸರಳತೆ, ಉದಾರತೆ, ಪ್ರಾಮಾಣಿಕತೆ, ಸಾಮಾಜಿಕ ಕಳಕಳಿ, ಸ್ವಇಚ್ಛೆಯಿಂದ ಸೇವೆ ಸಲ್ಲಿಸುವ ಪ್ರವೃತ್ತಿ ಹೊಯ್ಸಳರ ಕಾಲದಲ್ಲಿ ಕಂಡುಬಂದಂತೆ ವಿಜಯನಗರದರಸರ ಆಳ್ವಿಕೆಯಲ್ಲಿ ಕಂಡುಬಂದಿಲ್ಲ. ಸ್ವಾರ್ಥ, ಸ್ವಪ್ರತಿಷ್ಠೆ ಹೆಚ್ಚಾದಂತೆ ತೋರುತ್ತದೆ. ಹಾಗಾಗಿ ಆರ್ಥಿಕ ನಷ್ಟ, ಸಾಮಾಜಿಕ ನೆಮ್ಮದಿ ಕದಡುವಿಕೆ ಅಂಶಗಳು ಸಮಾಜವನ್ನು ಆವರಿಸಿರುವ ಚಿತ್ರಣ ದೊರೆಯುತ್ತದೆ. ಈ ನಿಟ್ಟಿನಲ್ಲಿ ಸಮಾಜೋ-ಸಾಂಸ್ಕೃತಿಕ ಶೋಧದ ಅಗತ್ಯವಿದ್ದು, ವಿಸ್ತಾರ ಅಧ್ಯಯನಕ್ಕೆ ಅವಕಾಶವಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


* ಡಾ. ಶ್ಯಾಂಸಿಂಗ್ ಶಶಿ, 'ಭಾರತದ ಕುರುಬರು', Nirmal Kumar Bose, ಕನ್ನಡಕ್ಕೆ ಡಾ. ಬಿ.ಕೆ. ರವಿ. *'Tribal life in India'*, ಡಾ. ವಿರೂಪಾಕ್ಷ ಪೂಜಾರಹಳ್ಳಿ, 'ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು'.

೧. ಪಿ.ವಿ. ಕೃಷ್ಣಮೂರ್ತಿ, 'ಮಂಡ್ಯ ಜಿಲ್ಲಾ ಪ್ರದೇಶದ ಚಾರಿತ್ರಿಕ ಆಡಳಿತ ಘಟಕಗಳು', **'ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ'**, (ಸಂ.) ಡಾ. ಆರ್. ಗೋಪಾಲ್, ಪುಟ ೨೮೦-೮೧, ಮೈಸೂರು, ೨೦೦೮.

೨. ಎಫಿಗ್ರಾಫಿಯಾ ಕರ್ನಾಟಿಕಾ (ಪರಿಷ್ಕೃತ ಆವೃತ್ತಿ) ಸಂಪುಟ ೬, ಕೃಷ್ಣರಾಜಪೇಟೆ ೮೨ ಮತ್ತು ೮೪.

೩. ಅದೇ., ಕೃಷ್ಣರಾಜಪೇಟೆ ೬೯, ಕ್ರಿ.ಶ. ೧೨೪೨.

೪. ಅದೇ., ಕೃಷ್ಣರಾಜಪೇಟೆ ೭೦.

೫. ಅದೇ., ಪಾಂಡವಪುರ, ೨೫೨.

೬ ಅದೇ., ಪಾಂಡವಪುರ, ೨೦.

೭. ಅದೇ., ಪಾಂಡವಪುರ, ೨೩೬.

೮. ಅದೇ., ಪಾಂಡವಪುರ, ೨೫೮.

೯. ಅದೇ., ಪಾಂಡವಪುರ, ೨೧೮.

೧೦. ಅದೇ., ಪಾಂಡವಪುರ, ೨೩, ಕ್ರಿ.ಶ. ೧೮೮೧೮.

೧೧. ಅದೇ., ಸಂಪುಟ ೭, ಮಂಡ್ಯ ೨೩.

೧೨. ಅದೇ., ಮಂಡ್ಯ ೨೯.

೧೩. ಅದೇ., ಸಂಪುಟ ೪, ಹುಣಸೂರು ೯.

೧೪. ಅದೇ., ಚಾಮರಾಜನಗರ, ೧೪೩.

೧೫. ಅದೇ., ಚಾಮರಾಜನಗರ, ೧೧೪.

೧೬. ಅದೇ., ಸಂಪುಟ ೭, ಮಂಡ್ಯ, ಕ್ರಿ.ಶ. ೧೩೧೬.

೧೭. ಅದೇ., ಸಂಪುಟ ೭, ನಾಗಮಂಗಲ, ೧೭೩, ಕ್ರಿ.ಶ. ೧೨೮೦.

೧೮. ಡಾ. ಹೆಚ್. ಎಸ್. ಉಷಾರಾಣಿ 'ತಗಡೂರು ಪ್ರಭುಗಳು', **ಇತಿಹಾಸ ದರ್ಶನ**, ಸಂಪುಟ ೨೨.

೧೯. ಅದೇ., ಸಂಪುಟ ೭, ನಾಗಮಂಗಲ, ೯೮.

೨೦. ಅದೇ., ನಾಗಮಂಗಲ, ೮೨, ಕ್ರಿ.ಶ. ೧೨೬೯, ನಾಗಮಂಗಲ ೮೩.

೨೧. ಅದೇ., ನಾಗಮಂಗಲ ೮೧, ಕ್ರಿ.ಶ. ೧೨೨೪.

೨೨. ಅದೇ., ಸಂಪುಟ.

೨೩. ಅದೇ., ಸಂಪುಟ ೩, ಹೆಗ್ಗಡದೇವನಕೋಟೆ ೬೯, ಕ್ರಿ.ಶ.

೨೪. 'ನಾಗಮಂಗಲ ಪ್ರಭುಗಳು' (ಸಂ.) ಡಾ. ವಸು ಎಂ.ವಿ., **ದಕ್ಷಿಣ ಕರ್ನಾಟಕದ ಅರಸು ಮನೆತನಗಳು**, ಪುಟ ೩೮೪.

೨೫. ಅದೇ., ಸಂಪುಟ ೭, ಮದ್ದೂರು, ೯೮.

೨೬. ಅದೇ ೯೭, ಕ್ರಿ.ಶ. ೧೧೧೦೪ರ ಶ್ರೀರಂಗಪಟ್ಟಣ, ಶಾಸನ ಮೂಲಿಗ ಬಾರನ್ದರ ಮಂಚ ಗವುಂಡ ನನ್ನ ಅರಕೆರೆ ನಾಡಾಳ್ವ ಕಬಾಳ ಗವುಂಡನ ಮಗ ಬೀರಗವುಂಡನೊಂದಿಗೆ ಹೆಸರಿಸಿದೆ. ಇಲ್ಲಿ 'ಮೂಲಿಗ' ಎಂದರೆ ಊರಲ್ಲಿ ಕೃಷಿ ಆರಂಭಿಸಿದ ಮೊದಲ ಒಕ್ಕಲು, ನೋಡಿ ಡಾ. **ಸೂರ್ಯನಾಥ ಕಾಮತ್, ಒಕ್ಕಲು-ಒಕ್ಕಲುತನ, ಇತಿಹಾಸ ಅನ್ವೇಷಣೆ,** ಪುಟ ೯೮, ಇದರಿಂದ ಬಾರಂದರು ಮೂಲತಃ ಕೃಷಿಕರು, ಶಾಸನದ ಪ್ರಕಾರ ಅವರು ಉದಯಾದಿತ್ಯ ಪಲ್ಲವರಾಯ ಕಟ್ಟಿಸಿದ ಕೆರೆಗೆ ಬಿಟ್ಟ ದತ್ತಿಯ ಬಗ್ಗೆ ವಿವರವಿದೆ. ಶಾಸನ ಸಂಖ್ಯೆ ೧೧೩.

೨೭. ಅದೇ., ಸಂಪುಟ ೭, ಮದ್ದೂರು ೧೦೪.

೨೮. ಅದೇ., ಮದ್ದೂರು, ೧೦೩.

೨೯. ಅದೇ., ಮದ್ದೂರು, ೧೦೬.

೩೦. ಅದೇ., ಮದ್ದೂರು, ೮೪.

೩೧. ಅದೇ., ಮದ್ದೂರು, ೯೩.

೩೨. ಅದೇ., ಮದ್ದೂರು, ೮೫.

೩೩. ಅದೇ., ಮದ್ದೂರು, ೯೪.

೩೪. ಅದೇ., ಮದ್ದೂರು, ೮೭.

೩೫. ಅದೇ., ಮದ್ದೂರು, ೧೧೦, ನೋಡಿ ಅದೇ ಮದ್ದೂರು, ೮೯.

೩೬. ಅದೇ., ಮದ್ದೂರು ೧೦೨.

ಡಾ. ಎಫ್.ಟಿ. ಹಳ್ಳಿಕೇರಿ*

# ಹಾಲುಮತ ಗುರುಪರಂಪರೆಯಲ್ಲಿ ಮರುಳಸಿದ್ಧೇಶ್ವರ

ಪ್ರವೇಶ : ಕರ್ನಾಟಕದ ಶೈವ ನಾಥ ಹಾಗೂ ಸಿದ್ಧಪರಂಪರೆಗಳಲ್ಲಿ ರೇವಣಸಿದ್ಧ, ಸಿದ್ಧರಾಮ ಅಮೋಘಸಿದ್ಧರು ತುಂಬ ಪ್ರಸಿದ್ಧವಾದವರು. ಅಗಾಧವಾದ ವ್ಯಕ್ತಿತ್ವ ಹಾಗೂ ಸಾಧನೆಗಳ ಮೂಲಕ ತಮ್ಮದೇ ಆದ ಪರಂಪರೆಗೆ ನಾಯಕರೆನಿಸಿ ಕೊಂಡಿದ್ದಾರೆ. ಕರ್ನಾಟಕದ ಹಾಲುಮತ ಸಮುದಾಯಕ್ಕಂತೂ ಇವರು ಮೂಲಗುರುಗಳಾಗಿ ಆ ಸಮುದಾಯ ಧರ್ಮ ಮತ್ತು ಸಮಾಜದ ಜಾಗೃತಿಗಾಗಿ ತಪಸ್ಸು ಮಾಡಿ ಜನಜಾಗೃತಿಯನ್ನುಂಟುಮಾಡಿದವರು. ಹೀಗಾಗಿ ಹಾಲುಮತ ಸಮುದಾಯದಲ್ಲಿ ಇಂದಿಗೂ ಇವರು ಹೆಚ್ಚಿನ ರೀತಿಯಲ್ಲಿ ಆರಾಧನೆಗೊಳ್ಳುತ್ತಿದ್ದಾರೆ. ಇದಕ್ಕೆ ಕರ್ನಾಟಕದಾದ್ಯಂತ ಇರುವ ಹಾಲುಮತ ಮಠ ಮಂದಿರ ದೇವಾಲಯಗಳು, ಅಲ್ಲಿ ನಡೆಯುವ ಜಾತ್ರೆ ಉತ್ಸವ ಆಚರಣೆ ಸಂಪ್ರದಾಯಗಳು ನಿದರ್ಶನವಾಗಿವೆ. ಈವರೆಗಿನ ಅಧ್ಯಯನದಿಂದ ಕುರುಬರ ಗುರು ಪರಂಪರೆಯನ್ನು ಹೀಗೆ ಗುರುತಿಸಲಾಗಿದೆ.

**ಹಾಲುಮತ ಗುರು ಪರಂಪರೆ**

| ರೇವಣಸಿದ್ಧೇಶ್ವರ | ಸಿದ್ಧರಾಮೇಶ್ವರ | ಅಮೋಘ ಸಿದ್ಧೇಶ್ವರ |
|---|---|---|
| ಶಾಂತಮುತ್ತಯ್ಯ | ಸಿದ್ಧಮಂಕ (ಮರುಳಸಿದ್ಧೇಶ್ವರ) | ಸಾವಿರದೊಂದು ಸಿದ್ಧರು |
| ಶಾಂತೊಡೆಯರು | ಮಂಕೊಡೆಯರು | ಅಮೋಗಿ ಒಡೆಯರು |

ಈಗಾಗಲೇ ನಾನು ಮೊದಲ ಹಂತದಲ್ಲಿ ಬರುವ ರೇವಣಸಿದ್ಧ ಸಿದ್ಧರಾಮ ಮತ್ತು ಅಮೋಘಸಿದ್ಧರ ಬಗೆಗೆ ಲಿಖಿತ ಮೌಖಿಕ ಆಕರಗಳನ್ನು ಕ್ರೋಢೀಕರಿಸಿ ಕ್ಷೇತ್ರಕಾರ್ಯದ ಮೂಲಕ ಅನೇಕ ಸಂಗತಿಗಳನ್ನು ಮೂರು ಪ್ರತ್ಯೇಕ ಸಂಪ್ರಬಂಧಗಳಲ್ಲಿ ಗುರುತಿಸಿದ್ದೇನೆ.[1] ಈ ಸಂಪ್ರಬಂಧಗಳ ಮುಂದುವರಿಕೆಯಾಗಿ ಸಿದ್ಧರಾಮ ಪರಂಪರೆಯಲ್ಲಿ ಬರುವ ಮರುಳಸಿದ್ಧನ ಸಂಪ್ರದಾಯ, ನೆಲೆಗಳು, ಆಚರಣೆ ಜಾತ್ರೆ ಉತ್ಸವಗಳು, ಸಾಹಿತ್ಯ ಇತ್ಯಾದಿ ವಿಷಯಗಳನ್ನು ಅವಲೋಕಿಸುವುದು ಪ್ರಸ್ತುತ ಸಂಪ್ರಬಂಧದ ಉದ್ದೇಶವಾಗಿದೆ.

**ಆಕರಗಳು :** ಮರುಳಸಿದ್ಧ ಪರಂಪರೆಯ ಅಧ್ಯಯನಕ್ಕೆ ಲಭ್ಯವಿರುವ ಆಕರಗಳು ತುಂಬ ಕಡಿಮೆ. ಲಿಖಿತರೂಪದ ಆಕರಗಳಲ್ಲಿ ಸಿದ್ಧಮಂಕ ಚರಿತೆ ಮತ್ತು ಮರುಳಸಿದ್ದಯ್ಯನವರ ಚರಿತ್ರೆ, ದಾಖಲುರೂಪದ ಆಕರಗಳಲ್ಲಿ ಸರೂರಿನ ಎರಡು ಶಾಸನಗಳು ಹಾಗೂ ಒಂದು ನಿರೂಪ ಬಹುಮುಖ್ಯವಾಗಿವೆ. ಆದರೆ ಹಾಡು ಕಥೆ ಹೇಳಿಕೆಗಳಂಥ ಮೌಖಿಕರೂಪದ ಆಕರಗಳಲ್ಲಿ ಮರುಳಸಿದ್ಧನ ಬಗೆಗೆ ಸಾಕಷ್ಟು ವಿವರಗಳು ಎಡೆಪಡೆದಿವೆ. ಇಂಥ ಲಿಖಿತ ಮತ್ತು ಮೌಖಿಕ ಆಕರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಜೊತೆಗೆ ಸರೂರು, ಡಂಬಳ, ಕಳಲೆ ಹಾಗೂ ಚಿಕ್ಕನಾಯ್ಕನಹಳ್ಳಿ ಮೊದಲಾದೆಡೆ ಕ್ಷೇತ್ರಕಾರ್ಯ ಕೈಕೊಂಡು ಈ ಪರಂಪರೆಯ ಆರಾಧನೆ, ಆಚರಣೆ ಸಂಪ್ರದಾಯಗಳನ್ನು ಇಲ್ಲಿ ದಾಖಲಿಕರಿಸಿದ್ದೇನೆ.

**ಮರುಳಸಿದ್ಧೇಶ್ವರ ಪರಂಪರೆ :** ಸಿದ್ಧಪರಂಪರೆಯಲ್ಲಿ ವಿಕಾರಿಸಿದ್ದ ಮತ್ತು ಶಿವಸಿದ್ಧ ಎಂಬ ಎರಡು ಪ್ರಭೇದಗಳಿವೆ.[2] ಶಿವಸಿದ್ಧ ಪ್ರಭೇದದ ಪ್ರಮುಖರಲ್ಲಿ ಸೊನ್ನಲಾಪುರದ ಸಿದ್ಧರಾಮೇಶ್ವರನೂ ಒಬ್ಬ. ಈ ಸಿದ್ಧರಾಮೇಶ್ವರನ ಶಿಷ್ಯ ಪ್ರಶಿಷ್ಯರಲ್ಲಿ ಮರುಳಸಿದ್ಧನಿಗೆ ಅಗ್ರಸ್ಥಾನವಿದೆ. ಈತ ಕರ್ನಾಟಕದ ಹಾಲುಮತ ಲಿಂಗಾಯತ ಹಾಗೂ ಮಾದರ ಸಮುದಾಯಗಳಿಗೆ ಆರಾಧ್ಯದೈವವಾಗಿ ಈಗಲೂ ಆರಾಧನೆಗೊಳ್ಳುತ್ತಿದ್ದಾನೆ. ಈತನ ಮೂಲ ನೆಲೆ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಸರೂರ ಗ್ರಾಮದ ಹೊರವಲಯದಲ್ಲಿರುವ ತೂಗುಡ್ಡ. ಇದು ಮರುಳಸಿದೇಶ್ವರ ತಪಸ್ಸು ಮಾಡಿದ ಸ್ಥಳ. ಮರುಳ ಮಂಕ, ಮಂಕಯ್ಯ, ಮಂಕತಂದೆ, ಸಿದ್ಧಮಂಕ ಎಂಬ ಹೆಸರುಗಳಿಂದ ಹಾಲುಮತ ಸಮುದಾಯದ ಗುರುಪರಂಪರೆಯಲ್ಲಿ ಮರುಳಸಿದ್ಧೇಶ್ವರ ಪ್ರಸಿದ್ಧನಾಗಿದ್ದಾನೆ. ಪ್ರಾಚೀನ ಕಾವ್ಯ ಮತ್ತು ಶಾಸನಗಳು ಇದನ್ನು ದೃಢೀಕರಿಸುತ್ತವೆ. ಹಾಲು ತುಪ್ಪದೊಂದಿಗೆ ಕುರಿಮಾಂಸವನ್ನು ಮಾರಾಟ ಮಾಡಿದ ಕಾರಣಕ್ಕಾಗಿ ಕುರುಬರನ್ನು ಕಲ್ಯಾಣಪಟ್ಟದಿಂದ ಏಳುಗಡಿಯಾಚೆ ಹೊರಹಾಕಲ್ಪಟ್ಟಿರುತ್ತಾರೆ. ಅಂಥ ಕುರುಬ ಸಮುದಾಯವನ್ನು ಮತ್ತೆ ಕಲ್ಯಾಣಪಟ್ಟಣಕ್ಕೆ ಮರುಪ್ರವೇಶ ನೀಡಬೇಕೆಂದು 'ಸಿದ್ಧಮಂಕನು ಸರವೂರದೊಳು ತಪವಿದ್ದು

* ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಬಳ್ಳಾರಿ ಜಿಲ್ಲೆ.

ಸಿದ್ಧಿಯ ಪಡೆದ ಕಥನ'[೩]ವನ್ನು ಸಿದ್ಧಮಂಕ ಚರಿತ್ರೆಯಲ್ಲಿ ಸುದೀರ್ಘವಾಗಿ ಕವಿ ನಿರೂಪಿಸಿದ್ದಾನೆ. ಇನ್ನು ಮರುಳಸಿದ್ಧಯ್ಯನವರ ಚರಿತ್ರೆಯೂ ಇದೇ ಕಥೆಯನ್ನು ನಿರೂಪಿಸುತ್ತ "ಮರುಳ ಸಿದ್ಧಯ್ಯನವರ ಚರಿತ್ರವ ಕೇಳೆ ಹರನೊಲಿವನು ಕರುಣದಲಿ ಕುರುಬರ ಕಥೆಯೆಂದು ಜರಿಯಲುಭೇಡ ಮರುಳಸಿದ್ಧಯ್ಯ ತಾ ಕುರುಬ" (೫-೧೦೭) ಎಂಬುದನ್ನು ಸ್ಪಷ್ಟಪಡಿಸಿದೆ.[೪] ಸರೂರಿನ ಮಲ್ಲಿಕಾರ್ಜುನ ದೇವಾಲಯದ ಆವರಣ (ಈಗ ಇದಕ್ಕೆ ರೇವಣಸಿದ್ಧೇಶ್ವರ ದೇವಾಲಯವೆಂದು ಜನರು ಕರೆಯುತ್ತಾರೆ.) ದಲ್ಲಿ ಕ್ರಿ.ಶ. ೧೨೦೮ ಹಾಗೂ ೧೨೧೧ನೆಯ ಕಾಲದ ಎರಡು ಶಿಲಾಶಾಸನಗಳಿವೆ. ಒಂದನೆಯ ಶಾಸನದಲ್ಲಿರುವ "ಮಂಕಯ್ಯಂಗಳಿಗೆ ಮಲ್ಲಿನಾಥರಾಮ ವಂಬಸು ಸಂನಿಧಾನದಲು" ಎಂಬ ವಾಕ್ಯ, ಎರಡನೆಯ ಶಾಸನದಲ್ಲಿರುವ "ಅರಸನಹಳ್ಳಿಯ ವೀರನಗೌಡರ ಕೈಯಲು ಮಂಕಯ್ಯನು ಹೊಂನ ಕೊಟ್ಟು ಆ ಹೊಲದೊಲು" ಮತ್ತು "ಹೊನಗುಂದದ ಬೀಚಗುರು ತಂನ ಮಗ ಮಂಕಯನ ಕಾಲದಾ ಗುರುವಿಗೆ ಮಂಕಯನು ಮಲ್ಲಿನಾಥದೇವರ ಸ್ತಾನವ ಧಾರಾಪೂರ್ವಕ ಮಾಡಿಕೊಟ್ಟರು" ಎಂಬ ವಾಕ್ಯಗಳು ಕಾವ್ಯೋಕ್ತ ಸಿದ್ಧಮಂಕನನ್ನು ನೆನಪಿಸುತ್ತವೆ.[೫]

ಹೀಗೆ ರೇವಣಸಿದ್ಧ ಸಿದ್ಧರಾಮರಂತೆ ಮರುಳಸಿದ್ಧನು ಮೂಲತಃ ಕುರುಬ ಕುಲದವನು. ನಂತರದಲ್ಲಿ ಸಿದ್ಧ ಪರಂಪರೆಗೆ ಸೇರಿದವನೆಂಬುದು ಸ್ಪಷ್ಟವಾಗುತ್ತದೆ. ಸಿದ್ದರಾಮನ ಶಿಷ್ಯನಾಗಿ ಕುರುಬ ಸಮುದಾಯಕ್ಕೆ ಗುರುವಾಗಿದ್ದಾನೆ. ಹೀಗಾಗಿ ಇವರೆಲ್ಲರೂ ಹನ್ನೆರಡನೆಯ ಶತಮಾನಕ್ಕೆ ಸೇರಿದವರು. ಆದರೆ ಇವರಲ್ಲಿ ಮರುಳಸಿದ್ಧ ಮಾತ್ರ ವಯಸ್ಸಿನಲ್ಲಿ ಕಿರಿಯವನು. ರೇವಣಸಿದ್ಧನನ್ನು ರೇವಣಾರಾಧ್ಯ ರಾಗಿ ಸಿದ್ಧರಾಮನು ಶಿವಾಚಾರ್ಯನಾಗಿ ಪರಿವರ್ತನೆಗೊಂಡಂತೆ ಮರುಳಸಿದ್ಧನು ಮರುಳಾರಾಧ್ಯನಾಗಿ ಪರಿವರ್ತನೆ ಗೊಂಡಿರುವುದನ್ನು ಗಮನಿಸಬಹುದು. ಬಳ್ಳಾರಿ ಜಿಲ್ಲೆಯ ಉಜನಿಯ ವೀರಶೈವ ಪಂಚಾಚಾರ್ಯ ಸಂಪ್ರದಾಯದ ಮರುಳಾರಾಧ್ಯ ಪೀಠವು ಈ ಪರಿವರ್ತನೆಗೆ ಸಾಕ್ಷಿಯಾಗಿದೆ. ಸಾದಲಿಂಗಾಯತ ಸಮುದಾಯದವರು ಈ ಮಠದ ಪರಮಭಕ್ತರು. ಇವರು ಸಾದಕುರುಬರ ಪರಿಷ್ಕೃತ ಸಮುದಾಯಕ್ಕೆ ಸೇರಿದವರು. ಕುರುಬರಲ್ಲಿಯೂ ಸಾದಕುರುಬರು ಎಂಬ ಒಳಪಂಗಡವಿದೆ. ಇವರಿಗೆ ಸಿದ್ಧರಾಮ ಮರುಳಸಿದ್ಧ ಸಂಪ್ರದಾಯದ ಮಂಕೊಡೆಯರು ಗುರುಗಳು. ಈ ಸಾದಕುರುಬರು ಎಂಬ ಒಳಪಂಗಡವಿದೆ. ಇವರಿಗೆ ಸಿದ್ಧರಾಮ ಮರುಳಸಿದ್ಧ ಸಂಪ್ರದಾಯದ ಮಂಕೊಡೆಯರು ಗುರುಗಳು. ಈ ಸಾದಕುರುಬರು ಯಾವುದೋ ಒಂದು ಘಟ್ಟದಲ್ಲಿ ಸಾದಲಿಂಗಾಯತರಾಗಿ ಮತಾಂತರಗೊಂಡಿರುವುದು ಕಂಡುಬರುತ್ತದೆ. ಹೀಗಾಗಿ ಎಂ.ಎಂ. ಕಲಬುರ್ಗಿ ಅವರು ಹೇಳುವಂತೆ "ಕುರುಬ ಶಾಂತವೊಡೆಯರ ರೇವಣಸಿದ್ಧ ಸಂಪ್ರದಾಯವನ್ನು ಪಂಚಾಚಾರ್ಯ ರಂಭಾಪುರೀ ಪೀಠದವರು ವಶಪಡಿಸಿಕೊಂಡರೆ, ಮಂಕವೊಡೆಯರ ಸಿದ್ಧರಾಮ ಸಂಪ್ರದಾಯವನ್ನು ಪಂಚಾಚಾರ್ಯ ಉಜನಿ ಪೀಠ ವಶಪಡಿಸಿ ಕೊಂಡಿತು. ಈವರೆಗಿನ ವಿವರಣೆಯಿಂದ ಈ ಪೀಠವು ಮೂಲತಃ ಮಂಕವೊಡೆಯ ಸಂಪ್ರದಾಯದ ಸಾದಕುರುಬರಿಗೆ ಅಂದರೆ ಇಂದಿನ ಸಾದಲಿಂಗಾಯತರಿಗೆ ಸೇರಿದುದು"[೬] ಎಂಬ ಅಭಿಪ್ರಾಯವಿದೆ. ಇದಕ್ಕೆ ಪೂರಕವೆಂಬಂತೆ ಉಜನಿಯಲ್ಲಿ ಕುರುಬರು ಮತ್ತು ಸಾದಲಿಂಗಾಯತರು ಬಹುಸಂಖ್ಯೆಯಲ್ಲಿದ್ದು, ಅವರಿಬ್ಬರು ಅಣ್ಣತಮ್ಮಂದಿರು ಎಂದು ಹೇಳುತ್ತಾರೆ. ಅಲ್ಲದೆ ಕುರುಬರ ಗುರಗಳಾದ ಮಂಕೊವೊಡೆಯರ ಮನೆತನಗಳು ಇಲ್ಲಿವೆ.

**ಮರುಳಸಿದ್ಧೇಶ್ವರನ ನೆಲೆಗಳು :** ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಮರುಳಸಿದ್ಧೇಶ್ವರನ ನೆಲೆಗಳಿವೆ. ಹಾಲುಮತ ಲಿಂಗಾಯತ ಹಾಗೂ ದಲಿತ ಸಮುದಾಯದವರು ಈತನನ್ನು ತಮ್ಮ ಆರಾಧ್ಯ ದೈವವನ್ನಾಗಿ ಮಾಡಿಕೊಂಡು ಪೂಜಿಸುತ್ತಿದ್ದಾರೆ. ನಿಗದಿತ ಸಂದರ್ಭದಲ್ಲಿ ಜಾತ್ರೆ ಉತ್ಸವಗಳು ನೆರವೇರುತ್ತವೆ. ಈಗಾಗಲೇ ಹೇಳಿದಂತೆ ಹಾಲುಮತ ಪರಂಪರೆಯಲ್ಲಿ ಸರೂರು, ಡಂಬಳ, ಕಳಲೆ, ಚಿಕ್ಕನಾಯ್ಕನಹಳ್ಳಿ ಮೊದಲಾದ ಗ್ರಾಮಗಳಲ್ಲಿ ಮರುಳಸಿದ್ಧನ ನೆಲೆಗಳಿವೆ. ಆ ನೆಲೆಗಳಲ್ಲಿ ದೇವಾಲಯ ಅಥವಾ ಗದ್ದುಗೆ ರೂಪದಲ್ಲಿ ಕುರುಬರು ಈತನನ್ನು ಆರಾಧನೆ ಮಾಡುತ್ತ ಬಂದಿದ್ದಾರೆ.

**ಸರೂರು :** ಇದು ಬಿಜಾಪುರ ಜಿಲ್ಲೆಯ ತಾಲೂಕು ಕೇಂದ್ರವಾದ ಮುದ್ದೇಬಿಹಾಳದಿಂದ ಏಳು ಕಿ.ಮೀ. ಗಳ ಅಂತರದಲ್ಲಿ ಪೂರ್ವಭಾಗಕ್ಕಿದೆ. ಸರವೂರದೊಳಗೆಲ್ಲ ಕೆರೆ ಬಾವಿ ದೇಗುಲ ಹೂದೋಟ ಮಠ ಬಾಳೆ ಹಲಸು ಮೊದಲ ಮಾವು ನೇರಿಲು ದಾಳಿಂಬ ನಿಂಬೆ ರುದ್ರಾಕ್ಷಿ ವೃಕ್ಷಗಳು ಮೇಳೈಸಿರ್ದವೆಂದು ಸಿದ್ಧಮಂಕ ಚರಿತೆಯಲ್ಲಿ ಹೇಳಲಾಗಿದೆ.[೭] ಮತ್ತೆ ಈ ಗ್ರಾಮದ ಮೇಲ್ಭಾಗದಲ್ಲಿ ಏಳು ಶಿಖರವನ್ನೊಳಗೊಂಡ ಮಲ್ಲಿಕಾರ್ಜುನ ದೇವಾಲಯವಿದೆ. ಈ ದೇವಾಲಯದ ಪರಿಸರದಲ್ಲಿಯೇ ವಿವಿಧ ಮೂರ್ತಿಶಿಲ್ಪಗಳು ಕಂಡುಬರುತ್ತವೆ. ಜೊತೆಗೆ ಸಿದ್ಧಮಂಕನಿಗೆ ಸಂಬಂಧಿಸಿದ ಎರಡು ಶಾಸನಶಿಲ್ಪಗಳು ಇಲ್ಲಿವೆ. ಈ ದೇವಾಲಯದ ಸಮೀಪ ಶಾಂತಮುತ್ತಯ್ಯನ ಗದ್ದುಗೆಯೂ ಇದೆ. ಕುರುಬರ ಗುರುಗಳದ ಒಡೆಯರ ಸಮಾದಿ ಗದ್ದುಗೆಗಳನ್ನು ಇಲ್ಲಿ ಕಾಣುತ್ತೇವೆ. ಇಲ್ಲಿಂದ ಮೂರು

ಕಿ.ಮೀ.ಗಳ ಅಂತರದಲ್ಲಿ ತೂಗುಡ್ಡವೆಂಬ ಪ್ರದೇಶವಿದೆ. ಕಲ್ಯಾಣದಿಂದ ಹೊರಬಂದ ಕುರುಬರು ತಮ್ಮ ಕುರಿಗಳೊಂದಿಗೆ ಈ ಪ್ರದೇಶದಲ್ಲಿ ಬಂದು ನೆಲಸಿದರು. ಈ ಕುರುಬರಿಗೆ ಮತ್ತೆ ಕಲ್ಯಾಣದೊಳಗೆ ಪ್ರವೇಶ ನೀಡಬೇಕೆಂದು ತಪಸ್ಸಿಗೆ ಕುಳಿತನು. ಹೀಗಾಗಿ ಇದು ಮರುಳಸಿದ್ಧನ ಪ್ರಮುಖ ತಾಣವೆಂದು ಹೇಳಲಾಗುತ್ತಿದೆ. ಈ ತೂಗುಡ್ಡದಲ್ಲಿಯೇ ಮರುಳಸಿದ್ಧನು "ಗುಲಗಂಜಿ ಸೂಜಿಯ ನಿಲಿಸಿವೊಂದರ ಮೇಲೆ ಒಲಿದು ದಬ್ಬಣ ಅಡಿಕೆಗಳ ಗೆಲವಿಂದ ಏರಿಸಿ ತಲೆಯ ಪಾಗಳನು"[೮], "ಶಿರವಡಿಯಾಗಿ ಶ್ರೀಚರಣವೆ ಮೇಲಾಗಿ"[೯] ಮರುಳಸಿದ್ಧನು ಕುರುಬರಿಗಾಗಿ ತಪಸ್ಸನ್ನು ಮಾಡಿದನು. ಈ ತಪಸ್ಸನ್ನು ನೋಡಲು ಬಸವ ಬಿಜ್ಜಳ ಸಿದ್ಧರಾಮ ಮೊದಲಾದವರು ತೂಗುಡ್ಡಕ್ಕೆ ಬಂದು "ಬೇಡು ನಿನ್ನಯ ಮನದೊಳಗಿರ್ದ ಬಯಕೆಯ ಬೇಡಿದಿಷ್ಟಾರ್ಥ ಸಿದ್ಧಿಗಳ ನೀಡುವೆನೀಕ್ಷಣ ಬೇಡು ಬೇಡೆನಲಾಗಿ" ಎಂದನು.[೧೦] ಅದಕ್ಕೆ ಮರುಳಸಿದ್ಧ ಕುರುಬರನ್ನು "ಏಳು ಬೇಲಿಯನೆ ಕಳೆದು ಹೊರಹಾಕಿಯೆ ಮೂಲೆಮೂಲೆಗೆ ಮುಟ್ಟದವರ ಸಾಲಿಗೆ ತಂದು ಸಲಹು" ಎಂದನು.[೧೧] ಈ ಸಲಹೆಯನ್ನು ಮನ್ನಿಸಿ ಕುರುಬರನ್ನು ಮತ್ತೆ ಕಲ್ಯಾಣದೊಳಗೆ ಬರಮಾಡಿಕೊಂಡು "ಕುರುಬರಿಗೆ ನೀ ಗುರುವಾಗಿರು"[೧೨] ಎಂದು ಮರುಳಸಿದ್ಧನಿಗೆ ಪಟ್ಟವ ಕಟ್ಟಿದರು. ಈ ಸಂಗತಿಯನ್ನು ಸಿದ್ಧಮಂಕ ಚರಿತೆ ಹಾಗೂ ಮರುಳಸಿದ್ಧಯ್ಯನವರ ಚರಿತೆಗಳು ಸ್ಪಷ್ಟಪಡಿಸುತ್ತವೆ. ಈಗಲೂ ಈ ಸ್ಮರಣೆಗಾಗಿ ಶ್ರಾವಣ ಸೋಮವಾರ, ಶಿವರಾತ್ರಿ ಅಮವಾಸ್ಯೆಗಳಂದು ಜಾತ್ರೆ ಉತ್ಸವ ಪವಾಡ ಹೇಳಿಕೆಗಳು ಇಲ್ಲಿ ವೈಭವಯುತವಾಗಿ ಜರುಗುತ್ತವೆ. ಸರೂರು ಮತ್ತು ಸುತ್ತಮುತ್ತಲಿನ ಸಾವಿರಾರು ಕುರುಬರು ಇಲ್ಲಿ ನರೆಯುತ್ತಾರೆ. ಒಡೆಯರು ಏಳು ಮುಳ್ಳುಬೇಲಿಯ ಮೇಲೆ ನಿಂತು ಹೇಳಿಕೆ ಮಾಡುತ್ತಾರೆ. ಈ ಹೇಳಿಕೆಗಳು ಆಯಾವರ್ಷದ ಮಳೆಬೆಳೆಯ ಸ್ವರೂಪವನ್ನು ನಿರ್ಧರಿಸುವಂತಿರುತ್ತವೆ. ಸಿದ್ಧಮಂಕ ಅಥವಾ ಮರುಳಸಿದ್ಧೇಶ್ವರನ ಅನುಯಾಯಿಗಳಾದ ಮಂಕೊಡೆಯರ ಮನೆತನಗಳು ಸರೂರಿನಲ್ಲಿವೆ. ಹೀಗೆ ಸರೂರು ಮರುಳಸಿದ್ಧನ ಬಹುಮುಖ್ಯ ಸಾಂಸ್ಕೃತಿಕ ನೆಲೆಯಾಗಿ ಇಂದಿಗೂ ನಮ್ಮ ಗಮನಸೆಳೆಯುತ್ತದೆ.

**ಡಂಬಳ :** ಗದಗ ಜಿಲ್ಲೆಯ ಸಾಂಸ್ಕೃತಿಕ ಮತ್ತು ಐತಿಹಾಸಿಕ ನೆಲೆಗಳಲ್ಲಿ ಡಂಬಳ ಪ್ರಮುಖವಾಗಿದೆ. ಶಿಷ್ಟ ಮತ್ತು ಜಾನಪದ ದೈವಗಳ ಆರಾಧನೆ ಇಲ್ಲಿ ದಟ್ಟವಾಗಿದೆ. ಇಂಥ ಆರಾಧನೆಗಳಲ್ಲಿ ಮರುಳಸಿದ್ಧೇಶ್ವರನ ಆರಾಧನೆಯೂ ಒಂದು. ಮರುಳ ಸಿದ್ಧೇಶ್ವರನಿಗೆ ಸಂಬಂಧಿಸಿದಂತೆ ಈ ಪರಿಸರದಲ್ಲಿ ಮೂರು ದೇವಾಲಯಗಳಿವೆ. ಒಂದು ಕುರುಬರ ಓಣಿಯಲ್ಲಿರುವ ಮರುಳಸಿದ್ಧೇಶ್ವರ ದೇವಾಲಯ. ಇನ್ನೊಂದು ಗ್ರಾಮದ ಪೂರ್ವಕ್ಕಿರುವ ಗುಡ್ಡದ ಮೇಲಿರುವ ದೇವಾಲಯ. ಇದಕ್ಕೆ ಮರುಳಸಿದ್ಧೇಶ್ವರ ಮರಡಿ ಎಂದೂ ಕರೆಯುತ್ತಾರೆ. ಪ್ರತಿವರ್ಷ ಅವರಾತ್ರಿ ಅಮವಾಸ್ಯೆಯಂದು ಲಘುರಥೋತ್ಸವ ನಡೆಯುತ್ತದೆ. ಈ ಸಂದರ್ಭದಲ್ಲಿ ಗುಡ್ಡದ ಕೆಳಭಾಗದಲ್ಲಿ ಬಾವಿಯೊಂದಿದೆ. ಪೂಜೆಗೆ ಮತ್ತು ಅಡುಗೆ ಮಾಡಲು ಅದೇ ಬಾವಿಯ ನೀರನ್ನು ಉಪಯೋಗಿಸುವುದು ಕಡ್ಡಾಯ. ಶ್ರಾವಣ ಮಹಾನವಮಿ ಹಾಗೂ ಕಾರ್ತಿಕಗಳಲ್ಲಿಯೂ ಪಲ್ಲಕ್ಕಿ ಉತ್ಸವ ಜರಗುತ್ತದೆ. ಅಲ್ಲದೇ ಪ್ರತಿ ಸೋಮವಾರ ಮತ್ತು ಗುರುವಾರಗಳಂದು ಭಕ್ತಾದಿಗಳು ಮರುಳಸಿದ್ಧೇಶ್ವರನಿಗೆ ವಿಶೇಷ ಪೂಜೆ ಸಲ್ಲಿಸುತ್ತಾರೆ. ಗ್ರಾಮದಿಂದ ಅನತಿ ದೂರದಲ್ಲಿರುವ ಕಪ್ಪತ್ತ ಗುಡ್ಡದಲ್ಲಿಯೂ ಒಂದು ಮರುಳಸಿದ್ಧೇಶ್ವರ ದೇವಾಲಯವಿದೆ. ಈ ಮೂರು ದೇವಾಲಯಗಳ ಪೂಜಾರಿಗಳು ಕುರುಬ ಸಮುದಾಯಕ್ಕೆ ಸೇರಿದವರು. ಇವರಿಗೆ ಮಠದವರು ಎಂದು ಕರೆಯುತ್ತಾರೆ. ಈ ಪೂಜಾರಿಕೆಗೆ ಸಂಬಂಧಿಸಿದಂತೆ ಡಂಬಳದಲ್ಲಿ ಇಪ್ಪತ್ತು ಮನೆತನಗಳಿವೆ. ಸರದಿಯಂತೆ ಪೂಜಾರಿಕೆ ಪುನರಾವರ್ತನೆಗೊಳ್ಳುತ್ತದೆ. ಈಗ ಗವಿಸಿದ್ದಪ್ಪ ಮಠದ ಅವರು ದೇವಾಲಯಗಳ ಉಸ್ತುವಾರಿಕೆಯನ್ನು ನೋಡಿಕೊಳ್ಳುತ್ತಿದ್ದಾರೆ.

**ಕಳಲೆ :** ಮೈಸೂರು ಜಿಲ್ಲೆಯ ನಂಜನಗೂಡು ಪಟ್ಟಣದಿಂದ ಏಳು ಕಿ.ಮೀ. ಅಂತರದಲ್ಲಿರುವ ಕಳಲೆ ಒಂದು ಐತಿಹಾಸಿಕ ಗ್ರಾಮ. ಮೈಸೂರು, ಅರಸರ ಕಾಲದಲ್ಲಿ ಕಳಲೆ ದಳವಾಯಿಗಳು ಪ್ರಸಿದ್ಧರಾಗಿದ್ದರು. ಗ್ರಾಮದ ದಕ್ಷಿಣ ಭಾಗಕ್ಕೆ ಪುರಾತನವಾದ ರೇವಣಸಿದ್ಧೇಶ್ವರ ದೇವಾಲಯವಿದೆ. ಇದು ಕ್ರಿ.ಶ. ೧೫೦೦ರಲ್ಲಿ ನಿರ್ಮಿಸಿರಬಹುದೆಂದು ಹೇಳಲಾಗುತ್ತಿದೆ.[೧೩] ಹಾಲುಮತ ಸಮುದಾಯದವರ ಹತೋಟಿಯಲ್ಲಿರುವ ಈ ದೇವಾಲಯದಲ್ಲಿ ನಿತ್ಯವೂ ಪೂಜೆ ನೆರವೇರುತ್ತದೆ. ದೇವಾಲಯದ ಆವರಣದಲ್ಲಿ ವೀರಗಲ್ಲುಗಳು ಹಾಗೂ ಮಾಸ್ತಿಕಲ್ಲುಗಳಂತ ಶಿಲ್ಪಗಳನ್ನು ಕಾಣಬಹುದು. ಧರ್ಮಸ್ಥಳದ ದೇವಸ್ಥಾನಗಳ ಜೀರ್ಣೋದ್ಧಾರ ಯೋಜನೆಯಡಿ ಈ ದೇವಾಲಯವನ್ನು ಪುನರ್ನವೀಕರಸಲಾಗುತ್ತಿದೆ. ಹಾಗೆಯೇ ಕುರುಬರ ಓಣಿಯಲ್ಲಿ ಮರುಳಸಿದ್ಧೇಶ್ವರ ದೇವಾಲಯವಿದೆ. ಇದಕ್ಕೆ "ಕಳಲೆ ಗುರುಗಡಿ ದೇವಸ್ಥಾನ" ಎಂದೂ ಕರೆಯುತ್ತಾರೆ. ಶಿವರಾತ್ರಿ ಮತ್ತು ಯುಗಾದಿ ಹಬ್ಬಗಳಲ್ಲಿ ಪಲ್ಲಕ್ಕಿ ಉತ್ಸವ ಅತ್ಯಂತ ವಿಜೃಂಭಣೆಯಿಂದ ಏರ್ಪಡಿಸುತ್ತಾರೆ. ಕಳಲೆಯ ಈ ಎರಡೂ ದೈವಗಳ ಕುರಿತು ಜನಪದರಲ್ಲಿ ಹಾಡುಗಳಿವೆ. ಉದಾಹರಣೆಗಾಗಿ ಎರಡು ಪದ್ಯಗಳನ್ನು ಇಲ್ಲಿ ಉಲ್ಲೇಖಿಸಬಹುದು.[೧೪]

> **ಮಂಕಯ್ಯ ಮರುಳಯ್ಯ ಪಂಚಮುಖದ ಸಿದ್ಧಯ್ಯ**
> **ಚಿಂತೆಯ ಬಿಡಿಸೋ ನನ ಗುರುವೆ । ರೇವಣ್ಣ**
> **ನಿನ ಕಾಂತಿಗಾರುತಿ ಬೆಳಗೆನೊ**

ಊರ ಚಂದ ಕಳಲೆ ನೀರ್ ಚಂದ ಕುಪ್ಪುಗೆರೆ
ದೇವರು ಚಂದ ಮರುಳಯ್ಯ । ಮಂಡೆ ಮೇಲೆ
ಹೂ ಚಂದ ಹೊನ್ನ ಗಣಗಲಾ

**ಚಿಕ್ಕನಾಯ್ಕನಹಳ್ಳಿ :** ತುಮಕೂರು ಜಿಲ್ಲೆಯ ತಾಲೂಕು ಕೇಂದ್ರವಾದ ಚಿಕ್ಕನಾಯ್ಕನಹಳ್ಳಿಯಲ್ಲಿ ಕುರುಬರ ಸಂಖ್ಯೆ ಅಧಿಕವಾಗಿದೆ. ಹೀಗಾಗಿ ಇಲ್ಲಿ ಕುರುಬರಿಗೆ ಸಂಬಂಧಿಸಿದ ದೇವಾಲಯ ಮಠಗಳು ಹೆಚ್ಚಿನ ಪ್ರಮಾಣದಲ್ಲಿವೆ. ರೇವಣಸಿದ್ಧೇಶ್ವರ, ಸಿದ್ಧೇಶ್ವರ, ಸಿದ್ಧರಾಮೇಶ್ವರ ಮಠಗಳು ಕುರುಬರ ಗುರುಮಠ ಗಳಾಗಿವೆ. ಸಿದ್ಧರಾಮೇಶ್ವರ ಮಠಕ್ಕೆ ಮಂಕಯ್ಯನ ಮಠವೆಂದೂ ಕರೆಯುತ್ತಾರೆ. ಈ ಊರಲ್ಲಿ ಮಂಕಯ್ಯನ ಹಟ್ಟಿಯೂ ಇದೆ. ಈ ಮಠದ ಪೀಠಾಧಿಪತಿಗಳು ಮಂಕೊಡೆಯರು. ಅಂದರೆ ಇವರು ಸಿದ್ಧರಾಮೇಶ್ವರ-ಮರುಳಸಿದ್ಧೇಶ್ವರ ಸಂಪ್ರದಾಯಕ್ಕೆ ಸೇರಿದವರು. ಕುರುಬರ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಲ್ಲಿ ಪುರೋಹಿತರಂತೆ ನಿಂತು ನಡೆಸಿಕೊಡುತ್ತಾರೆ. ಆದರೆ ಕುರುಬರ ಮನೆಯಲ್ಲಿ ಊಟವನ್ನು ಮಾಡುವುದಿಲ್ಲ. ಹೀಗಾಗಿ ಮಂಕೊಡೆಯರು ಯಾವುದೋ ಕಾಲಘಟ್ಟದಲ್ಲಿ ಲಿಂಗಾಯತರಾಗಿ ಪರಿವರ್ತನೆಗೊಂಡಿರುವುದಂತೂ ಸ್ಪಷ್ಟವಾಗಿದೆ.

### ಮರುಳಸಿದ್ಧೇಶ್ವರನ ಸಂಪ್ರದಾಯ ಆಚರಣೆ ಮತ್ತು ನಂಬಿಕೆಗಳು

ಸರೂರು, ಡಂಬಳ ಹಾಗೂ ಚಿಕ್ಕನಾಯಕ್ನಹಳ್ಳಿಗಳಲ್ಲಿ ನಾನು ಕೈಕೊಂಡ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಮರುಳಸಿದ್ಧನಿಗೆ ಸಂಬಂಧಿಸಿದ ಆಚರಣೆ ಸಂಪ್ರದಾಯ ಜಾತ್ರೆ ಉತ್ಸವಗಳು ನಿರ್ದಿಷ್ಟ ಸಂದರ್ಭದಲ್ಲಿ ಪರಂಪರಾನುಗತವಾಗಿ ಜರುಗುತ್ತ ಬರುತ್ತಲಿವೆ. ಅವುಗಳನ್ನು ಹೀಗೆ ವರ್ಗೀಕರಿಸಬಹುದು.

**ಕಂಥಾಧಾರಣ ಸೇವೆ :** ಕುರುಬರು ತಮ್ಮ ಗುರುಪರಂಪರೆಯ ಸ್ಥಾಪಕರಾದ ರೇವಣಸಿದ್ಧೇಶ್ವರ ಹಾಗೂ ಸಿದ್ಧರಾಮೇಶ್ವರರಿಗೆ ಅಚ್ಚ ಕರಿಯ ಕಂಬಳಿಯನ್ನು ಅರ್ಪಿಸುವ ಸಂಪ್ರದಾಯ ರೂಢಿಯಲ್ಲಿದೆ. ಇದಕ್ಕೆ ಕಂಥೆ ಸೇವೆ ಅಥವಾ ಕಂಥಾಧಾರಣ ಸೇವೆ ಎಂದು ಕರೆಯಲಾಗುತ್ತಿದೆ. ಸಿದ್ಧರಾಮೇಶ್ವರನ ಶಿಷ್ಯನಾದ ಸಿದ್ಧಮಂಕನಿಗೂ "ಕಂಥಾಧಾರಣ ಸೇವೆ" ಸಲ್ಲಿಸುವ ಆಚರಣೆಯನ್ನು ಚಿಕ್ಕನಾಯ್ಕನಹಳ್ಳಿಯಲ್ಲಿ ಈಗಲೂ ಕಾಣಬಹುದಾಗಿದೆ. ಚಿಕ್ಕನಾಯ್ಕನಹಳ್ಳಿಯವರಾದ ಸಿ.ಕೆ. ಪರಶುರಾಮಯ್ಯನವರು ಈ ಆಚರಣೆಯ ವಿಶೇಷತೆಯನ್ನು ಒಂದೆಡೆ ಹೀಗೆ ಹೇಳಿದ್ದಾರೆ.[೧೫]

"ಕುರುಬರಗುರು ತಮ್ಮ ಗುರುಪರಂಪರೆಯ ಸ್ಥಾಪಕರಾದ ರೇವಣಸಿದ್ಧೇಶ್ವರ ಹಾಗೂ ಸಿದ್ಧರಾಮೇಶ್ವರರಿಗೆ ಅಚ್ಚ ಕರಿಯ ಕಂಬಳಿಯನ್ನು ಅರ್ಪಿಸುವ ಸಂಪ್ರದಾಯ ರೂಢಿಯಲ್ಲಿದೆ. ಇದಕ್ಕೆ ಕಂಥೆ ಸೇವೆ ಅಥವಾ ಕಂಥಾಧಾರಣ ಸೇವೆ ಎಂದು ಕರೆಯಲಾಗುತ್ತಿದೆ. ಸಿದ್ಧರಾಮೇಶ್ವರನ ಶಿಷ್ಯನಾದ ಸಿದ್ಧಮಂಕನಿಗೂ "ಕಂಥಾಧಾರಣ ಸೇವೆ" ಸಲ್ಲಿಸುವ ಆಚರಣೆಯನ್ನು ಚಿಕ್ಕನಾಯ್ಕನಹಳ್ಳಿಯಲ್ಲಿ ಈಗಲೂ ಕಾಣಬಹುದಾಗಿದೆ. ಚಿಕ್ಕನಾಯ್ಕನಹಳ್ಳಿಯವರಾದ ಸಿ.ಕೆ. ಪರಶುರಾಮಯ್ಯನವರು ಈ ಆಚರಣೆಯ ವಿಶೇಷತೆಯನ್ನು ಒಂದೆಡೆ ಹೀಗೆ ಹೇಳಿದ್ದಾರೆ.[೧೫]

"ಕುರುಬರಗುರು ಮಂಕಯ್ಯನಿಗೆ ಗುರುವಾದ ಸಿದ್ಧರಾಮನಿಂದ ಪ್ರಣೀತವಾದ ಈ ಕಂಥೆಯು ರೇವಣ ಸಿದ್ಧೇಶ್ವರನಿಗೆ ಅರ್ಪಿಸುವ ಒಂದು ಪವಿತ್ರ ಉಣ್ಣೆಯ ವಸ್ತ್ರ. ಕಂಥೆಯನ್ನು ನೇಯುವ ವಿಧಾನವು ಸಹ ವಿಶೇಷವಾದುದು. ಒಂದು ಹಿಂಡು ಕುರಿಯಲ್ಲಿ ಲಕ್ಷಣವಾದ ಅಚ್ಚ ಕರಿಯ ಕುರಿಮರಿಗೆ ಮಠದ ಒಡೆಯರು ಬಿಲ್ವಪತ್ರೆಯಿಂದ ತೀರ್ಥವನ್ನು ಸಂಪ್ರೋಕ್ಷಿಸಿ "ಕಂಥೆಯ ಮರಿ" ಎಂದು ನಾಮಕರಣ ಮಾಡಿ ಬರುತ್ತಾರೆ. ಆ ಕುರಿಯ ಮೊದಲ ಬೆಳೆಯ ತುಪ್ಪಟವನ್ನು ಹೊಸ ಕತ್ತರಿಯಿಂದ ತೆಗೆದು ತರುತ್ತಾರೆ. ಒಡೆಯರುಗಳು ಆ ತುಪ್ಪಟವನ್ನು ಸ್ನಾನ ಮಾಡಿ ಉಪವಾಸದೊಂದಿಗೆ, ಮಠದ ಗರ್ಭಗುಡಿಯಲ್ಲಿ ಕೈಯಲ್ಲಿ ಹಿಂಜಿ ಹಿಂಜಿ ಮಾಡಿ, ತೊಡೆಯ ಮೇಲೆಯೇ ಕೈಯಿಂದ ಹೊಸೆದು ಸಣ್ಣದಾರವನ್ನು ತೆಗೆದು, ಕೈಬೆರಳುಗಳಿಂದಲೇ ಹಾಸಿಕ್ಕಿ, ಎಳೆಕೂಡಿಸಿ ಅಚ್ಚುಕಟ್ಟಾದ ಆಕರ್ಷಕವಾದ ಮಿರುಗುವ ಚಿಕ್ಕ ಕಪ್ಪುಕಂಬಳಿ ವಸ್ತ್ರವನ್ನು ಸಿದ್ಧಪಡಿಸುತ್ತಾರೆ. ಇದೇ ಕರಿಯ ಕಂಥೆ. ಒಡೆಯರು ಉಪವಾಸವಿದ್ದು ನೇಮನಿಷ್ಠೆಯಿಂದ ನೇಯ್ದು ಸಿದ್ಧಪಡಿಸಿದ ಈ ಕಂಥೆಯನ್ನು ರೇವಣಸಿದ್ಧೇಶ್ವರ ಸಿದ್ಧರಾಮೇಶ್ವರ ಹಾಗೂ ಸಿದ್ಧಮಂಕನಿಗೆ ಅರ್ಪಿಸುವುದು ಕುರುಬರಿಗೆ ಒಂದು ಸಂಭ್ರಮದ ಆಚರಣೆಯಾಗಿದೆ. ಹಳೆಯ ಜೀರ್ಣವಾದ ಕಂಥೆ ಮತ್ತು ನೂತನ ಕಂಥೆಯನ್ನು ಬೆಳ್ಳಿಪಲ್ಲಕ್ಕಿಯಲ್ಲಿಟ್ಟು ನಗಾರಿ, ಕರಡೆ, ಚಮ್ಮೇಳ ಮುಂತಾದ ಮಂಗಳವಾದ್ಯದಲ್ಲಿ ಗಂಗೆಯ ತಡಿಗೆ ತಂದು, ಹಳೆಯ ಕಂಥೆಯನ್ನು ಗಂಗೆಯಲ್ಲಿ ಬಿಟ್ಟು ಹೊಸ ಕಂಥೆಯನ್ನು ಪುಣ್ಯಜಲದಲ್ಲಿ ಪಾವನಗೊಳಿಸಿ, ಸೂರ್ಯೋದಯಕ್ಕೆ ಮುಂಚೆ ರೇವಣಸಿದ್ಧೇಶ್ವರನಿಗೆ ಧರಿಸಿ, ಧೂಪದೀಪಗಳಾರತಿ, ಪೂಜೆ ನೈವೇದ್ಯದ ನಂತರ ಬೆಳ್ಳಿಪಲ್ಲಕ್ಕಿಯಲ್ಲಿ ಮಂಗಳ ವಾದ್ಯದೊಂದಿಗೆ ನಗರದ ಪ್ರಮುಖ ಬೀದಿಗಳಲ್ಲಿ ನೂತನ ಕಂಥೆಯನ್ನು ಧರಿಸಿದ ರೇವಣ ಸಿದ್ಧೇಶ್ವರನ ಮೆರವಣಿಗೆಯ ನಂತರ ಶ್ರೀಮಠದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸುತ್ತಾರೆ. ಇದು ಕುರುಬರ ಪವಿತ್ರವಾದ

ಆಚರಣೆಯಾಗಿದ್ದು, ಆ ಸಂದರ್ಭದಲ್ಲಿ ಅನ್ನಸಂತರ್ಪಣೆಯನ್ನು ಏರ್ಪಡಿಸುತ್ತಾರೆ. ಕರಿಯ ಕಂಬಳಿಯಂತೂ ಕುರುಬರ ಎಲ್ಲ ಧಾರ್ಮಿಕ ಸಮಾರಂಭಗಳಲ್ಲೂ ಇರಲೇಬೇಕು. ರೇವಣಸಿದ್ಧ ಸಿದ್ಧರಾಮರ ಮೂರ್ತಿಯನ್ನು ಕರಿಯ ಕಂಬಳಿಯ ಗದ್ದುಗೆಯ ಮೇಲೆ ಪ್ರತಿಷ್ಠಾಪಿಸಿದಂತೆ, ಕುಲಗುರುಗಳಾದ ಒಡೆಯರಿಗೂ ಕರಿಯ ಕಂಬಳಿಯ ಗದ್ದುಗೆಯನ್ನು ಹಾಕಲೇಬೇಕು." ಸಿದ್ಧಮಂಕ ಚರಿತೆಯಲ್ಲಿಯೂ ಈ ಆಚರಣೆಗೆ ಸಂಬಂಧಿಸಿದ ವಿವರಗಳನ್ನು ಕವಿ ದಾಖಲಿಸಿದ್ದಾನೆ.

**ಹೂವು ಕೇಳುವುದು :** ಸಾಮಾನ್ಯವಾಗಿ ಜನಪದ ದೈವಗಳಲ್ಲಿ ಭಕ್ತರಿಗೆ ಅಪಾರವಾದ ನಂಬಿಕೆ ಇರುತ್ತದೆ. ಹೀಗಾಗಿ ತಮ್ಮ ಕಾರ್ಯಸಾಧನೆಗಾಗಿ ದೈವಗಳನ್ನು ಮೊರೆಹೋಗುವುದು ಸರ್ವೇಸಾಮಾನ್ಯ. ಕುರುಬರಲ್ಲಿ ಯಂತೂ ಈ ನಂಬಿಕೆ ಇನ್ನೂ ಆಳವಾಗಿ ಬೇರೂರಿದೆ. ರೇವಣಸಿದ್ದೇಶ್ವರ ಸಿದ್ಧರಾಮೇಶ್ವರ ಮರುಳಸಿದ್ದೇಶ್ವರ ಬೀರಲಿಂಗೇಶ್ವರ ಮಾಳಿಂಗೇಶ್ವರ ಇತ್ಯಾದಿ ದೈವಗಳ ಗದ್ದುಗೆ ಮುಂದೆ ಕುಳಿತು ಭಕ್ತರು ಹೂವು ಕೇಳುತ್ತಾರೆ. ಮನೆ ಖರೀದಿ, ಮಕ್ಕಳ ವಿದ್ಯಾಭ್ಯಾಸ, ಮದುವೆ, ವ್ಯಾಪಾರ, ಉದ್ಯೋಗಗಳಲ್ಲಿ ಯಶಸ್ಸು ಸಿಗಬೇಕೆಂಬ ಉದ್ದೇಶದಿಂದ ದೇವರ ಮೊರೆ ಹೋಗುತ್ತಾರೆ. ದೇವರ ಗದ್ದುಗೆಗೆ ಒಡೆಯರು ಪೂಜೆ ಮಾಡಿ ಹೂವುಗಳನ್ನು ಏರಿಸಿರುತ್ತಾರೆ. ದೇವರ ತಲೆಯ ಮೇಲಿರುವ ಹೂವು ಬಲಕ್ಕೆ ಜಾರಿದರೆ ಶುಭವೆಂದೂ, ಎಡಕ್ಕೆ ಜಾರಿದರೆ ಅಶುಭವೆಂದೂ ನಂಬಲಾಗುತ್ತದೆ. ಈ ಹೂವು ಕೇಳುವುದಕ್ಕೆ ಉತ್ತರ ಕರ್ನಾಟಕದಲ್ಲಿ ಕೌಲು ಕೇಳುವುದು ಎಂದೂ ಕರೆಯಲಾಗುತ್ತದೆ. ಕುರುಬ ಸಮುದಾಯದವರು ಪರಂಪರಾನುಗತವಾಗಿ ಪಾಲಿಸಿಕೊಂಡು ಬಂದ ಸಂಪ್ರದಾಯ ಇದಾಗಿದೆ. ಡಂಬಳ ಹಾಗೂ ಕಳಲೆಯ ಮರುಳಸಿದ್ದೇಶ್ವರನ ಗದ್ದುಗೆ ಮುಂದೆ ಕುಳಿತು ಹೂವು ಕೇಳುವ ಪದ್ದತಿ ಈಗಲೂ ಇದೆ.

**ಹೇಳಿಕೆಗಳು :** ಕುರುಬರು ಮುಗ್ಧರು, ಪ್ರಾಮಾಣಿಕರು, ಸತ್ಯವಂತರು, ಅವರು ನುಡಿದದ್ದೆಲ್ಲ ನಡೆಯುತ್ತದೆ ಎಂಬ ನಂಬಿಕೆ ಬಲವಾಗಿದೆ. ಯುಗಾದಿ ಶ್ರಾವಣ ಮಹಾನವಮಿ ದೀಪಾವಳಿ ಕಾರ್ತೀಕ ಶಿವರಾತ್ರಿಗಳಂಥ ಹಬ್ಬಗಳಲ್ಲಿ ಕುರುಬರ ಒಡೆಯರು ಪೂಜಾರಿಗಳು ದೇವಸ್ಥಾನದ ಆವರಣದಲ್ಲಿ ಹೇಳಿಕೆಗಳನ್ನು ನುಡಿಯುತ್ತಾರೆ. ಸರೂರಿನ ತೂಗುಡ್ಡದ ಮರುಳಸಿದ್ಧೇಶ್ವರ ತಪಗೈದ ಪರಿಸರದಲ್ಲಿ ಬೆಳೆದ ಮುಳ್ಳುಕಂಟಿಯ ಮೇಲೆ ನಿಂತು ಒಡೆಯರು ಹೇಳಿಕೆಗಳನ್ನು ನುಡಿಯುತ್ತಾರೆ. ಜಾತ್ರಾ ಸಂದರ್ಭದಲ್ಲಿ ನೆರೆದ ಭಕ್ತಾದಿಗಳ ಸಮ್ಮುಖದಲ್ಲಿ ಒಡೆಯರು ಹೇಳುವ ಈ ಹೇಳಿಕೆಗಳು ತುಂಬಾ ಪರಿಣಾಮಕಾರಿ ಯಾಗಿರುತ್ತವೆ. ಮಳೆಬೆಳೆಗಳಂತ ಪ್ರಕೃತಿಯ ಆಗುಹೋಗು ಗಳು, ಭವಿಷ್ಯತ್ತಿನಲ್ಲಿ ನಡೆಯಬಹುದಾದ ಘಟನೆಗಳನ್ನು ಒಗಟಿನ ರೂಪದಲ್ಲಿ ಈ ಹೇಳಿಕೆಗಳು ನಿರೂಪಿಸುತ್ತವೆ. ನಿದರ್ಶನಕ್ಕಾಗಿ ಕೆಲವು ಹೇಳಿಕೆಗಳನ್ನು ನೋಡಬಹುದು. **"ಪುಂಡಿಯ ಕಟ್ಟಿಗ್ಯಾಗ ಕೆಂಡವ ಒಗೆದ್ಹಾಂಗ ಪುಂಡ ಸರೂರ ಒಡೆಯರು ಹೇಳಿದ ಮಾತು ಬಂಡೀಗಿ ಕೀಲು ಜಡಿದ್ಹಾಂಗ"** ಎಂಬ ಮಾತನ್ನ ಗಮನಿಸಿದರೆ ಈ ಹೇಳಿಕೆಗಳ ಮಹತ್ವ ಗೊತ್ತಾಗುತ್ತದೆ. "ಆನಿಗಡತರ ಮೋಡ ಒಂಟಿಗಡತರ ಹುಲ್ಲು ಆಡಮರಿ ಕುಡಿಯಲಿಕ್ಕೆ ನೀರಿಲ್ಲ" ಎಂಬ ಹೇಳಿಕೆ ಬರಗಾಲವನ್ನು ಸೂಚಿಸುತ್ತದೆ. "ಬಂಡಿ ತುಂಬ ಅನ್ನ ಗಿಂಡಿ ತುಂಬ ನೀರು ಕೊಟ್ಟ ಒಕ್ಕಲಿಗ್ಯಾ ಮಗನ್ನ ಸಲುವೀನಿ" ಎಂಬ ಹೇಳಿಕೆಯಂತೂ ಕಾಲುವೆಗಳ ಮುಖಾಂತರ ವೇಳೆಯನ್ನು ನಿರ್ದಿಷ್ಟಪಡಿಸಿಕೊಂಡೇ ನೀರು ಪಡೆದು ತುಂಬಾ ಇಳುವರಿ ಯನ್ನು ಪಡೆಯುವ ಇಂದಿನ ಆಧುನಿಕ ನೀರಾವರಿ ಪದ್ಧತಿಯ ಪರಿಣಾಮವನ್ನು ಚಿತ್ರಿಸುವಂತಿದೆ. ಆಯಾ ವರ್ಷದ ಮಳೆಬೆಳೆ, ರೈತರ ಸುಖ ದುಃಖ, ಲೋಕೋದ್ಧಾರ ಕುರಿತಂತೆ ಒಗಟಿನ ಮೂಲಕ ಹೇಳುವ ಈ ಹೇಳಿಕೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿದರೆ ಹೊಸ ಸಂಗತಿಗಳು ಹೊರಬರುವ ಸಾಧ್ಯತೆಗಳಿವೆ.

**ನಂಬಿಕೆಗಳು :** ಜನಪದರು ತಮ್ಮ ಆರಾಧ್ಯ ದೈವಗಳ ಮೇಲೆ ಅಪಾರವಾದ ನಂಬಿಕೆಯಿಟ್ಟಿರುತ್ತಾರೆ. ಆ ದೈವಗಳ ಲೀಲೆಯಿಂದಲೇ ಆ ನಂಬಿಕೆಗಳು ಜನರ ಮೇಲೆ ಪರಿಣಾಮ ವನ್ನುಂಟುಮಾಡುವ ಸಾಧ್ಯತೆಗಳಿರುತ್ತವೆ. ಹೀಗಾಗಿ ಅನಾದಿ ಕಾಲದಿಂದಲೂ ನಂಬಿಕೆಗಳು ಹುಟ್ಟಿಕೊಂಡಿವೆ. ಡಂಬಳ ಮರುಳಸಿದ್ದೇಶ್ವರನ ಸುತ್ತ ಹುಟ್ಟಿಕೊಂಡ ಕೆಲವು ನಂಬಿಕೆಗಳು ಕುತೂಹಲಕಾರಿಯಾಗಿವೆ. ಮರಳಿನ ಮೇಲೆ ಗುದ್ದಲಿ ಸಲಿಕೆ ಇಟ್ಟರೆ ಆ ವರ್ಷ ಅಧಿಕ ಪ್ರಮಾಣದಲ್ಲಿ ಸಾವು ನೋವುಗಳು ಸಂಭವಿಸುವುದು. ಮರಳಿನ ರಾಶಿ ಮೇಲೆ ಕೌದಿಯಿಟ್ಟರೆ ಆ ವರ್ಷ ಚಳಿ ವಿಪರೀತವಾಗುವುದು. ಈಚಲ ಪರಕಿ ಡೋಲಿ ಮೇಲಿಟ್ಟರೆ ಮುಸ್ಲಿಂ ಸಮುದಾಯವರ ಸಾವುನೋವುಗಳು ಹೆಚ್ಚಾಗುತ್ತವೆ. ಇಂಥ ನಂಬಿಕೆಗಳ ಮೇಲೆ ಜನಸಮುದಾಯ ತುಂಬ ಎಚ್ಚರಿಕೆಯಿಂದ ಗಮನಿಸುತ್ತಿರುತ್ತದೆ.[೧೩]

**ಪವಾಡಗಳು :** ಪವಾಡಗಳು ಸಹಿತ ದೈವಗಳು ಮತ್ತು ಭಕ್ತಸಮೂಹದ ನಡುವೆ ಅವಿನಾಭಾವ ಸಂಬಂಧ ಬೆಳೆಯುವುದಕ್ಕೆ ಕಾರಣವಾಗಿರುತ್ತವೆ. ಡಂಬಳದ ಜನಪದ ಹಾಡುಗಾರ ಬೀರಪ್ಪ ಬಂಡಿಯವರು ಮರುಳಸಿದ್ದನ ಕುರಿತು ಹೇಳುವ ಪವಾಡ ಕಥೆ ರೋಮಾಂಚಕಾರಿಯಾಗಿದೆ.[೧೪] ಆ ಕಥೆಯನ್ನು ಹೀಗೆ ಕ್ರೋಢೀಕರಿಸಲಾಗಿದೆ. ಡಂಬಳದಲ್ಲಿರುವ

ಗೋಸಲ ಸಂಪ್ರದಾಯದ ಎಡೆಯೂರು ಸಿದ್ಧಲಿಂಗೇಶ್ವರ ಪರಂಪರೆಗೆ ಸೇರಿದ ತೋಂಟದಾರ್ಯಮಠ ಈ ಭಾಗದಲ್ಲಿ ಅತ್ಯಂತ ಪ್ರಸಿದ್ಧವಾದುದು. ಅರ್ಧನಾರೀಶ್ವರ ಸ್ವಾಮಿ (೧೬೭೫-೧೭೭೫) ಗಳು ಈ ಮಠದ ಮೊದಲ ಪೀಠಾಧಿಪತಿಗಳು. ಊರ ಹೊರಗಿರುವ ಗುಡ್ಡದಲ್ಲಿ ಮರುಳಸಿದ್ಧ ನೆಲೆಸಿದ್ದನು. ಅಡ್ಡಜಾಡಿ ದೊಡ್ಡ ಬೆತ್ತ ಬಿಗ್ಗೆರವು ಧರಿಸಿಕೊಂಡು ಈತ ತನ್ನ ನವಕೋಟಿ ಸಿದ್ಧರೊಂದಿಗೆ ಮಲಗಿದ್ದನು. ಒಂದು ದಿನ ಜಮಾಲಶಾ ವಲೀ ಸುಡು ಬಿಸಿಲಿನಲ್ಲಿ ಮರಳಿನ ಮೇಲೆ ನಡೆಯುತ್ತ ಬರುತ್ತಿದ್ದನು. ಇದನ್ನು ಗಮನಿಸಿದ ಮರುಳಸಿದ್ಧ ವಲೀ ಇದ್ದಲ್ಲಿಗೆ ಹೋಗಿ "ಇನ್ನು ಮೇಲೆ ನೀನು ಪವಾಡಪುರುಷನಾಗುವಿ, ಹೆದರಬೇಡ" ಎಂದು ಹೇಳಿ ಡಂಬಳಕ್ಕೆ ಕರೆದುಕೊಂಡು ಬಂದನು. ಮರುಳಸಿದ್ಧ ಮತ್ತು ಜಮಾಲಸಾನ ಜ್ಞಾನಲೀಲೆಗಳನ್ನು ಗಮನಿಸಿದ ಅರ್ಧನಾರೀಶ್ವರರು ಮಠದಲ್ಲಿ ಯಾವುದೇ ಕಾರ್ಯಕ್ರಮ ವಿದ್ದರೂ ಅವರಿಬ್ಬರನ್ನು ಕರೆಯಿಸಿಕೊಳ್ಳುತ್ತಿದ್ದರು.

ಒಂದು ದಿನ ಹೀಗೆಯೇ ಅರ್ಧನಾರೀಶ್ವರ ಸ್ವಾಮಿಗಳು ಇವರಿಬ್ಬರನ್ನು ಮಠಕ್ಕೆ ಕರೆಯಿಸಿಕೊಳ್ಳುತ್ತಾರೆ. ಮರುಳಸಿದ್ಧ ಮತ್ತು ಜಮಾಲಶಾವಲಿಯು ಸ್ವಾಮಿಗಳ ಮಗ್ಗುಲಲ್ಲಿಯೇ ಕುಳಿತುಕೊಳ್ಳುತ್ತಿದ್ದರು. ಇದನ್ನು ಗಮನಿಸಿದ ಮಠದ ಭಕ್ತರು "ಇಬ್ಬರೂ ಲಿಂಗವಿಲ್ಲದವರು. ಒಬ್ಬ ಕುರುಬ, ಈತ ಬಿಗ್ಗೆರವು ಹಾಕಿಕೊಂಡು ದೊಡ್ಡಬೆತ್ತ ಹಿಡಿದುಕೊಂಡು ಅಡ್ಡಜಾಡಿ ಹೊದ್ದುಕೊಂಡು ಅರ್ಧನಾರೀಶ್ವರ ಪಕ್ಕದಲ್ಲಿ ಕುಳಿತುಕೊಂಡಿದ್ದಾನೆ. ಮತ್ತೊಬ್ಬ ಸಾಬ, ಕುರ್ಚಿಯ ಮೇಲೆ ಕೂಡುತ್ತಾನಲ್ಲ, ಲಿಂಗಾಯತರಾದ ನಾವು ಶ್ರೀಗಳ ಮುಂದೆ ಹಾಸಿರುವ ಗುಡಾರದ ಮೇಲೆ ಕುಳಿತುಕೊಳ್ಳುವುದು ಎಲ್ಲಿಯ ನ್ಯಾಯ" ಎಂದು ಸಾಂಪ್ರದಾಯಿಕ ಲಿಂಗಾಯತರು ದೂರಿದರು. ಇದನ್ನು ಸೂಕ್ಷ್ಮವಾಗಿ ಗಮನಿಸಿದ ಮರುಳಸಿದ್ದನು "ನೀವು ಲಿಂಗವಂತರು, ನಾನು ಕುರುಬ, ಲಿಂಗವಿಲ್ಲದ ಭವಿ" ಎನ್ನುತ್ತ ಒಂದು ಲಿಂಗವನ್ನು ತೋರಿಸಿದ. ಆಗ ಎಲ್ಲಿ ನೋಡಿದರೂ ಲಿಂಗವೇ ಕಾಣಿಸಿಕೊಂಡವು. ಎಂದಿನಂತೆ ಡಂಬಳದ ಲಿಂಗಾಯತರು ಸ್ನಾನಕರ್ಮಾದಿಗಳನ್ನು ಮುಗಿಸಿಕೊಂಡು ಲಿಂಗಪೂಜೆಗೆ ಅಣಿಯಾಗಲು ಕುಳಿತುಕೊಳ್ಳುತ್ತಾರೆ. ಆಗ ಅವರ ಲಿಂಗಗಳೆಲ್ಲ ಮಾಯವಾಗಿ ದ್ದನ್ನು ಕಂಡು ಶ್ರೀಗಳವರಲ್ಲಿಗೆ ಬಂದು ತಮ್ಮ ಅಳಲನ್ನು ನಿವೇದಿಸಿಕೊಳ್ಳುತ್ತಾರೆ. ಆಗ ಶ್ರೀಗಳು "ಮರುಳಸಿದ್ಧನು ಸಾಮಾನ್ಯ ವ್ಯಕ್ತಿಯಲ್ಲ. ಅವನೊಬ್ಬ ಪವಾಡಪುರುಷ. ಮಠದ ತುಂಬೆಲ್ಲ ಲಿಂಗವನ್ನು ತೋರಿಸಿದ್ದು ತಮಗೆಲ್ಲ ಗೊತ್ತಿದೆ. ನಿಮ್ಮ ಲಿಂಗ ನಿಮಗೆ ಮರಳಿ ಬೇಕೆಂದರೆ ಆತನಿಂದಲೇ ಪಡೆಯಬೇಕು. ಅದಕ್ಕಾಗಿ ಮರುಳಸಿದ್ಧನನ್ನು ಮಠಕ್ಕೆ ಕರೆದುಕೊಂಡು ಬನ್ನಿರಿ" ಎಂದು ತಮ್ಮ ಭಕ್ತಸಮೂಹಕ್ಕೆ ಹೇಳಿದರು.

ಸ್ವಾಮೀಜಿಯವರ ಆದೇಶದಂತೆ ಲಿಂಗಾಯತರು ಮರುಳಸಿದ್ಧನನ್ನು ಕರೆದುಕೊಂಡು ಬಂದರು. ಆಗ ಸ್ವಾಮಿಗಳು ಬರಮಾಡಿಕೊಂಡು "ಮರುಳಸಿದ್ಧರೇ, ಲಿಂಗಾಯತರು ಹಸಿಕೊಂಡಿರುವರು. ಅವರ ಲಿಂಗವನ್ನು ಕೊಟ್ಟುಬಿಡಿರಿ" ಎಂದರು. ಅದಕ್ಕೆ "ಶ್ರೀಗಳೇ, ನಾನು ಲಿಂಗವಿಲ್ಲದ ಭವಿ. ಅವರ ಲಿಂಗ ತೆಗೆದುಕೊಂಡು ನಾನೇನು ಮಾಡಲಿ. ಹೋಗಿರಿ ಆ ಜಪದ ಬಾವಿಯಲ್ಲಿ ನಿಮ್ಮ ಲಿಂಗಗಳು ಇವೆ" ಎಂದಾಗ, ಆ ಬಾವಿಗೆ ಹೋಗಿ ನೋಡಿದಾಗ ಲಿಂಗಗಳು ತೇಲಾಡುತ್ತಿದ್ದವು. ಹಿಡಿಯಲಿಕ್ಕೆ ಹೋದರೆ ನೀರಲ್ಲಿ ಮುಳುಗುತ್ತಿದ್ದವು. ಲಿಂಗಾಯತರೆಲ್ಲ ಶ್ರೀಗಳ ಮೊರೆಹೊಕ್ಕರು. ಆಗ ಶ್ರೀಗಳು "ಮರುಳಸಿದ್ಧರೇ, ನೀವೇ ಹೋಗಿ ಆ ಲಿಂಗಗಳನ್ನು ನಿಮ್ಮ ಕೈಯಾರೆ ಕೊಡಿರಿ" ಎಂದು ಹೇಳಿದರು. ಆಗ ಮರುಳಸಿದ್ಧರು ಜಮಾಲಸಾನೊಂದಿಗೆ ಜಪದ ಬಾವಿಗೆ ಬಂದಾಗ ಲಿಂಗಗಳು ದಂಡೆಗೆ ಬಂದವು. ಅವುಗಳನ್ನು ಲಿಂಗಾಯತರಿಗೆಲ್ಲ ಹಂಚಿ ಮರಳಿ ಮಠಕ್ಕೆ ಬಂದು "ನನ್ನನ್ನು ಕುರುಬ ಎಂದು ಘೋಷಣೆ ಮಾಡಿದಿರಲ್ಲ, ಕಂಡಕಂಡವರ ಕಾಲು ಹಿಡಿಸುತ್ತೇನೆ" ಎಂದು ಸಾರಿದರು. ಕಂಡಕಂಡವರ ಕಾಲು ಹಿಡಿಸುತ್ತೇನೆ ಎಂದರೆ ಏನು ? ಅಂದರೆ ಈ ಧರ್ಮಾಪುರ (ಡಂಬಳ)ದಲ್ಲಿ ನನಗೆ ಕುರುಬರು, ಹಾರುಗೇರಿಯಲ್ಲಿ ಹಡಪದರು, ಬಾಗೇವಾಡಿಯಲ್ಲಿ ಬಡಿಗೇರರು ಪಾಂಚಾಳರು, ಕೆಲೂರದಲ್ಲಿ ವಾಲ್ಮೀಕಿಯವರು, ಹಿರೇಸಿಂದೋಗಿಯಲ್ಲಿ ಹರಿಜನರು, ಉಜ್ಜಯಿನಿಯಲ್ಲಿ ಬ್ರಾಹ್ಮಣರು ಪೂಜಿಸಬೇಕೆಂದು ಅಪ್ಪಣೆ ಮಾಡಿದರು. ಅವರ ಅಪ್ಪಣೆಯಂತೆ ಆಯಾ ಊರುಗಳಲ್ಲಿ ಆಯಾ ಸಮುದಾಯದವರೇ ಮರುಳಸಿದ್ದೇಶ್ವರನನ್ನು ಪೂಜೆ ಮಾಡುತ್ತಿರುವುದನ್ನು ಈಗಲೂ ನಾವು ಕಾಣುತ್ತೇವೆ. ಈ ಎಲ್ಲ ಗ್ರಾಮಗಳು ಡಂಬಳದ ಸುತ್ತಮುತ್ತಲಿನಲ್ಲಿವೆ.

ಈ ಕಥೆಯ ಹಿನ್ನೆಲೆಯನ್ನು ಅವಲೋಕಿಸಿದಾಗ ಮರುಳಸಿದ್ಧನ ಕಾಲಕ್ಕೂ ಅರ್ಧನಾರೀಶ್ವರರ ಕಾಲಕ್ಕೂ ಹೊಂದಾಣಿಕೆಯೇ ಆಗುವುದಿಲ್ಲ. ಹೀಗಾಗಿ ಇಲ್ಲಿ ಬರುವ ಮರುಳಸಿದ್ಧ ಯಾರು ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಬಹುಶಃ ಮರುಳಸಿದ್ಧ ಪರಂಪರೆಯ ವ್ಯಕ್ತಿಯೊಬ್ಬ ಅರ್ಧನಾರೀಶ್ವರರ ಕಾಲದಲ್ಲಿ ಡಂಬಳದಲ್ಲಿ ಪ್ರಸಿದ್ಧನಾಗಿರ ಬಹುದು ಎಂದು ಸಧ್ಯಕ್ಕೆ ಹೇಳಬಹುದಾಗಿದೆ. ಏಕೆಂದರೆ ಅಧಿಕೃತವೆನ್ನಬಹುದಾದ ಆಧಾರಗಳಿಲ್ಲದುದೇ ಇದಕ್ಕೆ ಕಾರಣ. ಅದೇನೆ ಇರಲಿ, ಮರುಳಸಿದ್ಧನ ಸಂಪ್ರದಾಯ ಆಚರಣೆ



ಸಿದ್ಧಮಂಕ (ಮರುಳಸಿದ್ಧ)ನಿಗೆ ಸಂಬಂಧಿಸಿದ ಶಾಸನ ಸರೂರು (ಮುದ್ದೇಬಿಹಾಳ ತಾಲ್ಲೂಕು, ಬಿಜಾಪುರ ಜಿಲ್ಲೆ)



ಮರುಳಸಿದ್ಧೇಶ್ವರ ದೇವಸ್ಥಾನ, ಡಂಬಳ (ಗದಗ ಜಿಲ್ಲೆ)

ನಂಬಿಕೆ ಮತ್ತು ಪವಾಡಗಳು ಜನಸಮುದಾಯದ ಮೇಲೆ ಗಾಢವಾದ ಪ್ರಭಾವ ಬೀರಿರುವುದಂತೂ ಸತ್ಯ.

### ಮರುಳಸಿದ್ಧೇಶ್ವರನ ಕುರಿತ ಸಾಹಿತ್ಯ

ಶಿಷ್ಟ ದಾಖಲು ಮತ್ತು ಮೌಖಿಕ ರೂಪಗಳಲ್ಲಿ ಮರುಳಸಿದ್ಧೇಶ್ವರನ ಕುರಿತು ಸಾಹಿತ್ಯ ಸೃಷ್ಟಿಯಾಗಿದೆ. ಸಿದ್ಧಮಂಕ ಚರಿತೆ[೧೮] ಮತ್ತು ಮರುಳಸಿದ್ದಯ್ಯನವರ ಚರಿತೆ[೧೯] ಎಂಬ ಎರಡು ಕಾವ್ಯಗಳು ಮರುಳಸಿದ್ಧೇಶ್ವರನ ವ್ಯಕ್ತಿತ್ವ ಮತ್ತು ಕಾರ್ಯಸಿದ್ಧಿಗಳನ್ನು ವಿವರವಾಗಿ ನಿರೂಪಿಸುತ್ತವೆ. ಹಾಲು ಮೊಸರಿನೊಂದಿಗೆ ಕುರಿಯ ಮಾಂಸವನ್ನು ಮಾರಾಟ ಮಾಡಿದ ಪ್ರಯುಕ್ತ ಕಲ್ಯಾಣಪಟ್ಟಣದಿಂದ ಕುರುಬ ಸಮುದಾಯವನ್ನು ಹೊರಹಾಕಿರುತ್ತಾರೆ. ಮರುಳಸಿದ್ಧನು ತನ್ನ ತಪಸ್ಸಿನ ಮೂಲಕ ಈ ಸಮುದಾಯಕ್ಕೆ ಕಲ್ಯಾಣಪಟ್ಟಣದಲ್ಲಿ ಮರುಪ್ರವೇಶವಾಗಲು ಕಾರಣವಾದ ಘಟನೆಗಳನ್ನು ಎರಡೂ ಕಾವ್ಯಗಳು ವಿವರಿಸುತ್ತವೆ. ದಾಖಲೆ ರೂಪದ ಶಾಸನಗಳು, ನಿರೂಪಗಳೂ[೨೦] ಸಹಿತ ಈತನ ಬಗೆಗೆ ಕುತೂಹಲಕರವಾದ ಸಂಗತಿಗಳನ್ನು ಅನಾವರಣಗೊಳಿಸುತ್ತವೆ. ಇನ್ನು ಮೌಖಿಕ ರೂಪದಲ್ಲಿ ಮರುಳಸಿದ್ಧನ ಬಗೆಗೆ ಹಾಡು ಕಥೆ ಹಾಗೂ ಹೇಳಿಕೆಗಳು ಪ್ರಚಲಿತದಲ್ಲಿವೆ.

ಈವರೆಗಿನ ಅವಲೋಕನದಿಂದ ಹಾಲುಮತ ಗುರುಪರಂಪರೆಯಲ್ಲಿ ಬರುವ ಮರುಳಸಿದ್ಧೇಶ್ವರನ ಬಗೆಗೆ ನಾನು ಕಂಡುಕೊಂಡ ಸಂಗತಿಗಳನ್ನು ಹೀಗೆ ಕ್ರೋಢೀಕರಿಸ ಬಹುದು.

೧. ಮರುಳಸಿದ್ಧೇಶ್ವರನನ್ನು ಪರ್ಯಾಯವಾಗಿ ಹಾಲುಮತ ಪರಂಪರೆಯಲ್ಲಿ ಮರುಳಮಂಕ, ಸಿದ್ಧಮಂಕ, ಮಂಕತಂದೆ, ಮರುಳಯ್ಯ ಎಂದು ಕರೆಯಲಾಗುತ್ತಿದೆ. ಕುರುಬರಗುರು ಒಡೆಯರಲ್ಲಿ ಮಂಕೊಡೆಯರು ಎಂಬ ಒಳಪಂಗಡವಿದೆ. ಇವರು ಸಿದ್ಧರಾಮ ಮತ್ತು ಮರುಳಸಿದ್ಧನ ಪರಂಪರೆಗೆ ಸೇರಿದವರು. ಈ ಪರಂಪರೆಗೆ ಸೇರಿದ ವ್ಯಕ್ತಿಗಳಿಗೆ ಮಂಕಯ್ಯ, ಮರುಳಯ್ಯ, ಗವಿಸಿದ್ಧ, ಸಿದ್ಧಯ್ಯ, ಸಿದ್ಧಮಂಕ ಎಂಬ ಹೆಸರುಗಳನ್ನಿಡುವ ಪದ್ಧತಿ ಈಗಲೂ ಇದೆ.

೨. ಸಿದ್ಧರಾಮನ ಅನುಯಾಯಿಯಾದ ಈತನನ್ನು ಹನ್ನೆರಡನೆಯ ಶತಮಾನದಲ್ಲಿಯೇ ಬಸವ ಬಿಜ್ಜಳ ರೇವಣಸಿದ್ಧರ ಸಮ್ಮುಖದಲ್ಲಿ ಕುರುಬ ಸಮುದಾಯಕ್ಕೆ ಗುರುವನ್ನಾಗಿ ನಿಯಮಿಸಲಾಗಿದೆ. ನಂತರದ ಶತಮಾನ ಗಳಲ್ಲಿ ಲಿಂಗಾಯತ ಮಾದರ ಹಾಗೂ ಇನ್ನಿತರೆ ಸಮುದಾಯಗಳಿಗೂ ಆರಾಧ್ಯದೈವವಾಗಿಯೂ ಕಂಡುಬರುತ್ತಾನೆ.

೩. ಕುರುಬರು, ಲಿಂಗಾಯತರು ಹಾಗೂ ಮಾದರ ಸಮುದಾಯಗಳು ಈತನನ್ನು ಆರಾಧಿಸುತ್ತಿದ್ದರೂ, ಮೂಲತಃ ಮರುಳಸಿದ್ಧ ಜಾತಿಯಿಂದ ಕುರಬರವ ನಾಗಿದ್ದಾನೆ.

೪. ಸರೂರು ಮತ್ತು ಡಂಬಳಗಳಲ್ಲಿ ಈತನ ಆರಾಧನೆ ಅಧಿಕವಾಗಿ ಕಂಡುಬರುತ್ತಿದೆ. ಡಂಬಳದ ಸುತ್ತಮುತ್ತಲ ಗ್ರಾಮಗಳಲ್ಲಿ ಮರುಳಸಿದ್ಧ ದೇವಾಲಯ ಗದ್ದುಗೆಗಳಿವೆ. ಕುರುಬರು, ಲಿಂಗಾಯತರು, ಪಾಂಚಾಳರು, ಮಾದರು, ವಾಲ್ಮೀಕಿ, ಬ್ರಾಹ್ಮಣರು ಪೂಜಿಸುವುದನ್ನು ಈಗಲೂ ಇಲ್ಲಿ ನೋಡಬಹುದು. ಇದಕ್ಕೆ ಡಂಬಳದ ಬೀರಪ್ಪ ಬಂಡಿ ಅವರು ಹೇಳುವ ಕಥೆಯೂ ಪುಷ್ಟಿಯನ್ನು ನೀಡುತ್ತದೆ.

೫. ಮರುಳಸಿದ್ದನಿಗೆ ಸಂಬಂಧಿಸಿದ ಆಚರಣೆ ಸಂಪ್ರದಾಯ ಹೇಳಿಕೆ ನಂಬಿಕೆಗಳು ಪ್ರಾದೇಶಿಕವಾರು ಭಿನ್ನವಾಗಿವೆ. ಸರೂರುಗಳಲ್ಲಿ ಮಂಕೊಡೆಯರ ಹೇಳಿಕೆಗಳು ಮಳೆಬೆಳೆಗಳಂಥ ಪ್ರಕೃತಿಗೆ ಸಂಬಂಧಿಸಿವೆ. ಡಂಬಳದಲ್ಲಿ ಮರುಳಸಿದ್ಧನ ಆರಾಧನೆಯಲ್ಲಿ ನಂಬಿಕೆಗಳಿಗೆ ಆದ್ಯತೆಯಿದೆ. ವಿಶೇಷವಾಗಿ ಇಲ್ಲಿ ಕುರುಬ ಲಿಂಗಾಯತ

ಹಾಗೂ ಮುಸ್ಲಿಂ ಸಮುದಾಯಗಳ ಸೌಹಾರ್ದತೆಯ ಪ್ರತೀಕದಂತೆ ಮರುಳಸಿದ್ಧನ ವ್ಯಕ್ತಿತ್ವ ಜನಮಾನಸದಲ್ಲಿ ರೂಪುಗೊಂಡಿದೆ.

೬. ಇನ್ನೂ ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಸಮಗ್ರ ಆಕರಗಳನ್ನು ಒಂದೆಡೆ ಸಂಗ್ರಹಿಸಿ ವಿಶ್ಲೇಷಣೆಗೊಳ ಪಡಿಸಿದಾಗ ಮರುಳಸಿದ್ಧನ ಬಗೆಗೆ ಹೊಸ ಸಂಗತಿಗಳು ತಿಳಿದುಬರಬಹುದು. ಆ ನಿಟ್ಟಿನಲ್ಲಿ ಈ ಸಂಪ್ರಬಂಧ ಒಂದು ಕಿರುಪ್ರಯತ್ನವಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಹಾಲುಮತ ಗುರುಪರಂಪರೆಯ ಹೆಚ್ಚಿನ ವಿವರಗಳಿಗಾಗಿ ನನ್ನ ಈ ಸಂಪ್ರಬಂಧಗಳನ್ನು ನೋಡಿ. ೧. ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು, **ಇತಿಹಾಸ ದರ್ಶನ,** ಸಂಪುಟ ೨೦, ಪು೧ ೩೦೫, ೨. ಅಮೋಘಸಿದ್ಧ ಪರಂಪರೆಯ ಹಾಲುಮತ ಮಠಗಳು, ಇತಿಹಾಸ ದರ್ಶನ ಸಂಪುಟ ೨೧, ಪುಟ ೨೧, ಪುಟ ೨೫೦, ೩. ಸಿದ್ಧರಾಮ ಪರಂಪರೆಯ ಹಾಲುಮತ ಮಠಗಳು, ಇತಿಹಾಸ ದರ್ಶನ, ಸಂಪುಟ ೨೩, ಪುಟ ೨೨೦.

೨. ಎಂ.ಎಂ. ಕಲಬುರ್ಗಿ., ಸಿದ್ಧರಾಮ ಶಿವಯೋಗಿಯಾದ, ರೇವಣಸಿದ್ಧನನ್ನು ಶಿವಾಚಾರ್ಯ ಮಾಡಿದರು, **ಹಾಲುಮತ ಅಧ್ಯಯನಗಳು,** (ಸಂ. ಎಫ್.ಟಿ. ಹಳ್ಳಿಕೇರಿ, ೨೦೧೦), ಪುಟ ೬.

೩. **ಸಿದ್ಧಮಂಕ ಚರಿತೆ,** (ಸಂ.) ಎಂ.ಎಂ. ಕಲಬುರ್ಗಿ., ವೈ.ಸಿ. ಭಾನುಮತಿ, ೨೦೦೪, ೧–೧೬.

೪. **ಹಾಲುಮತ ಪುರಾಣವು,** ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ (ಸಂ), ೧೯೧೦, ೫–೧೦೭.

೫. ರು.ಮ. ಷಡಕ್ಷರಯ್ಯ, 'ಸರೂರಿನ ಶಿಲ್ಪಗಳು', **ಇತಿಹಾಸ ದರ್ಶನ,** ಸಂಪುಟ ೪, ಪುಟ ೭೭, ೧೯೮೯.

೬ ಎಂ.ಎಂ. ಕಲಬುರ್ಗಿ, ವೀರಶೈವ ಉಜನಿಪೀಠ, **ಹಾಲುಮತ ಅಧ್ಯಯನಗಳು,** (ಸಂ. ಎಫ್.ಟಿ. ಹಳ್ಳಿಕೇರಿ), ಪುಟ ೬.

೭. ೩. ಎಂ.ಎಂ. ಕಲಬುರ್ಗಿ., ವೈ.ಸಿ. ಭಾನುಮತೀ (ಸಂ), ಅದೇ., ೨೦೦೪, ೩–೧೨೭, ೧೨೮.

೮. ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ, ಅದೇ., ೩–೧೪.

೯. ಅದೇ, ೩–೧೫.

೧೦. ಎಂ.ಎಂ. ಕಲಬುರ್ಗಿ, ವೈ.ಸಿ. ಭಾನುಮತಿ, ಅದೇ., ೩–೧೪೧.

೧೧. ಅದೇ, ೩–೧೪೨.

೧೨. ಅದೇ, ಸಂಧಿ ೪.

೧೩. ಡಿ.ವಿ. ದೇವರಾಜ್, 'ಕಳಲೆ ವಾಸ್ತುಶಿಲ್ಪ ಮತ್ತು ಲಲಿತಕಲೆಗಳು', 'ಕಳಲೆ ಮನೆತನದ ವೀರಶೈವ ದಳವಾಯಿಗಳು' (ಸಂ. ಕೆ.ಎಸ್. ಶಿವಣ್ಣ, ೧೯೯೪), ಪುಟ ೧೮೦.

೧೪. **ಹಳ್ಳಿಯ ಹಾಡುಗಳು,** ೨೦೦೯, ಗೊರೂರು ರಾಮಸ್ವಾಮಿ ಅಯ್ಯಂಗಾರ್ (ಸಂ), ಪುಟ ೧೭.

೧೫. ಸಿ.ಕೆ. ಪರಶುರಾಮಯ್ಯ, 'ಒಡೆಯರ ಸಂಪ್ರದಾಯ ಮತ್ತು ಆಚರಣೆಗಳು, ಕುರುಬರ ಗುರು ಒಡೆಯರು' (ಸಂ. ಎಫ್.ಟಿ. ಹಳ್ಳಿಕೇರಿ, ೨೦೦೭), ಪುಟ ೮೦.

೧೬. ಡಂಬಳದ ಮರುಳಸಿದ್ಧ ದೇವಾಲಯದ ಪೂಜಾರಿಗಳಾದ ಶ್ರೀ ಗವಿಸದ್ದಪ್ಪ ಮಠದ ಅವರು ಇಂಥ ಹೇಳಿಕೆಗಳ ಬಗೆಗೆ ಮಾಹಿತಿಯನ್ನು ನೀಡಿದ್ದಾರೆ. ಹಾಗೆಯೇ ವೈ.ಎಚ್. ಹಳ್ಳಿಕೇರಿ ಹಾಗೂ ಎಚ್.ಎಸ್. ಪಾಟೀಲ ಅವರು ಕ್ಷೇತ್ರ ಕಾರ್ಯದಲ್ಲಿ ನನ್ನೊಂದಿಗೆ ಪಾಲ್ಗೊಂಡು ಡಂಬಳ ಪರಿಸರದಲ್ಲಿ ಬರುವ ಹಿರೇಸಿಂದೋಗಿ, ಬಿಸರಳ್ಳಿ ಬಾಗೇವಾಡಿ, ಕೆಲೂರು ಗ್ರಾಮಗಳಲ್ಲಿರುವ ಮರುಳಸಿದ್ಧ ಪರಂಪರೆಯ ಬಗೆಗೆ ಮಾಹಿತಿಯನ್ನು ನೀಡಿ ಸಹಕರಿಸಿದ್ದಾರೆ. ಈ ಎಲ್ಲ ಮಹನೀಯರಿಗೆ ನಾನು ಕೃತಜ್ಞನಾಗಿದ್ದೇನೆ.

೧೭. ಹನುಮಾಕ್ಷಿ ಗೋಗಿ., ಪಿ.ಕೆ. ರಾಠೋಡ, **ಡಂಬಳ ಸಾಂಸ್ಕೃತಿಕ ಅಧ್ಯಯನ,** ೨೦೦೮, ಪುಟ ೯೯.

೧೮. ಸಿದ್ಧಮಂಕ ಚರಿತೆಯ ಹೆಚ್ಚಿನ ಮಾಹಿತಿಗಾಗಿ ನೋಡಿ : ೧. ಎಂ.ಎಂ. ಕಲಬುರ್ಗಿ, ವೈ.ಸಿ. ಭಾನುಮತಿ, ಸಿದ್ಧಮಂಕ ಚರಿತೆಯ ಪ್ರಸ್ತಾವನೆ, ೨. ಎಫ್.ಟಿ. ಹಳ್ಳಿಕೇರಿ, ಹಾಲುಮತ ಸಂಸ್ಕೃತಿ ಕುರಿತು ಒಂದು ಕೃತಿ : ಸಿದ್ಧಮಂಕ ಚರಿತೆ, ಪ್ರಸಾದ ೨೨–೬, ೨೦೦೭, ೩. ಸಿ.ಕೆ. ಪರಶುರಾಮಯ್ಯ, ಸಿದ್ಧಮಂಕ ಚರಿತೆ : ಕುರುಬರ ಗುರುಪರಂಪರೆಯನ್ನು ತಿಳಿಸುವ ಕೃತಿ, ಹಸ್ತಪ್ರತಿ ಅಧ್ಯಯನ (ಸಂ. ಎಫ್.ಟಿ. ಹಳ್ಳಿಕೇರಿ, ೨೦೦೭) ೪–೧, ೪. ಕೆ. ರವೀಂದ್ರನಾಥ, ಸಿದ್ಧಮಂಕ ಚರಿತೆ, ಹಾಲುಮತ ಅಧ್ಯಯನ–೧ (ಸಂ. ಎಫ್.ಟಿ. ಹಳ್ಳಿಕೇರಿ, ೨೦೧೦).

೧೯. ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿಯವರು ಸಂಗ್ರಹಿಸಿದ ಹಾಲುಮತ ಪುರಾಣ ಕೃತಿಯ ಸರಿಯಾದ ಹೆಸರು ಮರುಳಸಿದ್ಧಯ್ಯನವರ ಚರಿತೆ, ಈ ಕೃತಿಯ ಹೆಚ್ಚಿನ ವಿವರಗಳಿಗಾಗಿ ನೋಡಿ, ಬಿ.ಜಿ. ಬಿರಾದಾರ ಅವರ ಹಾಲುಮತ ಪುರಾಣವು : ಒಂದು ಅವಲೋಕನ, ಹಸ್ತಪ್ರತಿ ಅಧ್ಯಯನ (ಸಂ. ಎಫ್.ಟಿ. ಹಳ್ಳಿಕೇರಿ, ೨೦೦೭) ೪–೨.

೨೦. ತಗರ ಪವಾಡ ಹಾಗೂ ಸಿದ್ಧಮಂಕ ಚರಿತೆಯ ಅನುಬಂಧ ನೋಡಿರಿ.

ಡಾ. ಲಿಂಗದಹಳ್ಳಿ ಹಾಲಪ್ಪ*

# ಹಾಲುಮತ ಕುರುಬ ಜನಾಂಗದ ದಳವಾಯಪ್ಪ

ದಳವಾಯಿ ಎಂದರೆ ಸಾಮಾನ್ಯವಾಗಿ ಯುದ್ಧರಂಗದಲ್ಲಿ ಸೈನ್ಯವನ್ನು ಮುನ್ನಡೆಸುವ ಸೇನಾಪತಿ ಎಂಬ ಅರ್ಥವಿದೆ. ಪ್ರಸ್ತುತ ಸಂದರ್ಭದಲ್ಲಿ ದಳವಾಯಿ ಎಂದರೆ, ಹಾಲುಮತ ಕುರುಬ ಜನಾಂಗದ ಕುಲದೈವ ಬೀರಪ್ಪನ ಸ್ಥಾವರಮೂರ್ತಿಯ ಜೀವಂತರೂಪ ಎಂದು ಹೇಳಬಹುದು. ಒಂದು ಜನಾಂಗವನ್ನು ನಿಶ್ಚಿತ ಧಾರ್ಮಿಕ ಪರಂಪರೆಯ ಮಾರ್ಗದಲ್ಲಿ ಮುನ್ನಡೆಸುವ ದೈವೀಪುರುಷನ ಮನುಷ್ಯ ರೂಪಕ್ಕೆ 'ದಳವಾಯಿ' ಎಂದು ನಾಮಕರಣವಾಗಿರುವುದು ಗಮನಾರ್ಹವಾದದ್ದು.

**ಐತಿಹಾಸಿಕ ಹಿನ್ನೆಲೆ :** ದಳವಾಯಿ ಆಚರಣೆ ಎಂದಿನಿಂದ ಆರಂಭವಾಯಿತು ಎಂಬುದರ ಕುರಿತು ಸ್ಪಷ್ಟ ಕಾಲನಿರ್ಣಯ ಮಾಡುವುದು ಕಷ್ಟ. ಇದಕ್ಕೆ ಶಾಸನ ಮತ್ತು ದಾಖಲೆಗಳು ಇರುವುದಿಲ್ಲ. ಆದರೆ ಈ ಧಾರ್ಮಿಕ ಆಚರಣೆಯನ್ನು ಸೂಕ್ಷ್ಮವಾಗಿ ಗಮನಿಸಿ ಕಾಲ ನಿರ್ಣಯವನ್ನು ಮಂಡಿಸಬಹುದಾಗಿದೆ.

1) ಈ ಆಚರಣೆಯು ಮಧ್ಯ ಕರ್ನಾಟಕದ ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳ ಸೀಮಿತ ಪ್ರದೇಶಗಳ ಹಾಲುಮತ ಕುರುಬ ಜನಾಂಗಕ್ಕೆ ಸೇರಿದ ರೇವಣಸಿದ್ದೇಶ್ವರ ಧಾರ್ಮಿಕ ಸಂಸ್ಥಾನದ ಅಡಳಿತಕ್ಕೆ ಒಳಪಟ್ಟ ಗುಡಕಟ್ಟುಗಳಲ್ಲಿ ಪ್ರಚಲಿತದಲ್ಲಿದೆ. ರೇವಣಸಿದ್ಧರು ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದಾರೆ. ಲಭ್ಯ ಶಾಸನಗಳ ಆಧಾರದಿಂದ ವಿದ್ವಾಂಸರು ಶ್ರೀ ರೇವಣಸಿದ್ಧೇಶ್ವರರ ಕಾಲವನ್ನು ಕ್ರಿ.ಶ. ೧೧೧೦ ರಿಂದ ಕ್ರಿ.ಶ. ೧೨೧೭ ಎಂದು ಗುರುತಿಸಿದ್ದಾರೆ. ರೇವಣಸಿದ್ಧರ ಜೀವನದ ಕಾಲಾವಧಿಯನ್ನು ತಿಳಿಸುವ ಶಾಸನಗಳು ಹೀಗಿವೆ.

೧. *ಕಕ್ಕೇರಿ ಕ್ರಿ.ಶ. ೧೧೨೭ ರೇವಣಸಿದ್ಧ ದೇವರ ಶಿಷ್ಯ ಬ್ರಹ್ಮರಾಶಿ ಪಂಡಿತನ ಉಲ್ಲೇಖ*
೨. *ಸಿರವಾಳ ಕ್ರಿ.ಶ. ೧೧೭೦ ಶಾಂತಿಮಯ್ಯಗಳ ಪುತ್ರ ಸಿದ್ಧರೇವಣನೆಂಬ ಉಲ್ಲೇಖ*
೩. *ಹೋತಗಲ್ಲ ಕ್ರಿ.ಶ. ೧೧೭೫ ಶಾಂತಿಮಯ ಮತ್ತು ಸಿದ್ಧರೇವಣಯ್ಯಗಳ ಉಲ್ಲೇಖ*
೪ *ಸಿರವಾಳ ಕ್ರಿ.ಶ. ೧೧೭೮ ಶಾಂತೀಶ್ವರ ದೇವಸ್ಥಾನಕ್ಕಾಗಿ ಪುತ್ರ ರೇವಣಯ್ಯನಿಗಾಗಿ ದಾನ*
೫. *ಹೋತಗಲ್ಲ ಕ್ರಿ.ಶ. ೧೨೦೮ ರೇವಣೇಶ್ವರ ಪೂಜೆಗಾಗಿ ಆಚಾರ್ಯ ನಾಗರಾಶಿಗೆ ದಾನ*

ಶ್ರೀ ರೇವಣಸಿದ್ಧೇಶ್ವರರು ತಮ್ಮ ಜೀವಿತದ ಕೊನೆಯ ಕಾಲದಲ್ಲಿ ಮಧ್ಯ ಮತ್ತು ದಕ್ಷಿಣ ಕರ್ನಾಟಕದ ಯಾತ್ರೆಯನ್ನು ಕೈಗೊಂಡಿದ್ದುದನ್ನು 'ಕುರುಬರ ಚರಿತ್ರೆ' ಕೃತಿಯನ್ನು ಸಂಪಾದಿಸಿರುವ ಪ್ರೊ. ಸುಧಾಕರ ಅವರು ದಾಖಲಿಸಿದ್ದಾರೆ. ಅಂದಿನಿಂದ ಈ ಆಚರಣೆಯನ್ನು ಹುಟ್ಟು ಹಾಕಿರಬಹುದೆಂದು ಊಹಿಸಿದರೆ ಇಂದಿಗೆ ಈ ಆಚರಣೆ ಆರಂಭವಾಗಿ ಸುಮಾರು ಎಂಟು ನೂರು ವರ್ಷಗಳಾದವೆಂದು ಹೇಳಬಹುದು.

ಬೀರಪ್ಪನಿಗೂ ಮತ್ತು ರೇವಣಸಿದ್ಧೇಶ್ವರರಿಗೂ ಧಾರ್ಮಿಕ ನಂಟಿರುವುದು ಕಂಡುಬರುತ್ತದೆ. ಹಾಲುಮತ ಕುರುಬ ಜನಾಂಗದ ಪ್ರಾಚೀನ ಕುಲದೈವ ಬೀರಪ್ಪ, ನಾಥ (ಭಂಡಾರ) ಸಂಸ್ಕೃತಿಗೆ ಸೇರಿದ ದೇವರು. ರೇವಣಸಿದ್ಧರ ಧಾರ್ಮಿಕ ಬದುಕಿನ ಮೂರು ಮಜಲು (ಪಲ್ಲಟ)ಗಳನ್ನು ವಿದ್ವಾಂಸರು ಗುರುತಿಸಿದ್ದಾರೆ. ಮೊದಲು ನವನಾಥರ ಸಂಪರ್ಕದಿಂದಾಗಿ ನಾಥಸಿದ್ಧರಾಗಿದ್ದವರು ತಮ್ಮ ಕುಲಾಚಾರವಾದ ಶಿವಾಚಾರವನ್ನು ಮರೆಯದೆ ಕೊಲ್ಲಿಪಾಕಿಯ ಸೋಮೇಶ್ವರ ದೇವಾಲಯದಲ್ಲಿ ವಿಧ್ಯುಕ್ತವಾಗಿ ಶಿವಸಿದ್ಧರಾದದ್ದು. ಆಮೇಲೆ ನಿರ್ಲಜ್ಜಶಾಂತಯ್ಯನವರಿಂದ ಅನುಗ್ರಹ ದೀಕ್ಷೆಯನ್ನು ಹೊಂದಿ ವೀರಶೈವರಾದದ್ದು. ಅವರ ಬದುಕಿನ ಮೂರು ಮಜಲುಗಳು. ಇವರು ವೀರಶೈವ ಪಂಥಾನುಯಾಯಿಯಾಗಿ ದಕ್ಷಿಣ ಕರ್ನಾಟಕದ ಯಾತ್ರೆಯನ್ನು ಶಿಷ್ಯರೊಂದಿಗೆ ಕೈಗೊಂಡಿರುವುದು ಹಲವಾರು ಸ್ಥಳೀಯ ಸಾಕ್ಷಿಗಳಿಂದ ತಿಳಿದುಬರುತ್ತದೆ. ದಕ್ಷಿಣ ಕರ್ನಾಟಕದಾದ್ಯಂತ ಇರುವ ಅವರ ದೇವಸ್ಥಾನಗಳು, ಬೆಟ್ಟದ ಹೆಸರುಗಳು, ಅವರ ಹೆಸರಿನ ಮಠಗಳು ಇದಕ್ಕೆ ಸಾಕ್ಷಿಯಾಗಿವೆ (ಸುಧಾಕರ *ಸಂ) (ಮೂಲ : ವಿ.ಆರ್. ಹನುಮಂತಯ್ಯ), ಕುರುಬರ ಚರಿತ್ರೆ, ೧೯೯೬, ಪ್ರತಿಭಾ ಪ್ರಕಾಶನ, ಮೈಸೂರು). ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಎಲ್ಲೆಲ್ಲಿ (ಕರ್ನಾಟಕ ಮತ್ತು

* ಮನೆ ನಂ. ಪಿ-೪/೨೦, ಕೆ.ಪಿ.ಸಿ. ಕಾಲೋನಿ, ಕದ್ರಾ-೫೮೧೩೯೬, ಕಾರವಾರ, ಉತ್ತರ ಕನ್ನಡ ಜಿಲ್ಲೆ.

ಹೊರಗೆ) ಶ್ರೀ ರೇವಣಸಿದ್ಧ ಪರಂಪರೆಯ ಮಠಗಳಿವೆಯೋ ಅಲ್ಲೆಲ್ಲ ವೀರಭದ್ರನ ಮೂರ್ತಿಗಳಿವೆ. ಶಿವಗಂಗೆಯ ಬೆಟ್ಟದ ಮೇಲೆ ಇರುವಷ್ಟು ಶಿವಲಿಂಗಗಳು, ಮಠಗಳು, ವೀರಭದ್ರ ಮೂರ್ತಿಗಳು ಬೇರೆ ಕಡೆ ಕಾಣಲು ಸಾಧ್ಯವಿಲ್ಲ. ಶಿವಗಂಗೆಯ ಕುಂಬಿಯ ಮೇಲೆ, ಮೇಗಳಗವಿಮಠದಲ್ಲಿ, ಹೊನ್ನಮ್ಮನ ಗವಿಮಠಧಲ್ಲಿ ವೀರಭದ್ರನ ಮೂರ್ತಿಯನ್ನು ನಾವು ಕಾಣುತ್ತೇವೆ. ಇಲ್ಲಿನ 'ರಾಚೋಟಿ ವೀರಭದ್ರ' ಎಲ್ಲರ ಗಮನ ಸೆಳೆಯುತ್ತದೆ. ಇನ್ನು ಬೀರಪ್ಪ, ವೀರಭದ್ರ ಮತ್ತು ರೇವಣಸಿದ್ಧೇಶ್ವರ ನಡುವೆ ಒಂದು ಧಾರ್ಮಿಕ ಸಂಬಂಧ ವಿರುವುದು ವಿದಿತವಿದೆ. ಮಧ್ಯ ಕರ್ನಾಟಕದ ರೇವಣಸಿದ್ಧೇಶ್ವರ ಸಂಸ್ಥಾನಕ್ಕೆ ಸೇರಿದ ಕುರುಬರ ಒಡೆಯರು ಅಥವಾ ಸಿದ್ಧರಾಮೇಶ್ವರ ಮಠದ ಒಡೆಯರು ದಳವಾಯಿಗೆ ಧಾರ್ಮಿಕ ದೀಕ್ಷೆ ಕೊಡುವುದನ್ನು ಕಾಣುತ್ತೇವೆ. ಆದ್ದರಿಂದ ದಳವಾಯಿ ಆಚರಣೆಯು ರೇವಣಸಿದ್ಧೇಶ್ವರವರ ಕಾಲದಲ್ಲಿ ಅಥವಾ ಅವರ ನಂತರದ ಕಾಲಘಟ್ಟದಲ್ಲಿ ಅವರ ಶಿಷ್ಯರಲ್ಲಿ ಒಬ್ಬರು ಕುರುಬರ ಗುರು ವರ್ಗದ ಒಡೆಯರ ಮೂಲಕ ಆರಂಭಿಸಿದ ಆಚರಣೆ ಎಂದು ತೀರ್ಮಾನಿಸಬಹುದು.

II) ದಳವಾಯಿ ಧರಿಸುವ ಧಾರ್ಮಿಕ ಪವಿತ್ರ ಪರಿಕರಗಳನ್ನು ಗಮನಿಸಿದರೆ ಮೂಲತಃ ನಾಥ ಸಂಪ್ರದಾಯ (ಭಂಡಾರ)ಕ್ಕೆ ಸೇರಿದ್ದ ಹಾಲುಮತ ಕುರುಬ ಜನಾಂಗ ೧೨ನೇ ಶತಮಾನದ ಶಿವಶರಣರ ಶೈವ (ವಿಭೂತಿ) ಸಂಪ್ರದಾಯದಿಂದ ಪ್ರಭಾವಿತರಾದ ಕಾಲಘಟ್ಟದಲ್ಲಿ ಇದು ಆರಂಭಗೊಂಡಿದೆಯೆಂದು ಊಹಿಸಬಹುದು.

* *ದಳವಾಯಿಯು ಭಂಡಾರದ ಜೊತೆ ವಿಭೂತಿಯನ್ನು ಧರಿಸುವುದು ಕಂಡುಬರುತ್ತದೆ. ಇದರ ಜೊತೆಗೆ ರುದ್ರಾಕ್ಷಿ ಸರ, ತುಳಸಿ ಎಲೆಯಿಂದ ಮಾಡಿದ ಮಾಲೆ ಧರಿಸುತ್ತಾನೆ.*
* *ದಳವಾಯಿ ಲಿಂಗಧಾರಣೆ ಮಾಡುವುದಿಲ್ಲ. ಆದರೆ ಇವನಿಗೆ ದೀಕ್ಷೆ ಕೊಡುವ ಕುರುಬರ ಒಡೆಯರು ಲಿಂಗ ಧರಿಸಿರುವುದನ್ನು ಕಾಣುತ್ತೇವೆ.*

ದಳವಾಯಿಯು ಭಂಡಾರ ಮತ್ತು ವಿಭೂತಿ ಎರಡನ್ನೂ ಧರಿಸುವುದರಿಂದ ಇವನನ್ನು ಭಂಡಾರ ಮತ್ತು ವಿಭೂತಿ ಸಂಸ್ಕೃತಿಗಳ ಸಂಕರಶೀಲ ದೈವವೆಂದು ಗುರುತಿಸಬಹುದು. ಒಟ್ಟಾರೆ ನಾಥ ಪಂಥದ ಸ್ವತಂತ್ರ ವೀರದೇವತೆಯೊಬ್ಬನನ್ನು ಶೈವಾಚರಣೆಯತ್ತ ಕರೆದೊಯ್ಯುತ್ತಿರುವ ಸ್ಪಷ್ಟ ಸೂಚನೆಗಳು ಈ ಆಚರಣೆಯಲ್ಲಿ ಕಂಡುಬರುತ್ತವೆ.

**ದಳವಾಯಿ ಮೈದುಂಬುವುದು :** ದಳವಾಯಿ ಆಚರಣೆಯ ಸಾಫಲ್ಯವು ದಳವಾಯಿ ಮೈದುಂಬುವಿಕೆಯಲ್ಲಿದೆ. ಕೌಟುಂಬಿಕ ಮತ್ತು ಸಾಮಾಜಿಕ ಬದುಕಿನಲ್ಲಿ ಕಠೋರ ನಿಯಮಗಳನ್ನು ಪಾಲಿಸುತ್ತ ಬೀರಪ್ಪನ ಚಲಿಸುವ ರೂಪವಾಗಿರುವ ದಳವಾಯಪ್ಪ ಸಮಾಜದ ಧಾರ್ಮಿಕ ಆಚರಣೆಗಳ ಸಂದರ್ಭಗಳಲ್ಲಿ 'ಮೈದುಂಬು'ತ್ತಾನೆ. ಇದೊಂದು ಧಾರ್ಮಿಕ ಆಚರಣೆ. ಈ ಆಚರಣೆ 'ದೈವ' ಮತ್ತು 'ಭಕ್ತರ' ನಡುವಿನ ಅಗಾಧ ನಂಬಿಕೆಯ ಮೇಲೆ ನಿಂತಿದೆ. ದಳವಾಯಿ ಮೈದುಂಬುವುದಕ್ಕೆ 'ಮೈದುಂಬುವುದು' ಎಂದು, ಮೈದುಂಬಿದ ನಂತರ ಇಬ್ಬರು ಸಾವಿರದೋರ ಹೆಗಲೇರಿ ಕಾಲುಗಳನ್ನು ಅವರು ಹಿಡಿದ ಕಟ್ಟಲಗಿನ ಮೇಲೆ ಇಟ್ಟು ನಿಲ್ಲುವುದಕ್ಕೆ 'ಕಟ್ಟಲ ಗೇರುವುದು' ಎಂದೂ ಕರೆಯಲಾಗುತ್ತದೆ. ಈ ದೈವಿಕ ಆಚರಣೆ ಅಥವಾ ನಡೆಯನ್ನು ವರ್ಷದ ಕೆಲವು ವಿಶಿಷ್ಟ ಸಂದರ್ಭಗಳಲ್ಲಿ ನಡೆಸಿಕೊಡ ಲಾಗುತ್ತದೆ. ಸಾಮಾನ್ಯವಾಗಿ ದಸರಾದಲ್ಲಿ ಬೀರಪ್ಪ ಮತ್ತು ಇತರ ದೇವರುಗಳು ಅಂಬೊಡೆ (ಬನ್ನಿ ಮುಡಿಯುವಾಗ) ಮಾಗುವಾಗ, ಕಾರ್ತಿಕ ಮಾಸದಲ್ಲಿ ನಡೆಯುವ ಬೀರಪ್ಪನ ಜಾತ್ರೆ (ವರ್ಷದ ಜಾತ್ರೆ) ಯಲ್ಲಿ ಮತ್ತು ಹನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಬೀರಪ್ಪನ ತೋಪುಜಾತ್ರೆಯ ಸಂದರ್ಭಗಳಲ್ಲಿ ಮಾತ್ರ ದಳವಾಯಿಯನ್ನು ಹೊರಡಿಸಲಾಗುತ್ತದೆ. ಒಟ್ಟಾರೆ ಇದು ಕಟ್ಟಲಗಿನ ಮೇಲೆ ನಿಂತ ಭಂಗಿ! ಕುದುರೆ ಏರಿದ ವೀರ ತನ್ನ ಎರಡೂ ಕಾಲುಗಳನ್ನು ಆಚೀಚೆ ಇಳಿಬಿಟ್ಟ ರಿಕಾಪು (ಅಂಕವಣಿ>ಪುಟ್‌ರೆಸ್ಪ)ಗಳಲ್ಲಿ ಸೇರಿಸಿ ಸೆಟೆದು ನಿಂತಂತೆ ಈ ಭಂಗಿ ಕಾಣುತ್ತದೆ.

೧. *ಪ್ರತಿನಿತ್ಯ ನೇಮ-ನಿಷ್ಠೆಯಿಂದಿರುವ ದಳವಾಯಿ 'ಅಲಗೇರುವ' ಹಿಂದಿನ ದಿನ ನಿರಾಹಾರಿಯಾಗಿರು ತ್ತಾನೆ. ಸ್ವಲ್ಪ ಒಣದ್ರಾಕ್ಷಿ, ಒಂದು ಪುಟ್ಟ ಬಾಳೆಹಣ್ಣು ಮಾತ್ರ ಸೇವಿಸುತ್ತಾನೆ. ನೀರನ್ನು ಕುಡಿಯುವುದಿಲ್ಲ.*

೨. *ಮರುದಿನ ದೇವಸ್ಥಾನದಲ್ಲಿ ಸಾವಿರದೋರು ದಳವಾಯಿಗೆ ಸ್ನಾನ ಮಾಡಿಸಿ, ದಳವಾಯಿಯ ಬಟ್ಟೆ ಬರೆ, ವಸ್ತ್ರಗಳನ್ನು ತೊಡಿಸುತ್ತಾರೆ. ಈ ಕಾರ್ಯವನ್ನು ಕೇವಲ ಗಂಡಸರು ಮಾತ್ರ ಮಾಡಿಸುವುದು ಗಮನಾರ್ಹ.*

೩. *ನಂತರ ದಳವಾಯಪ್ಪನ ಪರಿಕರಗಳನ್ನು ತೊಡಿಸುತ್ತಾರೆ. ಅವುಗಳೆಂದರೆ :*

* *ತಲೆಗೆ ಅಡಿಕೆ ಹೊಂಬಾಳೆ ಇಟ್ಟು, ಮೇಲೆ ಪೇಟ ಸುತ್ತುತ್ತಾರೆ.*
* *ಸೊಂಟಕ್ಕೆ ಕೆಂಪು ರೇಷ್ಮೆ ಮಡಿಯನ್ನು ಕಟ್ಟುತ್ತಾರೆ.*
* *ಬಲಗಾಲಿಗೆ ಬೆಳ್ಳಿ ಚೈನಿನ ಗಂಟೆ (ಇದಕ್ಕೆ 'ಗಗ್ಗರ' ಎಂದು ಹೆಸರು) ಕಟ್ಟುತ್ತಾರೆ.*
* *ಕೊರಳಲ್ಲಿ ವಿವಿಧ ಹೂವುಗಳಿಂದ ಮಾಡಿದ ಹೂವಿನ ಹಾರ, ರುದ್ರಾಕ್ಷಿ ಸರ, ತುಳಸಿ ಎಲೆಯ ಮಾಲೆ ಹಾಕುತ್ತಾರೆ.*
* *ಬಲಗೈಯಲ್ಲಿ ಲಿಂಬೆಹಣ್ಣನ್ನು ಕೊಡುತ್ತಾರೆ.*
* *ಕೈಗೆ 'ದುಂಡು' ಕಟ್ಟುತ್ತಾರೆ.*

*ಈ ಹಂತದಲ್ಲಿ ಬೀರೇದೇವರ ಸ್ಥಾವರಮೂರ್ತಿಯಾಗುವ ದಳವಾಯಪ್ಪ ತನ್ನ ಪಂಚೇಂದ್ರಿಯಗಳನ್ನು*

ಸ್ಥಗಿತಗೊಳಿಸಿ ಕಣ್ಣುಮುಚ್ಚಿಕೊಂಡು ಅಂತರ್ಮುಖಿಯಾಗುತ್ತಾನೆ, ದೈವದ ಜಡರೂಪ ಪಡೆಯುತ್ತಾನೆ.

೪. ದೇವರ ಮೂರ್ತಿಯ ಕೊರಳಲ್ಲಿ ಇರುವ ದಳವಾಯಪ್ಪನ ತಾಳಿಯನ್ನು ತಂದು ದಳವಾಯಿಯ ಕೊರಳಿಗೆ ಹಾಕುತ್ತಾರೆ.

೫. ದಳವಾಯಿ ತಾಳಿಯನ್ನು ಕೊರಳಿಗೆ ಹಾಕುತ್ತಿದ್ದಂತೆ, ಕೋಲುಕಾರ ಪಂಜಿನ ನಮಸ್ಕಾರ ಮಾಡುತ್ತಾನೆ. ಈರಗಾರರು ಸುತ್ತೇಳು ದೇವರನ್ನು ನೆನೆದು, ನಾಲ್ಕೂ ದಿಕ್ಕುಗಳಿಗೆ ನಮಿಸಿ ಅಲಗು ಹಾಕುತ್ತ ಈರಗಾರಿಕೆ ಮಾಡುತ್ತಾರೆ. ಆಗ ವಾದ್ಯಗಳು ಮೊಳಗುತ್ತವೆ. ಡೊಳ್ಳುಗಳನ್ನು ಬಾರಿಸುತ್ತಾರೆ. ದಳವಾಯಿಯ ಮೈಮೇಲೆ ಬೀರದೇವರ ಆವಾಹನೆಯಾಗುತ್ತದೆ.

ದಳವಾಯಪ್ಪನನ್ನು ಮೂರು ಜನರು ಹೊರುತ್ತಾರೆ. ಅದರಲ್ಲಿ ಮುಂದೆ ಇಬ್ಬರು ನಿಂತು ತಮ್ಮ ಹೆಗಲಮೇಲೆ ಕೂಡ್ರಿಸಿಕೊಂಡು, ದಳವಾಯಿಯ ಕಾಲನ್ನು ತಾವು (ಎರಡೂ ಬದಿಗೆ ಇರುವ ಹಿಡಿಕೆಗಳನ್ನು) ಹಿಡಿದುಕೊಂಡ ಕಟ್ಟಲಗಿನ ಮೇಲೆ ಇರಿಸುತ್ತಾರೆ. ಹಿಂದೆ ಒಬ್ಬ ಸಾವಿರದೋನು ದಳವಾಯಪ್ಪನ ಸೊಂಟವನ್ನು ಹಿಡಿದುಕೊಂಡಿರುತ್ತಾನೆ. ಇದಕ್ಕೆ ದಳವಾಯಿ 'ಅಲಗೇರುವುದು' ಎಂದು ಕರೆಯುತ್ತಾರೆ. ಒಬ್ಬ ಸಾವಿರದವನು ಮೈದುಂಬಿದ ದಳವಾಯಿಯ ತಲೆಯ ಮೇಲೆ ಕೆಂಪು ಬಣ್ಣದ ವೃತ್ತಾಕಾರದ ಛತ್ರಿ ಹಿಡಿದು, ಅವನು ಚಲಿಸಿದತ್ತ ಚಲಿಸಿ, ಅದನ್ನು ವೇಗವಾಗಿ ತಿರುಗಿಸುತ್ತಿರುತ್ತಾನೆ. ಇನ್ನೊಬ್ಬನು ಬೀಸಣಿಕೆಯಿಂದ ಗಾಳಿ ಬೀಸಿ ಸೇವೆ ಮಾಡುತ್ತಾನೆ. ಮೈದುಂಬಿದ ನಂತರ ಅಲಗೇರಿದ ದಳವಾಯಿ ಭಕ್ತರ ಹೇಳಿಕೆಗಳಿಗೆ ಕುರುವು ಕೊಡುತ್ತಾನೆ. ಈ ಒಟ್ಟು ಪ್ರಕ್ರಿಯೆಗೆ 'ದಳವಾಯಿ ಹೊರಡಿಸುವುದು' ಎಂದು ಕರೆಯಲಾಗುತ್ತದೆ.

**ದಳವಾಯಿ ಕುರುವುದೋರುವುದು :** ಮೈದುಂಬಿದ ನಂತರ ಕಟ್ಟಲಗನ್ನೇರಿದ ದಳವಾಯಿ ಕುರುವುದೋರಲು ಸಿದ್ಧನಾದಂತೆ. ಮುಂದಿನ ಆಚರಣೆ ದೇವರು ಮತ್ತು ಭಕ್ತರ ನಡುವಿನ ಕಷ್ಟ, ನೋವು, ಸಮಸ್ಯೆಗಳಿಗೆ ಸ್ಪಂದನ ಕಾರ್ಯಕ್ರಮವಾಗುತ್ತದೆ. ಆ ಗುಡಕಟ್ಟಿನ ಭಕ್ತರು ದಳವಾಯಪ್ಪನಿಗೆ ಅಡ್ಡಬಿದ್ದು ತಮ್ಮ ಸಮಸ್ಯೆಗಳನ್ನು ಅವನಲ್ಲಿ ಇಟ್ಟು ಕುರುವು ಕೇಳುತ್ತಾರೆ. ಸ್ಥಾವರ ಮೂರ್ತಿಯಾದ ದಳವಾಯಿ ಮಾತನಾಡುವುದಿಲ್ಲ. ಅವರ ಸಮಸ್ಯೆಗಳಿಗೆ ತನ್ನ ಹೊತ್ತವರನ್ನು ಸ್ತುತಿಸಿ ಭಕ್ತರು ಮನದಲ್ಲಿ ನೆನೆದುಕೊಂಡಿದ್ದ ವಸ್ತು, ಪರಿಕರ, ಸೂಚನೆಯನ್ನು ಮೌನವಾಗಿ ತೋರಿ ಅವರ ಕಾರ್ಯ ಯಶಸ್ವಿಯಾಗುವುದು ಅಥವಾ ಅಯಶಸ್ವಿಯಾಗುವುದು ಎಂಬುದರ ಕುರಿತು ಕುರುವು ತೋರುತ್ತಾನೆ. ಈ ಕುರುವು ದೈವದ ತೋರಿಕೆಯಾಗಿದೆ. ಇದನ್ನು ನಂಬಿ ಭಕ್ತರು ಶುಭ ಕಾರ್ಯಗಳ ಆರಂಭ ಮಾಡುತ್ತಾರೆ. ಇಲ್ಲಿ ಮೌನ ಹೊತ್ತು ತೋರಿದ ದಳವಾಯಿ ಕುರುವು ಭಕ್ತರ ಪಾಲಿಗೆ ಸಂಕಷ್ಟಗಳನ್ನು ಪರಿಹರಿಸುವ ಮಾತಾ (ಭಾಷೆಯಾಗು)ಗುತ್ತದೆ.

**ದಳವಾಯಿ ಮೈಯಿಳಿಸುವುದು :** ಕುರುವುದೋರುವ ಕಾರ್ಯಕ್ರಮದ ನಂತರ ದೇವತಾ ಕಾರ್ಯಗಳು ನಡೆಯುತ್ತವೆ. ಅಂದಿನ ಕಾರ್ಯಕ್ರಮಗಳ ಮುಕ್ತಾಯಕ್ಕೆ ದಳವಾಯಪ್ಪನ ಮೈಮೇಲೆ ಆವಾಹನಗೊಂಡ ದೈವವನ್ನು ಇಳಿಸಬೇಕಾಗುತ್ತದೆ. ಆಗ ಸಾವಿರದೋರು ದಳವಾಯಪ್ಪನ ಹತ್ತಿರ ಮುಳ್ಳು ಪಲ್ಲಕ್ಕಿಯನ್ನು ತರುತ್ತಾರೆ. ದಳವಾಯಪ್ಪ ಮುಳ್ಳುಪಲ್ಲಕ್ಕಿಯನ್ನು ಏರಲು ಆ ಕಡೆ ತನ್ನ ಹೊತ್ತವರನ್ನು ಎಳೆದೊಯ್ಯುತ್ತಾನೆ. ಆಗ ನಾಲ್ವರು ಮುಳ್ಳುಪಲ್ಲಕ್ಕಿಯನ್ನು ಆಚೆ ಸರಿಸಿ, ತಕ್ಷಣ ತಮ್ಮ ತೋಳುಗಳಲ್ಲಿ ಅವನನ್ನು ಎತ್ತಿಕೊಂಡು ಕರಿ ಕಂಬಳಿಯ ಗದ್ದುಗೆಯ ಮೇಲೆ ಇಳುವಿ ಮಲಗಿಸಿ, ದಳವಾಯಿ ತಾಳಿಯನ್ನು ತೆಗೆದು ದೇವರ ಕೊರಳಿಗೆ ಹಾಕುತ್ತಾರೆ. ದಳವಾಯಪ್ಪನಿಗೆ ಎಳೆನೀರು ಕುಡಿಸಿ ಕೈಕಾಲು ನೀವುತ್ತಾರೆ. ಬೀಸಣಿಕೆಯಿಂದ ಗಾಳಿ ಹಾಕುತ್ತಾರೆ. ಆಗ ದಳವಾಯಪ್ಪ ಜಡ ರೂಪದಿಂದ ಮನುಷ್ಯರೂಪದ ಚಲನೆಗೆ ಬರುತ್ತಾನೆ. ಇದಕ್ಕೆ ದಳವಾಯಿ ಮೈಯಿಳಿಸುವುದು ಎನ್ನುತ್ತಾರೆ.

**ದಳವಾಯಿ ಕುಣಿತ :** ದಳವಾಯಿ ಕುಣಿತವನ್ನು ಒಂದು ಕಲಾ ಪ್ರಕಾರವಾಗಿ ಪರಿಗಣಿಸಬೇಕೇ ಎಂಬ ವಿಷಯ ಕುರಿತಂತೆ ಭಿನ್ನಾಭಿಪ್ರಾಯಗಳಿವೆ. 'ದಳವಾಯಿ ಕುಣಿತ' ಕೇವಲ ಒಂದು ಕಲೆ ಆಗಿರದೆ ಬೀರೆದೇವರು 'ದಳವಾಯಿ'ಯ ಮೈದುಂಬಿದಾಗ ನಡೆಯುವ ಒಂದು ದೈವೀ ಕುಣಿತವಾಗಿದೆ. ಆದ್ದರಿಂದ ಇದನ್ನು 'ಭಕ್ತಿ ಕುಣಿತ' ಎಂದೂ ಕರೆಯಬಹುದು' ಎನ್ನುವ ಅಭಿಪ್ರಾಯವೂ ಕೇಳಿಬರುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಜೀವಂತ ಮನುಷ್ಯನ ಮೈಯಲ್ಲಿ ಬೀರೆದೇವರ ಸ್ಥಾವರ ಮೂತಿಯ ದೈವದ ಆವಾಹನೆಯಾದಾಗ ಜೀವಂತ ಮನುಷ್ಯನಾದ ದಳವಾಯಿ ಜಡವಾಗುತ್ತಾನೆ. ಅವನನ್ನು ಹೊತ್ತವರು ಅವನ ದೇಹ ಚಲನೆಯ ಆದೇಶದಂತೆ ಹೊತ್ತು ಕುಣಿಯುತ್ತಾರೆ. ಇದು ಒಪ್ಪುವ ಮಾತಾದರೂ ಕರ್ನಾಟಕದ ಬಹುತೇಕ ಜನಪದ ಕಲೆಗಳು ದೈವೀ ಸನ್ನಿಧಿಯಲ್ಲಿ (ದೇವರ ಆವಾಹನೆಯಾದಾಗ) ರೂಪುಗೊಳ್ಳುವ ಕಲೆಗಳಾದ್ದರಿಂದ ದಳವಾಯಿ ಕುಣಿತವನ್ನೂ ಸಹ ಒಂದು ಕಲಾ ಪ್ರಕಾರವಾಗಿ ಒಪ್ಪಿಕೊಳ್ಳಬಹುದಾಗಿದೆ.

ದಳವಾಯಿ ಕುಣಿತವು ಕಾರ್ತಿಕ ಮಾಸದಲ್ಲಿ ನಡೆಯುವ ಬೀರಪ್ಪನ ಹಬ್ಬದಂದು ಅಥವಾ ವಿಜಯದಶಮಿಯ ದಿನ ಬೀರಪ್ಪ ಬನ್ನಿ ಮುಡಿ (ಅಂಬೊಡೆಯುವ) ಯುವಂತಹ

ವಿಶಿಷ್ಟ ಸಂದರ್ಭಗಳಲ್ಲಿ ಜರುಗುವ ಆಚರಣೆಯಾಗಿದೆ. ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲೂಕು, ಅಸಂಧಿ ಶ್ರೀ ರೇವಣಸಿದ್ಧೇಶ್ವರ ಸ್ವಾಮಿಯು ಪಟ್ಟದ ಪೂಜೆಯ ಹದಿಮೂರನೆಯ ದಿನ ಅಂಬೊಡೆಯುವ ಆಚರಣೆಯಲ್ಲಿ ಭಾಗವಹಿಸುತ್ತಾನೆ. ಹೀಗೆ ಹದಿಮೂರನೆಯ ದಿನ ಅಂಬೊಡೆಯುವ ಇನ್ನೊಂದು ಹಾಲುಮತ ಕುರುಬರ ದೈವವೆಂದರೆ ತರೀಕೆರೆ ತಾಲೂಕು ಸೊಲ್ಲಾಪುರದ ಸಿದ್ಧರಾಮೇಶ್ವರ ದೈವವೆಂದು ಭಕ್ತರು ಹೇಳುತ್ತಾರೆ. ಉಳಿದಂತೆ ಇತರ ದೈವಗಳು ಸಾಮಾನ್ಯವಾಗಿ ಒಂಬತ್ತನೇ ದಿನಕ್ಕೆ ಅಂಬೊಡೆಯುವ ಆಚರಣೆಯು ಕಂಡುಬರುತ್ತದೆ. 'ಆಸಂಧಿ-ಹಡಗಲು' ಗುಡಕಟ್ಟಿನ ಶ್ರೀ ಬೀರಲಿಂಗೇಶ್ವರ ಸ್ವಾಮಿಯ ಪಟ್ಟದ ಪೂಜೆಯಾಗಿ ಹದಿಮೂರನೆಯ ದಿನದಂದು ಶ್ರೀ ರೇವಣಸಿದ್ಧೇಶ್ವರ ಮತ್ತು ಇತರ ದೈವಗಳೊಂದಿಗೆ 'ಬನ್ನಿಮುಡಿ' ಯುವ ಸಂದರ್ಭದಲ್ಲಿ ಪಟ್ಟದ ದಳವಾಯಿಗಳ ಕುಣಿತವನ್ನು ಅಧ್ಯಯನದಲ್ಲಿ ಸ್ವಂತ ಗಮನಿಸಿ ಸವಿವರವಾಗಿ ನಿರೂಪಿಸಲಾಗಿದೆ.

ಅಂಬೊಡೆಯುವ ಆಚರಣೆಗೆ ಪಟ್ಟಕ್ಕೆ ಕುಳಿತ ಬೀರಪ್ಪನನ್ನು ಅವನ ದೇವಸ್ಥಾನದಿಂದ ಅಂಬೊಡೆಯುವ (ಇದಕ್ಕೆ ದಸರಾ ಬಯಲು ಎಂದು ಹೆಸರು) ಬಯಲಿಗೆ ಮೆರವಣಿಗೆಯಲ್ಲಿ ಕರೆತರಲಾಗುತ್ತದೆ ಮತ್ತು ಅಂಬೊಡೆಯುವ ಕಾರ್ಯಕ್ರಮದ ನಂತರ ಮರಳಿ ಮೂಲಸ್ಥಾನಕ್ಕೆ ಕರೆತರುತ್ತಾರೆ. ಈ ಎರಡೂ ಸಂದರ್ಭದಲ್ಲಿ ಮೆರವಣಿಗೆಯ ನೇತೃತ್ವವನ್ನು ದಳವಾಯಿ ವಹಿಸಿಕೊಂಡು ಮೆರವಣಿಗೆಯ ಮುಂದೆ ಮುಂದೆ ಕುಣಿಯುತ್ತ ಹೋಗುತ್ತಾನೆ.

### ಮೆರವಣಿಗೆ ಮತ್ತು ದೈವೀ ಕುಣಿತ

ಪ್ರಬಂಧದಲ್ಲಿ ಈ ಮೊದಲೆ ಚರ್ಚಿಸಿದಂತೆ ಪಂಚೇಂದ್ರಿಯಗಳನ್ನು ಸ್ತಬ್ದಗೊಳಿಸಿ, ಯೋಗ ಸಮಾಧಿ ಸ್ಥಿತಿ ತಲುಪಿದ ದಳವಾಯಿಯನ್ನು ಹೊತ್ತ ಸಾವಿರದೋರು ಹಾಕುವ ಹೆಜ್ಜೆಗಳು 'ದಳವಾಯಿ ಕುಣಿತ' ಎನ್ನಿಸಿಕೊಳ್ಳುತ್ತದೆ. ಮೆರವಣಿಗೆಯ ವಿನ್ಯಾಸವೂ ಸಹ ಈ ಆಚರಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಮೆರವಣಿಗೆಯ ಮುಂದೆ ದಳವಾಯಪ್ಪ ಮತ್ತು ಅವನನ್ನು ಸುತ್ತುವರೆದ ಈರಗಾರರು (ಇಲ್ಲಿ ಮೂವರು ಈರಗಾರರು ಇದ್ದುದು ಗಮನಾರ್ಹ) ಇರುತ್ತಾರೆ. ಅವರ ಜೊತೆಜೊತೆಗೆ ವಾದ್ಯಗಾರರು ಮತ್ತು ಡೊಳ್ಳುಗಳು ಇರುತ್ತವೆ. ಈ ವಾದ್ಯಗಳು ಒಂದು ಕರಡೆ, ಎರಡು ಡೋಣು, ಇಬ್ಬರು ವಾಲಗದವರು, ಒಬ್ಬ ಪಂಜು ಹಿಡಿದು 'ಪಂಜು ನಮಸ್ಕಾರ' ಮಾಡುವ ಕೋಲುಕಾರ. ಒಂದು ಸಡ್ಡೆ ವಾಧ್ಯ ಇತ್ಯಾದಿಗಳನ್ನು ಒಳಗೊಂಡಿರುತ್ತದೆ.

ಇವರ ನಂತರ ಎರಡನೇ ಸಾಲಿನಲ್ಲಿ ರೇವಣ ಸಿದ್ದೇಶ್ವರರಿಗೆ ಬಿಟ್ಟ ದೇವರ ಬಸವ ಮೆರವಣಿಗೆಯಲ್ಲಿ ಹೆಜ್ಜೆ ಹಾಕುತ್ತದೆ. ಈ ಬಸವನ ಬೆನ್ನ ಮೇಲೆ ಒಬ್ಬ ಬಾಲಕ ಕೆಂಪು ಮಡಿಯುಟ್ಟು ಕುಳಿತುಕೊಳ್ಳುತ್ತಾನೆ. ಮೂರನೆಯ ಹಂತದಲ್ಲಿ ರೇವಣಸಿದ್ದೇಶ್ವರ ದೇವರು ಪಲ್ಲಕ್ಕಿಯಲ್ಲಿ ಮೆರವಣಿಗೆಯಲ್ಲಿ ಬರುತ್ತದೆ. ನಂತರ ಬೀರದೇವರ ಮುಳ್ಳಿನ ಗದ್ದುಗೆಯಿಂದ 'ಮುಳ್ಳುಪಲ್ಲಕ್ಕಿ' ಸಾಗುವುದನ್ನು ಗಮನಿಸಬಹುದು. ನಾಲ್ಕನೆಯ ಹಂತದಲ್ಲಿ ಬೀರೇದೇವರ (ಬೇಗೂರು ಬೀರಲಿಂಗೇಶ್ವರ) ಉತ್ಸವಮೂರ್ತಿಯನ್ನು ಹೊತ್ತ ಪಲ್ಲಕ್ಕಿ ಸಾಗುತ್ತದೆ. ಆಸಂದಿ-ಹಡಗಲು ಗುಡಕಟ್ಟಿನ ಶ್ರೀ ಬೀರಲಿಂಗೇಶ್ವರ ಸ್ವಾಮಿಯು ಪಂಚ ಪೀಠಗಳ ದೇವರು ಎಂಬ ಖ್ಯಾತಿಗೆ ಒಳಗಾಗಿದೆ. ದಳವಾಯಿ ಮೈದುಂಬುವುದೆಂದರೆ, ಪಟ್ಟದ ದಳವಾಯಿಯ ದೇಹದಲ್ಲಿ ಒಟ್ಟು ಐದು ದೈವಗಳು ಆವಾನಿಸುತ್ತವೆ ಎಂಬ ನಂಬಿಕೆ ಇಲ್ಲಿಯು ಭಕ್ತರದ್ದಾಗಿದೆ. ಅವುಗಳೆಂದರೆ ಬೀರಲಿಂಗೇಶ್ವರ, ಉತ್ತಪ್ಪ, ಬೇಗೂರಪ್ಪ, ಮುದಿಯಪ್ಪ ಮತ್ತು ಮಾದೇಳಪ್ಪ ಇವರಾಗಿದ್ದಾರೆ. ಈ ಐದೂ ದೇವರುಗಳು ಒಂದೇ ಪಲ್ಲಕ್ಕಿಯಲ್ಲಿ ಇರುವುದನ್ನು ಗಮನಿಸಬಹುದು. ಕುದುರೆಯ ಮೇಲೆ ಕುಳಿತಿರುವ ಈ ಐದೂ ಸಹ ಬೀರದೇವರುಗಳಾಗಿವೆ. ಮೆರವಣಿಗೆಯಲ್ಲಿ ಅಂತಿಮವಾಗಿ ಹನುಮಂತ ದೇವರು ಸಾಗುತ್ತದೆ.

ಮೊದಲು ಕೋಲುಕಾರನು ಸ್ವಾಮಿ (ದಳವಾಯಿ)ಗೆ ಪಂಜಿನ ನಮಸ್ಕಾರ ಮಾಡುತ್ತಾನೆ. ದಳವಾಯಿಯನ್ನು ಸುತ್ತುವರೆದ ಈರಗಾರರು ನಾಲ್ಕೂ ದಿಕ್ಕಿಗೆ ನಮಸ್ಕರಿಸಿ ಅಲಗು ಹಾಕಿ ಈರಗಾರಿಕೆ ಮಾಡುತ್ತಾರೆ. ನಂತರ ಪಟ್ಟದ ದಳವಾಯಿ ಎದುರಿಗೆ ನಿಂತು ಅಲಗು ಹಾಕಿ 'ಸುವ್ವೋ' ಎಂದು ಹೇಳುತ್ತಾರೆ (ಇದು ಸ್ವಾಮಿಗೆ ಭಕ್ತಿಯಿಂದ ಸ್ವಾಗತ ಕೋರಿ ಮುಂದುವರೆಯಲು ಬೇಡಿಕೊಂಡಂತೆ ಎಂಬ ಅಭಿಪ್ರಾಯ ಭಕ್ತರಲ್ಲಿದೆ). ಈರಗಾರರು 'ಸುವ್ವೋ' ಎಂದು ಹೇಳಿದಾಕ್ಷಣ ದಳವಾಯಿ ಕುಣಿತ ಆರಂಭವಾಗುತ್ತದೆ. ದಳವಾಯಿಯನ್ನು ಹೊತ್ತ ಮೂವರು ಮೊದಲು ಮುಂದಿಟ್ಟ ಬಲಗಾಲನ್ನು ಎತ್ತುತ್ತಾರೆ. ನಂತರ ಅದನ್ನು ನೆಲಕ್ಕೆ ಊರಿ ಹಿಂದಿನ ಎಡಗಾಲನ್ನು ಎತ್ತಿ ಮುಂದೆ ನೆಗೆದು ಚಿಮ್ಮುತ್ತಾರೆ. ಇದೇ ರೀತಿ ಚಿಮ್ಮುತ್ತ ಎರಡೂ ಕಾಲುಗಳನ್ನು ಕ್ರಮವಾಗಿ, ಶಿಸ್ತುಬದ್ಧವಾಗಿ ಎತ್ತಿ ಹಾಕುತ್ತ, ವೃತ್ತಾಕಾರವಾಗಿ ಚಲಿಸುತ್ತಾರೆ. ಈ ವೃತ್ತಾಕಾರದ ಚಲನೆ ವೃತ್ತವಾಗಿ ಪೂರ್ಣಗೊಳ್ಳದೆ ಸುರುಳಿ- ಸುರುಳಿಯಾಕಾರವಾಗಿ ಸುತ್ತುತ್ತ ಹಾಗೆ ಮುಂದೆ ಮುಂದೆ ಚಲಿಸುತ್ತದೆ. ಒಟ್ಟಾರೆ ಕುಣಿತದ ಲಯ ವೀರನ ಕುದುರೆಯೊಂದರ ಹಿಂಗಾಲು ಮುಂಗಾಲುಗಳ ನಾಗಾಲೋಟದಂತೆ ಭಾಸವಾಗುತ್ತದೆ. ಇಬ್ಬರ ಹೆಗಲನ್ನು ಏರಿ ಕಟ್ಟಲಗಿನ ಮೇಲೆ

ನಿಂತ ದಳವಾಯಿಯು ಕುದುರೆಯೇರಿ ಕಣ್ಣು ಮುಚ್ಚಿ ಕುಳಿತ ವೀರದೇವತೆಯಂತೆ ಕಂಗೊಳಿಸುತ್ತಾನೆ. ಇವನ ತಲೆ ಮೇಲೆ ಹಿಡಿದ ವೃತ್ತಾಕಾರದ ಕೆಂಪು ದೇವರ ಛತ್ರಿಯು ವೃತ್ತಾಕಾರವಾಗಿ ಸುತ್ತುತ್ತ ಅವನನ್ನು ಎಡೆ ಬಿಡದೆ ಹಿಂಬಾಲಿಸುತ್ತದೆ (ಕೆಲವು ಪ್ರದೇಶದ ಬೀರದೇವರಿಗೆ ಹಸಿರು ಬಣ್ಣದ ದೇವರ ಛತ್ರಿಗಳಿರುವುದನ್ನು ಭಕ್ತರು ಹೇಳುತ್ತಾರೆ). ಈ ಛತ್ರಿಯನ್ನು ಒಬ್ಬ ಸಾವಿರದೋನು (ವ್ಯಕ್ತಿ) ತಿರುಗಿಸುತ್ತ ದಳವಾಯಿಯನ್ನು ಅನುಸರಿಸುತ್ತಾನೆ. ಈ ಛತ್ರಿಯ ತಿರುಗುವಿಕೆ ಜೋರಾದಂತೆ ವಾದ್ಯಗಳು ಜೋರಾಗಿ ಲಯಬದ್ಧವಾಗಿ ಭಾರಿಸುತ್ತವೆ. ಕರಡೆ, ದೋಣು, ವಾಲಗ, ಸಡ್ಡೆಯಂತಹ ವಾದ್ಯಗಳ ಜೊತೆಗೆ ಡೊಳ್ಳುಗಳನ್ನು ಬಾರಿಸುವಾಗ ದಳವಾಯಿ ಕುಣಿತಕ್ಕೊಂದು ವೀರತ್ವದ ರಂಗೇರುತ್ತದೆ.

ಸ್ವಲ್ಪ ದೂರ ಕ್ರಮಿಸಿದ ನಂತರ ದಳವಾಯಿಗೆ ಸೇವೆಯವರು ಬೀಸಣಿಕೆಯಿಂದ ಗಾಳಿ ಹಾಕಿ ಸೇವೆ ಸಲ್ಲಿಸುತ್ತಾರೆ. ಮೆರವಣಿಗೆ ಮತ್ತು ಕುಣಿತಗಳು ಸ್ವಲ್ಪ ಕಾಲ ನಿಂತ ನಂತರ, ದಳವಾಯಿಯನ್ನು ಸುತ್ತುವರೆದಿರುವ ಈ(ವೀ)ರಗಾರರು ಸುತ್ತೇಳು ದೇವರ ನೆನೆದು 'ಈರಗಾರಿಕೆ' ಮಾಡಿ 'ಸುವ್ವೋ' ಎಂದು ನುಡಿದಾಗ ಕುಣಿತ ಮತ್ತೆ ಆರಂಭವಾಗುತ್ತದೆ. ವೃತ್ತಾಕಾರವಾಗಿ ಸುರುಳಿಯೋಪಾದಿ ಯಲ್ಲಿ ಸುತ್ತುತ್ತ ಮೆರವಣಿಗೆಯ ಮುಂದೆ ಹೋಗುವ 'ದಳವಾಯಿ' ಇಡೀ ದೇವಗಣ ಮತ್ತು ಭಕ್ತಗಣವನ್ನು ಮುನ್ನಡೆಸಿಕೊಂಡು ಹೋಗುತ್ತಾನೆ. ಹೀಗೆ ಮೆರವಣಿಗೆಯಲ್ಲಿ ಮೊದಲ ಸಾಲಿನಲ್ಲ ತನ್ನ ಪರಿವಾರದೊಂದಿಗೆ ಕುಣಿಯುತ್ತ ದೇವರ ಪಲ್ಲಕ್ಕಿಗಳಿಗೆ ದಾರಿ ತೋರುತ್ತ ಭಕ್ತರನ್ನು ಮುನ್ನಡೆಸುತ್ತ ಸಾಗುವ ಈ ಮಾನುಷರೂಪದ ದೈವೀ ಪುರುಷನಿಗೆ 'ದಳವಾಯಿ' ಎಂಬ ಹೆಸರು ಬಂದಿರಲಿಕ್ಕೆ ಸಾಕು !

**ದಳವಾಯಿ ಕುಣಿತದ ತಾರ್ಕಿಕ ಅಂಶಗಳು**

ಬೀರದೇವರ ಸ್ಥಾವರ ಮೂರ್ತಿಯಲ್ಲಿರುವ ದೈವತ್ವವು ದಳವಾಯಿಯ ತಾಳಿಯ ಮೂಲಕ ಮಾನುಷ ರೂಪದ ದಳವಾಯಿಯ ಜೀವಂತ ದೇಹಕ್ಕೆ ಹರಿದು ಬರುವುದು ಮೈದುಂಬುವುದರ ಹಿಂದಿನ ದೈವಿಕ ಪ್ರಕ್ರಿಯೆಯಾಗಿದೆ. ದೇವರು–ದೈವತ್ವ ಎಂಬ ವಿಚಾರಗಳು ಮೂಲತಃ ಭಕ್ತರ ನಂಬಿಕೆಯ ಪ್ರಶ್ನೆಯಾಗಿ ಉಳಿದು, ದೇವರ ಆವಾಹನೆ ಪ್ರಶ್ನಾತೀತವಾಗಿ ನಿಲ್ಲುತ್ತದೆ. ಬೀರದೇವರು ಮೂಲತಃ ನಾಥಪಂಥೀಯನಾಗಿದ್ದು ಅವನು ಭಂಡಾರ ಸಂಸ್ಕೃತಿಗೆ ಸೇರಿದವನಾಗಿದ್ದಾನೆ. ಬೀರೇದೇವರ ಜೀವಂತ ರೂಪವಾದ ದಳವಾಯಿ ವಿಭೂತಿಯನ್ನು ಧರಿಸಿದ್ದುದು ಈ ಅಧ್ಯಯನದಲ್ಲಿ ಗಮನಿಸಿದ ಸಂಗತಿಯಾಗಿದೆ. ಈ ಕುರಿತು ಅಲ್ಲಿಯ ಹಿರಿಯರನ್ನು ವಿಚಾರಿಸಿದಾಗ ಭಂಡಾರವನ್ನೂ ಧರಿಸು



ದಳವಾಯಿ

ತ್ತಾನೆಂದು ಮತ್ತು ಬೀರಪ್ಪನಿಗೆ ಭಂಡಾರ ಪವಿತ್ರವೆಂದೂ ತಿಳಿಸಿರುತ್ತಾರೆ. ಏನೇ ಇರಲಿ, 'ಭಂಡಾರ' ಮತ್ತು 'ವಿಭೂತಿ' ಇವೆರಡೂ ಒಬ್ಬ ಪವಿತ್ರ ವ್ಯಕ್ತಿ ಧರಿಸುವ ಭೌತಿಕ ವಸ್ತುಗಳು ಮಾತ್ರವಲ್ಲ. ಅವು ಎರಡು ವಿಭಿನ್ನ ಭಕ್ತಿ ಪಂಥಗಳನ್ನು ಮತ್ತು ಎರಡು ವಿಭಿನ್ನ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಪ್ರಾಚೀನ ಪೂರ್ವ ಕಾಲದ ಹಾಲುಮತ ಕುರುಬರ ಕುಲದೈವ ನಾಥಪಂಥಕ್ಕೆ ಸೇರಿದ ಬೀರಪ್ಪನಿಗೆ ಭಂಡಾರ ಅವನ ಆತ್ಮದಷ್ಟೇ ಪವಿತ್ರ, ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರದಲ್ಲಿ ಇರುವ ನೂರಾರು ಬೀರೆದೇವರ ದೇವಾಲಯಗಳಲ್ಲಿ ನಡೆಯುವ ಆರಾಧನೆಗಳಲ್ಲಿ ಕೇವಲ ಭಂಡಾರವನ್ನು ಮಾತ್ರ ಬಳಸುವುದು ಕಂಡು ಬರುತ್ತದೆ. ಇಲ್ಲಿ ವಿಭೂತಿ ಅಪ್ರಸ್ತುತ. ಹಾಗಿರುವಾಗ ಭಂಡಾರ ಸಂಸ್ಕೃತಿಗೆ ಸೇರಿದ ಬೀರೇದೇವರು ಎಂದಿನಿಂದ ವಿಭೂತಿ ಸಂಸ್ಕೃತಿಯತ್ತ ವಾಲಿದ ಎಂಬ ಪ್ರಶ್ನೆಗೆ ಪುನಃ ನಾವು ಇತಿಹಾಸ, ಅದರಲ್ಲೂ ರೇವಣಸಿದ್ಧೇಶ್ವರರ ಶೈವ (ವಿಭೂತಿ) ಪಂಥದತ್ತ ತಿರುಗಿ ನೋಡಬೇಕಾಗುತ್ತದೆ. ಸ್ಥಳೀಯ ಭಕ್ತರು ಏನೇ ಹೇಳಿದರೂ ಅಂದು ಅಲ್ಲಿ ಈರಗಾರರು, ದಳವಾಯಿ, ಸಾವಿರ (ಸೇವೆ)ದವರು ಮತ್ತು ಪೂಜಾರಿಗಳು ಧರಿಸಿದ ವಿಭೂತಿ ಢಾಳಾಗಿ ಕಾಣಿಸುತ್ತಿತ್ತು. ಅಂದರೆ

ನಾಥಪಂಥದ ಸ್ವತಂತ್ರ ವೀರದೇವತೆಯಾಗಿದ್ದ ಬೀರದೇವರು, ಅದೇ ನಾಥಪಂಥ ತೊರೆದು ಶೈವಪಂಥ ಸ್ವೀಕರಿಸಿದ್ದ ರೇವಣಸಿದ್ಧರ ಪ್ರಭಾವಳಿಯಲ್ಲಿದ್ದುದು ಎದ್ದು ಕಾಣುತ್ತಿತ್ತು.

ಬೀರಪ್ಪ ಕುರುಬ ಕುಲದ ಆತ್ಮಶಕ್ತಿ ! ಪ್ರಾದೇಶಿಕ ನೆಲೆಯಲ್ಲಿ ಕರ್ನಾಟಕದಾದ್ಯಂತ ಕುರುಬ ಜನಾಂಗದವರಿಗೆ ಬೇರೆ ಬೇರೆ ಹಲವಾರು ಮನೆದೇವರುಗಳಿವೆ. ಆದರೆ ಕುರುಬರಿಗೆ ಕುಲದೈವ ಬೀರಪ್ಪ ಒಬ್ಬನೆ ಎಂಬುದರಲ್ಲಿ ಎರಡು ಮಾತಿಲ್ಲ. ಅಷ್ಟರಮಟ್ಟಿಗೆ ಬೀರಪ್ಪ ಕುರುಬರ ಜೀವಾಳ ವಾಗಿದ್ದುದು ಮತ್ತು ಪ್ರತಿ ಹಳ್ಳಿಯಲ್ಲಿಯೂ ಅವನ ಗುಡಿ, ದೇವಸ್ಥಾನಗಳಿರುವುದು ಈ ಮಾತಿಗೆ ಸ್ಪಷ್ಟ ನಿದರ್ಶನ. ಆರ್.ಎನ್. ನಂದಿಯವರ ಅಭಿಪ್ರಾಯದಂತೆ ಶಿವನೂ ಒಬ್ಬ ಅವೈದಿಕ ದೇವತೆ ಎಂಬುದನ್ನು ಅಧ್ಯಯನ ಇಲ್ಲಿ ಒತ್ತಿ ಹೇಳುತ್ತದೆ. ಹಾಗಿರುವಾಗ, ನೂರಾರು ವರ್ಷಗಳ ಹಿಂದೆ ಮುಗ್ಧ ಭಕ್ತರು ಬೀರಪ್ಪನನ್ನು ಮಾನವ ರೂಪದಲ್ಲಿ ನೋಡಲು ಆಸೆ ಪಟ್ಟಿದ್ದರಲ್ಲಿ ಆಶ್ಚರ್ಯವಿಲ್ಲ. ಇಂತಹ ಆಸೆ, ಆಕಾಂಕ್ಷೆಗಳ ಪರಿಣಾಮವೇ 'ದಳವಾಯಿ' ಎಂಬ ದೈವೀ ಪುರುಷನ ಜನನ. ಜನನದ ನಂತರ ದೈವೀ ಶಕ್ತಿಯ ಮೈದುಂಬುವಿಕೆ, ಕುರುವುದೋರುವಿಕೆ, ದಳವಾಯಿ ಕುಣಿತ ಮುಂತಾದ ಆಚರಣೆಗಳನ್ನು ಅನುಸರಿಸಲಾಯಿತೆಂದು ಹೇಳಬಹುದು. ಕುರುಬ ಜನಾಂಗದ ಮುಗ್ಧ ಭಕ್ತರಿಗೆ ಜೀವಂತ ಬೀರದೇವರ ಕುಣಿತವೆಂದರೆ ಮನೆಯ ಮೊಗಸಾಲೆಯಲ್ಲಿ ಸ್ವಂತ ಮಗನೆ ಕುಣಿದ ಹಾಗೆ. ಕುರುವುದೋರುವುದೆಂದರೆ ಮಾತು ಬಾರದ ಮನೆಮಗ ಕೈತೋರಿ ಒಳಿತು ಹೇಳಿದಂತೆ. ಅಷ್ಟರ ಮಟ್ಟಿಗೆ ಈ ಆಚರಣೆಯು ಕುರುಬ ಮುಗ್ಧಭಕ್ತರ ಮತ್ತು ಅವರ ದೇವರ ಭಕ್ತಿಯ ಭಾವಬಂಧನಕ್ಕೆ ಸೇತುವಾಗಿದೆಯೆಂದರೆ ಅತಿಶಯೋಕ್ತಿಯಲ್ಲ.

## ಆಧಾರಸೂಚಿ


೧. ಬಿರಾದಾರ ಬಿ.ಜಿ. (ಡಾ.), **ಕುರುಬರ ಗುರು ಒಡೆಯರು,** (ಸಾಂಸ್ಕೃತಿಕ ಅಧ್ಯಯನ), ೨೦೧೦, ವಿಕಾಸ ಪ್ರಕಾಶನ, ಹೊಸಪೇಟೆ.

೨. (ಮೂಲ : ವಿ.ಆರ್. ಹನುಮಂತಯ್ಯ), **ಕುರುಬರ ಚರಿತ್ರೆ,** ೧೯೯೬, ಸುಧಾಕರ (ಸಂ), ಪ್ರತಿಭಾ ಪ್ರಕಾಶನ, ಮೈಸೂರು.

೩. ಹಳ್ಳಿಕೇರಿ ಎಫ್.ಟಿ. (ಡಾ.), **ಕುರುಬರ ಗುರು ಒಡೆಯರು,** ೨೦೦೭, ವಿಕಾಸ ಪ್ರಕಾಶನ, ಹೊಸಪೇಟೆ.

ಶ್ರೀಮತಿ ಅನ್ನಪೂರ್ಣ ಗೋಸ್ವಾಳ*

# 'ಕುರುಬರ ಜಗತ್ಪಾವನ ಪತ್ರಿಕೆ'

ಪೀಠಿಕೆ :

ಸಾಮಾಜಿಕ ಜಾಗೃತ ಪ್ರಜ್ಞೆಯು ೧೯ನೆಯ ಶತಮಾನ ಆದಿಭಾಗದಲ್ಲಿ ಹುಟ್ಟಿಕೊಂಡಿತು. ರೇಡಿಯೋ ದೂರದರ್ಶನ, ನಿಯತಕಾಲಿಕೆ, ನಾಟಕ, ಚಿತ್ರರಂಗ ಇಂಥ ಹಲವಾರು ಮಾಧ್ಯಮಗಳಿಂದ ಅಲ್ಲದೆ ಆಚಾರ-ಸಂಪ್ರದಾಯ, ನೀತಿ-ನಡಾವಳಿ, ಜಾತ್ರೆ-ಉತ್ಸವಗಳಂಥ ಪ್ರಾಚೀನ ಪರಂಪರೆಗಳೊಂದಿಗೆ ದೇಶದ ವಿವಿಧ ಮತಗಳು ಸಂಸ್ಕೃತಿಯನ್ನು ಪುನಃ ಕಟ್ಟಿಕೊಳ್ಳಲು ಸಿದ್ಧವಾದವು. ಅಲ್ಲದೆ ಚಾರಿತ್ರಿಕ ಪೌರಾಣಿಕ ಸಾಮಾಜಿಕ ನೆಲೆಗಳಲ್ಲಿ ತಮ್ಮ ಇತಿಹಾಸವನ್ನು ಪರಿಚಯಿಸಲು ಪುನಃ ಪ್ರಾರಂಭಿಸಿದವು. ಈ ಹಿನ್ನೆಲೆಯಲ್ಲಿ ಪತ್ರಿಕೋದ್ಯಮದ ಪಾತ್ರ ಬಹುಮುಖ್ಯವಾದುದು.

ಪತ್ರಿಕಾ ಪರಂಪರೆ ಮೊಟ್ಟಮೊದಲು ಬಂಗಾಳದಲ್ಲಿ ಪ್ರಾರಂಭವಾಯಿತು. 'ಬಂಗಾಲ ಗೆಜೆಟ್' ಮತ್ತು 'ಸಮಾಚಾರ ದರ್ಪಣ' ಎಂಬ ವಂಗ ಭಾಷೆಯ ಪತ್ರಿಕೆಯ ತರುವಾಯ ೧೮೨೧ರಲ್ಲಿ ರಾಜಾರಾಮ ಮೋಹನರಾಯರ ಸಂಪಾದಕತ್ವದಲ್ಲಿ 'ಸಂವಾದ ಕೌಮುದೀ' ಪ್ರಕಟಗೊಂಡಿತು. ಕಾರಣ ರಾಜಾರಾಮ ಮೋಹನರಾಯರನ್ನು ಭಾರತೀಯ ಪತ್ರಿಕೋದ್ಯಮದ ಆದ್ಯ ಪ್ರವರ್ತಕರೆಂದು ಕರೆಯಲಾಗುತ್ತಿದೆ. ಮದ್ರಾಸ್ ಸ್ಕೂಲ್ ಬುಕ್ ಆಫ್ ಸೊಸೈಟಿಯ ಮಿಷನರಿಗಳು ೧೯೩೧ರಲ್ಲಿ ಮೊಟ್ಟಮೊದಲು ತಮಿಳು ಪತ್ರಿಕೆ ಹೊರಡಿಸಿದರು. ಹತ್ತೊಂಬತ್ತನೆಯ ಶತಮಾನದ ಪತ್ರಿಕೆಗಳು ಶೈಕ್ಷಣಿಕ, ರಾಜಕೀಯ, ಧಾರ್ಮಿಕ, ಸಾಹಿತ್ಯಕ ಎಂಬ ನಾಲ್ಕು ಬಗೆಯ ಉದ್ದೇಶಗಳನ್ನು ಹೊಂದಿದ್ದವು. ಇಂಥ ಪ್ರಕ್ರಿಯೆಯ ಪರಿಣಾಮವಾಗಿ ಮೊದಲಿಗೆ 'ವೀರಶೈವ ಮತ ಪ್ರಕಾಶಿಕಾ', ೧೮೯೨ರಲ್ಲಿ ಎಂ.ಎ. ರಾಮಾನುಜಯ್ಯಂಗಾರರ 'ಕರ್ನಾಟಕ ಕಾವ್ಯ ಮಂಜರಿ', ಎಚ್.ಎಸ್. ಶಿವಲಿಂಗಶಾಸ್ತ್ರಿಗಳ ಸಂಪಾದಕತ್ವದ 'ಧರ್ಮ ತರಂಗಿಣಿ' ೧೯೧೮ರಲ್ಲಿ ಬೆಳಗಾವನಲ್ಲಿ ಶಿ.ಶಿ. ಬಸವನಾಳರ 'ಪ್ರಭೋಧ', ಆಲೂರು ವೆಂಕಟರಾಯರ ಸಂಪಾದಕತ್ವದಲ್ಲಿ 'ಜಯ ಕರ್ನಾಟಕ', ೧೯೨೬ರಲ್ಲಿ ಫ.ಗು. ಹಳಕಟ್ಟಿ ಅವರ 'ಶಿವಾನುಭವ' ಮೊದಲಾದ ಪತ್ರಿಕೆಗಳು ಪ್ರಾರಂಭಿಕ ಹಂತದವುಗಳು. 'ಶಿವಾನುಭವ'ದ ಸಮಕಾಲೀನ ಪತ್ರಿಕೆ 'ಕುರುಬರ ಜಗತ್ಪಾವನ ಪತ್ರಿಕೆ' ಇವೆರಡೂ ಧರ್ಮ ಪ್ರಸಾರವನ್ನೇ ಮುಖ್ಯ ಧ್ಯೇಯವಾಗಿ ಹೊಂದಿವೆ.

**ಕುರುಬರ ಇತರ ಪತ್ರಿಕೆಗಳು**

ಜಗತ್ಪಾವನ ಪತ್ರಿಕೆಯ ಅವಲೋಕನದಿಂದ ಇತರ ಕುಲಸಂಬಂಧೀ ಪತ್ರಿಕೆಗಳು ನಮಗೆ ಪರಿಚಯವಾಗುತ್ತವೆ. ಕುರುಬ ಜನಾಂಗದ ಶ್ರೇಷ್ಠತೆಯನ್ನು ಮೂಲರೂಪವನ್ನು ಸಮಾಜಕ್ಕೆ ತೋರಿಸಿ ಆತ್ಮಾಭಿಮಾನದೊಂದಿಗೆ ಸ್ವಾಭಿಮಾನದ ಬದುಕನ್ನು ಬಾಳಲು ಕರೆ ನೀಡುವ ಉದ್ದೇಶಗಳಿಗಾಗಿ ೧೯ನೆಯ ಶತಮಾನದ ಆದಿಭಾಗದಲ್ಲಿ ಅನೇಕ ಹಾಲುಮತದ ಪತ್ರಿಕೆಗಳು, ಜನ್ಮ ತಳೆದವು. ಅವು ಹೀಗಿವೆ.

೧. *ಎಂ.ಎನ್. ಲಿಂಗಪ್ಪನವರ ಕುರುವಿಜಯ (ವಾರಪತ್ರಿಕೆ) ವು ೧೯೧೪ರಲ್ಲಿ ಪ್ರಾರಂಭಗೊಂಡಿತು. ಈ ಪತ್ರಿಕೆಯ ಉದ್ದೇಶಗಳನ್ನು ಅವರೇ ಒಂದೆಡೆ ಹೀಗೆ ಹೇಳಿದ್ದಾರೆ "......ಕುರುಬರ ಜಾತಿ ಕೇವಲ ನಿಕೃಷ್ಟವಾದದ್ದೆಂದು ಭಾವಿಸಿರುವ ನರಾಧಮರ ಅವಗಾಹನೆಗಾಗಿ ಕುರುಬರ ಜಾತಿ ಎಂತಹದ್ದು ? ಇವರ ಮೂಲ ಪಿತೃಗಳ ಚರಿತ್ರೆಗಳೇನು ? ಎಂದು ಮುಂತಾದ ವಿಷಯಗಳನ್ನು ನಮ್ಮ ಕನ್ನಡ ನಾಡಿನಲ್ಲಿರುವ ಮಹಾಜನಗಳ ಅವಗಾಹನೆಗೆ ತರಬೇಕೆಂಬ ಸದುದ್ದೇಶದಿಂದ ೧೯೧೪ನೇ ಇಸವಿಯಲ್ಲಿ 'ಕುರುವಿಜಯ'ವೆಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದೆವು". ಈ ವಾರಪತ್ರಿಕೆ ಸ್ವಂತ ಪ್ರಿಂಟಿಂಗ್ ಆಫೀಸು ಇಲ್ಲದ ಕಾರಣ ಮತ್ತೊಬ್ಬರ ಛಾಪಾಖಾನೆಯಲ್ಲಿ ಒಂದು ವರ್ಷದವರೆಗೂ ಪ್ರಿಂಟಾಗುತ್ತಾ ಬಂದು ನಂತರ ನಿಂತಿತು. [ಕುರುಬರ ಜಗತ್ಪಾವನ ಪತ್ರಿಕೆ ೧೯೩೨ ಮಾರ್ಚ್ ಪುಟ. ೨೧]*
೨. *'ಕುರುಕುಲ ದರ್ಪಣ' ಎಂಬ ದೊಡ್ಡ ಪುಸ್ತಕದ ಮುದ್ರಣಕ್ಕಾಗಿ ಹಣದ ಕೊರತೆಯನ್ನು ಓದುಗರ ಗಮನಕ್ಕೆ ತರಲಾಗಿದೆ. (ಕು.ಜ. ಪತ್ರಿಕೆ, ೧೯೩೪, ಮಾರ್ಚ್, ಪುಟ ೧೪).*
೩. *'ಕುರುಕುಲ ಪ್ರಭಾ' ಎಂಬ ಮತಗ್ರಂಥ ಅಚ್ಚು ಹಾಕಿಸುವ ಮಹದಾಸೆಯನ್ನು ಸಂಪಾದಕರು ಓದುಗರೊಂದಿಗೆ ಹಂಚಿಕೊಂಡಿದ್ದಾರೆ.*

* ರೇವಣ ಸಿದ್ಧೇಶ್ವರ ಜನರಲ್ ಸ್ಟೋರ್ಸ್, ರಾಮಾ ಟಾಕೀಸ್ ಹತ್ತಿರ, ಎಸ್.ಆರ್. ನಗರ, ಹೊಸಪೇಟೆ.

೪. 'ಕುರುಬರ ಕುಲಕೀರ್ತಿ' ಎಂಬ ವಾರಪತ್ರಿಕೆಯನ್ನು ೧೯೩೪ ರಿಂದ ಹೊರತರಲು ಸಾಕಷ್ಟು ಪ್ರಯತ್ನಿಸಿರುವುದಾಗಿ ಸಂಪಾದಕರು ತಿಳಿಸಿದ್ದಾರೆ. (ಕು.ಜ.ಪ. ೧೯೩೫ ಜನವರಿ ಪುಟ ೨೧).

೫. 'ಸ್ವಮತಬಂಧು' ಎಂಬ ಮಾಸಪತ್ರಿಕೆಯು ಕೆ. ಜವರಯ್ಯನವರ ಸಂಪಾದಕತ್ವದಲ್ಲಿ ೧೯೨೫ ಮೇ ತಿಂಗಳಲ್ಲಿ ಪ್ರಕಟಗೊಂಡಿತು.

ಹೀಗೆ ಕುರುಬ ಜನಾಂಗದ ಚರಿತ್ರೆ, ಸಂಸ್ಕೃತಿ, ಸಾಮಾಜಿಕ ಸಂಗತಿಗಳನ್ನು ದಾಖಲಿಸಿ ಜನರಿಗೆ ತಲುಪಿಸುವಂಥ ಪತ್ರಿಕೆಗಳು ಪ್ರಕಟಗೊಂಡಿರುವುದನ್ನು ಜಗತ್ಪಾವನ ಪತ್ರಿಕೆಯಿಂದ ತಿಳಿಯಬಹುದು.

## ಕುರುಬರ ಜಗತ್ಪಾವನ ಪತ್ರಿಕೆ : ನಡೆದು ಬಂದ ದಾರಿ

ಮೂಲತಃ ಗಂಭೀರ ಚಿಂತನಶೀಲರಾದ ಎಮ್.ಎನ್. ಲಿಂಗಪ್ಪ ಅವರು ವಿಷಯ ನಿರೂಪಣೆಯಲ್ಲಿ ನಿಷ್ಠುರತೆ, ಪ್ರಾಮಾಣಿಕತೆ, ಖಚಿತತೆ, ಸ್ಪಷ್ಟತೆ ಹೊಂದಿದವರು. ಮತಬಾಂಧವರು ಪ್ರಜ್ಞಾವಂತರಾಗಿ ವೈಚಾರಿಕತೆಯನ್ನು ಬೆಳಸಿಕೊಳ್ಳಬೇಕೆಂದು ಇವರ ಎಲ್ಲ ಲೇಖನಗಳ ಆಶಯ ವಾಗಿದ್ದಿತು. ಪತ್ರಿಕಾ ಪ್ರಕಟಣೆಗಿಂತ ಮೊದಲು ಅನೇಕ ಚಾರಿತ್ರಿಕ ದಾಖಲೆಗಳನ್ನು ಒದಗಿಸಿರುವುದಾಗಿ ಸ್ವತಃ ಲೇಖಕರೇ ಹೇಳಿಕೊಂಡಿದ್ದಾರೆ. ೧೯೧೧ರಲ್ಲಿ ಮೂರು ವರ್ಷಗಳ ಕಾಲ ನಡೆದ ಜಗಳವನ್ನು ಸಿಟಿ ಮ್ಯಾಜಿಸ್ಟ್ರೇಟ್ ವಿ.ಎಸ್. ರಾಣೋಜಿರಾವ್ ಅವರು ಕೋರ್ಟಿನಲ್ಲಿ ತೀರ್ಪು ನೀಡಿದ ವಿಷಯವನ್ನು ೧೯೧೦ರಲ್ಲಿ ಪ್ರಕಟಗೊಂಡ 'ಕುರುಬರ ಕೈಪಿಡಿ' ವಿವರಿಸುತ್ತದೆ. ಈ ವಿಚಾರವನ್ನು ಮೊದಲ ಬಾರಿಗೆ ಜಗತ್ಪಾವನ ಪತ್ರಿಕೆಯ ಸಂಪಾದಕರಾದ ಎಮ್.ಎನ್. ಲಿಂಗಪ್ಪನವರು ಪ್ರಕಟಿಸಿದುದು ಮಾದರಿ ಚಾರಿತ್ರಿಕ ದಾಖಲೆಯೆನ್ನಬಹುದು. ಈ ವಿಷಯ  ಕುರಿತಾದ ಉಲ್ಲೇಖವನ್ನು ೧೯೩೧ರ ಡಿಸೆಂಬರ್ ಸಂಚಿಕೆಯ ಪುಟ ೧೧ರಲ್ಲಿ ಮಾಡಲಾಗಿದೆ. ೧೯೧೪ರಲ್ಲಿ 'ಕುರುವಿಜಯ' ಅಲ್ಲದೆ 'ಕುರುಬರ ಕುಲಕೀರ್ತಿ' ಹೀಗೆ ಅನೇಕ ಪತ್ರಿಕೆಗಳನ್ನು ಪ್ರಕಟಿಸುವ ಅವರ ಆಶಾದಾಯಕ ಮನೋಭಾವವು ಮಾದರಿಯಾಗಿದೆ.

ಎಮ್.ಎನ್. ಲಿಂಗಪ್ಪ ಅವರ ಅಂತರ್ವಾಣಿ ಜಾಗೃತಗೊಂಡು ಹಾಲುಮತಧರ್ಮ ಎಂತಹದು ಎಂದು ತೋರಿಸಬೇಕೆಂಬ ಉತ್ಕಟವಾದ ಛಲ ಹೊತ್ತು ಒಂದು ನಿಶ್ಚಿತ ಉದ್ದೇಶದೊಂದಿಗೆ 'ಕುರುಬರ ಜಗತ್ಪಾವನ' ಪತ್ರಿಕೆ ೧೯೨೬ ನವೆಂಬರ್‌ನಲ್ಲಿ ಪ್ರಾರಂಭವಾಯಿತು. ೧೯೨೮ರ ವರೆಗೆ ಯಾವುದೇ ಅಡೆತಡೆಯಿಲ್ಲದೆ ಪ್ರಕಟವಾಗುತ್ತಿತ್ತು. ೧೯೨೮ ರಿಂದ ೧೯೩೧ ರವರೆಗೆ ಕಣ್ಣಿನ ತೊಂದರೆ ಯಿಂದಾಗಿ ಸಂಪಾದಕರು ಉಪ್ಪಾರರ ಕುರಿತಾದ ವಿಷಯ




ಗಳನ್ನು ಮುದ್ರಿಸಿರುವುದಾಗಿ ತಿಳಿಸಿದ್ದಾರೆ. ಈ ವಿಷಯವನ್ನು ಅಪರಾಧಿ ಭಾವದೊಂದಿಗೆ ತಮ್ಮ ಅಸಹಾಯಕತೆಯನ್ನು ಓದುಗರ ಗಮನಕ್ಕೆ ಪುನಃ ಪುನಃ ತಂದಿರುವುದು ಅವರ ಧಾರ್ಮಿಕ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ. ಅಲ್ಲದೆ ಮಲ್ಹಾರಿರಾವ್ ಹೋಳ್ಕರ ಎಂಬ ಕುರುಬರ ರಾಜವಂಶದ ಹೆಸರನ್ನು ಮುದ್ರಣಾಲಯಕ್ಕೆ ಇಟ್ಟಿದುದು ಅವರ ಮತಾಭಿಮಾನವನ್ನು ವ್ಯಕ್ತಪಡಿಸುತ್ತದೆ.

ದೀರ್ಘವಾದ ಲೇಖನಗಳನ್ನು ಪ್ರತಿ ಸಂಚಿಕೆಯಲ್ಲಿ ಮುಂದುವರೆಸಿದುದನ್ನು ಗಮನಿಸಬಹುದು. ಒಂದು ಶತಮಾನದಷ್ಟು ಹಿಂದೆಯೇ ಶಿಸ್ತಿನ ಚೌಕಟ್ಟಿನಲ್ಲಿ ಪತ್ರಿಕೆ ಪ್ರಕಟಗೊಂಡಿರುವುದನ್ನು ಮುಖಪುಟ ಮತ್ತು ಸಂಚಿಕೆಗಳ ವಿಷಯ ಪಟ್ಟಿಯ ವಿವರಣೆಯಿಂದ ತಿಳಿಯುತ್ತದೆ. ಭಾಷಾ ದೃಷ್ಟಿಯಿಂದ ಹಳಗನ್ನಡ ಅಕ್ಷರಗಳ ಉಪಯೋಗ ಮತ್ತು ಒತ್ತಕ್ಷರಗಳ ಬದಲಾಗಿ ಸೊನ್ನೆಯನ್ನು ಬಳಸಲಾಗಿದೆ. ಹಾಲುಮತ ಸಮಾಜ ಸರಿಯಾಗಿ ಸಂಘಟನೆಯ ಸ್ವರೂಪ

ಪಡೆಯದೇ ಇರುವ ಸಂದರ್ಭದಲ್ಲಿ ಜಗತ್ಪಾವನ ಪತ್ರಿಕೆ ಹುಟ್ಟಿಕೊಂಡಿತು. ಆರ್ಥಿಕ ತೊಂದರೆಗೆ ಮೇಲಿಂದ ಮೇಲೆ ಒಳಗಾಗಲು ಅನೇಕ ಸಾರಿ ಓದುಗರಿಗೆ ಸಹಾಯ ಕೋರಿ ವಿನಂತಿ ಮಾಡಿಕೊಂಡರು. ೧೯೨೬ ರಿಂದ ೧೯೩೪ರ ಸಂಚಿಕೆಗಳು ಲಭ್ಯವಾಗಿದ್ದು ಪತ್ರಿಕೆ ಸ್ಥಗಿತಗೊಂಡ ಕಾಲವನ್ನು ನಾವಿಂದು ಗುರುತಿಸಬೇಕಾಗಿದೆ.

ಸಮಾಜಕ್ಕಾಗಿ ದುಡಿದ ಮಹನೀಯರ ಪರಿಚಯ, ಮೀಟಿಂಗು, ಸಭೆ–ಸಮಾರಂಭಗಳು, ಸಾಮಾಜಿಕ ಸಮಸ್ಯೆಗಳ ಚರ್ಚೆ, ಸಲಹೆ, ಸೂಚನೆ, ಮತಬಾಂಧವರ ನಿಧನಕ್ಕೆ ಸಂತಾಪ ಪ್ರಚಾರಕ್ಕಾಗಿ ಜಾಹಿರಾತುಗಳ ಪ್ರಕಟಣೆ, ಸೂರ್ಯವಂಶ ಮತ್ತು ಚಂದ್ರವಂಶಗಳ ವಿವರ, ಚಾರಿತ್ರಿಕ ಹಿನ್ನಲೆಯ ಕುರುಬರ ರಾಜವಂಶಗಳು, ಶ್ರೇಷ್ಠತೆಯನ್ನು ಸಾಧಿಸಲು ಜನಾಂಗದವರ ಕರ್ತವ್ಯಗಳು, ಪತ್ರಿಕೆ ಕುರಿತು ಪ್ರೋತ್ಸಾಹಿಸಿದವರಿಗೆ ವಂದನೆ ತಿಳಿಸುವ, ಸ್ವಧರ್ಮೋಪದೇಶ ಇಂಥ ಹಲವಾರು ವಿಚಾರ ಗಳನ್ನು ಪತ್ರಿಕೆಯ ಮೂಲಕ ಸಮಾಜಕ್ಕೆ ತಲುಪಿಸುವಲ್ಲಿ ಯಶಸ್ವಿಯಾದ ಸಂಪಾದಕರು ತಮ್ಮ ಸಂತೋಷವನ್ನು ಹೀಗೆ ಹಂಚಿಕೊಂಡಿದ್ದಾರೆ. 'ನಮ್ಮ ಜಗತ್ಪಾವನ ಪತ್ರಿಕೆಗೆ ಈಗಾಗಲೇ ಬಹು ಜನರ ಆರ್ಡರುಗಳು ಬರಲಾರಂಭಿಸಿವೆ. ಇದಕ್ಕಾಗಿ ನಾವು ಸಂತೋಷ ಪೂರ್ವಕವಾಗಿ ಇನ್ನೂ ಹೆಚ್ಚು ವಿಷಯಗಳನ್ನು ಬರಿಯಲಾರಂಭಿಸಲು ಮುಂದಿನ ಸಂಚಿಕೆಯಿಂದ ಈಗಿನ ೩೨ ಪುಟವನ್ನು ೪೦ಕ್ಕೆ ಹೆಚ್ಚಿಸುತ್ತೇವೆ. [ಕು.ಜ. ಪತ್ರಿಕೆ ಡಿಸೆಂಬರ್ ೧೯೨೬ ಪುಟ ೩೦].

ಜಗತ್ಪಾವನ ಮಾಸಪತ್ರಿಕೆ ೧೯೨೬ ನವೆಂಬರರಂದು ಅನ್ಯರ ಛಾಪಾಕಾನೆಯಲ್ಲಿ ಹುಟ್ಟಿಕೊಂಡು ಅಕ್ಟೋಬರ್ ೧೯೨೮ರಲ್ಲಿ ಸ್ವಂತ ಛಾಪಾಕಾನೆಯಲ್ಲಿ ಮುದ್ರಿಸಲ್ಪಟ್ಟಿತು. ನಂತರದಲ್ಲಿ ಹಣದ ತೊಂದರೆಯೊಂದಿಗೆ ಮುದ್ರಣದ ಕಷ್ಟಸಾಧ್ಯತೆಯನ್ನು ಗಮನಕ್ಕೆ ತಂದುಕೊಳ್ಳಬಹುದು. "....ನಾವು ಸ್ಥಾಪಿಸಲಿಕ್ಕಿರುವ ಸ್ವಂತ ಛಾಪಾಕಾನೆಯ ಬಂಡವಾಳಕ್ಕಾಗಿ ಮೊದಲಿನಿಂದಲೂ ಮಾಸಪತ್ರಿಕೆಗಳನ್ನು ತೆಗೆದುಕೊಳ್ಳುತ್ತಿರುವ ನಮ್ಮ ಮತಾಭಿಮಾನಿಗಳು ತಮ್ಮ ಮೊದಲನೆಯ ವರ್ಷದ ಚಂದಾಗಳನ್ನು ಕಳುಹಿಸಬೇಕೆಂದು ಪ್ರಾರ್ಥಿಸುವೆವು" ಕೆಲವು ಅಭಿಪ್ರಾಯ ಮತ್ತು ಲೇಖನಗಳು ಪುನರುಕ್ತಗೊಂಡರೂ ಅವು ಆಯಾ ಸಂದರ್ಭಕ್ಕೆ ಅನಿವಾರ್ಯವೂ ಔಚಿತ್ಯವೂ ಆಗಿದೆ.

**ಪತ್ರಿಕೆಯ ವಿಶೇಷತೆ**

'ಕುರುಬರ ಜಗತ್ಪಾವನ ಪತ್ರಿಕೆ'ಯು ಸ್ವಾತಂತ್ರ ಪೂರ್ವದಲ್ಲಿಯ ಕುರುಬ ಸಮುದಾಯದ ಸಂಘಟನೆಯನ್ನು ಅತೀವ ಮತಾಭಿಮಾನವನ್ನು ಜಾಗೃತಾಭಾವವನ್ನು ಪ್ರತಿಬಿಂಬಿಸುವ ಆದ್ಯ ನಿಯತಕಾಲಿಕೆಯಾಗಿದೆ. ಮತದ ಶ್ರೇಯೋಭಿವೃದ್ಧಿಗಾಗಿ ಎಮ್.ಎನ್. ಲಿಂಗಪ್ಪನವರು ಬೆಂಗಳೂರಿನಲ್ಲಿ ನವೆಂಬರ್ ೧೯೨೭ರಂದು 'ಕುರುಬರ ಜಗತ್ಪಾವನ ಪತ್ರಿಕೆ' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸಿದರು. ವಿಭಿನ್ನ ದೃಷ್ಟಿಕೋನದ ಉದ್ದೇಶಗಳನ್ನು ಇಟ್ಟುಕೊಂಡು ಪತ್ರಿಕೆಯ ಮುಖಾಂತರ ಗುರಿ ಸಾಧಿಸಲು ಹೊರಟಿದುದು ಹಾಲುಮತ ಚರಿತ್ರೆಯ ದಾಖಲೆಗಳೊಲ್ಲೊಂದಾಗಿದೆ. ಮತ ಸಂಬಂಧಿ, ಪುರಾಣ, ಚರಿತ್ರೆ, ವೈಭವದ ಇತಿಹಾಸ, ಸಕಾಲೀನ ಸಮಸ್ಯೆಗಳು, ಘಟನಾವಳಿಗಳು, ಜಾಹಿರಾತುಗಳು, ಮತಬಾಂಧವರ ಪರಿಚಯ ಮತ ಸುಧಾರಣಾ ಸೂಚನೆಗಳು ಹೀಗೆ ಭಿನ್ನ ಹಿನ್ನಲೆಯ ವಿಷಯಗಳನ್ನು ಓದುಗರ ಗಮನಕ್ಕೆ ತರುವಲ್ಲಿ ಈ ಪತ್ರಿಕೆ ತುಂಬ ನೆರವಾಗಿದೆ.

ಕೆಲವು ಅಡತಡೆಗಳಿಂದಾಗಿ ಪತ್ರಿಕೆ ತಡವಾಗಿ ಪ್ರಕಟಗೊಳ್ಳಲು ಸಂಪಾದಕರು ನಿಂದಿಗೆ ಗುರಿಯಾದುದನ್ನು [೧೯೨೭, ನವೆಂಬರ್–ಡಿಸೆಂಬರ್ ಸಂಚಿಕೆ] 'ದುರಾಭಿಮಾನಿ ಗಳ ಹೇಳಿಕೆ' ಎಂಬ ಶೀರ್ಷಿಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ. "....ಅಸೂಯಾಪರರು ಜಗತ್ಪಾವನ ಪತ್ರಿಕೆಯು ನಿಂತೇ ಹೋಯಿತು ಎಂದು ಅಲ್ಲಲ್ಲಿ ಗುಬಾರು ಹುಟ್ಟಿಸಿದ್ದಾರಂತೆ? ಪತ್ರಿಕೆಗಳನ್ನು ನಡೆಸುವ ವ್ಯಥೆಯು ಅಂತಹ ನರಾಧಮರಿಗೆ ಹೇಗೆ ತಿಳಿಯಬೇಕು" ಎಂಬ ಸಂಪಾದಕರ ಮಾತುಗಳಲ್ಲಿ ಪತ್ರಿಕೆಯನ್ನು ನಡೆಸುವ ಪ್ರಯಾಸವನ್ನು ಅರಿಯಬಹುದು. ಮತ್ತೊಂದೆಡೆ "ಪ್ರಿಯ ಗ್ರಾಹಕರಿರಾ ! ತಮ್ಮ ಅನುಗ್ರಹ ದಿಂದಲೂ ಈ ನಮ್ಮ 'ಜಗತ್ಪಾವನ'ವೆಂಬ ಬಾಲಾರಿಷ್ಟ ಮುಂತಾದ ಯಾವ ವಿಪತ್ತಿಗೂ ಜಗ್ಗದೇ ತನ್ನ ಮೊದಲನೇ ವರ್ಷದ ವರ್ಧಂತಿಯ ಮಹೋತ್ಸವವನ್ನು ಬಹು ವಿಜೃಂಭಣೆಯಿಂದ ಪೂರೈಸಿ ಈಗ ಎರಡನೇ ವರ್ಷದ ಸುದಿವಸಗಳಲ್ಲಿ ತನ್ನ ಪಾದಾರ್ಪಣೆಯನ್ನು ಮಾಡುವುದರ ಮೂಲಕ ನಮ್ಮ ಪ್ರಿಯ ಬಂಧುಗಳಾದ ತಮ್ಮೆಲ್ಲರ ಪ್ರೀತಿ ವಿಶ್ವಾಸಗಳನ್ನು ಜ್ಞಪ್ತಿಪಡಿಸಲು ಈಗ ೨ನೇ ವರ್ಷದ ಸಂಚಿಕೆಯಾಗಿ ಹೊರಟಿದೆ" ಎಂದು ಸಮಾಧಾನ ಸಂತೋಷಗಳನ್ನು ವ್ಯಕ್ತಪಡಿಸಿದ್ದಾರೆ. ಈ ರೀತಿಯಲ್ಲಿ ಮೊದಲ ವರ್ಷದ ಎರಡು ಸಂಚಿಕೆಗಳನ್ನು ಪ್ರಕಟಿಸಿದ್ದಾರೆ.

ಅತಿ ಕಡಿಮೆ ಅವಧಿಯಲ್ಲಿ ತನ್ನ ಜನಪ್ರಿಯತೆಯಿಂದ ಗಣ್ಯರ ಸದಭಿಪ್ರಾಯಗಳನ್ನು ಪಡೆಯಲು ಪತ್ರಿಕೆ ಅರ್ಹವಾಯಿತು. ೧೯೨೬ರ ಡಿಸೆಂಬರ್ ಸಂಚಿಕೆಯ ಪುಟ ೩೦ರಲ್ಲಿ "ಕುರುಬ ಮಹಾಜನಗಳ ಅಭಿವೃದ್ಧಿಗಾಗಿ ಬಹಳ ಪ್ರಯತ್ನ ಪಡುತ್ತಲಿರುವ ಮ॥ ಎಂ.ಎನ್. ಲಿಂಗಪ್ಪನವರು ಆರ್ಯಾವರ್ತದೇಶವನ್ನು ಅಧೋಗತಿಗೆ ತರುತ್ತಲಿರುವ ಜಾತಿಭೇದವೆಂಬ ಮೂಢತ್ವವನ್ನು ಖಂಡನೆ ಮಾಡಿ ಜಗದಾದಿ

ಕಾಲದಿಂದಲೂ ಐಶ್ವರ್ಯ, ವಿದ್ಯಾ, ವಿವೇಕ, ವಿನಯ, ಐಕ್ಯತೆ, ಘನತೆ, ಪರಿಶುದ್ಧತೆ, ಸಕಲಶಾಸ್ತ್ರ ವಿಜ್ಞಾನ ಸಂಪನ್ನತೆ ಮುಂತಾದ ಅತ್ಯುತ್ತಮ ನಾಗರಿಕತೆಯ ಶಿಖರಕ್ಕೇರಿ ಮೆರೆಯುತ್ತಿದ್ದ. ಈ ಭರತಖಂಡಸ್ಥ ಆರ್ಯೋತ್ತಮರಾದ ಕುರುಬ ಮತದ ಜನರಿಗೆ ಪ್ರಕೃತದಲ್ಲಿ ಪ್ರಾಪ್ತವಾಗಿರುವ ಹೀನಸ್ಥಿತಿಯನ್ನು ತಪ್ಪಿಸಲು ಮನೋನಿಶ್ಚಯ ಮಾಡಿಕೊಂಡು ಜಗತ್ಪಾವನವೆಂಬ ಮಾಸಪತ್ರಿಕೆಯನ್ನು ಪ್ರಕಟಿಸಲು ಪ್ರಾರಂಭ ಮಾಡಿರುವರು. ಅಜ್ಞಾನ ನಿವಾರಣೆ, ಸ್ವಾರ್ಥತೆ ಮತ್ತು ಪರದೂಷಣೆಯ ಖಂಡನೆ, ಸ್ವತಂತ್ರ ಜೀವನದ ಅವಶ್ಯಕತೆಯ ನಿರೂಪಣೆ, ಈ ಜಾತಿಯ ಮಹೀಪಾಲಕರ ಜೀವನದ ಚರಿತ್ರೆಗಳ ಪ್ರಕಟಣೆ ಇವೇ ಮೊದಲಾದ ಮಾರ್ಗಗಗಳಲ್ಲಿ ಇವರು ತಮ್ಮ ಸದುದ್ದೇಶವನ್ನು ನೆರವೇರಿಸಬೇಕೆಂದಿರುವರು. ಇವರ ಪ್ರಯತ್ನಗಳಿಗೆ ದೇವರು ವಿಜಯವನ್ನುಂಟುಮಾಡಲೆಂದು ನಾವು ಕೋರುತ್ತೇವೆ." ಎಂಬ ಹೇಳಿಕೆಯಿಂದ ಪತ್ರಿಕೆಯ ಉದ್ದೇಶ ಗುರಿ ಮತ್ತು ಸಾಧನೆಗಳು ಗಮನಕ್ಕೆ ಬರುತ್ತವೆ. ಅಲ್ಲದೆ ಪತ್ರಕರ್ತರು, ಚಿತ್ರದುರ್ಗದ ಪಾಳೆಯಗಾರರು ಕರ್ನಾಟಕ ಬ್ರಾಹ್ಮಣರ ಚಲುವಯ್ಯನವರು, ಒಕ್ಕಲಿಗರ ಪಾಳ್ಯ ಮುನಿಯಪ್ಪನವರು ಮತ್ತು ಕರಿಸಿದ್ದಪ್ಪ ಒಡೆಯರ ಅವರು ಪ್ರೋತ್ಸಾಹಿಸಿದುದನ್ನು (೧೯೨೬ ಡಿಸೆಂಬರ್ ಪುಟ ೨೩) ಉಲ್ಲೇಖಿಸಿದ್ದಾರೆ. ಪತ್ರಿಕೆಯ ಸ್ವರೂಪದ ಕಲ್ಪನೆ ದೃಷ್ಟಿಯಿಂದ ಸಂಚಿಕೆಯಲ್ಲಿ ಬಂದ ಪ್ರಕಟಣೆಗಳು ಪ್ರಸ್ತುತವಾಗಿವೆ. ಸಂಪಾದಕರ ಉನ್ನತ ವಿಚಾರಗಳನ್ನು ಅವರ ಬರಹಗಳು ಪ್ರತಿಬಿಂಬಿಸುತ್ತವೆ.

ಕುರುಬರ ಇತಿಹಾಸದಲ್ಲಿ ನಡೆದ ಘಟನೆಗಳನ್ನು ತಿಳಿಯುವುದು ಮುಖ್ಯವಾದುದರಿಂದ ಶಾಸನಗಳನ್ನು, ವೇದ ಪುರಾಣ ಲೇಖನದ ರೂಪದಲ್ಲಿ ಪ್ರಕಟಿಸಿದ್ದಾರೆ. ಇದು ಪ್ರಾಚೀನ ಸಾಮಾಜಿಕ ಪರಿಸ್ಥಿತಿ ಹೇಗಿತ್ತೆಂದು ಪರಿಚಯಿಸುತ್ತದೆ. ಚಾರಿತ್ರಿಕ ಲೇಖನಗಳನ್ನು, ವ್ಯಕ್ತಿ ಚರಿತ್ರೆಗಳನ್ನು ಮತ ಸಂಬಂಧಿ ಮಹತ್ವದ ಸುದ್ದಿಗಳನ್ನು ಪ್ರಕಟಿಸಿ ಸಾರ್ವಜನಿಕರ ಗಮನವನ್ನು ಸೆಳೆದರು. ಟೀಕೆ, ಟಿಪ್ಪಣಿ, ಸ್ಫುಟ ವಿಚಾರಗಳು ಹೃದ್ಗತ ಆತ್ಮವಿವರಣೆ ಹೆಸರಿನಲ್ಲಿ ಸಂಪಾದಕೀಯ ಜಗತ್ಪಾವನದಲ್ಲಿ ಪ್ರಕಟಿಸುತ್ತಾ ಬಂದಿದ್ದಾರೆ. ಪ್ರಚಲಿತ ಪರಿಸ್ಥಿತಿಗೆ ಸಂಬಂಧಪಟ್ಟ ಸಾಮಾಜಿಕ ಧಾರ್ಮಿಕ ಐತಿಹಾಸಿಕ ಲೇಖನಗಳಿಗೆ ಇಂಬು ಕೊಡಲಾಗಿದೆ.

## ಪತ್ರಿಕೆಯ ವಿಷಯ ವೈವಿಧ್ಯ

ವೇದಗಳ ನೆಲೆಯಲ್ಲಿ ಸ್ತ್ರೀ ಪುರುಷರ ವಿವರ ವಯೋನಿರ್ಣಯ ದ್ರೋಣ ಅಶ್ವತ್ಥಾಮರ ವಿಚಾರ, ಶೃಂಗೇರಿ ಮಠದೊಂದಿಗೆ ಕುರುಬ ಜನಾಂಗದ ಸಂಬಂಧ, ಕೊಹಿನೂರ್ ರತ್ನದ ಪ್ರಭಾವ ಮತ್ತು ಮಹತ್ವ, ಕುರುಬ ಜನಾಂಗವು ಪೂರ್ವದ ಶ್ರೇಷ್ಠತೆಯ ಜೀವನ ಪಡೆಯಲು ಕೈಕೊಳ್ಳಬೇಕಾದ ಕೆಲಸಗಳು, ಕುರುಬರಲ್ಲಿಯ ಒಳಜಗಳಗಳು, ೧೯೨೮ ಜುಲೈ ೧ "ಕುರುಬರ ಪತ್ರಿಕೆ"ಯಲ್ಲಿ "ಕುರುಬರು ಏಕೆ ಲಿಂಗವನ್ನು ಕಟ್ಟಿಕೊಳ್ಳಬೇಕು" ಎಂಬ ಎ.ಆರ್. ಹನುಮಂತಯ್ಯನವರ ಲೇಖನದ ಮಾಹಿತಿ ವೇದ ಪುರಾಣಗಳ ಮೂಲಕ ಪ್ರಕ್ಷಿಪ್ತ ಶ್ಲೋಕಗಳನ್ನು ಸೇರಿಸಿ ಕುರುಬರನ್ನು ಅನಾರ್ಯರೆಂದು ಚಾಂಡಾಲರೆಂದು ಚಿತ್ರಿಸಲು ಪ್ರಯತ್ನಿಸಿರುವ ನೀಚ ಕಾರ್ಯಗಳ ಖಂಡನೆ, ಸೂರ್ಯವಂಶ, ಚಂದ್ರವಂಶ ಮತ್ತು ಯದುವಂಶಗಳಿಂದ ಹುಟ್ಟಿದ ಕುರುಬ ಕುಲದ ವಿವರ, ಇಂಥ ಪೌರಾಣಿಕ ಹಿನ್ನೆಲೆಯ ಸಂಗತಿಗಳನ್ನು ಓದುಗರ ಗಮನಕ್ಕೆ ತರಲು ಪ್ರಯತ್ನಿಸಲಾಗಿದೆ.

ಸಮಾಜದ ಮುಖಂಡರು, ಮತಬಾಂಧವರು, ಶಿವಾಧೀನರಾಗಲು ಅವರಿಗೆ ಪತ್ರಿಕೆಯ ಮೂಲಕ ಶ್ರದ್ಧಾಂಜಲಿಯನ್ನು ಅರ್ಪಿಸಲಾಗಿದೆ. ಬಾಲ್ಯವಿವಾಹ ಖಂಡನೆ, ಜನಾಂಗದ ಸ್ತ್ರೀ ಪುರುಷರು ಗಮನಿಸಬೇಕಾದ ಮುಖ್ಯ ವಿಚಾರಗಳನ್ನು ಸಮಾಜಕ್ಕೆ ತಲುಪಿಸುವ ಪ್ರಯತ್ನವನ್ನು ಹೊಂದಿದ್ದಿತು.

'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಎಂಬ ಕೃತಿಯಲ್ಲಿ ಡಾ. ವೆಂಕಟಸುಬ್ಬಯ್ಯನವರು ಬಿಜ್ಜಳನು ಶಿವಪೂಜಕನಾದ ಶೈವನೇ ಹೊರತು ಜೈನನಲ್ಲ ಎಂದು ನಿರ್ಣಯಿಸಿದುದನ್ನು ೧೯೩೧ರ ಡಿಸೆಂಬರ್ ಸಂಚಿಕೆಯ ಪುಟ ೧೩ರಲ್ಲಿ ಉಲ್ಲೇಖಿಸಲಾಗಿದೆ. ವೈಷ್ಣವ ವೈಷ್ಣವಮತ ಸ್ಥಾಪಕರಾದ ೧೨ನೆಯ ಶತಮಾನದ ರಾಮಾನುಜಾಚಾರ್ಯರು, ಪಲ್ಲವರಾದ ದ್ರೋಣ ಅಶ್ವತ್ಥಾಮರು, ರೈಸ್, ಫ್ಲೀಟ್, ವಿಲ್‌ಸನ್, ಎಲಿತೋವನ್, ವೆಂಕಟರಂಗೋಕಟ್ಟಿ ಮೊದಲಾದ ಪಂಡಿತರ ಕುರುಬರ ಮೂಲದ ಚರ್ಚೆ, ಚರಿತ್ರೆಯಲ್ಲಿಯ ಕಾಳಿದಾಸ, ಕೋಲ ಎಂಬ ಕುರುಬನಿಂದ ಚೋಳ ವಂಶದ ಉಗಮ. ಆನೆಗೊಂದಿಯ ಕದಂಬರು ಮೂಲತಃ ಕುರುಬರು ಎಂಬ ವಿಚಾರಗಳನ್ನು ವಿದ್ವಾಂಸರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಚಾಲುಕ್ಯರು, ಪಲ್ಲವರು, ದ್ವಾರಾವತಿಯ ಯಾದವರು ಹೊಯ್ಸಳ, ಬಲ್ಲಾಳ ಮೊದಲಾದ ರಾಜವಂಶಗಳ ಮೂಲ ಕುರುಬ ಕುಲ ಎಂದು ಹೀಗೆ ದೃಢಪಡಿಸಲಾಗಿದೆ. "ಯಾಕೆಂದರೆ ಕುರುಬರೆಂಬ ಪ್ರಸಿದ್ಧರಾದ 'ಗಹಲೋತ್'ರೆಂಬ ಕ್ಷತ್ರಿಯ ಪಂಗಡದಲ್ಲಿ ಸಾಲಂಕಿ (ಚಾಲುಕ್ಯ)ಯವರು, ರಾಠೋಡ ಕ್ಷತ್ರಿಯರೂ, ತೋಯರ್ (ಇವರಲ್ಲಿ ಜಯಚಂದನೆಂಬ ಅಮೀರದ ಅರಸನು ಪ್ರಸಿದ್ಧನು), ಚಹ್ವಾ (ಇವರಲ್ಲಿ ಡಿಲ್ಲಿಯ ಪೃಥ್ವೀರಾಜನು ಪ್ರಸಿದ್ಧನು), ಶಿಸೋದಿಯಾ (ಇವರಲ್ಲಿ ಮಲವಾರದ ರಾಣಾ ಹಾಗೂ ಛತ್ರಪತಿ ಶಿವಾಜಿ

ಇವರುಗಳು ಪ್ರಸಿದ್ಧರು) ಮುಂತಾದ ಒಳಭೇದಗಳಿರುವವೆಂದು ಜಾತಿ ಅನ್ವೇಷಣ ಪುಸ್ತಕದ ೧೧೬ ಪುಟದಲ್ಲಿ ವಿಶದೀಕರಿಸಲ್ಪಟ್ಟಿದೆ. ಈಗ ಗಹಲೋತ್ ಕ್ಷತ್ರಿಯರು ಕುರುಬ (ಷಪ್ಪರ್ಡ)ರೆಂಬುದಾಗಿ ಮಿ॥ ಟಾಡ್ ದೊರೆಯವರು ರಾಜಸ್ಥಾನ ಇತಿಹಾಸದ ೮ನೇ ಪುಟದಲ್ಲಿ ಬರೆದಿರುವರು" ಹಂಪಿಯ ವಿಜಯನಗರವು ಕುರುಬರೆನ್ನಲಾದ ಹಕ್ಕಬುಕ್ಕರಿಂದ ಪ್ರಾರಂಭವಾದ ಮಾಹಿತಿ ನೀಡಲಾಗಿದೆ. ಮೆ॥ ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್ "ದಿ ಸೋರ್ಸ್ ಆಫ್ ವಿಜಯನಗರ" ವೆಂಬ ಚರಿತ್ರೆಯ ೩೦೩ನೆಯ ಪುಟದಲ್ಲಿ ಒಂದು ಶಾಸನವನ್ನು ದಾಖಲಿಸಿ ಅದರಲ್ಲಿ "ಅತ್ತ ಉತ್ತರ ದೇಶದೊಳ್ ತುಂಗಭದ್ರಾ ತೀರದೊಳ್ ವಿದ್ಯಾನಗರಿಯನಾಳ್ದ ಬುಕ್ಕರ್ಮೊದಲಾದ ಕುರುಬರಾಯರು" ಎಂಬ ಹೇಳಿಕೆಯಿಂದ ವಿಜಯನಗರದ ಸಾಮ್ರಾಜ್ಯದ ಮೊದಲ ರಾಜರು ಕುರುಬರು ಎಂಬ ವಿಚಾರವನ್ನು ವಿವರಿಸಲಾಗಿದೆ (೧೯೨೭ ಜುಲೈ-ಅಕ್ಟೋಬರ್ ಪುಟ ೨೦).

ಪತ್ರಿಕೆಯ ಪ್ರಚಾರಕ್ಕೆ ತೊಡಗಿಸಿಕೊಂಡ ಮತಾಭಿಮಾನಿಗಳ ಪಾತ್ರದ ಪ್ರಕಟಣೆ, ಸಂಪಾದಕರ ಆಶ್ವಾಸನೆ, ಆದ್ಯ ಆರ್ಯ ಜನಾಂಗದಲ್ಲಿ ಕುರುಬರೇ ಅತಿ ಉತ್ತಮ ಸ್ಥಿತಿಯಲ್ಲಿದ್ದರೆಂಬುದನ್ನು ದಾಖಲೆಗಳ ಮೂಲಕ ಸ್ಪಷ್ಟಪಡಿಸಲಾಗಿದೆ. ಹಾಲುಮತದ ಪ್ರಾಚೀನ ಕೇಂದ್ರವಾದ ಸರೂರು, ಅಲ್ಲಿಯ ಶಾಂತಮುತ್ತಯ್ಯ, ಪದ್ಮಗೊಂಡನಿಂದ ಉಗಮಗೊಂಡ ಹಾಲುಮತ, ಪಲ್ಲವರು, ಆಂಧ್ರರಾಜರು ಹಂಡೇ ಕುರುಬರಲ್ಲವೇ ? ಎಂಬ ಲೇಖನಗಳನ್ನು ಆಧಾರ ಸಹಿತ ಪ್ರಕಟಿಸಿರುವುದನ್ನು ಈ ಪತ್ರಿಕೆಯಲ್ಲಿ ಕಾಣಬಹುದು.

**ಸಮಕಾಲೀನ ಸಂದರ್ಭದ ಘಟನೆಗಳು**

ಸಮಾಜದ ಪ್ರಚಲಿತ ಪರಿಸ್ಥಿತಿಗಳನ್ನು ಪ್ರಚಾರ ಮಾಡುವುದು ಪತ್ರಿಕೆಯ ಉದ್ದೇಶಗಳಲ್ಲಿ ಒಂದಾಗಿದೆ. ಮತಬಾಂಧವರಾದ ಮರುದೇವಪ್ಪಯ್ಯ ಒಡೆಯರ ಅವರ ಭಾವಚಿತ್ರಗಳನ್ನೂ ವಂಶಚರಿತ್ರೆಯನ್ನೂ, ಜೀವಮಾನ ಚರಿತ್ರೆಯನ್ನು ಪ್ರಕಟಿಸುವುದಾಗಿ ಎಮ್.ಎನ್. ಲಿಂಗಪ್ಪನವರು (೧೯೨೭ ಜುಲೈ-ಅಕ್ಟೋಬರ್ ಪುಟ ೪೯) ತಿಳಿಸಿದ್ದಾರೆ. ೧೧-೧೧-೧೯೨೭ ರಂದು ಕುರುಬರ ಸಂಘದಿಂದ ಜಿ. ಮುನಿಯಪ್ಪ ಅವರು ಸಂಪಾದಕ ಎಮ್.ಎನ್. ಲಿಂಗಪ್ಪನವರಿಗೆ ಬರೆದ ಕ್ಷಮಾಪಣಾ ಪತ್ರವನ್ನು ಉಲ್ಲೇಖಿಸಲಾಗಿದೆ. ಐ.ಎಚ್. ದೊಡ್ಡಯ್ಯನವರು ಬಿ.ಎ. ವಿದ್ಯಾರ್ಥಿಯಾಗಿರುವಾಗಲೇ ನಾಲ್ಕೈದು ಕಥೆಗಳನ್ನು ಮತ್ತು ನಾಟಕಗಳನ್ನು ಬರೆದುದನ್ನು ಜಗತ್ಪಾವನ ಪತ್ರಿಕೆಯಲ್ಲಿ ದಾಖಲಿಸಲಾಗಿದೆ. 'ಕಹಳೆಯ ಕೂಗು' ಎಂಬ ೧೨ ಪದ್ಯಗಳ ಭಾಮಿನಿ ಷಟ್ಪದಿ ಕಾವ್ಯವನ್ನು ೧೯೨೭ ಜುಲೈ ಅಕ್ಟೋಬರ್ ಪತ್ರಿಕೆಯ ಪುಟ ೫೧ರಲ್ಲಿ ದಾಖಲಿಸಲಾಗಿದೆ. ಕುರುಬ ಕುಲದ ಭೂತಕಾಲದ ವೈಭವಪೂರಿತ ಚರಿತ್ರೆಯನ್ನು ಕಾವ್ಯದಲ್ಲಿ ಕಟ್ಟಿಕೊಟ್ಟು ಜಾಗೃತಿಗಾಗಿ ಕವಿ ಕರೆ ನೀಡಿದುದನ್ನು ಕೆಳಗಿನ ಪದ್ಯಗಳಿಂದ ಉದಾಹರಿಸಬಹುದು.

ತೆರೆದು ನಿಮ್ಮಯ ಕಣ್ಗಳಂ ಅವ
ಸರದಿ ನೋಡಿರಿ, ನಿಮ್ಮ ಕುಲದೊಳು
ಹಿರಿಯ ತೆರೆಯೊಳು ಮೆರೆದ ಮನುಜರ ಜನ್ಮ ಚರಿತೆಯನು
ಅರಿತುಕೊಳ್ಳುತಲಿವರಜನ್ಮಸು
ಚರಿತನು ಬಿಡದೋದುತಲಿ ಅವ
ದೊರೆವ ಮಾರ್ಗದಿ ನಡೆದು ಪೋದೊಡೆಸುಪಿವು
ಕಾಬುವುದೈ
(॥ ೧ ॥, ಪುಟ ೫೧)

ಅನುನಯದಿ ಕೇಳಿ ಜಗತ್ಪಾ
ವನವು ನಮ್ಮೀ ಕುರುಬವಂಶದ
ಜನರ ನಿದ್ರೆಯ ಕಳೆಯ ಬೆಳಗಿನ ಕಹಳೆಯಂದದಲಿ ಇನನು
ಉದಯಿಸಿಯೆ ರಜನಿಕಾಂತೆಯ
ಬನದ ಪೋಡಿತ್ಯೈ ಏಳಿ ಕೇಳಿರಿ
ಜನರೆ ನಿದ್ರೆಯ ದೂರ ಮಾಡಿರೆಸುತ್ತ ದೊರೆಯುವದು
(॥ ೧ ॥, ಪುಟ ೫೨)

೧೯೭೨ ಜಲೈ-ಅಕ್ಟೋಬರ್ ಪುಟ ೬೫ರಲ್ಲಿ ಕೋಹಿನೂರ ವಜ್ರದ ಚರ್ಚೆಯೊಂದಿಗೆ ಅದು ಬ್ರಿಟಿಷ ಪ್ರಭುಗಳವರ ಆಭರಣಗಳ ಓತೇರಿ ಲಂಡನ್ ಟವರಿನಲ್ಲಿರುವದನ್ನು ವಿವರಿಸಲಾಗಿದೆ. ಸಂಘದ ಮೀಟಿಂಗ್‌ನ ವಿಷಯ ಕುರಿತಾಗಿ ದಿನಾಂಕ ೪-೩-೨೮ನೇ ಭಾನುವಾರದ ಪ್ರಾತಃಕಾಲ ಎಂಟು ಗಂಟೆಯ ಸಮಯದಲ್ಲಿ ಬೆಂಗಳೂರು ಕುರುಬರ ಸಂಘದಲ್ಲಿ ಮೀಟಿಂಗ್ ಸೇರಿದ ಶ್ರೀ ಜಿ. ಸಂಜೀವಯ್ಯನವರು, ಜಿ. ಮುನಿಯಪ್ಪನವರು, ಎಂ. ಮುನಿಸಾಯಪ್ಪನವರು, ಎಂ. ಎಲ್ಲಪ್ಪನವರು, ಬಿ. ವೆಂಕಟಪ್ಪನವರು, ಸೀಲಿ ವೆಂಕಟಪ್ಪನವರು ಮುಂತಾದವರ ನೇತೃತ್ವದಲ್ಲಿ ಕುರುಬರ ವಿ.ಆರ್. ಹನುಮಂತಯ್ಯನವರು ಅಧ್ಯಕ್ಷರನ್ನಾಗಿ ಇದ್ದುದನ್ನು ತಿಳಿಸಲಾಗಿದೆ. ಅಲ್ಲದೆ ವಿ.ಆರ್. ಹನುಮಂತಯ್ಯನವರು ಕುರುಬರ ಸಂಘಕ್ಕೆ ಲೈಫ್ ಮೆಂಬರಾಗಲು ೧೫೦ ರೂ.ಗಳಿಗೆ ಬದಲಾಗಿ ತಮ್ಮ ೨೦೦ 'ಕುರುಬರ ಚರಿತ್ರೆಯ' ಕೃತಿಗಳ ಪ್ರತಿಗಳನ್ನು ಕೊಡುವುದಾಗಿ ಬರೆದಿದ್ದ ಕಾಗದವನ್ನು ಓದಿ ವಂದನೆ ಸಲ್ಲಿಸಿ ಅವರನ್ನು ಸಂಘಕ್ಕೆ ಲೈಫ್ ಮೆಂಬರರನ್ನಾಗಿ ಸೇರಿಸಿಕೊಳ್ಳಲ್ಪಟ್ಟ ವಿವರ ಹೊಂದಿದೆ. "ನಮ್ಮ ಕುರುಬ ಜಗದ್ಗುರುಗಳವರು ನಮಗೆ ದಯಪಾಲಿಸಿದ ಶ್ರೀಮುಖ" ಎಂಬ ಶೀರ್ಷಿಕೆಯಲ್ಲಿ ಸರೂರ ಶಾಂತಮುತ್ತಯ್ಯ ಒಡೆಯರ ಕರಿಸಿದ್ದಪ್ಪಯ್ಯ

ಒಡೆಯರ, ಚಳ್ಳಕೆರೆ ತಾಲ್ಲೂಕು ದೊಡ್ಡೇರಿ ಸಿಂಹಾಸನಾಧಿಪತಿಗಳಾದ ರಂಗಾಪುರದ ಮಠದ ಶ್ರೀ ದೊಡ್ಡ ರೇವಪ್ಪಯ್ಯ ಒಡೆಯರ ಮುಂತಾದವರ ವಿಷಯಗಳನ್ನು ಚರ್ಚಿಸಲಾಗಿದೆ (೧೯೨೬ ಡಿಸೆಂಬರ್ ಪುಟ ೨೦) ಪ್ರಾಚೀನ ಒಡೆಯರುಗಳಾದ ಸರೂರಿನ ಶಾಂತಮುತ್ತಯ್ಯನ ಹೆಸರು ಹೇಳಿಕೊಂಡು ಚಂದಾ ವಸೂಲಿ ಮಾಡಿರುವ ಮೋಸದ ಪ್ರಕರಣವನ್ನು ಓದುಗರ ಗಮನಕ್ಕೆ ತಂದು ಚರ್ಚಿಸಿ ಸಮಾಜ ಬಾಂಧವರನ್ನು ಸತ್ಯಶುದ್ಧರಾಗಿ ಬದುಕಲು ಕರೆ ನೀಡಿ ಕುರುಬ ಜನಾಂಗದ ಸ್ತ್ರೀ ಪುರುಷರೆಲ್ಲರೂ ಗಮನದಲ್ಲಿಡಬೇಕಾದ ಅನೇಕ ವಿಚಾರಗಳನ್ನು ಲೇಖನ ರೂಪದಲ್ಲಿ ನೀಡಿದ್ದಾರೆ. ಇಂಥ ಅನೇಕ ಸಮಕಾಲೀನ ಘಟನೆಗಳನ್ನು ದಾಖಲಿಸಿರುವುದು ಐತಿಹಾಸಿಕ ಮಹತ್ವವುಳ್ಳದ್ದಾಗಿವೆ.

ಸಂಪಾದಕರ ಗುರಿ ಇಷ್ಟಕ್ಕೆ ನಿಲ್ಲದೆ ಜನಾಂಗ ಪ್ರಜ್ಞೆಗಳನ್ನು ಸಂವರ್ಧಿಸುತ್ತ ನಾಡಿನ ಸರ್ವಾಂಗೀಣ ಪ್ರಗತಿಗೆ ದುಡಿಯಬೇಕು. ಜನತೆ ಸರ್ವತೋಮುಖ ಏಳಿಗೆ ಪಡೆಯಬೇಕು. ಪ್ರಜ್ಞಾವಂತ ಪ್ರಜೆಗಳಾಗಿ ಬದುಕಿನ ವಿವಿಧ ರಂಗಗಳಲ್ಲಿ ವಿಕಾಸ ಹೊಂದಿ ಪ್ರಗತಿಗೆ ಸಿದ್ಧರಾಗಬೇಕು. ಸಮಕಾಲೀನ ಜೀವನದ ಎಲ್ಲಾ ಆಯಾಮಗಳನ್ನು ಸಾರಾಭೂತವಾಗಿ ಅರ್ಥೈಸಿಕೊಳ್ಳಬೇಕು. ಸಾಮಾಜಿಕ ರಾಜಕೀಯ ಜಾಗೃತಿ ಹೊಂದಬೇಕು ಎಂಬಿತ್ಯಾದಿ ಘನವಾದ ಉದ್ದೇಶದಿಂದ ಪ್ರೇರಿತವಾಗಿ ತಮ್ಮ ಈ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಎಂ.ಎನ್. ಲಿಂಗಪ್ಪನವರ ಜಗತ್ಪಾವನ ಪತ್ರಿಕೆ ನೆರವಾಗಿದೆ.

### ಅವಲೋಕನ

ಲಭ್ಯವಾದ ಒಂದು ದಶಕದ ಸಂಚಿಕೆಗಳಿಂದ ಅದು ನಡೆದುಬಂದ ಹಾದಿಯಲ್ಲಿ ತನ್ನ ಶ್ರೇಷ್ಠತೆಯ ಮಟ್ಟವನ್ನು ಕಾಯ್ದುಕೊಂಡಿರುವುದು ಅಸಾಮಾನ್ಯವೇ ಸರಿ. ತನ್ನ ಇತಿಮಿತಿಯೊಳಗೆ ಒಂದು ಮತದ ಪ್ರಾಚೀನತೆ, ಪರಂಪರೆ, ಇತಿಹಾಸ, ಸಾಂಸ್ಕೃತಿಕ ವಿಚಾರಗಳು ಸಮಕಾಲೀನ ಸಂದರ್ಭದ ಸಮಸ್ಯೆ ಮತ್ತು ಪರಿಹಾರೋಪಾಯಗಳು ಹೀಗೆ ವಿಭಿನ್ನ ದೃಷ್ಟಿಕೋನದ ವಿಚಾರಗಳನ್ನು ಸಮಾಜದ ಗಮನಕ್ಕೆ ತರುವಲ್ಲಿ ಯಶಸ್ವಿಯಾಗಿದೆ. ಮತೋದ್ಧಾರಕ್ಕಾಗಿ ಜನ್ಮ ತಳೆದು ತನ್ನ ಉದ್ದೇಶ ಗುರಿ ಸಾಧಿಸಿ ಹಾಲುಮತದ ಪತ್ರಿಕಾರಂಗಕ್ಕೆ ದೀಪಸ್ತಂಭವಾಗಿದೆ.

ಹಾಲುಮತ ಧರ್ಮ ಸಂಸ್ಕೃತಿ, ಸಮಾಜ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ಒಳಗೊಂಡು ತನ್ಮೂಲಕ ಧರ್ಮವನ್ನು ಪ್ರಚಾರ ಮಾಡಿತು. ಮತದ ಮಹಾಪುರುಷರ ಧರ್ಮ ಸಂಬಂಧಿಸಿದ ರಾಜಮನೆತನ, ಶಾಸನ ಲೇಖನಗಳನ್ನು ಛಾಪಿಸಿ ನೂತನ ಸಂಶೋಧನೆಗೆ ಅವಕಾಶ ಮಾಡಿಕೊಟ್ಟಿತು. ಅನೇಕ ಹೊಸ ಹೊಸ ಸಂಗತಿಗಳ ಅಮೂಲ್ಯ ಸಾಹಿತ್ಯವನ್ನು ಬೆಳಕಿಗೆ ತಂದಿತು. ಧರ್ಮ ಸಾಹಿತ್ಯ ಕುರಿತ ಸ್ವತಂತ್ರ ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಿ ಪ್ರಚುರಪಡಿಸಿ ಅನೇಕ ಸಂಶೋಧಕರನ್ನು, ಕವಿಗಳನ್ನು, ಸಾಹಿತಿಗಳನ್ನು ಬೆಳಕಿಗೆ ತಂದು ಲೋಕಕ್ಕೆ ಪರಿಚಯಿಸಿತು.

'ಊರು ಉಪಕಾರವರಿಯದು ಹೆಣ್ಣು ಸಿಂಗಾರವರಿಯದು' ಎಂಬ ಗಾದೆಯಂತೆ ಅಂದಿನ ದಿನಗಳಲ್ಲಿ ಉಪೇಕ್ಷೆಗೆ ಒಳಗಾಗಿದ್ದ ವಿ.ಆರ್. ಹನುಮಂತಯ್ಯ, ಶಂಬಾ ಜೋಶಿ, ಎಮ್.ಎನ್. ಲಿಂಗಪ್ಪ ಮುಂತಾದ ಮಹನೀಯರು ಸತ್ಯದ ಪ್ರಚಾರಕ್ಕಾಗಿ ತಮ್ಮ ಜೀವಮಾನವನ್ನೇ ತೇಯ್ದವರು. ಅವರ ಕ್ರಿಯಾಶೀಲ ಬದುಕು ಇಂದಿನ ಯುವಜನತೆಗೆ ಮಾದರಿಯಾಗಿ ನಿಲ್ಲಬಲ್ಲದು. ಮತಬಾಂಧವರಲ್ಲಿ ಶ್ರೀಮಂತ ಚರಿತ್ರೆಯನ್ನು, ಸತ್ಯಾಂಶಗಳನ್ನು ತಲುಪಿಸಲು ಅನೇಕ ಕಷ್ಟನಷ್ಟ ಅನುಭವಿಸಿದರೂ ಕುಂಟುತ್ತ ಬೀಳುತ್ತ ಸ್ಥಗಿತಗೊಳ್ಳದೆ ಆಯ್ದ ಮಾರ್ಗದಲ್ಲಿ ಪ್ರಯತ್ನಗಳನ್ನು ನಡೆಸಿ ಯಶಸ್ವಿಯಾಗಿದೆ. ಪತ್ರಿಕೆಯ ಸಂಚಿಕೆಗಳನ್ನು ಪರಿಶೀಲಿಸಿದಾಗ ಈ ಪತ್ರಿಕೆಯು ಸಮಾಜ ಜನರ ನಡುವಿನ ಕೊಂಡಿಯಾಗಿ ಕೆಲಸ ನಿರ್ವಹಿಸಿದೆ ಯೆಂಬುದು ಗಮನಿಸಬಹುದು.

ಪತ್ರಿಕೆಯ ಏಳ್ಗೆಗಾಗಿ ಸಂಪಾದಕರು ಪಟ್ಟ ಶ್ರಮದ ಕಲ್ಪನೆ ಅಮೋಘವಾದುದು. ಪ್ರಗತಿಪರ ದೃಷ್ಟಿಯಿಂದ, ಸ್ವತಂತ್ರ ವಿಚಾರ ಸರಣಿಯಿಂದ ಲೇಖನಗಳನ್ನು ಪ್ರಕಟಿಸಿದ ಎಮ್.ಎನ್. ಲಿಂಗಪ್ಪ ಅವರಲ್ಲಿ ಪ್ರೌಢವಾದ, ವಿಶಾಲವಾದ ಪರಾಮರ್ಶೆಯನ್ನು ಕಾಣುತ್ತೇವೆ. ಪ್ರತಿ ಸಂಚಿಕೆಯ ಟಿಪ್ಪಣಿಗಳನ್ನು ಗಮನಿಸಿದಾಗ ಸಂಪಾದಕರ ಸಾಮಾಜಿಕ ಕಳಕಳಿ, ರಾಜಕೀಯ ವಿವೇಚನೆ, ಮತೀಯ ಹಿತರಕ್ಷಣೆ, ಜನಕಲ್ಯಾಣ ದೃಷ್ಟಿ ಸುವ್ಯಕ್ತವಾಗುತ್ತದೆ. ನಿರೀಕ್ಷಿತ ಮಟ್ಟದ ಜಾಗೃತಿ ಕಂಡುಬರದಿದ್ದಾಗ ಎಮ್.ಎನ್. ಲಿಂಗಪ್ಪನವರು ನಿರ್ಭೀತವೂ, ಉದಾತ್ತವೂ ಆದ ರೀತಿಯಲ್ಲಿ ತಮ್ಮ ವಿಚಾರಧಾರೆಗಳನ್ನು ಪತ್ರಿಕೆಗಳಲ್ಲಿ ಮೂಡಿಸುತ್ತಿದ್ದರು.

'ಎಲ್ಲ ದಾರಿಗಳು ರೋಮಿನ ಕಡೆಗೆ' ಎಂಬಂತೆ ಎಲ್ಲ ಕೆಲಸಗಳು ಮತೋದ್ಧಾರಕ್ಕಾಗಿ ಎಂದು ಲಿಂಗಪ್ಪ ಅವರು ಈ ನಿಟ್ಟಿನಲ್ಲಿ ಅನೇಕ ಕಷ್ಟನಷ್ಟಗಳ ಮಧ್ಯೆಯೂ ಎದೆಗುಂದದೆ ಶ್ರದ್ಧೆ–ನಿಷ್ಠೆ–ಛಲಗಳನ್ನು ಹೊಂದಿದ್ದರು. ಪತ್ರಿಕಾ ಕ್ಷೇತ್ರವನ್ನೂ ಪ್ರಬುದ್ಧವಾಗಿ ಬೆಳೆಯದೇ ಇದ್ದ ಕಾಲದಲ್ಲಿ ಈ ಪತ್ರಿಕೆ ಹುಟ್ಟಿಕೊಂಡಿತು. ಇಂದಿನ ಪ್ರಕಟಣಾ ಸೌಲಭ್ಯ ಸುಮಾರು ನೂರು ವರ್ಷಗಳ ಹಿಂದೆ ಇದ್ದಿರಲಿಲ್ಲ. ಕಾಲಕಾಲಕ್ಕೆ ಎಡರು ತೊಡರುಗಳನ್ನು ಬಂದರೂ ಅಂಥ ಪರಿಸ್ಥಿತಿಯನ್ನು ಲೆಕ್ಕಿಸದೆ 'ಜಗತ್ಪಾವನ ಪತ್ರಿಕೆ' ಬೆಳವಣಿಗೆ ಹೊಂದಿತು.

ವಿ.ಆರ್. ಹನುಮಂತಯ್ಯನವರ ಭಾರತಪುತ್ರ, ಕುರು ವಿಜಯ, ಕುರುಬರ ಕುಲದರ್ಪಣ, ಕುರುಕುಲಪ್ರಭಾ, ಕುರುಬರ ಕುಲಕೀರ್ತಿ, ಸ್ವಮತಬಂಧು ಇಂಥ ಅನೇಕ ಪತ್ರಿಕೆಗಳ ಮೂಲಕ ಪುರಾತನ ಪರಂಪರೆಯನ್ನು ಪರಿಚಯಿಸಿ, ಮತ ಬಾಂಧವರನ್ನು ಕೀಳರಿಮೆಯಿಂದ ಹೊರಬರುವಂತೆ ಕರೆ ನೀಡಿ ಸ್ವಾಭಿಮಾನ ತುಂಬಲು ಪ್ರಯತ್ನಿಸಿರುವುದನ್ನು ಈ ಪತ್ರಿಕೆಯ ಮೂಲಕ ತಿಳಿಯಬಹುದು.

ಪ್ರಕಟಿಸಿದ ವಿಷಯಗಳನ್ನು ವೇದ ಪುರಾಣ ಚರಿತ್ರೆ ಮೊದಲಾದವುಗಳಿಂದ ಸಾಕ್ಷಾಧಾರಗಳನ್ನು ನೀಡಿ ಸ್ಪಷ್ಟಪಡಿಸಿದ್ದಾರೆ. ಧರ್ಮಜಾಗೃತಿಯಲ್ಲಿ ಧಾರ್ಮಿಕ ಕೃತಿಗಳ ಪಾತ್ರಗಳಿಂದ ಮನದಟ್ಟು ಮೂಡಿಸುವಲ್ಲಿ ಸಂಪಾದಕರು ಸಫಲರಾಗಿದ್ದಾರೆ. ಹಲವಾರು ಪತ್ರಿಕೆಗಳ ವಿಮರ್ಶೆ ಶಾಸನಗಳ ಸಂಗ್ರಹ, ಆಧ್ಯಾತ್ಮ ಮುಂತಾದವುಗಳ ವಿಡಂಬನೆ ಇಲ್ಲಿದೆ. ಸಂಪಾದಕರ ಆರೋಗ್ಯಕರ ಮನಸ್ಸು ಸಮಾಜದ ಹಿತಚಿಂತನೆ ಕಾಪಾಡುವ ತೀವ್ರವಾದ ಕಳಕಳಿ, ವಿಜ್ಞಾಪನೆ, ವಿನಂತಿ, ಕೋರಿಕೆ, ಚಂದಾವಿವರ ಹೀಗೆ ಅನೇಕ ಅಂಶಗಳನ್ನು ಸಂಪಾದಕರು ಸಂದರ್ಭಾನುಸಾರ ವಾಚಕರ ಗಮನಕ್ಕೆ ತಂದು ಪತ್ರಿಕೆಯು ಸಂಘಟನಾ ಮನೋಭಾವದೊಂದಿಗೆ ತನ್ನ ಹಿಡಿತವನ್ನು ಕಳೆದುಕೊಳ್ಳದಂತೆ ಎಚ್ಚರವಹಿಸಿದೆ. ಹಲವು ಧ್ಯೇಯೋದ್ದೇಶಗಳನ್ನು ಈಡೇರಿಸಿಕೊಳ್ಳಲು, ಗುರಿ ತಲುಪಲು ಅನೇಕ ಮಾರ್ಗಗಳನ್ನು ಅನುಸರಿಸಿರುವುದು ಪತ್ರಿಕೆಯ ಅವಲೋಕನದಿಂದ ಅರಿಯಬಹುದು.

ಹೀಗೆ ಒಟ್ಟಾರೆ ಪತ್ರಿಕಾ ಪ್ರಪಂಚಕ್ಕೆ ಲಿಂಗಪ್ಪನವರು ಕೊಟ್ಟ ಕೊಡುಗೆ ಮಹತ್ತರವಾದುದು. ಇಂಥ ಮಹತ್ವವುಳ್ಳ ಕುರುಬರ ಜಗತ್ಪಾವನ ಪತ್ರಿಕೆಯ ಬಗೆಗೆ ಈವರೆಗೆ ದಾಖಲಿಸಿಲ್ಲ; ಇತಿಹಾಸದ ದೃಷ್ಟಿಯಿಂದ ಅದು ಅಗತ್ಯವಾದದ್ದು. ಹಾಲುಮತ ಸಾಹಿತ್ಯವನ್ನು ಅವಲೋಕಿಸಲಾಗಿ ಸ್ವಾತಂತ್ರ್ಯ ಪೂರ್ವದಲ್ಲಿದ್ದ ಮತಶ್ರದ್ಧೆ, ಮತಾಭಿಮಾನಗಳು ಸ್ವಾತಂತ್ರ್ಯ ನಂತರದಲ್ಲಿ ರಾಜಕೀಯ ಮುಖಂಡರ ಹಿಡಿತಕ್ಕೆ ಸಿಕ್ಕು ತಮ್ಮ ತಾವನ್ನು ಕಳೆದು ಕೊಂಡವೆಂದೇ ಹೇಳಬಹುದು. ೨೦ನೆಯ ಶತಮಾನದ ಆದಿಯಲ್ಲಿ ಅಲ್ಪಸ್ವಲ್ಪ ಜಾಗ್ರತಾಭಾವ ಪುನಃ ಮೂಡಿ ಅನೇಕ ಮತಸಂಬಂಧಿ ಕೃತಿಗಳು, ಪತ್ರಿಕೆಗಳು ಪ್ರಕಟಗೊಳ್ಳುತ್ತಿರುವುದು ಆಶಾದಾಯಕವಾಗಿದೆ.

ಇತ್ತೀಚಿನ ದಶಕಗಳಲ್ಲಿ (೧೯೯೨) ಕನಕದಾಸರ ಹೆಸರಿನಲ್ಲಿ ಕಾಗಿನೆಲೆಯಲ್ಲಿ ಕುರುಬ ಸಮಾಜ ಗುರು ಪೀಠವನ್ನು ಸ್ಥಾಪನೆ ಮಾಡಿತು. ಮೇಲಾಗಿ ಕನಕದಾಸರ ಜಯಂತಿಯನ್ನು ನಾಡಿನಾದ್ಯಂತ ಜಿಲ್ಲೆ, ತಾಲ್ಲೂಕು, ಗ್ರಾಮ ಮಟ್ಟದಲ್ಲಿ ಆಚರಿಸಲು ಆರಂಭಿಸಿದರು. ಹೀಗಾಗಿ ಕನಕದಾಸರ ಹೆಸರಿನಲ್ಲಿ ಕುರುಬರ ಸಂಘಟನೆ, ಸಹಕಾರ ಸಂಘ, ಬ್ಯಾಂಕ್, ಯುವಕ ಸಂಘ, ಅಧ್ಯಯನ ಪೀಠ ಮೊದಲಾದವು ಆರಂಭವಾದವು. ಹೀಗಾಗಿ ಕನಕನ ಹೆಸರಿನಲ್ಲಿ ಮಾಸಿಕ, ತ್ರೈಮಾಸಿಕ ಪತ್ರಿಕೆಗಳು ಪ್ರಕಟಗೊಂಡವು. ಇವುಗಳಲ್ಲಿ ಕನಕಸ್ಫೂರ್ತಿ, ಕನಕಕಿರಣ, ಕನಕರಶ್ಮಿ ಹೆಸರಿಸಬಹುದಾಗಿದೆ. ಈ ಪತ್ರಿಕೆಗಳಲ್ಲಿ ಸಮಾಜ ಸಂಸ್ಕೃತಿ ಬಗೆಗಿನ ಚಿಂತನಾತ್ಮಕ ವೈಚಾರಿಕ ಲೇಖನಗಳ ಕೊರತೆ ಕಾಣಬಹುದು. ಈ ಹಿನ್ನೆಲೆಯಲ್ಲಿ ಹಾಲುಮತ ಸಮಾಜ, ಸಂಸ್ಕೃತಿ, ಚರಿತ್ರೆ, ಜನಪದ, ಧಾರ್ಮಿಕ, ಆರ್ಥಿಕ ವಿಚಾರಗಳನ್ನು ಸಂಶೋಧನಾತ್ಮಕ ನೆಲೆಯಲ್ಲಿ ಚರ್ಚಿಸುವ, ವಿಶ್ಲೇಷಿಸುವ ಮಾಸಿಕ ಅಥವಾ ತ್ರೈಮಾಸಿಕ ನಿಯತಕಾಲಿಕೆಗಳ ಅಗತ್ಯವಿದೆ ಎಂಬುದನ್ನು ಪ್ರಸ್ತುತ ಸಂದರ್ಭದಲ್ಲಿ ಒತ್ತಿ ಹೇಳಬಹುದು.

(ಈ ಪ್ರಬಂಧವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಡಾ. ಎಫ್.ಟಿ. ಹಳ್ಳಿಕೇರಿ ಅವರಿಗೆ ಕೃತಜ್ಞತೆಗಳು.)

ಡಾ. ರಾಕೇಶ ಬಿ.ಸಿ.*

# ಮಧ್ಯ ಕರ್ನಾಟಕದ ನೊಳಂಬ ವೀರಶೈವ ಮಠಗಳು

ಭಾರತೀಯ ಆಧ್ಯಾತ್ಮದ ಮೌಲ್ಯ ಅಮೂಲ್ಯ. ರಸಋಷಿಗಳು ತತ್ವಜ್ಞಾನಿಗಳು ಯೋಗಿಗಳು ಮನುಕುಲಕ್ಕೆ ಕರುಣಿಸಿದ ಅಪರೂಪದ ಕಾಣಿಕೆ ಎಂದರೆ ಯೋಗ ಮತ್ತು ಆಧ್ಯಾತ್ಮಿಕ ವಿದ್ಯೆ. ಆ ಒಂದು ಪರಂಪರೆಯಲ್ಲಿ ಅನೇಕ ಮಠಮಾನ್ಯಗಳ ಉದಯವಾಯಿತು. ಈ ಒಂದು ಪರಂಪರೆ ಶತಮಾನಗಳಿಂದ ಬೆಳೆದುಕೊಂಡು ಮತ್ತು ಉಳಿಸಿಕೊಂಡು ಬಂದಿದ್ದು ಒಂದು ಗಮನಾರ್ಹವಾದ ಸಂಗತಿಯಾಗಿದೆ. ಧರ್ಮವನ್ನು ಬೋಧಿಸುವುದರ ಮೂಲಕ ಸಮಾಜದಲ್ಲಿನ ಆಗುಹೋಗುಗಳನ್ನು ಸರಿಪಡಿಸುತ್ತಾ ಅನೇಕ ಮಠಮಾನ್ಯಗಳು ತ್ರಿವಿಧ ದಾಸೋಹವನ್ನು ನೆರವೇರಿಸಿಕೊಂಡು ಬಂದರೆ ಈ ಒಂದು ಪರಂಪರೆಯಲ್ಲಿ ನೊಳಂಬ ವೀರಶೈವ ಮಠಗಳು ತನ್ನದೇ ಆದ ಕೊಡುಗೆಯನ್ನು ನೀಡುತ್ತಾ ಬಂದಿವೆ. ನೊಳಂಬ ವೀರಶೈವ ಮಠಗಳು ಕರ್ನಾಟಕದ ಉದ್ದಗಲಕ್ಕೂ ಕಂಡುಬರುತ್ತವೆ. ಈ ಮಠಗಳು ಆಯಾ ಭಾಗದ ಜನರ ಕಷ್ಟಸುಖಗಳಿಗೆ ಸ್ಪಂದಿಸುತ್ತಾ ತ್ರಿವಿಧ ದಾಸೋಹವನ್ನು ನಡೆಸಿಕೊಂಡು ಬರುತ್ತಿವೆ. ಕರ್ನಾಟಕ ಮಧ್ಯಭಾಗದಲ್ಲಿ ಅಂದರೆ ದಾವಣಗೆರೆ ಮತ್ತು ಹಾವೇರಿ ಜಿಲ್ಲೆಯಲ್ಲಿ ನಾಲ್ಕು ಮಠಗಳನ್ನು ನಾವು ಕಾಣಬಹುದು. ಅವುಗಳೆಂದರೆ :

೧. ಶ್ರೀಮದ್ ವೃಷಭಪುರಿ-ಪುಷ್ಪಗಿರಿ ಮಹಾಸಂಸ್ಥಾನ, ನಂದಿಗುಡಿ.
೨. ಶ್ರೀ ಸುಕ್ಷೇತ್ರ ಉಕ್ಕಡಗಾತ್ರಿ ಶ್ರೀಮಠ.
೩. ಶ್ರೀ ಸುಕ್ಷೇತ್ರ ಅತ್ತಿಕಟ್ಟೆ ಶ್ರೀಮಠ.
೪. ಸುಕ್ಷೇತ್ರ ಹೋಂಕಣ ಶ್ರೀಮಠ.

ಈ ನಾಲ್ಕು ಮಠಗಳು ತಲಾ ಎರಡರಂತೆ ಅಂದರೆ ದಾವಣಗೆರೆ ಜಿಲ್ಲೆಯಲ್ಲಿ ಎರಡು ಮತ್ತು ಹಾವೇರಿ ಜಿಲ್ಲೆಯಲ್ಲಿ ಎರಡು ಮಠಗಳು ಕಂಡುಬರುತ್ತವೆ. ಈ ಮಠಗಳು ಆಯಾ ಭಾಗದ ಜನರಿಗೆ ಶಿಕ್ಷಣ ಕ್ಷೇತ್ರದಲ್ಲಿ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮತ್ತು ದಾಸೋಹ ಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಸಾವಿರಾರು ಜನರಿಗೆ ಮಾರ್ಗದರ್ಶನವನ್ನು ನೀಡುತ್ತಾ ಬಂದಿವೆ. ನೊಳಂಬ ವೀರಶೈವ ಸಮುದಾಯಕ್ಕೆ ಸೇರಿದ ಶ್ರೀ ಮಠಗಳು ನೊಳಂಬ ಸಮುದಾಯದವರನ್ನು ಜೊತೆಗೆ ಉಳಿದ ಸಮಾಜದವರನ್ನು ಸಮಾನದೃಷ್ಟಿಯಿಂದ ನೋಡುತ್ತಾ ಬಂದಿರುತ್ತಾರೆ. ನೊಳಂಬ ಸಮಾಜದವರು ದಾವಣಗೆರೆ-ಶಿವಮೊಗ್ಗ ಮತ್ತು ಹಾವೇರಿ ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಶಿವಮೊಗ್ಗ ಜಿಲ್ಲೆಯವರು ನಂದಿಗುಡಿ ಮತ್ತು ಹೋಂಕಣ ಶ್ರೀಮಠಕ್ಕೆ ನಡೆದುಕೊಳ್ಳುತ್ತಾರೆ; ಮತ್ತು ಹಾವೇರಿ ಜಿಲ್ಲೆಯವರು ಅತ್ತಿಕಟ್ಟೆ ಮತ್ತು ಉಕ್ಕಡಗಾತ್ರಿ ಮಠಕ್ಕೆ ನಡೆದುಕೊಳ್ಳುತ್ತಾರೆ. ಈ ರೀತಿಯಾಗಿ ತಮಗೆ ಅನುಕೂಲವಾಗುವ ಮಠಕ್ಕೆ ಮತ್ತು ತಮಗೆ ಮನಃಶಾಂತಿ ಎಲ್ಲಿ ಸಿಗುವುದೋ ಅಲ್ಲಿ ಬಂದು ಆಧ್ಯಾತ್ಮದ ಅನುಭವವನ್ನು ಆನಂದಿಸುತ್ತಾರೆ.

### ಶ್ರೀಮದ್ ವೃಷಭಪುರಿ-ಪುಷ್ಪಗಿರಿ ಮಹಾಸಂಸ್ಥಾನ, ನಂದಿಗುಡಿ

ನಂದಿಗುಡಿ ಶ್ರೀ ಬೃಹನ್ಮಠವು ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನಿಂದ ಪಶ್ಚಿಮದ ಕಡೆ ಸುಮಾರು ೨೪ ಕಿ.ಮೀ. ದೂರದಲ್ಲಿದೆ. ಹರಿಹರದಿಂದ ನೇರ ಬಸ್ಸುಗಳ ಸೌಲಭ್ಯವಿದೆ. ಜೊತೆಗೆ ಮಲೆಬೆನ್ನೂರಿನಿಂದ ಬಸ್ಸುಗಳ ಸೌಲಭ್ಯವು ಇದೆ. ಹಾವೇರಿ ಜಿಲ್ಲೆಯಿಂದ ತುಮ್ಮಿನಕಟ್ಟೆ ಮಾರ್ಗವಾಗಿ ಮತ್ತು ಹೊನ್ನಾಳಿಯಿಂದ ನೇರವಾಗಿ ನಂದಿಗುಡಿಗೆ ಬರಬಹುದು. ನಂದಿಗುಡಿಯು ತುಂಗಭದ್ರ ನದಿಯ ಬಲದಂಡೆಯ ಮೇಲೆ ಇದೆ. ಈ ಸ್ಥಳವು ಸುಮಾರು ೯ನೇ ಶತಮಾನದಿಂದ ಪ್ರಮುಖ ಧಾರ್ಮಿಕ ಸ್ಥಳವಾಗಿ ಮಾರ್ಪಟ್ಟ ಬಗ್ಗೆ ಶಾಸನ ಆಧಾರಗಳು ಸ್ಪಷ್ಟಪಡಿಸುತ್ತವೆ. ಈ ಒಂದು ಭಾಗದಲ್ಲಿ ನೊಳಂಬ ಪಲ್ಲವ ಜನಾಂಗದವರು ಹೆಚ್ಚಿನ ಸಂಖ್ಯೆಯಲ್ಲಿರುವುದರಿಂದ ಈ ಒಂದು ಪ್ರದೇಶ ನೊಳಂಬ ಅರಸರ ಆಳ್ವಿಕೆಯಲ್ಲಿ ಒಂದು ಪ್ರಾಂತ್ಯವಾಗಿತ್ತು ಮತ್ತು ಆಡಳಿತ ವಿಭಾಗವಾಗಿತ್ತು ಎಂದು ತಿಳಿದುಬರುತ್ತದೆ. ಶ್ರೀಶೈಲದಲ್ಲಿ ಇರುವ ಶ್ರೀ ಮಲ್ಲಿಕಾರ್ಜುನ ದೇವಾಲಯವನ್ನು ಹೋಲುವ ಮಾದರಿಯಲ್ಲಿ ನಂದಿಗುಡಿಯಲ್ಲಿ ಶ್ರೀ ಮಲ್ಲಿಕಾರ್ಜುನ ದೇವಲಯವನ್ನು ನಿರ್ಮಾಣ ಮಾಡಿದ್ದಾರೆ.

*ಉಪನ್ಯಾಸಕರು, ಎ.ಆರ್.ಎಂ. ಪ್ರಥಮ ದರ್ಜೆ ಕಾಲೇಜು, ಎಸ್. ನಿಜಲಿಂಗಪ್ಪ ಬಡಾವಣೆ, ದಾವಣಗೆರೆ.

ಹಳೆಯವಾಸನ ಗ್ರಾಮದಲ್ಲಿ ಕೇದಾರೇಶ್ವರ ದೇವಾಲಯ ಮತ್ತು ಅನೇಕ ಶಾಸನಗಳನ್ನು ನಾವು ನೋಡಬಹುದು. ಈ ಎಲ್ಲಾ ಆಧಾರಗಳು ನಂದಿಗುಡಿಯನ್ನು ಐತಿಹಾಸಿಕ ಮಹತ್ವವುಳ್ಳ ಗ್ರಾಮವಾಗಿಸಿವೆ. ಇದರ ಜೊತೆಗೆ ದೇವಾಲಯದ ಉಸ್ತುವಾರಿಯನ್ನು ನೋಡಿಕೊಳ್ಳುವುದಕ್ಕೆ ಮತ್ತು ಜನರ ಕಷ್ಟಗಳನ್ನು ಆಲಿಸುವುದಕ್ಕೆ ಶ್ರೀಮಠವನ್ನು ಸ್ಥಾಪನೆ ಮಾಡಿರಬಹುದೆಂದು ಕಂಡುಬರುತ್ತದೆ. ಇಂತಹ ಪವಿತ್ರ ಸ್ಥಳದಲ್ಲಿ ೯ನೇ ಶತಮಾನದಿಂದಲೂ ನಂದಿಗುಡಿ ಬೃಹನ್ಮಠವು ಅಂದಿನಿಂದ ಇಂದಿನವರೆಗೂ ಶತಶತಮಾನಗಳಿಂದಲೂ ಬೆಳೆದುಕೊಂಡು ಬಂದಿದೆ. ಶ್ರೀಮಠದ ಕಾಗದ ಪತ್ರ ದಾಖಲಾತಿಗಳಿಂದಲೂ ಕೆಲ ಪ್ರಮುಖ ಸಂಗತಿಗಳು ದೊರೆಯುತ್ತವೆ. ಅದರಲ್ಲಿರುವ ಕೆಲವು ವಿವರಗಳನ್ನು ನಾವು ನೋಡಬಹುದಾಗಿದೆ. ಶ್ರೀಮಠದ ಗುರುಪರಂಪರೆಯನ್ನು ನಾವು ಈ ಕೆಳಗಿನಂತೆ ಗಮನಿಸ ಬಹುದು.

೧. ಶ್ರೀ ಶಿವಾಲಯ ಮಹಾಸ್ವಾಮಿಗಳು.
೨. ಶ್ರೀ ಕುಂಬಳೇಶ್ವರ ಮಹಾಸ್ವಾಮಿಗಳು (ದಿಬ್ಬದಹಳ್ಳಿಯಲ್ಲಿ ಗದ್ದಿಗೆ ಇದೆ).
೩. ಶ್ರೀ ಜಡೆಯ ಶಂಕರ ಮಹಾಸ್ವಾಮಿಗಳು.
೪. ಶ್ರೀ ಕೆಂಚವೀರೇಶ್ವರ ಮಹಾಸ್ವಾಮಿಗಳು (ಆದಿ ಜಗದ್ಗುರು)
೫. ಶ್ರೀ ಜಡೆಯ ಶಂಕರ ಮಹಾಸ್ವಾಮಿಗಳು (ಹೊನ್ನಾಳಿ ಹಿರೇಮಠದಲ್ಲಿ ಗದ್ದಿಗೆ ಇದೆ).
೬ ಶ್ರೀ ಜಗದ್ಗುರು ಕರಿಬಸವೇಶ್ವರ ಮಹಾಸ್ವಾಮಿಗಳು (ಉಕ್ಕಡಗಾತ್ರಿಯಲ್ಲಿ ಸಜೀವ ಸಮಾಧಿ ಹೊಂದಿದ ಮಾಹಿತಿ ದೊರೆಯುತ್ತದೆ).
೭ ಶ್ರೀ ರುದ್ರಮುನಿ ಮಹಾಸ್ವಾಮಿಗಳು.
೮. ಶ್ರೀ ಬಸವರಾಜ ಮಹಾಸ್ವಾಮಿಗಳು.
೯. ಶ್ರೀ ಕೆಂಚವೀರೇಶ್ವರ ಮಹಾಸ್ವಾಮಿಗಳು (ಎರಡನೆಯವರು).
೧೦. ಶ್ರೀ ಶಿವನಂಜುಂಡ ಮಹಾಸ್ವಾಮಿಗಳು.
೧೧. ಶ್ರೀ ಜಗದ್ಗುರು ಮೃತ್ಯುಂಜಯ ಶಿವಾಚಾರ್ಯ ಮಹಾಸ್ವಾಮಿಗಳು.
೧೨. ಶ್ರೀ ಜಗದ್ಗುರು ಶ್ರೀ ನಂದೀಶ್ವರ ಶಿವಾಚಾರ್ಯ ಸ್ವಾಮಿಗಳು.
೧೩. ಶ್ರೀ ಜಗದ್ಗುರು ಶ್ರೀ ಮುಮ್ಮಡಿ ಬಸವರಾಜದೇಶೀಕೇಂದ್ರ ಮಹಾಸ್ವಾಮಿಗಳು.

ನಮಗೆ ದೊರೆತಿರುವ ಮಾಹಿತಿಯ ಪ್ರಕಾರ ಸುಮಾರು ಹದಿಮೂರು ಜನ ಮಠಾಧೀಶರುಗಳನ್ನು ನಾವು ನೋಡಬಹುದು. ಶ್ರೀ ಶ್ರೀ ಶ್ರೀ ಜಗದ್ಗುರು ಮೃತ್ಯುಂಜಯ ಶಿವಾಚಾರ್ಯ ಮಹಾಸ್ವಾಮಿಗಳು, ನಂದಿಗುಡಿಯನ್ನು ಧಾರ್ಮಿಕ ಶೈಕ್ಷಣಿಕ ಮತ್ತು ಸಾಮಾಜಿಕ ಚೈತನ್ಯ ಶಕ್ತಿಕೇಂದ್ರವನ್ನಾಗಿ ಮಾಡಿದರು. ಇವರ ನಂತರದಲ್ಲಿ ಶ್ರೀ ಶ್ರೀ ಶ್ರೀ ಜಗದ್ಗುರು ನಂದೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಒಂದು ಹೆಜ್ಜೆ ಮುಂದೆ ಸಾಗಿ ಪ್ರಾಥಮಿಕ ಶಿಕ್ಷಣ, ಪ್ರೌಢಶಿಕ್ಷಣ, ಪದವಿ ಶಿಕ್ಷಣ, ಡಿ.ಇಡಿ.,/ಬಿ.ಇಡಿ., ಉಚಿತ ಪ್ರಸಾದ ನಿಲಯ, ದಾಸೋಹ, ಶಾಲಾಮಕ್ಕಳಿಗೆ ವಾಹನಗಳ ಸೌಕರ್ಯ, ಉದ್ಯಾನವನ, ೫೦ ಎಕರೆ ಭತ್ತದ ಕೃಷಿಯೇ ಇದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದೆ. ಮುಂದುವರೆದು ಶ್ರೀ ಶ್ರೀ ಶ್ರೀ ಜಗದ್ಗುರು ಮುಮ್ಮಡಿ ಬಸವರಾಜದೇಶಿಕೇಂದ್ರ ಮಹಾಸ್ವಾಮಿಗಳು ನಂದೀಶ್ವರ ಸ್ವಾಮಿಗಳ ಮಾರ್ಗದರ್ಶನದಿಂದ ಸ್ಫೂರ್ತಿಗೊಂಡು ಈ ಸಂಸ್ಥೆಗಳನ್ನು ಮುನ್ನಡೆಸುತ್ತಾ ಬಂದಿದ್ದಾರೆ. ಶ್ರೀ ಶ್ರೀ ಶ್ರೀ ಜಗದ್ಗುರು ಮುಮ್ಮಡಿ ಬಸವರಾಜದೇಶಿಕೇಂದ್ರ ಮಹಾಸ್ವಾಮಿಗಳು ೨೦೦೭ ಫೆಬ್ರುವರಿಯಿಂದ ನಂದಿಗುಡಿಯ ಸಂಪೂರ್ಣ ಉಸ್ತುವಾರಿಯನ್ನು ನೋಡಿಕೊಂಡು ಬರುತ್ತಿದ್ದಾರೆ. ಶ್ರೀ ಶ್ರೀ ಶ್ರೀ ಜಗದ್ಗುರು ಮುಮ್ಮಡಿ ಬಸವರಾಜದೇಶಿಕೇಂದ್ರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ೨೦೦೮ರ ಶ್ರೀ ಗುರು ಸಿದ್ಧರಾಮೇಶ್ವರ ಜಯಂತಿ, ಶಿಕಾರಿಪುರದಲ್ಲಿ ನಡೆಯಿತು. ನಂದಿಗುಡಿ ಸಂಸ್ಥಾನದ ಜೊತೆಗೆ ಅತ್ತಿಕಟ್ಟೆ ಮಠದ ಉಸ್ತುವಾರಿಯನ್ನು ನೋಡಿಕೊಂಡು ಅನೇಕ ಅಭಿವೃದ್ಧಿ ಕಾರ್ಯಗಳನ್ನು ಮಾಡಿಕೊಂಡು ಬರುತ್ತಿದ್ದಾರೆ. ಒಟ್ಟಾರೆಯಾಗಿ ನಂದಿಗುಡಿ ಬೃಹನ್ಮಠವು ಎಲ್ಲಾ ರೀತಿಯಿಂದಲೂ ಈ ಭಾಗದ ಜನರ ಜೊತೆಗೆ ರಾಜ್ಯದ ವಿವಿಧ ಭಾಗಗಳೊಂದಿಗೆ ಸಂಪರ್ಕವನ್ನು ಇಟ್ಟುಕೊಂಡು ಬಂದು ಬೃಹನ್ಮಠವಾಗುವ ನಿಟ್ಟಿನಲ್ಲಿ ಬೆಳೆಯುತ್ತಾ ಇದೆ. ಈ ಮಠವನ್ನು ನಾವೂ ಪೋಷಿಸಿ ಬೆಳೆಸಲು ತನುಮನ ಧನದ ಸಹಕಾರ ನೀಡುವುದು ಅತ್ಯಾವಶ್ಯಕವಾಗಿದೆ. ಜೊತೆಗೆ ನಂದಿಗುಡಿಯಲ್ಲಿರುವ ಶಿಕ್ಷಣ ಸಂಸ್ಥೆಗಳು ಈ ಭಾಗದ ಜನರಿಗೆ ವರಪ್ರಸಾದವಾಗಿ ಪರಿಣಮಿಸಿವೆ.

### ಸುಕ್ಷೇತ್ರ ಉಕ್ಕಡಗಾತ್ರಿ ಶಾಖಾಮಠ

'ಉಕ್ಕಡಗಾತ್ರಿ' ಕರ್ನಾಟಕದಲ್ಲಿ ಅಪರೂಪವಾದುದು. ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆಯ ತುಂಗಭದ್ರ ನದಿಯ ಎಡದಂಡೆಯ ಮೇಲೆ ಇರುವ ಸಣ್ಣಗ್ರಾಮ ಉಕ್ಕಡಗಾತ್ರಿ. ಇದು ಭಾರತದ ವಿವಿಧ ಭಾಗಗಳ ಜನರ ಆಕರ್ಷಣೀಯ ಸ್ಥಾನವನ್ನು ಪಡೆದು ರಾಷ್ಟ್ರವ್ಯಾಪ್ತಿ ಖ್ಯಾತಿಯನ್ನು

ಪಡೆದಿದೆ. 'ಉಕ್ಕಡ' ಊರಿನ ಅಥವಾ ನಗರದ ಗಡಿ ಮುಂಗಾವಲು, ಪಡೆಯ ನಲೆ, ಸುಂಕದಕಟ್ಟೆ ಗಡಿಯಲ್ಲಿ ತೆರಿಗೆಯನ್ನು ವಸೂಲು ಮಾಡುವ ಸ್ಥಳ ಎಂಬ ಅರ್ಥಗಳಿವೆ. 'ಗಾತ್ರಿ' ಅಂದರೆ ವೀಳೆದೆಲೆಯನ್ನು ಮಾರುವವನು; ಗವರಿಗ ಎಲೆವರದ ಗಾತ್ರಿಗರು ಅಂದರೂ ಇವರೇ, ಹಲವಾರು ಶಾಸನಗಳಲ್ಲಿ ಇವರ ಉಲ್ಲೇಖಗಳಿವೆ. ಹೀಗೆ ಗಾತ್ರಿ ಎಂದರೆ ಎಲೆ ಮಾರುವವರು ಎಂದರ್ಥ. ಪ್ರಸಿದ್ಧವಾದ ಎಲೆಯನ್ನು ತುಂಗಭದ್ರಾ ನದಿ ದಾಟಿಸಿ ಬೇರೆ ಸೀಮೆಗೆ ಒಯ್ಯುತ್ತಿದ್ದ ಜಾಗ ಉಕ್ಕಡಗಾತ್ರಿ ಎಂದರೆ ಈಗಿನ ಟೋಲ್‌ಗೇಟ್, ಜಕಾತಿಕಟ್ಟೆ, ಕಾರಿಮನೆ ಅಥವಾ ಸುಂಕದಕಟ್ಟೆ ಹರಿಹರದ ಸೇತುವೆ ಆಗುವುದಕ್ಕೆ ಮುಂಚೆ ದಕ್ಷಿಣದಲ್ಲಿ ಮೈಸೂರು ಸಂಸ್ಥಾನ ಉತ್ತರದಲ್ಲಿ ಹೈದರಾಬಾದ್ ನಿಜಾಮನ ಸಂಸ್ಥಾನಗಳ ಮಧ್ಯ ವ್ಯಾಪಾರ ಉಕ್ಕಡಗಾತ್ರಿಯ ಮೂಲಕ ನಡೆಯುತ್ತಿತ್ತು. ಇಂದಿಗೂ ಕೂಡ ಈ ನದಿ ಮಾರ್ಗವಾಗಿ ಗಾಡಿಗಳು ಮತ್ತು ಟ್ರಾಕ್ಟರ್‌ಗಳು ಚಲಿಸುತ್ತಿವೆ. ಸೇತುವೆ ಆದ ಮೇಲೆ ಇದರ ಪ್ರಾಮುಖ್ಯತೆ ಕಡಿಮೆಯಾಯಿತು. ಉಕ್ಕಡಗಾತ್ರಿ ಬಹು ಪ್ರಸಿದ್ಧವಾದ ಸುಂಕದಕಟ್ಟೆ. ವಿಶೇಷವಾಗಿ ಶಿವಮೊಗ್ಗ, ಹಾವೇರಿ ಮತ್ತು ದಾವಣಗೆರೆ ಜಿಲ್ಲೆಯಲ್ಲಿ ಬೆಳೆಯುವ ವೀಳೆಯ ದೆಲೆಯನ್ನು ತುಂಗಭದ್ರ ನದಿಯಲ್ಲಿ ದಾಟಿಸುತ್ತಿದ್ದ ಸ್ಥಳ, ಮೈಸೂರು ಮಹಾರಾಜರ ವಂಶಾವಳಿಯಲ್ಲೂ ಇದರ ಉಲ್ಲೇಖ ಗಳು ಕಂಡುಬರುತ್ತವೆ, ಇದು ಉತ್ತರ ದಕ್ಷಿಣ ಕರ್ನಾಟಕದ ಸೇತು ಎಂದು ಹೇಳಬಹುದು.

ಶತಮಾನಗಳಿಂದ ಅವ್ಯಾಹತವಾಗಿ ನಡೆದು ಬಂದಿರುವ ವೀರಶೈವ ಧರ್ಮ ಅನೇಕ ಪುಣ್ಯ ಪುರುಷರು, ಗಣ್ಯ ಶರಣ ಶ್ರೇಷ್ಠರ ಶಿವಾನುಭವಿಗಳ ಮನ್ನಣೆಯ ಮಹಾಂತರ ಕೃಪಾಶಿರ್ವಾದಿಂದ ಅತ್ಯಂತ ಮಹತ್ತರ ಧರ್ಮವಾಗಿ ಬೆಳಗುತ್ತಲಿದೆ. ಆಡಿದ ಮಾತುಗಳು ಮಂತ್ರವಾಗಿವೆ. ಮಾಡಿದ ಕ್ರಿಯೆಗಳೆಲ್ಲಾ ಪವಾಡಗಳಾಗಿವೆ. ಇಂತಹ ಶಿವಯೋಗ ಸಿದ್ಧಿಯನ್ನು ಪಡೆದವರು ನಂದಿಗುಡಿ ಬೃಹನ್ಮಠದ ಗುರು ಪರಂಪರೆಯ ಪಟ್ಟಾಧ್ಯಕ್ಷರಾದ ಶ್ರೀ ಸೂರ್ಯ ಸಿಂಹಾಸನ ವೃಷಭಪುರಿ ಸಂಸ್ಥಾನಾಧೀಶ್ವರ ೧೧೧೦೮ ಜಗದ್ಗುರು ಶ್ರೀ ಶ್ರೀ ಶ್ರೀ ಕರಿಬಸವೇಶ್ವರ ಶಿವಯೋಗಿ ಮಹಾಸ್ವಾಮಿಗಳವರು ಉಕ್ಕಡಗಾತ್ರಿಯಲ್ಲಿ ಜೀವಂತ ಸಮಾಧಿಯಾಗಿ ಮೆರೆವ ಮಹಾಶಿವಯೋಗಿಗಳು ಗ್ರಾಮಯೋಗ ಸಾಧನೆಗೆ ಯೋಗ್ಯಸ್ಥಳವೆಂದು ಭಾವಿಸಿ ಉಕ್ಕಡಗಾತ್ರಿಗೆ ಮುಪ್ಪಿನ ವೇಳೆಯಲ್ಲಿ ಬೀಜಯಂಗೈದು ಶಿವಯೋಗಾನುಸಂಧಾನದಲ್ಲಿ ಲಿಂಗದೊಳಗಾದ ಮಹಿಮರು.

ಶ್ರೀ ಗುರು ಕರಿಬಸವೇಶ್ವರರು ಕ್ರಿ.ಶ. ಹದಿನೈದನೇ ಶತಮಾನದಲ್ಲಿದ್ದವರು ಕರಿಬಸವರು ತಮ್ಮ ಗುರುಗಳ ಬೋಧನೆಯನ್ನು ಚಾಚೂ ತಪ್ಪದೇ ಗುರುವಿಗೆ ತಕ್ಕ ಶಿಷ್ಯನಾಗಿ ಮುನ್ನಡೆ ಸಾಧಿಸುತ್ತಾ ಬಂದರು. ಎಲ್ಲಾ ಯೋಗಗಳಲ್ಲಿ ಶಿವಯೋಗ ಶ್ರೇಷ್ಠವೆಂದು ಬಗೆದು ಅತ್ಯಂತ ಎಚ್ಚರಿಕೆಯಿಂದ ಅಳವಡಿಸಿಕೊಂಡವರು. ಶಾಸ್ತ್ರದ ವಿಧಿಗನುಸಾರವಾಗಿ ಶ್ರೀವೃಷಭಪುರಿ ಸಂಸ್ಥಾನದ ನಂದಿಗುಡಿ ಬೃಹನ್ಮಠ ಸೂರ್ಯ ಸಿಂಹಾಸನದ ಪಟ್ಟಾಧ್ಯಕ್ಷರಾಗಿ ನೇಮಕಗೊಂಡರು. ಅಂದಿನಿಂದ ಕರಿಬಸವರು ಶ್ರೀಮದ್ ವೃಷಭಪುರಿ ಸೂರ್ಯ ಸಿಂಹಾಸನಾಧೀಶ ೧೧೧೦೮ ಜಗದ್ಗುರು ಶ್ರೀ ಶ್ರೀ ಶ್ರೀ ಗುರು ಕರಿಬಸವ ಶಿವಯೋಗಿ ಮಹಾಸ್ವಾಮಿಗಳು ಎಂಬ ನಾಮಕರಣದಿಂದ ಪೀಠಕ್ಕೆ ಬಂದರು. ಹುಟ್ಟಿನಿಂದಲೆ ಯೋಗವನ್ನೆ ಮೈಗೂಡಿಸಿಕೊಂಡ ಜಗದ್ಗುರು ಶ್ರೀ ಕರಿಬಸವ ಶಿವಯೋಗಿ ಮಹಾಸ್ವಾಮಿಗಳು ಶಾಂತ ಸ್ವಭಾವದವರಾಗಿದ್ದು ಅಂತೆಯೇ ಶಿವಧ್ಯಾನ ತಲ್ಲೀನರಾಗಿ ತಮ್ಮ ಆತ್ಮೋನ್ನತಿಯನ್ನು ಶಿಖರಕ್ಕೆ ಏರಿಸಿಕೊಂಡರು.

ಬೃಹನ್ಮಠದ ಪಟ್ಟಾಧ್ಯಕ್ಷರ ಮೇಲೆ ವಿಭೂತಿ ರುದ್ರಾಕ್ಷಗಳನ್ನು ಧರಿಸಿ ಹಾವುಗೆಗಳನ್ನು ಮೆಟ್ಟಿ ಕಾವಿ ವಸ್ತ್ರಧಾರಿಗಳಾಗಿ ಕಾಲು ನಡುಗೆಯಲ್ಲಿಯೇ ಸಂಸ್ಥಾನದ ನಾನಾ ಭಾಗಗಳಿಗೆ ಪ್ರಯಾಣ ಮಾಡುತ್ತಾ ಆದರಿಸಿದ ಭಕ್ತರ ಸೇವೆಯನ್ನು ಸ್ವೀಕರಿಸುತ್ತಾ ಜನರ ಕಷ್ಟ ಕಾರ್ಪಣ್ಯಗಳನ್ನು ವಿವರಿಸುತ್ತಾ ಭಕ್ತರುದ್ಧಾರವೇ ಶ್ರೀಮಠದ ಉದ್ಧಾರ ಎಂದು ಬಗೆದು ನಾನಾ ಭಾಗಗಳಿಗೆ ಹೋಗಿ ಬರುತ್ತಿದ್ದರು. ಸದಾ ಸಂಚಾರದಲ್ಲಿ ತೊಡಗಿದ್ದ ಶ್ರೀಗಳವರು ಧರ್ಮಬೋಧನೆ, ಶಿವಯೋಗ ನಿಷ್ಠೆ, ಲಿಂಗಾಂಗಿಯಾಗಿ ಲಿಂಗಪೂಜೆ ನಡೆಸುವುದು; ಕಾಯಕದಲ್ಲಿ ಅನನ್ಯತೆ ಕುರಿತು ಜನತೆಗೆ ಯುವಕರಿಗೆ ಧರ್ಮೋಪದೇಶ ಮಾಡುತ್ತಾ ಭಜನೆ ಮಾಡುವುದು; ಭಕ್ತರ ಸಮಸ್ಯೆಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ ನಿವಾರಿಸುವುದು–ಹೀಗಿತ್ತು ಅವರ ಕಾಯಕ.

ಶ್ರೀಗಳ ಸರಳತೆ ಸಜ್ಜನಿಕೆ ದುಃಖಿತರ ಬಗೆಗೆ ಇರುವ ಅನುಕಂಪ ಜನತೆಯನ್ನು ಬಹುವಾಗಿ ಆಕರ್ಷಿಸುತ್ತಿದ್ದವು. ಜಗದ್ಗುರು ಶ್ರೀ ಗುರು ಕರಿಬಸವೇಶ್ವರ ಶಿವಯೋಗಿ ಮಹಾಸ್ವಾಮಿಗಳು ಧರ್ಮ ಪ್ರಚಾರಕ್ಕಾಗಿ ಪಶ್ಚಿಮಾಭಿಮುಖ ವಾಗಿ ಹೋಗಿದ್ದರು. ಮಠಕ್ಕೆ ಹಿಂದಿರುಗಿ ಬರುವ ವೇಳೆಗೆ ತುಂಗಭದ್ರಾ ನದಿಯು ತುಂಬಿ ಹರಿಯತೊಡಗಿತ್ತು. ಹಾಗಾಗಿ ಉಕ್ಕಡಗಾತ್ರಿಯಲ್ಲಿಯೇ ಗುರೂಜಿಯವರು ತಂಗಬೇಕಾಯಿತು. ಗುರೂಜಿಯವರು ಉಕ್ಕಡಗಾತ್ರಿಯಲ್ಲಿ ತಂಗಿದ್ದರಿಂದ ಅಲ್ಲಿನ ಅಲ್ಲಿಯ ಪರಿಸರದಿಂದ ಪ್ರಭಾವಿತರಾಗಿ ತುಂಗಭದ್ರ ದಂಡೆಯ ಮೇಲೆ ಅಂದರೆ ಉಕ್ಕಡಗಾತ್ರಿಯಲ್ಲಿಯೇ ತಮ್ಮ ಕಾಯವನ್ನು ಬಿಡಬೇಕು ಎಂದು ಕನಸ್ಸು ಮಾಡಿದರು. ಇದಕ್ಕೆ ಹಲವಾರು ಕಾರಣಗಳು ಇದ್ದವು. ನಂದಿಗುಡಿ ಬೃಹನ್ಮಠದ ಅನೇಕ

ಗುರುಗಳು ಉಕ್ಕಡಗಾತ್ರಿಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು. ಇದಕ್ಕೆ ಕಾರಣ ಉಕ್ಕಡಗಾತ್ರಿಯು ಉತ್ತರ ಮತ್ತು ದಕ್ಷಿಣ ಕರ್ನಾಟಕವನ್ನು ಕೂಡಿಸುವ ಕೊಂಡಿಯಂತೆ ಇದ್ದುದರಿಂದ ಮತ್ತು ಇಲ್ಲಿಂದ ವ್ಯಾಪಾರ ಮಾಡುತ್ತಿದ್ದ ಅನೇಕ ವ್ಯಾಪಾರಸ್ಥರು ಇಲ್ಲಿ ಬಂದು ಹೋಗುತ್ತಿದ್ದರಿಂದ ಅವರಿಗೆ ಧರ್ಮದ ಬೋಧನೆಯನ್ನು ಮಾಡಿ ಅವರಿಗೆ ಧರ್ಮವನ್ನು ಪ್ರಸಾರ ಮಾಡುವಂತಹ ಮಹತ್ವದ ಕಾರ್ಯವನ್ನು ನಂದಿಗುಡಿ ಬೃಹನ್ಮಠದ ಶ್ರೀ ಗುರುಗಳು ಮಾಡಿದರು. ಇದಕ್ಕೆ ಮುಂದುವರೆದಂತೆ ಪವಾಡ ಪುರುಷ ಉಕ್ಕಡಗಾತ್ರಿ ಅಜ್ಜಯ್ಯ ಶ್ರೀ ಶ್ರೀ ಶ್ರೀ ಜಗದ್ಗುರು ಕರಿಬಸವೇಶ್ವರರು ಉಕ್ಕಡಗಾತ್ರಿಯನ್ನು ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡು ಅನೇಕ ಜನರ ಕಷ್ಟಗಳನ್ನು ನಿವಾರಣೆ ಮಾಡಿದರು. ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಅವರು ಕರ್ನಾಟಕ ಮತ್ತು ಮುಂಬಯಿಯವರೆಗೆ ವಿಸ್ತರಿಸಿದರು. ಇದಕ್ಕೆ ಕಾರಣವಾಗಿದ್ದು ಉಕ್ಕಡಗಾತ್ರಿಯಲ್ಲಿ ನಡೆಯುತ್ತಿದ್ದ ವ್ಯಾಪಾರ. ಅದಕ್ಕಾಗಿಯೇ ಶ್ರೀ ಗುರು ಕರಿಬಸವೇಶ್ವರರು ಉಕ್ಕಡಗಾತ್ರಿಯನ್ನು ಒಂದು ಪುಣ್ಯಸ್ಥಳವನ್ನು ಮಾಡುವುದಕ್ಕಾಗಿ ಮತ್ತು ಜನರ ಕಷ್ಟಗಳನ್ನು ನಿವಾರಣೆ ಮಾಡುವುದಕ್ಕಾಗಿ ಅವರು ಸಜೀವ ಸಮಾಧಿಗೆ ಹೋಗುವುದರ ಮೂಲಕ ತಮ್ಮ ಗದ್ದುಗೆಯನ್ನು ತಾವೇ ನಿರ್ಮಿಸಿಕೊಂಡರು. ಕಾಯಕವನ್ನು ಬಿಡುವಾಗ ಶ್ರೀ ಗುರು ಕರಿಬಸವೇಶ್ವರರು ಅಪಾರವಾದ ಭಕ್ತಜನರನ್ನು ಹೊಂದಿದ್ದರು ಎಂಬ ಅಂಶವನ್ನು ನಾವು ಇಂದಿಗೂ ಕೂಡ ಗಮನಿಸಬಹುದು.

ನಂದಿಗುಡಿ ಬೃಹನ್ಮಠದ ಗುರುಪರಂಪರೆಯವರು ನಡೆಸಿಕೊಂಡು ಬಂದಂತಹ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಶ್ರೀಮಠದ ವೃಷಭಪುರಿ ಸೂರ್ಯ ಸಿಂಹಾಸನಾಧೀಶ ೧೧೧೦೮ ಜಗದ್ಗುರು ಶ್ರೀ ಶ್ರೀ ಶ್ರೀ ಗುರು ಕರಿಬಸವ ಶಿವಯೋಗಿ ಮಹಾಸ್ವಾಮಿಗಳು ಮಾಡಿದ ತಮ್ಮ ಗದ್ದುಗೆಯ ಪವಾಡವನ್ನು ನಾವು ಇಂದಿಗೂ ಕೂಡ ಗಮನಿಸಬಹುದು. ಉಕ್ಕಡಗಾತ್ರಿಯ ಮಠದ ನಿರ್ವಹಣೆಯನ್ನು ಇಲ್ಲಿಯವರೆಗೂ ಕೂಡ ನಂದಿಗುಡಿ ಮಠಾಧೀಶರ ಉಸ್ತುವಾರಿಯಲ್ಲಿ ಟ್ರಸ್ಟನ್ನು ನೇಮಿಸಿಕೊಂಡು ಮಾಡಿಕೊಂಡು ಬರುತ್ತಿದ್ದಾರೆ. ಪ್ರತಿ ಅಮಾವಾಸ್ಯೆಯಂದು ವಿಶೇಷ ಪೂಜೆಯನ್ನು ಮಹಾಶಿವರಾತ್ರಿ ಯಂದು ರಥೋತ್ಸವವನ್ನು ಶ್ರೀ ಗುರು ಪರಂಪರೆಯು ನಡೆಸಿಕೊಂಡು ಬರುತ್ತಿದೆ. ಉಕ್ಕಡಗಾತ್ರಿಯಲ್ಲಿ ಪ್ರವಾಸಿಗರು ಮತ್ತು ಭಕ್ತಾದಿಗಳು ಉಳಿದುಕೊಳ್ಳಲಿಕ್ಕೆ ರೂಮುಗಳ ವ್ಯವಸ್ಥೆಯನ್ನು ಮಾಡಿದ್ದಾರೆ. ಶ್ರೀ ಗುರು ಕರಿಬಸವೇಶ್ವರರಿಗೆ ಮಂಡಕ್ಕಿ ಖಾರ ವಿಶೇಷವಾದ ಪ್ರಸಾದವನ್ನು ಎಲ್ಲಾ ಭಕ್ತಾದಿಗಳು ತೆಗೆದುಕೊಂಡು ಹೋಗುತ್ತಾರೆ ಉಕ್ಕಡಗಾತ್ರಿಯಲ್ಲಿ ಟ್ರಸ್ಟ್ ನಡೆಸುತ್ತಿರುವ ಶ್ರೀ ಕರಿಬಸವೇಶ್ವರ ಪ್ರಸಾದ ನಿಲಯ ಶ್ರೀ ಮೃತ್ಯುಂಜಯ ವಸತಿ ನಿಲಯ, ಶ್ರೀ ಕರಿಬಸವೇಶ್ವರ ಕಲ್ಯಾಣಮಂಟಪ, ಶ್ರೀ ಕರಿಬಸವೇಶ್ವರ ಪ್ರಸಾದ ಮಳಿಗೆ, ತುಂಗಭದ್ರಾ ಭವನ ವಸತಿ ನಿಲಯ, ಶ್ರೀ ಕರಿಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಶ್ರೀ ಗುರುಕರಿಬಸವೇಶ್ವರ ಪ್ರೌಢಶಾಲೆ ಮತ್ತು ವೇದಶಾಲೆಗಳು ನಡೆದುಕೊಂಡು ಬರುತ್ತಿವೆ. ಶ್ರೀ ಕ್ಷೇತ್ರಕ್ಕೆ ಇಡೀ ಭಾರತದ ತುಂಬಾ ಭಕ್ತರು ಇದ್ದಾರೆ. ಈ ರೀತಿಯಾಗಿ ಶ್ರೀ ಗುರು ಕರಿಬಸವೇಶ್ವರ ಗದ್ದಿಗೆಗಳು ಶಿವಮೊಗ್ಗ, ದಾವಣಗೆರೆ, ಹಾವೇರಿ ಜಿಲ್ಲೆಗಳಲ್ಲಿ ಅಜ್ಜಯ್ಯನ ಗದ್ದಿಗೆಗಳು ಕಂಡು ಬರುತ್ತವೆ. ಪವಾಡ ಅಥವಾ ಸಾದೃಶ್ಯ ಶಕ್ತಿಯನ್ನು ಅಜ್ಜಯ್ಯನ ಗದ್ದುಗೆಯು ಹೊಂದಿದೆ.

### ಶ್ರೀ ಕ್ಷೇತ್ರ ಅತ್ತಿಕಟ್ಟೆ ಶ್ರೀ ಮಠ

ಶ್ರೀ ಕ್ಷೇತ್ರ ಅತ್ತಿಕಟ್ಟೆ ಶ್ರೀ ಮಠವು ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನಲ್ಲಿ ಕಂಡುಬರುತ್ತದೆ. ಅತ್ತಿಕಟ್ಟೆಗ್ರಾಮವು ಹಂಸಬಾವಿ ತಿಳುವಳ್ಳಿ ಮಾರ್ಗದಲ್ಲಿ ಗುಡ್ಡದ ಮಲ್ಲಾಪುರದಿಂದ ೮ ಕಿ.ಮೀ. ದೂರದಲ್ಲಿ ಕಂಡುಬರುತ್ತದೆ. ಶ್ರೀ ಮಠವು ಮೂಲ ಸಣ್ಣದಾಗಿದ್ದು, ಶ್ರೀ ಶ್ರೀ ಶ್ರೀ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳ ಸಲಹೆ ಮೇರೆಗೆ ಶ್ರೀ ಜಗದ್ಗುರು ನಂದೀಶ್ವರ ಶಿವಾಚಾರ್ಯ ಸ್ವಾಮಿಗಳು ಅಲ್ಲಿ ನೂತನ ಮಠ ಮತ್ತು ಸಮುದಾಯ ಭವನವನ್ನು ನಿರ್ಮಿಸಿದ್ದಾರೆ. ಶ್ರೀ ಮಠದ ಗುರುಪರಂಪರೆಯನ್ನು ನಾವು ಗಮನಿಸಿದಾಗ ಈ ಸಂಸ್ಥಾನ ಮಠದ ಮೊದಲ ಗುರುಗಳು ತಪೋಧನರಾದ ಲಿಂ॥ ಜಗದ್ಗುರು ಶ್ರೀ ಶ್ರೀ ಶ್ರೀ ಶಿವಾಚಾರ್ಯ ಮಹಾಸ್ವಾಮಿಗಳೆಂದು ತಿಳಿದುಬರುತ್ತದೆ. ಲಿಂ॥ ಜಗದ್ಗುರು ಶ್ರಿ ಶ್ರೀ ಕೆಂಚವೀರ ಮಹಾಸ್ವಾಮಿಗಳು ಲಿಂ॥ ಜಗದ್ಗುರು ಶ್ರೀ ಶ್ರೀ ಶಿವನಂಜುಂಡ ದೇಶಿಕೇಂದ್ರ ಮಹಾಸ್ವಾಮಿಗಳು, ಗುರುಲಿಂಗ ಜಂಗಮ ಪ್ರೇಮವನ್ನು ಜನರಲ್ಲಿ ಬಿತ್ತಿ ಭಕ್ತರನ್ನು ಉದ್ಧರಿಸುತ್ತಾ ಬಂದಿದ್ದಾರೆ. ಶ್ರೀ ಜಗದ್ಗುರು ಶ್ರೀ ಶ್ರೀ ಶಿವನಂಜುಂಡ ದೇಶಿಕೇಂದ್ರ ಮಹಾಸ್ವಾಮಿಗಳ ಕಾಲಾವಧಿಯಲ್ಲಿಯೇ ಅತ್ತಿಕಟ್ಟೆ ಮಠ ಸ್ಥಾಪನೆಗೊಂಡಿತೆಂದು ತಿಳಿದುಬರುತ್ತದೆ. ಈ ಮಠದ ವ್ಯಾಪ್ತಿಯಲ್ಲಿ ಬ್ಯಾಡಗಿ, ಹಿರೇಕೆರೂರು, ಹಾನಗಲ್, ಸೊರಬ ಮುಂತಾದ ತಾಲ್ಲೂಕುಗಳ ೬೫ ಹಳ್ಳಿಗಳು ಬರುತ್ತವೆ. ಹಿರಿಯರ ಮಾತು ಇದರ ವಿಶಾಲ ವ್ಯಾಪ್ತಿಯನ್ನು ತಿಳಿಸುತ್ತದೆ.

ಶ್ರೀ ಶಿವನಂಜುಂಡ ದೇಶಿಕೇಂದ್ರ ಮಹಾಸ್ವಾಮಿಗಳು ಈ ಭಾಗದಲ್ಲಿ ಪ್ರವಾಸ ಕೈಗೊಂಡಾಗ ಇವರ ಪ್ರಭಾವಕ್ಕೆ ಒಳಗಾಗಿ ಸಣ್ಣೂನಾಡಿಗೇರ ಎಂಬ ಬ್ರಾಹ್ಮಣ ವ್ಯಕ್ತಿ ಮಠವನ್ನು ಕಟ್ಟಲಿಕ್ಕೆ ಮತ್ತು ದಾಸೋಹಕ್ಕೆ ಜಮೀನನ್ನು ದಾನವಾಗಿ ನೀಡಿದ. ಅವನು ನೀಡಿದ ಮನೆಯೇ ಅತ್ತಿಕಟ್ಟಿ ಮಠವಾಗಿದ್ದು, ಅವನ ಆಸ್ತಿ ಈಗಲೂ ನಂದಿಗುಡಿ ಶ್ರೀಮಠದ ವ್ಯಾಪ್ತಿಯಲ್ಲಿದ್ದು

ನಿತ್ಯ ದಾಸೋಹಕ್ಕೆ ನೆರವಾಗುತ್ತಿದೆ. ಮತ್ತು ವಾರ್ಷಿಕ ಜಾತ್ರೋತ್ಸವ ನಡೆದುಕೊಂಡು ಬರುತ್ತಿದೆ. ಅತ್ತಿಕಟ್ಟೆ ಮಠದ ಮೊದಲ ಗುರುಗಳಾಗಿ ಶ್ರೀ ಸಿದ್ಧಲಿಂಗ ದೇಶಿಕೇಂದ್ರ ಮಹಾಸ್ವಾಮಿಗಳು ಅತ್ತಿಕಟ್ಟೆ ಮತ್ತು ಸುತ್ತಮುತ್ತಲಿನ ಗ್ರಾಮಗಳಲ್ಲಿ ಕಾಲು ನಡುಗೆಯಿಂದಲೇ ಸಂಚರಿಸಿ ಧರ್ಮ ಜಾಗೃತಿ ಮೂಡಿಸಿ ಜನರು ಗುರುಲಿಂಗ ಜಂಗಮ ಪ್ರೇಮಿಗಳಾಗುವಂತೆ ಮಾಡಿದರು. ಶಿಕಾರಿಪುರ ತಾಲ್ಲೂಕಿನ ಗ್ರಾಮಗಳಲ್ಲಿ ಸಂಚರಿಸಿ ಧರ್ಮ ಪ್ರಚಾರ ಮಾಡುವಾಗ ಕಲ್ಲು ಮೈಲಿ ಬೇನೆಗೆ ತುತ್ತಾಗಿ ೧೯೩೦ರಲ್ಲಿ ಲಿಂಗೈಕ್ಯರಾದರು. ಲಿಂಗೈಕ್ಯ ದೇಹವನ್ನು ಅತ್ತಿಕಟ್ಟೆಗೆ ತರುವ ಪ್ರಸ್ತಾಪವಾಯಿತಾದರೂ ಗ್ರಾಮದ ಹಿರಿಯರು ಮತ್ತು ನಾಗರಿಕರು ತಮ್ಮ ಊರ ಗುರುಗಳನ್ನು ಊರಿನಲ್ಲಿಯೇ ಸಮಾಧಿಗೊಳಿಸುವ ತೀರ್ಮಾನ ಕೈಗೊಂಡು ಚುರ್ಚಿ ಗುಂಡಿಯ ಬಸವೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಸಮಾಧಿ ಮಾಡಿದರು.

ಶ್ರೀ ಶ್ರೀ ಚಂದ್ರಶೇಖರ ಭಾರತಿ ಮಹಾಸ್ವಾಮಿಗಳು ಅತ್ತಿಕಟ್ಟೆ ಮಠದ ಎರಡನೇ ಗುರುಗಳಾಗಿದ್ದು ಇವರು ಬೆಳಗುತ್ತಿ ಅರಸು ಮನೆತನದ ನರಸಪ್ಪನವರ ಗುರುಗಳಾಗಿದ್ದರು. ಬಾಲ್ಯದಿಂದಲೂ ಕುಶಾಗ್ರಮತಿಗಳು ಅತ್ಯಂತ ಲವಲವಿಕೆ ಯುಳ್ಳವರೂ ಕಲಿಕೆಯಲ್ಲಿ ತೀವ್ರ ಅಶಕ್ತಿ ಹೊಂದಿದವರು ಆಗಿದ್ದರೆಂದು ತಿಳಿದು ಬರುತ್ತದೆ. ಶ್ರೀ ಚಂದ್ರಶೇಖರ ಭಾರತಿ ಮಹಾಸ್ವಾಮಿಗಳು ೧೯೪೪ರಲ್ಲಿ ಲಿಂಗೈಕ್ಯರಾದರು ಅರಸೀಕೆರೆಯಿಂದ ಅವರ ಲಿಂಗೈಕ್ಯ ದೇಹವನ್ನು ನಂದಿಗುಡಿಗೆ ತಂದು ಕಾಲವಿಳಂಬವಾದ್ದರಿಂದ ಅವರ ಸಮಾಧಿಯನ್ನು ನಂದಿಗುಡಿಯಲ್ಲಿಯೇ ಮಾಡಲಾಗಿ ಅಲ್ಲಿಯೇ ಗದ್ದಿಗೆ ನಿರ್ಮಾಣವಾಗಿದೆ. ಇವರು ಲಿಂಗೈಕ್ಯರಾದ ನಂತರ ಮಠವು ಗುರುವಿಲ್ಲದೆ ೧೦ ವರ್ಷಗಳ ಕಾಲ ಬರಿದಾಗಿತ್ತು. ಅಲ್ಲಿಯ ಭಕ್ತರಲ್ಲಿ ಧರ್ಮ ಜಾಗೃತಿಯನ್ನುಂಟುಮಾಡುವ ಒಳ್ಳೆಯ ಗುರುವಿನ ಹುಡುಕಾಟದಲ್ಲಿದ್ದಾಗ ದೊರೆತ ಮಹಾಚೇತನವೇ ಶ್ರೀ ಶ್ರೀ ಬಸವರಾಜ ದೇಶೀಕೇಂದ್ರ ಮಹಾಸ್ವಾಮಿಗಳು. ಭಕ್ತರ ಅಪೇಕ್ಷೆ ಮತ್ತು ಗುರುಗಳ ಇಚ್ಛೆಯ ಮೇರೆಗೆ ಹೈಸ್ಕೂಲು, ವಿದ್ಯಾಭ್ಯಾಸ ಮಾಡುವಾಗಲೇ ೧೯೪೫ ಏಪ್ರಿಲ್ ೨೪ರಂದು ಅತ್ತಿಕಟ್ಟೆ ಮಠದ ಚರಪಟ್ಟಾಧಿಕಾರಿ ಮತ್ತು ಆಶ್ರಮಾಧಿಕಾರವನ್ನು ನಂದಿಗುಡಿಯ ಜಗದ್ಗುರು ಶ್ರೀ ಶ್ರೀ ಶ್ರೀ ಮೃತ್ಯುಂಜಯ ಶಿವಾಚಾರ್ಯ ಮಹಾಸ್ವಾಮಿಗಳು ನೆರವೇರಿಸಿದರು. ಈ ಸಮಾರಂಭದಲ್ಲಿ ತಿಪಟೂರು ಶಿಡ್ಲಹಳ್ಳಿ ಸಂಸ್ಥಾನಾಧಿಶ್ವರರಾದ ಶ್ರೀ ಶ್ರೀ ಶ್ರೀ ಜಗದ್ಗುರು ಕರಿಬಸವ ದೇಶಿಕೇಂದ್ರ ಮಹಾಸ್ವಾಮಿಗಳು ಹಾಗೂ ಗೋಡೆಕೆರೆಯ ಶ್ರೀ ಶ್ರೀ ಶ್ರೀ ಜಯಚಂದ್ರಶೇಖರ ಮಹಾಸ್ವಾಮಿಗಳು ಉಪಸ್ಥಿತರಿದ್ದರು. ಗುರುಗಳಿಗೆ ಶ್ರೀ ಶ್ರೀ ಶ್ರೀ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳೆಂದು ನಾಮಕರಣ ಮಾಡಲಾಯಿತು. ಗುರುಗಳಲ್ಲಿದ್ದ ಸರಳತೆ ಸೌಜನ್ಯತೆ, ಆಚಾರ ವಿಚಾರಗಳನ್ನು ಅರಿತ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಪುಷ್ಪಗಿರಿ ಸಂಸ್ಥಾನದ ಭಕ್ತರು ಇವರನ್ನು ಚೀಲೂರು ಮಠಕ್ಕೆ ಶ್ರೀ ಶ್ರೀ ಶ್ರೀ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳೆಂಬ ಪಟ್ಟಾಧಿಕಾರಿಗಳನ್ನಾಗಿ ಮಾಡಿದರು. ೧೯೬೧ರಲ್ಲಿ ಚೀಲೂರು ಗುಂಡಶೆಟ್ಟಿಹಳ್ಳಿ ಯಲಗುಂದ ಮಠಗಳನ್ನು ಏಕೀಕರಣಗೊಳಿಸಿ ಪುಷ್ಪಗಿರಿ ಮಹಾಸಂಸ್ಥಾನದಲ್ಲಿ ವಿಲೀನಗೊಳಿಸಿ ಶ್ರೀ ಶ್ರೀ ಶ್ರೀ ರಾಜಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳನ್ನೇ ಪುಷ್ಪಗಿರಿ ಮಹಾಸಂಸ್ಥಾನದ ಅಧಿಪತಿಗಳನ್ನಾಗಿ ಮಾಡಲಾಯಿತು. ಪುಷ್ಪಗಿರಿ ಅತ್ತಿಕಟ್ಟೆ ಎರಡೂ ಮಠಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಶ್ರೀಗಳವರು ೧೯೬೬ರಲ್ಲಿ ಬ್ಯಾಡಗಿ ತಾಲ್ಲೂಕು ಸೂಡಂಬಿಯಲ್ಲಿ ೧೯೬೬ರಲ್ಲಿ ಶಿವಾನಂದ ಪ್ರೌಢಶಾಲೆ ಹಾಗೂ ಬಸವರಾಜೇಂದ್ರ ಉಚಿತ ಪ್ರಸಾದ ನಿಲಯ, ಚಿಕ್ಕಬಾಸೂರಿನಲ್ಲಿ ಸಿದ್ಧರಾಮೇಶ್ವರ ಪ್ರೌಢಶಾಲೆ ಮತ್ತು ಸಿದ್ಧರಾಮೇಶ್ವರ ಹಿಂದುಳಿದ ವಿದ್ಯಾರ್ಥಿಗಳ ಪ್ರಸಾದ ನಿಲಯ ಅಲ್ಲದೇ ಅನಾಥ ಮಕ್ಕಳ ಪ್ರಸಾದ ನಿಲಯ, ಸೊರಬ ತಾಲ್ಲೂಕು ಶಕುನವಳ್ಳಿಯಲ್ಲಿ ಪ್ರೌಢಶಾಲೆ ಮತ್ತು ಅಜ್ಜಯ್ಯ ಸ್ವಾಮಿ ಉಚಿತ ಪ್ರಸಾದ ನಿಲಯ, ಹಿರೇಕೆರೂರು ತಾಲ್ಲೂಕು ಅಣಜಿ ನಾಗವಂದದಲ್ಲಿ ಮಾರುತಿ ಪ್ರೌಢಶಾಲೆ, ಬೂದೇಶ್ವರ ಉಚಿತ ಪ್ರಸಾದ ನಿಲಯಗಳ ಸ್ಥಾಪನೆಯಲ್ಲಿ ಗುರುಗಳ ಪಾತ್ರ ಹಿರಿದಾಗಿದ್ದು, ೧೯೭೮ರಲ್ಲಿ ಹಾಸನ ೧೯೮೦ರಲ್ಲಿ ಹೊಂಕಣ ೧೯೭೭ರಲ್ಲಿ ಬೇಲೂರಿನಲ್ಲಿ ನಡೆದ ಶ್ರೀ ಗುರುಸಿದ್ಧರಾಮೇಶ್ವರ ಜಯಂತಿಗಳು ಇವರುಗಳ ದಿವ್ಯ ಸಾನಿಧ್ಯದಲ್ಲಿ ಯಶಸ್ಸು ಗಳಿಸಿದವು. ದಿನಾಂಕ : ೧೪.೧೦.೧೯೮೭ರಂದು ನಂದಿಗುಡಿ ಸಂಸ್ಥಾನದ ಜಗದ್ಗುರು ಶ್ರೀ ಶ್ರೀ ಮೃತ್ಯುಂಜಯ ಶಿವಾಚಾರ್ಯ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ನಂದಿಗುಡಿ ಜಗದ್ಗುರು ಪೀಠದ ಉಸ್ತುವಾರಿಯನ್ನು ನೋಡಿಕೊಳ್ಳಲು ಯಲಗುಂದ ಶ್ರೀ ಮಠದ ಶ್ರೀ ಸಿದ್ಧರಾಮ ದೇಶಿಕೇಂದ್ರ ಮಹಾಸ್ವಾಮಿಗಳನ್ನು ನಂದಿಗುಡಿ ವೃಷಭಪುರಿ ಸಂಸ್ಥಾನದ ಜಗದ್ಗುರು ಪೀಠಕ್ಕೆ ಪಟ್ಟಾಧ್ಯಕ್ಷರನ್ನಾಗಿ ಮಾಡುವಲ್ಲಿ ಇವರ ಪಾತ್ರ ಹಿರಿದಾದದು. ನಂತರದ ದಿನಗಳಲ್ಲಿ ಶ್ರೀಗಳ ಪ್ರಯತ್ನದ ಫಲವಾಗಿಯೇ ನಂದಿಗುಡಿ ಪೀಠದ ಜಗದ್ಗುರು ಶ್ರೀ ಶ್ರೀ ಶ್ರೀ ನಂದೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ದಿವ್ಯ ಸಾನಿಧ್ಯದಲ್ಲಿ ಜರುಗಿಸಲು ಕಾರಣಿಕರ್ತರಾಗಿದ್ದರು. ಷಟಸ್ಥಲ ಬ್ರಹ್ಮೀ ಎನಿಸಿ ಅಪಾರ–ವಿಚಾರಗಳ ಸಂಗಮವೆನಿಸಿ ಸಮಾಜದ ಏಳಿಗೆಗೆ ಜೀವನವನ್ನು ಸವೆಸಿದ ಮಹಾಚೇತನವಾದ ಶ್ರೀಗಳು ತಮ್ಮ ೭೫ನೇ ವಯಸ್ಸಿನಲ್ಲಿ ಅನಾರೋಗ್ಯದ ನಿಮಿತ್ತ ಏಪ್ರಿಲ್ ೨೪–

೨೦೦೩ರಂದು ಲಿಂಗದಲ್ಲಿ ಲೀನವಾದರು: ಅಂದು ಸಮಾಜದ ಏಳಿಗೆಗೆ ಗುಪ್ತಗಾಮಿನಿಯಂತಿದ್ದ ಒಂದು ದಿವ್ಯ ಚೇತನ ಕಣ್ಮರೆಯಾಗಿ ಭಕ್ತರು ಶೋಕಸಾಗರದಲ್ಲಿ ಮುಳುಗುವಂತಾಯಿತು. ಶ್ರೀ ಶ್ರೀ ಶ್ರೀ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ನಂದಿಗುಡಿ ವೃಷಭಪುರಿ ಸಂಸ್ಥಾನಾಧೀಶ್ವರರಾದ ಜಗದ್ಗುರು ಶ್ರೀ ಶ್ರೀ ಶ್ರೀ ನಂದೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಪುಷ್ಪಗಿರಿ ಅತ್ತಿಕಟ್ಟೆ ಸಂಸ್ಥಾನಾಧಿಪತಿಗಳಾಗಿ ೨೦೦೬ರವರೆಗೆ ನೋಡಿಕೊಂಡರು. ತದನಂತರದಲ್ಲಿ ಶ್ರೀ ಶ್ರೀ ಶ್ರೀ ಮುಮ್ಮಡಿ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳನ್ನು ಅತ್ತಿಕಟ್ಟಿ ಶ್ರೀ ಮಠದ ಪೀಠಾಧ್ಯಕ್ಷರನ್ನಾಗಿ ಮಾಡಿದರು. ಫೆಬ್ರುವರಿ ೨೦೦೭ರಲ್ಲಿ ಶ್ರೀ ಶ್ರೀ ಶ್ರೀ ಮುಮ್ಮಡಿ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳಿಗೆ ನಂದಿಗುಡಿ ಬೃಹನ್ಮಠದ ಉಸ್ತುವಾರಿಯನ್ನು ಕೂಡ ಶ್ರೀ ಶ್ರೀ ಶ್ರೀ ನಂದೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ನೀಡಿದರು. ಇಂದಿನವರೆಗೂ ಕೂಡ ಶ್ರೀ ಶ್ರೀ ಶ್ರೀ ಮುಮ್ಮಡಿ ಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳು ನಂದಿಗುಡಿ ಬೃಹನ್ಮಠ ಮತ್ತು ಅತ್ತಿಕಟ್ಟಿ ಶ್ರೀ ಮಠವನ್ನು ನೋಡಿಕೊಂಡು ಬರುತ್ತಿದ್ದಾರೆ. ಈ ರೀತಿಯಾಗಿ ಸುಕ್ಷೇತ್ರ ಅತ್ತಿಕಟ್ಟಿ ಶ್ರೀ ಮಠವು ಆ ಭಾಗದ ಜನರಿಗೆ ಧರ್ಮದ ವಿಚಾರಗಳನ್ನು ಬೋಧನೆ ಮಾಡುವುದರ ಮೂಲಕ ಶಿವಾನುಭವ ಗೋಷ್ಠಿಗಳನ್ನು ನೆರವೇರಿಸಿಕೊಂಡು ಬರುತ್ತಿದ್ದಾರೆ. ಈ ಭಾಗದಲ್ಲಿ ಅಪಾರ ಸಂಖ್ಯೆಯ ಭಕ್ತರನ್ನು ಹೊಂದಿರುವ ಶ್ರೀ ಮಠವು ನಾಡಿನ ಹೆಮ್ಮೆಯ ಮಠವಾಗುವುದರಲ್ಲಿ ಎರಡು ಮಾತಿಲ್ಲ.

### ಸುಕ್ಷೇತ್ರ ಹೊಂಕಣ ಶ್ರೀ ಮಠ ಹೊಂಕಣ

ಹೊಂಕಣ ಸುಕ್ಷೇತ್ರ ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆಯ ತಿಳುವಳ್ಳಿಯಿಂದ ೪ ಕಿ.ಮೀ. ದೂರದಲ್ಲಿದೆ. ಹೊಂಕಣ ಸುಕ್ಷೇತ್ರವು ವರದಾ ನದಿಯ ಎಡದಂಡೆಯ ಮೇಲೆ ಹೊಳೆಯ ಲಿಂಗೇಶ್ವರ ಹೊಂಕಣ ಸುಕ್ಷೇತ್ರದ ಒಡೆಯ ಸನ್ನಿಧಾನದಲ್ಲಿ ಶ್ರೀಮಠವನ್ನು ನಾವು ಕಾಣಬಹುದು. ಶ್ರೀಮಠವು ಗುಬ್ಬಿ ಅಜ್ಜನ ಮಠ ಎಂಬುದಾಗಿ ಪ್ರಖ್ಯಾತಿಯನ್ನು ಪಡೆದಿದೆ. ಗುಬ್ಬಿ ನಂಜುಂಡೇಶ್ವರ ಸ್ವಾಮಿಗಳು ಜನರ ಕಣ್ಣಿಗೆ ಕುರುಡನಾಗಿ ತೋರುತ್ತಾ ತನ್ನ ಅಂತರಂಗದ ಕಣ್ಣನ್ನು ತೆಗೆದು ಭಕ್ತರ ನೋವನ್ನು ನೀಗುತ್ತಾ ಶತಾಯುವಾಗಿ ಬದುಕಿದ್ದರು. ನಿರಂತರ ೩೦ ವರ್ಷಗಳ ಕಾಲ ಪರಹಿತ ಕಾಯದಲ್ಲಿ ಪಾಲ್ಗೊಂಡಿದ್ದರು. ಜಾತಿ ಮತಭೇದವಿಲ್ಲದೆ ಸಮಾನ ಪಂಕ್ತಿಯಲ್ಲಿ ಉಣಬಡಿಸಿದ ಸಮತಾವಾದಿ ಮಾನವ ಪ್ರೇಮಿ ಅನ್ಯರ ಹಿತಕ್ಕಾಗಿ ತಾನು ಎಂತಹ ನೋವನ್ನಾದರೂ ಅನುಭವಿಸುತ್ತ ಬದುಕಿದ ಈ ನಿರ್ಲಿಪ್ತಜೀವಿಯ ಉಪಕಾರ ಪಡೆದ ಮಂದಿ ಅಜ್ಜನಿಗೆ ಮಠ ಕಟ್ಟುತ್ತೇವೆಂದು ಬಂದರೆ "ಘಟ ಇದ್ದ ಮೇಲೆ ಮಠ ಏಕಲೇ ಘಟ ಹೋದ ಮೇಲೆ ಮಠ" ಎನ್ನುತ್ತಿದ್ದರಂತೆ. ಅಂತರ್ ದೃಷ್ಟಿಯ ದಿವ್ಯ ಶಕ್ತಿಯಿಂದ ಮುಂದಾಗಬಹುದಾದ ಅಪ್ರತ್ಯಕ್ಷವಾದದ್ದನ್ನು ಪ್ರತ್ಯಕ್ಷ ಎನ್ನುವಂತೆ ಭವಿಷ್ಯ ನುಡಿಯುವ ಶಕ್ತಿ ಅಜ್ಜನಿಗಿತ್ತು.

ಗುಬ್ಬಿ ನಂಜುಂಡೇಶ್ವರರು ಗುಬ್ಬಿ ಅಜ್ಜ ಎಂದೇ ಅವರು ಪ್ರಖ್ಯಾತ–ಹೊಂಕಣದ ಜಾತ್ರೆಗೆ ಅಲ್ಲಿ ಗುಬ್ಬಿ ಅಜ್ಜನ ಜಾತ್ರೆ ಎಂದು ಸಂಬೋಧಿಸುತ್ತಾರೆ. ಗುಬ್ಬಿ ಅಜ್ಜನವರು ೧೮೭೦ರಲ್ಲಿ ತುಮಕೂರು ಜಿಲ್ಲೆ ಗುಬ್ಬಿ ಗ್ರಾಮದಲ್ಲಿ ನೊಳಂಬ ಜನಾಂಗದವರ ಬಾವೀ ಮನೆಯವರ ವಂಶದಲ್ಲಿ ಚನ್ನರುದ್ರಯ್ಯ ಎಂಬ ದಂಪತಿಗಳಿಗೆ ೩ನೇ ಮಗನಾಗಿ ಜನಿಸಿದರು. ನಂತರದಲ್ಲಿ ಇದ್ದು ಇಲ್ಲದಂತಿರುವ ಇವರ ಸಣ್ಣ ಕಣ್ಣನ್ನು ಗುರುತಿಸಿದ ಜನರು ಬಾಲಕ ನಂಜುಂಡಯ್ಯ ಹುಟ್ಟು ಕುರುಡ ಎಂದು ತಿಳಿದರು. ಗೋಡೆಕೆರೆ ಶ್ರೀಗಳವರು ಗುಬ್ಬಿ ತಾಲ್ಲೂಕಿನಲ್ಲಿ ಸಂಚಾರಕ್ಕೆ ಹೋಗುವಾಗ ಗುರುಗಳ ದೃಷ್ಟಿ ಬಾಲಕ ನಂಜುಂಡಯ್ಯನ ಕಡೆ ಹರಿಯಿತು. ಆತನಲ್ಲಡಗಿದ್ದ ದಿವ್ಯಶಕ್ತಿ ಕಂಡು ತಮ್ಮೊಡನೆ ಕರೆದುಕೊಂಡು ಹೋಗಲು ಇಚ್ಚಿಸಿದರು. ಅಂದಿನಿಂದ ಗೋಡೆಕೆರೆ ಶ್ರೀ ಮಠದಲ್ಲಿ ಬಾಲಕ ನಂಜುಂಡಯ್ಯನಿಗೆ ಅಕ್ಷರಭ್ಯಾಸವಾಯಿತು. ಮೈಸೂರು, ಶಿವಮೊಗ್ಗ, ಧಾರವಾಡ ಪ್ರದೇಶದ ಈ ಸಹ್ಯಾದ್ರಿ ಭಾಗಕ್ಕೆ ಬಂದು ವರದಾ ನದಿ ತೀರದ ಹೊಂಕಣ ಪ್ರದೇಶದಲ್ಲಿ ನೆಲೆಸಿದರು. ತಮ್ಮ ತಪಸ್ಸಿಗೆ, ಧರ್ಮ ಕಾಯಕದ ಸಾಧ್ಯತೆಗೆ ಇರುವ ಅವಕಾಶವನ್ನು ಮಾಡಿಕೊಂಡರು. ಹೊಂಕಣ ಸುತ್ತಮುತ್ತಲೂ ಶ್ರೀಗಳು ಜನರ ನೋವು–ನಲಿವುಗಳಲ್ಲಿ ತಾವೂ ಪಾಲ್ಗೊಳ್ಳುತ್ತಾ ತಮ್ಮ ನಿರಂತರ ಯೋಗಾಭ್ಯಾಸ ಮತ್ತು ಲೋಕ ಕಲ್ಯಾಣದ ಕಾರ್ಯಸಾಧನೆ ಮತ್ತು ಧ್ಯಾನಗಳಲ್ಲಿ ತೊಡಗಿದರು. ಶ್ರೀ ಗುರುಗಳಿಗೆ ದೈವದತ್ತವಾಗಿ ಗಾಯನದ ವಿದ್ಯೆ ಲಭಿಸಿತ್ತು. ಜನರನ್ನು ತಮ್ಮ ಯತಿಯಾಶ್ರಮದತ್ತ ಗಾಂಧರ್ವ ವಿದ್ಯೆಯಿಂದ ಸೆಳೆದಿದ್ದೇ ಅಲ್ಲದೆ ಯಾರದೇ ದುಃಖಗಳಿದ್ದರೆ ಅದನ್ನು ಪರಿಹರಿಸಲು, ಯಾರಿಗೆ ಅನ್ಯಾಯ ವಾಗಿದೆ ಅವರಿಗೆ ನ್ಯಾಯ ದೊರಕಿಸಲು ಪ್ರಯತ್ನಿಸುತ್ತಿದ್ದರು. ತಮ್ಮ ಕಾರ್ಯ ವ್ಯಾಪ್ತಿಯನ್ನು ಜನರ ನಿತ್ಯ ಬದುಕಿನ ಬವಣೆಯನ್ನು ಪರಿಹರಿಸುವಲ್ಲಿ ವಿನಿಯೋಗಿಸಿದ್ದಲ್ಲದೇ ಈ ಪ್ರಾಂತ್ಯದ ಜನ ಶಕ್ತರಾಗುವಂತೆ ಸ್ವತಂತ್ರ ಪ್ರೇಮಿಗಳಾಗುವಂತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಪ್ರೋತ್ಸಾಹಿಸಿದರು. ಹೊಂಕಣ ಬಳಿ ವರದಾ ನದಿಯ ಹೊಳೆಯಲ್ಲಿ ಹೊಳೇ ಲಿಂಗೇಶ್ವರನನ್ನು ಸ್ಥಾಪಿಸಿ ಪ್ರತಿವರ್ಷ ಮಣ್ಣೆತ್ತಿನ ಅಮವಾಸ್ಯೆಯ ದಿವಸ ಜಾತ್ರೆ, ಉತ್ಸವ, ಉತ್ತಮ ರಾಸುಗಳ ಪ್ರದರ್ಶನ, ಕುಸ್ತಿ ಅಖಾಡ ಸ್ಪರ್ಧೆ

ಮತ್ತು ವೀರಭದ್ರನ ಗುಗ್ಗಳ ಇವುಗಳನ್ನು ಆಚರಿಸುವಲ್ಲಿ ಧರ್ಮ ಮತ್ತು ವಾಸ್ತವತೆಯನ್ನು ರೈತರ ಬದುಕಿಗೆ ಅನುಗುಣವಾಗಿ ರೂಪಿಸಿ ಹೊಂಕಣ ಕ್ಷೇತ್ರ ಜೀವನ ಚೈತನ್ಯದ ಕೇಂದ್ರವಾಗುವಂತೆ ಮಾಡಿದ್ದರು. ಸುಮಾರು ೧೧೦೬ ವರ್ಷ ಬದುಕಿದ್ದು ಗುಬ್ಬಿ ಅಜ್ಜ ಹೊಂಕಣದಲ್ಲಿ ಬಾಲವಾಡಿ ತೆರೆಯುವ ಈ ಪ್ರದೇಶವನ್ನು ಆರ್ಥಿಕವಾಗಿ ಪ್ರಗತಿ ಪಡೆಯುವ ವಿಚಾರದಲ್ಲಿ ಸದಾ ಚಿಂತಿಸುತ್ತಿದ್ದರು. ತಮ್ಮ ಶಿಷ್ಯ ಸಮೂಹದಿಂದ ಯಾವುದೇ ರೂಪದ ಕಾಣಿಕೆ ಬಂದರೆ ಕೆರೆಯ ನೀರನ್ನು ಕೆರೆಗೆ ಚೆಲ್ಲುವಂತೆ ಅದೇ ಜನಕ್ಕೆ ಬಳಸುತ್ತಿದ್ದರು. ಅನ್ನದಾನ, ವಸ್ತ್ರದಾನ, ದೀನ ದುರ್ಬಲರನ್ನು ಸಂತೃಪ್ತಿಪಡಿಸಿ ಅವರೊಡನೆ ತಾವು ಬೆರೆತು ಹೋಗುತ್ತಿದ್ದರು. ಹೊಂಕಣ ಪ್ರದೇಶದಲ್ಲಿ ನಡೆಯುವ ಯಾವುದೇ ರೀತಿ ಮಹಿಮೆ ಆ ಅಜ್ಜನ ಸುಪ್ತ ಶಕ್ತಿಯ ಸಂಕೇತ.

ಇಂತಹ ಉದಾತ್ತ ಸಾರ್ಥಕ ಬದುಕನ್ನು ಬದುಕಿದ ಗುಬ್ಬಿ ಅಜ್ಜ ೧೯೭೬ರಲ್ಲಿ ಹಿರೇಹಳ್ಳಿ ಬಳಿ ಹೊಳೆ ದಂಡೆಯಲ್ಲಿ ವೀರಭದ್ರ ದೇವಾಲಯದ ಸಮೀಪದಲ್ಲಿ ಮುಂಜಾನೆ ಸ್ನಾನ ಮಾಡಿ ಧ್ಯಾನ ಮಾಡುತ್ತಲೇ, ದಿವ್ಯ ಶಕ್ತಿಯಲ್ಲಿ ಲೀನವಾಗಿ ಭೌತಿಕ ದೇಹವನ್ನು ತ್ಯಜಿಸಿದರು. ಅಜ್ಜನ ಸೂಚನೆಯಂತೆ ಹೊಂಕಣದಲ್ಲಿ ಅಜ್ಜನ ಗದ್ದುಗೆ ಸ್ಥಾಪಿಸಿದೆ. ಅಜ್ಜನ ಮಹಿಮೆ ಈ ಪ್ರಕಟವಾಗಿ ವ್ಯಕ್ತವಾಗುತ್ತಿರುವುದು ಸರ್ವವಿದಿತ. ಪವಾಡ ಮಹಿಮೆಗಿಂತ ಮಿಗಿಲಾಗಿ ಅಜ್ಜನಿಗಿದ್ದ ಅರಿವಿನ ಮರೆಯ ಪರಬೊಮ್ಮನಂತಹ ಅಂತರ್ಮುಖ ದೃಷ್ಟಿ ಭೂತನಾಕಂಡೆ. ಮಾನವ ಕಲ್ಯಾಣಕ್ಕೆ ಪೂರಕವಾಗುವಂತೆ ಕ್ರಿಯಾತ್ಮಕ ಮಾರ್ಗದರ್ಶನ ಅವರನ್ನು ಮಾನವನ ಎತ್ತರದಿಂದ ಮಹಾತ್ಮನ ಎತ್ತರಕ್ಕೇರಿಸಿದ ದಿವ್ಯಗುಣಗಳೆಂದು ತಿಳಿಯ ಬಹುದು. ಈ ಯೋಗಮೂರ್ತಿಯು ಗುರುವಿನಿಷ್ಟದಂತೆ ಹೊಂಕಣದ ಕೋಟೆ ಮಧ್ಯದಲ್ಲಿ ಸಮಾಧಿಯಲ್ಲಿ ಪ್ರತಿಷ್ಠಾಪಿತರಾಗಿರುತ್ತಾರೆ. ಅಲ್ಲಿಂದ ಪ್ರತಿ ಅಮಾವಾಸ್ಯೆಗೆ ಗುರು ಅಗೋಚರನಾಗಿದ್ದೇ ಭಕ್ತಾದಿಗಳ ಇಷ್ಟಗಳನ್ನು ಪೂರೈಸುತ್ತಾ ಭೂತ ಪ್ರೇತ ಪಿಶಾಚಿಗಳನ್ನು ದಮನ ಮಾಡುತ್ತಾ ಶ್ರೀಗುಬ್ಬಿ ಅಜ್ಜನು ಸಮಾಧಿಸ್ತನಾಗಿ ತಾರಾ ಯೋಗದಲ್ಲಿ ಕುಳಿತಿದ್ದಾನೆ. ಪ್ರತಿ ಅಮಾವಾಸ್ಯೆ ಪುಣ್ಯಕಾಲಗಳು ದೊಡ್ಡ ಜಾತ್ರೆಗಳು ಈ ಪುಣ್ಯ ಕ್ಷೇತ್ರವನ್ನು ತೀರ್ಥಯಾತ್ರಾ ಕ್ಷೇತ್ರವಾಗಿ ಭಕ್ತಾದಿಗಳನ್ನು ಆಕರ್ಷಿಸುತ್ತದೆ. ಹೊಂಕಣದ ಹೊನ್ನಪ್ರಭಾವಳಿಯು ಕರ್ನಾಟಕದ ಬಹುದೂರದ ಭಾಗಗಳವರೆಗೂ ಹರಡಿದೆ. ಹೊಂಕಣಕ್ಷೇತ್ರದ ಶ್ರೀಮಠದ ಪೀಠವು ಬಹಳ ಕಾಲದಿಂದ ಗುಬ್ಬಿ ಅಜ್ಜನ ಭದ್ರಬುನಾದಿಯಲ್ಲಿದ್ದು ಅವನ ಆಶೀರ್ವಾದದಿಂದ ಶ್ರೀ ಶ್ರೀ ಶ್ರೀ ಅಭಿನವ ನಂಜುಂಡೇಶ್ವರ ಮಹಾಸ್ವಾಮಿಗಳು ಹೊಂಕಣ ಶ್ರೀಮಠವನ್ನು ಮುನ್ನಡೆಸುತ್ತಿದ್ದಾರೆ.

**ಶ್ರೀಶ್ರೀಶ್ರೀ ಅಭಿನವ ನಂಜುಂಡೇಶ್ವರ ಮಹಾಸ್ವಾಮಿಗಳು**

ಶ್ರೀ ಗುಬ್ಬಿ ನಂಜುಂಡೇಶ್ವರರು (ಗುಬ್ಬಿಅಜ್ಜ) ಧರ್ಮಸಮನ್ವಯದ ಮಹಾಚೇತನವಾಗಿದ್ದರು. ಅವರು ಯಾವುದೇ ಜಾತಿಭೇದವಿಲ್ಲದೆ ಎಲ್ಲರನ್ನು ಸಮಾನ. ದೃಷ್ಟಿಯಿಂದ ನೋಡಿಕೊಂಡು ಬಂದ ಮಹಾನ್ ಚೇತನ ಕರ್ನಾಟಕ ದಾದ್ಯಂತ ಜನಪ್ರಿಯರಾಗಿದ್ದ ಈ ಮಹಾನ್ ಚೇತನ. ನಡೆದು ಬಂದ ದಾರಿ ಅತ್ಯಂತ ಕಷ್ಟಕರವಾಗಿದ್ದು. ಇಂಥಹ ಕಾಯಕಜೀವಿ ತಮ್ಮ ಕಾರ್ಯಕ್ಷೇತ್ರವನ್ನಾಗಿ ಹೊಂಕಣವನ್ನು ಮಾಡಿಕೊಂಡು ಅನೇಕ ಕಾರ್ಯಗಳನ್ನು ಮಾಡಿದರು. ಅವರು ಬಂದ ದಾರಿಯಲ್ಲಿ ನಡೆದು ಬಂದಿರುವ ಶ್ರೀ ಶ್ರೀ ಶ್ರೀ ಅಭಿನವ ನಂಜುಂಡೇಶ್ವರ ಮಹಾಸ್ವಾಮಿಗಳು ಶ್ರೀ ಮಠದ ಹೊಂಕಣ ಸುಕ್ಷೇತ್ರವನ್ನು ಸರ್ವರೀತಿಯಲ್ಲಿ ಮುನ್ನಡೆಸುತ್ತಾ ಗುಬ್ಬಿ ಅಜ್ಜ ಹಾಕಿದ ದಾರಿಯಲ್ಲಿ ಶ್ರೀಗುರುಗಳು ಸಾಗುತ್ತಿದ್ದಾರೆ.

ಶ್ರೀ ಶ್ರೀ ಶ್ರೀ ಅಭಿನವ ನಂಜುಂಡೇಶ್ವರ ಸ್ವಾಮಿಗಳು ೨೨-೦೭-೧೯೭೬ರಲ್ಲಿ ಶಿಕಾರಿಪುರ ತಾಲ್ಲೂಕು ಶಿವಮೊಗ್ಗ ಜಿಲ್ಲೆ ಒಂದು ಕುಗ್ರಾಮದಲ್ಲಿ ಜನಿಸಿದರು. ಇವರ ಜನ್ಮನಾಮ ವೇದಮೂರ್ತಿ. ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿ ಮುಗಿಸಿದರು. ಇದು ಇವರ ಕೊನೆಯ ಶಿಕ್ಷಣವಾಯಿತು. ತದನಂತರದಲ್ಲಿ ಮುಂದುವರೆದು ಮೊದಲನೆಯದಾಗಿ ತಮ್ಮ ಕಾಯಕದ ಜೊತೆಗೆ ಹೊರನಾಡಿನಲ್ಲಿ ತಮ್ಮ ಧಾರ್ಮಿಕ ಜೀವನವನ್ನು ಪ್ರಾರಂಭಿಸಿದರು. ನಂತರದಲ್ಲಿ ರಂಭಾಪುರಿ ಪೀಠದಲ್ಲಿ ಎರಡು ವರ್ಷಗಳ ಕಾಲ ಸಂಸ್ಕೃತ ಮತ್ತು ವೇದಾಭ್ಯಾಸ ಮಾಡಿದರು. ಕಾಶಿಯ ಜಂಗಮವಾಡಿ ಮಠದಲ್ಲಿ ಸಂಸ್ಕೃತ ಮತ್ತು ವೇದಾಭ್ಯಾಸ ಮಾಡಿದರು. ಹಲಗೂರು ಬೃಹನ್ಮಠ ಮತ್ತು ಮಂಡ್ಯದಲ್ಲಿ ಅಭ್ಯಾಸ ಮಾಡಿದರು. ಬೆಂಗಳೂರಿನ ಚಿಕ್ಕಪೇಟೆಯ ಮಹಂತರ ಮಠದೊಂದಿಗೆ ನಿರಂತರ ಸಂಪರ್ಕವನ್ನು ಹೊಂದಿದ್ದಾರೆ. ಪುಷ್ಪಗಿರಿ, ಯಲಗುಂದ, ಚಿಲ್ಲೂರು, ಅತ್ತಿಕಟ್ಟೆ, ಉಕ್ಕಡಗಾತ್ರಿ, ರಾಮೇಶ್ವರನ ಹಳ್ಳಿ (ಯಲಗುಂದ) ಹೊಂಕಣ ಮತ್ತು ಕೂಡಿಹಳ್ಳಿ ಇನ್ನೂ ಮುಂತಾದ ಮಠಗಳಲ್ಲಿ ಕಾಯಕದ ಜೊತೆ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಹೊಂಕಣ ಶ್ರೀಮಠಕ್ಕೆ ಬರುವ ಮುಂಚೆ ಯಲಗುಂದ ಮಠದಲ್ಲಿ ೫೧ ದಿವಸಗಳ ಕಾಲ ಅನುಷ್ಠಾನ ಮಾಡಿದರು. ನಂತರದಲ್ಲಿ ನಂದಿಗುಡಿ, ಹಳ್ಳಿಯಾಳ ಉತ್ತರ ಕನ್ನಡ ಜಿಲ್ಲೆಯಲ್ಲಿ ಭಕ್ತರ ಮನೆಯಲ್ಲಿ, ಕೊಡಿಕೊಪ್ಪ ಗದಗ ಜಿಲ್ಲೆಯ ಭಕ್ತರ ಮನೆಯಲ್ಲಿ ನಂದಿಗುಡಿ ಉಕ್ಕಡ ಗಾತ್ರಿಯಲ್ಲಿ ಅನುಷ್ಠಾನವನ್ನು ಮಾಡಿದರು; ಮತ್ತು ಸುಕ್ಷೇತ್ರ ಹೊಂಕಣ ಶ್ರೀಮಠದಲ್ಲಿ ನಲವತ್ತೆಂಟು ದಿವಸ

ಒಂದು ಮಂಡಲ ಕಾಲ ಅನುಷ್ಠಾನವನ್ನು ಮಾಡಿದರು. ಶ್ರೀಗಳವರು ೨೦೦೪ರಲ್ಲಿ ಮೂರು ತಿಂಗಳ ಕಾಲ ಮೌನವ್ರತ ಮಾಡಿದರು. ೨೦೦೬ರಲ್ಲಿ ಡಿಸೆಂಬರ್ ಒಂದು ತಿಂಗಳು ೨೦೦೭ ಪೂರ್ತಿ ವರ್ಷ ಮತ್ತು ೨೦೦೮ರಲ್ಲಿ ಮೂರು ತಿಂಗಳು ಮೌನವ್ರತ ಮಾಡಿದರು. ಒಟ್ಟು ಮೊದಲು ಮೂರು ತಿಂಗಳು ತದನಂತರದಲ್ಲಿ ಹದಿನಾರು ತಿಂಗಳು ಒಟ್ಟಿಗೆ ಮೌನವ್ರತವನ್ನು ಆಚರಿಸಿದರು. ಇದರಲ್ಲಿ ಹೆಚ್ಚಿನ ಕಾಲವನ್ನು ನಂದಿಗುಡಿಯಲ್ಲಿ ಮತ್ತು ಉಳಿದ ಕಡೆಗಳಲ್ಲಿ ಮೌನವ್ರತವನ್ನು ಆಚರಿಸಿದರು.

ಶ್ರೀ ಶ್ರೀ ಶ್ರೀ ಅಭಿನವ ನಂಜುಂಡೇಶ್ವರ ಮಹಾಸ್ವಾಮಿಗಳಾಗಿ ೨೦-೧೨-೨೦೦೬ರಂದು ಸುಕ್ಷೇತ್ರ ಹೊಂಕಣದ ಶ್ರೀಗಳಾಗಿ ಕಾಯಕವನ್ನು ಜನರ ಒತ್ತಾಸೆಯ ಮೇರೆಗೆ ವಹಿಸಿಕೊಂಡರು. ಜನರು ಗುಬ್ಬಿ ಅಜ್ಜನ ರೂಪವನ್ನು ಇವರಲ್ಲಿ ನೋಡುತ್ತಿದ್ದಾರೆ. ಶ್ರೀ ಶ್ರೀ ಶ್ರೀ ಅಭಿನವ ನಂಜುಂಡೇಶ್ವರ ಮಹಾಸ್ವಾಮಿಗಳು ಹೊಂಕಣ ಮಠವನ್ನು ಭಾರತದಲ್ಲಿ ಗುರುತಿಸುವ ಪ್ರಯತ್ನವನ್ನು ಮುನ್ನಡೆಸಿದ್ದಾರೆ. ಈ ನಿಟ್ಟಿನಲ್ಲಿ ಶ್ರೀಗಳು ದಿನನಿತ್ಯ ಕಾಯಕದಲ್ಲಿ ತೊಡಗಿದ್ದಾರೆ. ಮೊದಲು ಕೈಗೆತ್ತಿಕೊಂಡ ಕೆಲಸ ಶ್ರೀ ಮಠಕ್ಕೆ ಪ್ರಾಕಾರ ಗೋಡೆಯ ನಿರ್ಮಾಣ ಮತ್ತು ದೀಪದ ವ್ಯವಸ್ಥೆಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ತದನಂತರದಲ್ಲಿ ಮಠದ ಆವರಣದಲ್ಲಿ ಡಾಂಬರೀಕರಣ, ತದನಂತರದಲ್ಲಿ ಸರಕಾರದ ಅನುದಾನದಲ್ಲಿ ಯಾತ್ರಿ ನಿವಾಸವನ್ನು ಮಂಜೂರು ಮಾಡಿಸಿದ್ದಾರೆ. ೨೦೦೮ರ ಮಹಾಶಿವರಾತ್ರಿಯ ಅಮಾವಾಸ್ಯೆಯಿಂದ ಶಿವಾನುಭವ ಗೋಷ್ಠಿ ಮತ್ತು ದಾಸೋಹದ ವ್ಯವಸ್ಥೆಯನ್ನು ಮಾಡುತ್ತಾ ಬಂದಿದ್ದಾರೆ. ಹಲವಾರು ವಿದ್ವಾಂಸರಿಂದ ಉಪನ್ಯಾಸಗಳನ್ನು ನೀಡಿಸುತ್ತಿದ್ದಾರೆ. ಶ್ರೀ ಗುಬ್ಬಿ ನಂಜುಂಡೇಶ್ವರರ ಕತೃಗದ್ದಿಗೆಯನ್ನು ಜೀರ್ಣೋದ್ಧಾರ ಮಾಡುವ ಕಾಯಕವನ್ನು ಕೈಗೆತ್ತಿಕೊಂಡಿದ್ದಾರೆ. ಕತೃಗದ್ದಿಗೆಗೆ ಕಲ್ಲಿನ ದೇವಸ್ಥಾನವನ್ನು ಕಟ್ಟುವ ಕಾರ್ಯ ನಡೆಯುತ್ತಿದೆ ಅದಕ್ಕಾಗಿ ಶ್ರೀಗಳು ಪ್ರವಾಸವನ್ನು ಕೈಗೊಂಡು ಭಕ್ತಾದಿಗಳಿಂದ ದೇಣಿಗೆಯನ್ನು ಕಲೆಹಾಕುತ್ತಿದ್ದಾರೆ. ಶ್ರೀಗಳ ಈ ಮಹಾದಾಶೆಗೆ ಸಮಸ್ತ ಭಕ್ತಾದಿಗಳು ತನು ಮನ ಧನದಿಂದ ಸಹಾಯವನ್ನು ಮಾಡುತ್ತಿದ್ದಾರೆ. ಇನ್ನೂ ಕೆಲವೇ ತಿಂಗಳುಗಳಲ್ಲಿ ಪೂರ್ಣಗೊಳ್ಳುವ ಮಹಾದಾಶೆಯನ್ನು ಶ್ರೀಗಳವರು ವ್ಯಕ್ತಪಡಿಸಿದ್ದಾರೆ. ಅದೇ ರೀತಿಯಾಗಿ ಶ್ರೀಗಳು ಹೊಂಕಣದ ಹೊಳೆಯ ಲಿಂಗೇಶ್ವರ ದೇವಾಲಯ ಹೊಳೆಯಲ್ಲಿರುವ ಲಿಂಗದ ಗುಡಿ. ಇದನ್ನು ಜೀರ್ಣೋದ್ಧಾರ ಮಾಡುವ ಆಸೆಯನ್ನು ವ್ಯಕ್ತಪಡಿಸಿದ್ದಾರೆ ಜೊತೆಗೆ ನಿತ್ಯ ದಾಸೋಹವನ್ನು ಮಾಡುವ ವ್ಯವಸ್ಥೆಯನ್ನು ಕೈಗೊಳ್ಳುವ ಪ್ರಯತ್ನದಲ್ಲಿದ್ದಾರೆ.

ಸದಾ ಹಸನ್ಮುಖಿಯಾಗಿರುವ ಶ್ರೀ ಶ್ರೀ ಶ್ರೀ ಅಭಿನವ ನಂಜುಂಡೇಶ್ವರರು ಯಾವಾಗಲೂ ಆಯಾಸವಿಲ್ಲದೆ ಚುರುಕುತನದಿಂದ ಓಡಾಡಿಕೊಂಡು ಕಾಯಕದಲ್ಲಿ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಾರೆ. ಶ್ರೀಗಳು ಕಂಪ್ಯೂಟರ್‌ನ್ನು ಇಟ್ಟುಕೊಂಡು ಅದರ ಮೂಲಕ ಲೆಕ್ಕಪತ್ರಗಳನ್ನು ನೋಡಿಕೊಂಡು ಬರುತ್ತಿದ್ದಾರೆ. ಯಾವಾಗಲೂ ಸತತ ಅಭ್ಯಾಸದಲ್ಲಿ ನಿರತವಾಗಿರುತ್ತಾರೆ. ನಿರಂತರ ಶ್ರಮಜೀವಿಯಾಗಿರುವ ಶ್ರೀಗಳು ಎಲ್ಲಾ ಕಾರ್ಯಗಳಲ್ಲೂ ಯಶಸ್ವಿಯಾಗುತ್ತಾರೆ ಎಂಬ ನಂಬಿಕೆ ಜನರಲ್ಲಿ ಮೂಡಿದೆ ಜೊತೆಗೆ ಹೊಂಕಣ ಶ್ರೀಮಠದ 'ಟ್ರಸ್ಟ್' ಸದಸ್ಯರು ಮತ್ತು ಹೊಂಕಣ ಜನತೆ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಸುಕ್ಷೇತ್ರ ಹೊಂಕಣಕ್ಕೆ ಪ್ರತಿ ಅಮಾವಾಸ್ಯೆಯಂದು ಸಾವಿರಾರು ಜನರು ಬರುತ್ತಾರೆ ಜೊತೆಗೆ ಮಣ್ಣೆತ್ತಿನ ಅಮಾವಾಸ್ಯೆಯಂದು ಪ್ರಸಿದ್ಧ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ಜನರು ಭಾಗವಹಿಸುತ್ತಾರೆ. ಶ್ರೀಗಳು ಸುಕ್ಷೇತ್ರ ಹೊಂಕಣವನ್ನು ಧರ್ಮಸ್ಥಳ ಮತ್ತು ಹೊರನಾಡು ಮಾದರಿಯಲ್ಲಿ ಅಭಿವೃದ್ಧಿ ಪಡಿಸುವ ಮಹದಾಸೆಯನ್ನು ವ್ಯಕ್ತಪಡಿಸಿದ್ದಾರೆ. ಶ್ರೀಗಳ ಈ ಎಲ್ಲಾ ಆಸೆಗಳು ಈಡೇರಲೆಂದು ಹೊಂಕಣದ ಒಡೆಯ ಶ್ರೀ ಗುಬ್ಬಿ ಅಜ್ಜ (ಶ್ರೀ ಗುಬ್ಬಿ ನಂಜುಂಡೇಶ್ವರ) ಕರುಣಿಸಲಿ.

## ಆಧಾರಸೂಚಿ


೧. ಕ್ಷೇತ್ರ ಕಾರ್ಯ.

೨. ಡಾ. ಜಿ. ಕೆಂಚವೀರಯ್ಯ, ಕತ್ತಿಗೆ ಬಿ. ಚನ್ನಪ್ಪ, **ನಂದಿಗುಡಿ ಸಂಪದ**, ಸ್ಮರಣ ಸಂಚಿಕೆ, ನಂದಿಗುಡಿ, ೧೯೯೯.

೩. ಶ್ರೀ ಓ.ಜಿ. ಶಾಂತವೀರಯ್ಯ, **ಪವಾಡಪುರುಷ, ಉಕ್ಕಡಗಾತ್ರಿ ಅಜ್ಜಯ್ಯ, ಶ್ರೀ ಕರಿಬಸವೇಶ್ವರರು**, ಉಕ್ಕಡಗಾತ್ರಿ, ೨೦೦೫.

೪. ಶ್ರೀ ಗಡಿಕಟ್ಟೆ ಧನಂಜಯಪ್ಪ **'ದಶದರ್ಶಿನಿ'** ಸ್ಮರಣ ಸಂಚಿಕೆ, ಶ್ರೀ ನಂದಿ ಪ್ರಕಾಶನ, ನಂದಿಗುಡಿ, ೨೦೦೨.

೫. **ಶ್ರೀ ನಂದಿ-ಪುಷ್ಪ-ಸಿದ್ಧ** ಸ್ಮರಣ ಸಂಚಿಕೆ, ಶ್ರೀಗುರು ಸಿದ್ಧರಾಮೇಶ್ವರರ ೮೩೩ನೇ ಜಯಂತಿ ಮಹೋತ್ಸವ, ನಂದಿಗುಡಿ, ೨೦೦೬.

೬ **ಧರ್ಮ ಭೂಮಿ ರಾಜ್ಯದ ಮಠಪೀಠಗಳ ದರ್ಶನ**, ವಿಜಯಕರ್ನಾಟಕ, ಬೆಂಗಳೂರು, ೨೦೦೭.

ಡಾ. ಎ.ಕೆ. ಶಾಸ್ತ್ರಿ*

# ಗೋಕರ್ಣದ ಬಂಡಿಕೇರಿಯಲ್ಲಿ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳಿಂದ ಚಿತ್ರಾಪುರ ಸಾರಸ್ವತರ ಮಠ ಸ್ಥಾಪನೆ

ಗೋಕರ್ಣ ಕ್ಷೇತ್ರದ ಬಂಡಿಕೇರಿ[೧]ಯಲ್ಲಿ ಚಿತ್ರಾಪುರ ಸಾರಸ್ವತರ[೨] ಮಠ ಕ್ರಿ.ಶ. ೧೭೦೮ರಲ್ಲಿ ಸ್ಥಾಪನೆಯಾಯಿತು. ಪ್ರಥಮ ಶ್ರೀ ಪರಿಜ್ಞಾನಾಶ್ರಮ (ಕ್ರಿ.ಶ. ೧೭೦೮–೧೭೨೦) ಸ್ವಾಮಿಗಳು ಅಲ್ಲಿಯ ಪೀಠವನ್ನಲಂಕರಿಸಿದ ಪ್ರಥಮ ಗುರುಗಳು[೩]. ಶ್ರೀ ಪರಿಜ್ಞಾನಾಶ್ರಮದ ನಂತರ, ಭಟ್ಕಳ ತಾಲೂಕಿನ ಶಿರಾಲಿಗೆ ಹೊಂದಿಕೊಂಡಿರುವ ಚಿತ್ರಾಪುರದಲ್ಲಿ ಮಠ ನಿರ್ಮಾಣವಾಯಿತಾದರೂ ಚಿತ್ರಾಪುರ ಸಾರಸ್ವತರ ಪ್ರಥಮ ಮಠ ಸ್ಥಾಪನೆಯಾಗಿದ್ದು ಗೋಕರ್ಣದ ಬಂಡಿಕೇರಿಯಲ್ಲಿ[೪]. ಕಳೆದ ಮುನ್ನೂರು ವರ್ಷಗಳ ಅವಧಿಯಲ್ಲಿ ಪ್ರಥಮ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳ ನಂತರ ಪೀಠವನ್ನು ಅಲಂಕರಿಸಿದವರು, ಕ್ರಮವಾಗಿ, ಪ್ರಥಮ ಶ್ರೀ ಶಂಕರಾಶ್ರಮ (ಕ್ರಿ.ಶ. ೧೭೨೦–೧೭೫೭), ದ್ವಿತೀಯ ಶ್ರೀ ಪರಿಜ್ಞಾನಾಶ್ರಮ (ಕ್ರಿ.ಶ. ೧೭೫೭–೧೭೭೦), ದ್ವಿತೀಯ ಶ್ರೀ ಶಂಕರಾಶ್ರಮ (ಕ್ರಿ.ಶ. ೧೭೭೦–೧೭೮೫), ಶ್ರೀ ಕೇಶವಾಶ್ರಮ (ಕ್ರಿ.ಶ. ೧೭೮೫–೧೮೨೩), ಶ್ರೀ ವಾಮನಾಶ್ರಮ (ಕ್ರಿ.ಶ. ೧೮೨೩–೧೮೩೯), ಶ್ರೀಕೃಷ್ಣಾಶ್ರಮ (ಕ್ರಿ.ಶ. ೧೮೩೯–೧೮೬೩), ಶ್ರೀ ಪಾಂಡುರಂಗಾಶ್ರಮ (ಕ್ರಿ.ಶ. ೧೮೬೩–೧೯೧೫), ಶ್ರೀ ಆನಂದಾಶ್ರಮ (ಕ್ರಿ.ಶ. ೧೯೧೫–೧೯೬೬) ಮತ್ತು ತೃತೀಯ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳು (ಕ್ರಿ.ಶ. ೧೯೬೭–೧೯೭೯).[೫] ಗುರುಪರಂಪರೆಯಲ್ಲಿ ಹನ್ನೊಂದನೆಯವರಾದ ಇಂದಿನ ಶ್ರೀ ಸದ್ಯೋಜಾತ ಶಂಕರಾಶ್ರಮ ಸ್ವಾಮಿಗಳು ೧೯೯೭ರ ಫೆಬ್ರವರಿ ೨೭ರಂದು ಪೀಠಕ್ಕೆ ಬಂದರು.

ಚಿತ್ರಾಪುರ ಮಠದ ಚರಿತ್ರೆಯ ಮೇಲೆ ಬೆಳಕು ಬೀರುವ ಸಹಸ್ರಾರು ಕಾಗದ ಪತ್ರಗಳು, ಧಾರ್ಮಿಕ ಮತ್ತು ಸಾಹಿತ್ಯಕ ವಿಷಯಗಳಿಗೆ ಸಂಬಂಧಿಸಿದ ಸುಮಾರು ೨೦೦ ತಾಡೋಲೆ ಕಟ್ಟುಗಳು ಮತ್ತು ಐತಿಹಾಸಿಕ ಮಹತ್ವವುಳ್ಳ ಅಪರೂಪದ ವಿಗ್ರಹ ಮತ್ತು ವಸ್ತುಗಳನ್ನೊಳಗೊಂಡ ವಸ್ತುಸಂಗ್ರಹಾಲಯ, ಇವುಗಳನ್ನೆಲ್ಲ ಶ್ರೀಮಠದಲ್ಲಿ ಕಾದಿರಿಸಲಾಗಿದೆ. ಪ್ರತಿಮಾ ಶಿಲ್ಪಗಳ ಅಧ್ಯಯನ ಮಾಡಲು ಚಿತ್ರಾಪುರ ಮಠದ ವಸ್ತುಸಂಗ್ರಹಾಲಯ ಅತ್ಯಂತ ಉಪಯುಕ್ತವಾಗಿದೆ.

ಕ್ರಿ.ಶ. ೧೭೦೮ರಲ್ಲಿ ಗೋಕರ್ಣದ ಬಂಡಿಕೇರಿಯಲ್ಲಿ ಚಿತ್ರಾಪುರ ಸಾರಸ್ವತರ ಮಠ ಸ್ಥಾಪನೆಯಾದಾಗಿನಿಂದ ಇಂದಿನವರೆಗಿನ, ಅಂದರೆ ಸುಮಾರು ೩೦೦ ವರ್ಷಗಳ ಚರಿತ್ರೆಯ ಮೇಲೆ ಮಠದಲ್ಲಿ ಲಭ್ಯವಿರುವ ದಾಖಲೆಗಳು ಬೆಳಕು ಚೆಲ್ಲುತ್ತವೆ. ಕುಶಸ್ಥಳಿ ಗೃಹಸ್ಥರು, ಸ್ವಧರ್ಮ, ಗೋಕರ್ಣದಲ್ಲಿ ಶ್ರೀ ಭವಾನಿಶಂಕರ ದೇವರ ಪ್ರತಿಷ್ಠಾಪನೆ, ಭೂವ್ಯವಹಾರ, ಕಂದಾಯ, ಶಿಷ್ಯರ ಆಚಾರವಿಚಾರ, ನಂದಾದೀಪ್ತಿ, ಅಮೃತಪಡಿ, ಮಹಾಸಭೆಯ ಗೊತ್ತುವಳಿಗಳು, ಉತ್ಸವಗಳು, ಚಾತುರ್ಮಾಸ್ಯ ಮತ್ತು ಅನೇಕ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳಿಗೆ ಸಂಬಂಧಿಸಿ ಮಠದಲ್ಲಿಯ ಕಾಗದ ಪತ್ರಗಳು ಮಾಹಿತಿ ನೀಡುತ್ತವೆ. ಹೆಚ್ಚಿನ ಕಾಗದ ಪತ್ರಗಳು ಕನ್ನಡ ಭಾಷೆಯಲ್ಲಿದ್ದು, ಕನ್ನಡ ಮೋಡಿ ಲಿಪಿಯನ್ನು ಹೊಂದಿವೆ. ಶ್ರೀ ಆನಂದಾಶ್ರಮರ ಕಾಲದ ಅಂತಿಮ ಎರಡು ದಶಕಗಳಿಂದ, ಅಂದರೆ ಸುಮಾರು ೧೯೪೦ ರಿಂದ ಮಠದೊಂದಿಗಿನ ಪತ್ರವ್ಯವಹಾರಗಳೆಲ್ಲ ಇಂಗ್ಲಿಷ್‌ನಲ್ಲಿರುವುದು ಕಂಡುಬರುತ್ತದೆ.[೬]

ಸಂಸ್ಕೃತ ಭಾಷೆ ಮತ್ತು ದೇವನಾಗರಿ ಲಿಪಿಯಲ್ಲಿರುವ ತಾಡೋಲೆಗಳ ಸುಮಾರು ೨೦೦ ಕಟ್ಟುಗಳು ಇಂದಿನ ಚಿತ್ರಾಪುರ ಮಠದಲ್ಲಿ ಲಭ್ಯವಿರುತ್ತವೆ. ತಿಗಳಾರಿ ಲಿಪಿಯಲ್ಲಿರುವ ಕೆಲವೇ ತಾಡೋಲೆ ಕಟ್ಟುಗಳೂ ಲಭ್ಯವಾಗಿವೆ. ಚಾತುರ್ಮಾಸ್ಯ, ಅಮರಕೋಶ, ಆಶ್ವಲಾಯನಸ್ಮೃತಿ, ಶಿವಪೂಜಾ, ಪುಣ್ಯಾಹ ವಾಚನ, ಬ್ರಹ್ಮಸೂತ್ರ, ವ್ಯಾಸಭಾಷ್ಯ, ದುರ್ಗಾಸಪ್ತಶತೀ, ವಾಲ್ಮೀಕಿ ರಾಮಾಯಣ, ಮಹಾಭಾರತ, ವ್ಯಾಕರಣ, ವಿವೇಕ ಚಿಂತಾಮಣಿ, ಶಿವಗೀತೋಪನಿಷತ್, ನವಗ್ರಹ ಮಂಗಲಾಷ್ಟಕ, ಭಾಗವತ, ಪರಾಶರಸ್ಮೃತಿ, ಸಿದ್ಧಾಂತಕೌಮುದಿ, ವಿಷ್ಣುಸಹಸ್ರ ನಾಮಾವಳಿ, ಶಿವಸ್ತುತಿ, ಜ್ಯೋತಿಷ್‌ಗ್ರಂಥ, ಹರಿವಂಶ, ಯಾಜ್ಞವಲ್ಕ್ಯ, ಸ್ಕಂದಪುರಾಣ, ಪುರಂದರದಾಸರ ಕೃತಿಗಳು, ಗರ್ಭದಾನ ಪ್ರಯೋಗ, ಅಪಮೃತ್ಯು ಉಪಶಮನಸ್ತೋತ್ರಮ್, ವೇದಾಂತಸೂತ್ರಮ್, ಯಜ್ಞೋಪವೀತಲಕ್ಷಣ, ಸಂಸ್ಕೃತ ವ್ಯಾಕರಣ, ಇತ್ಯಾದಿ ಗ್ರಂಥಗಳ ಹಸ್ತಪ್ರತಿಗಳು ತಾಡೋಲೆಗಳ

*'ಭವಾನಿ', ವಿದ್ಯಾಗಿರಿ, ಟಿ.ಎಸ್.ಎಸ್. ರೈಸ್ ಮಿಲ್, ಸಿರಸಿ (ಉ.ಕ.).

ಸಂಗ್ರಹದಲ್ಲಿದೆ. ಪ್ರಸ್ತುತ ಲೇಖನವು ಗೋಕರ್ಣದ ಬಂಡಿಕೇರಿಯಲ್ಲಿ ಮಠ ಸ್ಥಾಪನೆ ಮತ್ತು ಪ್ರಥಮ ಶ್ರೀ ಪರಿಜ್ಞಾನಾಶ್ರಮರ ಕಾಲಕ್ಕೆ ಸೀಮಿತವಾಗಿರುವುದರಿಂದ ಇವುಗಳಿಗೆ ಸಂಬಂಧಿಸಿದ ದಾಖಲೆಗಳನ್ನಷ್ಟೇ ಪರಿಶೀಲಿಸುವುದು ಸೂಕ್ತ.

ಶಾಲಿವಾಹನ ಶಕ ವರುಷ ೧೬೪೨ನೇ ಶಾರ್ವರಿ ಸಂವತ್ಸರದ ಚೈತ್ರ ಶುದ್ಧ ೫ (ಶನಿವಾರ, ಏಪ್ರಿಲ್ ೨, ೧೭೨೦) ರಂದು ಶ್ರೀಮತ್ ಕೃಷ್ಣಯ್ಯ ಶಾನುಭೋಗರಿಗೆ ಕುಶಸ್ಥಳಿ ಹತ್ತು ಸಮಸ್ತರು ಬರೆಸಿಕೊಟ್ಟ ಭಾಷಾಪತ್ರದ ತಹಾ (ತಹನಾಮೆ: ಒಪ್ಪಂದದ ಪತ್ರ ; ಕರಾರುಪತ್ರ)ದ ಕಾಗದವು, ಲೇಖಕರಿಗೆ ಶ್ರೀಮಠದಲ್ಲಿ ದೊರೆತ ಕಾಗದದ ಹಸ್ತಪ್ರತಿಗಳಲ್ಲಿ ಅತ್ಯಂತ ಹಿಂದಿನ ದಾಖಲೆಯಾಗಿದೆ.[೭] ಕಾಶಿಯಿಂದ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳು ಗೋಕರ್ಣಕ್ಕೆ ತೆರಳಿ ಬಂದ ಸಮಾಚಾರ, ಗೋಕರ್ಣದ ಗೃಹಸ್ಥರು ಅವರನ್ನು ಕಂಡು ವಿಚಾರಿಸಲಾಗಿ, ಅವರು ಗೌಡಸಾರಸ್ವತ ಸನ್ಯಾಸಿಗಳು ಎಂಬುದನ್ನು ನಿಶ್ಚಯ ಮಾಡಿ, ತಮ್ಮ ವರ್ಗದಲ್ಲಿ ಬ್ರಹ್ಮಕರ್ಮಕ್ಕೆ ಸನ್ಯಾಸತನ ಬೇಕೆಂದು ಅವರನ್ನು ಗೋಕರ್ಣದಲ್ಲೇ ನಿಲ್ಲಿಸಿಕೊಂಡು, ಗೋಕರ್ಣ, ಮಿಡಜೆ, ಹರಿಟೆ ಮತ್ತು ಚಂದಾವರದ ಗೃಹಸ್ಥರು ಕೂಡಿ, ಬಿದರೂರು [ಬಿದನೂರು] ಗೃಹಸ್ಥರಿಗೆ ಬರೆಸಿ ಕಳುಹಿಸಿ, ಅವರು ಹತ್ತು ಪ್ರಮುಖರೂ ಒಪ್ಪಿ, ಶಿಷ್ಯರನ್ನು ಮಾಡಿಸಿ, ಮಠಮಾನ್ಯ ಕಟ್ಟಿಸಿ, ಉತ್ತಾರ (ಉಂಬಳಿ)ವ ಬರೆಸಿ ನಡೆಸಿಕೊಂಡು ಬಂದ ವೃತ್ತಾಂತ ದಾಖಲೆಯಿಂದ ಸ್ಪಷ್ಟವಾಗುತ್ತದೆ. ಈ ಎಲ್ಲ ವೃತ್ತಾಂತವನ್ನು, ಬಿದರೂರಿನ ಗೃಹಸ್ಥರು, ತಿಮ್ಮಾಪಂಡಿತರು, ವೆಂಕಟೇಶ ಪಂಡಿತರು, ಉಗ್ರಾಣದ ದೇವಪ್ಪನವರು, ಮನೆವಾರ್ತೆ ಅನಂತಯ್ಯನವರು, ಚಿಕ್ಕರಮನೆ ಗಣಪಯ್ಯನವರು, ನಾಗರಕಟ್ಟೆ ದೇವಪ್ಪನವರು, ಬಿಯ್ಯಾರ ಶಾಂತಯ್ಯ ಶೇನಬವರು, ಬೆಳ್ಳಿಮಹಾಲ ಮಂಗೇಶ ಶಾನುಭೊವರು, ಸಶಿಹಿತ್ತಲು ಸಾಂತಯ್ಯ ಶಾನುಬೊವರು, ರಂಗಾಜಿ ಅನಂತಯ್ಯನವರು, ಹಟ್ಟಂಗಡಿ ಅಪ್ಪಯ್ಯ ಶೇನಬೊವರು, ಕಲ್ಯಾಣಪುರದ ದೇವಯ್ಯ ಶೇನಬೊವರು, ಮುಂತಾದ ಗೃಹಸ್ಥರು ಮಿಡಜೆ, ಗೋಕರ್ಣ, ಹರಿಟೆ, ಚಂದಾವರ, ಗೆರಸೊಪ್ಪೆ, ಶಿರಾಲಿ, ಭಟ್ಕಳ ಮುಂತಾದ ಸ್ಥಳಗಳಲ್ಲಿಯ ಗೃಹಸ್ಥರಿಗೆ ಬರೆಸಿ ಕಳುಹಿದರೆಂದು ತಿಳಿದುಬರುತ್ತದೆ. ಮುಂದೆ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳ ಶಿಷ್ಯರನ್ನಾಗಿ ಮಾಡಲೆಂದು, ಹರಿಟೆ ಅನಂತಯ್ಯನವರ ಮುಖಾಂತರ, ಕೃಷ್ಣಯ್ಯ ಶಾನಭೋಗರಿಗೆ, ತಮ್ಮ ಮಗ ಮರ್ತೆಗೆ ಸನ್ಯಾಸ ಕೊಡುವಂತೆ, ಗೃಹಸ್ಥರೆಲ್ಲ ಕೇಳಿಕೊಳ್ಳಲು, ಮಗನನ್ನು ಸನ್ಯಾಸಿಯಾಗಿ ಮಾಡುವುದರಿಂದ, ತನಗೆ ಏನೂ ಆಧಾರ ಇಲ್ಲದಂತಾಗುತ್ತದೆ ಎಂದು ಕೃಷ್ಣಯ್ಯ ಹೇಳಿದರು. ಈ ಪೂರ್ವೋತ್ತರಗಳನ್ನೆಲ್ಲ ಪುನಃ ಬಿದರೂರ ಗೃಹಸ್ಥರಿಗೆ ಬರೆಸಿ ಕಳುಹಿಸಲು, ಅಲ್ಲಿರುವ ಗೃಹಸ್ಥರೆಲ್ಲ ಪ್ರಸಂಗಿಸಿಕೊಂಡು (ಚರ್ಚಿಸಿ), ಕೃಷ್ಣಯ್ಯ ಶಾನಭೋಗರೊಂದಿಗೆ ಮಾಡಿಕೊಂಡ ಕರಾರುಪತ್ರ ಇಂತಿದೆ :

"...ಯಿಾ ಮಠವ ನಡೆಸುವ ಯಜಮಾನತನಕೆ ನಿಮಗೆ ನೇಮಕ ಮಾಡಿಸಿ ನಡದು ಬರುವ ಹಾಗೂ ಮುಂದೆ ಶಿಷ್ಯರು ಆಗಬೇಕಾದರೆ ನಿಂಮು ಕುಟುಂಬದವರೇ ನೋಡಿಕೊಂಡು ಬರಬೇಕೆಂದು ತಾಹಾ ಮಾಡಿಕೊಡುವ ಹಾಂಗೆ ಬರೆದು ಬಂದದರಿಂದ ನಾಂವು ಸಮಸ್ತರ ಕೂಡಿ ನಿಂಮ ಮಗ ಮರ್ತೆಗೆ ಆಶ್ರಮ ಕೊಡಿಸಿ ಯಜಮಾನತ್ವ ಯೇನಿದ್ದರೂ ನಿಂವೇ ನಿಂದು ಕುಟುಂಬದವರೆ ನೋಡಿಕೊಂಡು ಬರಬೇಕು. ಮುಂದೆ ಶಿಷ್ಯತನಕೆ ನಿಂಮ ಕುಟುಂಬದೊಳಗೆ ಕೊಡಿಸಿ ನಡಕೊಂಡು ಬರಬೇಕು. ನಿಂಮ ಕುಟುಂಬದೊಳಗೆ ಪ್ರಾಜ್ಞರಾಗಿಲ್ಲವಾದರೆ ನಿಂಮು ಕುಟುಂಬದವರು ತಂದವರಿಗೆ ಆಶ್ರಮ ಕೊಡಿಸಿ ನಡೆಸಿಕೊಂಡು ಬರಬೇಕು. ಯಿ ತಾಹಕ್ಕೆ ಅಳಸಿದರೆ ತಂಮ ತಂಮ ಕುಲದೇವರಿಗೆ ತಪ್ಪಿದವರಾಗಿ ತಂಮ ಹಿರಿಯವರಿಗೆ ಕಾಶಿಯಲ್ಲು ಹತ್ಯಾ ಮಾಡಿದ ಪಾಪಕ್ಕೆ ಹೋದಾರು ಯೆಂದು ಮಿಡಜೆ ಅನಂತಯ್ಯನ ಬರಹದಲ್ಲಿ ಬರಶಿ ಸಮಸ್ತ ಗ್ರಹಸ್ತರು ಬರಹಾ ಹಾಕಿದ ಭಾಷಾಪತ್ರ". ಇದರಿಂದಾಗಿ, ಕೃಷ್ಣಯ್ಯನವರ ಮಗ ಮರ್ತೆಗೆ ಸನ್ಯಾಸಾಶ್ರಮ, ಕೃಷ್ಣಯ್ಯನವರಿಗೆ ಮಠದ ಯಜಮಾನತ್ವ, ಮುಂದೆ ಸ್ವಾಮಿಗಳಾಗಬೇಕಾದವರು ಕೃಷ್ಣಯ್ಯನವರ ಕುಟುಂಬದವರು, ಪ್ರಾಜ್ಞರಾದವರು ಕೃಷ್ಣಯ್ಯನವರ ಕುಟುಂಬದಲ್ಲಿ ಇಲ್ಲದಿದ್ದರೆ, ಅವರ ಕುಟುಂಬದವರು ಆಯ್ಕೆ ಮಾಡಿದ ಸೂಕ್ತ ವ್ಯಕ್ತಿಯನ್ನು ಸ್ವಾಮಿಗಳನ್ನಾಗಿ ಮಾಡಬೇಕು, ಇತ್ಯಾದಿ ಅಂಶಗಳು ಪ್ರಸ್ತುತ ಕರಾರು ಪತ್ರದಿಂದ ತಿಳಿದುಬರುತ್ತದೆ. ಕರಾರುಪತ್ರದ ಪ್ರಾರಂಭದಲ್ಲಿ, "ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೆ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೆ" ಎಂಬ ಶಿವಸ್ತುತಿಯ ಪ್ರಾರ್ಥನಾ ಶ್ಲೋಕವಿರುತ್ತದೆ. ಕರಾರು ಪತ್ರದ ಕೊನೆಯಲ್ಲಿ, "...ಯಿ ತಾಹಕ್ಕೆ ಅಳಸಿದರೆ ತಂಮ ತಂಮ ಕುಲದೇವರಿಗೆ ತಪ್ಪಿದವರಾಗಿ ತಂಮ ಹಿರಿಯವರಿಗೆ ಕಾಶಿಯಲ್ಲು ಹತ್ಯಾ ಮಾಡಿದ ಪಾಪಕ್ಕೆ ಹೋದಾರು..." ಎಂಬ ಅಂಶಗಳು, ಆ ಜನರಲ್ಲಿ ದೇವರ ಬಗ್ಗೆ ಮತ್ತು ಪುಣ್ಯಕ್ಷೇತ್ರಗಳ ಬಗ್ಗೆ ಎಷ್ಟೊಂದು ನಂಬುಗೆ ಮತ್ತು ಭಕ್ತಿ ಇದ್ದವೆಂಬುದಕ್ಕೆ ಪುರಾವೆಗಳಾಗಿವೆ.[೮]

ಪ್ರಥಮ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳವರ ಕಾಲಕ್ಕೆ ಸೇರಿದ ಮತ್ತೊಂದು ದಾಖಲೆಯು ಶ್ರೀಮಠದಲ್ಲಿ ಲಭ್ಯವಾಗಿದೆ.[೯] ಮಂಗರ್ಸ ಪಂಡಿತ, ಉಗ್ರಾಣದ ದೇವಪ್ಪ,

ರಾಮಾಪಂಡಿತ, ಗಣಪಯ್ಯಾ ನಾಗರಕಟ್ಟೆ, ಸಾಂತಯ್ಯ, ಮನವಾರ್ತೆ ಅನಂತಯ್ಯ, ಅಚ್ಚುತಯ್ಯ, ದೇವಜ ಶಾನಬೊವ, ಚಂದಾವರದ ರವಳಪ್ಪ, ದಾಸೋಹದ ದೇವಪ್ಪ, ಚೆನ್ನಯ್ಯ ಶಾನುಬೊವ, ಮಾಳಪ್ಪ ಶಾನುಬೊವ, ವೀಣೆ ನಾರಣಪ್ಪ, ಕವಿ ದೇವಪ್ಪ, ಮಂಗಳೂರ ರವಳಯ್ಯ ಶ್ಯಾನುಬೊವ, ಸುಬ್ಬಣ್ಣ, ಕೊಡಯಾಳದ ಬಪ್ಪಯ್ಯ ಶೇನುಬವ, ಜೆಪ್ತಿನ ಮಂಗಜಿ ಶ್ಯಾನುಬೊವ, ಶಿರಾಲಿ ದೇವಯ್ಯ ಶೇನಬೊವ, ಕುಂದಾಪುರದ ವಾಸುದೇವ ಶ್ಯಾನುಬೊವ, ಬೈದೂರ ಕಪೀಲಯ್ಯ, ಝುಜರಿ ಮಹಾದೇವಪ್ಪ ಅಪ್ಪಯ್ಯ ಶ್ಯಾನುಬೊವ, ಕಡಲೆ ಲಕ್ಷುಮಯ್ಯ ಶ್ಯಾನುಬೊವ, ಉಳ್ಳಾಲದ ರಾಮಯ್ಯ ಶ್ಯಾನಬೊವ ಮುಂತಾದ ಕುಶಸ್ಥಳಿ ಮಹಾಜನಂಗಳು ಶ್ರೀ ಪರಿಜ್ಞಾನಾನಂದಾಶ್ರಮ [ಶ್ರೀ ಪರಿಜ್ಞಾನಾಶ್ರಮ] ಸ್ವಾಮಿಗಳಿಗೆ ಬಿನ್ನವತ್ತಳೆಯನ್ನು ಸಮರ್ಪಿಸಿದರು. ಸ್ವಾಸ್ತಿ ಮಠ ಮಾನ್ಯ ಕುರಿತು ಹತ್ತು ಜನರು (ದಹಜನ) ಯೋಚಿಸಿ, ಆದ ಅಭಿಪ್ರಾಯವನ್ನು ಗೋಕರ್ಣದ ಸಾಂತಯ್ಯನು ಬಿನ್ನಹ ಮಾಡಿಕೊಂಡಿದ್ದರಿಂದ ತಿಳಿಯ ಲಾಯಿತು ಎಂದು ಬಿನ್ನವತ್ತಳೆಯಲ್ಲಿ ನಮೂದಿಸಲಾಗಿದೆ. ಸ್ವಜಾತಿ ಗೃಹಸ್ಥರಲ್ಲಿ ಸಂಚರಿಸಿ, ಆಚಾರ ವ್ಯವಹಾರ, ಬೋಧನೆ, ಭಿಕ್ಷೆಗಳ ಸಹ ಮಾಡಿಸಿ, ತೀರ್ಥಪ್ರಸಾದದಿಂದ ಸಹ ಗೃಹಸ್ಥರನ್ನು ಕೃತಾರ್ಥಿಸಿ, ಈ ಪ್ರಾಂತದಲ್ಲಿ ಇರುವಂತೆ ದಯಮಾಡಬೇಕು ಎಂದು ಸಮಸ್ತ ಮಹಾಜನಂಗಳು ಸ್ವಾಮಿಗಳನ್ನು ಬೇಡಿಕೊಂಡರು.

ಈ ರೀತಿಯಾಗಿ, ಪ್ರಥಮ ಶ್ರೀ ಪರಿಜ್ಞಾನಾಶ್ರಮ ಮತ್ತು ಪ್ರಥಮ ಶ್ರೀ ಶಂಕರಾಶ್ರಮ ಸ್ವಾಮಿಗಳ ಕಾಲಕ್ಕೆ ಸೇರಿದ ದಾಖಲೆಗಳು, ಗೋಕರ್ಣ ಬಂಡಿಕೇರಿಯಲ್ಲಿ ಚಿತ್ರಾಪುರ ಸಾರಸ್ವತರ ಮಠ ಸ್ಥಾಪನೆ, ಗುರುಪೀಠದಲ್ಲಿ ಪ್ರಥಮರಾದ ಶ್ರೀ ಪರಿಜ್ಞಾನಾಶ್ರಮ, ಕುಶಸ್ಥಳಿ ಸಾರಸ್ವತ ಹತ್ತು ಸಮಸ್ತರು, ಪೀಠಕ್ಕೆ ಗುರುಗಳನ್ನು ಆಯ್ಕೆ ಮಾಡುವ ಮತ್ತು ಯಜಮಾನತ್ವ ವಹಿಸುವ, ಕೃಷ್ಣಯ್ಯ ಶಾನಭೋಗ ಮತ್ತು ಅವರ ಕುಟುಂಬದವರ ಜವಾಬ್ದಾರಿ, ಗುರು ಶಿಷ್ಯರ ಅನ್ಯೋನ್ಯ ಸಂಬಂಧದ ಪ್ರಾರಂಭ ಇತ್ಯಾದಿ ವಿಷಯಗಳ ಮೇಲೆ ಬೆಳಕು ಬೀರುತ್ತವೆ.

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಪೂರ್ವದಲ್ಲಿ ಬಂಡಿ [ಚಕ್ಕಡಿ, ಗಾಡಿ]ಗಳನ್ನು ಈ ಕೇರಿ [ಓಣಿ]ಯಲ್ಲಿ ನಿಲ್ಲಿಸುತ್ತಿದ್ದುದರಿಂದ, ಈ ಓಣಿಗೆ ಬಂಡಿಕೇರಿ ಎಂಬ ಹೆಸರು ಪ್ರಾಪ್ತವಾಯಿತು.

೨. ಚಿತ್ರಾಪುರ ಮಠದಲ್ಲಿ ಲಭ್ಯವಿರುವ ಎಲ್ಲ ಚಾರಿತ್ರಿಕ ದಾಖಲೆಗಳಲ್ಲಿ ಚಿತ್ರಾಪುರ ಸಾರಸ್ವತರನ್ನು 'ಗೌಡ ಸಾರಸ್ವತ' ಎಂದೇ ಉಲ್ಲೇಖಿಸಲಾಗಿದೆ. "... ಉತ್ತರ ಮತ್ತು ದಕ್ಷಿಣ ಹಿಂದುಸ್ಥಾನದಲ್ಲಿ ನೆಲೆಸಿರುವ ಅನೇಕ ಸಾರಸ್ವತರಲ್ಲಿ ಗೋವಾ ಮತ್ತು ಪಶ್ಚಿಮ ಕರಾವಳಿಯಲ್ಲಿ ನೆಲೆಸಿದವರು ಮಾತ್ರ ಗೌಡ ಸಾರಸ್ವತರೆಂದು ಗುರುತಿಸಲ್ಪಡುತ್ತಾರೆ....ಚಿತ್ರಾಪುರ ಸಾರಸ್ವತರು ೬ ಗೋತ್ರಗಳಿಗೆ ಸೇರಿದವರಾಗಿರುತ್ತಾರೆ. ಕೌಂಡಿಣ್ಯ, ಕೌಶಿಕ, ವತ್ಸ, ಅತ್ರಿ, ಭಾರದ್ವಾಜ ಮತ್ತು ಶಂಕ-ಪಿಂಗಳ-ಕುತ್ಸ" ಎಂಬುದಾಗಿ ಶ್ರೀ ವಿ.ಎನ್. ಕುಡವ ಅವರು, 'ಹಿಸ್ಟೋರಿ ಆಫ್ ದಿ ದಕ್ಷಿಣಾತ್ಯ ಸಾರಸ್ವತ್ಸ್' (ಸಂಯುಕ್ತ ಗೌಡಸಾರಸ್ವತ ಸಭಾ, ಮದ್ರಾಸ, ೧೯೭೨) ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.
ಫ್ರಾಂಕ್ ಎಫ್. ಕಾನ್‌ಲಾನ್ ಅವರ 'ಎ ಕಾಸ್ಟ್ ಇನ್ ಎ ಚೇಂಜಿಂಗ್ ವರ್ಲ್ಡ್' (ಥಾಮಸನ್ ಪ್ರೆಸ್, ನ್ಯೂ ದಿಲ್ಲಿ, ೧೯೭೭) ಎಂಬ ಗ್ರಂಥವನ್ನೂ ಓದಿರಿ.

೩. ಶೃಂಗೇರಿ ಜಗದ್ಗುರು ಪರಂಪರೆಯಲ್ಲಿ ೨೭ ನೆಯವರಾದ ದ್ವಿತೀಯ ಶ್ರೀ ಸಚ್ಚಿದಾನಂದ ಭಾರತಿಗಳು (ಕ್ರಿ.ಶ. ೧೭೦೫-೧೭೪೧) ಚಿತ್ರಾಪುರ ಸಾರಸ್ವತರ ಪ್ರಥಮ ಗುರುಗಳಾದ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳ ಪಟ್ಟಾಭಿಷೇಕ ನೆರವೇರಿಸಿದರೆನ್ನಲಾಗಿದೆ. ಇಂದಿಗೂ ಆ ಸಂಪ್ರದಾಯ ಮುಂದುವರಿದಿರುವುದು ಒಂದು ವಿಶೇಷ. ಪ್ರಸ್ತುತದಲ್ಲಿ ಚಿತ್ರಾಪುರ ಮಠಾಧೀಶರಾದ ಶ್ರೀ ಸದ್ಯೋಜಾತ ಶಂಕರಾಶ್ರಮ ಸ್ವಾಮಿಗಳ ಪಟ್ಟಾಭಿಷೇಕವೂ, ಇಂದಿನ ಶೃಂಗೇರಿ ಜಗದ್ಗುರುಗಳಾದ ಶ್ರೀ ಶ್ರೀ ಭಾರತೀ ತೀರ್ಥರ ಸಮ್ಮುಖದಲ್ಲೇ ನಡೆಯಿತು.

೪. ಚಿತ್ರಾಪುರದಲ್ಲಿ ಮಠ ಸ್ಥಾಪನೆಯಾಗುವ ಪೂರ್ವದಲ್ಲಿ ಮೊದಲು ಮಠ ಸ್ಥಾಪನೆಯಾಗಿದ್ದು ಗೋಕರ್ಣದ ಬಂಡಿಕೇರಿಯಲ್ಲಿ ಎಂಬುದು ಸರ್ವವಿದಿತ. "ಸಿದ್ಧಾರ್ಥಿ ಸಂವತ್ಸರ ಮಾರ್ಗಶಿರ ಶು. ೧೦ ರಲ್ಲೂ ಶ್ರೀಮತ ಕೆಳದಿ ಬಸವಪ್ಪ ನಾಯಕರು ಮಾಳಮಲ್ಲಿ ಬರಶಿ ಕಳುಹಿದ ಕಾರ್ಯ...ಕೋಟಿತೀರ್ಥ ಸಮೀಪದಲ್ಲಿ ಬಂಡಿಕೇರಿಯೆಂಬ ಸ್ಥಳದಲ್ಲು ತಂನ ಗುರುಮಠ ಕಟ್ಟಿಸಿ ಪ್ರತಿಷ್ಠೆ ಮಾಡುವ ಭವಾನಿ ಶಂಕರ ದೇವರಿಗೆ..." ಎಂದು ಕೆಳದಿ ಬಸವಪ್ಪ ನಾಯಕರ ಭಾಷಾಪತ್ರದಲ್ಲಿ ಉಲ್ಲೇಖಿಸಲಾಗಿದೆ. ಭಾಷಾಪತ್ರದ ಕಾಲ ಗುರುವಾರ, ನವೆಂಬರ್ ೨೯, ೧೭೫೯, ಡಾ॥ ಎ.ಕೆ. ಶಾಸ್ತ್ರಿ, 'ದಿ ರಿಕಾರ್ಡ್ಸ್ ಆಫ್ ಶ್ರೀ ಚಿತ್ರಾಪುರ ಮಠ', ಚಿ.ದಾ. ೫.

೫. ಚಿತ್ರಾಪುರ ಮಠದ ಗುರುಪರಂಪರೆ ಕುರಿತು ಹೆಚ್ಚಿನ ಮಾಹಿತಿಗಾಗಿ ಉಮಾಬಾಯಿ ಆರೂರು, **'ಶ್ರೀ ಚಿತ್ರಾಪುರ ಗುರುಪರಂಪರಾ ಚರಿತ್ರ'** (ಮರಾಠಿ), ಪ್ರಕಾಶಕರು : ಪಾಂಡುರಂಗರಾವ್ ಶಿವರಾಮ ಮರಬಳ್ಳಿ.
ಕನ್ನಡ ಅನುವಾದ : ತಡಗಜೆ ನಾಗೇಶರಾವ್, ಪ್ರ.ವ್ಯೆ. ರಾಮರಾವ್ ಆ್ಯಂಡ್ ಕಂಪನಿ, ಮಂಗಳೂರು, ೧೯೭೩.

೬ ಕಾಗದ ಪತ್ರಗಳ ಹೆಚ್ಚಿನ ಮಾಹಿತಿಗಾಗಿ ಲೇಖಕರ ಮೇಲ್ಕಾಣಿಸಿದ **ದಿ ರಿಕಾರ್ಡ್ಸ್ ಆಫ್ ಶ್ರೀ ಚಿತ್ರಾಪುರ ಮಠ** (ಚಿ.ದಾ.) ಓದಿರಿ.

೭. ಚಿ.ದಾ. ೧.

೮. ಪ್ರಸ್ತುತ ಕರಾರು ಪತ್ರದಲ್ಲಿ ನಮೂದಿಸಲಾದ ಕೃಷ್ಣಯ್ಯ ಶಾನಭೋಗರ ಮಗ ಮರ್ತೆ, ಸನ್ಯಾಸ ದೀಕ್ಷೆ ಪಡೆದು, 'ಶ್ರೀ ಶಂಕರಾಶ್ರಮ' ಎಂಬ ಅಭಿಧಾನ ಪಡೆದು, ಗುರುಪರಂಪರೆಯಲ್ಲಿ ದ್ವಿತೀಯರೆನಿಸಿದರು.

೯. ಚಿ.ದಾ. ೨.

ಆದಪ್ಪ ಪಾಸೋಡಿ *

# ಗೊಳರಸದ ಪುಂಡಲೀಕ ಮಹಾರಾಜರು ಮತ್ತು ಸಾಹಿತ್ಯ ಕೃತಿಗಳು

ವಿಜಾಪುರ ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಇಂಡಿಯೂ ಒಂದು. ಹಿಂದೊಮ್ಮೆ ಇಂಡಿ ರಾಜ್ಯದ ಏಳು ಶಾಶ್ವತ ಬರಗಾಲದ ತಾಲ್ಲೂಕುಗಳಲ್ಲೊಂದಾಗಿತ್ತು. ಪ್ರಸಕ್ತ ಕೃಷ್ಣಾ ಮೇಲ್ದಂಡೆ ಯೋಜನೆ ನಾರಾಯಣಪುರದ ಬಸವಸಾಗರ ಆಣೆಕಟ್ಟಿನಿಂದ ಇಂಡಿ ಕಾಲುವೆ ಮುಖಾಂತರ ನೀರಾವರಿ ಸೌಲಭ್ಯ ಹೊಂದಿ ಹಸುರಿನಿಂದ ಕಂಗೊಳಿಸುತ್ತಿದೆ. ಇಂಡಿ ಪಟ್ಟಣದಿಂದ ಪೂರ್ವಕ್ಕೆ ಇಪ್ಪತ್ತು ಕಿಲೋಮೀಟರ್ ದೂರದಲ್ಲಿ ಒಯಿವೋ ನದಿ[೧] (ಭೀಮಾನದಿಗೆ ಉಪನದಿಯಾಗಿರುವ ದೊಡ್ಡಹಳ್ಳ) ದಂಡೆಯ ಮೇಲೆ ಗೊಳಸರ ಗ್ರಾಮವಿದೆ. ಶಿಲಾಯುಗ ಸಂಸ್ಕೃತಿಯ ನೆಲೆ[೨]ಯಾಗಿರುವ ಈ ಹಳ್ಳಿಯಲ್ಲಿ ಇತಿಹಾಸ ಮೂಲಾಧಾರಗಳಾದ ದೇವನಾಗರಿ ಲಿಪಿಯ ಐದು ಸಾಲುಗಳ ಗಡಿಕಲ್ಲುಶಾಸನ, ಮುಲ್ಲಾಬಾವಿಯ ವೀರಗಲ್ಲು, ಹನುಮಂತ ದೇವರ ಗುಡಿ ಮುಂದೆ ನಿಲ್ಲಿಸಿರುವ ವೀರಗಲ್ಲು, ಗಜಲಕ್ಷ್ಮಿ ಶಿಲ್ಪ ಹಾಗೂ ಅಗಸಿ ಬಾಗಿಲಿನ ಹೊರಗೆ ಪಶ್ಚಿಮಾಭಿಮುಖವಾಗಿರುವ ಜೈನ ತೀರ್ಥಂಕರ ಮೂರ್ತಿ ಶಿಲ್ಪಗಳು ಪ್ರಮುಖವಾಗಿವೆ. ಜನಸಂಖ್ಯೆ ದೃಷ್ಟಿಯಿಂದ ಗೊಳಸರ ಪುಟ್ಟಗ್ರಾಮವಾದರೂ ಪುಂಡಲೀಕ ಶರಣರಿಂದ ಈ ಭಾಗಕ್ಕೆ ಕೀರ್ತಿ ಬಂದಿದೆ. ಗೊಳಸರ ಗ್ರಾಮವು ಗ್ರೂಪ್ ಗ್ರಾಮ ಪಂಚಾಯ್ತಿಯ ಕೇಂದ್ರಸ್ಥಾನವಾಗಿದ್ದಾಗ ಲಾಳಸಂಗಿ, ಶಿವಪುರ ಗ್ರಾಮಗಳು ಇದರ ವ್ಯಾಪ್ತಿಗೆ ಸೇರಿದ್ದವು, ನಂತರ ನಾದ ಕೆ.ಡಿ. ಮಂಡಲ ಪಂಚಾಯ್ತಿಗೆ ಸೇರ್ಪಡೆಯಾಗಿ ಈಗ ಲಾಳಸಂಗಿ ಗ್ರಾಮ ಪಂಚಾಯ್ತಿಗೊಳಪಡುತ್ತದೆ.

ಪುಂಡಲೀಕ ಮಹಾರಾಜರ ತಂದೆಯ ಹೆಸರು ಆಲಿಂಗರಾಯ ನಾಯಕೋಡಿ ಮತ್ತು ತಾಯಿ ಲಾಯವ್ವ ಆಲಿಂಗರಾಯ ನಮ್ಮೆಲ್ಲರಂತೆ ಗೃಹಸ್ಥರಾಗಿದ್ದವರು. ಮನೆಯಲ್ಲಿ ಒದ್ದೆ ಮಡಿಯಲ್ಲಿ ದೇವರ ಪೂಜೆ ಮಾಡಿ, ಒಕ್ಕಲುತನದ ಉಸ್ತುವಾರಿ ಜೊತೆಗೆ ಸ್ವಲ್ಪ ಕಾಲ ಕಿರಾಣಿ ಅಂಗಡಿಯನ್ನೂ ನೋಡಿಕೊಂಡರು. ಸಾಧು-ಸತ್ಪುರುಷರು ಊರಲ್ಲಿ ಬಂದರೆ ಅವರನ್ನು ಕರೆದು ಚಹಾ ಕೊಟ್ಟು ಕೈಮುಗಿದು ಕಳುಹಿಸಿ ಕೊಡುವುದು ಇವರ ಸತ್ಸಂಪ್ರದಾಯವಾಗಿತ್ತು. ಇವರ ಉಡುಪು ಕಸಿ ಅಂಗಿ, ಧೋತರ ಮತ್ತು ಹೆಗಲ ಮೇಲೆ ದುಪ್ಪಟ್ಟು ತಲೆಯ ಮೇಲೆ ಜಡೆಯಿದ್ದು, ಸ್ವಲ್ಪ ಉದ್ದನೆಯ ಗಡ್ಡ ಬಿಟ್ಟಿದ್ದರು. ಶಹಪುರ, ಸುರಪುರ, ಗೋಟೂರು, ಕಣಸೂರು, ಪಂಡರಪುರ ಮತ್ತು ಅಕ್ಕಲಕೋಟೆಗೆ ಯಾತ್ರೆ ಮಾಡಿದರೆಂದು ತಿಳಿದು ಬರುತ್ತದೆ. ಊರಿನಲ್ಲಿ ಸಿದ್ದಪ್ಪ ಮ್ಯಾಲಿನಮನಿ, ಸಿದ್ದಪ್ಪ ಬಮ್ಮನಳ್ಳಿ, ಸಾಧು ಶರಣ ಮಂದೋಲಿ, ಅಮಿರಾಲಿ ಇನಾಮದಾರ ಹಾಗೂ ಮಿರಗಿಯ ಬಾಳಪ್ಪಗೌಡರೊಂದಿಗೆ ಅಲಿಂಗರಾಯರು ಬಹಳ ಸ್ನೇಹದಿಂದ ಇದ್ದರು. ಅಲಿಂಗರಾಯರಿಗೆ ಸಿಂದಗಿಯ ಜಕ್ಕಪ್ಪಯ್ಯನವರು ಗುರುಹಸ್ತ (ಉಪದೇಶ) ಮಾಡಿದ್ದರು. ಈ ಗುರೂಪದೇಶ ಪ್ರಕ್ರಿಯೆಯಲ್ಲಿ ಪಾಲ್ಗೊಂಡ ಗ್ರಾಮದ ಇತರ ಫಲಾನುಭವಿಗಳೆಂದರೆ - ಶಿವಲಿಂಗಯ್ಯ ಮಠಪತಿ, ಮುದಿಗೌಡಪ್ಪ ಪಾಟೀಲ ಹಾಗೂ ಗಂಗಾಬಾಯಿ ನಾಗಠಾಣ; ಇದು ನೂರು ವರ್ಷದ ಹಿಂದಿನ ಮಾತು. ಅಲಿಂಗರಾಯರ ಕೊನೆಗಾಲದಲ್ಲಿ ಅಮಿರಾಲಿ ಇನಾಮದಾರ ಅವರು ಸ್ಮರಣೀಯ ಸೇವೆ ಮಾಡಿದರೆಂಬ ಮಾಹಿತಿಯನ್ನು ಶಿವರಾಯ ನಾಯಕೋಡಿ ಅವರು ನೆನಪಿಸಿಕೊಳ್ಳುತ್ತಾರೆ.

## ಪುಂಡಲೀಕ ಮಹಾರಾಜರು (೧೯೦೬ - ೧೯೭೯)

ಕ್ರಿ.ಶ. ೧೯೦೬ರ ಕಾರ್ತಿಕ ಶುದ್ಧದಂದು ಹಾಲುಮತ ಮನೆತನದಲ್ಲಿ ಪುಂಡಲೀಕರು ಜನಿಸಿದರು. ಮರಾಠಿ ಬಾಲಬೋಧದಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ವ್ಯಾಯಾಮದ ಚಟುವಟಿಕೆಗಳಾದ ದಂಡ, ಬೈಠಕ್, ಓಟ, ಜಿಗಿತಗಳಲ್ಲಿ ಗೆಳೆಯರನ್ನು ಮೀರಿಸುವಂತೆ ಬೆಳೆದರು. ದಿನಾಲೂ ಆರರಿಂದ ಎಂಟು ಸೇರು ಆಡಿನ ಹಾಲು ಕುಡಿಯುತ್ತಿದ್ದರು ಮತ್ತು ವ್ಯಾಯಾಮ ಮಾಡುವಾಗ ಮೈಯಲ್ಲಿಯ ಬೆವರು ಕಾಲಿಗೆ ಇಳಿದು ಕಾಲ ಕೆಳಗಿನ ಮಣ್ಣು ಕೆಸರಾಗುತ್ತಿತ್ತೆಂದು ನಾಗಪ್ಪ ಬ್ಯಾಲಾಳ ಇವರು ಸ್ಮರಿಸಿದ್ದಾರೆ[೩]. 'ಪುಂಡಲೀಕ ಮಹಾರಾಜರು' 'ಪುಂಡಪ್ಪ ಮುತ್ತ್ಯಾ,' 'ಪುಂಡಲಿಂಗ ಶಿವಯೋಗಿ' ಎಂದು ಕರೆಯಲ್ಪಡುವ ಇವರು ಮೊದಲು ಎಲ್ಲರಂತೆ ಕೈ ಕಪ್ಪಂಗಿ, ಧೋತರ ಮತ್ತು ಬಿಳಿ ಬಣ್ಣದ ರುಮಾಲು ಸುತ್ತಿಕೊಳ್ಳುತ್ತಿದ್ದರು. ತಮ್ಮ ಇಪ್ಪತ್ತೈದನೆಯ ವಯಸ್ಸಿನಲ್ಲಿ ಸಾತಲಗಾಂವದ ಆದಿಗೊಂಡ ಮನೆತನದ ಭಾಗಮ್ಮ (ಅಕ್ಕನ ಮಗಳು) ಳನ್ನು

* ಸರ್ಕಾರಿ ಕಾಲೇಜಿನ ಹಿಂಭಾಗ, ವರ್ತೂರು, ಬೆಂಗಳೂರು-೫೬೦೦೮೭.

ಮದುವೆಯಾದರು. ಹದಿನೇಳು ವರ್ಷಗಳ ಗೃಹಸ್ಥ ಜೀವನದಲ್ಲಿ ನಾಲ್ಕು ಗಂಡು, ನಾಲ್ಕು ಹೆಣ್ಣು ಮಕ್ಕಳಿಗೆ ತಂದೆಯಾದರು. ದಂಪತಿಯ ಏಳು ಜನ ಮಕ್ಕಳಾದ ಸಿದ್ಧರಾಮ, ದತ್ತಾತ್ರೇಯ, ಪಾರ್ವತಿ, ವಿಠ್ಠಲ, ದತ್ತೂಬಾಯಿ, ಗುರುಬಾಯಿ, ಹಾಗೂ ತ್ರಿವೇಣಿ ಇವರು ತಮ್ಮ ಎಂಟರಿಂದ ಹದಿನಾರು ವರ್ಷ ತುಂಬುವ ಪೂರ್ವದಲ್ಲಿಯೇ ಶಿವಸಾಯುಜ್ಯ ಸೇರುತ್ತಾರೆ. ಮಕ್ಕಳ ಮರಣಕ್ಕಾಗಿ ಪುಂಡಲೀಕರಿಗೆ ಶೋಕ-ಮರುಕವಿರಲಿಲ್ಲ ತಮ್ಮ ದುಃಖವನ್ನು ಜನರಲ್ಲಿ ತೋರಿಸಲಿಲ್ಲ, 'ಸಾವು ಜೀವನದ ಅಂತಿಮ ಘಟ್ಟದ ಸಹಜ ಕ್ರಿಯೆ' ಎಂದು ಸ್ಥಿತಪ್ರಜ್ಞರಾಗಿದ್ದರು. ಆಸೆ-ಆಮಿಷ, ಧನ-ಕನಕ, ಭೂಮಿ-ಸೀಮೆಗಳೆಂಬ ಲೌಕಿಕ ಸಂಪತ್ತಿನ ಮೋಹ ಹೊಂದಿರಲಿಲ್ಲ, ಬಡತನ ಬಂದಾಗ ಕುಗ್ಗದೆ, ಸಿರಿತನ ಬಂದಾಗ ಹಿಗ್ಗದೆ 'ಎಲ್ಲವೂ ಪ್ರಭುವಿನ ಇಚ್ಛೆ' ಎಂದು ಹೇಳುತ್ತಿದ್ದರು.

ಸಿದ್ಧರಾಯನ ಗುಡಿಯಿಂದ ನೈಋತ್ಯ ದಿಕ್ಕಿಗೆ ಸ್ವಲ್ಪ ದೂರದಲ್ಲಿರುವ ಸಿನ್ನೂರ ಅವರ ತಂಬಾಕು ದೊಡ್ಡಿ (ಹೊಕ್ಕು ತುಂಬುವ ನೆಲಬಾವಿ) ಬಾವಿಯಲ್ಲಿ ದಿನಕ್ಕೆರಡು ಬಾರಿ ಅಂದರೆ ಬೆಳಿಗ್ಗೆ ಮತ್ತು ಸಾಯಂಕಾಲ ಸ್ನಾನ ಮಾಡುತ್ತಿದ್ದರು. ಉಟ್ಟ ಧೋತರದ ಕೊನೆಯನ್ನು ಹಿಂಡಿಕೊಂಡು ಮೈಮೇಲೆ ಹೊದ್ದು ತಮ್ಮ ಪೂಜಾ ಕೋಣೆಯಲ್ಲಿ ದೀರ್ಘಕಾಲ ಧ್ಯಾನ ಮಾಡುವುದು ಅವರ ನಿತ್ಯದ ಕ್ರಮ. ಧೂಪ-ದೀಪಗಳನ್ನು ಬಿಟ್ಟರೆ ಇನ್ನಾವ ಆಡಂಬರ ಅವರ ಪೂಜೆಯಲ್ಲಿರಲಿಲ್ಲ. ಹಳ್ಳಿಗರು 'ಪೂಜೆ' ಎಂದೇ ಕರೆಯುತ್ತಿದ್ದ ಪೂಜ್ಯರ ಧ್ಯಾನ ಮಾರ್ಗವನ್ನು ಅವರ ಉಳಿದ ಒಬ್ಬ ಮಗ ತ್ರಿಮೂರ್ತಿ ಅಪ್ಪನವರು ಮುಂದುವರೆಸಿದರು. ಪೂಜಾ ಮನೆಯಿಂದ ಹೊರಬಂದು ಪುಂಡಲೀಕ ಶಿವಯೋಗಿಗಳು ತಮ್ಮ ಆರಾಧ್ಯ ದೈವ ಸಿದ್ಧರಾಯನ ಗುಡಿಯ ಪಡಸಾಲೆಯ ಬಲಮೂಲೆ ಯಲ್ಲಿ ಆಸೀನರಾಗಿ, ನೆರೆದ ಜನರನ್ನು ಉದ್ದೇಶಿಸಿ ಚರ್ಚಿಸು ತ್ತಿದ್ದುದು ದಿನನಿತ್ಯದ ಕಾರ್ಯಕ್ರಮ. ಆದರ್ಶ ಗೃಹಸ್ಥ ಜೀವನಕ್ಕೆ ಸಂಬಂಧಿಸಿದ ಪ್ರಶ್ನಾವಳಿಯೊಂದಿಗೆ ಲೌಕಿಕ ಜೀವನದ ಕಷ್ಟ-ಸಮಸ್ಯೆ-ಪರಿಹಾರಗಳ ಸಮಾಲೋಚನೆ ಇದಾಗಿತ್ತು. ತಮ್ಮ ಮುಂದೆ ಕುಳಿತಿರುವ ಜನರಲ್ಲಿ ಒಂದು ವಿಷಯ ಪ್ರಸ್ತಾಪಿಸಿ ಅವರಲ್ಲಿಯೇ ಚರ್ಚೆ-ವಿಮರ್ಶೆ ನಡೆಯುವಂತೆ ಮಾಡಿ, ಇಡೀ ಮಾತುಕತೆಯ ಮೌಲ್ಯಗಳನ್ನು ಜನರ ಬಾಯಿಯಿಂದಲೇ ತರಿಸುತ್ತಿದ್ದರು. ಮಕ್ಕಳು ಬಂದು ಮುಂದೆ ಕುಳಿತರೆ ಒಂದು ಹಾಡು ಹೇಳು ಮೊಮ್ಮಗ ಎಂದು ಮಾತಿಗೆಳೆಯುತ್ತಿದ್ದರು. ಎಲ್ಲ ವಯೋಮಾನ, ಎಲ್ಲ ಜಾತಿ ಮಾರ್ಗದವರಿಗೆ ಅನ್ವಯವಾಗುವ ಚರ್ಚೆಯಾಗಿರುತ್ತಿತ್ತು. ಪ್ರತಿದಿನ ಸಾಯಂಕಾಲ ತಮ್ಮ ತೋಟದಲ್ಲಿರುವ ಪೂರ್ವಜರ ಸಮಾಧಿಗಳಿಗೆ ಹೋಗಿ ಬರುತ್ತಿದ್ದರು. ಅವರೊಡನೆ ಒಬ್ಬ ಭಕ್ತ ಮುಂಚಿತವಾಗಿ ಅಲ್ಲಿರುವ ಎಲ್ಲ ಸಮಾಧಿಗಳ ಮುಂದೆ ಒಳ್ಳೆಣ್ಣೆಯ ದೀಪ ಹಚ್ಚಿ ಊದಬತ್ತಿಗಳನ್ನು ಇಡುತ್ತಿದ್ದನು. ಪೂಜ್ಯರು ಊದಬತ್ತಿ ಬೆಳಗಿ ಪೂಜಿಸುತ್ತಿದ್ದರು.

ಜಾನಪದ ಕಲಾವಿದರಾಗಲಿ, ವೇಷಗಾರರಿರಲಿ, ಸಂಗೀತಗಾರರಿರಲಿ, ಯಾರೇ ದರ್ಶನಕ್ಕೆ ಬಂದರೂ ಅವರ ವೃತ್ತಿಯ ಬಗ್ಗೆ ಕೂಲಂಕಷವಾಗಿ ಚರ್ಚಿಸುತ್ತಿದ್ದರು. ಅವರಿಗೆ ಗುಡಿಯಲ್ಲಿ ವಾಸ್ತವ್ಯವಿರಲು ತಿಳಿಸಿ ಅನುಭವದ ಪದಗಳನ್ನು ಹಾಡಿಸುತ್ತಿದ್ದರು. ಹಾಡುಗಳಲ್ಲಿ ಬರುವ ಮೌಲ್ಯಗಳ ಸಾರಾಂಶವನ್ನು ಎಲ್ಲರಿಗೂ ತಿಳಿಸುವುದು ದಿನನಿತ್ಯದ ಕಾರ್ಯಕ್ರಮವಾಗಿತ್ತು. ಉಪಸ್ಥಿತರಿರುವ ಭಕ್ತರಲ್ಲಿ ರೋಗಿಗಳೂ ಇದ್ದರು. ಅವರಿಗೆ ಅಂಧಶ್ರದ್ಧೆ, ಮೂಢನಂಬಿಕೆ ಗಳನ್ನು ಆಚರಿಸಲು ಎಂದೂ ಹೇಳಲಿಲ್ಲ, ಬದಲಾಗಿ ಅವರಿಗೆ ಧೈರ್ಯ ಹೇಳಿ ವೈದ್ಯಕೀಯ ಉಪಚಾರ ಪಡೆದುಕೊಳ್ಳಲು ತಿಳಿಸಿದರು. 'ಸತ್ಯ ಬಿಡಬಾರದೆಪಾ, ಪ್ರಭು ಕಾಯ್ತಾನ' ಎಂಬ ಅವರ ನುಡಿ ಎಷ್ಟೋ ಜನ ಭಕ್ತರ ಚಾರಿತ್ರ್ಯಕ್ಕೆ ಹೊಸ ರೂಪ ತಂದು ಕೊಟ್ಟಿತು. ಬೆಳಿಗ್ಗೆಯ ಸುಮಾರು ೯.೩೦ ರಿಂದ ೧೧.೦೦ ಗಂಟೆಯವರೆಗೆ ಸಿದ್ಧರಾಯನ ಗುಡಿಯಲ್ಲಿ ಈ ಪರಿಯ ಮುಖಾಮುಖಿ/ಅನುಭವ ಹಂಚಿಕೆ ನಡೆಸುತ್ತಿದ್ದ ಗುರು ಪುಂಡಲೀಕರು ಯಾರಿಗೂ ಗುರೂಪದೇಶ ಕೊಟ್ಟು ಶಿಷ್ಯರನ್ನಾಗಿ ಮಾಡಿಕೊಳ್ಳಲಿಲ್ಲ. ನೆರೆದ ಶರಣರು ಒಂದು ಸಲ ಕೈಮುಗಿದರೆ ಪೂಜ್ಯರು ಎರಡು-ಮೂರು ಬಾರಿ ತಲೆಬಾಗಿ 'ಪ್ರಭುವಿಗೆ ಮುಟ್ಟಲಿ' ಎಂದು ಹೇಳುತ್ತಿದ್ದರು. ಬುದ್ಧ ಬಸವ, ಯೇಸು, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದರು ಹಾಗೂ ಮಹಾತ್ಮಾ ಗಾಂಧಿಯವರ ತತ್ವಗಳನ್ನು ಉದಾಹರಿಸುತ್ತ, ತಮ್ಮನ್ನೇ ತಾವು ತೋರಿಸಿ ಕೊಂಡು 'ಧನ-ಮದದೊಡನೆ ಕೂಡಿಕೊಂಡ ನಮ್ಮಂಥವರಿಗೆ ಪರಮಶಿವಭಕ್ತರ ಪರಾಕ್ರಮ ತಿಳಿಯುವುದು ಅಸದಳ' ಎಂದರು. ಪ್ರತಿದಿನವೂ ಸಿದ್ಧರಾಯನ ಗುಡಿಯಿಂದ ಒಂದು ಕಿ.ಮೀ. ದೂರದಲ್ಲಿರುವ ಪರುವಿನ ಕಟ್ಟೆ[೪] ಹಾಗೂ ತಮ್ಮ ತಂದೆಯವರ ಸಮಾಧಿಗೆ ಹೋಗಿ ನಮಸ್ಕರಿಸಿ ಬರುತ್ತಿದ್ದರು, ಪರುವಿನ ಕಟ್ಟೆಯ ಮುಂದೆ ಸೇರಿರುತ್ತಿದ್ದ ಜನರೊಂದಿಗೆ ಒಂದಷ್ಟು ಆಧ್ಯಾತ್ಮಿಕ ಚಿಂತನೆ ನಡೆಸುತ್ತಿದ್ದರು.

ಪುಂಡಲೀಕ ಮಹಾರಾಜರಿಗೆ ಕನ್ನಡ ಮತ್ತು ಮರಾಠಿ ಮೋಡಿ ಓದಲು-ಬರೆಯಲು ಬರುತ್ತಿದ್ದುದರಿಂದಲೇ ಮಾತಿನ ಮಧ್ಯೆ ಎರಡೂ ಭಾಷೆಗಳ ನುಡಿಗುಟ್ಟುಗಳನ್ನು ಬಳಸುತ್ತಿದ್ದರು. ಎಲ್ಲಿಯೂ ಪ್ರಥಮ ಪುರುಷ ಏಕವಚನದ ಸರ್ವನಾಮ 'ನಾನು' ಪದಬಳಕೆ ಮಾಡುತ್ತಿರಲಿಲ್ಲವೆಂಬುದು ವಿಶೇಷ.

**ಪೂಜ್ಯರ ನುಡಿಮುತ್ತುಗಳು[೫]:** ಜಾತಿಗಿಂತ ನೀತಿ ಮೇಲು.

– ಪರವನಿತಾ ಅಪೇಕ್ಷೆ ಪ್ರತ್ಯಕ್ಷ ನರಕವೆಂದು ತಿಳಿ.



ಪುಂಡಲಿಂಗರ ಆರಾಧ್ಯದೈವ ಸಿದ್ಧರಾಮ ದೇವರ ಗುಡಿ



ಗೊಳಸರದ ಪುಂಡಲೀಕ ಮಹಾರಾಜರು



ಪುಂಡಲೀಕ ಮಹಾರಾಜರ ಸಮಾಧಿಗೆ ಕುಂಬಾಭಿಷೇಕ ಹೊರಟ ದೃಶ್ಯ



ಪುಂಡಲೀಕ ಮಹಾರಾಜರಿಂದ ಆರಂಭವಾದ ಅನ್ನದಾಸೋಹ

*– ಪತಿವೃತೆಯರಿಗೊಲಿತಾನ ಭಗವಾನ, ಶಿವಶರಣರಿ ಗೊಲಿತಾನ ಭಗವಾನ.*

*– ರಾಜ್ಯ ಮಿಲೆ ಔರ ಭಾಗ್ಯಮಿಲೆ, ಸತ್ಸಂಗ ಮಿಲನಾ ಬಹುತ್ ಮುಸ್ಕಿಲ್ ಹೈ.*

*– ರತನಕೋ ಜತನಕರೋ, ವಕ್ತಪರ ಔರ್ ವತನಮೇ ಖರ್ಚ ಕರ್ಧೋ.*

*– ದಾಸೋಹಂ ಭಾವವಿಲ್ಲದೆ ಸೋಹಂಭಾವದ ಅರ್ಥವು ತಿಳಿಯುವುದು ಅಸದಳವಲ್ಲವೇ ?*

*– ರಾಮಬೊಲಾ ಖಡಕೀಚಾ ಹರ್ ಭರೋಸನಾಹಿ ಮಡಕಿಚಾ*

**ಪೂಜ್ಯರು ಸಾಧಿಸಿದ ಮೌಲ್ಯಗಳು :** *ಸತ್ಯ-ಶಾಂತಿ-ನೀತಿಯಿಂದ ಕೂಡಿದ ಜೀವನಮಾರ್ಗ.*

*– ಸತ್ಸಂಗದಿಂದ ದುಷ್ಟ ಭಾವನೆಗಳು ದೂರ.*

*– ದೇವರೊಬ್ಬನೇ, ಸಣ್ಣದೇವರು-ದೊಡ್ಡದೇವರು ಎಂಬ ಭಾವನೆ ಬೇಡ.*

*– ಜೀವನದಲ್ಲಿ ತಪ್ಪಾದಾಗ, ಆತ್ಮಸಾಕ್ಷಿಯಾಗಿ ದೇವರಲ್ಲಿ ಕ್ಷಮೆ ಕೋರಿ ಸುಧಾರಣೆ ಹೊಂದುವುದು.*

*– ಪರೋಪಕಾರ ಮತ್ತು ಅಹಿಂಸಾಪಾಲನೆ*

*–ಕಾರ್ಯನಿಷ್ಠೆ ಹಾಗೂ ಗುರುಹಿರಿಯರಲ್ಲಿ ವಿಧೇಯತೆ.*

ಅಂದು ಬೆಲ್ಲಕ್ಕಿಂತ ಸಕ್ಕರೆ ತುಟ್ಟಿಯಿತ್ತಾದ್ದರಿಂದ ಅವರ ಮನೆಯಲ್ಲಿ ಇದ್ದುದರಲ್ಲಿಯೇ ಬೆಲ್ಲದ ಚಹಾ ಮಾಡಿಸಿ ಬಂದ ಜನರಿಗೆ ಕುಡಿಯಲು ಕೊಡುವ ಏರ್ಪಾಡಾಗಿರುತ್ತಿತ್ತು. ರೊಟ್ಟಿ-ಖಾರಬೇಳೆಯ ಅನ್ನ ದಾಸೋಹ ನಡೆಸುತ್ತಿದ್ದರು. ೧೯೭೨ ರ ಬರಗಾಲದಲ್ಲಂತೂ ಪೂಜ್ಯರು ತಮ್ಮ ಹಗೆಯಲ್ಲಿದ್ದ ೬೫-೭೦ ಚೀಲ ಜೋಳ ತೆಗೆಸಿ ಹಸಿದವರಿಗೆ ನುಚ್ಚು-ಅಂಬಲಿ ಮಾಡಿಸಿ ಉಣಬಡಿಸಿದರು[೬]. ಅಂದು ಇವರು ನಡೆಸಿದ ದಾಸೋಹವನ್ನು ಕಂಡು ಶ್ರೀಮಂತರು ಅಚ್ಚರಿಪಟ್ಟರು. ಅಂದಿನಿಂದ ಪ್ರಸಿದ್ಧಿ ಹೊಂದಿದ ದಾಸೋಹಕ್ರಮ ತ್ರಿಮೂರ್ತಿ ಅಪ್ಪನವರ ನೇತೃತ್ವದಲ್ಲಿ ಅಗಣಿತ ಪ್ರಮಾಣದಲ್ಲಿ ಬೆಳೆದು ಇಂದು ಅಭಿನವ ಪುಂಡಲಿಂಗರಿಂದಲೂ ಮುಂದುವರೆಯುತ್ತಿದೆ.

೧೯೭೦ ರಲ್ಲಿ ಕೆನಡಾ ದೇಶದ ಇತಿಹಾಸ ಪ್ರಾಧ್ಯಾಪಕರೊಬ್ಬರು ವಿಜಾಪುರದಿಂದ ಇಂಡಿ ರೈಲು ನಿಲ್ದಾಣದ ಮಾರ್ಗವಾಗಿ ಗೋಳಸರಕ್ಕೆ ಬಂದು ಪುಂಡಲೀಕ ಮಹಾರಾಜರ ಮಠದಲ್ಲಿ ಮೂರು ದಿನಗಳ ಕಾಲ ಇದ್ದರು. ಗೋಳಸರದ ರಸ್ತೆಗಳು, ಮನೆಗಳು ಹಾಗೂ ಹಳ್ಳಿಯ ಬದುಕನ್ನು ಕುರಿತು ಫೋಟೋ ಸಹಿತ ದಾಖಲೆ ಪಡೆದುಕೊಂಡಿರುವುದನ್ನು ಮರಿಗೆಣ್ಣಗೌಡ ಪಾಟೀಲರವರು ದೃಢೀಕರಿಸುತ್ತಾರೆ. ತನಗೆ ಗೊತ್ತಿದ್ದ ಯೋಗ, ಪ್ರಾಣಾಯಾಮದ ಭಂಗಿಗಳನ್ನು ಪೂಜ್ಯರ ಸಮ್ಮುಖದಲ್ಲಿ ಪ್ರದರ್ಶಿಸಿ 'Am I Right?' ಎಂದು ಕೇಳಿದನಂತೆ. ದಾಸೋಹದ ರೊಟ್ಟಿ ಖಾರಬೇಳಿಯನ್ನು ಸವಿದ ವಿದೇಶಿ ಪ್ರವಾಸಿ 'You eat less nutritious food' ಎಂದು ಹೇಳುತ್ತ ತನ್ನ ಜೇಬಿನಲ್ಲಿರುವ ಮಾತ್ರೆ ನುಂಗಿದನಂತೆ; ಹಾಗೂ ಸ್ನಾನಕ್ಕಾಗಿ ಬಾವಿಗೆ ಕರೆದುಕೊಂಡು ಹೋದಾಗ ತನ್ನ ಪದ್ಧತಿಯಂತೆ ಬೆತ್ತಲೆಯಾಗಿ ಬಾವಿಗೆ ಜಿಗಿದು ಸ್ನಾನ ಮಾಡಿಕೊಂಡು ಬಂದಿರುವುದನ್ನು ನಿವೃತ್ತ ಉಪನ್ಯಾಸಕ ಗಂಗಾಧರ ತೆಗ್ಗೆಳ್ಳಿ ತಿಳಿಸಿದರು. ಈ ಸಂದರ್ಭದಲ್ಲಿ ಪುಂಡಲೀಕ ಮಹಾರಾಜರು ಮತ್ತು ಕೆನಡಾ ಪ್ರವಾಸಿಯ ನಡುವೆ ಭಾಷಾ ಅನುಕೂಲಕಾರರಾಗಿದ್ದ ಗೋಳಸರದವರೇ ಆದ ಹಣಮಂತ್ರಾಯಗೌಡ ಭೀ ಬಿರಾದಾರ ಅವರೂ ಇತ್ತೀಚೆಗೆ ನಿಧನರಾದರು. ಪ್ರಯುಕ್ತ ಈ ವಿದೇಶೀ ಪ್ರವಾಸಿಯ ಹೆಸರು, ತಂಗಿದ್ದ ನಿಖರ ದಿನಾಂಕ, ಪಡೆದ ಮಾಹಿತಿ ಈ ಬಗ್ಗೆ ಹೆಚ್ಚಿನ ವಿಷಯ ಸಂಗ್ರಹಕ್ಕಾಗಿ ಪ್ರವಾಸಿಯ 'ಪ್ರವಾಸ ಕಥನ' (Travel Diary) ದ ಮೊರೆ ಹೋಗಬೇಕಾಗುತ್ತದೆ. ಪುಂಡಲೀಕ ಮಹಾರಾಜರು ತಮ್ಮ ವೃದ್ಧಾಪ್ಯದಲ್ಲಿ ಪಾರ್ಶ್ವವಾಯುವಿನಿಂದ ಬಳಲುತ್ತಿದ್ದಾಗ ಹಳ್ಳಿಯಲ್ಲಿ ಲಭ್ಯವಿದ್ದ ಗಾಂವಟಿ ಔಷಧಕ್ಕೆ ಸೀಮಿತ ಮಾಡಿಕೊಂಡು, ಶರೀರದ ಕರ್ಮ ಭೋಗಿಸಬೇಕಾಗಿದೆ ಎಂದರು. ಅವರ ಮಗ ತ್ರಿಮೂರ್ತಿಯವರು ಕೆಲ ಶರಣರೊಡಗೂಡಿ ತಂದೆಯನ್ನು ಸೋಲಾಪುರದ ವಾಡಿಯಾ ಆಸ್ಪತ್ರೆಗೆ ದಾಖಲಿಸಿ ವೈದ್ಯ ಮೆಹ್ತಾರವರಿಂದ ಚಿಕಿತ್ಸೆ ಕೊಡಿಸಿದರು. ಮನೆಗೆ ಬಂದ ಮೇಲೆ ಸೊಸೆ ಶಾಂತಾರವರು ನೋಡಿಕೊಂಡರು. ಸಿದ್ಧರಾಯ ಗುಡಿಯ ಬಲಭಾಗದಲ್ಲಿರುವ ಪೂಜಾ ಮನೆಯ ಎದುರಿಗೆ ಆರಾಮ ಕುರ್ಚಿಯಲ್ಲಿ ಕುಳಿತು, ಕಟ್ಟಿಗೆಯ ಮಣೆಯ ಮೇಲೆ ಪಾದ ಇಟ್ಟು ವಿಶ್ರಾಂತಿ ಪಡೆದರು. ಅವರ ಪೂಜಾ ವಿಧಾನ, ಸಂಭಾಷಿಸುವ ಪರಿ ಇತರ ಯಾವುದೇ ಚಟುವಟಿಕೆಗಳ ಬಗ್ಗೆ ಛಾಯಾ ಗ್ರಹಣ ಮಾಡುವುದನ್ನು ಎಂದೂ ಒಪ್ಪಲಿಲ್ಲ. ಅವರ ಗಮನಕ್ಕೆ ಬಾರದಂತೆ ತೆಗೆದ ಏಳೆಂಟು ಭಾವಚಿತ್ರಗಳು ಕೆಲವು ಪ್ರಕಟಿತ ಪುಸ್ತಕಗಳಲ್ಲಿ ಕಂಡು ಬರುತ್ತವೆ. ೧೯೭೮ ರ ಜುಲೈ ೧೫ ರಂದು ಬೆಳಿಗ್ಗೆ ೬.೫೦ ಗಂಟೆಗೆ ಪೂಜ್ಯರು ಲಿಂಗೈಕ್ಯರಾದರು. ಅಂದು ಗುಲಬರ್ಗಾ ಆಕಾಶವಾಣಿಯಿಂದ ಈ ಸುದ್ದಿ ಬಿತ್ತರವಾಗಿತ್ತು. ಪೂಜಾ ಕೋಣೆಯಲ್ಲಿ ಅವರು ಹಚ್ಚಿದ ನಂದಾದೀಪ ನಿರಂತರವಾಗಿ ಬೆಳಗುತ್ತಿದೆ. 'ಶರಣರ ಬಾಳು ಮರಣದಲ್ಲಿ ಕಾಣು' ಎಂಬಂತೆ ಸಾಮಾನ್ಯ ಗೃಹಸ್ಥ ಮನೆಯೊಂದು ಮಾರ್ಪಾಟು ಹೊಂದಿ, ಭಾವೈಕ್ಯತಾ ಆಶ್ರಮವಾಗಿ, ಸರ್ವಧರ್ಮೀಯರಿಗೆ ಸಮನ್ವಯ ಶಕ್ತಿ ಕೇಂದ್ರವಾಗಿದೆ. ಈ ಕ್ಷೇತ್ರಕ್ಕೆ ಯಾರು ಎಷ್ಟು ಹೊತ್ತಿನಲ್ಲಿ

ಬಂದರೂ ಚಹ, ಅನ್ನ ಪ್ರಸಾದ ಸ್ವೀಕರಿಸದೆ ಹೋಗುವಂತಿಲ್ಲ. ಲಿಂಗೈಕ್ಯ ಶಿವಯೋಗಿಗಳ ಬದುಕು-ಬೋಧನೆಗಳನ್ನು ಸ್ಮರಿಸುವ ೩೨ ಪುಣ್ಯಾರಾಧನೆ ಕಾರ್ಯಕ್ರಮಗಳು ಪ್ರತಿವರ್ಷ ಆಷಾಢ ಬಹುಳ ತೃತೀಯ ಚತುರ್ಥಿಯಂದು ಅವರ ಸಮಾಧಿ ಸ್ಥಳ (ಮೇಲಿನ ಗುಡಿ) ದಲ್ಲಿ ಅರ್ಥಪೂರ್ಣವಾಗಿ ಜರುಗಿವೆ.

ಮೊದಲನೇ ಪುಣ್ಯತಿಥಿಯು ತ್ರಿಮೂರ್ತಿ ಅಪ್ಪನವರು, ಮುಖಂಡರಾದ ರಾಚನಗೌಡ ಪಾಟೀಲ, ಲಕ್ಷ್ಮಣ ಕವಟಗಿ, ವಿ.ಬಿ. ಪಾಟೀಲ (ಲಿಂಗದಳ್ಳಿ), ಶಿವನಿಂಗಪ್ಪಗೌಡ ಹೊಸಮನಿ, ಖಾಜಿ (ಅಪ್ಸರಾ, ಇಂಡಿ) ಮತ್ತು ಗ್ರಾಮಸ್ಥರೆಲ್ಲರ ಸಹಕಾರದಿಂದ ಜರುಗಿತು[೬]. ಎರಡನೇ ಪುಣ್ಯತಿಥಿಯಿಂದ ಮುಂದಿನ ಹದಿಮೂರು ವರ್ಷಗಳವರೆಗೆ ತ್ರಿಮೂರ್ತಿ ಅಪ್ಪನವರ ಮಾರ್ಗದರ್ಶನದಲ್ಲಿ ಪುಂಡಲಿಂಗ ಸೇವಾ ಸಮಿತಿಯ ಪದಾಧಿಕಾರಿಗಳಾದ ಮಲ್ಲನಗೌಡ ಪಾಟೀಲ, ಶ್ರೀಮಂತ ಮೇತ್ರಿ, ಸಂಗಣ್ಣ ನಿಂಬರಗಿ, ಶಿವಲಿಂಗಣ್ಣ ಬಾಗೇವಾಡಿ, ಮಕಬುಲ್ ಸಾಬ್ ಇನಾಮದಾರ, ರಾಮಚಂದ್ರ ತೆಗ್ಗೆಳ್ಳಿ ಹಾಗೂ ಸಕಲ ಗ್ರಾಮಸ್ಥರು ಯಶಸ್ವಿಗೊಳಿದರು. ಸಮಾಧಿ ಸ್ಥಳದಲ್ಲಿ ಕಾಷ್ಠ ಅಲಂಕಾರವನ್ನು ನಾಗೇಂದ್ರ ಪತ್ತಾರ ನಡೆಸಿಕೊಟ್ಟರು. ತ್ರಿಮೂರ್ತಿ ಅಪ್ಪನವರು ಲಿಂಗೈಕ್ಯರಾದ ಮೇಲೆ ೧೯೯೪ ರಿಂದ ಪ್ರಸಕ್ತದವರೆಗೆ ಅಭಿನವ ಪುಂಡಲಿಂಗರ ಸಾನಿಧ್ಯದಲ್ಲಿ ಅದೇ ಪುಂಡಲಿಂಗ ಸೇವಾ ಸಮಿತಿಯ ಸದಸ್ಯರು, ಗ್ರಾಮಸ್ಥರು, ಪುಂಡಲೀಕ ಮಹಾರಾಜರ ಪುಣ್ಯಾರಾಧನೆಯನ್ನು ಮುನ್ನಡೆಸಿಕೊಂಡು ಬರುತ್ತಿದ್ದಾರೆ. ಈ ಸಂದರ್ಭದಲ್ಲಿ ಕರ್ತೃ ಗದ್ದುಗೆಗೆ ಸುಮಂಗಲೆಯರಿಂದ ಕುಂಭಾಭಿಷೇಕವಾಗುತ್ತದೆ. ರುದ್ರಾಭಿಷೇಕವನ್ನು ರೋಡಗಿ ವಿರಕ್ತಮಠದ ಶಿವಮೂರ್ತಿ ಸ್ವಾಮಿಯುವರು ಮತ್ತು ಶಿವಲಿಂಗಯ್ಯ ಮಠಪತಿ ಸಹೋದರರು; ಸಪ್ತಾಹ, ಭಜನೆ, ಡೊಳ್ಳಿನ ಕಾರ್ಯಕ್ರಮಗಳ ನಿರ್ವಹಣೆಯನ್ನು ಲಕ್ಷ್ಮಣ ತೆಗ್ಗೆಳ್ಳಿ, ನಿಂಗಣ್ಣ ಕುಮುಸಗಿ, ಶರಣಪ್ಪ ಅಂದೋಡಗಿ, ಬಸಣ್ಣ ಹೊಸಮನಿ, ಮಲ್ಲು ಕಂಬಾರ, ಗಿರಮಲ್ಲ ಕೋಳಿಯವರು; ಅನ್ನಪ್ರಸಾದದ ಪೂರ್ವ ತಯಾರಿಗಾಗಿ ಯಮುನಪ್ಪ ತೆಗ್ಗೆಳ್ಳಿ, ಭೀಮಶಾಗೌಡ ಹೊಸಮನಿ, ಬಸಣ್ಣ ತೆಗ್ಗೆಳ್ಳಿ, ಸಿದ್ದಪ್ಪ ಹಿಕ್ಕನಗುತ್ತಿ, ಆನಂದಪ್ಪ ಮಾಲಗಾರ, ಮಹಾದೇವ ಮಂದೋಲಿ, ಪುಂಡಲೀಕ ಹರಿಜನ ಇವರೊಂದಿಗೆ ಎಲ್ಲ ಗ್ರಾಮಸ್ಥರು ಕೈ ಜೋಡಿಸಿದ್ದಾರೆ. ಪೂಜ್ಯರ ಭಾವ ಚಿತ್ರವನ್ನು ಪಲ್ಲಕ್ಕಿಯಲ್ಲಿಟ್ಟು ಗ್ರಾಮದಲ್ಲಿ ಮೆರವಣಿಗೆ ನಡೆಯುತ್ತದೆ. ಮೆರವಣಿಗೆಯಲ್ಲಿ ಮಲ್ಲಾಬಾದಿ ಭಜನಾ ಮಂಡಳಿಯ ರಾಗ-ತಾಳ-ಲಯದಿಂದ ಕೂಡಿದ ಹಾಡುಗಳು ಅನನ್ಯ. ಈ ತಂಡದ ಸುಮಾರು ೨೦ ಜನರು ವೃತ್ತಾಕಾರದಲ್ಲಿ ಸಾಗುತ್ತ ನಾಯಕ ಹೇಳುವ 'ಪುಂಡಲಿಂಗ ಪರಮೇಶ' ಎಂಬ ವಾಕ್ಯವನ್ನು ಎಲ್ಲರೂ ಪನರುಚ್ಚರಿಸುತ್ತಾ ವಾದ್ಯಗಳನ್ನು ಬಾರಿಸುತ್ತಾರೆ. ಹಾಡಿನ ಗತಿ ಹೆಚ್ಚಿಸುತ್ತ ಹೋದಂತೆ ಕೇಳುಗರಿಗೆ ಮುದವೆನಿಸುತ್ತದೆ. ಪುಂಡಲೀಕ ಶಿವಯೋಗಿಗಳ ಮಹಿಮೆಯನ್ನು ಸಾರುವ, ಪ್ರಾಸದಿಂದ ಕೂಡಿರುವ ೫೦-೬೦ ಪದಪುಂಜಗಳನ್ನು ರಚಿಸಿದ ಆಶುಕವಿಗಳಿವರು. ಪುಂಡಲೀಕ ಮಹಾರಾಜರ ಪುಣ್ಯಾರಾಧನೆಯನ್ನು ಹತ್ತಿರದ ನಾದ ಕೆ.ಡಿ, ಸಿಂದಗಿ ತಾಲೂಕಿನ ಹಿಕ್ಕನಗುತ್ತಿ ಗ್ರಾಮಗಳಲ್ಲಿಯೂ ಜನರು ವಿಜೃಂಭಣೆಯಿಂದ ಆಚರಿಸುತ್ತಿದ್ದಾರೆ.

**ಆರಾಧ್ಯದೈವ ಸಿದ್ಧರಾಯ :** ಪುಂಡಲೀಕ ಮಹಾರಾಜರು ಆರಾಧಿಸಿದ ದೇವರು ಸಿದ್ಧರಾಯ. ತೊರವಿಯ ನರಸಿಂಹದೇವರು ನೀರಿನ ಮಡುವಿನಲ್ಲಿ ಮುಳುಗಿರುವುದಾಗಿಯೂ, ನಾಯಕೋಡಿ ಮನೆತನದ ವಂಶಸ್ಥ ಸಿದ್ದಪ್ಪನ ಕನಸಿನಲ್ಲಿ ಬಂದ ನರಸಿಂಹದೇವರು ತನ್ನನ್ನು ಎತ್ತಿಕೊಂಡು ಹೋಗಿ ಪ್ರತಿಷ್ಠಾಪಿಸಲು ತಿಳಿಸಿದನಂತೆ. ಸಿದ್ದಪ್ಪನು ನೀರಿನ ಮಡುವಿಗೆ ಹೋಗಿ ನರಸಿಂಹ ದೇವರನ್ನು ಎತ್ತಿಕೊಂಡು ಬಂದು ಲಾಳಸಂಗಿಯಲ್ಲಿ ಪ್ರತಿಷ್ಠಾಪಿಸಿದನೆಂದು ಇಲ್ಲಿಯ ಸ್ಥಳಪುರಾಣದ ಐತಿಹ್ಯವಾಗಿದೆ. ಈಗಲೂ ಗೊಳಸರದ ಸಿದ್ಧರಾಯ ದೇವರ ಪಲ್ಲಕ್ಕಿಯನ್ನು ದೀಪಾವಳಿ ಅಮಾವಾಸ್ಯೆ ಗೊಮ್ಮೆ ಲಾಳಸಂಗಿಯಲ್ಲಿರುವ ಸಿದ್ಧರಾಯನ ಸ್ಥಾನಕ್ಕೆ ಹೊತ್ತು ಕೊಂಡು ಹೋಗಿ ಆ ಊರಿನಲ್ಲಿ ಮೆರವಣಿಗೆ ಮಾಡುವ ಪದ್ಧತಿ ರೂಢಿಯಲ್ಲಿದೆ. ಗೊಳಸರದ ಸಿದ್ಧರಾಯ ದೇವರ ಗುಡಿ ಇರುವ ಜಾಗ ಬ್ರಾಹ್ಮಣರಿಗೆ ಸೇರಿದ್ದಾಗಿತ್ತು ಮತ್ತು ಅದು ತುಳಸಿ ಕಟ್ಟೆಯ ರೂಪದಲ್ಲಿತ್ತು. ಅದು ಸಿದ್ದಪ್ಪನಿಗೆ ಬ್ರಾಹ್ಮಣರಿಂದ ಕೊಡಲ್ಪಟ್ಟಿತ್ತೆಂದೂ, ಮುಂದೆ ಅಲ್ಲಿ ಸಿದ್ದಪ್ಪನು ಸಿದ್ಧರಾಯ ದೇವರ ಗದ್ದುಗೆಯನ್ನಾಗಿ ಮಾಡಿದನೆಂದೂ ಪ್ರತೀತಿ ಇದೆ. ಪ್ರಾಚೀನ ಕಾಲದ ಸಿದ್ಧರಾಯ ದೇವರ ಗದ್ದುಗೆ ಶಿಥಿಲವಾದಾಗ ೧೯೬೩-೬೪ರಲ್ಲಿ ಗ್ರಾಮಸ್ಥರು ಪುಂಡಲೀಕ ಮಹಾರಾಜರ ಸಲಹೆಯಂತೆ ಪುನರ್ನಿರ್ಮಾಣ ಕಾರ್ಯ ಕೈಗೊಂಡಿರುತ್ತಾರೆ. ಹಣಮಂತ ವಡ್ಡರ ಗುಡಿಯ ಅಡಿಪಾಯದಿಂದ ಮೇಲ್ಛಾವಣಿಯವರೆಗೆ ಕಟ್ಟಿದನು ಮತ್ತು ಆಕಸ್ಮಿಕವಾಗಿ ಮೇಲಿನಿಂದ ಬಿದ್ದು ತೀರಿಕೊಂಡನು. ಮೇಲ್ಛಾವಣಿಯ ನಂತರದ ನಿರ್ಮಾಣವನ್ನು ಆದಪ್ಪ ವಡ್ಡರ ಅವರಿಂದ ಮುಂದುವರೆದು ಕಳಸದ ಹಂತದಲ್ಲಿ ಮಾಳಪ್ಪ ನಿಂಬಾಳ ಅವರಿಂದ ಮುಕ್ತಾಯಗೊಂಡಿತು. ಕಟ್ಟಡ ನಿರ್ಮಾಣ ವಿಷಯದಲ್ಲಿ ಅನುಭವಿಗಳಾದ ತಾಂಬಾದ ಶಿವಯೋಗೆಪ್ಪ ಮತ್ತು ದಾನಯ್ಯ ಮಠಪತಿ ಇವರು ಮೇಲ್ವಿಚಾರಣೆ ನಡೆಸಿದರು. ಅಗತ್ಯ ಕಟ್ಟಡ ಸಾಮಗ್ರಿಗಳ ಸಮಯೋಚಿತ ಪೂರೈಕೆಯ ಉಸ್ತುವಾರಿಯನ್ನು ಗ್ರಾಮದ ಸೈದಪ್ಪ ತೆಗ್ಗೆಳ್ಳಿ, ಬಸಣ್ಣ ತೆಗ್ಗೆಳ್ಳಿ ಇವರು ನಿರ್ವಹಿಸಿದರೆ, ಹಣಕಾಸಿನ ಕೊಡು-ಕೊಳ್ಳುವ ಕೆಲಸಕ್ಕಾಗಿ ರೋಡಗಿಯ ಗುರುಪಾದಪ್ಪಗೌಡ,

ಮಲಕಪ್ಪ ನಾಗಠಾಣ ಹಾಗೂ ಗಚ್ಚು ತಯಾರಿಕೆಗಾಗಿ ಗಾಣ ಹೂಡಲು ಅಮೋಗಿಸಿದ್ದ ಡೊಂಬಳಿ, ದೊಡ್ಡನಾಗಪ್ಪ ಡೊಂಬಳಿ ಅವರು ನಿಯೋಜಿತರಾಗಿದ್ದರೆಂದು ತಿಳಿದು ಬರುತ್ತದೆ[೬]. ಸಿದ್ಧರಾಯನ ಗದ್ದುಗೆಯ ಪೂಜಾ ಕೈಂಕರ್ಯ ವನ್ನು ಶಿವಲಿಂಗಪ್ಪ ಭೂಶೆಟ್ಟಿ, ಶಿವನಿಂಗಪ್ಪಗೌಡ ಹೊಸಮನಿ, ಜೆಟ್ಟೆಪ್ಪ ಡೊಂಬಳಿ ಮತ್ತಿತರರು; ವರ್ಷಕ್ಕೊಮ್ಮೆ ಸಿದ್ಧರಾಯ ದೇವರ ಹೇಳಿಕೆ (ಮಳೆ-ಬೆಳೆ ಭವಿಷ್ಯ) ನುಡಿಯುವುದನ್ನು ಡೊಂಬಳಿ (ನಿಂಗಪ್ಪ, ಲಕ್ಷ್ಮಣ, ನಿಂಗಪ್ಪ) ಮನೆತನದವರೂ, ಅಮಾವಾಸ್ಯೆಯ ರಾತ್ರಿ ಭಜನೆಯನ್ನು ದೇವೇಂದ್ರ ಬಡಿಗೇರ, ಶಿವಪುತ್ರಪ್ಪ ಬಾಗೇವಾಡಿ, ಆದಪ್ಪ ಆಂದೋಡಗಿ, ಶಿವಣ್ಣ ಆಳೂರ, ಬಸಣ್ಣ ಆಳೂರ ಹಾಗೂ ಸಿದ್ಧರಾಯದೇವರ ಹಿಲಾಲ ಸೇವೆಯನ್ನು ಬಡದಾಳ ಕುಟುಂಬದವರು ನೆರವೇರಿಸಿಕೊಂಡು ಬಂದಿದ್ದಾರೆ.

ಗೊಳಸರದ ಸಿದ್ಧರಾಯನ ಗುಡಿಯು ಪೂರ್ವಾಭಿ ಮುಖವಾಗಿದ್ದು, ಗರ್ಭಗೃಹ ಮತ್ತು ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದೊಳಗೆ ಗದ್ದುಗೆಯ ಮೇಲೆ ದೇವರ (ನರಸಿಂಹ ದೇವರು...?) ಪಾದುಕೆಗಳಿವೆ. ಗರ್ಭಗೃಹದ ಮೇಲೆ ಗಚ್ಚಿನಿಂದ ಕಟ್ಟಲಾದ ಶಂಕುವಿನಾಕಾರದ ಶಿಖರವಿದೆ. ಶಿಖರದ ತುದಿಯಲ್ಲಿ ಕೇಸರಿ, ಬಿಳಿ ಹಸಿರು ಬಣ್ಣಗಳ ಧ್ವಜಗಳನ್ನು ಕಟ್ಟಲಾಗಿದೆ. ಛತ್ತಿನವರೆಗೆ ಕರಿಕಲ್ಲಿನಿಂದ ಕಟ್ಟಲಾದ ಕಟ್ಟಡದ ಹಿಂಭಾಗದ ಹೊರಗೋಡೆಯ ಮೇಲೆ ಪಲ್ಲಕ್ಕಿಯಲ್ಲಿ ಶಿವಲಿಂಗ, ಕುಳಿತ ನಂದಿ, ನವಿಲು ಹಾಗೂ ಗಿಳಿಗಳ ರೇಖಾ ಚಿತ್ರಗಳಿರುತ್ತವೆ. ಸಿದ್ಧರಾಯ ಗುಡಿಯ ಮುಂದೆ ಪಾದಗಟ್ಟೆ ಇದ್ದು, ಪಾದಗಟ್ಟೆಯ ಮೇಲೆ ಪಾದುಕೆಗಳ ರೇಖಾಚಿತ್ರ ಹಾಗೂ ಆರು ಸಾಲುಗಳ ಶಾಸನವಿದೆ. ಶಾಸನದ ಭಾಷೆ-ಮರಾಠಿ, ಲಿಪಿ ಹಿಂದಿ;

**ಶಾಸನ ಪಾಠ**

೧ ಓಂ ಶ್ರೀ

೨ ಶ್ರೀ ಸಿದ್ರಾಮೇಶ್ವರ ಪ್ರಸನ್ನ

೩ ಚಂದ್ರಾಮ ಲಕ್ಷ್ಮಣ ಬಡದಾಳ

೪ ಯಾಂಚಾ ಕಂದನ್ ಶ್ರೀ ಚರಣೀ ಮಂದಿರಾಸ ಅರ್ಪಣ

೫ ತಾ: ೨೭ ಸೋಮವಾರ ಮು: ಗೋಳಸರ - ಜಿ: ವಿಜಾಪುರ

೬ ಜೂನ್ - ೧೯೬೬

ಗರ್ಭಗೃಹದ ದ್ವಾರಶಾಖೆಗಳಿಗೆ ತಾಮ್ರದ ಹಾಳೆಗಳನ್ನು ಹೊದಿಸಲಾಗಿದೆ. ಎಡಬಲ ದ್ವಾರಶಾಖೆಗಳ ತಾಮ್ರಪಟಗಳ ಮೇಲೆ ಎಲೆ-ಮೊಗ್ಗುಗಳುಳ್ಳ ಬಳ್ಳಿಯ ಅಲಂಕಾರವಿದೆ. ಹಣೆಪಟ್ಟಿಯ ತಾಮ್ರಪಟದ ಮೇಲೆ -

೧. ಸಿದ್ರಾಯ ಪ್ರಸನ್ನ

೨. ಓಂ ತತ್ಸತ್

ಹೊಸ್ತಿಲಿನ ತಾಮ್ರಪಟದ ಎಡ-ಬಲ ದಂಡೆಗೆ ಮಂಗಳ ಸೂಚಕವಾದ ಸ್ವಸ್ತಿಕ ಲಾಂಛನ ಬರೆದು, ಅವುಗಳ ನಡುವಿನ ಭಾಗದಲ್ಲಿ -

೩. ತಗಡ ಕಾಣಿಕೆ ಸಲ್ಲಿಸಿದವರು:-ಭಾಗವ್ವ-ರಾಮಪ್ಪ-ಚಿಂಚೋಳಿ(ಬಟ್ಟರಕಿ)

೪. ಗೋಳಸರ: ತಾ: ೧೪.೧೧.೧೯೭೫

೫. ಮಿತಿ ಕಾರ್ತಿಕ ಶುದ್ಧ ಏಕಾದಶಿ ರಾಕ್ಷಸನಾಮ ಸಂವತ್ಸರ

೬. ಮಾಡಿಸಿದವರು: ಮಲಕಪ್ಪ-ಭೀಮಣ್ಣಾ-ನಾಗಠಾಣ ಗೋಳಸರ.

೭ ಕಲಾಕಾರ: ಭಗವಂತಪ್ಪ-ಸಿದ್ರಾಮಪ್ಪ-ವಿಶ್ವಕರ್ಮ (ಪೋದ್ದಾರ) ಖೇಡಗಿ

ಎಂಬ ಸಾಲುಗಳು ಉಲ್ಲೇಖವಾಗಿವೆ.

ದಿನಾಂಕ : ೦೮.೦೮.೧೯೬೮ ರಂದು ಗೋಳಸರದಲ್ಲಿ ಪ್ರಾರಂಭವಾದ ಸರ್ಕಾರಿ ಪ್ರೌಢಶಾಲೆ ಈ ಭಾಗಕ್ಕೇ ಮೊದಲನೆಯದು. ಪುಂಡಲೀಕ ಮಹಾರಾಜರ ಮೊಮ್ಮಗ ಅಭಿನವ ಪುಂಡಲಿಂಗರು ತಮ್ಮ ಮಾಲೀಕತ್ವದ ಗೋಳಸರ ಸರ್ವೆ ನಂಬರು ೧೧೦೮/೩ರಲ್ಲಿ ಎರಡು ಎಕರೆ ಭೂಮಿಯನ್ನು ಸರ್ಕಾರಿ ಪ್ರೌಢಶಾಲೆ ಸ್ಥಾಪಿಸುವುದಕ್ಕಾಗಿ ಇಂಡಿ ವಲಯದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಹೆಸರಿಗೆ ದಾನ ಬಿಟ್ಟಿರುವುದು ರೆಕಾರ್ಡ್ ಆಫ್ ರೈಟ್ಸ್, ಗೇಣಿ ಮತ್ತು ಪಹಣಿ ಪತ್ರಿಕೆ ಫಾರಂ ನಂ.೧೬ ರಿಂದ ದೃಢಪಡುತ್ತದೆ[೮]. ಈ ಜಮೀನಿನಲ್ಲಿ ಈಗ ಸರ್ಕಾರಿ ಪದವಿ ಪೂರ್ವ ಕಾಲೇಜೂ ಇದೆ. ೨೦ನೇ ಶತಮಾನದ ಆದಿಯಲ್ಲಿ ಜನಿಸಿ ಎಪ್ಪತ್ತು ದಶಕಗಳಲ್ಲಿ ಶ್ರೀ ಪುಂಡಲೀಕ ಮಹಾರಾಜರಿಂದ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಈ ಭಾಗದ ಜನರನ್ನು ಮೇಲೆತ್ತುವ ಸಮಾಜಮುಖಿ ಕೆಲಸ ಈಗಲೂ ಈ ಮನೆತನದಿಂದ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಯಾವುದೇ ಲಾಭದ ಆಸೆಯನ್ನಿಟ್ಟುಕೊಳ್ಳದೆ ಜನಸೇವೆಯನ್ನೇ ಮಾಡಿಕೊಂಡು ಬರುತ್ತಿರುವ ಮಹಾದಾನ ಪ್ರವೃತ್ತಿಯ ಆಧ್ಯಾತ್ಮಕ ತಾಣವಿದಾಗಿದೆ.

**ಪುಂಡಲೀಕ ಮಹಾರಾಜರ ಬಗ್ಗೆ ಪ್ರಕಟಿತ ಸಾಹಿತ್ಯ ಕೃತಿಗಳು**

*ಶ್ರೀ ಸದ್ಗುರು ಪುಂಡಲಿಂಗ ಮಹಾರಾಜರು, ಗೋಳಸರ - ಇವರ ಸಂಕ್ಷಿಪ್ತ ಜೀವನ ಚರಿತ್ರೆ :* ಶ್ರೀ ಮ.ನಿ.ಪ್ರಸ್ವ, ಶಿವಮೂರ್ತಿ

ಸ್ವಾಮಿಗಳು ವಿರಕ್ತಮಠ ರೋಡಗಿ ಇವರು ಬರೆದ ಶ್ರೀ ಸದ್ಗುರು ಪುಂಡಲಿಂಗ ಮಹಾರಾಜರ ಸಂಕ್ಷಿಪ್ತ ಜೀವನ ಚರಿತ್ರೆ ಎಂಬ ೧೨೧ ಪುಟಗಳ ಕೃತಿಯು ೧೯೮೬ ನೇ ಜೂನ್ ತಿಂಗಳಿನಲ್ಲಿ ತ್ವರಿತ ಮುದ್ರಣ, ಗಂಗಾಪುರ ಪೇಟ್, ಗದಗ ಇಲ್ಲಿ ಮುದ್ರಣಗೊಂಡಿದೆ. ಶ್ರೀ ಸದ್ಗುರು ಪುಂಡಲಿಂಗ ಮಹಾರಾಜರ ಸೇವಾ ಸಮಿತಿ ಗೊಳಸರ ಇವರಿಂದ ಪ್ರಕಾಶಿಸಲ್ಪಟ್ಟ ಈ ಪುಸ್ತಕದ ಬೆಲೆ ಐದು ರೂಪಾಯಿಗಳು. ಚರಿತ್ರನಾಯಕನ ಜನನ, ಬಾಲ್ಯ, ವಿವಾಹ, ಶಿವನ ಪರೀಕ್ಷೆ, ಶಿವನ ಸಾಕ್ಷಾತ್ಕಾರ, ವಿಠ್ಠಲನು ದರ್ಶನ ಕೊಟ್ಟದ್ದು, ಹೊಲದಲ್ಲಿ ಕಳವು ಆದದ್ದು ಕೇಳಿ ಕಳವಳಿಸದೇ ಇದ್ದದ್ದು, ಜೇಷ್ಠಪುತ್ರ ಸಿದ್ಧರಾಮನ ಅವಸಾನ, ಯೋಗಿನಿಗೆ ಶಿವನ ಕರೆ, ದ್ವಿತೀಯ ಪುತ್ರನ ಅವಸಾನ, ಗುರುದೇವಿ ದತ್ತಳು ಹಾಗೂ ದತ್ತೂಬಾಯಿ ಈರ್ವ ಕನ್ಯಾಮಣಿಗಳ ವಿಯೋಗ, ತ್ರಿವೇಣಿ ಮತ್ತು ವಿಠ್ಠಲನ ಬಿಡುಗಡೆ, ಪಾರ್ವತಿಯು ದೇಹದಿಂದ ಬಿಡುಗಡೆ ಹೊಂದಿದ್ದು, ಭಕ್ತಾದಿಗಳಿಗೆ ಹೆಚ್ಚು ಪರಿಚಯ ಹಾಗೂ ಬೋಧನೆಯು, ಮಹಿಮೆ, ಲಿಂಗೈಕ್ಯ, ಶತನಾಮಾವಳಿ, ಪೂಜ್ಯರ ನುಡಿಮುತ್ತುಗಳು – ಹೀಗೆ ಒಟ್ಟು ಹದಿನೆಂಟು ಅಧ್ಯಾಯಗಳಿರುತ್ತವೆ. 'ಮಹಿಮೆ' ಎಂಬ ಹದಿನೈದನೆಯ ಅಧ್ಯಾಯದಲ್ಲಿ ಇಪ್ಪತ್ತೇಳು ಉಪಶೀರ್ಷಿಕೆಗಳನ್ನು ಮಾಡಲಾಗಿದೆ. ಈ ಕೃತಿಯು ಗೊಳಸರ ಕ್ಷೇತ್ರ ಹಾಗೂ ಪುಂಡಲೀಕ ಮಹಾರಾಜರ ಪರಿಚಯ ಮಾಡಿಕೊಡುವ ಪ್ರಥಮ ಪ್ರಯತ್ನವಾಗಿರುತ್ತದೆ.

***ಶ್ರೀ ಶ್ರೀ ಪುಂಡಲಿಂಗೇಶ್ವರ ಅಷ್ಟೋತ್ತರ ಶತನಾಮಾವಳಿ :*** ಎಂಟು ಪುಟಗಳ ಈ ಪುಟ್ಟ ಕೃತಿಯಲ್ಲಿ ಮಹಾರಾಜರ ಕಿರುಪರಿಚಯ ಮಾಡಿರುವ ರೋಡಗಿ ವಿರಕ್ತಮಠದ ಶಿವಮೂರ್ತಿ ಸ್ವಾಮಿಯವರು 'ಶ್ರೀ ಮಜ್ಜಗದ್ಗುರು ಶಿವಲಿಂಗೇಶ್ವರ ಪ್ರಸನ್ನ' ಎಂದು ಆರಾಧ್ಯ ದೇವರನ್ನು ನೆನೆದು, ಶ್ರೀ ಪುಂಡಲಿಂಗೇಶ್ವರ ಅಷ್ಟೋತ್ತರ ಶತನಾಮಾವಳಿ ರಚಿಸಿದ್ದಾರೆ. ಇದರಲ್ಲಿ ೧೦೮ ಸ್ತೋತ್ರಗಳಿರುತ್ತವೆ; ಪೂಜ್ಯರ ಹದಿನೈದು ನುಡಿಮುತ್ತುಗಳನ್ನು ಉಲ್ಲೇಖಿಸಲಾಗಿದೆ. ಮುದ್ರಣಾಲಯ ಹಾಗೂ ಮುದ್ರಣಗೊಂಡ ವರ್ಷ ನಮೂದಾಗಿರುವುದಿಲ್ಲ. ೨೦೧೦ ರಲ್ಲಿ ವಿಜಾಪುರದ ಸಂತೋಷ ಡಿಜಾಯನರ್ಸ್ ಆಂಡ್ ಪ್ರಿಂಟರ್ಸ್‌ನವರಿಂದ ಎರಡನೆಯ ಬಾರಿ ಮುದ್ರಣವಾಗಿರುತ್ತದೆ.

***ದಿನದರ್ಶಿಗಳು (ಪಾಕೆಟ್ ಕ್ಯಾಲೆಂಡರ್ಸ್) :*** ೨೦೦೧ ರಿಂದ ಪ್ರತಿವರ್ಷವೂ ಬೆಂಗಳೂರಿನ ಸತ್ಯಶ್ರೀ ಹಾಗೂ ಲಕ್ಷ್ಮೀ ಮುದ್ರಣಾಲಯಗಳಲ್ಲಿ ಮುದ್ರಣವಾಗಿರುವ ಪಾಕೆಟ್ ಕ್ಯಾಲೆಂಡರ್‌ಗಳ ರಕ್ಷಾಪುಟಗಳ ಮೇಲೆ ಪೂಜ್ಯ ಪುಂಡಲೀಕ ಮಹಾರಾಜರು ಹಾಗೂ ತ್ರಿಮೂರ್ತಿ ಅಪ್ಪನವರ ಭಾವಚಿತ್ರಗಳಿರುತ್ತವೆ. ರಕ್ಷಾಪುಟದ ಒಳಭಾಗದಲ್ಲಿ ಗೊಳಸರದ ವೀರಗಲ್ಲುಗಳು, ಶ್ರೀ ಸಿದ್ಧರಾಯ ದೇವರ ಗದ್ದುಗೆ, ಕ್ಷೇತ್ರ ಪರಿಚಯ ಮತ್ತು ನುಡಿಮುತ್ತುಗಳನ್ನು ಉಲ್ಲೇಖಿಸಲಾಗಿದೆ.

***ಶತಮಾನದ ಸವಿನೆನಪಿನಲ್ಲಿ ಯೋಗಿವರ್ಯ ಪುಂಡಲಿಂಗರು:*** ಈ ಕೃತಿಯನ್ನು ಡಾ. ಆರ್.ಸಿ. ಮುದ್ದೇಬಿಹಾಳರು ವಿವಿಧ ಶೀರ್ಷಿಕೆಯಡಿಯಲ್ಲಿ ೧೪೮೦ ತ್ರಿಪದಿಗಳನ್ನು ರಚಿಸಿದ್ದಾರೆ. ಶ್ರೀ ಮ.ಘ.ಚ.ಚನ್ನಮಲ್ಲಿಕಾರ್ಜುನ ಸ್ವಾಮಿಗಳು, ಉದಯೇಶ್ವರ ಮಠ ನಾಗಠಾಣ ಅವರಿಂದ ಮುನ್ನುಡಿ ಬರೆಯಲ್ಪಟ್ಟ ಈ ಪುಸ್ತಕದಲ್ಲಿ ಲೇಖಕರು ತ್ರಿಪದಿಯ ಪ್ರಾಸಗಳನ್ನು ಮೀರಿದ್ದಾರೆ. ತ್ರಿಪದಿಗೆ ಸಹಜವಾದ ಪುನರಾವರ್ತನೆಯ ಲಯ ಸಾಮಾನ್ಯವಾಗಿ ಕಾಣುವುದಿಲ್ಲ. ಆದರೂ ಲೇಖಕರ ಪ್ರಯತ್ನ ಮೆಚ್ಚುವಂತಹದ್ದು. ಸಿದ್ದಪ್ಪ ವಾರದ ಅವರು ಗ್ರಂಥ ದಾನಿಗಳಾಗಿರುವ ಈ ಕೃತಿಯು ವಿಜಾಪುರದ 'ನಂದನ ಆಫ್‌ಸೆಟ್ ಪ್ರಿಂಟರ್ಸ್' ಅವರಿಂದ ಜುಲೈ ೨೦೦೬ ರಲ್ಲಿ ಮುದ್ರಣಗೊಂಡಿದೆ.

***ಗೊಳಸರದ ಸದ್ಗುರು ಪುಂಡಲಿಂಗೇಶ್ವರ ಚರಿತಾಮೃತ :*** ಬೋನಾ ಬಸವರಾಜ ಎಂಬ ಕಾವ್ಯನಾಮದ ಬಸವರಾಜ ಹೊನ್ನಪ್ಪ ಬೋಕೆರವರು 'ಪುಂಡಲಿಂಗೇಶ್ವರ ಚರಿತಾಮೃತ' ಎಂಬ ಕೃತಿಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾರೆ. ಇದರಲ್ಲಿ ಹದಿನೆಂಟು ಸಂಧಿಗಳಿರುತ್ತವೆ. ಕವಿಮನೋಭಾವದ ಇವರ ರಚನೆಗಳಲ್ಲಿ ಭಾಮಿನಿ ಷಟ್ಪದಿಯ ಲಯ ಸುಂದರವಾಗಿ ಮೂಡಿದೆ. ಪುಂಡಲಿಂಗ ಶಿವಯೋಗಿ ಗಳ ವ್ಯಕ್ತಿತ್ವ ದರ್ಶನವನ್ನು ಕವಿ ಭಾವಪೂರ್ಣವಾಗಿ ಮಾಡಿಕೊಟ್ಟಿದ್ದಾರೆ. ಪೂಜ್ಯರ ಮಗ ದತ್ತಾತ್ರೇಯ ತೀರಿದಾಗಿನ ಪ್ರಸಂಗ ಕುರಿತಾದ ಕೆಳಕಂಡ ಷಟ್ಪದಿಯು ಕವಿಯ ರಚನಾ ಸೊಗಸು ಮತ್ತು ಸುಂದರ ಶೈಲಿಗೆ ಉದಾಹರಣೆಯಾಗಿದೆ.

> **ಹಣವ ಸುರಿದಿಹೆವಿದಕೆ ಬಹುವೆನೆ**
> **ಗುಣವ ತರುವುದು ಈಶ್ವರೇಚ್ಛೆಯು**
> **ಎನುತೆ ಬಾಧಿತರಾಗದಿರುವರು ಪುಂಡಲಿಂಗೇಶ**
> **ಗುಣವ ಕಾಣುವ ಯೋಗ ಬಾರದೆ**
> **ಹೆಣವ ಕಾಣುವ ಯೋಗ ಬಂದಿತು**
> **ಜನರು ಮರುಗಿದರಿದಕೆ ಬಹುವೆನೆ ಬಂಧು ಬಾಂಧವರು.**

ಈ ಕೃತಿಯು ಬಾಗಲಕೋಟೆಯ ಬಸವರಾಜ ಪ್ರಿಂಟಿಂಗ್ ವರ್ಕ್ಸ್‌ನಲ್ಲಿ ಈರಣ್ಣ ತೆಗ್ಗೆಳ್ಳಿ ದಂಪತಿಗಳ ಭಕ್ತಿ ಸೇವಾರ್ಥ ೨೦೦೮ ರಲ್ಲಿ ಮುದ್ರಣಗೊಂಡಿದೆ.

***ಸುಕ್ಷೇತ್ರ ಗೋಳಸರ ಸದ್ಗುರು ಪುಂಡಲಿಂಗೇಶ್ವರ ಸುಪ್ರಭಾತ ಹಾಗೂ ಭಕ್ತಿಗೀತೆಗಳ ಅಡಕಮುದ್ರೆ :*** ಬೆಂಗಳೂರಿನ ಅಶ್ವಿನಿ ರೆಕಾರ್ಡಿಂಗ್ ಕಂಪನಿಯಿಂದ ಜುಲೈ ೨೦೧೦ರಲ್ಲಿ ಹೊರತರಲಾದ ಅಡಕ ಮುದ್ರೆಯಲ್ಲಿ ೨೮ ಹಾಡುಗಳಿದ್ದು, ಸಾಹಿತ್ಯ ತ್ರಿಮೂರ್ತಿ ಅಪ್ಪನವರು, ಎಸ್.ಬಿ.ಕತ್ತಿ, ಗುರಪ್ಪ ಶಾಸ್ತ್ರಿ, ಜವಾಹರ ಪತಂಗೆ, ಮಲಕಯ್ಯ ಪಶುಪತಿ, ಬಸವರಾಜ ಕೋರಳಿ, ಸಿದ್ದನಗೌಡ ಅರಕೇರಿ ಅವರದಾಗಿದೆ. ನರಸಿಂಹನಾಯಕ್ ಪುತ್ತೂರು, ಬಿ.ಕೆ.ಸುಮಿತ್ರ, ಬಿ.ಆರ್.ಛಾಯಾ, ರತ್ನಮಾಲಾ ಪ್ರಕಾಶ್, ಮಂಜುಳಾ ಗುರುರಾಜ್, ಯಶವಂತ ಹಳಿಬಂಡಿ, ಕಸ್ತೂರಿ ಶಂಕರ್ ಹಾಗೂ ಬಿಜ್ಜರಗಿ ಸೋಮಲಿಂಗಪ್ಪನವರು ಈ ಅಡಕ ಮುದ್ರೆಯಲ್ಲಿ ಹಾಡಿದ್ದಾರೆ.

***ಗೋಳಸಾರ ಕ್ಷೇತ್ರದರ್ಶನ :*** ಲೇಖಕರಾದ ಜಿ.ಎನ್. ತೆಗ್ಗೆಳ್ಳಿಯವರು ಶ್ರೀ ಸಿದ್ಧರಾಯ, ಭೀರಣ್ಣ ದೇವರು ಹಾಗೂ ನಾಗಲಿಂಗ, ಆಲಿಂಗರಾಯ, ಶರಣೆ ಭಾಗಮ್ಮ, ದೊಡ್ಡಮ್ಮ ತಾಯಿ, ತ್ರಿಮೂರ್ತಿ ಅಪ್ಪನವರ ಸಮಾಧಿ ಸ್ಥಳಗಳ ಪರಿಚಯ ಮಾಡಿದ್ದಾರೆ. ಶ್ರೀ ಗುರು ಪುಂಡಲಿಂಗರ ಚರಿತಾಮೃತ ರೂಪಕವು ಸಂಭಾಷಣೆ ರೂಪದಲ್ಲಿದ್ದು ನಿರೂಪಕರಿಂದ ಕ್ಷೇತ್ರ ಮಹಿಮೆ ಹೇಳಲ್ಪಟ್ಟಿದೆ. ಭುವನೇಶ್ವರಿ ಪ್ರಕಾಶನ ಸಂಸ್ಥೆಯ ಡಾ॥ ಎಂ.ಎನ್. ವಾಲಿಯವರು ಈ ಪುಸ್ತಕದ ಪ್ರಕಾಶಕರಾಗಿದ್ದು, ಗದಗದ ಪ್ರಭು ಗ್ರಾಫಿಕ್ಸ್‌ನಲ್ಲಿ ಮುದ್ರಣಗೊಂಡಿದೆ.

**ಅಪ್ರಕಟಿತ ಸಾಹಿತ್ಯ ಕೃತಿಗಳು**

***ಶ್ರೀ ಸದ್ಗುರು ಪುಂಡಲಿಂಗೇಶ್ವರ ಪುರಾಣ :*** ಶಿವಣ್ಣ ಕತ್ತಿ ಕಡಣಿ ಅವರಿಂದ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ಹನ್ನೊಂದು ಸಂಧಿಗಳ ಈ ಕೃತಿಯು ಡಿ.ಟಿ.ಪಿ. ರೂಪದಲ್ಲಿದೆ. ಇದರಲ್ಲಿ ಪದ್ಯ ಲಾಲಿತ್ಯ ಕಡಿಮೆ ಯೆನಿಸುತ್ತದೆ. ಮೂರು ವರ್ಷಗಳ ಕಾಲ ಶ್ರಾವಣಮಾಸದಲ್ಲಿ ಸಿದ್ಧರಾಯ ದೇವರ ಗುಡಿಯಲ್ಲಿ ಈ ಕೃತಿ ವಾಚನ ನಡೆಸಲಾಗಿದೆ.

***ಶ್ರೀ ಪುಂಡಲಿಂಗೇಶ್ವರ ಮಹಾತ್ಮೆ :*** ಈ ನಾಟಕವನ್ನು ಭುಯ್ಯಾರದ ಸಿದ್ದಣ್ಣ ಮಾಸ್ತರರು ರಚಿಸಿದ್ದಾರೆ. ತ್ರಿಮೂರ್ತಿ ಅಪ್ಪನವರು ಇದನ್ನೊಮ್ಮೆ ಓದಿ ಅಗತ್ಯ ತಿದ್ದುಪಡಿ ಮಾಡಿರುವರೆಂದು ತಿಳಿದು ಬಂದಿದೆ. ಭುಯ್ಯಾರ್ ಗ್ರಾಮದಲ್ಲಿ ಇದನ್ನು ಒಮ್ಮೆ ಪ್ರಯೋಗ ಮಾಡಲಾಗಿದೆ.

(ಭಾವಚಿತ್ರಗಳನ್ನು ನೀಡಿ ಆಶೀರ್ವದಿಸಿದ ಪೂಜ್ಯ ಅಭಿನವ ಪುಂಡಲಿಂಗರಿಗೆ ನನ್ನ ಅನಂತ ನಮನಗಳು. ಮಾರ್ಗದರ್ಶನ ಮಾಡಿದ ಪೂಜ್ಯ ಗುರುಗಳಾದ ಡಾ॥ ಪಿ.ವಿ. ಕೃಷ್ಣಮೂರ್ತಿ, ಡಾ॥ ಕೆ.ಆರ್. ಗಣೇಶ್ ಹಾಗೂ ಡಾ॥ ಎಂ.ಜಿ.ನಾಗರಾಜ್‌ರವರಿಗೆ ವಂದನೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ದೊಡ್ಡಹಳ್ಳ ಎಂದು ಸ್ಥಳೀಯವಾಗಿ ಕರೆಯಲ್ಪಡುವ ಈ ತೊರೆಯನ್ನು ಗೊಳಸರ ಗ್ರಾಮದ ಮಲ್ಲನಗೌಡ ಪಾಟೀಲರು 'ಒಯಿವೋನದಿ' ಎಂಬುದಾಗಿ ಕಂದಾಯ ಇಲಾಖೆಯ ದಾಖಲೆಗಳಲ್ಲಿ ನಮೂದಾಗಿದೆ ಎಂಬ ಮಾಹಿತಿ ನೀಡಿದ್ದಾರೆ.

೨. ಡಾ. ಅ. ಸುಂದರ: 'ನಾಯಕರತ್ನ' ಶ್ರೀ ಬಿ.ಕೆ.ಗುಡದಿನ್ನಿ ಅವರ ಅಭಿನಂದನ ಗ್ರಂಥ, ೧೯೯೫, ವಿಜಾಪುರ ಜಿಲ್ಲೆಯ ಪ್ರಾಗಿತಿಹಾಸ ಲೇಖನ.

೩. ಜಿ.ಎನ್. ತೆಗ್ಗೆಳ್ಳಿ: **ಗೊಳಸಾರ ಕ್ಷೇತ್ರದರ್ಶನ,** ಶ್ರೀ ಗುರು ಪುಂಡಲಿಂಗರ ಚರಿತಾಮೃತ ರೂಪಕ ಪುಟ ೧೭.

೪. ಪರುವಿನ ಕಟ್ಟೆ: ಶ್ರಾವಣ ಮಾಸದಲ್ಲಿ ಗ್ರಾಮಸ್ಥರು ಇಲ್ಲಿಗೆ ಹೋಗಿ ಕುಳಿತು ಆಧ್ಯಾತ್ಮಿಕ ಚಿಂತನೆ ನಡೆಸುತ್ತಿದ್ದ ಸ್ಥಳ. ಚರ್ಚೆ–ಮುಖಾಮುಖಿ ನಂತರ ಊಟ ಮಾಡಿ ಬರುವಷ್ಟರಲ್ಲಿ ಮಳೆ ಆರಂಭವಾಗುತ್ತದೆಂಬ ನಂಬಿಕೆ ಇತ್ತೆಂದು ಅಭಿನವ ಪುಂಡಲಿಂಗರ ಅನಿಸಿಕೆ.

೫. ಶ್ರೀ ಮ.ನಿ.ಪ್ರ.ಸ್ವ.ಶಿವಮೂರ್ತಿ ಸ್ವಾಮಿಗಳು, ವಿರಕ್ತಮಠ ರೋಡಗಿ: **ಶ್ರೀ ಸದ್ಗುರು ಪುಂಡಲಿಂಗ ಮಹಾರಾಜರ ಸಂಕ್ಷಿಪ್ತ ಜೀವನ ಚರಿತ್ರೆ,** ೧೯೮೬, ೧೮ನೇ ಅಧ್ಯಾಯ.

೬ ಸಮ್ಮೇಳನದಲ್ಲಿ ಪ್ರಬಂಧ ಮಂಡಿಸುವಾಗ ಡಾ॥ ಸೂರ್ಯನಾಥ ಕಾಮತ್‌ರು ಶರಣರ ಈ ಸೇವೆಯನ್ನು ಮೆಚ್ಚಿಕೊಂಡಿರುವ ಅಂಶ ಇದಾಗಿದೆ.

೭. ಶಿವರಾಯ ನಾಯಕೋಡಿ ಗೋಳಸರ ಅವರ ನೆನಪಿನ ಮಾತುಗಳು.

೮. ಶಕೀನಾ ಪಾಟೀಲ, ಪ್ರಾಂಶುಪಾಲರು ಶ್ರೀ ಸದ್ಗುರು ಪುಂಡಲಿಂಗೇಶ್ವರ ಸರ್ಕಾರಿ ಪದವಿಪೂರ್ವ ಕಾಲೇಜು ಗೋಳಸಾರ ಇವರು ನೀಡಿರುವ ದಾಖಲೆ.

೯. ಅಭಿನವ ಪುಂಡಲಿಂಗರಿಂದ ಮಾಹಿತಿ.

ವೇದಾವತಿ ಎಸ್. ಬಾಲು*

# ಮೈಸೂರು ಸಂಸ್ಥಾನದ ಗಡಿಠಾಣ್ಯ : ನಿಜಗಲ್ಲು

ರಾಷ್ಟ್ರೀಯ ಹೆದ್ದಾರಿ ೪ರಲ್ಲಿ ಬೆಂಗಳೂರಿನಿಂದ ಸುಮಾರು ೫೪ ಕಿ.ಮೀ ದೂರದಲ್ಲಿರುವ ನಿಜಗಲ್ಲು ಐತಿಹಾಸಿಕ ಮಹತ್ವದ ಸ್ಥಳ. ಹೊಯ್ಸಳರ ಕಾಲದಲ್ಲಿ 'ನಿಜಗಲಿಪುರ' ಎಂದು, ವಿಜಯನಗರದ ಕಾಲದಲ್ಲಿ 'ಶೂರಗಿರಿ', 'ಶರಗಿರಿ', 'ಸುರಗಿರಿ' ಎಂದು, ಮೈಸೂರು ಅರಸರ ಕಾಲದಲ್ಲಿ 'ನಿಜಗಲ್ಲು' ಎಂಬುದಾಗಿ ಪ್ರತಿನಾಮಾಂಕಿತವನ್ನು ಹೊಂದಿತ್ತು ಎಂದು ಶಾಸನಗಳಿಂದ ತಿಳಿಯುತ್ತದೆ[೧]. ಕ್ರಿ.ಶ. ೧೨೮೮ರ ಶಾಸನವು ಡಣಾಯಕ ಕಂಬಯ್ಯನು ನಿಜಗಲ್ಲುದುರ್ಗದ (೩೫೬೨ ಅಡಿ ಎತ್ತರ) ಮೇಲಿರುವ ಮಲ್ಲಿಕಾರ್ಜುನ ದೇವಾಲಯಕ್ಕೆ ಕೆರೆಯನ್ನು ಕಟ್ಟಿಸಿ, ಬರುವ ಕಂದಾಯದಿಂದ ಪೂಜೆ ನಡೆಯಲು ವ್ಯವಸ್ಥೆ ಮಾಡಿರುವುದಾಗಿ ಶಾಸನವು ತಿಳಿಸುತ್ತದೆ[೨]. ಮರಾಠರು ಅನೇಕ ಬಾರಿ ಈ ಸ್ಥಳವನ್ನು ಆಕ್ರಮಿಸಿಕೊಂಡಿದ್ದು, ಯುದ್ಧದ ನೆಲೆಯನ್ನಾಗಿ ಮಾಡಿಕೊಂಡಿದ್ದಾಗಿ ತಿಳಿಯುತ್ತದೆ. 'ಕಂಠೀರವ ನರಸರಾಜ ವಿಜಯ' ಕೃತಿಯಲ್ಲಿ ಸುರಗಿರಿಯ ಪ್ರಸ್ತಾಪವಿದೆ[೩]. ಮೈಸೂರಿನ ಚಿಕ್ಕದೇವರಾಜ ಒಡೆಯರ್ ಬಿಳುಗಲಿಯ ಕೆಂಪರಾಜಯ್ಯನವರ ಮಗ ದಾಸರಾಜಯ್ಯನನ್ನು ನಿಜಗಲ್ಲು ಬೆಟ್ಟದ ಮೇಲಿನ ಕೋಟೆಯ ನಿರ್ಮಾಣವನ್ನು ನೋಡಿಕೊಳ್ಳಲು ನೇಮಕ ಮಾಡಿದ್ದಂತೆ ತೋರುತ್ತದೆ. ದಾಸರಾಜಯ್ಯನ ಕಾಲದಲ್ಲಿ ನಿಜಗಲ್ಲು ಬೆಟ್ಟದ ಮೇಲೆ ಕಲ್ಲಿನ ಕೋಟೆಯ ನಿರ್ಮಾಣವಾಯಿತು. ಮೊದಲಿಗಿದ್ದ ಮಣ್ಣಿನ ಕೋಟೆಯ ಬದಲಿಗೆ ಸುಮಾರು ೭ ವರ್ಷಗಳ ಅವಧಿಯಲ್ಲಿ ಕಲ್ಲಿನಕೋಟೆಯನ್ನು ಕಟ್ಟಿದರು. ಕ್ರಿ.ಶ. ೧೬೯೮ರಿಂದ ೧೭೦೫ರವರೆಗೆ ಕೋಟೆಯ ನಿರ್ಮಾಣ ಕಾರ್ಯ ನಡೆದಿರುವುದನ್ನು ನಿಜಗಲ್ಲಿನ ಬೆಟ್ಟದ ಮೇಲಿನ ಶಾಸನವೊಂದು ತಿಳಿಸುತ್ತದೆ[೪]. ಇದೇ ಸಂದರ್ಭದಲ್ಲಿ ದುರ್ಗದ ಮೇಲೆ ಲಕ್ಷ್ಮೀನರಸಿಂಹ ದೇವಾಲಯ ಹಾಗೂ ವಿಘ್ನೇಶ್ವರ ದೇವಾಲಯ ನಿರ್ಮಾಣವಾದವು[೫]. ಕಾಲಾನುಕ್ರಮಣಿಕೆಯಲ್ಲಿ ಹೈದರಾಲಿ, ಪೇಶ್ವೆ ಮಾಧವರಾಯ, ಮುಮ್ಮಡಿ ಕೃಷ್ಣರಾಜ ಒಡೆಯರ್ ನಿಜಗಲ್ಲಿನ ಆಡಳಿತವನ್ನು ನಡೆಸಿದರು. ಆನಂತರ ಬ್ರಿಟಿಷರು ಮೈಸೂರು ಮಹಾರಾಜರೊಡನೆ ಮಾಡಿಕೊಂಡ ಒಪ್ಪಂದದಂತೆ ಅನುಕೂಲಕರವಲ್ಲದ ಕೋಟೆಗಳನ್ನು ನಾಶ ಮಾಡುವಾಗ ನಿಜಗಲ್ಲಿನ ಕೋಟೆಯೂ ನಾಶವಾಯಿತು. ಕ್ರಿ.ಶ.೧೮೩೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಅಧಿಕಾರ ವಹಿಸಿಕೊಂಡ ಬ್ರಿಟಿಷರ ಕಾಲದಲ್ಲಿ ನಿಜಗಲ್ಲು ಒಂದು ತಾಲ್ಲೂಕಾಗಿತ್ತು. ಸುಮಾರು ೧೮೯೯ರವರೆಗೆ ನಿಜಗಲ್ಲು ತಾಲ್ಲೂಕು ಕೇಂದ್ರವಾಗಿತ್ತು ಎನ್ನುವುದಕ್ಕೆ ಶಿವಗಂಗಾ ಐತಿಹಾಸಿಕ ದಾಖಲೆಗಳು ಕೃತಿಯಲ್ಲಿ ನಮೂದಾಗಿರುವ ಪತ್ರಗಳು ಆಧಾರಗಳಾಗಿವೆ[೬]. ಆನಂತರ ಕೆಲವು ವರ್ಷಗಳ ಕಾಲ ನಿಜಗಲ್ಲು ಹೋಬಳಿ ಕೇಂದ್ರವಾಗಿ, ಸೋಂಪುರ ಅಥವಾ ದಾಬಸ್‌ಪೇಟೆ ಹೋಬಳಿಯಾದ ಮೇಲೆ ನಿಜಗಲ್ಲು ಅದಕ್ಕೆ ಸೇರಿತು. ಕ್ರಿ.ಶ. ೧೯೫೯ರವರೆಗೆ ನಿಜಗಲ್ಲು ಗ್ರಾಮ ಪಂಚಾಯಿತಿ ಕೇಂದ್ರವಾಗಿತ್ತು[೭].

ಇವಿಷ್ಟು ನಿಜಗಲ್ಲಿನ ಇತಿಹಾಸ. ಕ್ರಿ.ಶ. ೧೨೮೮ರಿಂದ ಇತ್ತೀಚಿನವರೆಗೂ ನಿಜಗಲ್ಲು ಏಳುಬೀಳುಗಳನ್ನು ಕಂಡಿರುವ ಸ್ಥಳವಾಗಿದೆ. ನಿಜಗಲ್ಲು ಮೈಸೂರು ಸಂಸ್ಥಾನದ ಗಡಿಠಾಣ್ಯ ವಾಗಿತ್ತು ಎಂದು ತಿಳಿಯಲು ಹಲವು ಕಾರಣಗಳನ್ನು ಗುರುತಿಸ ಬೇಕಾಗುತ್ತದೆ.

## ನಿಜಗಲ್ಲು ಕೋಟೆಯ ಸ್ವರೂಪ

ಮಾರ್ಕ್ ವಿಲ್ಕ್ಸ್ ಎಂಬ ಆಂಗ್ಲ ಇತಿಹಾಸಕಾರ ಹೇಳುವಂತೆ[೮] ನಿಜಗಲ್ಲು ಕೋಟೆಯನ್ನು ಬೆಟ್ಟದ ತುತ್ತತುದಿಯಲ್ಲಿ ನಿರ್ಮಿಸಲಾಗಿತ್ತು. ನಿಜಗಲ್ಲಿನ ಕಲ್ಲಿನ ಕೋಟೆಯು ಅರ್ಧ ಗೋಳಾಕೃತಿಯಲ್ಲಿ ಬೃಹತ್ತಾಗಿ ನಿರ್ಮಾಣವಾಗಿದ್ದು ಮಾತ್ರವಲ್ಲದೆ ಇಳಿಜಾರಿನ ಹೆಬ್ಬಂಡೆಗಳಿಂದ ನಾಲ್ಕು ದಿಕ್ಕುಗಳಲ್ಲಿ ಆವೃತವಾಗಿತ್ತು. ಈ ರೀತಿಯ ಕೋಟೆಯ ನಿರ್ಮಾಣ ದಿಂದಾಗಿ ಶತ್ರುಗಳ ಆಕ್ರಮಣವು ಕಷ್ಟವಾಗಿತ್ತು. ಕೋಟೆಯ ಎತ್ತರವು ಸಿಡಿಮದ್ದಿಗೆ ಎಟುಕುವಂತಿರಲಿಲ್ಲ. ಕುದಿಯುವ ಎಣ್ಣೆ ಹಾಗೂ ನೀರು ಕೋಟೆಯ ಹೊರಭಾಗದ ರಕ್ಷಣೆಗೆ ಸದಾ ಸಿದ್ಧವಾಗಿರುತ್ತಿತ್ತು. ಅಲ್ಲದೆ ಕೋಟೆಯ ಮೇಲ್ಭಾಗದಲ್ಲಿ ಪ್ರತ್ಯೇಕವಾಗಿ ನಿರ್ಮಿಸಲಾಗಿದ್ದ ಗುಂಡಿಗಳಿಂದ ಹೊಲಸನ್ನು ಹೊರ ಹಾಕಲಾಗುತ್ತಿತ್ತು. ಮಣ್ಣು, ಮರಳು ಹಾಗೂ ಜಲ್ಲಿಪುಡಿಯಿಂದ ಕಟ್ಟಲಾಗಿದ್ದ ಗೋಳಾಕಾರದ ಬುರುಜು

*




ಚಿತ್ರದಲ್ಲಿ ನಿಜಗಲ್ಲು ಬೆಟ್ಟ, ಕೋಟೆಯ ಕೆಲವು ಭಾಗಗಳು ಹಾಗೂ ಬೆಟ್ಟದ ತಪ್ಪಲಿನ ಮುಳ್ಳುಗಿಡಗಳನ್ನು ಗಮನಿಸಬಹುದು



ಬೆಟ್ಟದ ಮೇಲಿರುವ ಭಗ್ನ ದೇವಾಲಯ, ಅದರ ಹಿಂಭಾಗದಲ್ಲಿ ಎತ್ತರದ ಬಂಡೆಗಳನ್ನು ಗಮನಿಸಬಹುದು

ನಿಜಗಲ್ಲು ದುರ್ಗದ ಮತ್ತೊಂದು ದಿಕ್ಕಿನ ನೋಟ, ಕೋಟೆಯ ಭಾಗಗಳನ್ನು ಕಾಣಬಹುದು





ರಾ.ಹೆ.4ರಲ್ಲಿರುವ ಕಾಮತ್ ಉಪಾಹಾರದಿಂದ ನಿಜಗಲ್ಲು ಬೆಟ್ಟ, ಇಳಿಜಾರು ಬಂಡೆಗಳು ಹಾಗೂ ಕೋಟೆಯ ಭಾಗಗಳನ್ನು ಕಾಣಬಹುದು

ಉಪಗ್ರಹದಿಂದ ಕಾಣುವಂತೆ ನಿಜಗಲ್ಲು ಪ್ರದೇಶದ ಭೌಗೋಳಿಕ ಪರಿಸರ



ಉಪಗ್ರಹದಿಂದ ಕಾಣಿಸುವಂತೆ ನಿಜಗಲ್ಲು ಸುತ್ತಮುತ್ತಲ ರಸ್ತೆಗಳು



ನಿಜಗಲ್ಲನ್ನು ಕೇಂದ್ರವಾಗಿಸಿಕೊಂಡು ಇತರೆ ಪ್ರದೇಶಗಳಿಗೆ ರಸ್ತೆ ಸಂಪರ್ಕ – ಉಪಗ್ರಹದಿಂದ ಕಾಣಿಸುವಂತೆ



ಕಾವಲುಗೋಪುರದಂತಿತ್ತು. ದಿನನಿತ್ಯವೂ ಈ ಗೋಪುರದಲ್ಲಿ ಸೈನಿಕರು ಗಸ್ತು ಮಾಡುತ್ತಿದ್ದರು. ಬೃಹತ್ ಹಾಗೂ ವಿಸ್ತಾರವಾದ ಗೋಳಾಕಾರದ ಬೆಟ್ಟದ ತಪ್ಪಲು ಪ್ರದೇಶದಲ್ಲಿ ಮುಳ್ಳುಗಿಡಗಳನ್ನು ಬೆಳೆಸಲಾಗಿತ್ತು. ಇಷ್ಟೇ ಅಲ್ಲದೆ, ಹೆಚ್ಚಿನ ಸುರಕ್ಷತೆಯ ದೃಷ್ಟಿಯಿಂದ ಕೋಟೆಯ ಅಗಳುಗಳಲ್ಲಿ ನೀರಿನ ಆಶ್ರಯದಲ್ಲಿ ಮೊಸಳೆಗಳನ್ನು ಸಾಕಲಾಗಿತ್ತು. ಎಲ್ಲಕ್ಕೂ ಮುಖ್ಯವಾಗಿ ಈ ಪ್ರದೇಶದ ಎಲ್ಲ ಬೆಟ್ಟಗಳಂತೆ ನಿಜಗಲ್ಲಿನಲ್ಲೂ ನೀರಿಗೆ ಕೊರತೆಯಿರಲಿಲ್ಲ. ರಸಸಿದ್ಧರ ದೊಣೆ, ಕಂಚಿನ ದೊಣೆ

ಹಾಗೂ ಅಕ್ಕತಂಗಿಯರ ದೋಣೆಗಳು ಸಾಕಷ್ಟು ನೀರನ್ನು ಪೂರೈಸುತ್ತಿದ್ದವು. ಹೀಗೆ ನಿರ್ಮಾಣವಾಗಿದ್ದ ಕೋಟೆಯ ನಕಾಶೆ ಗೌಪ್ಯವಾಗಿಯೇ ಇದ್ದದ್ದು ಮುಖ್ಯ ಸಂಗತಿ.

ಪೇಶ್ವೆ ಮಾಧವರಾಯನು ಹೈದರಾಲಿಯನ್ನು ಸೋಲಿಸಿ, ನಿಜಗಲ್ಲು ದುರ್ಗವನ್ನು ವಶಪಡಿಸಿಕೊಳ್ಳಲು ಚಿತ್ರದುರ್ಗದ ಮದಕರಿನಾಯಕನ ನೆರವು ಕೇಳಿದಾಗ ಮದಕರಿನಾಯಕ ಮೊದಲು ಮಾಡಿದ್ದು ಕೋಟೆಯ ಪರಿವೀಕ್ಷಣೆ. ಪಟ್ಟಣದಿಂದ ಒಳಗೆ ಹೋಗಿ ಬರಲು ಎರಡು ಪ್ರವೇಶದ್ವಾರಗಳಿದ್ದು, ಹಿಂಭಾಗದ ಉತ್ತರ ದಿಕ್ಕು ಹಾಗೂ ಪೂರ್ವ ದಿಕ್ಕುಗಳಲ್ಲಿ ಸೈನಿಕರಿಂದ ಸುಭದ್ರವಾಗಿರುವ ಪ್ರವೇಶದ್ವಾರಗಳಿವೆ ಎಂಬ ಮಹತ್ವದ ವಿಷಯ ಮದಕರಿನಾಯಕನಿಗೆ ತಿಳಿಯುತ್ತದೆ. ಕಡಿಮೆ ಇಳಿಜಾರಿನ ಪ್ರದೇಶವನ್ನು ಗುರುತಿಸುವುದು, ರಾತ್ರಿಯಲ್ಲಿ ಕೋಟೆಯ ಎತ್ತರ, ಸ್ವರೂಪವನ್ನು ತಿಳಿಯುವುದರ ಜೊತೆಗೆ ಹಾಗೂ ಕೋಟೆಯನ್ನು ವಶಪಡಿಸಿಕೊಳ್ಳಲು ಬೇಡರನ್ನು ಉಪಯೋಗಿಸಿಕೊಳ್ಳುವುದು ಮದಕರಿನಾಯಕನ ತೀರ್ಮಾನವಾಗಿತ್ತು. ಮೂಲತಃ ಬೇಡರು ಈ ರೀತಿಯ ಯುದ್ಧದ ಕಠಿಣ ಪರಿಸ್ಥಿತಿಗಳನ್ನು ಸಮರ್ಪಕವಾಗಿ ಎದುರಿಸ ಬಲ್ಲವರಾಗಿದ್ದರು. ರಾತ್ರಿಯ ಸಮಯದಲ್ಲಿ ಬೇಡರು ಬೆಟ್ಟದ ಸಮೀಪದಲ್ಲೇ ಒಣಗಿದ ಮರಗಳಿಗೆ ಬೆಂಕಿ ಹಾಕಿದರು. ಅದೇ ಬೆಂಕಿಯಿಂದ ಮಾಡಿದ ಮಾಂಸಾಹಾರ ಸೇವಿಸಿದರು. ಮದ್ಯವನ್ನೂ ಕುಡಿದರು. ಭೋಜನದ ನಂತರ ದೇಹಕ್ಕೆ ರಗ್ಗುಗಳನ್ನು ಹೊದ್ದರು, ಭುಜಗಳಿಗೆ ಅಗ್ನಿಶಾಮಕದಂತಿರುವ ಹಗ್ಗಗಳನ್ನು ಕಟ್ಟಿಕೊಂಡರು ಹಾಗೂ ಸೊಂಟಕ್ಕೆ ಉಡಗಳನ್ನು ನೇತುಹಾಕಿಕೊಂಡರು. ಕೋಟೆಯ ಅಗಳುಗಳನ್ನು ಸಮೀಪಿಸುತ್ತಿದ್ದಂತೆ ಮೊಸಳೆಗಳನ್ನು ಬೇರೆಡೆಗೆ ಸೆಳೆಯಲು ತಮ್ಮೊಡನಿದ್ದ ಕೆಲವು ಕುದುರೆಗಳನ್ನು ಕೊಂದು ಮಾಂಸವನ್ನು ಮೊಸಳೆಗಳತ್ತ ಹಾಕಿದರು. ನೀರಿಗೆ ಜಿಗಿದು, ನೀರಿನಲ್ಲಿ ವಿಷ ಬೆರೆಸಿರಬಹುದೆಂಬ ಅತಂಕದಿಂದ ಉಸಿರಾಡದೆ ಈಜಿ ಬೆಟ್ಟವನ್ನು ಹತ್ತಿದರು. ಇಲ್ಲಿ ಉಡಗಳಿಗೆ ಹಗ್ಗವನ್ನು ಕಟ್ಟಿ ಕಲ್ಲಿನ ಕೋಟೆಯತ್ತ ಎಸೆದು, ಉಡಗಳ ಹಿಡಿತ ಭದ್ರಗೊಂಡ ನಂತರ ಸದ್ದು ಮಾಡದೆ ಕೋಟೆಯನ್ನು ಹತ್ತಿದರು. ಕೆಲವೇ ತಾಸುಗಳಲ್ಲಿ ಬೇಡ ಸೈನಿಕರು ಕೋಟೆಯ ಬಾಗಿಲಿನ ಬಳಿಯಿದ್ದರು. ಐದು ನೂರಕ್ಕೂ ಹೆಚ್ಚಿನ ಸೈನಿಕರು ನಿಜಗಲ್ಲು ಕೋಟೆಯನ್ನು ಸುತ್ತುವರಿದಿದ್ದರು. ಕೋಟೆಯ ಗಸ್ತು ಕಾಯುತ್ತಿದ್ದ ಹೈದರಾಲಿಯ ಸೈನಿಕರು ಬೇಡರ ಕೂಗನ್ನು ಕೇಳಿ ಬಾಗಿಲು ತೆರೆಯುತ್ತಿದ್ದಂತೆ ಸಾವು ತೊಡರಿತ್ತು. ನಾಯಕನ ಬೇಡ ಸೈನಿಕರು ಸಿಕ್ಕ ಶತ್ರುಗಳನ್ನೆಲ್ಲಾ ಭೀಕರವಾಗಿ ಕೊಂದರು. ನಿಜಗಲ್ಲು ಕೋಟೆ ಅಂದು ರಕ್ತ ಕದನದ ಸಾಕ್ಷಿಯಾಗಿತ್ತು. ಯುದ್ಧದಲ್ಲಿ ಹೈದರಾಲಿ ನೇಮಿಸಿದ್ದ ಕಿಲ್ಲೇದಾರ ಸರ್ದಾರ್‌ಖಾನ್ ಸೆರೆಯಾದ. ನಿಜಗಲ್ಲು ಯುದ್ಧ ಹಾಗೂ ಇದಾದ ಕೆಲವೇ ತಿಂಗಳುಗಳಲ್ಲಿ ನಡೆದ ಚಿನಕುರಳಿ ಯುದ್ಧದ ವಿವರಣೆಯನ್ನು ಪಿಕ್ಕೊಟೋ ಎಂಬ ಪ್ರವಾಸಿಯು ಬರೆದಿದ್ದಾನ್.

ನಿಜಗಲ್ಲು ದುರ್ಗವನ್ನು ಏರಿ, ಶತ್ರು ನಾಶ ಮಾಡುವುದು ಕಷ್ಟದ ಕೆಲಸವಾಗಿತ್ತು. ಭಯಂಕರವಾದ ಯುದ್ಧ ವ್ಯವಸ್ಥೆಗೆ ಹೆಸರಾಗಿದ್ದ ಮರಾಠರೂ ದುರ್ಗವನ್ನು ಏರುವುದು ಸಾಧ್ಯವಾಗಲಿಲ್ಲ. ಮದಕರಿ ನಾಯಕನ ವಿಶೇಷ ಸೈನಿಕರು ತಮ್ಮ ಒರಟುತನದ ಕ್ರೂರ ವ್ಯವಸ್ಥೆಯನ್ನು ಬಲ್ಲವರಾಗಿ ದ್ದರಿಂದಲೇ ಹೈದರಾಲಿಯ ಪತನವಾಯಿತು. ಇಂತಹ ಕಠಿಣ ಪರಿಸರದ ನಿಜಗಲ್ಲು ಕೋಟೆ ಅಭೇದ್ಯವಾಗಿತ್ತು.

### ನಿಜಗಲ್ಲಿನ ಪರಿಸರ ಹಾಗೂ ರಸ್ತೆ ಸಂಪರ್ಕ

ಹೈದರಾಲಿಯ ಸೈನ್ಯ ಈ ಸಂದರ್ಭದ ನಂತರ ಶ್ರೀರಂಗಪಟ್ಟಣದತ್ತ ಹೋಗಲು ಸಾಮಾನ್ಯ ಮಾರ್ಗವನ್ನು ಅನುಸರಿಸದೆ ನಿಜಗಲ್ಲನ್ನು ದಾಟಿ ಚಿನಕುರಳಿಯ ಮಾರ್ಗವಾಗಿ ತೆರಳಿತು. ಹೈದರಾಲಿ ಶ್ರೀರಂಗಪಟ್ಟಣದತ್ತ ತೆರಳಲು ಚಿನಕುರಳಿಯ ಮಾರ್ಗವನ್ನು ಅನುಸರಿಸಿದನು. ಆದರೆ ಮರಾಠರು ಹೈದರಾಲಿಯ ಸೈನ್ಯವನ್ನು ತಿಳಿಯದಂತೆ ಹಿಂಬಾಲಿಸಿ ತ್ರ್ಯಂಬಕರಾಯನ ನೇತೃತ್ವದಲ್ಲಿ ಚಿನಕುರಳಿಯಲ್ಲಿ ಸೋಲಿಸಿದರು.

ಬೆಂಗಳೂರಿನಿಂದ ತುಮಕೂರು, ಮಧುಗಿರಿ, ಶಿರಾ ಪ್ರಾಂತ್ಯದ ಕಡೆಗೆ ಹೋಗುವ ಯಾರೇ ಆಗಲಿ ನಿಜಗಲ್ಲನ್ನು ದಾಟಿಯೇ ಹೋಗಬೇಕಾಗಿದ್ದ ಕಾರಣದಿಂದ ನಿಜಗಲ್ಲಿಗೆ ಮಹತ್ವ ಬಂದಿತ್ತು. ಅಲ್ಲದೆ ತುಮಕೂರು, ಮಧುಗಿರಿ, ಶಿರಾ ಮೊದಲಾದ ಸ್ಥಳಗಳಿಂದ ಮೈಸೂರು ಕಡೆಗೆ ಹೋಗುವವರು ನಿಜಗಲ್ಲನ್ನು ದಾಟಿ ಮಾಗಡಿ, ರಾಮನಗರ ಮಾರ್ಗವಾಗಿ ಹೋಗಬಹುದಾಗಿತ್ತು. ಇಲ್ಲಿನ ಬೆಟ್ಟವು ಸ್ಥಿತಗೊಂಡಿದ್ದ ಪ್ರದೇಶದ ಭೌಗೋಳಿಕ ಪರಿಸರ ನಿಜಗಲ್ಲು ಅನೇಕ ವರ್ಷಗಳ ವರೆಗೆ ತನ್ನ ಹಿರಿಮೆಯನ್ನು ಕಾಪಾಡಿಕೊಳ್ಳಲು ಸಹಕಾರಿ ಯಾಗಿತ್ತು.

ಈ ಪ್ರದೇಶದ ಶಿವಗಂಗೆ, ತ್ಯಾಮಗೊಂಡ್ಲು, ದಾಬಸ್‌ಪೇಟೆ, ನೆಲಮಂಗಲ, ತುಮಕೂರು, ಸಿರಾ, ತ್ಯಾಮಗೊಂಡ್ಲು, ಸೊಂಡೆಕೊಪ್ಪ, ಕಂಬಾಳು ಮೊದಲಾದ ಸ್ಥಳಗಳೊಂದಿಗೆ ನೇರವಾದ ಸಂಬಂಧ ನಿಜಗಲ್ಲಿಗಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ನಿಜಗಲ್ಲು ಅಠಾರ ಕಛೇರಿಯಂತೆ ಕಾರ್ಯ ನಿರ್ವಹಿಸುತ್ತಿತ್ತು. ನಿಜಗಲ್ಲಿನ ಅಮೀಲರ ಸಮ್ಮುಖದಲ್ಲಿ ಸುತ್ತಮುತ್ತಲ ಗ್ರಾಮಸ್ಥರ ವ್ಯಾಜ್ಯಗಳೆಲ್ಲ ಬಗೆಹರಿಯುತ್ತಿದ್ದವು.

ಬ್ರಿಟಿಷರು ನಿಜಗಲ್ಲಿನ ಕೋಟೆಯನ್ನು ನಾಶ ಮಾಡಿದ ನಂತರ ನಿಜಗಲ್ಲಿಗೆ ಮೊದಲಿಗಿದ್ದ ಪ್ರಾಮುಖ್ಯತೆ ಕಡಿಮೆಯಾಯಿತು. ಹಳೇ ನಿಜಗಲ್ ಎಂಬ ಗ್ರಾಮವಾಗಿ ಉಳಿಯಿತು. ಕ್ರಮೇಣ ನಿಜಗಲ್ಲು ತಾಲ್ಲೂಕಾಗಿ, ಹೋಬಳಿ ಯಾಗಿ, ನಂತರ ಗ್ರಾಮ ಪಂಚಾಯಿತಿಯಾಗಿ ಪರಿವರ್ತನೆ ಗೊಂಡು ಇಂದು ಕೇವಲ ಗ್ರಾಮವಾಗಿ ಉಳಿದಿದೆ.

ಇಂದಿಗೂ ಕೂಡ ನಿಜಗಲ್ಲು ಬೆಂಗಳೂರು ಗ್ರಾಮಾಂತರ ಹಾಗೂ ತುಮಕೂರು ಜಿಲ್ಲೆಗಳ ಗಡಿಯಾಗಿದೆ. ನಿಜಗಲ್ಲಿನ ಕೋಟೆ ಹಾಗೂ ರಸ್ತೆ ಸಂಪರ್ಕದಿಂದಾಗಿ ನಿಜಗಲ್ಲಿಗೆ ಮೈಸೂರು ಸಂಸ್ಥಾನದ ಗಡಿಠಾಣ್ಯದ ಗೌರವ ದೊರೆತಿದ್ದುದು ಸತ್ಯವೆಂದು ಹೇಳಬಹುದು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎ.ಕ. ಸಂ. ೯ ನೆಲ ೬೩, ೬೫.

೨. ಎ.ಕ. ಸಂ. ೯ ನೆಲ ೬೩.

೩. **ಗೋವಿಂದವೈದ್ಯ ಕೃತಕಂಠೀರವನರಸರಾಜ ವಿಜಯ,** (ಸಂ.) ಡಾ॥ ಆರ್.ಶಾಮಶಾಸ್ತ್ರಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೧.

೪. ಎ.ಕ. ಸಂ. ೯ ನೆಲ ೬೫.

೫. ಅದೇ.

೬ **ಶ್ರೀ ಶಿವಗಂಗಾ ಐತಿಹಾಸಿಕ ದಾಖಲೆಗಳು,** (೧೮೧೬–೧೮೯೩), ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ವಿಧಾನಸೌಧ, ಬೆಂಗಳೂರು, ೨೦೦೦.

೭. ಲೇ: ಬಾಲಸುಬ್ರಹ್ಮಣ್ಯ ಜಿ, **ನೆಲಮಂಗಲ ತಾಲ್ಲೂಕು ದರ್ಶನ,** ಪ್ರಕಾಶಕರು: ಶ್ರೀ ಬಿ.ಎ. ವರದರಾಜ ಶ್ರೇಷ್ಠಿ, ನೆಲಮಂಗಲ, ೨೦೧೦.

೮. ಅದೇ, ೨೬೫ ಮತ್ತು ಶೃ.ದಾ. ೨೫೯.

೯. ಹಿಸ್ಟರಿ ಆಫ್ ಹೈದರ್ ಅಲಿ ಖಾನ್–೬, ಪಿಕ್ಲೊಟೊ, ಪುಟ. ೧೦೧.

ಡಾ. ಟಿ.ವಿ. ನಾಗರಾಜು*

# ಮೈಸೂರು ಒಡೆಯರ ಕಾಲದ ನೀರಾವರಿ

ಭೂಮಿಯ ಮೇಲೆ ಮಳೆಯ ರೂಪದಲ್ಲಿ ಬಿದ್ದಂತಹ ನೀರನ್ನು ಜಾಗರೂಕತೆಯಿಂದ ಸಂಗ್ರಹಿಸುವ ಹಾಗೂ ವ್ಯವಸ್ಥಿತವಾಗಿ ಬಳಸುವ ಕಾರ್ಯ ಮಹತ್ವ ಪಡೆದಿದೆ. ಈ ರೀತಿ ಕೃಷಿಗಾಗಿ ನೀರನ್ನು ಬಳಸುವ ಕಾರ್ಯವಿಧಾನವನ್ನು 'ನೀರಾವರಿ' ಎಂದು ಅರ್ಥೈಸಲಾಗಿದೆ. ನೀರಾವರಿ ವ್ಯವಸ್ಥೆ ಪೂರ್ವ ಇತಿಹಾಸ ಕಾಲದಿಂದಲೂ ಬೆಳೆದು ಬಂದಿದೆ. ಕೆರೆ, ಕಾಲುವೆಗಳನ್ನು ನಿರ್ಮಿಸುವುದು, ಒಡ್ಡುಗಳನ್ನು ಹಾಕುವುದು, ಬಾವಿಗಳನ್ನು ತೋಡುವುದು, ಒಂದು ಧಾರ್ಮಿಕ ಕಾರ್ಯ, ಇಂತಹ ಕಾರ್ಯಗಳನ್ನು ಕೈಗೊಂಡ ವ್ಯಕ್ತಿ ಹಾಗು ಮುಖ್ಯಸ್ಥರು ಪುಣ್ಯಕ್ಕೆ ಅರ್ಹರಾಗುತ್ತಾರೆ ಎಂಬ ನಂಬಿಕೆ ಇದ್ದಿತು. ಹೀಗಾಗಿ ಧಾರ್ಮಿಕ ಮಹೋನ್ನತಿಯ ನಂಬಿಕೆಯ ಹಿನ್ನೆಲೆಯಲ್ಲಿ ನೀರಾವರಿ ವ್ಯವಸ್ಥೆ ಮಾನ್ಯತೆ ಪಡೆಯಿತು. ನೀರಾವರಿ ಚೌಕಟ್ಟಿನ ಬೆಳವಣಿಗೆಗೆ ಪ್ರೋತ್ಸಾಹಿಸುವುದು ಒಂದು ಪರಂಪರೆಯಾಗಿ ಬೆಳೆಯಿತು. ಪ್ರಾಚೀನ ಹಾಗು ಮಧ್ಯಕಾಲೀನ ಚಾರಿತ್ರಿಕ ಬರವಣಿಗೆಗಳಲ್ಲಿ ದೇವಾಲಯಗಳು ಆರ್ಥಿಕ ಕೇಂದ್ರಗಳು ಕೃಷಿ ಮತ್ತು ನೀರಾವರಿ ಅಭಿವೃದ್ಧಿಯಲ್ಲಿ ಸಕ್ರಿಯ ಪಾತ್ರ ವಹಿಸಿದ್ದವು. ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಬಹುತೇಕ ಎಲ್ಲಾ ರಾಜಮನೆತನಗಳು ನೀರಾವರಿ ಚೌಕಟ್ಟಿನ ಉಗಮ. ವಿಕಸನ ಮತ್ತು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನೀಡಿರುವ ಕೊಡುಗೆ ಗಮನಾರ್ಹ. ಈ ಹಿನ್ನೆಲೆಯಲ್ಲಿ ಮೈಸೂರು ಒಡೆಯರ್ ಆರಂಭಿಕ ಕಾಲಘಟ್ಟದ (ಆರಂಭದಿಂದ ೧೭೯೯) ನೀರಾವರಿ ಚೌಕಟ್ಟನ್ನು ಕುರಿತಂತೆ ಪ್ರಸ್ತುತ ಲೇಖನದಲ್ಲಿ ಪರಾಮರ್ಶನ ಮಾಡುವ ಪ್ರಯತ್ನ ನಡೆಸಲಾಗಿದೆ.

ಮಧ್ಯಕಾಲೀನ ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯದ ಕಾಲಘಟ್ಟದಲ್ಲಿ ಸಾಮಂತರು, ಅಮರನಾಯಕರು, ನಾಯಕರು, ಒಡೆಯರೂ ಹೀಗೆ ಪ್ರಾದೇಶಿಕ ಆಡಳಿತ ಘಟಕಗಳ ಮುಖ್ಯಸ್ಥರಾಗಿದ್ದರು. ಕೇಂದ್ರಾಡಳಿತ ದುರ್ಬಲಗೊಂಡಂತೆ ಕ್ರಮೇಣ ಪ್ರಬಲ ರಾಗುತ್ತಾ, ಅಧಿಕಾರ ವ್ಯಾಪ್ತಿಗಳನ್ನು ವಿಸ್ತರಿಸಿಕೊಳ್ಳುತ್ತಾ ಸ್ವಾಯತ್ತತೆ ಪಡೆಯ ಲಾರಂಭಿಸಿದರು. ಈ ರೀತಿ ದಕ್ಷಿಣ ಕರ್ನಾಟಕದಲ್ಲಿ ಪ್ರಾಬಲ್ಯಕ್ಕೆ ಬಂದವರೆಂದರೆ, ಯಲಹಂಕ ನಾಡಪ್ರಭುಗಳು, ತರೀಕೆರೆ ಪಾಳೆಯಗಾರರು, ಚಿತ್ರದುರ್ಗ ಪಾಳೆಯಗಾರರು, ಇಕ್ಕೇರಿ ನಾಯಕರು, ಹಾಗಲವಾಡಿ ನಾಯಕರು, ಚನ್ನಪಟ್ಟಣದ ಪಾಳೆಯಗಾರರು, ಸುಗಟೂರು ಪಾಳೆಯಗಾರರು, ಚಿಕ್ಕಬಳ್ಳಾಪುರ ಪಾಳೆಯಗಾರರು ಹಾಗು ಮೈಸೂರಿನ ಒಡೆಯರು. ಆ ವೇಳೆಗೆ ಬದಲಾದ ರಾಜಕೀಯ ಪಲ್ಲಟಗಳಲ್ಲಿ, ದಕ್ಷಿಣ ಭಾರತದ ರಾಜಕೀಯ ಶಕ್ತಿಗಳಲ್ಲಿ ಉಂಟು ಮಾಡಿದ ತಲ್ಲಣಗಳು, ದಕ್ಷಿಣ ಕರ್ನಾಟಕದ ರಾಜಕೀಯ ಭೂಪಟವನ್ನು ಸಂಪೂರ್ಣ ಬದಲಿಸಿತು. ಈ ತೆರನಾದ ರಾಜಕೀಯ ಪಲ್ಲಟಗಳಲ್ಲಿ ಅತ್ಯಂತ ಪ್ರಬಲ ಮತ್ತು ಶಕ್ತಿಯುತವಾದ ರಾಜಮನೆತನವಾಗಿ ಮೂಡಿಬಂದ ಮೈಸೂರಿನ ಅರಸರು ೧೯೪೪ರವರೆಗೂ ಸಂಸ್ಥಾನದಲ್ಲಿ ಅಧಿಕಾರ ನಡೆಸಿದರು. ಮೈಸೂರು ಸಂಸ್ಥಾನದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ವಲಯಗಳಲ್ಲಿ ತಮ್ಮದೇ ಛಾಪನ್ನು ರೂಪಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ.

ಸುಮಾರು ೧೬ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಮೈಸೂರು ಒಡೆಯರ್ ಸಂಸ್ಥಾನಕ್ಕೆ ರಾಜ ಒಡೆಯರ್ ನಿರ್ದಿಷ್ಟ ರೂಪ ಮತ್ತು ಶಕ್ತಿ ನೀಡಿ ತಮ್ಮ ಪೂರ್ವಿಕರ ಅಸ್ತಿತ್ವವನ್ನು ಸ್ಥಾಪಿಸಿದವರು. ರಾಜ ಒಡೆಯರ್ ಅವರ ಕಾಲದಿಂದ ನೀರಾವರಿ ಕಾಮಗಾರಿಗಳ ಕುರಿತಂತೆ ಮಾಹಿತಿ ದೊರೆಯುತ್ತದೆ. ರಾಜ ಒಡೆಯರ್ ಕಾಲದಲ್ಲಿ ಕಳಸ್ತವಾಡಿ ಕೆರೆಯನ್ನು ವಿಸ್ತರಿಸಿ, ಅದರ ಅಚ್ಚುಕಟ್ಟಿನ ೫೦ ಖಂಡುಗ ಭತ್ತದ ಭೂಮಿಯನ್ನು ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ದಾನವಾಗಿ ನೀಡಲಾಗಿತ್ತು.[೧] ಮೆಕೆಂಜಿ ಸಂಗ್ರಹಿತ ಶಾಸನ ಒಂದರಲ್ಲಿ ಚಾಮರಾಜ ಒಡೆಯರ್ ಶ್ರೀರಂಗಪಟ್ಟಣದ ಆಸುಪಾಸಿನಲ್ಲಿ ಕಾವೇರಿ ನದಿ ನಾಲೆಗಳನ್ನು ಪುನಶ್ಚೇತನಗೊಳಿಸಿ, ನದಿಗೆ ಅಡ್ಡಲಾಗಿ ಸೇತುವೆ ನಿರ್ಮಿಸಿದ ರೆಂದು ಈ ನಾಲೆಗಳಿಂದ ನೀರಾವರಿ ಸೌಲಭ್ಯ ಪಡೆದ ಅಚ್ಚುಕಟ್ಟನ್ನು 'ಹೊಸ ಬಯಲು' ಎಂದು ಕರೆಯಲಾಗಿದೆ.[೨] ಮೇಲುಕೋಟೆಯಲ್ಲಿ ಬ್ರಹ್ಮೋತ್ಸವ ಮತ್ತು 'ವೈರಮುಡಿ' ಸಂದರ್ಭಗಳಿಗಾಗಿ ಬರುವ ಜನಸ್ತೋಮದ ಅನುಕೂಲಕ್ಕಾಗಿ

* ಇತಿಹಾಸ ಪ್ರಾಧ್ಯಾಪಕರು, ಮಹಾರಾಣಿ ಕಲಾ ಕಾಲೇಜು, ಬೆಂಗಳೂರು.

ಕೊಳವೊಂದಕ್ಕೆ 'ಸೋಪಾನಾದಿ'ಗಳನ್ನು ನಿರ್ಮಿಸಿ, ಪಟ್ಟದ ರಾಣಿ ಮುದ್ದಾಜಮ್ಮನ ಅಪೇಕ್ಷೆ ಮೇರೆಗೆ ನಿರ್ಮಿಸಿದರು.[೩] ಕಂಠೀರವ ನರಸರಾಜ ಒಡೆಯರ್ ಕಾಲದಲ್ಲಿ ಶ್ರೀರಂಗನಾಥಸ್ವಾಮಿಗೆ ಗಜೇಂದ್ರಮೋಕ್ಷ ಆಚರಣೆ ಸಂದರ್ಭಕ್ಕಾಗಿ 'ಸುಖತೀರ್ಥ' ಎಂಬ ಕೊಳವೊಂದನ್ನು ನಿರ್ಮಿಸಿ 'ಕಂಠೀರವ ಸರೋವರ' ಎಂದು ಹೆಸರಿಸಲಾಗಿದೆ.[೪] ಈ ಕಾಲದ ಒಂದು ಮುಖ್ಯ ನೀರಾವರಿ ಯೋಜನೆಯೆಂದರೆ ನಂಜನಗೂಡಿನ ಬಳಿ ಕೌಂಡಿನ್ಯ ನದಿಗೆ ಅಣೆಕಟ್ಟನ್ನು ಕಟ್ಟಿ, ಜಲಾಶಯ ನಿರ್ಮಿಸಿದುದಾಗಿದೆ. ಪ್ರಸ್ತುತ ಜಲಾಶಯದ ನಿರ್ಮಾಣ ಉದ್ದೇಶಿತ ಧಾರ್ಮಿಕ ಚಟುವಟಿಕೆಗಳಿಗೆ ಪೂರಕವಾಗಿದ್ದಿತು. ಈ ಅಚ್ಚುಕಟ್ಟಿನ ಭಾಗದ ಕೃಷಿ ಉತ್ಪನ್ನವನ್ನು ನಂಜನಗೂಡಿನ ನಂಜುಂಡೇಶ್ವರ ನಿಗೆ ದಾನವಾಗಿ ನೀಡಲಾಗಿದ್ದಿತು[೫]. ಪ್ರಾಣೇಶ್ವರ ದೇವಾಲಯದ ದಕ್ಷಿಣಕ್ಕೆ ದೊಡ್ಡ ಕೊಳವನ್ನು ನಿರ್ಮಿಸಿ 'ಶೃಂಗಾರ ತೋಟದ ಕೊಳ' ಎಂದು ಹೆಸರಿಸಿದೆ[೬].

ಕಂಠೀರವ ನರಸರಾಜ ಒಡೆಯರ್‌ರವರ ಮಾವ ದೊಡ್ಡ ಅರಸ್ ಅರಿಕೆಲತಾರ ಎಂಬಲ್ಲಿ ಕೆರೆಯನ್ನು ಕಟ್ಟಿಸಿ, ಅಲ್ಲಿಂದ ಹೊಸ ನಾಲೆಯೊಂದನ್ನು ಶ್ರೀರಂಗಪಟ್ಟಣದವರೆಗೆ ನಿರ್ಮಿಸಿ, 'ಬಂಗಾರದೊಡ್ಡಿ ಕಾಲುವೆ' ಕಟ್ಟಿಸಿದರು. ಈ ಕಾಮಗಾರಿಯ ಪ್ರಮುಖ ಉದ್ದೇಶವೆಂದರೆ, ಕಾವೇರಿ ಪ್ರವಾಹದ ಸಂದರ್ಭದಲ್ಲಿ ಜನರಿಗೆ ಸಾರಿಗೆ ಸೌಕರ್ಯ ಕಲ್ಪಿಸುವುದಾದರೆ, ಸಾಮಾನ್ಯ ಸಂದರ್ಭಗಳಲ್ಲಿ ಪಟ್ಟಣದ ಜನತೆಗೆ ನೀರನ್ನು ಒದಗಿಸುವುದಾಗಿದ್ದಿತು. ಶ್ರೀರಂಗಪಟ್ಟಣದ ವಾಯುವ್ಯ ಮತ್ತು ಆಗ್ನೇಯ ದಿಕ್ಕುಗಳಿಗೆ ಹರಿಯುವ ಸೂಕ್ತ ಸ್ಥಳಗಳಲ್ಲಿ ನಾಲೆಗೆ ಅಣೆಕಟ್ಟು ಕಟ್ಟಿ, ಸಂಗ್ರಹಿತ ನೀರನ್ನು ಪಟ್ಟಣಕ್ಕೆ ಹರಿಸುವ ಕಾಮಗಾರಿ ನಿರ್ಮಿಸಿದರು. ಈ ಹೊಸ ಕಾಮಗಾರಿಯಿಂದ ಬೆಳೆಯುವ ಉತ್ಪನ್ನವನ್ನು ಶ್ರೀರಂಗನಾಥ ನಿಗೆ ಮೀಸಲು ಇರಿಸಲಾಯಿತು[೭]. ಹಲವು ಸಾಮಂತರು ಯಾ ಅಧೀನ ಅಧಿಕಾರಿಗಳು ನೀರಾವರಿ ಕಾಮಗಾರಿಗಳನ್ನು ಕೈಗೊಂಡಿರುವುದು ದಾಖಲಾಗಿದೆ. ಕಂಠೀರವರ ಸಾಮಂತ ರಲ್ಲಿ ಒಬ್ಬನಾದ ಕಸಲಗೆರೆಯ ಕೆಂಪಣ್ಣಗೌಡ ಚನ್ನರಾಯ ಪಟ್ಟಣದಲ್ಲಿ 'ಕೂಳ'ವೊಂದನ್ನು ನಿರ್ಮಿಸಿದನು[೮]. ದೊಡ್ಡಯ್ಯನು ಚೆನ್ನರಾಯಪಟ್ಟಣದಲ್ಲಿ ಕೊಳ ಹಾಗು ಬಾವಿಯನ್ನು ಕಟ್ಟಿರುವುದು ದಾಖಲಿಸಿದೆ[೯].

ಹಿರಿಯ ಬೆಟ್ಟದ ಚಾಮರಾಜ ಒಡೆಯರ್, ಚಾಮುಂಡಿ ಬೆಟ್ಟದ ದೇವಾಲಯದ ಹಿಂಭಾಗದಲ್ಲಿ 'ಹಿರೇಕೆರೆ' ಎಂಬ ಒಂದು ತಟಾಕ ನಿರ್ಮಿಸಿದರು[೧೦]. ೧೬೪೪ರಲ್ಲಿ ಹೊರಡಿಸಿದ ಪಟ್ಟಣ ಹೋಬಳಿ ವಿಚಾರದ ಚನ್ನಯ್ಯನಿಗೆ ನೀಡಿದ ನಿರೂಪದಲ್ಲಿ "ತಿರುಮಲಿ ಸಾಗರದ ಅಗ್ರಹಾರಕ್ಕೆ ಸಲ್ಲುವ ಗ್ರಾಮಗಳಿಗೆ ಯಲ್ಲೆಗಟ್ಟಿ ನಿರ್ಮಿಸಿ, ತಿರುಮಲಿ ಸಾಗರದ ಗ್ರಾಮಗಳಿಗೆ ತೊಣ್ಣೂರು ಕೆರೆಯಿಂದ ಪ್ರಾಕು ಮೇರೆಗೆ ನೀರನ್ನು ಕೊಡಿಸಿ ಸುರಕ್ಷಿತರಲ್ಲಿ ನಡೆಸಿಕೊಂಡು ಬರೋದು" ಎಂದು ಆದೇಶಿಸಿದೆ[೧೧]. ದೊಡ್ಡದೇವರಾಜ ಒಡೆಯರ್ ಕಾಲದ ಪ್ರಮುಖ ಕಾಮಗಾರಿಗಳಲ್ಲಿ ಮೈಸೂರಿನ ದೇವಾಂಬುದಿ ಕೆರೆಯ ನಿರ್ಮಾಣ ಈಗಲೂ 'ದೊಡ್ಡಕೆರೆ' ಮೈದಾನವೆಂದು ಪ್ರಸಿದ್ಧಿಯಾಗಿದೆ[೧೨]. ಒಬ್ಬ ಖಾಸಗಿ ವ್ಯಕ್ತಿ ಕಾನಕಾನಹಳ್ಳಿ ಸ್ಥಳದ ಮಾಳಗಾಳದ ಕೆರೆಯನ್ನು ಪುನಶ್ಚೇತನಗೊಳಿಸಿ, ಪುನರ್ ನಿರ್ಮಾಣ. ಕಾರ್ಯ ಕೈಗೊಂಡು ನಿರ್ಮಿಸಿ ಸಮುದ್ರವನ್ನು ಮೊಳಗಾಳದ ಮಹದೇಶ್ವರ ದೇವಾಲಯಕ್ಕೆ ನೀಡಿದ್ದನ್ನು ದಾಖಲಿಸಿದೆ[೧೩].

ಚಿಕ್ಕದೇವರಾಜ ಒಡೆಯರ್‌ರು ಆಳ್ವಿಕೆಯ ಆಡಳಿತಾತ್ಮಕ ಹಾಗೂ ಜನಪರ ನೆಲೆಯಲ್ಲಿ ಗಮನಾರ್ಹವಾದುದು. ಹದಿನೆಂಟು ಇಲಾಖೆಗಳನ್ನು ಸಂಘಟಿಸುವ ಆಡಳಿತಾತ್ಮಕ ಪ್ರಕ್ರಿಯೆ, ಮೈಸೂರು ಸಂಸ್ಥಾನದ ಆಡಳಿತ ವ್ಯವಸ್ಥೆಯ ನಿರ್ಮಾಣದಲ್ಲಿ ಮಹತ್ತರವಾದ ಬೆಳವಣಿಗೆಯಾಗಿದ್ದಿತು. ಈ ಹದಿನೆಂಟು ಇಲಾಖೆಗಳಲ್ಲಿ ಒಂದಾದ "ಮೈಸೂರು ಹೋಬಳಿ ಅಷ್ಟಗ್ರಾಮದ ಹೋಬಳಿ" ಇದು ಹೊಸದಾಗಿ ನಿರ್ಮಿಸಿದ ದೇವರಾಜ ನಾಲೆಯ ವ್ಯಾಪ್ತಿಯ ಎಂಟು ಹೋಬಳಿಗಳನ್ನು ಒಳಗೊಂಡಂತೆ ರೂಪಿಸಲಾಗಿತ್ತು. ಈ ಇಲಾಖೆಯ ಕರ್ತವ್ಯವೇನೆಂದರೆ 'ಕಾವೇರಿ' ಮತ್ತು 'ಹೇಮಾವತಿ' ತಡಿಯ ನಾಲಾ ಮತ್ತು ಅಣೆಕಟ್ಟುಗಳ ದುರಸ್ತಿ ಹಾಗೂ ನಿರ್ವಹಣಾ ಕಾಮಗಾರಿಗಳಲ್ಲಿ ನಿರ್ವಹಿಸುವುದಾಗಿದ್ದಿತು[೧೪]. ಅಲ್ಲದೆ ಸರ್ಕಾರದ ಪಾಲಾದ 'ಅರ್ಧವಾರ' (ನೀರಾವರಿ ಸಾಗುವಳಿ) ಲೆಕ್ಕಪತ್ರಗಳನ್ನು ನಿರ್ವಹಿಸಬೇಕಾಗಿದ್ದಿತು.

ಚಿಕ್ಕದೇವರಾಜ ಒಡೆಯರ್‌ರವರು ಕೈಗೊಂಡ ಮಹತ್ವದ ನೀರಾವರಿ ಯೋಜನೆಯೆಂದರೆ ಶ್ರೀರಂಗಪಟ್ಟಣದ ಪಶ್ಚಿಮಕ್ಕೆ ಕಾವೇರಿ ನದಿಗೆ ಅಣೆಕಟ್ಟು ನಿರ್ಮಿಸಿದುದಾಗಿತ್ತು. ೧೭೦೧ರ ಜೆಸ್ಯೂಟ್ ಪತ್ರದಲ್ಲಿ ಈ ಕಾಮಗಾರಿ ಕುರಿತಂತೆ ಆಸಕ್ತಿಯುತ ಮಾಹಿತಿ ಇದೆ[೧೫]. ಅದರಂತೆ ಆ ಸಾಲಿನಲ್ಲಿ ಕಾವೇರಿ ನದಿ ಸಂಪೂರ್ಣ ಭತ್ತಿ ಹೋಗಿ ಅಚ್ಚುಕಟ್ಟು ಭಾಗಗಳಾದ ಮಧುರೈ ಮತ್ತು ತಂಜಾವೂರು ಜನ ತೀವ್ರ ಕ್ಷಾಮಕ್ಕೆ ತುತ್ತಾದರು. ಪ್ರಾಯಶಃ ಈ ಮೈಸೂರಿನ ರಾಜ ಒಡ್ಡನ್ನು ನಿರ್ಮಿಸಿರದಿದ್ದರೆ ತಡವಾಗಿಯಾದರೂ ಕಾವೇರಿ ಹರಿದು ಬರುತ್ತಿದ್ದಳು. ಈ ಹಿನ್ನೆಲೆಯಲ್ಲಿ ತಮಿಳುನಾಡಿನ ರಾಜರು ಜಂಟಿಯಾಗಿ ಸೈನಿಕ ಕಾರ್ಯಾಚರಣೆ ಕೈಗೊಂಡು ಅಣೆಕಟ್ಟನ್ನು ನಾಶಪಡಿಸಲು ಯೋಜನೆ ರೂಪಿಸಿದರು. ತಡವಾಗಿ ಆವರಿಸಿದ ಮಲೆನಾಡ ಮಳೆ ಕಾವೇರಿ ಉಕ್ಕಿ ಹರಿಯುವಂತೆ ಮಾಡಿತು. ಮೈಸೂರು ರಾಜ ನಿರ್ಮಿಸಿದ್ದ ಒಡ್ಡು ಒಡೆದುಹೋಯಿತು.

ಹದಿನೆಂಟನೆಯ ಶತಮಾನದ ಆರಂಭದಲ್ಲಿ ಚಿಕ್ಕದೇವರಾಜ ಒಡೆಯರ್ ಕಾವೇರಿಗೆ ಅಣೆಕಟ್ಟು ನಿರ್ಮಿಸುವ ಕನಸು ಕಂಡಿದ್ದರಾದರೂ ಯಶಸ್ವಿಯಾಗಿರಲಿಲ್ಲ ! ಏನೇ ಆದರೂ ಅವರನ್ನು ರಾಜ್ಯದ ನೀರಾವರಿ ಯೋಜನೆ ವಿಶೇಷವಾಗಿ 'ಕೃಷ್ಣರಾಜಸಾಗರ' ಅಣೆಕಟ್ಟಿನ 'ಮುನ್ಸೂಚಕ' ಎಂದು ಕರೆದರೆ ಉತ್ಪ್ರೇಕ್ಷೆಯಾಗಲಾರದು.

ನೀರಾವರಿ ಚೌಕಟ್ಟಿನಲ್ಲಿ ನೀರಿನ ವಿತರಣೆ ಒಂದು ಭಾಗವಾಗಿ ಹೇಗೆ ಮಹತ್ವ ಪಡೆದಿದ್ದಿತು ಎಂಬುದಕ್ಕೆ 'ಬಾರಾ ಬಲೂತಿ' ಪದ್ಧತಿ ಸಾಕ್ಷಿಯಾಗಿದೆ. ಚಿಕ್ಕದೇವರಾಜ ಒಡೆಯರ್ ಕಾಲದ ಬಾರಾ ಬಲೂತಿಯಲ್ಲಿ ನೀರಗಂಟಿಯೂ ಒಬ್ಬನಾಗಿದ್ದ. ನೀರಗಂಟಿ ಕೆರೆಯ ನೀರನ್ನು ಕಾಲುವೆಗಳ ಮುಖಾಂತರ ಅಚ್ಚುಕಟ್ಟಿನ ಭಾಗಗಳಿಗೆ ನಿಯಮಿತವಾಗಿ ಸರದಿಯಂತೆ ಹರಿಸುವ ಗುರುತರ ಜವಾಬ್ದಾರಿ ನಿರ್ವಹಿಸುತ್ತಿದ್ದನು. ಅದಕ್ಕೆ ಅವನಿಗೆ ಪ್ರತಿ ಅಚ್ಚುಕಟ್ಟುದಾರನು ಒಂದು ಹೊರೆ ಹುಲ್ಲು (ಭತ್ತದ ತೆನೆ ಭರಿತ) ಮತ್ತು ಒಂದು ಕೊಳಗ ಧಾನ್ಯವನ್ನು ನೀಡಬೇಕಾಗಿದ್ದಿತು. ರೈತರ ಕುಟುಂಬಗಳ ಸದಸ್ಯರನ್ನಾಧರಿಸಿ 'ಹಾಡಾದೆ' ಸಹ ನೀಡಬೇಕಾಗಿದ್ದಿತು. ಈ ಸೌಲಭ್ಯಗಳಲ್ಲದೆ ವಿಶೇಷವಾಗಿ ಗ್ರಾಮದ ಜೋತಿಷಿ, ಲೆಕ್ಕಿಗ, ಕಾವಲುಗಾರ ಮತ್ತು ತೂಬುಗಳನ್ನು ನಿರ್ವಹಿಸುವ ತೋಟಿಗಳಿಗೆ 'ಮಾನ್ಯಭೂಮಿ'ಯನ್ನು ಒಂದರಿಂದ ಆರು ವರಾಹಗಳಂತೆ ಕೊಡುಗೆ ಭೂಮಿ ನೀಡಲಾಗಿತ್ತು. ಅಲ್ಲದೆ ಸರ್ಕಾರದ ನಾಲೆಗಳನ್ನು ನಿರ್ವಹಿಸುವ 'ಮಣೆಗಾರ' ತೆನೆಭರಿತ ಹೊರೆ ಮತ್ತು ಕೃಷಿ ಹುಟ್ಟುವಳಿಯ ಅರ್ಧ ಕೊಳಗದಳತೆಯ ಧಾನ್ಯ ನೀಡಬೇಕಾಗಿದ್ದಿತು[೧೬].

ನೀರಾವರಿ ಸೌಲಭ್ಯ ಪಡೆದ ಅಚ್ಚುಕಟ್ಟಿನಲ್ಲಿ ಭೂಕಂದಾಯದ ರೂಪದಲ್ಲಿ 'ಅರ್ಧವಾರ' ಸರ್ಕಾರಕ್ಕೆ ಸಲ್ಲಿಸಬೇಕಾಗಿದ್ದಿತು. ರೈತರು ತಾವು ಬೆಳೆದ ಅರ್ಧ ಉತ್ಪನ್ನ ಸಲ್ಲಿಸಲು ಇರುವ ತೊಂದರೆ ಕಷ್ಟ ಆಲಿಸಿದ ಚಿಕ್ಕದೇವರಾಜ ಒಡೆಯರ್ ಕಟಾವು ಸಂದರ್ಭದಲ್ಲಿ ವಿಚಾರಣೆ ನಡೆಸಿದಾಗ ಆದಾಯ ವ್ಯಯ ಸರಿಸಮಾನವಾಗಿದ್ದ ಹಿನ್ನೆಲೆಯಲ್ಲಿ 'ಅರ್ಧವಾರ' ಪದ್ಧತಿಯನ್ನು ಬದಲಾಯಿಸಿ ಉತ್ಪನ್ನವನ್ನು ಮೂರು ಭಾಗವನ್ನಾಗಿಸಿ, ಒಂದು ಭಾಗ ಬೀಜ ಸಾಗುವಳಿ ಉತ್ಪನ್ನಕ್ಕೆ, ಮತ್ತೊಂದು ಭಾಗವನ್ನು ರೈತನ ಶ್ರಮಕ್ಕೆ ಹಾಗು ಮತ್ತೊಂದು ಭಾಗವನ್ನು ಸರ್ಕಾರಕ್ಕೆ ಸಲ್ಲಿಸುವ ಪದ್ಧತಿ ಜಾರಿಗೊಳಿಸಿದನು[೧೭]. ಹೀಗೆ ವಾಸ್ತವ ಸ್ಥಿತಿಗತಿಗಳನ್ನು ಅರ್ಥ ಮಾಡಿಕೊಂಡು ರೈತರ ಕಷ್ಟಕ್ಕೆ ಸ್ಪಂದಿಸಿದ ಚಿಕ್ಕದೇವರಾಜ ಒಡೆಯರ್ ಜನಪರ ರಾಜನಾಗಿ ವಿಜೃಂಭಿಸುತ್ತಾನೆ. ಆದರೆ ಈ ಬದಲಾವಣೆ ಕೇವಲ ಎರಡು ವರ್ಷಗಳಿಗೆ ಮಾತ್ರ. ಆ ನಂತರ ಯಥಾಸ್ಥಿತಿಯಲ್ಲಿ ಹಿಂದಿನ 'ಅರ್ಧವಾರ' ಪದ್ಧತಿಯನ್ನು ಜಾರಿಗೊಳಿಸಿದ. ಬಹುತೇಕ ರಾಜರು "ಮೂಗಿಗೆ ಬೆಣ್ಣೆ ಸವರುವ ನೀತಿಯನ್ನು" ಅನುಸರಿಸಿದರು. ಗಣನೀಯ ಪ್ರಮಾಣದಲ್ಲಿ ನೀರಾವರಿ ಸೌಲಭ್ಯ ವಿಸ್ತರಿಸಿದ ಒಡೆಯರು ಬೆಳೆ ಪದ್ಧತಿಯ ನಿಯಂತ್ರಣಕ್ಕೂ ಗಮನ ನೀಡಿದ್ದುದು ಕಂಡುಬರುತ್ತದೆ. ಚಿಕ್ಕದೇವರಾಜ ಒಡೆಯರ್ ಕಾಲದಲ್ಲಿ ಕೆರೆ ಮತ್ತು ನಾಲಾಗಳಿಂದ ನೀರಾವರಿಯಾಗುತ್ತಿದ್ದ ಭೂಮಿಯ ಅಚ್ಚುಕಟ್ಟುಗಳಲ್ಲಿ ಹಾಗೂ ಉತ್ತಮ ಮಳೆಯ ವರ್ಷಗಳಲ್ಲಿ ಭತ್ತ, ಕಬ್ಬು ಮುಂತಾದ ಬೆಳೆಗಳನ್ನು ಬೆಳೆಯಬೇಕು. ಇದರಿಂದ ಬರುವ ಉತ್ಪನ್ನದಲ್ಲಿ 'ಅರ್ಧ ಭಾಗ' ಸರ್ಕಾರಕ್ಕೆ ಸಲ್ಲಿಸಬೇಕು. ಮಳೆಯ ಕೊರತೆಯ ವರ್ಷಗಳಲ್ಲಿ ಕೇವಲ ಬೆದ್ದಲು ಬೆಳೆಗಳನ್ನು ಮಾತ್ರ ಬೆಳೆಯಬೇಕು ಎಂದು ನಿರೂಪ ಹೊರಡಿಸಿದ್ದರು[೧೮].

ಸೇಲಂ ಜಿಲ್ಲೆಯ ಕಟ್ಟೆಯ ಮೇಲುಗಡೆಯ ಕ್ರಿ.ಶ. ೧೬೭೨ರ ಶಾಸನವೊಂದರಲ್ಲಿ ಚಿಕ್ಕದೇವರಾಜನ ದಳವಾಯಿ ಕುಮಾರಯ್ಯ ಎಂಬುವನು ಕಟ್ಟೆಯೊಂದನ್ನು ನಿರ್ಮಿಸಿದುದನ್ನು ದಾಖಲಿಸಿದೆ[೧೯]. ಮಳವಳ್ಳಿಯ ಕೋಟೆಯಲ್ಲಿ ಸುಂದರವಾದ 'ಶೃಂಗಾರ ಕೊಳ'ವೊಂದನ್ನು ಚಿಕ್ಕದೇವರಾಜ ಒಡೆಯರ್ ನಿರ್ಮಿಸಿದರೆಂದು ದಾಖಲಿಸಿದೆ[೨೦]. ಕ್ರಿ.ಶ. ೧೬೯೯ರ ಶಾಸನವೊಂದರಲ್ಲಿ ಚಿಕ್ಕದೇವರಾಜ ಒಡೆಯರ್ ಆದೇಶದ ಮೇರೆಗೆ ದೊಡ್ಡಯ್ಯ ಎಂಬುವನು 'ದೇವರಾಯ ಸಮುದ್ರ' ಎಂಬ ಕೆರೆಯನ್ನು ಕಟ್ಟಿಸಿದನೆಂದು ಹೇಳಲಾಗಿದೆ[೨೧]. ಮತ್ತೊಂದು ಶಾಸನದಲ್ಲಿ ಹೆಂಗಾಳ್ವದ ಕೆರೆಗಳು, ಕೊಳಗಳು ಪಾಳುಬಿದ್ದಿದ್ದು, ಅವುಗಳನ್ನು ಸುಭದ್ರವಾಗಿ ದುರಸ್ತಿಗೊಳಿಸಲು ಆದೇಶಿಸಿತ್ತು. ಇದಕ್ಕಾಗಿ ಆ ಸ್ಥಳದ ವಾರ್ಷಿಕ ಉತ್ಪನ್ನದಲ್ಲಿ ಐದುನೂರು ವರಾಹಗಳನ್ನು ಇದಕ್ಕಾಗಿ ವ್ಯಯ ಮಾಡಲು ಸೂಚಿಸಲಾಗಿತ್ತು[೨೨]. ಕೃಷ್ಣರಾಜಪೇಟೆಯ ಮಾಳಗೂರಿನ ಕ್ರಿ.ಶ. ೧೬೬೩ರ ಶಾಸನವೊಂದರಲ್ಲಿ ದೇವರಾಜ ಒಡೆಯನ ಮಗ ದೇವರಾಜ ಮಹಿಪಾಲ ಮಾಳಗೂರು ಜೊತೆಗೆ ಅದರ ಏಳು ಉಪ ಗ್ರಾಮಗಳನ್ನು ಹಾಗು ಕೆರೆಯೊಂದನ್ನು ಅಗ್ರಹಾರವನ್ನಾಗಿಸಿ 'ದೇವರಾಜಪುರ' ಎಂದು ಪುನರ್ ನಾಮಕರಣ ಮಾಡಿದ್ದರು[೨೩]. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಅಲ್ಲಿನ ಪ್ರಸಿದ್ಧ ಸುಂದರ ಕಲ್ಯಾಣಿಯನ್ನು ಚಿಕ್ಕದೇವರಾಜ ಒಡೆಯರು ನಿರ್ಮಿಸಿದರೆಂದು ಹೇಳಲಾಗಿದೆ[೨೪]. ಕ್ರಿ.ಶ. ೧೭೨೦ರ ಶಾಸನವೊಂದರಲ್ಲಿ ಕಳಲೆಯ ಚೆಲುವಯ್ಯ ಎಂಬುವನು ಕೃಷ್ಣರಾಜಸಾಗರ ಕೆರೆಯನ್ನು ಹೊಸದಾಗಿ ನಿರ್ಮಿಸಿದ್ದು, ಅಲ್ಲಿನ ಲಕ್ಷ್ಮಿಕಾಂತಸ್ವಾಮಿ ದೇವಾಲಯದ ಭೂಮಿಗಳಿಗೂ ನೀರನ್ನು ಒದಗಿಸಲು ಆದೇಶಿಸಿರುವುದನ್ನು ದಾಖಲಿಸಿದೆ[೨೫]. ಕ್ರಿ.ಶ. ೧೭೬೬ರ ತಾಮ್ರಪಟಗಳಲ್ಲಿ ಪೆರಿಯಪಟ್ಟಣ ಸ್ಥಳದ ಎರಡು ಗ್ರಾಮಗಳನ್ನು 'ಸ್ತೋತ್ರೀಯಮಾನ್ಯ'ವಾಗಿ

ಶ್ರೀಪಾದರಾಯರ ಮಠಕ್ಕೆ ನೀಡಿದ್ದನ್ನು ದಾಖಲಿಸಿದೆ. ಶಾಸನದಂತೆ ಈ ಎರಡೂ ಗ್ರಾಮಗಳು ಪಾಳುಬಿದ್ದಿದ್ದು, ಪುನಶ್ಚೇತನಗೊಳಿಸುವ ಉದ್ದೇಶದಿಂದ ನೀಡಲಾಗಿದ್ದು, ಕೆರೆ ನಿರ್ಮಾಣಕ್ಕೆ ಸೂಕ್ತ ರಿಯಾಯಿತಿ ನೀಡಲಾಗಿದೆ[೨೬]. ದಳವಾಯಿ ಕಟಚಾರಿ ನಂಜರಾಜಯ್ಯನ ತಾಮ್ರಪಟಗಳಲ್ಲಿ (ಕ್ರಿ.ಶ. ೧೭೪೧) ೧೦ ಕೊಳಗದ ಬಿತ್ತನೆಯ ಗದ್ದೆಯನ್ನು ಸ್ಥಳೀಯ ನಾಯಕನಿಗೆ ನೀಡಿರುವುದು ದಾಖಲಾಗಿದೆ[೨೭]. ಕ್ರಿ.ಶ. ೧೭೫೬ರ ಶಾಸನದಲ್ಲಿ ನಂಜರಾಜಯ್ಯನ ಮನೆವಾರ್ತೆ ಗುರಿಕಾರ ವೀರಯ್ಯ ಎಂಬುವನು ಚನ್ನಪಟ್ಟಣದ ಕೆರೆಯನ್ನು ನಿರ್ಮಿಸಿದನೆಂದು ಹಾಗು ಅದರ ಅಚ್ಚುಕಟ್ಟಿನ ಹಲವು ಭೂಮಿಗಳನ್ನು ದೇವಾಲಯ ಮತ್ತು ಬ್ರಾಹ್ಮಣರಿಗೆ ಕಟ್ಟೆ ಕೊಡುಗೆಯಾಗಿ ನೀಡಿದ್ದನ್ನು ದಾಖಲಿಸಿದೆ[೨೮].

ಮೈಸೂರು ಒಡೆಯರ ಆರಂಭಿಕ ಕಾಲಘಟ್ಟದಲ್ಲಿ ನೀರಾವರಿ ಕುರಿತಂತೆ ಪಾರಂಪರಿಕ ನೀತಿ ಮುಂದುವರಿದಿರುವುದು ಕಂಡುಬರುತ್ತದೆ. ಕೆರೆ, ಕುಂಟೆ ಮುಂತಾದ ನೀರಾವರಿ ಕಾಮಗಾರಿಗಳನ್ನು ನಿರ್ಮಿಸುವುದು, ದುರಸ್ತಿಗೊಳಿಸುವುದು, ನಿರ್ವಹಣೆಯಂತಹ ಕಾಮಗಾರಿಗಳನ್ನು ಕೈಗೊಳ್ಳುವುದು, ಪ್ರೋತ್ಸಾಹಿಸುವುದು ಮಹೋನ್ನತ ಕಾರ್ಯ. ಇದರಿಂದ ಪುಣ್ಯ ಲಭಿಸುತ್ತದೆ ಎಂಬ ನಂಬಿಕೆ ಬಹುಮಟ್ಟಿಗೆ ಪ್ರೇರಕವಾಗಿರುವುದು ಕಂಡುಬರುತ್ತದೆ. ಇಂತಹ ಬಹುತೇಕ ಕಾಮಗಾರಿಗಳು ಧಾರ್ಮಿಕ ಚಟುವಟಿಕೆಗಳೊಂದಿಗೆ ತಳಕು ಹಾಕಿಕೊಂಡಿರುವುದು ಇದೆ. ರಾಜರು ಮಾತ್ರವಲ್ಲದೆ, ಆಡಳಿತಾಧಿಕಾರಿಗಳು, ಸಾಮಂತರು, ಸ್ಥಳೀಯ ನಾಯಕರು, ವ್ಯಕ್ತಿಗಳು ಮತ್ತು ಜನ ಸಮುದಾಯಗಳು ನೀರಾವರಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವುದು ಕಂಡುಬಂದಿದೆ. ಒಡೆಯರು ಆರಂಭಿಕ ಕಾಲಘಟ್ಟದ ನೀರಾವರಿ ವ್ಯವಸ್ಥೆಯಲ್ಲಿ ನಾಲಾಗಳ ನಿರ್ಮಾಣ, ವಿಸ್ತರಣೆಯಂತಹ ಚಟುವಟಿಕೆಗಳು ವ್ಯಾಪಕತೆ ಪಡೆದುಕೊಳ್ಳುತ್ತಾ ಬಂದಿವೆ. ಕಾವೇರಿ, ಹೇಮಾವತಿ ಮತ್ತಿತರ ನದಿಗಳ ನೀರನ್ನು ನೀರಾವರಿಗಾಗಿ ಬಳಸಿಕೊಳ್ಳುವ ತಂತ್ರವಾಗಿ ನಾಲೆಗಳನ್ನು ನಿರ್ಮಿಸುವ ಚಟುವಟಿಕೆ ಶ್ರೀರಂಗಪಟ್ಟಣ ಮತ್ತು ಆಸುಪಾಸಿನಲ್ಲಿ ಕೇಂದ್ರಿಕೃತಗೊಂಡಿರುವುದು ಕಂಡುಬರುತ್ತಿದೆ. ಜೊತೆಗೆ ಅಷ್ಟೆ ಪ್ರಮಾಣದಲ್ಲಿ ದೊಡ್ಡದಾದ ಅಣೆಕಟ್ಟುಗಳನ್ನು ನಿರ್ಮಿಸುವ ಪ್ರಯತ್ನಗಳು ಚಾಲನೆಗೊಂಡಿರುವುದು ಗಮನಾರ್ಹ. ಈ ಕಾಲದ ಅತ್ಯಂತ ಮಹತ್ವದ ಬೆಳವಣಿಗೆಯೆಂದರೆ ನೀರಾವರಿ ನಿರ್ವಹಣೆಗಾಗಿ ಇಲಾಖಾ ಸ್ವರೂಪ ಸಂಘಟನೆ ಹೊಂದಿರುವುದು. ಜೊತೆಗೆ ನೀರಾವರಿ ನಿರ್ವಹಣೆಗಾಗಿ 'ಬಾರಾ ಬಲೂತಿ'ಯ 'ನೀರಗಂಟಿ' ಹಾಗು 'ಮಣೆಗಾರ' ಪದ್ಧತಿ ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸಿದುದಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *Inscription of Meckenji Collections*, P. 27-1616.

೨. Manscript 18-15-20.

೩. Annals I. 60.

೪. ಅದೇ.

೫. ಅದೇ.

೬ ಅದೇ.

೭. Annals I. 91.

೮. E.C. Vol. V (I) and (II) Cn 159.

೯. ಅದೇ Cn 158.

೧೦. **ಶ್ರೀಮಾನ್ ಮಹಾರಾಜ ವಂಶಾವಳಿ,** ಭಾಗ I, ಪುಟ ೮.

೧೧. *Inscriptions of Meckengi Collections,* No. 90-1-55. Extrect No. 2).

೧೨. ಹಯವದನರಾವ್. ಸಿ. *History of Mysore,* Vol. I. PP. 238-239.

೧೩. I.M.C. No. 19-1-52.

೧೪. ಹಯವದನರಾವ್. ಸಿ. PP. 355-356.

೧೫. *Leckman's Travels* Father Mastis to fr. Velletig.

೧೬. ಹಯವದನರಾವ್, ಪುಟಗಳು ೩೪೧–೩೪೨.

೧೭. ಅದೇ ಪುಟಗಳು ೩೪೩–೩೪೪.

೧೮. ಅದೇ ಪುಟಗಳು, ೩೪೪–೩೪೫.

೧೯. I.M.C. II, 1216.

೨೦. E.C. ML. 61.

೨೧. I.M.C. No. 19-1-55.

೨೨. ಅದೇ PP. 30-31.

೨೩. E.C. IV, ಕೃಷ್ಣರಾಜಪೇಟೆ ೬೫.

೨೪. E.C. II, ಶ್ರವಣಬೆಳಗೊಳ ೫೦೧ (೩೬೫).

೨೫. MAR 1910-11, P. 55, Para 132.

೨೬ MAR 1975. P. 64.

೨೭. ಅದೇ ೧೯೨೫. ಫ. ೧೬೨.

೨೮. E.C. ನಂಜನಗೂಡು, ೬೮.

ಡಾ. ಎಸ್. ನಾಗರತ್ನಮ್ಮ*

# ಮೈಸೂರು ಒಡೆಯರ ಕಾಲದಲ್ಲಿ ಮಹಿಳಾ ಶಿಕ್ಷಣ

(೧೮೮೧-೧೯೪೭)

೧೯ನೇ ಶತಮಾನದ ಅಂತ್ಯ ಮತ್ತು ೨೦ನೇ ಶತಮಾನದ ಮೊದಲ ದಶಕದ ಆರಂಭದಲ್ಲಿ. ಬಾಲ್ಯವಿವಾಹ, ವಿಧವಾವಿವಾಹ ಮತ್ತು ಸ್ತ್ರೀ ಶಿಕ್ಷಣ ಈ ಮೂರು ಪರಿಕಲ್ಪನೆಗಳು ಚರ್ಚೆಯ ವಿಷಯಗಳಾಗಿದ್ದವು. ಮೈಸೂರು ಸಂಸ್ಥಾನ ಸ್ತ್ರೀ ಶಿಕ್ಷಣ ಕುರಿತು ಪ್ರಸ್ತಾಪಿಸಬೇಕಾದರೆ ಹಿಂದಿನ ರಾಷ್ಟ್ರ ಮಟ್ಟದ ಶಿಕ್ಷಣದ ಪರಿಸರವನ್ನು ತಿಳಿಯಬೇಕಾಗಿರಬೇಕಾದುದು ಸೂಕ್ತ. ಏಕೆಂದರೆ ಈ ಮೂರು ಪರಿಕಲ್ಪನೆಗಳ ಬಗ್ಗೆ ಚರ್ಚೆ ನಡೆದು ಅವು ಕಾರ್ಯಗತಗೊಂಡಿತ್ತು. ಮೈಸೂರು ಸಂಸ್ಥಾನದ ನೆರೆರಾಜ್ಯಗಳಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ನೋಡುವುದಾದರೆ ರಾಜಾರಾಂ ಮೋಹನ್‌ರಾಯ್ ಮಹಿಳಾ ಶಿಕ್ಷಣಕ್ಕೆ ಒತ್ತು ನೀಡಿದರು. ಆದರೆ ಸ್ತ್ರೀಯರನ್ನು ಸದ್ಗುಣಿಯನ್ನಾಗಿ ಮಾಡುವಂತಹ ರೀತಿಯ ಶಿಕ್ಷಣ ನೀಡಬೇಕೆಂದು ಬಯಸಿದರು. ಆದರೆ ಅಂದು ರಾಜಾರಾಂ ಮೋಹನ್‌ರಾಯ್ ಈ ಧ್ವನಿ ಎತ್ತಿದ್ದೆ ದೊಡ್ಡದು ಎಂದು ಹೇಳಬಹುದು. ಆದರೆ ಇದೆಲ್ಲವನ್ನು ಬದಿಗೊತ್ತಿದ ಪುಲೆಯವರು, ಸ್ತ್ರೀ ಶಿಕ್ಷಣಕ್ಕೆ ಆದ್ಯತೆ ನೀಡಿ ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ಪ್ರಾರಂಭಿಸಿದರು, ಅಬಲಾಶ್ರಮಗಳನ್ನು ತೆರೆದರು. ಇದೇ ರೀತಿ ತೆಲುಗು ನಾಡಿನಲ್ಲಿ ವಿರೇಶಲಿಂಗಂಪಂತಲು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಪ್ರತ್ಯೇಕ ಶಾಲೆಗಳನ್ನು ಹಾಗೂ ವಿಧವಾ ಪುನರ್‌ವಿವಾಹ ಸಂಘಗಳನ್ನು ಪ್ರಾರಂಭಿಸಿ ಕ್ರಾಂತಿಕಾರಕ ರೀತಿಯಲ್ಲಿ ಸ್ತ್ರೀ ಸುಧಾರಣೆ ಕೈಗೊಂಡರು. ಅದಕ್ಕಾಗಿ ಸಕಲ ಪ್ರಯತ್ನಗಳನ್ನು ಮಾಡಿದರು. ಈ ಕಾಲದಲ್ಲಿಯೇ ಸ್ತ್ರೀ ಮಾತನಾಡಿದ್ದು ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಿದರೆ, ಪುರುಷರನ್ನು Overtake ಮಾಡುತ್ತಾರೋ ಎಂಬ ಅಳುಕಿನಿಂದಲೇ ಸ್ತ್ರೀ ಶಿಕ್ಷಣದ ಬಗ್ಗೆ ಮಾತನಾಡುತ್ತಿದ್ದರು.

ಒಡೆಯರ ಕಾಲದಲ್ಲಿ ಸ್ತ್ರೀ ಶಿಕ್ಷಣದ ಹೆಚ್ಚು ಆಸಕ್ತಿ ಬೆಳೆಯಿತು. ೧೮೪೦ರಲ್ಲಿ ಲಂಡನ್ ಮಿಷನ್‌ರವರು ಬೆಂಗಳೂರಿನಲ್ಲಿ ಒಂದು ಕನ್ನಡ ಶಾಲೆಯನ್ನು ಪ್ರಾರಂಭಿಸಿದರು. ತದನಂತರ ಬೆಂಗಳೂರಿನಲ್ಲಿ ಹಿಂದೂ ಹೆಣ್ಣು ಮಕ್ಕಳ ಶಾಲೆ ತೆರೆಯಲಾಯಿತು. ೧೮೭೯-೮೦ಕ್ಕೆ ಇವುಗಳ ಸಂಖ್ಯೆ ೧೨ಕ್ಕೇರಿತು. ೧೮೮೧ರಲ್ಲಿ ಮೈಸೂರಿನಲ್ಲಿ ಮಹಾರಾಣಿ ಹೆಣ್ಣು ಮಕ್ಕಳ ಶಾಲೆಗಳಿದ್ದವು. ಇದು ೧೮೯೧ರಲ್ಲಿ ಸರ್ಕಾರಿ ಶಾಲೆಯಾಗಿ ಪರಿವರ್ತನೆಗೊಂಡಿತು.

ಮೈಸೂರು ಸಂಸ್ಥಾನದಲ್ಲಿ ಹೆಣ್ಣು ಮಕ್ಕಳ ಸುಧಾರಣೆಗೆ ಪ್ರಯತ್ನಿಸಿದವರೆಂದರೆ ಅಂಬಳೆ ನರಸಿಂಹ ಅಯ್ಯಂಗಾರ್. ಕ್ರಮೇಣ ಸಂಪ್ರದಾಯಸ್ಥರ ಮನಸ್ಸನ್ನು ಪರಿವರ್ತನೆ ಮಾಡುತ್ತ ಮಹಿಳಾ ಸುಧಾರಣಾ ಕೆಲಸವನ್ನು ಕಾರ್ಯಗತಗೊಳಿಸುತ್ತ ನಡೆದರು. ಆದರೆ ಈ ರೀತಿಯ ಸನ್ನಿವೇಶದಲ್ಲಿ ತೀವ್ರ ಸುಧಾರಣೆಗಳನ್ನು ಪ್ರತಿಪಾದಿಸುವ ಅಥವಾ ಸಂಘಟಿಸುವುದು ಅತೀಪ್ರಯಾಸದ ಕೆಲಸವಾಗಿತ್ತು. ಹಿಗ್ಗಿದ್ದಾಗಲೂ ೧೮೭೦ರ ಹೊತ್ತಿಗೆ ಮಹಿಳಾ ಶಿಕ್ಷಣ ಕುರಿತು ಕೆಲವರೇ ಆಸಕ್ತಿ ತೋರಲಾರಂಭಿಸಿದರು. ಅಂಬಳೆ ನರಸಿಂಹ ಅಯ್ಯಂಗಾರ್‌ರವರು ಬಹಳ ಪ್ರಯಾಸಪಟ್ಟು ಹಿಂದೂಗಳ ಸಭೆಯನ್ನು ಕರೆದು ಮೇಲ್ಜಾತಿ ಹೆಣ್ಣುಮಕ್ಕಳ ಶಾಲೆಯೊಂದನ್ನು ತೆರೆಯುವ ಬಗ್ಗೆ ಚರ್ಚಿಸಿದರು. ಆದರೆ ಹೆಚ್ಚಿನ ಬೆಂಬಲ ಸಹಾನುಭೂತಿ ದೊರೆಯಲಿಲ್ಲ. ಇವರ ಈ ಪ್ರಯತ್ನಕ್ಕೆ ಬೆಂಬಲ ದೊರೆತಿದ್ದು ಮಾತೃಶ್ರೀ ಕೆಂಪರಾಜಮ್ಮಣ್ಣಿ ಅವರಿಂದ. ಇವರು ಸ್ತ್ರೀಯರು ಅನುಭವಿಸುವ ಶೋಷಣೆಗೆ ಅನಕ್ಷರತೆಯೇ ಕಾರಣ ಎಂದು, ಶಿಕ್ಷಣದಿಂದ ಅವರಲ್ಲಿರುವ ಅಜ್ಞಾನ ತೊಡೆದುಹಾಕಲು ಪ್ರಯತ್ನಿಸಿದರು. ಈ ನಿಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಮುಖವಾಗಿ ನಾಲ್ಕು ಶಾಲೆಗಳನ್ನು ಹೆಣ್ಣುಮಕ್ಕಳಿಗಾಗಿ ತೆರೆಯಲಾಯಿತು. ಇವು ಮಹಿಳಾ ಶಿಕ್ಷಣದ ಇತಿಹಾಸದಲ್ಲಿ ಮೈಲುಗಲ್ಲುಗಳೆಂದು ಹೇಳಬಹುದು.

೧. ಮಹಾರಾಣಿ ಶಾಲೆ ಮೈಸೂರು.

೨. ಸರ್ಕಾರಿ ಹೆಣ್ಣುಮಕ್ಕಳ ಶಾಲೆ.

೩. ಎಂಪ್ರೆಸ್ ಗರ್ಲ್ಸ್ ಸ್ಕೂಲ್ ತುಮಕೂರು.

ಸಂಸ್ಥಾನದಲ್ಲಿ ಹೆಣ್ಣು ಮಕ್ಕಳ ಶಿಕ್ಷಣ ಕ್ಷೇತ್ರದಲ್ಲಿ ಮೂರು ಶಿಕ್ಷಕಿಯರ ತರಬೇತಿ ಶಾಲೆಗಳು ಪ್ರಾರಂಭವಾಗಿದ್ದು ಒಂದು ಮೈಲುಗಲ್ಲು ಎಂದು ಹೇಳಬಹುದು.

೧. ಮಹಾರಾಣಿ ಶಿಕ್ಷಕಿಯರ ತರಬೇತಿ ಶಾಲೆ ಮೈಸೂರು. (೧೮೮೮)

* ಪ್ರವಾಚಕರು, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ.

೨. ಜೆನಾನ್ ನಾರ್ಮಲ್ ಶಾಲೆ ಮೈಸೂರು ೧೯೧೬ (ಉರ್ದು ಶಿಕ್ಷಕಿಯರಿಗೆ)

೩. ಸೇಕ್ರೆಡ್ ಹಾರ್ಟ್ಸ್ ಹೆಣ್ಣು ಮಕ್ಕಳ ತರಬೇತಿ ಶಾಲೆ, ಬೆಂಗಳೂರು, ೧೯೪೭.

ಮಹಾರಾಣಿ ಶಿಕ್ಷಕಿಯರ ತರಬೇತಿ ಶಾಲೆಯಲ್ಲಿ ೧೯೪೫-೪೬ರಲ್ಲಿ ಶಿಶು ವಿಹಾರ (Pre nursery) ಗಳ ಶಿಕ್ಷಕಿಯರಿಗೆ ತರಬೇತಿಯನ್ನು ಕೊಡುವ ತರಗತಿಯೂ ಪ್ರಾರಂಭವಾಯಿತು.

ಕ್ರಿ.ಶ. ೧೮೮೧ರಲ್ಲಿ ಮಹಾರಾಣಿ ಬಾಲಿಕಾ ಪಾಠಶಾಲೆಯನ್ನು ಪ್ರಾರಂಭಿಸಲಾಯಿತು. ಶಾಲೆಯೂ ಅಸ್ತಿತ್ವಕ್ಕೆ ಬಂದಾಗ ೨೮ ಮಕ್ಕಳು ಪ್ರವೇಶ ಪಡೆದರು. ಈ ಶಾಲೆಯಲ್ಲಿ ದೇಶಿ ಪದ್ಧತಿಗಳಿಗೆ ವಿರುದ್ಧವಾದ ಹಾಗೂ ದೇಶಿಯ ಭಾವನೆಗಳಿಗೆ ಸಮ್ಮತವಾಗದ ಯಾವುದೇ ವಿಷಯವು ಸುಳಿಯುವಂತಿರಲಿಲ್ಲ. ಅಂದು ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವುದು ಮುಖ್ಯ ಉದ್ದೇಶವೆಂದರೆ 'ಹೆಣ್ಣು ಮಕ್ಕಳನ್ನು ನಿಷ್ಠಾವಂತ, ಪ್ರೇಮಮಯಿಯಾದ ಮಡದಿಯರನ್ನಾಗಿ, ಮಮತೆಯ ತಾಯಂದಿರಾಗಿ ಬೆಳೆಯುವಂತೆ ಮಾಡುವುದೇ ಆಗಿತ್ತು. ಇಲ್ಲಿ ಕನ್ನಡ ಮಾಧ್ಯಮದಲ್ಲಿ ಮಾತ್ರ ಪಾಠಗಳನ್ನು ಹೇಳಿ ಕೊಡಲಾಗುತ್ತಿತ್ತು. ಹೀಗಿದ್ದರು ಕೇವಲ ಬಡ ಬ್ರಾಹ್ಮಣರು ಮಾತ್ರ ಹೆಣ್ಣು ಮಕ್ಕಳನ್ನು ಈ ಶಾಲೆಗೆ ಕಳುಹಿಸಿದರೆ ಹೊರತು ಶ್ರೀಮಂತರಲ್ಲ.

ಚಿಕ್ಕ ವಯಸ್ಸಿನಲ್ಲೇ ವಿಧವೆಯರಾದ ಹೆಣ್ಣುಮಕ್ಕಳು ಇತ್ತ ಗಂಡನ ಮನೆಯಲ್ಲಿ ಬದುಕಲಾರದೆ ಅತ್ತ ತವರು ಮನೆಗೆ ಹೋಗಲಾರದೆ ತ್ರಿಶಂಕು ಸ್ಥಿತಿಯಲ್ಲಿ ಜೀವನ ನಡೆಸಬೇಕಾಗಿತ್ತು. ಇಂತಹ ಪರಿಸ್ಥಿತಿಯಲ್ಲಿಯೂ ಹೆಣ್ಣುಮಕ್ಕಳ ಜೀವನವನ್ನು ಸುಧಾರಿಸಲು ಅಂಬಳೆ ನರಸಿಂಹ ಅಯ್ಯಂಗಾರ್‌ರವರು ಮಹಾರಾಣಿ ಕಾಲೇಜಿಗೆ ಹೊಂದಿ ಕೊಂಡಂತೆ ವಿಧವಾ ವಸತಿ ನಿಲಯವನ್ನು ತೆರೆಯಲು ಪ್ರಯತ್ನಿಸಿದಾಗ, ಮೈಸೂರಿನ ಸಂಪ್ರದಾಯ ಸಮಾಜವು ಬೆಂಬಲ ವ್ಯಕ್ತಪಡಿಸ ಲಿಲ್ಲ. ಆದರೂ ಅಂಬಳೆ ನರಸಿಂಹ ಅಯ್ಯಂಗಾರ್‌ರವರು ವಿಧವಾ ವಸತಿ ನಿಲಯವನ್ನು ಸ್ಥಾಪಿಸಿದರು. ಮುಂದೆ ೧೯೧೩ರಲ್ಲಿ ಈ ವಿಧವಾ ಗೃಹವು ಕಾಲೇಜಿನ ವಸತಿ ನಿಲಯವಾಗಿ ಪರಿವರ್ತಿಸಲಾಯಿತು. ಈ ಸ್ತ್ರೀ ಸುಧಾರಣಾ ಕಾರ್ಯದಿಂದ ಅಂಬಳೆ ನರಸಿಂಹ ಅಯ್ಯಂಗಾರ್‌ರವರ ಬಗ್ಗೆ ಇಲ್ಲಸಲ್ಲದ ಅಪವಾದವನ್ನು ಸಹ ಹೊರಿಸಿದರು. ಈ ವಸತಿ ಗೃಹದಲ್ಲಿ ಧಾರ್ಮಿಕ, ನೀತಿಶಾಸ್ತ್ರದ ಜೊತೆಗೆ ಹೊಲಿಗೆ, ಕಟ್ಟಿಂಗ್ ಮುಂತಾದ ವೃತ್ತಿ ತರಬೇತಿ ವಿಷಯಗಳ ಬಗ್ಗೆ ಶಿಕ್ಷಣ ನೀಡಲಾಗುತ್ತಿತ್ತು. ಈ ವಿಧವಾ ಗೃಹದಲ್ಲಿ ಶಿಕ್ಷಣ ಪಡೆದ ವಿಧವೆಯರನ್ನು ಹೆಣ್ಣುಮಕ್ಕಳ ಶಾಲೆಗಳಲ್ಲಿ ಬೋಧಕರನ್ನಾಗಿ ನೇಮಕ ಮಾಡುತ್ತಿದ್ದರು. ಹೀಗೆ ಆರಂಭದ ಪ್ರಯತ್ನಗಳು ಬಹಳ ಪ್ರಯಾಸಕರವಾಗಿದ್ದರೂ ತದನಂತರದ ದಿನಗಳಲ್ಲಿ ಈ ಸಂಪ್ರದಾಯವು ಬದಲಾಗಿ ಸಮಾಜ ಪರಿಸ್ಥಿತಿ ಸ್ವಲ್ಪ ಸುಧಾರಿಸಿ, ಮಹಿಳಾ ಶಿಕ್ಷಣದ ಉದಾರವಾದ ಹೆಜ್ಜೆಗಳು ಇಟ್ಟದ್ದನ್ನು ಗುರ್ತಿಸಬಹುದು. ೧೯೦೨ರಲ್ಲಿ ಮುಸ್ಲಿಂ, ಅಸ್ಪೃಶ್ಯ ಸಮುದಾಯಗಳು ಹೆಣ್ಣುಮಕ್ಕಳು ಯಾವುದೇ ಭೇದಭಾವವಿಲ್ಲದೆ ವಿದ್ಯಾಭ್ಯಾಸ ಮಾಡಬಹುದೆಂದು ಚರ್ಚಿಸಲಾಯಿತು. ಜೊತೆಗೆ ಪ್ರತೀ ವಿದ್ಯಾರ್ಥಿಗೆ ತಲಾ ೩೦ ರೂ.ಗಳ ವಿದ್ಯಾರ್ಥಿ ವೇತನ ನೀಡಬೇಕೆಂದು ಚರ್ಚಿಸ ಲಾಯಿತು.

ಒಡೆಯರ ಮತ್ತು ಆಡಳಿತ ವರ್ಗದವರ ಪ್ರೋತ್ಸಾಹ ಗಳಿಂದ ೧೯೦೦ರಲ್ಲಿ ಮಹಾರಾಣಿ ಶಾಲೆಯು ಪ್ರೌಢಶಾಲೆಯಾಗಿ ೧೯೦೧-೦೨ರಲ್ಲಿ ಮಹಾರಾಣಿ ಕಾಲೇಜ್ ಆಗಿ ಮೇಲ್ದರ್ಜೆಯನ್ನು ಪಡೆಯಿತು. ಈ ಶಾಲೆಯಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿನಿಯರಲ್ಲಿ ಕೆ.ಡಿ. ರುಕ್ಮಿಣಿಯಮ್ಮ, ಶ್ರೀ ರಂಗಮ್ಮ, ಸುಬ್ಬಮ್ಮ ಈ ಮೂರು ಮಂದಿ ವಿದ್ಯಾರ್ಥಿನಿಯರು ಮದ್ರಾಸ್ ವಿಶ್ವವಿದ್ಯಾಲಯದಿಂದ ಪದವಿಯನ್ನು ಪಡೆದರು.

ಸಂಸ್ಥಾನದಲ್ಲಿ ಬಹುತೇಕವಾಗಿ ಹತ್ತು ವರ್ಷದ ಹೆಣ್ಣು ಮಕ್ಕಳು ಶಾಲೆಯನ್ನು ಬಿಡುತ್ತಿದ್ದರು. ಇದರಿಂದಾಗಿ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆಯಾಗುತ್ತ ಬಂದಿತ್ತು. ಆಗ ಒಡೆಯರು ಹೆಣ್ಣು ಮಕ್ಕಳ ಗಮನ ಸೆಳೆಯಲು ಹಲವು ರೀತಿಯಲ್ಲಿ ಪ್ರಯತ್ನಿಸಿದರು. ೧೯೦೨-೦೩ರ ಅವಧಿಯಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಸುಧಾರಣೆಗಳನ್ನು ಜಾರಿಗೆ ತಂದರು. ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಾಲೆಗಳನ್ನು ತೆರೆದರು. ಎಲ್ಲ ವಿದ್ಯಾರ್ಥಿಗಳಿಗೂ ಶುಲ್ಕ ವಿನಾಯತಿಯನ್ನು ನೀಡಿದರು. ವಿಶೇಷವಾಗಿ ಮಹಿಳೆಯ ಮುಂದಿನ ಭವಿಷ್ಯಕ್ಕಾಗಿ ಗೃಹವಿಜ್ಞಾನ, ಚಿತ್ರಕಲೆಗಳಲ್ಲಿ ಶಿಕ್ಷಣ ನೀಡುವುದನ್ನು ಜಾರಿಗೆ ತರಲಾಯಿತು. ಮಹಿಳಾ ಕಾಲೇಜುಗಳಲ್ಲಿ ಬಾಲಕಿಯರಿಗೆ ಪ್ರತ್ಯೇಕ ಕೊಠಡಿ, ಶೌಚಗೃಹಗಳನ್ನು ಕಡ್ಡಾಯವಾಗಿ ವ್ಯವಸ್ಥೆ ಮಾಡಲು ಆಜ್ಞೆ ಹೊರಡಿಸಿದರು. ಜೊತೆಗೆ ಮಹಿಳೆಯರಿಗೆ ಪ್ರತ್ಯೇಕ ವಸತಿ ವ್ಯವಸ್ಥೆಯನ್ನು ಮಾಡಿದರು.

೧೯೦೭ರಲ್ಲಿ ಪ್ರಾಥಮಿಕ ಶಾಲೆ ಶುಲ್ಕವನ್ನು ರದ್ದು ಮಾಡಿದರು. ೧೯೯ರಲ್ಲಿ ಕಡ್ಡಾಯ ಶಿಕ್ಷಣ ಯೋಜನೆಯನ್ನು ಜಾರಿಗೆ ತಂದರು. ಈ ಯೋಜನೆಯಡಿಯಲ್ಲಿ ಪಂಚಮರಿಗೂ ಸಹ ಶಾಲೆಗಳನ್ನು ತೆರೆಯುವ ವ್ಯವಸ್ಥೆ ಮಾಡಿದರು.

ಸಂಸ್ಥಾನದಲ್ಲಿ ೧೯೧೨-೧೩ರ ಅವಧಿಗೆ ವಿದ್ಯಾರ್ಥಿನಿ ಯರ ಶೇಕಡವಾರು ಪ್ರಮಾಣ ೪-೬ ಇದ್ದು ೧೯೧೭ಕ್ಕೆ ೧೪-೨೦ರ ಪ್ರಮಾಣಕ್ಕೇರಿತು. ೧೯೧೫ರ ವೇಳೆಗೆ ೮೩ ಗ್ರಾಮಗಳಲ್ಲಿ ಪ್ರತ್ಯೇಕ ಮಹಿಳಾ ಶಾಲೆಗಳಿದ್ದವು. ಕಾಲೇಜು

ಮಟ್ಟದಲ್ಲಿ ೧೬ ವಿದ್ಯಾರ್ಥಿನಿಯರು, ಪ್ರೌಢಶಾಲೆಗಳಲ್ಲಿ ೧೧,೦೫೯ ವಿದ್ಯಾರ್ಥಿನಿಯರು, ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನು ೨೮,೪೩೦ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದರು. ೧೯೧೬ರಲ್ಲಿ ಮೈಸೂರು ಸಂಸ್ಥಾನದ ಶಿಕ್ಷಣದ ಇತಿಹಾಸದಲ್ಲಿ ಮತ್ತೊಂದು ಮೈಲುಗಲ್ಲು ಎಂದರೆ ಮೈಸೂರು ವಿಶ್ವವಿದ್ಯಾಲಯ ಸ್ಥಾಪನೆ ತದ ನಂತರ ಮೈಸೂರು, ಬೆಂಗಳೂರು ನಗರಗಳಲ್ಲಿ ಹಲವಾರು ಶಾಲೆಗಳನ್ನು ತೆರೆದರು; ಸ್ತ್ರೀ ಪುರುಷರಿಬ್ಬರಿಗೂ ವೃತ್ತಿಪರ ಶಿಕ್ಷಣ ನೀಡಲು ಮುಂದಾದರು. ಸಾಮಾನ್ಯವಾಗಿ ಈ ಎಲ್ಲಾ ಸ್ಥಳಗಳಲ್ಲಿ ಹೆಣ್ಣು ಮಕ್ಕಳ ಶಾಲೆಗಳು ಹೈಸ್ಕೂಲ್ ಕಾಲೇಜುಗಳಾಗಿ ಮೇಲ್ದರ್ಜೆಯ ಉನ್ನತಿಯನ್ನು (Upgrade) ಪಡೆಯುವಂತೆ ಶಿಕ್ಷಣ ಪ್ರಸಾರ ಮಾಡಲಾಯಿತು.

೧೯೧೮ರ ವೇಳೆಗೆ ೨೪,೦೦೦ ಹೆಣ್ಣು ಮಕ್ಕಳು ಶಾಲೆಗಳಲ್ಲಿ ಓದುತ್ತಿದ್ದರು. ೧೯೨೨ರ ಪಠ್ಯ ವಿಷಯಗಳು ಸುಧಾರಣೆಗೊಂಡು, ಗೃಹವಿಜ್ಞಾನ, ಸಂಗೀತ, ಹೊಲಿಗೆ, ಕಸೂತಿ, ಚಿತ್ರಕಲೆ ರೋಗಿಗಳ ಶುಶ್ರೂಷೆ ವಿಷಯಗಳನ್ನು ಸೇರಿಸಲಾಯಿತು. ಗೃಹವಿಜ್ಞಾನ ತರಬೇತಿಯನ್ನು ಪಡೆಯಲು ಡೆಲ್ಲಿಯ ಲೇಡಿ ಇರ್ವಿನ್ ಕಾಲೇಜ್‌ಗೆ ಕಳುಹಿಸುವ ವ್ಯವಸ್ಥೆ ಮಾಡಲಾಯಿತು. ಮುಂದೆ ಹೈಸ್ಕೂಲ್‌ನಲ್ಲಿ ಗೃಹವಿಜ್ಞಾನವನ್ನು ಐಚ್ಛಿಕ ವಿಷಯವನ್ನಾಗಿ ಪರಿಚಯಿಸಲಾಯಿತು. ಸಂಸ್ಥಾನದ ಜಿಲ್ಲೆಯಾದ ತುಮಕೂರಿನಲ್ಲಿ ೧೮೮೭ರಲ್ಲಿ ಎಂಪ್ರೆಸ್ ಗರ್ಲ್ಸ್ ಮಿಡಲ್ಸ್ ಸ್ಕೂಲ್ ಪ್ರಾರಂಭವಾಗಿ ನಂತರ ಈ ಶಾಲೆಯೂ ೧೯೧೩ರಲ್ಲಿ ಹೈಸ್ಕೂಲ್ ಆಗಿ ಮತ್ತು ೧೯೨೨-೨೩ರಲ್ಲಿ ಕಾಲೇಜಾಗಿ ಮೇಲ್ದರ್ಜೆಯನ್ನು ಪಡೆದು ಜಿಲ್ಲೆಯ ಹೆಣ್ಣು ಮಕ್ಕಳ ಶಿಕ್ಷಣದಲ್ಲಿ ಮಹತ್ವದ ಪಾತ್ರವನ್ನು ವಹಿಸಿದೆ. ಸ್ವಾತಂತ್ರ್ಯಾ ನಂತರ ಜಿಲ್ಲೆಯ ತಿಪಟೂರು, ಶಿರಾ, ಗುಬ್ಬಿ ಪಾವಗಡ, ಮಧುಗಿರಿ ಮತ್ತು ಕೊರಟಗೆರೆಗಳಲ್ಲಿ ಹೆಣ್ಣು ಮಕ್ಕಳ ಶಾಲೆಗಳು ಪ್ರಾರಂಭವಾದವು.

ಸರ್. ಎಂ. ವಿಶ್ವೇಶ್ವರಯ್ಯ ಮತ್ತು ಮಿರ್ಜಾ ಇಸ್ಮಾಯಿಲ್ ರವರ ಆಡಳಿತಾವಧಿಯಲ್ಲಿ ಬಡ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಸ್ನಾತಕೋತ್ತರ ಶಿಕ್ಷಣದವರೆಗೂ ವಿದ್ಯಾರ್ಥಿ ವೇತನ ಯೋಜನೆಯನ್ನು ವಿಸ್ತರಿಸಿದರು. ಜೊತೆಗೆ ಈ ರೀತಿಯ ಸೌಲಭ್ಯಗಳನ್ನು ಸರ್ಕಾರಿ ಅನುದಾನಿತ ಶಾಲೆಗಳಿಗೂ ಅನ್ವಯವಾಗುವಂತೆ ಮಾಡಿದರು. ಆಯಾ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಮಿತಿಗಳನ್ನು ರಚಿಸಲಾಯಿತು. ಈ ಸಮಿತಿಗಳ ತರಬೇತಿ ಶಾಲೆಗಳನ್ನು ತೆರೆಯಲಾಯಿತು. ಮೈಸೂರು ಮತ್ತು ಬೆಂಗಳೂರುಗಳಲ್ಲಿ ಮೆಡಿಕಲ್ ಕಾಲೇಜುಗಳು ಪ್ರಾರಂಭವಾಗಿ ವೈದ್ಯಕೀಯ ಶಿಕ್ಷಣದ ಪ್ರಗತಿಯ ಸೂಚನೆಗಳು ಕಂಡುಬಂದವು.

೧೯೩೧-೩೨ರಲ್ಲಿ ೫೨೩ ಪ್ರೌಢಶಾಲೆಗಳಿದ್ದು ೩೧,೯೭ ವಿದ್ಯಾರ್ಥಿನಿಯರು, ೩೦ ಮಾಧ್ಯಮಿಕ ಶಾಲೆಗಳಲ್ಲಿ ೩೮೩ ವಿದ್ಯಾರ್ಥಿಯರು ೨ ಕಾಲೇಜುಗಳಲ್ಲಿ ೮೧ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದರು. ಅದೇ ರೀತಿ ೪೪-೪೫ರಲ್ಲಿ ೫೦೩ ಪ್ರೌಢಶಾಲೆಗಳಲ್ಲಿ ೪೫,೬೫೮ ವಿದ್ಯಾರ್ಥಿನಿಯರು ೭೯ ಮಾಧ್ಯಮಿಕ ಶಾಲೆಗಳಲ್ಲಿ ೧೧,೫೨೨ ವಿದ್ಯಾರ್ಥಿನಿಯರು, ೧೯ ಪ್ರೌಢಶಾಲೆಗಳಲ್ಲಿ ೨,೨೭೦ ವಿದ್ಯಾರ್ಥಿನಿಯರು, ೩ ಕಾಲೇಜುಗಳಿದ್ದು ೫೬೦ ಮಂದಿ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದರು.

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದ ಮತ್ತೊಂದು ಸ್ತ್ರೀ ಸುಧಾರಣಾ ಕಾರ್ಯವೆಂದರೆ Mysore widow marriage act ನ್ನು ಜಾರಿಗೊಳಿಸಿದ್ದು ಇದು ಶತಶತಮಾನಗಳಿಂದ ಶೋಷಣೆಗೆ ಒಳಗಾಗಿದ್ದ ವಿಧವೆಯರ ಮತ್ತು ಹೆಣ್ಣುಮಕ್ಕಳ ಕಲ್ಯಾಣಕ್ಕೆ ಸಹಾಯಕವಾಯಿತು. ಸರ್ಕಾರವು ಸಹ ವಿಧವಾ ಗೃಹಗಳನ್ನು ತೆರೆಯಲು, ಆರ್ಥಿಕ ನೆರವು ನೀಡಲು ಮುಂದೆ ಬಂದಿತು. ಇದರಿಂದ ಗ್ರಾಮೀಣ ಪ್ರದೇಶದಿಂದ ಹೆಣ್ಣು ಮಕ್ಕಳು ತಮ್ಮ ಜೀವನೋಪಾಯಕ್ಕಾಗಿ ನಗರಗಳಿಗೆ ಬಂದು ವಿಧವಾ ಗೃಹಗಳಲ್ಲಿ ಆಶ್ರಯ ಪಡೆದು ಶಿಕ್ಷಣ ಕಲಿಯುವಂತೆ ಅನುಕೂಲವಾಯಿತು. ಒಟ್ಟಿನಲ್ಲಿ ಒಡೆಯರ ಕಾಲದಲ್ಲಿ ದಲಿತ ಮತ್ತು ಸ್ತ್ರೀವರ್ಗವು ಸಾಮಾಜಿಕ ಮತ್ತು ಶೈಕ್ಷಣಿಕ ಮತ್ತು ಬೌದ್ಧಿಕವಾಗಿ ಅರುಣೋದಯ ಪಡೆಯಿತೆಂದು ಹೇಳಬಹುದು.

## ಆಧಾರಸೂಚಿ


೧. ಎಂ. ಜಮುನ, *'ಸೋಷಿಯಲ್ ಚೇಂಜ್ ಇನ್ ಮೈಸೂರು ವಿತ್ ಸ್ಪೆಷಲ್ ರೆಫರೆನ್ಸ್ ಟು ವಿಮೆನ್'* ೧೮೮೦–೧೯೪೭, ಬೆಂಗಳೂರು ವಿಶ್ವವಿದ್ಯಾಲಯ.

೨. **ಲೋಕೇಶ್, ತುಮಕೂರು ಜಿಲ್ಲಾ ಸಾಂಸ್ಕೃತಿಕ ಇತಿಹಾಸ ಒಂದು ಅಧ್ಯಯನ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩. **ಸಾಮ್ರಾಜ್ಞಿ,** ಎಂಪ್ರೆಸ್ ಅಮೃತ ಮಹೋತ್ಸವ ಸಂಚಿಕೆ.

೪. ಪ್ರೊಸಿಡಿಂಗ್ಸ್ ಆಫ್ ಎಂ.ಆರ್.ಎ.

೫. ಮೈಸೂರು ಎಜುಕೇಷನ್ ಮ್ಯಾನುಯಲ್ ೧೯೧೬.

೬ ಮೈಸೂರು ಎಲಿಮೆಂಟರಿ ಎಜುಕೇಷನ್ ಆಕ್ಟ್ ೧೯೩೦.

೭. **ತುಮಕೂರು ಜಿಲ್ಲಾ ಗ್ಯಾಸೆಟಿಯರ್,** ಅಭಿಶಂಕರ್ (ಸಂ), ಬೆಂಗಳೂರು, ೧೯೬೯.

೮. ಚಂದ್ರಶೇಖರ್ ಎಸ್., **ವಸಾಹತುಶಾಹಿ ಕಾಲೀನ ಕರ್ನಾಟಕ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೭.

೯. ಚಿನ್ನಸ್ವಾಮಿ ಸೋಸಲೆ, **ನಾಲ್ವಡಿ ಕೃಷ್ಣನ ಮೈಸೂರು,** (ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿ ನೆಲೆಯಿದೆ ಅಧ್ಯಯನ) ೧೯೦೨–೧೯೪೦, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೧೦. ಅಯ್ಯಪ್ಪಗೌಡ ಡಿ.ಎಸ್., **ದಿವಾನ್ ಸರ್. ಎಂ. ವಿಶ್ವೇಶ್ವರಯ್ಯನವರ ಕಾರ್ಯಸಾಧನೆಗಳು.**

೧೧. ದಿವಾಕರ್ ಆರ್.ಆರ್., **ಕರ್ನಾಟಕ ಪರಂಪರೆ,** ಬೆಂಗಳೂರು.

೧೨. ಭಾಸ್ಕರಪ್ಪ ಸಿ.ಎನ್., ತುಮಕೂರು ಜಿಲ್ಲಾ ದರ್ಶನ, ತುಮಕೂರು, ೧೯೮೧.

೧೩. ಎಂ.ಬಿ. ಕೃಷ್ಣರಾವ್ ಮತ್ತು ಕೇಶವರಾವ್, **ಕರ್ನಾಟಕ ಇತಿಹಾಸ ದರ್ಶನ.**

೧೪. *ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್,* (ಸಂ.) ಸೂರ್ಯನಾಥ ಕಾಮತ್, ಸಂಪುಟ ೧, ೨, ೩, ಬೆಂಗಳೂರು, ೧೯೧೪.

೧೫. ಗಜಾನನ ಶರ್ಮ (ಅನು), **ನನ್ನ ವೃತ್ತಿ ಜೀವನದ ನೆನಪುಗಳು,** ಬೆಂಗಳೂರು, ೨೦೦೫.

ಡಾ. ಎಂ. ಗೋವಿಂದಪ್ಪ*

# ಕೆ.ಜಿ.ಎಫ್. ಸುವರ್ಣಗರ್ಭ ಅಂದು – ಇಂದು

೧೯ನೇ ಶತಮಾನದ ಪೂರ್ವಾರ್ಧದಲ್ಲಿ ವಿಶ್ವದ ಭೂಪಟದಲ್ಲಿ ತನ್ನನ್ನು ಸುವರ್ಣಾಕ್ಷರಗಳಲ್ಲಿ ಗುರುತಿಸಿಕೊಂಡ ಕರ್ನಾಟಕ ಸುವರ್ಣ ಭೂಮಿ ಕೋಲಾರದ ಚಿನ್ನದ ಗಣಿಪ್ರದೇಶ. ಇದನ್ನು ಕೆ.ಜಿ.ಎಫ್. ಎಂದೇ ಕರೆಯಲಾಗಿದೆ. ಇದು ಚಿನ್ನಕ್ಕೆ ಮಾತ್ರ ಹೆಸರುವಾಸಿಯಾಗಿರದೆ, ರೇಷ್ಮೆ, ಹೈನುಗಾರಿಕೆ, ತರಕಾರಿ ಮುಂತಾದ ವಾಣಿಜ್ಯ ಬೆಳೆಗಳಿಗೂ ಹೆಸರುವಾಸಿಯಾದ ನಾಡಾಗಿದೆ, ಇಂತಹ ಜಿಲ್ಲೆಯ ಖ್ಯಾತಿಗೆ ಹೆಸರುವಾಸಿಯಾದ ಸ್ವಾತಂತ್ರ್ಯ ಪೂರ್ವದಲ್ಲಿ ಖಾಸಗಿ ಬಂಡವಾಳವನ್ನಾಕರ್ಷಿಸಿ ಪ್ರಾರಂಭಗೊಂಡ ಬೃಹತ್ ಮಾಧ್ಯಮದ ನೂರಾಇಪ್ಪತ್ತು ವರ್ಷಗಳ ಇತಿಹಾಸ ಉಳ್ಳದ್ದೆ ಕೋಲಾರ ಗೋಲ್ಡ್ ಫೀಲ್ಡ್– ಇಂದು ಇದರ ಇತಿಹಾಸ ಕಮರಿ ಹೋಗುತ್ತಿದೆ, ಮರುಳುಗಾಡಿನಲ್ಲಿರುವ ನೀರಿನ ಚಿಮಣಿಯಂತಾಗಿದೆ, ತನ್ನ ಸುವರ್ಣ ಗರ್ಭದೊಳಗೆ ಇದ್ದುದ್ದನ್ನೆಲ್ಲಾ ಹೊರಹಾಕಿ ಇಂದು ಬಡವಾಗಿದೆ. ವಿಶ್ವದ ಎಲ್ಲೆಡೆ ಜನರು ಕಂಪ್ಯೂಟರ್ ವಿಜ್ಞಾನದ ಬಗ್ಗೆ ಮಾತನಾಡುತ್ತಿರುವಾಗ ಇಲ್ಲಿನ ಚಿನ್ನದ ಗಣಿಗಳು ಹಾಗೂ ಅವುಗಳ ಗರ್ಭದೊಳಗೆ ಜೀವನ ಕಳೆದ ನೌಕರರು ತಮ್ಮ ಭವಿಷ್ಯದ ಶೂನ್ಯತೆಯಿಂದ ಭ್ರಮನಿರಸರಾಗಿದ್ದಾರೆ. ದೇಶದ ನಾನಾ ಭಾಗಗಳಿಂದ ಕೂಲಿಗಾರರಂತೆ ಕೆಲಸಕ್ಕೆ ಬಂದ ಸಾವಿರಾರು ಜನರು ಬಡತನದ ಬೇಗೆಯಲ್ಲಿ ಬೆಂದು, ನೊಂದು ಇಂದು ಕ್ರಿಮಿನಲ್‌ಗಳಂತೆ ವರ್ತಿಸುವ ಕಾಲ ಸನ್ನಿತವಾಗಿದೆ. ದುಡಿಯುವ ಕೈಗೆ ಕೆಲಸವಿಲ್ಲದೆ ಸಾವಿರಾರು ಯುವಕರು ಪ್ರತಿ ದಿವಸ ತಮ್ಮ ಪದವಿ, ಅಂತಸ್ತು ಎಲ್ಲವನ್ನು ಮರೆತು ಅತ್ಯಲ್ಪ ಹಣಕ್ಕಾಗಿ ದೂರದ ಪಟ್ಟಣಗಳಿಗೆ ವಲಸೆ ಹೋಗುವ ಸ್ಥಿತಿ ನಿರ್ಮಾಣವಾಗಿದೆ.

ನೈಸರ್ಗಿಕ ಸಂಪನ್ಮೂಲಗಳಿಗೆ ಕರ್ನಾಟಕ ಹೆಸರುವಾಸಿಯಾದ ನಾಡು. ಮೈಸೂರು ಮಲ್ಲಿಗೆ, ಶ್ರೀಗಂಧ, ಚಿನ್ನ, ರೇಷ್ಮೆ, ಹೈನುಗಾರಿಕೆ ಮುಂತಾದವುಗಳಿಗೆ ತವರೂರಾಗಿದೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕರ್ನಾಟಕದ ಸ್ವಾಭಾವಿಕ ಸಂಪನ್ಮೂಲಗಳ ಬಗ್ಗೆ ಹಲವಾರು ಕಾವ್ಯಗಳು, ಕವಿತೆಗಳು ರಚನೆಯಾಗಿವೆ. ಇಂತಹ ಪವಿತ್ರವಾದ ನಾಡಿನ ಇತಿಹಾಸವನ್ನು ಜಗತ್ತಿಗೆ ಪರಿಚಯಿಸಿದ ಬ್ರಿಟಿಷ್ ವಸಾಹತು ಶಾಹಿ ಖಾಸಗಿ ಉದ್ದಿಮೆ ಕೋಲಾರದ ಚಿನ್ನದ ಗಣಿಗಳು.

## ಚಿನ್ನದ ಪ್ರಾಚೀನತೆ

ಐತಿಹಾಸಿಕ ನಿದರ್ಶನಗಳ ಪ್ರಕಾರ ಮಾನವನಿಗೆ ಪ್ರಥಮವಾಗಿ ಗೋಚರಿಸಿದ ಖನಿಜ ಚಿನ್ನ ನಂತರ ತಾಮ್ರ ಇತ್ಯಾದಿ. ಭಾರತದಲ್ಲಿ ವೇದಗಳ ಕಾಲದಿಂದಲೂ ಚಿನ್ನದ ಬಳಕೆಯ ಬಗ್ಗೆ ನಿದರ್ಶನಗಳು ದೊರೆತಿವೆ. ಮೋಹಕ ಬಣ್ಣವನ್ನು ಹೊಂದಿದ್ದು ಮೃದುವಾದ ಖನಿಜವಿದ್ದು ಇದರ ವ್ಯಾಮೋಹದಿಂದಲೇ ೧೪೯೨ರಲ್ಲಿ ಕೊಲಂಬಸ್ ಭಾರತ ಮತ್ತು ಚೀನಾ ದೇಶಗಳಿಗೆ ಜಲಮಾರ್ಗಗಳನ್ನು ಕಂಡುಹಿಡಿಯಲು ಪ್ರಯತ್ನಿಸಿ ಕೊನೆಗೆ ಪಾದಾರ್ಪಣೆ ಮಾಡಿದ್ದು, ಅಮೇರಿಕಾದಲ್ಲಿ ಭಾರತೀಯ ಗ್ರೀಕ್ ಮತ್ತು ರೋಮನ್ ಸಾಹಿತ್ಯದಲ್ಲಿ ಇಲ್ಲಿ ದೊರೆಯುತ್ತಿದ್ದ ಚಿನ್ನದ ಬಗ್ಗೆ ಮಾಹಿತಿಗಳು ದೊರೆತಿವೆ. ಕ್ರಿ.ಶ. ೭೭ರಲ್ಲಿ ರೋಮನ್ ಇತಿಹಾಸಜ್ಞ, ಪ್ಲಿನಿ, ಭಾರತದ ಮೌಟ್ ಅಬು ಪರ್ವತದ ತಪ್ಪಲಿನ ಭೂಭಾಗಗಳಲ್ಲಿ ಚಿನ್ನ ಮತ್ತು ಬೆಳ್ಳಿ ದೊರೆಯುತ್ತದೆ ಎಂಬ ಸೂಕ್ಷ್ಮತೆಯನ್ನು ಪರಿಚಯಿಸಿ ಇದನ್ನು ನಾಯರ್ ಎಂಬ ಜನಾಂಗ ತೆಗೆಯುತ್ತಿದ್ದರೆಂಬುದನ್ನು ತಿಳಿದು ಇದನ್ನು ನರಯಿ ಎಂದು ಕರೆದ ಎಂಬ ಚಾರಿತ್ರಿಕ ದಾಖಲೆಗಳು ಲಭ್ಯವಿದೆ[೧] ಇಲ್ಲಿ ದೊರೆತ ಚಿನ್ನದ ಗುಣಮಟ್ಟ ಕಡಿಮೆ ಇದ್ದುದ್ದರಿಂದ, ದಿನಕಳೆದಂತೆ ಬೇಡಿಕೆಯೂ ಹೆಚ್ಚಿದ್ದರಿಂದ ದಕ್ಷಿಣ ಭಾರತದ ನಿಕ್ಷೇಪಗಳ ಕಡೆ ಪ್ರಾಚೀನ ಭಾರತೀಯರ ಅನ್ವೇಷಣೆ ಪ್ರಾರಂಭವಾಯಿತು.

## ಆಧುನಿಕ ಗಣಿಗಾರಿಕೆ

೧೮೦೨ರಲ್ಲಿ ಬ್ರಿಟಿಷ್ ಸರ್ಕಾರದ ಮದ್ರಾಸಿನ ಮಿಲಿಟರಿ ಸೇವೆಯಲ್ಲಿದ್ದ ಅಧಿಕಾರಿ ಜಾನ್ ವ್ಯಾರೆನ್ ದಕ್ಷಿಣ ಭಾರತದ ಮೈಸೂರು ರಾಜ್ಯದ ಕೋಲಾರ ಚಿನ್ನದ ನಿಕ್ಷೇಪವನ್ನು ಪತ್ತೆ ಹಚ್ಚಿ "ಏಷಿಯಾಟಿಕ್" ಜನರಲ್ ಎಂಬ ಪತ್ರಿಕೆಯಲ್ಲಿ ಪ್ರಕಟಿಸಿದನು[೨]. ಅಲ್ಲದೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಗೂ ತಿಳಿಸಿದನು. ಈ ಹೊತ್ತಿಗೆ ಸರಿಯಾಗಿ ವಿಜಯನಗರ ಕಾಲದಿಂದಲೂ ಹೊರತೆಗೆಯುತ್ತಿದ್ದ ಚಿನ್ನದ

* ಅಸೋಸಿಯೇಟ್ ಪ್ರೊಫೆಸರ್, ಇತಿಹಾಸವ ವಿಭಾಗ, ರೂರಲ್ ಕಾಲೇಜು, ಕನಕಪುರ.

ನಿಕ್ಷೇಪಗಳು ಕಮರಿ ಹೋಗಿದ್ದವು. ಟಿಪ್ಪುವಿನ ಕಾಲದಲ್ಲಿ ನಡೆದ ಎಲ್ಲ ಪ್ರಯತ್ನಗಳು ವಿಫಲವಾಗಿ ಭೂಗರ್ಭದ ಚಿನ್ನದಿಂದ ಭ್ರಮನಿರಸನ ಹೊಂದಿದ್ದರು. ೧೮೭೧ರಲ್ಲಿ ಮತ್ತೊಬ್ಬ ಐರ್‌ಲ್ಯಾಂಡಿನ ಸಿಪಾಯಿ ನ್ಯೂಜಿಲ್ಯಾಂಡಿನ ಗಣಿ ಉದ್ಯಮದ ಬಗ್ಗೆ ಅಪಾರ ಜ್ಞಾನವನ್ನು ಪಡೆದಿದ್ದ ಎಫ್.ಎಮ್. ಲ್ಯಾವೆಲಿ ಎಂಬುವನು ಈ ಚಿನ್ನದ ನಿಕ್ಷೇಪದ ಬಗ್ಗೆ ಆಸಕ್ತಿಯನ್ನು ವಹಿಸಿ ಅಂದಿನ ಮೈಸೂರಿನ ಕಮೀಷನರ್‌ರವರಿಂದ ಪರವಾನಗಿ ಪಡೆದು ಚಿನ್ನದ ಶೋಧನೆ ಆರಂಭಿಸಿದನು[೩] ಗಣಿ ಉದ್ಯಮ ನಿಗೂಢತೆಯನ್ನು ಹೊಂದಿರುವುದರಿಂದ ಅವನ ಪ್ರಯತ್ನಗಳೂ ವಿಫಲಗೊಂಡವು. ನಷ್ಟವನ್ನು ಅನುಭವಿಸಿದ ಇಂಗ್ಲೆಂಡಿನ ಜಂಟಿ ಬಂಡವಾಳದಾರರು ಈ ಉದ್ಯಮಕ್ಕೆ ಬೀಗ ಮುದ್ರೆಯನ್ನು ಹಾಕಿ ಉಳಿದ ಹಣವನ್ನು ಹಂಚಿಕೊಳ್ಳುವ ಹುನ್ನಾರದಲ್ಲಿದ್ದ, ಸಂದರ್ಭದಲ್ಲಿ ದಕ್ಷಿಣ ಆಫ್ರಿಕಾ, ಕ್ಯಾಲಿಫೋರ್ನಿಯಾ (೧೮೪೮) ಆಸ್ಟ್ರೇಲಿಯ (೧೮೫೧) ದೇಶಗಳಲ್ಲಿ ಹೆಸರುವಾಸಿಯಾಗಿ ಗಣಿ ಉದ್ಯಮವನ್ನು ನಿರ್ವಹಿಸುತ್ತಿದ್ದ ಜಾನ್ ಟೇಲರ್ ಅಂಡ್ ಸನ್ಸ್ ಖಾಸಗಿ ಗಣಿ ಉದ್ಯಮಕ್ಕೆ ಆಮಂತ್ರಣವನ್ನು ನೀಡಲಾಯಿತು[೪]. ೧೮೮೦ರಲ್ಲಿ ಮೈಸೂರಿಗೆ ಬಂದ ಈ ಕಂಪನಿ ಹತ್ತನೇ ಚಾಮರಾಜ ಒಡೆಯರ್ ಮತ್ತು ಅಂದಿನ ದಿವಾನರಾದ ರಂಗಾಚಾರ್ಲುರವರೊಡನೆ ೧೮೮೧ರಂದು ಒಪ್ಪಂದ ಮಾಡಿಕೊಂಡು ಶೇ. ೫ರಷ್ಟು ಚಿನ್ನದ ಬೆಲೆಯನ್ನು ಸರ್ಕಾರಕ್ಕೆ ರಾಜಧನವಾಗಿ ಸಂದಾಯ ಮಾಡುವ ಒಪ್ಪಂದಕ್ಕೆ ಸಹಿ ಹಾಕಿ ವೈಜ್ಞಾನಿಕ ಗಣಿ ಉದ್ಯಮವನ್ನು ಆರಂಭಿಸುವ ಅವಕಾಶವನ್ನು ಪಡೆದರು.

ಯೂರೋಪಿನ ಜಾನ್ ಟೇಲರ್ ಅಂಡ್ ಸನ್ಸ್ ಗಣಿ ಉದ್ಯಮಕ್ಕೆ ಸೇರಿದ ಮುಖ್ಯ ಇಂಜಿನಿಯರ್‌ರವರಾದ ಕ್ಯಾಪ್ಟನ್ ಬಿ.ಡಿ. ಪ್ಲಂಬರ್‌ರವರು ೧೮೮೧ ಮೇ ತಿಂಗಳಿನಲ್ಲಿ ಮದ್ರಾಸ್ ವಿಮಾನ ನಿಲ್ದಾಣಕ್ಕೆ ಇಂಗ್ಲೆಂಡಿನಿಂದ ಬಂದು, ನೇರವಾಗಿ ಕೋಲಾರದ ಚಿನ್ನದ ಗಣಿ ಪ್ರದೇಶಕ್ಕೆ ಭೇಟಿ ನೀಡಿದರು. ಅವರ ಪ್ರಕಾರ ಚಿನ್ನದ ಗಣಿ ಪ್ರದೇಶ ಒಂದು ಬರಡು ಭೂಮಿ, ಅಲ್ಲಿ ಹುರಳಿ ರಾಗಿ ಮತ್ತು ಹಲವು ದ್ವಿದಳ ಧಾನ್ಯಗಳನ್ನು ಬೆಳೆಯುತ್ತಿದ್ದರು[೫]. ಈ ಪ್ರದೇಶ ಭೌಗೋಳಿಕವಾಗಿ ಏರು ಪೇರುಗಳನ್ನು ಒಳಗೊಂಡಿದ್ದು, ದೊಡ್ಡ ದೊಡ್ಡ ಪೊದೆಗಳಿಂದ ಆವೃತವಾಗಿತ್ತು ಎಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾನೆ. ತದನಂತರ ಅಲ್ಲಿನ ಪ್ರದೇಶವನ್ನು ಶುಚಿಗೊಳಿಸಿ ತನ್ನ ಕಾರ್ಯವನ್ನು ಆರಂಭಿಸಿದನು. ಪ್ರಥಮ ಹಂತದಲ್ಲಿ ಅವನಿಗೆ ನಿರಾಸೆಯಾಯಿತು. ತಾನು ತನ್ನ ಕಾರ್ಯವನ್ನು ಅಲ್ಲಿಗೆ ನಿಲ್ಲಿಸಿ ಇಂಗ್ಲೆಂಡಿಗೆ ಹಿಂತಿರುಗುವ ಪ್ರಯತ್ನದಲ್ಲಿದ್ದನು. ಇದೇ ಸಂದರ್ಭಕ್ಕೆ ಚಾಂಪಿಯನ್ ಗಣಿ ಪ್ರದೇಶದಲ್ಲಿ ಉತ್ತಮವಾದ ಚಿನ್ನದ ನಿಕ್ಷೇಪ ದೊರೆಯುವ ಸೂಚನೆ ಕಂಡ ನಂತರ ಮರು ಪ್ರಯತ್ನವನ್ನು ನಡೆಸಿ ಯಶಸ್ಸನ್ನು ಕಂಡನು. ತದನಂತರ ಇಂಗ್ಲೆಂಡಿನ ಮಾರುಕಟ್ಟೆಯಲ್ಲಿ ಗಣಿ ಉದ್ಯಮ ನಡೆಸಲು ಷೇರು ಬಂಡವಾಳವನ್ನು ಶೇಖರಿಸಿ ಉತ್ತಮವಾದ ಯಂತ್ರೋಪಕರಣಗಳನ್ನು ಅಳವಡಿಸಿ, ತಾಂತ್ರಿಕವಾಗಿ ಅರ್ಹತೆ ಹೊಂದಿದ ಇಂಜಿನಿಯರ್‌ಗಳನ್ನು ನೇಮಕ ಮಾಡಿ ಆಧುನಿಕ ಮಾದರಿಯ ಶೋಧನೆಯನ್ನು ಆರಂಭಿಸಿದನು. ಪರಿಣಾಮವಾಗಿ ಗಣಿ ಉದ್ಯಮ ಉತ್ತಮವಾದ ಭವಿಷ್ಯವನ್ನು ಕಂಡಿತು.

**ಹೊಸ ಪ್ರಪಂಚದ ನೋಟ**

ಭೂಗರ್ಭದ ಹೊಸ ಪ್ರಪಂಚವು ತೆರೆದಿಡಲ್ಪಟ್ಟಿದ್ದು ದೊಡ್ಡ ದೊಡ್ಡ ಸುರಂಗಗಳನ್ನು ನಿರ್ಮಿಸಿ ಯಂತ್ರಗಳನ್ನು ಅಳವಡಿಸಿ, ವಿದ್ಯುತ್ ಶಕ್ತಿಯ ಸಹಾಯದಿಂದ ಪಾತಾಳದ ಜಲವನ್ನು ಹಲವಾರು ಹಂತಗಳಲ್ಲಿ ಮೇಲೆತ್ತಿ ಗಾಳಿ ಬೆಳಕು ಟೆಲಿಫೋನ್ ವ್ಯವಸ್ಥೆ ಮುಂತಾದ ಎಲ್ಲಾ ಸೌಲಭ್ಯಗಳನ್ನು ಕಲ್ಪಿಸುವ ಪ್ರಯತ್ನಗಳು ಸರಳವಾಗಿರಲಿಲ್ಲ. ಸುರಂಗಗಳನ್ನು ಕೊರೆದ ನಂತರ ಗಟ್ಟಿಯಾದ ಮರದ ದಿಮ್ಮಿಗಳು ಮತ್ತು ಕಬ್ಬಿಣದ ಸರಳುಗಳಿಂದ ಸಿಮೆಂಟನ್ನು ಉಪಯೋಗಿಸಿ ಮೇಲ್ಚಾವಣಿಯನ್ನು ಭದ್ರಪಡಿಸುತ್ತಿದ್ದರು. ಪ್ರತಿ ಗಣಿಯಲ್ಲಿಯೂ ಒಳಹೋಗಲು ಹೊರಹೊಕ್ಕಲು ಮೇಲ್ಭಾಗದಲ್ಲಿ ಒಂದು ದೊಡ್ಡ ಚಕ್ರವನ್ನು ಅಳವಡಿಸಲಾಗಿತ್ತು. ಅದಕ್ಕೆ ಒಂದು ಕಬ್ಬಿಣದ ಪಂಜರವನ್ನು ಅಳವಡಿಸಿ ಒಳಹೋಗುವ ವ್ಯವಸ್ಥೆಯನ್ನು ನಿರ್ಮಿಸಲಾಗಿತ್ತು. ಕೆಲಸ ನಿರ್ವಹಿಸುವ ಪ್ರದೇಶ ಅತಿ ಬಿಸಿಯಾದ ತೇವಾಂಶವುಳ್ಳ ಗಾಳಿಯಿಂದ ಕೂಡಿರುತ್ತಿತ್ತು. ೧೩೦° ಎಫ್ ಇರುವ ವಾತಾವರಣದಲ್ಲಿ ಸಿಡಿಮದ್ದನ್ನು ಉಪಯೋಗಿಸಿ ಬೃಹದಾಕಾರದ ಬಂಡೆಗಳನ್ನು ಕೊರೆದು ನಿರ್ದಿಷ್ಟವಾದ ಸ್ಥಳಕ್ಕೆ ರೈಲು ಹಳಿಗಳ ಮುಖಾಂತರ ಚಿಕ್ಕ ಚಿಕ್ಕ ಕೈಗಾಡಿಗಳಲ್ಲಿ ಸಾಗಿಸಿ ತದನಂತರ ಪಂಜರದ ಮೂಲಕ ಗಟ್ಟಿಯಾದ ಬಂಡೆಗಳ ಚೂರುಗಳನ್ನು ಮೇಲೆ ತೆಗೆಯುತ್ತಿದ್ದರು[೬]. ಪ್ರಾರಂಭದ ಹಂತದಲ್ಲಿ ಗಣಿ ಪ್ರದೇಶದಿಂದ ಪುಡಿ ಮಾಡುವ ಪ್ರದೇಶಕ್ಕೆ ಎತ್ತಿನ ಗಾಡಿಗಳ ಮುಖಾಂತರ ಸಾಗಿಸಲಾಗುತ್ತಿತ್ತು. ನಂತರ ಹಬೆಯಂತ್ರ, ವಿದ್ಯುತ್‌ಶಕ್ತಿ ಮುಂತಾದವುಗಳ ಸಹಾಯದಿಂದ ಸಣ್ಣ ಕೈಗಾರಿಕೆಗಳ ಮೂಲಕ ಹೊಗೆಬಂಡಿಯಂತೆ ರೈಲು ಹಳಿಗಳ ಮೇಲೆ ಸಾಗಿಸಲಾಗುತ್ತಿತ್ತು. ಚಿನ್ನದ ಗಣಿಯಲ್ಲಿ ಹೊರತೆಗೆಯಲಾಗುತ್ತಿದ್ದ ಉತ್ತಮ ಗುಣಮಟ್ಟದ ಚಿನ್ನವನ್ನು ಮುಂಬೈ ಮೂಲಕ ಹಡಗಿನಲ್ಲಿ ಇಂಗ್ಲೆಂಡಿಗೆ ಸಾಗಿಸಲಾಗುತ್ತಿತ್ತು. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹೆಚ್ಚಿನ ಬೇಡಿಕೆ ಇದ್ದುದ್ದರಿಂದ ಹಾಗೂ ಉತ್ತಮ ಗುಣಮಟ್ಟದ ಚಿನ್ನದ ನಿಕ್ಷೇಪ ದೊರೆಯುತ್ತಿದ್ದುದರಿಂದ ಕೋಲಾರದ ಚಿನ್ನದ ಗಣಿ ಪ್ರದೇಶ ಪ್ರಪಂಚದ ಎಲ್ಲಾ ನಿಕ್ಷೇಪಗಳಿಗಿಂತ ಹೆಚ್ಚು ಹೆಸರು

ವಾಸಿಯನ್ನು ಹೊಂದಿತ್ತು. ಚಿನ್ನದ ಬೆಲೆಯನ್ನು ಅಂತರರಾಷ್ಟ್ರೀಯ ಮಾರುಕಟ್ಟೆಗೆ ಅನುಗುಣವಾಗಿ ನಿಗಧಿಪಡಿಸಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡಲಾಗುತ್ತಿತ್ತು[೮].

**ಉದ್ಯಮದ ಭವಿಷ್ಯ**

೧೮೮೧ರಿಂದ ೧೮೮೫ರವರೆಗೆ ನಷ್ಟದಲ್ಲಿ ಮುಂದುವರೆದ ಉದ್ಯಮ ೧೮೮೫ರಲ್ಲಿ ಮೈಸೂರು ಗಣಿಯನ್ನು ಆರಂಭಿಸುವ ಮೂಲಕ ತಮ್ಮ ಎಲ್ಲಾ ಭವಿಷ್ಯದ ಬಾಗಿಲುಗಳನ್ನು ತೆಗೆಯಲಾರಂಭಿಸಿದರು. ೧೮೮೮ರಲ್ಲಿ ಕೇವಲ ೮ ಕೆ.ಜಿ. ಉತ್ತಮ ಗುಣಮಟ್ಟದ ಚಿನ್ನವನ್ನು ತೆಗೆಯುತ್ತಿದ್ದ ಗಣಿ ಉದ್ಯಮ ೧೮೯೮ರ ವೇಳೆಗೆ ೩೧೦೦ ಕೆ.ಜಿ. ಉತ್ತಮ ಗುಣಮಟ್ಟದ ಚಿನ್ನವನ್ನು ತೆಗೆಯಲಾರಂಭಿಸಿತು. ೧೮೯೫ರಿಂದ ೧೯೦೦ರ ಹೊತ್ತಿಗೆ ಇದರ ಐದು ಪಟ್ಟು ಅಂದರೆ ೧೫,೯೦೦ ಕೆ.ಜಿ. ಚಿನ್ನವನ್ನು ಹೊರತೆಗೆದರು. ೧೯೦೫ರಲ್ಲಿ ಕೆ.ಜಿ.ಎಫ್. ಚಿನ್ನದ ಗಣಿಯ ಇತಿಹಾಸದಲ್ಲಿ ದಾಖಲಾತಿ ವರ್ಷ. ಸುಮಾರು ೧೯.೫೬೫ ಕೆ.ಜಿ. ಚಿನ್ನವನ್ನು ಉತ್ಪಾದಿಸಿದ ಕೀರ್ತಿ ಇದಕ್ಕೆ ಸಲ್ಲುತ್ತದೆ. ಇದು ಪ್ರಪಂಚದಲ್ಲೇ ಚಿನ್ನದ ಉತ್ಪಾದನೆಯಲ್ಲಿ ೬ನೇ ಸ್ಥಾನದಲ್ಲಿತ್ತು. ತದನಂತರ ಅತ್ಯುನ್ನತ ಶಿಖರವನ್ನೇರಿದ ಈ ಉದ್ಯಮ ಹಂತ ಹಂತವಾಗಿ ಇಳಿಮುಖ ಹೊಂದಿತು. ಪ್ರಥಮ ಮಹಾಯುದ್ಧದ ನಂತರ ಚಿನ್ನದ ಬೆಲೆ ಹೆಚ್ಚಿದ್ದರಿಂದ ಈ ಉದ್ಯಮಕ್ಕೆ ಆರ್ಥಿಕ ಒತ್ತಡ ಸಹಾಯ ಒದಗಲಿಲ್ಲ. ೧೯೩೩ರಲ್ಲಿ ೧೦,೪೫೦ ಕೆ.ಜಿ. ೧೯೬೪ರಲ್ಲಿ ೪,೯೮ ಕೆ.ಜಿ.ಯನ್ನು ಉತ್ಪಾದಿಸಿ ಪ್ರಪಂಚದಲ್ಲೇ ೧೪ನೇ ಸ್ಥಾನವನ್ನು ಗಳಿಸಿಕೊಂಡಿತು[೯]. ೧೯೬೫ರಲ್ಲಿ ೪,೬೬೫ ಕೆ.ಜಿ. ಚಿನ್ನವನ್ನು ಉತ್ಪಾದಿಸಿತು. ಇತ್ತೀಚಿನ ಅಂಕಿ ಅಂಶಗಳ ಪ್ರಕಾರ ೧೫೦ ಕೆ.ಜಿ. ಚಿನ್ನವನ್ನು ಉತ್ಪಾದಿಸಿದ ದೇಶದ ರೋಗಗ್ರಸ್ಥ ಉದ್ಯಮಗಳ ಸಾಲಿನ ಪ್ರಥಮ ಉದ್ಯಮವಾಗಿದೆ. ಈ ಎಲ್ಲಾ ಉತ್ಪಾದನಾ ಸಾಮರ್ಥ್ಯ ೫ ಚಿನ್ನದ ನಿಕ್ಷೇಪಗಳ ಪ್ರಥಮ ಮಾಲೀಕರು ಜಾನ್ ಟೇಲರ್ ಅಂಡ್ ಸನ್ಸ್ ಅವರ ಕೇಂದ್ರ ಕಛೇರಿಯ ಲಂಡನ್ನಿನ ಕ್ವೀನ್ಸ್ ರಸ್ತೆಯಲ್ಲಿತ್ತು. ಉರಿಗಾಂ ಬಾಲ್‌ಗಾಟೆ ಮೈಸೂರು ಗಣಿ ನಂದಿದುರ್ಗ ಮತ್ತು ಚಾಂಪಿಯನ್ ರೀಪ್ ಚಿನ್ನದ ಗಣಿಗಳ ಕಾರ್ಮಿಕರನ್ನು ಆಯ್ಕೆ ಮಾಡಿಕೊಳ್ಳುವ ತೆಗೆದುಹಾಕುವ, ತರಬೇತಿ ನೀಡುವ ಪೂರ್ಣ ಸ್ವಾಯತ್ತತೆಯನ್ನು ಇವರು ಹೊಂದಿದ್ದರು.

ಆರಂಭದಲ್ಲಿ ವರ್ಷಕ್ಕೆ ಸುಮಾರು ೪೦ ಟನ್ ಚಿನ್ನ ಉತ್ಪಾದಿಸುತ್ತಿದ್ದ ಕೋಲಾರದ ಗಣಿಗಳು ತಮ್ಮ ಕೊನೆಯ ದಿನಗಳಲ್ಲಿ ಉತ್ಪಾದಿಸಿದ ಚಿನ್ನದ ಪ್ರಮಾಣ ವಾರ್ಷಿಕ ೪೦೦ ರಿಂದ ೫೦೦ ಕೆ.ಜಿ. ಮಾತ್ರ. ಅದೇ ರೀತಿ ಕಾರ್ಮಿಕರ ಸಂಖ್ಯೆಯೂ ೨೫,೦೦೦ ರಿಂದ ೪೨೦೦ಕ್ಕೆ ಇಳಿಯಿತು. ಐವತ್ತರ ದಶಕದಲ್ಲಿ ಪ್ರತಿ ಟನ್ ಅದಿರಿನಿಂದ ೪೦ ಗ್ರಾಮ್ ಚಿನ್ನ ಸಿಗುತ್ತಿತ್ತು. ತನ್ನ ಕೊನೆಯ ದಿನಗಳಲ್ಲಿ ೪ ಗ್ರಾಮ್ ಸಿಗುತ್ತಿತ್ತು. ಅದು ತೀರಾ ಕಡಿಮೆಯಾಗಿತ್ತು. ಮಾರುಕಟ್ಟೆಯಲ್ಲಿ ಹತ್ತು ಗ್ರಾಮ್ ಚಿನ್ನಕ್ಕೆ ೪೫೦೦ ಇದ್ದರೆ ಕೆ.ಜಿ.ಎಫ್.ನಲ್ಲಿ ಪಡೆದ ಅಷ್ಟೇ ಚಿನ್ನಕ್ಕೆ ೧೧ ಸಾವಿರ ರೂಪಾಯಿ ವೆಚ್ಚವಾಗುತ್ತಿತ್ತು. ಪ್ರತೀ ಬಾರಿ ಗಣಿ ಅಗೆದಾಗಲೂ ಮುಷ್ಟಿಗೆ ಬರುವುದು ನಷ್ಟ ಮಾತ್ರ. ಹೀಗೆ ಸತತ ನಷ್ಟ ಅನುಭವಿಸುವ ಬದಲು ಗಣಿಗಳನ್ನು ಮುಚ್ಚುವುದೇ ಉತ್ತಮವೆಂದು ಕೇಂದ್ರ ಸರ್ಕಾರ ಅಂತಿಮವಾಗಿ ನಿರ್ಧರಿಸಿತು[೯]. ಆದಾಗ್ಯೂ ದೊಡ್ಡ ಗಣಿ ಉದ್ಯಮವನ್ನು ಮುಚ್ಚುವ ಪ್ರಯತ್ನ ಆತುರವಾಗಿ ತೆಗೆದುಕೊಳ್ಳಬಾರದೆಂದು ಕೇಂದ್ರ ಸರ್ಕಾರ ಬಿ.ಜಿ.ಎಂ.ಎಲ್. ಸಂಸ್ಥೆಗೆ ನಗದು, ಸಾಲ, ಸಬ್ಸಿಡಿಯನ್ನು ಒದಗಿಸಿತು. ಆದಾಗ್ಯೂ ಇದು ಚೇತರಿಸಿಕೊಳ್ಳಲಿಲ್ಲ. ೧೯೯೦ರಲ್ಲಿ ಈ ಸಂಸ್ಥೆಯ ಭವಿಷ್ಯದ ಬಗ್ಗೆ ಅಧ್ಯಯನ ನಡೆಸಲು ತಜ್ಞರ ಸಮಿತಿ (ಜಾರಿ ಸಮಿತಿ) ಯೊಂದನ್ನು ರಚಿಸಿತು. ತಜ್ಞರ ಸಮಿತಿಯ ಶಿಫಾರಸ್ಸಿನಂತೆ ಬಿ.ಜಿ.ಎಂ.ಎಲ್. ಸಂಸ್ಥೆ ಅನುಭವಿಸುತ್ತಿರುವ ನಷ್ಟದ ಪ್ರಮಾಣವನ್ನು ತಗ್ಗಿಸಲು ಕೆ.ಜಿ.ಎಫ್.ನಲ್ಲಿರುವ ಅತ್ಯಂತ ಆಳದ ಗಣಿಗಳಾದ ಚಾಂಪಿಯನ್ ರೀಪ್ ಮೈಸೂರು ಮತ್ತು ನಂದಿದುರ್ಗ ಚಿನ್ನದ ಗಣಿಗಳನ್ನು ತಕ್ಷಣವೇ ಮುಚ್ಚುವ ನಿರ್ಧಾರವನ್ನು ಸರ್ಕಾರ ಕೈಗೊಂಡಿತು. ತಜ್ಞರ ಸಮಿತಿಯ ಶಿಫಾರಸ್ಸಿನಂತೆ ಕೋಲಾರದ ಚಿನ್ನದ ಗಣಿಗಳನ್ನು ಹಂತ ಹಂತವಾಗಿ ಮುಚ್ಚಲು ೧೯೮೭ರಲ್ಲಿ ನಿರ್ಧರಿಸಿದ ಕೇಂದ್ರ ಸರ್ಕಾರ ಕೋಲಾರದ ಗಣಿಗಳಲ್ಲಿ ಶಾಲೋಮೈನಿಂಗ್ (ಅಡ್ಡಕೊರತ) ಮತ್ತು ಈ ಪ್ರದೇಶದಲ್ಲಿ ಚಿನ್ನದ ನಿಕ್ಷೇಪಗಳನ್ನು ಪತ್ತೆ ಮಾಡುವ ಕಾರ್ಯವನ್ನು ಚುರುಕುಗೊಳಿಸಲು ತೀರ್ಮಾನಿಸಿತು. ಶಾಲೋಮೈನಿಂಗ್ ಕಾರ್ಯ ಮಂದಗತಿಯಲ್ಲಿ ಸಾಗಿತಾದರೂ ಚಿನ್ನದ ಹೊಸ ನಿಕ್ಷೇಪ ಪತ್ತೆ ಮಾಡುವ ಕಾರ್ಯ ಪ್ರಾರಂಭವಾಗಲೇ ಇಲ್ಲ.

ಸತತವಾಗಿ ನಷ್ಟದಲ್ಲಿ ನಡೆಯುತ್ತಿದ್ದ ಬಿ.ಜಿ.ಎಂ.ಎಲ್. ಸಂಸ್ಥೆಯ ಭವಿಷ್ಯದ ಬಗ್ಗೆ ಎಂಬತ್ತರ ದಶಕದಲ್ಲಿ ಚರ್ಚೆ ಆರಂಭವಾಯಿತು. ಕೋಲಾರದ ಚಿನ್ನದ ಗಣಿಗಳನ್ನು ಮುಚ್ಚಲು ಸರ್ಕಾರ ಯೋಚಿಸುತ್ತಿದೆ ಎಂಬ ಸುದ್ದಿಗಳು ಪ್ರಕಟವಾದಾಗ ಕಾರ್ಮಿಕರು ಸಹಜವಾಗಿಯೇ ಆತಂಕಗೊಂಡರು. ೧೯೮೮ರಲ್ಲಿ ಕೆ.ಜಿ.ಎಫ್.ನಲ್ಲಿ ನಡೆದ ಕೋಲಾರದ ಚಿನ್ನದ ಗಣಿಗಳ ಶತಮಾನೋತ್ಸವ ಸಮಾರಂಭಕ್ಕೆ ಆಗಮಿಸಿದ ಅಂದಿನ ಪ್ರಧಾನಿ ಇಂದಿರಾಗಾಂಧಿಯವರು 'ಗಣಿಗಳನ್ನು ಮುಚ್ಚುವುದಿಲ್ಲ' ಕಾರ್ಮಿಕರನ್ನು ಬೀದಿಪಾಲು ಮಾಡುವುದಿಲ್ಲ ಎಂದು ಭರವಸೆ ನೀಡಿದರು. ಗಣಿ ಕಾರ್ಮಿಕರು ನಿಟ್ಟುಸಿರು ಬಿಟ್ಟರು. ಕಳೆದ ಮೂರು ದಶಕಗಳಿಂದ ಕಾರ್ಮಿಕರ ಸಂಘಟನೆಗಳು ಮತ್ತು ರಾಜಕೀಯ ಮುಖಂಡರಿಂದ ಒತ್ತಡ ಬಂದಾಗ ಗಣಿಗಳನ್ನು ಮುಚ್ಚಿದರೂ ಕಾರ್ಮಿಕರಿಗೆ ಬದಲಿ

ವ್ಯವಸ್ಥೆ ಮಾಡಲಾಗುವುದು ಎಂದು ಕಾರ್ಮಿಕರ ಮೂಗಿಗೆ ತುಪ್ಪ ಹಚ್ಚುತ್ತಲೇ ಬಂದಿತು. ಆದರೆ ಈಗ ಗಣಿಗಳಲ್ಲಿ ಕಾರ್ಮಿಕರಿಗೆ ಯಾವುದೇ ರೀತಿಯಲ್ಲಿ ಬದಲಿ ವ್ಯವಸ್ಥೆಯನ್ನು ಪ್ರಕಟಿಸಿಲ್ಲ. ರೋಗಗ್ರಸ್ತ ಕೈಗಾರಿಕೆಯೊಂದರಲ್ಲಿ ಕಾರ್ಮಿಕರು ಸ್ವಯಂ ನಿವೃತ್ತಿ ಪಡೆಯುವಾಗ ನೀಡುವ ಪರಿಹಾರವನ್ನು ಬಿ.ಜಿ.ಎಂ.ಎಲ್. ಕಾರ್ಮಿಕರಿಗೆ ನೀಡುವುದಾಗಿ ಸರ್ಕಾರ ಹೇಳಿತು, ಇದನ್ನು ಕಾರ್ಮಿಕರು ಒಪ್ಪಿಕೊಂಡರು[೧೦].

ಕೋಲಾರದ ಗಣಿ ಕಾರ್ಮಿಕರಲ್ಲಿ ಬಹುಪಾಲು ತಮಿಳುನಾಡಿನವರು. ಇವರಲ್ಲಿ ಬಹುತೇಕ ದಲಿತರು. ಶಿಕ್ಷಣದ ಗಂಧವಿಲ್ಲದೇ ಇದ್ದರು. ಶ್ರಮ ಜೀವಿಗಳು, ಇಂಥ ಸಾವಿರಾರು ಶ್ರಮ ಜೀವಿಗಳು ತಮ್ಮ ಪ್ರಾಣವನ್ನು ಒತ್ತೆಯಿಟ್ಟು ಭೂಗರ್ಭದಲ್ಲಿದ್ದ ಹೊನ್ನಿನ ಭಂಡಾರವನ್ನೇ ಮೇಲೆತ್ತಿದರೂ ಅವರ ಬದುಕು ಮಾತ್ರ ಎಂದೂ ಹಸನಾಗಲಿಲ್ಲ. ಮೊದಲು ಬ್ರಿಟೀಷರು ನಂತರ ಭಾರತದ ಅಧಿಕಾರಿಗಳು ಈ ಕಾರ್ಮಿಕರನ್ನು ನಿರಂತರವಾಗಿ ಶೋಷಣೆ ಮಾಡುತ್ತಲೇ ಬಂದರು. ಮನೆ ಕಟ್ಟಿಕೊಳ್ಳಲು ಕಾರ್ಮಿಕರಿಗೆ ಕೊಟ್ಟಿದ್ದು ೮ ಅಡಿ ಉದ್ದ ಹಾಗೂ ೧೦ ಅಡಿ ಅಗಲದ ಪುಟ್ಟ ಶೆಡ್‌ಗಳನ್ನು ಮಾತ್ರ. ಕನಿಷ್ಠ ಸೌಲಭ್ಯಗಳೂ ಇಲ್ಲದ ಈ ಶೆಡ್‌ಗಳಲ್ಲಿ ಬದುಕು ಸವೆಸಿದ ಕಾರ್ಮಿಕರಿಗೆ ಸೇವಾವಧಿಯ ಕೊನೆಯ ದಿನಗಳಲ್ಲಿ ನೆಮ್ಮದಿ ಇಲ್ಲದಂತಾಗಿದೆ. ಮೊದಲೇ ಕಡಿಮೆ ವೇತನ, ವೇತನ ಪರಿಷ್ಕರಣೆಯೂ ಇಲ್ಲದೆ ನೌಕರರು ಕೊರಗಬೇಕಾಯಿತು.

ಬಿ.ಜಿ.ಎಲ್. ಸಂಸ್ಥೆಯ ಕಾರ್ಮಿಕರಿಗೆ ಬದಲಿ ಉದ್ಯೋಗ ವ್ಯವಸ್ಥೆ ಕಲ್ಪಿಸಬೇಕೆಂಬ ಉದ್ದೇಶದಿಂದಲೇ ಸುಮಾರು ನಾಲ್ಕು ದಶಕಗಳ ಹಿಂದೆ ಬಿ.ಇ.ಎಂ.ಎಲ್. ಕಾರ್ಖಾನೆಯನ್ನು ಪ್ರಾರಂಭಿಸಲಾಯಿತು. ಆದರೆ ಬಿ.ಇ.ಎಂ.ಎಲ್.ಗೆ ತಾಂತ್ರಿಕ ಪರಿಣಿತರು ಬೇಕೆ ವಿನಹಾ ಗಣಿಕೂಲಿ ಕಾರ್ಮಿಕರಿಗೆ ಪರ್ಯಾಯವಾಗಲೇ ಇಲ್ಲ. ಜೊತೆಗೆ ಬೇರೆ ಉದ್ಯಮಗಳೂ ಇಲ್ಲಿ ತಲೆ ಎತ್ತಲಿಲ್ಲ. ಹೀಗಾಗಿ ಸಾವಿರಾರು ಜನ ನಿರುದ್ಯೋಗಿಗಳು ಅಲೆಯುತ್ತಿದ್ದಾರೆ. ಈ ಪೈಕಿ ಕೆಲವರು ಕಳ್ಳತನ, ದರೋಡೆ ಮಾಡುವುದನ್ನೇ ದಂಧೆ ಮಾಡಿಕೊಂಡಿದ್ದಾರೆ. ಹೀಗಾಗಿ ಕೆ.ಜಿ.ಎಫ್. ಇತ್ತೀಚಿನ ವರ್ಷಗಳಲ್ಲಿ ಕ್ರಿಮಿನಲ್ ಚಟುವಟಿಕೆಗಳ ಗಣಿಯಾಗಿ ಮಾರ್ಪಟ್ಟಿದೆ. ಇತ್ತೀಚಿಗೆ ಸರ್ಕಾರ ಕೆ.ಜಿ.ಎಫ್. ಚಿನ್ನದ ಗಣಿಯನ್ನು ಪುನಃಶ್ಚೇತನಗೊಳಿಸುವ ಪ್ರಸ್ತಾಪವನ್ನು ಮಂಡಿಸುತ್ತಿದೆ. ಏಕೆಂದರೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಚಿನ್ನದ ಬೆಲೆ ದುಬಾರಿಯಾಗಿರುವುದರಿಂದ ಒಂದು ಟನ್‌ಗೆ ಹತ್ತು ಗ್ರಾಂ ಚಿನ್ನ ಲಭ್ಯವಿದ್ದರು. ಅದು ಲಾಭದಾಯಕವೆಂದು ತಿಳಿದು ವಿ.ಎಸ್.ಎನ್.ಎಲ್. ಕಂಪನಿಗೆ ಚಿನ್ನದ ಗಣಿಯ ಪುನಃಶ್ಚೇತನ ಕಾರ್ಯವನ್ನು ವಹಿಸುವ ಪ್ರಯತ್ನದಲ್ಲಿದೆ. ಅಲ್ಲದೆ ಜಾಗತಿಕ ಟೆಂಡರ್ ಪ್ರಕ್ರಿಯೆಯನ್ನು ಸಹ ಆರಂಭಿಸಿ ಈಗಾಗಲೇ ತೆಗೆದು ಹೊರಹಾಕಲಾಗಿರುವ ಗಣಿ ಮಣ್ಣನ್ನು ಪುನಃ ಶುದ್ಧೀಕರಣಗೊಳಿಸಿ ಉಳಿದ ಚಿನ್ನದ ನಿಕ್ಷೇಪವನ್ನು ಹೊರತೆಗೆಯುವ ಪ್ರಯತ್ನದಲ್ಲಿ ಸರ್ಕಾರಗಳು ತೊಡಗಿವೆ.

ತಾಂತ್ರಿಕವಾಗಿ ಹಾಗೂ ಆರ್ಥಿಕ ಕಾರಣಗಳಿಂದಾಗಿ ಕೋಲಾರದ ಚಿನ್ನದ ಗಣಿಗಳು ಮುಚ್ಚಿವೆ. ಆದರೆ ರಾಜ್ಯದ ಜನತೆಗೆ ಇದು ಕೇವಲ ಗಣಿಗಳ ಬಂದ್ ಅಷ್ಟೆ ಅಲ್ಲ ನಾಡಿನ ಜನತೆಗೆ ಇದು ಭಾವನಾತ್ಮಕ ನಷ್ಟ ತಂದಿರುವ ಬೆಳವಣಿಗೆ. ಹಳೆ ಮೈಸೂರಿನ ಪರಂಪರೆಯ ಕೊಂಡಿಗಳಾಗಿ ನಾಡಿನ ಹೆಮ್ಮೆಯ ಗುರುತುಗಳಾಗಿ ಗುರುತಿಸಲ್ಪಟ್ಟಿದ್ದು ಇವು ಇಂದು ಒಂದೊಂದಾಗಿ ಕಾಣೆಯಾಗುತ್ತಿವೆ.

## ಆಧಾರಸೂಚಿ


೧. ರಜನಿ ನಂದ : **ಭಾರತದಲ್ಲಿ ಚಿನ್ನದ ಪ್ರಾಚೀನ ಇತಿಹಾಸ,** (ನವದೆಹಲಿ, ಮುನಿಷಿರಾಮ್ ಮನೋಹರಲಾಲ್ ಪ್ರಕಟಣೆ ೧೯೯೨, ಪುಟ ೩; ಬಿ.ಬಿ. ಕೋಟಿರೆಡ್ಡಿ ಭಾರತದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇತಿಹಾಸ, ಜಿ. ಕುಪ್ಪಾರಾಂ ಮತ್ತು ಕುಮುದಿನಿ.

೨. ರಾಬರ್ಟ್ ಇಲಿಯೇಟ್ : *ಗೋಲ್ಡ್ ಸ್ಪಾಟ್ ಅಂಡ್ ಕಾಫಿ ಪ್ಲಾಂಟಿಂಗ್ ಇನ್ ಮೈಸೂರು,* ವೆಸ್ಟ್ ಮಿನಿಸ್ಟರ್‌ಆರ್‌ಚೇಡ್ ಕಾನ್‌ಸ್ಟೇಬಲ್ ಮತ್ತು ಕಂ ೧೮೯೮, ಪುಟ ೧೯೪–೧೯೫.

೩. ಆರ್. ಬಾಲಕೃಷ್ಣ, ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಆಫ್ ಮೈಸೂರು, (ಬೆಂಗಳೂರು ಸರ್ಕಾರಿ ಮುದ್ರಣಾಲಯ ೧೯೪೦) ಪುಟ ೧೯೪, ಪ್ರೊಸಿಡಿಂಗ್ಸ್ ಆಫ್ ಮೈಸೂರು ಲೇಜಿಸ್‌ಲೇಟಿವ್ ಕೌನ್ಸಿಲ್, ಜುಲೈ ೪, ೧೯೪೯ ಕರ್ನಾಟಕ ರಾಜ್ಯ ಪತ್ರಗಾರ.

೪. ಕೋಲಾರ ಚಿನ್ನ ಗಣಿ : *ಅನ್ ಫಿನಿಷಡ್ ಬಯೋಗ್ರಫಿ ಆಫ್ ಕಲೋನಿಯಲಿ,* (ಸಂ) ಸಿ.ಡಿ. ವಿನೋದ್‌ಕುಮಾರ್, ಎಕನಾಮಿಕ್ಸ್ ಅಂಡ್ ಪೊಲಿಟಿಕಲ್ ವೀಕ್‌ಲಿ ವಾಲ್ಯೂಮ್ ೩೩, ನಂ ೨೪ ಜೂನ್ ೧೩, ೧೯೯೮, ಪುಟ ೧೪೬೭.

೫. ಬಿ.ಬಿ. ಕೋಟಿರೆಡ್ಡಿ : **ಭಾರತದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇತಿಹಾಸ,** ಜಿ. ಕುಪ್ಪಾರಾಂ ಮತ್ತು ಕುಮುದಿನಿ ವ್ಯಾಲ್ಯೂಮ್ ೮ (ಸಂದೀಪ್ ಪ್ರಕಾಶ್ ಪ್ರಕಟಣೆ ದೆಹಲಿ, ಪುಟ ೧೩೧.

೬. ಜಾನಕಿ ನಾಯರ್ : *ಮೈನರಸ್ ಅಂಡ್ ವಿಲ್ ಹ್ಯಾಂಡ್, ವರ್ಕ್ ಕಲ್ಚರ್ ಅಂಡ್ ಪಾಲಿಟಿಕ್ಸ್ ಇನ್ ಪ್ರಿನ್ಸಿಲ್ಲಿ,* ಮೈಸೂರು, ಪುಟ ೯೩–೯೪.

೭. ಆರ್ಥರ್ ಹೆಚ್. ಟೇಲರ್ : *ಗೋಲ್ಡ್ ಅಂಡ್ ಇಟ್ಸ್ ಪ್ರೈಸ್,* ಪುಟ ೧೦; ೮. ಅದೇ ಪುಟ ೧೨.

೮. **ಪ್ರಜಾವಾಣಿ** ದಿನಪತ್ರಿಕೆ, ಶನಿವಾರ ಮಾರ್ಚ್ ೨೫, ೨೦೦೦ ಇಸವಿ, **ಕನ್ನಡ ಪ್ರಭ** ದಿನಪತ್ರಿಕೆ, ಭಾನುವಾರ ೯, ೨೦೦೦ ಸಾಪ್ತಾಹಿಕ ಪುರವಣಿ.

೯. **ಡೆಕ್ಕನ್ ಹೆರಾಲ್ಡ್** ದಿನಪತ್ರಿಕೆ, ೨೮–೧೦–೨೦೧೦.

ಪ್ರೊ. ಗುರುಮೂರ್ತಿ ಕೆ.ಕೆ.*

# ಕಾಫಿ ಸಂಶೋಧನೆಗೆ ಆಂಗ್ಲರ ಕೊಡುಗೆ

ಕಾಫಿ ಕೃಷಿಯ ವಿಸ್ತರಣೆ ಮತ್ತು ಅಭಿವೃದ್ಧಿಯಲ್ಲಿ ಅತ್ಯಂತ ಪ್ರಮುಖವಾದ ಹಂತವೆಂದರೆ ಸಂಶೋಧನೆ. ಪ್ರಾಯಶಃ ಸಂಪೂರ್ಣ ಭಾರತದಲ್ಲಿ ಕೃಷಿಯ ವೈಜ್ಞಾನಿಕ ಸಂಶೋಧನೆ ತಳಿ ಅಭಿವೃದ್ಧಿ ರೋಗಬಾಧೆ ತಡೆಗಟ್ಟಲು ಕ್ರಿಮಿನಾಶಕಗಳ ಆವಿಷ್ಕಾರ ಇವೆಲ್ಲದರ ಆರಂಭವಾದದ್ದು ಕಾಫಿ ಕೃಷಿಯಿಂದಲೇ. ಅದರಲ್ಲೂ ನಮ್ಮ ರಾಜ್ಯದ ಬಾಳೆ ಹೊನ್ನೂರಿನಲ್ಲಿರುವ ಕಾಫಿ ಸಂಶೋಧನಾ ಕೇಂದ್ರದಲ್ಲಿಯೇ. ಈ ಸಂಶೋಧನಾ ಕೇಂದ್ರವು ಮೈಸೂರು ಸರಕಾರ ಮತ್ತು ಉಪಾಸಿಯ ಸಹಭಾಗಿತ್ವದಲ್ಲಿ ಜನ್ಮ ತಾಳಿತು. ಈ ಸಂಶೋಧನಾ ಕಾರ್ಯದಲ್ಲಿ ನಾವು ಎರಡು ಆಯಾಮಗಳನ್ನು ಗುರುತಿಸಬಹುದು.

೧. ಕಾಫಿ ಗಿಡಗಳಿಗೆ ಲಗ್ಗೆ ಇಡುವ ಕೀಟಗಳನ್ನು ತಡೆಗಟ್ಟಲು ವಿವಿಧ ಬಗೆಯ ರಾಸಾಯನಿಕ ಔಷಧಿಗಳ ಸಂಶೋಧನೆ.

೨. ಅಧಿಕ ಇಳುವರಿಯ ರೋಗ ನಿರೋಧಕ ಹೊಸ ತಳಿಯ ಅಭಿವೃದ್ಧಿ.

ಈಗ ನಮ್ಮ ಮುಂದಿರುವ ಪ್ರಶ್ನೆಯೆಂದರೆ ಕಾಫಿ ಕೃಷಿ ರೋಗ ನಿರೋಧಕ ತಳಿ ಅಭಿವೃದ್ಧಿ ಮತ್ತು ಕೀಟನಾಶಕಗಳ ಪ್ರಯೋಗ ಎಂದಿನಿಂದ ಆರಂಭವಾಯಿತು. ಇದರ ಪ್ರಾಚೀನತೆ ಏನು ? ಇದರ ಮೂಲ ಪುರುಷರು ಯಾರು ?

ಕಾಫಿ ಕೃಷಿಯ ಆರಂಭ ವಿಸ್ತರಣೆ ಮತ್ತು ಅಭಿವೃದ್ಧಿಯೊಡನೆಯೇ ಸಂಶೋಧನೆ ಆರಂಭವಾಯಿತು. ಕಾಫಿ ಕೃಷಿಯ ಜನಕರಾದ ಐರೋಪ್ಯ ಪ್ಲಾಂಟರುಗಳಿಂದಲೇ ಹೊಸ ತಳಿಯ ಸಂಶೋಧನೆ ಕೂಡ ಆರಂಭವಾಯಿತು ಎಂದು ಆಕರಗಳಿಂದ ತಿಳಿದು ಬರುತ್ತದೆ.

ಮೈಸೂರು ರಾಜ್ಯದ ಮಲೆನಾಡಿನ ಭಾಗಗಳಾದ ಚಿಕ್ಕಮಗಳೂರು ಜಿಲ್ಲೆ, ಹಾಸನದ ಮಂಜರಾಬಾದ್ ಪ್ರದೇಶಗಳಲ್ಲಿ ಕ್ರಿ.ಶ. ೧೮೩೦ರ ಸುಮಾರಿಗೆ ಕಾಫಿ ತೋಟಗಳ ಉದಯವಾಯಿತು. ಲಾಭದಾಯಕ ಕೃಷಿ ಇದಾಗಿದ್ದರಿಂದ ಹಂತ ಹಂತವಾಗಿ ಈ ತೋಟಗಳ ವಿಸ್ತರಣೆಯನ್ನು ನಾವು ನೋಡುತ್ತೇವೆ. ಕ್ರಿ.ಶ. ೧೮೬೦ರ ಸುಮಾರಿಗೆ ಇದು ತನ್ನ ಉಚ್ಛ್ರಾಯಸ್ಥಿತಿ ಮುಟ್ಟಿರುತ್ತದೆ. ಬೆಳೆಗಾರರಿಗೆ ಸಂಮೃದ್ಧ ಫಸಲು ದೊರೆಯುತ್ತದೆ. ಇದೇ ಹೊತ್ತಿಗೆ ಕಾಫಿ ಗಿಡಗಳಿಗೆ ಮೊದಲ ಕೀಟಬಾಧೆ ಕಾಣಿಸಿಕೊಳ್ಳುತ್ತದೆ. ಇದನ್ನು **ಕಾಂಡ ಕೊರೆಯುವ ಹುಳ** ಎಂದು ನಂತರ ಕರೆಯಲಾಯಿತು. ಈ ರೋಗ ನಿಯಂತ್ರಣಕ್ಕೆ ಯಾವುದೇ ರೀತಿಯ ಔಷಧಿಗಳ ಉಪಯೋಗದ ಅರಿವು ಇಲ್ಲದೆ ಇದ್ದುದರಿಂದ ತೋಟದಿಂದ ತೋಟಕ್ಕೆ ಹರಡುತ್ತ ಕಾಫಿ ತೋಟ ಸಂಪೂರ್ಣ ನಾಶದ ಅಂಚಿಗೆ ಕ್ರಿ.ಶ. ೧೮೬೩ಕ್ಕೆ ಕೊಂಡೊಯ್ಯುತ್ತದೆ.

ಇದೇ ಹೊತ್ತಿಗೆ ಕೆಲವು ಕಾಫಿ ಬೆಳೆಗಾರರು ಸಿಲೋನ್ ದೇಶದಿಂದ ಕಾಫಿ ಸಸಿಗಳನ್ನು ಆಮದು ಮಾಡಿ ವಿಸ್ತರಣೆ ಕಾರ್ಯ ಕೈಗೊಂಡಿರುತ್ತಾರೆ. ಆದರೆ ಈ ಆಮದು ಸಸಿಗಳಿಂದ **ಎಲೆರೋಗ** ಕಾಣಿಸಿಕೊಂಡು ೧೮೭೯ರ ಸುಮಾರಿಗೆ ಎಲ್ಲಾ ತೋಟಗಳಿಗೆ ಹಬ್ಬಿ ಒಂದು ಮಹಾಮಾರಿಯಾಗಿ ಮಲೆನಾಡಿನಲ್ಲಿದ್ದ ಕಾಫಿ ಕೃಷಿಯ ಅಸ್ತಿತ್ವಕ್ಕೆ ಬೆದರಿಕೆಯೊಡುತ್ತದೆ. ಇವೆಲ್ಲದರ ಜೊತೆಗೆ ಕಾಫಿಕೃಷಿಯ ಶತ್ರುವಾದ ಹಸಿರು ಥಗಣಿ ರೋಗ ಕಾಣಿಸಿಕೊಂಡು ಕಾಫಿ ಕೃಷಿ ಮತ್ತಷ್ಟು ಸಂಕಷ್ಟಕ್ಕೆ ಈಡಾಗುತ್ತದೆ. ಸಹಸ್ರಾರು ಎಕರೆ ತೋಟಗಳು ರೋಗ ಬಾಧೆಗೆ ತುತ್ತಾಗಿ ನಾಶವಾಗುತ್ತದೆ. ಕಾಫಿ ಉತ್ಪಾದನೆ ತೀವ್ರವಾಗಿ ಕುಸಿಯುತ್ತದೆ. ಧಾರಣೆ ಕೂಡ ಪ್ರೋತ್ಸಾಹದಾಯಕವಾಗಿರುವುದಿಲ್ಲ. ಅರೆಬಿಕಾ ಕಾಫಿ ಉತ್ಪಾದನೆಯಲ್ಲಿ ತೀವ್ರ ಹಿನ್ನಡೆ ಉಂಟಾಗುತ್ತದೆ. ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕಾಫಿ ಧಾರಣೆಯಲ್ಲಿ ಕುಸಿತ ಉಂಟಾಗುತ್ತದೆ. ಶ್ರೇಷ್ಠ ತೋಟವೆಂದು ಹೆಸರುವಾಸಿಯಾದ ತೋಟದಲ್ಲಿಯೂ ಇಳುವರಿ ಎಕರೆಗೆ ೮ ಸಿ.ಡಬ್ಲು.ಟಿ.ಯಿಂದ ೩ ಸಿ.ಡಬ್ಲು.ಟಿ.ಗೆ ಇಳಿಯುತ್ತದೆ. ಆರ್ಥಿಕ ಸಂಕಷ್ಟಕ್ಕೆ ಗುರಿಯಾಗಿ ಮಾನಸಿಕ ಕ್ಷೋಭೆಗೊಳಗಾದ ಬೆಳೆಗಾರರು ಕಾಫಿ ಕೃಷಿಯನ್ನು ತ್ಯಜಿಸಲು ಆರಂಭಿಸುತ್ತಾರೆ. ಹಲವಾರು ತೋಟಗಳು ನಿರ್ವಹಣೆ ಇಲ್ಲದೆ ಹಾಳಾಗುತ್ತದೆ.

ಇದೇ ಸಂದರ್ಭದಲ್ಲಿ ನೆರೆಯ ದ್ವೀಪರಾಷ್ಟ್ರವಾದ ಸಿಲೋನ್‌ನಲ್ಲಿಯ **ಬೋರರ್ ರೋಗವು** ಕಾಫಿ ತೋಟಗಳನ್ನು ಸಂಪೂರ್ಣವಾಗಿ ನಾಶ ಮಾಡುತ್ತವೆ. ಕಾಫಿ ಕೃಷಿಯಲ್ಲಿ

* ಕ್ರಾಸ್‌ಲ್ಯಾಂಡ್ ಕಾಲೇಜು, ಬ್ರಹ್ಮಾವರ.

ತೊಡಗಿದ ಮತ್ತೊಂದು ದ್ವೀಪರಾಷ್ಟ್ರವೆಂದರೆ ಜಾವ. ಇಲ್ಲಿಯೂ ಸಹ ಅರೆಬಿಕಾ ಕಾಫಿ ತಳಿಯು ನಾಶವಾದರಿಂದ ರೊಬಸ್ಟ ತಳಿಯನ್ನು ಬೆಳೆಸಲಾಗುತ್ತದೆ.

ರೋಗಬಾಧೆಯಿಂದ ಕಂಗಾಲಾದ ಬೆಳೆಗಾರರು ತಮ್ಮ ತೋಟಗಳನ್ನು ರೋಗದಿಂದ ರಕ್ಷಿಸಲು ವಿವಿಧ ಪ್ರಯತ್ನಕ್ಕೆ ಮುಂದಾಗುತ್ತಾರೆ.

ಅರೆಬಿಕಾ ಕಾಫಿ ಗಿಡಗಳನ್ನು ರಕ್ಷಿಸಲು ನೆರಳಿನ ಮರಗಳನ್ನು ಬೆಳೆಸುತ್ತಾರೆ. ಸಿಲ್ವರ್‌ಜಕ್ ಮತ್ತು ದದಪ್ ಗಿಡಗಳನ್ನು ಕಾಫಿ ಗಿಡಗಳ ನಡುವೆ ಬೆಳೆಸಿ ನೆರಳಿನ ವ್ಯವಸ್ಥೆಯನ್ನು ಮಾಡುತ್ತಾರೆ. ಇದರೊಂದಿಗೆ ರೋಗ ನಿರೋಧಕ ಶಕ್ತಿಯುಳ್ಳ ಹೊಸ ತಳಿಗಳನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸುತ್ತಾರೆ.

ಈ ನಿಟ್ಟಿನಲ್ಲಿ ಮೊದಲ ಪ್ರಯತ್ನ ಮಡಿಕೇರಿಯಲ್ಲಿ ಆರಂಭವಾಗುತ್ತದೆ. ಐರೋಪ್ಯ ಕಾಫಿ ಬೆಳೆಗಾರರಾದ ಸ್ಪಾನ್ಲಿಜಪ್‌ರವರು ಕ್ರಿ.ಶ. ೧೮೭೦ರಂದು ಈ ಮಾರ್ಗದಲ್ಲಿ ಮೊದಲ ಹೆಜ್ಜೆಯನ್ನಿಡುತ್ತಾರೆ. ಐರೋಪ್ಯ ಕಾಫಿ ಬೆಳೆಗಾರರು ಬಹಳ ಸಾಹಸಿಗಳಾಗಿದ್ದ ಬೋರರ್ ಮತ್ತು ಎಲೆರೋಗ ನಿಯಂತ್ರಣಕ್ಕಾಗಿ ಹಲವಾರು ನೂತನ ಪ್ರಯೋಗಗಳನ್ನು ಮಾಡುತ್ತಾರೆ. ಮಡಿಕೇರಿಯ ಖ್ಯಾತ ಐರೋಪ್ಯ ಕಾಫಿ ಬೆಳೆಗಾರರಾದ ಮಾಥಿಸನ್‌ರವರು ಬ್ರೆಝಿಲ್, ವೆನಿಜೂಲ, ಕೊಸ್ಟರಿಕ ಮತ್ತು ಜಮೈಕ ಮುಂತಾದ ದಕ್ಷಿಣ ಅಮೆರಿಕ ದೇಶಗಳಿಂದ ಬೀಜಗಳನ್ನು ಆಮದು ಮಾಡಿಕೊಂಡು ಹೊಸತಳಿ ಅಭಿವೃದ್ಧಿ ಮಾಡಲು ಯತ್ನಿಸುತ್ತಾರೆ.

ಆದರೆ ಬ್ರೊಕ್, ವಾಕೆಟ್, ಹ್ಯಾಮಿಲ್‌ಟನ್, ಜಾಕ್‌ಸನ್‌ಕೆಂಟ್ ಮತ್ತು ಬ್ರೌನ್ ಮುಂತಾದವರು ಸ್ಥಳೀಯ ಜನಪ್ರಿಯ ಕಾಫಿಯಾದ ಅರೆಬಿಕಾ ಬೀಜದಿಂದಲೇ ರೋಗ ನಿರೋಧಕ ತಳಿ ಅಭಿವೃದ್ಧಿಗೊಳಿಸಲು ಪ್ರಯೋಗ ಮಾಡುತ್ತಾರೆ. ಈ ರೀತಿ ಮಾಡಿದ ಹಲವಾರು ಪ್ರಯೋಗಗಳಲ್ಲಿ ಕೇವಲ ಎರಡು ಪ್ರಯೋಗ ಮಾತ್ರ ಫಲಪ್ರದವಾಯಿತು.

ಜಾಕ್‌ಸನ್‌ರವರು ಅಭಿವೃದ್ಧಿಗೊಳಿಸಿದ ಹೈಬ್ರಿಡ್ ತಳಿ ಮತ್ತು ಚಿಕ್ಕಮಗಳೂರಿನಲ್ಲಿ ಕೆಂಟ್‌ರವರು ಅಭಿವೃದ್ಧಿಗೊಳಿಸಿದ ಕೆಂಟ್ ತಳಿ ಕಾಲಾನಂತರ ಕೆಂಟ್‌ತಳಿ ಉಳಿದೆಲ್ಲಾ ತಳಿಗಳಿಗಿಂತ ತುಂಬಾ ಜನಪ್ರಿಯ ಕಾಫಿ ತಳಿಯಾಗಿ ಮಲೆನಾಡನ್ನು ವ್ಯಾಪಿಸುತ್ತದೆ.

ಇದೇ ಕಾಲಘಟ್ಟದಲ್ಲಿ ಪ್ರಯೋಗಾತ್ಮಕವಾಗಿ ರೋಬಸ್ಟ ಕಾಫಿ ತಳಿಯನ್ನು ಇಂಡೋಚೈನಾ ದೇಶದಿಂದ ಭಾರತಕ್ಕೆ ತರಲಾಯಿತು. ಇದು ಹೆಚ್ಚು ರೋಗ ನಿರೋಧಕ ಶಕ್ತಿಯನ್ನು ಪಡೆದಿತ್ತು. ಸಮುದ್ರಮಟ್ಟದಿಂದ ಕಡಿಮೆ ಏರಿಕೆ ಇರುವ ಭಾಗದಲ್ಲೂ ಮತ್ತು ಸಮತಟ್ಟಾದ ಪ್ರದೇಶದಲ್ಲೂ ಇದನ್ನು ಬೆಳೆಸಲು ಸಾಧ್ಯವಾಯಿತು. ಇದರ ಈ ಗುಣಗಳು ಇದರ ಜನಪ್ರಿಯತೆಗೆ ಕಾರಣವಾಯಿತು.

ಇಷ್ಟಾದರೂ ಸಮರ್ಪಕವಾದ ಕೀಟಬಾಧೆ ನಿಯಂತ್ರಿಸುವ ಕ್ರಿಮಿನಾಶಕಗಳ ಕೊರತೆಯಿಂದ ಕಾಫಿ ವಿಸ್ತೀರ್ಣದಲ್ಲೂ ಒಟ್ಟು ಉತ್ಪಾದನೆಯಲ್ಲೂ ೧೯ನೇ ಶತಮಾನದ ಅಂತ್ಯಭಾಗದಲ್ಲಿ ತೀವ್ರ ಕುಸಿತ ಉಂಟಾಯಿತು.

## ವ್ಯವಸ್ಥಿತ ವೈಜ್ಞಾನಿಕ ಕಾಫಿ ಸಂಶೋಧನೆ

ಆರಂಭಿಕ ಅಭೂತಪೂರ್ವ ಯಶಸ್ಸಿನ ನಂತರ ಕಾಫಿ ಉದ್ಯಮ ೧೯ನೇ ಶತಮಾನದ ಉತ್ತರ ಭಾಗದಲ್ಲಿ ಹಲವಾರು ಸಂಕಷ್ಟಗಳಿಗೆ ಗುರಿಯಾಗುತ್ತದೆ. ಕುಸಿಯುತ್ತಿರುವ ಬೆಲೆ, ಕುಂಠಿತಗೊಂಡ ಇಳುವರಿ, ಅಂತಾರಾಷ್ಟ್ರೀಯ ಮಾರುಕಟ್ಟೆ ಕುಸಿತ ಮತ್ತು ಕಾಫಿ ಗಿಡಗಳನ್ನು ತೀವ್ರವಾಗಿ ಧಕ್ಕೆ ಮಾಡುತ್ತಿದ್ದ ರೋಗಗಳಾದ ಕಾಂಡ ಕೊರೆಯುವ ಹುಳ, ಎಲೆರೋಗ ಮತ್ತು ಇತರ ಕೀಟ ಬಾಧೆಗಳು.

ಇಂತಹ ಕ್ಲಿಷ್ಟ ಕಾಲದಲ್ಲಿ ಬೆಳೆಗಾರರ ರಕ್ಷಣೆಗೆ ಧಾವಿಸಿದ್ದು ದಕ್ಷಿಣ ಭಾರತದ ಕಾಫಿ ಬೆಳೆಗಾರರ ಸಂಘ (ಉಪಾಸಿ). ಈ ಸಂಘವನ್ನು ಕಾಫಿ ಬೆಳೆಗಾರರ ಸಮಸ್ಯೆ ಕುಂದು ಕೊರತೆಗಳನ್ನು ಬಗೆಹರಿಸುವ ದೃಷ್ಟಿಯಿಂದ ೧೮೯೨ರಲ್ಲಿ ಸ್ಥಾಪಿಸಲಾಯಿತು.

ರೋಗ ನಿಯಂತ್ರಣಕ್ಕಾಗಿ ರಾಸಾಯನಿಕ ಔಷಧದ ಸಿಂಪಡಣೆಯನ್ನು ಪ್ರಥಮ ಬಾರಿಗೆ ೧೯೧೮ರಲ್ಲಿ ಮಡಿಕೇರಿಯ ಪೊಲಿಬೆಟ್ಟು ತೋಟದಲ್ಲಿ ಆರಂಭಿಸಲಾಯಿತು. ಆರಂಭದಲ್ಲಿ ಪ್ರಯೋಗಾತ್ಮಕವಾಗಿ ಇದರ ಸಿಂಪಡಣೆ ಮಾಡಲಾಯಿತು. ತದನಂತರ ಇದು ಯಶಸ್ವಿ ಚಿಕಿತ್ಸಾ ವಿಧಾನವಾಗಿ ಪರಿಣಾಮಕಾರಿಯಾಗಿ ಜನಪ್ರಿಯವಾಯಿತು. ೧೯೨೫ರ ಸುಮಾರಿಗೆ ರಾಸಾಯನಿಕ ಔಷಧಿ ಸಿಂಪಡಣೆ ಒಂದು ಯಶಸ್ವಿ ಪರಿಣಾಮಕಾರಿ ರೋಗ ನಿಯಂತ್ರಣವೆಂದು ಬೆಳೆಗಾರರಿಗೆ ಮನವರಿಕೆಯಾಯಿತು.

ಮೇಲೆ ಹೇಳಿದ ಎಲ್ಲಾ ಪ್ರಯೋಗಗಳು ಪ್ರಯತ್ನಗಳು ವೈಯಕ್ತಿಕ ಅಥವಾ ಉಪಾಸಿ ಮಾಡಿದ ಖಾಸಗಿ ಪ್ರಯತ್ನಗಳಾಗಿದ್ದವು. ಮೈಸೂರು ರಾಜ್ಯ ಸರ್ಕಾರವಾಗಲಿ, ಬ್ರಿಟಿಷ್ ಸರಕಾರವಾಗಲಿ ನೇರವಾಗಿ ಯಾವುದೇ ಕಾಫಿ ಅಭಿವೃದ್ಧಿಗೆ ಪ್ರಯತ್ನಿಸಿರಲಿಲ್ಲ.

ಆದರೆ ಮೈಸೂರು ರಾಜ್ಯದ ಕೃಷಿ ಸಲಹೆಗಾರರಾಗಿದ್ದ ಡಾ. ಎಲ್.ಸಿ. ಕೋಲ್‌ಮನ್‌ರವರ ಅವಿರತ ಶ್ರಮದಿಂದಾಗಿ ಕಾಫಿ ಎಕ್ಸ್‌ಪೆರಿಮೆಂಟಲ್ ಸ್ಟೇಷನ್ ಕಾಫಿ ಬೆಳೆಯ ಹೃದಯ ಭಾಗವಾದ ಚಿಕ್ಕಮಗಳೂರು ಜಿಲ್ಲೆಯ ಬಾಳೆಹೊನ್ನೂರಿನಲ್ಲಿ

೧೯೨೫ರಲ್ಲಿ ಆರಂಭವಾಯಿತು. ಹೊಸತಳಿಯ ಅಭಿವೃದ್ಧಿ ರೋಗನಿಯಂತ್ರಣ ಕ್ರಿಮಿನಾಶಕಗಳ ಅಭಿವೃದ್ಧಿ ಇವೆ ಮುಂತಾದ ಉದ್ದೇಶಗಳೊಂದಿಗೆ ಈ ಸಂಶೋಧನಾ ಕೇಂದ್ರವನ್ನು ಆರಂಭಿಸಲಾಯಿತು.

ಕ್ರಿ.ಶ. ೧೯೩೧ರಲ್ಲಿ ಡಾ. ಡಬ್ಲ್ಯು.ಡಬ್ಲ್ಯು. ಮೇಯ್ನ್ ಎಲೆರೋಗ ಕೀಟದ ನಾಲ್ಕು ಪ್ರಭೇದಗಳನ್ನು ಗುರುತಿಸುತ್ತಾರೆ. ಈ ಸಂಶೋಧನೆ ಎಲೆರೋಗದ ಸಂಶೋಧನೆಯಲ್ಲಿ ಇಂದಿಗೂ ಮಾದರಿ ಮತ್ತು ಮಹತ್ವಪೂರ್ಣ ಮೈಲುಗಲ್ಲಾಗಿದೆ. ಎಲೆರೋಗದ ನಿಯಂತ್ರಣಕ್ಕಾಗಿ ಬೋರ್ಡ್ ಮಿಶ್ರಣದ ಸಿಂಪಡಣ ವಿಧಾನ ಆರಂಭವಾಯಿತು. ಆದರೆ ಯಾವ ಪ್ರಮಾಣದಲ್ಲಿ ಮಿಶ್ರಣದ ದ್ರಾವಣ ಸಿದ್ಧಗೊಳಿಸ ಬೇಕೆಂಬುದಕ್ಕೆ ಇವರ ಈ ಸಂಶೋಧನೆ ಭವಿಷ್ಯದ ಸಂಶೋಧನೆಗೆ ದಾರಿದೀಪವಾಯಿತು.

ಮೇಯ್ನ್‌ರವರ ಮುಂದಾಳತ್ವದಲ್ಲಿ ಡಾ. ಕೆ.ಎಚ್. ಶ್ರೀನಿವಾಸ್ ಮತ್ತು ಆರ್.ಆರ್. ನರಸಿಂಹಸ್ವಾಮಿಯವರ ನೆರವಿನೊಂದಿಗೆ ಎಸ್ ೨೮೮ ಎಂಬ ಹೊಸಮಾದರಿಯ ಅರೆಬಿಕಾ ಸಸಿಯನ್ನು ೧೯೩೮ರಲ್ಲಿ ಪರಿಚಯಿಸಲಾಯಿತು. ಇದು ಈ ಸಂಶೋಧನಾ ಕೇಂದ್ರದ ಮಹತ್ವಪೂರ್ಣ ಸಾಧನೆಯಾಗಿದೆ. ತದನಂತರ ಎಸ್ ೩೩೩ ಎಂಬ ಸುಧಾರಿತ ತಳಿಯನ್ನು ಕೇಂದ್ರವು ಬಿಡುಗಡೆ ಮಾಡಿತು. ಈ ತಳಿಯು ಅಧಿಕ ರೋಗ ನಿರೋಧಕ ಶಕ್ತಿಯನ್ನು ಪಡೆದಿತ್ತು.

## ೧೮೪೦–೪೮

ಸಿಲೋನ್‌ನ ಕಾಫಿ ತೋಟದಲ್ಲಿ ೧೮೪೦ರ ಹೊತ್ತಿಗೆ ಮೊದಲ ಬಾರಿಗೆ ಕ್ರಿಮಿ ಕೀಟಗಳಿಂದ ರೋಗಬಾಧೆ ಕಾಣಿಸಿಕೊಳ್ಳುತ್ತದೆ. ಈ ರೋಗ ತೀವ್ರವಾಗಿ ವ್ಯಾಪಿಸಿ ಕ್ಷಿಪ್ರ ಅವಧಿಯಲ್ಲಿ ಸಂಪೂರ್ಣ ಕಾಫಿ ಉದ್ಯಮವನ್ನೆ ವಿನಾಶದ ಅಂಚಿಗೆ ಕೊಂಡೊಯ್ಯುತ್ತದೆ. ಯಾವುದೇ ಪರಿಹಾರ ಅರಿಯದ ಐರೋಪ್ಯ ಬೆಳೆಗಾರರು ದಕ್ಷಿಣ ಭಾರತಕ್ಕೆ ವಲಸೆ ಬಂದರು. ಸಿಲೋನ್‌ನ ಅನುಭವದ ಹಿನ್ನೆಲೆಯಲ್ಲಿ ತೋಟಗಾರಿಕೆ ಕೈಗೊಳ್ಳುತ್ತಾರೆ. ಆದರೆ ಸಿಲೋನ್‌ನ ಅನುಭವ ಇವರಿಗೆ ಮಾರಕವಾಗಿ ಪರಿಣಮಿಸುತ್ತದೆ. ಸಿಲೋನ್‌ನಲ್ಲಿ ಕಾಫಿಯನ್ನು ತೆರೆದ ಬಯಲು ಪ್ರದೇಶದಲ್ಲಿ ಯಾವುದೇ ನೆರಳಿನ ಆಶ್ರಯ ವಿಲ್ಲದೆ ಬಿಸಿಲಿನಲ್ಲಿ ಬೆಳೆಯಲಾಗುತ್ತಿತ್ತು. ಈ ಮಾದರಿಯನ್ನು ಮಲೆನಾಡಿನಲ್ಲೂ ಐರೋಪ್ಯ ಪ್ಲಾಂಟರುಗಳು ಅನುಸರಿಸಿದರು. ಇದರ ಪರಿಣಾಮ ಸಿಲೋನ್‌ನಲ್ಲಿ ಎದುರಿಸಿದ ಸಮಸ್ಯೆಯನ್ನೆ ಇಲ್ಲಿ ಕೂಡ ಅನುಭವಿಸಬೇಕಾಯಿತು. ಕಾಫಿ ಗಿಡಗಳಿಗೆ ಥಗಣಿ ಮತ್ತು ಕಾಂಡ ಕೊರೆಯುವ ಹುಳುವಿನ ತೀವ್ರ ಬಾಧೆ ಉಂಟಾಯಿತು. ಇದರ ಜೊತೆಗೆ ೧೮೬೯ರ ಸುಮಾರಿಗೆ ಎಲೆರೋಗ ಕೂಡ ಕಾಣಿಸಿಕೊಂಡಿತು. ಕ್ರಿ.ಶ. ೧೯೦೦ರ ಹೊತ್ತಿಗೆ ಸಂಪೂರ್ಣ ಉದ್ಯಮವೆ ಅವನತಿ ಹೊಂದುವ ಮಟ್ಟಕ್ಕೆ ತಲುಪಿತು.

ಮೈಸೂರು ಮತ್ತು ಮಡಿಕೇರಿ ಭಾಗದ ಆರಂಭದ ಯುರೋಪಿಯನ್ ಬೆಳೆಗಾರರು ಕೇವಲ ಕಾಫಿ ಕೃಷಿ ವಿಸ್ತರಣೆ ಉತ್ಪಾದನೆ ಮಾಡುವ ಸಾಧಾರಣ ರೈತರಾಗಿರದೆ ವೈಜ್ಞಾನಿಕ ದೃಷ್ಟಿಕೋನ ಹೊಂದಿದ ಕೃಷಿ ಪ್ರಯೋಗಶೀಲರೂ ಆಗಿದ್ದರು. ಕಾಫಿ ಅಭಿವೃದ್ಧಿಯಲ್ಲಿ ಅಡಚಣೆ ಉಂಟುಮಾಡುತ್ತಿದ್ದ ರೋಗಬಾಧೆಗೆ ಕಾರಣ ಉಂಟು ಮಾಡುತ್ತಿದ್ದ ಕ್ರಿಮಿಕೀಟಗಳ ನಿಯಂತ್ರಣ ಕುರಿತು ವೈಜ್ಞಾನಿಕವಾಗಿ ಚಿಂತಿಸಿ ಹಲವಾರು ಪ್ರಯೋಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ರೋಗಬಾಧೆ ತಡೆಗಟ್ಟುವ ಕುರಿತು ಕ್ರಮಕೈಗೊಂಡ ಮಾಥಿಸನ್ ಆ್ಯಂಡ್ ಕಂಪೆನಿ ಮೂಲಕಂಪೆನಿ ಎಂದು ಹೇಳಬಹುದು. ಈ ಕಂಪನಿಯು ಮಡಿಕೇರಿಯಲ್ಲಿ ಸುಮಾರು ೭೦೦೦ ಎಕರೆಯಷ್ಟು ವಿಸ್ತೀರ್ಣದ ತೋಟವನ್ನು ಹೊಂದಿತ್ತು. ಕ್ರಿ.ಶ. ೧೮೫೭–೬೦ರ ಕಾಲಘಟ್ಟದಲ್ಲಿಯೇ ಕಂಪನಿಯು ತನ್ನದೇ ಆದ ಅಗ್ರಿಕಲ್ಚರಲ್ ಕೆಮಿಸ್ಟ್ರಿ, ಕೃಷಿ ರಾಸಾಯನಿಕ ತಜ್ಞರನ್ನು ಸಲಹೆಗಾರರನ್ನಾಗಿ ನೇಮಿಸಿಕೊಂಡಿತ್ತು. ವಿಲಿಯಾ ಫ್ರಿಗಲೆಯವರು ಮೊದಲ ಅಗ್ರಿಕಲ್ಚರಲ್ ಕೆಮಿಸ್ಟ್ ಆಗಿ ಕಾರ್ಯನಿರ್ವಹಿಸಿದರು. ಇವರು ಅಧಿಕ ಇಳುವರಿ ಪಡೆಯಲು ಯಾವ ಯಾವ ರಾಸಾಯನಿಕ ಗೊಬ್ಬರಗಳನ್ನು ಬಳಸಬೇಕೆಂದು ಕಂಪನಿಗೆ ಸಲಹೆ ನೀಡುತ್ತಿದ್ದರು.

ಕಂಪನಿಯು ಅನ್ಯ ದೇಶದಿಂದ ವಿಭಿನ್ನ ತಳಿಗಳನ್ನು (ಭಾರತಕ್ಕೆ) ಮಲೆನಾಡಿಗೆ ತರಿಸಿ ಅವುಗಳ ಅಭಿವೃದ್ಧಿಯ ಸಾಧ್ಯಸಾಧ್ಯತೆಯನ್ನು ಕೂಡ ಪ್ರಯೋಗಾತ್ಮಕವಾಗಿ ಕೈಗೊಂಡಿತು. ಬ್ರೆಝಿಲ್, ವೆನಿಜೂಲ, ಕೊಸ್ಟರಿಕ ಮತ್ತು ಜಮೈಕ ದೇಶದ ತಳಿಗಳನ್ನು ಮಲೆನಾಡಿಗೆ ಪರಿಚಯಿಸಿ ಇವು ಇಲ್ಲಿಯ ಹವಾಮಾನಕ್ಕೆ ಒಗ್ಗುತ್ತದೆಯೋ ? ರೋಗನಿರೋಧಕ ಶಕ್ತಿ ಪಡೆದಿವೆಯೋ ಎಂದು ಪರೀಕ್ಷಿಸಿದರು.

ಫ್ರಿಂಗಲ್‌ರವರು ವಿವಿಧ ರಾಸಾಯನಿಕ ದ್ರಾವಣಗಳನ್ನು ಅಭಿವೃದ್ಧಿಗೊಳಿಸಿ, ಸ್ಪಾಸೊನಿಪರ್ ಸಿಂಪಡಣಾ ಯಂತ್ರದ ಮೂಲಕ ಸಿಂಪಡಿಸಿ ರೋಗ ನಿಯಂತ್ರಣಕ್ಕೆ ಪ್ರಯತ್ನಿಸಿದರು.

ಮೈಸೂರು ರಾಜ್ಯದ ಮಲೆನಾಡಿನ ಬೆಳೆಗಾರರು ಮಡಿಕೇರಿಯಿಂದ ಹೊಸ ಗಿಡಗಳನ್ನು ತಂದು ನೆಡುವುದರ ಮೂಲಕ ರೋಗ ತಡೆಗಟ್ಟುವ ಪ್ರಯೋಗ ಆರಂಭಿಸುತ್ತಾರೆ.

ಅನುಭವಿ ತೋಟಗಾರರು ಪುಸ್ತಕ ರಚಿಸುವ ಮೂಲಕ ತಮ್ಮ ಅನುಭವವನ್ನು ಇತರೆ ತೋಟಗಾರರೊಂದಿಗೆ ಹಂಚಿಕೊಳ್ಳುತ್ತಾರೆ. ಗ್ರಾಹಂ ಆ್ಯಂಡರ್‌ಸನ್ ಜೊ ಆನ್

ಕಾಫಿ ಇಟ್ಸ್ ಕಲ್ಚರ್ ಇನ್ ಮೈಸೂರು ಎಂಬ ಲೇಖನದಲ್ಲಿ ಎಲೆರೋಗ ಕುರಿತು ತಮ್ಮ ಅನುಭವ ದಾಖಲಿಸಿದ್ದಾರೆ.

ಎಲೆರೋಗ ಮತ್ತು ಬೋರರ್ ಮಹಾಮಾರಿ ನಿಯಂತ್ರಿಸಲು ನೆರಳಿನ ಅಗತ್ಯ ಎಂಬುದನ್ನು ಸೂಚಿಸಿದ್ದಾರೆ. ಶಾಖದ ತೀವ್ರತೆ ಎಷ್ಟಿರಬೇಕೆಂಬುದನ್ನು ಸಹಾ ಇವರು ಅಧ್ಯಯನ ಮಾಡಿದ್ದಾರೆ.

ರಾಬರ್ಟ್ ಇತಿಯಟ್ ಮತ್ತು ಆ್ಯಂಡರ್‌ಸನ್‌ರವರು ಕಾಫಿಗೆ ಅಗತ್ಯವಾದ ನೆರಳಿನ ಪ್ರಮಾಣ ಎಷ್ಟಿರಬೇಕು ಮತ್ತು ಯಾವ ಯಾವ ವೃಕ್ಷಗಳ ನೆರಳು ಅನುಕೂಲಕರ ಮತ್ತು ಯಾವ ಮರದ ನೆರಳು ಮಾರಕ ಎಂಬುದರ ಕುರಿತು ದೀರ್ಘವಾಗಿ ವೈಜ್ಞಾನಿಕ ನೆಲೆಯಲ್ಲಿ ಚರ್ಚಿಸಿದ್ದಾರೆ. ಈ ಎಲ್ಲಾ ಪ್ರಯೋಗ ಚರ್ಚೆ ಅಧ್ಯಯನಗಳು ಆರಂಭದ ದಿನಗಳನ್ನು ಐರೋಪ್ಯ ಪ್ಲಾಂಟರುಗಳು ತೋರಿ ವೈಜ್ಞಾನಿಕ ದೃಷ್ಟಿಕೋನ ಪ್ರಯೋಗಶೀಲತೆಯನ್ನು ಪ್ರತಿಬಿಂಬಿಸುತ್ತದೆ.

ಕಾಫಿ ಉದ್ಯಮ ಎದುರಿಸುತ್ತಿರುವ ಸಮಸ್ಯೆಗಳನ್ನು ಚರ್ಚಿಸಲು ಮತ್ತು ತಮ್ಮ ಹಿತಾಸಕ್ತಿಯನ್ನು ಕಾಯ್ದುಕೊಳ್ಳಲು ವೇದಿಕೆಯಾಗಿ ಪ್ಲಾಂಟರುಗಳು ಉಪಾಸಿಯನ್ನು ೧೮೯೩ರಲ್ಲಿ ಸ್ಥಾಪಿಸಿಕೊಂಡರು. ಇದರ ಪ್ರಥಮ ಅಧ್ಯಕ್ಷರು ಹ್ಯಾಮಿಲ್ಟನ್.

ಮಲೆನಾಡಿನಲ್ಲಿ ಕಾಫಿ ಅಭಿವೃದ್ಧಿಯಲ್ಲಿ ನಾವು ಮೂರು ಹಂತಗಳನ್ನು ಗುರುತಿಸಬಹುದು.

೧. ಕಾಫಿ ಪ್ಲಾಂಟೇಷನ್ ಮತ್ತು ವಿಸ್ತರಣೆ ೧೮೪೦-೧೯೦೦.

೨. ವೈಜ್ಞಾನಿಕ ಆವಿಷ್ಕಾರಗಳ ಅವಧಿ ೧೯೦೦-೧೯೪೦.

೩. ಕಾಫಿ ಉದ್ಯಮದ ಸುಧಾರಣಾ ಅವಧಿ ೧೯೪೦-೧೯೪೭.

ಉಪಾಸಿಯ ಹೆಚ್ಚಿನ ಸಭೆಗಳಲ್ಲಿ ಚರ್ಚೆಯಾಗುತ್ತಿದ್ದ ವಿಷಯ ಕುಸಿಯುತ್ತಿರುವ ಉತ್ಪಾದನೆ (ರೋಗಬಾಧೆಯಿಂದ), ಕಾಫಿಯ ಬಳಕೆಯನ್ನು ಜನಪ್ರಿಯಗೊಳಿಸುವುದು (ಆಂತರಿಕ ಮತ್ತು ಅಂತರಾಷ್ಟ್ರೀಯ), ಕಾಫಿ ವಿಸ್ತರಣೆಗೆ ಮತ್ತು ಉತ್ಪಾದನೆ ಕುಸಿತಕ್ಕೆ ಕಾರಣವಾದ ವಿವಿಧ ರೋಗಗಳ ನಿಯಂತ್ರಣ ಮತ್ತು ಹತೋಟಿಯೊಂದೇ ಮಾರ್ಗ ಎಂದು ಉಪಾಸಿ ನಿರ್ಧರಿಸುತ್ತದೆ.ಈ ನಿಟ್ಟಿನಲ್ಲಿ ವೈಜ್ಞಾನಿಕ ಸಂಶೋಧನೆ ಕೈಗೊಳ್ಳಲು ತಜ್ಞರನ್ನು ನೇಮಿಸಬೇಕೆಂದು ಮೈಸೂರು ಸರಕಾರದ ಮೇಲೆ ಒತ್ತಾಯ ಮಾಡಲಾಗುತ್ತದೆ. ಸರ್ಕಾರಕ್ಕೆ ವೈಜ್ಞಾನಿಕ ಸಲಹೆ ನೀಡಲು ೧೮೯೬ರಲ್ಲಿ ಡಾ. ಲ್ಹೆಮನ್ ರವರನ್ನು ನೇಮಕ ಮಾಡಲಾಗುತ್ತದೆ.

ಡಾ. ಡಿ. ಸೀತಾರೆಡ್ಡಿ *

# ಕರ್ನಾಟಕ ಸ್ವಾತಂತ್ರ್ಯ ಚಳುವಳಿಯಲ್ಲಿ ಎನ್.ಸಿ. ನಾಗಯ್ಯರೆಡ್ಡಿಯವರ ಕುಟುಂಬದ ಪಾತ್ರ

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಅಂತೆಯೇ ಕರ್ನಾಟಕ ಸ್ವಾತಂತ್ರ್ಯ ಚಳುವಳಿಯಲ್ಲಿ ಲಕ್ಷಾಂತರ ಮಂದಿ ತಮ್ಮ ಪ್ರಾಣಗಳನ್ನು ತೊರೆದು ಹೋರಾಡಿದ್ದಾರೆ. ಅವರಲ್ಲಿ ಕೆಲವರು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದ್ದರೂ, ಲಕ್ಷಾಂತರ ಜನ ವಿಸ್ಮೃತಿಗೆ ಸರಿದಿದ್ದಾರೆ. ಅಂಥ ಒಂದು ಮನೆತನ ಇಂದಿನ ಚಿಕ್ಕಬಳ್ಳಾಪುರ ಜಿಲ್ಲೆಯ ಗೌರಿಬಿದನೂರು ತಾಲ್ಲೂಕಿನ ನಾಗಸಂದ್ರ ಗ್ರಾಮದ ನಾಗಯ್ಯರೆಡ್ಡಿಯವರ ಕುಟುಂಬ.

ಶ್ರೀ ಚಿನ್ನಪ್ಪರೆಡ್ಡಿ ಮತ್ತು ಶ್ರೀಮತಿ ತಿಮ್ಮಕ್ಕ ದಂಪತಿಗಳ ಐವರು ಮಕ್ಕಳಲ್ಲಿ ನಾಲ್ಕನೇ ಹಾಗೂ ಐದನೇ ಮಕ್ಕಳಾಗಿ ಜನಿಸಿದ ಶ್ರೀ ಎನ್.ಸಿ. ನಾಗಯ್ಯರೆಡ್ಡಿ ಮತ್ತು ಶ್ರೀ ಎನ್.ಸಿ. ತಿಮ್ಮಾರೆಡ್ಡಿ ಹಾಗೂ ಅವರ ಪತ್ನಿ ಅನ್ನಪೂರ್ಣದೇವಿಯವರು ಸ್ವಾತಂತ್ರ್ಯ ಚಳುವಳಿಗಾಗಿ ಸಾಕಷ್ಟು ಶ್ರಮಿಸಿದ್ದಾರೆ.

ಎನ್.ಸಿ. ನಾಗಯ್ಯರೆಡ್ಡಿಯವರು ಕ್ರಿ.ಶ. ೧೮೯೮ರಲ್ಲಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ನಾಗಸಂದ್ರದಲ್ಲೂ ಪ್ರೌಢ ವಿದ್ಯಾಭ್ಯಾಸವನ್ನು ಗೌರಿಬಿದನೂರಿನ ಮಿಡ್ಲ್ ಕ್ಲಾಸಿನಲ್ಲೂ ನಡೆಸಿ ನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ನಿಸರ್ಗ ವಿಜ್ಞಾನದಲ್ಲಿ ಪದವಿ ಪಡೆದು ೧೯೨೫ರಲ್ಲಿ ಸ್ವಗ್ರಾಮಕ್ಕೆ ಮರಳಿದರು. ಇವರು ತಮ್ಮ ಕಾಲೇಜು ವಿದ್ಯಾರ್ಥಿ ಜೀವನದಲ್ಲಿ ಬೆಂಗಳೂರಿನಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ಚಟುವಟಿಕೆಗಳಿಗೆ ಆಕರ್ಷಿತರಾಗಿ ಅಸಹಕಾರ ಚಳುವಳಿ, ಸ್ವದೇಶಿ ಚಳುವಳಿ ಮುಂತಾದ ಚಳುವಳಿಗಳಲ್ಲಿ ಭಾಗವಹಿಸಿದರು. ರಾಷ್ಟ್ರೀಯ ಚಳುವಳಿಗಳಿಗೆ ಸಂಬಂಧಿಸಿದ ಸಭೆ ಸಮಾರಂಭಗಳಿಗೆ ತಪ್ಪದೆ ಹಾಜರಾಗುತ್ತಿದ್ದರು. ಕಾಲೇಜಿನ ದಿನಗಳಲ್ಲೇ ಖಾದಿಯತ್ತ ಆಕರ್ಷಿತರಾಗಿ ಖಾದಿವಸ್ತ್ರ ಧರಿಸಲಾರಂಭಿಸಿದರು.

ಮಹಾತ್ಮಗಾಂಧಿಯವರು ೧೯೩೪ರಲ್ಲಿ ಹರಿಜನ ನಿಧಿಗಾಗಿ ದಕ್ಷಿಣ ಭಾರತ ಪ್ರವಾಸ ಕೈಗೊಂಡು ದಿನಾಂಕ : ೪.೧.೧೯೩೪ರಂದು ವಿದುರಾಶ್ವತ್ಥಕ್ಕೆ ಬರುವ ಸುದ್ದಿ ತಿಳಿದ ನಾಗಯ್ಯರೆಡ್ಡಿಯವರು ಗೌರಿಬಿದನೂರಿನ ವೆಂಕಟಸ್ವಾಮಿಗೌಡ, ಚಿಕ್ಕಣ್ಣಪ್ಪ, ಬಿ. ಸೋಮರೆಡ್ಡಿ, ಗೆದರೆ ರಾಮಸ್ವಾಮಿ ಮುಂತಾದವರೊಡನೆ ಸಮಾಲೋಚನೆ ನಡೆಸಿ ವಿದುರಾಶ್ವತ್ಥದಲ್ಲಿ ಒಂದು ದೊಡ್ಡ ಸಭೆಯನ್ನು ಏರ್ಪಡಿಸಿ ತಾವೇ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಗಾಂಧೀಜಿಯವರನ್ನು ಭವ್ಯವಾಗಿ ಸ್ವಾಗತಿಸಿದರು. ಗಾಂಧೀಜಿವಯರು ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಮಾಡುವ ಸಂದರ್ಭದಲ್ಲಿ ಎನ್.ಸಿ. ನಾಗಯ್ಯರೆಡ್ಡಿಯವರು ತಮ್ಮ ಸ್ನೇಹಿತರೊಡಗೂಡಿ ಗಾಂಧೀಜಿಯವರ ಜೊತೆ ಸಂಸ್ಥಾನದಾದ್ಯಂತ ಪ್ರವಾಸ ಮಾಡಿ ನಿಧಿಸಂಗ್ರಹಣೆ ಮಾಡಿದರು. ಮಹಾತ್ಮರ ಸಾನಿಧ್ಯದಿಂದ ಅವರಲ್ಲಿದ್ದ ದೇಶಪ್ರೇಮ ಇಮ್ಮಡಿಯಾಯಿತು. ತಾಲ್ಲೂಕಿನ ಮುಖಂಡರೊಡನೆ ತಾಲ್ಲೂಕಿನಾದ್ಯಂತ ಮಾತ್ರವಲ್ಲದೆ, ನೆರೆಯ ತಾಲ್ಲೂಕುಗಳಿಂದ ಗುಡಿಬಂಡೆ, ಚಿಕ್ಕಬಳ್ಳಾಪುರ ಬಾಗೇಪಲ್ಲಿ ಮುಂತಾದ ಕಡೆ ಹೋಗಿ ಬಹಿರಂಗ ಸಭೆಗಳನ್ನು ನಡೆಸಿ ಜನರಲ್ಲಿ ಜಾಗೃತಿ ಹಾಗೂ ದೇಶಪ್ರೇಮ ಮೂಡಿಸಲು ಪ್ರಯತ್ನಿಸಿದರು. ಮದ್ಯಪಾನ ನಿಷೇಧ, ವಿದೇಶೀ ವಸ್ತುಗಳ ಬಹಿಷ್ಕಾರ ಮುಂತಾದ ವಿಷಯಗಳ ಬಗ್ಗೆ ಜನರಿಗೆ ಮನವರಿಕೆ ಮಾಡಿಕೊಟ್ಟರು. ಇದರಿಂದ ತಾಲೂಕಿನ ನೂರಾರು ಜನರು ಇವರ ಅಭಿಮಾನಿಗಳಾದರು.

ಮಹಾತ್ಮಗಾಂಧಿಯವರು ಅನಾರೋಗ್ಯದ ನಿಮಿತ್ತ ದಿನಾಂಕ : ೧೦.೫.೧೯೩೬ರಂದು ನಂದಿಬೆಟ್ಟಕ್ಕೆ ಬಂದಾಗ ನಾಗಯ್ಯರೆಡ್ಡಿಯವರು ಶ್ರೀ ಕೆ.ಟಿ. ಭಾಷ್ಯಂ ಮತ್ತು ಟಿ. ರಾಮಾಚಾರ್‌ರೊಂದಿಗೆ ಅವರನ್ನು ಭೇಟಿ ಮಾಡಿ ಮೈಸೂರು ಸಂಸ್ಥಾನದ ಸ್ಥಿತಿಗತಿಗಳ ಬಗ್ಗೆ, ಸರ್ಕಾರದ ಧೋರಣೆಯ ಬಗ್ಗೆ ಸವಿವರವಾಗಿ ತಿಳಿಸುತ್ತಾರೆ.

ನಾಗಯ್ಯರೆಡ್ಡಿಯವರ ಕಿರಿಯ ಸಹೋದರರಾದ ಎನ್.ಸಿ. ತಿಮ್ಮಾರೆಡ್ಡಿಯವರು ಮದ್ರಾಸಿನಲ್ಲಿ ಕಾನೂನು ಪದವಿ ಗಳಿಸಿ ತರುವಾಯ ತಿಪಟೂರಿನಲ್ಲಿ ಅಧ್ಯಾಪಕ ವೃತ್ತಿ ಪ್ರಾರಂಭಿಸಿದರು. ನಂತರ ಆ ವೃತ್ತಿಯನ್ನು ತೊರೆದು ಮದ್ರಾಸಿನಿಂದ ಪ್ರಕಟವಾಗುತ್ತಿದ್ದ ಸ್ವರಾಜ್ಯ ಪತ್ರಿಕೆಯ ಉಪಸಂಪಾದಕರಾಗಿ ಕೆಲಸ ಮಾಡಿದರು. ಅಂತಿಮವಾಗಿ ದೊಡ್ಡಬಳ್ಳಾಪುರದಲ್ಲಿ ವಕೀಲಿ ವೃತ್ತಿ ಪ್ರಾರಂಭಿಸಿದರು.

ಇವರ ಪತ್ನಿ ಅನ್ನಪೂರ್ಣದೇವಿಯವರು ಆಂಧ್ರದ ಗುಂಟೂರಿನವರು. ಮದುವೆಗೆ ಮುನ್ನ ರಾಷ್ಟ್ರೀಯ ಸೇವಾದಳದ ತರಬೇತಿಯನ್ನು ಪಡೆದಿದ್ದರು. ಚರಕದಿಂದ

* ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ೬ನೇ ಮಹಡಿ, ವಿಶ್ವೇಶ್ವರಯ್ಯ ಮುಖ್ಯಗೋಪುರ, ಬೆಂಗಳೂರು.

ನೂಲು ತೆಗೆಯುವುದನ್ನು ಕಲಿತಿರುತ್ತಾರೆ. ಕಮಲಾದೇವಿ ಚಟ್ಟೋಪಾಧ್ಯಾಯವರು ಕ್ಯಾಪ್ಟನ್ ಆಗಿದ್ದ ಕಾಕಿನಾಡ ಕಾಂಗ್ರೆಸ್ ಅಧಿವೇಶನದಲ್ಲಿ ಸೇವಾದಳದ ಕಾರ್ಯಕರ್ತೆಯಾಗಿ ಕಾರ್ಯನಿರ್ವಹಿಸಿ ಎಲ್ಲರ ಗಮನ ಸೆಳೆದಿರುತ್ತಾರೆ. ಅವರು ಗುಂಟೂರಿನಲ್ಲಿ ಅಸಹಕಾರ ಚಳುವಳಿ, ಉಪ್ಪಿನ ಸತ್ಯಾಗ್ರಹ ಗಳಲ್ಲಿ ಪಾಲ್ಗೊಂಡಿದ್ದರು. ಮದುವೆಯಾದ ಬಳಿಕ ತಮ್ಮ ಪತಿ ತಿಮ್ಮಾರೆಡ್ಡಿಯವರ ಜೊತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಗಿ ಪಾಲ್ಗೊಳ್ಳಲಾರಂಭಿಸಿದರು. ಗಾಂಧೀಜಿಯವರು ಹರಿಜನ ನಿಧಿಗಾಗಿ ಪ್ರವಾಸ ಕೈಗೊಂಡಾಗ ತಮ್ಮ ಬಳಿ ಮತ್ತಿತರ ಒಡವೆಗಳನ್ನು ನಿಧಿಗೆ ಅರ್ಪಣೆ ಮಾಡಿರುತ್ತಾರೆ.

ತಮ್ಮಾರೆಡ್ಡಿಯವರು ದೊಡ್ಡಬಳ್ಳಾಪುರದಲ್ಲಿದ್ದುದರಿಂದ ಹಲವಾರು ರಾಜ್ಯಮಟ್ಟದ ಮತ್ತು ರಾಷ್ಟ್ರಮಟ್ಟದ ಮುಖಂಡರ ನಿಕಟ ಸಂಪರ್ಕವೇರ್ಪಟ್ಟು ರಾಷ್ಟ್ರೀಯ ನಾಯಕರಾದರೆ, ನಾಗಯ್ಯನವರು ಸ್ಥಳೀಯವಾಗಿ ತುಂಬಾ ಪ್ರಭಾವಶಾಲಿ ನಾಯಕರಾದರು.

೧೯೩೭ರಲ್ಲಿ ಉತ್ತರಾರ್ಧದಲ್ಲಿ ಸರ್ಕಾರವು ಎಲ್ಲ ರೀತಿಯ ಸಮಾವೇಶಗಳಿಗೆ ಪ್ರತಿಬಂಧಕವನ್ನು ಹೇರ ಲಾರಂಭಿಸಿತು. ಶಾಸನಸಭೆ, ಮುನಿಸಿಪಲ್ ಕೌನ್ಸಿಲರ್‌ಗಳು ಹಾಗೂ ಜಿಲ್ಲಾ ಮಂಡಳಿಗಳ ಹಕ್ಕು ಮತ್ತು ಸವಲತ್ತುಗಳನ್ನು ಮೊಟಕುಗೊಳಿಸಲಾಯಿತು. ೧೯೩೭ರಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದ ಜವಹರಲಾಲನೆಹರುರವರು ಕೆ.ಟಿ. ಭಾಷ್ಯಂರವರ ಸರ್ವಾಧಿಕಾರತ್ವದಲ್ಲಿ ಒಂದು ಕ್ರಿಯಾ ಮಂಡಳಿ ರಚಿಸಿದರು. ಸರ್ಕಾರ ಮುನ್ನೆಚ್ಚರಿಕೆ ಕ್ರಮವಾಗಿ ಹಲವಾರು ಸದಸ್ಯರನ್ನು ದಸ್ತಗಿರಿ ಮಾಡಿತು. ಶಾಸನ ಸಭೆಯಲ್ಲಿ ಭಾಗವಹಿಸಲು ಭಾಷ್ಯಂರವರು ಮೈಸೂರಿನಲ್ಲಿದ್ದಾಗ ಮಧ್ಯರಾತ್ರಿ ಅವರು ತಂಗಿದ್ದ ಹೋಟೆಲಿನಿಂದ ಅವರನ್ನು ಹಾಗೂ ತಿಮ್ಮಾರೆಡ್ಡಿ ಯವರನ್ನು ದಸ್ತಗಿರಿ ಮಾಡಲಾಯಿತು. ದಿಗ್ಭ್ರಾಂತರಾದ ಸಂಯುಕ್ತ ಪ್ರಜಾಪಕ್ಷದ ಅಧ್ಯಕ್ಷರಾದ ಕೆ.ಸಿ. ರೆಡ್ಡಿಯವರು ದಿನಾಂಕ : ೧೦.೧೦.೩೭ರಂದು ಎರಡೂ ಪಕ್ಷಗಳು ವಿಲೀನವಾದವೆಂದು ಘೋಷಿಸಿ, ಮೈಸೂರು ಕಾಂಗ್ರೆಸ್‌ನ ಸ್ಥಾಪನೆಗೆ ನಾಂದಿ ಹಾಡಿದರು.

೧೮ ತಿಂಗಳು ಕಠಿಣ ಶಿಕ್ಷೆ ಮತ್ತು ೧೦೦ ರೂ. ಜುಲ್ಮಾನೆ ತಪ್ಪಿದಲ್ಲಿ ಮತ್ತೆ ೩ ತಿಂಗಳ ಶಿಕ್ಷೆ ವಿಧಿಸಿತು. ಮ್ಯಾಜಿಸ್ಟ್ರೇಟರು, ಆಪಾದಿತರು ತಮ್ಮ ಭಾಷಣದಲ್ಲಿ ಜೈಲಿಗೆ ಹೋಗುವುದು ಪುಣ್ಯವೆಂದು ಹೇಳಿದ್ದಾರೆ. ಎಂದರೆ ಜನರು ಕಾನೂನನ್ನು, ಸರ್ಕಾರವನ್ನು ಎದುರಿಸಬೇಕೆಂದು ಹೇಳಿದಂತಾಯಿತು. ಇದು ಅತ್ಯಂತ ಉಗ್ರವಾದ ರಾಜದ್ರೋಹ. ಆಪಾದಿತರು ರಾಜಮನೆತನಕ್ಕೆ ವಿಪರೀತ ಅವಿಧೇಯತೆಯನ್ನು ವ್ಯಕ್ತಪಡಿಸಿದ್ದಾರೆ[೧] ಎಂದು ಅಭಿಪ್ರಾಯಪಟ್ಟರು. ಇದರಿಂದ ಮುಖಂಡರೆಲ್ಲಾ ಸಭೆ ಸೇರಿ ಶ್ರೀ ಕೆ.ಟಿ. ಭಾಷ್ಯಂ ಮತ್ತು ತಿಮ್ಮಾರೆಡ್ಡಿಯವರನ್ನು ವಿಶೇಷ ಖೈದಿಗಳೆಂದು ಪರಿಗಣಿಸ ಬೇಕು. ಶ್ರೀಯುತರುಗಳು ಒಳ್ಳೆಯ ನಡತೆಯವರಾಗಿದ್ದು ಅಪರಾಧ ಮಾಡುವ ಚಾಳಿಯವರಲ್ಲದ ವಿದ್ಯಾವಂತರೂ, ಉತ್ತಮ ದರ್ಜೆಯ ಜೀವನವುಳ್ಳವರೂ ಆಗಿದ್ದಾರೆ. ಹಾಗಾಗಿ ಅವರಿಗೆ ಕೆಲವು ಸೌಲಭ್ಯಗಳನ್ನು ಎಂದರೆ ತಮ್ಮ ಅಡಿಗೆ ತಾವೇ ಮಾಡಿಕೊಳ್ಳಲು, ಸ್ವಂತ ಬಟ್ಟೆ ಉಪಯೋಗಿಸಲು, ವರ್ತಮಾನ ಮತ್ತು ಪುಸ್ತಕಗಳನ್ನು ಓದಲು ಇವರಿಬ್ಬರೂ ಸಂಪೂರ್ಣ ಅರ್ಹರಾಗಿದ್ದಾರೆಂದು ಸರ್ಕಾರಕ್ಕೆ ಪತ್ರ ಬರೆದರು.[೨] ದಿನಾಂಕ : ೧೪.೧೧.೧೯೩೭ರಂದು ಇವರಿಬ್ಬರ ಬಂಧನವನ್ನು ಹಾಗೂ ನಂತರ ಬಂಧನಕ್ಕೊಳಗಾದ ತಗಡೂರು ರಾಮಚಂದ್ರರಾವ್, ಟಿ. ಸಿದ್ಧಲಿಂಗಯ್ಯ, ವೀರಕೇಸರಿ ಸೀತಾರಾಮಶಾಸ್ತ್ರಿಯವರ ಬಂಧನವನ್ನು ವಿರೋಧಿಸಿ ದೇಶಭಕ್ತರ ದಿನಾಚರಣೆಯನ್ನು ಆಚರಿಸ ಲಾಯಿತು. ಸಂಸ್ಥಾನದಾದ್ಯಂತ ಹರತಾಳಗಳು ನಡೆದು ದೇಶಭಕ್ತರನ್ನು ಅಭಿನಂದಿಸಿ, ಸರ್ಕಾರದ ದಮನಕಾರಿ ಕ್ರಮವನ್ನು ಖಂಡಿಸಲಾಯಿತು. ನಂತರ ತಿಮ್ಮಾರೆಡ್ಡಿ, ವೀರಕೇಸರಿ ಸೀತಾರಾಮಶಾಸ್ತ್ರಿ ಮತ್ತು ತಗಡೂರು ರಾಮಚಂದ್ರರಾಯರನ್ನು ಶಿವಮೊಗ್ಗ ಜೈಲಿಗೆ ವರ್ಗಾಯಿಸ ಲಾಯಿತು.[೩]

೧೯೩೮ರ ಮಾರ್ಚ್‌ನಲ್ಲಿ ಮೈಸೂರು ರಾಜ್ಯ ಕಾಂಗ್ರೆಸ್ ಪಕ್ಷವನ್ನು ಉದ್ಘಾಟಿಸಿ ಶಿವಪುರದಲ್ಲಿ ಏಪ್ರಿಲ್ ತಿಂಗಳಿನಲ್ಲಿ ಮೊದಲ ಅಧಿವೇಶನ ನಡೆಸಲು ಏರ್ಪಾಟು ಮಾಡಿದಾಗ ಸರ್ಕಾರ ಹಲವಾರು ನಿರ್ಬಂಧಗಳನ್ನು ಹೇರಿತು. ಆದರೂ ಆ ಅಧಿವೇಶನ ಅಭೂತಪೂರ್ವ ಯಶಸ್ಸನ್ನು ಪಡೆಯಿತು. ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ಎನ್.ಸಿ. ತಿಮ್ಮಾರೆಡ್ಡಿ ಯವರು ಸಕ್ರಿಯ ಪಾತ್ರವಹಿಸಿದ್ದರು. ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟರಾಗಿದ್ದ ಮೇಕ್ರಿಯವರು ಶಿವಪುರದಲ್ಲಿ ಕಾಂಗ್ರೆಸ್ ಧ್ವಜಾರೋಹಣ ಮಾಡಬಾರದೆಂದು ೧೦.೪.೧೯೩೮ರಿಂದ ಒಂದು ತಿಂಗಳ ಕಾಲ ೨೫ ಜನರ ಮೇಲೆ ನಿರ್ಬಂಧ ಹೇರಿದ್ದರು. ಅವರಲ್ಲಿ ಎನ್.ಸಿ. ತಿಮ್ಮಾರೆಡ್ಡಿಯವರೂ ಒಬ್ಬರಾಗಿದ್ದರು.[೪]

ದಿನಾಂಕ : ೧೧.೪.೧೯೩೮ರಂದು ಧ್ವಜಸತ್ಯಾಗ್ರಹದ ಕೊನೆಯಲ್ಲಿ ಹಲವಾರು ನಿರ್ಣಯಗಳನ್ನು ಮಂಡಿಸಲಾಯಿತು. ತಿರುವಾಂಕೂರಿನಲ್ಲಿ ನಡೆಯುತ್ತಿದ್ದ ಸರ್ಕಾರದ ದೌರ್ಜನ್ಯವನ್ನು ಖಂಡಿಸುವ ನಿರ್ಣಯವನ್ನು ಟಿ.ಎಸ್. ರಂಗರಾಮಯ್ಯನವರು ಮಂಡಿಸಿದರು. ತಿಮ್ಮಾರೆಡ್ಡಿಯವರು ಅದನ್ನು ಬಲವಾಗಿ ಅನುಮೋದಿಸಿ "ಹೆಂಡ ಕುಡುಕರನ್ನು ತಮ್ಮ ಕಡೆಗೆ ಒಲಿಸಿಕೊಂಡು, ಕಾಂಗ್ರೆಸ್ ಜನರನ್ನು ಮಟ್ಟಹಾಕಲು ಅಲ್ಲಿನ

ಸರ್ಕಾರ ಅಕೃತ್ಯ ಮಾಡುತ್ತಿದೆ" ಎಂದು ಸರ್ಕಾರವನ್ನು ಉಗ್ರವಾಗಿ ಟೀಕಿಸಿದರು.[5] ಶಿವಪುರದಲ್ಲಿ ನಡೆದ ಪ್ರಥಮ ಮಹಾಸಭೆಯಲ್ಲಿ ಅಂಗೀಕೃತವಾದ ಮೈಸೂರು ಕಾಂಗ್ರೆಸ್‌ನ ರಚನಾಕ್ರಮದಲ್ಲಿ ಅಂಗೀಕೃತವಾದ ಮೊದಲನೇ ಕಾರ್ಯಕಾರಿ ಸಮಿತಿಯಲ್ಲಿ ಎನ್.ಸಿ. ತಿಮ್ಮಾರೆಡ್ಡಿಯವರು ಸದಸ್ಯರಾಗಿದ್ದರು.

೧೯೩೮ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಯಾದ ತರುವಾಯ ಕಾಂಗ್ರೆಸ್‌ಗೆ ಸದಸ್ಯರನ್ನು ನೋಂದಾಯಿಸುವ ಅಭಿಯಾನ ಪ್ರಾರಂಭವಾಗುತ್ತದೆ. ಆದರೆ ಪೊಲೀಸರು ಸಾಮಾನ್ಯ ಕಾರ್ಯಕರ್ತರ ಬೆನ್ನ ಹಿಂದೆ ಬಿದ್ದಿದ್ದರು. ಇದರಿಂದ ಜನಸಾಮಾನ್ಯರು ಕಾಂಗ್ರೆಸ್ ಕಾರ್ಯಕರ್ತರ ಜೊತೆ ಮಾತನಾಡಲು ಹೆದರುತ್ತಿದ್ದರು. ಆಗ ಆಯಾ ಗ್ರಾಮಗಳ ಮುಖಂಡರು ಕಾಂಗ್ರೆಸ್ ಮುಖಂಡರಾದ ಎನ್.ಸಿ. ನಾಗಯ್ಯರೆಡ್ಡಿ, ತಿಮ್ಮಾರೆಡ್ಡಿ, ಕೆ.ಸಿ. ರೆಡ್ಡಿ, ರಾಮಾಚಾರ್‌ರನ್ನು ಗೌರಿಬಿದನೂರು, ದೊಡ್ಡಬಳ್ಳಾಪುರ, ಚಿಂತಾಮಣಿ, ಶಿಡ್ಲಘಟ್ಟ, ಬಾಗೇಪಲ್ಲಿ ಮುಂತಾದ ತಾಲ್ಲೂಕುಗಳ ಹಳ್ಳಿಹಳ್ಳಿಗಳಿಗೆ ಕರೆಸಿಕೊಂಡು ಸಾರ್ವಜನಿಕ ಸಭೆಗಳನ್ನು ನಡೆಸಿ ಜನರಿಗೆ ಧೈರ್ಯ ತುಂಬುತ್ತಿದ್ದರು. ಇದರಿಂದ ಕೋಲಾರ ಜಿಲ್ಲೆ ಯಾದ್ಯಂತ ಸಹಸ್ರಾರು ಮಂದಿ ಕಾಂಗ್ರೆಸ್ ಕಾರ್ಯಕರ್ತ ರಾದರು.

ಶಿವಪುರದಲ್ಲಿ ಅಧಿವೇಶನ ಯಶಸ್ವಿಯಾದ ನಂತರ ನಾಗಯ್ಯರೆಡ್ಡಿಯವರು ಕೋಲಾರ ಜಿಲ್ಲಾ ಮುಖಂಡರೊಡನೆ ಚರ್ಚಿಸಿ ತಮ್ಮ ಗ್ರಾಮ ನಾಗಸಂದ್ರಕ್ಕೆ ಹೊಂದಿಕೊಂಡಿರುವ ವಿದುರಾಶ್ವತ್ಥ ಗ್ರಾಮದಲ್ಲಿ ಧ್ವಜ ಸತ್ಯಾಗ್ರಹ ನಡೆಸಬೇಕೆಂದು ತೀರ್ಮಾಣಿಸಿದರು. ಅದರಂತೆ ಗೆದರೆ ರಾಮಸ್ವಾಮಿ, ಬಿ. ವೆಂಕಟಸ್ವಾಮಿಗೌಡ ಮುಂತಾದ ತಾಲ್ಲೂಕು ಮುಖಂಡ ರೊಡನೆ ತಾಲ್ಲೂಕಿನಾದ್ಯಂತ ಪ್ರವಾಸ ಕೈಗೊಂಡು ಜನ ಬೆಂಬಲವನ್ನು ಪಡೆದುಕೊಂಡು, ಕೋಲಾರ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದ ಶ್ರೀ ಟಿ. ರಾಮಾಚಾರ್‌ರವರ ಅಧ್ಯಕ್ಷತೆಯಲ್ಲಿ ಧ್ವಜಾರೋಹಣ ಮತ್ತು ಸಭೆಗಳನ್ನು ನಡೆಸಲು ತೀರ್ಮಾನಿಸ ಲಾಯಿತು. ಆ ಸಂದರ್ಭದಲ್ಲಿ ವಿದುರಾಶ್ವತ್ಥದಲ್ಲಿ ಜಾತ್ರೆ ನಡೆಯುತ್ತಿದ್ದುದರಿಂದ ಹೆಚ್ಚು ಜನ ಸೇರುವರೆಂಬ ನಿರೀಕ್ಷೆಯಿತ್ತು. ಅದರಂತೆ ಶ್ರೀ ಕಲ್ಲೂರು ಸುಬ್ಬರಾಯರು, ಗೌರಿಬಿದನೂರು ಕಾಂಗ್ರೆಸ್ ಶಾಖೆ ಅಧ್ಯಕ್ಷ ವೆಂಕಟಸ್ವಾಮಿ ಗೌಡರು, ಅಧ್ಯಕ್ಷರಾದ ನಾಗಯ್ಯರೆಡ್ಡಿಯವರು ಇವರೆಲ್ಲ ಬಂದು ಧ್ವಜಾರೋಹಣ ಕಾರ್ಯಕ್ರಮ ಪ್ರಾರಂಭಿಸುವ ವೇಳೆಗೆ ೧೮.೪.೧೯೩೮ರಂದು ಧ್ವಜಸತ್ಯಾಗ್ರಹ ಪ್ರಾರಂಭಿಸಲಾಯಿತು.

ಗೌರಿಬಿದನೂರಿನ ಅಮಲ್ದಾರ್ ಮ್ಯಾಜಿಸ್ಟ್ರೇಟರು ೧೮ ರಿಂದ ವಿದುರಾಶ್ವತ್ಥದಿಂದ ೨ ಮೈಲಿಗಳ ವ್ಯಾಪ್ತಿಯಲ್ಲಿ ೧೫ ದಿನಗಳವರೆಗೆ ಸಭೆ ನಡೆಸುವ ಭಾಷಣ ಮಾಡುವ ಹಾಗೂ ಧ್ವಜಾರೋಹಣ ನಿಷೇಧಿಸಿ ೧೪೪ನೇ ಜಾರಿ ಮಾಡಿದರು. ದಿನಾಂಕ : ೨೨ರಂದು ನಾಗಯ್ಯರೆಡ್ಡಿಯವರು ನೇತೃತ್ವದಲ್ಲಿ ಸತ್ಯಾಗ್ರಹಿಗಳು ಗೌರಿಬಿದನೂರಿನಿಂದ ವಿದುರಾಶ್ವತ್ಥಕ್ಕೆ ಬಂದು ದೇವಾಲಯ ಪ್ರದಕ್ಷಿಣೆ ಹಾಕಿ ದೇವಾಲಯದ ಹಿಂದಿರುವ ತೋಪಿಗೆ ಬಂದರು. ಅಲ್ಲಿ ಭಾಷಣ ಮಾಡಿ ದಸ್ತಗಿರಿ ಯಾದರು.[6] ಇವರೊಂದಿಗೆ ಹೋರಾಟಗಾರರು ಸಹ ಬಂಧಿತರಾದರು. ಆಗ ಗೌರಿಬಿದನೂರಿನ ಅಮಲ್ದಾರನು-ಗೌರಿಬಿದನೂರಿನ ಕಾಂಗ್ರೆಸ್ ಮುಖಂಡರೆಲ್ಲ ಜೈಲಿಗೆ ಹೋದರು; ಇನ್ನು ಕಾಂಗ್ರೆಸ್ ಸಮಿತಿಗೆ ಕೊನೆಗಾಲ ಬಂದಿದೆ ಎಂದು ಹೇಳಿದನೆಂಬ ಕರಪತ್ರ ಓದಿ ಕೆರಳಿದ ಜನರು ೨೫ನೇ ತಾರೀಖು ಅಧಿಕ ಸಂಖ್ಯೆಯಲ್ಲಿ ಧ್ವಜಸತ್ಯಾಗ್ರಹಕ್ಕೆ ಬಂದರು. ಜನರ ಪ್ರಕಾರ ಅಲ್ಲಿ ಸುಮಾರು ೨೫,೦೦೦ ಜನ ಸೇರಿದ್ದರು. ಜನರನ್ನು ಚದುರಿಸಲು ಗೋಲಿಬಾರು ನಡೆದು ೩೨ ಮಂದಿ ಮೃತರಾಗಿ, ೪೦ ಮಂದಿ ಗಾಯಗೊಂಡರೆಂಬ ಸುದ್ದಿ ಎಲ್ಲ ಕಡೆ ಹರಡಿತು.

ಈ ಸುದ್ದಿ ಬಿಬಿಸಿಯಲ್ಲೂ ಪ್ರಕಟವಾಯಿತು. ಈ ವಿಷಯ ಗಾಂಧೀಜಿಯಾದಿಯಾಗಿ ರಾಷ್ಟ್ರದ ಎಲ್ಲ ನಾಯಕರೂ ವಿದುರಾಶ್ವತ್ಥದ ಘಟನೆಯನ್ನು ಖಂಡಿಸಿದರಷ್ಟೇ ಅಲ್ಲದೆ, ಸಂಸ್ಥಾನಗಳ ಬಗೆಗಿದ್ದ ಧೋರಣೆಗಳನ್ನೂ ಬದಲಾಯಿಸಿ ಕೊಂಡರು.

ಇದೇ ಸಂದರ್ಭದಲ್ಲಿ ದಿನಾಂಕ : ೧೮.೪.೧೯೩೮ ರಂದು ಇವರ ಸಹೋದರ ತಿಮ್ಮಾರೆಡ್ಡಿಯವರು ವಿ.ಎಸ್. ನಾರಾಯಣರಾವ್, ಕೆ. ಶ್ರೀನಿವಾಸಮೂರ್ತಿ ಇವರುಗಳ ಜೊತೆ ಸೇರಿ ಬೆಂಗಳೂರಿನಲ್ಲಿ ಧ್ವಜ ದಿನಾಚರಣೆಯನ್ನು ನಡೆಸಿದರು. ಮುನಿಸಿಪಲ್ ಕೌನ್ಸಿಲರ್ ಎನ್.ಹೆಚ್. ಹನುಮಂತಪ್ಪನವರು ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಈ ಸಭೆಯಲ್ಲಿ ಶ್ರೀಮನ್ ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿಯುತ ಸರ್ಕಾರ ಪಡೆಯಲು ಹೋರಾಡಬೇಕೆಂದು ತಿಮ್ಮಾರೆಡ್ಡಿಯವರು ಕರೆ ನೀಡಿದರು. ಈ ಕಾರ್ಯಕ್ರಮದಲ್ಲಿ ಯಾರನ್ನೂ ಬಂಧಿಸಲಿಲ್ಲ. ಆದರೆ ಬೆಂಗಳೂರು ಮ್ಯಾಜಿಸ್ಟ್ರೇಟರು ಎನ್.ಸಿ. ತಿಮ್ಮಾರೆಡ್ಡಿಯವರು ಬೆಂಗಳೂರಿನಲ್ಲಿ ೩ ತಿಂಗಳು ಭಾಷಣ ಮಾಡಬಾರದೆಂದು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟರು ಬೆಂಗಳೂರು ಉಪವಿಭಾಗ ಇವರು ಆನೇಕಲ್ ವ್ಯಾಪ್ತಿಯಲ್ಲಿ ಜನಸಮೂಹವನ್ನು ದಾರಿ ತಪ್ಪಿಸುವ ಮತ್ತು ಸಾರ್ವಜನಿಕ ಶಾಂತಿಯನ್ನು ಭಂಗಪಡಿಸುವ ಚಟುವಟಿಕೆಗಳಲ್ಲಿ ತೊಡಗಬಾರದೆಂದು, ದೊಡ್ಡಬಳ್ಳಾಪುರದ ಮ್ಯಾಜಿಸ್ಟ್ರೇಟರು ದೊಡ್ಡಬಳ್ಳಾಪುರದಲ್ಲಿ ಭಾಷಣ ಮಾಡಬಾರ ದೆಂದು, ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟರು ೨ ತಿಂಗಳ ಕಾಲ ಮೈಸೂರಿನಲ್ಲಿ ಭಾಷಣ ಮಾಡಬಾರದೆಂದು ಹೇಳಿ

ನಾಲ್ಕು ಕಡೆ ತಿಮ್ಮಾರೆಡ್ಡಿಯವರ ಮೇಲೆ ನಿಷೇಧಾಜ್ಞೆ ವಿಧಿಸಿದರು.[೮] ಆದರೂ ದಿನಾಂಕ : ೨೭.೪.೧೯೩೮ರಂದು ಬೆಂಗಳೂರಿನ ಚಿಕ್ಕಲಾಲ್‌ಬಾಗಿನಲ್ಲಿ ಏರ್ಪಡಿಸಿದ್ದ ಸಭೆಯಲ್ಲಿ ಭಾಷಣ ಮಾಡಿದರು. ಆಗ ಇವರನ್ನು ಬಂಧಿಸಿ ಸೆಂಟ್ರಲ್ ಜೈಲಿಗೆ ಹಾಕಲಾಯಿತು. ಮಹಾರಾಜ ಜಯಚಾಮರಾಜೇಂದ್ರ ಒಡೆಯರವರ ಮದುವೆ ಸಂದರ್ಭದಲ್ಲಿ ಎಲ್ಲ ರಾಜಕೀಯ ಖೈದಿಗಳನ್ನು ಬಿಡುಗಡೆ ಮಾಡಿದರು. ಎನ್.ಸಿ. ನಾಗಯ್ಯರೆಡ್ಡಿಯವರನ್ನು ಆಗ ಬಿಡುಗಡೆ ಮಾಡಲಾಯಿತು.

ವಿದುರಾಶ್ವತ್ಥದಲ್ಲಿ ನಡೆದ ಈ ದುರ್ಘಟನೆಯ ಬಗ್ಗೆ ವಿಚಾರಣೆ ನಡೆಸಲು ಸರ್ಕಾರವು ಮದ್ರಾಸ್ ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರಾದ ವೇಪ ರಮೇಶಂರವರ ಅಧ್ಯಕ್ಷತೆಯಲ್ಲಿ ಒಂದು ವಿಚಾರಣಾ ಸಮಿತಿ ರಚಿಸಿತು. ಒಟ್ಟು ೫೭ ಸಿಟಿಂಗ್‌ಗಳಲ್ಲಿ ೧೪೭ ಮಂದಿ ಸಾರ್ವಜನಿಕರಿಂದ ಸಾಕ್ಷ್ಯ ಪಡೆದ ಸಮಿತಿಯು ಈ ಘಟನೆಗೆ ಕಾಂಗ್ರೆಸ್ ಸಂಸ್ಥೆಯನ್ನು ದೂರಿತು. ಅಲ್ಲದೆ ಎನ್.ಸಿ. ತಿಮ್ಮಾರೆಡ್ಡಿ, ಶ್ರೀಮತಿ ಅನ್ನಪೂರ್ಣಾದೇವಿ ತಿಮ್ಮಾರೆಡ್ಡಿ, ನಾಗಯ್ಯರೆಡ್ಡಿ ಮುಂತಾದ ನಾಯಕರು ಹಳ್ಳಿ ಹಳ್ಳಿಗಳಿಗೆ ಭೇಟಿ ನೀಡಿ ಸರ್ಕಾರ ಬಡಜನರ ಮೇಲೆ ವಿಧಿಸುತ್ತಿರುವ ತೆರಿಗೆ, ಅಸಮಾನ ವಿತರಣೆ ಸರ್ಕಾರದ ಅಧಿಕಾರಿಗಳಿಗೆ ಹೆಚ್ಚೆಚ್ಚು ಸಂಬಳ ನೀಡುತ್ತಿರುವ ಬಗ್ಗೆ ಹಾಗೂ ರೈತ ಸಮುದಾಯವನ್ನು ನಿರ್ಲಕ್ಷಿಸಿ ಸರ್ಕಾರವು ನಗರಗಳ ಅಲಂಕಾರಕ್ಕಾಗಿ ಖರ್ಚು ಮಾಡುತ್ತಿರುವ ಬಗ್ಗೆ ಮಾಡಿದ ಭಾಷಣಗಳಿಂದ ಜನರ ಆಕ್ರೋಶ ಹೆಚ್ಚಾಗಿ ಈ ದುರ್ಘಟನೆ ನಡೆಯಲು ಕಾರಣವಾಯಿತೆಂದು, ಇದಕ್ಕೆಲ್ಲಾ ಕಾರಣ ಈ ಸ್ಥಳೀಯ ನಾಯಕರೆಂದು ಆರೋಪಿಸಿತು.[೭]

ಇವರಿಬ್ಬರೂ ಸೇರಿ ಸರ್ಕಾರದ ವಿರುದ್ಧ ಖಂಡನಾ ಸಭೆಗಳನ್ನು ತಾಲೂಕಿನಾದ್ಯಂತ ಏರ್ಪಡಿಸಿ ಸರ್ಕಾರದ ದುರಾಡಳಿತವನ್ನು ಜನರಿಗೆ ಮನದಟ್ಟು ಮಾಡಿಕೊಟ್ಟರು. ಹೆಂಡದಂಗಡಿಗಳ ಪಿಕೆಟಿಂಗ್ ನಡೆಸಿ ಜನರಿಗೆ ಪಾನ ನಿರೋಧದ ಬಗೆಗೆ ತಿಳಿಸಿ ಮದ್ಯಪಾನದಿಂದಾಗುವ ಪರಿಣಾಮಗಳನ್ನು ತಿಳಿಹೇಳಿದರು. ದಿನಾಂಕ : ೨೬.೧೧.೧೯೩೮ರಂದು ವಿದುರಾಶ್ವತ್ಥ ದಿನವನ್ನಾಗಿ ಆಚರಿಸಿ ವೇಪಂ ರಮೇಶರವರ ವರದಿಯನ್ನು ಖಂಡಿಸಿ, ಗೌರಿಬಿದನೂರು ತಾಲ್ಲೂಕಿನಾದ್ಯಂತ ಹರತಾಳಗಳನ್ನು ನಡೆಸಿದರು.

ಕಾಂಗ್ರೆಸ್ ಮುಖಂಡರು ಏಪ್ರಿಲ್ ೧೫–೧೭ರವರೆಗೆ ವಿದುರಾಶ್ವತ್ಥದಲ್ಲಿ ೨ನೇ ಕಾಂಗ್ರೆಸ್ ಅಧಿವೇಶನ ನಡೆಸಲು ತೀರ್ಮಾನಿಸಿದರು. ಎನ್.ಸಿ. ನಾಗರೆಡ್ಡಿಯವರ ಮುಖಂಡತ್ವದಲ್ಲಿ ಎಲ್ಲ ವ್ಯವಸ್ಥೆಗಳು ಏರ್ಪಾಟಾದವು. ತಿಮ್ಮಾರೆಡ್ಡಿಯವರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು.[೯] ಅವರು ತಮ್ಮ 'ಸ್ವಾಗತ ಭಾಷಣ'ದಲ್ಲಿ ಸರ್ಕಾರವು ರಾಜ್ಯಾಡಳಿತದ ಸೂತ್ರವನ್ನು ತಾನಾಗಿಯೇ ಕೊಡುವುದೆಂದು ಭಾವಿಸುವುದು ಸ್ವಪ್ನಪ್ರಾಯವೆಂದೇ ತೋರುತ್ತದೆ. ಆದ್ದರಿಂದ ಪೂರ್ಣ ಜವಾಬ್ದಾರಿ ಸರ್ಕಾರವನ್ನು ಗಳಿಸಿಕೊಳ್ಳಲು ನಮ್ಮ ಸಿದ್ಧತೆಯನ್ನು ಮತ್ತು ಸರ್ಕಾರದವರು ನಮ್ಮ ಮೇಲೆ ಬಲಾತ್ಕಾರದಿಂದ ನಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿ ಹೊರಡಿಸಬಹುದಾದ ಸುಧಾರಣೆಗಳನ್ನು ತಿರಸ್ಕರಿಸಲು ನಮ್ಮ ದೃಢ ನಿಶ್ಚಯವನ್ನು ನಾವು ಈ ಸಂದರ್ಭದಲ್ಲಿ ವ್ಯಕ್ತಪಡಿಸುವುದು ಸೂಕ್ತವೆಂದು ನಾವು ತಿಳಿಯುತ್ತೇವೆ. ಜವಾಬ್ದಾರಿ ಸರ್ಕಾರವು ಪೂರ್ಣವಾಗಿ ಒಮ್ಮೆಲೇ, ಕೂಡಲೇ ಬರಬೇಕು. ಅರ್ಧಂಬರ್ಧವಾಗಿ ದೊರೆಯಬಹುದಾದ ಸುಧಾರಣೆಯು ಎಂದಿಗೂ ಪೂರ್ಣ ಜವಾಬ್ದಾರಿ ಸರ್ಕಾರವಾಗಲಾರದು ಎಂದು ಹೇಳಿದರು. ಅಲ್ಲದೆ ಗ್ರಾಮಾಂತರ ಪ್ರದೇಶದ ಜನರ ಸ್ಥಿತಿ ಶೋಚನೀಯವಾಗಿದ್ದರೂ ಸರ್ಕಾರ ದುಂದುವೆಚ್ಚ ಮಾಡುತ್ತಿದೆಯೆಂದು ಹಾಗಾಗಿ ಜವಾಬ್ದಾರಿ ಸರ್ಕಾರ ಬರುವವರೆಗೆ ಹೋರಾಟ ಮುಂದುವರೆಸಬೇಕೆದು ಕರೆ ನೀಡಿದರು.

೧.೮.೧೯೩೯ರಂದು ಗೌರಿಬಿದನೂರಿನಾದ್ಯಂತ ಎನ್.ಸಿ. ನಾಗಯ್ಯರೆಡ್ಡಿಯವರ ನಾಯಕತ್ವದಲ್ಲಿ ಹೆಂಡದಂಗಡಿಗಳ ಪಿಕೆಟಿಂಗ್ ಪ್ರಾರಂಭಿಸಿದರು. ಅಲ್ಲದೆ ತಿಮ್ಮಾರೆಡ್ಡಿಯವರು ಅನ್ನಪೂರ್ಣಾದೇವಿಯವರು ಮದ್ಯಪಾನದ ಅನಾಹುತಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲಾರಂಭಿಸಿದರು. ಇದರಿಂದ ಕೋಲಾರ ಮ್ಯಾಜಿಸ್ಟ್ರೇಟರು ೧೫.೯.೧೯೪೦ರಂದು ತಿಮ್ಮಾರೆಡ್ಡಿ, ದಾಸಪ್ಪ, ಕೆ.ಟಿ. ಭಾಷ್ಯಂರನ್ನು ದಸ್ತಗಿರಿ ಮಾಡಿದರು. ನಂತರ ೨.೧೨.೧೯೩೯ರಂದು ಬಿಡುಗಡೆ ಮಾಡಿದರು.

೧೯೩೯ ರಿಂದ ೧೯೪೨ರ ಅವಧಿಯಲ್ಲಿ ಇವರಿಬ್ಬರೂ ಅರಣ್ಯ ಸತ್ಯಾಗ್ರಹ, ಹೆಂಡದಂಗಡಿಗಳ ಪಿಕೆಟಿಂಗ್ ಮತ್ತು ರಾಜವಿದ್ರೋಹಕ ಭಾಷಣಗಳನ್ನು ಮಾಡಿದರೆಂಬ ಕಾರಣದ ಮೇಲೆ ಹಲವಾರು ಸಾರಿ ಬಂಧನಕ್ಕೊಳಗಾಗುತ್ತಾರೆ. ತಿಮ್ಮಾರೆಡ್ಡಿಯವರು ಬೆಂಗಳೂರು ಸೆಂಟ್ರಲ್ ಜೈಲು ಮೈಸೂರು ಜೈಲುಗಳಲ್ಲಿದ್ದರು. ನಾಗಯ್ಯರೆಡ್ಡಿಯವರು ಹಾಸನ ಸಬ್‌ಜೈಲು, ಸಾಗರ ಸಬ್ ಜೈಲುಗಳಲ್ಲಿ ಜೈಲುವಾಸ ಅನುಭವಿಸಿ ಬರುತ್ತಾರೆ. ಬಿಡುಗಡೆಯಾಗಿ ಬಂದ ನಂತರ ಮತ್ತೆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ಶಿವಮೊಗ್ಗ ಜೈಲಿಗೆ ಸೇರುತ್ತಾರೆ. ಇವರು ಕೇವಲ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದುದು ಮಾತ್ರವಲ್ಲ. ಹಲವಾರು ಜನಪರ, ಸಮಾಜಮುಖಿ ಕಾರ್ಯಕ್ರಮಗಳನ್ನು ಕೈಗೊಂಡರು. ದೀನದಲಿತರಿಗಾಗಿ ಇವರ ಹೃದಯ ಸದಾ ಮಿಡಿಯುತ್ತಿತ್ತು.

೧೯೪೫ರಲ್ಲಿ ಪ್ಲೇಗ್ ಹರಡಿ ಗ್ರಾಮಸ್ಥರೆಲ್ಲಾ ಊರ ಹೊರಗೆ ಗುಡಿಸಲು ಕಟ್ಟಿಕೊಳ್ಳಲು ಇವರ ಮೊರೆ ಹೋದಾಗ ಇವರ ನೇತೃತ್ವದಲ್ಲಿ ಗ್ರಾಮಸ್ಥರು ಈಚಲ ಮರಗಳನ್ನು ಕಡಿದು



ಶ್ರೀ ಎಸ್. ಸಿ. ನಾಗಯ್ಯ ರೆಡ್ಡಿ ಯವರು ರಾಷ್ಟ್ರಪತಿ ರಾಜೇಂದ್ರ ಪ್ರಸಾದ್ ಮತ್ತು ಕೆ. ಸಿ. ರೆಡ್ಡಿ ಯವರೊಂದಿಗೆ.



ಶ್ರೀ ಎಸ್. ಸಿ. ನಾಗಯ್ಯರೆಡ್ಡಿ ಯವರು ತಾಲ್ಲೂಕು ಮುಖಂಡರೊಡನೆ.



ಶ್ರೀ ಎಸ್. ಸಿ. ತಿಮ್ಮಾರೆಡ್ಡಿ ಯವರು ಪವಿತ್ರ ಮೃತ್ತಿಕೆಯನ್ನು ವಿಶೇಷ ಕಲಶದಲ್ಲಿ ತುಂಬಲು ವಿದುರಾಶ್ವತ್ಥಕ್ಕೆ ಬರುತ್ತಿರುವುದು.



ಶ್ರೀಮತಿ ಲಕ್ಷ್ಮಮ್ಮ ನಾಗಯ್ಯರೆಡ್ಡಿ ಯವರು ಪವಿತ್ರ ಮೃತ್ತಿಕೆಯನ್ನು ವಿಶೇಷ ಕಲಶದಲ್ಲಿ ತುಂಬುತ್ತಿರುವುದು. ಸ್ಥಳ : ವಿದುರಾಶ್ವತ್ಥ



ವಿದುರಾಶ್ವತ್ಥ ಪವಿತ್ರ ಮೃತ್ತಿಕೆಯನ್ನು ಸಂಗ್ರಹಿಸುವ ಸಮಯದಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಎಸ್. ಸಿ. ತಿಮ್ಮಾರೆಡ್ಡಿ ಯವರು ಮಾತನಾಡುವ ದೃಶ್ಯ



ವಿದುರಾಶ್ವತ್ಥ ಪವಿತ್ರ ಮೃತ್ತಿಕೆಯ ವಿಶೇಷ ಕಲಶವನ್ನು ಶ್ರೀಮತಿ ಅನ್ನಪೂರ್ಣಾದೇವಿ ತಿಮ್ಮಾರೆಡ್ಡಿ ಯವರಿಂದ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರು ಸ್ವೀಕರಿಸುತ್ತಿರುವುದು.

ಗುಡಿಸಲುಗಳನ್ನು ನಿರ್ಮಿಸಿಕೊಂಡರು. ಆಗ ಅರಣ್ಯ ಇಲಾಖೆಯ ಅಧಿಕಾರಿಗಳು ಅವರನ್ನು ಬಂಧಿಸಿದರು. ಮೈಸೂರು ಚಲೋ ಚಳುವಳಿಯಲ್ಲಿ ಭಾಗವಹಿಸಿ ೨ ತಿಂಗಳ ಕಠಿಣ ಕಾರಾಗೃಹ ಶಿಕ್ಷೆಗೆ ಗುರಿಯಾದರು. ನಂತರ ೭.೧೦.೧೯೪೭ರಂದು ಬಿಡುಗಡೆಯಾದರು.

ಸ್ವಾತಂತ್ರ್ಯಾನಂತರ ತಿಮ್ಮಾರೆಡ್ಡಿಯವರಿಗೆ ಮುಖ್ಯಮಂತ್ರಿಯಾಗುವ ಅವಕಾಶ ದೊರೆಯುತ್ತದೆ. ಆದರೆ ನಾಗಯ್ಯರೆಡ್ಡಿಯವರು ತಮ್ಮನಿಗೆ ಆ ಅವಕಾಶವನ್ನು ನಿರಾಕರಿಸುವಂತೆ ಆದೇಶಿಸುತ್ತಾರೆ. ಅಲ್ಲದೆ ನಾಗಯ್ಯರೆಡ್ಡಿಯವರಿಗೆ ಮಂತ್ರಿಯಾಗುವ ಅವಕಾಶವಿದ್ದರೂ ಅವರು ಅಧಿಕಾರದಲ್ಲಿದ್ದರೆ, ತಪ್ಪಿತಸ್ಥ ಮಂತ್ರಿಗಳನ್ನು, ಶಾಸಕರನ್ನು ದಂಡಿಸುವ ಅಧಿಕಾರವಿರುವುದಿಲ್ಲವೆಂದು ನಿರಾಕರಿಸಿದರು. ಒತ್ತಾಯದ ಮೇರೆಗೆ ೧೯೪೭ರಲ್ಲಿ ಕೋಲಾರ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾಗುತ್ತಾರೆ. ಮೈಸೂರು ರಾಜ್ಯಾಂಗ ರಚನಾ ಸಭೆಗೆ ಹಲವಾರು ಉಪಯುಕ್ತ ಸಲಹೆಗಳನ್ನು ನೀಡುತ್ತಾರೆ. ೧೯೫೨ರ ಚುನಾವಣೆಗಳು ನಡೆದಾಗ ನಾಗಯ್ಯರೆಡ್ಡಿಯವರು ಗೌರಿಬಿದನೂರಿನಿಂದ ಶಾಸನ ಸಭೆಗೆ ಚುನಾಯಿತರಾದರು. ೧೯೫೫ರಲ್ಲಿ ಕೋಲಾರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಸ್ಥಾಪಿಸಿ ಅದರ ಮೊದಲ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಾರೆ. ಹರಿಜನೋದ್ಧಾರಕ ಸಂಘಗಳನ್ನು ಸ್ಥಾಪಿಸಿ ಸರ್ಕಾರದಿಂದ ಅವರಿಗೆ ಸವಲತ್ತುಗಳನ್ನು ಕೊಡಿಸಿದರು. ೧೯೫೯ರಲ್ಲಿ ವಿದುರಾಶ್ವತ್ಥದಲ್ಲಿ ಸತ್ಯಾಗ್ರಹ ಸ್ಮಾರಕ ಪ್ರೌಢಶಾಲೆಯನ್ನು ಸ್ಥಾಪಿಸಿ ಸಹಸ್ರಾರು ಜನರಿಗೆ ವಿದ್ಯಾದಾನ ಮಾಡುತ್ತಾರೆ. ವಿಶ್ರಾಂತಿಯಿಲ್ಲದೆ ದೇಶಸೇವೆಗಾಗಿ ತಮ್ಮನ್ನು ಮುಡುಪಾಗಿಟ್ಟು ಶ್ರೀಯುತರು ೧೬.೧.೧೯೬೧ರಲ್ಲಿ ಮರಣ ಹೊಂದಿದರು. ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ನಿಜಲಿಂಗಪ್ಪನವರು ಅವರ ಸೇವೆಯ ಗೌರವಾರ್ಥವಾಗಿ ಅವರ ಪತ್ನಿ ಶ್ರೀಮತಿ ಲಕ್ಷ್ಮಮ್ಮನವರನ್ನು ಮೈಸೂರು ವಿಧಾನ ಪರಿಷತ್ ಸದಸ್ಯೆಯನ್ನಾಗಿ ನೇಮಕ ಮಾಡುತ್ತಾರೆ.

ಇವರ ಸಹೋದರ ತಿಮ್ಮಾರೆಡ್ಡಿಯವರು ಸ್ವಾತಂತ್ರ್ಯ ನಂತರ ರಾಜಕೀಯದಿಂದ ನಿವೃತ್ತರಾದರು. ಇವರ ಪತ್ನಿ ಅನ್ನಪೂರ್ಣಾದೇವಿಯವರು ೧೯೫೮-೧೯೭೦ರವರೆಗೆ ರಾಜ್ಯಸಭಾ ಸದಸ್ಯೆಯಾಗಿ ಸೇವೆ ಸಲ್ಲಿಸಿದರು.

ದಿನಾಂಕ : ೧೫.೮.೧೯೮೭ರಂದು ದೆಹಲಿಯಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಸುವರ್ಣ ಸಮಾರಂಭದಲ್ಲಿ ತಿಮ್ಮಾರೆಡ್ಡಿ ಅನ್ನಪೂರ್ಣಾದೇವಿಯವರು ವಿದುರಾಶ್ವತ್ಥಕ್ಕೆ ಬಂದು ವಿದುರಾಶ್ವತ್ಥದ ಪವಿತ್ರ ಮೃತ್ತಿಕೆಯನ್ನು ಸಂಗ್ರಹಿಸಿ ತೆಗೆದುಕೊಂಡು ಹೋಗಿ ದೆಹಲಿಯಲ್ಲಿ ಸ್ವಾತಂತ್ರ್ಯ ವೃಕ್ಷ ಬೆಳೆಸಲು ಈ ಮಣ್ಣನ್ನು ನೀಡಿದರು.[೧೦] ಇವರು ದಿನಾಂಕ : ೧೩.೯.೧೯೮೭ರಲ್ಲಿ ತಮ್ಮ ಇಹಲೋಕವನ್ನು ತ್ಯಜಿಸಿದರು.

ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆಯಲ್ಲಿ (೧೯೯೩) ಸ್ವಾತಂತ್ರ್ಯ ಹೋರಾಟಗಾರರಾದ ಚಿಂತಾಮಣಿಯ ಶ್ರೀ ಸಿ.ಎಂ. ಗೌಡರವರು "ಸಂಸ್ಥಾನದಲ್ಲಿ ಕಾಂಗ್ರೆಸ್ ಬಲಗೊಳ್ಳಲು ಕೆ.ಟಿ. ಭಾಷ್ಯಂ, ಎಚ್.ಸಿ. ದಾಸಪ್ಪ, ಯಶೋಧರಮ್ಮ ದಾಸಪ್ಪ, ಕೆ. ಪಟ್ಟಾಭಿರಾಮನ್, ಕೆ.ಸಿ. ರೆಡ್ಡಿ, ಎನ್.ಸಿ. ತಿಮ್ಮಾರೆಡ್ಡಿ, ನಾಗಯ್ಯರೆಡ್ಡಿ, ಕೆ. ಹನುಮಂತಯ್ಯರಾದಿಯಾಗಿ ಅನೇಕಾನೇಕ ಮಹನೀಯರ ಮಾರ್ಗದರ್ಶನವು ನನಗೆ ಮಾರ್ಗ ಜ್ಯೋತಿಯಾಗಿ ಬೆಳಗಿದವು ಎಂಬ ಒಂದೇ ಮಾತು ಸಾಕು; ಸ್ವಾತಂತ್ರ್ಯ ಚಳುವಳಿಯಲ್ಲಿ ಇವರ ಪಾತ್ರವನ್ನು ಅರಿಯಲು.

(ಈ ಲೇಖನಕ್ಕೆ ಪ್ರೇರಕರಾದ ನನ್ನ ಪತಿ ಎನ್.ಸಿ. ಬಾಬುರೆಡ್ಡಿಯವರಿಗೆ ಹಾಗೂ ಹಲವಾರು ಮಾಹಿತಿಗಳನ್ನು ನೀಡಿದ ನಮ್ಮ ಮಾವ ಎನ್.ಎಸ್. ಚಿನ್ನಪ್ಪರೆಡ್ಡಿಯವರಿಗೆ ಹಾಗೂ ಭಾವಚಿತ್ರಗಳನ್ನು ನೀಡಿದ ಎನ್.ಸಿ. ತಿಮ್ಮಾರೆಡ್ಡಿಯವರ ಮಗಳು ಶ್ರೀಮತಿ ಅಲಮೇಲಮ್ಮನವರಿಗೆ ಹಾಗೂ ನಾಗಯ್ಯರೆಡ್ಡಿಯವರ ಮೊಮ್ಮಗ ಎನ್.ಎಂ. ಚಿನ್ನಪ್ಪರೆಡ್ಡಿಯವರಿಗೆ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಸಾಧ್ವಿ ಪತ್ರಿಕೆ, ದಿನಾಂಕ : ೧೫.೧೧.೧೯೩೭, ಶೀರ್ಷಿಕೆ "ದೇಶ ಸೇವಕರಿಗೆ ಶಿಕ್ಷೆ".

೨. ಪೂರ್ವೋಕ್ತ.

೩. ಪೂರ್ವೋಕ್ತ, ದಿನಾಂಕ : ೨೦.೧೧.೧೯೩೭, ಶೀರ್ಷಿಕೆ "ರಾಜಕೀಯ ಖೈದಿಗಳ ವರ್ಗಾವರ್ಗಿ".

೪. ಶಿವಪುರ ರಾಷ್ಟ್ರಕೂಟ ಸುವರ್ಣ ಮಹೋತ್ಸವ ಕೈಪಿಡಿ, ಸಂ. ಪಿ.ಎನ್. ಜವರಪ್ಪಗೌಡ, ಪುಟ ೨೧, ೧೯೮೮.

೫. ಪೂರ್ವೋಕ್ತ, ಪುಟ ೪೪, ೧೯೮೦.

೬ ವಿದುರಾಶ್ವತ್ಥ ದುರಂತ ಪ್ರಕರಣ, ಬರೆದವರು : ಎಂ. ರಾಮಮೂರ್ತಿ, ಪುಟ ೨, ೧೯೩೮.

೭. Disturbance at Vidurashvath, 1938. (Report on the committee of Enquiry).

೯. ಸಾಧ್ವಿ ಪತ್ರಿಕೆ, ೨೪.೪.೧೯೩೯, "ವಿದುರಾಶ್ವತ್ಥದ ಕಾಂಗ್ರೆಸ್ : ಸ್ವಾಗತಾಧ್ಯಕ್ಷರ ಭಾಷಣ" ಎಂಬ ತಲೆಬರಹದಲ್ಲಿ.

೧೦. ಶಿವಪುರ ರಾಷ್ಟ್ರಕೂಟ ಸುವರ್ಣೋತ್ಸವ ಕೈಪಿಡಿ, ಪುಟ ೪೮.

## ಆಧಾರ ಗ್ರಂಥಗಳು


೧. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಭಾಗ I, II, III, ಲೇಖಕ : ಸೂರ್ಯನಾಥ ಯು. ಕಾಮತ್.

೨. ವಿದುಥಾಶ್ವತ್ಥ ದುರಂತ ಪ್ರಕರಣ, ಲೇಖಕ : ಎಂ. ರಾಮಮೂರ್ತಿ, ೧೯೩೮.

೩. ಕರ್ನಾಟಕದ ಚರಿತ್ರೆ, ಸಂಪುಟ ೬, ೭.

೪. ವಿದುರಾಶ್ವತ್ಥ ಎನ್‌ಕ್ವಯರಿ ರಿಪೋರ್ಟ್, ನ್ಯಾಯಮೂರ್ತಿ ಶ್ರೀ ವೇಪಂ ರಮೇಶ್.

೫. ಕೋಲಾರ ಜಿಲ್ಲಾ ಪೊಲೀಸ್ ದಾಖಲೆಗಳು, ಸರ್ಕಾರಿ ಕಾಗದ ಪತ್ರಗಳು, ಕಡತ ಸಂಖ್ಯೆ ೧೪೭-೪೨-೧೫/೩೮.

೬ History of freedom movement in Karnataka, Halappa.

೭. ಸತ್ಯಾಗ್ರಹಿಗಳ ಸಂದರ್ಶನ, ಸಂಪುಟ ಪ್ರೊ. ಬಿ. ಲಿಂಗಯ್ಯ, ದಿನಕರ ಪ್ರಕಾಶನ, ೬೯೦, ೧ನೇ 'ಬಿ' ಮೈನ್, ೭ನೇ ಬ್ಲಾಕ್, ಬೆಂಗಳೂರು-೮೫.

೮. ಪತ್ರಿಕೆಗಳು ನವಜೀವನ, ಸಾಧ್ವಿ

೯. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ೧೯೯೩.

ಡಾ. ಬಿ. ಲೀಲಾ*

# ಜನಾಂಗ ಅಧ್ಯಯನಕಾರ ಎಡ್ಗರ್ ತರ್‍ಸ್ಟನ್

ಮೈಸೂರಾತರ ಪತನದ ನಂತರ ಈಸ್ಟ್ ಇಂಡಿಯಾ ಕಂಪೆನಿ ತಾನು ಆಕ್ರಮಿಸಿದ್ದ ಪ್ರದೇಶಗಳ ವಿಸ್ತರಣದಲ್ಲಿ ತನ್ನ ಸಾಮಂತರು ಹಲವಾರು ಭಾಷೆಗಳ, ನಡೆನುಡಿ ಆಚಾರವನ್ನು ಹೊಂದಿರುವುದನ್ನು ಗಮನಿಸಿತ್ತು. ಮನ್ರೊ, ಮಲಕಾಮ್, ಟಾಡ್, ಎಲ್‌ಫಿನ್‌ಸ್ಟನ್ ಇವರೆಲ್ಲರೂ ತಾವು ಆಕ್ರಮಿಸಿದ ಜನರ ನಡೆನುಡಿಯ ಮಂಥನ ನಡೆಸಿದ್ದರು. ೧೮೭೨ರಲ್ಲಿ ಭಾರತದ ಜನಜೀವನದ ದಾಖಲೆಯನ್ನು ಮೊದಲನೆ ಸಾರ್ತಿ ಮಾಡಲಾಯಿತು. ಮೊದಲನೆ ಸಾರಿ, ಜಾತಿಗೆ ಒಂದು ಅಸ್ತಿತ್ವವಿದೆ. ಇದು ವಾಸ್ತವ್ಯ ಎಂಬ ಪ್ರಜ್ಞೆ ಮೂಡಿತು. ಅದಲ್ಲದೆ ಇದನ್ನು ಅಳತೆ ಮಾಡಲು ಹಲವು ಮಾನದಂಡಗಳಿವೆ ಎಂಬುದರ ಅರಿವಾಯ್ತು. ಜಾತಿಯನ್ನು ವಿಂಗಡಿಸಲು ಹಲವಾರು ಸಮಾಜ ಶಾಸ್ತ್ರಜ್ಞರು ಹಲವಾರು ಮಾನದಂಡ ಉಪಯೋಗಿಸಿ ೧೮೭೦-೧೯೧೦ ಕೊನೆಗೊಂದು ತೀರ್ಮಾನಕ್ಕೊಳಗಾದರು. ಇದರಲ್ಲಿ ಮಾನವ ಶಾಸ್ತ್ರಜ್ಞರು ಮುಖ್ಯಪಾತ್ರವಹಿಸಿದರು. ೧೯೧೧ರಲ್ಲಿ ಬ್ರಿಟಿಷ್ ಸರ್ಕಾರದ ಅಣತಿಯ ಮೇಲೆ ಭಾರತಕ್ಕೆ ಬಂದು 'ನರಕುಲ ವರ್ಣನೆ'ಯನ್ನು ತಯಾರಿಸಬೇಕೆಂದೂ ಮತ್ತು ಇದು ಜನಗಣನೆಗೆ ಸಹಾಯವಾಗಬಹುದೆಂದು ಸರ್ಕಾರ ಅಭಿಪ್ರಾಯಪಟ್ಟಿತು. ಇದಕ್ಕೆ ತಗಲುವ ವೆಚ್ಚ ವಿಪರೀತವಾದರೂ ಸರ್ಕಾರ ಅತ್ಯಂತ ಅವಶ್ಯಕವೆಂದು ಪರಿಗಣಿಸಿತು. "ಇಂಡಿಯಾ ದೇಶದ ಸಾಮಾಜಿಕ ಮತ್ತು ವಿಜ್ಞಾನ ಸಂಬಂಧವಾದ ಮಾಹಿತಿಯನ್ನು ಸಂಗ್ರಹಿಸಿಡಬೇಕು ಮತ್ತು ಯೂರೋಪಿನಲ್ಲಿ ಸಿಗುವ ಮಾಹಿತಿ ಇಂಡಿಯಾದಲ್ಲಿ ಸಿಗುವದಕ್ಕಿಂತ ಹೆಚ್ಚಿನದಲ್ಲ ಎಂದು ಅಭಿಪ್ರಾಯಪಟ್ಟಿತು. (Government of India Extract no 3219-3232 man 190). ಹಳೆಯ ನಂಬಿಕೆಗಳು ಅವುಗಳ ಸಂಪ್ರದಾಯ ಪೂರ್ತಿಯಾಗಿ ನಶಿಸಿಹೋಗುವುದಕ್ಕೆ ಮೊದಲು ಅದರ ದಾಖಲೆ ಅವಶ್ಯ. ವಿಕ್ಟೋರಿಯಾ ರಾಣಿ ಇದನ್ನು ಸಮರ್ಥಿಸಿದಳು."[೧]

ಭಾರತವು ವೈವಿಧ್ಯಮಯವಾದ ದೇಶವಾದ್ದರಿಂದ ಮಾನವಶಾಸ್ತ್ರಜ್ಞನಿಗೆ ಅಧ್ಯಯನ ಮಾಡಲು ಅನೇಕ ಅವಕಾಶವಿದೆ. ಹೀಗಾಗಿ ಮಾನವ ಜನಾಂಗ ಶಾಸ್ತ್ರವನ್ನು ಅರಿಯಲು ಹಲವಾರು ವಿದೇಶೀಯರು ಭಾರತಕ್ಕೆ ಬಂದು ತಮ್ಮ ಅನುಭವವನ್ನು ದಾಖಲಿಸಿರುತ್ತಾರೆ. ಮಾನವಶಾಸ್ತ್ರದ ಸಂಶೋಧನೆಯನ್ನು ಮೊದಲು ಕೈಗೊಂಡವರು. (ಅದರಲ್ಲೂ ನರಕುಲಶಾಸ್ತ್ರದ) ಅಧ್ಯಯನವನ್ನು ಕ್ರೋಡೀಕರಿಸಿದವರು ಹೆಚ್.ಹೆಚ್. ರಿಸ್ಲಿಯವರು. ಹೆಚ್.ಹೆಚ್. ರಿಸ್ಲಿಯವರು ಸಿವಿಲ್ ಸರ್ವೆಂಟ್ ಆಗಿ ಭಾರತಕ್ಕೆ ಬಂದದ್ದು ೧೮೭೩. ಕೂಡಲೆ ಮಾನವಶಾಸ್ತ್ರದ ಅಭ್ಯಾಸದಲ್ಲಿ ತೊಡಗಿದರು. ಬಂಗಾಳದಲ್ಲಿ ಮೂರು ವರ್ಷ ಸೆಕ್ರಟರಿಯಾಗಿ ಬಂಗಾಳದ ಜನರು ಬುಡಕಟ್ಟು ವಿಷಯದಲ್ಲಿ ಸಂಗ್ರಹಣೆ ಮಾಡಿದ್ದು (೧೮೭೨) ಬಂಗಾಳದ ನರಕುಲಶಾಸ್ತ್ರದ ವಿವರಣಾತ್ಮಕವಾದ ಹೊತ್ತಿಗೆ ಹೊರತಂದರು. ೧೮೯೧ರಲ್ಲಿ ಹರ್ಬಟ ರಿಸ್ಲಿಯವರು Tribes and castes of Bengal ಎಂಬ ಎರಡು ಸಂಪುಟ ಹೊರಬಂದು ಅತ್ಯಂತ ಜನಮನ್ನಣೆ ಪಡೆಯಿತು. ಇದರಿಂದ ಪ್ರೇರಣೆ ಹೊಂದಿದ ಬ್ರಿಟಿಷ್ ಸರ್ಕಾರ 'Peoples of India' ಎಂಬ ಬೃಹತ್ ಯೋಜನೆಗೆ ಮನಕೊಟ್ಟಿತು.

## ಎಡ್ಗರ್ ತರ್‍ಸ್ಟನ್ (Edgar Thurston)

ಎಡ್ಗರ್ ತರ್‍ಸ್ಟನ್ ತಮ್ಮ ವಿದ್ಯಾಭ್ಯಾಸವನ್ನು Eton ಮತ್ತು Kings college, London ನಲ್ಲಿ ಮುಗಿಸಿ, ಆ ಕಾಲದ ಗೌರವಾನ್ವಿತ ವೈದ್ಯ ಪದವಿ ಹೊಂದಿ ಭಾರತಕ್ಕೆ ಬಂದದ್ದು ೧೮೮೫ರಲ್ಲಿ. ೧೮೮೫ರಲ್ಲಿ ಮದ್ರಾಸ್ ಮ್ಯೂಸಿಯಂ ನಿರ್ವಾಹಕ ಎಂದು ಬ್ರಿಟೀಷ್ ಸರ್ಕಾರ ನೇಮಕ ಮಾಡಿತು. ಮೊದಲಿನಿಂದ ಮಾನವ ಶಾಸ್ತ್ರದಲ್ಲಿ ಹೆಚ್ಚು ಆಸಕ್ತಿ ಹೊಂದಿದ್ದ ಎಡ್ಗರ್ ಕರ್‍ಸ್ಟನ್ Bengal Asiatic Society (ಬೆಂಗಾಲ್ ಏಷ್ಯಾಟಿಕ್ ಸೊಸೈಟಿ) ಇಂದ ಮಾನವನ ಮೂಲ ಅಧ್ಯಯನಕ್ಕೆ ಬೇಕಾಗುವ ಸಲಕರಣೆಗಳನ್ನು ಎರವಲು ಪಡೆದರು. ಹೀಗೆ ಎರವಲು ತಂದ ಸಾಮಾನುಗಳಿಂದ ತಮ್ಮ ಮೂಲ ಅಧ್ಯಯನ ಆರಂಭಿಸಿದರು. ಮೊದಲು ನೀಲಗಿರಿ ಬುಡಕಟ್ಟಿನವರ ಅಧ್ಯಯನ, ಆಮೇಲೆ ಕೋಡರ ಬಗ್ಗೆ ಸಂಶೋಧನೆ, ಕೋಟರು, ಬಡಗರು ಸಂಶೋಧನೆಗೆ ಮನಗೊಟ್ಟರು. ಇದರಿಂದ ಹಲವು ಬಾರಿ ನಗೆಪಾಟಲಿಗೆ ಗುರಿಯಾದ್ದುಂಟು. "ಮದ್ರಾಸ್ ಹವಾಮಾನ ೧೦೦°

* # ೪೬, ೧ನೇ ಮಹಡಿ, ಶ್ಯಾಮಲ ಮಾತುಂಗ, ಮುಂಬೈ.

ತಲುಪಿದಾಗ ಮಾನವಶಾಸ್ತ್ರ ಸಂಶೋಧನೆ ಎತ್ತರಕ್ಕೆ ಏರುತ್ತದೆ."[೨] (೧೮೭೪-೧೯೯೯) ಬುಡಕಟ್ಟಿನ ಜನರ ಅಧ್ಯಯನದ ಪ್ರಾರಂಭವೆನ್ನಬಹುದು.

ಎಡ್ಗರ್ ತರ್ಸ್ಟನ್‌ರವರನ್ನು, ಬ್ರಿಟೀಷ್ ಸರ್ಕಾರ ಹಮ್ಮಿಕೊಂಡಿದ್ದ People of India Project 1901, ಯೋಜನೆಯಲ್ಲಿ ಸೇರಿಸಿಕೊಳ್ಳಲಾಯ್ತು. ಬ್ರಿಟಿಷ್ ಸರ್ಕಾರ, ಭಾರತದ ವಿವಿಧ ಪ್ರಾಂತಗಳಿಂದ ವಿವಿಧ ಜನಾಂಗಗಳ ತುಲನಾತ್ಮಕವಾದ ಸಂಶೋಧನೆ ಮತ್ತು ಕ್ರೋಡೀಕರಣದ ಯೋಜನೆಯನ್ನು ರೂಪಿಸಿತ್ತು. ಎಡ್ಗರ್ ತರ್ಸ್ಟನ್ ಈ ಅಧ್ಯಯನಕ್ಕೆ ಸಹಾಯಕರಾಗಿ ನಿಂತು ಕ್ರೋಡೀಕರಣ ದಲ್ಲಿ ಮುಖ್ಯ ಪಾತ್ರವಹಿಸಿದರು. ಅಷ್ಟು ಹೊತ್ತಿಗಾಗಲೆ ಎಡ್ಗರ್ ತರ್ಸ್ಟನ್‌ರವರು ಸಾಕಷ್ಟು ಪ್ರಸಿದ್ಧಿಯಾಗಿದ್ದರು. ಮದ್ರಾಸ್ ಮ್ಯೂಸಿಯಂನ ಕಾರ್ಯನಿರ್ವಾಹಕರಾಗಿದ್ದ ತರ್ಸ್ಟನ್, ಕೋಡರ ಬಗ್ಗೆ ಮುಖ್ಯ ಪ್ರಬಂಧ ಬರೆದು ಅದನ್ನು ಮದ್ರಾಸ್ ಮ್ಯೂಸಿಯಮ್‌ನಿಂದ ಪ್ರಕಟಣೆ ಮಾಡಿದ್ದರು. ಮದ್ರಾಸ್ ಮ್ಯೂಸಿಯುಮ್ ಅವರ ನೇತೃತ್ವದಲ್ಲಿ ಮಾನವ ಶಾಸ್ತ್ರದ ಸಂಶೋಧನೆಯಲ್ಲಿ ಮುಂಚೂಣಿಯಲ್ಲಿತ್ತು. ಎಡ್ಗರ್ ತರ್ಸ್ಟನ್ ತುಲನಾತ್ಮಕವಾದ ಅಭ್ಯಾಸದಲ್ಲೂ ನಿರತರಾಗಿದ್ದರು.

ತರ್ಸ್ಟನ್ ಮದ್ರಾಸ್ ಮ್ಯೂಸಿಯಮ್‌ನಲ್ಲಿ ಅಧಿಕಾರಿಯಾಗಿದ್ದು, Ethnographic Super-in-tendent ಆಗಿದ್ದರಿಂದ, ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಹಲವಾರು ಕಡೆ ಸುತ್ತಾಡಿ, ಹಳ್ಳಿಗಾಡಿನ ಬುಡಕಟ್ಟಿನ ಜನರ ಜೊತೆ ಸಂಪರ್ಕ ಹೊಂದಿ ಹಲವಾರು ಮಾಹಿತಿ ಸಂಗ್ರಹಿಸಿದರು. ಪತ್ರ ವ್ಯವಹಾರದ ಮೂಲಕ ಹಲವು ಮಾಹಿತಿ ಪಡೆದರು. ನಶಿಸಿ ಹೋಗುತ್ತಿರುವ ಸಂಪ್ರದಾಯಗಳು ಮತ್ತು ಅವಶ್ಯವಾದ ವಿಶೇಷ ಲಕ್ಷಣಗಳನ್ನು ಗುರುತಿಸುವ ಪ್ರಯತ್ನ ಮಾಡಿದರು. ಆಚಾರ ವಿಚಾರ ಪದ್ಧತಿಗಳು ಕೇವಲ ಸಂಗ್ರಹಾಲಯ ದಲ್ಲಿಯೋ, ವರದಿಗಳಲ್ಲೋ ಅಥವಾ ಸೊಸೈಟಿಯ ರಿಪೋರ್ಟಿನಲ್ಲೋ ಅಥವಾ ಸರ್ಕಾರಿ ಪತ್ರಸಂಗ್ರಹಾಲಯದಲ್ಲಿ ನಶಿಸಿಹೋಗುತ್ತಿರುವುದನ್ನು ಕಂಡು ಅವುಗಳನ್ನು ಪುಸ್ತಕ ರೂಪವಾಗಿ ತರುವದು ಅವರ ಕರ್ತವ್ಯವೆಂದು ಭಾವಿಸಿ, ದಕ್ಷಿಣ ಭಾರತ ಅಂದರೆ ಮದ್ರಾಸ್ ಪ್ರೆಸಿಡೆನ್ಸಿ, ಟ್ರಾವಂಕೂರ್, ಮೈಸೂರು ಇವೆಲ್ಲಾ ಊರುಗಳ ಪ್ರವಾಸ ಕೈಗೊಂಡು ಮಾಹಿತಿ ಸಂಗ್ರಹಿಸಿದರು. ಬ್ರಿಟಿಷರ ಕ್ರೋಡೀಕರಣದ ಕೆಲಸದಲ್ಲಿ ಬಲಗೈ ಆದರು. ತರ್ಸ್ಟನ್‌ರವರ ಕ್ಷೇತ್ರಕಾರ್ಯದಲ್ಲಿ ಅವರಿಗೆ ಸಹಾಯಕ್ಕೆ ನಿಂತವರೆಂದರೆ ಕೆ. ರಂಗಾಚಾರಿ. ತರ್ಸ್ಟನ್ ರಜದಲ್ಲಿ ವಿದೇಶ ಪ್ರಯಾಣಿಸಿದಾಗ, ಅವರು ವಾಪಸ್ ಆಗುವದರೊಳಗೆ ಮಾಹಿತಿ ಸಂಗ್ರಹಿಸಿ, ಫೋಟೋ ತೆಗೆದು ಹಾಡುಗಳನ್ನು ಸಂಗ್ರಹಿಸಿ, ಹಲವಾರು ವರುಷ ದುಭಾಷಿಯಾಗಿ ಕೆಲಸ ಮಾಡಿದರು. ತರ್ಸ್ಟನ್ ಎಲ್.ಕೆ. ಅನಂತಕೃಷ್ಣ ಐಯ್ಯರ್ ಸಹಾಯವನ್ನೂ ಕೂಡ ಪಡೆದಿದ್ದರು ಆಗ ಎಲ್.ಕೆ. ಅನಂತಕೃಷ್ಣ ಐಯ್ಯರ್ ಕೊಚಿನ್ ಟ್ರೈಬ್ಸ್ ಮತ್ತು ಕ್ಯಾಸ್ಟ್ ಎಂಬ ಬೃಹತ್ ಗ್ರಂಥ ರಚನೆಯಲ್ಲಿ ತೊಡಗಿದ್ದರು. (Cochin Tribes and Caste)

ಮಾನವಶಾಸ್ತ್ರದ ಕ್ರೋಢೀಕರಣದ ಕೆಲಸಕ್ಕೋಸ್ಕರ ಪ್ರತಿಯೊಂದು ಪ್ರೆಸಿಡೆನ್ಸಿಗೆ (ಮುಖ್ಯಸ್ತನಿಗೆ) ಸರ್ಕಾರವು ೧೯೦೧ರಲ್ಲಿ, ೫೦೦೦ ರೂಪಾಯಿ ಸಂದಾಯ ಮಾಡಿತು. ಅದರಲ್ಲಿ ಎರಡು ಸಾವಿರ (೨೦೦೦.೦೦) ಟಿಪ್ಪಣಿ ವಿವರ ಬರೆಯುವದಕ್ಕೆ, ಪ್ರಶ್ನೆಗಳಿಗೆ ಉತ್ತರಿಸುವುದಕ್ಕೆ ಮತ್ತಿತರ ಸಂಶೋಧನೆಗೆ ವೆಚ್ಚ ಮಾಡತಕ್ಕದ್ದು. ಹೀಗಾಗಿ ಪ್ರತಿಯೊಂದು Province ನಲ್ಲಿ ಶೋಧನೆಯ ಕೆಲಸ ಶುರುವಾಯಿತು. ದಕ್ಷಿಣ ಭಾರತ, ಈ ವಿಷಯದಲ್ಲಿ ಹೆಚ್ಚಿನ ಉತ್ಸಾಹ ಕೋರಿದ್ದು, ಮೈಸೂರು ಮದ್ರಾಸ್, ಕೊಚ್ಚಿನ ಕ್ರೋಡೀಕರಣದಲ್ಲಿ ತೊಡಗಿಕೊಂಡವು. ತರ್ಸ್ಟನ್ ಪ್ರವಾಸ ಕೈಗೊಂಡು ಮಾಹಿತಿ ಸಂಗ್ರಹಣದಲ್ಲಿ ತೊಡಗಿದರು. ೧೯೦೩ರಲ್ಲಿ ಮೈಸೂರಿನ ಮಾಹಿತಿ ಕ್ರೋಢೀಕರಣವನ್ನು ಹೆಚ್.ವಿ. ನಂಜುಂಡಯ್ಯನವರು ವಹಿಸಿದರು.

೧೯೦೬ರಲ್ಲಿ ಎಡ್ಗರ ತರ್ಸ್ಟನ್ 'Ethnographic notes on South India' ಎಂಬ ಪುಸ್ತಕ ಪ್ರಕಟಿಸಿದರು. ಇದರಲ್ಲಿ ಸಾಕಷ್ಟು ವಿಸ್ಮಯಕರವಾದ ಮಾಹಿತಿ ಸಿಕ್ಕುತ್ತದೆ. ಹಲವು ವಿಧವಾದ ಮದುವೆ ಪದ್ಧತಿಗಳು, ಸಾವಿನ ಕ್ರಿಯೆಗಳು, ನಂಬಿಕೆಗಳು, ಜೀತ್ ಮತ್ತು ತಪ್ಪು ಮಾಡಿದಕ್ಕೆ ವಿಧಿಸುವ ದಂಡನೆಗಳು, ಉಡುಪು ಮತ್ತು Hook Swinging ಮತ್ತಿತರ ವಿಷಯಗಳ ಬಗ್ಗೆ ಸಮೃದ್ಧಿಯಾಗಿ ಮಾಹಿತಿ ಸಿಗುತ್ತದೆ. ಈ ಪುಸ್ತಕ ಹಲವು ಆವೃತ್ತಿಗಳನ್ನು ಕಂಡಿದೆ. ಮತ್ತು ಇದರಲ್ಲಿ ನಲವತ್ತು ಚಿತ್ರಗಳಿವೆ.

ಇದಾದ ಮೇಲೆ ಬಂದ ಮಹತ್ತರ ಕೃತಿ ಎಂದರೆ ೧೯೦೯ರಲ್ಲಿ ಹೊರಬಂದ 'Castes and Tribes of Southern India Vol. 1.7' ಇದೀಗ ನೂರೊಂದನೆ ವರುಷಕ್ಕೆ ಕಾಲಿಟ್ಟಿದೆ. ಹಾಗೆ ಅವರು ಬರೆದ ಹಲವು ಹೊತ್ತಿಗೆಗಳು ಇನ್ನೂ ಹಳೆಯವು. ಮೈಸೂರಿಗೆ ಸಂಬಂಧಪಟ್ಟಿದೆ. Castes and Tribes of Southern India ಪುಸ್ತಕದಲ್ಲೂ ಹಲವಾರು ವಿಷಯಗಳು ಮೈಸೂರಿನ ಮೇಲೆ ಬೆಳಕು ಚೆಲ್ಲುತ್ತದೆ. ಈ ಮೇರು ಕೃತಿಯನ್ನು ಒಂದಲ್ಲಾ ಒಂದು ಸಂದರ್ಭದಲ್ಲಿ ಉಲ್ಲೇಖ ಮಾಡಬೇಕಾಗುತ್ತದೆ. H.H. Risley ಯವರ ಪುಸ್ತಕ 'Caste and Tribes of Bengal' ನಂತರ ಬಂದ ಅತ್ಯಂತ ಮಹತ್ತರ ಕೃತಿ ಇದು.

ಈ ಕೃತಿಯ ವಿಮರ್ಶೆ ಮಾಡುವುದಕ್ಕೆ ಮೊದಲು ಎಡ್ಗರ್ ತರ್ಸ್ಟನ್ ತಾವು ಕ್ಷೇತ್ರ ಕಾರ್ಯವನ್ನು ಕೈಗೊಂಡಾಗ ಎದುರಿಸಿದ ಎಡರು ತೊಡರುಗಳನ್ನು ವಿವರಿಸಿರುತ್ತಾರೆ.

೧. *ತಾವು ಸರ್ಕಾರದ ಅಧಿಕಾರಿ ಎಂಬುದನ್ನು ಎಡ್ಗರ್ ತರ್ಸ್ಟನ್ ಮುಚ್ಚಿಡಲು ಆಗುತ್ತಿರಲಿಲ್ಲ. ಆದ್ದರಿಂದ ಹಲವಾರು ತೊಂದರೆಗಳನ್ನು ಎದುರಿಸಬೇಕಾಯ್ತು. ಜನರು ಇವರನ್ನು ಸಂಶಯದ ದೃಷ್ಟಿಯಿಂದ ನೋಡುತ್ತಿದ್ದರು. ಹೆಚ್ಚು ತೆರಿಗೆಯನ್ನು ತಮ್ಮಿಂದ ವಸೂಲು ಮಾಡಲು ಬಂದ ಅಧಿಕಾರಿ ಎಂದು ಹೆದರುತ್ತಿದ್ದರು.*

೨. *ಪ್ಲೇಗಿನ ಪಿಡಗು ವ್ಯಾಪಕವಾಗಿದ್ದರಿಂದ ಇನಾಕ್ಯು ಲೇಷ್ನಗೆ ಬಲವಂತವಾಗಿ ಒಳಪಡಿಸುವರೆಂದೂ ಮತ್ತು ವೈನಾಡಿಗೆ ಹೋದಾಗ ಪೆರಿಯ ಮಹಿಳೆಯರು ತಮ್ಮನ್ನು ಕೊಂದು ಚರ್ಮವನ್ನು ತುಂಬಿಸಿ ಮ್ಯೂಸಿಯಮ್‌ನಲ್ಲಿ ಇಡಬಹುದೆಂದು ಸಂಶಯ ಪಟ್ಟಾರು.*

೩. *ಮೈಸೂರಿನ ಕ್ಷೇತ್ರಯಾತ್ರೆಯಲ್ಲಿ ಸ್ಥಳೀಯರು ಇವನು ಯಾರೊ ಮಿಲಿಟರಿ ಅಧಿಕಾರಿ (ಆಗ ತಾನೆ Boer War ಮುಗಿದಿತ್ತು) ತಮ್ಮನ್ನು ದಕ್ಷಿಣ ಆಫ್ರಿಕಾಕ್ಕೆ ಜೀತಕ್ಕಾಗಿ ಕರೆದುಕೊಂಡು ಹೋಗಲು ಬಂದವನೆಂದು ತಮ್ಮ ಜಾಗದಿಂದ ಪರಾರಿಯಾಗಲು ಯತ್ನಿಸಿದರು.*

ಅದೂ ಅಲ್ಲದೆ ಜನರನ್ನು Foot Rule ಇಂದ ಅಳತೆ ಮಾಡಿ, ಉದ್ದ, ತೂಕ, ಅಳತೆ ಎಲ್ಲವನ್ನೂ ನೋಡುತ್ತಿದ್ದರಿಂದ ಅನುಮಾನಾಸ್ಪದವಾಗಿ ತಮ್ಮನ್ನು ಸೈನ್ಯಕ್ಕೆ ಸೇರಿಸಲು ಬಟ್ಟೆ ಹೊಲಿಯಲು ಬಂದಿರಬಹುದೆಂದು ಸಂಶಯಪಟ್ಟು ಒಬ್ಬ ನಾಗರೀಕ ಅವರ lintometer ರನ್ನು ಗಟ್ಟಿಯಾಗಿ ಹಿಡಿದು ತನ್ನ ಬಟ್ಟೆ ಕಳಚಿ ಹೆದರಿಕೆಯಿಂದ ಓಡಿಹೋದನು.

ಒಬ್ಬ ಪುರಸಭೆಯಲ್ಲಿ ಕೆಲಸಕ್ಕಿದ್ದವನು ಅಳತೆಯನ್ನೆಲ್ಲಾ ಮಾಡಿದ ಮೆಲೆ ಬಿಕ್ಕಿ ಬಿಕ್ಕಿ ಅತ್ತನು. ಅವನ ಹೆಂಡತಿ, ತನ್ನ ಗಂಡ ಪ್ರಯೋಗಶಾಲೆ ಒಳಗೆ ಹೋಗುತ್ತಲೇ ತನ್ನ ಗಂಡನನ್ನು ಬಿಟ್ಟುಹೊರಟಳು. ಮತ್ತೆ ಕೆಲವರು ತರ್ಸ್ಟನ್ ಮಧ್ಯಾನ್ಹ ನಾಲ್ಕು ಘಂಟೆಯೊಳಗೆ ತನ್ನ ಪ್ರಯೋಗ, ಅಳತೆ, ಮುಗಿಸಬೇಕೆಂದೂ, ಬಿಳಿಯನು ತನ್ನನ್ನು ಮುಟ್ಟಿದ್ದರಿಂದ ತಾವು ಜಾತಿ ಭ್ರಷ್ಟರಾವಾಗುವೆನೆಂದೂ, ಅಪವಿತ್ರನಾಗಿದ್ದರಿಂದ ಸಂಧ್ಯಾಕಾಲಕ್ಕೆ ಮೊದಲು ಸ್ನಾನ ಮಾಡಬೇಕೆಂದು ತಿಳಿಸಿದರು. ಆದ್ದರಿಂದ Edger Thurston ಅಳತೆ ಮಾಡುವಾಗ ಹಲವಾರು ದಿವಸ ಕೆಲಸವಿಲ್ಲದೆ, ಮತ್ತೆ ಹಲವು ಸಲ ಇವರ ಕೆಟ್ಟ ಕಣ್ಣು ಸ್ಥಳೀಯರ ಮೇಲೆ ಬಿದ್ದುದರಿಂದ ಮರಣ ಸಂಭವಿಸಿತೆಂದು ದ್ವೇಷಿಸಿದ್ದುಂಟು. ಹೀಗಾಗಿ ಎಷ್ಟೇ ಅಡಚಣೆಗಳಿದ್ದರೂ ತರ್ಸ್ಟನ್ ಮಾತ್ರ ತಮ್ಮ ಕೆಲಸವನ್ನು ಮುಂದುವರಿಸಿ ಅನುಭವವನ್ನು ದಾಖಲಿಸಿದ್ದಾರೆ.

ಅವರ ಮೇರು ಕೃತಿ, Castes and Tribes of South India 7. Vols. 1909 ಹೊರಬಂದು ಅತ್ಯಂತ ಜನಪ್ರಿಯವಾಗಿ ಮೆಚ್ಚುಗೆ ಪಡೆಯಿತು. ಏಳು ಸಂಪುಟದ ಈ ಗ್ರಂಥ ಅಕಾರಾದಿಯಲ್ಲಿದೆ. ಇದರಲ್ಲಿ ವಿಭಿನ್ನ ಜನರ ಆಚಾರ, ಸಂಪ್ರದಾಯ, ದೈಹಿಕ ಲಕ್ಷಣಗಳು, ಸ್ವಭಾವ, ಉಡುಪು, ಜೀವನಶೈಲಿ, ಮುನ್ನೂರು ಜಾತಿ ಪಂಗಡಗಳು, ಬುಡಕಟ್ಟು ಜನರ ಸಂಪ್ರದಾಯ ಎಲ್ಲವನ್ನೂ ಒಟ್ಟುಗೂಡಿಸಿದೆ. ಮತ್ತು ಮೈಸೂರಿನ ಬಗ್ಗೆ ಸಾಕಷ್ಟು ವಿಷಯ ಸಂಗ್ರಹಣೆ ಇದೆ. ಏಳು ಸಂಪುಟದಲ್ಲಿ ೧೨೦ ಪೋಟೋಗಳಿವೆ. ಇದೆಲ್ಲವನ್ನೂ ಆ ಕಾಲದಲ್ಲಿ ದಾಖಲಿಸಿದ್ದರಿಂದ ಹಲವು ನ್ಯೂನತೆಗಳಿರ ಬಹುದು ಆದರೆ ಇದರ ಉಪಯೋಗ ಅಪಾರವಾಗಿದೆ. ಇಂಗ್ಲೆಂಡಿನ 'ನೇಚರ್' ಎಂಬ ಆಂಗ್ಲ ಪತ್ರಿಕೆ (19 Sept 1910) ಈ ಕೃತಿಯನ್ನು ವಿಮರ್ಶಿಸುತ್ತಾ, "ಇದೊಂದು ಉತ್ತಮವಾದ ಕೃತಿ. ಇದು ಯುವಪೀಳಿಗೆಗೆ ಸಂಶೋಧನೆಗೆ ಸಹಾಯವಾಗಬಹುದು ಮತ್ತು ಸಂಪ್ರದಾಯ ಪರಂಪರೆ ಗಳನ್ನು ದಾಖಲಿಸಿರುವ ಈ ಪುಸ್ತಕ ಒಂದು ಮಾಹಿತಿ ಗಣಿ ಎಂದು ವರ್ಣಿಸಿದೆ". ದಕ್ಷಿಣ ಭಾರತದ ಎಲ್ಲಾ ಬುಡಕಟ್ಟು, ಜಾತಿ, ಸಂಪ್ರದಾಯ ಆಚಾರ ವಿಚಾರ ಎಲ್ಲವನ್ನೂ ಕ್ರೋಢೀಕೃತ ಮಾಡಿ ಒಟ್ಟಿಗೆ ಹೊಂದಿಸಿದ ಮೊದಲನೆ ಕೃತಿ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು.

ಹಲವು ವಿಷಯಗಳಲ್ಲಿ ತರ್ಸ್ಟನ್‌ರವರು ಸಾಮ್ಯತೆ ಯನ್ನು ಕಂಡಿರುವುದನ್ನು ನೋಡಬಹುದು. ಹರಿಜನರು ಹೊಲದಲ್ಲಿ ಕೆಲಸ ಮಾಡುವವರು ಸೌತ್ ಕ್ಯಾನರಾದಲ್ಲಿ (South Canara) ಇವರು ಗುಲಾಮರಾಗಿ ಅಥವಾ ಊಳಿಗರಾಗಿ ಕೆಲಸ ಮಾಡುವವರು. ಮಲೆಯಾಳದಲ್ಲಿ ಪುಲಯನ್, ತಮಿಳಿನಲ್ಲಿ ಪೆರಿಯನ್ ಎಂದು ಸಂಬೋಧಿಸು ವರು. ಆಂಧ್ರದ ಮಾಲಾನರು, ಮಹಾರಾಷ್ಟ್ರದ ಮಹಾರ್ ಜನಾಂಗ, ಇವರನ್ನೆಲ್ಲಾ ಒಟ್ಟಾಗಿ ದಲಿತರೆಂದು ಕೂಡಿಸ ಬಹುದು [ಹಲವಾರು ವಿಭಿನ್ನತೆಯಲ್ಲಿ ಒಂದು ಸಾಮ್ಯವನ್ನು ಕಂಡಿರುವುದು ವೈಶಿಷ್ಟ].

ಮೈಸೂರಿನ ವಿಷಯ ಸಂಗ್ರಹಣೆಗೆ, ಈ ಕೆಳಗೆ ಕಾಣಿಸಿರುವ ಎಡ್ಗರ ತರ್ಸ್ಟನ್‌ರವರ ಎರಡು ಹೊತ್ತಿಗೆಗಳು ಮತ್ತಷ್ಟು ಮಾಹಿತಿ ಒದಗಿಸುತ್ತದೆ.

೧. Monograph on Wood Caring in Southern India ಈ ಹೊತ್ತಿಗೆ ೧೯೦೩ರಲ್ಲಿ ಬರೆದದ್ದು. ಇದು ಒಂದು ಚಿಕ್ಕ ಪುಸ್ತಕವಾದರು ಹಲವಾರು ವಿಷಯಗಳು ಅಡಕವಾಗಿದೆ. ವಿಶೇಷವಾಗಿ ಶ್ರೀಗಂಧದ ಕೆಲಸ ಮಾಡುವ ಗುಡಿಕಾರರ ಬಗ್ಗೆ ಮಾಹಿತಿ ಇದೆ. ಇದರಲ್ಲಿ ೨೨ ಪೋಟೋಗಳಿವೆ. ಶ್ರೀಗಂಧದ ತಿರುಳನ್ನು

ಉತ್ತಮವಾದ ಕೆತ್ತನೆ ಕೆಲಸಕ್ಕೆ ಉಪಯೋಗಿಸುವವರು. ಮಿಕ್ಕುಳಿದ ಶ್ರೀಗಂಧವನ್ನು ಹೊರ ಊರಿಗೆ ಮತ್ತು ವಿದೇಶಕ್ಕೆ ಕಳುಹಿಸುವರು. ಹಲವಾರು ಸುವಾಸನೆ ಎಣ್ಣೆ ಮತ್ತು ನಾಜೂಕಾದ ಸಾಮಾನು ಶ್ರೀಗಂಧದಿಂದ ತಯಾರಿಸಲ್ಪಡುತ್ತದೆ.

ಶ್ರೀಗಂಧದ ಕೆತ್ತನೆ ಕೆಲಸ ಮಾಡುವವರು 'ಗುಡಿಕಾರ ಜಾತಿಗೆ' ಸೇರಿದ್ದು ಸೊರಬ, ಸಾಗರ ತಾಲ್ಲೂಕಿಗೆ ಸೇರಿದವರು. ಶಿವಮೊಗ್ಗ ಡಿಸ್ಟ್ರಿಕ್ಟನ ವಾಯುವ್ಯ ಪ್ರದೇಶದಲ್ಲಿ ವಾಸ ಮಾಡುವರು. ಇವರೇ ಗುಡಿಕಾರರ ಮೂಲಸ್ತರು. ಇವರು ಕುಶಲ ಕರ್ಮಿಗಳಾಗಿದ್ದು, ಇವರ ಪರಿವಾರದವರು, ಹೊನ್ನಾವರ, ಕುಮಟಾ, ಸಿರ್ಸಿ, ಸಿದ್ದಾಪುರ, ಬನವಾಸಿಯಲ್ಲಿ ನೆಲಸಿರುವರು. ಆದರೆ ಸಾಗರ, ಸೊರಬದ ಜನರ ಅಚ್ಚುಕಟ್ಟು, ನಾಜೂಕು ಇವರಿಗಿಲ್ಲ. ಉತ್ತರ ಕನ್ನಡ ಗುಡಿಕಾರರು ಕೆತ್ತನೆಯ ಕೆಲಸ, ಬೆಂಡಿನ ಕೆಲಸದಲ್ಲಿ ಅಸಾಧಾರಣ ಕೌಶಲ್ಯ ತೋರಿಸಿರುವರು.

ಸೊರಬ, ಸಾಗರದಲ್ಲಿ ಹೆಚ್ಚಿನ ಗುಡಿಕಾರರ ವಾಸ. ಯಾಕೆಂದರೆ ಇಲ್ಲಿ ಗುಡಿಕಾರರಿಗೆ ಹೆಚ್ಚಿನ ಕೆಲಸವಿರುತ್ತೆ. ಮತ್ತು ಪಾಳೆಗಾರರಿಂದ, ಸರದಾರರಿಂದ ಈ ಕಲೆಗೆ ಪ್ರೋತ್ಸಾಹವಿದೆ. ಈ ಕಲೆಯನ್ನು ಮಕ್ಕಳಿಗೆ ಹುಟ್ಟುತ್ತಲೇ ಕುಟುಂಬದ ಸಂಪ್ರದಾಯದಂತೆ ಹೇಳಿಕೊಡುವದರಿಂದ, ಇದು ಹಲವರ ಮಧ್ಯೆ ಮಾತ್ರ ಉಳಿದು ಏಕಸ್ವಾಮಿತ್ವ ಪಡೆದಿದೆ. ಸ್ಯಾಂಡಲ್ ಮರದಿಂದ ಮಾಡುವ ಸಾಮಾನುಗಳು ಮತ್ತು ಬೆಲೆಯನ್ನು ಈ ಪುಸ್ತಕದಲ್ಲಿ ನಮೂದಿಸಿದೆ. ಇದರಿಂದ ನಮಗೆ ಆ ಕಾಲದ ಆರ್ಥಿಕತೆಯ ಒಂದು ನೈಜ ಚಿತ್ರ ದೊರಕುತ್ತದೆ. ಈಗ ಗಂಧದ ಮರದ ಸಾಮಾನು ಯಾರಿಗೂ ನೋಡಲು, ಕೊಳ್ಳಲು ಸಿಕ್ಕುವುದಿಲ್ಲ. ಸಾಮಾನಿನ ವಿವರ ಮತ್ತು ಬೆಲೆ ಇಲ್ಲಿ ನಮೂದಿಸಿದೆ.

List of Articles ordinarily made in Sandlewood

| | |
|---|---|
| Comb | 4-8 Annas |
| Toys | 8As-2 Rs. |
| Images | Rs. 3-8 |
| Book Rack | Rs. 30-75 |
| Paper Cutter | Rs. 1-4 |
| Watch Stand | Rs. 6-50 |
| Photograph Frame | Rs. 50 |
| Envelope Box | Rs. 20 |
| Pen Rack | Rs. 2-10 |
| Card Case | Rs. 5-15 |
| Fan | Rs. 3-15 |
| Casket | Rs. 250-600 |
| Walking Stick | Rs. 6-50 |

(The ordinary rate of Carving is 10 Annas a Square J.E.A. dcruz inch) Fig. are from the book, Monogrophy on wood carving in southern India P. 7. 1903. ಸರಕಾರದ ಪ್ರೋತ್ಸಾಹವಿದ್ದುದರಿಂದ, ಗುಡಿಕಾರರು ತಯಾರಿಸುವ, ಚಿಕ್ಕಪೆಟ್ಟಿಗೆಗಳು ಕ್ಯಾಬಿನೆಟ್ ಇವುಗಳು ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಲ್ಪಡುತ್ತಿತ್ತು ಮತ್ತು ಬಹುಮಾನ ವಿತರಣೆಗೋಸ್ಕರ ಹೆಚ್ಚಿನ ಸಂಖ್ಯೆಯಲ್ಲಿ ತಯಾರಿಸಲಾಗುತ್ತಿತ್ತು.

ಉದ್ಯಮದ ದೃಷ್ಟಿಯಿಂದ, ಹೆಚ್ಚಿನ ಪ್ರಮಾಣದಲ್ಲಿ ತಯಾರಿಸುತ್ತಿರಲಿಲ್ಲ. ಸ್ಥಳೀಯರಿಗೆ ಬೇಕಾದ ಆಭರಣದ ಪೆಟ್ಟಿಗೆಗಳು ಚಿಕ್ಕ ಚಿಕ್ಕ ಮೂರ್ತಿಗಳು ಮಂಟಪದ ಒಳಗೆ ಇಡುವ ಮೂರ್ತಿಗಳು, ಆಟದ ಸಾಮಾನುಗಳು, ಬಹುಮಾನ ವಿತರಣೆಗೆಂದು ಮತ್ತು ಸುಂದರವಾದ ಕೆತ್ತನೆ ಕೆಲಸ ಪುರಾಣದಲ್ಲಿ ಬರುವ ವ್ಯಕ್ತಿಚಿತ್ರಗಳು, ಶ್ರೀಮಂತರ ಮನೆಯನ್ನು ಅಲಂಕರಿಸುವುದಕ್ಕೆ ಪೂಜಾ ಸಾಮಗ್ರಿಯಾಗಿ ವಿಗ್ರಹ ಇಟ್ಟರೂ, ಅದಕ್ಕೆ ಪೂಜೆ ಮಾಡುತ್ತಿರಲಿಲ್ಲ ಯಾಕೆಂದರೆ ಕಲ್ಲಿಗೆ ಅಥವಾ ಲೋಹಕ್ಕೆ ಮಾತ್ರ ಪೂಜೆ ಸಲ್ಲಿಸಲಾಗುತ್ತಿತ್ತು.

ಇಲ್ಲಿ ಗಮನಿಸಬೇಕಾದ ಸಂಗತಿ, ಶ್ರೀಗಂಧದ ಹಿಡಿಯಿಂದ ಮಾಡಿದ ಚಾಮರ, ದೇವರ ಮೆರವಣಿಗೆಗೆ ಮತ್ತು ಮಹಾರಾಜರು ಹೊರಗೆ ಹೊರಟಾಗ ಚಾಮರ ಉಪಯೋಗಿಸಲ್ಪಡುತ್ತಿತ್ತು. ಅನೇಕ ವೇಳೆ, ಗುಡಿಕಾರರು ತಮ್ಮ ಕಲಾಕೃತಿಯನ್ನು ಪ್ರದರ್ಶಿಸಿ ಜನಪ್ರಿಯತೆ ಪಡೆಯುವರು. ಯೂರೋಪಿಯನ್ ಮುಖ್ಯಸ್ತರಿಗೆಂದೂ ಹಲವು ಕೃತಿಗಳನ್ನು ರಚಿಸಿದ್ದುಂಟು. ಆದರೆ ಅವರ ಹೆಚ್ಚಿನ ಜೀವನೋಪಾಯಕ್ಕೆ ಸರಕಾರವನ್ನು ಅವಲಂಬಿಸಿದ್ದರು. ಮೈಸೂರು ಕಲಾವಿದ ಸಂಪ್ರದಾಯ ಕಲೆಯನ್ನು ಮೆಚ್ಚಿದ್ದರೂ, ಬೇರೆ ಊರಿನ ಕಲಾಕಾರರ ಪ್ರಭಾವ ಇವರ ಮೇಲಾಗಿ, ಅದರಲ್ಲೂ ಹೆಚ್ಚಾಗಿ, ಮದ್ರಾಸಿನ ಕಲಾಕಾರರ ಪ್ರಭಾವವಿದೆ.

೨. ಎಡ್ಗರ್ ತರ್‍ಸ್ಟನ್‌ರವರ Coins, Catalogue No. 1. Mysore 1888. ಗೌರ್ನಮೆಂಟ್ ಸೆಂಟ್ರಲ್ ಮ್ಯೂಸಿಯಮ್, ಮದ್ರಾಸ್‌ನಿಂದ ಪ್ರಕಟವಾಯ್ತು. ಈ ಪುಸ್ತಕಕ್ಕೆ ಸುದೀರ್ಘವಾದ ಮುನ್ನುಡಿ ಇದೆ. ಮುನ್ನುಡಿಗೆ Lewis Rice ರವರ Mysore Gazetteer ಮತ್ತು Col. H.P. Hawkes ರವರ Coins of Mysore (1856) ಪುಸ್ತಕಗಳಿಂದ ತಾವು ಹಲವಾರು ಮಾಹಿತಿ ಗಳನ್ನು ಸಂಗ್ರಹಿಸಿರುವುದನ್ನೂ ಮತ್ತು Col. H.P. Hawkes ರವರ ಪುಸ್ತಕ ಸಿಕ್ಕುವದು ಬಹಳ ಕಷ್ಟವಾಯಿತೆಂದು ವಿವರಿಸಿರುವರು.

ಮೈಸೂರು ರಾಜಮನೆತನದ ಸುದೀರ್ಘ ಚರಿತ್ರೆಯನ್ನು ಅಚ್ಚುಕಟ್ಟಾಗಿ ವಿವರಿಸಿರುವುದು, ಒಡೆಯರ ವಂಶಾವಳಿ, ಕಂಠೀರವ ನರಸರಾಜರ ಕಾಲದಲ್ಲಿದ್ದ ಚಿನ್ನದ ನಾಣ್ಯ,

ನಾಣ್ಯದಲ್ಲಿದ್ದ ಚಿನ್ಹೆಗಳು ಇವೆಲ್ಲದರ ಚಿತ್ರ ಸಮೇತ ಈ ಪುಸ್ತಕದಲ್ಲಿ ವಿವರ ಸಿಗುತ್ತೆ.

ಕಂಠೀರವ ನರಸರಾಜರ ಚಿನ್ನದ ನಾಣ್ಯ ಮೊದಲ ಹಣ ಇದು ಬಹಳ ಕಾಲ ಮೈಸೂರಿನಲ್ಲಿ ಚಲಾವಣೆಯಲ್ಲಿತ್ತು. (೧೬೩೮-೫೯) ಇವರು ಮೊದಲು ಶ್ರೀರಂಗಪಟ್ಟಣದಲ್ಲಿ ಟಂಕಶಾಲೆಯನ್ನು ಸ್ಥಾಪಿಸಿ 'ಅಗಲ' ಅಥವಾ ದೊಡ್ಡ ಕಂಠೀರವ ಹಣ [ಕಂಠೀರವ ಫನಮ್) ಚಿನ್ನದ ಕಾಸು ಅಚ್ಚು ಹಾಕಿಸಿದ್ದರು. ಇದು ಬಹುಕಾಲ ಮೈಸೂರಿನ ನಾಣ್ಯ ವಾಗಿತ್ತು. ಕಂಠೀರವ ಹಣದ ಹಿಂದೆ ನರಸಿಂಗನ ಅವತಾರ ಮತ್ತು ಸೂರ್ಯ, ಚಂದ್ರ ಇತ್ತು. ಮೈಸೂರು ರಾಜರು ವರಹ ಅಥವಾ ಗೋಪುರ ಬಳಕೆ ಮಾಡಲಿಲ್ಲ. ಇದನ್ನು ಬಳಕೆ ಮಾಡಿದವರು ಬಿದನೂರು ಇಕ್ಕೇರಿ ಅರಸರು. ಕಂಠೀರವ ರಾಜರಿಗೆ ಮಕ್ಕಳಿಲ್ಲದೆ ಅವರಾದ ಮೇಲೆ ಬಂದ ಮೂರು ಅರಸರು, ಕೆಂಪದೇವರಾಜ, ಚಿಕ್ಕದೇವರಾಜ, ಕಂಠೀರವರಾಜ ಮೂಕರಸು ಮತ್ತು ದೊಡ್ಡ ಕೃಷ್ಣರಾಜ ಮೂಕರಸು. ಮೂಕರಸು ೧೭೩೧ರಲ್ಲಿ ನಿಧನರಾದರು. ೧೭೭೫ರಲ್ಲಿ ಚಾಮರಾಜರು ನಿಧನ ಹೊಂದಿದರು. ಹೈದರನ ಪ್ರಾಬಲ್ಯ ಹೆಚ್ಚಿತ್ತು. ಹೈದರನು ಗದ್ದುಗೆ ಏರಿ ರಾಜ್ಯವನ್ನು ತೆಗೆದುಕೊಂಡನು.

**ಹೈದರ್ ಮತ್ತು ಟೀಪೂಸುಲ್ತಾನ್ (೧೭೭೩-೧೭೯೯)**

ಹೈದರ್ ಮತ್ತು ಟೀಪೂಸುಲ್ತಾನ್ ಮೂವತ್ತು ವರುಷ ಆಡಳಿತ ನಡೆಸಿದರು. ಹೈದರನ ನಾಣ್ಯಗಳಲ್ಲಿ ತಾನು ಗೆದ್ದ ಊರಿನಲ್ಲಿ ಪ್ರಸಿದ್ಧವಾದ ಚಿತ್ರಗಳನ್ನು ನಾಣ್ಯದ ಮೇಲೆ ಬಿಡಿಸುತ್ತಿದ್ದ. ಆದರೆ ಇವು ನಾಜೂಕಾಗಿರಲಿಲ್ಲ. ಟೀಪೂವಿನ ಕಾಲದ ನಾಣ್ಯ ಮುದ್ರಣದಲ್ಲಿ ಹಲವಾರು ವಿಧವಾದ ಚಿತ್ರಗಳು, ಮತ್ತು ಹೈದರ್ ಹೊರತಂದ ನಾಣ್ಯಗಳಲ್ಲಿ ಅವನ ಕೈನ ರುಜು ಇರುತ್ತಿತ್ತು. ೧೭೬೩ರಲ್ಲಿ ಹೈದರ್ ಇಕ್ಕೇರಿಯನ್ನು ಗೆದ್ದನು. ಗೆದ್ದಮೇಲೆ ಇಕ್ಕೇರಿ ಪಾಳೆಗಾರರ ಕಾಲದಲ್ಲಿದ್ದ ನಾಣ್ಯದ ಶ್ರೀಯನ್ನು ಅಳಿಸಿ ಶಿವಪಾರ್ವತಿ ಮತ್ತು ತನ್ನ ಹೆಸರಿನ ಆರಂಭದ ಅಕ್ಷರ ಬರೆಸಿದನು. ಇದು ಹೈದರ್ ಹೊರಡಿಸಿದ ಮೊದಲನೆ ನಾಣ್ಯ. ಬಿದನೂರಿನಲ್ಲಿ ಹೈದರನು ಒಂದು ಠಂಕಸಾಲೆಯನ್ನು ಸ್ಥಾಪಿಸಿದನು. ಕಾಲಕ್ರಮದಲ್ಲಿ ಇದಕ್ಕೆ ಉಪಯೋಗಿಸಿದ ಲೋಹ ನಶಿಸಿದ್ದು ಪುನಃ ಹೊಸ ಲೋಹದಿಂದ ನಾಣ್ಯಗಳನ್ನು ಮುದ್ರಿಸಲಾಯ್ತು. ಇದರಿಂದ ಮಾಡಿದ ಚಿನ್ನದ ನಾಣ್ಯವನ್ನು ಬಹದೂರಿ ಅಥವಾ ಇಕ್ಕೇರಿ ಪಗೋಡ ಅನ್ನುವರು. ಹೈದರನು ೧೭೭೩ರಲ್ಲಿ ಕ್ಯಾಲಿಕಟ್‌ನ್ನು ಗೆದ್ದನು. ೧೭೮೨ರಲ್ಲಿ ಸೋಲನ್ನು ಅನುಭವಿಸಿದನು. Calicut Fanam (ನಾಣ್ಯದ) ಮುಖದಲ್ಲಿ ಹೈದರನ ಕೈರುಜು, ಸಿಂಹ ಸೂಕ್ತ ಚಿತ್ರಗಳನ್ನು, ಮತ್ತು Calicut ಎಂದು ದಿನಾಂಕ ಕೂಡ ನಮೂದಿಸಿದೆ.

ಹೈದರಾಲಿಗಿಂತ ಟೀಪೂಸುಲ್ತಾನ್ ಸಾಕಷ್ಟು ವಿಧವಿಧ ವಾದ ನಾಣ್ಯ ಹೊರಡಿಸಿದನು. ಟೀಪೂ ತನ್ನ ಚಿನ್ನ ಮತ್ತು ಬೆಳ್ಳಿ ನಾಣ್ಯಗಳಲ್ಲಿ ತನ್ನ ತಂದೆಯ ರುಜವನ್ನು ಹಾಕಿಸಿದ್ದನು. ಇದು ತನ್ನ ತಂದೆಗೆ ಸಲ್ಲುವ ಗೌರವ ಎಂದು ಭಾವಿಸಿದ್ದನು. ಟೀಪೂವಿನ ಮೊದಲನೆ ನಾಣ್ಯ ಸುಲ್ತಾನಿ ಪಗೋಡ. ಹೈದರ್ ಆಲಿ ಹೊರಡಿಸಿದ್ದ ನಾಣ್ಯ ಸಾಮಾನ್ಯವಾಗಿದ್ದು, ಟೀಪೂ ಹೊರಡಿಸಿದ ನಾಣ್ಯಗಳಲ್ಲಿ ಹೆಚ್ಚಿನ ಚಿತ್ತಾರವಿದೆ.

೧. *ಅರ್ಧಪೈಸೆ : ಒಂದು ಕಡೆ ಹುಲಿ, ಮತ್ತೊಂದು ಕಡೆ ಕೊಡಲಿ. ಆದರೆ ಈ ನಾಣ್ಯ ಹೆಚ್ಚು ದಿನ ಇರಲಿಲ್ಲ.*

೨. *ಡಬ್ಬಲ್ ಪೈಸೆ : ಆನೆ ಒಂದು ಬಾವುಟವನ್ನು ಎತ್ತಿ ಹಿಡಿದಿದೆ ಮತ್ತು ಹಿಂದುಗಡೆ ಆಕಾರ ಕೆತ್ತಿದೆ.*

   *ಟೀಪೂ ಈಸ್ಟ್ ಇಂಡಿಯಾ ಕಂಪೆನಿಯ ಗುರುತು ಲಕ್ಷಣಗಳನ್ನು ತಾನು ಹೊರತಂದ ನಾಣ್ಯದಲ್ಲಿ ಅಡವಳಿಸಿದನು. ಮತ್ತು ತುಪಾಕಿ, ಫಿರಂಗಿ ಅದರ ಮೇಲೆ ಹಾಕಿಸಿದನು. ಮತ್ತು ಹೈದರನ ಹೆಸರನ್ನು ಕೆತ್ತಿಸಿದನು.*

ಟೀಪೂವಿನ ಮರಣದ ನಂತರ (೧೭೯೯) ಚಾಮರಾಜ ಒಡೆಯರ ಮಗ ಕೃಷ್ಣರಾಜ ಒಡೆಯರ್ ಚಿಕ್ಕವರಾದ್ದರಿಂದ ಪೂರ್ಣಯ್ಯ ರಾಜ ಆಡಳಿತ ನೋಡಿಕೊಂಡರು.

**ಬಹದೂರಿ ಪಗೋಡ**

ನಾಣ್ಯದಲ್ಲಿ ಹೈದರನ ಹೆಸರನ್ನು ತೆಗೆದು, ಶಿವಪಾರ್ವತಿ ಮತ್ತು ನಾಗರಿ ಭಾಷೆಯಲ್ಲಿ ಶ್ರೀ ಕೃಷ್ಣರಾಜ ಎಂದು ಬದಲಾವಣೆ ಮಾಡಲಾಯ್ತು. ಮುಮ್ಮಡಿ ಕೃಷ್ಣರಾಜ ಒಡೆಯರ್ ಸಿಂಹಾಸನ ಏರಿದ ಮೇಲೆ ಒಂದು ಚಿಕ್ಕ ತಾಮ್ರದ ನಾಣ್ಯ ಹೊರಡಿಸಿದರು. ನಾಣ್ಯದ ಮುಂದಿನ ಭಾಗದಲ್ಲಿ ಆನೆ, ಸೂರ್ಯ, ಚಂದ್ರ, ನಾಗರಿ ಭಾಷೆಯಲ್ಲಿ ಶ್ರೀ ಕೃಷ್ಣರಾಜ ಎಂದು ಕೆತ್ತಿಸಿದನು.

ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಯಲ್ಲಿ ಮತ್ತು ಮುಂದೆ ಚಾಮುಂಡಿ ಎಂದು ಕನ್ನಡದಲ್ಲಿ ಕೆತ್ತಲ್ಪಟ್ಟು, ಹಿಂದೆ ಆನೆಯ ಮೇಲೆ ಮತ್ತು ಕೃಷ್ಣ ಎಂಬ ಪದವನ್ನು ಬರೆಸಲ್ಪಟ್ಟಿತು. ಹೀಗೆ ವಿಧವಿಧವಾದ ನಾಣ್ಯ ಟಂಕಶಾಲೆಯಿಂದ ಹೊರಬಂದಿತು.

ತಾಮ್ರದ ಟಂಕಶಾಲೆ ಮೈಸೂರಿನದು. (೧೮೪೩) ಬೆಂಗಳೂರಿಗೆ ವರ್ಗಾಯಿಸಿ ೧೮೪೩ ಬೆಂಗಳೂರಿನ ಟಂಕಶಾಲೆ ಮುಚ್ಚಿತು. ಬೇರೆ ಕಡೆಗೆ ವರ್ಗಾಯಿಸ ಲಾಯ್ತು.

Edgar Thurston ರವರ Coins Catalogue I Mysore ಪುಸ್ತಕ ಅತಿ ವಿಸ್ತಾರವಾಗಿ ವರ್ಣಿಸಿದೆ. ಮೇಲೆ





ಕಾಣಿಸಿರುವ ನಾಣ್ಯದ ಬಗ್ಗೆ ಬರೆದಿರುವುದು ಅದರ ಸಂಕ್ಷಿಪ್ತ ಪರಿಚಯ.

ಹೀಗೆ Edgar Thurston ರವರ ಮೂರು ಕೃತಿಗಳು ಚರಿತ್ರಕಾರನಿಗೆ ಹಲವಾರು ಆಕಾರಗಳನ್ನು ಒದಗಿಸುವದಲ್ಲದೆ, ನೂರು ವರ್ಷಕ್ಕೆ ಮೇಲ್ಪಟ್ಟಿದ್ದರೂ ಅವುಗಳ ಉಪಯೋಗ ಕಡಿಮೆಯಾಗಿಲ್ಲ.

## ಆಧಾರಸೂಚಿ


೧. Cohn Bernard ; *An Anthropologist Among Historians.* P. 151.

೨. Edgar Thurston : *Castes and Tribes of Southern India.* Vol. I, (introductory note).

ಡಾ. ಹೆಚ್. ಚಂದ್ರಶೇಖರ*

# ರಾಯಚೂರು ಜಿಲ್ಲೆಯ ದೇವದುರ್ಗದ ಉಪ್ಪಾರರ ಗ್ರಾಮೋದ್ಯೋಗ: ಇತಿಹಾಸ ಮತ್ತು ವೈಜ್ಞಾನಿಕ ಹಿನ್ನೆಲೆ

ಉಪ್ಪು-ಪೀಠಿಕೆ

ಉಪ್ಪು ಮನುಷ್ಯನಿಗಷ್ಟೇ ಅಲ್ಲ ಪ್ರಾಣಿಗಳಿಗೂ ಬೇಕಾಗುವ ರಾಸಾಯನಿಕ ವಸ್ತು. ನಾವು ಉಪಯೋಗಿಸುವ ಉಪ್ಪು ಸೋಡಿಯಂ ಮತ್ತು ಕ್ಲೋರೈಡ್‌ಗಳ ಸಂಯುಕ್ತ ವಸ್ತು Nacl ಎಂದು ಅದನ್ನು ರಾಸಾಯನಿಕವಾಗಿ ಕರೆಯಲಾಗುತ್ತದೆ. ಸೋಡಿಯಂ ಮತ್ತು ಕ್ಲೋರೈಡ್‌ಗಳು ಪ್ರಮುಖ ಮೂಲವಸ್ತುಗಳಾದರೂ (Elements) ಉಪ್ಪಿನೊಳಗೆ ಇತರ ಕೆಲ ಮೂಲಧಾತುಗಳು ಅತ್ಯಲ್ಪ ಪರಿಮಾಣದಲ್ಲಿರುತ್ತವೆ. ಸುಖ ಸಂಸಾರಕ್ಕೆ ಪ್ರೀತಿ ಎಷ್ಟು ಮುಖ್ಯವೋ, ಅಷ್ಟೇ ಉಪ್ಪು ರುಚಿಯಾದ ಊಟಕ್ಕೆ ಅವಶ್ಯಕ. ಆದ್ದರಿಂದಲೇ ಉಪ್ಪಿಗಿಂತ ರುಚಿ ಇಲ್ಲ; ತಾಯಿಗಿಂತ ಬಂಧುವಿಲ್ಲ" ಎಂಬ ಗಾದೆ ಹುಟ್ಟಿಕೊಂಡಿದೆ.

ಕ್ರಿಪೂ. ೪ನೇ ಶತಮಾನದ ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ಉಪ್ಪಿನ ಉಲ್ಲೇಖ ಬರುತ್ತದೆ.[೧] ಉಪ್ಪನ್ನು ರಾಜ್ಯದ ಸೊತ್ತು ಎಂದು ಘೋಷಿಸಿ ಅದರ ಉಸ್ತುವಾರಿಯನ್ನು ನೋಡಿಕೊಳ್ಳಲು ಒಬ್ಬ ಅಧ್ಯಕ್ಷನನ್ನು ನೇಮಿಸಬೇಕೆಂದು ಚಾಣುಕ್ಯ ಹೇಳಿದ್ದಾನೆ. ಉಪ್ಪನ್ನು ಗಣಿಗಳಿಂದಲೂ ಮಣ್ಣಿನಿಂದಲೂ ಪಡೆಯಬಹುದೆಂದು ಹೇಳುತ್ತಾನೆ. ಉಪ್ಪನ್ನು ತಯ್ಯಾರಿಸುವವರು ಪ್ರಭುತ್ವಕ್ಕೆ ಒಂದು ನಿಶ್ಚಿತ ಪ್ರಮಾಣದಲ್ಲಿ ಸುಂಕವಾಗಿ ನೀಡಬೇಕೆಂದೂ, ಉಪ್ಪನ್ನು ಖರೀದಿಸುವವರೂ ಸುಂಕವನ್ನು ನೀಡಬೇಕೆಂದು (Purchase tax) ಎಂದು ಹೇಳುತ್ತಾನೆ. ಪರದೇಶದಿಂದ ಉಪ್ಪನ್ನು ಆಮದು ಮಾಡಿಕೊಂಡರೆ, ಅದರ ೧/೬ರಷ್ಟು ಭಾಗವನ್ನು ಪ್ರಭುತ್ವಕ್ಕೆ ಸುಂಕವಾಗಿ (Import tax) ಕೊಡಬೇಕೆಂದು ಹೇಳುತ್ತಾನೆ. ಪುರಾತನ ಇತಿಹಾಸ ಕಾಲದಿಂದಲೂ ಉಪ್ಪು ಮಾನವ ಜನಾಂಗದ ಜೀವನದಲ್ಲಿ ಪ್ರಮುಖ ಪಾತ್ರವಹಿಸಿತ್ತು ಎಂಬುದು ಇದರಿಂದ ತಿಳಿದು ಬರುತ್ತದೆ.

ಹಾಗೆಯೇ, ಫ್ರಾನ್ಸಿಸ್ ಬಕಾನಸ್‌ನು ಟೀಪುಸ್ತಲ್ತಾನ ನಂತರ ಮೈಸೂರು ಪ್ರಾಂತದಲ್ಲಿ ಪ್ರವಾಸ ಮಾಡುವಾಗ ಉಪ್ಪು ತಯಾರಿಕಾ ಘಟಕಗಳನ್ನು ವಿವರಿಸುತ್ತಾನೆ.[೨]

ಪ್ರಸ್ತುತ ಪ್ರಬಂಧದಲ್ಲಿ ಹಿಂದಿನ ಹೈದ್ರಾಬಾದ (ನೈಜಾಂ) ಪ್ರಾಂತದಲ್ಲಿ ಅಸ್ತಿತ್ವದಲ್ಲಿದ್ದ ಉಪ್ಪಿನ ಗ್ರಾಮೋದ್ಯೋಗದ ಬಗ್ಗೆ ಐತಿಹಾಸಿಕ ಹಾಗೂ ವೈಜ್ಞಾನಿಕ ಸಂಗತಿಗಳನ್ನು ಅಭ್ಯಸಿಸಿ ಚರ್ಚಿಸಲಾಗಿದೆ.

## ನಿಜಾಂ ಪ್ರಾಂತದಲ್ಲಿ ಉಪ್ಪಿನ ಗ್ರಾಮೋದ್ಯೋಗ

ನಿಜಾಂ ಪ್ರಾಂತದ ನೆರೆಯ, ಬ್ರಿಟೀಶ ಇಂಡಿಯಾದ ಜಿಲ್ಲೆಗಳಾದ ಬಳ್ಳಾರಿ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಸ್ಥಳೀಯವಾಗಿ ಉಪ್ಪನ್ನು ತಯಾರಿಸುವುದನ್ನು ಬ್ರಿಟೀಶ ಸರ್ಕಾರ ೧೯೨೦ರ ಸುಮಾರಿಗೆ "ಉಪ್ಪಿನ ಅಧಿನಿಯಮ"ದ (Salt Act) ಪ್ರಕಾರ ನಿಷೇಧಿಸಿತು. ಅಂದರೆ ಜನಸಾಮಾನ್ಯರು, ತಮ್ಮ ಜೀವನಕ್ಕೆ ಅತ್ಯಾವಶ್ಯಕವಾದ ವಸ್ತುವನ್ನು ಬ್ರಿಟೀಶರಿಂದ ಆಮದಾದ ವಸ್ತುವನ್ನಾಗಿ ದುಬಾರಿ ಬೆಲೆ ತೆತ್ತು ಖರೀದಿಸಬೇಕಾಗುತ್ತಿತ್ತು. ಆದರೆ ನಿಜಾಂ ಸರ್ಕಾರ ತನ್ನ ಪ್ರಾಂತದಲ್ಲಿ ಉಪ್ಪನ್ನು ತಯಾರಿಸುವುದನ್ನು ಪ್ರೋತ್ಸಾಹಿಸಿತು. ಸ್ಥಳೀಯ ಉಪ್ಪಾರರಿಗೆ ಅನುಕೂಲವಾಗಲೆಂದು ಉಪ್ಪಿನಾಂಶವಿರುವ ಮಣ್ಣಿನ ಅನ್ವೇಷಣೆಯನ್ನು "ಹೈದ್ರಾಬಾದ ಭೂವೈಜ್ಞಾನಿಕ ಸರ್ವೇಕ್ಷಣ ಇಲಾಖೆಯ (Hydrabad Geological Subvey) ಮೂಲಕ ಸರ್ವೇಕ್ಷಣಾ ಮತ್ತು ಸಂಶೋಧನೆ ಕೈಗೊಂಡಿತು.[೩] ಈ ಸರ್ವೇಕ್ಷಣೆ ಮತ್ತು ಸಂಶೋಧನೆಯ ಕಾರ್ಯವನ್ನು ಆ ಇಲಾಖೆಯ ನಿರ್ದೇಶಕರಾಗಿದ್ದ ಕ್ಯಾಪ್ಟನ್ ಲಿಯೋನಾರ್ಡ ಮನ್ ನೋಡಿಕೊಳ್ಳುತ್ತಿದ್ದರು.

ನಿಜಾಂ ಪ್ರಾಂತಕ್ಕೆ ಅಂದು ಸುಮಾರು ೨೫ ಲಕ್ಷ ಮಣ್ಣು (Maunds) ಉಪ್ಪಿನ ಅವಶ್ಯಕತೆ ಇತ್ತೆಂದು ಆ ಸರ್ಕಾರದ ವಾಣಿಜ್ಯ ಇಲಾಖೆಯು ಅಂದಾಜು ಮಾಡಿತ್ತು. ಆದರೆ ನೈಜಾಂ ರಾಜ್ಯದೊಳಗೆ ಕೇವಲ ಒಂದು ಲಕ್ಷ ಮಣದಷ್ಟು ಉಪ್ಪು ತಯ್ಯಾರಾಗುತ್ತಿತ್ತು ಎಂದು ಹೈದ್ರಾಬಾದ ಭೂವೈಜ್ಞಾನಿಕ ಇಲಾಖೆಯ ಭೂವಿಜ್ಞಾನಿಗಳಾದ ಮುಖರ್ಜಿ ಮತ್ತಿತರರು ದಾಖಲಿಸಿದ್ದಾರೆ (ಪೂರ್ವೋಕ್ತ ಪುಟ ೧೩೮).

ಇದಲ್ಲದೆ ಕ್ಯಾಪ್ಟನ್ ಮನ್ ಸ್ವತಃ ಕ್ಷಾರಾಂಶದ ಮಣ್ಣು ಮತ್ತು ಭೂವೈಜ್ಞಾನಿಕ ಸಂಬಂಧಗಳನ್ನು ಅಧ್ಯಯನ ಮಾಡಿ,

* 'ಸಂಗಮ', ಎಮ್.ಐ.ಜಿ. ೭೭, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು.

ವೈಜ್ಞಾನಿಕ ಹಾಗೂ ಸಾಮಾಜಿಕ ವಿವರಣೆಗಳಿರುವ ಒಂದು ಉತ್ತಮ ಪ್ರಕಟಣೆಯನ್ನು ೧೯೩೬ರಲ್ಲಿ ಪ್ರಕಟಿಸಿದ್ದಾರೆ.[೪] ಕ್ಯಾಪ್ಟನ್‌ಮನ್ ಅವರ ನಿರ್ದೇಶನದಲ್ಲಿ ಆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಶಿಲಾಶಾಸ್ತ್ರಜ್ಞ (Petrologist) ಕೃಷ್ಣಮೂರ್ತಿಯವರು ಕೃಷ್ಣಮೂರ್ತಿಯವರು ಉಪ್ಪಿನ ದ್ರಾವಣವನ್ನು ಬಾಷ್ಪೀಕರಿಸುವ ಬಗ್ಗೆ ಪ್ರಯೋಗಗಳನ್ನು ಮಾಡಿ ತಮ್ಮ ಅಧ್ಯಯನವನ್ನು ೧೯೩೪ರಲ್ಲಿ ಪ್ರಕಟಿಸಿದ್ದಾರೆ.[೫] ಈ ವರದಿಗಳನ್ನು ಅಂದಿನ ಸರ್ಕಾರದ ವಾಣಿಜ್ಯ ಇಲಾಖೆಗೆ ಉಪ್ಪು ತಯಾರಿಕೆಯ ಗ್ರಾಮೋದ್ಯೋಗವೆಂದು ಅಭಿವೃದ್ಧಿ ಪಡಿಸಬೇಕೆಂಬ ಶಿಫಾರಸ್ಸುಗಳೊಂದಿಗೆ ಸಲ್ಲಿಸಲಾಯಿತು.

## ಉಪ್ಪು ತಯಾರಿಕೆಯ ಹಳ್ಳಿಗಳು

ಅಂದಿನ ನೈಜಾಂ ಪ್ರಾಂತ್ಯದಲ್ಲಿ ಮೇಲ್ಕಾಣಿಸಿದ ವರದಿಗಳ ಆಧಾರಗಳ ಮೇಲೆ ಹೇಳುವುದಾದರೆ ಉಪ್ಪನ್ನು ತಯಾರಿಸುವ ಗ್ರಾಮೋದ್ಯೋಗವು ಅಸಂಘಟಿತ ರೀತಿಯಲ್ಲಿ ಪ್ರಮುಖವಾಗಿ ಸುರಪುರ (ಕಲಬುರ್ಗಿ ಜಿಲ್ಲೆ), ಸಿಂಧನೂರು, ಲಿಂಗಸೂಗೂರು ಮತ್ತು ದೇವದುರ್ಗ ತಾಲ್ಲೂಕಿನ (ರಾಯಚೂರು ಜಿಲ್ಲೆ) ಸವಳು ಮಣ್ಣಿನ (Saline soils) ಕೆಲವು ಹಳ್ಳಿಗಳಲ್ಲಿ ಮಾತ್ರ ಹಬ್ಬಿತ್ತು. (ನೋ. ಅನುಬಂಧ) ಉಪ್ಪನ್ನು ತಯಾರಿಸುವವರನ್ನು (ಕಸಬುದಾರರನ್ನು) ಉಪ್ಪಾರರು ಎಂದು ಕರೆಯಲಾಗುತ್ತಿತ್ತು. ಈ ಕಸುಬಿನಲ್ಲಿ ಗಂಡಸರು ಮತ್ತು ಹೆಣ್ಣುಮಕ್ಕಳು ನಿರತರಾಗಿದ್ದರು. ಚಿಕ್ಕ ಮಕ್ಕಳು ದ್ರಾವಣವನ್ನು (Brine) ಒದಗಿಸುವ ಗಚ್ಚಿನ ಮಡಿಗಳನ್ನು (ಪಾತಿಗಳು) (Evaporating Pans Made out of mortas) ಕಾಯುವ ಕೆಲಸ ಮಾಡುತ್ತಿದ್ದರು.

ನಾನು ಚಿಕ್ಕವನಾಗಿದ್ದಾಗ ದೇವದುರ್ಗದ ಉಪ್ಪಿನ ಮಾಳಿಗುಡ್ಡಗಳಲ್ಲಿ ಕಂಡ ಅನುಭವಗಳ ಆಧಾರಗಳ ಮೇಲೆ ಮತ್ತು ಇತ್ತೀಚೆಗೆ ಕೈಗೊಂಡ ಕ್ಷೇತ್ರಕಾರ್ಯದ ಅಧ್ಯಯನದ ಆಧಾರಗಳ ಮೇಲೆ ದೇವದುರ್ಗದ ಉಪ್ಪು ತಯಾರಿಕೆಯ ವಿಧಾನವನ್ನು ಮುಂದೆ ವಿವರಿಸುತ್ತೇನೆ.

## ದೇವದುರ್ಗದ ಉಪ್ಪಿನ ಕಸಬು

ದೇವದುರ್ಗವು ಜಿಲ್ಲಾ ಕೇಂದ್ರವಾದ ರಾಯಚೂರಿನಿಂದ ನೈರುತ್ಯಕ್ಕೆ ಸುಮಾರು ೬೫ ಕಿ.ಮೀ. ಅಂತರದಲ್ಲಿದೆ. ಈ ಊರಿನ ಪಶ್ಚಿಮ ದಿಕ್ಕಿನಲ್ಲಿ, ಇಂದಿನ ಹೊಸ ಬಸ್‌ಸ್ಟ್ಯಾಂಡಿನ ದಕ್ಷಿಣಕ್ಕೆ ಸುಮಾರು ೩೦೦ ಮೀಟರ್ ಅಂತರದಲ್ಲಿ ಇಂದಿಗೂ ಮಾಳಿಗುಡ್ಡಗಳನ್ನು ನೋಡಬಹುದು. ಮಾಳಿಯನ್ನು ಮೋಳೆ ಎಂದು ಚಿತ್ರದುರ್ಗ ಜಿಲ್ಲೆಯಲ್ಲಿ ಕರೆಯಲಾಗುತ್ತದೆ.[೬] ಉಪ್ಪಾರರನ್ನು ಬೇರೆ ಬೇರೆ ಭಾಗಗಳಲ್ಲಿ ಉಪ್ಪಲಿಗರು, ಉಪಲಿಕ, ಉಪ್ಪಲಿಕ ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತಿತ್ತು ಎಂದು ರಾಜಶೇಖರಪ್ಪ ದಾಖಲಿಸಿದ್ದಾರೆ.[೭] ಆದರೆ ಈ ಕಸಬುದಾರರನ್ನು ಕಲಬುರ್ಗಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಉಪ್ಪಾರರು ಎಂದೇ ಕರೆಯಲಾಗುತ್ತಿತ್ತು. ಇಂದಿಗೂ ಆ ಕಸಬು ಮಾಡದಿದ್ದರೂ ಆ ಜಾತಿಯಲ್ಲಿ ಜನಿಸಿದವರು ತಮ್ಮನ್ನು ಉಪ್ಪಾರರೆಂದು ಗುರ್ತಿಸಿಕೊಳ್ಳುತ್ತಲಿದ್ದಾರೆ. ಇಂದಿಗೂ ದೇವದುರ್ಗದಲ್ಲಿ ಉಪ್ಪಾರರ ಓಣಿ ಎಂದು ಕರೆಯುವ ಒಂದು ಓಣಿ ಇದೆ. ಹಿಂದೆ, ಅಲ್ಲಿ ಹಲವಾರು ಬಹುತೇಕ ಉಪ್ಪಾರರ ಮನೆಗಳಿದ್ದವು. ಈಗ ಆ ಮನೆಗಳನ್ನು ಬೇರೆಯವರು ಖರೀದಿಸಿ ವಾಸಿಸುತ್ತಿದ್ದರೂ ಆ ಓಣಿಯ ಅದೇ ಹೆಸರು ಇಂದಿಗೂ ಖಾಯಂ.

## ಮಾಳಿಗಳು ಮತ್ತು ಮಾಳಿ ಉಪ್ಪು

ಆಗಲೇ ಹೆಸರಿಸಲಾದ ಮಾಳಿಗಳು ಸುಮಾರು ೫೦ ವರ್ಷಗಳ ಹಿಂದೆ ಬೆನಕನ ಕೆರೆಯ (ಇಂದು ಕೆರೆಯನ್ನು ಒಣಗಿಸಿ ಸೈಟುಗಳನ್ನಾಗಿ ಪರಿವರ್ತಿಸಲಾಗಿದೆ) ಒಡ್ಡಿನ ದಂಡೆಗುಂಟ ಸುಮಾರು ಅರ್ಧ ಕಿ.ಮೀ. ಉದ್ದ ಹಾಗೂ ೧೦೦ ಮೀಟರ್ (ಅಡಿಪಾಯದಲ್ಲಿ = Base) ಅಗಲವಾಗಿರುವ ಸಣ್ಣ ಸಣ್ಣ ಗುಡ್ಡಗಳಂತೆ ಇದ್ದವು. ಈಗಲೂ ಅಳಿದುಳಿದ (ಚಿತ್ರ ೧). ಅವುಗಳ ಎತ್ತರ ಸುಮಾರು ೩೦–೪೦ ಮೀ.ನಷ್ಟು, ಈಗ ಆ ಮಾಳಿಗಳ ಮಣ್ಣನ್ನು ಕಟ್ಟಡಗಳಿಗಾಗಿ ಬಳಸಿರುವುದರ ಪರಿಣಾಮವಾಗಿ ಎತ್ತರ ಮತ್ತು ಅಗಲಗಳು ಕಡಿಮೆ ಆಗಿವೆ (ಚಿತ್ರ ೧). ವಾಸ್ತವವಾಗಿ, ಇಂದು ನೋಡಸಿಗುವ ಮಾಳಿಗೆಗಳು, ಉಪ್ಪನ್ನು ತೆಗೆದ ನಂತರ ಉಳಿದಿರುವ ತ್ಯಾಜ್ಯ ಮಣ್ಣಿನ ಗುಡ್ಡೆಗಳು (Waste soil dump) ಈ ತ್ಯಾಜ್ಯ ಮಣ್ಣಿನ ರಾಸಾಯನಿಕ ವಿಶ್ಲೇಷಣೆಯನ್ನು ಈ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ.

**ಪಟ್ಟಿ ೧. ಮಾಳಿಯಲ್ಲಿ ಸಿಗುವ ತ್ಯಾಜ್ಯ ಮಣ್ಣು**

| | |
|---|---|
| $S_2O_2$ .... 65.96% | $K_2O$ .... 7. 11% |
| $Al_2O_3$ .... 12.31% | LOI .... 5.45% |
| $Fe_2O_3$ .... 2.39% | $SO_4$ .... 1.08% |
| $TiO_2$ .... 0.40% | S .... O.148% |
| ea O .... 3.58% | el .... 0.355% |
| Mg O .... 1.29% | |
| $Na_2O$ .... 1.55% | |

ಮೇಲ್ಕಾಣಿಸಿದ ಪಟ್ಟಿಯಲ್ಲಿರುವ ಆಕ್ಸೈಡುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಮರಳಿನ ಅಂಶ ($SiO_2$) ಅತಿ ಹೆಚ್ಚಾಗಿರುವುದು ಕಂಡುಬರುತ್ತದೆ. ಸೋಡಿಯಂ ($Na_2O$) ಮತ್ತು ಕ್ಲೋರೈಡ್ (Cl) ತೀರ ಅತ್ಯಲ್ಪ ಪ್ರಮಾಣದಲ್ಲಿರುವುದನ್ನು ಗಮನಿಸಿದರೆ ಅಂದಿನ ಸವಳು ಮಣ್ಣಿನಲ್ಲಿದ್ದ ಮತ್ತು ಉಪ್ಪಿನ

ದ್ರಾವಣಕ್ಕಾಗಿ ಉಪಯೋಗಿಸಲಾಗುತ್ತಿದ್ದ ಬಾವಿ ನೀರಿನಲ್ಲಿರುವ ಎಲ್ಲಾ ಸೋಡಿಯಂ ಮತ್ತು ಕ್ಲೋರೈಡು ಉಪ್ಪಾಗಿ ಬಸಿದು ಹೋಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇಂಥ ಮಾಳಿಗುಡ್ಡಗಳ ಮೇಲೆ ತಯಾರಿಸಲಾಗುತ್ತಿದ್ದ ಉಪ್ಪನ್ನು 'ಮಾಳಿ ಉಪ್ಪು' ಎಂದು ಅಂಗಡಿಗಳಲ್ಲಿ ಮಾರಲಾಗುತ್ತಿತ್ತು. ಅಂದಿನ ಮಾಳಿ ಉಪ್ಪು ಕೊಂಚ ಹಳದಿ ಮಿಶ್ರಿತ ಬಿಳಿ ಬಣ್ಣವನ್ನು ಹೊಂದಿತ್ತು. ಅಂಗಡಿಗಳಲ್ಲಿ ಸೇರುಗಳ ಮೂಲಕ (ಇಂದಿನ ಎರಡು ಲೀಟರ್ ಅಂದಿನ ಒಂದು ಸೇರಿಗೆ ಸಮನೆಂದು ಭಾವಿಸ ಬಹುದು) ಅಳೆದು ಮಾರಲಾಗುತ್ತಿತ್ತು. ಅಂದಿನ ಒಂದು ಸೇರುಪ್ಪಿನ ಬೆಲೆ ಅಂದಿನ ನಾಲ್ಕಾಣೆ (ಇಂದಿನ ಇಪ್ಪತ್ತೈದು ಪೈಸೆ) ಎಂದು ನನಗೆ ನೆನಪು. ಈ ಬೆಲೆಯನ್ನು ಯಾರೂ ದಾಖಲಿಸಿಲ್ಲ.

### ಊಟದ ಉಪ್ಪು ಮತ್ತು ತೊಗಲುಪ್ಪು

ಅಂದು ರಾಯಚೂರು ಜಿಲ್ಲೆಯಲ್ಲಿ ಎರಡು ಬಗೆಯ ಮಾಳಿ ಉಪ್ಪುಗಳನ್ನು ತಯಾರಿಸಲಾಗುತ್ತಿತ್ತು :

(i) ಊಟದ ಉಪ್ಪು (Eating Salt)

(ii) ತೊಗಲುಪ್ಪು (Tannery Salt)

ತೊಗಲುಪ್ಪುನಲ್ಲಿ ಕಡಿಮೆ ಸೋಡಿಯ ಕ್ಲೋರೈಡ್ (Nacl) ಮತ್ತು ಕಡಿಮೆ ಸೋಡಿಯಂ ಸಲ್ಫೈಟ್ ($NaSO_4$) ಇತ್ತು. ಊಟದ ಉಪ್ಪಿನಲ್ಲಿ ಸೋಡಿಯಂ ಕ್ಲೋರೈಡ್ ಅತ್ಯಧಿಕ ಪ್ರಮಾಣದಲ್ಲಿತ್ತು. ಇವುಗಳ ನಿಶ್ಚಿತ ರಾಸಾಯನಿಕ ವಿಶ್ಲೇಷಣೆಯನ್ನು ಈ ಕೆಳಗೆ ಕೊಡಲಾಗಿದೆ :

**ಪಟ್ಟಿ ೨. ಊಟದ ಉಪ್ಪು ಮತ್ತು ತೊಗಲುಪ್ಪು**

| | ಗುದ್ದಿನಹಾಳ ಸರ್ಜಾಪುರ ಭಾಗದ ಊಟದ ಉಪ್ಪು | ಕುಪ್ಪಿಗುಡ್ಡದ ತೊಗಲುಪ್ಪು |
|---|---|---|
| Insoluble | 0.26 | 0.03 |
| $CaSo_2$ | 0.92 | 1.09 |
| $MgSo_4$ | 0.44 | 8.75 |
| $Na_2So_2$ | Nil | 39.46 |
| $Mgcl_2$ | 2.53 | Nil |
| Nacl | 95.85 | 50.67 |
| ಒಟ್ಟು | 100 | 100 |

ಆದರೆ, ದೇವದುರ್ಗದ ಮಾಳಿಉಪ್ಪಿನ ಈ ತೆರನ ರಾಸಾಯನಿಕ ವಿಶ್ಲೇಷಣೆ ದಾಖಲಾಗಿಲ್ಲ. ಇಲ್ಲಿ ಸಿಗುವ ಉಪ್ಪನ್ನು ತೊಗಲುಪ್ಪಾಗಿಯೂ ಬಳಸಲಾಗುತ್ತಿತ್ತು. ಇದು ಮೂಲತಃ ಊಟದ ಉಪ್ಪಾಗಿತ್ತು.

### ಉಪ್ಪನ್ನು ತಯಾರಿಸುವ ವಿಧಾನ

ಮಾಳಿಗುಡ್ಡದ ಒಂದು ಸಮತಟ್ಟಾದ ಭಾಗದಲ್ಲಿ ಗಚ್ಚಿನಿಂದ ಮಾಡಿದ ಮಡಿಗಳನ್ನು (ಪಾತಿಗಳು = Pan) ಉಪ್ಪಾರರು ಸಿದ್ಧ ಮಾಡಿಸಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಮಳೆಗಾಲ ನಿಂತನಂತರ ದಸರೆಯ ದಿನದಂದು ಈ ಕಾರ್ಯವನ್ನು ಪೂಜೆ ಮಾಡಿ ಆರಂಭಿಸುತ್ತಿದ್ದರು. ಹಲವಾರು ತಲೆಮಾರುಗಳಿಂದ ಈ ಗಚ್ಚಿನ ಮಡಿಗಳು ಅಸ್ತಿತ್ವದಲ್ಲಿ ಇದ್ದರಿಂದ, ಅವುಗಳಲ್ಲಿ ಬಿರುಕು ಬಿಟ್ಟ ಕಡೆ ಅಥವಾ ಚಕಳೆಗಳು ಎದ್ದ ಕಡೆಗಳಲ್ಲಿ ಹೊಸದಾಗಿ ಗಚ್ಚನ್ನು (Mortar) ಸಿದ್ಧಪಡಿಸಿಕೊಂಡು ಅಂಥ ಕಡೆಗಳಲ್ಲಿ ಗಚ್ಚನ್ನು ತುಂಬಿ ಉಜ್ಜುತ್ತಿದ್ದರು. ಈಗ ಅಂಥ ಮಡಿಗಳು ಹಾಳಾಗಿಹೋಗಿವೆ. ಅಲ್ಲಲ್ಲಿ ನೋಡಲು ಸಿಗುತ್ತವೆ (ಚಿತ್ರ ೨). ಹೊಸ ಮಡಿಗಳನ್ನು ಸಿದ್ಧಪಡಿಸಿಕೊಳ್ಳಲು ಅಥವಾ ಹಳೆ ಮಡಿಗಳ ರಿಪೇರಿ ಮಾಡಲು ಕರಿಕಲ್ಲಿನ (Dolorite dyke) ಪಿಂಗಾಣಿಗಳಿಂದ ನವಿರಾಗುವಂತೆ ಉಜ್ಜುತ್ತಿದ್ದರು. ಅಂಥ ಕರಿಕಲ್ಲಿನ ಪಿಂಗಾಣಿ ಕಲ್ಲುಗಳನ್ನು (Pebbles) ಚಿತ್ರ ೩ರಲ್ಲಿ ನೋಡಬಹುದು.

ನಂತರ ಮಾಳಿಗುಡ್ಡದ ಕೊಂಚ ಎತ್ತರದ ಸ್ಥಳದಲ್ಲಿ ಒಂದು ಕುಳಿಯನ್ನು (Pit) ನಿರ್ಮಿಸಲಾಗುತ್ತಿತ್ತು. ಇದರ ಆಕಾರ ಗೋಲಾಕಾರವಾಗಿದ್ದು ಅದರ ತಳದಲ್ಲಿ ಒಂದು ನಳಿಗೆಯನ್ನು (Pipe) ಕೂಡಿಸಲಾಗುತ್ತಿತ್ತು. ಈ ಕುಳಿಯ ಆಳ ಸುಮಾರು ೧–೧.೫ ಮೀ.ನಷ್ಟು ಇರುತ್ತಿತ್ತು. ಇದನ್ನು Lixivating Vat ಎಂದು ಕರೆಯಲಾಗುತ್ತದೆ.

ಅದೇ ಹೊತ್ತಿನಲ್ಲಿ, ಕೊಂಚ ದೂರದಿಂದ ಕತ್ತೆಗಳ ಮೇಲೆ ಹೊರಿಸಿ ತಂದಿದ್ದ ಸವಳು ಮಣ್ಣನ್ನು (Saline Soil) ಜರಡಿಯಲ್ಲಿ ಸೋಸಲಾಗುತ್ತಿತ್ತು. ದಪ್ಪನೆಯ ಕಲ್ಲುಗಳು ಮತ್ತು ಹರಳುಗಳನ್ನು ದೂರಕ್ಕೆ ಎಸೆದು, ಶೋಧಿಸಿ ಬಂದ ಸೂಕ್ಷ್ಮ ಸವಳು ಮಣ್ಣನ್ನು (Five Grained Saline Soil) ಚಿಕ್ಕ ಚಿಕ್ಕ ಗುಡ್ಡೆಗಳನ್ನಾಗಿ ಮಾಡಲಾಗುತ್ತಿತ್ತು. ಆಗಲೆ ಸಿದ್ಧ ಮಾಡಿಕೊಂಡಿದ್ದ ಕುಳಿಯಲ್ಲಿ ಈ ಮಣ್ಣನ್ನು ತುಂಬಲಾಗುತ್ತಿತ್ತು. (ಚಿತ್ರದಲ್ಲಿ B) (ಚಿತ್ರ ೫).

ಈಗ ಈ ಸಿದ್ಧವಾದ ಕುಳಿಯಲ್ಲಿ ಸಮೀಪದಲ್ಲಿಯೇ ಇದ್ದ (ಈಗಲೂ ಇರುವ) ದ್ಯಾವಂ ಬಾವಿಯಿಂದ ನೀರನ್ನು ಕೊಡಗಳಲ್ಲಿ ತಂದು ಸುರಿಯಲಾಗುತ್ತಿತ್ತು (ಚಿತ್ರ ೪). ಈ ಬಾವಿಯ ನೀರಿನಲ್ಲಿ ಲವಣಾಂಶವು ಹೆಚ್ಚು (TDS) ಈ ಬಾವಿಯ ನೀರಿನ ರಾಸಾಯನಿಕ ವಿಶ್ಲೇಷಣೆಯನ್ನು ಪಟ್ಟಿ ೩ರಲ್ಲಿ ಕೊಡಲಾಗಿದೆ :

**ಪಟ್ಟಿ ೩. ದ್ಯಾವಂಬಾವಿಯ ನೀರಿನ ರಾಸಾಯನಿಕ ವಿಶ್ಲೇಷಣೆ**

| ಕ್ರ.ಸಂ. | ಮೂಲಧಾತು | ಮಿ.ಗ್ರಾ./ಲೀ. |
|---|---|---|
| ೧. | ಕ್ಯಾಲ್ಸಿಯಂ (Ca) | ೮೮ |
| ೨. | ಮ್ಯಾಗ್ನಿಸಿಯಂ (Mg) | ೪೭ |
| ೩. | ಸೋಡಿಯಂ (Na) | ೩೦೩ |
| ೪. | ಪೊಟ್ಯಾಸಿಯಂ (Mg) | ೪೧.೩ |
| ೫. | ಒಟ್ಟು ಕಬ್ಬಿಣ ($Fe_2$+$Fe_3$) | ೦.೧೧ |
| ೬. | ಬೈಕಾರ್ಬೊನೇಟ್ ($Hco_3$) | ೪೧೨ |
| ೭. | ಕಾರ್ಬೊನೇಟ್ ($Co_3$) | ಶೂನ್ಯ |
| ೮. | ಕ್ಲೋರೈಡ್ (cl) | ೩೯೮ |
| ೯. | ನೈಟ್ರೇಟ್ ($No_3$) | ೩.೭ |
| ೧೦. | ಸಲ್ಫೇಟ್ ($So_4$) | ೨೧೩ |
| ೧೧. | ಒಟ್ಟು ಕರಗಿದ ಘನವಸ್ತು (Total disolved solids) | ೧೩೩೦ |
| ೧೨. | ವಿಶಿಷ್ಟ ವಾಹಕತೆ (Specific Conductance) | ೨೨೪೧ umhas/cm |
| ೧೩. | ಒಟ್ಟು ಕಾಠಿಣ್ಯತೆ (Total Hardness) | ೪೦೮ ಮಿ.ಗ್ರಾ./ಲೀ. |
| ೧೪. | ಪಿಎಚ್ (PH) | ೭.೮೧ |
| ೧೫. | ಫ್ಲೋರೈಡ್ | ೦.೭೭ ಮಿ.ಗ್ರಾ/ಲೀ. |

ಮೇಲ್ಕಾಣಿಸಿದ ಬಾವಿ ನೀರಿನ ರಾಸಾಯನಿಕ ವಿಶ್ಲೇಷಣೆಯಲ್ಲಿ ಸೋಡಿಯಂ (Na) ಮತ್ತು ಕ್ಲೋರೈಡ್ (cl) ಅತಿ ಹೆಚ್ಚಾಗಿರುವುದು ಕಂಡುಬರುತ್ತದೆ. ಆದ್ದರಿಂದಲೇ ಈ ನೀರನ್ನು ಸ್ಥಳೀಯರು 'ಸವಳು ನೀರು' ಅಥವಾ 'ಉಪ್ಪು ನೀರು' ಎಂದು ಕರೆಯುತ್ತಿದ್ದರು. ವಿದ್ಯಾವಂತರಲ್ಲದಿದ್ದರೂ ಆ ಉಪ್ಪಾರರು ಈ ನೀರಿನ ಗುಣವನ್ನು ಅರಿತಿದ್ದರು. ಆದ್ದರಿಂದಲೇ ಇಂಥ ಸವಳು ನೀರನ್ನು, ಸವಳು ನೀರಿನಲ್ಲಿ ಬೆರಸಿ ಚೆನ್ನಾಗಿ ಕಲಕುತ್ತಿದ್ದರು. ಆಗ ಈ ಕುಳಿಯಲ್ಲಿದ್ದ ಈ ಮಿಶ್ರಣದಿಂದ ಉಪ್ಪಿನ ದ್ರಾವಣವು (Brine) ನಳಿಗೆಯ ಮೂಲಕ್ಕೆ ದೂರಕ್ಕೆ ಹರಿದು ಮಡಿಗಳಿಗೆ ಹರಿದು ಸಂಗ್ರಹಗೊಂಡು ಬಿಸಿಲಿನ ಶಾಖವನ್ನೀಂಟಿ ಉಪ್ಪು ಸ್ಫಟಿಕ (ಹರಳು) ರೂಪ ತಾಳುತ್ತಿತ್ತು. (ಚಿತ್ರ ೫ರ E) ಇಂಥ ಉಪ್ಪನ್ನು ಕೈಕುರ್ಪಿಯಿಂದಲೋ ಸಲಿಕೆಯಿಂದಲೋ ಎಳೆದು ಪಾತಿಯಲ್ಲಿ ಸಂಗ್ರಹಿಸಿ ಕೊನೆಗೆ ಸಣಬಿನ ಚೀಲದಲ್ಲಿ ಅಥವಾ ಬಿದಿರಿನ ಬುಟ್ಟಿಗಳಲ್ಲಿ ಸಂಗ್ರಹಿಸಿ ಬಾಜಾರುಗಳಲ್ಲಿ ಮಾರಾಟ ಮಾಡುತ್ತಿದ್ದರು. ಮಾಳಿಗುಡ್ಡದಲ್ಲಿ ನಡೆಯುವ ಒಟ್ಟು ಈ ವಿಧಾನವನ್ನು ಒಂದು ಮಾದರಿ ಚಿತ್ರದಲ್ಲಿ (Model Figure) ತೋರಿಸಲಾಗಿದೆ (ಚಿತ್ರ ೫). ಈ ಚಿತ್ರ ಸ್ಪಷ್ಟವಾಗಿರುವುದರಿಂದ ಹೆಚ್ಚಿನ ವಿವರಣೆ ಬೇಕಾಗಿಲ್ಲ.

### ಉಪ್ಪು ತಯಾರಿಕೆಯ ಕಾಲ

ಉಪ್ಪು ತಯಾರಿಕೆಯ ಸಿದ್ಧತೆಗಳು ವರ್ಷದ ಪ್ರತಿ ತಿಂಗಳು ನಡೆಯುತ್ತಿದ್ದವು. ಮಳೆಗಾಲದವರೆಗೆ ದೂರದ ಭೂಮಿಗಳಿಂದ ಅಥವಾ ಹಳ್ಳಗಳಿಂದ ಸವಳು ಮಣ್ಣನ್ನು ಸಂಗ್ರಹಿಸಿ ಕತ್ತೆಗಳ ಮೇಲೆ ಹೊರಿಸಿಕೊಂಡು ತಂದು ಮಾಳಿಗುಡ್ಡದ ಮೇಲೆ ಸಂಗ್ರಹಿಸಲಾಗುತ್ತಿತ್ತು. ಮಳೆಗಾಲ ಮುಗಿದನಂತರ ಅಕ್ಟೋಬರ್–ನವಂಬರ್ ತಿಂಗಳ ಅವಧಿಯಲ್ಲಿ ಉಪ್ಪಿನ ದ್ರಾವಣ (Porine) ದ ತಯಾರಿಕೆ ಆರಂಭಿಸಲಾಗುತ್ತಿತ್ತು. ಈ ಪ್ರಕ್ರಿಯೆಯು ಮಳೆಗಾಲದ ಆರಂಭದವರೆಗೆ ನಡೆಯುತ್ತಿತ್ತು. ಜೂನ್ ಮೊದಲ ವಾರ ಬೇಸಿಗೆಯಲ್ಲಿ (ಮಾರ್ಚ್–ಮೇ) ಉಷ್ಣಾಂಶ ೪೨° ಸೆ. ತಲುಪುವದರಿಂದ ಉಪ್ಪಿನ ದ್ರಾವಣ ಬೇಗ ಬೇಗ ಹರಳುಗಟ್ಟಿ ಉಪ್ಪು ಸಿಗುತ್ತಿತ್ತು. ಈ ಅವಧಿಯಲ್ಲಿ ತಯಾರಾದ ಉಪ್ಪನ್ನು ತಮ್ಮ ತಮ್ಮ ಮನೆಗಳಲ್ಲಿ ಅಥವಾ ವ್ಯಾಪಾರಿಗಳ ಗಡಂಗಗಳಿಗೆ (Goldown) ಉಪ್ಪಾರರು ತಮಗೆ ಅನುಕೂಲವಾದ ರೀತಿಯಲ್ಲಿ ಸಂಗ್ರಹಿಸಿ ಮಾರಾಟ ಮಾಡುತ್ತಿದ್ದರು. ಇದೊಂದು ಸಣ್ಣ ಪ್ರಮಾಣದ ಗ್ರಾಮೋದ್ಯೋಗವಾಗಿತ್ತು.

### ಅವನತಿ ಮತ್ತು ನಾಶ

ಆಗಲೇ ತಿಳಿಸಿದಂತೆ ನೈಜಾಂ ಪ್ರಾಂತದಲ್ಲಿ ಉತ್ಪಾದನೆ ಯಾಗುತ್ತಿದ್ದ ಉಪ್ಪಿಗಿಂತ ಬೇಡಿಕೆ ಹೆಚ್ಚಾಗಿತ್ತು. ಆದ್ದರಿಂದ ಸಮುದ್ರದ ಉಪ್ಪನ್ನು (ಅದನ್ನು ಕಲ್ಲುಪ್ಪು ಎಂದು ಕರೆಯಲಾಗುತ್ತಿತ್ತು) ಹೊರ ರಾಜ್ಯಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು. ದೇವದುರ್ಗಕ್ಕೆ ರಾಯಚೂರು ಮೂಲಕ ಈ ಕಲ್ಲುಪ್ಪು ಎತ್ತಿನ ಬಂಡಿಗಳಲ್ಲಿ ನಂತರ ಲಾರಿಗಳಲ್ಲಿ ಬರುತ್ತಿತ್ತು. ಈ ಕಲ್ಲುಪ್ಪು ತುಲನಾತ್ಮಕವಾಗಿ ಸೋವಿಯಾಗಿತ್ತು (Cheaperate). ಆದ್ದರಿಂದ ದಿನಗಳೆದಂತೆಲ್ಲಾ ಮಾಳಿ ಉಪ್ಪಿನ ಬದಲಾಗಿ ಜನರು ಕಲ್ಲುಪ್ಪನ್ನು ಹೆಚ್ಚು ಹೆಚ್ಚು ಖರೀದಿಸ ಲಾರಂಭಿಸಿದರು. ಹೀಗಾಗಿ ಸ್ಥಳೀಯ ಉಪ್ಪಾರರ ಕಸಬು ಕ್ಷೀಣಿಸುತ್ತಾ ಹೋಗಿ ೧೯೫೦ರ ಸುಮಾರಿಗೆ ನಿಂತೇ ಹೋಯಿತು. ಸದ್ಯ ಮಾಳಿಗಳು ಈ ನಶಿಸಿಹೋದ ಕಸುಬಿನ ಪಳೆಯುಳಿಕೆಗಳಾಗಿ ಉಳಿದಿವೆ. ಮಾಳಿಗುಡ್ಡಗಳ ಮೇಲೆ ಮುಳ್ಳಿನ ಗಿಡಗಳು ಬೆಳೆದಿವೆ ಮತ್ತು ಬಡವರ ಗುಡಿಸಲು ತಲೆ ಎತ್ತಿವೆ (ಚಿತ್ರ ೬).



ಉಪ್ಪಿನ ದ್ರಾವಣವನ್ನು ಒಣಗಿಸುತ್ತಿದ್ದ ಗಚ್ಚಿನ ಪುಡಿಯ (ಪಾತಿ) ಅಳಿದುಳಿದಿರುವ ಭಾಗ



ಸವಳು ನೀರಿನ ದ್ಯಾವಂಬಾವಿ ಈಗ ಜಲಮಟ್ಟ ಕುಸಿದಿದೆ



ಈಗ ಮಾಳಿಗುಡ್ಡಗಳ ಮೇಲೆ ಅನಧಿಕೃತ ಗುಡಿಸಲುಗಳು ಎದ್ದಿವೆ



ಗಚ್ಚಿನ ಮಡಿಗಳನ್ನು ಮಟ್ಟ ಮಾಡಲು ಉಪಯೋಗಿಸುತ್ತಿದ್ದ ಪಿಂಗಾಣಿಗುಂಡುಗಳು



ಈಗ ಅಳಿದುಳಿದಿರುವ ದೇವದುರ್ಗದ ಮಾಳಿಯ ಭಾಗ ಈಗ ಈ ಮಣ್ಣನ್ನು ಕಟ್ಟಡಗಳಿಗಾಗಿ ಉಪಯೋಗಿಸಲಾಗುತ್ತದೆ

## ಅನುಬಂಧ : ಉಪ್ಪಿನ ಕಸಬು ಇದ್ದ ಹಳ್ಳಿಗಳು

**ಕಲಬುರ್ಗಿ ಜಿಲ್ಲೆ ಸುರಪುರ ತಾ॥**

೧. ಅಗ್ನಿ
೨. ಬೈಚ್‌ಬಾಳ
೩. ವಾಗಣಿಗೇರಿ
೪. ಕೂಡ್ಲಿಗಿ
೫. ತೆಗ್ಗಿಹಳ್ಳಿ
೬. ಹೆಬ್ಬಾಳ
೭. ದೇವಾಪುರ
೮. ಕೊಡೇಕಲ್
೯. ಅಮ್ಮಾಪುರ
೧೦. ಉಪ್ಪಲದಿನ್ನಿ
೧೧. ಬೂದಿಹಾಳ

**ರಾಯಚೂರು ಜಿಲ್ಲೆ**

೧. ಸರ್ಜಾಪುರ–ಹಟ್ಟಿಹಳ್ಳ
೨. ಸಿಂಧನೂರು ಹಳ್ಳ
೩. ದೇವದುರ್ಗ
೪. ಹಂಚಿನಾಳ (ಸಿಂಧನೂರು)
೫. ಬುದ್ದಿನ್ನಿ (ಲಿಂಗಸೂಗೂರು)
೬. ರಾಗಲ್ಪರವಿ (ಸಿಂಧನೂರು)
೭. ಉದ್ಬಾಳ (ಸಿಂಧನೂರು)
೮. ಜವಳ್ಗೇರಿ (ಸಿಂಧನೂರು)
೯. ಜಂಗಮರಹಟ್ಟಿ (ಸಿಂಧನೂರು)
೧೦. ವಟಗಲ್ (ಮಾನ್ವಿ ತಾ॥)
೧೧. ಬಲ್ಲಟಗಿ (ಮಾನ್ವಿ ತಾ॥)




ಚಿತ್ರ ೫. ಮಾಳಿಗುಡ್ಡದ ಮೇಲೆ ಕೆಲಸ ಮಾಡುತ್ತಿದ್ದ ಒಂದು ಉಪ್ಪಿನ ಘಟಕದ ಮಾದರಿ ಚಿತ್ರ (ಮೂಲ : ಮುಖರ್ಜಿ ಮತ್ತು ಕೃಷ್ಣಮೂರ್ತಿ ೧೯೩೪)
ಎ. ನಿಷ್ಕಾರೀಕರಣಗೊಂಡ ತ್ಯಾಜ್ಯ ಮಣ್ಣಿನ ಗುಡ್ಡೆ ಬಿ. ಕ್ಷಾರದಾವಣ ಸಿದ್ಧಗೊಳ್ಳುವ ಕುಳಿ (Vat)
ಸಿ. ಉಪ್ಪಿನ ದ್ರಾವಣದ ಕುಣಿ, ಡಿ. ಸವಳು ನೀರಿನ ಬಾವಿ ಇ. ಉಪ್ಪು ಹರಳುಗೊಳ್ಳುವ ಗಚ್ಚಿನ ಮಡಿಗಳು
ಎಫ್. ಕುಳಿಯಿಂದ ಉಪ್ಪಿನ ದ್ರಾವಣ ಕುಹಲಿ ಮಡಿಗಳಿಗೆ ಹರಿದು ಬರುವ ಕೊಳವೆ ಮಾರ್ಗ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳು (೧೯೬೩)...**ಕೌಟಲೀಯ ಅರ್ಥಶಾಸ್ತ್ರ** (ಕನ್ನಡ ಅನುವಾದ)...ಮೈಸೂರು ರಾಜ್ಯದ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಬೆಂಗಳೂರು.

೨. Francis Buchanan (1988)...*A Journey from Madras through the contries of Mysore,* Canara and Malbar, Vol. I & II Asian Educational Services (Reprint vol. in 1988).

೩. Mukhherji S.K. & Krishnamoorthy H.S. (1934) The occurence of brine and alkaline soil in the western part of Raichur Doab and south western corner of Surapur division of Gullabrga sulab jour-Hyd. Geol. servay, Vol. II pt 1, pp. 137-178 govt. press, Hydrabad (Deecan).

೪. Captain Leonerd munn (1936)...A note on the salinity in Ralation to soil and geology in Raichuur District, pp. 83-90. Jou Hyd. Geol. Servey Vol. III Pt 1...Govt central press Hydrabad (Deccean).

೫. Krishnamurthy H.S. (1934)...Experiments on stack evaporation of brine...jour. Hyd. Geol. Survey Vol. II Pt 1, pp. 179-216..Govt. Central Press, Hyderabad (Deecan).

೬. ರಾಜಶೇಖರಪ್ಪ ಬಿ. ಡಾ., (೨೦೧೦)...'ಚಿತ್ರದುರ್ಗದ ಮುರುಘರಾಜೇಂದ್ರ ಬೃಹನ್ಮಠಕ್ಕೆ ಉಪ್ಪಾರ ಜನಾಂಗದವರ ಕಾಣಿಕೆ'...**ಇತಿಹಾಸ ದರ್ಶನ,** ಪುಟ ೧೯೪-೨೦೦...ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೭. ಅವರೇ....(೨೦೦೧)...'ಉಪ್ಪಾರ ಜನಾಂಗ ಮತ್ತು ಉಪ್ಪಿನ ಉದ್ಯಮ'...**ಇತಿಹಾಸ ಕಥನ**...ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

**ಅರುಣಾ ಕಟ್ಟಿಮನಿ***

# ಉತ್ತರಕರ್ನಾಟಕದ ವಿದ್ಯಾಕೇಂದ್ರ, ಧಾರವಾಡ

ಪ್ರಾಚೀನ ಕರ್ನಾಟಕದಲ್ಲಿ ಇತರೆಡೆ ಇದ್ದಂತೆ ಧಾರವಾಡದ ಸುತ್ತಮುತ್ತಲೂ ಮಠಗಳು, ಘಟಿಕಾಸ್ಥಾನಗಳು, ಬ್ರಹ್ಮಪುರಿಗಳು ಮತ್ತು ಅಗ್ರಹಾರಗಳು ಶಿಕ್ಷಣ ಕೇಂದ್ರಗಳಾಗಿದ್ದವು. ರಾಜಾ ರಾಣಿಯರು ಉನ್ನತ ಅಧಿಕಾರಿಗಳು ಹಾಗೂ ಶ್ರೀಮಂತರು ವಿದ್ಯಾಪ್ರಸಾರಕ್ಕಾಗಿ ಈ ಅಗ್ರಹಾರಗಳನ್ನು ಸ್ಥಾಪಿಸುತ್ತಿದ್ದರು. ಇದಕ್ಕಾಗಿ ಇತರ ಪ್ರದೇಶಗಳಿಂದ ವಿದ್ವಜನರನ್ನು ಕರೆತಂದು ಅವರಿಗೆ ಜೀವನೋಪಾಯಕ್ಕಾಗಿ ಭೂದಾನ ನೀಡಿ ಒಂದು ಹಳ್ಳಿಯಲ್ಲಿ ನೆಲೆಗೊಳಿಸುತ್ತಿದ್ದರು. ಅಗ್ರಹಾರಗಳು ಬ್ರಾಹ್ಮಣರಿ ಗಾಗಿಯೇ ದಾನ ಮಾಡಲ್ಪಟ್ಟ ಹಳ್ಳಿಗಳಾಗಿದ್ದರೂ ಅಲ್ಲಿ ಇತರೆ ಜನರು ವಾಸಿಸುತ್ತಿದ್ದರು. ಶೈವಧರ್ಮದ ಪ್ರಭಾವ ಹೆಚ್ಚಿದಾಗ ಶೈವಪುರಿಗಳೆಂದು ಅಗ್ರಹಾರಗಳನ್ನು ಸ್ಥಾಪಿಸಿದರು. ವೀರಶೈವ ಧರ್ಮ ಪ್ರಸಾರಕ್ಕೆ ಬಂದು ಎಲ್ಲೆಡೆ ಮೂಡಿದ ಮಠಗಳು ಪ್ರಾಥಮಿಕ ಶಿಕ್ಷಣದ ಕೇಂದ್ರಗಳೂ ಆಗಿ ಬೆಳೆದವು. ಇದಲ್ಲದೆ ಹಿಂದೆ ಆರಂಭವಾದ ಖಾಸಗಿ ಶಾಲೆಗಳೂ ಓದಿಸುವ ಮಠಗಳಿಗೆ ಸಾಲಿಮಠ, ಕೂಲಿಮಠಗಳೆಂದೂ ಕರೆಯುತ್ತಿದ್ದರು.

'ಧಾರವಾಡ ಜಿಲ್ಲೆಯಲ್ಲಿ ಬಾದಾಮಿ ಚಾಳುಕ್ಯರ ಕಾಲದಿಂದ ಲಕ್ಷ್ಮೀಶ್ವರ ಮುಂತಾದ ಊರುಗಳಲ್ಲಿ ಅಗ್ರಹಾರಗಳಿದ್ದು ರಾಷ್ಟ್ರಕೂಟರ ಕಾಲದ ಕಾಡಿಯೂರು (ಕಳಸ) ಮಂತ್ರವಾಡಿ, ಶಿಗ್ಗಾಂವಿ, ಶಿಶುವಿನಹಳ್ಳಿ (ನೀಲಗುಂದ) ಚಿಂಚಿಲು, ಕಿಮುಳೆ ಮುಂತಾದೆಡೆ ಇದ್ದ ಅಗ್ರಹಾರಗಳ ಉಲ್ಲೇಖವಿದೆ.' *(ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್, ಪುಟ ಸಂಖ್ಯೆ ೬೭೯).*

ಮುಸಲ್ಮಾನರ ಆಡಳಿತ ಬಂದಾಗ ಮಸೀದಿಗಳಿಗೆ ಹೊಂದಿ **ಮುಖ್ತಬಾ** ಅಥವಾ **ಮದ್ರಾಸ**ಗಳಿದ್ದು ಅಲ್ಲಿ ಅಕ್ಷರಭ್ಯಾಸದ ಜೊತೆ ಧಾರ್ಮಿಕ ಶಿಕ್ಷಣ ನೀಡುತ್ತಿದ್ದರು. ಮರಾಠರ ಆಗಮನವಾದಾಗ ಆಡಳಿತ ಮರಾಠಿಯಲ್ಲಿ ಶುರುವಾಯಿತು. ಮರಾಠಿ ಕಲಿಸುವ ಕೂಲಿಮಠದ ಉಪಾಧ್ಯಾಯರಿಗೆ **ಪಂತೋಜಿ** ಎಂದು ಕರೆಯುತ್ತಿದ್ದರು. ಬ್ರಿಟಿಷರ ಆಗಮನ ಆಗುವವರೆಗೂ ಶಿಕ್ಷಣವೆಲ್ಲ ಕೂಲಿಮಠಗಳಲ್ಲೂ ಲಿಂಗಾಯತ ಮಠಗಳಲ್ಲೂ ನಡೆಯುತ್ತಿದ್ದವು. ಮುಂದೆ ಗಾಂವಟಿ ಶಾಲೆಗಳೆಂಬ ವ್ಯವಸ್ಥೆ ರೂಢಿಗೆ ಬಂದಿತು. "ಗಾಂವಟಿ ಶಾಲೆಗಳಲ್ಲಿ ಬರವಣಿಗೆ ಮೊದಲು **ಧೂಳಾಕ್ಷರ** ಎಂದರೆ ಬೆರಳಿನಿಂದ ಎದುರು ಹಾಸಿದ ಮಣ್ಣಿನ ಮೇಲೆ ಬರೆಯುವ ಪದ್ಧತಿ ರೂಢಿಯಲ್ಲಿತ್ತು. ಇದಕ್ಕೆ **ಬಾರಾಖಡಿ** ಎಂಬ ಮರಾಠಿ ಶಬ್ದ ರೂಢಿಯಲ್ಲಿದೆ. ಶಾಲೆಗೆ ಹೋಗುವ ವಿದ್ಯಾರ್ಥಿ ಮಣ್ಣಿನ ಗಂಟು ಒಯ್ಯಬೇಕಿತ್ತು (ಅದಕ್ಕೆ ಶಾಲೆಗೆ ಮಣ್ಣು ಹೊರುತ್ತಿದ್ದೇವೆ ಎಂಬ ಮಾತು ರೂಢಿಯಲ್ಲಿದೆ) ಅಕ್ಷರಭ್ಯಾಸವಾದ ಮೇಲೆ ಹಲಗೆ ಬಳಪ ಬಳಕೆಗೆ ಅವಕಾಶವಿತ್ತು. ಮುಂದೆ ಕಾಗದದ ಮೇಲೆ ಕಂಠದಿಂದ ಬರೆಯುತ್ತಿದ್ದು, ಕಾಗದದ ಬಳಕೆ ಬಂತು. ಧಾರವಾಡ ಜಿಲ್ಲೆಯಲ್ಲಿ ಕೋರಿಕಾಗದ ತಯಾರಿಸುವ ಕೇಂದ್ರಗಳು ೧೬ನೆಯ ಶತಮಾನದಿಂದಲೂ ಇದ್ದವು." *(ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್).*

ಸ್ವಾತಂತ್ರ್ಯ ಪೂರ್ವೋತ್ತರದಿಂದಲೂ ಧಾರವಾಡ ಜಿಲ್ಲೆ ಶಿಕ್ಷಣ ಸೌಲಭ್ಯಕ್ಕೆ ಸಹಕಾರವಾಗಿದೆ. ಉತ್ತರ ಕರ್ನಾಟಕದ ಹೃದಯ ಭಾಗದಂತಿರುವ ಈ ಧಾರವಾಡ ಕನಾಟಕದ ಸಾಂಸ್ಕೃತಿಕ ರಾಜಧಾನಿ ಎಂದೇ ಹೆಸರಾಗಿದೆ. ಈ ನೆಲದ ಮಹತ್ವವನ್ನು ಘಟ್ಟಗಳಾಗಿ ವಿಂಗಡಿಸಿ, ಅದರಲ್ಲಿ ಶಿಕ್ಷಣ ಕ್ಷೇತ್ರವೂ ಒಂದು ಘಟ್ಟ ಎನ್ನಬಹುದು.

ಸ್ವಾತಂತ್ರ ಪೂರ್ವದಿಂದ ಅನೇಕ ರಾಜರ ಆಳ್ವಿಕೆಗೆ ಧಾರವಾಡ ತನ್ನ ಕುರುಹುಗಳನ್ನು ಗುರುತಿಸಿ ಉಳಿಸಿಕೊಂಡು ಬಂದಿದೆ. ಅದೇ ರೀತಿ ಸಾಹಿತ್ಯ ಕ್ಷೇತ್ರಕ್ಕೂ ಧಾರವಾಡ ತನ್ನ ಕೊಡುಗೆ ನೀಡುತ್ತ ಬಂದಿದೆ. ೧೦ನೇ ಶತಮಾನದಲ್ಲಿ "ಮನುಜಕುಲಂ ತಾನೊಂದೆ ವಲಂ" ಎಂಬ ವಿಶ್ವಮಾನತೆಯ ದಾರ್ಶನಿಕ ನುಡಿಯನ್ನು ಹೇಳಿದ ಪಂಪ ಧಾರವಾಡದ ಸಮೀಪವಿರುವ ಪುಲಗೆರೆಯ ತಿರುಳ್ಗನ್ನಡದ ಸೀಮೆಯನ್ನು ಎಂಬುದು ಹೆಮ್ಮೆಯ ವಿಷಯ.

ಈ ನಾಡಿನಲ್ಲಿ ಕ್ರಿ.ಶ. ೧೨ನೇ ಶತಮಾನದಿಂದ ಬ್ರಿಟಿಷರ ಕಾಲದವರೆಗೆ ಆಳಿಹೋದ ರಾಜರಲ್ಲಿ ಚಾಲುಕ್ಯರು, ಆದಿಲ್‌ಶಾಹಿ, ಔರಂಗಜೇಬ, ಶಿವಾಜಿ, ಪೇಶ್ವೆ ಬಾಳಾಜಿರಾವ್, ಹೈದರಾಲಿ, ಟಿಪ್ಪುಸುಲ್ತಾನ್ ನಂತರ ೧೮೧೮ರಲ್ಲಿ ಈ ಪ್ರದೇಶವು ಬ್ರಿಟಿಷರ ಕೈವಶವಾಯಿತು. ಕ್ರಿ.ಶ. ೧೮೩೦ರ ಈ

***ಉಪನ್ಯಾಸಕರು, ಕನ್ನಡ ವಿಭಾಗ, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ.**

ಅವಧಿಯಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಕೋರ್ಟ್ ಆಫ್ ಡೈರೆಕ್ಟರರು ಧಾರವಾಡ ಜಿಲ್ಲೆಯನ್ನು ಮುಂಬೈ ಪ್ರಾಂತದಲ್ಲಿ ಮುಂದುವರೆಸಲು ನಿರ್ಧರಿಸಿ, ಈ ಭಾಗವನ್ನು ದಕ್ಷಿಣ ಮರಾಠ (Southern Maratha country) ಪ್ರದೇಶವೆಂದು ಕರೆದರು. ಹೀಗಾಗಿ ಮುಂಬೈ ಕರ್ನಾಟಕದ ಭಾಗವಾಗಿದ್ದ ಧಾರವಾಡದಲ್ಲಿ ಮೊದಲಿಗೆ ಮರಾಠಿ ಪ್ರಾಬಲ್ಯ ಹೆಚ್ಚಾಗಿ ಇತ್ತು. ವೀರಶೈವ ಮಠಗಳಲ್ಲಿ ಮಾತ್ರ ಕನ್ನಡ, ಸಂಸ್ಕೃತ ಮರಾಠಿ ಹಾಗೂ ಗಣಿತಗಳನ್ನು ಬೋಧನೆ ಮಾಡುತ್ತಿದ್ದರು. 'ಉತ್ತರ ಕರ್ಣಾಟಕ ಈ ಭಾಗದ ಜನರಿಗೆ ಶಿಕ್ಷಣ ಸಿಗುವುದು ದುಸ್ತರವೆ ಆಗಿತ್ತು. ಆಗಿನ ಸಂದರ್ಭದಲ್ಲಿ ಶಿಕ್ಷಣ ಸೌಲಭ್ಯ ಈಗಿನಷ್ಟು ಸರಳವಾಗಿರಲಿಲ್ಲ. ಹಣವುಳ್ಳವರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ದೂರದ ಪುಣೆಗೋ, ಮುಂಬೈಗೋ ಕಳುಹಿಸುತ್ತಿದ್ದರು. ಅದಲ್ಲದೆ ಈ ರೀತಿ ಹೋದ ಕನ್ನಡಿಗರೆಲ್ಲರೂ ಪರಭಾಷಿಗಳಾಗಿ ಮರಳುತ್ತಿದ್ದರು' (ಆಧಾರ: ಹೊಸಗನ್ನಡ ಉದಯಕಾಲ)– ಕನ್ನಡಿಗರಿಗೆ ತಮ್ಮ ಭಾಷೆ ಕನ್ನಡವೆಂದು ಮನವರಿಕೆಯಾಗಲು ಬಹಳಷ್ಟು ಕಾಲ ಬೇಕಾಯಿತು. ಹಾಗೂ ಅದಕ್ಕಾಗಿ ಅನೇಕ ಸಾಹಿತಿಗಳು ಕರ್ನಾಟಕವನ್ನು ಏಕೀಕರಣಗೊಳಿಸಲು ಶ್ರಮಿಸಿದರು. ಧಾರವಾಡದಲ್ಲಿ ಒಂದು ಸ್ವತಂತ್ರ ಕನ್ನಡ ಶಾಲೆ ಪ್ರಾರಂಭಿಸಬೇಕೆಂಬುದು ಇಲ್ಲಿಯ ಜನರ ಬೇಡಿಕೆಯಂತೆ ಧಾರವಾಡ ವಿಭಾಗದ ಅಸಿಸ್ಟೆಂಟ್ ಕಲೆಕ್ಟರನಾಗಿದ್ದ **ವಾಲ್ಟರ್ ಎಲಿಯೆಟ್** ಇವರು ಜನರ ಈ ಕೋರಿಕೆಯನ್ನು ಕಂಪನಿ ಸರ್ಕಾರಕ್ಕೊಂದು ಪತ್ರ ಬರೆದು ತಿಳಿಸಿದರು. ಆ ಪತ್ರ ಹೀಗಿತ್ತು. 'ಇಲ್ಲಿಯ ಜನರ ಭಾಷೆ ಕ್ಯಾನರೀಸ್ (ಕನ್ನಡ) ಆಗಿದೆ. ಹೀಗಾಗಿ ಇಲ್ಲಿ ಕನ್ನಡ ಶಾಲೆಯನ್ನು ತೆಗೆಯುವ ಅಗತ್ಯವಿದೆ. ಎಂದು, ಅಷ್ಟೆ ಅಲ್ಲದೆ ಎಲಿಯೆಟ್ ಅವರು ತಮ್ಮ ಸ್ವಂತ ಸಂಬಳದಿಂದ ಒಂದು ಕನ್ನಡ ಶಾಲೆಯನ್ನು ತೆರೆದರು.' *(ಆಧಾರ : ಶಾಲ್ಮಲ, ಗಂಡುಮಕ್ಕಳ ಟ್ರೇನಿಂಗ್ ಕಾಲೇಜು, ಮೋಹನ್ ನಾಗಮ್ಮನವರ್)* ಆಧುನಿಕ ಕನ್ನಡಕ್ಕೆ ಇದೊಂದು ಚಾರಿತ್ರಿಕ ಹೆಜ್ಜೆಯಾಯಿತು. 'ಸದರ್ನ ಮರಾಠ ಪ್ರದೇಶದ ಜನರ ಭಾಷೆ ಕನ್ನಡವಾದುದರಿಂದ ಕನ್ನಡದಲ್ಲಿಯೇ ಆಡಳಿತ ಮತ್ತು ಶಿಕ್ಷಣ ಕಾರ್ಯ ನಡೆಯಬೇಕೆಂಬ ಮಹತ್ವಪೂರ್ಣ ನಿರ್ಣಯವನ್ನು ಮುಂಬಯಿ ಸರಕಾರ ೧೮೩೬ರಲ್ಲಿ ಕೈಗೊಂಡಿತು. ಇದರಿಂದ ಸರಕಾರಿ ಕನ್ನಡ ಶಾಲೆಗಳ ಸಂಖ್ಯೆ ಬೆಳೆಯಿತು.' (ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್). ಧಾರವಾಡದಲ್ಲಿ ಶಾಲೆಗಳು ಪ್ರಾರಂಭಗೊಂಡದ್ದು, ಬ್ರಿಟಿಷರ ಕ್ರೈಸ್ತ ಮಿಷಿನರಿಗಳಿಂದ. 'ಬಾಸೆಲ್ ಮಿಷನ್ನಿನ ಕಾರ್ಯಾಚರಣೆ ಧಾರವಾಡದಲ್ಲಿ ೧೮೩೬ ಪ್ರಾರಂಭವಾಯಿತು. ಇವರ ಮೂಲೋದ್ದೇಶ ಧರ್ಮೋಪದೇಶವಾದರೂ, ಇವರಿಂದ ಶಿಕ್ಷಣ ಕ್ಷೇತ್ರಕ್ಕೆ ಮಹತ್ತರ ಕಾಣಿಕೆ ದೊರೆಯಿತು. ಧಾರವಾಡದಲ್ಲಿ ಮಿಷನರಿ ಕಾರ್ಯಾಚರಣೆಗಾಗಿ ಮೊದಲು ಸಾಮ್ಯುಯಲ್ ಹೆಬಕ್ ಹಾಗೂ **ರೆ. ಮೊಗ್ಲಿಂಗ್**ರನ್ನು ನೇಮಿಸಲಾಯಿತು. '೧೮೩೭ರಲ್ಲಿ ಧಾರವಾಡ ಮತ್ತು ೧೮೫೯ರಲ್ಲಿ ಹುಬ್ಬಳ್ಳಿ ಪಟ್ಟಣಗಳು ಬಾಸೆಲ್ ಮಿಷನ್ನಿನ ಅಧಿಕೃತ ಠಾಣೆಗಳೆಂದು ಪರಿಗಣಿಸಲ್ಪಟ್ಟವು. ೧೮೩೮ರಲ್ಲಿ ಧಾರವಾಡದ ಬಜಾರದಲ್ಲಿ ಒಬ್ಬ ಬ್ರಾಹ್ಮಣನ ಮನೆ ಬಾಡಿಗೆ ಪಡೆದು ಅಲ್ಲಿ ಇಂಗ್ಲೀಷ್ ಶಾಲೆಯೊಂದನ್ನು ಪ್ರಾರಂಭಿಸಿದರು. ಇದರಲ್ಲಿ ಕೆಲವು ಯುರೋಪಿಯನ್ ಮತ್ತು ತಮಿಳು ಕ್ರೈಸ್ತ ಮಕ್ಕಳು ವ್ಯಾಸಂಗ ಮಾಡುತ್ತಿದ್ದರು. ಹಾಗೆಯೇ ೧೮೪೮ರಲ್ಲಿ ಒಂದು ಇಂಗ್ಲೀಷ್ ಶಾಲೆ ಮತ್ತು ೧೮೬೭ರಲ್ಲಿ ಹೆಣ್ಣು ಮಕ್ಕಳ ಶಾಲೆ ಮತ್ತು ಹೆಣ್ಣುಮಕ್ಕಳ ಬೋರ್ಡಿಂಗ್ ಶಾಲೆ ಪ್ರಾರಂಭಿಸಿದರು. **ರೆ. ಮೋಗ್ಲಿಂಗ್** ಪ್ರಾರಂಭಿಸಿದ ಇಂಗ್ಲೀಷ್ ಶಾಲೆಯ ಹೊರತಾಗಿ ಎಲ್ಲ ಮಿಷಿನರಿಗಳೂ ಕನ್ನಡ ಶಾಲೆಗಳನ್ನೆ ತೆರೆದು ಅವುಗಳಲ್ಲಿ ತಾವೇ ಬೋಧನೆ ಮಾಡುತ್ತಿದ್ದರು. *(ಆಧಾರ : ಧಾರವಾಡ ಜಿಲೆಯ ಗ್ಯಾಸೆಟಿಯರ್).*

೧೮೬೩ರಲ್ಲಿ ಪ್ರಥಮ ಹೈಸ್ಕೂಲು ಪ್ರಾರಂಭಿಸಲಾಯಿತು. ಧಾರವಾಡ ಜಿಲ್ಲೆಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಸೇವೆ ಸಲ್ಲಿಸಿದ ಮಿಷಿನರಿಗಳಲ್ಲಿ ಖ್ಯಾತ ವಿದ್ವಾಂಸರಾದ ವೈಗೆಲ್, ಜಿಗ್ಲರ್, ಮೋಗ್ಲಿಂಗ್ ಹಾಗೂ ಕಿಟೆಲ್ ಉಲ್ಲೇಖನೀಯರು. 'ಜಿಗ್ಲರ್ ಧಾರವಾಡದ ಹೈಸ್ಕೂಲ್ ಪ್ರಿನ್ಸಿಪಾಲರಾಗಿ (೧೮೭೦–೭೩) ರವರೆಗೆ ಸೇವೆ ಸಲ್ಲಿಸುವುದರ ಜೊತೆ ವಿದ್ಯಾವರ್ಧಕ ಸಂಘದ ಅಧ್ಯಕ್ಷರೂ ಆಗಿದ್ದರು. ಮುಂದೆ ೧೮೭೩–೭೪ರಲ್ಲಿ ಕಿಟೆಲ್ ಇದರ ಪ್ರಿನ್ಸಿಪಾಲರಾದರು. ಟಿ.ಎಸ್. ವೆಂಕಟಯ್ಯನವರು ಮುಂದೆ ಈ ಶಾಲೆಯಲ್ಲಿ ಕೆಲಕಾಲ ಕನ್ನಡ ಅಧ್ಯಾಪಕರಾಗಿ ದುಡಿದರು. ಇದಲ್ಲದೆ ೧೮೮೫ರಲಿ ಧಾರವಾಡದಲ್ಲಿ ತಾವೇ ಸ್ವತಃ ಬಾಲಕಿಯರ ಪ್ರೌಢಶಾಲೆ, ೧೯೫೭ರಲ್ಲಿ ಟ್ರೇನಿಂಗ್ ಶಾಲೆಯೊಂದನ್ನು ತೆರೆದರು.' *(ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ).*

ನವೋದಯದ ಉಗಮ ಮತ್ತು ಬೆಳವಣಿಗೆ ಹೊಂದಲು ಇದಕ್ಕೊಂದು ಕ್ರಿಯಾಶೀಲ ತಳಪಾಯ ಎಂಬಂತೆ ಧಾರವಾಡದಲ್ಲಿ ಕ್ರಿ.ಶ. ೧೮೫೭ರಲ್ಲಿ ನಾರ್ಮಲ್ ಸ್ಕೂಲ್ ಪ್ರಾರಂಭವಾಯಿತು. ಕ್ರಿ.ಶ. ೧೮೬೫ರಲ್ಲಿ ಶಿಕ್ಷಣಾಧಿಕಾರಿಯಾಗಿ ಬಂದ **ರಸೆಲ್** ಇವರು ಉತ್ತರ ಕರ್ನಾಟಕದ ಜನತೆಗೆ ತಮ್ಮ ಮಾತೃಭಾಷೆಯಲ್ಲಿ ಶಿಕ್ಷಣ ನೀಡಬೇಕೆಂಬ ಚಿಂತನೆಯಿಂದ ನಾರ್ಮಲ್ ಸ್ಕೂಲಿಗೆ **ಡೆಪ್ಯೂಟಿ ಚೆನ್ನಬಸಪ್ಪ**ನವರನ್ನು ಪ್ರಿನ್ಸಿಪಾಲರಾಗಿ ಮಾಡಿದರು. ಮುಂಬೈ ಸರಕಾರದ ವಿದ್ಯಾಖಾತೆಯಲ್ಲಿ ಅತ್ಯುನ್ನತ ಸ್ಥಾನಗಳಿಸಿದ ಕನ್ನಡಿಗ **ಚೆನ್ನಬಸಪ್ಪನವರು**. ಇವರು ಶಿಕ್ಷಣ ಮತ್ತು ಕನ್ನಡದ ಏಳ್ಗೆಗಾಗಿ ಶ್ರಮವಹಿಸಿದರು. ಮುಂದೆ ೧೯೬೭ರಲ್ಲಿ ಚೆನ್ನಬಸವಪ್ಪನವರು

# ಧಾರವಾಡದ ಇಂದಿನ ವಿದ್ಯಾಕೇಂದ್ರಗಳು



ಕೆ.ಇ. ಬೋರ್ಡ್ ಸ್ಕೂಲ್



ಕರ್ನಾಟಕ ವಿಶ್ವವಿದ್ಯಾಲಯ



ಕರ್ನಾಟಕ ಕಾಲೇಜು



ವಿದ್ಯಾವರ್ಧಕ ಸಂಘ

**Total list of Schools and Collages in Dharwad Taluk**

| | |
|---|---|
| Dharwad Law Colleges | Anjuman Teacher Training Institute |
| Dharwad Homoeopathic Medical Colleges | Basel Mission T T I |
| Dharwad Nursing Colleges | Dist Institute Of Education & Training |
| CSI KND BMHECs CSI College of Commerce, Dharwad | Govt T T I For Women |
| Karnatak University | Hamdard Asharfi Welfare T T I |
| Karnatak University Directorate of Distance Education | J. G. T T I |
| University of Agricultural Sciences, Dharwad | Mahila Vidyapeeth T T I |
| Karnataka Institute Of Medical Sciences | K L E Society S Jg T T I & Mgt |
| Sri Dharmasthala Manjunatheshwara | Kle College Of Education |
| Ayurveda Mahavidyalaya | Rajiv Gandhi B Ed College |
| Mahaganapathy Ayurvedic Medical College | Vijayanagar College Of Education |
| Moulana Azad Homoeopathic Medical | J S S Sakthi Law College |
| Lea Homoeopathic Medical College | K L E Society Gurusiddappa Kodhambari |
| B. D. Jatti Homoeopathic Medical College | Women S Polytechnic |
| Madeena Pre University College | Jss S Khk Instt Of Technology |
| Sri SDM College of Dental Science and Hospital | Rtes Rural Polytechnic |
| Sdm College Of Physiotherapy | Anjuman-e-islam Polytechnic |
| K. L. E. College Of Pharmacy | Kles S Polytechnic |
| BV Boomareddy College of Engineering | Hsges Rural Polytechnic |
| Sri Dharmasthala Manjunatheshwara Colleg | Nalanda Foundation S Polytechnic |
| R. N. Shetty College Of Hotel Management | St John S Polytechnic |
| | Shri Gurumalleshwara Polytechnic |
| | Nttf Technical Training Centre |
| | Rls Comp Pu College |

| | |
|---|---|
| Anjuman T. T. I | Sri Shankar A & C College |
| S J M V Institute Iti | Nehru Arts Sc Com College |
| Karnataka Huli Patila Iti | H. B. Comp Pu College,kundgol |
| Mahila Vidya Peeta Iti | S. G. E. Rural Engineering College |
| Prof K S Sharma Iti | Kless J. G. College Of Commerce |
| Karnataka Arts & Science College | Ashrafee TTI |
| J S S College (formerly Ke Board S College) | R. N. Shetty College Of Hotel Management |
| Kittle College | BVB College of Engineering & Technology |
| Anjuman Arts, Science And Commerce Coll | Karnataka Homoeopathic Medical College |
| Vidyaranya Science And Commerce College | S. E. T. College Of Pharmacy |
| Csi College Of Commerce | Kousali Institute Of Mangagement Studies |
| Sanskrit Pathashala | Karnataka University College Of Edu |
| Agricultural College | Kumareshwara College Of Education |
| College Of Postgraduate Studies | Gurusiddappa Kotambri Law College |
| Rural Home Science College | Sges Rural Polytechnic |
| Karnataka Science College | Soniyas College Of Pharmacy |
| Jssb A & C Sk Gubbi Sc College | **J.S.S College of Arts, Commerce and S.Gubbi College of Science** Vidyagiri - Dharwad |
| Pc Jabin Sc College | **Karnatak Science College** Dharwad |
| Jg College Of Commerce | **K. H. Kabbur Institute of Engineering** Dharwar |
| Channabasaveshwar Pu College | **S.D.M. College of Engineering and Technology** Dharwad |
| Railway Comp Pu College | |
| Sk Arts & Hsk Science Inst | |
| Sjmvs A & C Womens College | |
| Basel Mission Pu College | |

ಡೆಪ್ಯುಟಿ ಇನ್ಸ್‌ಪೆಕ್ಟರ್ ಆದಾಗ ವೆಂಕಟರಂಗೋಕಟ್ಟಿ ಎಂಬ ಖ್ಯಾತ ವಿದ್ವಾಂಸರು ಇದರ ಪ್ರಿನ್ಸಿಪಾಲರಾದರು. ಅಲ್ಲಿವರೆಗೆ **ನಾರ್ಮಲ್ ಸ್ಕೂಲ್** ಎಂದು ಕರೆಸಿಕೊಳ್ಳುತ್ತಿದ್ದ ಈ ಶಾಲೆ ಮುಂದೆ ಗಂಡುಮಕ್ಕಳ ಟ್ರೇನಿಂಗ ಕಾಲೇಜಾಯಿತು. ಮಹಿಳೆಯರ ಟ್ರೇನಿಂಗ್ ಕಾಲೇಜು ಹಾಗೂ ಶಿಕ್ಷಕರ ತರಬೇತಿ ವಿಭಾಗ ಎಂದು ಪ್ರಸಿದ್ಧವಾಯಿತು. ಈಗ ಇದು ಜಿಲ್ಲಾ ಶಿಕ್ಷಣ ತರಬೇತಿ ಕೇಂದ್ರವಾಗಿದೆ. **ಡೆಪ್ಯೂಟಿ ಚೆನ್ನಬಸಪ್ಪನವರು** ಇಂಜಿನಿಯರಿಂಗ್ ಓದಿದ್ದರೂ ಸಹ ಕನ್ನಡದಲ್ಲಿ ನಿಷ್ಠೆಯಿಂದಿದ್ದರು. ಇವರು ಈ ಕಾಲೇಜಿನಲ್ಲಿ ೧೫ ವರ್ಷಗಳ ಕಾಲ ಸೇವೆ ಸಲ್ಲಿಸಿದರು.

ಈ ಪ್ರದೇಶದಲ್ಲೊಂದು ಸ್ವತಂತ್ರ ಕಾಲೇಜು ತೆಗೆಯಬೇಕೆಂಬುದು ಉತ್ತರ ಕರ್ನಾಟಕದ ಜನರ ಇಚ್ಛೆ. ಈ ಭಾಗದ ಜನರು ತಮ್ಮ ಮಕ್ಕಳನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬಾಂಬೆ, ಪೂನಾ ಪಟ್ಟಣಗಳಿಗೆ ಕಳುಹಿಸುತ್ತಿದ್ದರು. ಸಿಂಧ್, ಗುಜರಾತ್, ಡೆಕ್ಕನ್ ಮತ್ತು ಬಾಂಬೆ ಪಟ್ಟಣಗಳಲ್ಲಿ ತಮ್ಮದೆ ಆದ ಸ್ವತಂತ್ರ ಕಾಲೇಜುಗಳಿದ್ದವು. ಹಿಗಾಗಿ 'ಕ್ರಿ.ಶ. ೧೮೭೬ರಲ್ಲಿ ಧಾರವಾಡದಲ್ಲಿಯೇ ಕಾಲೇಜು ಸ್ಥಾಪಿಸುವ ಕುರಿತು ಬಾಂಬೆ ಸರ್ಕಾರಕ್ಕೆ ಒಂದು ಪ್ರಸ್ತಾವನೆ ಸಲ್ಲಿಸಲಾಗಿತ್ತು'. *(ಶಾಲ್ಮಲ, ಕರ್ನಾಟಕ ಕಾಲೇಜು, ಮುಕುಂದ ಲಮಾಣಿ)* ಈ ಭಾಗದ ತಮ್ಮ ಮಕ್ಕಳನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕೆ ದೂರದ ಊರುಗಳಿಗೆ ಕಳಿಸುವುದು ಹೆಚ್ಚಿನ ಹೊರೆಯಾಗಿತ್ತು. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿದ ರಾವ್ ಬಹದ್ದೂರ್ ಹಾಗೂ ಎಸ್.ಕೆ. ಸಿದ್ದಪ್ಪ ಇವರು '೧೯೦೯ರಲ್ಲಿ ಸರ್ಕಾರಕ್ಕೊಂದು ಪತ್ರ ಬರೆದರು. ಶಾಸಕಾಂಗ ಪಕ್ಷದ ಒಂದು ಸಭೆಯಲ್ಲಿ ಲಾರ್ಡ್ ಸಿಡೆನ್ ಹ್ಯಾಮ್ ಇವರ ಆಳ್ವಿಕೆಯ ನೇತೃತ್ವದಲ್ಲಿ ಈ ವಿಷಯ ಪ್ರಸ್ತಾಪಗೊಂಡಿತು. ಆಗ ಸರ್ ಕ್ಲೆಂಡ್ ಹಿಲ್‌ರವರು ಸರಕಾರಿ ಮತ್ತು ಶೈಕ್ಷಣಿಕ ಸಮಿತಿಯ ಸದಸ್ಯರಾಗಿದ್ದರು. ಇವರು ತಮ್ಮ ಅವಧಿಯಲ್ಲಿ ಕ್ರಿ.ಶ. ೧೯೧೫ರಲ್ಲಿ ಕಾಲೇಜು ಸ್ಥಾಪಿಸಲು ಅನುಮೋದನೆ ನೀಡಿದರು.' *(ಶಾಲ್ಮಲ, ಕರ್ನಾಟಕ ಕಾಲೇಜು, ಮುಕುಂದ ಲಮಾಣಿ).* ರಾವ್ ಬಹದ್ದೂರ್, ರೊದ್ದಶ್ರೀನಿವಾಸ್ ಅವರು **ಕರ್ನಾಟಕ ಕಾಲೇಜು ಸಂಘ**ವನ್ನು ಸ್ಥಾಪಿಸಿದ್ದರು.

'೧೯೧೭ರಲ್ಲಿ ಜೂನ್ ೨೦ರಂದು ಎಂ.ಬಿ. ಚೌಬಲ ಅವರ ಅಮೃತ ಹಸ್ತದಿಂದ ಕನಾಟಕ ಕಾಲೇಜು ಪ್ರಾರಂಭವಾಯಿತು. ರೊದ್ದ ಶ್ರೀನಿವಾಸರಾವ್, ಅರಟಾಳ ರುದ್ರಗೌಡ ಹಾಗೂ ಸಿದ್ಧಪ್ಪಕಂಬಳಿ ಈ ಕಾಲೇಜಿನ ಸ್ಥಾಪನೆಗೆ ದುಡಿದವರು. **ರಾಲೀನ್‌ಸನ್** ಇವರು ಈ ಕಾಲೇಜಿನ ಮೊದಲನೆ ಪ್ರಾಚಾರ್ಯರಾದರು. ಕರ್ನಾಟಕ ಕಾಲೇಜು ಉತ್ತರ ಕರ್ನಾಟಕ ಜನತೆಗೆ ಜ್ಞಾನದೇಗುಲವಾಯಿತು. ಮುಂದೆ ಎ.ಸಿ. ಫ್ಯಾರನ್ ಇವರು ಈ ಕಾಲೇಜಿನ ಶೈಕ್ಷಣಿಕ ಬೆಳವಣಿಗೆಗೆ ತಮ್ಮ ಜೀವನವನ್ನು ಮೀಸಲಿಟ್ಟರು.' *(ಶಾಲ್ಮಲ, ಕರ್ನಾಟಕ ಕಾಲೇಜು, ಮುಕುಂದ ಲಮಾಣಿ).* ಅನೇಕ ಖ್ಯಾತ ವಿದ್ವಾಂಸ ಅಧ್ಯಾಪಕರನ್ನೂ ಮುಂದೆ ಗಣ್ಯರಾದ ವಿದ್ಯಾರ್ಥಿಗಳನ್ನು ಹೊಂದಿದ್ದ ಕರ್ನಾಟಕ ಕಾಲೇಜು ಒಂದು ಸುಸಜ್ಜಿತ ಕಾಲೇಜಾಗಿ ಬೆಳೆದು ಸ್ನಾತಕೋತ್ತರ ತರಗತಿಗಳನ್ನು ಹೊಂದಿತ್ತು.

ಹಲವಾರು ಖಾಸಗಿ ಸಂಸ್ಥೆಗಳು ಶಾಲಾ ಕಾಲೇಜುಗಳನ್ನು ತೆರೆಯುವ ಮೂಲಕ ಶಿಕ್ಷಣ ಕ್ಷೇತ್ರಕ್ಕೆ ಮಹತ್ತರ ಸೇವೆ ಸಲ್ಲಿಸಿದೆ ಧಾರವಾಡ.

'ಗುರುನಾಥರಾವ್ ಪಾಠಕ್‌ರ ಪ್ರೇರಣೆಯಿಂದ ಧಾರವಾಡದಲ್ಲಿ ೧೮೮೭ ರಲ್ಲಿ **ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಸಂಸ್ಕೃತ ಪಾಠಶಾಲೆ** ಎಂದು ಪ್ರಾರಂಭವಾಗಿ ೧೯೪೪ರಲ್ಲಿ ಸಂಸ್ಕೃತ ಲಿಟರರಿ ಸೊಸೈಟಿ ಎಂದು ಸರ್ಕಾರದಲ್ಲಿ ನೊಂದಾಯಿಸಲ್ಪಟ್ಟಿತು.' *(ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್, ಪುಟ ಸಂಖ್ಯೆ ೭೯೧).* ಗಿಲಗಿಂಚಿ ಗುರುಸಿದ್ಧಪ್ಪ ಹಾಗೂ ಅರಟಾಳ ರುದ್ರಗೌಡರ ಕೂಡಿ ೧೮೮೩ ರಲ್ಲಿ ಧಾರವಾಡದಲ್ಲಿ ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆ ಪ್ರಾರಂಭಿಸಿದರು. ವೀರಶೈವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ವಿದೇಶ ವ್ಯಾಸಂಗ ವೇತನವನ್ನು ಇದು ಒದಗಿಸುತ್ತಿತ್ತು. ೧೯೧೦ರಲ್ಲಿ **ವಂಗ-ಭಂಗ** ಚಳುವಳಿಯ ಕಾಲಕ್ಕೆ ಧಾರವಾಡದಲ್ಲಿ ಆಲೂರು ವೆಂಕಟರಾಯರ ಯತ್ನದಿಂದ ರಾಷ್ಟ್ರೀಯ ಶಾಲೆ ಆರಂಭವಾಯಿತು. ೧೯೧೬ರಲ್ಲಿ ಸರ್. ಸಿದ್ದಪ್ಪಕಂಬಳಿ, ಅರಟಾಳರುದ್ರಗೌಡರು, ಶಾಂತವೀರಪ್ಪ ಮೆಣಸಿನಕಾಯಿ ಇವರೆಲ್ಲರೂ ಕೆ.ಎಲ್.ಇ. (ಕರ್ನಾಟಕ ಲಿಂಗಾಯಿತ ಎಜುಕೇಷನ್) ಎಂಬ ಸೊಸೈಟಿ ಪ್ರಾರಂಭಿಸಿದರು. ಈ ಸೊಸೈಟಿ ಈಗಲೂ ಇಡೀ ಭಾರತದಲ್ಲಿ ಹಾಗೂ ಹೊರಿಗನ ದೇಶದಲ್ಲಿಯು ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ವದ ಕಾರ್ಯ ಮಾಡುತ್ತಿದೆ. ೧೯೧೭ರಲ್ಲಿ ಮೃತ್ಯುಂಜಯ ಸ್ವಾಮಿಯವರು ಉಚಿತ ಬೋರ್ಡಿಂಗ್ ಶಾಲೆಯನ್ನು ಪ್ರಾರಂಭಿಸಿದರು. 'ಆಗಿನ ವಿಕ್ಟೋರಿಯಾ ಹೈಸ್ಕೂಲು ೧೯೨೦ರಲ್ಲಿ ಕರ್ನಾಟಕದ ಎಜುಕೇಷನ್ ಸೊಸೈಟಿ ಕಾಲೇಜ್ ಎಂಬ ನಾಮಾಂಕಿತದಲ್ಲಿ ಕಾಲೇಜಾಗಿ ಮಾರ್ಪಟ್ಟಿತ್ತಾದರೂ ಅಸಹಕಾರ ಚಳುವಳಿಯ ಕಾರಣ ಮರುವರ್ಷವೇ ಮುಚ್ಚಲ್ಪಟ್ಟಿತು. ೧೯೨೨ರಲ್ಲಿ ವೀರಶೈವ ಅಭಿವೃದ್ಧಿ ಸಂಘವು ಮಾಧ್ಯಮಿಕ ಶಾಲೆ ಪ್ರಾರಂಭಿಸಿ ವಿದ್ವಾಂಸರಾದ ಶಿ.ಶಿ. ಬಸವನಾಳರನ್ನು ಇದರ ಮುಖ್ಯೋಪಧ್ಯಾಯರನ್ನಾಗಿ ೧೯೩೩ರವರೆಗೆ ಮುಂದುವರೆಸಿದರು. ಬಾಡಿಗೆ ಕಟ್ಟಡದಲ್ಲಿ ಪ್ರಾರಂಭವಾದ ಈ ಶಾಲೆ ರಾಜಾ ಲಖಮನಗೌಡರಂತಹವರಿಂದ ಧನಸಹಾಯ ಪಡೆದು ಸ್ವಂತ ಕಟ್ಟಡ ಹೊಂದಿ

ಆರ್.ಎಲ್.ಎಸ್. ಹೈಸ್ಕೂಲೆಂದು ಪ್ರಸಿದ್ಧವಾಯಿತು. ಜೊತೆಗೆ ವಿದ್ಯಾರ್ಥಿಗಳಿಗೆ ಹಾಸ್ಟೆಲನ್ನು ತೆರೆಯಲಾಯಿತು. ಇದಕ್ಕೀಗ Town Hall ಎಂದು ಕರೆಯಲಾಗುತ್ತಿದೆ. ಜಿಲ್ಲೆಯ ನಂತರದ ಕಾಲೇಜುಗಳೆಂದರೆ, ಕೆ.ಇ. ಬೋರ್ಡಿನ ಕಲಾ ಕಾಲೇಜು, ಧಾರವಾಡದಲ್ಲಿ ೧೯೪೪ರಲ್ಲಿ ಪ್ರಾರಂಭವಾಯಿತು. ಇದೇ ಮುಂದೆ ಜನತಾ ಶಿಕ್ಷಣ ಸಮಿತಿಯು ಮತ್ತು ಬನಶಂಕರಿ ಕಾಲೇಜಾಯಿತು. ಈ ಕಾಲೇಜನ್ನು ಖ್ಯಾತ ಸ್ವಾತಂತ್ರ ಯೋಧ ರಾಮ್‌ರಾವ್ ಹುಕ್ಕೇರಿಕರರ ಆಡಳಿತಕ್ಕೆ ಒಪ್ಪಿಸಲಾಯಿತು. ಅವರು ಜನತಾ ಶಿಕ್ಷಣ ಸಮಿತಿ ಆರಂಭಿಸಿ ವಿದ್ಯಾರಣ್ಯ ಹೈಸ್ಕೂಲಿನ ವಠಾರದಿಂದ ವಿದ್ಯಾಗಿರಿಗೆ (ಮೈಲಾರ ಲಿಂಗನಗುಡ್ಡಕ್ಕೆ) ಕಾಲೇಜನ್ನು ವರ್ಗಾಯಿಸಿದರು. ಇದರ ವತಿಯಿಂದ ಒಂದು ಪದವಿ ಕಾಲೇಜು, ಒಂದು ತಾಂತ್ರಿಕ ಸಂಸ್ಥೆ (ಕಬ್ಬೂರ ಇನ್ಸ್‌ಟಿಟ್ಯೂಟ್) ಒಂದು ಆರ್ಥಿಕ ಸಂಶೋಧನಾ ಕೇಂದ್ರ, ಗ್ರಾಮೋದ್ಯೋಗ ಕೇಂದ್ರ, ಜನತಾ ಕರಕುಶಲ ಉತ್ಪಾದನಾ ಕೇಂದ್ರ, ಜನತಾ ಮುದ್ರಣಾಲಯ, ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯ, ಮಂಜುಶ್ರೀ ಶಿಶುವಿಹಾರ, ಮಹಿಳೆಯರ ಪುನರ್ ವಸತಿಕೇಂದ್ರ, ಹೀಗೆ ೧೯೭೩ರವರೆಗೆ ಹುಕ್ಕೇರಿಯವರು ಇದರ ಸರ್ವತೋಮುಖ ಪ್ರಗತಿಗೆ ದುಡಿದರು. ೧೯೪೭ರಲ್ಲಿ ಕೃಷಿ ಕಾಲೇಜು, ೧೯೪೮ರಲ್ಲಿ ಬಿ.ವಿ.ಬಿ. ಇಂಜನಿಯರಿಂಗ್ ಕಾಲೇಜು, ೧೯೪೯ರಲ್ಲಿ ಜನತಾ ಸೈನ್ಸ್ ಕಾಲೇಜು, ೧೯೫೭ರಲ್ಲಿ ಕಾಡಸಿದ್ಧೇಶ್ವರ ಕಾಲೇಜು ಹುಬ್ಬಳ್ಳಿ, ೧೯೫೫ರಲ್ಲಿ ಜನತಾ ಶಿಕ್ಷಣ ಸಮಿತಿಯ ಕಾನೂನು ಕಾಲೇಜು, ಹೀಗೆ ಸ್ವಾತಂತ್ರ್ಯ ಪೂರ್ವದ ನಂತರವೂ ಹಾಗೂ ಸ್ವಾತಂತ್ರ್ಯ ನಂತರವೂ ಅನೇಕ ಶಾಲಾ ಕಾಲೇಜುಗಳು ತಮ್ಮದೇ ನೇತೃತ್ವದಲ್ಲಿಯೇ ಹೆಚ್ಚಿನ ಬೆಳವಣಿಗೆ ಕಂಡವು. *(ಅಂತರ್ಜಾಲದ ನೆರವು ಮತ್ತು ಧಾರವಾಡ ಜಿಲ್ಲೆಯ ಗ್ಯಾಸೆಟಿಯರಿನ ನೆರವು).*

'೧೯೪೭ರಲ್ಲಿ ಜಸ್ಟೀಸ್ ಲೋಕೂರ ಅವರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಸಮಿತಿಯು ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಗೆ ಶಿಫಾರಸು ಮಾಡಿತು. ಧಾರವಾಡ, ಬೆಳಗಾವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ವ್ಯಾಪ್ತಿ ಹೊಂದಿದ ಕರ್ನಾಟಕ ವಿಶ್ವವಿದ್ಯಾಲಯ ೧೯೪೯ರಲ್ಲಿ ಪ್ರಾರಂಭವಾಗಿ ಇದರ ಕಛೇರಿ ಮೊದಲು ಮುಂಬೈನಲ್ಲಿದ್ದು ಅಕ್ಟೋಬರ್‌ನಲ್ಲಿ ಧಾರವಾಡದ ಟ್ರೇನಿಂಗ್ ಕಾಲೇಜ್ ಕಟ್ಟಡಕ್ಕೆ ವರ್ಗಾಯಿಸಲ್ಪಟ್ಟಿತು. ಇದು ಕರ್ನಾಟಕ ರಾಜ್ಯದ ಎರಡನೆಯ ವಿಶ್ವವಿದ್ಯಾಲಯವಾಗಿದ್ದು ಆರ್.ಎ. ಜಾಗಿರ್‌ದಾರ್ ಇವರು ಪ್ರಥಮ ಕುಲಪತಿಗಳಾಗಿದ್ದರು. ೧೯೫೦ರ ಮಾರ್ಚ್ ೧ಕ್ಕೆ ಇದು ಶಾಸನಬದ್ಧ ಸಂಸ್ಥೆಯಾಗಿ ರೂಪುಗೊಂಡಿತು. ಮುಂದೆ ರ್‍ಯಾಂಗ್ಲರ ಪಾವಟೆಯವರು ಮೂರನೆಯ ಕುಲಪತಿಗಳಾಗಿ ೧೩ ವರ್ಷ ಬಹುಮುಖ ಪ್ರಗತಿಗೆ ಕಾರಣರಾದರು' *(ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್, ಪುಟ ಸಂಖ್ಯೆ ೭೧೫).*

ಹೀಗೆ ಉತ್ತರ ಕರ್ನಾಟಕದಲ್ಲಿ ಬರುವ ಧಾರವಾಡ ಜಿಲ್ಲೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಕೇಂದ್ರಸ್ಥಾನ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಆದರೆ ಈಗ ಉತ್ತರ ಕರ್ನಾಟಕದ ಅನೇಕ ಜಿಲ್ಲೆಯಲ್ಲಿ ವಿಶ್ವವಿದ್ಯಾಲಯಗಳು ಪ್ರಾರಂಭವಾಗಿವೆ. ಆದರೆ ಸ್ವಾತಂತ್ರ್ಯ ಪೂರ್ವದಿಂದಲೂ ಚಾಲುಕ್ಯರು, ರಾಷ್ಟ್ರಕೂಟರು ಆಳುತ್ತಿದ್ದ ಸಂದರ್ಭದಿಂದಲೂ ಧಾರವಾಡ ಹಾಗೂ ಈ ಜಿಲ್ಲೆಯ ಸುತ್ತಮುತ್ತಲೂ ಶಾಲೆಗಳಿದ್ದವು ಎಂಬುದಕ್ಕೆ ಈ ಮೇಲೆ ವಿವರಿಸಲಾಗಿದೆ. ಸದ್ಯ ಇಂದಿನ ದಿನಮಾನದಲ್ಲಿ ಇರುವ ಶಾಲಾ ಕಾಲೇಜುಗಳ ಹೆಸರುಗಳನ್ನು ಇಲ್ಲಿ ನೀಡಿದೆ.

## ಆಧಾರಸೂಚಿ


೧. **ಶಾಲ್ಮಲ,** ಜಿಲ್ಲಾ ೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಧಾರವಾಡ, ೨೦೧೦.

೨. **ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ.**

೩. **ಹೊಸಗನ್ನಡ ಉದಯಕಾಲ.**

೪. **ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್.**

೫. ಅಂತರ್‌ಜಾಲದ ಸಹಾಯ.

ಪ್ರೊ. ಶ್ರೀಮತಿ ಶಕುಂತಲಾ ಸಿಂಧೂರ*

# ಬೆಳವಲ ನಾಡಿನ ಪ್ರಾತಃಸ್ಮರಣೀಯರು : ಡಾ. ಪಂ. ಪುಟ್ಟರಾಜ ಗವಾಯಿಗಳು

ಮಾನವೀಯತೆಯ ಸಾಕಾರಮೂರ್ತಿ, ಕರುಣೆಯ ಕಣ್ಣು, ಅನಾಥರ ಆಶ್ರಯದಾತ, ತ್ರಿಭಾಷಾ ಪಂಡಿತ, ಭೂಲೋಕದ ನಡೆದಾಡುವ ದೇವರು, ಪುರುಷ ಸರಸ್ವತಿ ಸ್ವರೂಪರು, ಹಿಂದೂಸ್ಥಾನಿ ಸಂಗೀತವನ್ನು ದಕ್ಷಿಣ ಭಾರತದಲ್ಲಿ ಬೆಳೆಸಿದ ಮಹಾತ್ಮ, ಸಹಸ್ರಾರು ಮಕ್ಕಳಿಗೆ ದೃಷ್ಟಿಹೀನರಿಗೆ ಅಕ್ಷಯಪಾತ್ರೆ ಕೊಟ್ಟ ಮಹಾನ್ ಸಂತ, ಗದಗಿನ ಗಾನಯೋಗಿ, ಪವಿತ್ರ ಮತ್ತು ಅರ್ಪಣಭಾವದ ಬದುಕು ಸವೆಸಿದ ಬೆಳವಲನಾಡಿನ ಮಹಾಬೆಳಗು. ವೀರೇಶ್ವರ ಪುಣ್ಯಾಶ್ರಮದ ಪೀಠಾಧಿಪತಿ, ತಂದೆಯಾಗಿ, ತಾಯಿಯಾಗಿ, ಗುರುವಾಗಿ, ದೇವರಾಗಿ, ಮಹಾಮಹಿಮ ಪುರುಷರಾಗಿ ಸರ್ವರಿಗೂ ಒಂದೊಂದು ರೀತಿಯಲ್ಲಿ ಅವತಾರಿಯಾಗಿ "ಅವರವರ ಭಾವಕ್ಕೆ ಅವರವರ ಭಕುತಿಗೆ ಅವರವರಿಗೆಲ್ಲ ಗುರು ನೀನೊಬ್ಬನೆ" ಎನ್ನುವಂತೆ ನಡೆದುಕೊಂಡವರು ಶ್ರೀ ಪುಟ್ಟರಾಜರು.

ಕನ್ನಡ ನಾಡಿನ ಸಾಂಸ್ಕೃತಿಕ ಕ್ಷೇತ್ರಕ್ಕೆ ಬಹುರೂಪ ಸೇವೆ ಸಲ್ಲಿಸಿದ ಧೀಮಂತ, ಉಭಯಗಾನ ವಿಶಾರದ ಆಧ್ಯಾತ್ಮಿಕ ಸಾಧಕ, ತ್ರಿಕಾಲ ಲಿಂಗ ಪೂಜಾ ನಿಷ್ಠರು, ಪಂಚಾಕ್ಷರಿ ಗವಾಯಿಗಳವರು ಲಿಂಗೈಕ್ಯರಾದ ನಂತರ ವೀರೇಶ್ವರ ಪುಣ್ಯಾಶ್ರಮದ ಪೀಠಾಧಿಪತಿಗಳಾಗಿ ಪಂ. ಪುಟ್ಟರಾಜ ಗವಾಯಿಗಳವರು ನಂತರ ಸವೆಸಿದ ಹಾದಿ ಅಪೂರ್ವ ಅಭೂತಪೂರ್ವವೇ ಸರಿ.

ಅಂಥ ಅನಾಥರಾಗಿ ಬೀದಿಯಲ್ಲಿದ್ದ ಅಸಂಖ್ಯಾತ ಮಕ್ಕಳನ್ನು ಪುಣ್ಯಾಶ್ರಮಕ್ಕೆ ಕರೆತಂದು ವಿದ್ಯೆ ಕಲಿಸಿದ ಮಹಾ ಪುಣ್ಯಾತ್ಮರು ಪುಟ್ಟರಾಜರು.

ಶ್ರೀಗಳು ಬ್ರೈಲ್ ಲಿಪಿ ಕನ್ನಡ, ಹಿಂದಿ, ಸಂಸ್ಕೃತ ಸೇರಿದಂತೆ ತ್ರಿಭಾಷಾ ಪ್ರಾವೀಣ್ಯತೆ ಹೊಂದಿ ಸಾಹಿತ್ಯ ಸಂಗೀತ ಕ್ಷೇತ್ರದಲ್ಲಿಯೂ ವಿಶಿಷ್ಟ ಸಾಧನೆಗೈದಿದ್ದಾರೆ.

ಗದಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿನ ಅನೇಕ ಸಂಗೀತ ಕಲಾವಿದರು ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಗಳಿಸಿದ್ದಾರೆ.

ಕನ್ನಡ ನಾಡಿನ ಅಪರೂಪದ ಅಪೂರ್ವ ವ್ಯಕ್ತಿಗಳಾದ ಪೂಜ್ಯರು ದೇಶ ವಿದೇಶಗಳಲ್ಲಿ ಅನೇಕ ಶಿಷ್ಯ ವೃಂದವನ್ನು ಪಸರಿಸಿ ರಾಷ್ಟ್ರದಲ್ಲಿ ಗದಗಕ್ಕೆ ಒಂದು ವಿಶಿಷ್ಟ ಸ್ಥಾನ ಕಲ್ಪಿಸಿ ಕೊಟ್ಟವರು. ವಿದ್ಯಾದಾನ ದಾಸೋಹಗೈಯುವುದೇ ನನ್ನ ಜನ್ಮಸಿದ್ಧ ಹೊಣೆ ಎಂಬುದನ್ನು ಸಾಬೀತುಪಡಿಸಿರುವರು. ಶ್ರೀಗಳು ಲಿಂಗೈಕ್ಯರಾದ ದಿನ ನಾಡಿಗೆ ನಾಡೇ ಕಣ್ಣೀರಿಟ್ಟಿತು. ಇವರ ಅಂತ್ಯಕ್ರಿಯೆಯಲ್ಲಿ ನೆರೆದ ಜನಸ್ತೋಮವು ಶ್ರೀಗಳು ಜನತೆಯ ಮೇಲೆ ಇಟ್ಟಿದ್ದ ಪ್ರೀತಿ ವಾತ್ಸಲ್ಯಗಳ ಅನನ್ಯತೆಗೆ ಸಾಕ್ಷಿಯಂತಿತ್ತು.

ತನಗೆ ಕಣ್ಣಿಲ್ಲದಿದ್ದರೂ, ಜ್ಞಾನವೆಂಬ ಮೂರನೇ ಕಣ್ಣಿನಿಂದ ಸಮಾಜದ ಶ್ರೇಯೋಭಿವೃದ್ಧಿಗಾಗಿ 'ಗಂಧದ ಕೊರಡಿನಂತೆ' ಪರರಿಗಾಗಿಯೇ ಜೀವನ ಮೀಸಲಾಗಿಸಿ 'ಪರೋಪಕಾರಾರ್ಥಂ ಇದಂ ಶರೀರಂ' ತತ್ವಪರಿಪಾಲಕರಾಗಿ ಮೇರು ಸದೃಶ ವ್ಯಕ್ತಿತ್ವವುಳ್ಳವರಾಗಿ ಗದಗಿನ ಹೆಸರು ಜಗತ್ತಿನ ಭೂಪಟದಲ್ಲಿ ಅಜರಾಮರ ವಾಗಿರುವಂತೆ ಸಾಧನೆಗೈದಿರುವ ಮಹಾನ್ ವಿಭೂತಿ ಪುರುಷ ಗದಗಿನ ವೀರೇಶ್ವರ ಪುಣ್ಯಾಶ್ರಮದ ಈ ಪುಣ್ಯಪುಂಜರು ಎಂದೆಂದಿಗೂ ಮರೆಯದ ನೂತನ ಇತಿಹಾಸ ನಿರ್ಮಾಪಕರೆಂಬ ಖ್ಯಾತಿಗೆ ಕಾರಣೀಕರ್ತ ರಾಗಿರುವರು.

ಅವರು ತಮ್ಮ ಶ್ರಮ, ಕಠಿಣ ತಪಸ್ಸಿನಿಂದಾಗಿ ಅಂಗ ಊನತೆ ಸಾಧನೆಗೆ ಅಡ್ಡಿಯಾಗದು ಎನ್ನುವ ಸತ್ಯವನ್ನು ಒತ್ತಿ ಒತ್ತಿ ಹೇಳಿದ ಈ ಮಹಾಚೇತನವಾಗಿ ಛಲದಿಂದ ತಮ್ಮ ವೀರೇಶ್ವರ ಪುಣ್ಯಾಶ್ರಮವನ್ನು ಯಾವುದೇ ವಿಶ್ವವಿದ್ಯಾಲಯಕ್ಕೆ ಕಮ್ಮಿ ಇಲ್ಲದಂತೆ ಕಟ್ಟಿ ಬೆಳೆಸಿದರು. ಅದನ್ನು ಕಲೆ, ಸಂಗೀತ, ಸಂಸ್ಕೃತಿಯ ತವರು ಮಾಡಿದವರು. ಒಂದು ಮಠದ ಮುಖ್ಯಸ್ಥರಾಗಿ ತಾವಾಯಿತು ತಮ್ಮ ಸಾಧನೆಯಾಯಿತು ಎಂದು ತೆರೆಮರೆಯಲ್ಲಿ ಉಳಿಯದೇ ತಮ್ಮ ಸಾಧನೆಯ ಹಾದಿಯಲ್ಲಿ ಇನ್ನುಳಿದವರನ್ನೂ ಒಟ್ಟಿಗೆ ಕರೆದೊಯ್ದರು. ಇಡೀ ವಿಶ್ವವೇ ತಮ್ಮತ್ತ ತೆರೆದ ಕಣ್ಣುಗಳಿಂದ ನೋಡುವಂತೆ ಮಾಡಿದವರು.

* ಕನ್ನಡ ಪ್ರಾಧ್ಯಾಪಕರು, ಜಗದ್ಗುರು ತೋಂಟದಾರ್ಯ ಕಾಲೇಜು, ಗದಗ.

ಪುಟ್ಟರಾಜರು ಬದುಕಿನ ಎಲ್ಲ ಮಗ್ಗಲುಗಳನ್ನು ಸ್ಪರ್ಶಿಸಿ ತಮ್ಮ ಅಂತಃಚಕ್ಷುವಿನ ಬಲದಿಂದ ತ್ರಿವಿಧ ದಾಸೋಹದಂತೆ ತ್ರಿಭಾಷೆಗಳಲ್ಲಿ ೮೦ ಶಾಲೆಗಳನ್ನು ರಚಿಸಿ, ಹಾರ್ಮೋನಿಯಂ ಸಾರಂಗಿ ವಾಯೋಲಿನ್ ಸಿತಾರ್ ತಬಲಾ ವೀಣಾ ಇತ್ಯಾದಿ ೩೪ ವಾದ್ಯಗಳನ್ನು ಲೀಲಾಜಾಲವಾಗಿ ನುಡಿಸಿ ಶ್ರೋತೃಗಳನ್ನು ರೋಮಾಂಚನಗೊಳಿಸಿರುವ ಬಹುವಾದ್ಯ ವಾದಕರೆನಿಸಿರುವ ಡಾ. ಪುಟ್ಟರಾಜರನ್ನು ಮೀರಿಸುವ ಕಲಾವಿದರು ಭಾರತದಲ್ಲಿ ಬೇರೊಬ್ಬರಿಲ್ಲ ಎಂದು ಡಾ. ಮಲ್ಲಿಕಾರ್ಜುನ ಮನ್ಸೂರರು ಸಹಜವಾಗಿ ನುಡಿದಿದ್ದಾರೆ.

ಪಂಡಿತ ಪಂಚಾಕ್ಷರ ಗವಾಯಿಗಳಿಂದ ಪುಟ್ಟ ಸಸಿಯಾಗಿ ಕೇವಲ ಗದ್ದುಗೆಯಿಂದ ಆರಂಭಗೊಂಡಿದ್ದ ಆಶ್ರಮವಿಂದು ಹೆಮ್ಮರವಾಗಿ ಬೃಹದಾಕಾರ ರೂಪ ತಾಳಿ ದೇಶದಾದ್ಯಂತ ತನ್ನ ಶಿಷ್ಯ ಪಡೆಯನ್ನು ಹೊಂದಿ ಡಾ. ಪುಟ್ಟರಾಜರಿಂದ ವ್ಯಾಪಕವಾಗಿ ಪಸರಿಸಿರುವದು ದಾಖಲಾರ್ಹ.

ಬಾದಾಮಿಯ ಶಿವಯೋಗ ಮಂದಿರದಿಂದ ತಮ್ಮ ಗುರುಗಳಾದ ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳಿಂದ ಬೀಳ್ಕೊಂಡು ಸಂಚಾರಿ ಸಂಗೀತ ಶಾಲೆಯೊಂದಿಗೆ ನಾಡಿನಾದ್ಯಂತ ತಮ್ಮ ಶಿಷ್ಯರೊಂದಿಗೆ ಸಂಚರಿಸುತ್ತ ಬಂದ ಪಂಚಾಕ್ಷರ ಗವಾಯಿಗಳವರದು ದಿನನಿತ್ಯ ವನವಾಸವಾಗಿತ್ತು. ಇವರಿಗೆ ಗದಗಿನಲ್ಲಿ ನೆಲೆಯೂರಲು ಭೂದಾನ ಅರ್ಪಿಸಿ ಕೃತಾರ್ಥರಾದವರು ಮಹಾದಾನಿ ಲಿಂ. ಬಸರಿಗಿಡದ ವೀರಪ್ಪನವರು. ಇವರ ಸ್ಮರಣಾರ್ಥವಾಗಿಯೇ ಪುಣ್ಯಾಶ್ರಮದ ಹೆಸರು ವೀರೇಶ್ವರ ಪುಣ್ಯಾಶ್ರಮವೆಂದು ಕರೆಯಲಾಯಿತು. ೧೯೪೨ರಲ್ಲಿ ಪಂಚಾಕ್ಷರ ಗವಾಯಿಗಳಿಂದ ಸ್ಥಾಪನೆಗೊಂಡದ್ದು ಅಂದಿನ ಇತಿಹಾಸ.

ವೀರೇಶ್ವರ ಪುಣ್ಯಾಶ್ರಮದ ಅಧಿಪತಿಗಳಾಗಿ ತಮ್ಮ ಗುರುಗಳು ೧೯೪೪ರಲ್ಲಿ ಲಿಂಗೈಕ್ಯರಾದ ನಂತರ ಅವರ ಅಪ್ಪಣೆಯಂತೆ ಕಾರ್ಯನಿರ್ವಹಿಸಿದ ಪಂ. ಪುಟ್ಟರಾಜ ಗವಾಯಿಗಳವರು ಭಕ್ತ-ಭಗವಂತನನ್ನು ಮೀರಿಸಬೇಕು. ಮಕ್ಕಳು-ಹೆತ್ತವರನ್ನು ಮೀರಿಸಬೇಕು, ಶಿಷ್ಯ-ಗುರುವನ್ನು ಮೀರಿಸಬೇಕು ಎನ್ನುವಂತೆ ಗುರುವನ್ನು ಮೀರಿಸಿದ ಶಿಷ್ಯರಾಗಿ ಬೆಳೆದುದು ಇಂದಿನ ಇತಿಹಾಸ.

ಬಾಲ್ಯದಲ್ಲಿಯೇ ಕಣ್ಣುಗಳನ್ನು ಕಳೆದುಕೊಂಡು ಅಂಧರಾದ ಪುಟ್ಟರಾಜರು ಕನ್ನಡ ಹಿಂದಿ ಸಂಸ್ಕೃತ ತ್ರಿಭಾಷಾ ಪಂಡಿತರಾಗಿದ್ದರೂ ಕನ್ನಡತ್ವವನ್ನು ತಮ್ಮ ಹೃದಯಾಂತರಾಳ ದಲ್ಲಿ ಹುದುಗಿಸಿಕೊಂಡಿದ್ದ ಪುಟ್ಟರಾಜರು ತಮ್ಮ ಗುರು ಪಂಚಾಕ್ಷರರೊಂದಿಗೆ ಒಂದು ಸಲ ಮುಂಬೈಗೆ ತೆರಳಿದಾಗ ಎಚ್.ಎಂ.ವಿ. ಕಂಪನಿಯವರ ಗ್ರಾಮೋಫೋನ್ ಹಾಡಿನ ಧ್ವನಿಮುದ್ರಿಕೆಯಲ್ಲಿ ಮರಾಠಿ ಹಾಡನ್ನು ತಿರಸ್ಕರಿಸಿ ಮುಳಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳವರ ಕನ್ನಡ ತತ್ವ ಗೀತೆಗಳನ್ನು ಹಾಡಿ ಕರ್ನಾಟಕದ ಕೀರ್ತಿ ಬೆಳಗಿಸಿದರು.

ಸೊಲ್ಲಾಪುರದ ಧನಶೆಟ್ಟಿ-ಮಲ್ಲಪ್ಪನವರಿಂದ ಪ್ರೇರಣೆ ಪಡೆದು ಸದಾ ಖಾದಿ ಉಡುಪು ಧರಿಸುತ್ತಿದ್ದ ತಮ್ಮ ಗುರು ಪಂಚಾಕ್ಷರ ಗವಾಯಿಗಳ ಆದರ್ಶ ಪರಿಪಾಲಿಸಿದ ಪುಟ್ಟರಾಜರು ತಮ್ಮ ಬದುಕಿನುದ್ದಕ್ಕೂ ಸದಾ ಖಾದಿಧಾರಿಗಳಾಗಿ ಜೀವನ ಸಾಗಿಸಿದರು.

ತಾವು ಅನುಗಾಲ ಸ್ಮರಿಸುತ್ತಿದ್ದ ಹಾಗೂ ಆರಾಧಿಸುತ್ತಿದ್ದ ಬಸವಾದಿ ಶರಣರ ತತ್ವ ಎಲ್ಲೆಡೆ ಪಸರಿಸಲಿ ಎಂಬ ಸದುದ್ದೇಶದಿಂದ ರಾಷ್ಟ್ರಭಾಷೆ ಹಿಂದಿಯಲ್ಲಿ ಬಸವಪುರಾಣ ಬರೆದು ಅದನ್ನು ದೂರದ ದೆಹಲಿಗೆ ತೆರಳಿ ದೇಶದ ಪ್ರಥಮ ರಾಷ್ಟ್ರಪತಿ ಡಾ. ಬಾಬು ರಾಜೇಂದ್ರಪ್ರಸಾದರಿಗೆ ಅರ್ಪಿಸಿದರು. ಇದರೊಂದಿಗೆ ಪುಟ್ಟರಾಜರು ಎಡೆಯೂರು ಸಿದ್ಧಲಿಂಗೇಶ್ವರರ ಪುರಾಣವನ್ನು ಕೂಡಾ ರಾಷ್ಟ್ರಭಾಷೆ ಹಿಂದಿಯಲ್ಲಿ ಬರೆದರೆಂಬುದು ಅವರ ಗುರುಭಕ್ತಿಗೆ ನಿದರ್ಶನ.

ಡಾ. ರಾಜಕುಮಾರ ಅವರು ಗವಾಯಿಗಳವರ ಲಿಂಗಪೂಜಾ ವಿಧಾನವನ್ನು ನೋಡುವ ಆಕಾಂಕ್ಷೆವುಳ್ಳವ ರಾಗಿದ್ದರು. ಲಿಂಗಧಾರಿಗಳಿಗೆ ಮಾತ್ರ ಈ ಅವಕಾಶವಿತ್ತು. ಹೀಗಾಗಿ ಗವಾಯಿಗಳು ತಮ್ಮ ಸ್ನೇಹಿತರಾದ ಪೂಜ್ಯ ಸಿಂದಗಿ ಪಟ್ಟಾಧ್ಯಕ್ಷರಿಂದ ಡಾ. ರಾಜಕುಮಾರ ಹಾಗೂ ಕುಟುಂಬದ ಸದಸ್ಯರಿಗೆ ಲಿಂಗದೀಕ್ಷೆ ಮಾಡಿಸಿ ಡಾ. ರಾಜಕುಮಾರರ ಆಸೆ ಪೂರೈಸಿದರು. ವೀರೇಶ್ವರ ಪುಣ್ಯಾಶ್ರಮದಲ್ಲಿ ದಿ. ವರನಟ ಡಾ. ರಾಜಕುಮಾರ್ ಅವರು ಮೂರು ತಿಂಗಳವರೆಗೆ ಸಂಗೀತಾಭ್ಯಾಸ ಪೂರೈಸಿರುವರು. ೧೯೮೨ರಲ್ಲಿ ರಸಮಂಜರಿ ಕಾರ್ಯಕ್ರಮ ಏರ್ಪಡಿಸಿ ಅದರಿಂದ ಬಂದ ನಿಧಿಯನ್ನೆಲ್ಲವನ್ನು ಪುಣ್ಯಾಶ್ರಮದ ಶ್ರೇಯೋಭಿವೃದ್ಧಿಗೆ ಡಾ. ರಾಜಕುಮಾರರು ಧಾರೆಯೆರೆದರು.

ಡಾ. ಪಂ. ಪುಟ್ಟರಾಜ ಕವಿ ಗವಾಯಿಗಳು ನಾಟಕ ಪ್ರಿಯರಾಗಿದ್ದರು. ಸುಮಾರು ಎಪ್ಪತ್ತು ವರ್ಷಗಳ ಇತಿಹಾಸದಲ್ಲಿ ಪೂಜ್ಯರ ಬ್ರಹ್ಮಚರ್ಯ ವ್ರತಕ್ಕೆ ಭಂಗ ಬರದಂತೆ ಸ್ತ್ರೀಯರು ಬಣ್ಣ ಹಚ್ಚದ ಕಂಪನಿ ಎಂದರೆ ಪುಟ್ಟರಾಜ ಗವಾಯಿಗಳ ಶ್ರೀ ಕುಮಾರೇಶ್ವರ ನಾಟ್ಯ ಸಂಘ; ಅಶ್ಲೀಲ ಸಂಭಾಷಣೆ ಇಲ್ಲದೆ, ಭಕ್ತಿಪ್ರಧಾನ ನಾಟಕಗಳನ್ನೇ ಆಡುವ ಕಂಪನಿ ಇದೊಂದೇ ಎಂಬ ಹೆಗ್ಗಳಿಕೆಯೂ ಪೂಜ್ಯರದಾಗಿತ್ತು. ಡಾ. ಪುಟ್ಟರಾಜ ಕವಿ ಗವಾಯಿಗಳ ನೇತೃತ್ವದಲ್ಲಿ ಹೇಮರೆಡ್ಡಿ ಮಲ್ಲಮ್ಮ ನಾಟಕ ಸತತವಾಗಿ ೩೭೬ ಪ್ರಯೋಗಗಳ ಅಮೋಘ

ಪ್ರದರ್ಶನ ಕಂಡು ದಾಖಲೆ ನಿರ್ಮಿಸಿತು. ಪಂಚಾಕ್ಷರ ಗುರುಗಳ ಅಪ್ಪಣೆಯಂತೆ ಪುರುಷರೇ ಸ್ತ್ರೀ ಪಾತ್ರಗಳಲ್ಲಿ ಅಭಿನಯಿಸಿ ಜನ-ಮನ ಗೆದ್ದ ಸಂಗತಿ ವೈಶಿಷ್ಟ್ಯಪೂರ್ಣವಾಗಿರುವುದು. ಇದು ಸ್ತ್ರೀ ಕಲಾವಿದರಿಲ್ಲದ ಕರ್ನಾಟಕದ ಏಕೈಕ ನಾಟಕ ಕಂಪನಿ. ಇಲ್ಲಿ ಪುರುಷರೇ ಸ್ತ್ರೀ ಪಾತ್ರಗಳನ್ನು ಸ್ತ್ರೀಯರಿ ಗಿಂತಲೂ ಮಿಗಿಲಾಗಿ ಅಭಿನಯಿಸುತ್ತ ಬಂದಿದ್ದಾರೆ. ಇಂದಿಗೂ ಈ ಕಂಪನಿ ಹೀಗೇ ನಡೆದುಕೊಂಡು ಬಂದಿದೆ. ಈ ಕಂಪನಿಯ ಪ್ರಪ್ರಥಮ ನಾಟಕ 'ಶ್ರೀ ಶಿವಯೋಗಿ ಸಿದ್ಧರಾಮ'ನನ್ನು ಪುಟ್ಟಯಜ್ಜನವರೇ ಬರೆದು ನರಗುಂದದಲ್ಲಿ ಪ್ರದರ್ಶಿಸಿದರು. ಜನರಿಂದ ಉತ್ತಮ ಪ್ರತಿಕ್ರಿಯೆ ಲಭಿಸಿ ಆಶ್ರಮಕ್ಕೆ ಅತ್ಯವಶ್ಯವಾಗಿದ್ದ ಆರ್ಥಿಕ ಲಾಭ ಒದಗಿಸಿತು. ಇದಾದ ನಂತರ ಹಲವಾರು ಯಶಸ್ವಿ ನಾಟಕಗಳು ಕಂಪನಿಯಿಂದ ಪ್ರದರ್ಶಿಸಲ್ಪಟಿತು. ರಾಜ್ಯಾದ್ಯಂತ ಕಂಪನಿ ಖ್ಯಾತಿ ಗಳಿಸಿತು. ಆಶ್ರಮದ ಈ ಪ್ರಯತ್ನವನ್ನು ಆಗಿನ ರಂಗಭೂಮಿ ದಿಗ್ಗಜರಾದ ಹಂದಿಗನೂರು ಸಿದ್ಧರಾಮಪ್ಪ, ಗರೂಡ ಸದಾಶಿವರಾಯರು, ಕಂದಗಲ್ಲ ಹಣುಮಂತರಾಯರು, ನಲವಡಿ ಶ್ರೀಕಂಠ ಶಾಸ್ತ್ರಿಗಳು ಎಲಿವಾಳ ಸಿದ್ಧಯ್ಯನವರು ಮತ್ತಿತರರು ಶ್ಲಾಘಿಸಿದ್ದಾರೆ. ಯುವ ಪುಟ್ಟಯ್ಯ ಹಿಂದೂಸ್ಥಾನಿ ಶೈಲಿಯಲ್ಲಿ ಚೀಸ್‌ಗಳನ್ನು ಸಂಯೋಜಿಸಿದರು. ಇದು ಇವರಿಗೆ ಕನ್ನಡದ ಮಿಲ್ಟನ್ ಎಂಬ ಕೀರ್ತಿಯನ್ನು ತಂದುಕೊಟ್ಟಿತು.

'ಪುಟ್ಟರಾಜ' ಎನ್ನುವುದು ಭಕ್ತರ ಪಾಲಿನ ನಿತ್ಯಮಂತ್ರ ವಾಗಿದೆ. ತಮ್ಮ ಸಮಸ್ತ ಬದುಕನ್ನು ದೇವರ ಮುಂದಿನ ನಂದಾದೀಪ ದಂತೆಯೂ ಪಥಿಕರಿಗೆ ಮಾರ್ಗದರ್ಶನ ತೋರುವ ಮಹಾದೀಪವಾಗಿಯೂ ಬೆಳಗಿದ ಈ ಪುಣ್ಯ ಪುರುಷರ ಆದರ್ಶಗಳನ್ನು ಮುಂದುವರೆಸಿಕೊಂಡು ಹೋಗುವ ಮಹತ್ತರ ಹೊಣೆಗಾರಿಕೆ ಅವರ ಶಿಷ್ಯವರ್ಗದ ಮೇಲಿದೆ.

ಅಂಧರಿಗೆ ಅರಿವಿನ ಅನುಭವ ಮಂಟಪ, ಅನಾಥರಿಗೆ ಜ್ಞಾನದ ಅನುಭವ ಮಂಟಪವನ್ನು ಕಲ್ಪಿಸಿಕೊಟ್ಟ ಪಂ. ಪುಟ್ಟರಾಜ ಗವಾಯಿಗಳವರು ಉತ್ತರ ಭಾರತದಲ್ಲಿ ಜನಿಸಿದ್ದರೆ ಅವರ ಪಾಂಡಿತ್ಯ ಮೆಚ್ಚಿ ಕೇಂದ್ರ ಸರ್ಕಾರ ಭಾರತರತ್ನ ಪ್ರಶಸ್ತಿಯನ್ನು ಎಂದೋ ನೀಡಿ ಗೌರವಿಸುತ್ತಿತ್ತೇನೋ ?

ತಮ್ಮ ೯೭ನೇ ವಯಸ್ಸಿನವರೆಗೆ ಈ ನಾಡು, ನುಡಿ, ಕಲೆ, ಸಂಸ್ಕೃತಿ, ಅಸಹಾಯಕ ಮತ್ತು ಅಶಕ್ತರಿಗೆ ಆಸರೆಯಾಗಿ ನಿಂತ ಪೂಜ್ಯರ ಸಾಧನೆಯ ಸಿದ್ಧಿಯ ಪರಿ ವಿಸ್ಮಯಕಾರಿ ಯಾಗಿದೆ.

ಬೆಳವಲ ನಾಡಿನ ಮಹಾಬೆಳಗು, ದಣಿವಿಲ್ಲದ ಮಹಾಪ್ರವಚನಕಾರ, ಮಹಾನ್ ವಾಗ್ಮಿ, ಸಹಸ್ರಾರು ಅಂಧಮಕ್ಕಳ ಆಶ್ರಯದಾತ ೧೪ ಶಾಲೆ-ಕಾಲೇಜುಗಳನ್ನು ತೆರೆದ ಶಿಕ್ಷಣಪ್ರೇಮಿ ಅವಿರತ ಮಹಾನ್ ತಪಸ್ವಿಯಾಗಿರುವ ಪುಟ್ಟರಾಜರ ದೈವನಿಷ್ಠೆ ಅಚಲವಾಗಿತ್ತು. ಸಂಗೀತ ಸಾಹಿತ್ಯ ಕಲಿಯಿರಿ, ಇತರರಿಗೂ ಕಲಿಸಿರಿ ಎಂದು ಪ್ರೇರೇಪಿಸುತ್ತಿದ್ದರು. ಆದರೆ ಅವರ ನಡೆಯ ಎಲ್ಲ ಹೆಜ್ಜೆಗಳು ಮಾತ್ರ ಆರಾಧಕರಿಗೆ ಪವಾಡದಂತೆ ಗೋಚರಿಸುತ್ತಿದ್ದವು. ಈ ನಾಡಿನಲ್ಲಿ ಎಲ್ಲಿಯೇ ಅಂಧಮಕ್ಕಳು ಜನಿಸಿದರೂ ಆ ಮಕ್ಕಳ ಪಾಲಕರಿಗೆ ತಟ್ಟನೆ ನೆನಪಿಗೆ ಬರುವದು ಈ ಪುಣ್ಯಾಶ್ರಮ ! ಇಂದು ಪುಣ್ಯಾಶ್ರಮ ಪ್ರವೇಶಿಸಿದರೆ ಸಾಕು ಗಂಧರ್ವ ಕಲೆಗಳ ನಿನಾದ ಸದಾ ಅನುರಣಿಸು ತ್ತಿರುತ್ತದೆ; ಅಷ್ಟರಮಟ್ಟಿಗೆ ಇಲ್ಲಿ ಸಂಗೀತ ಸರಸ್ವತಿ ನಿರಂತರ ರಾಗಾಲಾಪಗೈಯುತ್ತಿರುತ್ತಾಳೆ.

'ಗ್ರಾಮಗಳ ಅಭಿವೃದ್ಧಿಯಾಗದೆ ಭಾರತದ ಉದ್ಧಾರ ಅಸಾಧ್ಯ' ಎಂದು ಒತ್ತಿ ಹೇಳುತ್ತಿದ್ದ ಶ್ರೀಗಳು ತಮ್ಮ ಪ್ರವಚನಗಳ ಮೂಲಕ ಈ ಕುಗ್ರಾಮಗಳನ್ನು ಸುಶಿಕ್ಷಿತರ ಗ್ರಾಮಗಳನ್ನಾಗಿ ಪರಿವರ್ತಿಸಿದ್ದಾರೆ. ಮೂಢನಂಬಿಕೆ, ಕಂದಾಚಾರಗಳನ್ನು ನಿವಾರಿಸಿದ್ದಾರೆ. ಶ್ರೀಗಳವರ ಪ್ರವಚನವು ಸಾಮಾಜಿಕ ಶಿಕ್ಷಣದ ಆಂದೋಲನವೇ ಆಗಿತ್ತು !

ಮನೆ ಹಾಗೂ ಸಮಾಜದಿಂದ ನಿರ್ಲಕ್ಷ್ಯಕ್ಕೊಳಗಾದ ಅಂಧ ಮಕ್ಕಳಿಗೆ ಆಶ್ರಮದಲ್ಲಿ ಪೋಷಕರಾಗಿ ಅವರಿಗೆ ಅಗತ್ಯವಿರುವ ಸಂಗೀತ ಶಿಕ್ಷಣವನ್ನು ಕೊಟ್ಟು ಬಾಳಿಗೆ ಬೆಳಕಾದ ಪೂಜ್ಯರ ಪುಣ್ಯಾಶ್ರಮ ಒಂದು ಭಾವನಾತ್ಮಕ ಕೇಂದ್ರವೆನಿಸಿದೆ. ಅಲ್ಲದೆ ಡಾ. ಪುಟ್ಟರಾಜರ ಪ್ರಭಾವದಿಂದಾಗಿ ಬೆಂಗಳೂರು ಮೈಸೂರು ಬೆಳಗಾವಿ ಗುಲ್ಬರ್ಗ ಅಷ್ಟೇ ಅಲ್ಲ ಮಹಾರಾಷ್ಟ್ರ, ಆಂಧ್ರಪ್ರದೇಶದ ಅಭಿಮಾನಿಗಳಿಗೆ ಅದೊಂದು ಸುಕ್ಷೇತ್ರವಾಗಿದೆ. ಗದಗಕ್ಕೆ ಯಾರೇ ಬರಲಿ ತೋಂಟದಾರ್ಯ ಮಠ, ವೀರನಾರಾಯಣ ಗುಡಿ, ಲಕ್ಕುಂಡಿಯ ನೂರೊಂದು ದೇಗುಲಗಳಂತೆ ಈ ವೀರೇಶ್ವರ ಪುಣ್ಯಾಶ್ರಮಕ್ಕೆ ಭೇಟಿ ಕೊಡದೆ ಪ್ರವಾಸಿಗರು ತೆರಳುವುದಿಲ್ಲ. ಅದೊಂದು ಸುಕ್ಷೇತ್ರ, ಪಾವನಭೂಮಿ, ಪ್ರವಾಸಿ ತಾಣವಾಗಿ ಆಯಸ್ಕಾಂತದಂತೆ ಸರ್ವರನ್ನೂ ಆಕರ್ಷಿಸುವ ಪುಣ್ಯಧಾಮವಾಗಿದೆ. ಗದಗಿನ ವೀರೇಶ್ವರ ಪುಣ್ಯಾಶ್ರಮ ಸರ್ವ ಜನಾಂಗದ ಶಾಂತಿಯ ತೋಟ, ಸರ್ವರಲ್ಲಿ ಭಕ್ತಿಯನ್ನು ಸ್ಮರಿಸುವ ಪುಟ್ಟರಾಜರ ದರ್ಶನವೇ ಒಂದು ಸೌಭಾಗ್ಯ ಎಂಬುದನ್ನು ಸಾಬೀತುಪಡಿಸಿದೆ.

ಗಾನಗಾರುಡಿಗರ ಆಶ್ರಯ ಬೇಡಿ ಬಂದ ಪ್ರತಿಯೊಬ್ಬ ಅಂಧ ಅನಾಥರಲ್ಲೂ ಪುಟ್ಟರಾಜರು 'ಜನಸೇವೆಯೇ ಜನಾರ್ಧನ ಸೇವೆ' ಎನ್ನುವಂತೆ ಸರ್ವರಲ್ಲಿಯೂ ಶಿವನ ಪ್ರತಿರೂಪ ಕಾಣಲು ಕಾತುರರಾಗಿರು ತ್ತಿದ್ದರು.

ಪಂ. ಪಂಚಾಕ್ಷರರ ಪ್ರೀತಿಪಾತ್ರ ಶಿಷ್ಯ ಪುಟ್ಟರಾಜರು ತಮ್ಮ ಅಂತಿಮ ದಿನಗಳಲ್ಲಿ ಈ ಅಂಧ ಶಿಷ್ಯನಿಗೇ ಅವರು

ಆಶ್ರಮದ ಸಂಪೂರ್ಣ ಜವಾಬ್ದಾರಿ ವಹಿಸಿರುವಾಗ ಈ ಭಾರವನ್ನು ತೆಗೆದುಕೊಳ್ಳಲು ಪುಟ್ಟರಾಜರು ಹಿಂಜರಿದರು. ಅಂಜಬೇಡ, ಇದುವರೆಗಿನ ಕಷ್ಟಗಳನ್ನೆಲ್ಲ ನಾನು ಅನುಭವಿಸಿದ್ದೇನೆ. ನಿನಗೆ ಉಳಿದಿರುವುದು ಸುಖ ಮಾತ್ರ. ಗುರುಕೃಪೆಯಿಂದ ಎಲ್ಲವೂ ಸರಳವಾಗುತ್ತದೆ. ಗುರುವಿನ ಅಭಯನುಡಿಗೆ ಶಿರಬಾಗಿದ ಶಿಷ್ಯ ಮತ್ತೆ ವಿಚಲಿತನಾಗಲಿಲ್ಲ. ಕಣ್ಣಿದ್ದವರೂ ಮಾಡಲಾರದಂಥ ಸಾಧನೆಗಳ ಛಾಪೊತ್ತಿದ್ದಾರೆ.

ಸಂಗೀತದ ವಿವಿಧ ವಾದ್ಯಗಳನ್ನು ನುಡಿಸುವಲ್ಲಿ ಪುಟ್ಟರಾಜರು ಅತ್ಯಂತ ಸಿದ್ಧಹಸ್ತರು. ಅವರು ಹಾರ್ಮೋನಿಯಂ ನುಡಿಸುವಾಗ ಬೆರಳಿನ ಗತ್ತುಗಾರಿಕೆಯನ್ನು ಗುರುತಿಸಲಾಗದಷ್ಟು ತೀಕ್ಷ್ಣ ಮತ್ತು ವೇಗವಿರುತ್ತಿತ್ತು. ಇಂಥ ಅಪಾರ ಸಾಧನೆಯನ್ನು ಗುರುತಿಸಿ ಪೂಜ್ಯರನ್ನು ಗೌರವಿಸಿ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳು ಪ್ರದಾನವಾಗಿವೆ. ಸಾವಿರಾರು ಸಂಘಟನೆಗಳು ಬಿರುದು ಸನ್ಮಾನಗಳನ್ನು ಅರ್ಪಿಸಿ ಕೃತಾರ್ಥತೆ ಪಡೆದಿವೆ.

ಈ ಪುಣ್ಯಾಶ್ರಮದಲ್ಲಿ ಸಂಗೀತವನ್ನು ಅಕ್ಯಾಡೆಮಿಕ್ ಆಗಿ ಕಲಿಸುತ್ತಿರುವದರಿಂದ ಸಂಗೀತ ವಿಶ್ವವಿದ್ಯಾಲಯದ ಮಾದರಿಯಲ್ಲಿ ಅದು ವಿಕಾಸಗೊಂಡಿದೆ.

ಕನ್ನಡ ಸಾಹಿತ್ಯಕ್ಕೆ ಪುಟ್ಟರಾಜರ ಸೇವೆ ಅನುಪಮವಾದದ್ದು. ೨೪ ಪುರಾಣ, ೨೨ ನಾಟಕ, ೩ ಗದ್ಯಕೃತಿ, ೭ ಪದ್ಯಕೃತಿ, ೪ ಸಂಗೀತ ಕೃತಿ, ಹಿಂದೂಸ್ಥಾನಿ ಸಂಗೀತದ ನವನವೀನ ಬೀಜಗಳು ಅಲ್ಲದೆ ಭಗವದ್ಗೀತೆಯನ್ನು ಬ್ರೈಲ್ ಲಿಪಿಯಲ್ಲಿ ರಚಿಸಿದ್ದಾರೆ. ಹಿಂದಿಯಲ್ಲಿ ೫ ಕೃತಿ ಹಾಗೂ ಸಂಸ್ಕೃತದಲ್ಲಿ ೮ ಕೃತಿಗಳನ್ನು ರಚಿಸಿ ಸಾಧಕರಾಗಿರುವ ಪೂಜ್ಯರ ಕೊಡುಗೆಗಳು ಅಪೂರ್ವವಾದವುಗಳಾಗಿವೆ.

'ಜ್ಞಾನದೇಗುಲ' ಅಭಿನಂದನ ಗ್ರಂಥವನ್ನರ್ಪಿಸಿ ಕನ್ನಡ ಜನತೆ ಧನ್ಯತೆ ಅನುಭವಿಸಿದ್ದಾರಲ್ಲದೆ ಪೂಜ್ಯರ ಜೀವನ ಸಾಹಿತ್ಯ ಕುರಿತು ಪಿಎಚ್‌ಡಿ ಗ್ರಂಥ ಅರ್ಪಿಸಿರುವದು ಶ್ರೀಗಳವರು ಬದುಕು ಸಾಧನೆಗೆ ಪ್ರತಿಬಿಂಬದಂತಿರುತ್ತವೆ.

ಭಕ್ತರು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ಸಂಕಲ್ಪದಂತೆ ಪೂಜ್ಯರಿಗೆ ನಡೆಸಿದ ತುಲಾಭಾರಗಳು ಇತಿಹಾಸದ ಪುಟ ಸೇರಿವೆ. ದಾವಣಗೇರಿಯಲ್ಲಿ ಒಂದೇ ವೇದಿಕೆಯಲ್ಲಿ ೧೫೧ ತುಲಾಭಾರಗಳು ನಡೆದಿರುವದು ಐತಿಹಾಸಿಕ ವಿಶ್ವದಾಖಲೆಯಾಗಿದ್ದು ಒಟ್ಟು ೨೨೭೫ ತುಲಾಭಾರಗಳು ಇಲ್ಲಿವರೆಗೆ ಆಗಿರುವುದು ಈ ಪ್ರಮಾಣದ ತುಲಾಭಾರಗಳು ಯಾವ ರಾಜ ಮಹಾರಾಜರಿಗೂ, ಮಠಾಧೀಶರಿಗೂ ನಡೆದಿಲ್ಲ.

ಡಾ. ಪುಟ್ಟರಾಜರು ನಮ್ಮ ನಡುವಿನ ಸಾಕ್ಷಿಪ್ರಜ್ಞೆಯಾಗಿದ್ದಾರೆ. ದೈಹಿಕ ನ್ಯೂನ್ಯತೆಯ ನಡುವೆಯೂ ಸಮಾಜ ಸೇವೆಯಲ್ಲಿ ಆದರ್ಶಪ್ರಾಯರಾಗಿ ಹೇಗೆ ಬದುಕಲು ಸಾಧ್ಯ ಎಂಬುದಕ್ಕೆ ಮಾದರಿಯಾಗಿದ್ದಾರೆ. 'ಅಂಧತ್ವ ಅಂಗವಿಕಲತೆಯೇ ಅಲ್ಲ' ಎಂಬುದನ್ನು ಗುರು ಗಾನಯೋಗಿ ಪಂಚಾಕ್ಷರ ಗವಾಯಿಗಳಂತೆ ತಾವೂ ಸಾಬೀತು ಮಾಡಿದವರು. ತನ್ಮೂಲಕ ಗುರು ಕಂಡ ಕನಸಿನ ಹಂದರಕ್ಕೆ ನನಸಿನ ಹೂಬಳ್ಳಿ ಹಬ್ಬಿಸಿದವರು. ಅನಾರೋಗ್ಯದಿಂದ ಅಲ್ಪಾಯುಷಿಯಾದ ಗುರು ಪಂಚಾಕ್ಷರ ಗವಾಯಿಗಳ ಸಮಾಜಮುಖಿ ಯೋಜನೆಗಳ ಸಾಫಲ್ಯಕ್ಕೆ ತಮ್ಮ ೯೭ ವರ್ಷ ದೀರ್ಘಾಯುಷ್ಯ ಮುಡಿಪಿಟ್ಟವರು ಡಾ. ಪುಟ್ಟರಾಜ ಗವಾಯಿಗಳು.

ಯಾವುದೇ ಒಂದು ಸರ್ಕಾರಿ ಸಂಸ್ಥೆಯೂ, ವಿಶ್ವವಿದ್ಯಾಲಯವೂ ಮಾಡಲಸಾಧ್ಯವಾದ ವೀರೇಶ್ವರ ಪುಣ್ಯಾಶ್ರಮವನ್ನು ಈ ಸ್ಥಿತಿಗೆ ತರುವಲ್ಲಿ ಪುಟ್ಟರಾಜರು ಪಟ್ಟ ಶ್ರಮ ವರ್ಣಿಸಲಸದಳವಾದುದು. ಅದಕ್ಕಾಗಿ ಊರೂರು ಅಲೆದರು. ಸಂಗೀತ, ನಾಟಕ ಕಂಪನಿ ಕಟ್ಟಿ ಅಂಧಮಕ್ಕಳ ಪಾಲಕರಾದರು. ಅವರ ನಿಸ್ವಾರ್ಥ ಸೇವೆಗಾಗಿ ಪದ್ಮಭೂಷಣವೂ ಸೇರಿದಂತೆ ಹಲವಾರು ಪ್ರಶಸ್ತಿಗಳು ಹುಡುಕಿಕೊಂಡು ಬಂದವು.

'ಎನಗಿಂತ ಕಿರಿಯರಿಲ್ಲ' ಎಂಬ ಬಸವತತ್ವ ಪರಿಪಾಲಕರಾಗಿ "ಸಣ್ಣವರಲ್ಲಿ ಸಣ್ಣವ ನಾನು, ಕಣ್ಣು ನನಗೆ ಇಲ್ಲವಲ್ಲ" ಎನ್ನುತ್ತಾ ಅಂಧತ್ವಕ್ಕೆ ಸವಾಲೆಸಗಿ ಗೆದ್ದ ಮಹಂತ ಪುಟ್ಟಜ್ಜನವರ ಹಾರ್ಮೋನಿಯಂ ಸಾರಂಗಿ ಪಿಟೀಲು ವಾದನ ಕೇಳಿದವರ ಕಣ್ಣಲ್ಲಿ ಫಳಫಳನೆ ಆನಂದಬಾಷ್ಪ ಆದರೆ ಈಗ ಕಡು ದುಃಖದ ದುಃಖಾಶ್ರುಗಳುದುರುತ್ತವೆ.

**"ಮೊರಿ ಬಿನತಿ ಅರಜ ಸುನತ**
**ಭಾಗತ ಆವೊ ಜಯೊ**
**ಗುರುದೇವ ಮಹಾದೇವ**
**ಪಂಚಾಕ್ಷರ ಕರೆಜಿಯಾ"**

ಎಂದು ಹಾಡಿದ ಗಾಯನಾಚಾರ್ಯ ಅಸ್ತಂಗತರಾಗಿದ್ದರೂ ಕೂಡ ಅವರ ಅಸಾಧಾರಣ ಸಾಧನೆಗಳು ಈ ಪುಟ್ಟಜ್ಜನದು ಬೆಟ್ಟದಷ್ಟು ಮೇರು ಸದೃಶ ಪರಿಪೂರ್ಣ ವ್ಯಕ್ತಿತ್ವ

ಸಂಗೀತ ಸೇವೆ, ಸಾಹಿತ್ಯ ರಚನೆ, ಪುರಾಣ ಪ್ರವಚನ, ವಿದ್ಯಾರ್ಥಿಗಳಿಗೆ ಕಲಿಸುವಿಕೆ, ವರ್ಷದಲ್ಲಿ ಒಂದು ತಿಂಗಳು ಆಶ್ರಮದ ಮಕ್ಕಳ ಉದರ ಪೋಷಣೆಗಾಗಿ ಸಂಚಾರ ಮತ್ತು ಅಗತ್ಯದಷ್ಟು ಪೂಜೆ ಪುನಸ್ಕಾರ, ಜೀವನದುದ್ದಕ್ಕೂ ಮಿತಾಹಾರ, ದೀರ್ಘಾಯುಷಿ. ತಮ್ಮ ಸುದೀರ್ಘಾಯುಷ್ಯವನ್ನೆಲ್ಲ ಧಾರಾಳವಾಗಿ ಪುಣ್ಯಾಶ್ರಮದ ಮಕ್ಕಳ ಅನ್ನ-ಜ್ಞಾನ ದಾಸೋಹಕ್ಕಾಗಿಯೇ ಮೀಸಲಿಟ್ಟವರು ನಮ್ಮ ಪುಟ್ಟಜ್ಜ. ಪೂಜ್ಯರು ವರ್ಷಕ್ಕೊಮ್ಮೆ ಜೋಳಿಗೆ ಹಾಕಿ ಭಕ್ತರ ಊರೂರು

ಸಂಚರಿಸಿ ಬಂದರೆ ಸಾಕು. ಧಾನ್ಯದ ಮಹಾಪೂರವೆ ಗದಗಿನ ಪುಣ್ಯಾಶ್ರಮಕ್ಕೆ ಹರಿದು ಪ್ರವಾಹ ರೂಪದಲ್ಲಿ ಬರುತ್ತಿತ್ತು. ಪುಣ್ಯಾಶ್ರಮದ ಅಂಧ, ಅನಾಥ, ಬಡಮಕ್ಕಳ ಹೊಟ್ಟೆ-ನೆತ್ತಿಯೆಲ್ಲ ವರ್ಷಪೂರ್ತಿ ತಣ್ಣಗೆ ! ಇವರ ಜೋಳಿಗೆಯ ಪ್ರತಿ ಧಾನ್ಯ, ಪ್ರತಿ ಪೈಸೆಯೂ ಬಡಮಕ್ಕಳ ಉನ್ನತಿಗೇ ಮೀಸಲು. ಪುಣ್ಯಾಶ್ರಮದ ಸುಮಾರು ಏಳು ದಶಕಗಳ ಇತಿಹಾಸ ದಲ್ಲೊಂದು ದುರ್ಬಳಕೆಯ ಅಪಸ್ವರ ಕೇಳಿ ಬಂದಿಲ್ಲ. ಇಂಥ ಇತಿಹಾಸ ಇನ್ನೊಂದಕ್ಕಿರಲಿಕ್ಕಿಲ್ಲ. ಇಲ್ಲಿ ಸಂಗೀತ ಕಲಿತ ಸಹಸ್ರಾರು ಕಲಾವಿದರು ಇಂದು ತಮ್ಮ ಬಾಳ ಬುತ್ತಿಯನ್ನು ಕಟ್ಟಿಕೊಂಡಿದ್ದಾರೆ. ಇವರಿಗೆಲ್ಲ ಅಂಧತ್ವ, ಅಂಗವೈಕಲ್ಯವಾಗಿ ಕಾಡಿದ್ದೇ ಅನುಭವವಿಲ್ಲ.

ನಮ್ಮ ಪುಟ್ಟಜ್ಜ ಕೇವಲ ಗಾಯಕರಲ್ಲ, ಸಾಹಿತ್ಯ, ಸಂಗೀತ, ಶಿವಪೂಜೆ, ಶಿವಾನುಭವ, ಶರಣ ಸಾಹಿತ್ಯಗಳಲ್ಲಿ ದುಡಿದ ಸೇವಾ ಕಿಂಕರರು. ಅಧಿಕಾರ ವಾಣಿಯಿಂದ ಮಾತಾಡಬಲ್ಲ ಮಾತನಾಡುವ ಮರೆಯಲಾಗದ ಭೂಲೋಕದ ಭಗವಂತ ತನ್ನ ಜ್ಞಾನರಸಗಂಗೆಯನ್ನೆಲ್ಲವನ್ನೂ ಧಾರಾಪಾತ್ರೆಯಂತೆ ಧಾರಾಳವಾಗಿ ಧಾರೆಯೆರೆಯಬಲ್ಲ ಮೇರು ಸದೃಶ ವ್ಯಕ್ತಿತ್ವವುಳ್ಳಾತ ಸಂಗೀತ ಕಛೇರಿಯಲ್ಲಿ ಏಕಕಾಲಕ್ಕೆ ೩-೪ ವಾದ್ಯಗಳ ಮೇಲೆ ಮಿಂಚಿನಂತೆ ಕೈಸಂಚರಿಸಿ ಪ್ರೇಕ್ಷಕರು ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತೆ ಮೂಕವಿಸ್ಮಿತ ರನ್ನಾಗಿಸುವ ಗಾನಲೋಕದ ಧ್ರುವತಾರೆ, ಪೂಜ್ಯರ ಸಂಗೀತ ಪ್ರತಿಭೆಯನ್ನು ಉಸ್ತಾದ್ ಬಿಸ್ಮಿಲ್ಲಾಖಾನ್, ವಿಠ್ಠಲರಾವ್ ಕೋರೆಗಾಂವಕರ್, ವಿದ್ವಾನ್ ದೇವೇಂದ್ರಪ್ಪ, ಡಾ. ರಾಜಕುಮಾರ್, ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದ್, ಜಯಚಾಮರಾಜ ಒಡೆಯರ ಸೇರಿದಂತೆ ಅನಂತ ದಿಗ್ಗಜರು ಮುಕ್ತ ಕಂಠದಿಂದ ಪ್ರಶಂಸಿಸಿ ಧನ್ಯರಾಗಿದ್ದಾರೆ. ಸೋದರಮಾವ ಚಂದ್ರಶೇಖರಯ್ಯ ಹಾರ್ಮೋನಿಯಂ ನುಡಿಸುತ್ತಿದ್ದುದನ್ನು ಕದ್ದು ಕೇಳುತ್ತ ಸಂಗೀತದ ಗುಂಗು ತಲೆಗೇರಿಸಿಕೊಂಡ ಅಳಿಯ ಪುಟ್ಟ ಪುಟ್ಟಯ್ಯ ಮುಂದೊಂದು ದಿನ ಹಿಂದೂಸ್ಥಾನದ ಸಂಗೀತ ಪಂಡಿತರ ಸಾಲಿನ ಬೆಳಗುವ ದಾರಿದೀಪವಾದ, ಡಾಕ್ಟರ್-ಪಂಡಿತ-ಪದ್ಮಭೂಷಣ, ಕಾಳಿದಾಸ ಸಂಮ್ಮಾನ್, ಬಸವಶ್ರೀ ಪ್ರತಿಷ್ಠಿತ ಅನಂತ ಪ್ರಶಸ್ತಿಗೆ ಭೂಷಣಪ್ರಾಯರೆನಿಸಿ ದರು.

ಗದಗಿನ ವೀರೇಶ್ವರ ಪುಣ್ಯಾಶ್ರಮದಲ್ಲಿ ಎಲ್ಲೆಲ್ಲೂ ಸಂಗೀತವೇ, ಎಲ್ಲಿ ನಡೆದರಲ್ಲಿ ಗಾನಮಾಧುರ್ಯ ಅಥವಾ ತಬಲಾ, ಪಿಟೀಲು, ಹಾರ್ಮೋನಿಯಂ, ವಾದಗಳ ಸ್ವರಲಾಪ. ಅಲ್ಲಲ್ಲಿ ಸಂಗೀತಪಾಠ ಒಪ್ಪಿಸುವ ಶಿಷ್ಯವೃಂದ, ಬದುಕನ್ನು ಅತ್ಯಂತ ಸಂತೋಷವಾಗಿ ಸ್ವೀಕರಿಸಿದ್ದ ಪುಟ್ಟಜ್ಜ ಪುಣ್ಯಾಶ್ರಮ ವನ್ನು ಅಸಂಖ್ಯ ಅನಾಥ ಮಕ್ಕಳ ಸಂಗೀತ ಆಶ್ರಯಧಾಮ ವಾಗಿಸಿ ಕರ್ನಾಟಕದ ಶಾಂತಿನಿಕೇತನದಂತೆ ಕಂಗೊಳಿಸುವಂತೆ ಶ್ರಮಿಸಿದ್ದರು.

ಸರ್ಕಾರದ ಮುಂದೆ ಯಾವುದಕ್ಕೂ ಅಪ್ಪಿತಪ್ಪಿಯೂ ಕೈಚಾಚದೆ ಸಹಸ್ರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನ ಅಪರೂಪದ ಸಂಸ್ಥೆಯನ್ನು ೬೭ ವರ್ಷ ಪರ್ಯಂತ ಮುನ್ನಡೆಸು ವಂತಹ ಪುಣ್ಯ ಕಾರ್ಯ ಸುಲಭ ಸಾಧ್ಯವಲ್ಲ. ಅದೂ ಊಟ ವಸತಿ ಸೌಲಭ್ಯವನ್ನು ಉಚಿತವಾಗಿ ನಿಶ್ಚಿಂತರಾಗಿ, ಜಾತಿಮತ ಭೇದವಿಲ್ಲದೆ ಭಾವೈಕ್ಯತಾ ಭಾವದಿಂದ ಸಂಸ್ಥೆಯೊಂದನ್ನು ನಿರ್ವಹಿಸುವದು ತುಂಬಾ ಕಷ್ಟ. ಇಷ್ಟೆಲ್ಲಾ ಸಾಧನೆಗೆ ಹಾದಿ ತೋರಿರುವವರು ಪಂ. ಪುಟ್ಟರಾಜರು.

ಒಬ್ಬ ವ್ಯಕ್ತಿ ಇಷ್ಟೆಲ್ಲ ಸಾಧನೆಗೈಯುವುದು ಹೇಗೆ ಸಾಧ್ಯವಾಯಿತು ? ಬಾಲ್ಯದಲ್ಲಿಯೇ ಸಂಗೀತಾಸಕ್ತರಾಗಿದ್ದ ಗವಾಯಿಗಳಿಗೆ ಸೋದರ ಮಾವನೇ ಮೊದಲ ಗುರು. ನಂತರ ಪಂ. ಪಂಚಾಕ್ಷರಿ ಗವಾಯಿಗಳೇ ಗುರು ಆಶ್ರಯದಾತ ಎಲ್ಲವೂ. ಅನೇಕ ವಿದ್ವಾಂಸರಿಂದ ಕಲಿಯುವ ಸುವರ್ಣಾವಕಾಶ. ಪಂಚಾಕ್ಷರಿ ಗವಾಯಿಗಳವರಿಗೆ ತಕ್ಕ ಉತ್ತರಾಧಿಕಾರಿ ಪುಣ್ಯಾಶ್ರಮದಲ್ಲಿ ಸಂಗೀತ ಮಹಾವಿದ್ಯಾಲಯ ಸ್ಥಾಪಿಸಿ ಕಣ್ಣಿರುವ ಸಾವಿರಾರು ಜನರಿಗೆ ವಿದ್ಯಾದಾನ ಮಾಡಿ ಗುರುಕಾಣಿಕೆ ಸಲ್ಲಿಸಿದ ಕೀರ್ತಿ ಅದರಲ್ಲಿಯೂ ದೃಷ್ಟಿ ವಿಕಲಚೇತನ ಹಾಗೂ ಬಡ ಮಕ್ಕಳಿಗೆ ಆದ್ಯತೆ ಇತ್ತು.

ಪುಟ್ಟರಾಜ ಗವಾಯಿಗಳ ಜೀವನರೂಪ, ಸಂಗೀತ ಆರಾಧನೆ, ವಿದ್ಯಾದಾನ ಮನಗಂಡು ಗದಗಿನ ಜನತೆ ವೀರೇಶ್ವರ ಪುಣ್ಯಾಶ್ರಮವನ್ನು ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಸಲು ಸಹಾಯ ಮಾಡಿದರೆಂದು ಗವಾಯಿಗಳು ವಿನಮ್ರದಿಂದ ಪ್ರಶಂಸಿಸುತ್ತಿದ್ದರು. ಅಗಾಧ ಶ್ರದ್ಧೆ, ಭಕ್ತಿ, ಅರ್ಪಣಾಭಾವ, ಬಡಮಕ್ಕಳ ಉದ್ಧಾರಕ್ಕೆ ಜೀವನ ಮುಡಿಪಾಗಿಟ್ಟ ಗವಾಯಿಗಳು ಸಂತರೆಂಬುದು ಅನ್ವರ್ಥಕ ವಾಗಿರುವದು. ೯೭ ವರ್ಷದ ಗವಾಯಿಗಳು ಅಸ್ವಸ್ಥ ಗೊಂಡಾಗ ಶತಾಯುಷಿಗಳಾಗಲಿ ಶತಮಾನೋತ್ಸವವನ್ನು ಸುವರ್ಣ ತುಲಾಭಾರದೊಂದಿಗೆ ವಿಜೃಂಭಣೆಯಿಂದ ಅದ್ದೂರಿಯಾಗಿ ಆಚರಿಸಿ ಪುಣ್ಯಾಶ್ರಮದ ಶ್ರೇಯೋಭಿವೃದ್ಧಿ ಗಾಗಿ ಖಾಯಂ ಠೇವಣಿ ಸ್ಥಾಪಿಸಬೇಕೆಂದು ಸರ್ವಭಕ್ತರೂ ವೈವಿಧ್ಯಮಯವಾಗಿ ಪ್ರಾರ್ಥಿಸಿದರು. ಉರುಳುಸೇವೆ ಅರ್ಪಿಸಿದರು.

"ನದಿಗಳು ನೂರಾರಿದ್ದರೂ ಪುಣ್ಯ ನದಿಗಳು ಕೆಲವು ಮಾತ್ರ. ಶಿಲೆಗಳು ಅಪಾರವಾಗಿದ್ದರೂ ಪೂಜಿಸಿಕೊಳ್ಳುವ ಶಿಲ್ಪಗಳು ಹಲವು ಮಾತ್ರ. ಪ್ರಪಂಚದಲ್ಲಿ ಕೋಟ್ಯಾನುಕೋಟಿ

ಮನುಜರಿದ್ದರೂ ದೇವರೆನಿಸಿಕೊಂಡವರು ಬೆರಳೆಣಿಕೆಯಷ್ಟು ಮಾತ್ರ. ಅಂತವರಲ್ಲಿ ನಮ್ಮ ಪುಟ್ಟರಾಜ ಕವಿ ಪುಂಗವರು ಪ್ರಮುಖರು." ವರನಟ ದಿ. ಡಾ. ರಾಜ್‌ಕುಮಾರರ ಈ ಹೇಳಿಕೆ ಔಚಿತ್ಯಪೂರ್ಣವಾದುದು.

ಪುಟ್ಟಯ್ಯ ಬಂದ್ರ ಊರಿಗೆ ಬಡತನ ಇರಲಿಲ್ಲ. ಪುಟ್ಟಯ್ಯಜ್ಜ,ಅಂದರೆ ಪರಮಾತ್ಮಾ...ಆತನಿಗೆ ಎರಡು ಕಣ್ಣಲ್ಲ ಮೂರು ಕಣ್ಣುಗಳಿವೆ ಎಂಬ ನಂಬಿಕೆ. ಗವಾಯಿಗಳವರ ಹುಟ್ಟೂರು ಹಾವೇರಿ ಜಿಲ್ಲೆಯ ದೇವಗಿರಿ ಗ್ರಾಮಸ್ಥರ ನಂಬಿಕೆ. ಆತ ಊರಿಗೆ ಬಂದಾಗಲೆಲ್ಲ ಊರ ಹೊರವಲಯದಲ್ಲಿರುವ ಪುಟ್ಟರಾಜರ ಮಠದಿಂದ ಆರತಿ, ಭಜನೆ, ಡೊಳ್ಳಿನ ಮಜಲಿನೊಂದಿಗೆ ಮೆರವಣಿಗೆ ಮೂಲಕ ಊರಿಗೆ ಕರೆತರುತ್ತಿದ್ದೆವು. ಇದು ಈಗಷ್ಟೇ ಅಲ್ಲ, ನಮ್ಮ ಹಿರಿಯರಿಂದಲೂ ನಡೆದುಕೊಂಡು ಬಂದಿದೆ. ಒಮ್ಮೆ ಊರಿಗೆ ಬಂದರೆ ತಿಂಗಳುಗಟ್ಟಲೇ ಇರುತ್ತಿದ್ದರು. ಈ ಸಂದರ್ಭದಲ್ಲಿ ಕೀರ್ತನೆ, ಸಂಗೀತ ಕಾರ್ಯಕ್ರಮಗಳು, ಪುರಾಣ, ನಾಟಕಗಳನ್ನು ಸಹ ನಡೆಸಿಕೊಟ್ಟಿದ್ದಾರೆ ಎಂಬುದನ್ನು ಗ್ರಾಮಸ್ಥರು ಸ್ಮರಿಸಿ ಕೊಳ್ಳುತ್ತಾರೆ.

ಅವಾ ಊರಿಗೆ ನಕ್ಕೋತ ಬಂದ್ರೆ ಆ ವರ್ಷ ಊರಿಗೆ ಯಾವುದೇ ಬಡತನ ಬರ್ತಿರಲಿಲ್ಲ. ಬದಲಾಗಿ ಉಲ್ಲಾಸ, ಸಂತೋಷ ಇಮ್ಮಡಿಯಾಗುತ್ತಿತ್ತು. ಮುಖ ಗಂಟು ಹಾಕಿಕೊಂಡು ಬಂದರೆ ಆ ವರ್ಷ ಗ್ರಾಮದಲ್ಲಿ ಸ್ವಲ್ಪ ತೊಂದರೆ ಮನೆ ಮಾಡುತ್ತಿತ್ತು. ಇಂತಹ ಹತ್ತು ಹಲವು ಅನುಭವಗಳು ಗ್ರಾಮದಲ್ಲಾಗಿವೆ ಎನ್ನುತ್ತಾರೆ ಗ್ರಾಮದ ೭೪ ವರ್ಷದ ಹನುಮಂತಗೌಡ್ರ ದೊಡ್ಡಮನಿ ಅವರು.

ದೇವಗಿರಿಯಲ್ಲಿಯೇ ಪುಟ್ಟಜ್ಜನ ೮ ಬಾರಿ ತುಲಾಭಾರ ಮಾಡಲಾಗಿದೆ. ಗ್ರಾಮದಲ್ಲಿ ಪುಟ್ಟರಾಜರ ಹೆಸರಿನಲ್ಲಿ ಸುಮಾರು ಒಂದು ಕೋಟಿ ರೂಪಾಯಿ ವೆಚ್ಚದ ಸಮುದಾಯ ಭವನ ನಿರ್ಮಾಣ ಕಾಮಗಾರಿ ನಡೆದಿದೆ. ಊರ ಹೊರವಲಯದಲ್ಲಿ ಪುಟ್ಟರಾಜ ಗವಾಯಿಗಳ ಮಠವನ್ನು ಸ್ಥಾಪಿಸಲಾಗಿದೆ.

ಸಂಗೀತ ಸರಸ್ವತಿಯ ಸೇವೆಯಿಂದ ಹೆಸರಾಗಿರುವ ಗದಗಿನಲ್ಲಿ ಸಂಗೀತಕ್ಕಂದೇ ಒಂದು ವಿಶ್ವವಿದ್ಯಾಲಯವನ್ನು ಆರಂಭಿಸಬೇಕೆಂದು ಸರ್ಕಾರಕ್ಕೆ ಮೊದಲ ಬಾರಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದ ಪಂ. ಪುಟ್ಟರಾಜ ಗವಾಯಿಯವರ ಕನಸು ನನಸಾಗಲೇ ಇಲ್ಲ. ಈ ಹೊಣೆ ಭಕ್ತಾಭಿಮಾನಿಗಳಿಗೆ ಸಂಬಂಧಿಸಿದೆ. ಸರ್ಕಾರಕ್ಕೆ ಸಲ್ಲಿಸಿದ್ದ ಬೇಡಿಕೆಗೆ ಮನ್ನಣೆ ದೊರೆಯಿತಾದರೂ ಮೈಸೂರಿನಲ್ಲಿ ಸಂಗೀತ ವಿಶ್ವವಿದ್ಯಾಲಯ ಆರಂಭಿಸಿ ಗದಗನ್ನು ನಿರ್ಲಕ್ಷಿಸಿದ್ದು ಅವರ ಬೇಸರಕ್ಕೂ ಕಾರಣವಾಗಿತ್ತು. ಮೈಸೂರಿನಲ್ಲಿ ಸಂಗೀತ ವಿ.ವಿ. ಆರಂಭಿಸಿರುವ ರಾಜ್ಯ ಸರ್ಕಾರ ಇದೀಗ ಗದಗಿನಲ್ಲಿಯೂ ಪುಟ್ಟರಾಜರ ಸ್ಮರಣೆಗಾಗಿ ಅದರ ವಿಸ್ತರಣಾ ಘಟಕವನ್ನಾದರೂ ಸ್ಥಾಪಿಸುವಂತೆ ನಾವೆಲ್ಲರೂ ಸರ್ಕಾರದ ಗಮನ ಸೆಳೆಯುವ ಮೂಲಕ ಒತ್ತಾಯಿಸಬೇಕು. ಮರಣೋತ್ತರ ಭಾರತರತ್ನ ಪ್ರಶಸ್ತಿ ಅವರಿಗೆ ದೊರೆಯಬೇಕು.

ಡಾ. ತುಳಸಿರಾಮನಾಯಕ್*

# ಬೆಂಗಳೂರಿನ ಶ್ರೀನಿವಾಸ ಮಂದಿರಂ ಧರ್ಮ ಸಂಸ್ಥೆಯ ಇತಿಹಾಸ

ಬೆಂಗಳೂರು ನಗರದಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ಧರ್ಮಛತ್ರಗಳು ಇದ್ದವು ಎಂದು ದಾಖಲೆಗಳಿಂದ ತಿಳಿದುಬರುತ್ತದೆ. ಉಯ್ಯಾಲೆ ಛತ್ರ, ಕಿಚ್ಚಯ್ಯಚೆಟ್ಟಿ ಛತ್ರ, ನಾರಾಯಿನ್ ಸಾಮಿ ಛತ್ರ, ಪೋಲಿಪಲ್ಲಿ ಸುಬ್ಬಯ್ಯಶೆಟ್ಟಿ ಛತ್ರ, ದೊಡ್ಡಣಶೆಟ್ಟರ ಛತ್ರ, ಗುಬ್ಬಿ ತೋಟಪ್ಪನ ಛತ್ರ, ಸುಬೇದಾರ್ ಛತ್ರ, ಪೂರ್ಣಯ್ಯ ಛತ್ರ ಮತ್ತು **ಶ್ರೀನಿವಾಸಮಂದಿರಂ ಧರ್ಮ ಸಂಸ್ಥೆಗಳು** ಇದ್ದವು. ಹೀಗೆ ಬೆಂಗಳೂರು ನಗರದಲ್ಲಿ ಸಂಶೋಧನೆ ಮಾಡಿದರೆ ಇನ್ನೂ ಹಲವಾರು ಛತ್ರಗಳು ಹೆಜ್ಜೆ ಹೆಜ್ಜೆಗೂ ಇದ್ದಿರಬಹುದು ಎಂದು ತಿಳಿದುಬರುತ್ತದೆ.[೧]

ಶ್ರೀನಿವಾಸ ಮಂದಿರಂ ಧರ್ಮಸಂಸ್ಥೆ ಬಳೇಪೇಟೆ ಮುಖ್ಯರಸ್ತೆಯಲ್ಲಿದೆ. ಇದರಲ್ಲಿ ಬ್ಯಾಟರಾಯಸ್ವಾಮಿ ಹಾಗೂ ಶ್ರೀನಿವಾಸ ದೇವಸ್ಥಾನ, ಅನಾಥಾಲಯ, ವಿದ್ಯಾಮಂದಿರ, ಉಚಿತ ಸಾರ್ವಜನಿಕ ವಾಚನಾಲಯ, ಓರಿಯಂಟಲ್ ಮತ್ತು ಮಿಶ್ರ ಗ್ರಂಥಾಲಯ, ಸ್ತ್ರೀಯರಿಗೆ 'ಮಾತೃಮಂದಿರ' ಉಚಿತವಾಗಿ ನಡೆಯುತ್ತಿತ್ತು. ಇಷ್ಟೇ ಅಲ್ಲದೆ ಅತ್ಯವಶ್ಯಕವಿರುವ ಕಡುಬಡವರಿಗೆ, ಪ್ರತಿನಿತ್ಯ ಬೆಂಗಳೂರಿಗೆ ಬಂದು ಹೋಗುವ ಯಾತ್ರಿಕರಿಗೆ, ಸನ್ಯಾಸಿಗಳಿಗೆ ಊಟ, ವಸತಿ, ನೀಡುವ ಉಪಚಾರವಿತ್ತು. ಈ ತರದ ಸೇವೆಯಿಂದ ಹಿಂದೂ ಸನಾತನ ಧರ್ಮ ರಕ್ಷಣೆ ಮಾಡಿದಂತಾಗುತ್ತದೆ ಎಂಬ ಬಲವಾದ ನಂಬಿಕೆ ಇದರ ಸ್ಥಾಪಕರಲ್ಲಿ ಇತ್ತು ಎಂದು ಗೊತ್ತಾಗುತ್ತದೆ.[೨] ಹಿಂದೂ ಧರ್ಮದ ಮುಖಾಂತರ ಜಾತ್ಯಾತೀತ ಧರ್ಮಗಳಿಗೆ ಸೇವೆ ಸಲ್ಲಿಸುವುದು ಈ ಸಂಸ್ಥೆಯ ಮುಖ್ಯ ಗುರಿಯಾಗಿತ್ತು.

ಕ್ರಿ.ಶ. ೧೮೮೩ರಲ್ಲಿ ಇತರೆ ಭಕ್ತಾದಿಗಳನ್ನು ಸೇರಿಸಿಕೊಂಡು 'ಶ್ರೀನಿವಾಸ ಮಂದಿರಂ ಧರ್ಮ ಸಂಸ್ಥೆ' ಸ್ಥಾಪಿಸಿದವರೇ ಶ್ರೀ ಎ. ಗೋಪಾಲಚಾರ್ಲು ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಎ. ಸಿಂಗಮ್ಮನವರು[೩]. ಇವರು ಚಿಕ್ಕಬಳ್ಳಾಪುರದಲ್ಲಿ ನ್ಯಾಯಾಲಯ ಕಛೇರಿಯಲ್ಲಿ ಕೆಲಸ ದಲ್ಲಿದ್ದರು. ೧೮೭೭ರಲ್ಲಿ ಉಂಟಾದ ಘೋರ ಕ್ಷಾಮ ಸಂದರ್ಭದಲ್ಲಿ ಸರ್ಕಾರದವರು ಇವರನ್ನು ನಿವಾರಣಾಧಿಕಾರಿ ಯಾಗಿ ನೇಮಿಸಲ್ಪಟ್ಟರು.[೪] ಈ ಸಂದರ್ಭದಲ್ಲಿ ತಾನು ಕಣ್ಣಾರೆ ಕಂಡ ಜನರ-ಬಡವರ, ಅನಾಥರ ಸಹಜ ಸ್ಥಿತಿಗತಿಗಳು, ಕಷ್ಟ ಕಾರ್ಪಣ್ಯಗಳು ಇವರನ್ನು ಈ ಧರ್ಮಸಂಸ್ಥೆಯ ಮುಖಾಂತರ ತನ್ನ ಜೀವನವನ್ನು ಸದುಪಯೋಗಿಸಲು ಪ್ರೇರಣೆಯಾಗಿ ಸರ್ಕಾರಿ ಕೆಲಸಕ್ಕೆ ರಾಜಿನಾಮೆ ಸಲ್ಲಿಸಿ, ತಮ್ಮಲ್ಲಿದ್ದ ಅಲ್ಪಸ್ವಲ್ಪ ಸ್ವತ್ತುಗಳನ್ನು ಆಧಾರವಾಗಿಟ್ಟುಕೊಂಡು ಧರ್ಮಸಂಸ್ಥೆ ನಡೆಸಲು ಮುಂದಾದರು. ಇವರು ಶ್ರೀ ಆಮ್ಕೊಂಡನಲ್ಲಿ ಶ್ರೀರಂಗದ ಶನಿವಾರಂ ಶೇಷಚಾರ್ಯ ಎಂಬ ಗೌರವನೀಯ ಸನಾತನ ಧರ್ಮಾವಲಂಬಿಗಳ ಮನೆತನಕ್ಕೆ ಸೇರಿದವರು. ಇವರು ದಿನಾಂಕ : ೩೧-೮-೧೮೫೫ರಲ್ಲಿ ಜನಿಸಿದರು. ತಂದೆ ಶ್ರೀನಿವಾಸಯ್ಯಂಗಾರ್. ಗಂಡ ಹೆಂಡತಿ ಇಬ್ಬರೂ ಲೌಕಿಕ ಆಶೋತ್ತರಗಳನ್ನು ತ್ಯಜಿಸಿ, ಕಾವಿಯ ವಸ್ತ್ರಗಳನ್ನು ಧರಿಸಿ, ವಿರಕ್ತಿಗಳಂತೆ ದೈವಿಕ ತೇಜಃಪುಂಜರಾಗಿ ಭಕ್ತಾದಿಗಳನ್ನು, ದೀನ ದಲಿತರನ್ನು ವಿಶೇಷ ರೀತಿಯಲ್ಲಿ ಆಕರ್ಷಿಸುತ್ತಿದ್ದರು ಎಂದು ದಾಖಲೆಗಳಿಂದ ತಿಳಿದುಬರುತ್ತದೆ.[೫]

ಕ್ರಿ.ಶ. ೧೮೮೭ರಲ್ಲಿ ಬಹಳ ಶಿಥಿಲವಾಗಿದ್ದ ಶ್ರೀ ಬ್ಯಾಟರಾಯಸ್ವಾಮಿ-ಶ್ರೀನಿವಾಸ ದೇವರ ದೇವಸ್ಥಾನದ ಜೀರ್ಣೋದ್ಧಾರ ಮಾಡಿಸಿ, ದೇವಸ್ಥಾನದ ಸಂಪ್ರೋಕ್ಷಣ ಮಹೋತ್ಸವವು ನಡೆದು, ದೇವಸ್ಥಾನದಲ್ಲಿ ನಿತ್ಯ ಸೇವೆಗಳನ್ನು ಮಾಡಲು ಏರ್ಪಡಿಸಿದರು.[೬] ಸರ್ಕಾರದಿಂದ ವರ್ಷಕ್ಕೆ ಒಂದು ಸಾರಿ ಗಂಧದ ಮರ ಮತ್ತು ಇನಾಂ ಹಣವನ್ನು ಬಿಡುಗಡೆ ಮಾಡಿಸಿ ದೇವಸ್ಥಾನದಲ್ಲಿ ಪೂಜೆ ಪುರಸ್ಕಾರಗಳಿಗೆ ಹೆಚ್ಚಿನ ಮಹತ್ವ ಕೊಟ್ಟು ಪ್ರೋತ್ಸಾಹಿಸಿರುವುದು ದಾಖಲೆಯಿಂದ ತಿಳಿದುಬರುತ್ತದೆ.[೭] ಇಷ್ಟಕ್ಕೆ ತೃಪ್ತಿಪಡದೆ ನಮ್ಮ ಸನಾತನ ಹಿಂದೂಧರ್ಮಕ್ಕನುಸಾರವಾಗಿ ಭೂತದಯಾ ಪಶ್ಚಾತ್ತಾಪದಿಂದ ದಿಕ್ಕಿಲ್ಲದ ದುರ್ದೈವಿ ಅನಾಥ ಮಕ್ಕಳ ಉದ್ಧಾರಕ್ಕೋಸ್ಕರ ಒಂದು ಅನಾಥಾಲಯು ಹಾಗೂ ವಿದ್ಯಾಲಯು ಪ್ರಾರಂಭಿಸಿದರು.[೮] ಇಲ್ಲಿ ಜಾತಿ ಮತಗಳ ಪ್ರಸ್ತಾವನೆ ಇರಲಿಲ್ಲ. ಮಂದಿರದ ಹಳೇ ಕಟ್ಟಡದಲ್ಲಿ ಹಾಗೂ ದೇವಸ್ಥಾನದಲ್ಲಿ ಈ ಅನಾಥ ಬಾಲಕರ ವಾಸಸ್ಥಳವಾಗಿತ್ತು. ಆರೋಗ್ಯ, ಶಿಸ್ತು ಸಂಯಮಗಳ ಬೆಳವಣಿಗೆಗೆ ದೈನಂದಿನ ವಿದ್ಯಾಭ್ಯಾಸಕ್ಕಾಗಿ ಖಾಸಗಿ ಉಪಾಧ್ಯಾಯರನ್ನು ನೇಮಕ ಮಾಡಿದರು. ಇವರ ಪ್ರತಿಭೆ ಪರೀಕ್ಷಿಸಲು ಪ್ರತಿ ವರ್ಷ ಬಹುಮಾನ ನೀಡುತ್ತಿದ್ದರು.

*# ೨೩೯೧, ೭ನೇ ಮುಖ್ಯರಸ್ತೆ, ಬನಶಂಕರಿ ೭ನೇ ಹಂತ, ಬೆಂಗಳೂರು.

ಬಾಲಕರು ಹಾಗೂ ಕಾರ್ಯಕರ್ತರು ಪ್ರತಿ ಶನಿವಾರ ಮಂದಿರದ ಎಲ್ಲಾ ಅಭಿಮಾನಿಗಳಿಂದ, ಬಸವನಗುಡಿ, ಮಲ್ಲೇಶ್ವರಂಗಳಿಗೆ ಹೋಗಿ ಒಂದು ತಳ್ಳುವ ಗಾಡಿಯಲ್ಲಿ ದವಸ ಧಾನ್ಯಗಳನ್ನು ಶೇಖರಣೆ ಮಾಡಲಾಗುತ್ತಿತ್ತು. ಉತ್ತರ ಭಾರತದ ಒಬ್ಬ ನಂಬಿಕೆಯುಳ್ಳವನನ್ನು ಇದರ ಮೇಲ್ವಿಚಾರಣೆಗೆ ನೇಮಕ ಮಾಡಿದ್ದರು. ಈ ತರಹ ಕೆಲಸದಲ್ಲಿ ಕುಂಠಿತ ಕಂಡು ಬಂದಾಗ ತಾವೇ ಸ್ವತಃ ನಿಂತು ನಿರ್ವಹಿಸಿರುವುದು ತನ್ನ ಜವಾಬ್ದಾರಿಯಾಗಿತ್ತು ಎಂದು ಹೇಳುತ್ತಿದ್ದರು. ಸಂಸ್ಥೆಯ ಖರ್ಚು ವೆಚ್ಚಕ್ಕೆ, ಸಿಬ್ಬಂದಿ ವೇತನಕ್ಕೆ ಸಣ್ಣ ಪುಟ್ಟ ಕಾಣಿಕೆಗಳನ್ನು ಬಿಡದೇ ಸ್ವೀಕರಿಸುತ್ತಿದ್ದರು. ಎಲ್ಲಾ ಹಬ್ಬ ಹರಿದಿನಗಳಲ್ಲಿ ಕಾಂಚಿಪುರದಿಂದ ಶ್ರೀ ವೈಷ್ಣವ ಸ್ವಾಮಿಗಳನ್ನು ಕರೆಯಿಸಿ, ದಿವ್ಯಪ್ರಬಂಧ, ವೇದೋಪನಿಷತ್‌ಗಳ ಕಾಲಕ್ಷೇಪವನ್ನು ವಿಶೇಷ ಉತ್ಸವಾದಿಗಳನ್ನು ಆಧ್ಯಾತ್ಮಿಕ ಉಪನ್ಯಾಸಗಳನ್ನು ಬಹಳ ವಿಜೃಂಭಣೆಯಿಂದ ಏರ್ಪಡಿಸುತ್ತಿದ್ದರು. ಇವುಗಳಲ್ಲಿ ಶ್ರೀ ರಾಮಾನುಜಾಚಾರ್ಯರವರ ತಿರುನಕ್ಷತ್ರ (ಹತ್ತು ದಿವಸಗಳು) ವಿಶೇಷವಾಗಿ ಆಚರಿಸುತ್ತಿದ್ದರು. ಇಲ್ಲಿನ ಬಾಲಕರು ವಿವಿಧ ಶಾಲಾ ಕಾಲೇಜುಗಳ ಮುಖ್ಯೋಪಾಧ್ಯಾಯ/ಪ್ರಾಂಶುಪಾಲ ರಿಂದ ಇಲ್ಲಿ ಸೇರಿಸಲು ಶಿಫಾರಸ್ಸು ಮಾಡಿದ್ದರು. ಇವರಿಗೆ ಮುಖ್ಯವಾಗಿ ಹಿಂದೂ ಧರ್ಮದ ಅನೇಕ ತತ್ವಗಳ ಜೊತೆಯಲ್ಲಿ ಸಂಸ್ಕೃತ, ಕನ್ನಡ ಮತ್ತು ಇಂಗ್ಲಿಷ್‌ಅನ್ನು ಬೋಧಿಸುತ್ತಿದ್ದರು. ಇಲ್ಲಿ ತಾಂತ್ರಿಕ ವಿಷಯದ ಬಗ್ಗೆ ಉಪನ್ಯಾಸಕರು ಇಲ್ಲದೆ ಇರುವಾಗ, ಇವರ ಸಮಕಾಲೀನರಾಗಿದ್ದ ಮಹಾದಾನಿಗಳಾದ ಜನೋಪಕಾರಿ ದೊಡ್ಡಣ್ಣಶೆಟ್ಟಿ ಪ್ರಾರಂಭಿಸಿರುವ ಉಚಿತ ಶ್ರೀ ಲಕ್ಷ್ಮಿನರಸಿಂಹಸ್ವಾಮಿ ಧರ್ಮ ಪಾಠಶಾಲೆಯಲ್ಲಿ ಶೈಕ್ಷಣಿಕ ಹಾಗೂ ಕೈಗಾರಿಕಾ ಶಾಲೆಯ ತರಗತಿಗಳಿಗೆ ದಿವಸಕ್ಕೆ ೨ ಬಾರಿ ಉಪನ್ಯಾಸಕ್ಕೆ ಹೋಗಿ ಬರುತ್ತಿದ್ದರು.

ಶ್ರೀ ಮನ್ಮಹಾರಾಜರವರ ವರ್ಧಂತಿ ಸಮಯದಲ್ಲಿ ಪ್ರತಿ ವರ್ಷ ಒಂದು ಸಾರ್ವಜನಿಕ ಸಮಾರಾಧನೆಯ ಸಭೆ ಸೇರಿಸಿ ಒಂದು ಸಾಂಸ್ಕೃತಿಕ ಸ್ಪರ್ಧೆ ಏರ್ಪಡಿಸಿ ಪಾರಿತೋಷಕ ಗಳನ್ನು ನೀಡುತ್ತಿದ್ದರು. ಯುದ್ಧ ಕಾಲದಲ್ಲಿ ಶ್ರೀ ಮಂದಿರದಲ್ಲಿ ಒಂದು ವಿನೋದಾವಳಿ ಪ್ರದರ್ಶನ ಏರ್ಪಡಿಸಿ, ಇದರಿಂದ ಗಳಿಸಿದ ಹಣವನ್ನು ಯುದ್ಧ ನಿಧಿಗೆ ಅರ್ಪಿಸುತ್ತಿದ್ದರು. ಈ ಸಂದರ್ಭದಲ್ಲಿ ರಾಜಮನೆತನದವರೆಲ್ಲರೂ ಸೇರಿ ಮಂದಿರಕ್ಕೆ ದಯಮಾಡಿಸುತ್ತಿದ್ದರು.[೯]

೧೮೮೮ರಲ್ಲಿ ಸಾರ್ವಜನಿಕ ಉಚಿತ ವಾಚನಾಲಯ, ಓರಿಯಂಟಲ್ ಹಾಗೂ ಮಿಶ್ರ ಗ್ರಂಥಾಲಯ ಸ್ಥಾಪಿಸಿದರು.[೧೦] ಇವರು ಮಿತಭಾಷಿಗಳು. ಪೌರ್ವಾತ್ಯ ಮತ್ತು ಪಾಶ್ಚಾತ್ಯ ಭಾಷೆಗಳಲ್ಲಿಯೂ ಅಗಾಧವಾದ ಪಾಂಡಿತ್ಯವಿತ್ತು. ಇವರು ಬ್ರಿಟಿಷ್ ಚಕ್ರವರ್ತಿ ವಿಕ್ಟೋರಿಯ ಮಹಾರಾಣಿ, ವೈಸ್‌ರಾಯ್‌ರಿಗೆ ಮತ್ತು ಇತರ ಗಣ್ಯವ್ಯಕ್ತಿಗಳಿಗೆ ಸಲ್ಲಿಸಿರುವ ವಿಜ್ಞಾಪನಾ ಮನವಿಗಳು ಮತ್ತು ಬಿನ್ನವತ್ತಳೆಗಳು ಮುಂತಾದವು ತುಂಬಾ ಅರ್ಥಗರ್ಭಿತವಾದವು. ಇದಕ್ಕೆ ಇವರ ಪತ್ರವ್ಯವಹಾರಗಳ ದಾಖಲೆ ಹಾಗೂ ಶೇಖರಿಸಿರುವ ಅಮೂಲ್ಯ ಗ್ರಂಥಗಳ ವಾಚನಾಲಯದ ಪುಸ್ತಕ ಭಂಡಾರವೇ ಸಾಕ್ಷಿ.

ದಿನಾಂಕ ೩-೧೧-೧೮೯೨ರಂದು ಬೃಹತ್ ಸಭೆ ನಡೆಯಿಸಿದರು. ಅದರಲ್ಲಿ ಶ್ರೀ ಪಿ. Chentsal Rao Pantalu Garu CIE, President, Mr. T.R.A. Thambu Chetty Chief Judge, B.K. ವೆಂಕಟವರದಯ್ಯಂಗಾರ್ ಡೆಪ್ಯೂಟಿ ಕಮೀಷನರ್ ತುಮಕೂರು, ಶ್ರೀ ಕೃಷ್ಣರಾವ್ ಜಿಲ್ಲಾ ನ್ಯಾಯಾಧಿಶರು, ಶ್ರೀ ನಾರಾಯಣರಾವ್ ಅಂಡರ್ ಸೆಕ್ರೆಟರಿ, ಶ್ರೀರಾಮರಾವ್ ಅಸಿಸ್ಟೆಂಟ್ ಕಮಿಷನರ್, ಶ್ರೀ ವೀರಸ್ವಾಮಿ ಮೊದಲಿಯಾರ್ ಟ್ರೆಜರಿ ಅಧಿಕಾರಿ, ಶ್ರೀ ಎಸ್. ಸುಬ್ಬರಾಯ ಐಯ್ಯರ್ ಟೌನ್ ನ್ಯಾಯಾಧೀಶರು, ಶ್ರೀ ಕೆ. ಶ್ರೀನಿವಾಸರಾವ್ ಅಸಿಸ್ಟೆಂಟ್ Supdt. ರೆವಿನ್ಯೂ ಸರ್ವೇ, ಆಳ್‌ಸಿಂಗರ ಆಚಾರ್ ವಕೀಲರು, ಶ್ರೀ ಗಂಗಾಧರ ಐಯ್ಯರ್ ಅಸಿಸ್ಟೆಂಟ್ ಕಮೀಷನರ್, ಶ್ರೀ ಪರಮಶಿವ ಐಯ್ಯರ್ ಮತ್ತು ಇತರರು ಭಾಗವಹಿಸಿದ್ದರು.[೧೧]

ಕ್ರಿ.ಶ. ೧೯೦೭ರಲ್ಲಿ ಮಹಿಳೆಯರಿಗೋಸ್ಕರ 'ಮಾತೃ ಮಂದಿರಂ' ಎಂಬ ಸ್ತ್ರೀ ಶಾಖೆ ಆರಂಭಿಸಿದರು. ಇದರಲ್ಲಿ ಸಂಗೀತ, ಕಲೆ, ಹೊಲಿಗೆ, ಕುಶಲವಿದ್ಯೆ, ವೃತ್ತಿ ಶಿಕ್ಷಣ, ಬೆತ್ತದ ಕೆಲಸ ಮುಂತಾದವುಗಳಿಗೆ ತರಬೇತಿ ಇತ್ತು. ಹೀಗೆ ಜನಸಮುದಾಯದ ಏಳಿಗೆಗೆ ಶ್ರೀಮತಿ ಎ. ಸಿಂಗಮ್ಮನವರು ವಿಶೇಷವಾಗಿ ಗಮನ ಹರಿಸುತ್ತಿದ್ದರು.[೧೨]

ದಿನಾಂಕ ೩೧-೧೨-೧೯೦೪ರಂದು ಇವರ ಧರ್ಮ ಕಾರ್ಯಾಚರಣೆಯ ಬಗ್ಗೆ ತಿಳಿಯಲು ಅಂದಿನ ಮನ್ಮಹಾರಾಜ ರವರಾದ ಪೂಜ್ಯ ಶ್ರೀ ಕೃಷ್ಣರಾಜೇಂದ್ರಒಡೆಯರ್ ಬಹದ್ದೂರ್‌ರವರು ತಮ್ಮ ಪರಿವಾರ ಸಮೇತ ಶ್ರೀನಿವಾಸ ಮಂದಿರಕ್ಕೆ ಭೇಟಿ ನೀಡಿ ಇವರ ಘನ ಉದ್ದೇಶಗಳನ್ನು ಪ್ರಶಂಶಿಸಿ, ತಮ್ಮ ಮೆಚ್ಚುಗೆಯ ಸಂದೇಶವನ್ನು ನೀಡಿದರು. ಹಾಗೂ ಎಲ್ಲಾ ಚಟುವಟಿಕೆಗಳನ್ನು ನಡೆಸಲು ಜಾಗದ ಅಭಾವವನ್ನು ತಾನು ಕಣ್ಣಾರೆ ಕಂಡು ಪಕ್ಕದಲ್ಲಿರುವ ಖಾಲಿ ನಿವೇಶನ ಮಂಜೂರು ಮಾಡಿ ಅದರಲ್ಲಿ ಒಂದು ಹೊಸ ಕಟ್ಟಡ ನಿರ್ಮಾಣಕ್ಕೆ ನೆರವಾದರು. ರಾಜರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್‌ರವರಿಂದ ದಿನಾಂಕ ೨೭-೧-೧೯೧೩ರಲ್ಲಿ ಗುದ್ದಲಿ ಪೂಜೆಯಾಗಿ, ನಂತರ ಕಟ್ಟಡ ಪೂರ್ಣವಾಗಿ ಮುಗಿದ ಮೇಲೆ ಪುನಃ ಅವರಿಂದಲೇ ದಿನಾಂಕ ೫-೨-೧೯೧೪ರಲ್ಲಿ ಹೊಸ ಕಟ್ಟಡ ಉದ್ಘಾಟನೆ ವೈಭವದಿಂದ ನಡೆಯಿತು.[೧೩] ಇವರ ಸಾರ್ವಜನಿಕ ಸುಧಾರಣಾ ಕಾರ್ಯ

ಗಳಿಗೆ ಮೆಚ್ಚಿ ಆಗಿನ ಶ್ರೀಮನ್ಮಹಾರಾಜರವರು ೧೯೧೬ರಲ್ಲಿ ನಡೆದ "ಮೈಸೂರು ದರ್ಬಾರ್"ನಲ್ಲಿ "ಜನೋಪಕಾರಿ" ಎಂಬ ಬಿರುದನ್ನು ದಯಪಾಲಿಸಿದರು.[೧೪] ಇದೇ ಸಂದರ್ಭದಲ್ಲಿ ಶ್ರೀ ಎ. ಗೋಪಾಲಚಾರ್ಲುರವರು ಸಂಸ್ಥಾಪಕರು, ಈ ಸಂಸ್ಥೆಯನ್ನು ಅರಮನೆಯ ಆಡಳಿತಕ್ಕೆ ಒಳಪಡಿಸಬೇಕೆಂದು ಹಾಗೂ ಈ ಸಂಸ್ಥೆ ಹೀಗೆಯೇ ಮುಂದುವರೆಯಿಸಿಕೊಂಡು ಹೋಗಲು ತಮ್ಮ ಆದೇಶ ನೀಡಬೇಕೆಂದು ಶ್ರೀ ಮನ್ಮಹಾರಾಜರವರಿಗೆ ಅರಿಕೆ ಮಾಡಿದರು.

ತಮ್ಮ ಜೀವನವನ್ನೇ ಸಮಾಜ ಕಾರ್ಯಗಳಿಗೆ ಧಾರೆಯೆರೆದ ಪರಮ ನಿಸ್ವಾರ್ಥ ಮಹಾನುಭಾವರಾದ ಜನೋಪಕಾರಿ ಶ್ರೀಮಾನ್ ಎ. ಗೋಪಾಲಚಾರ್ಲುರವರು ದಿನಾಂಕ ೧೯-೮-೧೯೧೬ರಲ್ಲಿ ದೈವಾಧೀನರಾದರು. ಧರ್ಮ ಸಂಸ್ಥೆಯ ಸಹಚರರನ್ನು, ಅನೇಕ ಅಭಿಮಾನಿ ಬಂಧು ವರ್ಗದವರನ್ನು ಶೋಕದಲ್ಲಿ ಮುಳುಗಿಸಿದರು.[೧೫]

ಇವರ ಧರ್ಮಪತ್ನಿ ಎ. ಸಿಂಗಮ್ಮನವರು ಅವರ ಪತಿಯೊಡನೆ ಎಲ್ಲಾ ಕೆಲಸ ಕಾರ್ಯಗಳಲ್ಲಿ ಸದಾ ನಿರತರಾಗಿರುವುದನ್ನು ಹಾಗೆಯೇ ಮುಂದುವರೆಸಿದರು. ಹಾಲಿ ಇರುವ ದೇವಸ್ಥಾನ, ಅನಾಥಲಾಯ, ವಿದ್ಯಾಲಯ, ಉಚಿತ ವಾಚನಾಲಯ, ಗ್ರಂಥಭಂಡಾರ ಮತ್ತು ಮಾತೃ ಸ್ತ್ರೀ ಶಾಖೆ ಧರ್ಮಕಾರ್ಯಗಳ ಚಟುವಟಿಕೆಗಳನ್ನು ನಿಭಾಯಿಸಿದರು. ರಿಟೈರ್ಡ್ ಡೆಪ್ಯೂಟಿ ಕಮೀಷನರ್ ಶ್ರೀ ಚಂಗಯ್ಯಶೆಟ್ಟಿರವರ ನೇತೃತ್ವದಲ್ಲಿ ಒಂದು ಸಲಹಾ ಸಮಿತಿಯಿಂದ ಸಲಹೆಗಳನ್ನು ಪಡೆದು ತಾನು ಮ್ಯಾನೇಜರ್ ಆಗಿ ಕೆಲಸ ನಿರ್ವಹಿಸಿದರು.[೧೬] ಇವರು ತಮ್ಮ ಸ್ವಂತ ದುಡಿಮೆಯಿಂದ "ವಸಂತಮಾಲಿನಿ" ಎಂಬ ತೈಲವನ್ನು ಅತ್ಯಂತ ಅಮೂಲ್ಯವಾದ ಗಿಡಮೂಲಿಕೆಗಳಿಂದ ಹಾಗೂ ಹಸುರೆಲೆಗಳಿಂದ ತಯಾರಿ ಮಾಡಿದರು. ಅನೇಕ ಜನ ಇದರ ಉಪಯೋಗ ಪಡೆದರು. ಹಾಗೆಯೇ ಅವರು ತನ್ನ ಸ್ವಹಸ್ತದಿಂದ ಶ್ರೀನಿವಾಸದೇವರ ಪ್ರಸಾದ "ಸಕ್ಕರೆ ಪೊಂಗಲ್" ಅನ್ನು ವಿಶೇಷ ರೀತಿಯಲ್ಲಿ ತಯಾರಿಸಿ, ವಿತರಿಸಿ ಭಕ್ತಾದಿಗಳ ಮೆಚ್ಚುಗೆಗೆ ಪಾತ್ರರಾದರು. ಈ ತರಹ ಸತ್ಕಾರ್ಯಗಳಿಂದ ಒದಗುತ್ತಿದ್ದ ಕಾಣಿಕೆಯ ಹಣವನ್ನು ಒಂದು ನಿಧಿಯಲ್ಲಿಟ್ಟರು. ಇವರ ಸಮಾಜ ಸುಧಾರಣೆ ಕಾರ್ಯವನ್ನು ಕಂಡು ಇವರಿಗೆ "ಪ್ರಶಂಸನಾ ಡಾಕ್ಟರ್ ಪ್ರಶಸ್ತಿ"ಯು ಸಹ ಲಭಿಸಿತ್ತು ಎಂದು ಹೇಳಲಾಗಿದೆ.[೧೭]

ತನ್ನ ವಯಸ್ಸು ಇಳಿಮುಖವಾಗುತ್ತಿರುವುದನ್ನು ಹಾಗೂ ತಾವು ಸ್ಥಾಪಿಸಿದ ಧರ್ಮ ಕಾರ್ಯ ಕಲಾಪಗಳು ಹಾಗೂ ಸಂಬಂಧಪಟ್ಟ ಸ್ವತ್ತುಗಳ ಆದಾಯ ಭದ್ರಪಡಿಸುವ ಉದ್ದೇಶದಿಂದ ದಿನಾಂಕ ೨೬-೧-೧೯೨೯ರಲ್ಲಿ ಒಂದು 'ವಿಲ್' (ಮರಣಶಾಸನ) ಪತ್ರ ಬರೆಯಿಸಿದರು.[೧೮] ಇದಕ್ಕೆ "ಎ. ಸಿಂಗಮ್ಮ, ಬಿ.ವಿ. ಸುಬ್ಬರಾವ್, ವಿ.ಟಿ. ಸೆಟ್ಲೂರ್, ಎಂ. ಚಂಗಯ್ಯಶೆಟ್ಟಿ, ಬೇಲೂರು ಶ್ರೀನಿವಾಸಯ್ಯಂಗಾರ್‌ರವರುಗಳ ಸಹಿ ಇರುತ್ತದೆ. ಹಾಗೆಯೇ ಇದರಲ್ಲಿ ಮುಂದುವರೆದು, ಶ್ರೀ ಮಂದಿರದ ಅನಾಥಾಲಯದಲ್ಲಿ ಬೆಳೆದ ಹುಡುಗರು ವಿದ್ಯಾವಂತರಾಗಿ ಭಾರತದಲ್ಲಿ ಹಾಗೂ ಹೊರದೇಶಗಳಲ್ಲಿ ಇದ್ದು, ಈಗ ಹಾಲಿ ಬೆಂಗಳೂರಿನಲ್ಲಿರುವ ಹಳೇ ಹುಡುಗರ ಒಂದು ಸಲಹಾ ಸಮಿತಿ ಮಾಡಿಕೊಂಡು ಅವರನ್ನು ಸದಸ್ಯರನ್ನಾಗಿ ಮಾಡಿ ಈ ಧರ್ಮ ನಿರ್ವಾಹಕರ ಕೆಲಸಗಳಲ್ಲಿ ಅವರ ಸಲಹೆ, ಸೂಚನೆಗಳನ್ನು ಕಮಿಟಿಯವರು ತೆಗೆದುಕೊಳ್ಳತಕ್ಕದ್ದು." ಎಂದು ಸಹ 'ವಿಲ್'ನಲ್ಲಿ ನಮೂದಿಸಲಾಗಿದೆ.

ಇಂತಹ ತ್ಯಾಗಮಯಿ ಶ್ರೀಮತಿ ಸಿಂಗಮ್ಮ ದಿನಾಂಕ ೧೬-೨-೧೯೩೨ರಂದು ದೈವಾಧೀನರಾದರೆಂದು ತಿಳಿದುಬಂದಿದೆ.[೧೯] ಮಾತೃಹೀನರಾದ ಅನಾಥ ಬಾಲಕ, ಬಾಲಕಿಯರು ಹಾಗೂ ಅಪಾರ ಅಭಿಮಾನಿಗಳು ಬಹಳ ಶೋಕದಲ್ಲಿ ಮುಳುಗಿದರು.

ಶ್ರೀ ಎ. ಗೋಪಾಲಚಾರ್ಲು ಹಾಗೂ ಶ್ರೀಮತಿ ಎ. ಸಿಂಗಮ್ಮ ಸಂಸ್ಥೆಯ ಧರ್ಮಸ್ಥಾಪಕರು ಅಂತಿಮವಾಗಿ ಬಿಟ್ಟುಹೋದ ಧರ್ಮವು ದೇವಸ್ಥಾನ, ಅನಾಥಾಲಯ, ವಾಚನಾಲಯ, ಪುಸ್ತಕಭಂಡಾರ ಮತ್ತು ಸ್ತ್ರೀ ಶಾಖೆಯ 'ಮಾತೃ ಮಂದಿರಂ' ಕಟ್ಟಡವಲ್ಲದೆ, ರೂ. ೨೫,೦೦೦ ರೂಪಾಯಿಗಳಿಗೆ ಮೇಲ್ಪಟ್ಟ ಪುದುವಟ್ಟು ನಿಧಿಗಳು ಕೂಡ ಇದ್ದವು. ಇದೂ ಅಲ್ಲದೆ ಬೆಂಗಳೂರು ಗ್ರಾಮಾಂತರ ಪ್ರದೇಶಗಳಲ್ಲಿ ಹಲವು ಎಕರೆ ಖುಷ್ಕಿ ಜಮೀನು ಸಹ ಇತ್ತು ಎಂದು ತಿಳಿದುಬಂದಿದೆ.[೨೦]

ಈ ಸಂಸ್ಥೆಯ ಪ್ರಾರಂಭದಿಂದಲೂ ಬೆಂಗಳೂರು ನಗರ ಮುನಿಸಿಪಾಲಿಟಿ ಇಲಾಖೆಯಿಂದ ಅನುದಾನ ಹಾಗೂ ಕುಡಿಯುವ ನೀರಿನ ಸೌಲಭ್ಯ ಪಡೆಯುತ್ತಿತ್ತು.[೨೧] ಇದೇ ತರಹ ಮೈಸೂರು ಸರ್ಕಾರದ ಮುಜರಾಯಿ ಇಲಾಖೆಯಿಂದ ಪ್ರಾರಂಭದಿಂದಲೂ ಅನುದಾನ ಪಡೆಯುತ್ತಿದ್ದು, ಈಗ ಮುಜರಾಯಿ ಇಲಾಖೆಯ ಆಡಳಿತಕ್ಕೆ ಸಂಸ್ಥೆಯು ಸೇರಿಹೋಯಿತು. ಸದರಿ ಇಲಾಖೆಯಿಂದ ಇದರ ಸಂಪೂರ್ಣ ಆಡಳಿತ ೯ ಜನ ಸದಸ್ಯರಿರುವ ಒಂದು ಕಾರ್ಯನಿರ್ವಾಹಕ ಮಂಡಲಿಯವರು ಮೇಲ್ವಿಚಾರಣೆ ಮಾಡಲು ಆದೇಶ ವಿತ್ತರು.[೨೨]

ಸ್ತ್ರೀ ಶಾಖೆಯ 'ಮಾತೃಮಂದಿರಂ' ಮಂದಿರದ ಎದುರಿನ ಕಟ್ಟಡವು ಶ್ರೀಮತಿ ಸಿಂಗಮ್ಮನವರ ವೃದ್ಧಾಪ್ಯ ಕಾಲದಲ್ಲಿ ಸತತ ಪ್ರಯತ್ನಗಳಿಂದ ಎಲ್ಲಾ ಎಡರು ತೊಡರುಗಳನ್ನು ನಿವಾರಿಸಿ ಕಟ್ಟಡ ನಿರ್ಮಿಸಿದರು. ಇದರ ಉದ್ಘಾಟನೆಯು ದಿನಾಂಕ ೫-೪-೧೯೩೩ರಲ್ಲಿ ಶ್ರೀ ಮಧ್ವುವ

Statement A

THE LIBRARY

General Summary of Cash from November 1891 to October 1892.

| Receipts | Amount | Expenditure | Amount | Remarks |
|---|---|---|---|---|
| To balance cash. | 125-0-0. | Establishment charges | 192-0-0 | The sum stands as a debt against the Institution |
| To Municipal grant. | 300-0-0. | Subscriptions to papers and periodicals | 200-0-0 | |
| To Educational grant. | 40-0-0. | Purchase of Books | 198-8-0 | |
| To Charity Box. | 5-0-0. | Printing charges | 103-0-0 | |
| | | Charges incurred on account of hired furniture. | 23-4-0. | |
| | | | 72-8-0 | |
| | | Purchase of furniture | 25-0-0. | |
| | | Repairs and whitewashing &c. | 95-0-0. | |
| | | Stationery and Lighting &c. | 110-0-0. | |
| | | Building debt | | |
| Total Rs. | 470-0-0. | Total Rs. | 1009-4-0 | |
| | | Deduct Receipts | 470-0-0 | |
| | | Balance | * 539-4-0. | |

Statement B.

THE MANDIRAM.

General Summary of Cash from November 1891 to October 1892.

| Receipts | Amount | Expenditure | Amount | Remarks. |
|---|---|---|---|---|
| To Balance Cash | 125-0-0 | Feeding expenses | 577-4-0 | This sum stands as a debt against the Institution. |
| Value of the grain doles collected | 270-4-0 | Establishment | 102-8-0 | |
| Donations and Subscriptions | 197-8-0 | Temple charges Viz, Flowers, camphor, &c. | 18-0-0 | |
| | | | 34-0-0 | |
| | | Lighting Charges | 80-0-0 | |
| | | Purchase of vessels &c. | 25-0-0 | |
| | | Repairs and whitewashing | | |
| | | Miscellaneous Charges Viz Musicians processions and clothing to destitute Byragees &c. | 25-0-0 | |
| Total Rs. | 592-12-0. | Total Rs. | 861-12-0 | |
| | | Deduct Receipts | 592-12-0 | |
| | | Balance Rs. | * 269-0-0 | |

ರಾಣಿಯವರಿಂದ ನೆರವೇರಿತು. ಇದರಲ್ಲಿ ಲೇಟ್ ಶ್ರೀಮತಿ ಸಿಂಗಮ್ಮನವರ ಭಾವಚಿತ್ರ ಅನಾವರಣ ಮಾಡಿದರು. ಇದೇ ಸಂದರ್ಭದಲ್ಲಿ ಧನಸಹಾಯ ಹಾಗೂ ತುಂಬಾ ಆಸಕ್ತಿಯಿಂದ ಕಟ್ಟಡ ಮುಗಿಯಲು ಸಹಕರಿಸಿದ ದಿವಾನ ಶಿರೋಮಣಿ ಸರ್. ಟಿ. ಆನಂದರಾಯರು ಮತ್ತು ಅವರ ಧರ್ಮಪತ್ನಿ ಸುಂದರಬಾಯಿರವರನ್ನು ಈ ಸಂದರ್ಭದಲ್ಲಿ ಸ್ಮರಿಸಿದರು.[೨೩]

೧೯೩೫ರಲ್ಲಿ ದಿವಾನ್ ಅಮಿನ್ ಉಲ್ ಮುಲ್ಕ್ ಸರ್. ಮಿರ್ಜಾ ಎಂ. ಇಸ್ಮೆಲ್‌ರವರು ಕೀರ್ತಿಶೇಷರಾದ ಸ್ಥಾಪಕರ ಸ್ಮಾರಕೋತ್ಸವದ ಅಧ್ಯಕ್ಷತೆ ವಹಿಸಿದ್ದರು. ಇವರ ಭಾಷಣದಲ್ಲಿ "ನಮ್ಮ ಮೈಸೂರು ಸಂಸ್ಥಾನದಲ್ಲಿ ಇಂತಹ ಸಂಸ್ಥೆಯು ಮತ್ತಾವುದು ಇಲ್ಲದ ಕಾಲದಲ್ಲಿ ಸ್ಥಾಪಿಸಿದ ಮೊಟ್ಟ ಮೊದಲನೆಯದು, ಇದರಲ್ಲಿ ಒಂದು ವಿಶೇಷ ಗುಣವೇನೆಂದರೆ 'ದೇವತಾ ಸೇವೆ' ಮತ್ತು 'ಸಮಾಜ ಸೇವೆ'ಗಳೆರಡು ಒಂದೇ ಸ್ಥಳದಲ್ಲಿ ನಡೆಯುತ್ತಿವೆ. ಸ್ಥಾಪಕರ ಜನೋಪಕಾರಿ ಸೇವೆಯನ್ನು ಶ್ಲಾಘಿಸಿದರು. ಜೀವಿಸುವವರೆಗೂ ಅವಿಶ್ರಾಂತವಾಗಿ ದುಡಿದು ಅದರ ಅಭಿವೃದ್ಧಿಗೆ ಕೆಲಸ ಮಾಡಿದರು. ಹೀಗೆ ನಾನಾ ಧರ್ಮ ಕಾರ್ಯಗಳು ಒಂದೇ ಕಡೆ ನಡೆಯುವುದು ಅತಿ ವಿರಳ ಎಂಬುದಾಗಿ ಪ್ರಶಂಶಿಸಿದರು."[೨೪]

ಶ್ರೀಮತಿ ಸಿಂಗಮ್ಮನವರ ಬಹಳ ಹಿತೈಷಿಗಳಾಗಿದ್ದ ಶ್ರೀಮತಿ ಪಂಡಿತಾ ಎಂ. ಸುಂದರಮ್ಮನವರು, (ನಿವೃತ್ತ ಸಂಸ್ಕೃತ ಪಂಡಿತರು) ಈ ಮಂದಿರದಲ್ಲಿಯೇ ವಾಸವಾಗಿದ್ದು, ಬಾಲಕ ಬಾಲಕಿಯರ ಯೋಗಕ್ಷೇಮ ನೋಡಿಕೊಂಡು ಅವರ ನಿತ್ಯ ಕಾರ್ಯಗಳನ್ನು ಅತಿ ಶ್ರದ್ಧೆಯಿಂದ ನಿರ್ವಹಿಸುತ್ತಿದ್ದರು. ಇವರು ಸಮಿತಿಯ ಸದಸ್ಯರಾಗಿ, ಕಾರ್ಯದರ್ಶಿಗಳಾಗಿದ್ದರಲ್ಲದೆ, ಮಂದಿರಕ್ಕೆ ದಾನಿಗಳು ಸಹ ಆಗಿದ್ದರು.[೨೫]

ನಂತರ ಬಿ.ವಿ. ಅಯ್ಯಂಗಾರ್ ನಿವೃತ್ತ ಫಾರೆಸ್ಟ್ ಮುಖ್ಯ ಕನ್ಸರ್‌ವೇಟರ್‌ರವರು ಅಧ್ಯಕ್ಷರಾಗಿದ್ದರು.

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರವರು ಮುಂದಿನ ಅಧ್ಯಕ್ಷರಾಗಿ ಸಂಸ್ಥೆಯ ಕಾರ್ಯ ಕಲಾಪಗಳನ್ನು ದಕ್ಷತೆಯಿಂದ ನಡೆಯಿಸಿಕೊಂಡು ಬಂದರು. ಇವರ ಅವಧಿಯಲ್ಲಿ ಮಂದಿರದ ಆವರಣದಲ್ಲಿ ಅಂಗಡಿಗಳು, ವಾಚನಾಲಯದ ಕಟ್ಟಡದ ವಿಸ್ತರಣೆ ಕಾರ್ಯವು ನಡೆದು ಮಂದಿರದ ನಿಧಿಗೆ ಸುಮಾರು ರೂ. ೫೦,೦೦೦ ಶೇಖರಿಸಲು ಶ್ರಮಿಸಿದರು.[೨೬]

೧೯೮೮ರಲ್ಲಿ ಶತಮಾನೋತ್ಸವ ಆಚರಿಸುವ ಸಂದರ್ಭದಲ್ಲಿ ಶ್ರೀ ಸಿ. ರಾಜಗೋಪಾಲಚಾರ್‌ರವರು ಅಧ್ಯಕ್ಷರಾಗಿದ್ದರು. ಇವರು ೧೫ ವರ್ಷಗಳು ಕಾರ್ಯ ನಿರ್ವಾಹಕ ಸಮಿತಿಯಲ್ಲಿದ್ದು, ಮಂದಿರದ ಅಭಿವೃದ್ಧಿಗೆ ಬಹಳ ಆಸಕ್ತಿಯಿಂದ ಅನೇಕ ಸಹಕಾರ ಸಂಘ ಸಂಸ್ಥೆಗಳಲ್ಲಿ ಸಂಪರ್ಕವಿದ್ದು, ಗಣ್ಯರ ಸಮಾಜ ಸೇವಕರಲ್ಲಿ ಒಬ್ಬರಾಗಿದ್ದರು. ಇವರು ಮಂದಿರದ ನಿಧಿಗೆ ರೂ. ೫೦,೦೦೦ ಶೇಖರಿಸಿ ಒಟ್ಟು ಒಂದು ಲಕ್ಷ ಮೀರಿ ನಿಧಿಯನ್ನು ಕೂಡಿಸಿ ಕಾಪಾಡಿಕೊಂಡು ಬಂದಿದ್ದರು.[೨೭]

ಬೌರಿಂಗ್ ಬ್ರಿಟಿಷ್ ಕಮೀಷನರ್ ಆಡಳಿತದಲ್ಲಿದ್ದಾಗ ತನ್ನ ವರದಿಯಲ್ಲಿ ಅಂದಿನ ಬೆಂಗಳೂರಿನ ವಸ್ತು ಸ್ಥಿತಿ ದಾಖಲಿಸಿರುವುದು ತಿಳಿದುಬರುತ್ತದೆ. ಇಲ್ಲಿನ ವ್ಯಾಪಾರಿಗಳು ದುರಾಸೆಯವರಲ್ಲ ಎಂದು ಉಲ್ಲೇಖಿಸುತ್ತಾ "ಭಾರತದ ವ್ಯಾಪಾರಿಗಳು ಇತರ ದೇಶಗಳ ವ್ಯಾಪಾರಿಗಳಿಗಿಂತ ದುರಾಸೆಯವರು ಎಂದು ನನಗನಿಸದು. ಅವರು ಹಣ ಬಿಚ್ಚುವುದಿಲ್ಲವಾದರೂ ನಿಜವಾದ ಅವಶ್ಯಕತೆಯುಳ್ಳವರಿಗೆ ಅವರು ಧಾನ್ಯ ನೀಡುತ್ತಾರೆ ಹಾಗೂ ಹೆಚ್ಚು ಶ್ರೀಮಂತ ರಾಗಿರುವವರು ಪ್ರವಾಸಿಗಳಿಗೆ ತಂಗಲು ಛತ್ರಗಳನ್ನು ಸ್ಥಾಪಿಸಿ ಅಲ್ಲಿ ಊಟ ಇಕ್ಕುತ್ತಾರೆ ಹಾಗೂ ಮೇಲ್ಜಾತಿಯ ಪ್ರವಾಸಿಗಳಿಗೆ ಅಲ್ಲಿ 'ಪಡಿ' ಕೊಡುತ್ತಾರೆ."[೨೮] ಎಂದು ದಾಖಲಿಸಿದ್ದಾನೆ.

ಈಗ ಮುಜರಾಯಿ ಇಲಾಖೆಗೆ ಒಳಪಟ್ಟು ಅಲ್ಲಿರುವ ಕಟ್ಟಡಗಳು ಕಡಿಮೆ ದರದಲ್ಲಿ ಬಾಡಿಗೆಗೆ ಕೊಟ್ಟಿರುತ್ತಾರೆ. ಅನಾಥಾಲಯ, ವಿದ್ಯಾಮಂದಿರ, ವಾಚನಾಲಯ, ಗ್ರಂಥಭಂಡಾರ ಇರುವುದಿಲ್ಲ. ಸಂಸ್ಥೆಯವರು ಅಳಿದುಳಿದ ಗ್ರಂಥಗಳನ್ನು 'ಭಾರತೀಯ ಇತಿಹಾಸ ಸಂಶೋಧನೆ, ದಕ್ಷಿಣ ಪ್ರಾದೇಶಿಕ ಕೇಂದ್ರ (ICHR) ಲಾ ಕಾಲೇಜ್ ಆವರಣ ಸಂಖ್ಯೆ ೧, ಪ್ಯಾಲೆಸ್ ರಸ್ತೆ (ಮೈಸೂರು ಬ್ಯಾಂಕ್ ಹತ್ತಿರ) ಬೆಂಗಳೂರು-೯. ಇಲಾಖೆಗೆ ದಾನ ಮಾಡಿರುವುದು ದಾಖಲೆಯಿಂದ ತಿಳಿದುಬರುತ್ತದೆ.[೨೯]

ಶ್ರೀನಿವಾಸ ದೇವಸ್ಥಾನವಿದ್ದು, ಪೂಜೆ ಪುರಸ್ಕಾರಗಳು ಪ್ರತಿ ದಿವಸವು ನಡೆಯುತ್ತಿರುವುದನ್ನು ಇಂದಿಗೂ ಗಮನಿಸ ಬಹುದು.[೩೦]

## ಆಧಾರಸೂಚಿ


೧. File no. 191/1892-93 Mujrai.
೨. Century celebrations. 25-1-1988. ಪುಟ ೧೮. (ಸಂ.) ಕೆ.ವಿ. ವೆಂಕಟನರಸಿಂಹಯ್ಯ, ಬೆಂಗಳೂರು-೩.
೩. ಅದೇ., ಪುಟ ೨೭ ರಿಂದ ೭೫ರವರೆವಿಗೆ.
೪. ಅದೇ., ಪುಟ ೨೭ ಮತ್ತು ೨೮.
೫. Mujrai file no. 198.
೬ ಡಾ. ತುಳಸಿರಾಮನಾಯಕ್, **ಬೆಂಗಳೂರಿನ ಸಂಕ್ಷಿಪ್ತ ಇತಿಹಾಸ,** ಪುಟ ೯೦, ಬೆಂಗಳೂರು, ೨೦೧೦.


## ಇತರೆ ಗ್ರಂಥಗಳು


೧. Mujrai 149, dated 18-12-93.
೨. Century Celebrations 25-1-1988. ಸಂಪಾದಕರು : ಕೆ.ವಿ. ವೆಂಕಟನರಸಿಂಹಯ್ಯ.
೩. File no. 198/1894-95, Archieves, Vidhanasoudha.
೪. File no. 189/1894-95, Archieves, Vidhanasoudha.
೫. File no. 209/1897-98, Archieves, Vidhanasoudha.
೬ File no. 197/1894-95, Archieves, Vidhanasoudha.
೭. File no. 158/1899-1900, Archieves, Vidhanasoudha.
೮. ಮುನಿಸಿಪಾಲಿಟಿ, ಬೆಂಗಳೂರು, ದಾಖಲೆಗಳು.
೯. ICHR, Bangalore, Records.

ಡಾ. ಎಚ್.ಈ. ಬಸವರಾಜಪ್ಪ*

# ಶ್ರೀರಂಗಪಟ್ಟಣದ ಗಂಜಾಂನಲ್ಲಿದ್ದ ಕ್ರೈಸ್ತಮಿಷನರಿ

ಪ್ರಸ್ತುತ ಪ್ರಬಂಧದಲ್ಲಿ ಶ್ರೀರಂಗಪಟ್ಟಣದ ಗಂಜಾಂ ನಲ್ಲಿರುವ ಕ್ರೈಸ್ತಮಿಷನರಿ ಕುರಿತು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಕರ್ನಾಟಕದಲ್ಲಿ ಕ್ರಿ.ಶ. ೧೫೦೦ರ ನಂತರ ಕ್ರೈಸ್ತ ಧರ್ಮ ಬೆಳೆಯಿತು. ಆದರೆ ಅದು ಪಶ್ಚಿಮ ಕರಾವಳಿಯ ಸಣ್ಣ ಸಣ್ಣ ಪ್ರದೇಶಗಳಿಗೆ ಅದು ನಗರ ಕೇಂದ್ರವಾಗಿ ಸೀಮಿತವಾಗಿತ್ತು. ೧೭ನೇ ಶತಮಾನ ನಂತರ ಕ್ರೈಸ್ತ ಧರ್ಮವು ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾದ ಹಲವು ಆಯಾಮಗಳನ್ನು ಹೊಂದಿತ್ತು. ಕ್ರಿ.ಶ. ೧೭೯೯ರಲ್ಲಿ ಟೀಪು ಸುಲ್ತಾನನ ಪತನದ ನಂತರ ಈ ಭಾಗದಲ್ಲಿ ಕ್ರೈಸ್ತರ ಸಂಖ್ಯೆ ಬೆಳೆಯಿತು. ಈ ಬಗೆಗೆ ದಕ್ಷಿಣ ಕನ್ನಡದ ಕಲೆಕ್ಟರ್ ಆಗಿ ಬಂದ ಸರ್. ಥಾಮಸ್ ಮುನ್ರೋ ಕೆಲವು ಲೇಖನಗಳನ್ನು ಬರೆದಿದ್ದಾನೆ. ಅಲ್ಲದೆ ಬಿಕ್ಕಟ್ಟಿನ ಸನ್ನಿವೇಶದಲ್ಲಿ ಶ್ರೀರಂಗಪಟ್ಟಣಕ್ಕೆ ವಲಸೆ ಬಂದ ಕುಟುಂಬಗಳಿಗೆ ಸೇರಿದ ಕ್ರೈಸ್ತರ ಪತ್ರ ವ್ಯವಹಾರಗಳು ಕೂಡ ಇಲ್ಲಿ ನೆರವಾಗುತ್ತವೆ ಕ್ರೈಸ್ತರೆಲ್ಲರೂ ಶ್ರೀರಂಗಪಟ್ಟಣಕ್ಕೆ ವಲಸೆ ಹೋಗಬೇಕಾಯಿತು. ಎಂದು ಥಾಮಸ್ ಮುನ್ರೋ ಹೇಳುವುದಿಲ್ಲ. ಅವರ ಒಂದು ಭಾಗದಷ್ಟು ಜನರು ಮಾತ್ರ ಬಿಟ್ಟುಹೋದರು ಎಂದು ಹೇಳುತ್ತಾನೆ. ಆಗ ೮೦,೦೦೦ ಜನ ಕ್ರೈಸ್ತರು ವಲಸೆ ಹೋಗಬೇಕಾಯಿತು. ಕರ್ನಲ್ ವಿಲ್ಕ್ಸ್ ೩೦,೦೦೦ ಕ್ರೈಸ್ತರು ಇದ್ದರು ಎನ್ನುತ್ತಾನೆ. ಇಲ್ಲಿಗೆ ವಲಸೆ ಬಂದ ಕ್ರೈಸ್ತರು ಸ್ಥಳೀಯ ಜನರೊಂದಿಗೆ ಸಂಪರ್ಕವನ್ನು ಸ್ಥಾಪಿಸಿಕೊಳ್ಳುವ ಸಲುವಾಗಿ ಇಲ್ಲಿನ ಜನರೊಂದಿಗೆ ಕೆಲವು ಅಂಶಗಳನ್ನು ಪರಸ್ಪರ ಎರವಲು ಪಡೆದುಕೊಂಡರು.

ಶ್ರೀರಂಗಪಟ್ಟಣದ ಕ್ರೈಸ್ತರು ಅತ್ಯುತ್ತಮ ಬೇಸಾಯಗಾರರೆಂದು ತಿಳಿದುಬರುತ್ತದೆ. ಕ್ರೈಸ್ತ ಗೇಣಿದಾರನು ಭೂಮಾಲೀಕನಿಂದ ಖಾಯಂ ಆಗಿ ಭೂಮಿಯನ್ನು ಗುತ್ತಿಗೆ ಪಡೆದು ಕೃಷಿ ಮಾಡುತ್ತಿದ್ದರು. ಹೀಗಾಗಿ ಅಪಾರ ಸಂಖ್ಯೆಯ ಕ್ರೈಸ್ತರಿಗೆ ಆರಾಧನೆ ಮಾಡಲು, ವಿಶೇಷವಾಗಿ ಸಾಮೂಹಿಕ ಪ್ರಾರ್ಥನೆ ಪ್ರವಚನಗಳನ್ನು, ಸಂಸ್ಕಾರಗಳನ್ನು ನಡೆಸಲು ಅನುಕೂಲವಾಗುವಂತೆ ಈ ಚರ್ಚ್ ನಿರ್ಮಿಸಲಾಗಿತ್ತು. ಮೈಸೂರು ಸಂಸ್ಥಾನದಲ್ಲಿ ನಾಲ್ಕನೆಯ ಮೈಸೂರು ಯುದ್ಧ ನಂತರ ಕ್ರೈಸ್ತ ಧರ್ಮದ ಪ್ರಚಾರಕ್ಕೆಂದು ಭಾರತದ ಗೌರ್ನರರಾಗಿದ್ದ ಲಾರ್ಡ್ ವೆಲ್ಲಸ್ಲಿಯೇ ಶ್ರೀರಂಗಪಟ್ಟಣಕ್ಕೆ ಅಬ್ಬೆ ದುಬಾಯಿಸರನ್ನು ಕರೆಸಿದನು. ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ೧೭೯೯ರಲ್ಲಿ ಚರ್ಚನ್ನು ಸ್ಥಾಪಿಸಿದನು.

ಕ್ರೈಸ್ತ ಮಿಷನರಿ ಸೇವೆ ಎಂದರೆ ಅದು ಕೇವಲ ಬೈಬಲ್ ಬೋಧನೆ ಮಾತ್ರವಲ್ಲ, ಅದಕ್ಕಿಂತ ಭಿನ್ನವಾದ ಜವಾಬ್ದಾರಿ ಇದೆ ಎಂಬುದನ್ನು ಅರಿತ ಕ್ರೈಸ್ತ ಮಿಷನರಿಯು ಹಲವಾರು ಸಮುದಾಯಮುಖಿ ಕಾರ್ಯಕ್ರಮವನ್ನು ಕೈಗೊಂಡಿತ್ತು. ಅಬ್ಬೆ ದುಬಾಯಿಸ್ ಅವರು ೧೭೯೯ ರಿಂದ ೧೮೨೩ರ ಅವಧಿಯಲ್ಲಿ ಒಬ್ಬ ಚರ್ಚ್ ಪಾದ್ರಿಯಾಗಿ ಸೇವೆ ಸಲ್ಲಿಸಿದ್ದರು. ಅವರು ಸ್ಥಳೀಯ ಜನರ ವಿಶ್ವಾಸವನ್ನು ಗಳಿಸಲು ಅವರಂತೆಯೇ ವೇಷ-ಭೂಷಣ ಧರಿಸಿ ಅವರ ಸಂಸ್ಕೃತಿಯನ್ನು ಹಾಗೂ ಜೀವನ ಶೈಲಿಯನ್ನು ಅನುಕರಿಸಲಾರಂಭಿಸಿದರು. ಈ ಮೂಲಕ ಚರ್ಚ್ ಹಲವು ಕಾರ್ಯಕ್ರಮಗಳನ್ನು ರೂಪಿಸಿತ್ತು. ಮೈಸೂರು ಸಂಸ್ಥಾನದ ಗ್ರಾಮೀಣ ಪ್ರದೇಶಗಳಲ್ಲಿ ಹಿಂದುಳಿದ ಜನಾಂಗ ಹಾಗೂ ಬಡ ಕೃಷಿಕರ ಅಭಿವೃದ್ಧಿಗಾಗಿ ಹಲವು ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ಹಾಸನ ಜಿಲ್ಲೆಯ ಶೆಟ್ಟಿಹಳ್ಳಿ ಗ್ರಾಮದಲ್ಲಿ ಪ್ರಥಮ ಬಾರಿಗೆ ಸಹಕಾರ ಕೃಷಿಯನ್ನು ಪ್ರಾಯೋಗಿಕವಾಗಿ ಜಾರಿಗೆ ತಂದರು. ಈ ಮಿಷನರಿ ಒಂದು ವೈದ್ಯಕೀಯ ಕೇಂದ್ರವಾಗಿ ಕಾರ್ಯನಿರ್ವಹಿಸಿತ್ತು.

ಮೈಸೂರು ಸಂಸ್ಥಾನದಲ್ಲಿ ಸಿಡುಬು ರೋಗ ನಿರ್ಮೂಲನೆಗೆ ಮೊದಲ ಬಾರಿಗೆ ಚುಚ್ಚುಮದ್ದನ್ನು ಪರಿಚಯಿಸಿದರು. ಈ ಭಾಗದಲ್ಲಿಯ ಜನರಲ್ಲಿ ಮೌಢ್ಯಗಳಿಂದ ತುಂಬಿದ್ದ ಆಗಿನ ಕಾಲದಲ್ಲೇ ೧೮ ತಿಂಗಳಲ್ಲೇ ೨೫,೪೩೨ ಜನರಿಗೆ ಚುಚ್ಚುಮದ್ದು ಹಾಕಿಸಿ ದಾಖಲೆ ನಿರ್ಮಿಸಿತು. ಚುಚ್ಚುಮದ್ದು ಹಾಕಿಸುವ ಕಾರ್ಯಕ್ರಮವನ್ನು ಉದ್ಘಾಟಿಸಿ, ಮೊದಲ ಚುಚುಮದ್ದು ಹಾಕಿಸಿಕೊಂಡವರು ಅಂದಿನ ಮೈಸೂರು ಮಹಾರಾಜರಾದ ಮುಮ್ಮಡಿ ಕೃಷ್ಣರಾಜ ಒಡೆಯರು. ಅನೇಕರು ನಮ್ಮ ದೇಶದ ಇತಿಹಾಸ, ಸಂಸ್ಕೃತಿ ಹಾಗೂ ಸಾಹಿತ್ಯದ ಅಧ್ಯಯನ ಹಾಗೂ ಸಂಶೋಧನೆಯಲ್ಲಿ ತಮ್ಮ ಜೀವನವನ್ನು ಮುಡುಪಾಗಿಟ್ಟರು. ಅಂತಹ

* ಬಿ.ಕೆ. ಕಾಲೇಜು, ಚಿಕ್ಕೋಡಿ.

ಮಹನೀಯರಲ್ಲಿ ರೆವರೆಂಡ್ ಫಾದರ್ ಅಬ್ಬೆ ಜೀನ್ ಅಂಟೋಣಿ ದುಬಾಯಿಸ್ ಒಬ್ಬರು. ಭಾರತದಲ್ಲಿ ಮೂರು ದಶಕಗಳ ಕಾಲ ನೆಲಸಿದ್ದ ಇವರು ಇಲ್ಲಿಯ ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅಪಾರ ವಾಗಿದೆ. ದುಬಾಯಿಸ್ ಅವರು ಫ್ರಾನ್ಸ್ ದೇಶದ ವಿವಿಯರ್ಸ್‌ನಲ್ಲಿ ೧೭೬೬ರಲ್ಲಿ ಜನಿಸಿದರು. ತಮ್ಮ ೨೬ನೇ ವಯಸ್ಸಿನಲ್ಲಿ ಕ್ರೈಸ್ತ ಪಾದ್ರಿಯಾಗಿ ದೀಕ್ಷೆ ಪಡೆದ ಅವರು ಅದೇ ವರ್ಷ ಭಾರತಕ್ಕೆ ಆಗಮಿಸಿ, ಪಾಂಡಿಚೇರಿಯ ಕೋರಮಂಡಲ್ ಮಿಷನ್ನಲ್ಲಿ ಮಿಷನರಿಯಾಗಿ ಸೇರಿದರು. ನಂತರ ಸೇಲಂ ಜಿಲ್ಲೆಯ ಬಾರಾಮಹಲ್‌ನಲ್ಲಿ ಪಾದ್ರಿಯಾಗಿ ನೇಮಕಗೊಂಡರು.

ದುಬಾಯಿಸರು ಬಾರಾಮಹಲನ್ನಲ್ಲಿದ್ದಾಗಲೇ ಮೈಸೂರು ಪ್ರಾಂತ್ಯದ ಕ್ರೈಸ್ತರೊಂದಿಗೆ ವಿಶ್ವಾಸ ಗಳಿಸಿದ್ದರು. ಶ್ರೀರಂಗಪಟ್ಟಣದ ಚರ್ಚಿನ ಪಾದ್ರಿಯಾಗಿ ನೇಮಕಗೊಂಡ ನಂತರ ಒಬ್ಬ ಹಿಂದು ರೈತನಂತೆ ಕಾಣಿಸುತ್ತಿದ್ದ ಅವರು ಹಿಂದುಗಳ ಮನೆಯಲ್ಲಿ ಉಳಿದು ಆಹಾರ ಸ್ವೀಕರಿಸುತ್ತಿದ್ದರು. ಅದಕ್ಕಾಗಿ ಮಾಂಸಹಾರ ತ್ಯಜಿಸಿ ಸಸ್ಯಾಹಾರಿಯಾದರು. ಹೀಗಾಗಿ ಸಂಪ್ರದಾಯಸ್ಥ ಬ್ರಾಹ್ಮಣರೂ ತಮ್ಮ ಮನೆಗಳಿಗೆ ಬರಮಾಡಿಕೊಳ್ಳುತ್ತಿದ್ದರು. ಹಿಂದೂ ಜನಾಂಗದವರ ಆಚಾರ-ವಿಚಾರ ಸಂಸ್ಕೃತಿ ಹಾಗೂ ಭಾಷೆಯನ್ನು ಅಧ್ಯಯನ ಮಾಡಿ ಮಾಹಿತಿಗಳನ್ನು ಸಂಗ್ರಹಿಸಿ ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ಅವರು ಬರೆದ ಹಿಂದೂ ಮ್ಯಾನರ್ಸ್ ಕಸ್ಟಮ್ಸ್ ಅಂಡ್ ಸೆರಮಾನೀಸ್ ಈ ಮಹತ್ವದ ಗ್ರಂಥ ಭಾರತ ಹಾಗೂ ಯುರೋಪಿನ ಯುವ ಅಧಿಕಾರಿಗಳಿಗೆ ಹಿಂದೂ ಸಮಾಜದ ಬಗ್ಗೆ ತಿಳಿದುಕೊಂಡು ಆಡಳಿತ ವ್ಯವಹಾರ ನಡೆಸಲು ಅಪರೂಪದ ಗ್ರಂಥವಾಯಿತು.

ಅಬ್ಬೆ ದುಬಾಯಿಸರು ಪ್ರಾರಂಭದಲ್ಲಿ ತಮ್ಮ ಕೃತಿಯನ್ನು ಪುಸ್ತಕ ರೂಪದಲ್ಲಿ ತರುವ ಯಾವುದೇ ಉದ್ದೇಶ ಹೊಂದಿರಲಿಲ್ಲ. ಇದೇ ಕಾಲಕ್ಕೆ ಈಸ್ಟ್ ಇಂಡಿಯಾ ಕಂಪೆನಿಯ ಇತಿಹಾಸ ತಜ್ಞರು ಭಾರತೀಯ ಸಮಾಜದ ಬಗ್ಗೆ ದಾಖಲೆಗಳಿದ್ದರೆ ಕಳುಹಿಸಿಕೊಡುವಂತೆ ಪತ್ರಿಕೆಗಳ ಮೂಲಕ ಕರೆ ನೀಡಿದ್ದರು. ಫ್ರೆಂಚ್ ಭಾಷೆಯಲ್ಲಿ ಬರೆದಿದ್ದ ಹಸ್ತಪ್ರತಿಯನ್ನು ದುಬಾಯಿಸ್ ಮೇಜರ್ ವಿಲ್ಕ್ಸ್‌ಗೆ ಒಪ್ಪಿಸಿದರು. ಲಾರ್ಡ್ ವಿಲಿಯಂ ಬೆಂಟಿಂಕ್ ಅದಕ್ಕೆ ರೂ. ೮೦೦೦ ಗೌರವಧನ ನೀಡಿ ಕಂಪೆನಿಯ ಪರವಾಗಿ ಕೊಂಡು ಕೊಂಡರು. ನಂತರ ಭಾಷಾಂತರ ಹಾಗೂ ಪ್ರಕಟಣೆಗಾಗಿ ಲಂಡನ್‌ಗೆ ಕಳುಹಿಸಿದರು. ಈ ಗ್ರಂಥ ಫ್ರಾನ್ಸ್‌ನಲ್ಲಿ ಕೆಲವು ಕಾಲ ಪಠ್ಯಪುಸ್ತಕವಾಗಿತ್ತು. ಈ ಪುಸ್ತಕದ ಹಸ್ತಪ್ರತಿಯನ್ನು ಲಂಡನ್ ಇಂಡಿಯಾ ಹೌಸ್ ಲೈಬ್ರರಿಯಲ್ಲಿ ಈಗಲೂ ನೋಡಬಹುದಾಗಿದೆ. ಈ ಪುಸ್ತಕವನ್ನು ಈಸ್ಟ್ ಇಂಡಿಯಾ ಕಂಪನಿಯ ಅನುಮತಿಯ ಮೇರೆಗೆ ಹೆನ್ರಿ ಕೆ. ಬ್ಯೂಚರ್ ೧೯೦೬ರಲ್ಲಿ ಪ್ರಥಮ ಬಾರಿಗೆ ಪ್ರಕಟಿಸಿದರು. ಇದರ ಪ್ರಕಟನೆಯ ಮೂಲ ಉದ್ದೇಶ ಭಾರತೀಯ ಸಾಮಾಜಿಕ ಚರಿತ್ರೆಯನ್ನು ವಸಾಹತು ಆಡಳಿತದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವುದಾಗಿತ್ತು. ನಂತರ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ಸಿನಿಂದ ೧೯೭೨ರಲ್ಲಿ ಇದರ ಮೊದಲ ಪುನರ್ ಮುದ್ರಣವಾಯಿತು. ಒಟ್ಟು ೭೨೨ ಪುಟಗಳ ಈ ಪುಸ್ತಕದಲ್ಲಿ ೫೪ ಅಧ್ಯಾಯಗಳನ್ನು ಮೂರು ಭಾಗವಾಗಿ ವಿಂಗಡಿಸಿ ಭಾರತೀಯ ಸಮಾಜವನ್ನು ಅಧ್ಯಯನದ ಚೌಕಟ್ಟಿಗೆ ಒಳಪಡಿಸಲಾಗಿದೆ. ಭಾರತದಲ್ಲಿ ೩೧ ವರ್ಷಗಳ ಸುದೀರ್ಘ ಸೇವೆಯ ನಂತರ ಸ್ವದೇಶಕ್ಕೆ ಮರಳಿದರು. ೧೮೨೩ರಲ್ಲಿ ದುಬಾಯಿಸ್ ಸೇವೆಯನ್ನು ಮನ್ನಣೆ ಮಾಡಿದ ಈಸ್ಟ್ ಇಂಡಿಯಾ ಕಂಪನಿ ಪ್ಯಾರಿಸ್‌ಗೆ ಹಿಂದಿರುಗಲು ಪ್ರಯಾಣ ಭತ್ಯ, ವಿಶೇಷ ಪಿಂಚಣಿ ಸೌಲಭ್ಯ ಮತ್ತು ವಿಶ್ವವಿದ್ಯಾಲಯದ ಡಾಕ್ಟರೇಟ್ ಪದವಿ ನೀಡಿ ಗೌರವಿಸಿತ್ತು. ತಾಯ್ನಾಡಿಗೆ ಮರಳಿದ ನಂತರವೂ ದುಬಾಯಿಸರು ಭಾರತದ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಂಬಂಧಿಸಿದಂತೆ ತಮ್ಮ ಅಧ್ಯಯನ ಹಾಗೂ ಸಂಶೋಧನೆಯನ್ನು ಮುಂದುವರೆಸಿದರು. ೧೮೪೮ರಲ್ಲಿ ೮೩ನೇ ವಯಸ್ಸಿನಲ್ಲಿ ಅವರು ನಿಧನರಾದರು.

ಅಬ್ಬೆ ದುಬಾಯಿಸರು ಕಟ್ಟಿಸಿದ ಚರ್ಚ್ ಹಾಗೂ ಅವರ ವಾಸ ಮಾಡಿದ ನಾಡಹೆಂಚಿನ ಮನೆಯನ್ನು ಶ್ರೀರಂಗಪಟ್ಟಣದ ಗಂಜಾಂನಲ್ಲಿ ಈಗಲೂ ಕಾಣಬಹುದು. ಅಬ್ಬೆ ದುಬಾಯಿಸರು ಪ್ರಾರಂಭಿಸಿದ ಪ್ರಾಥಮಿಕ ಶಾಲೆ ಈಗ ಪ್ರೌಢಶಾಲೆಯಾಗಿದೆ. ಇದರಲ್ಲಿ ದುಬಾಯಿಸರು ಧರಿಸಿದ ಉಡುಪುಗಳು, ಬರೆದ ಪುಸ್ತಕಗಳು ಹಸ್ತಪ್ರತಿಗಳು ಅವರು ಬಳಸಿದ ಗಡಿಯಾರ ಹಾಗೂ ಇತರ ವಸ್ತುಗಳನ್ನು ಪ್ರದರ್ಶನಕ್ಕಿಡಲಾಗಿದೆ. ಈ ವಸ್ತುಸಂಗ್ರಹಾಲಯ ಇಲ್ಲಿಗೆ ಆಗಮಿಸುವ ಪ್ರವಾಸಿಗರಿಗೆ ನೂತನ ಆಕರ್ಷಣೆಯಾಗಿದೆ. ಈ ಕ್ರೈಸ್ತಮಿಷನರಿ ಮೂಲಕ ದುಬಾಯಿಸ್ ಹಿಂದೂ ಸಮಾಜದ ಕ್ರಮಬದ್ಧವಾದ ಸಂಪ್ರದಾಯ ಪದ್ಧತಿ ಸಂಸ್ಕಾರ ಮತ್ತು ಧಾರ್ಮಿಕ ವ್ಯವಸ್ಥೆಯನ್ನು ಸಪ್ರಮಾಣವಾಗಿ ದಾಖಲಿಸಲು ಪ್ರಯತ್ನಿಸಿದ್ದಾನೆ. ದುಬಾಯಿಸ್ ವಿಶಿಷ್ಟತೆ ಎಂದರೆ, ಹಿಂದೂ ಧರ್ಮದ ವರ್ಣಾಶ್ರಮ ಪದ್ಧತಿಯನ್ನು ಸರಳ ವ್ಯಾಖ್ಯಾನವನ್ನು ಮಾಡಿರುವುದು. ಈ ಶತಮಾನದ ಕೊನೆ ವೇಳೆಗೆ ಹಿಂದೂ ಸಮಾಜವು ಸಂಪೂರ್ಣವಾಗಿ ವರ್ಣ ವ್ಯವಸ್ಥೆಯಿಂದ ಕಳಚಿಕೊಳ್ಳುತ್ತಿರುವುದನ್ನು ಆತ ಗಮನಿಸಿದ್ದಾನೆ. ಉದಾಹರಣೆಗೆ ಪಾಂಚಾಲರು ಎಂಬ ಐದು ಬಗೆಯ ಕುಶಲಕರ್ಮಿ ಸಮುದಾಯವು ಹೇಗೆ ಒಂದು ಸ್ವತಂತ್ರ್ಯ ವಿಶಿಷ್ಟ ಗುಂಪಾಗಿ ತಮ್ಮದೆ ಧಾರ್ಮಿಕ ಕಾರ್ಯಾಚರಣೆಗಳನ್ನು ಬೆಳಸಿಕೊಂಡು ಬ್ರಾಹ್ಮಣ

ಪುರೋಹಿತರ ನೆರವು ಕೋರದೆ ಬೆಳೆಯಿತು. ಹಾಗೆಯೇ ಹಿಂದೂ ಸಮಾಜದಲ್ಲಿ ಅನೇಕ ಗುಂಪುಗಳು ಸಂಪೂರ್ಣವಾಗಿ ಸ್ಥಳೀಯವಾದ ಲಕ್ಷಣ ಹೊಂದಿರುವುದು ದುಬಾಯಿಸಗೆ ಎದ್ದು ಕಾಣುತ್ತದೆ. ಸೋಮವಾರದ ದಿನ ಎತ್ತುಗಳನ್ನು ಬೇಸಾಯಕ್ಕೆ ಹೂಡದೆ ರಜೆ ದಿನ ಮಾಡಿ ಪೂಜಿಸುವುದನ್ನು ಸಂಪೂರ್ಣವಾಗಿ ಸ್ಥಳೀಯ ಸಂಪ್ರದಾಯವೆಂದು ಗುರುತಿಸುತ್ತಾನೆ.

೧೯ನೇ ಶತಮಾನದ ಸಮಾಜವನ್ನು ಕುರಿತು ಬರೆಯುತ್ತಾ ಮೈಸೂರು ಪ್ರಾಂತ್ಯದಲ್ಲಿ ನೂರರಲ್ಲಿ ತೊಂಬತ್ತರಷ್ಟು ಜನ ಕೃಷಿಯಾಧಾರಿತ ಜೀವನವನ್ನು ನಡೆಸುತ್ತಿದ್ದಾರೆ. ಇಲ್ಲಿ ಸಾಕಷ್ಟು ಕೃಷಿ ಭೂಮಿ ಇದೆ. ಇಲ್ಲಿನ ರೈತರು ಎರಡು, ಮೂರು ನಾಲ್ಕು ನೇಗಿಲುಗಳನ್ನು ಹೊಂದಿದ್ದಾರೆ. ಈ ಶೂದ್ರ ವರ್ಣದಲ್ಲಿ ಕೆಲವರು ಸಾಕಷ್ಟು ಶ್ರೀಮಂತರಾಗಿದ್ದಾರೆ. ಇವರು ವಾಸ ಮಾಡುವ ಹಳ್ಳಿಗಳಲ್ಲಿ ಶೂದ್ರರೆ ಗ್ರಾಮಗಳ ಮುಖಂಡರಾಗಿದ್ದಾರೆ. ಇವರು ಕೆಲವು ಸಂದರ್ಭದಲ್ಲಿ ಅಧಿಕ ಪ್ರಮಾಣದ ಸರಕಾರಿ ಭೂಹಿಡುವಳಿಯ ಒಡೆತನವನ್ನು ಹೊಂದಿದ್ದಾರೆ. ಇಂತಹ ಮುಖಂಡರುಗಳು ಮುಖ್ಯ ಕಾರ್ಯವು ಕಂದಾಯ ಸಂಗ್ರಹಿಸುವದಾಗಿತ್ತು; ಚಿಕ್ಕ ಪುಟ್ಟ ನ್ಯಾಯ ತೀರ್ಮಾನ ಮಾಡುವುದಾಗಿತ್ತು. ಇಡೀ ಗ್ರಾಮಗಳು ಇವರಿಗೆ ನಂಬಿಕೆಯಿಂದ ಇರುತ್ತಿದ್ದರು ಎಂಬುದನ್ನು ಗುರುತಿಸಿದ್ದಾನೆ. ಈ ಮೂಲಕ ಚರ್ಚ್ ಒಂದು ಧಾರ್ಮಿಕ ಸಂಸ್ಥೆಯಾಗಿ ಉಳಿಯದೆ, ಸಮುದಾಯಿಕ ಕಾರ್ಯದ ಕಡೆ ಗಮನಹರಿಸುವಂತೆ ಮಾಡಿದ್ದು, ದುಬಾಯಿಸ್ ಅವರ ಬಹುಮುಖ ಸಾಧನೆಯಾಗಿದೆ.

## ಆಧಾರಸೂಚಿ


೧. ಆನಂತಪ್ಪ, **ಶ್ರೀರಂಗಪಟ್ಟಣ ತಾಲೂಕು ಮತ್ತು ಸುತ್ತಮುತ್ತಲಲ್ಲಿ ಕ್ರೈಸ್ತ ಧರ್ಮದ ಉಗಮ,** (೧೬೪೮–೧೮೦೦), ಬೆಂಗಳೂರು, ೧೯೯೪.

೨. ಪ್ರಭು ದಯಾನಂದ, **ಮೈಸೂರು ಸಂಸ್ಥಾನದ ಕ್ರೈಸ್ತರ ಇತಿಹಾಸ,** ಮೈಸೂರು, ೧೯೯೪.

೩. ಮೈಸೂರು ಗ್ಯಾಸೆಟಿಯರ್, (ಸಂ.) ಹಯವದನರಾವ್, ಬೆಂಗಳೂರು, ೧೯೩೦.

೪. *ಅಬ್ಬೆ ದುಬಾಯಿಸರು, ಹಿಂದೂ ಮ್ಯಾನರ್ಸ್, ಕಸ್ಟಮ್ಸ್ ಅಂಡ್ ಸೆರಮೂನೀಸ್, ಆಕ್ಸ್‌ಫರ್ಡ್ ಯೂನಿವರ್ಸಿಟಿ, ಇಂಗ್ಲೆಂಡ್, ೧೯೭೨.*

ಹೆಚ್. ಕೃಷ್ಣೇಗೌಡ*

# ಗಾಂಧೀಜಿ ತತ್ವಾಚರಣೆಯಲ್ಲಿ ಕೆಂಗೇರಿ ಗುರುಕುಲಾಶ್ರಮ

ದೇಶದ ಸ್ವಾತಂತ್ರ್ಯ ಚಳುವಳಿ ಹಾಗೂ ಗಾಂಧೀಜಿಯವರ ತತ್ವ ಸಿದ್ಧಾಂತ, ಸತ್ಯಾಗ್ರಹ ಮುಂತಾದ ವಿನೂತನ ಆಚರಣೆಗಳು ದೇಶವಾಸಿಗರ ಮೇಲೆ ವಿಶೇಷ ಪ್ರಭಾವ ಬೀರಿರುವುದು ಈಗ ಇತಿಹಾಸ. ಈ ಹಿನ್ನೆಲೆಯಲ್ಲಿ ಕರ್ನಾಟಕದಾದ್ಯಂತ ಅನೇಕ ಸೇವಾ ಸಂಸ್ಥೆಗಳು ಶೈಕ್ಷಣಿಕ ಸಾಮಾಜಿಕ ಕೇಂದ್ರಗಳು ಹುಟ್ಟಿಕೊಂಡು, ರಾಷ್ಟ್ರೀಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡು, ದೇಶ ಸೇವೆಗೆ ಮುಂದಾಗಿ, ಇಂದಿಗೂ ಸೇವಾ ಚಟುವಟಿಕೆಗಳನ್ನು ಮುಂದುವರಿಸುತ್ತಿವೆ. ಅಂತಹವುಗಳಲ್ಲಿ ಬೆಂಗಳೂರಿನ ನೆರಳಿನಲ್ಲಿಯೇ ಇರುವ ಕೆಂಗೇರಿ ಗುರುಕುಲಾಶ್ರಮವು ಒಂದು. ಇಲ್ಲಿ ನಡೆದಿರುವ ಹಲವು ರಚನಾತ್ಮಕ ಕಾರ್ಯಗಳು, ಮಹತ್ವವೆನಿಸಿವೆ.

ಕೆಂಗೇರಿ ಬೆಂಗಳೂರಿನ ಪಶ್ಚಿಮ ಭಾಗದಲ್ಲಿದ್ದು, ಇಲ್ಲಿನ ಬೆಂಗಳೂರು–ಮೈಸೂರು ಹೆದ್ದಾರಿಯಿಂದ ಎಡಕ್ಕೆ ೧ ಕಿ.ಮೀ. ದೂರದಲ್ಲಿ, ವೃಷಭಾವತಿ ನದಿ ಎಡಭಾಗದ ಸರ್ವೆ ನಂ. ೩೯/೧ರಲ್ಲಿ ಆಶ್ರಮ ಇತ್ತು.[೧] ಕೆಂಗೇರಿ ಬ್ರಹ್ಮಚಾರಿ ಎಂದೇ ಪ್ರಸಿದ್ಧರಾಗಿದ್ದ ರಾಮಚಂದ್ರನ್ ಎಂಬುವವರಿಂದ ೧೯೨೮ರ ಜುಲೈನಲ್ಲಿ ಕೆಂಗೇರಿ ಗುರುಕುಲಾಶ್ರಮ ಸ್ಥಾಪನೆಯಾಯಿತು.[೨] ಈಗ ಗುರುಕುಲ ವಿದ್ಯಾಪೀಠ ಎಂದು ಕರೆಯಲ್ಪಡುತ್ತಿದೆ. ರಾಮಚಂದ್ರನ್ ಮೊದಲಿಗೆ ಹರಿದ್ವಾರದಲ್ಲಿನ ಗುರುಕುಲಾಶ್ರಮದ ಸ್ವಾಮಿ ಶ್ರದ್ಧಾನಂದರ ಶಿಷ್ಯರಾಗಿದ್ದರು. ಕೆಂಗೇರಿಯಲ್ಲಿ ಆಶ್ರಮ ಸ್ಥಾಪಿಸಿ ಅದರ ಕಾರ್ಯದರ್ಶಿಯಾಗಿ, ಬೆಂಗಳೂರಿನ ಅನೇಕ ಸೇವಾ ಕೇಂದ್ರಗಳ ಸಕ್ರಿಯ ಕಾರ್ಯಕರ್ತರಾಗಿ ಅಸ್ಪೃಶ್ಯತೆ ನಿವಾರಣೆಗೆ ಅಹರ್ನಿಶಿ ಶ್ರಮಿಸಿದರು. ಆಶ್ರಮದಲ್ಲಿ ವಿಶ್ವಾನಂದರು, ಬೆಂಗಳೂರಿನ ಪ್ರಿಯವ್ರತ, ಕೆ. ಗುರುದತ್, ಗಂಜಂಬಾಳ್ ರಾಮಲಿಂಗಂ,[೩] ಸುಧಾಕರ, ವೆಂಕಟೇಶ, ಚನ್ನಪಟ್ಟಣ ಅಬ್ಬೂರುಗೋಪಣ್ಣ, ವಿ. ವೆಂಕಟಪ್ಪ, ಹೆಚ್.ಕೆ. ವೀರಣ್ಣಗೌಡ, ಮಾಗಡಿ ಹತಿ ಆದಿರಾಜಯ್ಯ, ಕೂದೂರಿನ ಶ್ರೀಕಂಠಾಚಾರ್, ಬಿಸ್ಕೂರಿನ ವನಶಾಮಯ್ಯ, ತಟ್ಟೆಕೆರೆ ಮಾರಣ್ಣ, ಬಿಡದಿ ರುದ್ರರಾಜೆ ಅರಸ್, ರಾಮಯ್ಯ, ಬೈರಮಂಗಲದ ಅಂಕುಗೌಡ, ಕಾನಕಾನಹಳ್ಳಿ, ಕೇಶವಯ್ಯ, ಲಿಂಗೇಗೌಡ, ಕೆಂಗೇರಿ ಪಾರ್ಥನಾರಾಯಣ ಪಂಡಿತ್ ಮುಂತಾದವರು ಕಾರ್ಯಕರ್ತರಾಗಿ ಆಶ್ರಮದೊಡನೆ ನಿಕಟ ಸಂಬಂಧ ಹೊಂದಿದ್ದರು. ೧೯೩೪, ೧೯೩೬ ರಲ್ಲಿ ಗಾಂಧೀ ಆಶ್ರಮಕ್ಕೆ ಭೇಟಿ ನೀಡಿದಾಗ ರಾಮಚಂದ್ರನ್ ಪಾತ್ರವಹಿಸಿದ್ದರು. ೧೯೪೦ರವರೆಗೆ ಆಶ್ರಮದೊಡನೆ ನಿಕಟ ಸಂಬಂಧ ಹೊಂದಿದ್ದರು. ನಂತರ ಪುರುಷೋತ್ತಮ ಎಂಬುವರು ಇಲ್ಲಿನ ಚಟುವಟಿಕೆ ಮುಂದುವರಿಸಿದರು. ಈಗ ಅರವಿಂದ ಎಂಬುವರು ಕಾರ್ಯದರ್ಶಿಯಾಗಿ ಇಲ್ಲಿ ಗುರುಕುಲ ವಿದ್ಯಾಪೀಠ ನಡೆಸುತ್ತಿದ್ದಾರೆ.

ಕೆಂಗೇರಿ ಗುರುಕುಲಾಶ್ರಮ ಹರಿಜನ ಸೇವೆ, ಅಸ್ಪೃಶ್ಯತೆ ನಿವಾರಣೆ, ಗ್ರಾಮಸೇವಾ ಕೇಂದ್ರವಾಗಿ, ರಾಷ್ಟ್ರೀಯ ಚಳುವಳಿಗೆ, ಸ್ವಯಂ ಸೇವಕರನ್ನು ತರಬೇತುಗೊಳಿಸುವ, ಶಿಕ್ಷಣ ಪ್ರಚಾರ ಮಾಡುವ ಮತ್ತು ಸಾಮಾಜಿಕ ಅನಿಷ್ಟಗಳನ್ನು ತೊಡೆದು ಹಾಕುವ, ಧಾರ್ಮಿಕ ಅಂಧಶ್ರದ್ಧೆ ನಿರ್ಮೂಲನೆ ಮಾಡುವ ಹಿನ್ನೆಲೆಯೊಳಗೆ ಕಾರ್ಯನಿರ್ವಹಿಸುತ್ತಿತ್ತು. ಇಲ್ಲಿ ಚರ್ಚೆಗಳು, ವಿಚಾರ ವಿನಿಮಯ ಆಗುತ್ತಿದ್ದವು. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಧಾರ್ಮಿಕವಾಗಿ ಜನರಲ್ಲಿ ಜಾಗೃತಿ ಮೂಡಿಸುವುದೇ ಈ ಆಶ್ರಮದ ಉದ್ದೇಶವಾಗಿತ್ತು. ಇದು ರೈತರಿಗೆ ವಿದ್ಯಾಲಯ ಸಹ ಆಗಿತ್ತು. ಕೆಂಗೇರಿ ನಾಗಣ್ಣನವರು ಗುರುಕುಲಾಶ್ರಮದಡಿಯಲ್ಲಿ ಸ್ಥಾಪನೆಯಾಗಿದ್ದ ಗ್ರಾಮಸೇವಾ ಸಂಘದ ಉಪಯೋಗಕ್ಕಾಗಿ ಒಂದು ಛತ್ರ ನೀಡಿದ್ದರು. ಇಲ್ಲಿ ರೈತರಿಗೆ, ವ್ಯವಸಾಯದ ಇನ್ಸ್‌ಪೆಕ್ಟರ್‌ರನ್ನು ಕರೆಯಿಸಿ ಕಬ್ಬಿಣದ ನೇಗಿಲು, ಉತ್ತಮ ಬಿತ್ತನೆ ಭೂಮಿ ಹದಗೊಳಿಸುವ ಬಗೆ, ಬೇರೆ–ಬೇರೆ ಬೆಳೆಗಳ ಸಂಬಂಧ ಮಾಹಿತಿ ನೀಡಲಾಗುತ್ತಿತ್ತು. ಅನಕ್ಷರಸ್ಥರಿಗಾಗಿ ರಾಮಾಯಣ, ಮಹಾಭಾರತ ಪುರಾಣಗಳ ಅರ್ಥವಿವರಣೆ, ಉಪನ್ಯಾಸ ಜರುಗುತ್ತಿದ್ದವು. ಹರ್ತಿ ಆದಿರಾಜಯ್ಯನವರ ತಂದೆ ಪದ್ಮಯ್ಯ ಹಾವು ಕಡಿತ, ಪಶುರೋಗಗಳಿಗೆ ಔಷಧೋಪಚಾರ ಕುರಿತು ಉಪನ್ಯಾಸ ನೀಡಿದ್ದರು.[೪] ಪುಸ್ತಕ ಭಂಡಾರ–ವಾಚನಾಲಯ ಸಹ ಇಲ್ಲಿದ್ದು ೧೯೩೦ರ ಸಂದರ್ಭದ ತಾಯಿನಾಡು,

* ಎಫ್.ಐ.ಪಿ. ಟೀಚರ್ ಫೆಲೋ, ಇತಿಹಾಸ ವಿಭಾಗ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಚಿತ್ರಗುಪ್ತ, ವಿಶ್ವಕರ್ಣಾಟಕ, ಜಯಕರ್ನಾಟಕ, ಸುಬೋಧ ಸರಸ್ವತಿ ರಂಗಭೂಮಿ, ಕಲಾ, ವೇದ ಸಂದೇಶ, ಸ್ಕಾಲರ್ ವೇದಾಂತ ಕೇಸರಿ, ಭಕ್ತಿ, ವೈಧಿಕ ಧರ್ಮ ಮುಂತಾದ ಕನ್ನಡ, ಇಂಗ್ಲೀಷ್ ಹಿಂದಿ ಪತ್ರಿಕೆಗಳು ಬರುತ್ತಿದ್ದವು. ಓದು ಬಾರದವರಿಗೆ ಪತ್ರಿಕೆ ಓದಿ ವಿಷಯ ತಿಳಿಸಲಾಗುತ್ತಿತ್ತು. ಬೇಕಾದವರು ಮನೆಗೆ ಪುಸ್ತಕ ಕೊಂಡೊಯ್ಯಬಹುದಾಗಿತ್ತು. ಹಳ್ಳಿಗರಿಗಾಗಿಯೇ ಈ ಗ್ರಂಥ ಭಂಡಾರ ಇದ್ದು, ಸುತ್ತಮುತ್ತಲ ೨೦೦ ಜನ ಇದರಿಂದ ಪ್ರಯೋಜನ ಪಡೆಯುತ್ತಿದ್ದರು. ಈ ವಾಚನಾಲಯಕ್ಕೆ ಸುಬೋಧದ ರಾಮರಾಯರು, ಶ್ರೀಮಾನ್ ಎಸ್.ಜಿ. ಶಾಸ್ತ್ರಿಯವರ ಧರ್ಮಪತ್ನಿಯವರಾದ ಶ್ರೀಮತಿ ವೆಂಕಟಸುಬ್ಬಮ್ಮನವರು ಗ್ರಂಥಗಳನ್ನು ನೀಡಿ ಸಹಾಯ ಮಾಡಿದ್ದಾರೆ. ಇಲ್ಲಿನ ಸ್ವಯಂಸೇವಕರಾಗಿದ್ದ ಜಿ.ಕೆ. ರಾಮಸ್ವಾಮಿ ತಂಡ ಹಳ್ಳಿ-ಹಳ್ಳಿ ಹರಿಜನಕೇರಿಗೆ ಹೋಗಿ ಭಜನೆ ನಡೆಸುತ್ತಿದ್ದರಲ್ಲದೆ ಶುಚಿತ್ವದ ಬಗ್ಗೆ ತಿಳಿಸುತ್ತಿದ್ದರು. ಕೆಂಗೇರಿ ಪಕ್ಕದಲ್ಲಿದ್ದ ಆದಿಕರ್ನಾಟಕ ಹಳ್ಳಿಯಲ್ಲಿ ಭಜನಾಮಂದಿರವನ್ನು ಕಟ್ಟಿಸಲಾಗಿತ್ತು. (ಚನ್ನಪಟ್ಟಣದ ಆದಿಜಾಂಬವರ ಬೀದಿಯಲ್ಲಿ ಇಂದಿಗೂ ಭಜನಾ ಮಂದಿರವಿದ್ದು, ಪ್ರತಿ ಶನಿವಾರ ಶ್ರೀರಾಮ ಭಜನೆ ಅಲ್ಲಿ ಜರುಗುವುದನ್ನು ಕಾಣಬಹುದು) ದೊಡ್ಡಬೆಲೆ, ಹೆಮ್ಮಿಗೆಪುರ, ಕೋಡಿಪಾಳ್ಯ, ಒಳಗೆರೆವಳ್ಳಿ ಮುಂತಾದವುಗಳಲ್ಲಿ ಚಿತ್ರಪಠ ಪ್ರದರ್ಶನದೊಂದಿಗೆ ಮದ್ಯಪಾನದಿಂದಾಗುವ ದುಷ್ಪರಿಣಾಮಗಳನ್ನು ಕುರಿತು ಉಪನ್ಯಾಸ ಜರುಗಿರುವುದನ್ನು ಕಾಣಬಹುದು. ಅಲ್ಲದೆ ಹರಿಜನರಿಗೆ ಶಿಕ್ಷಣ ನೀಡುವಂತಹ ಪಾಠಶಾಲೆ ಗಳಿದ್ದವು. ಸ್ವಯಂ ಸೇವಕರೆಲ್ಲ ಹಗಲಿರುಳು, ಶ್ರಮವಹಿಸಿ ಸೇವಾ ಚಟುವಟಿಕೆಯಲ್ಲಿ ನಿರತರಾಗಿರುತ್ತಿದ್ದರು.[೫] ಇಲ್ಲಿ ಧಾರ್ಮಿಕ ಆಚಾರ-ವಿಚಾರಗಳನ್ನು ಕುರಿತು ಚರ್ಚೆ ನಡೆಯುತ್ತಿದ್ದವು. ಉದಾಹರಣೆಗೆ ಆಶ್ರಮದಲ್ಲಿ ದಿನಾಂಕ : ೧೯೩೩ ಜುಲೈ ೨೪ರ ದಿನ "ಪರಮಾತ್ಮನನ್ನು ವಿಗ್ರಹಗಳ ಮೂಲಕ ಆರಾಧಿಸುವುದು ಅವಶ್ಯಕವೇ ? ಇಲ್ಲವೆ." ಎಂಬ ವಿಷಯದಲ್ಲಿ ಒಂದು ಅರ್ಥಗರ್ಭಿತವಾದ ಚರ್ಚೆ ನಡೆಯಿತು. ಇದರ ಅಧ್ಯಕ್ಷತೆಯನ್ನು ಧರ್ಮದೇವ ವಿದ್ಯಾವಾಚಸ್ಪತಿಯವರು ವಹಿಸಿದ್ದರು.[೬]

ಗಾಂಧೀಜಿಯವರು ೧೯೩೪, ೧೯೩೬ರಲ್ಲಿ ಎರಡು ಬಾರಿ ಆಶ್ರಮಕ್ಕೆ ಭೇಟಿ ನೀಡಿದ್ದರು. ಅಖಿಲ ಭಾರತ ಹರಿಜನ ಸೇವಾ ಪ್ರವಾಸ ಕಾರ್ಯಕ್ರಮದಡಿಯಲ್ಲಿ ಬೆಂಗಳೂರಿಗೆ ದಿನಾಂಕ : ೦೪-೦೧-೧೯೩೪ ರಂದು ಸಂಜೆ ೪ ಗಂಟೆಗೆ ಆಗಮಿಸಿದರು. ಆಹ್ವಾನಿಸಲು ರಚನೆಯಾಗಿದ್ದ ಸಮಿತಿಯಲ್ಲಿ ಕೆಂಗೇರಿ ಟಿ. ರಾಮಚಂದ್ರನ್ ಸಹ ಸದಸ್ಯರಾಗಿದ್ದರು. ಬೆಂಗಳೂರಿನಿಂದ ಮೈಸೂರಿಗೆ ತೆರಳಿದ ಗಾಂಧೀ ದಿನಾಂಕ: ೦೫-೦೧-೧೯೩೪ ಬೆಳಿಗ್ಗೆ ತಗಡೂರು, ಬದನವಾಳು, ನಂಜನಗೂಡಿಗೆ ಭೇಟಿ ಕೊಟ್ಟು ಅಂದು ರಾತ್ರಿ ಮೈಸೂರಿನಲ್ಲಿಯೇ ತಂಗಿದ್ದು ದಿನಾಂಕ : ೦೬-೦೧-೧೯೩೪ರಂದು ಮೈಸೂರಿನಿಂದ ಹೊರಟು, ಮಂಡ್ಯ, ಮದ್ದೂರು, ಶಿವಪುರ, ಸೋಮನಹಳ್ಳಿ, ಚನ್ನಪಟ್ಟಣ, ಕ್ಲೋಸ್‌ಪೇಟೆ, ಕಾನಕಾನಹಳ್ಳಿ, ಬಿಡದಿ ಮೂಲಕ ಸಾಯಂಕಾಲ ಕೆಂಗೇರಿ ಆಶ್ರಮಕ್ಕೆ ಬಂದರು.[೭] ಆರ್ಯವೈಶ್ಯ ಸಂಘದ ಸ್ವಯಂಸೇವಕರ ಸಭೆಯ ನಿರ್ವಹಣಾ ಜವಾಬ್ದಾರಿ ವಹಿಸಿದ್ದರು. ಆಶ್ರಮ ನಿರ್ಮಿಸಲ್ಪಟ್ಟಿದ್ದ ಗ್ರಾಮಸೇವಾ ಕೇಂದ್ರವನ್ನು ಉದ್ಘಾಟಿಸಿದರು. ನಂತರ ಬೆಂಗಳೂರು ಬೋರ್ಡ್‌ನವರು ಹರಿಜನರಿಗಾಗಿ ತೆಗೆಸಿದ್ದ ಬಾವಿಯಿಂದ ಬೆಳ್ಳಿ ಚೊಂಬಿನಲ್ಲಿ ನೀರನ್ನು ಸೇದಿ ಇದನ್ನು ತೀರ್ಥವೆಂದೂ ಎಲ್ಲರೂ ಕುಡಿಯಬೇಕೆಂದು ನೀಡಿದರು. ಬೆಳ್ಳಿ ಚೊಂಬನ್ನು ಹರಾಜು ಹಾಕಿ ಹರಿಜನ ನಿಧಿಗೆ ಹಣ ಪಡೆದರು. ಕೆಂಗೇರಿ ಶ್ರೀಮಂತ ವರ್ತಕ ಗಾಣಕಲ್ಲು, ಶ್ರೀಕಂಠಯ್ಯ[೮] ಎಂಬುವರು ಗಾಂಧೀ ಪ್ರತಿರೂಪದ ಪ್ರತಿಮೆಯನ್ನು ಅವರಿಗೆ ನೀಡಿದರು. ಗಾಂಧೀಜಿ ಅದನ್ನು ಕೈಯಲ್ಲಿಡಿದು 'ಏ ಕಿಸ್‌ಕಾ ಬುಡ್ಡಾಕಾ ಪತ್ರಿಮಾ ಹೈ' ಎಂದು ಹಾಸ್ಯ ಮಾಡಿ ಹರಾಜು ಹಾಕಿದರು. ಅಲ್ಲಿಯೇ ಇದ್ದ ಆಂಗ್ಲನೊಬ್ಬ ೨೫ ರೂಪಾಯಿಗಳಿಗೆ ಕೂಗಿ ತೆಗೆದುಕೊಂಡು, ಅದನ್ನು ತಲೆಯ ಮೇಲಿಟ್ಟುಕೊಂಡು ಕುಣಿದಾಡಿದನು.[೯] ನಂತರ ಹರಿಜನ ವಿದ್ಯಾರ್ಥಿಗಳಿಗಾಗಿ ಏರ್ಪಡಿಸಿದ್ದ ಗೀತ ಕಂಠಪಾಠ ಸ್ಪರ್ಧೆಯಲ್ಲಿ ವಿಜೇತರಾದ ವಿದ್ಯಾರ್ಥಿಗಳಿಗೆ ಗಾಂಧೀಜಿ ಹಸ್ತದಿಂದ ಬೆಳ್ಳಿ ಪದಕ ವಿತರಿಸಲಾಯಿತು. ಪದಕ ಪಡೆದ ವಿದ್ಯಾರ್ಥಿ ಅರ್ಜುನನ್, ಗಾಂಧೀ ಹಸ್ತಾಕ್ಷರಕ್ಕಾಗಿ ಪುಸ್ತಕ ನೀಡಿದ, ಗಾಂಧೀ ೫ ರೂ. ಕೊಡಬೇಕೆಂದು ಆವಾಗ ತನಗೆ ಬಂದಿದ್ದ ಪದಕವನ್ನೇ ನೀಡಿದ ಅದರ ಹರಾಜಿನಿಂದ ೪ ರೂ. ಬಂತು ಗಾಂಧೀ ಸಹಿ ಮಾಡುವುದಿಲ್ಲವೆಂದರು. ಪಕ್ಕದಲ್ಲಿಯೇ ಇದ್ದ ಶಂಕರ್‌ಲಾಲ್ ಬ್ಯಾಂಕರ್ ಗಾಂಧೀಯವರಿಗೆ ಹುಡುಗ ಚೆನ್ನಾಗಿ ಗೀತೆಯನ್ನು ಪಠಿಸುತ್ತಾನೆ ಎಂದೇಳಿ ಹಸ್ತಾಕ್ಷರ ಹಾಕಿಸಿಕೊಟ್ಟರು.[೧೦] ಕೆಂಗಲ್ ಹನುಮಂತಯ್ಯನವರು ಈ ಸಂದರ್ಭದಲ್ಲಿ ಭಾಗವಹಿಸಿದ್ದು ಗಾಂಧೀಜಿಯವರನ್ನು ಹತ್ತಿರದಿಂದ ನೋಡಿ ಮಾತನ್ನಾಡಿಸಿ[೧೧] ಅವರ ಪ್ರಭಾವಕ್ಕೊಳಗಾಗಿ ರಾಷ್ಟ್ರೀಯ ಚಳುವಳಿಗೆ, ಹರಿಜನ ಸೇವೆಗೆ ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡರು.

ದಿನಾಂಕ : ೧೦-೦೬-೧೯೩೬ ರಿಂದ ೧೨-೦೬-೧೯೩೬ ರವರೆಗೆ ಆಶ್ರಮದ ಹರಿಜನ ಸೇವಕ ಸಂಘದ ಆಶ್ರಮದಲ್ಲಿ ಹರಿಜನ ಸೇವಾ ಕಾರ್ಯಕರ್ತರ ಸಮಾವೇಶ ಏರ್ಪಡಿಸಲಾಗಿತ್ತು. ಸವರ್ಣೀಯರ ನಿರ್ಲಕ್ಷದಿಂದ ಅನೇಕ ಹರಿಜನರು ಹಿಂದೂ ಸಮಾಜವನ್ನು ಬಿಟ್ಟು ಹೋಗುತ್ತಿರುವುದನ್ನು ಗಮನಿಸಿ ಅವರ ಏಳ್ಗೆಗೆ ಶ್ರಮಿಸುವಂತೆ ಕಾರ್ಯಕರ್ತ

ರನ್ನು ಪ್ರೇರೇಪಿಸಿದ ಕಾರಣದಿಂದ ಈ ಸಮಾವೇಶ ಏರ್ಪಡಿಸಲಾಗಿತ್ತು. ವಿಶ್ವಾನಂದರು ಎಲ್ಲಾ ಸಿದ್ದತೆ ಮಾಡಿದ್ದರು. ಗಾಂಧೀಜಿ ಇದರ ಅಧ್ಯಕ್ಷತೆ ವಹಿಸುವಂತೆ ಕೋರಿ ಆಹ್ವಾನಿಸಿದ್ದರು. ಸಮಾವೇಶದ ಯಶಸ್ವಿಗಾಗಿ ಆರ್ಯ ವೈಶ್ಯ ಸಂಘದ ಸದಸ್ಯರು, ಸಿದ್ದತೆಗಾಗಿ ಸ್ಥಳೀಯ ಸ್ವಯಂಸೇವಕರು ರಾಮಸ್ವಾಮಿ ನೇತೃತ್ವದಲ್ಲಿ ಅಪಾರವಾಗಿ ಶ್ರಮಿಸಿದ್ದರು. ಅಂದು ಸುತ್ತಮುತ್ತಲಿನ ಪ್ರದೇಶ ಕಾಡಾಗಿತ್ತು. ರಾತ್ರಿ ವೇಳೆಯೇ ಜನರು ಊರಿನಲ್ಲಿ ಸಿಗುತ್ತಿದ್ದರಿಂದ ಹಾವು-ಚೇಳು ಲೆಕ್ಕಿಸದೆ ಪಂಜು, ಲಾಟೀನು, ಹಿಡಿದುಕೊಂಡು ಊರೂರು ತಿರುಗಿ ಹಣ ಸಂಗ್ರಹಿಸಿದರು. ಕಾಂಗ್ರೆಸಿನವರು ಬಂದಿದ್ದಾರೆ ಉಪದಾನ ನೀಡಿ ಎಂದು ಜನ ದವಸ, ಧಾನ್ಯ, ಕಾಸು ನೀಡುತ್ತಿದ್ದರು. ಕತ್ತೆಗಳ ಮೇಲೆ ಏರಿಕೊಂಡು ಅವುಗಳನ್ನೆಲ್ಲಾ ಆಶ್ರಮಕ್ಕೆ ಸಾಗಿಸುತ್ತಿದ್ದರು. ಸಮ್ಮೇಳನಕ್ಕಾಗಿ ವಿಶಾಲವಾದ ಚಪ್ಪರ, ಗಾಂಧೀಜಿ ಕೂರಲು ಎತ್ತರವಾದ ವೇದಿಕೆ ಸಿದ್ದಪಡಿಸಲಾಗಿತ್ತು. ಅಖಿಲಭಾರತ ಹರಿಜನ ಸೇವಾ ಸಂಘದ ಅಧ್ಯಕ್ಷ ಬಿರ್ಲಾ, ಸರದಾರ ಪಾಟೀಲರು, ಮಹದೇವದೇಸಾಯಿಯವರು, ರಾಜಗೋಪಾಲಾಚಾರಿ, ಆಚಾರ್ಯ ಕಾಲೇಕರ, ಶ್ರೀಮತಿ ಕಸ್ತೂರಿಬಾಯಿ, ಮಣಿಬೆಹನ್ ಮೊದಲಾದ ಪ್ರಸಿದ್ದರು ಆಗಮಿಸಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಬೇರೆಡೆಯಿಂದ ಕಾರ್ಯಕರ್ತರು ಆಗಮಿಸಿದ್ದರು. "ಹರಿಜನಸೇವಕ ಸಂಘದ" ಅಧ್ಯಕ್ಷರಾದ ಶ್ರೀ ಪಾಮಡಿ ಸುಬ್ಬರಾಯಶೆಟ್ಟಿಯವರು ಸಂಸ್ಥಾನದ ಹರಿಜನ ಸೇವಾ ಕಾರ್ಯಕ್ರಮಗಳನ್ನು ವಿವರಿಸಿದರು. ಹರಿಜನದೇವಾಲಯ ಪ್ರವೇಶ, ಹರಿಜನರು ಬಾವಿ ಬಳಕೆ, ಹರಿಜನಕೇರಿ ಸ್ವಚ್ಚತೆ, ಹರಿಜನರಿಗೆ ಓದು ಬರಹ, ಗ್ರಂಥಾಲಯ, ಭಜನಾಮಂದಿರ ಮತ್ತಿತರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಆ ಬಗ್ಗೆ ಶ್ರಮಿಸುತ್ತಿರುವ ಸ್ಥಳೀಯ ಚನ್ನಪಟ್ಟಣದ ಆರ್ಯಮೂರ್ತಿ, ಹರ್ತಿ ಆದಿರಾಜಯ್ಯ ಮುಂತಾದವರನ್ನು ಉಲ್ಲೇಖಿಸಿದರು. ಗಾಂಧೀಜಿಯವರು ಒಂದು ಗಂಟೆಕಾಲ ಇಂಗ್ಲೀಷಿನಲ್ಲಿ ಭಾಷಣ ಮಾಡಿದರು. ಇದನ್ನು ಸಂಪಿಗೆ ವೆಂಕಟಪತಯ್ಯನವರು[೧೨] ಕನ್ನಡಕ್ಕೆ ಭಾಷಾಂತರಿಸಿದರು. ಅದರ ಸಾರಾಂಶ, ಹರಿಜನರೊಡನೆ ಸವರ್ಣೀಯರು ಬೆರೆಯಬೇಕು ಎಂಬುದಾಗಿತ್ತು. ದೇವಾಲಯಕ್ಕೆ ಅವರನ್ನು ಕರೆದೊಯ್ಯಬೇಕು, ಅವರೊಡನೆ ಸಹಭೋಜನ ಮಾಡಬೇಕು, ಕಾಶಿಯಲ್ಲಿ ವಿಶ್ವನಾಥ ದೇಗುಲಕ್ಕೆ ಸವರ್ಣೀಯರು ಅಲ್ಲಿ ಹರಿಜನರಿಗೆ ಪ್ರವೇಶ ನೀಡಲ್ಲ, ನನಗೆ ವಿಶ್ವನಾಥನ ಬಗ್ಗೆ ನಂಬಿಕೆಯಿಲ್ಲ. ಹರಿಜನ ಮಧ್ಯ ಗೋಮಾಂಸ ತಿನ್ನುತ್ತಾರೆನ್ನಬಾರದು, ತಂದೆ ತನ್ನ ಮಗನಿಗೆ ತೊನ್ನು ಬಂದರೆ ಅವನನ್ನು ಪ್ರೀತಿಸುವುದಿಲ್ಲವೇ ಹಾಗೆ ಪ್ರೀತಿಸಬೇಕು ಎಂಬುದಾಗಿತ್ತು.[೧೩] ದಿನಾಂಕ : ೧೧-೦೬-೧೯೩೬ರಂದು ಎರಡನೇ ದಿವಸ ಸ್ವಾಮಿ ವಿಶ್ವಾನಂದರ ಕೋರಿಕೆಯಂತೆ ಹರಿಜನ ಕೇರಿಯಲ್ಲಿ ನಡೆದು ನಂತರ ವೇದಿಕೆಯತ್ತ ಸಾಗಿದರು. ದಿನಾಂಕ : ೧೨-೦೬-೧೯೩೬ ರಂದು ಸಾರ್ವಜನಿಕ ಚರ್ಚೆ ಸಭಿಕರ ಪ್ರಶ್ನೆಗಳಿಗೆ ಗಾಂಧೀಜಿ ಉತ್ತರ ನೀಡಿದರು. ನಂತರ ಅನೇಕ ನಿರ್ಣಯಗಳನ್ನು ಕೈಗೊಳ್ಳಲಾಯಿತು.

ಆಶ್ರಮದೊಡನೆ ಅನೇಕರು ಸಂಬಂಧ ಹೊಂದಿದ್ದರು. ಗೊರೂರು ರಾಮಸ್ವಾಮಿ ಅಯ್ಯಂಗಾರರು ಇಲ್ಲಿಯೇ ಇದ್ದು ಗರಡುಗಂಭದದಾಸಯ್ಯ ಎಂಬ ಕೃತಿ ರಚನೆ ಮಾಡಿದರು. ಯಶೋಧರ ದಾಸಪ್ಪ ಅರಸಿಕೆರೆ ಕಸ್ತೂರಿಬಾ ಸಂಘದ ವತಿಯಿಂದ ಮೊದಲ ಮಹಿಳಾ ಶಿಬಿರ ೧೯೪೪ರಲ್ಲಿ ಮೈಸೂರಿನ ಹುಣಸೂರು ರಸ್ತೆಯಲ್ಲಿರುವ ಅರಮನೆಗೆ ಸೇರಿದ ಕಟ್ಟಡದಲ್ಲಿ ಮಹಿಳೆಯರಿಗಾಗಿ ಏರ್ಪಡಿಸಿದ್ದರು. ಅದರಲ್ಲಿ ಈಸೂರು ದುರಂತದಲ್ಲಿ ಭಾಗವಹಿಸಿ ನಂತರ ಶಿಕ್ಷೆಯಿಂದ ಖುಲಾಸೆಗೊಂಡ ಗೋವಿಂದಮ್ಮ, ಈಶ್ವರಮ್ಮ ಭಾಗವಹಿಸಿದ್ದರು. ಇವರನ್ನು ಹೊರಹಾಕಿ ಇಲ್ಲವೆ ಕಟ್ಟಡ ತೆರವುಗೊಳಿಸಿ ಎಂದು ಸರ್ಕಾರ ಆದೇಶ ನೀಡಿದಾಗ ಯಶೋಧರರವರು ಕೆಂಗೇರಿ ಆಶ್ರಮದಲ್ಲಿ ಶಿಬಿರ ಮುಂದುವರಿಸಿದರು.[೧೪]

೧೯೫೦ರಲ್ಲಿ ಸ್ವಾತಂತ್ರ್ಯ ಹೋರಾಟಗಾರರು ಆಶ್ರಮದೊಡನೆ ನಿಕಟ ಸಂಬಂಧ ಹೊಂದಿದ್ದ ಪುರುಷೋತ್ತಮ ರಿಂದ ಇಲ್ಲಿನ ೫ ಎಕರೆ ಪ್ರದೇಶದಲ್ಲಿ ಗುರುಕುಲ ವಿದ್ಯಾಪೀಠ ಎಂಬ ಹೆಸರಿನಲ್ಲಿ ಟ್ರಸ್ಟ್ ಸ್ಥಾಪನೆಗೊಂಡಿತು. ಇಲ್ಲಿ ಅನಾಥಶ್ರಮ, ಅನಾಥಮಕ್ಕಳಿಗಾಗಿ ಪ್ರಾಥಮಿಕ ಹಾಗೂ ಪ್ರೌಢಶಾಲೆ ಸಹ ಇದೆ. ಪುರುಷೋತ್ತಮರವರು ೨೦೦೫ರಲ್ಲಿ ಮರಣ ಹೊಂದಿದ ನಂತರ ಅವರ ಮಗನಾದ ಅರವಿಂದ ಕಾರ್ಯದರ್ಶಿಯಾಗಿ ಚಂದ್ರಶೇಖರ್ ಅಧ್ಯಕ್ಷರಾಗಿ, ಮುನಿಯಪ್ಪ, ವೆಂಕಟಯ್ಯ ಸದಸ್ಯರಾಗಿದ್ದಾರೆ.[೧೫] ೧ ರಿಂದ ೧೦ನೇ ತರಗತಿಯವರೆಗೆ ೧೮೦ ಅನಾಥ ಮಕ್ಕಳಿದ್ದಾರೆ. ಅವರಲ್ಲಿ ೧೧೦ ಗಂಡು ಮಕ್ಕಳು ೭೦ ಹೆಣ್ಣು ಮಕ್ಕಳಿದ್ದಾರೆ. ಅಲ್ಲದೆ ಗಂಡನಿಂದ ಅಥವಾ ಸಂಸಾರದಲ್ಲಿನ ಕಿರುಕುಳ ಸಹಿಸದ ಮತ್ತಿತರ ಸಮಸ್ಯೆಗೀಡಾದ ೧೪ ಮಂದಿ ಸ್ತ್ರೀಯರಿದ್ದಾರೆ. ೧೦ ಜನ ಶಿಕ್ಷಕರಿದ್ದಾರೆ. ಉಚಿತವಾಗಿ ವಸತಿ, ಶಿಕ್ಷಣ, ವಿವಿಧ ರೀತಿಯ ತರಬೇತಿ ನೀಡಲಾಗುತ್ತಿದೆ. ಧಾರವಾಡ, ಕೋಲಾರ, ಮತ್ತಿತರೆಡೆಯಿಂದ ಆರಕ್ಷಕ ಠಾಣೆ, ಸಂಘ ಸಂಸ್ಥೆಗಳಿಂದ ಮಕ್ಕಳನ್ನು ಇಲ್ಲಿಗೆ ಕಳುಹಿಸಲಾಗುತ್ತದೆ. ರಾಷ್ಟ್ರೀಯ ಹಬ್ಬಗಳಂದು ಪ್ರಭಾತ್ ಪೇರಿ ಪಂಜಿನ ಮೆರವಣಿಗೆ ನಡೆಸಿ ಪೂರ್ವದ ಚಟುವಟಿಕೆಗಳನ್ನು ಮುಂದುವರಿಸ ಲಾಗುತ್ತಿದೆ.

ಹೀಗೆ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲು ಶ್ರಮಿಸಿ, ಸ್ವತಂತ್ರ ನಂತರವೂ ಆ ಪರಂಪರೆಯನ್ನೂ ಮುಂದುವರಿಸಿ, ಗಾಂಧೀವಾದ ಇನ್ನೂ ಜೀವಂತವಾಗಿದೆ ಎನ್ನುವುದಕ್ಕೆ ಈ ಗುರುಕುಲ ವಿದ್ಯಾಪೀಠ ನಿದರ್ಶನವಾಗಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕ್ಷೇತ್ರ ಕಾರ್ಯ, ಅರವಿಂದ ಕಾರ್ಯದರ್ಶಿ, ಗುರುಕುಲ ವಿದ್ಯಾಪೀಠ ದಿನಾಂಕ : ೧೨-೧೧-೨೦೧೦ ರಂದು ಭೇಟಿ ಮಾಡಿ ಪಡೆದ ಮಾಹಿತಿ.

೨. ಕೃಷ್ಣಶರ್ಮಾ ಸಿದ್ದವನಹಳ್ಳಿ, **ಗಾಂಧೀ ಮತ್ತು ಕರ್ನಾಟಕ,** ಗಾಂಧೀ ಶತಮಾನೋತ್ಸವ ೧೯೬೯, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ಪುಟ ೫೩೪.

೩. ಡಾ. ಕಾಮತ್ ಸೂರ್ಯನಾಥ, **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು,** ದ್ವಿತೀಯ ಸಂಪುಟ ಗೀತಾ ಬುಕ್ ಹೌಸ್, ಮೈಸೂರು-೧೯೭೭, ಪುಟ ೫೭.

೪. ಸಂದರ್ಶನ, ಅಬ್ಬೂರು ಗೋಪಣ್ಣ, ಸ್ವಾತಂತ್ರ್ಯ ಹೋರಾಟಗಾರರು, ಕೆಂಗೇರಿ, ದಿನಾಂಕ : ೧೨-೧೧-೨೦೧೦ರಂದು ಭೇಟಿ ಮಾಡಿ ಪಡೆದ ಮಾಹಿತಿ.

೫. **ವಿಶ್ವ ಕರ್ನಾಟಕ ಪತ್ರಿಕೆ,** ದಿನಾಂಕ : ೧೪ ಸೆಪ್ಟಂಬರ್ ೧೯೩೦, ಪುಟ ೬ರಲ್ಲಿ ಜಿ.ಕೆ. ರಾಮಸ್ವಾಮಿ ವರದಿ.

೬ Private Collection - Paper, GRS Section Vikasha Soudha, Bangalore.

೭. ಸೋಮಶೇಖರ್ ವೇಮುಗಲ್, **ಬೆಂಗಳೂರಿನಲ್ಲಿ ಮಹಾತ್ಮಗಾಂಧೀ,** ಭಾರತೀಯ ವಿದ್ಯಾಭವನ, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀಕೇಂದ್ರ, ಬೆಂಗಳೂರು - ೨೦೦೪, ಪುಟ ೧೩೩.

೮. ಸಂದರ್ಶನ, ಅಬ್ಬೂರು ಗೋಪಣ್ಣ, ಸ್ವಾತಂತ್ರ್ಯ ಹೋರಾಟಗಾರರು, ಕೆಂಗೇರಿ, ದಿನಾಂಕ : ೧೨-೧೦-೨೦೧೦ರಂದು ಭೇಟಿ ಮಾಡಿ ಪಡೆದ ಮಾಹಿತಿ.

೯. Souvenir, Freedom Fighters Association Civil Area 1975-Page No-15.

೧೦. ಕೃಷ್ಣಶರ್ಮ ಸಿದ್ದವನಹಳ್ಳಿ, ಅದೇ., ಪುಟ ೨೩೫.

೧೧. **ಕೆಂಗಲ್ ಹನುಮಂತಯ್ಯ,** ಪ್ರತಿಭಾವಂತ ಸಂಸದೀಯ ಪಟು, ಬರಹ ಮಾಲಿಕೆ, ಕರ್ನಾಟಕ ವಿಧಾನಸಭೆ ಸಚಿವಾಲಯ, ಬೆಂಗಳೂರು., ಪುಟ ೪.

೧೨. ಕೃಷ್ಣಶರ್ಮ ಸಿದ್ದವನಹಳ್ಳಿ : ಅದೇ., ಪುಟ ೩೦೪.

೧೩. ನಾರಾಯಣರಾವ್ ವಿ.ಎಸ್., **ಸರ್ ಮಿರ್ಜಾ ಇಸ್ಮಾಯಿಲ್,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೭೫, ಪುಟ-೧೨.

೧೪. ಪ್ರಾಣೇಶರಾವ್ ಬಿ.ಆರ್., **ಯಶೋಧರ ದಾಸಪ್ಪ ಮತ್ತು ಹೆಚ್.ಸಿ. ದಾಸಪ್ಪ ಜೀವನ ಸಾಧನೆ,** ಪುಟ ೭೫-೭೭/

೧೫. ಸಂದರ್ಶನ, ಚಂದ್ರಶೇಖರ್ ಅಧ್ಯಕ್ಷರು ಗುರುಕುಲ ವಿದ್ಯಾಪೀಠ, ಕೆಂಗೇರಿ, ದಿನಾಂಕ : ೧೫-೧೧-೨೦೧೦ರಂದು ಭೇಟಿ ಮಾಡಿ ಪಡೆದ ಮಾಹಿತಿ.

ಪರಮೇಶ ಬಿ.*

# ಸ್ವಾತಂತ್ರ್ಯ ಹೋರಾಟದಲ್ಲಿ ಹೊಸದುರ್ಗ ತಾಲ್ಲೂಕಿನ ಪಾತ್ರ

ಭಾರತ ಸ್ವಾತಂತ್ರ್ಯ ಸಂಗ್ರಾಮದ ಚಳವಳಿಯಲ್ಲಿ ದೇಶದ ಉದ್ದಗಲಕ್ಕೂ ಜನರು ಭಾಗವಹಿಸಿರುವುದು ಇತಿಹಾಸ. ಈ ಸ್ವಾತಂತ್ರ್ಯ ಹೋರಾಟದಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಪಾತ್ರ ಅತ್ಯಂತ ಪ್ರಾಮುಖ್ಯತೆ ಪಡೆದಿದೆ. ಬ್ರಿಟಿಷರು ನಮ್ಮ ದೇಶವನ್ನು ವಶಪಡಿಸಿಕೊಂಡ ಮೇಲೆ ಸ್ವಾತಂತ್ರ್ಯಕ್ಕಾಗಿ ನಮ್ಮ ದೇಶದ ತುಂಬಾ ಹೋರಾಟ ನಡೆಯಿತು. ಇದರ ಪ್ರಭಾವ ಮೈಸೂರು ಸಂಸ್ಥಾನದ ಮೇಲೆ ಆಯಿತು. ಚಿತ್ರದುರ್ಗ ಅಂದು ಮೈಸೂರು ಸಂಸ್ಥಾನದ ಭಾಗವಾಗಿತ್ತಾದರೂ, ಜಿಲ್ಲೆಯ ಮೇಲೆ ಬ್ರಿಟಿಷರ ಪ್ರಭಾವ ವಾಗಲೀ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯ ಹೋರಾಟವಾಗಲಿ ಕಂಡುಬರಲಿಲ್ಲ. ಕಾರಣ ಅಂದಿನ ಕರ್ನಾಟಕದಲ್ಲಿ ಪ್ರಮುಖ ರಾಜಕೀಯ ನಗರಗಳೆನಿಸಿದ ಮೈಸೂರು ಮತ್ತು ಬೆಂಗಳೂರು ನಗರಗಳಿಂದ ಚಿತ್ರದುರ್ಗ ಬಹಳ ದೂರವಿದ್ದದ್ದು ಒಂದಾದರೆ ಈ ಜಿಲ್ಲೆಯು ಬ್ರಿಟಿಷ್ ಕರ್ನಾಟಕದ ಪ್ರಭಾವಕ್ಕೆ ಒಳಪಡದೇ ಇರುವುದು ಮತ್ತೊಂದು ಕಾರಣವೆನ್ನಬಹುದು. ಹಾಗೆಯೇ ನಂತರ ೧೯೨೦ರ ಸುಮಾರಿಗೆ ಚಿತ್ರದುರ್ಗವು ಬ್ರಿಟಿಷ್ ಕರ್ನಾಟಕದೊಂದಿಗೆ ರಾಜಕೀಯ ಸಂಪರ್ಕ ಪಡೆಯಿತು. ಮುಂದೆ ಸ್ವಾತಂತ್ರ್ಯ ಸಿಗುವವರೆಗೂ ಜಿಲ್ಲೆಯಾದ್ಯಂತ ಎಲ್ಲೆಡೆ ಚಳುವಳಿಗಳು ನಡೆದವು.

ಕ್ರಿ.ಶ. ೧೯೨೦ ರಿಂದ ಕ್ರಿ.ಶ. ೧೯೪೭ ರವರೆಗೆ ನಡೆದ ವಿವಿಧ ಹಂತದ ಹೋರಾಟಗಳಲ್ಲಿ ಹೊಸದುರ್ಗ ತಾಲ್ಲೂಕಿನ ಅನೇಕ ವ್ಯಕ್ತಿಗಳು ಆಸೆ ಅಭಿಲಾಷೆಗಳನ್ನು ನಿಸ್ವಾರ್ಥದಿಂದ ಬದಿಗೊತ್ತಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿರುವುದನ್ನು ಕಾಣಬಹುದು. ಬ್ರಿಟಿಷರ ಲಾಠಿ-ಬೂಟಿಗೆ ಹೆದರದೆ ತಮ್ಮ ಸುಖ-ಸಂತೋಷ, ಆಸೆ-ಅಭಿಲಾಷೆಗಳನ್ನು ಬದಿಗೊತ್ತಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿ ಸೆರೆವಾಸ ಅನುಭವಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಕೃಷಿಯನ್ನೇ ಮುಖ್ಯ ಕಸುಬಾಗಿ ಮಾಡಿಕೊಂಡ ಬಹುತೇಕ ರೈತರಿಗೆ ಹಾಗೂ ವ್ಯಾಪಾರ ವರ್ತಕರಿಗೆ ಚಳವಳಿಯ ಸ್ಫೂರ್ತಿ ನೀಡಿದವರೆಂದರೆ ಮಹಾತ್ಮ ಗಾಂಧೀಜಿಯವರು. ಕ್ರಿ.ಶ. ೧೯೩೦ರಲ್ಲಿ ಪ್ರಾರಂಭಿಸಿದ ಕಾನೂನು ಭಂಗ ಚಳುವಳಿಗೆ ದೇಶದಾದ್ಯಂತ ಅಪಾರ ಪ್ರೋತ್ಸಾಹ, ಸ್ಫೂರ್ತಿ ಪ್ರೇರಣೆ ಸಿಕ್ಕಿ ಚಳುವಳಿ ಪ್ರಬಲವಾಗುತ್ತಾ ಹೋಯಿತು.

ಜಿಲ್ಲಾ ಕಾಂಗ್ರೆಸ್ ಸಮಿತಿ ಸ್ಥಾಪನೆಯಾಗಿ ಮರುವರ್ಷವೇ ಅಂದರೆ ಕ್ರಿ.ಶ. ೧೯೩೭ ಮೇ ೧ ರಂದು ಹೊಸದುರ್ಗ ಕಾಂಗ್ರೆಸ್ ಸಮಿತಿ ರಚನೆ ಆಯಿತು. ಕ್ರಿ.ಶ. ೧೯೩೭ರಲ್ಲಿ ನಡೆದ ಸಭೆ ಸಮಾರಂಭಗಳಿಂದ ಎಚ್ಚರವಹಿಸಿದ ಸರ್ಕಾರ ಕಾಯಿದೆಗಳ ಮೂಲಕ ಸಮಾರಂಭಗಳನ್ನು ತಡೆಯಲು ಪ್ರಯತ್ನಿಸಿತು. ಹಾಗೂ ಎಲ್ಲಾ ಸಭೆ ಸಮಾರಂಭಗಳು ನಡೆಯದಂತೆ ಸರ್ಕಾರ ಕಾಯಿದೆಯನ್ನು ಜಾರಿಗೊಳಿಸಿತು. ಈ ಮಧ್ಯೆ ಕ್ರಿ.ಶ. ೧೯೩೭ ಮೇ ೧೬ರಂದು ಎನ್.ಎಸ್. ಹರ್ಡೀಕರ್ ಮತ್ತಿತರರು ಚಿತ್ರದುರ್ಗ ಜಿಲ್ಲೆಯ ದೊಡ್ಡಸಿದ್ದವನಹಳ್ಳಿಗೆ ಭೇಟಿ ನೀಡಿ ರೈತರನ್ನು ಉದ್ದೇಶಿಸಿ ಮಾತನಾಡಿದ್ದು ಹೊಸದುರ್ಗ ಸ್ವಾತಂತ್ರ್ಯ ಪ್ರಿಯರಿಗೆ ಹೋರಾಡಲು ಮತ್ತಷ್ಟು ಸ್ಫೂರ್ತಿ ದೊರೆತಂತಾಯಿತು. ಇಂತಹ ಸಂದರ್ಭದಲ್ಲಿ ಕಾಂಗ್ರೆಸ್ ರೈತ ಸಮುದಾಯದ ಪರವಾದ ನೀತಿಯನ್ನು ಅನುಸರಿಸಿ ಸ್ವಾತಂತ್ರ್ಯ ಹೋರಾಟಕ್ಕೆ ರೈತರನ್ನು ಸಂಘಟಿಸಿತು.

ಕ್ರಿ.ಶ. ೧೯೩೯ರಲ್ಲಿ ಹೊಸದುರ್ಗ ತಾಲ್ಲೂಕಿನಾದ್ಯಂತ ರೈತರ ಸಮ್ಮೇಳನಗಳು ನಡೆದವು. ಏಪ್ರಿಲ್ ಮೊದಲ ವಾರದಲ್ಲಿ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ರೈತ ಸಮ್ಮೇಳನವನ್ನು ಸಂಘಟಿಸಲಾಯಿತು. ಈ ಸಮ್ಮೇಳನಗಳ ಉದ್ಘಾಟನೆಯನ್ನು ಕ್ರಿ.ಶ. ೧೯೩೯ರಲ್ಲಿ ಕೆ.ಸಿ. ರೆಡ್ಡಿಯವರು ನೆರವೇರಿಸಿದರು. ಹೊಸದುರ್ಗದಲ್ಲಿ ನಡೆದ ಈ ಸಮಾರಂಭದಲ್ಲಿ ಸುಮಾರು ಎರಡು ಸಾವಿರಕ್ಕೂ ಹೆಚ್ಚು ಜನ ಸೇರಿದ್ದರು. ಈ ಸಭೆಯಲ್ಲಿ ವಿದೇಶಿ ವಸ್ತುಗಳ ಬಹಿಷ್ಕಾರ, ಕರನಿರಾಕರಣೆ, ಅರಣ್ಯ ಸತ್ಯಾಗ್ರಹ, ಈಚಲಗಿಡ ಕಡಿಯುವುದು, ಸೇಂದಿ ಅಂಗಡಿಗಳ ಧ್ವಂಸ, ಅಂಚೆ ಕಛೇರಿಗಳ ಮೇಲೆ ದಾಳಿ ಇನ್ನು ಮುಂತಾದ ಕಾರ್ಯಕ್ರಮಗಳಲ್ಲಿ ರೈತರು ಭಾಗವಹಿಸುವಂತೆ ಕೆ.ಸಿ. ರೆಡ್ಡಿಯವರು ಕರೆ ನೀಡಿದರು. ಹೊಸದುರ್ಗ ರೈತ ಸಮ್ಮೇಳನಗಳನ್ನು (ಸಭೆಗಳನ್ನು) ವಿರೋಧಿಸಿದ ಸರ್ಕಾರ ೧೪೪ನೇ ಸೆಕ್ಷನ್ ಜಾರಿಗೊಳಿಸಿತು.

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸದುರ್ಗ.

ಎಸ್. ನಿಜಲಿಂಗಪ್ಪ, ಎನ್.ಎಸ್. ಚಂದ್ರ, ಬಳ್ಳಾರಿ ಸಿದ್ದಮ್ಮ, ವಾಸುದೇವರಾವ್ ಇನ್ನು ಮುಂತಾದವರು ತುರುವನೂರಿಗೆ ತೆರಳಿ ಕಾಯಿದೆಯನ್ನು ಲೆಕ್ಕಿಸದೆ ಅರಣ್ಯ ಸತ್ಯಾಗ್ರಹವನ್ನು ಆರಂಭಿಸಿದರು. ಈಚಲುಮರ ಕಡಿದದ್ದಕ್ಕೆ ನಿಜಲಿಂಗಪ್ಪನವರಿಗೆ ಒಂದೂವರೆ ವರ್ಷ ಜೈಲು ಶಿಕ್ಷೆಯಾಯಿತು. ಇಲ್ಲಿ ಹೊಸದುರ್ಗ ತಾಲ್ಲೂಕಿನಲ್ಲಿ ಜನರು ಸರ್ಕಾರ ಕಾಯ್ದಿರಿಸಿದ ಅರಣ್ಯಗಳಲ್ಲಿ ಹುಲ್ಲು, ಕಟ್ಟಿಗೆಯನ್ನು ಕಡಿದು ತರುವುದು, ಈಚಲು ಮರಗಳನ್ನು ಕಡಿಯುವುದು, ದನಕರುಗಳನ್ನು ಮೇಯಿಸುವುದು, ಇನ್ನು ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡರು.

ಹೀಗೆಯೇ ಬ್ರಿಟಿಷರ ಲಾಟಿಏಟು, ಬೂಟುಹೊಡೆತ, ಛಡಿ ಹೊಡೆತಗಳ ನೋವನ್ನು ಅನುಭವಿಸಿದರು. ಅನೇಕರು ಮನೆ ಮಠಗಳನ್ನು, ನೌಕರಿ, ವಕೀಲವೃತ್ತಿ, ಉದ್ಯೋಗ, ಜವಾಬ್ದಾರಿಯುತ ಸ್ಥಾನ ಕಳೆದುಕೊಂಡರು ಇವರು ಜಾತಿ, ಲಿಂಗ, ಧರ್ಮ, ಪ್ರಾದೇಶಿಕತೆ ಎಂಬ ಬೇಧ-ಭಾವವಿಲ್ಲದೆ ಸ್ವಾತಂತ್ರ್ಯ ಚಳುವಳಿ ನಡೆಸಿದರು. ರಾಷ್ಟ್ರನಾಯಕರಾದ ಮಹಾತ್ಮ ಗಾಂಧೀಜಿ, ಜವಾಹರ್‌ಲಾಲ್ ನೆಹರು, ಬಾಲಗಂಗಾಧರ್ ತಿಲಕ್, ಸರ್ದಾರ್ ವಲ್ಲಭಬಾಯ್ ಪಟೇಲ್, ದಾದಾಬಾಯಿನವರೋಜಿ, ರವೀಂದ್ರನಾಥ ಠಾಕೂರ್, ಮೌಲಾನಾ ಅಬ್ದುಲ್ ಕಲಾಮ್ ಅಜಾದ್ ಹೀಗೆ ಹಲವು ನಾಯಕರುಗಳ ಸಲಹೆ ಮಾರ್ಗದರ್ಶನದಲ್ಲಿ ಚಳುವಳಿ ನಡೆಯಿತು.

೧೯೩೧ರಲ್ಲಿ ಸ್ವಾತಂತ್ರ್ಯಯೋಧ ಹರ್ಡೇಕರ್ ಮಂಜಪ್ಪ ಚಿತ್ರದುರ್ಗ ಜಿಲ್ಲೆಗೆ ಭೇಟಿ ನೀಡಿ ರಾಜಕೀಯ ಪರಿಸ್ಥಿತಿಯನ್ನು ಪರಿಚಯಿಸಿದರು. 'ಭಾರತೀಯರ ರಾಷ್ಟ್ರೀಯತೆ' ಎಂಬ ಪುಸ್ತಕವನ್ನು ದಾವಣಗೆರೆಯಲ್ಲಿ ಪ್ರಕಟಿಸಿದರು. ಇದರ ಪ್ರಭಾವದಿಂದ ಚಳುವಳಿ ಚುರುಕುಗೊಂಡಿತು. ೧೯೩೪ ಮಾರ್ಚ್ ೨ ರಂದು ಮಹಾತ್ಮ ಗಾಂಧೀಜಿ ದಾವಣಗೆರೆಗೆ ಭೇಟಿ ನೀಡಿ ಸ್ವಾತಂತ್ರ್ಯ ಚಳವಳಿಗೆ ಬೆಂಬಲ ನೀಡಿದರು. ೧೯೩೨ರಲ್ಲಿ ಕಾನೂನು ಭಂಗ ಚಳವಳಿ, ವಿದೇಶಿ ಬಟ್ಟೆಗಳ ಬಹಿಷ್ಕಾರ, ಅಂಗಡಿಗಳ ಬಹಿಷ್ಕಾರ ನಡೆಯಿತು.

ಹೊಸದುರ್ಗ ತಾಲ್ಲೂಕು ಬಹು ಹಿಂದಿನಿಂದಲೂ ರಾಜಕೀಯ, ಶೌರ್ಯ, ಸಾಹಸ, ಸ್ವಾತಂತ್ರ್ಯವನ್ನು ಪ್ರದರ್ಶಿಸಿದ ನೆಲೆ. ಇದರ ಇತಿಹಾಸವನ್ನು ಅವಲೋಕಿಸಿದಾಗ ಬೂದಿಹಾಳ ಸೀಮೆಯನ್ನು ಆಳಿದ ಸಿರುಮನೃಪಾಲನಿಂದ ಹಿಡಿದು ಬ್ರಿಟಿಷರ ಕಾಲದವರೆಗೆ ಹೋರಾಡಿದ ಜನರಿದ್ದಾರೆ. ಹೊಸದುರ್ಗ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಶಕ್ತಿ ಸ್ಫೋಟಗೊಂಡಿದ್ದು ೧೯೩೪ರ ಅರಣ್ಯ ಸತ್ಯಾಗ್ರಹ ಚಳವಳಿಯಲ್ಲಿ ಬ್ರಿಟಿಷರ ವಿರುದ್ಧ ನಡೆದ ಈ ಕ್ರಾಂತಿ ಹೊಸದುರ್ಗವು ಸೇರಿ ಜಿಲ್ಲೆಯಾದ್ಯಂತ ನಡೆಯಿತು. ಈ ಚಳವಳಿಗೆ ವ್ಯಾಪಕವಾದ ಪ್ರೋತ್ಸಾಹ ಬೆಂಬಲ ಈ ಭಾಗದಲ್ಲಿ ವ್ಯಕ್ತವಾಯಿತು.

ಹೊಸದುರ್ಗ ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟದ ಶಕ್ತಿ ಸ್ಫೋಟಗೊಂಡದ್ದು ೧೯೩೪ರ ಅರಣ್ಯ ಸತ್ಯಾಗ್ರಹದಲ್ಲಿ ಬ್ರಿಟಿಷರ ವಿರುದ್ಧ ನಡೆದ ಈ ಕ್ರಾಂತಿ ಹೊಸದುರ್ಗವು ಸೇರಿ ಜಿಲ್ಲೆಯಾದ್ಯಂತ ನಡೆಯಿತು. ಈ ಚಳುವಳಿಗೆ ವ್ಯಾಪಕವಾದ ಬೆಂಬಲ ಈ ಭಾಗದಲ್ಲಿ ವ್ಯಕ್ತವಾಯಿತು. ಈ ಹೋರಾಟದಲ್ಲಿ ಸಾವಿರಾರು ಜನ ಧುಮುಕಿ ದೇಶದ ಸ್ವಾತಂತ್ರ್ಯವನ್ನು ಅನೇಕ ಜನರು ತಮ್ಮ ಪ್ರಾಣವನ್ನೇ ಕೊಟ್ಟರು. ಮತ್ತೆ ಕೆಲವರು ದೇಶದ ಸ್ವಾತಂತ್ರ್ಯದಲ್ಲಿ ಬ್ರಿಟಿಷರ ಗುಂಡಿಗೆ ಬಲಿಯಾದರು. ನೂರಾರು ಜನರು ಸೆರೆಮನೆ ವಾಸವಾದರು. ಈ ಹೋರಾಟದಲ್ಲಿ ಭಾಗವಹಿಸಿ ನೋವುಗಳನ್ನು ಅನುಭವಿಸಿ ಎಲೆ ಮರೆಯ ಕಾಯಿಯಂತೆ ಇರುವ ಇನ್ನು ನೂರಾರು ದೇಶಭಕ್ತರು ಹೊಸದುರ್ಗ ಪ್ರದೇಶದಲ್ಲಿ ಇದ್ದಾರೆ. ಇಂತಹ ರಾಷ್ಟ್ರ ಚೇತನಗಳನ್ನು ಸ್ಮರಿಸುವುದು ಪ್ರತಿಯೊಬ್ಬ ಭಾರತೀಯರ ಕರ್ತವ್ಯವಾಗಿದೆ.

### ಸ್ವದೇಶಿ ಚಳವಳಿ - ೧೯೩೪

ಸ್ವದೇಶಿ ಚಳುವಳಿ ಪ್ರಾರಂಭವಾದಾಗ ವಿದೇಶಿ ವಸ್ತುಗಳ ಬಳಕೆಯನ್ನು ನಿಷೇಧಿಸುವ ಸಲುವಾಗಿ ಹೊಸದುರ್ಗ ತಾಲ್ಲೂಕಿನ ಅಸಂಖ್ಯಾತ ದೇಶಪ್ರೇಮಿಗಳು ಈ ಚಳವಳಿಗೆ ಬೆಂಬಲ ವ್ಯಕ್ತಪಡಿಸಿದರು. ತಮ್ಮ ನಾಯಕರ ಕರೆಗೆ ತಲೆಬಾಗಿ ಹಳ್ಳಿ ಜನತೆಯನ್ನು ಸಂಘಟಿಸಿ ವಿದೇಶಿಯರ ಬಟ್ಟೆಗಳನ್ನು ಬಹಿಷ್ಕರಿಸಿದರು. ತಾವು ಧರಿಸಿದ್ದ ವಿದೇಶಿ ಬಟ್ಟೆಗಳನ್ನು ಕಳಚಿ ಸಾರ್ವಜನಿಕರ ಎದುರೇ ಬೆಂಕಿಗೆ ಅರ್ಪಿಸಿದರು. ಬ್ರಿಟಿಷ್ ಕಾನೂನುಗಳನ್ನು ಧಿಕ್ಕರಿಸಿದರು. ಕಾವಲುಗಳನ್ನು ಲೂಟಿ ಮಾಡಿದರು, ಈಚಲು ಮರಗಳನ್ನು ಕಡಿದರು, ಸೇಂದಿ ಅಂಗಡಿಗಳನ್ನು ಸುಟ್ಟು ಹಾಕಿದರು, ರೈಲು ತಡೆ, ಧ್ವಜಾರೋಹಣ ನಡೆಸಿ ಸ್ವಾತಂತ್ರ್ಯದ ಭದ್ರ ಅಡಿಪಾಯ ಹಾಕಿದರು. ಅವರಲ್ಲಿ ಪ್ರಮುಖರಾದವರೆಂದರೆ ಗಂಗಾಧರಶೆಟ್ಟಿ, ಕೈನಾಡು ಭಾಸ್ಕರಾಚಾರಿ, ಬಾಗೂರಿನ ಡಿ. ರಾಮಯ್ಯ, ನಾಗೇನಹಳ್ಳಿ ಪುಟ್ಟಯ್ಯ, ಮಾರಬಗಟ್ಟದ ವೀರಾಚಾರಿ, ಅಲಂಪಲ್ಲಿ ನಂಜುಂಡಶೆಟ್ಟಿ, ಹೆಚ್.ಆರ್. ಭೂಪಾಲ್, ಕೆ.ಎನ್. ನೀಲಶೇಖರಶೆಟ್ಟಿ, ಡಿ.ಬಿ. ತಿಮ್ಮಣ್ಣ, ಗಾ.ಲಿ. ಭೀಮಣ್ಣ, ನಾಗೇನಹಳ್ಳಿ ಮರಳುಸಿದ್ದಪ್ಪ, ಬೋರಿಕೆರೆ ತಿಮ್ಮಪ್ಪ, ಕೆಲ್ಲೋಡು ಹನುಮಂತರಾವ್, ಶ್ರೀರಾಂಪುರದ ತಿಮ್ಮಯ್ಯ, ಹೊಸದುರ್ಗದ ಶ್ರೀಶೈಲಪ್ಪ, ಮಧುರೆ ನಂಜಮ್ಮ, ಶ್ರೀರಾಂಪುರದ ರಾಮಣ್ಣ, ಬಾಗೂರಿನ ಹಯತ್ ಖಾನ್, ಹೆಬ್ಬಾಳದ ಬಸವಂತಪ್ಪ, ಅರಳಿಹಳ್ಳಿ ಡಿ. ರಾಮಯ್ಯ, ಬಾಗೂರಿನ ಗುರುಸಿದ್ದಪ್ಪಯ್ಯ, ಹೊಸದುರ್ಗದ ಕುಬೇರಪ್ಪ, ಬಾಗೂರಿನ ನಾಗಪ್ಪ ಇನ್ನು

ಮುಂತಾದವರು ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಿದ್ದರು. ಇಷ್ಟೇ ಅಲ್ಲದೇ ಹಳೆಯ ತಾಲ್ಲೂಕು ಕಛೇರಿ ಕಟ್ಟಡದ ಎದುರು ಶ್ರೀ ಗಣಪತಿ ದೇವಾಲಯದ ಮುಂಭಾಗದ ಸ್ವಾತಂತ್ರ್ಯ ಹುತಾತ್ಮರ ಸ್ಮಾರಕದಲ್ಲಿ ಈ ಕೆಳಕಂಡ ಹೆಸರುಗಳನ್ನು ಕಾಣುತ್ತೇವೆ. ಸಣ್ಣಮ್ಮ ಬಿನ್ ರಂಗಪ್ಪ, ಎಂ.ಜಿ. ದಿಬ್ಬದ ಗಿರಿತಿಮ್ಮಯ್ಯ ಬಿನ್ ತಾಳೆ ತಿಮ್ಮಯ್ಯ, ಕೊಂಡಾಪುರದ ಹನುಮಯ್ಯ, ಎಣ್ಣೆಗೆರೆ ರಾಮಯಳನಾಡು, ಮಾಚೇನಹಳ್ಳಿಯ ಗಿರಿತಿಮ್ಮಯ್ಯ, ಇವರುಗಳು ಹುತಾತ್ಮರಾದವರು. ಸ್ವಾತಂತ್ರ್ಯದ ಕಿಚ್ಚು ಒಬ್ಬರಿಂದ ಒಬ್ಬರಿಗೆ ಹರಡಿತು. ಇಡೀ ತಾಲ್ಲೂಕನ್ನು ವ್ಯಾಪಿಸಿತು. ಸ್ವಾರ್ಥವನ್ನು ತ್ಯಾಗ ಮಾಡಿ ಮನೆ ಮಠಗಳನ್ನು ಬಿಟ್ಟು ಊರಿಂದ ಊರಿಗೆ ಜನರಿಂದ ಜನರೆಲ್ಲರಿಗೂ ಸ್ವಾತಂತ್ರ್ಯದ ಕಿಚ್ಚನ್ನು ಹರಡಿದರು.

**೧೯೩೮-೩೯ರ ಅರಣ್ಯ ಸತ್ಯಾಗ್ರಹ**

೧೯೩೮ರಲ್ಲಿ ರಾಜ್ಯದಾದ್ಯಂತ ನಡೆದಂತೆ ಹೊಸದುರ್ಗ ತಾಲ್ಲೂಕಿನಲ್ಲಿ ನಡೆಯಿತು. ೧೯೩೮-೩೯ರಲ್ಲಿ ನಾಗೇನಹಳ್ಳಿ ಗೋವಿಂದಪ್ಪ ಇವರಿಗೆ ಮೂರು ವರ್ಷ ಕಠಿಣ ಸಜೆ ೫೦೦ ರೂ. ದಂಡ ವಿಧಿಸಿದರು. ಚೌಡಪ್ಪ ಬೇಗೂರು ನರಸಿಂಹರೆಡ್ಡಿ, ಪರಮಯ್ಯ ನಾಗೇನಹಳ್ಳಿ, ಮೂಡಲಗಿರಿಯಪ್ಪ, ಮಾರಬಗಟ್ಟದ ವೀರಾಚಾರ್, ವೆಂಕಟರಾವ್ ಬೆಲಗೂರು, ಶಿವಣ್ಣ ನಾಗೇನಹಳ್ಳಿ, ಹನುಮಂತಪ್ಪ, ಹಯತ್‌ಖಾನ್, ಇವರೆಲ್ಲ ಸ್ವಾತಂತ್ರ್ಯ ಸಂಘರ್ಷದಲ್ಲಿ ಆಲಂಪಲ್ಲಿ ಸಿದ್ದಪ್ಪ ಮನೆಯನ್ನು ಕೇಂದ್ರವಾಗಿಟ್ಟುಕೊಂಡು ಜಿಲ್ಲೆಯ ಇತರೆ ತಾಲ್ಲೂಕುಗಳ ಹಿರಿಯರ ಮಾರ್ಗದರ್ಶನ ಬಹುಮುಖ್ಯವಾದ ಅಂಶವಾಗಿದೆ. ತಾಯಿನಾಡು ದಿನಪತ್ರಿಕೆಯಲ್ಲಿ, ರಾಷ್ಟ್ರ ಸಂಸ್ಥಾನಗಳ ವಿಷಯ ತಿಳಿಯುವುದು. ಸರ್ಕಾರಿ ಕೆಲಸಗಳಿಗೆ ಅಡಚಣೆ ಸರ್ಕಾರಿ ಕಛೇರಿಗಳ ಸ್ವಾಧೀನ, ಧ್ವಜಾರೋಹಣ ಈ ಸತ್ಯಾಗ್ರಹಿಗಳೆಲ್ಲರನ್ನು ಪೊಲೀಸರು ಬಂಧಿಸಿದರು. ಪೊಲೀಸ್ ಪಡೆ ಬಂದೂಕಿನಿಂದ ದಿನಾಂಕ : ೧೯-೦೯-೪೭ರ ಸೋಮವಾರ ಹೊಸದುರ್ಗ ತಾಲ್ಲೂಕು ಕಛೇರಿಯ ಮುಂದೆ ಪಿಕೆಟಿಂಗ್ ಮಾಡುತ್ತಿದ್ದ ಚಳವಳಿಗಾರರ ಮೇಲೆ ಗುಂಡು ಹಾರಿಸಿದರು. ಸುಮಾರು ೭-೮ ಜನ ಬಲಿಯಾದರು. ಅಂತಹ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಅರಮನೆ ಮೇಲೆ ಧ್ವಜಾರೋಹಣ ಹಾರಿಸಲಾಯಿತು.

**ತೃತೀಯ ಹಂತ : ೧೯೪೦-೪೨ರಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಪ್ರಮುಖರೆಂದರೆ :** ೧೯೪೨-೪೭ರ ವರೆಗೆ ಬ್ರಿಟಿಷ್ ಸರ್ಕಾರದ ವಿರುದ್ಧ ಒಂದಲ್ಲ, ಒಂದು ಚಟುವಟಿಕೆಗಳು ನಡೆಯುತ್ತಿದ್ದವು. ಕೆ.ಎನ್. ನೀಲಶೇಖರಶೆಟ್ಟಿ, ಅದ್ರಿಕಟ್ಟೆ ಹನುಮಂತಪ್ಪ, ಕಂದ್ರತಿಮ್ಮಯ್ಯ, ಪುಟ್ಟಪ್ಪ, ಡಿ.ಸಿ. ತಿಮ್ಮಣ್ಣ ರಾಮಪ್ಪನಾಗೇನಹಳ್ಳಿ, ಬೊಮ್ಮರಾಜಪ್ಪ, ತಿಮ್ಮಪ್ಪ, ಹೆಚ್.ಎಸ್. ಹನುಮಂತರಾವ್, ಶ್ರೀಶೈಲಪ್ಪ, ನಂಜಮ್ಮ, ರಾಮಣ್ಣ ನಾಗೇನಹಳ್ಳಿ ಹನುಮಂತಪ್ಪ ಇನ್ನು ಕೆಲವರು ಈಗಲೂ ಇದ್ದು, ತಮ್ಮ ಭಾವನೆಗಳನ್ನು ಸ್ವಾತಂತ್ರ್ಯ ಸಂಗ್ರಾಮದ ಹೋರಾಟವನ್ನು ವಿವರಿಸುತ್ತಾರೆ. ಅವರ ಸಾಹಸ, ನೀತಿ, ವಿನಯ, ಸೌಜನ್ಯ, ಹೋರಾಟದ ಗುಣಗಳನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದು, ಯುವಜನರಿಗೆ ಸ್ಫೂರ್ತಿಯ ಚಿಲುಮೆಯಾಗಿದ್ದಾರೆ. ಇಷ್ಟೇ ಅಲ್ಲದೆ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದ ಹೆಸರುಗಳ ಜ್ಞಾಪಕಾರ್ಥಕವಾಗಿ ಹೊಸದುರ್ಗ ಪಟ್ಟಣದ ಗಣೇಶ ದೇವಾಲಯದ ಮುಂಭಾಗದಲ್ಲಿ ಹುತಾತ್ಮರ ಸ್ಮಾರಕ ನಿಲ್ಲಿಸುವುದರ ಮೂಲಕ ಅವರ ಹೋರಾಟದ ಹಾದಿಯನ್ನು ಜೀವಂತವಾಗಿಸಿರುವುದು, ಅತ್ಯಂತ ಶ್ಲಾಘಣೀಯ, ಈ ಸ್ತಂಭದಲ್ಲಿ ಅವರ ಹೆಸರುಗಳನ್ನು ಉಲ್ಲೇಖಿಸಿರುವುದು ಗಮನಾರ್ಹವಾದ ಅಂಶವಾಗಿದೆ.

ಈ ಸ್ವಾತಂತ್ರ್ಯ ಹೋರಾಟಗಾರರಿನ್ನು ಕಣ್ಮರೆಯಾಗಿರುವ ಮಿತ್ರರ ಬಗ್ಗೆ ಕಣ್ಣೀರು ಹಾಕುತ್ತಾರೆ. ಈ ಲೇಖನ ಮಾಡುವ ಉದ್ದೇಶದಿಂದ ನಾನು ಮುಖ್ಯವಾದ ಕೆಲ ಗ್ರಾಮಗಳಿಗೆ ತೆರಳಿ ಸಂದರ್ಶನ ನಡೆಸುತ್ತಿದ್ದಾಗ ಅವರು ಹೇಳಿದ ಮಾತುಗಳು, ಅವರು ಹೋರಾಟ ಮಾಡಿದವರನ್ನು ತಮ್ಮ ಪ್ರಾಣವನ್ನೇ ಮುಡುಪಾಗಿಟ್ಟವರ ಬಗ್ಗೆ ಹೇಳುವ ರೀತಿ ಅವರ ಕಣ್ಣಂಚಿನ ಕಂಬನಿಯಿಂದ ಸ್ಪಷ್ಟವಾಗಿ ಕಾಣುತ್ತಿದ್ದು, ಆ ಕ್ಷಣದ ಘಟನೆಯು ಅತ್ಯಂತ ಹೃದಯ ಸ್ಪರ್ಶಿಯಾಗಿತ್ತು.

ಪ್ರಮುಖವಾಗಿ ಇಂದಿಗೂ ಬದುಕಿರುವ ಕೆ.ಎನ್. ನೀಲಶೇಖರಶೆಟ್ಟಿ ಇವರು ಬೆಲಗೂರಿನಲ್ಲಿ ವಾಸವಿದ್ದು, ಬೆಂಗಳೂರಿನ ಅಠಾರಾಕಛೇರಿಯಲ್ಲಿ ಸೀನಿಯರ್ ಸ್ಟೆನೋಟೈಪಿಸ್ಟ್ (Senior Stano Typest) ಆಗಿದ್ದರು. ಈಗ ೯೭ ವರ್ಷ. ಹುಟ್ಟಿದ್ದು ಯಳನಾಡು ಗ್ರಾಮ ಹುಳಿಯಾರು ಹೋಬಳಿ ಚಿಕ್ಕನಾಯಕನ ಹಳ್ಳಿ ತಾಲ್ಲೂಕು, ವ್ಯಾಪಾರಸ್ಥರ ಮನೆತನ, ತಾಯಿಯ ತವರೂರು ಬೆಲಗೂರು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಬೆಲಗೂರಿನಲ್ಲಿ, ಪ್ರೌಢಶಿಕ್ಷಣ ಮೈಸೂರಿನ ಬನುಮಯ್ಯ ಹೈಸ್ಕೂಲ್‌ನಲ್ಲಿ ಎಸ್.ಎಸ್.ಎಲ್.ಸಿ. ಮುಗಿಸಿದರು. ೧೯೩೯ರಲ್ಲಿ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಬ್ರಿಟಿಷರು ಬಾಲಕನಾಗಿದ್ದರಿಂದ ಕಾಡಿಗೆ ಬಿಟ್ಟು ಬರುತ್ತಿದ್ದರು. ಮತ್ತೆ ಮನೆಗೆ ಬರುತ್ತಿದ್ದರು. ಆಗಿನ ಮುಖ್ಯ ಕಾರ್ಯದರ್ಶಿಯ ಕಾನ್‌ಫಿಡೆನ್ಸಿಯಲ್ ಸ್ಟೆನೋಗ್ರಾಫರ್ ಆಗಿ ನೇಮಕಗೊಂಡರು.

೧೯೪೨ ಚಳವಳಿಯ ಬಗ್ಗೆ ಸಂಪೂರ್ಣವಾಗಿ ಈ ಕಛೇರಿಯಲ್ಲಿಯೇ ಬರವಣಿಗೆ ಟೈಪ್ ಆಗುತ್ತಿದ್ದು, ಇವರೇ ಟೈಪ್ ಮಾಡುತ್ತಿದ್ದರು. ರಾಜೀನಾಮೆ ನೀಡಿ ಚಳವಳಿಯಲ್ಲಿ

ಭಾಗವಹಿಸಬೇಕೆಂದಿದ್ದಾಗ ಕಾಂಗ್ರೆಸ್ ಮುಖಂಡರು, ಕೆ.ಟಿ. ಭಾಷ್ಯಂ ಅವರು ರಾಜ್ಯದ ನಾಯಕರು. ಭಾಷ್ಯಂ ಅವರು ಬೇಡ, ನೀವು ರಾಜೀನಾಮೆ ಕೊಡಬೇಡಿ ಈ ಹುದ್ದೆಯಲ್ಲಿದ್ದು ನಮಗೆ ಸರ್ಕಾರವು ಚಳವಳಿಯ ಬಗ್ಗೆ ತೆಗೆದುಕೊಳ್ಳುವ ವಿಚಾರಗಳ ಬಗ್ಗೆ ಮಾಹಿತಿ ನೀಡಿ ಎಂದು ಸಲಹೆ ನೀಡಿದರು ಚಳವಳಿ, ಇಳಿಮುಖವಾಯಿತು. ರಜಾ ಅರ್ಜಿಯು ೧೯೪೩ರಲ್ಲಿ ಅನಿವಾರ್ಯವಾಗಿ ಬರೆಯಬೇಕಾಗಿ ಬಂತು. ರಜಾ ಅರ್ಜಿಯ ಕೊನೆಯಲ್ಲಿ "I beg to remain your most obedient servent" ಎಂದು ಬರೆಯಬೇಕಿತ್ತು. ಆದರೆ ಇವರು ಕೊನೆಯಲ್ಲಿ ನನ್ನ ಆತ್ಮ ವಿಶ್ವಾಸಕ್ಕೆ ಧಕ್ಕೆ ಬರುತ್ತದೆ ಎಂದು ಹಾಗೆ ಬರೆಯದೆ "Yours faithfully" ಎಂದು ಬರೆದರು. ಮುಖ್ಯ ಕಾರ್ಯದರ್ಶಿ ಕೆಂಡಾಮಂಡಲವಾದರು. ಅರ್ಜಿ ಬದಲಾಯಿಸಿ ಎಂದರು. ಬದಲಾಯಿಸದಿದ್ದರೆ ಡಿಸ್‌ಮಿಸ್ ಮಾಡುತ್ತೇನೆಂದು ಹೇಳಿದಾಗ ಆತ್ಮಗೌರವಕ್ಕೆ ಧಕ್ಕೆ ಬರುತ್ತದೆ. ನಾನು ಹಾಗೆ ಬರೆಯುವುದಿಲ್ಲವೆಂದಾಗ ಮುಖ್ಯ ಕಾರ್ಯದರ್ಶಿ ವಜಾ ಮಾಡಿದರು. ಮನೆಗೆ ಹೋಗುವ ದಾರಿಯಲ್ಲಿ ದಸ್ತಗಿರಿ ಮಾಡಿ ಮೈಸೂರು ಜೈಲಿಗೆ ಕಳಿಸಿ ೮ ತಿಂಗಳು ಜೈಲಿನಲ್ಲಿರಿಸಿದರು.

## ವ್ಯಕ್ತಿ ಪರಿಚಯಗಳು

***ಡಿ.ಸಿ. ಕೃಷ್ಣಪ್ಪ ವಾರಬಗಟ್ಟ, ಬಾಗೂರು ಅಂಚೆ ಹೊಸದುರ್ಗ ತಾಲ್ಲೂಕು***

ಇವರು ಬಾಗೂರು ಮಿಡ್ಲ್‌ಸ್ಕೂಲ್‌ನಲ್ಲಿ ೧೯೩೭-೩೮ ರಲ್ಲಿ ಓದುತ್ತಿದ್ದಾಗ ನಮ್ಮ ಉಪಾಧ್ಯಾಯರು ರಾಮಚಂದ್ರರಾಯರು ದೇಶಭಕ್ತರ ಚರಿತ್ರೆ, ಆಗ ನಡೆಯುತ್ತಿದ್ದು, ಸ್ವಾತಂತ್ರ್ಯ ಆಂದೋಲನ ರಾಷ್ಟ್ರನಾಯಕರ ವಿಚಾರ ತಿಳಿಸಿ ರಾಷ್ಟ್ರಭಕ್ತಿಯ ಬೀಜ ಬಿತ್ತಿದರು.

ದೊಗ್ಗನಾಳದ ಕೊಟ್ರನಂಜಪ್ಪ ಇವರ ರಾಜಕೀಯ ಗುರು, ಡಾ॥ ಹರ್ಡೆಕರ್, ಕೆ.ಟಿ. ಭಾಷ್ಯಂರವರ ಭಾಷಣವನ್ನು ಏರ್ಪಡಿಸಿದ್ದರು. ೧೯೩೯ರಲ್ಲಿ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಲು ಶಾಲೆ ಬಿಟ್ಟು ರಂಗಾಪುರ, ನೂಲೇನೂರುಗಳಿಗೆ ಹೋದಾಗ ಸತ್ಯಾಗ್ರಹದ ಕಾಲದಲ್ಲಿ ಇವರನ್ನು ಬಂಧಿಸಿದರು. ನ್ಯಾಯಾಧೀಶರು ಇವರನ್ನು ಚಿಕ್ಕ ಹುಡುಗನಾಗಿದ್ದರಿಂದ ಬಿಡುಗಡೆ ಮಾಡಿದರು. ಆಗಿನ ಸತ್ಯಾಗ್ರಹಿಗಳಲ್ಲಿ ಪ್ರಮುಖರೆಂದರೆ ಡಾ॥ ರಾಮಯ್ಯ ಪಂದಿ ಪರಮಯ್ಯ ಗೌಡಜ್ಜ, ವೆಂಕಟರಾಮಯ್ಯ, ಬಾಗೂರು, ನಾಗೇನಹಳ್ಳಿ ಪುಟ್ಟಪ್ಪ, ನಿಂಗಪ್ಪ, ಹನುಮಂತಪ್ಪ ಮುಂತಾದವರು ಚಿತ್ರದುರ್ಗಕ್ಕೆ ಹೋದಾಗ ಸತ್ಯಾಗ್ರಹ ಶಿಬಿರದಲ್ಲಿ ಎಸ್. ವಾಸುದೇವರಾವ್, ಸತ್ಯನಾರಾಯಣರಾವ್ ಪ್ರಮುಖರು. ಸೆಂಟ್ರಲ್ ಜೈಲಿನಲ್ಲಿ ಹೆಚ್. ನಿಟ್ಟಯ್ಯ ಟಿ. ಸುಬ್ರಹ್ಮಣ್ಯ ರಾಗಿ ಬೀಸುತ್ತಿರುವ ಚಿತ್ರವಿರುವ ಹಾಗೂ ಇತರೆ ಪ್ರಕಟಣೆಗಳನ್ನು ಹಂಚಲು ಕೊಟ್ಟಾಗ ಪೋಲಿಸರ ಕೈಗೆ ಸಿಕ್ಕಿ ಚಿತ್ರಹಿಂಸೆಗೆ ಒಳಗಾದರು ನ್ಯಾಯಾಧೀಶರು ಬಿಡುಗಡೆಗೊಳಿಸಿದರು. ಊರಿಗೆ ಮರಳಿ ಬಂದಾಗ ಬಿ.ಎನ್. ನರಸಿಂಹರೆಡ್ಡಿ, ಜೊತೆ ಸೇರಿಕೊಂಡು ಮಧುರೆ, ಬಾಗೂರು, ಸೇಂದಿ ಅಂಗಡಿಗಳನ್ನು ಸುಟ್ಟು ಹಾಕಿದೆವು, ಅರಣ್ಯ ಸತ್ಯಾಗ್ರಹ ಮಾಡಿ ಕಾಡುಮರ, ಈಚಲಮರ, ಕಡೆದೆವು ಅಮೃತಮಹಲ್ ಕಾವಲ್‌ನಲ್ಲಿ ದನಗಳನ್ನು ಮೇಯಿಸಲಾಯಿತು. ನೀರುಗುಂದ, ಕ್ಯಾದಿಗೆರೆ, ದೇವಪುರ, ಕಾವಲುಗಳಲ್ಲಿ ದನ ಮೇಯಿಸಲಾಯಿತು.

**ನರಸಿಂಹರೆಡ್ಡಿ ಬಾಗೂರು**

೧೯೩೬-೩೭ರಲ್ಲಿ ಮಿಡ್ಲ್‌ಸ್ಕೂಲಿನಲ್ಲಿ ಓದುತ್ತಿದ್ದಾಗ ಇವರ ಗ್ರಾಮಕ್ಕೆ ದೊಗ್ಗನಾಳಿನ ಕೊಟ್ರೆನಂಜಪ್ಪನವರು ರಾಷ್ಟ್ರೀಯ ವಿಚಾರಗಳ ಪ್ರಚಾರ ಮಾಡಿದರು. ಅವರ ಭಾಷಣ ಕೇಳಿ ನನಗೆ ದೇಶ ಸೇವೆ ಮಾಡುವ ವಿಚಾರದಿಂದ ಶಾಲೆ ಬಿಟ್ಟು ಅವರ ಜೊತೆ ಪ್ರಚಾರಕ್ಕೆ ಬಂದೆ. ೧೯೩೮-೩೯ರಲ್ಲಿ ಹೊಳಲ್ಕೆರೆ ತಾಲ್ಲೂಕು ರಂಗಾಪುರದಲ್ಲಿ ಅರಣ್ಯ ಸತ್ಯಾಗ್ರಹ ಶಿಬಿರ ಆರಂಭಿಸಿ ಇವರ ಗ್ರಾಮದಿಂದ ಕೆ. ವೆಂಕಟರಾಮಯ್ಯ ಕರಡಿಗೌಡಪ್ಪ, ಕಾಕಾಶಿ ಗೋವಿಂದಪ್ಪ ಶಿಬಿರದಲ್ಲಿ ಇದ್ದು, ೩ ದಿನ ಉತ್ತಾರು (ಗುಂಪು) ಇಲ್ಲದ ಈಚಲ ಮರಗಳನ್ನು ಕಡಿದರು. ಮುಂದೆ ರಾಮಗಿರಿ ಸಮೀಪ ವಡೇರಹಳ್ಳಿಯಲ್ಲಿ ಉತ್ತಾರು ಇರುವ ೩೦೦ ಮರಗಳನ್ನು ಕಡಿದರು. ಹೊಳಲ್ಕೆರೆ ಪೊಲೀಸರು ೨೦ ಜನರನ್ನು ದಸ್ತಗಿರಿ ಮಾಡಿದರು. ದಾವಣಗೆರೆ ನ್ಯಾಯಾಲಯಕ್ಕೆ ಹಾಜರು ಮಾಡಲು ೩ ವರ್ಷ ಶಿಕ್ಷೆ, ೩೫೦೦-೦೦ ರೂ. ದಂಡ ವಿಧಿಸಿದರು. (ಕ್ರಿನಂ. ೨೦೯ & ೨೧೦, ೧೯೩೯-೪೦) ಈ ರೀತಿ ೫-೧೦-೧೯೩೯ಕ್ಕೆ ಇವರಿಗೆ ಶಿಕ್ಷೆ ಆಗಿ ಬೆಂಗಳೂರು, ಶಿವಮೊಗ್ಗ, ತೀರ್ಥಹಳ್ಳಿ, ಜೈಲುಗಳಿಗೆ ಹಾಕಿ ೮-೯-೧೯೪೦ ರಲ್ಲಿ ಬಿಡುಗಡೆಯಾಯಿತು.

ಇವರು ೧೯೪೨ರಲ್ಲಿ ಬಾಗೂರು ಸೇರಿದ ಅಂಗಡಿ ಸುಟ್ಟಿದ್ದು, ಅಲ್ಲದೆ ದೇವಪುರ ವನದಿಂದ ಮಧುರೆವರೆಗೂ ಬಾಗೂರಿಗೆ ಸೇಂದಿ ತರುವ ಗಾಡಿಗಳ ಪೀಪಾಯಿಗಳನ್ನು ಹೊಡೆದುಹಾಕಿದರು. ಇವರು ಐದು ಜನ ಸೇರಿ (ಯಾರಿ ಹಿಂದರೂ ಮೈ.ಚಿ. ೧೫ರಲ್ಲಿ ಬರೆದಿದೆ ಸಂ ೧೧) ಹೊಸದುರ್ಗ ರಸ್ತೆಯಿಂದ ಬಾಗೂರು ಮತ್ತು ಹೊಸದುರ್ಗಕ್ಕೆ ಹೋಗುವ ಅಂಚೆಯನ್ನು ೧೧.೩.೧೯೪೩ರ ಬೆಳಿಗ್ಗೆ ೪-೩೦ಕ್ಕೆ ಇಬ್ಬರು ರನ್ನರುಗಳಿಂದ ಕಸಿದರು. ಮಲ್ಲಪ್ಪನಹಳ್ಳಿ ಹುಣಸೇಕಟ್ಟೆಯ ಮೇಲೆ ರಾತ್ರಿ ಹೋಗಿ ಮಲಗಿ ಹೊಂಚು ಹಾಕಿಕೊಂಡು ಈ ಕೆಲಸ ಮಾಡಿದರು.

೧೯೪೭ರಲ್ಲಿ ಮೈಸೂರು ಸಂಸ್ಥಾನದಲ್ಲಿ ಹೋರಾಟ ಆರಂಭವಾಯಿತು. ಇವರು ಭಾಗವಹಿಸಿದರು. ಈ ಚಳುವಳಿಯಲ್ಲಿ ಅರಸೀಕೆರೆ ಮಾಜಿ ಮಂತ್ರಿ ಹಾರ್ನಹಳ್ಳಿ ರಾಮಸ್ವಾಮಿ ಹಾಸನ ಜೈಲಿನಲ್ಲಿ ದಸ್ತಗಿರಿ ಆಗಿ ೪ ತಿಂಗಳು ಸೆರೆಮನೆ ವಾಸ ಅನುಭವಿಸಿದರು.

ಮೈಸೂರಿನಿಂದ ಡೆಲಿಗೇಷನ್ ದೆಹಲಿಗೆ ಹೋಯಿತು. ಪ್ರಧಾನಿ ನೆಹರು, ಮೌಲಾನಾ ಅಬ್ದುಲ್ ಕಲಾಮ್‌ಅಜಾದ್. ರಾಜೇಂದ್ರಪ್ರಸಾದ್, ಸರೋಜಿನಿ ನಾಯ್ಡು, ರಾಜಗೋಪಾಲ ಚಾರಿ ಇವರನ್ನು ಭೇಟಿ ಮಾಡಿ ಸಂಸ್ಥಾನ ಸ್ವಾತಂತ್ರ್ಯವಾಗ ಬೇಕು. ಇತರ ಸ್ನೇಹಿತರು ಬೋರನಗೌಡ, ಕೆ.ಎಂ. ರುದ್ರಪ್ಪ, ಹೆಚ್.ಎಸ್. ದೊರೆಸ್ವಾಮಿ, ಎ.ಜಿ. ರಾಮಚಂದ್ರರು ಜೈಲಿನ ಅನುಭವ ಊಟ ವಸತಿ ಬಟ್ಟೆ ಕೊಡುತ್ತಿದ್ದರು. ಇವರಿಂದ ಅಡಿಗೆ ಸಹಾಯಕ್ಕೆ ಬಳಸಿ ಕೊಳ್ಳುತ್ತಿದ್ದರು ಎಂದು ನನಗೆ ಸಂದರ್ಶನದ ವೇಳೆ ಮಾಹಿತಿ ನೀಡಿದರು.

ಈ ಲೇಖನ ಬರೆಯುವಾಗ ಹಲವು ಹಳ್ಳಿಗಳಿಗೆ ಹೋಗಿ ಬದುಕಿರುವ ಸ್ವಾತಂತ್ರ್ಯ ಹೋರಾಟಗಾರರನ್ನು ಸಂದರ್ಶಿಸಿದ್ದೇನೆ. ಅವರ ಭಾವಚಿತ್ರಗಳನ್ನು ಲೇಖನದ ಜೊತೆಯಲ್ಲಿ ದಾಖಲಿಸಿರುತ್ತೇನೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ದುರ್ಗದ ಸಿರಿ,** ೨೦೦೬, ಚಿತ್ರದುರ್ಗ ಜಿಲ್ಲಾ ಉತ್ಸವ ಸ್ಮರಣ ಸಂಚಿಕೆ–೨೦೦೬.

೨. ಹೆಚ್. ಗೋವಿಂದರಾಜು, **'ಚಿತ್ರದುರ್ಗ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಮತ್ತು ಮೈಸೂರು ಚಲೋ ಚಳುವಳಿ.'**

೩. ಡಾ. ಎಸ್. ತಿಪ್ಪೇಸ್ವಾಮಿ, **'ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಚಳ್ಳಕೆರೆ ತಾಲ್ಲೂಕಿನ ಪಾತ್ರ,'** ೨೦೦೬.

೪. **ಪ್ರಜಾವಾಣಿ** ಪತ್ರಿಕೆ ೧೫ ಆಗಸ್ಟ್–೨೦೧೦ ಅತಂತ್ರವಾದ ಹುತಾತ್ಮರ ಸ್ಮಾರಕ.

೫. ದಾಖಲಾತಿಗಳ ಪತ್ರಾಂಕಿತ ಉಪ ಖಜಾನೆ, ತಾಲ್ಲೂಕು ಕಛೇರಿ, ಹೊಸದುರ್ಗ.

೬ ಡಾ. ಸೂರ್ಯನಾಥ ಕಾಮತ್, **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು,** ಸಂಪುಟ – ೨, ಮೈಸೂರು ಸಂಸ್ಥಾನ, ಕರ್ನಾಟಕ ಕಿರು ಸಂಸ್ಥಾನಗಳು, ೧೯೭೭.

೭. ಕೆ.ಎನ್. ನೀಲಶೇಖರಶೆಟ್ಟಿ, ಸ್ವಾತಂತ್ರ್ಯ ಹೋರಾಟಗಾರರು, ಬೆಲಗೂರು, ಮೌಖಿಕ ಸಂದರ್ಶನದ ಮಾಹಿತಿ ೧೮–೯–೨೦೧೦.

೮. ಟಿ. ರಾಮಪ್ಪ ನಾಗೇನಹಳ್ಳಿ ಅವರ ಮೌಖಿಕ ಸಂದರ್ಶನದ ಮಾಹಿತಿ.

ಚಿಕ್ಕಚನ್ನಯ್ಯ*

# ರಾಮನಗರ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದಲ್ಲಿ ಹಿಂದೂ ಮಹಾಸಭೆ ಮತ್ತು ಮುಸ್ಲಿಂ ಲೀಗ್ ಚಟುವಟಿಕೆಗಳು

ಮತೀಯ ವೈವಿಧ್ಯತೆಯು ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಕೋಮುವಾದದ ರಾಜಕೀಯವನ್ನು ಹುಟ್ಟು ಹಾಕಿತೆನ್ನಬಹುದು. ಬ್ರಿಟಿಷ್ ಸಾಮ್ರಾಜ್ಯಶಾಹಿ ವಿಸ್ತರಣೆ ಹಾಗೂ ಅದರ ನಿರಾಶಮಯವಾದ ಆಡಳಿತ ಕಾರ್ಯಗಳಿಗೆ ಇದೇ ಮತೀಯ ವೈವಿಧ್ಯತೆ ಅಡಿಗಲ್ಲಾಗಿ ಪರಿಣಮಿಸಿತು. ಇದರಿಂದಾಗಿ ವಿಭಜಿಸಿ ಆಳು ಎಂಬ ನೀತಿಯನ್ನು ಯಾವ ಅಂಜಿಕೆಯು ಇಲ್ಲದೆ ಜಾರಿಗೊಳಿಸಲು ಬ್ರಿಟಿಷರಿಗೆ ಎಲ್ಲ ರಾಜಕೀಯ ಸಾಧ್ಯತೆಗಳನ್ನು ತೆರೆದಿಟ್ಟಿತು. ಮತ, ಧರ್ಮ, ಜಾತಿ, ಭಾಷೆ, ಪ್ರದೇಶ, ಬುಡಕಟ್ಟುಗಳನ್ನು ಮೀರಿ ನಡೆಸಿದ ಗಾಂಧೀಜಿ ನೇತೃತ್ವದ ಸ್ವಾತಂತ್ರ್ಯ ಹೋರಾಟ ಕೆಲವೊಮ್ಮೆ ಗೊಂದಲಕ್ಕೊಳಗಾಗಿ ಹಿನ್ನಡೆ ಅನುಭವಿಸುವಂತಾಯಿತು. ಇಂತಹ ಮತೀಯ ರಾಜಕಾರಣವು ದೇಶಿಯ ಸಂಸ್ಥಾನ ಗಳಲ್ಲೂ ತಡವಾಗಿ ಹುಟ್ಟಿಕೊಂಡು ಗ್ರಾಮೀಣ ಭಾಗಗಳಲ್ಲೂ ಕಾಣಿಸಿಕೊಂಡಿತು.

೧೯೦೬ರಲ್ಲಿ ಸ್ಥಾಪನೆಗೊಂಡ ಮುಸ್ಲಿಂ ಲೀಗ್ ಬಹುಸಂಖ್ಯಾತರ ಕೃಪಕಟಾಕ್ಷದಲ್ಲಿ ರಾಜಕೀಯ ಸ್ವಾತಂತ್ರ್ಯ ಹಕ್ಕುಗಳನ್ನು ಪಡೆದುಕೊಳ್ಳುವ ಅನುಮಾನ ವ್ಯಕ್ತಪಡಿಸಿ ಪ್ರತ್ಯೇಕತೆ ಹಾಗೂ ಬ್ರಿಟಿಷ್ ಪರ ನೀತಿಗೆ ಒಲವು ವ್ಯಕ್ತಪಡಿಸುತ್ತದೆ. "ಭಾರತದಲ್ಲಿ ಬ್ರಿಟಿಷ್ ಆಡಳಿತವು ಕಣ್ಮರೆಯಾದರೆ ದೇವರೆ ಕಾಪಾಡಬೇಕು ! ಹಿಂದುಗಳು ಅದರ ಮೇಲೆ ಪ್ರಭುತ್ವ ನಡೆಸುತ್ತಾರೆ. ನಮ್ಮ ಜೀವ, ಆಸ್ತಿ ಹಾಗೂ ಮರ್ಯಾದೆಗಳು ನಿರಂತರ ಅಪಾಯಕ್ಕೆ ಗುರಿಯಾಗುತ್ತವೆ" ಎಂಬ ಮುಸ್ಲಿಂ ಲೀಗ್ ಸ್ಥಾಪಕರಲ್ಲೊಬ್ಬರಾದ ನವಾಬ್ ವಖರ್ ಉಲ್ ಮುಲ್ಕ್ ಅವರ ಅಭಿಪ್ರಾಯ ಹಿಂದೂಗಳಿಂದ ದೂರವುಳಿಯುವುದೇ ಆಗಿತ್ತು. ಅಂದಿನ ದಿವಾನ್ ಮಿರ್ಜಾ ಇಸ್ಮಾಯಿಲ್ ಲೀಗ್ ಮಹಮ್ಮದೀಯರನ್ನು ಪ್ರತಿನಿಧಿಸುವ ಅವರ ಪರ ಅಧಿಕೃತ ವಾಣಿಯಿಂದ ಮಾತನಾಡಬಲ್ಲ ಏಕಮಾತ್ರ ಸಂಸ್ಥೆ ಎಂದು ಕರೆದಿದ್ದರು.

ಮುಸ್ಲಿಮರ ಅನುಮಾನ ಆತಂಕಗಳನ್ನು ನಿಜವಾಗಿಸುವಂತೆ ಹಿಂದು ಹಿತಾಸಕ್ತಿಗಳನ್ನು ಮುಂದು ಮಾಡಿ ೧೯೧೫ರಲ್ಲಿ ಹಿಂದೂ ಮಹಾಸಭೆಯನ್ನು ಅಸ್ತಿತ್ವಕ್ಕೆ ತರಲಾಯಿತು. ಆದರೆ ಅದನ್ನು ಮುಸ್ಲಿಂ ಲೀಗಿಗೆ ಹೋಲಿಸಿದರೆ ಅದಿನ್ನೂ ಬಾಲ್ಯಾವಸ್ಥೆಯಲ್ಲಿತ್ತು. ಆದರೂ ಅದು ೧೯೨೬-೨೮ರ ಅವಧಿಯಲ್ಲಿ ಶಾಸನ ಸಭೆಗಳಲ್ಲಿ ಪ್ರಭಾವಶಾಲಿಯಾಗಿ ಬೆಳೆದಿತ್ತು ಇವೆರಡು ಧಾರ್ಮಿಕ ಸಂಸ್ಥೆಗಳು ಭಾರತಾದ್ಯಂತ ತಮ್ಮದೇ ಪ್ರಭಾವ ಹೊಂದಿದ್ದವು. ರಾಮನಗರ ಜಿಲ್ಲೆಯಲ್ಲಿ ಈ ಎರಡು ಸಂಘಟನೆಗಳು ಕ್ರಿಯಾಶೀಲವಾಗಿದ್ದವು.

ಹೈದರಾಲಿ ಹಾಗೂ ಟಿಪ್ಪು ಸುಲ್ತಾನರ ಕಾಲದಲ್ಲಿ ಇಲ್ಲಿ ನೆಲೆಸಿದ ಮುಸ್ಲಿಮರು ಹಿಂದುಗಳೊಂದಿಗೆ ಸೌಹಾರ್ದತೆಯಿಂದಲೇ ಇದ್ದರು. ವ್ಯಾಪಾರ, ಸೈನ್ಯ, ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದ ಇವರು ೧೯೨೦ರ ಹೊತ್ತಿಗೆ ಆಲಿ ಸಹೋದರ ಪ್ರಭಾವಕ್ಕೆ ಒಳಗಾಗಿ ಖಿಲಾಫತ್ ಚಳುವಳಿಯಲ್ಲಿ ಭಾಗವಹಿಸಿದರು. ಗಾಂಧೀಜಿ ೧೯೨೦ ಆಗಸ್ಟ್ ೨೦ರಂದು ಶೌಕತ್ ಆಲಿ ಮಹಮ್ಮದ್ ಆಲಿಯೊಂದಿಗೆ ಬೆಂಗಳೂರಿಗೆ ಆಗಮಿಸಿದರು. ಅಂದು ಮೋದಿ ಅಬ್ದುಲ್ ಗಫಾರ್ ಸ್ವಾಗತ ಸಮಿತಿ ಅಧ್ಯಕ್ಷರಾಗಿದ್ದರು. ೧೯೨೧ ನವೆಂಬರ್ ೧೭ರಂದು ರಾಜಕುಮಾರ್ ಪ್ರಿನ್ಸ್ ಆಫ್ ವೇಲ್ಸ್ ಭಾರತಕ್ಕೆ ಭೇಟಿ ಕೊಟ್ಟಿದ್ದನ್ನು ವಿರೋಧಿಸಿ ಬೆಂಗಳೂರಿನ ಕಂಟೋನ್ಮೆಂಟ್‌ನಲ್ಲಿ ಪ್ರತಿಭಟನೆ ಹಮ್ಮಿಕೊಂಡಿದ್ದಾಗ ಪೋಲಿಸರ ಗುಂಡಿಗೆ ಅಬ್ದುಲ್ ರಜಾಕ್ ಮತ್ತು ದಸ್ತಗೀರ್ ಸಾಬ್ ಎಂಬುವವರು ಬಲಿಯಾದರು. ಪಿಕೇಟಿಂಗ್ ನಡೆಸಿದುದಕ್ಕಾಗಿ ಮೀರ್ ಅಬ್ದುಲ್ಲಾ, ಅಬ್ದುಲ್ ಸುಭಾನ್‌ಗೆ ೯ ತಿಂಗಳ ಶಿಕ್ಷೆಯಾಯಿತು. ಆಗ ಹಿಂದೂ ಮುಸ್ಲಿಂರು ಒಟ್ಟಾಗಿಯೇ ಹೋರಾಟ ನಡೆಸಿದರು.

೧೯೨೮ರ ಗಣೇಶ ಗಲಾಟೆ ಇಲ್ಲಿನ ಮುಸ್ಲಿಮರ ಆಸಕ್ತಿಯನ್ನು ಸೆಳೆಯಿತಲ್ಲದೇ ಹಿಂದೂಗಳ ಪ್ರಾಬಲ್ಯದಲ್ಲಿ ಮುಸ್ಲಿಂ ಹಿತಾಸಕ್ತಿಗಳ ಕಡೆಗಣೆ ಆಗದಿರಲು ಎಲ್ಲಾ ಮುಸ್ಲಿಂರು ಒಂದಾಗಿ ಸಂಘಟಿತರಾಗುವ ಅವಶ್ಯಕತೆಯತ್ತ ಮನಗಂಡರು. ಮೊಹಮ್ಮದ್ ಶರೀಫ್, ಅಬ್ಬಾಸ್ ಖಾನ್, ಅಬ್ದುಲ್ ಜಬ್ಬಾರ್ ಅವರೊಂದಿಗೆ ನಿರಂತರ ಸಂಪರ್ಕವಿಟ್ಟುಕೊಂಡಿದ್ದ ಇಲ್ಲಿನ ಮುಸ್ಲಿಂ ಮುಖಂಡರು ಬೆಂಗಳೂರಿನ ಮುಸ್ಲಿಂ ಲೀಗ್ ಚಟುವಟಿಕೆಗಳಲ್ಲಿ ನೇರವಾಗಿ ಭಾಗಿಯಾದರು. ಮೈಸೂರಿನ

* ಇತಿಹಾಸ ವಿಭಾಗ, ಜ್ಞಾನ ಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಅಂದಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್‌ರನ್ನು ಕರೆಸಿ ಹಲವು ಬೇಡಿಕೆಗಳನ್ನು ಸಲ್ಲಿಸಿದರು. ಮುಸ್ಲಿಂರಿಗೆ ಪ್ರತ್ಯೇಕ ಮತಕ್ಷೇತ್ರ, ಮುಸ್ಲಿಂ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯ ಸ್ಥಾಪನೆ ಹಾಗೂ ಸವಲತ್ತು, ಮೈಸೂರು ವಿಶ್ವವಿದ್ಯಾಲಯದಲ್ಲಿ ವಂದೇ ಮಾತರಂ ಗೀತೆ ಹಾಡದಿರಲು ತಡೆ ಇತ್ಯಾದಿ ನಿರ್ಣಯಗಳನ್ನು ಸರ್ಕಾರಕ್ಕೆ ತಿಳಿಸಿದರು. ಜಿನ್ನಾರ ನೇರ ಕಾರ್ಯಾಚರಣೆಗೆ ಓಗೊಟ್ಟು ಪ್ರತಿಭಟನೆ ನಡೆಸಿದರು. ಈ ಸಂದರ್ಭದಲ್ಲಿ ರಾಮನಗರ ಚನ್ನಪಟ್ಟಣಗಳಲ್ಲಿ ಗಲಭೆಗಳುಂಟಾದವು. ಸಿಮ್ಲಾ ಒಪ್ಪಂದದಂತೆ ಮುಸ್ಲಿಮರಿಗಾಗಿ ಪ್ರತ್ಯೇಕ ರಾಷ್ಟ್ರ ಪಾಕಿಸ್ತಾನ ನಿರ್ಮಾಣಕ್ಕೆ ಬೆಂಬಲವಿತ್ತರು. ೨೫.೧೨.೧೯೪೫ರಲ್ಲಿ ಕ್ಲೋಸ್‌ಪೇಟೆ (ಇಂದಿನ ರಾಮನಗರ) ಯಲ್ಲಿ ಜಿನ್ನಾರ ೭೦ನೇ ಜನ್ಮದಿನಾಚರಣೆ ಆಚರಿಸಿದರು. ಜಿನ್ನಾರ ಫೋಟೋ ಹಾಗೂ ಮುಸ್ಲಿಂ ಧ್ವಜವಿಟ್ಟು ಮುಖ್ಯ ಬೀದಿಗಳಲ್ಲಿ ಮೆರವಣಿಗೆ ನಡೆಸಿದರು. ರಾಮನಗರದ ಮಸೀದಿ ಮೊಹಲ್‌ನ ಅಸ್ರಖಾನ್‌ನ್ನಲ್ಲಿ ಸೈಯ್ಯದ್ ಆಜೀಮ್ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಪಾಕಿಸ್ತಾನ ರಚನೆಗೆ ಬೆಂಬಲ ಘೋಷಿಸಿದರು. ಹಾಗೂ ಜಿನ್ನಾರ ನಾಯಕತ್ವದಲ್ಲಿ ಎಲ್ಲಾ ಮುಸ್ಲಿಮರು ವಿಶ್ವಾಸವಿರಿಸಿರುವುದಾಗಿಯೂ ಸಂದೇಶ ಕಳುಹಿಸಲು ತೀರ್ಮಾನಿಸಿದರು. ಸಭೆಯಲ್ಲಿ ೩೦೦ಕ್ಕೂ ಹೆಚ್ಚು ಜನ ಪಾಲ್ಗೊಂಡಿದ್ದರು. ಸಭೆಯ ಅಧ್ಯಕ್ಷತೆಯನ್ನು ಸೈಯ್ಯದ್ ಅಜೀಮ್ ವಹಿಸಿದ್ದರು. ಮಹಮ್ಮದ್ ಹನೀಫ್, ಸೈಯ್ಯದ್ ಹಾಫೀಜ್, ಮೊಯಿದ್ದೀನ್ ಬೇಗ್ ಮುಂತಾದವರು ಭಾಗವಹಿಸಿದ್ದರು. ಈ ರೀತಿಯ ಮುಸ್ಲಿಮ್ ಲೀಗ್‌ನ ಬೆಳವಣಿಗೆಗಳಿಂದ ಇಲ್ಲಿನ ಹಿಂದೂಗಳು ಆತಂಕಕ್ಕೊಳಗಾಗಿ ಹಿಂದೂ ಮಹಾಸಭೆಯ ವಿಚಾರಧಾರೆ ಗಳತ್ತ ಆಸಕ್ತಿ ತೋರಿದರು.

೧೯೨೮ರಲ್ಲಿ ಬೆಂಗಳೂರಿನಲ್ಲಿ ನಡೆದ ಗಣೇಶ ಗಲಾಟೆ ಬೆಂಗಳೂರು ಹಾಗೂ ಗ್ರಾಮಾಂತರ ಭಾಗಗಳಲ್ಲಿ ಹಿಂದೂಗಳು ಹಿಂದೂ ಮಹಾಸಭೆಯ ಸಂಘಟನೆಯತ್ತ ಚಿಂತಿಸಿದರು. ಕೊನೆಗೆ ಹಿಂದೂ ಮಹಾಸಭಾವು ಅಸ್ತಿತ್ವಕ್ಕೆ ಬಂದು ಸಂಪಿಗೆ ವೆಂಕಟಪತಯ್ಯ ಮೈಸೂರು ಹಿಂದೂ ಮಹಾಸಭೆಯ ಅಧ್ಯಕ್ಷರಾಗಿಯೂ ವಾಜಪೇಯಿ ವೆಂಕಟೇಶಯ್ಯ ಕಾರ್ಯದರ್ಶಿಗಳಾಗಿಯೂ ಆಯ್ಕೆಯಾದರು. ಗ್ರಾಮೀಣ ಭಾಗಗಳಲ್ಲೂ ಇದರ ಘಟಕ ತೆರೆಯಲು ಮುಂದಾದ ಇದೇ ನಾಯಕರು ೧೯೪೨ರ ಹೊತ್ತಿಗೆ ಮಾಗಡಿ, ಚನ್ನಪಟ್ಟಣ, ರಾಮನಗರ, ಕನಕಪುರಗಳಲ್ಲಿ ಮಹಾಸಭೆಯ ತಾಲ್ಲೂಕು ಘಟಕಗಳನ್ನು ತೆರೆದರು. ೩.೧.೧.೧೯೪೩ರಂದು ಅಖಿಲ ಭಾರತ ಹಿಂದೂ ಮಹಾಸಭೆಯ ಅಧ್ಯಕ್ಷ ಡಿ.ಎಸ್. ಮೂಂಜೆ ಬೆಂಗಳೂರಿಗೆ ಭೇಟಿ ಕೊಟ್ಟು ಮುನ್ಸಿಪಲ್ ಗಾರ್ಡನ್‌ನಲ್ಲಿ ಭಾಷಣ ಮಾಡಿದರು.

ಗಾಂಧೀಜಿಯ ಪ್ರಭಾವ ಪ್ರೇರಣೆ ಈ ಭಾಗದಲ್ಲಿ ಗಾಢವಾಗಿದ್ದು ಜಿಲ್ಲೆಗೆ ೩ ಬಾರಿ ಭೇಟಿ ಇತ್ತು ಜನರಲ್ಲಿ ಅಹಿಂಸೆ, ಸತ್ಯಾಗ್ರಹ, ಹರಿಜನೋದ್ಧಾರದಂತಹ ವಿಷಯಗಳನ್ನು ಪ್ರಚಾರ ನಡೆಸಿ ಹೋಗಿದ್ದರು. ಕಾಂಗ್ರೆಸ್ ಪಕ್ಷದ ಬಗೆಗೆ ನಿರಾಶೆಗೊಂಡವರು ಹಾಗೂ ಮುಸ್ಲಿಂ ಲೀಗ್ ಜಿನ್ನಾರ ಪ್ರತ್ಯೇಕ ಮತಕ್ಷೇತ್ರ ಹಾಗೂ ಮೀಸಲಾತಿ ಕುರಿತ ಬೇಡಿಕೆ ಒಪ್ಪದ ಹಿಂದೂಗಳ ಒಗ್ಗಟ್ಟಿನಲ್ಲಿ ದೇಶ ಸ್ವಾತಂತ್ರ್ಯ ಹೊಂದಲು ಹಾಗೂ ಅದರ ಅಖಂಡತೆ ಉಳಿಯಲು ಸಾಧ್ಯ ಎಂಬ ನಿಲುವುಳ್ಳವರು ಹಿಂದೂ ಮಹಾಸಭೆಯತ್ತ ಮುಖ ಮಾಡಿದರು. ೧೯೪೩ರ ಹೊತ್ತಿಗೆ ಜಿಲ್ಲೆಯ ಹಿಂದೂ ಮಹಾಸಭೆಯ ಪದಾಧಿಕಾರಿಗಳು ಕೆಳಕಂಡಂತೆ ಕಾರ್ಯ ನಿರ್ವಹಿಸುತ್ತಿದ್ದರು.

| | ಅಧ್ಯಕ್ಷ | ಕಾರ್ಯದರ್ಶಿ |
|---|---|---|
| ಚನ್ನಪಟ್ಣ | ಗುಂಡಾಶೆಟ್ಟಿ | ಆಲೂರು ಶೇಷಪ್ಪಯ್ಯ |
| ಕನಕಪುರ | ಎಂ. ಲಿಂಗೇಗೌಡ | ಪರಮಶಿವಯ್ಯ |
| ರಾಮನಗರ | ಎಸ್. ಸುಬ್ಬರಾವ್ | ಶ್ರೀನಿವಾಸಯ್ಯ |
| ಮಾಗಡಿ | ಪುಟ್ಟರಾಮಶೆಟ್ಟಿ | ಹರತಿ ಹೊನ್ನ ಸಿದ್ಧಪ್ಪ |
| ಬೆಂಗಳೂರು | ಬಿ. ಶಂಕರ್‌ರಾವ್ | ಜಿ.ವಿ. ರಾಮಚಾರ್ |

ಗ್ರಾಮೀಣ ಭಾಗದಲ್ಲಿ ಹಿಂದೂ ಮಹಾಸಭೆಯ ಚಟುವಟಿಕೆಗಳು ಪ್ರಬಲವಾಗಿ ಬೆಳೆಯುವಂತಾದವು. ವಿ.ಡಿ. ಸಾವರ್ಕರ್, ಮದನ ಮೋಹನ, ಮಾಳವೀಯ ಮುಂತಾದವರ ಪ್ರಭಾವ ಇಲ್ಲಿನ ವಿದ್ಯಾವಂತ ವರ್ಗದ ಮೇಲೆ ಪ್ರಭಾವ ಬೀರಿತ್ತು. ಗ್ರಾಮಾಂತರ ಭಾಗದ ಅನೇಕ ನಾಯಕರು ರಾಜ್ಯ ಹಾಗೂ ರಾಷ್ಟ್ರ ನಾಯಕರೊಂದಿಗೆ ಸಂಪರ್ಕ ಹೊಂದಿದ್ದರಲ್ಲದೆ ಅವರ ಮಾರ್ಗದರ್ಶನದಲ್ಲಿ ಸಂಘಟನೆಯನ್ನು ಬಲಪಡಿಸುವ ಕಾರ್ಯ ಮಾಡಿದರು. ಅಂತವರಲ್ಲಿ ಎಸ್. ಸುಬ್ಬರಾವ್, ಎಂ. ಲಿಂಗೇಗೌಡ, ಪರಮಶಿವಯ್ಯ, ಗುಂಡಶೆಟ್ಟಿ, ಆಲೂರು ಶೇಷಪ್ಪ, ಪುಟ್ಟರಾಮಶೆಟ್ಟಿ, ಹರತಿ ಹೊನ್ನ ಸಿದ್ದಪ್ಪ, ಬಿ. ಶಂಕರ್‌ರಾವ್, ಜಿ.ವಿ. ರಾಮಾಚಾರ್, ಆರ್. ಜವರಪ್ಪ, ಎಸ್.ವಿ. ಸೋಮಶೇಖರಯ್ಯ, ಜಯರಾವ್ ಪ್ರಮುಖರು. ಇದರಿಂದಾಗಿ ಮಾಗಡಿ, ಚನ್ನಪಟ್ಟಣ, ರಾಮನಗರ, ಕನಕಪುರ ತಾಲ್ಲೂಕು ಘಟಕಗಳು ಅಸ್ತಿತ್ವಕ್ಕೆ ಬಂದವು. ಕನಕಪುರದ ಲಿಂಗೇಗೌಡರು ಅಂದಿನ ಮುನ್ಸಿಪಲ್ ಅಧ್ಯಕ್ಷರಾಗಿದ್ದು ಇವರ ನೇತೃತ್ವದಲ್ಲಿ ಕನಕಪುರದಲ್ಲಿ ಅಖಿಲ ಮೈಸೂರು ಹಿಂದು ಮಹಾಸಭೆಯ ೪ನೇ ಸಮ್ಮೇಳನವನ್ನು ನಡೆಸಲು ತೀರ್ಮಾನಿಸಲಾಯಿತು. ಇವರೇ ಸ್ವಾಗತ ಸಮಿತಿಯ ಅಧ್ಯಕ್ಷರು ಆದರು. ಅಖಿಲ ಭಾರತ ಹಿಂದೂ ಮಹಾಸಭೆಯ ಅಧ್ಯಕ್ಷ ಡಾ. ಶ್ಯಾಮ್ ಪ್ರಸಾದ್ ಮುಖರ್ಜಿ ವೀರಸಾವರ್ಕರ್

ಪತ್ನಿ, ಬಂಗಾಳದ ಎನ್.ಸಿ. ಚಟರ್ಜಿಯವರನ್ನು ಸಮ್ಮೇಳನಕ್ಕೆ ಆಹ್ವಾನಿಸಲು ತೀರ್ಮಾನಿಸಲಾಯಿತು. ಸಮ್ಮೇಳನದ ಅಧ್ಯಕ್ಷರಾಗಿ ಅಖಿಲ ಮೈಸೂರು ಹಿಂದೂ ಮಹಾಸಭೆಯ ಅಧ್ಯಕ್ಷ ಮಲ್ಲಪ್ಪ ಅವರನ್ನು ಕಾರ್ಯದರ್ಶಿಯಾಗಿ ಪರಮಶಿವಯ್ಯನವರನ್ನು ಆಯ್ಕೆ ಮಾಡಲಾಯಿತು. ಸಮ್ಮೇಳನದ ದಿನಾಂಕ ಮೇ ತಿಂಗಳ ೨೬ ಮತ್ತು ೨೭, ೧೯೪೫ ಎಂದು ಮೊದಲು ತೀರ್ಮಾನಿಸಿದ್ದರು. ಅಂತಿಮವಾಗಿ ಜೂನ್ ೩೦ ಜುಲೈ ೧ ರಂದು ಕನಕಪುರದ ಮುನ್ಸಿಪಲ್ ಮೈದಾನದಲ್ಲಿ ಜರುಗಿತು. ಈ ಸಮ್ಮೇಳನದ ಜೊತೆಗೆ ಅಖಿಲ ಮೈಸೂರು ಹಿಂದೂ ಸ್ಟೂಡೆಂಟ್ ಫೆಡರೇಷನ್ನಿನ ೨ನೇ ಅಧಿವೇಶನವನ್ನು ಇದೇ ವೇದಿಕೆಯಡಿ ಜುಲೈ ೧ರಂದು ನಡೆಸಲಾಯಿತು. ಮೊದಲ ದಿನದ ಕಾರ್ಯಕ್ರಮದ ಉದ್ಘಾಟನೆಯನ್ನು ಡಾ. ಶ್ಯಾಮ್‌ಪ್ರಸಾದ್ ಮುಖರ್ಜಿ ನೆರವೇರಿಸಿದರು. ಇವರೊಂದಿಗೆ ಮುಖ್ಯ ಅತಿಥಿಗಳಾಗಿ ಬಂದಿದ್ದ ತಮಿಳುನಾಡಿನ ಹಿಂದು ಮಹಾಸಭೆಯ ಅಧ್ಯಕ್ಷ ವರದರಾಜು ನಾಯ್ಡುಲು ಆಗಮಿಸಿದ್ದರು. ಇವರೆ ೨ನೇ ದಿನದ ಕಾರ್ಯಕ್ರಮದ ಮುಖ್ಯ ಭಾಷಣಕಾರರು. ಶಿವಮೊಗ್ಗದ ಬೋಪಾಲಂ ಚಂದ್ರಶೇಖರಯ್ಯ, ಬೆಂಗಳೂರಿನ ಬಿ. ಶಿವಮೂರ್ತಿ, ಮಲ್ಲಪ್ಪ, ಆರ್ಯ ಸಮಾಜದ ಸುಬ್ಬನರಸಿಂಹ ಶಾಸ್ತ್ರಿ, ಪಿ.ಆರ್. ರಾಮಯ್ಯ ಮುಂತಾದವರು ಭಾಗವಹಿಸಿದ್ದರು. ೮೦೦ಕ್ಕಿಂತ ಹೆಚ್ಚು ಜನ ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು.

ದೇಶದ ಅಖಂಡತೆ ಉಳಿಯಲು ಮುಸ್ಲಿಂ ಲೀಗ್‌ನ ಪ್ರತ್ಯೇಕ ಪಾಕಿಸ್ತಾನದ ರಚನೆಯನ್ನು ಸಭೆಯಲ್ಲಿ ಖಂಡಿಸಲಾಯಿತು. ಕಾಂಗ್ರೆಸ್ ಪಕ್ಷವು ಮುಸ್ಲಿಂ ಲೀಗ್‌ನ್ನು ಓಲೈಸುವ ನೀತಿ ಕೈ ಬಿಡಬೇಕೆಂದು ಒತ್ತಾಯಿಸಿತು. ಮೈಸೂರು ಮಹಾರಾಜರ ನ್ಯಾಯ ನಿಷ್ಠತೆಯಲ್ಲಿ ವಿಶ್ವಾಸ ಪ್ರಕಟಿಸಿತು. ಅಲ್ಲದೆ ಸಭೆಯಲ್ಲಿ ೪ ಪ್ರಮುಖ ನಿರ್ಣಯಗಳನ್ನು ಕೈಗೊಂಡಿತು.

೧. ಸಮ್ಮೇಳನವು ಮಹಾರಾಜರಿಗೆ ಗೌರವ ವ್ಯಕ್ತಪಡಿಸುತ್ತದೆ, ರೈತರ ಏಳ್ಗೆಗೆ ಬೆನ್ನೆಲುಬಾಗಿರುವ ಗೋಹತ್ಯೆ ನಿಷೇಧವನ್ನು ಜಾರಿಗೆ ತರುವಂತೆ ಒತ್ತಾಯಿಸುತ್ತದೆ.

೨. ವೇವಲ ಯೋಜನೆಯಂತೆ ಮಧ್ಯಂತರ ಸರ್ಕಾರ ರಚನೆಯನ್ನು ಖಂಡಿಸುತ್ತದೆ.

೩. ಮುಸ್ಲಿಂರಿಗೆ ಶಾಸನ ಸಭೆಗಳಲ್ಲಿ ಪ್ರತ್ಯೇಕ ಸ್ಥಾನಗಳನ್ನು ನೀಡುವುದು ಉಚಿತವಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿತು. ಇದರಿಂದ ೩೦ ಕೋಟಿ ಇರುವ ಹಿಂದುಗಳಿಗೆ ಅನ್ಯಾಯವೆಸಗಿದಂತಾಗುತ್ತದೆ.

೪. ರಾಜ್ಯದಲ್ಲಿನ ಅರಮನೆ ಹಾಗೂ ಮುಜರಾಯಿ ದೇವಾಲಯಗಳಿಗೆ ಹರಿಜನರ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟು ಅಸ್ಪೃಶ್ಯತೆಯನ್ನು ತೊಲಗಿಸಲು ಮೈಸೂರು ಅರಸರಲ್ಲಿ ಕೋರುತ್ತದೆ.

ಸಭೆಯ ಆರಂಭದಲ್ಲಿ ಮೈಸೂರು ಧ್ವಜ ಹಾಗೂ ಸಂಘದ ಧ್ವಜಾರೋಹಣವನ್ನು ಡಾ. ಶರ್ಮ ಮತ್ತು ಲಿಂಗೇಗೌಡ ನೆರವೇರಿಸಿದರೆ ಸಭೆಯ ಮುಕ್ತಾಯದಲ್ಲಿ ವಂದೇ ಮಾತರಂ ಗೀತೆ ಹಾಡಲಾಯಿತು. ೨ನೇ ದಿನ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮಲ್ಲಪ್ಪ ಎಂ.ಸಿ. ವಹಿಸಿದ್ದು ವರದರಾಜು ನಾಯ್ಡುಲು ಸಭೆಯನ್ನುದ್ದೇಶಿಸಿ ಭಾಷಣ ಮಾಡಿದರು. ದಕ್ಷಿಣ ಭಾರತದಲ್ಲಿ ಜಾತಿ ಮತ್ತು ಕೋಮು ಭಿನ್ನತೆಯಿಂದ ಲಿಂಗಾಯಿತರು, ಬ್ರಾಹ್ಮಣರು ಬ್ರಾಹ್ಮಣೇತರ ಮುಂತಾದ ಗುಂಪುಗಳು ಹುಟ್ಟಿಕೊಂಡಿರುವುದರಿಂದ ಹಿಂದೂ ಸಾರ್ವಭೌಮತ್ವ ಮತ್ತು ಸಂಸ್ಕೃತಿಗೆ ಧಕ್ಕೆ ಆಗಿದೆ ಎಂದು ಅಭಿಪ್ರಾಯಪಟ್ಟರು. ಮೈಸೂರಿನಲ್ಲಿ ಮುಸ್ಲಿಂ ವಿದ್ಯಾರ್ಥಿಗಳಿಗೆ ಕೊಟ್ಟಿರುವ ಸವಲತ್ತುಗಳನ್ನು ಹಿಂದೂ ವಿದ್ಯಾರ್ಥಿಗಳಿಗೂ ಒದಗಿಸುವಂತೆ, ಶೇ. ೯೪ರಷ್ಟಿರುವ ಹಿಂದೂ ವಿದ್ಯಾರ್ಥಿಗಳಿಗೆ ಸರ್ಕಾರಿ ಕೆಲಸ ನೀಡುವಂತೆ ಬೆಳೆಯುತ್ತಿರುವ ಭ್ರಷ್ಟಾಚಾರ, ಕಾಳಸಂತೆ ವ್ಯಾಪಾರ ತಡೆ, ಮೈಸೂರು ಪ್ರತಿನಿಧಿ ಸಭೆಯಲ್ಲಿ ಮಂತ್ರಿಗಳ ವಿರುದ್ಧ ಅವಿಶ್ವಾಸ ಗೊತ್ತುವಳಿಗೆ ಅವಕಾಶ, ರೇಷ್ಮೆ ಮೇಲಿನ ನಿರ್ಬಂಧ ರದ್ಧತಿ ಇನ್ನು ಮುಂತಾದ ನಿರ್ಣಯ ಕೈಗೊಳ್ಳಲಾಯಿತು.

ಸಭಾದ ವತಿಯಿಂದ INA ದಿನಾಚರಣೆ, ಸುಭಾಷ್‌ಚಂದ್ರಬೋಸ್, ವಿ.ಡಿ. ಸಾವರ್ಕರ್ ಇಂಡೋನೇಷ್ಯಾ ದಿನಾಚರಣೆ (೪.೧೧.೧೯೪೫) ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹಿಂದೂಗಳಲ್ಲಿ ಜಾಗೃತಿ ಮೂಡಿಸುವ ಪ್ರಯತ್ನ ನಡೆಸಿತು. ೧೦.೫.೧೯೪೭ರಂದು ಹಿಂದೂ ಮಹಾಸಭೆ ಸ್ವಾತಂತ್ರ್ಯ ದಿನಾಚರಣೆ ಆಚರಿಸುವ ನಿರ್ಣಯ ಕೈಗೊಂಡಿತು. ಅದೇ ದಿನ ವಿ.ಡಿ. ಸಾವರ್ಕರ್ ರತ್ನಗಿರಿ ಜೈಲಿನಿಂದ ಬಿಡುಗಡೆ ಹೊಂದುವವರಾಗಿದ್ದರು. ಚನ್ನಪಟ್ಟಣದಲ್ಲಿ ಇದೇ ಸಂದರ್ಭದಲ್ಲಿ ೬ನೇ ಸಾರ್ವಜನಿಕ ಸಭೆಯನ್ನು ಅಲ್ಲಿನ ನೀಲಕಂಠೇಶ್ವರ ದೇವಾಲಯದ ಆವರಣದಲ್ಲಿ ನಡೆಸಿತು. ಸಭೆಗೆ ಸುಮಾರು ೧೫೦ಕ್ಕೂ ಹೆಚ್ಚು ಜನರು ಭಾಗವಹಿಸಿದ್ದರು. ಎಸ್.ಜಿ. ಸುಬ್ಬರಾವ್ ಸಭೆಯನ್ನುದ್ದೇಶಿಸಿ ಮಾತನಾಡಿದರು. ಚನ್ನಪಟ್ಟಣದಲ್ಲಿ ಕೆಲ ವಸ್ತುಗಳ ಮಾರಾಟ ಹಾಗೂ ಸಾಗಾಟದ ಮೇಲೆ ಹೇರಿದ್ದ ನಿರ್ಬಂಧವನ್ನು ಹಾಗೂ ಆಹಾರ ಕೊರತೆಯನ್ನು ನೀಗಿಸಲು ಒತ್ತಾಯಿಸಿತು. ಅಪ್ಪಾಜಪ್ಪ, ಶ್ರೀನಿವಾಸಯ್ಯ, ಎಲ್.ಸಿ. ಶ್ರೀನಿವಾಸಯ್ಯ, ಯಜಮಾನ್ ಶ್ರೀನಿವಾಸಯ್ಯ, ಚಿಕ್ಕಣ್ಣಶೆಟ್ಟಿ,

ಸುಬ್ಬರಾವ್, ಪುಟ್ಟರಾಮಶೆಟ್ಟಿ, ಗೋಪಾಲಕೃಷ್ಣಶೆಟ್ಟಿ, ಎಸ್.ಎ. ವೆಂಕಟಗಿರಿಯಯ್ಯ, ಸಿ.ಆರ್. ಕುಪ್ಪಣ್ಣ ಹಾಗೂ ರಾಮರಾವ್ ಮುಂತಾದವರು ಇದ್ದ ಸಮಿತಿ ರಚಿಸಿ ಆಹಾರ ಸಮಸ್ಯೆ ಕುರಿತಂತೆ ಚರ್ಚಿಸಲು ಸಮಿತಿ ರಚಿಸಲಾಯಿತು. ಪಾಕಿಸ್ತಾನ ವಿಭಜನೆ ಘೋಷಿತವಾದಾಗ ಮುಸ್ಲಿಂ ಲೀಗ್ ಹಾಗೂ ಹಿಂದೂ ಮಹಾಸಭಾ ಕಾರ್ಯಕರ್ತರನ್ನು ಬಂಧಿಸಲಾಯಿತು. ಅಂದು ಚನ್ನಪಟ್ಟ, ರಾಮನಗರಗಳಲ್ಲಿ ಉಂಟಾದ ಗಲಭೆಯಿಂದ ಇಬ್ಬರು ಸತ್ತು, ಹಲವರು ಗಾಯಗೊಂಡರು.

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಮತಾಧಾರಿತ ಸಂಘಟನೆಗಳ ಹೋರಾಟ ಭಾರತದ ರಾಜಕೀಯ ಚರಿತ್ರೆಯ ದಿಕ್ಕನ್ನೇ ಬದಲಿಸಿತು. ಭಾರತೀಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂತಃಶಕ್ತಿಯೊಂದು ಊನಗೊಂಡಿದ್ದು ಕೂಡ ಇಂತಹ ಕೋಮುವಾದಿ ರಾಜಕಾರಣದಿಂದಾಗಿಯೇ ಎಂಬುದು ದೇಶ ವಿಭಜನೆಯ ದುರಂತ ಸಾಬೀತು ಪಡಿಸಿತು. ಭಾರತಕ್ಕೆ ಶಾಶ್ವತವಾದ ಶಾಪ ಕೋಮುವಾದ ರಾಜಕಾರಣ ದಿಂದಲೂ ಪ್ರಾಪ್ತವಾಗಿದೆಯಲ್ಲದೇ ಧಾರ್ಮಿಕ ಸಹನೆ, ಸಮನ್ವಯತೆ, ಶಾಂತಿ, ಅಹಿಂಸೆ ಸೌಹಾರ್ದತೆಯ ಪರಂಪರೆ ಯೊಂದು ಈ ದೇಶದ ಧೀಶಕ್ತಿಯಾಗಿ ಇನ್ನು ಕೆಲಸ ಮಾಡುತ್ತಿದೆ. ಕೋಮುವಾದದ ರಾಜಕಾರಣ ಸ್ಥಳೀಯ ಮಟ್ಟದಲ್ಲಿ ಹೇಗೆ ಕೆಲಸ ಮಾಡುತ್ತಿದೆಯೆಂದರೆ ೧೯೭೮, ೧೯೮೬ರಲ್ಲಿ ವಿಧಾನಸಭಾ ಚುನಾವಣೆ ಸಂದರ್ಭದಲ್ಲೊಮ್ಮೆ ಕರಗ ಉತ್ಸವದಲ್ಲೊಮ್ಮೆ ಹಿಂದೂ ಮುಸ್ಲಿಂ ಸಂಘರ್ಷಗಳಿಗೆ ಕಾರಣವಾದವು. ೧೯೪೭ರಲ್ಲಿ ಭಾರತ ಪಾಕಿಸ್ತಾನ ವಿಭಜಿಸಲ್ಪ ಟ್ಟಾಗ ಚನ್ನಪಟ್ಟಣ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರನ್ನು ಹಾಡು ಹಗಲೇ ಕತ್ತರಿಸಿ ಹಾಕಲಾಯಿತು. ಇಂದಿನ ಕುನ್ನೂರ ಕಟ್ಟೆಯಲ್ಲಿ ಹೆಣಗಳ ರಾಶಿಯೇ ತೇಲುತ್ತಿದ್ದವು ಎಂಬ ಜನರ ಹೇಳಿಕೆಗಳು ಕೋಮುವಾದದ ಹಿಂದೆ ಎಷ್ಟು ನಿರ್ದಯಿ ರಾಜಕಾರಣ ಇದೆ ಎನಿಸುತ್ತದೆ. ಮತ್ತೊಮ್ಮೆ ರಾಮನಗರದಲ್ಲಿ ವೀರೇಂದ್ರ ಪಾಟೀಲ್ ಸರ್ಕಾರದ ಪತನಕ್ಕೂ ಚನ್ನಪಟ್ಟಣ, ರಾಮನಗರಗಳಲ್ಲಿ ನಡೆದ ಕೋಮುಗಲಭೆಗಳು ಕಾರಣ ವಾದವು. ಇತ್ತೀಚೆಗೆ ಭಯೋತ್ಪಾದನೆಯ ಹಿಂದೆ ಇದೇ ಶಕ್ತಿಗಳು ಕೆಲಸ ಮಾಡುತ್ತಿವೆ.

## ಆಧಾರಸೂಚಿ


೧. ವಿ.ಎಸ್. ನಾರಾಯಣರಾವ್, **ಸರ್ ಮಿರ್ಜಾ ಇಸ್ಮಾಯಿಲ್,** ಕಸಾಪ ಬೆಂ. ೧೯೭೫.

೨. Sita Ram Goel : Causes and Consequences, *voice of India,* New Delhi-2002.

೩. ಎಚ್.ಎಸ್. ದೊರೆಸ್ವಾಮಿ : **ಕೋಮುಸೌಹಾರ್ದ,** ಸಾಹಿತ್ಯ ಮಂದಿರ, ಬೆಂಗಳೂರು ೧೯೯೪.

೪. **ವಿಶ್ವ ಕರ್ನಾಟಕ :** ೧೭ ನವೆಂಬರ್ ೧೯೨೮ ೧೪ ಅಕ್ಟೋಬರ್ ೧೯೨೮.

೫. ಎಸ್.ಪಿ. ಶಂಕರನಾರಾಯಣರಾವ್ : **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು,** ನವಕರ್ನಾಟಕ ೧೯೯೧.

೬. ಸ್ಪೆಷಲ್ ಬ್ರಾಂಚ್ ಅಬ್‌ಸ್ಟ್ರಾಕ್ಟ್ ರಿಪೋರ್ಟ್ಸ್, ಪತ್ರಾಗಾರ ಇಲಾಖೆ ಮೈಸೂರು (೧೯೪೨–೪೭)

೭. ಚಟರ್ಜಿ ನಿರ್ಮಲ್ ಚಂದ್ರ ; **ಹಿಂದೂ ಪಾಲಿಟಿಕ್ಸ್, ದಿ ಮೆಸೇಜ್ ಆಫ್ ಮಹಾಸಭಾ,** ೧೯೪೫.

೮. ಇಂದ್ರಪ್ರಕಾಶ್, **ಹಿಂದೂ ಮಹಾಸಭಾ,** ಇಟ್ಸ್ ಕಂಟ್ರೊಬ್ಯೂಟ್ಸ್ ಟು ಇಂಡಿಯನ್ ಪೊಲಿಟಿಕ್ಸ್ ಅ.ಭಾ.ಹಿ.ಮ. ೧೯೬೬.

ಡಾ. ಕೆ. ರವೀಂದ್ರನಾಥ*

# ಧರ್ಮಕಲ್ಯಾಣದ ಸ್ಥಾಪಕ ಗುಂಡಬಸವೇಶ

ಗುಲಬರ್ಗಾ ಜಿಲ್ಲೆ ಚಿತ್ತಾಪುರ ತಾಲೂಕಿನ ನಾಗಾವಿ ೧೦೫೮ರ ೧ನೇ ಸೋಮೇಶ್ವರನ ಕಾಲದಲ್ಲಿ ಘಟಿಕಾಸ್ಥಾನವಾಗಿತ್ತೆಂಬುದು ವಿದ್ವಾಂಸರಿಗೆ ತಿಳಿದ ಸಂಗತಿಯಾಗಿದೆ. ಆದರೆ, ಇತ್ತೀಚೆಗೆ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಿಂದ ಪ್ರಕಟವಾದ 'ಗುಂಡಬಸವೇಶ್ವರ ಚರಿತ್ರೆ' (ಸಂಪಾದಕರು : ಡಾ. ಎಂ.ಎಂ. ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ) ಯಿಂದ ನಾಗಾವಿ 'ಧರ್ಮಕಲ್ಯಾಣ'ವಾಗಿ ಮೆರೆದ ಪ್ರದೇಶ, ಅದರ ಸ್ಥಾಪಕ ಗುಂಡಬಸವೇಶ ಎಂಬುದು ಗಮನಿಸಬೇಕಾದ ಹಾಗೂ ಇತಿಹಾಸದಲ್ಲಿ ದಾಖಲಾಗಬೇಕಾದ ಹೊಸ ಸಂಗತಿ.

ಸಂಗನಬಸವನ ಅಕ್ಕ 'ನಾಗಾಯೆ' ಎಂಬುವವಳು ಆಳಿದ ಕಾರಣ ಆ ಗ್ರಾಮಕ್ಕೆ 'ನಾಗಾವಿ' ಹೆಸರು ಬಂದುದಾಗಿ ಸಂಧಿ ೨, ಪದ್ಯ ೨ ರಿಂದ ತಿಳಿದುಬರುತ್ತದೆ.

**ಸಂಗನ ಬಸವನ ಅಕ್ಕ ನಾಗಾಯೆಯೆಂಬ**
**ಅಂಗನೆಯಾಳಿದ ಗ್ರಾಮದಲಿ ।**
**ಹಿಂಗದೆ ಪೂರ್ವ ಭಾಗದಲಿ ಕೊಳಗನೊಳು**
**ಸಂಗಮೇಶ್ವರ ನೆಲಸಿಹನು ॥**

ಇದೇ ಕಾವ್ಯದ ೨ನೇ ಸಂಧಿ ಆರಂಭವಾಗುವುದು ನಾಗಾವಿಯ ಭೌಗೋಳಿಕ ವರ್ಣನೆಯಿಂದ.

**ಸಪ್ತಯೋಜನೆನವು ಕಲ್ಯಾಣಕೆ ದಕ್ಷಿಣ ಭಾಗ**
**ಇಪ್ಪುದು ಸವಾಯೋಜನವು ।**
**ತಪ್ಪದೇ ದಂಡಗುಂಡಕೆ ಉತ್ತರದೊಳು**
**ಅಪ್ಪ ನೆನೆದ ಬಸವೇಶ ॥**

ಧರ್ಮಕಲ್ಯಾಣಕ್ಕೆ (ನಾಗಾವಿಗೆ) ದಕ್ಷಿಣ ಭಾಗದ ಏಳು ಯೋಜನಕ್ಕೆ ಮತ್ತು ದಂಡಗುಂಡ ಗ್ರಾಮದಿಂದ ಒಂದು ಕಾಲು ಯೋಜನಾ ಉತ್ತರಕ್ಕೆ ಗುಂಡಬಸವೇಶ ನೆಲಸಿದ್ದಾನೆ. ಮುಂದುವರಿದು ಇಲ್ಲಿಂದ ಮೂರು ಯೋಜನಗಳಲ್ಲಿ ಕೂಡಲಸಂಗಮವಿದೆ.

**ಪಶ್ಚಿಮಯಕಾಂಬರಕೆ ತ್ರಿಯೋಜನದಾರಿ**
**ಮುಕ್ಕಣ್ಣ ಕೂಡಲ ಸಂಗಮಗೆ ।**
**ಸಾಕ್ಷಾತ್ ಗುರು ಜನಿಸಿದ ಗಾವುಧರೆಯೊಳು**
**ದಿಕ್ಕಲ್ಲಿ ಈಶಾನ್ಯ ಕೋಣೆಯಲಿ ॥**

ಕೂಡಲಸಂಗಮದಿಂದ ಅರ್ಧಗಾವುದ ದೂರದಲ್ಲಿಯ ನಾಗಾವಿಯಲ್ಲಿ ಗುಂಡಬಸವೇಶ ಜನಿಸಿದನು. ಈ ಊರಿಂದ ವಾಯುವ್ಯದಲ್ಲಿ ಹರದಾರಿ ದೂರದಲ್ಲಿ ಕಂಗಳಿಗೆ (ತಂಗಳಿಗೆ) ಸೋಮಲಿಂಗ-ವೀರಭದ್ರರು ನೆಲೆಸಿದ್ದಾರೆ. ಈ ಕಾವ್ಯೋಕ್ತ ಕಂಗಳಿಗೆ ಇಂದು ಚಿತ್ತಾಪುರದಲ್ಲಿ ಸೇರಿಕೊಂಡಿರುವ ಗ್ರಾಮ. ಇಲ್ಲಿ ತಂಗಳೇಶ್ವರನ ಹೆಸರಿನಲ್ಲಿ ಸೋಮಲಿಂಗ ದೇವಾಲಯವಿದೆ. ಹಾಗೆಯೇ ಸನ್ನೆ ಎಂಬ ಗ್ರಾಮದಲ್ಲಿ ಶಿವ-ಪಾರ್ವತಿಯರು ನೆಲೆಸಿರುತ್ತಾರೆ. ನೂರೊಂದು ಕಂಬದ ಶಿವಾಲಯದಲ್ಲಿ ಅಕ್ಕನಾಗಾಯಿ ಜಂಗಮದಾಸೋಹ ಮಾಡುತ್ತಿದ್ದ ಕಾರಣ ಛತ್ರಶಾಲೆ ಎಂದು ಹೆಸರು ಬಂದಿತೆಂದು ಪದ್ಯ ೮ರಲ್ಲಿ ಉಲ್ಲೇಖಿಸಲಾಗಿದೆ.

**ಇಂತು ನೂರೊಂದು ಕಂಬದ ಶಿವಾಲ್ಯದೊಳು**
**ಸಂತತ ಅಕ್ಕ ನಾಗಾಯಿ ।**
**ಕಂತುಹರನ ಭಕ್ತೆ ಜಂಗಮಾರ್ಚನೆ ಮಾಡೆ**
**ಅಂತು ಛತ್ರಸಾಲೆಯಂದೆನಿಸಿ ॥**

ಈ ಹೊತ್ತು ತ್ರೈಪುರುಷ ದೇವಾಲಯವೆಂದೂ, ಅದು ಘಟಿಕಾಸ್ಥಾನವಾಗಿತ್ತೆಂದೂ, ಅಲ್ಲಿ ವೇದಾಧ್ಯಯನ-ಶಾಸ್ತ್ರಾಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳು ಇರುತ್ತಿದ್ದರೆಂದೂ ವರ್ಣಿಸುವ ೧೦೫೮ರ ಶಾಸನೋಕ್ತ "ಛಾತ್ರಾನಿಲಯ" ಅಂದರೆ ವಿದ್ಯಾರ್ಥಿಗಳ ವಾಸಸ್ಥಾನ ಇದೇ ಆಗಿದೆ. ಇಲ್ಲಿ ಕಾವೋಕ್ತ ೧೦೧ ಕಂಭಗಳಿರದೆ ; ೬೦ ಕಂಭಗಳಿಂದ ಆ ದೇವಾಲಯ ನಿರ್ಮಾಣಗೊಂಡಿದೆ. ನಾಗವೇಲಾಂಬಿಕೆ ದೇವಾಲಯ, ನಂದಿಕೇಶ್ವರ ದೇವಾಲಯ, ಸಿದ್ದೇಶ್ವರ ದೇವಾಲಯ, ಈರಪ್ಪಯ್ಯನ ಗದ್ದುಗೆ, ತಿಪ್ಪಣ್ಣಯ್ಯನ ಗದ್ದುಗೆ, ಗುಂಡಬಸವಣ್ಣನ ಗದ್ದುಗೆಗಳು ಈಗಲೂ ಧರ್ಮಕಲ್ಯಾಣದಲ್ಲಿ ಇವೆ.

***ಗುಂಡಬಸವೇಶ್ವರ ಚರಿತ್ರೆ : ಧರ್ಮ ಕಲ್ಯಾಣದ ವಿವರ***

"ಶ್ರೀಮತು ಶಾಲಿವಾಹನ ಶಕೆ ೧೬೨೨ನೇ ವಿಕ್ರಮನಾಮ ಸಂವತ್ಸರದೊಳಗೆ ಆಶ್ವೀಜ ಅಧಿಕ ಮಾಸದೊಳು ಸಪ್ತಮಿ ಮಂಗಳವಾರ ದಿನ ಮುಗಿಯಿತು"-ಎಂದು ಕಾವ್ಯದ ಅಂತ್ಯದಲ್ಲಿ ಪ್ರತಿಕಾರನ ಉಲ್ಲೇಖವಿದೆ. "ಈ ಪುಸ್ತಕ ಬರೆದವರಾರು ಯೆಂದರೆ ಕೊಡೆಯಕಲ್ಲು ಸಿದ್ಧಯ್ಯನ

* ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಮಾರ ಬಸವಯ್ಯನು ತನ್ನ ಸ್ವಹಸ್ತದಲ್ಲಿ ಬರೆದುಕೊಟ್ಟನು" "ಕಕ್ಕಳಮೇಲಿಯ ಮಠದ ಅಲ್ಲಮಪ್ರಭು ದೇವರ ವರಪುತ್ರ ಗದ್ದಿಗೆರಾಯನ ಸೋದರಳಿಯನು ಬರೆಸಿದ (ವ) ನು ಪರಭಯ್ಯನು"–ಎಂದಿರುವುದರಿಂದ ಕ್ರಿ.ಶ. ೧೭೦೦ರಲ್ಲಿ ಈ ಗ್ರಂಥ ಕೃತಿಗೊಂಡಿರಬೇಕು ಅಥವಾ ಪ್ರತಿಗೊಂಡಿರಬೇಕು. ಇದನ್ನು ಬರೆದವರು ಕಡೆಯ ಕಲ್ಯಾಣವೆನಿಸಿದ ಕೊಡೆಕಲ್ಲಿನ ಸಿದ್ಧಯ್ಯನ ಮಗ ಬಸವಯ್ಯ. ಬರಸಿದವರು ಕಕ್ಕಳಮೇಲಿಯ ಪರಭಯ್ಯ". ಈ ಕಾವ್ಯದ ಕಥಾನಾಯಕ ಗುಂಡಬಸವೇಶ. ೭ ಸಂಧಿಯುಳ್ಳ ಈ ಕಾವ್ಯದಲ್ಲಿ ಶರಣಸ್ತುತಿ, ಗುಂಡಬಸವೇಶ್ವರನ ಶಿವನಸನ್ನಿಧಿ ಕಥನ, ಗುಂಡಬಸವೇಶ್ವರನ ಗ್ರಾಮಕಥನ, ಗುಂಡಬಸವೇಶ್ವರನ ಅವತಾರ ಕಥನ, ಗುಂಡಬಸವೇಶ್ವರ ಲೀಲಾಕಥನ, ಗುಂಡಬಸವೇಶ್ವರ ಸಂಸಾರ ಕಥನ, ಗುಂಡಬಸವೇಶ್ವರನ ಐಕ್ಯಕಥನವನ್ನು ಚಿತ್ರಿಸಲಾಗಿದೆ. ಗುಂಡಬಸವೇಶ್ವರನ ಸಂಧಿ ೪ ಪದ್ಯ ೧೫ರಲ್ಲಿ

**ಕೇಳು ನೀ ಬಸವಣ್ಣ ಹೇಳುವ ಮಾತನು**
**ಬಾಳಲೋಚನ ಭಕ್ತನೊಬ್ಬ ॥**
**ಹಳೆಯ ಸಗರದ ಹೊರಗೆ ಮಠ ಕಟ್ಟಿ ತಾ**
**ಇಳೆಯೊಳಮರ ಕಲ್ಯಾಣೆನಿಸಿ ॥**

–ಎಂದು ತಿಪ್ಪಣ್ಣಯ್ಯ ಬಾಲಕ ಗುಂಡಬಸವಣ್ಣನಿಗೆ ಹೇಳುವುದರಿಂದ ಸಗರನಾಡೆಂದು ಖ್ಯಾತಿ ಹೊಂದಿದ್ದ ಇಂದಿನ ಶಹಾಪುರ. ಹತ್ತಿರದ ದಿಗ್ಗಿಯಲ್ಲಿ ಸಂಗಮನಾಥ ಅಮರಕಲ್ಯಾಣ ನಿರ್ಮಿಸಿದನೆಂದು ಹೇಳಿ ಅದೇ ರೀತಿ ನೀನು ಧರ್ಮಕಲ್ಯಾಣ ಸ್ಥಾಪಿಸಬೇಕೆಂದು ಆದೇಶಿಸುತ್ತಾನೆ. ಆ ಪ್ರಕಾರವಾಗಿ ಗುಂಡಬಸವೇಶ್ವರ ಧರ್ಮಕಲ್ಯಾಣ ಸ್ಥಾಪಿಸಿದ ನೆಂಬುದನ್ನು ಸಂಧಿ ೬ ಪದ್ಯ ೧೫ರಲ್ಲಿ ಹೀಗೆ ಉಲ್ಲೇಖಿಸ ಲಾಗಿದೆ.

**ಕಟ್ಟಿದನು ಊರ ಹೊರಗೆ ಮಠವನು**
**ಇಟ್ಟನು ಅದಕೆ ನಾಮವನು ॥**
**ಸೃಷ್ಟಿಗೆ ಧರ್ಮಕಲ್ಯಾಣವೆಂದಾಗಿಸಿದ**
**ನಿಷ್ಠಿಯ ಮೂಲಪೀಠವನು ॥**

ಹೀಗೆ ಧರ್ಮಕಲ್ಯಾಣವನ್ನು ಕಟ್ಟಿದ ಗುಂಡಬಸವಣ್ಣನಿಗೆ "ಧರ್ಮಕಲ್ಯಾಣದೊಡೆಯ" ಎಂದು ಕರೆಯಲಾಗಿದೆ ;

**ಧರ್ಮಕಲ್ಯಾಣದೊಡೆಯ**
**ನಿರ್ಮಳ ಭಕ್ತಿಯಲಿ ನಡೆದು ಗುರುವೆಂದರಿತರೆ ॥**
**ಪರ್ಮಪದವೀವ ಇಹದಲಿ**
**ಪರ್ಮ ಗುರುಗುಂಡನೀವ ಪರಮಸಾಯುಜ್ಯವ ॥**

ಹೀಗೆ ಧರ್ಮಕಲ್ಯಾಣದ ಉಲ್ಲೇಖ ಗುಂಡಬಸವನ ಚರಿತ್ರೆಯಲ್ಲಿ ಬರುತ್ತಿದೆ. ಗುರು ಗುಂಡಬಸವ ಅಂಕಿತದ ಸ್ವರವಚನದಲ್ಲಿ ವರ್ಣಿಸಿರುವುದಿಂತಿದೆ:

**ಧರ್ಮದ ಹಾದಿಯ ತೋರಲಿ ಬಂದೆ**
**ಶರಣು ಶರಣು ಗುಂಡಬಸವಯ್ಯಾ**
**ಧರ್ಮದ ಹಾದಿಯ ತೋರಲಿ ಬಂದೆ**
**ಧರ್ಮಕಲ್ಯಾಣಕೆ**

ಹೀಗೆ ನಾಗಾವಿ ಧರ್ಮಕಲ್ಯಾಣವಾಗಿ ಪ್ರಸಿದ್ಧಿಗೆ ಬಂದ ಮೇಲೆ ಆ ಪರಂಪರೆಯಲ್ಲಿ ಧರ್ಮಕಲ್ಯಾಣ ಸ್ಥಾಪನೆಗೆ ಪ್ರೇರಣೆ ನೀಡಿದ ನಾಗಾವಿಯ ತಿಪ್ಪಣ್ಣಯ್ಯನು ಗುಂಡಬಸವಣ್ಣನಿಗೆ ಹಿರಿಯ ಅನುಭಾವಿ. ಈತನ ನಂತರ ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕಕ್ಕಳ ಮೇಲಿಯ ಅಲ್ಲಮಪ್ರಭು ಮತ್ತು ಈರಪ್ಪಯ್ಯರು ಗುಂಡಬಸವೇಶ್ವರನ ಐದು ಜನ ಮಕ್ಕಳಲ್ಲಿ ಇಬ್ಬರಾಗಿದ್ದಾರೆ. ಆನಂತರ ಸಾಲೋಟಗಿ ಶಿವಯೋಗಿ – ಇವರೆಲ್ಲ ಒಂದೇ ಗರಡಿಯಲ್ಲಿ ಪಳಗಿದ ಅನುಭಾವಿಗಳು. ಧರ್ಮಕಲ್ಯಾಣ ಪರಿಸರದಲ್ಲಿ ಡಂಗೂರು ಪದಗಳು, ಸ್ವರವಚನ ಸಾಹಿತ್ಯ, ಸೃಷ್ಟಿಯಾದವು.

*ಒಟ್ಟಿನಲ್ಲಿ ಈ ಪ್ರಬಂಧದ ಒಟ್ಟು ಆಶಯವೆಂದರೆ: ಕೊಡೇಕಲ್ಲು ಬಸವಣ್ಣ ದೇಶ ಸಂಚಾರಿಯಾಗಿ ಅಮರ ಕಲ್ಯಾಣವೆನಿಸಿದ ಶಹಾಪುರದ ದಿಗ್ಗಿ ಸಂಗಮನಾಥನಲ್ಲಿಗೆ ಬರುತ್ತಾನೆ. ಆಗಾಗಲೇ ಸಂಗಮನಾಥ ಐಕ್ಯನಾಗಿರುತ್ತಾನೆಂದು ನಂದಿಯಾಗಮಲೀಲೆ ಕೃತಿ ತಿಳಿಸುತ್ತದೆ. ಮುಂದೆ ಈತ ಈಶಾನ್ಯಕ್ಕೆ ನಡೆದು ಧರ್ಮಕಲ್ಯಾಣವೆನಿಸಿದ ನಾಗಾವಿಗೆ ಬರುತ್ತಾನೆ. ಆಗಾಗಲೇ ಗುಂಡಬಸವೇಶ್ವರ ಐಕ್ಯನಾಗಿರುತ್ತಾನೆ. ಆತನ ಮನೆಗೆ ಹೋಗಿ ಪತ್ನಿಯಲ್ಲಿ ಭಿಕ್ಷೆ ಬೇಡುತ್ತಾನೆ. ಭಿಕ್ಷೆಗೆ ಏನೂ ಇಲ್ಲ ಎಂದಾಗ, ಶಿವ ನೀಡಿದ ಬಹು ದಿನದ ಕಜ್ಜಾಯವಿದೆಯೆಂದು ಹೇಳಿ, ಅದನ್ನು ಪಡೆದು ಕೊಡೇಕಲ್ಲಿಗೆ ಹೋಗುತ್ತಾನೆ. ಈ ಸಂಗತಿಯನ್ನು ತಾಯಿಯಿಂದ ತಿಳಿದ ಈರಪ್ಪಯ್ಯ ಕೊಡೇಕಲ್ಲಿಗೆ ಹೋಗಿ ಆತನ ಶಿಷ್ಯನಾಗುತ್ತಾನೆ." ಇದಿಷ್ಟು ವಿವರಣೆಯಿಂದ ಕನ್ನಡ ಕಾವ್ಯಗಳಲ್ಲಿ ಉಲ್ಲೇಖಿತ ಗೊಂಡ ಸಮಯಕಲ್ಯಾಣ ಈಗಿನ ಬಸವಕಲ್ಯಾಣ, ಶಾಸನೋಕ್ತ ವಿಜಯಕಲ್ಯಾಣ ಈಗಿನ ಹಂಪಿ ಇವುಗಳ ಕುರಿತು ವಿದ್ವಾಂಸರಲ್ಲಿ ಏಕಾಭಿಪ್ರಾಯವಿದೆ. ಆದರೆ ಕೊಡೇಕಲ್ಲನ್ನೇ ಅಮರಕಲ್ಯಾಣ ವೆಂದು ತಪ್ಪಾಗಿ ಗ್ರಹಿಸಲಾಗಿತ್ತು, ಅದೇ ರೀತಿ ಧರ್ಮಕಲ್ಯಾಣದ ತಿಳುವಳಿಕೆ ಗಮನಕ್ಕೆ ಬಂದಿರಲಿಲ್ಲ. ಹೀಗಾಗಿ ಸಮಯ ಕಲ್ಯಾಣ– ವಿಜಯ ಕಲ್ಯಾಣಗಳ ನಂತರ ೩ನೆಯದು ಶಹಾಪುರ ಸಮೀಪದ ದಿಗ್ಗಿ ಅಮರಕಲ್ಯಾಣ, ೪ನೆಯದು ನಾಗಾವಿ ಧರ್ಮಕಲ್ಯಾಣ, ೫ನೆಯದು ಕೊಡೇಕಲ್ಲಿನ ಕಡೆಯ ಕಲ್ಯಾಣ–ಹೀಗೆ ೫ ಕಲ್ಯಾಣಗಳ ಸ್ಥಾಪನೆಯ ಹಿಂದಿರುವ ಇತಿಹಾಸದ ನಿಜದ ಹಿನ್ನೆಲೆಯನ್ನು ಪ್ರತ್ಯೇಕವಾಗಿ "ಕನ್ನಡ ನಾಡಿನ ಕಲ್ಯಾಣ ಪರಂಪರೆ" ಎಂದು ಅಧ್ಯಯನ ಮಾಡುವ ಅಗತ್ಯವಿದೆ. ಈ ಪರಂಪರೆ ಮುಂದೆ ಬಿಜಾಪುರ ಜಿಲ್ಲೆಯ ಕಕ್ಕಳ ಮೇಲಿ, ಸಾಲೊಟಗಿ ಪರಿಸರದಲ್ಲಿ ಅಲ್ಲಮಪ್ರಭು, ಶಿವಯೋಗಿಗಳ ನೇತೃತ್ವದಲ್ಲಿ ವಿಕಾಸಗೊಂಡಂತೆ ತೋರುತ್ತದೆಂಬ ಅಂಶವನ್ನು ಇಲ್ಲಿ ಹೇಳಲವಕಾಶವಿದೆ.*

ಡಾ. ಶಶಿಧರ್*

# ಅಮೃತೂರಿನ ಅಪೂರ್ವ ಶ್ರೀ ಪಟ್ಟಾಲದಮ್ಮ ದೇವಾಲಯ

ಅಮೃತೂರು ಗ್ರಾಮವು ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ, ಅದೇ ಹೆಸರಿನ ಹೋಬಳಿ ಕೇಂದ್ರವಾಗಿದ್ದು, ತಾಲ್ಲೂಕು ಕೇಂದ್ರವಾದ ಕುಣಿಗಲ್‌ನಿಂದ ನೈಋತ್ಯಕ್ಕೆ ಸುಮಾರು ೨೨ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಶಾಸನೋಕ್ತ ಪ್ರಾಚೀನ ಗ್ರಾಮವಾದ ಅಮೃತೂರಿಗೆ ಶ್ರೀ ವೀರನಾರಸಿಂಹಪುರ ಮತ್ತು ಆತಕೂರು ಎಂಬ ಹೆಸರುಗಳಿದ್ದು, ಲಭ್ಯ ಶಾಸನಗಳ ದಾಖಲೆಯ ಆಧಾರದ ಮೇಲೆ ಸುಮಾರು ೧೬ನೇ ಶತಮಾನ ಅಥವಾ ಅದಕ್ಕೂ ಹಿಂದೆ ಬ್ರಾಹ್ಮಣ ವರ್ಗದ ಪುರಾತನ ಅಗ್ರಹಾರ ಪಟ್ಟಣವಾಗಿತ್ತೆಂದು ಕಂಡುಬರುತ್ತದೆ.

ಭೌಗೋಳಿಕ ಅಂಶ ಹಾಗೂ ಸನ್ನಿವೇಶಗಳ ಪ್ರಕಾರ ಪ್ರಸ್ತುತ ಈ ಪ್ರಬಂಧದ ಕ್ಷೇತ್ರಕಾರ್ಯವು ಭಾರತೀಯ ಸರ್ವೇಕ್ಷಣಾ ಸಂಸ್ಥೆಯ ಟೋಪೋ ಶೀಟ್ ೫೭/ಡಿ/೧೩ (ಅಳತೆ ೧:೫೦,೦೦೦) ನಕ್ಷೆಯ ಪೂರ್ವ ರೇಖಾಂಶ ೭೬°೫೫' ಯಿಂದ ೭೬°೫೭' ರವರೆಗೂ, ಉತ್ತರ ಅಕ್ಷಾಂಶ ೧೨°೫೨' ಯಿಂದ ೧೨°೫೭' ವರೆಗೂ ವ್ಯಾಪಿಸಿದೆ. ಗ್ರಾಮ ಪಂಚಾಯಿತಿ ಕೇಂದ್ರವಾದ ಅಮೃತೂರು ಗ್ರಾಮದ ಪೂರ್ವಕ್ಕೆ ರಾಘವನ ಹೊಸೂರು, ಪಶ್ಚಿಮಕ್ಕೆ ಶ್ಯಾನಭೋಗನ ಹಳ್ಳಿ, ಉತ್ತರಕ್ಕೆ ಕೊಡಿಗೆಹಳ್ಳಿ, ದಕ್ಷಿಣಕ್ಕೆ ಹೊಸಕೆರೆ ಗ್ರಾಮಗಳಿದ್ದು, ಈಶಾನ್ಯಕ್ಕೆ ಪುಟ್ಟನಹಳ್ಳಿ, ವಾಯುವ್ಯಕ್ಕೆ ಚಿನ್ನಹಳ್ಳಿ, ನೈಋತ್ಯಕ್ಕೆ ಕಿರೆಗೂರು, ಆಗ್ನೇಯಕ್ಕೆ ಹಂದಲಗೆರೆ ಗ್ರಾಮಗಳ ಗಡಿಗಳು ವ್ಯಾಪಿಸಿದೆ.

ಅಮೃತೂರು ಗ್ರಾಮ ಪರಿಸರದಲ್ಲಿ ಅನೇಕ ದೇವಾಲಯಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಕೆರೆಗಳು, ನಿವೇಶನಗಳು, ಕೋಟೆಗಳು, ಗಾರೆ ಶಿಲ್ಪದ ದೇವಾಲಯ ಹಾಗೂ ದೇವತಾ ಮೂರ್ತಿ ಶಿಲ್ಪಗಳು, ಅರವಟ್ಟಿಗೆಗಳು, ಬೆಟ್ಟ-ಗುಡ್ಡಗಳು, ಹಳ್ಳ-ಕೊಳ್ಳಗಳು ಕಂಡುಬರುತ್ತಿದ್ದು, ಪೌರಾಣಿಕವಾಗಿ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಅಮೃತೂರು ಗ್ರಾಮವು ವಿಶೇಷತೆ ಹೊಂದಿದೆ.

ಪ್ರಸ್ತುತ ಈ ಗ್ರಾಮದ ಮಧ್ಯ ಭಾಗದಲ್ಲಿ ಶ್ರೀ ಚೆನ್ನಕೇಶವ ದೇವಾಲಯ, ದೊಡ್ಡ ಕೆರೆಯ ಏರಿಯ ಹತ್ತಿರವಿರುವ ಶ್ರೀ ಚಂದ್ರಮೌಳೇಶ್ವರ ದೇವಾಲಯ ಅಥವಾ ಶ್ರೀ ಸೋಮೇಶ್ವರ ದೇವಾಲಯ ಮತ್ತು ಶ್ರೀ ಪುಟ್ಟೇಶ್ವರ ಸ್ವಾಮಿ ದೇವಾಲಯ (ಪ್ರಸ್ತುತ ಪಾಳು ಬಿದ್ದಿದೆ), ಊರ ಬಾಗಿಲ ಹತ್ತಿರದ ಶ್ರೀ ವೀರಾಂಜನೇಯ ಮತ್ತು ಶ್ರೀ ವೆಂಕಟರಮಣ ದೇವಾಲಯ (ಶಿಥಿಲಾವಸ್ಥೆಯಲ್ಲಿರುವ ಈ ದೇವಾಲಯದ ದೇವತಾ ಮೂರ್ತಿಯು ಊರ ಮಧ್ಯಭಾಗದಲಿ ಬಣಜಿಗ ಸಮುದಾಯದ ನೆರವಿನಿಂದ ಕಟ್ಟಲ್ಪಟ್ಟಿರುವ ದೇವಾಲಯದಲ್ಲಿ ಪೂಜಿಸಲ್ಪಡುತ್ತಿದೆ), ಊರ ಹೊರಭಾಗದಲ್ಲಿರುವ ಶ್ರೀ ಪಟ್ಟಾಲದಮ್ಮ ದೇವಾಲಯ ಹಾಗೂ ಶ್ರೀ ಸೋಮೇಶ್ವರ ದೇವಾಲಯದ ಹತ್ತಿರ ಶ್ರೀ ಮೈಲಾರ ಲಿಂಗೇಶ್ವರ ದೇವಾಲಯಗಳಿವೆ.

ಅಮೃತೂರಿನ ಗ್ರಾಮದೇವತೆ ಶ್ರೀ ಪಟ್ಟಾಲದಮ್ಮನ ದೇವಾಲಯವು ಊರಿನ ಆಗ್ನೇಯ ದಿಕ್ಕಿನಲ್ಲಿ ಗ್ರಾಮದಿಂದ ಹೊರಭಾಗದಲ್ಲಿ ಸುಮಾರು ೨ ಕಿ.ಮೀ. ದೂರದಲ್ಲಿ ಪೂರ್ವರೇಖಾಂಶ ೭೬°೯೪೬'೯" ಮತ್ತು ಉತ್ತರ ಅಕ್ಷಾಂಶ ೭೬°೯೦೮'೫೮" ಯ ನಿಶ್ಚಿತ ಸ್ಥಳದಲ್ಲಿ ಹೊಸಪಾಳ್ಯ ಎಂಬ ಗ್ರಾಮಕ್ಕೆ ಹೊಂದಿಕೊಂಡಂತೆ ಇದೆ. ದೇವಾಲಯವು ೨೦ ಮೀ. ಉದ್ದ ಮತ್ತು ೧೫.೩ ಮೀ. ಅಗಲದ ಗಾರೆಯಿಂದ ಕಟ್ಟಲ್ಪಿದ್ದು ಪ್ರಾಕಾರದೊಳಗಿದ್ದು, ೫.೩ ಮೀ. ಉದ್ದ ಮತ್ತು ೬.೩ ಮೀ. ಅಗಲದ ದೇವಾಲಯ ಕಟ್ಟಡವಿದೆ. ಗರ್ಭಗುಡಿಯು ೫.೫ ಮೀ. ಅಗಲವಿದ್ದು, ೫ ಮೀ. ಉದ್ದವಿದೆ.

ಗರ್ಭಗುಡಿಯಲ್ಲಿ ಸುಮಾರು ೫ ಅಡಿ ಎತ್ತರ ಮತ್ತು ೩ ಅಡಿ ಅಗಲದ ಎರಡು ಗಾರೆ ಶಿಲ್ಪದ ದೇವಿಯರ ಮೂರ್ತಿಗಳಿದ್ದು ಆ ಮೂರ್ತಿಗಳನ್ನು ಹಲವಾರು ಬಣ್ಣಗಳನ್ನು ಬಳಸಿ ಸುಂದರವಾಗಿ ನಿರ್ಮಿಸಿದ್ದಾರೆ. ಎಡಗಡೆಯಿರುವ ದೇವತೆಯನ್ನು ಶ್ರೀ ಪಟ್ಟಾಲದಮ್ಮ ಎಂತಲೂ, ಬಲಗಡೆಯಿರುವ ಮೂರ್ತಿಯನ್ನು ಶ್ರೀ ಲಕ್ಷ್ಮೀದೇವಮ್ಮ ಎಂತಲೂ ಪೂಜಿಸುತ್ತಿದ್ದಾರೆ. ಶ್ರೀ ಪಟ್ಟಾಲದಮ್ಮ ದೇವಿಯ ಪೀಠದ ಕೆಳಭಾಗದಲ್ಲಿ ವಾಹನ ರೂಪವಾಗಿ ನೀಲಿ ಬಣ್ಣದಲ್ಲಿ ಸಾಲಂಕೃತ ಮಹಿಷ (ನಂದಿ)ದ ಚಿತ್ರ ಶಿಲ್ಪವಿದೆ. ಶ್ರೀ ಲಕ್ಷ್ಮೀದೇವಮ್ಮ ದೇವಿಯ ಕೆಳಭಾಗದಲ್ಲಿ ವಾಹನ ರೂಪವಾಗಿ

* ಭೂವಿಜ್ಞಾನಿ, ವರಮಹಾಲಕ್ಷ್ಮಿ ನಿಲಯ, ೯೨೮, ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು.









ಬಿಳಿಯ ಬಣ್ಣದಲ್ಲಿ ಸಾಲಂಕೃತ ಐರಾವತದ ಶಿಲ್ಪ ಮೂರ್ತಿಯಿದೆ (ಪೀಠದ ಕೆಳಕಡೆಯಿರುವ ವಾಹನ ಶಿಲ್ಪಗಳ ಆಧಾರದ ಮೇಲೆ ಶ್ರೀ ಪಟ್ಟಾಲದಮ್ಮ ಮತ್ತು ಶ್ರೀ ಲಕ್ಷ್ಮೀದೇವಮ್ಮ ದೇವತಾ ಮೂರ್ತಿಗಳನ್ನು ಸಪ್ತಮಾತೃಕೆ ದೇವತೆಯರಲ್ಲಿ ಇಬ್ಬರಾದ ಶ್ರೀ ಮಹೇಶ್ವರಿ (ಮಹಿಷವಾಹನೆ), ಶ್ರೀ ಇಂದ್ರಾಣಿ ಅಥವಾ ಗಜಲಕ್ಷ್ಮೀ (ಐರಾವತ ವಾಹನೆ) ಎಂದು ಕರೆಯಬಹುದೆನಿಸುತ್ತದೆ.

ಎಡಗಡೆಯ ಶ್ರೀ ಪಟ್ಟಾಲದಮ್ಮನ ಮೂರ್ತಿಯನ್ನು ಕೆಲವು ಬಣ್ಣದಲ್ಲಿ ಸ್ವಲ್ಪ ರೌದ್ರರೂಪದಲ್ಲಿ ಕೋರೆ ಹಲ್ಲುಗಳೊಡನೆ ಚಿತ್ರಿಸಿದ್ದರೆ, ಬಲಗಡೆಯ ಶ್ರೀ ಲಕ್ಷ್ಮೀದೇವಮ್ಮನನ್ನು ಹಳದಿ ಬಣ್ಣದಲ್ಲಿ ಸೌಮ್ಯವಾಗಿ ಚಿತ್ರಿಸಿದ್ದಾರೆ. ಇಬ್ಬರು ದೇವಿಯರ ಕಿರೀಟದ ಹಿಂದೆ ಏಳು ಹೆಡೆ ಸರ್ಪದ ಚಿತ್ರವಿದೆ. ಇಬ್ಬರು ದೇವಿಯರ ಹಿಂದೆ ಪ್ರಭಾವಳಿಯಲ್ಲಿ ಗಿಳಿಹಿಂಡಿನ ಸಾಲುಗಳು ಹಸಿರು ಬಣ್ಣದಲ್ಲಿ ಚಿತ್ರಿತವಾಗಿದ್ದು, ಇಬ್ಬರು



ದೇವತಾ ಮೂರ್ತಿಯರ ಎರಡೂ ಕಡೆಗಳಲ್ಲಿ ಒಬ್ಬಬ್ಬ ಹೆಣ್ಣು ಪರಿಚಾರಿಕೆಯರಿದ್ದಾರೆ. ಈ ಎರಡು ದೇವತಾ ಮೂರ್ತಿಯ ಮಧ್ಯದಲ್ಲಿ ಪೀಠದ ಕೆಳಭಾಗದಲ್ಲಿ ಸೋಮನ ಮುಖದ ಶಿಲ್ಪವಿದ್ದು ಕೆಂಪು ಬಣ್ಣದಲ್ಲಿ ಚಿತ್ರಿತವಾಗಿದೆ. ಈ ಎರಡು ದೇವತಾ ಮೂರ್ತಿಗಳು ಕೊರಳಲ್ಲಿ ಮಾಂಗಲ್ಯವನ್ನು ಧರಿಸಿದ್ದು ಸರ್ವಾಲಂಕಾರ ಭೂಷಿತೆಯರಾಗಿದ್ದಾರೆ. ಇಬ್ಬರು ದೇವತೆಯರೂ ಸೊಂಟದಲ್ಲಿ ಏಳು ಹೆಡೆಯ ನಾಗಾಭರಣ ಧರಿಸಿದ್ದರೆ, ಎರಡು ಕಾಲುಗಳಿಗೆ ಒಂದೊಂದು ನಾಗರ ಹಾವು ಸುತ್ತಿಕೊಂಡಿದ್ದು ಹೆಡೆಯನ್ನು ಎತ್ತಿಕೊಂಡಿರುವಂತೆ ಚಿತ್ರಿಸಲಾಗಿದೆ.

ಶ್ರೀ ಪಟ್ಟಾಲದಮ್ಮ ದೇವಿಗೆ ನಾಲ್ಕು ಕೈಗಳಿದ್ದು, ಒಂದರಲ್ಲಿ ತ್ರಿಶೂಲವನ್ನು, ಮತ್ತೊಂದರಲ್ಲಿ ಸರ್ಪಬಂಧಿತ ಢಮರುಗವನ್ನು, ಮಗದೊಂದರಲ್ಲಿ ವೀರಗತ್ತಿಯನ್ನು, ಇನ್ನೊಂದು ಕೈಯಲ್ಲಿ ಬಟ್ಟಲನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ದೇವಿಯು ರುಂಡಮಾಲೆಯನ್ನು ಧರಿಸಿದ್ದು, ಮೊಣಕಾಲಿನ ಮಂಡಿಯ ಕೆಳಗೆ ಆಧಾರವಾಗಿ ಒಂದೊಂದು ರಾಕ್ಷಸ ರುಂಡಗಳ ಚಿತ್ರವಿದೆ. ಜೊತೆಗೆ ಎರಡೂ ಕಾಲುಗಳಲ್ಲಿ ಕಡಗವನ್ನು ಧರಿಸಿದ್ದಾಳೆ. ಶ್ರೀ ಲಕ್ಷ್ಮೀದೇವಮ್ಮನಿಗೆ ಕೂಡಾ ನಾಲ್ಕು ಕೈಗಳಿದ್ದು, ಮೇಲಿನ ಎರಡು ಕೈಗಳಲ್ಲಿ ಪದ್ಮಗಳನ್ನು ಹಿಡಿದಿದ್ದು, ಕೆಳಗಿನ ಎರಡು ಕೈಗಳಲ್ಲಿ ಒಂದು ಅಭಯ ಚಿಹ್ನೆ ಇದ್ದರೆ, ಮತ್ತೊಂದು ಕೈ ವರದ ಚಿಹ್ನೆಯಲ್ಲಿದೆ. ಜೊತೆಗೆ ಕಾಲುಗಳಲ್ಲಿ ಗೆಜ್ಜೆಗಳನ್ನು ಧರಿಸಿದ್ದಾಳೆ.

ಈ ಎರಡು ದೇವತಾ ಮೂರ್ತಿಯ ಹಿಂಭಾಗದಲ್ಲಿ ಸುಮಾರು ೧.೫ ಅಡಿಯ ಗೂಡೊಂದು ಇದ್ದು ಅದರಲ್ಲಿ ಮೂಲ ದೇವರ ಮೂರ್ತಿಯಿದೆ. ಗರ್ಭಗುಡಿಯ ಬಾಗಿಲ ಬಳಿ ಇಕ್ಕೆಲಗಳಲ್ಲಿ ಎದುರು-ಬದುರಾಗಿ ಸುಮಾರು ೫ ಅಡಿಯ ಬಹೃತ್ತಾದ ಗಾರೆಯಲ್ಲಿ ನಿರ್ಮಿತ ಒಂದು ಗಂಡು ಮತ್ತೊಂದು ಹೆಣ್ಣಿನ ರಾಕ್ಷಸ ರೂಪದ (ಭೈರವ ? ಅಥವಾ ಸೋಮಗಳಿಂದ) ನಗ್ನ ಮೂರ್ತಿಗಳಿದ್ದು, ಅವುಗಳನ್ನು ರೌದ್ರವಾಗಿ ಚಿತ್ರಿಸಿದ್ದಾರೆ. ಈ ಎರಡು ಮೂರ್ತಿಗಳ ಬಾಯಿಯ ಇಕ್ಕೆಲಗಳಲ್ಲಿ ಕೋರೆಹಲ್ಲುಗಳಿದ್ದು ಅಗಲವಾದ ಕೆಂಗಣ್ಣಿನಿಂದ ನೋಡುತ್ತಿರುವಂತೆ ಚಿತ್ರಿಸಲಾ ದೆ. ಈ ಎರಡೂ ಮೂರ್ತಿಗಳೂ ಕೊರಳಲ್ಲಿ ನಾಗರಹಾವ ್ನ ಧರಿಸಿದ್ದಾರೆ. ಈ ಎರಡೂ ಮೂರ್ತಿಗಳ ದೇಹದ ಮೆ ಲೆ ಹಾಗೂ ಕಿವಿಯಲ್ಲಿ ಆಭರಣಗಳಿವೆ. ಗಂಡು ಮೂರ್ತಿಯು ತನ್ನ ಬಲಗೈಯಲ್ಲಿ ರಾಕ್ಷಸನ ರುಂಡವನ್ನು ಹಿಡಿದಿದ್ದರೆ ಹೆಣ್ಣು ಮೂರ್ತಿಯು ತನ್ನ ಎಡಗೈಯಲ್ಲಿ ರಾಕ್ಷಸನ ರುಂಡವನ್ನು ಹಿಡಿದಿದೆ.

ನಗ್ನ ರಾಕ್ಷಸ (ಭೈರವ ಅಥವಾ ಸೋಮ) ಮೂರ್ತಿಗಳ ಪಕ್ಕದಲ್ಲಿ ಎದುರು-ಬದುರಾಗಿ ಒಬ್ಬೊಬ್ಬ ಹುಲಿಸವಾರರ ಮೂರ್ತಿಯಿದೆ. ಒಬ್ಬ ಹುಲಿಸವಾರ ಬಾಲಕನೆನಿಸಿದರೆ, ಮತ್ತೊಬ್ಬ ಹುಲಿ ಸವಾರ ಪ್ರೌಢನಿರಬೇಕೆನಿಸುತ್ತದೆ.

ಹುಲಿಸವಾರರ ಪಕ್ಕದಲ್ಲಿ ಅಭಿಮುಖವಾಗಿ ಸರ್ವಾಲಂಕಾರ ಭೂಷಿತ ರಾಜರ ಮೂರ್ತಿಗಳಿವೆ. ಆ ಮೂರ್ತಿಗಳ ಪಕ್ಕದಲ್ಲಿ ಎದುರು-ಬದುರಾಗಿ ಒಂದು ಕಡೆ ರಾಜ ಮತ್ತು ಯಕ್ಷನ ಮೂರ್ತಿಗಳಿದ್ದು ಮತ್ತೊಂದೆಡೆಗೆ ಹಾಲುಣಿಸು ತ್ತಿರುವ ತಾಯಿ-ಮಗುವಿನ ಮೂರ್ತಿಯಿದೆ. ರಾಜನ ಪಕ್ಕದಲ್ಲಿರುವ ಯಕ್ಷನ ಮೂರ್ತಿಯು ಕಿರೀಟ-ಒಡವೆ ಧರಿಸಿ, ಸರ್ವಾಲಂಕಾರ ಭೂಷಿತನಾಗಿದ್ದಾನೆ, ಮತ್ತು ಒಳ್ಳೆಯ ಉಡುಗೆ-ತೊಡುಗೆಗಳನ್ನು ಧರಿಸಿದ್ದಾನೆ. ತಾಯಿಯ ತೊಡೆಯ ಮೇಲಿರುವ ಮಗುವು ಕೂಡಾ ಆಭರಣಗಳನ್ನು ಧರಿಸಿದೆ.

ಪ್ರಾಂಗಣದ ವಾಯುವ್ಯ ಭಾಗದಲ್ಲಿ ಒಂದು ಹುತ್ತವಿದ್ದು ಆ ಭಾಗದ ಗೋಡೆಯು ಕುಸಿಯುವ ಹಂತದಲ್ಲಿದೆ. ದೇವಾಲಯದ ಎಡ ಮತ್ತು ಬಲಭಾಗದಲ್ಲಿ ಅರವಂಟಿಗೆಗಳಿವೆ. ಜನಪದೀಯವಾಗಿ ಹೇಳುವಂತೆ ಬಲಭಾಗದ ಅರವಂಟಿಗೆಯಲ್ಲಿ ಭಕ್ತರು ತಿರುಮಲ-ತಿರುಪತಿಗೆ ಹೋಗುವ ಮುನ್ನ ಇಲ್ಲಿ ತಂಗಿದ್ದು ನಾಮವನ್ನು ಇರಿಸಿಕೊಂಡು ಹೊಗುವ ಪರಿಪಾಠ ಈಗಲೂ ಇದೆ. ದೇವಾಲಯ ಎದುರುಭಾಗದಲ್ಲಿ ಸುಮಾರು ೧೦-೧೫ ಅಡಿ ಉದ್ದದ ಕೊಂಡವಿದ್ದು, ಅದರ ಇಕ್ಕೆಲಗಳಲ್ಲಿ ಒಂದು ಅಡಿಯ ಹಲವಾರು ಕಲ್ಲುಗಳಿದ್ದು ಅವುಗಳ ಮೇಲೆ ಬಹುಶಃ ದೇವಿಯ ಮತ್ತು ಮನುಷ್ಯನ ರೇಖಾ ಚಿತ್ರಗಳಿವೆ. ಅಲ್ಲಿನ ಜನಪದೀಯ ಕಥೆಯಂತೆ ಆ ಗ್ರಾಮದ ನಿವಾಸಿಗಳು ಊರ ಹೊರಗಡೆಯಲ್ಲಿ ಎಲ್ಲೊ ಆಕಸ್ಮಿಕವಾಗಿ ಮರಣ ಹೊಂದಿದರೆ ಅವರ ಆತ್ಮಗಳು ಎಲ್ಲೆಲ್ಲೋ ತಿರುಗಾಡಿಕೊಂಡಿರುತ್ತವೆ ಎಂದು ತಿಳಿದು ಅವರ

ಜ್ಞಾಪಕಾರ್ಥವಾಗಿ ಅವರ (ಮನುಷ್ಯ) ರೇಖಾಚಿತ್ರವನ್ನು ಬರಸಿ ಅದನ್ನು ದೇವಾಲಯದ ಹೊರಗಡೆ ಇಟ್ಟು ಹಬ್ಬದ ಸಮಾರಂಭಗಳಲ್ಲಿ ಅವುಗಳಲ್ಲಿ ಅವುಗಳನ್ನು ನೈವೇದ್ಯ ನೀಡುವುದರಿಂದ ಮೃತರ ಆತ್ಮಗಳು ದೇವಾಲಯದ ಹತ್ತಿರವೇ ಇರುತ್ತವೆ ಮತ್ತು ಯಾರಿಗೂ ತೊಂದರೆ ಕೊಡುವುದಿಲ್ಲ ಎಂದು ಭಾವಿಸುತ್ತಾರೆ.

ಈ ದೇವಾಲಯದ ಅರ್ಚಕ ವೃತ್ತಿಯನ್ನು ಹಲವಾರು ತಲಮಾರಿನಿಂದ ಗಂಗಾ ಮತಸ್ಥರು (ಬೆಸ್ತರು) ಆಚರಿಸಿ ಕೊಂಡು ಬರುತ್ತಿದ್ದು ಯುಗಾದಿಯ ನಂತರದ ೧೫ ದಿನದಲ್ಲಿ ಶ್ರೀ ಪಟ್ಟಾಲದಮ್ಮನ ಜಾತ್ರೆ ನಡೆಯುತ್ತದೆ. ಈ ಸಂದರ್ಭದಲ್ಲಿ ವೈದಿಕ ಶಾಕ್ತ ಸಂಪ್ರದಾಯದ ಪೂಜೆ ಅಂದರೆ ಮರಿ ಸಿಗಿಯುವ ಆಚರಣೆ (ಬಾಯಿಯಿಂದ ಬಲಿ ಪಶುಗಳ ರಕ್ತ ಹೀರುವ ಪದ್ಧತಿ) ಈಗಲೂ ನಡೆಯುತ್ತಿದೆ.

ಶ್ರೀಮತಿ ಹನುಮಾಕ್ಷಿ ಗೋಗಿ*

# ಮೊದಲನೆಯ ಕೊಕ್ಕುಳಿ ವಿಕ್ರಮಾದಿತ್ಯನ ಕೆರಿಕ್ಯಾತನಹಳ್ಳಿಯ ಶಾಸನ

ಹಾನಗಲ್ಲು ತಾಲೂಕಿನ ಕೆರಿಕ್ಯಾತನಹಳ್ಳಿ ಒಂದು ಚಿಕ್ಕ ಗ್ರಾಮವಾಗಿದೆ. ಈ ಗ್ರಾಮದಲ್ಲಿ ಬಾದಾಮಿ ಚಾಲುಕ್ಯ ವಂಶದಲ್ಲಿಯೇ ಅತ್ಯಂತ ಪರಾಕ್ರಮಿಯೆಂದು ಖ್ಯಾತನಾದ ಪುಲಿಕೇಶಿಯ ಕಿರಿಯ ಪುತ್ರ ಹಾಗೂ ತಂದೆಯ ಕಾಲದಲ್ಲಿ ತಂದೆಯಿಂದಲೇ ಯುವರಾಜನೆಂದು ಪಟ್ಟಾಭಿಷಿಕ್ತನಾದ ಮೊದಲನೆಯ ವಿಕ್ರಮಾದಿತ್ಯನ ಶಾಸನವೊಂದು ರಸ್ತೆಯ ಪಕ್ಕದಲ್ಲಿ ಇತ್ತೀಚೆಗೆ ನನ್ನ ಪರಿವೀಕ್ಷಣೆಯ ಕಾಲದಲ್ಲಿ ಪತ್ತೆಯಾಗಿದೆ.

ಬಾದಾಮಿ ಚಾಲುಕ್ಯ ಮೊದಲನೆಯ ವಿಕ್ರಮಾದಿತ್ಯನ ಈ ಶಾಸನವು ಅತ್ಯಂತ ಮಹತ್ವದ ಶಾಸನಗಳಲ್ಲೊಂದಾಗಿದೆ. ಕಲ್ಲಿನಮೇಲೆ ಬರೆದ ಆತನ ಕಾಲದಲ್ಲಿ ಬರೆಸಿದ ಶಾಸನಗಳು ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ದೊರೆತಿರುವುದೇ ಇದಕ್ಕೆ ಕಾರಣ. ಆಂಧ್ರಪ್ರದೇಶದ ದಿಮ್ಮಗುಡಿ (SII XX NO. 24) ಮತ್ತು ತುರಿಮೆಳ್ಳ (SII XXIX PP.160 ff) ಗಳು ಮಾತ್ರ ಇದುವರೆಗೆ ದೊರೆತ ಆತನ ಕಾಲದ ಶಿಲಾಶಾಸನಗಳಾಗಿವೆ. ಈ ಎರಡೂ ಶಾಸನಗಳಲ್ಲಿ ಮಿತಿಯನ್ನು ಸೂಚಿಸಲಾಗಿದೆ. ಈತನ ಚಿಕ್ಕಪ್ಪನಾದ ಬುದ್ಧವರಸನ ಸಂಜಾನ್ ಮತ್ತು ಮೊಮ್ಮಗ ವಿನಯಾದಿತ್ಯ ಮಂಗಲರಸನ ಮಾನೋರ್(ಕ್ರಿ.ಶ. ೬೯೧ ಏಪ್ರಿಲ್ ೭ ಗುಜರಾತ್) ಸಂಸ್ಕೃತಭಾಷೆಯ ತಾಮ್ರಪಟಗಳಲ್ಲಿ ಈತನನ್ನು ಕೊಕ್ಕುಳಿ ವಿಕ್ರಮಾದಿತ್ಯನೆಂದು ಕರೆಯಲಾಗಿದೆ. ಮಾನೋರ್ ತಾಮ್ರಪಟಗಳನ್ನು ಸಂಪಾದಿಸಿದ ಸ್ಟೆನ್ ಕೊನೊ ಅವರು " ಸಂಜಾನ್ ದತ್ತಿಪತ್ರವು ಮಹತ್ವದ ಐತಿಹಾಸಿಕ ಅಂಶಗಳನ್ನು ಒಳಗೊಂಡಿದೆ ಎಂದು ಸಮರ್ಥಿಸಿಕೊಳ್ಳ ಬಹುದು. ಇದಲ್ಲದೆ ಮೊದಲನೆಯ ವಿಕ್ರಮಾದಿತ್ಯನಿಗೆ ಬಳಸಿ ರುವ ಈ ವಿಶೇಷಣವೇ ಪೂರ್ವ ಚಾಲುಕ್ಯರ ವಂಶಾವಳಿಯಲ್ಲಿ ಕೋಕಿಳಿ ಎನ್ನುವ ಹೆಸರಿನಿಂದ ಕಾಣಿಸಿಕೊಳ್ಳುವುದನ್ನು ನೆನಪಿಸಿ ಕೊಳ್ಳಬಹುದು ಎನ್ನುತ್ತಾರೆ." ಇದೇ ಶಾಸನವನ್ನು ಉಲ್ಲೇಖಿಸುತ್ತ ಡಾ. ಕೆ.ವಿ. ರಮೇಶ್ ಅವರು "Giving the prefix of kokkuli to vikramaditya I, he correctly describes his martial exploits achieved astride his favourite steed chitrakantha" ಎಂದು ವರ್ಣಿಸುತ್ತಾರೆ.

ನಂತರ ದೊರೆತ ಕ್ರಿ.ಶ. ೧೧೧೫ರ ರೂಗಿಯ ಕನ್ನಡ ಶಿಲಾಶಾಸನವು ವಂಶಾವಳಿಯನ್ನು ನೀಡುವಾಗ ವಿಕ್ರಮಾದಿತ್ಯನ ಹೆಸರಿನೊಂದಿಗೆ ಕೊಕ್ಕುಳಿ ಎನ್ನುವ ಪೂರ್ವಪದವನ್ನು ಬಳಸಿದೆ. ಡಾ. ಬಾ.ರಾ. ಗೋಪಾಲ್ ಅವರು ೧೯೬೯ರಲ್ಲಿ ಪ್ರಕಟಿಸಿದ ಮಿತಿಯನ್ನು ತಿಳಿಸದ ಬ್ಯಾಡಗಿ ತಾಲೂಕಿನ ಚಿಕ್ಕನಂದೀಹಳ್ಳಿಯ ಎರಡು ಶಾಸನಗಳೂ ಕೂಡ ಎರಡನೆಯ ಪುಲಿಕೇಶಿಯ ಮಗ ಮೊದಲನೆಯ ವಿಕ್ರಮಾದಿತ್ಯನಿಗೆ ಕೊಕ್ಕುಳಿ ಎನ್ನುವ ವಿಶೇಷಣವಿತ್ತೆಂಬುದನ್ನು ಖಚಿತಪಡಿಸುತ್ತವೆ.

ಕನ್ನಡದ ಖ್ಯಾತ ಕವಿ ರನ್ನ ತನ್ನ ಆಶ್ರಯದಾತನಾದ ಇಜೆವಬೆಡಂಗ ಸತ್ಯಾಶ್ರಯನ ವಂಶಾವಳಿಯನ್ನು ತಿಳಿಸುವಾಗ (ಗದಾಯುದ್ಧ ಆಶ್ವಾಸ ೨, ೭ನೆಯ ಪದ್ಯಕ್ಕಿಂತ ಮೊದಲಿನ ಗದ್ಯ) ವಿಜಯಾದಿತ್ಯನ ಮಗ ೨ನೆಯ ವಿಕ್ರಮಾದಿತ್ಯನನ್ನು ಕೊಂಕಣಿ ವಿಕ್ರಮಾದಿತ್ಯನೆಂದು ಹೆಸರಿಸಿದೆ. "ಪೂರ್ವಜ ರಪ್ಪರಸುಗಳೊಳಯೋಧ್ಯಾಪುರ ಪರಮೇಶ್ವರನುಂ ಸತ್ಯಾದಿ ಗುಪ್ತಾಶ್ರಯವಲ್ಲಭನುಮತಿಪ್ರೌಢ ದಿಶಾದಂತಿ ಪ್ರಕಟ ಪ್ರಭಾವನಪ್ಪ ಸತ್ಯಾಶ್ರಯದೇವನಿಂ ವಿಷ್ಣುವರ್ಧನಾಪರನಾಮಧೇಯನುಂ ರಾಷ್ಟ್ರಕೂಟ ಗಜಘಟಾವಿಘಟನಸಿಂಹನೆನಿಸಿದ ಜಯಸಿಂಹ ದೇವನಿಂ ಅತಿ ಪ್ರವರ್ಧನ ಪ್ರಜಾನುರಾಗ ನುಮತಿ ಪ್ರಬಲ ರಣರಾಮನುಮೆನಿಸಿದ ರಣಸಿಂಗಸಿಂಹನಿಂ ವಾತಾಪಿಪುರ ವರೇಶ್ವರನು ಮಶ್ವಮೇಧ ಯಜ್ಞದೀಕ್ಷಿತನುಂ ದ್ವೀಪಾಂತರ ಪ್ರಕಟ ಪ್ರಭಾವನುಮೆನಿಸಿದ ಪುಲಕೇಶಿ ದೇವನಿಂ ಪರಿರಕ್ಷಿತ ಪವಿತ್ರವರ್ಮನೆನಿಸಿದ ಕೀರ್ತಿವರ್ಮದೇವನಿಂ ತತ್ತನಯ ನಪ್ಪೆರಡ ನೆಯ ಸತ್ಯಾಶ್ರಯದೇವನಿಂ ಅವನ ಕಿಜೆಯಮಗನಪ್ಪ ಮಂಗಳಾರ್ಣವನಿಂ ಸತ್ಯಾಶ್ರಯ ನಪ್ಪೆರಡನೆಯ ಸತ್ಯವ್ರತಿಯಿಂ ತತ್ತನೆಯನಪ್ಪ ಆದಿತ್ಯವರ್ಮನಿಂ ತದಪತ್ಯನಪ್ಪ ವಿಕ್ರಮಾ ದಿತ್ಯನಿಂ ತತ್ಪುತ್ರನಪ್ಪ ದುರ್ಧರಮಲ್ಲನಿಂ ತನ್ನಂದನನಪ್ಪ ನಿರವದ್ಯಾಪರ ನಾಮಧೇಯನ ಪ್ಪ ವಿಜಯಾದಿತ್ಯಭಟ್ಟಾರಕನಿಂ ತತ್ಸೂನು ಮಿತ್ರನಪ್ಪ ವಿಕ್ರಮಾರ್ಣವನೆನಿಸಿದ ವಿಕ್ರಮಾದಿ ತ್ಯನಿಂ ತತ್ಸೂನು ಮಿತ್ರನಪ್ಪ ಕೀರ್ತಿವರ್ಮನಿಂ ಆತನ ಕಿಜೆಯಮಗನಪ್ಪ ಭೀಮ ಪರಾಕ್ರಮನಿಂ ತಜ್ಜಾತನಪ್ಪೆರಡನೆಯ ಕೀರ್ತಿವರ್ಮನಿಂ ತತ್ಸೂನುವಪ್ಪ ಪಿರಿಯ ತೈಲಪನಂ ಆತನ ಮಗನಪ್ಪ

*ನವನಗರ, ಹುಬ್ಬಳ್ಳಿ.

ಮುಕುಂದಿಯ ಕೊಂದಕುಂದಿಯ ಭೀಮನಿಂ ಆತನ ಮಗನಪ್ಪ ವಿಕ್ರಮಾದಿತ್ಯದೇವನಿಂ ಆತನ ಮಗನಪ್ಪ ರಣರಂಗಮಲ್ಲ ನೆನಿಪ್ಪಯ್ಯಣದೇವ ನಿಂ ಆತನ ಮಗನುತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯನಿಂ ಚಾಳುಕ್ಯಕುಲೋದ್ಭವನಪ್ಪ ವಿಕ್ರಮಾದಿತ್ಯ ದೇವಂಗಂ ಚೈದ್ಯ ಕುಲೋದ್ಭವೆಯಪ್ಪ ಬೊಂತಾದೇವಿಗಂ ಪುಟ್ಟಿದಂ" ಎಂದು ವಿವರಿಸುತ್ತಾನೆ.

ಇಲ್ಲಿ ತಪ್ಪಾಗಿ ಎರಡನೆಯ ವಿಕ್ರಮಾದಿತ್ಯನಿಗೆ ಕೊಂಕಣಿ ಎಂದು ಬಳಸಿರಬಹುದೇ? ಅಥವಾ ಕೊಂಕಣಿ ಮತ್ತು ಕೊಕ್ಕುಳಿ ಎರಡೂ ವಿಭಿನ್ನ ಪದಗಳೇ? ಎನ್ನುವುದು ಸ್ಪಷ್ಟ ವಾಗುವುದಿಲ್ಲ. ಇದಲ್ಲದೇ ೮-೯ನೆಯ ಶತಮಾನದ ದಾಖಲೆ ಗಳಲ್ಲಿ ತೆಲುಗು ಚೋಳ ಮುಖಂಡನೊಬ್ಬನನ್ನು ಕೊಕಿಳಿ ಅಥವಾ ಕೊಕಿಳಿರಾಜು ಎಂದು ಕರೆಯಲಾಗಿದೆ. (cf. ARIE 1964-65 Introduction and B.52).

ಕೊಂಕಣಿ ಮತ್ತು ಕೊಕ್ಕುಳಿ ಇವುಗಳ ಅರ್ಥ ವೇನೆಂಬುದೂ ಇದುವರೆಗೆ ತಿಳಿದುಬಂದಿಲ್ಲ. ಕನ್ನಡದ ಯಾವುದೇ ಶಬ್ದಕೋಶಗಳಲ್ಲಿ ಇದಕ್ಕೆ ಅರ್ಥ ದೊರೆಯುತ್ತಿಲ್ಲ. ಕನ್ನಡದ ಜ್ಞಾತಿ ದ್ರಾವಿಡ ಭಾಷೆಗಳಲ್ಲಿ ಅಥವಾ ಇನ್ಯಾವುದಾದರೂ ಭಾರತೀಯ ಭಾಷೆಯಲ್ಲಿ ಇದಕ್ಕೆ ಅರ್ಥ ದೊರೆಯಬಹುದಾಗಿದೆ. ವಿದ್ವಾಂಸರು ಆ ಪ್ರಯತ್ನವನ್ನು ಮಾಡಬಹುದಾಗಿದೆ. ಕೊಕ್ಕು ಎನ್ನುವುದಕ್ಕೆ ಪಕ್ಷಿಗಳ ಚುಂಚು ಎಂಬ ಅರ್ಥವಿದೆ. ಸಾಮಾನ್ಯವಾಗಿ ಚುಂಚು ಸ್ವಲ್ಪ ಬಾಗಿರುತ್ತದೆ. ಕೊಕ್ಕುಳಿ ಎನ್ನುವುದು ಸ್ಥಳನಾಮವಾಗಿರ ಬಹುದೆಂದು ಡಾ. ಕಲಬುರ್ಗಿಯವರು ಸೂಚಿಸುತ್ತಾರೆ. ಒಂದು ವೇಳೆ ಇದು ಸ್ಥಳನಾಮವಾಗಿದ್ದರೆ ಉಳಿದ ಅರಸರ ಹೆಸರಿನ ಮುಂದೆಯೂ ಇದು ಅಥವಾ ಇನ್ನಾವುದಾದರೂ ಸ್ಥಳನಾಮ ಸೇರಬಹುದಾಗಿತ್ತು. ಈತನೊಬ್ಬನಿಗೆ ಸೇರುತ್ತಿರಲಿಲ್ಲ. ಆದರೆ ರಾಮನ ಹಿಂದೆ ಪರಶು ಎನ್ನುವ ಆಯುಧದ ಹೆಸರು ಸೇರಿರುವಂತೆ, ಕಠಾರಿ ಸಾಳ್ವ ಎನ್ನುವ ಹೆಸರಿನಲ್ಲಿ ಕಠಾರಿ ಎನ್ನುವ ಆಯುಧ ಸೇರಿರುವಂತೆ ಇಲ್ಲಿಯೂ ಕೊಕ್ಕುಳಿ ಎನ್ನುವ ಆಯುಧವೇನಾದರೂ ಸೇರಿರಬಹುದೇ ಎಂದು ಸಂಭಾವ್ಯ ಊಹೆ ಮಾಡಬಹುದಾಗಿದೆ. ಕೊಂತ ಎನ್ನುವ ಆಯುಧ ಹಾಗೂ ಕೊಂತಕುಳಿ ಎನ್ನುವ ಊರುಗಳ ಹೆಸರುಗಳಿರುವುದನ್ನು ಇಲ್ಲಿ ನೆನೆಯಬಹುದಾಗಿದೆ. ಸಿಕ್ಕಿಂನಲ್ಲಿ ಹಕ್ಕಿಗಳ ಬಾಗಿದ ಕೊಕ್ಕಿನಂತಿರುವ ಕಿರುಗತ್ತಿಯನ್ನು ಕೃಪಾಣ್(?) ಎಂದು ಕರೆಯುವುದನ್ನು ನೆನೆಯಬಹುದು.

ಮೊದಲನೆಯ ವಿಕ್ರಮಾದಿತ್ಯ ತನ್ನ ತಂದೆ ಪುಲಿಕೇಶಿ ಕಷ್ಟಪಟ್ಟು ಗಳಿಸಿದ ಸಾಮ್ರಾಜ್ಯವು ಪಲ್ಲವರೊಂದಿಗಿನ ಯುದ್ಧದಲ್ಲಿ ಆತ ಸೋತು, ರಣಾಂಗಣದಲ್ಲಿ ಮರಣ ಹೊಂದುವುದರೊಂದಿಗೆ ನಿರ್ನಾಮವಾಗಿ ಹೋಯಿತು. ದಾಯಾದಿ ಕಲಹದಲ್ಲಿ ಯುವರಾಜ ವಿಕ್ರಮಾದಿತ್ಯ ಮತ್ತು ಅವನ ಅಣ್ಣ ಆದಿತ್ಯವರ್ಮ ಸಿಂಹಾಸನಕ್ಕಾಗಿ ಕಾದಾಟಕ್ಕಿಳಿದು, ಕೊನೆಯಲ್ಲಿ ವಿಕ್ರಮಾದಿತ್ಯನ ಕೈ ಮೇಲುಗೈಯಾದುದು ನಂತರ ಆತ ಪಟ್ಟವೇರಿದುದು ಈಗ ಇತಿಹಾಸ. ಆದರೆ ಹೀಗೆ ಕಳೆದುಕೊಂಡ ಸಾಮ್ರಾಜ್ಯದ ಭಾಗಗಳನ್ನು ಮರಳಿ ಪಡೆಯುವುದಕ್ಕಾಗಿ, ಸಾಮ್ರಾಜ್ಯದ ಮೇರೆಗಳನ್ನು ವಿಸ್ತರಿಸುವುದಕ್ಕಾಗಿ, ತಂದೆಯನ್ನು ಸೋಲಿಸಿ ರಾಜಧಾನಿ ವಾತಾಪಿಪುರವನ್ನು ಲೂಟಿ ಮಾಡಿದ ಪಲ್ಲವ ವಂಶದ ರಾಜರ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕಾಗಿ ತನ್ನ ಜೀವನದ ೧೫ ವರ್ಷಗಳ ಅಮೂಲ್ಯ ಸಮಯವನ್ನು ಯುದ್ಧರಂಗದಲ್ಲಿ, ಅದರಲ್ಲಿಯೂ ಸುಮಾರು ೪ ವರ್ಷಗಳನ್ನು ರಾಜಧಾನಿ ವಾತಾಪಿಯನ್ನು ಮೊಮ್ಮಗ ವಿನಯಾದಿತ್ಯನ ಸುಪರ್ದಿಗೆ ಒಪ್ಪಿಸಿ, ಮಗ ವಿಜಯಾದಿತ್ಯನೊಂದಿಗೆ ತಮಿಳುನಾಡಿನಲ್ಲಿ ಕಳೆಯಬೇಕಾಯಿತು. ಈ ಎಲ್ಲ ಸಂದರ್ಭಗಳಲ್ಲಿ ಆತನ ಕೀರ್ತಿ, ಶೌರ್ಯ, ಪರಾಕ್ರಮಗಳು ಮುಗಿಲು ಮುಟ್ಟಿದವು. ಆ ಕಾರಣದಿಂದಾಗಿಯೇ ಆತ ಕೊಕ್ಕುಳಿ ವಿಕ್ರಮಾದಿತ್ಯನೆಂದು ಹೆಸರಾದುದು. ಹೀಗಾಗಿ ಇದು ಆಯುಧದ ಹೆಸರೇ ಆಗಿರುವ ಸಾಧ್ಯತೆ ಹೆಚ್ಚಾಗಿದೆ.

ಚಿಕ್ಕನಂದೀಹಳ್ಳಿ ಮತ್ತು ಕೆರಿಕ್ಯಾತನಹಳ್ಳಿಗಳ ನಡುವಣ ಅಂತರ ಸು. ೧೦ ಕಿ.ಮೀ. ಆಗಿರುವುದರಿಂದ, ಈ ಶಾಸನ ದಲ್ಲಿಯೂ ಕೊಕ್ಕುಳಿ ಎಂಬ ಅಲ್ಲಿ ಬಳಸಿದ ವಿಶೇಷಣವನ್ನೇ ಬಳಸಿರುವ ಸಾಧ್ಯತೆಯಿದೆ. ಚಿಕ್ಕನಂದೀಹಳ್ಳಿಯ ಎರಡೂ ಶಾಸನಗಳು ಕಣ ಅರ್ಕದಿ ಎಂಬ ವೀರನನ್ನು ಹೆಸರಿಸುತ್ತಿದ್ದು, ಇಲ್ಲಿ ಧರ್ಮಸಮುದ್ರ ಎನ್ನುವ ವೀರನಿದ್ದಾನೆ. ಅಲ್ಕದೆ ಎನ್ನುವ ಶಬ್ದವೂ ಇದೆ. ಅಲ್ಲಿ "ಶ್ರೀ ಸಿನ್ದ ಕಲ್ಕುಟಿಯ ಇರ್ವ್ವರು ಕಮ್ಮಱದವರು ಕೇದೊರ್" ಎಂಬ ಉಲ್ಲೇಖವಿದ್ದರೆ ಇಲ್ಲಿ "ಧರ್ಮ್ಮ ಸಮುದ್ರೋನ್ನತ ವಸೂರಾ ಕಲ್ಕುಟ್ಟಿ ಕನ್ದರವಾಡಿ(ಟಿ) ಮಾ(ಕೇ?)[ಡಿ*]ಸಿದಾನ್ ॥" ಎಂಬ ಬೇರೆ ರೂವಾರಿಯ ಹೆಸರಿದ್ದರೂ ಪಠ್ಯ ಸಿದ್ಧಪಡಿಸಿದವನು ಒಬ್ಬನೇ ಇರುವ ಸಾಧ್ಯತೆಯಿದೆ.

**ಕೆರಿಕ್ಯಾತನಹಳ್ಳಿ ಶಾಸನದ ಪೂರ್ಣಪಾಠ**

ಮೊದಲನೆಯ ಸ್ತರ

೧ ಸ್ವಸ್ತಿ ಶ್ರೀಮತ್ ಕೊಕ್ಕುಳಿ ವಿಕ್ರಮಾದಿತ್ಯ ಶ್ರೀ ಪೃತಿವೀವಲ್ಲಭ

ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಪೃತಿವೀ

೨ ರಾ[ಜ್ಯಂ ಕೆಯ್ಯೆ] . . ದಾತ ಮಾಡಿ ಕಿಱಿಸಿ ತಾದೊಬಿರನಿ . . .

ಸಕತೊಗಸ ಕಾದೆನಿತ್ತು ತುಱು ಕೊ

ಎರಡನೆಯ ಸ್ತರ

೩ ಟಿಲ್ಗಾಯಿಲಿ ಗಾಮುಣ್ಡರ ಅಲ್ಕದೆಯರ್ತ್ತಾಬುಯ್ಯಲಾ ತಿರಿವೆ ಕಣ್ಡು

ಪರಿದುವಾಳೆಱಿದು ತೊಱುಆನಿಕ್ಕಿಸಿದ

೪ ವಾಟ್ಗೆ ಕಟಿದು ನಿವನ್ದು ಪರಸಿ ಧರ್ಮ್ಮಸಮುದ್ರನ್ ಜಾತಿವದರ್ಸ್ವ[ರ್*]ತ್ತು

ಸ್ವರ್ಗ್ಗಾಲಯಕ್ಕೇಱಿದಾರ್ ॥

ಮೂರನೆಯ ಸ್ತರ

೫ ಧರ್ಮ್ಮ ಸಮುದ್ರೋನ್ನತ ವಸೂರಾ ಕಲ್ಕುಟ್ಟಿ ಕನ್ದರವಾಡಿ(ಟಿ)

ಮಾ(ಕೇ?)[ಡಿ*]ಸಿದಾನ್ ॥

ಎರಡನೆಯ ಸಾಲಿನ ಪಠ್ಯ ಅಸ್ಪಷ್ಟವಾಗಿದೆ, ಅಕ್ಷರಗಳು ಸ್ಪಷ್ಟವಾಗಿಲ್ಲ. ಅರ್ಥ ವ್ಯತ್ಯಯವೂ ಉಂಟಾಗುತ್ತದೆ.

ಬಾದಾಮಿ ಚಾಲುಕ್ಯ ಅರಸರಲ್ಲಿ ಕೊಕ್ಕುಳಿ ವಿಕ್ರಮಾದಿತ್ಯನೆಂದು ಹೆಸರಾಂತ ಮೊದಲನೆಯ ವಿಕ್ರಮಾದಿತ್ಯನ ಈ ಶಾಸನದಲ್ಲಿ ಮಿತಿಯ ಉಲ್ಲೇಖವಿರದಿದ್ದರೂ ಆತನ ಆಳ್ವಿಕೆಯ ಕಾಲವಾದ ಕ್ರಿ.ಶ. ೬೩೪ರಿಂದ ೬೮೧ರ ಅವಧಿಯಲ್ಲಿ, ಅದರಲ್ಲಿಯೂ ಉತ್ತರಾರ್ಧದ ೬೫೦–೬೮೦ರ ಅವಧಿಯಲ್ಲಿ ಬರೆಯಿಸಿದ್ದೆಂದು ಊಹಿಸಬಹುದಾಗಿದೆ.

ಗಾಯಿಲಿ ಗಾಮುಣ್ಡರು ತುರುಗಳನ್ನು ಕದ್ದೊಯ್ಯುವ ಸಂದರ್ಭದಲ್ಲಿ ಧರ್ಮಸಮುದ್ರನೆಂಬುವವನು ಹೋರಾಡಿ ತುರುಗಳನ್ನು ರಕ್ಷಿಸಿ, ಸ್ವರ್ಗವನ್ನು ಸೇರಿದನೆಂದು ಶಾಸನವು ತಿಳಿಸುತ್ತದೆ. ಈ ಶಾಸನವನ್ನು ಕಲ್ಕುಟ್ಟಿಗ ಕಂದರವಾಡಿ ಮಾಡಿಸಿದನೆಂದೂ ವಿವರಿಸುತ್ತದೆ.

ಈ ಶಾಸನದ ಮಹತ್ವವನ್ನು ಹೀಗೆ ಸಂಗ್ರಹಿಸಬಹುದು–

೧ ಇದುವರೆಗೆ ಅವಿಭಜಿತ ಧಾರವಾಡ ಜಿಲ್ಲೆಯಲ್ಲಿ, ಸದ್ಯದ ಹಾವೇರಿ ಜಿಲ್ಲೆಯಲ್ಲಿ ಮೊದಲನೆಯ ವಿಕ್ರಮಾದಿತ್ಯನ ಎರಡು ಶಾಸನಗಳು ಮಾತ್ರ ದೊರೆತಿದ್ದವು. ಈ ಸಂಖ್ಯೆ ಈಗ ಮೂರಕ್ಕೆ ಏರುತ್ತದೆ.

೨ ಈತನನ್ನು ಕೊಕ್ಕುಳಿ ಎಂಬ ವಿಶೇಷಣದೊಂದಿಗೆ ಉಲ್ಲೇಖಿಸುವ ಇದುವರೆಗೆ ದೊರೆತ ಕನ್ನಡ ಶಿಲಾಶಾಸನಗಳ ಸಂಖ್ಯೆ ೪ಕ್ಕೆ ಏರುತ್ತದೆ. ಮೂರು ಶಾಸನಗಳಲ್ಲಿ ಒಂದರಲ್ಲಿ ಮಾತ್ರ (ರೂಗಿ ಶಾಸನ) ಕಾಲದ ಉಲ್ಲೇಖವಿದೆ.

೩ ಇದುವರೆಗೆ ದೊರೆತ ಆತನ ಕಾಲದಲ್ಲಿ ಬರೆಸಿದ ೩ ಶಾಸನಗಳಲ್ಲಿ ಈ ವಿಶೇಷಣವಿದೆ.

೪ ಇದುವರೆಗೆ ದೊರೆತ ಈತನನ್ನು ಕೊಕ್ಕುಳಿ ಎಂಬ ವಿಶೇಷಣದೊಂದಿಗೆ ಉಲ್ಲೇಖಿಸುವ ಒಟ್ಟು ಶಾಸನಗಳ ಸಂಖ್ಯೆ ೬ ಕ್ಕೆ ಏರುತ್ತದೆ

೫ ಇದುವರೆಗೆ ದೊರೆತ ಆತನ ಕಾಲದ ವೀರಗಲ್ಲುಗಳ ಸಂಖ್ಯೆ ೩ಕ್ಕೆ ಏರುತ್ತದೆ.

೬ ಈ ಮೂರೂ ವೀರಗಲ್ಲುಗಳಲ್ಲಿ ಮಿತಿಯ ಉಲ್ಲೇಖವಿಲ್ಲದಿರುವುದು ಗಮನಾರ್ಹ.

# ಕರ್ನಾಟಕ ಇತಿಹಾಸ ಅಕಾದೆಮಿ (ರಿ).

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ, ಬಸವನಗುಡಿ ರಸ್ತೆ,
ನರಸಿಂಹರಾಜಾ ಕಾಲೋನಿ, ಬೆಂಗಳೂರು – ೫೬೦ ೦೧೯

## ೨೦೧೦ನೆಯ ಸಾಲಿನ ವಾರ್ಷಿಕ ವರದಿ

ಪ್ರಿಯ ಸದಸ್ಯ ಬಂಧುಗಳೇ,

ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನಕ್ಕಾಗಿ ನಾವೆಲ್ಲಾ ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಸಮಾವೇಶಗೊಂಡಿದ್ದೇವೆ. ಕಳೆದ ಎರಡೂವರೆ ದಶಕಗಳಿಂದ ಅಕಾದೆಮಿಯ ಬೆಳವಣಿಗೆಗೆ ಸಹಕರಿಸಿರುವ ಎಲ್ಲರಿಗೂ ಅನಂತ ಧನ್ಯವಾದಗಳು. ಕಳೆದ ೨೪ ಸಮ್ಮೇಳನಗಳಿಗೆ ಆಶ್ರಯ ನೀಡಿ ಅಕಾದೆಮಿಯನ್ನು ಪೋಷಿಸಿರುವ ಎಲ್ಲಾ ಸಂಘ ಸಂಸ್ಥೆ ಹಾಗೂ ಧರ್ಮಪೀಠಗಳಿಗೆ ಅಕಾದೆಮಿಯು ಕೃತಜ್ಞವಾಗಿದೆ.

**ಐತಿಹಾಸಿಕ ಪರಂಪರೆ ಉಳಿಸಿ – ೨೦೧೦**

೨೦೧೦ರ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಉದ್ಘಾಟನಾ ಸಮಾರಂಭವನ್ನು ೧೬–೮–೨೦೧೦ರ ಸೋಮವಾರದಂದು ಮಧ್ಯಾಹ್ನ ೪ ಗಂಟೆಗೆ ಬೆಂಗಳೂರಿನ ಜಯನಗರದ ವಿಜಯಾ ಕಾಲೇಜು ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ವರ್ಷವೂ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮಕ್ಕೆ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ಸಹಯೋಗ ದೊರೆತಿತ್ತು. ಡಾ. ಕೂ.ಸ. ಅಪರ್ಣ ಮತ್ತು ಸಂಗಡಿಗರ ಪ್ರಾರ್ಥನೆ ಹಾಗೂ ಲಾವಣಿ ಗಾಯನದೊಂದಿಗೆ ಕಾರ್ಯಕ್ರಮವು ಆರಂಭವಾಯಿತು. ಅಕಾದೆಮಿಯ ಅಧ್ಯಕ್ಷರಾದ ಡಾ. ಸೂರ್ಯನಾಥ ಯು. ಕಾಮತ್ ಸಭೆಗೆ ಸ್ವಾಗತ ಕೋರಿ ಪ್ರಾಸ್ತಾವಿಕ ಭಾಷಣ ಮಾಡಿದರು. ಘನತೆವೆತ್ತ ನ್ಯಾಯಮೂರ್ತಿಗಳೂ ರಾಜ್ಯ ಕಾನೂನು ಆಯೋಗದ ಅಧ್ಯಕ್ಷರೂ ಆದ ಶ್ರೀ ವಿ.ಎಸ್. ಮಳಿಮಠ ಅವರು ೨೦೧೦ರ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹವನ್ನು ಜ್ಯೋತಿ ಬೆಳಗಿಸುವ ಮೂಲಕ ವಿಧಿವತ್ತಾಗಿ ಉದ್ಘಾಟಿಸಿ, ನಾಡು–ನುಡಿ, ಸಂಸ್ಕೃತಿಗಳ ಸಂರಕ್ಷಣೆಯ ಬಗ್ಗೆ ಮಾತನಾಡಿದರು. ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಜಯರಾಮರಾಜೇ ಅರಸ್, ಭಾ.ಆ.ಸೇ., ಅವರು ಈ ಸಂದರ್ಭಕ್ಕೆಂದೇ ಕಲಾವಿದ ಶ್ರೀ ಸುಭಾಷ್ ಕಮ್ಮಾರ್ ಅವರು ಸಿದ್ಧಪಡಿಸಿದ್ದ ವಿಶೇಷ ಭಿತ್ತಿಚಿತ್ರ ವಿನ್ಯಾಸವನ್ನು ಅನಾವರಣ ಮಾಡಿ ಚಾರಿತ್ರಿಕ ದಾಖಲೆಗಳನ್ನು ರಕ್ಷಿಸಿ, ಮುಂದಿನ ಪೀಳಿಗೆಗೆ ಉಳಿಸಿಕೊಡಬೇಕಾದ ಅಂಶವನ್ನು ಸಭೆಗೆ ಮನವರಿಕೆ ಮಾಡಿಕೊಟ್ಟರು. ಈ ಕಾರ್ಯಕ್ರಮಕ್ಕೆ ಪೂರಕವಾಗಿ ಆಯೋಜಿಸಿದ್ದ ಸ್ಮಾರಕಗಳ ರಕ್ಷಣೆ ಬಗ್ಗೆ ಛಾಯಾಚಿತ್ರ ಪ್ರದರ್ಶನವನ್ನು ಉದ್ಘಾಟಿಸುವುದರ ಜೊತೆಗೆ, ಸಮಾರಂಭದ ಅಧ್ಯಕ್ಷತೆಯನ್ನೂ ಡಾ. ಎಸ್.ವಿ. ವೆಂಕಟೇಶಯ್ಯ ವಹಿಸಿದ್ದರು. ಕರ್ನಾಟಕ ಇತಿಹಾಸ ಅಕಾದೆಮಿಯ ಬೆಂಗಳೂರು ನಗರ ಘಟಕವು ಎಂದಿನಂತೆ ನಗರದ ಪ್ರೌಢಶಾಲೆ, ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳ ವ್ಯಾಸಂಗಾರ್ಥಿಗಳಿಗೆ ನಡೆಸಿದ್ದ ಪ್ರಬಂಧ ಹಾಗೂ ಭಾಷಣ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ, ಶ್ರೀ ದಯಾನಂದಸಾಗರ್ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಗಾಳಿಸ್ವಾಮಿ ಬಹುಮಾನ ಪ್ರಶಸ್ತಿ ಪತ್ರಗಳನ್ನು ನೀಡಿದರು. ತಮ್ಮ ಮಗ ಅಂಗದ್‌ನ ಸ್ಮರಣಾರ್ಥ ಪರ್ಯಾಯ ಪಾರಿತೋಷಕವನ್ನೂ ಪ್ರಾಯೋಜಿಸಿರುವ ಶ್ರೀಯುತರು ವಿಜೇತರಿಗೆ ವೈಯಕ್ತಿಕ ಬಹುಮಾನಗಳನ್ನು ಪ್ರದಾನ ಮಾಡಿದರು.

ಅಕಾದೆಮಿಯ ಕಾರ್ಯಚಟುವಟಿಕೆಗಳಿಗೆ ಆರಂಭದಿಂದಲೂ ಅನುದಾನ ನೀಡುತ್ತಾ ಬಂದಿರುವ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಇಲಾಖೆಯ ನಿರ್ದೇಶಕರಾದ ಡಾ. ಆರ್. ಗೋಪಾಲ್ ಸಭೆಯಲ್ಲಿ ಉಪಸ್ಥಿತರಿದ್ದರು. ಸದರಿ ಕಾರ್ಯಕ್ರಮಕ್ಕೆ ಸ್ಥಳಾವಕಾಶ ನೀಡಿದ ವಿಜಯಾ ಕಾಲೇಜಿನ ಆಡಳಿತ ವರ್ಗಕ್ಕೆ ಹಾಗೂ ಛಾಯಾಚಿತ್ರ ಪ್ರದರ್ಶನ ಏರ್ಪಡಿಸಿದ್ದ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಅಧಿಕಾರಿ ವರ್ಗಕ್ಕೆ ಅಕಾದೆಮಿಯು ಕೃತಜ್ಞತೆ ಸಲ್ಲಿಸಿತು. ಶ್ರೀಮತಿ ಡಾ. ಜಯಮ್ಮ ಕರಿಯಣ್ಣ ಕಾರ್ಯಕ್ರಮ ನಿರೂಪಣೆ ಮಾಡಿದರು. ಶ್ರೀ ಆರ್. ಶಶಿಧರ್ ವಂದನೆ ಅರ್ಪಿಸುವುದರೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

ಬೆಂಗಳೂರು ನಗರದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ವತಿಯಿಂದ 'ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ' ಕಾರ್ಯಕ್ರಮವೂ ಉದ್ಘಾಟನೆಯಾಗಿ, ಸದರಿ ವರ್ಷದ ವಿಶೇಷ ಭಿತ್ತಿಪತ್ರಗಳ ಅನಾವರಣವಾದ ನಂತರ ರಾಜ್ಯದಾದ್ಯಂತ ವಿವಿಧ ಸ್ಥಳಗಳಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಗಳು ನಡೆದಿವೆ. ಅಕಾದೆಮಿಯ ಸದಸ್ಯರ ಅಪೇಕ್ಷೆಯಂತೆ ಅಗತ್ಯವಿರುವ ಭಿತ್ತಿಪತ್ರ, ಸಂಬಂಧಿತ ಸಾಹಿತ್ಯ ಹಾಗೂ ಪ್ರಚಾರ ಪತ್ರಗಳನ್ನು ಸದಸ್ಯರಿಗೆ ಮುಂದಾಗಿ ಕಳುಹಿಸಲಾಗಿತ್ತು. ಆ ಪ್ರಕಾರ ಅಕಾದೆಮಿಯ ಸದಸ್ಯರು, ಇತಿಹಾಸ ಆಸಕ್ತರು ಹಾಗೂ ಸಂಘ–ಸಂಸ್ಥೆಗಳು ನಾಡಿನಾದ್ಯಂತ ಈ ವರ್ಷದುದ್ದಕ್ಕೂ ಹಮ್ಮಿಕೊಂಡು ಆಚರಿಸಿದ ಕಾರ್ಯಕ್ರಮಗಳ ವಿವರವನ್ನಿಲ್ಲಿ ಸಂಕ್ಷಿಪ್ತವಾಗಿ ವರದಿ ಮಾಡಲಾಗಿದೆ.

## 'ಐತಿಹಾಸಿಕ ಪರಂಪರೆ ಉಳಿಸಿ'– ೨೦೧೦ನೇ ಸಾಲಿನ ವರದಿ : ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| ೧. | ೧೬.೦೮.೧೦ | ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು | **ಸರ್ವಶ್ರೀ** ನ್ಯಾಯಮೂರ್ತಿ ವಿ.ಎಸ್. ಮಳಿಮಠ, ಡಾ. ಎಸ್.ವಿ. ವೆಂಕಟೇಶಯ್ಯ | **ಸರ್ವಶ್ರೀ** ಜಯರಾಮರಾಜೇ ಅರಸ್, ಭಾ.ಆ.ಸೇ.,: ಭಿತ್ತಿಚಿತ್ರ ಅನಾವರಣ ಶ್ರೀ ಗಾಳಿಸ್ವಾಮಿ ಬಹುಮಾನ ವಿತರಣೆ | **ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ–೨೦೧೦** ಕಾರ್ಯಕ್ರಮಗಳ ಉದ್ಘಾಟನೆ |
| ೨. | ೧೬.೦೮.೧೦ | ಹಸ್ತಪ್ರತಿಶಾಸ್ತ್ರ ವಿಭಾಗ ಕನ್ನಡ ವಿಶ್ವವಿದ್ಯಾಲಯ ಹಂಪಿ | ಡಾ. ಎ. ಮುರಿಗೆಪ್ಪ ಡಾ. ಗೀತಾಬಾಲಿ | ಡಾ. ಎ.ಎಸ್. ಕೊಪ್ಪ ಧರ್ಮಸ್ಥಳ | ಕನ್ನಡ ವಿಶ್ವವಿದ್ಯಾಲಯ, ಹಂಪಿ ಸಂಚಾಲಕರು : ಡಾ. ಕೆ. ರವೀಂದ್ರನಾಥ್, ಹಂಪಿ |
| ೩. | ೧೬.೦೮.೧೦ | ಆಡಳಿತ ಮಂಡಳಿ ರಾಣಿ ಅಬ್ಬಕ್ಕಬಸದಿ | ನ್ಯಾಯವಾದಿ ಶ್ರೀ ಎಲ್.ಡಿ. ಬಲ್ಲಾಳ | ಎಂ.ವಿ. ಶೆಟ್ಟಿ, ಉಪನ್ಯಾಸ | ತೀರ್ಥ ಕ್ಷೇತ್ರಗಳ ಸಂರಕ್ಷಣೆ ಸಂಚಾಲಕರು : ಡಾ. ಅನಂತರಾಜ ಇಂದ್ರ ಮಂಗಳೂರು (ಗಂಗಾಧರ್) |
| ೪. | ೧೬.೦೮.೧೦ | ಕರ್ನಾಟಕ ಜಾನಪದ ಪರಿಷತ್, ದಾವಣಗೆರೆ ಸಹಯೋಗ : ಹಸ್ತಪ್ರತಿ ವಿಭಾಗ ಕ.ವಿ.ವಿ., ಹಂಪಿ | ಡಾ. ಎಸ್. ಇಂದುಮತಿ | ಡಾ. ಬಿ. ರಾಜಶೇಖರಪ್ಪ: ಚಿತ್ರದುರ್ಗ | ಐ.ಪ.ಉ. ಸಪ್ತಾಹ ಉದ್ಘಾಟನಾ ಸಮಾರಂಭ ದಾವಣಗೆರೆ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೫. | ೧೭.೦೮.೧೦ | ಶ್ರೀ ಶಾಂತವೀರ ಪದವಿ ಮಹಾ ವಿದ್ಯಾಲಯ ಬಬಲೇಶ್ವರ | ಸಿ.ಎನ್. ಬಿರಾದಾರ ಡಾ. ಎಸ್.ಎಸ್. ಪಾಟೀಲ ಪ್ರಾಚಾರ್ಯರು | ಡಾ. ಎಸ್.ಆರ್. ಚನ್ನವೀರಪ್ಪ ಹಂಪಿ | ಉಪನ್ಯಾಸ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೬ | ೧೭.೦೮.೧೦ | ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಾವೂರು ಮಂಗಳೂರು | ಡಾ. ಶ್ರೀಧರ ಮಣಿಯಾಣಿ ಪ್ರಾಚಾರ್ಯರು | ವಜ್ರಕುಮಾರ್ ಕಣಂತಾಯಿ ಬಲ್ಲಾಳ್ ಕೆ. ನಾರಾಯಣ ನಾಯಕ್ | ಇತಿಹಾಸ ಕ್ವಿಜ್, ಬಹುಮಾನ ವಿತರಣೆ ಸಂಚಾಲಕರು : ಪ್ರೊ. ಕುಂಚರ್ಯ ಕೆ.ಕೆ. |
| ೭. | ೧೭.೦೮.೧೦ | ಸ. ಪದವಿ ಕಾಲೇಜು ದಾವಣಗೆರೆ | ಪ್ರೊ. ಡಿ. ಬಸವರಾಜ ಪ್ರಾಚಾರ್ಯರು | ಶ್ರೀ ಎ.ಎಚ್. ವಿವೇಕಾನಂದಸ್ವಾಮಿ ದಾವಣಗೆರೆ ಪ್ರೊ. ವಿರೂಪಾಕ್ಷಪ್ಪ ಎಸ್. ಗೋಪಾಲದಾಸ್ | ಡಾ. ಎಸ್.ಎಸ್. ಅಂಗಡಿ : ಉಪನ್ಯಾಸ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೮. | ೧೮.೦೮.೧೦ | ಬಿ.ಆರ್.ಜಿ. ಕಲಾ ಮತ್ತು ವೈ.ಎ.ಪಿ. ವಾಣಿಜ್ಯ ಮಹಾ ವಿದ್ಯಾಲಯ ಇಂಡಿ | ಪ್ರೊ. ಎನ್.ಬಿ. ಪಾಟೀಲ ಪ್ರಾಚಾರ್ಯರು | ಡಾ. ಎಫ್.ಟಿ. ಹಳ್ಳಿಕೇರಿ | ಉಪನ್ಯಾಸ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೯. | ೧೮.೦೮.೧೦ | ಯೂನಿವರ್ಸಿಟಿ ಕಾಲೇಜು ಮಂಗಳೂರು | ಡಾ. ಲಕ್ಷ್ಮೀನಾರಾಯಣಭಟ್ಟ ಪ್ರಾಚಾರ್ಯರು | ಪ್ರೊ. ತುಕಾರಾಮ್ ಪೂಜಾರಿ ಉಪನ್ಯಾಸ | ಕ್ಷೇತ್ರಕಾರ್ಯ ಮಾಡಿದ ವಿದ್ಯಾರ್ಥಿ ಸಮೂಹದಿಂದ ವರದಿ ಮಂಡನೆ<br>ಸಂಚಾಲಕರು : ಅ.ಪು. ರಾಜೇಶ್ವರಿ |
| ೧೦. | ೧೮.೦೮.೧೦ | ಎಸ್.ಎಂ.ಎಸ್. ಪದವಿ ಕಾಲೇಜು, ಹೊನ್ನಾಳಿ | ಪ್ರೊ. ಎಂ. ಶಿವಶಂಕರಯ್ಯ ಪ್ರಾಚಾರ್ಯರು | ಡಾ. ಎನ್. ಕೊಟ್ರೇಶಿ ಉತ್ತಂಗಿ ದಾವಣಗೆರೆ<br>ಕೆ.ಪಿ. ದೇವೇಂದ್ರಯ್ಯ, ಹೊನ್ನಾಳಿ | ಉಪನ್ಯಾಸ : ಬುರಡೆ ಕಟ್ಟೆ ಮಂಜಪ್ಪ ದಾವಣಗೆರೆ<br>ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೧೧. | ೧೮.೦೮.೧೦ | ಜಿ.ಕೆ. ಹಿರೇಗೌಡರ ಸಂಯುಕ್ತ ಪ.ಪೂ. ಕಾಲೇಜು, ರೊಟ್ಟಿಗವಾಡ | ಪ್ರಾಚಾರ್ಯರು | ಪ್ರೊ. ಕೆ.ಪಿ. ಮಲ್ಲಿಗವಾಡ | ಉಪನ್ಯಾಸ, ಐತಿಹಾಸಿಕ ಪರಂಪರೆ ಉಳಿಸಿ<br>ಸಂಚಾಲಕರು : ಕೆ.ಪಿ. ಮಲ್ಲಿಗವಾಡ |
| ೧೨. | ೧೯.೦೮.೧೦ | ಶ್ರೀ ಬಸವೇಶ್ವರ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ಬ. ಬಾಗೇವಾಡಿ | ಪ್ರೊ. ಸಿ.ಜಿ. ಸಜ್ಜನರ್ ಪ್ರಾಚಾರ್ಯರು | ಡಾ. ಎಂ.ಎಂ. ಪಡಸೆಟ್ಟಿ, ಸಿಂಧಗಿ | ಐತಿಹಾಸಿಕ ಪರಂಪರೆ ಉಳಿಸಿ |
| ೧೩. | ೧೯.೦೮.೧೦ | ಸಂತ ಅಲೋಶಿಯಸ್ ಕಾಲೇಜು, ಮಂಗಳೂರು | ಡಾ. ಸ್ವಿಬರ್ಟ್ ಡಿ'ಸಿಲ್ವಾ ಪ್ರಾಚಾರ್ಯರು | ಡಾ. ನಾ. ದಾಮೋದರಶೆಟ್ಟಿ ಪ್ರವಾಚಕರು | ಇತಿಹಾಸದ ಲಾವಣಿ ಪ್ರಬಂಧ ಮಂಡನೆ<br>ಸಂಚಾಲಕರು : ಪ್ರೊ. ವಿಶಾನಜ್ ಪಿಂಟು<br>ಡಾ. ಡೇವಿಸ್ ಫೆರ್ನಾಂಡಿಸ್ |
| ೧೪. | ೧೯.೦೮.೧೦ | ಚಿಕ್ಕನಾಯಕನಹಳ್ಳಿ ಸರ್ಕಾರಿ ಪದವಿ ಕಾಲೇಜು, ಚನ್ನಗಿರಿ | ಪ್ರೊ. ಜಿ.ಆರ್. ಈಶ್ವರಪ್ಪ ಪ್ರಾಚಾರ್ಯರು | ಡಾ. ಜೆ. ಕರಿಯಪ್ಪ ಮಾಳಗಿ ಚಿತ್ರದುರ್ಗ, ಶ್ರೀ ಬಿ.ಎಸ್. ನಾಗರಾಜ್, ಚನ್ನಗಿರಿ | ಡಾ. ಎಂ.ಎಂ. ರಾಜಶೇಖರಯ್ಯ ಹಡಗಲ್ಲಿ ಉಪನ್ಯಾಸ<br>ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೧೫. | ೨೦.೦೮.೧೦ | ಗಂಗಮ್ಮ ಚಿನಿವಾರ ಪದವಿ ಮಹಾವಿದ್ಯಾಲಯ ಮುದ್ದೇಬಿಹಾಳ | ಪ್ರೊ. ಆಯ್.ವೈ. ಕೌಜಲಗಿ ಪ್ರಾಚಾರ್ಯರು | ಡಾ. ವಿರೇಶ್ ಬಡಿಗೇರ್ | ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೧೬. | ೨೦.೦೮.೧೦ | ಜೈನ್ ಮಿಲನ್, ಬಂಟ್ವಾಳ ಹಾಗೂ ಕ್ಯೊಲ ಧನಕೀರ್ತಿ ಶೆಟ್ಟಿ, ಪಾಣೆ ಮಂಗಳೂರು | ಮಾಣಿಕ್ಯರಾವ್ ಜೈನ್ ಅಧ್ಯಕ್ಷರು | ರತ್ನಾಕರ ಇಂದ್ರ ಭಾವಂತಶೆಟ್ಟಿ | ಜಿಲ್ಲೆಯ ಬಸದಿಗಳ ಸ್ಥಿತಿ ಗತಿ<br>ರಸಪ್ರಶ್ನೆ : ಜಿಲ್ಲೆಯ ಚೈತ್ಯಾಲಯಗಳು<br>ಸಂಚಾಲಕರು : ಶ್ರೀ ಶಿವಪ್ರಕಾಶ್<br>ಶ್ರೀಮತಿ ಗೀತಾ ಜಿನಚಂದ್ರ, ಐ.ಪ.ಉ. ಕ್ಷೇತ್ರಕಾರ್ಯ<br>ಮ.ಮಾ. ಜಗತಾಪ |
| ೧೭. | ೨೦.೦೮.೧೦ | ಗುಳೇದಗುಡ್ಡ | ಆರ್.ಎಸ್. ಕಾಟವಾ | ಚರಂತಿ ಮಠ<br>ವಿ.ಬಿ. ದಬಾಣಿ | ಐ.ಪ.ಉ. ಕಾರ್ಯಕ್ರಮ |
| ೧೮. | ೨೦.೦೮.೧೦ | ಸಿದ್ಧಾರ್ಥ ಶಿಕ್ಷಣ ಮಹಾವಿದ್ಯಾಲಯ ಜಗಳೂರು | ಡಾ. ಟಿ. ತಿಪ್ಪೇಸ್ವಾಮಿ ಜಗಳೂರು | ಜಿ.ಕೆ. ಹೇಮಣ್ಣ, ಪ್ರಾಚಾರ್ಯರು<br>ಕೆ. ಗುರುಸಿದ್ದಪ್ಪ, ಜಗಳೂರು | ಉಪನ್ಯಾಸ, ಡಾ. ಕಲವೀರ ಮನ್ವಾಚಾರ್ ಹಂಪಿ<br>ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೧೯. | ೨೧.೮.೧೦ | ಮಹಾವೀರ ಕಾಲೇಜು ಮೂಡಬಿದ್ರೆ | ಪ್ರೊ. ಚಂದ್ರಶೇಖರ ದೀಕ್ಷಿತ್ ಪ್ರಾಚಾರ್ಯರು | ಡಾ. ಪುಂಡಿಕ್ಕಾ ಗಣಪಯ್ಯಭಟ್ (ನಿ), ಮೂಡುಬಿದ್ರೆ ಎಂ.ಯು. ವಿದ್ಯಾಧರ್ | ಐತಿಹಾಸಿಕ ವಸ್ತುಗಳ ಪ್ರದರ್ಶನವು ಸಂಚಾಲಕರು : ಪ್ರೊ. ಸಂಪತ್ ಕುಮಾರ್ |
| ೨೦. | ೨೧.೦೮.೧೦ | ಶ್ರೀಮತಿ ಗಿರಿಜಮ್ಮ ಆರ್. ಶಾಂತಪ್ಪಶ್ರೇಷ್ಠಿ ಮ.ಪ.ಶ. ಹರಿಹರ | ಪ್ರೊ. ಎಸ್.ಎಚ್. ಪ್ಯಾಟಿ ಪ್ರಾಚಾರ್ಯರು, ಹರಿಹರ | ರೇವಣ್ಣನಾಯಕ ಜೆ. ಕಲೀಂ ಪಾಷಾ | ಡಾ. ಕೆ. ರವೀಂದ್ರನಾಥ, ಹಂಪಿ, ಉಪನ್ಯಾಸ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೨೧. | ೨೧.೦೮.೧೦ | ಮಾಡರ್ನ್ ಇಂಗ್ಲಿಷ್ ಶಾಲೆ, ಬಂಕಾಪುರ | ಮುಖ್ಯೋಪಾಧ್ಯಾಯರು ಬಂಕಾಪುರ | ಡಾ. ಚನ್ನಕ್ಕ ಪಾವಟೆ | ಬಂಕಾಪುರ ಪರಿಚಯ |
| ೨೨. | ೨೨.೦೮.೧೦ | ಜಿ.ಪಿ. ಪೋರವಾಲ ಕಲಾ ವಾಣಿಜ್ಯ ಮತ್ತು ವ್ಹಿ.ವ್ಹಿ. ಸಾಲಿಮಠ, ವಿಜ್ಞಾನ ಮಹಾವಿದ್ಯಾಲಯ ಸಿಂಧಗಿ | ಪೂಜ್ಯ ಷ.ಬ್ರ.ಪ್ರಭು ಸಾರಂಗ ದೇವ ಶಿವಾಚಾರ್ಯ, ಸಾನಿಧ್ಯ | ಪ್ರೊ. ವ್ಹಿ.ವಿ. ಕಂದೂರಿ ಪ್ರಾಚಾರ್ಯರು | ಎಂ.ಬಿ. ಬಾಳಪ್ಪ, ಹಂಪಿ, ಉಪನ್ಯಾಸ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೨೩. | ೨೨.೦೮.೧೦ | ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರ ಮಂಗಳೂರು | ಅಶ್ವಿನಿಕುಮಾರ್ ರೈ, ಅಧ್ಯಕ್ಷರು | ಪುಷ್ಪದಂತ ರಾಜಾರಾಂ, ಮಂಗಳೂರು | ಸಮಾರೋಪ ಸಮಾರಂಭ ಸಂಚಾಲಕರು : ಫಾ. ಅನಂತರಾಜಾ ಇಂದ್ರ |
| ೨೪. | ೨೨.೦೮.೧೦ | ಜಿ.ಕೆ. ಹಿರೇಗೌಡರ ಸಂಯುಕ್ತ ಪ.ಪೂ. ಕಾಲೇಜು, ರೊಟ್ಟಿಗವಾಡ | ಪ್ರಾಚಾರ್ಯರು | ಪ್ರೊ. ಕೆ.ಪಿ. ಮಲ್ಲಿಗವಾಡ | ಪ್ರದರ್ಶನ ಶಾಸನಗಳ ಮಹತ್ವ ಸಂಚಾಲಕರು : ಕೆ.ಪಿ. ಮಲ್ಲಿಗವಾಡ |
| ೨೫. | ೨೩.೦೮.೧೦ | ಎ.ಡಿ.ಬಿ. ಕಾಲೇಜು ಹರಪನಹಳ್ಳಿ | ಡಾ. ಮಂಜುನಾಥ ಬೇವಿನಕಟ್ಟೆ ಹಂಪಿ | ಪಟೇಲ್ ಬೆಟ್ಟನಗೌಡ ಪ್ರೊ. ಎ. ನಾಗೇಂದ್ರಪ್ಪ ಪ್ರೊ. ರಾಜಪ್ಪ | ಉಪನ್ಯಾಸ ಡಾ. ಎಫ್.ಟಿ. ಹಳ್ಳಿಕೇರಿ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |
| ೨೬ | ೨೩.೦೮.೧೦ | ಕೆ.ಎಸ್.ಎಸ್. ಕಲಾ ವಾಣಿಜ್ಯ ಹಾಗೂ ವಿಜ್ಞಾನ ಮಹಾವಿದ್ಯಾಲಯ ಗದಗ | ಪ್ರೊ. ಬಿ.ಎಫ್. ದಂಡಿನ್ | ಎ.ಎಚ್. ಹರಿದಾಸ್ | ಉಪನ್ಯಾಸ ಸಂಚಾಲಕರು : ಡಾ. ಎಂ.ಎಸ್. ನರೇಗಲ್ |
| ೨೭. | ೨೩.೦೮.೧೦ | ಜಿ.ಕೆ. ಹಿರೇಗೌಡರ ಸಂಯುಕ್ತ ಪ.ಪೂ. ಕಾಲೇಜು, ರೊಟ್ಟಿಗವಾಡ | ಪ್ರಾಚಾರ್ಯರು | ಪ್ರೊ. ಕೆ.ಪಿ. ಮಲ್ಲಿಗವಾಡ | ನಾಣ್ಯ ಪ್ರದರ್ಶನ ಸಂಚಾಲಕರು : ಕೆ.ಪಿ. ಮಲ್ಲಿಗವಾಡ |
| ೨೮. | ೨೪.೦೮.೧೦ | ಖಾಸ್ಗತೇಶ್ವರ ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ ತಾಳಿಕೋಟೆ. | ಡಾ. ಮಂಜುನಾಥ ಬೇವಿನಕಟ್ಟೆ ಹಂಪಿ | ಬಿ.ಆಯ್. ಬಿಳೇಭಾವಿ ಪ್ರೊ ಡಿ.ಎಸ್. ಹತಗುಂದಿ | ಉಪನ್ಯಾಸ ಡಾ. ಕೆ. ರವೀಂದ್ರನಾಥ್ ಸಂಚಾಲಕರು : ಡಾ. ಕೆ. ರವೀಂದ್ರನಾಥ, ಹಂಪಿ |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೨೯. | ೨೫.೦೮.೧೦ | ಕಮಲ ಶೆಡ್ತಿ ಚಾರಿಟೇಬಲ್ ಟ್ರಸ್ಟ್, ಪಡುಬಿದ್ರಿ | ಶ್ರೀ ಚಂದ್ರಯ್ಯ ಅರಸ ಕಿನ್ಸರ ಬಲ್ಲಾಳ್, ಡಾ. ಆರ್. ಗೋಪಾಲ್ | ಡಾ. ಬಿ. ರಾಜಶೇಖರಪ್ಪ<br>ಡಾ. ಪಂಡಿಕ್ವಾ ಗಣಪಯ್ಯಭಟ್<br>ಡಾ. ಜಗದೀಶ ಶೆಟ್ಟಿ | ಉದ್ಘಾಟನೆ ಸಮಾರಂಭ |
| | ,, | ,, | | ಉಪನ್ಯಾಸ : ಶ್ರೀ ಕೆ. ಶ್ರೀಧರ್‌ಭಟ್<br>ಡಾ. ಪಿ.ಎನ್. ನರಸಿಂಹಮೂರ್ತಿ<br>ಪ್ರೊ. ಎಸ್.ಎ. ಕೃಷ್ಣಯ್ಯ<br>ಪ್ರೊ. ತುಕಾರಾಂ ಪೂಜಾರಿ<br>ಪ್ರೊ. ಶಶಿಲೇಖಾ ಬಿ.<br>ಡಾ. ಶಿವತಾರಕ್<br>ಡಾ. ಬಿ. ರಾಜಶೇಖರಪ್ಪ<br>ಡಾ. ಜಗದೀಶ ಶೆಟ್ಟಿ | ಉಪನ್ಯಾಸ ಹಾಗೂ ಕ್ಷೇತ್ರ ಕಾರ್ಯ ಪರಿಚಯ ಒಂದು ದಿನದ ವಿಚಾರಗೋಷ್ಠಿ ಹಾಗೂ ಕಾರ್ಯಾಗಾರ |
| | ,, | ,, | ಹೇರಂಜೆ ಕೃಷ್ಣಭಟ್<br>ಡಾ. ಪಿ.ಎನ್. ನರಸಿಂಹಮೂರ್ತಿ | ಪ್ರೊ. ವೈ ಭಾಸ್ಕರಶೆಟ್ಟಿ<br>ಡಾ. ಗಣೇಶ್ ಅಮಿನ್ ಸುಕಮಾರ್ | ಸಮಾರೋಪ ಸಮಾರಂಭ (ಐಪಉ) |
| ೩೦. | ೨೮.೦೮.೧೦ | ಜ್ಞಾನದೀಪ ಸತ್ಸಂಗ ಸಂತೇಬೆನ್ನೂರು | ಎಚ್. ನೀಲಪ್ಪ | ಸಂತೇಬೆನ್ನೂರು<br>ಸುಮತೀಂದ್ರನಾಡಿಗ್ | ವಿಶೇಷ ಉಪನ್ಯಾಸ : ಸಂತೇಬೆನ್ನೂರು ನಾಯಕರು |
| ೩೧. | ೧೮.೦೯.೧೦ | ಸರ್ಕಾರಿ ಪದವಿ ಕಾಲೇಜು, ಹುಲ್ಲಹಳ್ಳಿ ನಂಜನಗೂಡು ತಾ. | ಪ್ರೊ. ಮರಿಯಯ್ಯ ಪ್ರಾಚಾರ್ಯರು | ಡಾ. ಬಿ.ಸಿ. ಸುರೇಶ್<br>ಉಪನ್ಯಾಸ | ಪರಂಪರೆ ಉಳಿಸಿ ಜಾಗೃತಿ ಜಾಥಾ ಕಾರ್ಯಕ್ರಮ<br>ಸಂಚಾಲಕರು : ಡಾ. ಕೆ.ಎಸ್. ಮೋಹನ್<br>ಸಹ ಪ್ರಾಧ್ಯಾಪಕರು, ಹುಲ್ಲಹಳ್ಳಿ |
| ೩೨. | ೦೪.೧೦.೧೦ | ಬಸವೇಶ್ವರ ಕಲಾ ಮಹಾವಿದ್ಯಾಲಯ. ಬಾಗಲಕೋಟೆ | ಪ್ರೊ ವ್ಹಿ.ಕೆ. ಮೊರಬದ ಪ್ರಾಚಾರ್ಯರು | ಶ್ರೀಮತಿ ಸುಮಾ ಈದಿಂಡವಾರ್<br>ಮತ್ತು ಬೇವೂರು ಜಿ.ಪಂ.ಸದಸ್ಯರು<br>ಪ್ರಾಚಾರ್ಯರುಗಳು, ಬೇವೂರು | ವಿಶೇಷ ಉಪನ್ಯಾಸ : ಶ್ರೀ ಶಿವಪ್ಪ ನೀರಲಗಿ<br>ಸಂಚಾಲಕರು : ಸಿದ್ದಣ್ಣ ಎನ್. ರಾಂಪೂರ |
| ೩೩. | ೦೪.೦೯.೧೦ | | ಡಾ. ಹುಸೇನ್‌ಬಾನ್<br>ಡಾ. ರು.ಮ. ಷಡಕ್ಷರಯ್ಯ | ಕೆ.ಎಂ. ರವಿಶಂಕರ್<br>ಕನ್ನಡ ಪ್ರಭ ವರಿದಾಗರ<br>ಪ್ರೊ. ಎಸ್.ಬಿ. ಹಿರೇಮಠ | ಸಂಚಾಲಕರು : ಎಸ್.ಕೆ. ಮೇಲಕಾರ |
| ೩೪. | ೧೮.೦೧.೧೧ | ಕ.ಇ.ಅ. ಗದಗ್ ಘಟಕ ಉದ್ಘಾಟನೆ ಐ.ಪ.ಪಿ. ಕಾರ್ಯಕ್ರಮ | ರೂ.ಇಂ. ಕಿಶೋರ ರೇವಣಕರ್ | ಡಾ. ಎಂ.ಎಸ್. ನರೇಗಲ್ | ಐತಿಹಾಸಿಕ ಪರಂಪರೆ ಉಳಿಸಿ<br>ನಾಣ್ಯಗಳ ಪ್ರದರ್ಶನ<br>ಸಂಚಾಲಕರು : ಪ್ರೊ. ಶಕುಂತಲಾ ಸಿಂಧೂರ |
| ೩೫. | ೧೧.೦೨.೧೧ | ಜೆ.ಟಿ. ಮಹಾವಿದ್ಯಾಲಯ ಕನ್ನಡ ಸಂಘ, ಗದಗ | ಪ್ರೊ. ಎಸ್.ಎಸ್. ಕೆರೂರು | ಡಾ. ವೈ.ಆರ್. ಬೇಕೇರಿ<br>ಉಪನ್ಯಾಸ | ನಾಣ್ಯಗಳಲ್ಲಿ ಕನ್ನಡ ಸಾಹಿತ್ಯ |
| ೩೬. | ೦೨.೦೭.೧೧ | ಶಿಕ್ಷಕರ ತರಬೇತಿ ಶಿಬಿರ ತೀರ್ಥಹಳ್ಳಿ | ಶಿವಪ್ಪ ಕೆ. | ಜಿ.ಕೆ. ದೇವರಾಜಸ್ವಾಮಿ | ತೀರ್ಥಹಳ್ಳಿ ತಾಲ್ಲೂಕಿನ ಶಾಸನ-ದೇವಾಲಯಗಳು<br>ಸಂಚಾಲಕರು : ಜಿ.ಕೆ. ದೇವರಜಸ್ವಾಮಿ |
| ೩೭. | ೨೨.೧೧.೧೦ | ಎಸ್.ಆರ್. ನರಸಾಪುರ ಕಲಾ ಮತ್ತು ಎಂ.ಬಿ. ಶಿರೂರ ವಾಣಿಜ್ಯ ಮಹಾ ವಿದ್ಯಾಲಯ, ಬಾಗಲಕೋಟೆ | ಶ್ರೀನಾಥ ಮಳಗಿ<br>ಗೌ. ಕಾರ್ಯದರ್ಶಿಗಳು | ಡಾ. ಶೀಲಾಕಾಂತ ಪತ್ತಾರ<br>ಬಾದಾಮಿ | ಐತಿಹಾಸಿಕ ಪರಂಪರೆ ಉಳಿಸಿ<br>ಸಂಚಾಲಕರು : ಡಾ. ಡಿ.ಎಚ್. ಕುಲಕರ್ಣಿ |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| | | | ಸರ್ವಶ್ರೀ | ಸರ್ವಶ್ರೀ | |
| ೩೮. | ೧೬.೦೮.೧೦ | ಚಂದ್ಕೂರು ಶ್ರೀ ದುರ್ಗಾ ಪರಮೇಶ್ವರಿ ದೇವಸ್ಥನ | ಶ್ರೀ ಗೋವಿಂದ ಹೊಳ್ಳ ನಿವೃತ್ತ ಲೋಕೋಪಯೋಗಿ ಇಲಾಖಾ ಇಂಜಿನಿಯರ್ ಬೆಳ್ತಂಗಡಿ | ಶ್ರೀ ಧನಂಜಯ ಅಜ್ರಿ, ನಡ ಆಡಳಿತ ಮೊಕ್ತೇಸರರು ಚಂದ್ಕೂರು ದೇವಸ್ಥಾನ ಡಾ. ವೈ. ಉಮಾನಾಥ ಶೆಣೈ ಶ್ರೀ ಧ.ಮ. ಕಾಲೇಜು, ಉಜಿರೆ | ಸಾಪ್ತಾಹಿಕ ಕಾರ್ಯಕ್ರಮ ಉದ್ಘಾಟನೆ, ಉಪನ್ಯಾಸ |
| ೩೯. | ೧೭.೦೮.೧೦ | ಶ್ರೀ ಧ.ಮ. ಕಾಲೇಜು ಉಜಿರೆ | ಡಾ. ಪುಂಡರೀಕ ಎ. ಉಪನ್ಯಾಸಕರು ಶ್ರೀ ಧ.ಮ. ಕಾಲೇಜು, ಉಜಿರೆ | " | "ನಮ್ಮ ಗ್ರಾಮದ ಒಂದು ಪ್ರಾಚೀನ ಸ್ಮಾರಕ" ಚಿತ್ರ ರಚನಾ ಸ್ಪರ್ಧೆ |
| ೪೦. | ೧೮.೦೮.೧೦ | ಶ್ರೀ ಧ.ಮ. ಕಾಲೇಜು ಉಜಿರೆ | " | ಪ್ರೊ. ಬಿ. ಪ್ರಮೋದ್‌ಕುಮಾರ್ ಶ್ರೀ ಧ.ಮ. ಕಾಲೇಜು, ಉಜಿರೆ | "ಪ್ರಾಚೀನ ಸ್ಮಾರಕಗಳು ಮತ್ತು ಅವುಗಳ ಸಂರಕ್ಷಣೆ" ಎಂಬ ಪ್ರಬಂಧ ಸ್ಪರ್ಧೆ |
| ೪೧. | ೧೯.೦೮.೧೦ | ಶ್ರೀ ಧ.ಮ. ಕಾಲೇಜು ಉಜಿರೆ | ಡಾ. ವೈ. ಉಮಾನಾಥ ಶೆಣೈ | ಪ್ರೊ. ನಾ ವುಜಿರೆ ಶ್ರೀ ಧ.ಮ. ಕಾಲೇಜು, ಉಜಿರೆ | "ಸ್ಮಾರಕಗಳು ಮತ್ತು ಅವುಗಳ ಸಂರಕ್ಷಣೆ" ಉಪನ್ಯಾಸ |
| ೪೨. | ೨೦.೦೮.೧೦ | ಶ್ರೀ ಧ.ಮ. ಕಾಲೇಜು ಉಜಿರೆ | ಡಾ. ಪುಂಡರೀಕ ಎ. | ಡಾ. ಶ್ರೀ ಪ್ರಸಾದ್ | "ಸ್ಮಾರಕಗಳು ಮತ್ತು ಪರಂಪರೆ ಭಾಷಣ ಸ್ಪರ್ಧೆ" |
| ೪೩. | ೨೧.೦೮.೧೦ | ಶ್ರೀ ಧ.ಮ. ಕಾಲೇಜು ಉಜಿರೆ | ಡಾ. ವೈ ಉಮಾನಾಥ ಶೆಣೈ | " | "ಪ್ರಾಚೀನ ಸ್ಮಾರಕಗಳು" ಸಿ.ಡಿ. ಪ್ರದರ್ಶನ |
| ೪೪. | ೨೨.೦೮.೧೦ | ಉಜಿರೆಯ ಶ್ರೀ ಜನಾರ್ಧನ ಸ್ವಾಮಿ ದೇವಸ್ಥನ ಶ್ರೀ ಶಾರದಾ ಮಂಟಪ | ಶ್ರೀ ವಿಜಯ ರಾಘವ ಪಡ್ವೆಟ್ನಾಯ | ಡಾ. ಇ. ಮಹಾಬಲ ಭಟ್ | ಬಹುಮಾನ ವಿತರಣೆ, ಉಪನ್ಯಾಸ, ಸಾಪ್ತಾಹಿಕ ಕಾರ್ಯಕ್ರಮದ ಸಮಾರೋಪ |
| ೪೫. | ೨೨.೦೮.೧೦ | ಸರ್ಕಾರಿ ಸಂಯುಕ್ತ ಪದವಿ ಕಾಲೇಜು, ಮೈಲಾರಪಟ್ಟಣ | ಶ್ರೀ ರಾಮೇಗೌಡ, ಪ್ರಾಚಾರ್ಯರು ಮೈಲಾರ ಪಟ್ಟಣ | ಶ್ರೀ ಮಹಾದೇವಪ್ಪ ಉಪನಿದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆ ಶ್ರೀ ಎಸ್. ರಾಜೇಂದ್ರಪ್ಪ ಸಂಪಾದಕರು, ಬೆಂಗಳೂರು | ತಾಲ್ಲೂಕು ಮಟ್ಟದ ಪದವಿ ಪೂರ್ವ ವಿದ್ಯಾರ್ಥಿಗಳಿಗೆ ಇತಿಹಾಸ ರಸಪ್ರಶ್ನೆ ಕಾರ್ಯಕ್ರಮ |
| ೪೬ | ೨೬.೦೮.೧೦ | ಸರ್ಕಾರಿ ಪದವಿ ಪೂರ್ವ ಕಾಲೇಜು, ಬಿಂಡಿಗನವಿಲೆ ಹೊನ್ನಾವರ | ಪ್ರಾಚಾರ್ಯರು, ಬಿಂಡಿಗನವಿಲೆ ಪ್ರಾಚಾರ್ಯರು, ಹೊನ್ನಾವರ | ಶ್ರೀ ಮಹಮ್ಮದ್ ಕಲೀಂಉಲ್ಲ ಶ್ರೀ ಮಹಮ್ಮದ್ ಕಲೀಂಉಲ್ಲ | ಸಂಚಾಲಕರು : ಶ್ರೀ ಕಲೀಮುಲ್ಲಾ, ಶಿಕ್ಷಕರು ಮೈಲಾರಪಟ್ಟಣ, ಐ.ಪ. ಉಳಿಸಿ ಸಪ್ತಾಹ ಉಪನ್ಯಾಸ |

## ಇಪ್ಪತ್ತನಾಲ್ಕನೆಯ ವಾರ್ಷಿಕ ಸಮ್ಮೇಳನ

ಶ್ರೀ ಆದಿಚುಂಚನಗಿರಿಯ ಮಹಾಸಂಸ್ಥಾನ ಮಠದ ಆಶ್ರಯದಲ್ಲಿ ೨೦೧೦ರ ನವೆಂಬರ್ ೧೩ ರಿಂದ ನವೆಂಬರ್ ೧೫, ೨೦೧೦ರವರೆಗೆ ಜರುಗಿದ ಕರ್ನಾಟಕ ಇತಿಹಾಸ ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನಕ್ಕೆ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಶ್ರೀಮಠವು ಆತಿಥ್ಯ ನೀಡಿತ್ತು.

ದಿನಾಂಕ : ೧೩.೧೧.೨೦೧೦ರ ಬೆಳಿಗ್ಗೆ ೧೦.೩೦ಕ್ಕೆ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಂದ ಸಮ್ಮೇಳನ ಉದ್ಘಾಟಿತಗೊಳ್ಳಬೇಕಿತ್ತು. ಆದರೆ ಮುಖ್ಯಮಂತ್ರಿಗಳ ಅನಿರೀಕ್ಷಿತ ಗೈರುಹಾಜರಿಯಲ್ಲಿ ಸನ್ಮಾನ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಗಳ ಸಾನಿಧ್ಯದಲ್ಲಿ ಸಮ್ಮೇಳನವು ಆರಂಭಗೊಂಡಿತು. ಡಾ. ಎಂ.ಜಿ. ನಾಗರಾಜ್ ಹಾಗೂ ಡಾ. ಪಿ.ವಿ. ಕೃಷ್ಣಮೂರ್ತಿ ಸಂಪಾದಿತ ಇತಿಹಾಸ ದರ್ಶನದ ೨೫ನೆಯ ವಾರ್ಷಿಕ ಸಂಚಿಕೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ. ಆರ್.ಕೆ. ನಲ್ಲೂರು ಪ್ರಸಾದ್ ಬಿಡುಗಡೆ ಮಾಡಿದರು. ಸಾನಿಧ್ಯ ವಹಿಸಿದ್ದ ಹಿರಿಯ ಶ್ರೀಗಳು, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯನ್ನು ಡಾ. ಪಿ.ವಿ. ಕೃಷ್ಣಮೂರ್ತಿ ಅವರಿಗೆ ಪ್ರದಾನ ಮಾಡಿದರು. ಈ ಪ್ರಶಸ್ತಿಯ ನಗದು ಮೊತ್ತ ರೂ. ೧೦,೦೦೦ (ಹತ್ತು ಸಾವಿರ ಮಾತ್ರ) ಗಳನ್ನು ಶ್ರೀಯುತರು ಅಕಾದೆಮಿಗೆ ದೇಣಿಗೆ ನೀಡುವುದಾಗಿ ಘೋಷಿಸಿದರು.

ಸಮ್ಮೇಳನಾಧ್ಯಕ್ಷರ ಗೌರವಕ್ಕೆ ಪಾತ್ರರಾಗಿದ್ದ ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರಾದ ಡಾ. ಎಂ.ಎಸ್. ಕೃಷ್ಣಮೂರ್ತಿ ಅವರು ಕರ್ನಾಟಕತ್ವದ ಮಹತ್ವದ ಬಗ್ಗೆ ಮಾತನಾಡುತ್ತಾ, ದೇಶಿಯತೆಯ ಬಗ್ಗೆ ಒತ್ತು ಕೊಟ್ಟು ತಲಕಾಡಿನ ಉತ್ಖನನದ ಹಿನ್ನೆಲೆಯನ್ನು ನೀಡಿ ಮಾತನಾಡಿದರು. ಉದ್ಘಾಟನಾ ಸಮಾರಂಭದ ಸಾನಿಧ್ಯ ವಹಿಸಿದ್ದ ಹಿರಿಯ ಶ್ರೀಗಳು ಆಶೀರ್ವಚನ ನೀಡುವ ಮೂಲಕ ಸಮ್ಮೇಳನ ಯಶಸ್ವಿಯಾಗಲೆಂದು ಹರಸಿದರು. ಉದ್ಘಾಟನಾ ಸಮಾರಂಭದಲ್ಲಿ ಹಿಂದಿನ ಸಮ್ಮೇಳನದ ನಂತರ ಪಿಎಚ್.ಡಿ./ಡಿ.ಲಿಟ್. ಪದವಿ ಗೌರವಕ್ಕೆ ಪಾತ್ರರಾದವರಿಗೆ ಆರ್.ಕೆ. ನಲ್ಲೂರ ಪ್ರಸಾದ್ ಸನ್ಮಾನಿಸಿದರು. ಪಟ್ಟಿ ಕೆಳಕಂಡಂತಿದೆ.

| ಕ್ರ ಸಂ. | ಪಿಎಚ್.ಡಿ./ಡಿ.ಲಿಟ್ ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯ |
|---|---|---|---|---|
| ೧ | ಜಿ. ಮನೋಜ್ | ಡಾ. ಎಂ.ಎಸ್. ಕೃಷ್ಣಮೂರ್ತಿ | *Temples of Salem Region (upto 1336 A.D)* | ಮೈಸೂರು ವಿಶ್ವವಿದ್ಯಾಲಯ ದಿ. ೨೬.೧೨.೦೯ |
| ೨ | ಶ್ರೀಮತಿ ಸಿ.ಎಂ. ಸುಲೋಚನ | ಡಾ. ಬಸವರಾಜ ನೆಲ್ಲೀಸರ | ಶ್ರೀಮತ್ ರಂಭಾಪುರಿ ಪೀಠ ಆರ್ಥಿಕ ಸಮಾಜೋ–ಸಾಂಸ್ಕೃತಿಕ ಅಧ್ಯಯನ | ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ ದಿ. ೨೩.೨.೧೦ |
| ೩ | ಎಸ್. ಸುದರ್ಶನ್ | ಡಾ. ಎನ್. ಸರಸ್ವತಿ | *Women in Hoysala Sculptures : A Cultural Study (1000-1346 A.D.)* | ಮೈಸೂರು ವಿ.ವಿ. ಮೈಸೂರು ದಿ. ೧೯.೭.೧೦ |
| ೪ | ಶಲ್ವಪಿಳ್ಳೆ ಐಯ್ಯಂಗಾರ್ | ಡಾ. ಎಂ.ಎಸ್. ಕೃಷ್ಣಮೂರ್ತಿ | *Iconography of Vishnu in Hoysala Temples (A study based on Sanskrit Sources)* | ಮೈಸೂರು ವಿ.ವಿ. ಮೈಸೂರು ದಿ. ೭.೯.೧೦ |
| ೫ | ಮುತ್ತುರಾಜು | ಪ್ರೊ. ಡಿ. ಲಿಂಗಯ್ಯ | ಮುತ್ತತ್ತಿ : ಒಂದು ಸಾಂಸ್ಕೃತಿಕ ಅಧ್ಯಯನ | ಕನ್ನಡ ವಿ.ವಿ. ಹಂಪಿ ದಿ. ೧೭.೯.೧೦ |
| ೬ | ಜಿ.ವಿ. ಮಂಜುನಾಥ | ಡಾ. ಆರ್. ರಾಜಣ್ಣ | ದಾವಣಗೆರೆ: ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ. ೧೧ ರಿಂದ ೧೩ನೆಯ ಶತಮಾನ) | ಮೈಸೂರು ವಿ.ವಿ. ಮೈಸೂರು ದಿ. ೨.೧೧.೧೦ |
| ೭ | ಕೋ.ವೆಂ. ರಾಮಕೃಷ್ಣೇ ಗೌಡ | ಡಾ. ಎ.ಜಿ. ವಿಜಯ ರಾಘವನ್ | ಕಾವೇರಿ ತೀರದ ಸಾಂಸ್ಕೃತಿಕ ಅಧ್ಯಯನ (ಶಾಸನಗಳು ಮತ್ತು ಕಾವ್ಯಗಳನ್ನು ಅನುಲಕ್ಷಿಸಿ) | ಬೆಂಗಳೂರು ವಿ.ವಿ. ಬೆಂಗಳೂರು |

| | | | | |
|---|---|---|---|---|
| ೮ | ಎನ್. ಮಹದೇವಸ್ವಾಮಿ | | ಮೈಸೂರು ಒಡೆಯರ ಕಾಲದ ಸಂಸ್ಕೃತಿ (೧೩೯೯ ರಿಂದ ೧೮೬೮ ರವರೆಗೆ) | ಮೈಸೂರು ವಿ.ವಿ. ಮೈಸೂರು |
| ೯ | ಹುಲಿಗೆಮ್ಮ ಬಿ. | ಡಾ. ಕೆ. ರವೀಂದ್ರನಾಥ | ಹಾಲಮತ ಪುರಾಣಗಳು ಸಾಂಸ್ಕೃತಿಕ ಅಧ್ಯಯನ<br>– " – | ಕನ್ನಡ ವಿ.ವಿ. ಹಂಪಿ ದಿ. ೪.೧೨.೦೯ |
| ೧೦ | ಸೋಮಕ್ಕ ಎಂ. | ಡಾ. ಪಿ. ಮಹಾದೇವಯ್ಯ | ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು (ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ | ದಿ. ೭.೮.೦೯ ಮೈ.ವಿ.ವಿ. ಮೈಸೂರು |

ಸಮ್ಮೇಳನದಲ್ಲಿ ೧೩-೧೧-೨೦೧೦ರ ಮಧ್ಯಾಹ್ನ ೨ ಗಂಟೆಯಿಂದ ೧೫-೧೧-೨೦೧೦ರ ಮಧ್ಯಾಹ್ನ ೪ -೩೦ ಗಂಟೆಯವರೆಗೆ ೧೨ ಗೋಷ್ಠಿಗಳು ನಡೆದು, ಒಟ್ಟು ೧೩೪ ಸಂಪ್ರಬಂಧಗಳು ಮಂಡನೆಯಾದವು. ಗೋಷ್ಠಿಗಳ ಅಧ್ಯಕ್ಷತೆಯನ್ನು ಕ್ರಮವಾಗಿ ಡಾ. ದೇವರಕೊಂಡಾರೆಡ್ಡಿ, ಡಾ. ಎ.ಕೆ. ಶಾಸ್ತ್ರಿ, ಡಾ. ಎಂ.ಜಿ. ನಾಗರಾಜ್, ಡಾ. ಬಿ. ರಾಜಶೇಖರಪ್ಪ, ಡಾ. ಎಚ್. ಚಂದ್ರಶೇಖರ್, ಡಾ. ಪಿ.ಎನ್. ನರಸಿಂಹಮೂರ್ತಿ, ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಪಿ.ವಿ. ಕೃಷ್ಣಮೂರ್ತಿ, ಡಾ. ಜ್ಯೋತ್ಸ್ನಾ ಕಾಮತ್. ಡಾ. ಸ್ಮಿತಾ ಸುರೇಬಾನಕರ್, ಡಾ. ಚನ್ನಕ್ಕ ಪಾವಟೆ ಹಾಗೂ ಡಾ. ಕೆ. ಆರ್. ಗಣೇಶ ಅವರು ವಹಿಸಿದ್ದರು. ಗೋಷ್ಠಿಗಳ ನಿರ್ವಹಣೆಯನ್ನು ಕ್ರಮವಾಗಿ ಡಾ. ಶೋಭಾ, ಡಾ. ಎನ್. ನಂದೀಶ್ವರ್, ಶ್ರೀ ಶಿ. ರಾಜೇಂದ್ರಪ್ಪ, ಶ್ರೀ ಆರ್. ಶಶಿಧರ್, ಡಾ. ಮುತ್ತುರಾಜು, ಶ್ರೀ ಜೆ.ಕೆ. ದೇವರಾಜಸ್ವಾಮಿ, ಶ್ರೀಮತಿ ಡಿ. ಸ್ಮಿತಾರೆಡ್ಡಿ, ಶ್ರೀಮತಿ ಅನ್ನಪೂರ್ಣ ಗೋಸ್ವಾಳ್, ಶ್ರೀ ಕನ್ಯಾಕುಮಾರ್, ಶ್ರೀ ಆರ್. ಶಶಿಧರ್, ಶ್ರೀ ಚಿಕ್ಕಚನ್ನಯ್ಯ ಹಾಗೂ ಶ್ರೀ ಎಸ್. ನಾಗರಾಜಪ್ಪ ಯಶಸ್ವಿಯಾಗಿ ನಿರ್ವಹಿಸಿದರು.

**ಸಮಾರೋಪ ಸಮಾರಂಭ**

ದಿನಾಂಕ ೧೫-೧೧-೨೦೧೦ ರಂದು ಸಂಜೆ ಎಂಟು ಗಂಟೆಗೆ ಸಮಾರೋಪ ಸಮಾರಂಭ ಆರಂಭವಾಯಿತು. ಶ್ರೀ ನಿರ್ಮಲಾನಂದ ಸ್ವಾಮೀಜಿಯವರ ಸಾನಿಧ್ಯದಲ್ಲಿ ಜರುಗಿದ ಈ ಸಮಾರಂಭದ ಅಧ್ಯಕ್ಷತೆಯನ್ನು ಡಾ. ಎಂ.ಎಸ್. ಕೃಷ್ಣಮೂರ್ತಿ ವಹಿಸಿದ್ದರು. ಡಾ. ಸೂರ್ಯನಾಥ ಕಾಮತ್ ಅವರು ಉಪಸ್ಥಿತರಿದ್ದರು. ಶ್ರೀ ಕ್ಷೇತ್ರದ ವಿದ್ಯಾರ್ಥಿಗಳಿಂದ ವೇದಘೋಷದೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಪ್ರಧಾನ ಕಾರ್ಯದರ್ಶಿ ಡಾ. ಎಚ್.ಎಸ್. ಗೋಪಾಲರಾವ್ ಸ್ವಾಗತ ಕೋರಿದರು ಪ್ರತಿನಿದಿಗಳ ಪರವಾಗಿ ಮಾತನಾಡಿದ ಡಾ. ಕರುಣ ವಿಜಯೇಂದ್ರ, ಹಾಗೂ ಶ್ರೀ ಕೆ. ನಾರಾಯಣನಾಯಕ್ ಸದಭಿಪ್ರಾಯ ವ್ಯಕ್ತಪಡಿಸಿ ಶ್ರೀಕ್ಷೇತ್ರ ಆದಿಚುಂಚನಗಿರಿ ಸಂಸ್ಥಾನಕ್ಕೆ ಕೃತಜ್ಞತೆ ಸಲ್ಲಿಸಿದರು. ಗೌರವಾಧ್ಯಕ್ಷ ಡಾ. ಸೂರ್ಯನಾಥ ಕಾಮತ್‌ರವರು ಹಿರಿಯ ಹಾಗೂ ಕಿರಿಯ ಶ್ರೀಗಳಿಗೆ ಕೃತಜ್ಞತೆ ಸಲ್ಲಿಸಿದರು. ಪೂಜ್ಯಶ್ರೀ ನಿರ್ಮಲಾನಂದ ಸ್ವಾಮೀಜಿಯವರು ಸಮಾರೋಪ ಭಾಷಣ ದೊಂದಿಗೆ ಆಶೀರ್ವಚನವನ್ನು ನೀಡಿದರು. ಈ ಸಭೆಯ ಅಧ್ಯಕ್ಷತೆ ವಹಿಸಿದ್ದ ಸಮ್ಮೇಳನಾಧ್ಯಕ್ಷ ಡಾ. ಎಂ.ಎಸ್. ಕೃಷ್ಣಮೂರ್ತಿ ಅಧ್ಯಕ್ಷ ಭಾಷಣ ಮಾಡಿದರು. ಅಕಾದೆಮಿಯ ನೂತನ ಕಾರ್ಯಾಧ್ಯಕ್ಷರಾಗಿ ಆಯ್ಕೆಯಾಗಿದ್ದ ಡಾ. ದೇವರಕೊಂಡಾರೆಡ್ಡಿ, ವಂದನಾರ್ಪಣೆ ಮಾಡಿದರು. ಅಕಾದೆಮಿಯ ನೂತನ ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ರಾಜೇಂದ್ರಪ್ಪ ಕಾರ್ಯಕ್ರಮ ನಿರ್ವಹಿಸಿದರು.

**ಸರ್ವಸದಸ್ಯರ ಸಭೆಯ ವರದಿ- ೨೦೦೯**

ದಿನಾಂಕ ೧೪-೧೧-೨೦೧೦ರ ಭಾನುವಾರ ಸಂಜೆ ೬-೩೦ ಗಂಟೆಗೆ, ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ, ಮಂಡ್ಯ ಜಿಲ್ಲೆಯ ಶ್ರೀ ಆದಿಚುಂಚನಗಿರಿಯ ಅನ್ನಪೂಣೇಶ್ವರಿ ಭವನದಲ್ಲಿ ಆ ಮೊದಲೇ ಸರ್ವಸದಸ್ಯರಿಗೂ ಪತ್ರಮುಖೇನ ತಿಳಿಸಿದ್ದ ಪ್ರಕಾರ, ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸರ್ವಸದಸ್ಯರ ಸಭೆಯ ನಡವಳಿಕೆಗಳು ಈ ಕೆಳಕಂಡಂತಿವೆ.

ಸಭೆಯಲ್ಲಿ ೧೦೫ ಸದಸ್ಯರು ಹಾಜರಿದ್ದರು. ಅವರ ಸಹಿ ಇರುವ ಪಟ್ಟಿಯನ್ನು ಈ ವರದಿಯ ಜೊತೆಗೆ ಲಗತ್ತಿಸಲಾಗಿದೆ. ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಅಂಚೆಯ ಮೂಲಕ ಎಲ್ಲ ಸದಸ್ಯರಿಗೂ ಮೊದಲೇ ಕಳುಹಿಸಲಾಗಿತ್ತು. ಅದನ್ನು ಪ್ರಧಾನ ಕಾರ್ಯದರ್ಶಿ ಡಾ. ಎಚ್.ಎಸ್. ಗೋಪಾಲರಾವ್ ವಾಚಿಸಿದರು. ಅಧ್ಯಕ್ಷರಾದ ಡಾ. ಸೂರ್ಯನಾಥ ಕಾಮತ್ ಅವರು ಸಭೆಯನ್ನು ಆರಂಭಿಸಲು ಹಾಜರಿದ್ದ ಸದಸ್ಯರ ಅನುಮತಿ ಕೋರಿದರು. ಸರ್ವಸದಸ್ಯರ ಸಭೆಯ

ಆರಂಭಕ್ಕೆ ಅನುಮೋದನೆ ನೀಡಬಹುದೆಂಬ ಡಾ. ಎಂ.ಜಿ. ನಾಗರಾಜ್ ಅವರ ಸೂಚನೆಯನ್ನು ಡಾ. ಎಚ್. ಚಂದ್ರಶೇಖರ್ ಅನುಮೋದಿಸಿದರು. ಸರ್ವಸದಸ್ಯರೂ ಸಭೆಯ ಆರಂಭಕ್ಕೆ ಅನುಮೋದನೆ ನೀಡಿದರು.

ಸರ್ವಸದಸ್ಯರ ಸಭೆಯು ಡಾ. ಜಯಮ್ಮ ಕರಿಯಣ್ಣ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಕಳೆದ ಸರ್ವಸದಸ್ಯರ ಸಭೆಯ ನಂತರ ಈವರೆಗೆ ನಿಧನರಾಗಿರುವ ಅಕಾದೆಮಿಯ ಸದಸ್ಯರ ಹಾಗೂ ಗಣ್ಯರ ನಿಧನಕ್ಕಾಗಿ ಸಭೆಯು ಒಂದು ನಿಮಿಷ ಮೌನಾಚರಣೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸಿತು. ಶ್ರದ್ಧಾಂಜಲಿಗೆ ಪಾತ್ರರಾದವರ ಹೆಸರುಗಳು ಈ ಕೆಳಕಂಡಂತಿವೆ.

**ಕರ್ನಾಟಕ ಇತಿಹಾಸ ಅಕಾದೆಮಿಯ ದಿವಂಗತರಾದ ಸದಸ್ಯರು**

೧. ಡಾ. ಶ್ರೀನಿವಾಸ ಹಾವನೂರು, ೨. ಶ್ರೀ ವಿ. ಶಾಂತಪ್ಪ, ೩. ಶ್ರೀ ಟಿ.ಎನ್. ಮಂಜುನಾಥ, ೪. ಪ್ರೊ. ಆರ್.ಎಸ್. ಕಾಂತರಾಜು, ೫. ಬ್ಯಾಡಗಿಯ ಶ್ರೀ ಜಿ.ವಿ. ಕುಲಕರ್ಣಿ, **ಸದಸ್ಯರೇತರ ಗಣ್ಯರು** ೬. ಡಾ. ವಿಷ್ಣುವರ್ಧನ, ೭. ಶ್ರೀ ಸಿ. ಅಶ್ವತ್ಥ್, ೮. ಶ್ರೀ ಪಂಡಿತ ಪುಟ್ಟರಾಜ ಗವಾಯಿ, ೯. ಶ್ರೀ ಕೆ.ಎಸ್. ಅಶ್ವತ್ಥ್, ೧೦. ಶ್ರೀಮತಿ ಚಿಂದೋಡಿ ಲೀಲಾ ಹಾಗೂ ೧೧. ಶ್ರೀ ಕಿ.ರಂ. ನಾಗರಾಜ್.

ಶ್ರದ್ಧಾಂಜಲಿ ಸಲ್ಲಿಕೆಯ ನಂತರ ಸಭೆಯಲ್ಲಿ ಹಾಜರಿದ್ದ ಎಲ್ಲ ಸದಸ್ಯರನ್ನೂ ಡಾ. ದೇವರಕೊಂಡಾರೆಡ್ಡಿ ಸ್ವಾಗತಿಸಿದರು.

**೨೦೦೯ನೆಯ ಸಾಲಿನ ವರದಿ**

೨೦೦೯ನೆಯ ಸಾಲಿನ ವಾರ್ಷಿಕ ವರದಿಯನ್ನು ಅಧ್ಯಕ್ಷರಾದ ಡಾ. ಸೂರ್ಯನಾಥ ಕಾಮತ್ ಮಂಡಿಸಿದರು. ವಾರ್ಷಿಕ ವರದಿಯ ಮುದ್ರಿತ ಪ್ರತಿಗಳನ್ನು ಸಭೆಯ ಆರಂಭದಲ್ಲೇ ಹಾಜರಿದ್ದ ಎಲ್ಲ ಸದಸ್ಯರಿಗೂ ವಿತರಿಸಲಾಗಿತ್ತು. ಅದರ ವಾಚನದ ಅವಶ್ಯಕತೆ ಇಲ್ಲವೆಂದು ಹಾಜರಿದ್ದ ಸದಸ್ಯರೆಲ್ಲ ಘೋಷಿಸಿದರು.

೨೦೦೯ನೆಯ ಸಾಲಿನ ವರದಿಯನ್ನು ಸ್ವೀಕರಿಸಬಹುದೆಂಬ ಧಾರವಾಡದ ಡಾ. ಎಸ್.ಕೆ. ಮೇಲಕಾರ ಅವರ ಸೂಚನೆಯನ್ನು ಬೆಂಗಳೂರಿನ ಶ್ರೀ ಸುಭಾಷ್ ಚಂದ್ರಬೋಸ್ ಅನುಮೋದಿಸಿದರು.

**೨೦೦೯ನೆಯ ಸಾಲಿನ ಪರಿಶೋಧಿತ ಲೆಕ್ಕ ಪತ್ರ ಮಂಡನೆ**

೨೦೦೯ನೆಯ ಸಾಲಿನ ವರದಿಯ ಜೊತೆಗೆ ೨೦೦೯ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಮುದ್ರಿತ ಪ್ರತಿಗಳನ್ನು ಸದಸ್ಯರಿಗೆ ನೀಡಲಾಗಿತ್ತು. ಅದನ್ನು ಡಾ. ಸೂರ್ಯನಾಥ ಕಾಮತ್ ಮಂಡಿಸಿದರು. ಕರ್ನಾಟಕ ಕೈಗನ್ನಡಿಯ ಮಾರಾಟದ ಹೊಣೆಯನ್ನು ಐ.ಬಿ.ಎಚ್. ಪೂರ್ಣ ವಹಿಸಿರುವ ಅಂಶವನ್ನು ಡಾ. ಸೂರ್ಯನಾಥ ಕಾಮತ್ ಸಭೆಯ ಗಮನಕ್ಕೆ ತಂದರು. ೨೦೦೯ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನು ಒಪ್ಪಬಹುದೆಂಬ ಸೂಚನೆಯನ್ನು ಡಾ. ಎಂ.ಜಿ. ನಾಗರಾಜ್ ನೀಡಿದರು. ಆ ಸೂಚನೆಯನ್ನು ಶ್ರೀಮತಿ ಹನುಮಾಕ್ಷಿ ಗೋಗಿ ಅನುಮೋದಿಸಿದರು.

**೨೦೧೦ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳು**

೨೦೦೯ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಜೊತೆಗೆ ೨೦೦೯-೧೦ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳ ಪ್ರತಿಗಳನ್ನೂ ಸದಸ್ಯರಿಗೆ ನೀಡಲಾಗಿತ್ತು. ಅದನ್ನು ಡಾ. ಸೂರ್ಯನಾಥ್‌ಕಾಮತ್ ಮಂಡಿಸಿದರು.

ಅಕಾದೆಮಿಯ ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಸದಸ್ಯತ್ವ ಶುಲ್ಕ ಹೆಚ್ಚಿಸುವ ಬಗ್ಗೆ ಸೂಚನೆ ಬಂದಿತಾದರೂ ಹೆಚ್ಚಿಸುವ ಅಗತ್ಯವಿಲ್ಲವೆಂದು ಸಭೆ ನಿರ್ಣಯಿಸಿತು. ೨೦೧೦ನೆಯ ಸಾಲಿನ ಮುಂಗಡ ಬಜೆಟ್ಟನ್ನು ಒಪ್ಪಬಹುದೆಂದು ಡಾ. ಬಿ. ನಂಜುಂಡಸ್ವಾಮಿ ಸೂಚಿಸಿದರು. ಆ ಸೂಚನೆಯನ್ನು ಶ್ರೀ ಎಂ.ಎನ್. ಪ್ರಭಾಕರ್ ಅನುಮೋದಿಸಿದರು. ಸರ್ವಸದಸ್ಯರ ಅನುಮೋದನೆಯೂ ದೊರೆಯಿತು.

**೨೦೧೦ನೆಯ ಸಾಲಿಗೆ ಆಡಿಟರ್ ನೇಮಕ**

ಈವರೆಗೆ ಅಕಾದೆಮಿಯ ಲೆಕ್ಕಪತ್ರಗಳನ್ನು ಪರಿಶೋಧಿಸಿ ಕೊಟ್ಟಿರುವ ಶ್ರೀ ಕೆ.ವಿ. ಆಚಾರ್ಯ ಅಂಡ್ ಕಂಪೆನಿ, ಬೆಂಗಳೂರು ಅವರನ್ನೇ ೨೦೧೦ನೆಯ ಸಾಲಿನ ಲೆಕ್ಕಪತ್ರಗಳ ಪರಿಶೋಧನೆಗೂ ರೂ. ೬,೦೦೦ ಸಂಭಾವನೆಯನ್ನು ನೀಡಿ ನೇಮಿಸಿಕೊಳ್ಳಬಹುದೆಂಬ ಡಾ. ಎಸ್. ನಾಗರಾಜ್ ಸೂಚಿಸಿದರು. ಆ ಸೂಚನೆಯನ್ನು ಶ್ರೀ ಹನುಮಂತ ಜೋಯಿಸ್ ಅನುಮೋದಿಸಿದರು. ಸರ್ವಸದಸ್ಯರೂ ಇದನ್ನು ಅನುಮೋದಿಸಿದರು.

**ಠರಾವುಗಳ ಮಂಡನೆ**

೧. ಕೆಳದಿ ರಾಣಿ ಚೆನ್ನಮ್ಮನ ಪುತ್ಥಳಿಯನ್ನು ಕೆಳದಿಯಲ್ಲಿ ಸ್ಥಾಪಿಸುವುದು. ಇದರಿಂದ ಕೆಳದಿಯ ಪ್ರವಾಸ ಮಹತ್ವ ಹೆಚ್ಚುತ್ತದೆ ಎಂಬ ಠರಾವನ್ನು ಡಾ. ಅಮರೇಶ್ ಯತಗಲ್ ಮಂಡಿಸಿದ ಸೂಚನೆಯನ್ನು ಶ್ರೀ ಸುಮತೀಂದ್ರ ನಾಡಿಗ್ ಅನುಮೋದಿಸಿದರು.

೨. ೧೧ನೇ ಶತಮಾನದಲ್ಲಿದ್ದ ಆದಿಕವಿ ಪಂಪನ ಸೋದರ ಜಿನವಲ್ಲಭನ ಕುರಿಕ್ಯಾಲ್ ಶಾಸನವಿರುವ ಬೊಮ್ಮಲಮ್ಮನ ಗುಡ್ಡವನ್ನು ರಕ್ಷಿಸಲು ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಳ್ಳಲು ಆಂಧ್ರಪ್ರದೇಶ ಸರ್ಕಾರವನ್ನು ಅಕಾದೆಮಿಯ ಈ ಸರ್ವಸದಸ್ಯರ ಸಭೆಯು ಆಗ್ರಹಪೂರ್ವಕವಾಗಿ ಒತ್ತಾಯಿಸುತ್ತದೆ ಎಂಬ ಠರಾವನ್ನು ಡಾ. ತಮಿಳ್ ಸೆಲ್ವಿ ಸೂಚಿಸಿದಾಗ, ಡಾ. ಮಾಡಲಗೇರಿ ಕೊಟ್ರೇಶ ಅದಕ್ಕೆ ಅನುಮೋದಿಸಿದರು.

**೨೦೧೦-೧೧, ೨೦೧೧-೧೨ನೆಯ ಸಾಲಿಗೆ ಕಾರ್ಯಕಾರೀ ಸಮಿತಿಯ ಆಯ್ಕೆ**

೨೦೦೮ರಲ್ಲಿ ಜರುಗಿದ ಅಕಾದೆಮಿಯ ೨೨ನೆಯ ವಾರ್ಷಿಕ ಸಮ್ಮೇಳನದ ಸಂದರ್ಭದಲ್ಲಿ ನಡೆದಿದ್ದ ಸರ್ವಸದಸ್ಯರ ಸಭೆಯಲ್ಲಿ ಮುಂದಿನ ಎರಡು ವರ್ಷದ ಅವಧಿಗೆ ಆಯ್ಕೆಯಾಗಿದ್ದ ಕಾರ್ಯಕಾರೀ ಸಮಿತಿಯ ಅಧಿಕಾರಾವಧಿಯು ಪೂರ್ಣಗೊಳ್ಳಲಿರುವ ಕಾರಣದಿಂದ ಮುಂದಿನ ಎರಡು ವರ್ಷಗಳ ಅಂದರೆ ೨೦೧೦-೧೧ ಮತ್ತು ೨೦೧೧-೧೨ನೆಯ ಸಾಲಿಗೆ ಹೊಸದಾಗಿ ಕಾರ್ಯಕಾರೀ ಸಮಿತಿಯ ಆಯ್ಕೆ ಆಗಬೇಕಾಗಿದ್ದು, ಆ ಬಗ್ಗೆ ತಿಳುವಳಿಕೆಯನ್ನು ಸರ್ವಸದಸ್ಯರ ಸಭೆಯ ಸುತ್ತೋಲೆಯಲ್ಲಿ ತಿಳಿಸಲಾಗಿತ್ತು. ಇದನ್ನು ಗಮನಿಸಿದ್ದ ಸದಸ್ಯರಲ್ಲಿ ಒಬ್ಬರಾದ ಬೆಂಗಳೂರಿನ ಶ್ರೀ ಎಂ.ಆರ್. ಚಂದ್ರಶೇಖರ್ ಅವರು ತಾವು ಸಿದ್ಧಪಡಿಸಿದ್ದ ೧೯ ಜನರ ಹೆಸರಿನ ಪಟ್ಟಿಯೊಂದನ್ನು ಪ್ರಸ್ತುತ ಪಡಿಸಿದರು. ಆ ಪಟ್ಟಿಯಲ್ಲಿದ್ದ ಸದಸ್ಯರ ಹೆಸರುಗಳು ಈ ಕೆಳಕಂಡಂತಿವೆ.

ಶ್ರೀಯುತರು

| | |
|---|---|
| ೧. ಡಾ. ಸೂರ್ಯನಾಥ ಕಾಮತ್ | ೨. ಡಾ. ಎಂ.ಜಿ. ನಾಗರಾಜ್, ಬೆಂಗಳೂರು |
| ೩. ಶ್ರೀ ಎಸ್. ರಾಜೇಂದ್ರಪ್ಪ, ಬೆಂಗಳೂರು | ೪. ಡಾ. ತುಳಸಿರಾಮ ನಾಯಕ್, ಬೆಂಗಳೂರು |
| ೫. ಡಾ. ಬಿ. ರಾಜಶೇಖರಪ್ಪ, ಚಿತ್ರದುರ್ಗ | ೬. ಡಾ. ಎಚ್.ಎಸ್. ಗೋಪಾಲರಾವ್, ಅರಸಿನಕುಂಟೆ |
| ೭ ಡಾ. ದೇವರಕೊಂಡಾರೆಡ್ಡಿ, ಬೆಂಗಳೂರು | ೮. ಡಾ. ಸ್ಮಿತಾ ಸುರೇಬಾನಕರ, ಬೆಳಗಾವಿ |
| ೯. ಡಾ. ಡಿ.ಎನ್. ಯೋಗೀಶ್ವರಪ್ಪ, ತುಮಕೂರು | ೧೦. ಶ್ರೀ ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ |
| ೧೧. ಡಾ. ಜಯಮ್ಮ ಕರಿಯಣ್ಣ, ಬೆಂಗಳೂರು | ೧೨. ಶ್ರೀ ಜಯದೇವಪ್ಪ ಜೈನಕೇರಿ, ಶಿವಮೊಗ್ಗ |
| ೧೩. ಡಾ. ಎಫ್.ಟಿ. ಹಳ್ಳಿಕೇರಿ, ಹಂಪಿ | ೧೪. ಡಾ. ಎ.ಕೆ. ಶಿರಸಿ |
| ೧೬. ಡಾ. ಎಚ್.ಎಸ್. ಉಷಾರಾಣಿ | ೧೭. ಡಾ. ಪಿ.ವಿ. ಕೃಷ್ಣಮೂರ್ತಿ, ಬೆಂಗಳೂರು |
| ೧೮. ಡಾ. ಡಿ.ಜಿ. ಕುಲಕರ್ಣಿ, ಬಿಜಾಪುರ | ೧೯. ಶ್ರೀ ಶಿವಪ್ಪ ನೀರಲಗಿ, ಗುಲಬರ್ಗಾ |

ಹೆಸರುಗಳನ್ನು ಓದಿದಾಗ ಸಭೆಯಲ್ಲಿ ಹಾಜರಿದ್ದವರು ಎದ್ದು ನಿಂತು ಪರಿಚಯಿಸಿಕೊಂಡರು. ೧೯ ಸದಸ್ಯರ ಹೆಸರನ್ನು ಅನುಮೋದಿಸಿದರು. ಅಲ್ಲದೇ ಉಳಿದೊಂದು ಆಯ್ಕೆ ಸದಸ್ಯ ಹಾಗೂ ಮೂವರು ಆಹ್ವಾನಿತ ಸದಸ್ಯರನ್ನು ನಾಮಕರಣ ಮಾಡಲು ಕಾರ್ಯಸಮಿತಿಗೆ ಸರ್ವಸದಸ್ಯರ ಸಭೆ ಅನುಮತಿ ನೀಡಿತು. ಈ ಪಟ್ಟಿಗೆ ಒಪ್ಪಿಗೆಯನ್ನು ಶ್ರೀಮತಿ ಹನುಮಾಕ್ಷಿ ಗೋಗಿ ಸೂಚಿಸಿದಾಗ, ಶ್ರೀ ಕೆ.ಎಸ್. ಮಧುಸೂದನ್ ಅದನ್ನು ಅನುಮೋದಿಸಿದರು. ಅಲ್ಲದೆ ಡಾ. ಸೂರ್ಯನಾಥ ಕಾಮತ್‌ರನ್ನು ಅಕಾದೆಮಿಯ ಗೌರವಾಧ್ಯಕ್ಷರನ್ನಾಗಿ ಸರ್ವ ಸದಸ್ಯರ ಸಭೆಯಲ್ಲಿ ಮುಂದುವರೆಯುವಂತೆ ಕೋರಿ ನಿರ್ಣಯ ಕೈಗೊಳ್ಳಲಾಯಿತು. ಇದನ್ನು ಡಾ. ಎಸ್.ಕೆ. ಜೋಶಿ ಸೂಚಿಸಿದಾಗ, ಡಾ. ವಸಂತಮಾಧವ ಅನುಮೋದಿಸಿದ್ದರು.

**ಅಕಾದೆಮಿಯ ೨೫ನೇ ವಾರ್ಷಿಕ ಸಮ್ಮೇಳನಕ್ಕೆ**

ಇದು ಅಕಾದೆಮಿಯ ವಾರ್ಷಿಕ ಸಮ್ಮೇಳನದ ಬೆಳ್ಳಿ ವರ್ಷವಾಗಿದ್ದು, ಇದನ್ನು ಬೆಂಗಳೂರಿನಲ್ಲೇ ನಡೆಸುವುದೆಂದು ಡಾ. ಸೂರ್ಯನಾಥ ಕಾಮತ್ ಸೂಚಿಸುತ್ತಾ ಪೂರಕ ಸಿದ್ಧತೆ ನಡೆಸಲಾಗುವುದಾಗಿ ತಿಳಿಸಿದರು. ಅಲ್ಲದೇ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್‌ರವರು ರೂ. ೨.೦೦ ಲಕ್ಷ ದೇಣಿಗೆ ನೀಡಲು ಒಪ್ಪಿರುವ ಅಂಶವನ್ನು ಸಭೆಗೆ ತಿಳಿಸಿದರು. ಅಕಾದೆಮಿಯ ೨೫ನೇ ವಾರ್ಷಿಕ ಸಮ್ಮೇಳನದಲ್ಲಿ ಸದಸ್ಯರಿಗೆ ಪ್ರಮಾಣ ಪತ್ರ ನೀಡಲು ಮನವಿಯನ್ನು ಕೆಲವು ಸದಸ್ಯರು ಸೂಚಿಸಿದರು. ೨೬ನೇ ಸಂಪುಟದ **ಇತಿಹಾಸ ದರ್ಶನಕ್ಕೆ** ಐಎಸ್‌ಬಿಎನ್ ನಂಬರ್ ಪಡೆಯಬೇಕು. ಎಂದು ಡಾ. ಎಫ್.ಟಿ. ಹಳಕೇರಿ ಮುಂತಾದವರು ಒತ್ತಾಯಿಸಿದರು. ಈ ಎಲ್ಲಾ ಮನವಿ ಮತ್ತು ಸಲಹೆಗಳನ್ನು ಸೂಕ್ತ ಸಮಯದಲ್ಲಿ ತೀರ್ಮಾನ ಕೈಗೊಳ್ಳಲು ಸರ್ವಸದಸ್ಯರ ಕಾರ್ಯಕಾರಿ ಸಮಿತಿಗೆ ಅಧಿಕಾರ ನೀಡಿದರು.

**ಅಧ್ಯಕ್ಷರ ಭಾಷಣ**

ಸರ್ವಸದಸ್ಯರ ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ. ಸೂರ್ಯನಾಥ ಕಾಮತ್ ಅವರು ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನವನ್ನು ನಡೆಸಲು ಅವಕಾಶ ಕಲ್ಪಿಸಿ, ಆಶ್ರಯ ನೀಡಿದ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನದ

ಹಿರಿಯ ಹಾಗೂ ಕಿರಿಯ ಶ್ರೀಗಳಿಗೆ, ಮಠದ ಎಲ್ಲಾ ಆಡಳಿತ ವರ್ಗಕ್ಕೆ, ಶ್ರೀ ನಂಜುಂಡಯ್ಯ ಮತ್ತಿತರಿಗೆ, ಸದಸ್ಯರು ಹಾಗೂ ಸಹಕರಿಸಿದ ಎಲ್ಲಾ ಗಣ್ಯರಿಗೆ ಧನ್ಯವಾದಗಳನ್ನು ತಿಳಿಸಿ, ಅನಾರೋಗ್ಯದಿಂದಾಗಿ ಅಧ್ಯಕ್ಷರಾಗಿ ಮುಂದುವರಿಯಲು ತಮಗೆ ಸಾಧ್ಯವಾಗುತ್ತಿಲ್ಲವೆಂದು ಹೇಳುತ್ತಾ ಅಕಾದೆಮಿಯ ಪ್ರಗತಿಗೆ ಸದಸ್ಯರ ಸಹಕಾರವೇ ಮುಖ್ಯ ಎಂದು ತಿಳಿಸಿದರು. ಮುಂದೆಯೂ ಸಹಕಾರ ನೀಡುವಂತೆ ಕೋರಿದರು.

**ಕೃತಜ್ಞತೆಗಳು**

ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ, ಎಲ್ಲ ಸದಸ್ಯರಿಗೂ ಸಂತೋಷವಾಗುವಂತೆ ಸಮರ್ಥವಾಗಿ ಸಮ್ಮೇಳನವನ್ನು ನಡೆಸಿಕೊಟ್ಟ, ಶ್ರೀ ಆದಿಚುಂಚನಗಿರಿ ಮಠದ ಎಲ್ಲರಿಗೆ ಗೌರವಪೂರ್ವಕ ಅಭಿನಂದನೆ ಸಲ್ಲಿಸಲಾಯಿತು. ಆಶ್ರಯ ನೀಡಿದ ಮತ್ತು ಸಹಕರಿಸಿದ ಎಲ್ಲರಿಗೂ ಕಾರ್ಯದರ್ಶಿಗಳಾದ ಡಾ. ಎಚ್.ಎಸ್. ಗೋಪಾಲರಾವ್ ಧನ್ಯವಾದಗಳನ್ನು ಸಲ್ಲಿಸಿದರು.

೧೩ನೇ ಕಾರ್ಯಕಾರಿ ಸಮಿತಿ ಸಭೆ ೧/೧೩/೨೦೧೦

ದಿನಾಂಕ ೧೪.೧೧.೨೦೧೧ರಂದು ಭಾನುವಾರ ಸಂಜೆ ೬.೩೦ಕ್ಕೆ ಶ್ರೀ ಆದಿಚುಂಚನಗಿರಿಯಲ್ಲಿ ಜರುಗಿದ ೨೪ನೆಯ ವಾರ್ಷಿಕ ಸಮ್ಮೇಳನದ ಸಭಾಂಗಣದಲ್ಲಿ ಡಾ. ಸೂರ್ಯನಾಥಕಾಮತ್ ಅವರ ಅಧ್ಯಕ್ಷತೆಯಲ್ಲಿ ನಡೆದ ಹದಿಮೂರನೆಯ ಕಾರ್ಯಕಾರಿ ಸಮಿತಿಯ ಮೊದಲ ಸಭೆಯ ನಡಾವಳಿಗಳು.

**ಕಾರ್ಯಕ್ರಮ ಸೂಚಿ**

೧. ಹೊಸ ಕಾರ್ಯಕಾರೀ ಸಮಿತಿಯ ಪದಾಧಿಕಾರಿಗಳ ಆಯ್ಕೆ.
೨. ಕಾರ್ಯಕಾರಿ ಸಮಿತಿಗೆ ನಾಮಕರಣ ಸದಸ್ಯರ ಆಯ್ಕೆ.
೩. ಅಧ್ಯಕ್ಷರ ಅನುಮತಿಯ ಮೇರೆಗೆ ಇತರ ವಿಚಾರಗಳು.

ಸಭೆಯಲ್ಲಿ ಹಾಜರಿದ್ದ ಕಾರ್ಯಕಾರಿ ಸಮಿತಿ ಸದಸ್ಯರ ಸಂಖ್ಯೆ ೧೯, ಅವರುಗಳೆಂದರೆ ಸರ್ವಶ್ರೀ

೧. ಡಾ. ಸೂರ್ಯನಾಥ ಯು. ಕಾಮತ್
೨. ಡಾ. ಎಂ.ಜಿ. ನಾಗರಾಜ್
೩. ಡಾ. ತುಳಸೀರಾಮನಾಯಕ
೪. ಡಾ. ದೇವರಕೊಂಡಾರೆಡ್ಡಿ
೫. ಡಾ. ಎಚ್.ಎಸ್. ಗೋಪಾಲರಾವ್
೬. ಡಾ. ಡಿ.ಎನ್. ಯೋಗೀಶ್ವರಪ್ಪ
೭. ಡಾ. ಜಯಮ್ಮ ಕರಿಯಣ್ಣ ಎಚ್.
೮. ಡಾ. ಉಷಾರಾಣಿ ಎಚ್.ಎಸ್.
೯. ಡಾ. ಬಿ. ರಾಜಶೇಖರಪ್ಪ
೧೦. ಶ್ರೀ ಜಯದೇವಪ್ಪ ಜೈನಕೇರಿ
೧೧. ಡಾ. ಎಸ್.ಕೆ. ಮೇಲಕಾರ
೧೨. ಡಾ. ಸ್ಮಿತಾ ಸುರೇಬಾನಕರ
೧೩. ಶ್ರೀ ಕುಂ.ಬಾ. ಸದಾಶಿವಪ್ಪ
೧೪. ಡಾ. ಎಫ್.ಟಿ. ಹಳ್ಳಿಕೇರಿ
೧೫. ಡಾ. ಎ.ಕೆ. ಶಾಸ್ತ್ರಿ
೧೬. ಶ್ರೀ ಶಿವಪ್ಪ ನೀರಲಗಿ
೧೭. ಡಾ. ಪಿ.ವಿ. ಕೃಷ್ಣಮೂರ್ತಿ
೧೮. ಶ್ರೀ ಎಸ್. ರಾಜೇಂದ್ರಪ್ಪ

**ಸಭೆಯ ನಡಾವಳಿಗಳು**

೧. ಸಭೆಯ ಅಧ್ಯಕ್ಷತೆಯನ್ನು ವಹಿಸಲು ಡಾ. ಸೂರ್ಯನಾಥ ಯು. ಕಾಮತ್ ಅವರನ್ನು ಕೋರಲಾಯಿತು. ಸಭೆಯಲ್ಲಿದ್ದ ಎಲ್ಲಾ ಸದಸ್ಯರನ್ನು ಡಾ. ಎಚ್.ಎಸ್. ಗೋಪಾಲರಾವ್ ಸ್ವಾಗತಿಸಿದರು.

೨. ಕಳೆದ ಎರಡು ವರ್ಷಗಳ ಅವಧಿಯಲ್ಲಿ ಅಕಾದೆಮಿಯ ಕಾರ್ಯಚಟುವಟಿಕೆಗಳನ್ನು ಅತ್ಯಂತ ಯಶಸ್ವಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸಿರುವ ಹಿಂದಿನ ಕಾರ್ಯಕಾರೀ ಸಮಿತಿಗೆ ಧನ್ಯವಾದಗಳೊಡನೆ ವಂದನೆ ಸಲ್ಲಿಸಲಾಯಿತು.

೩. ಮುಂದಿನ ಎರಡು ವರ್ಷಗಳ ಅವಧಿಗೆ ಆಯ್ಕೆಯಾಗಿರುವ ಕಾರ್ಯಕಾರಿ ಸಮಿತಿ ಸದಸ್ಯರಿಗೆ ಸ್ವಾಗತ ಕೋರಲಾಯಿತು.

೪. ಹೊಸ ಕಾರ್ಯಕಾರೀ ಸಮಿತಿಯು ಮುಂದಿನ ಎರಡು ವರ್ಷಗಳ ಅವಧಿಗೆ ಈ ಕೆಳಕಂಡ ಪದಾಧಿಕಾರಿಗಳನ್ನು ಸರ್ವಾನುಮತದಿಂದ ಆಯ್ಕೆ ಮಾಡಿತು. ಅಲ್ಲದೆ ಹಿಂದಿನ ಅಧ್ಯಕ್ಷರಾಗಿದ್ದ ಡಾ. ಸೂರ್ಯನಾಥ ಕಾಮತ್ ಮುಂದೆ ಅಕಾದೆಮಿಯ ಗೌರವಾಧ್ಯಕ್ಷರಾಗಿ ಮುಂದುವರೆಯಬೇಕೆಂದು ಸರ್ವ ಸದಸ್ಯರು ಸಭೆಯಲ್ಲಿ ಒಮ್ಮತವಾಗಿ ಸರ್ವಸದಸ್ಯರ ಸಭೆಯಲ್ಲಿ ಒತ್ತಾಯಿಸಿ ಒಪ್ಪಿಸಿದ್ದರು. ಅದರಂತೆ ಅವರ ಹೆಸರನ್ನು ಗೌರವಾಧ್ಯಕ್ಷರನ್ನಾಗಿ ಕಾರ್ಯಕಾರಿ ಸಮಿತಿಯು ಸರ್ವಾನುಮತದಿಂದ ಸ್ವೀಕರಿಸಿತು.

ಸೂಚಿಸಿದವರು : ಡಾ. ಶಿವಪ್ಪ ನೀರಲಗಿ, ಅನುಮೋದಿಸಿದವರು : ಡಾ. ಸ್ಮಿತಾ ಸುರೇಬಾನಕರ್.

೧) ಅಧ್ಯಕ್ಷರು – ಡಾ. ದೇವರಕೊಂಡಾರೆಡ್ಡಿ ಸೂಚನೆ : ಡಾ. ಮೇಲಕಾರ್ ಎಸ್.ಕೆ.
ಅನುಮೋದನೆ : ಡಾ. ಡಿ.ಎನ್. ಯೋಗಿಶ್ವರಪ್ಪ

೨) ಉಪಾಧ್ಯಕ್ಷರು
ಅ. ಡಾ. ಎಂ.ಜಿ. ನಾಗರಾಜ್ ಸೂಚನೆ : ಎಫ್.ಟಿ. ಹಳ್ಳಿಕೇರಿ
ಅನುಮೋದನೆ : ಡಾ. ಜಯಮ್ಮ ಕರಿಯಣ್ಣ
ಆ. ಡಾ. ಬಿ. ರಾಜಶೇಖರಪ್ಪ ಸೂಚನೆ : ಕುಂಬಾ ಸದಾಶಿವಪ್ಪ
ಅನುಮೋದನೆ : ಜಯದೇವಪ್ಪ ಜೈನಕೇರಿ

೩) ಪ್ರಧಾನ ಕಾರ್ಯದರ್ಶಿ – ಶ್ರೀ ಎಸ್. ರಾಜೇಂದ್ರಪ್ಪ ಸೂಚನೆ : ಡಾ. ಸೂರ್ಯನಾಥ ಕಾಮತ್
ಅನುಮೋದನೆ : ಡಾ. ಎಚ್.ಎಸ್. ಉಷಾರಾಣಿ

೪) ಕಾರ್ಯದರ್ಶಿಗಳು – ಅ. ಡಾ. ಪಿ.ವಿ. ಕೃಷ್ಣಮೂರ್ತಿ ಸೂಚನೆ : ಡಾ. ಎಂ.ಜಿ. ನಾಗರಾಜ್
ಅನುಮೋದನೆ : ಜಯದೇವಪ್ಪ ಜೈನಕೇರಿ
ಆ. ಡಾ. ಡಿ.ಎನ್. ಯೋಗೀಶ್ವರಪ್ಪ ಸೂಚನೆ : ಶಿವಪ್ಪ ನೀರಲಗಿ
ಅನುಮೋದನೆ : ಜಯದೇವಪ್ಪ ಜೈನಕೇರಿ

೫) ಕೋಶಾಧಿಕಾರಿ – ಡಾ. ತುಳಸಿರಾಮನಾಯಕ್ ಸೂಚನೆ : ಡಾ. ಸೂರ್ಯನಾಥ ಯು. ಕಾಮತ್
ಅನುಮೋದನೆ : ಡಾ. ಜಯಮ್ಮ ಕರಿಯಣ್ಣ

ಆಹ್ವಾನಿತ ಸದಸ್ಯರನ್ನಾಗಿ ಈ ಕೆಳಕಂಡ ಸದಸ್ಯರನ್ನು ಕಾರ್ಯಕಾರೀ ಸಮಿತಿಯನ್ನು ನಾಮಕರಣ ಮಾಡಿತು.

೧) ಡಾ. ರು.ಮ. ಷಡಕ್ಷರಯ್ಯ, ಧಾರವಾಡ, ಸೂಚನೆ : ಡಾ. ಸ್ಮಿತಾ ಸುರೇಬಾನಕರ್
ಅನುಮೋದನೆ : ಡಾ. ಪಿ.ವಿ. ಕೃಷ್ಣಮೂರ್ತಿ

೨) ಶ್ರೀಮತಿ ಶಕುಂತಲಾ ಸಿಂಧೂರ, ಗದಗ, ಸೂಚನೆ : ಡಾ. ಡಿ.ಎನ್. ಯೋಗೀಶ್ವರಪ್ಪ
ಅನುಮೋದನೆ : ಡಾ. ಎಫ್.ಟಿ. ಹಳ್ಳಿಕೇರಿ

ಮುಂದಿನ ಕಾರ್ಯಕಾರಿ ಸಭೆಯಲ್ಲಿ ಹೈದರಾಬಾದ್ ಕರ್ನಾಟಕದ ಸದಸ್ಯರೊಬ್ಬರನ್ನು ಕಾರ್ಯಕಾರಿ ಸಮಿತಿ ಸಭೆಗೆ ಉಳಿದೊಂದು ಸ್ಥಾನಕ್ಕೆ ಸದಸ್ಯರನ್ನಾಗಿ ನಾಮಕರಣ ಮಾಡಿಕೊಳ್ಳಲು ತೀರ್ಮಾನಿಸಲಾಯಿತು.

ಕಾರ್ಯಕಾರಿ ಸಮಿತಿ ಸಭೆಗೆ ಪ್ರಧಾನ ಕಾರ್ಯದರ್ಶಿಗಳು ವಂದಿಸುವುದರೊಂದಿಗೆ ಸಭೆ ಮುಕ್ತಾಯವಾಯಿತು.

**೨೦೧೦–೧೧ ಮತ್ತು ೨೦೧೧–೧೨ರ ಸಾಲಿನ ೧೩ನೆಯ ಕಾರ್ಯಕಾರಿ ಸಮಿತಿ ಸದಸ್ಯರು**

| ಕ್ರ.ಸಂ. | ಹೆಸರು ಮತ್ತು ವಿಳಾಸ | ವಯಸ್ಸು | ವೃತ್ತಿ | ಧಾರಣ ಮಾಡಿರುವ ಪದನಾಮ |
|---|---|---|---|---|
| ೧. | ಡಾ. ದೇವರಕೊಂಡಾರೆಡ್ಡಿ ೩೫/೧, ೨೦ನೆಯ ಮುಖ್ಯ ರಸ್ತೆ, ವೆಂಕಟೇಶ್ವರ ಬಡಾವಣೆ ಬಿ.ಟಿ.ಎಂ. ಲೇಔಟ್, ಬೆಂ–೬೮ | ೬೩ | ನಿವೃತ್ತರು | ಕಾರ್ಯಾಧ್ಯಕ್ಷರು |
| ೨. | ಡಾ. ಎಂ.ಜಿ. ನಾಗರಾಜ್ ೨೨೧, ೬೮ನೇ ಅಡ್ಡರಸ್ತೆ ೫ನೆಯ ಬ್ಲಾಕ್, ರಾಜಾಜಿನಗರ ಬೆಂಗಳೂರು–೧೦ | ೮೧ | ಸಾಹಿತಿ ಸಂಶೋಧಕರು (ನಿ) ಪ್ರಾಚಾರ್ಯರು | ಉಪಾಧ್ಯಕ್ಷರು |

| | | | | |
|---|---|---|---|---|
| ೩. | ಡಾ. ಬಿ. ರಾಜಶೇಖರಪ್ಪ<br>೨ನೇ ಅಡ್ಡರಸ್ತೆ (ಪಶ್ಚಿಮ)<br>ಜೆ.ಸಿ.ಆರ್. ಬಡಾವಣೆ)<br>ಚಿತ್ರದುರ್ಗ-೫೭೭೫೦೧ | ೬೩ | ಕನ್ನಡ<br>ಪ್ರಾಧ್ಯಾಪಕರು<br>ಪ್ರಾಂಶುಪಾಲರು (ನಿ) | ಉಪಾಧ್ಯಕ್ಷರು |
| ೪. | ಎಸ್. ರಾಜೇಂದ್ರಪ್ಪ<br>೧ನೇ ಮೇಗಳಕೇರಿ<br>ಡಾ. ರಾಜಕುಮಾರ್ ವೃತ್ತ<br>ಕೆಂಗೇರಿ, ಬೆಂಗಳೂರು | ೫೫ | ಸಂಪಾದಕ<br>ಕರ್ನಾಟಕ<br>ಗ್ಯಾಸೆಟಿಯರ್<br>ಇಲಾಖೆ<br>ಬೆಂಗಳೂರು | ಪ್ರಧಾನ ಕಾರ್ಯದರ್ಶಿ |
| ೫. | ಡಾ. ಪಿ.ವಿ. ಕೃಷ್ಣಮೂರ್ತಿ<br>೩೭, 'ಶ್ರೀ ಕೃಷ್ಣಕೃಪ'<br>೩ನೆಯ ಅಡ್ಡರಸ್ತೆ<br>ಸುಬ್ಬಣ್ಣ ಲೇಔಟ್<br>ಹರಿನಗರ ಕ್ರಾಸ್<br>ಬೆಂಗಳೂರು-೬೨ | ೫೮ | ಇಂಜಿನಿಯರ್ | ಕಾರ್ಯದರ್ಶಿ |
| ೬. | ಡಾ. ಡಿ.ಎನ್. ಯೋಗೀಶ್ವರಪ್ಪ<br>ಚಿತ್ಕಲಾ, ೮ನೆಯ ಅಡ್ಡರಸ್ತೆ<br>೪ನೆಯ ಮುಖ್ಯರಸ್ತೆ<br>ಸೋಮೇಶ್ವರಪುರ<br>ತುಮಕೂರು-೫೭೨೧೦೧ | ೪೮ | ಇತಿಹಾಸ<br>ಪ್ರಾಧ್ಯಾಪಕರು | ಕಾರ್ಯದರ್ಶಿ |
| ೭. | ಡಾ. ತುಳಸಿರಾಮನಾಯಕ್<br>೨೯೯೧, ಆನಂದ ಭವನ<br>೭ನೆಯ ಮುಖ್ಯರಸ್ತೆ<br>ಬೆಂಗಳೂರು-೫೬೦೦೭೦ | ೬೪ | ಬೆಂಗಳೂರು<br>ಮಹಾನಗರ<br>ಪಾಲಿಕೆ<br>ಅಧಿಕಾರಿ (ನಿ) | |
| ೮. | ಡಾ. ಸೂರ್ಯನಾಥ ಯು. ಕಾಮತ್<br>ನಿವೃತ್ತ ಮುಖ್ಯ ಸಂಪಾದಕರು<br>೭೯೮, ೧೧ನೇ ಮುಖ್ಯರಸ್ತೆ<br>೬ನೇ ಅಡ್ಡರಸ್ತೆ, ಹನುಮಂತನಗರ<br>ಬೆಂಗಳೂರು. | ೭೪ | ನಿವೃತ್ತ ಮುಖ್ಯ<br>ಸಂಪಾದಕರು<br>ಕರ್ನಾಟಕ<br>ಗ್ಯಾಸೆಟಿಯರ್<br>ಇಲಾಖೆ | ಸದಸ್ಯರು ಹಾಗೂ<br>ಗೌರವಾಧ್ಯಕ್ಷರು |
| ೯. | ಡಾ. ಎಚ್.ಎಸ್. ಗೋಪಾಲರಾವ್<br># ೧೪೪, 'ಸ್ವಸ್ತಿಶ್ರೀ ಸ್ಕಂದ'<br>ಅರಸಿನಕುಂಟೆ, ನೆಲಮಂಗಲ ತಾ.<br>ಬೆಂಗಳೂರು-೫೬೨೧೨೩. | ೬೪ | ಸ.ಕಾ.ನಿ.<br>ಇಂಜಿನಿಯರ್<br>(ನಿ) | ಸದಸ್ಯರು |
| ೧೦. | ಡಾ. ಸ್ಮಿತಾ ಸುರೇಬಾನಕರ್<br>ಪ್ಲಾಟ್ ನಂ. ೬೯೦, 'ಶ್ರೀನಿವಾಸ'<br>೫ನೆಯ ಅಡ್ಡರಸ್ತೆ, ಭಾಗ್ಯನಗರ<br>ಬೆಳಗಾವಿ-೫೯೦೦೦೬. | ೫೧ | ಉಪನ್ಯಾಸಕರು | ಸದಸ್ಯರು |
| ೧೧. | ಡಾ. ಎಚ್.ಎಸ್. ಉಷಾರಾಣಿ<br>೪೩, ಇ ಬ್ಲಾಕ್, ಜೆ.ಪಿ. ನಗರ<br>ಮೈಸೂರು-೫೭೦೦೦೮. | ೫೪ | ಉಪನ್ಯಾಸಕರು | ಸದಸ್ಯರು |

| ೧೨. | ಡಾ. ಜಯಮ್ಮ ಕರಿಯಣ್ಣ<br>ಆಶೀರ್ವಾದ, ನಂ. ೨೯೩೩<br>೧೩ನೆಯ ಮುಖ್ಯರಸ್ತೆ<br>ವಿಜಯನಗರ ೩ನೆಯ ಹಂತ<br>ಬೆಂಗಳೂರು–೪೦. | ೬೭ | ನಿವೃತ್ತ<br>ಮೇನೇಜರ್<br>(ಲೋಕೋಪ<br>ಯೋಗಿ<br>ಇಲಾಖೆ) | ಸದಸ್ಯರು |
|---|---|---|---|---|
| ೧೩. | ಶ್ರೀ ಕುಂಬಾ ಸದಾಶಿವಪ್ಪ<br>ಗೋಸಾಯಿನಗರ, ಹಂಪಿ<br>ಹರಿಹರ ಮಾರ್ಗಹರಪನಹಳ್ಳಿ–೧೩<br>ದಾವಣಗೆರೆ ಜಿಲ್ಲೆ | ೭೬ | ಸಾಹಿತಿ | ಸದಸ್ಯರು |
| ೧೪. | ಡಾ. ಎ.ಕೆ. ಶಾಸ್ತ್ರಿ<br>ಶಿರಸಿ, ಉತ್ತರಕನ್ನಡ ಜಿಲ್ಲೆ | ೭೨ | ಪ್ರಾಧ್ಯಾಪಕರು | ಸದಸ್ಯರು |
| ೧೫. | ಶ್ರೀ ಜಯದೇವಪ್ಪ ಜೈನಕೇರಿ<br>ಸಾಹಿತಿ ಸಂಶೋಧಕ<br># ೮೭, ಶಾಂತಲಾ, ಕುವೆಂಪು<br>ರಸ್ತೆ, ಶಿವಮೊಗ್ಗ–೦೧. | ೭೧ | ಸಾಹಿತಿ<br>ಸಂಶೋಧಕ | ಸದಸ್ಯರು |
| ೧೬. | ಡಾ. ಎಫ್.ಟಿ. ಹಳ್ಳಿಕೇರಿ<br>ಪ್ರಾಧ್ಯಾಪಕ, ಹಸ್ತಪ್ರತಿ ವಿಭಾಗ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ | ೪೪ | ಪ್ರಾಧ್ಯಾಪಕ | ಸದಸ್ಯರು |
| ೧೭. | ಶ್ರೀ ಶಿವಪ್ಪ ನೀರಲಗಿ<br>ಬಾಗಲಕೋಟೆ | ೫೪ | ಸರ್ಕಾರಿ ಸೇವೆ | ಸದಸ್ಯರು |
| ೧೮. | ಡಾ. ಎಸ್. ಮೇಲಕಾರ<br>ಕ್ಯುರೇಟರ್, ಕನ್ನಡ ಸಂಶೋಧನಾ<br>ಸಂಸ್ಥೆ, ಧಾರವಾಡ–೫೮೦೦೦೩ | ೪೦ | ವಸ್ತು ಸಂಗ್ರಹಾ<br>ಲಯಾಧಿಕಾರಿ | |
| ೧೯. | ಡಾ. ಡಿ.ಜಿ. ಕುಲಕರ್ಣಿ<br>ಇತಿಹಾಸ ಉಪನ್ಯಾಸಕರು<br>ಕನ್ನಡ ಸಂಶೋಧನಾ ಸಂಸ್ಥೆ<br>ವಾಣಿಜ್ಯ ಕಾಲೇಜು<br>ಶಿರೂರು, ಬಾಗಲಕೋಟೆ ಜಿಲ್ಲೆ | ೫೧ | ಉಪನ್ಯಾಸಕರು | ಸದಸ್ಯರು |
| ೨೦. | ಡಾ. ರು.ಮ. ಷಡಕ್ಷರಯ್ಯ<br>ಇತಿಹಾಸ ಪ್ರಾಧ್ಯಾಪಕರು ಮತ್ತು<br>ನಿರ್ದೇಶಕರು, ಕನ್ನಡ<br>ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ | ೬೫ | ಪ್ರಾಧ್ಯಾಪಕರು | ಸದಸ್ಯರು |
| ೨೧. | ಡಾ. ಜಗದೀಶಶೆಟ್ಟಿ<br>ಪ್ರಾಧ್ಯಾಪಕರು, ಉಡುಪಿ | ೫೦ | ಪ್ರಾಧ್ಯಾಪಕರು | ಸದಸ್ಯರು |
| ೨೨. | ಶ್ರೀಮತಿ ಶಕುಂತಲಾ ಸಿಂಧೂರ<br>ಕನ್ನಡ ಉಪನ್ಯಾಸಕರು, ಗದಗ | ೫೦ | ಉಪನ್ಯಾಸಕರು | ಸದಸ್ಯರು |

| ೨೩. | ಶ್ರೀ ಶಾಶ್ವತಸ್ವಾಮಿ*<br>ಮುಕ್ಕುಂದಿಮಠ ನಿವೃತ್ತ<br>ಪ್ರಾಚಾರ್ಯರು, ರಾಯಚೂರು | ೬೮ | ನಿವೃತ್ತ<br>ಪ್ರಾಚಾರ್ಯರು | ಸದಸ್ಯರು |
|---|---|---|---|---|

* ದಿನಾಂಕ : ೨೯.೧೧.೨೦೧೦ರಂದು ಜರುಗಿದ ಕಾರ್ಯಕಾರಿ ಸಮಿತಿಯಲ್ಲಿ ಸರ್ವಾನುಮತದಿಂದ ಇವರನ್ನು ಕಾರ್ಯಕಾರಿ ಸಮಿತಿಗೆ ನಾಮಕರಣ ಸದಸ್ಯರನ್ನಾಗಿ ಆಯ್ಕೆ ಮಾಡಲಾಯಿತು.

**ಕಾರ್ಯಕಾರಿ ಸಮಿತಿ ಸಭೆಗಳು**

೨೦೧೦ರ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸಭೆಯು ಒಟ್ಟು ನಾಲ್ಕು ಬಾರಿ (೨೯-೧೧-೨೦೧೦, ೮-೨-೨೦೧೧, ೮-೪-೨೦೧೧ ಹಾಗೂ ೨೫-೮-೨೦೧೧) ನಡೆದಿದೆ. ಸದಸ್ಯರು ಕಾರ್ಯಕಾರೀ ಸಮಿತಿಯ ಸಭೆಗಳಲ್ಲಿ ಖುದ್ದು ಹಾಜರಿದ್ದು, ಅಥವಾ ಪತ್ರದ ಮೂಲಕ ಇಲ್ಲವೇ ದೂರವಾಣಿ, ಎಸ್.ಎಂ.ಎಸ್. ವಿದ್ಯುನ್ಮಾನ ಟಪಾಲು ಮೂಲಕ ಸೂಚನೆ, ಒಪ್ಪಿಗೆಗಳನ್ನು ನೀಡಿ ಅಕಾದೆಮಿಯ ಯಶಸ್ಸಿಗೆ ಸಹಕರಿಸುತ್ತಿದ್ದಾರೆ.

**ಅಕಾದೆಮಿಯ ಸದಸ್ಯಬಲ**

ಈ ಸಮ್ಮೇಳನದ ಆರಂಭದ ವೇಳೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯತ್ವ ಬಲ ಈ ಕೆಳಕಂಡಂತಿದೆ.

| ಆಜೀವ | ಸಾಮಾನ್ಯ | ಸಂಸ್ಥೆ | ಒಟ್ಟು |
|---|---|---|---|
| ೧೮೯೭ | ೨ | ೪೯ | ೧೫೪೬ |

**ಅಕಾದೆಮಿಯ ಘಟಕಗಳು**

ಡಾ. ಜಯಮ್ಮ ಕರಿಯಣ್ಣ, ಅವರ ಅಧ್ಯಕ್ಷತೆಯಲ್ಲಿ ಹಾಗೂ ಆರ್. ಶಶಿಧರ್ ಪ್ರಧಾನ ಕಾರ್ಯದರ್ಶಿತ್ವದಲ್ಲಿ ಬೆಂಗಳೂರು ಘಟಕವು ಕಾರ್ಯ ನಿರ್ವಹಿಸುತ್ತಿದ್ದು, ಎಂದಿನಂತೆ ಈ ವರ್ಷವೂ ಕೂಡ ಅದು ಬೆಂಗಳೂರು ನಗರದ ಪ್ರೌಢಶಾಲೆ, ಪದವಿಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ವ್ಯಾಸಂಗಾರ್ಥಿಗಳಿಗೆ ಪ್ರಬಂಧ ಹಾಗೂ ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನ ಪಾರಿತೋಷಗಳನ್ನು ನೀಡಿ ಪ್ರೋತ್ಸಾಹಿಸುತ್ತಿದೆ.

ಈ ಸ್ಪರ್ಧೆಗಳಿಗಾಗಿ ಡಾ. ಜಿ.ಎಸ್. ದೀಕ್ಷಿತ್, ಡಾ. ಸೂರ್ಯನಾಥ ಕಾಮತ್, ಶ್ರೀ ಅಂಗದ್, ಶ್ರೀಮತಿ ಎ.ವಿ. ವರಮಹಾಲಕ್ಷ್ಮೀ, ಶ್ರೀ ಬಿ. ರಾಮಣ್ಣ ಮತ್ತು ಶ್ರೀಮತಿ ಇಂದಿರಾ ಅವರ ಹೆಸರಿನಲ್ಲಿ ಪರ್ಯಾಯ ಪಾರಿತೋಷಕಗಳನ್ನು ನೀಡಲಾಗುತ್ತಿದೆ. ಶ್ರೀ ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಶ್ರೀ ಗಾಳಿಸ್ವಾಮಿ ಅವರು ಶ್ರೀ ಅಂಗದ್ ಸ್ಮಾರಕ ಪರ್ಯಾಯ ಪಾರಿತೋಷಕದ ಜೊತೆಗೆ ಎಲ್ಲ ಸ್ಪರ್ಧೆಗಳ ಬಹುಮಾನ ವಿಜೇತರಿಗೆ ನಗದು ಬಹುಮಾನಗಳನ್ನು ಪ್ರಾಯೋಜಿಸಿ, ಸಹಕರಿಸುತ್ತಿದ್ದಾರೆ.

೨೦೧೦-೧೧ ಹಾಗೂ ೨೦೧೧-೧೨ಕ್ಕೆ ಹೊಸ ಕಾರ್ಯಕಾರಿ ಸಮಿತಿಯನ್ನು ಬೆಂಗಳೂರು ಘಟಕವು ರಚಿಸಿಕೊಂಡಿದ್ದು, ಡಾ. ಇಂದಿರಾ ಹೆಗ್ಡೆ ಅಧ್ಯಕ್ಷರಾಗಿ ಶ್ರೀ ಆರ್. ಶಶಿಧರ್, ಪ್ರಧಾನ ಕಾರ್ಯದರ್ಶಿಗಳಾಗಿ ಸರ್ವಾನುಮತದಿಂದ ಆಯ್ಕೆಯಾಗಿದ್ದರು.

ಬೆ.ಫ. ನಿರಂಜನ, ಶ್ರೀ ವೇಮಗಲ್ ಸೋಮಶೇಖರ್, ಶ್ರೀ ಆರ್. ವೆಂಕಟೇಶಮೂರ್ತಿ, ಶ್ರೀಮತಿ ಎಸ್.ವೈ. ನಿರ್ಮಲಾ, ಡಾ. ಕರುಣಾವಿಜಯೇಂದ್ರಾ, ಶ್ರೀಮತಿ ಸ್ಮಿತಾರೆಡ್ಡಿ, ಡಾ. ಟಿ.ವಿ. ನಾಗರಾಜ್, ಶ್ರೀ ಸುಂಕಂ. ಗೋವರ್ಧನ್, ಶ್ರೀ ವೇ.ಸು. ಮೂರ್ತಿ, ಶ್ರೀ ಕೃಷ್ಣಯ್ಯ ಹಾಗೂ ಶ್ರೀ ಎಂ. ಲೋಕೇಶ್, ಶ್ರೀ ಎಂ.ಆರ್. ಚಂದ್ರಶೇಖರ್, ಶ್ರೀ ಎಂ. ಭಾಗ್ಯರೇಖಾ, ಶ್ರೀಮತಿ ಡಾ. ಬೆಂ.ಶಾ. ಶ್ಯಾಮಲಾರತ್ನಕುಮಾರಿ, ಶ್ರೀ ಹರಿಹರ ಶ್ರೀನಿವಾಸ್, ಶ್ರೀ ಬಿ.ಕೆ. ದೇವರಾಜಸ್ವಾಮಿ, ಶ್ರೀ ಬಿ.ಎನ್. ಗುರುಪ್ರಸಾದ್ ಕಾರ್ಯಕಾರಿ ಸಮಿತಿಯ ಸದಸ್ಯರಿದ್ದು, ಘಟಕವು ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸುತ್ತಿದೆ.

ಹೊಸಪೇಟೆ ತಾಲ್ಲೂಕು ಘಟಕವು ಡಾ. ಕೆ.ಎಂ. ಸುರೇಶ್, ಡಾ. ಎಂ. ಕೊಟ್ರೇಶ್, ಡಾ. ಟಿ. ಮಂಜುನಾಥ್, ಡಾ. ಕೆ. ರವೀಂದ್ರನಾಥ ಮತ್ತಿತರ ಸ್ನೇಹಿತರೊಡಗೂಡಿ ಬೇರೆ ಬೇರೆ ಸ್ಥಳಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹಗಳನ್ನು ನಡೆಸಿಕೊಂಡು ಬರುತ್ತಿದೆ.

ಉಡುಪಿ ಜಿಲ್ಲಾ ಘಟಕವು ಡಾ. ಜಗದೀಶ್ ಶೆಟ್ಟಿ ಅವರ ಅಧ್ಯಕ್ಷತೆಯಲ್ಲಿ ಸ್ಥಳೀಯವಾಗಿ ಶಾಲಾ ಕಾಲೇಜುಗಳಲ್ಲಿ ಐ.ಪ.ಉ. ಕಾರ್ಯಕ್ರಮಗಳನ್ನು ಆಯೋಜಿಸಿ ಐತಿಹಾಸಿಕ ಅರಿವನ್ನು ಜಾಗ್ರತಗೊಳಿಸುವ ಕೆಲಸವನ್ನು ಮಾಡುತ್ತಿದೆ.

ಶಿವಮೊಗ್ಗ ಜಿಲ್ಲಾ ಘಟಕವು ಬೆಕ್ಕಿನ ಕಲ್ಮಠದ ಸ್ವಾಮೀಜಿಯವರ ಪೋಷಣೆಯಲ್ಲಿ ಶ್ರೀ ಎಚ್.ಎಂ. ಚಂದ್ರಶೇಖರಪ್ಪ (ಅಧ್ಯಕ್ಷರು), ಶ್ರೀ ಜಯದೇವಪ್ಪ ಜೈನಕೇರಿ (ಪ್ರಧಾನ ಕಾರ್ಯದರ್ಶಿ), ಡಾ. ಎಸ್.ಜಿ. ಸಾಮಕ್, ಡಾ. ಬಿ. ಜಗದೀಶ್, ಡಾ. ಕೆ.ಬಿ. ವೆಂಕಟೇಶ್ ಜೋಯಿಸ್, ಡಾ. ಕೆಳದಿ ಗುಂಡಾಜೋಯಿಸ್, ಡಾ. ಜಿ.ಪಿ. ಕಲ್ಲಾಪುರ ಮುಂತಾದವರ ಸಹಭಾಗಿತ್ವದಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳ ಜೊತೆಗೆ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ.

ಮೈಸೂರು ಘಟಕವು (ಮಂಡ್ಯ ಜಿಲ್ಲೆಯೂ ಸೇರಿ) ಕಾರ್ಯಾರಂಭ ಮಾಡಿದ್ದು, ಪ್ರೊ. ಚಂದ್ರರಾಜೇ ಅರಸ್ ಅವರ ಗೌರವಾಧ್ಯಕ್ಷತೆಯಲ್ಲಿ ಡಾ. ಎಚ್.ಎಸ್. ಉಷಾರಾಣಿ (ಕಾರ್ಯಾಧ್ಯಕ್ಷೆ), ಶ್ರೀ ತೈಲೂರು ವೆಂಕಟಕೃಷ್ಣ, ಡಾ. ಬಿ.ಪಿ. ಇಂದಿರಾ, ಡಾ.

ಎಸ್. ಸದಾಶಿವ (ಉಪಾಧ್ಯಕ್ಷ), ಡಾ. ಬಿ.ವಿ. ಸುಧಾರಾಣಿ (ಪ್ರಧಾನ ಕಾರ್ಯದರ್ಶಿ), ಶ್ರೀ ಎಚ್.ಡಿ. ಹರೀಶ್ ಹಾಗೂ ಪ್ರೊ. ನಯೀಂ ಉರ್ ರೆಹಮಾನ್ (ಸಹ ಕಾರ್ಯದರ್ಶಿಗಳು) ಹಾಗೂ ಬಿ.ಎಸ್. ಸುಭದ್ರ ಖಜಾಂಚಿಯಾಗಿ ಕಾರ್ಯನಿರ್ವಹಿಸು ತ್ತಿದ್ದಾರೆ. ಇತಿಹಾಸ ಕಾರ್ಯಾಗಾರ ಮಾಸಿಕ ಉಪನ್ಯಾಸ, ಐತಿಹಾಸಿಕ ಸ್ಥಳಗಳಿಗೆ ಪ್ರವಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಚಾರಿತ್ರಿಕ ಅರಿವನ್ನು ಮೂಡಿಸಲು ಶ್ರಮಿಸುತ್ತಿದೆ.

ಬೆಳಗಾವಿ ಜಿಲ್ಲಾ ಘಟಕವು ಡಾ. ಸ್ಮಿತಾ ಸುರೇಬಾನಕರ್, ಶ್ರೀ ಬಿ.ಆಯ್. ಚಿನಗೋಡಿ, ಡಾ. ಎಚ್.ಬಿ. ಕೋಲಕಾರ, ಡಾ. ಬಿ.ಆರ್. ಹಂದೂರು, ಶ್ರೀ ಮಂಜುನಾಥ ಹದ್ಲಿ ಮುಂತಾದವರ ನೇತೃತ್ವ ಮತ್ತು ಚಚಡಿಯ ಸರ್ಕಾರ ವ್ಹಿ.ಜಿ. ದೇಸಾಯಿ ಫೌಂಡೇಶನ್ ಅಧ್ಯಕ್ಷ ಶ್ರೀ ನಾಗರಾಜ ಈಶಪ್ಪನಾಯಕ ದೇಸಾಯಿ ಅವರ ಸಹಕಾರದೊಂದಿಗೆ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ. ಅದರಂತೆ ೨೦೧೦ರ ಸಾಲಿನಲ್ಲಿ ಬೆಳಗಾವಿ ಜಿಲ್ಲಾ ಘಟಕವು ಜಿಲ್ಲೆಯ ಇತಿಹಾಸ ಪ್ರಸಿದ್ಧ ನೇಸರಗಿ ಯಲ್ಲಿರುವ ರಟ್ಟರ ಕಾಲದ (ಜೋಡು ಗುಡಿ) ಶಿವಾಲಯದ ಸ್ವಚ್ಛತಾ ಕಾರ್ಯಕ್ರಮವನ್ನು ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯದ ಆರ್ಥಿಕ ನೆರವಿನೊಂದಿಗೆ ಬೆಳಗಾವಿಯ ರಾಣಿ ಪಾರ್ವತಿದೇವಿ ಕಲಾ ಮತ್ತು ಮಹಾವಿದ್ಯಾಲಯದ ಇತಿಹಾಸ ವಿಭಾಗದ ಮತ್ತು ರಾಷ್ಟ್ರೀಯ ಸೇವಾ ಯೋಜನಾ ಘಟಕಗಳ ಸಹಯೋಗದೊಂದಿಗೆ ಹಮ್ಮಿಕೊಂಡಿತ್ತು. ತತ್ಸಂಬಂಧ ಜರುಗಿದ ಐ.ಪ.ಉ. ಕಾರ್ಯಕ್ರಮವು ಸದರಿ ಕಾಲೇಜಿನ ಪ್ರಾಚಾರ್ಯ ಡಾ. ಶ್ರೀನಿವಾಸ ಕುಲಕರ್ಣಿ, ಡಾ. ಶ್ರೀಮತಿ ಸ್ಮಿತಾ ಸುರೇಬಾನಕರ್, ಶ್ರೀ ಸಿ.ಎಂ. ಮುನ್ನೋಳಿ ಮತ್ತು ಎನ್.ಎಸ್.ಎಸ್. ಘಟಕದ ಅಧಿಕಾರಿ ಡಾ. ಎ.ಬಿ. ಪಾಟೀಲರ ಮಾರ್ಗದರ್ಶನದಡಿ ಯಶಸ್ವಿಯಾಗಿ ಪೂರೈಸಿದೆ. ಹಾಗೆಯೇ ಹಲಸಿಯ ಐತಿಹಾಸಿಕ ಸ್ಮಾರಕಗಳ ಸಂರಕ್ಷಣಾ ಕಾರ್ಯಕ್ರಮವನ್ನು ಇದೇ ಸಂಸ್ಥೆಗಳು ಸಂಯುಕ್ತವಾಗಿ ಹಮ್ಮಿಕೊಂಡು ಕಪಿಲೇಶ್ವರ ದೇವಾಲಯ ಪರಿಸರವನ್ನು ಎನ್.ಎಸ್.ಎಸ್. ತಂಡದವರು ಸ್ವಚ್ಛಗೊಳಿಸಿ ದೇವಾಲಯಕ್ಕೆ ಮುಕ್ತಿ ತೋರಿಸುವ ಮೂಲಕ ಬೆಳಗಾವಿ ಜಿಲ್ಲಾ ಘಟಕವು ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸುತ್ತಿದೆ.

**ಕೃತಜ್ಞತೆಗಳು**

ಕರ್ನಾಟಕ ಇತಿಹಾಸ ಅಕಾದೆಮಿಯನ್ನು ಸೋದರ ಸಂಸ್ಥೆ ಎಂಬಂತೆ ಪರಿಗಣಿಸಿ ಸಹಕರಿಸುತ್ತಾ ಬಂದಿರುವ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು, ಅಧಿಕಾರಿಗಳು ಹಾಗೂ ಸಿಬ್ಬಂದಿ; ಅಕಾದೆಮಿಯ ವಾರ್ಷಿಕ ಸಮ್ಮೇಳನ ಸಂದರ್ಭದಲ್ಲಿ ವಸ್ತು ಪ್ರದರ್ಶನ ಏರ್ಪಡಿಸಿ ಸಹಕರಿಸುತ್ತಿರುವ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗ; ೨೦೧೦ರ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮದ ಉದ್ಘಾಟನಾ ಸಮಾರಂಭಕ್ಕೆ ಆಶ್ರಯ ನೀಡಿ ಸಹಕರಿಸಿರುವ ಬೆಂಗಳೂರಿನ ವಿಜಯಾ ಕಾಲೇಜ್ ಆಡಳಿತ ಮಂಡಳಿ, ಅಧಿಕಾರಿ ಹಾಗೂ ಸಿಬ್ಬಂದಿ ವರ್ಗ, ಬೆಂಗಳೂರಿನ ಮಿಥಿಕ್ ಸೊಸೈಟಿ, ಬಿ.ಎಂ.ಶ್ರೀ ಪ್ರತಿಷ್ಠಾನ; ಶ್ರೀ ಬೈಸಾನಿ ರುಕ್ಮಿಣಮ್ಮ ರತ್ನಂಶೆಟ್ಟಿ ಕುಟುಂಬದ ಸೇವಾ ಟ್ರಸ್ಟ್‌ನ ಶ್ರೀ ಅಶೋಕ್‌ಕುಮಾರ್, ವಾಗ್ದೇವಿ ಮುದ್ರಣಾಲಯದ ಶ್ರೀ ಪ್ರಭು, ಶ್ರೀ ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಶ್ರೀ ಗಾಳಿಸ್ವಾಮಿ, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಗೆ ದತ್ತಿ ನೀಡಿರುವ ಡಾ. ಬಾ.ರಾ. ಗೋಪಾಲ್ ಕುಟುಂಬ ವರ್ಗ, ಸಮ್ಮೇಳನಾಧ್ಯಕ್ಷರ ಗೌರವ ಸ್ಮರಣ ಫಲಕವನ್ನು ಪ್ರಾಯೋಜಿಸಿರುವ ಶ್ರೀ ಕೆ. ಅಭಿಶಂಕರ ಕುಟುಂಬವರ್ಗ, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯ ಸ್ಮರಣ ಫಲಕವನ್ನು ಪ್ರಾಯೋಜಿಸಿರುವ ಶ್ರೀ ವೇಮಗಲ್ ಸೋಮಶೇಖರ್, ಇತಿಹಾಸ ದರ್ಶನ ವಾರ್ಷಿಕ ಸಂಚಿಕೆಯ ಮುದ್ರಣಕ್ಕೆ ಆಶೀರ್ವಾದ ಪೂರ್ವಕವಾಗಿ ಪ್ರತಿ ವರ್ಷದಂತೆ ಈ ವರ್ಷವೂ ರೂ. ೨೫.೦೦೦ (ರೂ. ಇಪ್ಪತ್ತೈದು ಸಾವಿರ) ನೆರವು ನೀಡಿರುವ ಬಾಳೇಹೊನ್ನೂರಿನ ಶ್ರೀಮದ್ರಂಭಾಪುರಿ ಮಹಾಸಂಸ್ಥಾನದ ಜ. ಶ್ರೀ. ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮೀಜಿ, ಎಂದಿನಂತೆ ಅಕಾದೆಮಿಯ ೨೪ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ ಸಮ್ಮೇಳನದ ಯಶಸ್ಸಿಗೆ ಕಾರಣರಾಗಿರುವ ಶ್ರೀ ಕ್ಷೇತ್ರ ಆದಿಚುಂಚನಗಿರಿ ಮಹಾಸಂಸ್ಥಾನದ ಹಿರಿಯ ಹಾಗೂ ಕಿರಿಯ ಶ್ರೀಗಳು ಹಾಗೂ ಮಠದ ವಿದ್ಯಾಸಂಸ್ಥೆಯ ಶ್ರೀ ನಂಜುಂಡಯ್ಯರವರೊಂದಿಗಿದ್ದ ಇತರ ಕಾರ್ಯಕರ್ತರಿಗೂ ಎಂದಿನಂತೆ ಅಕಾದೆಮಿಯ 'ಇತಿಹಾಸ ದರ್ಶನ' ಸಂಚಿಕೆಯ ೨೬ನೆಯ ಸಂಪುಟವನ್ನು ಸಂಪಾದಿಸಿಕೊಟ್ಟಿರುವ ಸಂಪಾದಕರಾದ ಡಾ. ಎಂ.ಜಿ. ನಾಗರಾಜ್ ಹಾಗೂ ಡಾ. ಪಿ.ವಿ. ಕೃಷ್ಣಮೂರ್ತಿ ಅವರಿಗೆ, ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರು ಹಾಗೂ ಸಿಬ್ಬಂದಿ ವರ್ಗದವರಿಗೆ ಅಕಾದೆಮಿಯು ಆಭಾರಿಯಾಗಿದೆ.

ಕಾರ್ಯಕಾರಿ ಸಮಿತಿಯ ಅನುಮತಿ ಮೇರೆಗೆ

**ಡಾ ದೇವರಕೊಂಡಾರೆಡ್ಡಿ**
ಅಧ್ಯಕ್ಷರು

**ಡಾ. ತುಳಸಿರಾಮನಾಯಕ**
ಕೋಶಾಧಿಕಾರಿ

**ಡಾ ಎಂ.ಜಿ. ನಾಗರಾಜ್**
**ಡಾ. ಬಿ. ರಾಜಶೇಖರಪ್ಪ**
ಉಪಾಧ್ಯಕ್ಷರುಗಳು

**ಎಸ್. ರಾಜೇಂದ್ರಪ್ಪ**
ಪ್ರಧಾನ ಕಾರ್ಯದರ್ಶಿ

**ಡಾ. ಪಿ.ವಿ. ಕೃಷ್ಣಮೂರ್ತಿ, ಡಾ. ಡಿ.ಎನ್. ಯೋಗೀಶ್ವರಪ್ಪ**
ಕಾರ್ಯದರ್ಶಿಗಳು

